# ಕರ್ನಾಟಕದ ಪರಂಪರೆ

(ಸಂಪುಟ 2)

ಸಾಧುಗೆ ಸಾಧು
ಮಾಧುರ್ಯಂಗೆ ಮಾಧುರ್ಯಂ,
ಬಾಧಿಪ್ಪ ಕಲಿಗೆ
ಕಲಿಯುಗ ವಿಪರೀತನ್.
ಮಾಧವನೀತನ್ ಪೆರನಲ್ಲ॥

ಒಳ್ಳೆಯವರಿಗೆ ಒಳ್ಳೆಯವನು. ಮಧುರಗುಣ ಉಳ್ಳವರಿಗೆ ಮಧುರವಾಗಿ ವರ್ತಿಸುವವನು. ತೊಂದರೆಪಡಿಸುವ ದುಷ್ಟರಿಗೆ ದುಷ್ಟರಂತೆ ಕಾಣಿಸುವವನು. ಈತನು ಅಸಾಮಾನ್ಯನಾದ ಮಾಧವನೇ ಆಗಿರುವನು.

# ಕರ್ಣಾಟಕದ ಪರಂಪರೆ

ಸಾಧುಗೆ ಸಾಧು
ಮಾಧುರ್ಯಂಗೆ ಮಾಧುರ್ಯಂ
ಬಾಧಿಪ್ಪ ಕಲಿಗೆ
    ಕಲಿಯುಗ ವಿಪರೀತನ್
ಮಾಧವನೀತನ್ ಪೆರನಲ್ಲ ॥

ಒಳ್ಳೆಯವರಿಗೆ ಒಳ್ಳೆಯವನು. ಮಧುರ ಗುಣ ಉಳ್ಳವರಿಗೆ ಮಧುರವಾಗಿ ವರ್ತಿಸುವವನು. ತೊಂದರೆಪಡಿಸುವ ದುಷ್ಟರಿಗೆ ದುಷ್ಟರಂತೆ ಕಾಣಿಸುವವನು. ಈತನು ಅಸಾಮಾನ್ಯನಾದ ಮಾಧವನೇ ಆಗಿರುವನು.

## ಭಾಷಾಂತರ ಯೋಜನಾ ಸಮಿತಿ

ಅಧ್ಯಕ್ಷರು :

ಶ್ರೀ ಕೆ. ಸಂಪದ್ಗಿರಿ ರಾವ್

ಸದಸ್ಯರು :

ಶ್ರೀ ಎಲ್. ಗುಂಡಪ್ಪ

ಶ್ರೀ ನಾರಾಯಣ ಸಂಗಮ

ಶ್ರೀ ಸಿ. ಮಹಾದೇವಪ್ಪ

ಡಾ|| ಜಿ. ಎಸ್. ಶಿವರುದ್ರಪ್ಪ



ಸಂಚಾಲಕರು :

ಶ್ರೀಮತಿ ಎಫ್. ಪ್ರೇಮದಾಸ್

ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಇಲಾಖೆಯ

ಡೆಪ್ಯುಟಿ ಡೈರೆಕ್ಟರ್

# ಕರ್ನಾಟಕದ ಪರಂಪರೆ

**ಸಂಪುಟ 2**



## ಮಧ್ಯಕಾಲ ಮತ್ತು ಆಧುನಿಕಕಾಲ

**(ವಿಜಯನಗರ ಕಾಲದಿಂದ ಈಚಿನ ವರೆಗೆ)**



ಪ್ರಕಾಶಕರು :

ಮೈಸೂರು ರಾಜ್ಯ ಸರಕಾರ

**1970**

# ಪರಿವಿಡಿ

ವಿಷಯಗಳು ಮತ್ತು ಲೇಖಕರು ಪುಟಗಳು

ಪರಿವಿಡಿ

ವಿಷಯಗಳು ಮತ್ತು ಲೇಖಕರು ಪುಟಗಳು

## ಆಧುನಿಕ ಕಾಲ

## ಅಧ್ಯಾಯ 3

ರಾಜಕೀಯ ಇತಿಹಾಸ

ಪರಿವಿಡಿ

ವಿ. ಸೂ. : ಪುಟ 30 ಮತ್ತು 38ರಲ್ಲಿ ಮೂಲಲೇಖಕರ ಮತ್ತು ಅನುವಾದಕರ ಹೆಸರುಗಳು 'ಪರಿವಿಡಿ'ಯಲ್ಲಿ ಕಾಣಿಸಿದ್ದೇ ಸರಿ.

ಪುಟ 283ರಲ್ಲಿ ಬಂದ ಪದ್ಯಾನುವಾದ ಮಾಡಿದವರು ಶ್ರೀ ಸಿ. ಮಹಾದೇವಪ್ಪ

## ಭೂಪಟಗಳು



## ಚಿತ್ರಗಳ ವಿವರ (ಪುಟ 632–633ರ ನಡುವೆ)

# ಅಧ್ಯಾಯ 1

## ರಾಜಕೀಯ ಚರಿತ್ರೆ

### ವಿಜಯನಗರದ ಉದಯ ಮತ್ತು ಉತ್ಕರ್ಷ

ಹೊಯ್ಸಳ ಆಳಿಕೆಯ ಅಳಿಗಾಲ ಮತ್ತು ದಕ್ಷಿಣ ಭಾರತದಲ್ಲಿ ಮುಸಲ್ಮಾನರ ಆಕ್ರಮಣ—ಈ ಘಟನೆಗಳು ನಡೆದ ಕಾಲಕ್ಕೆ ಕರ್ಣಾಟಕದ ಚರಿತ್ರೆಯಲ್ಲಿ ಒಂದು ಹೊಸ ಮನ್ವಂತರವು ಪ್ರಾರಂಭವಾಗುತ್ತದೆ. ಇದನ್ನು ಮಧ್ಯಕಾಲೀನ ಯುಗವೆಂದು ಕರೆಯಬಹುದು.

### ಮುಸ್ಲಿಮ್ ಅಭಿಯೋಗ

ಈ ಯುಗದ ರಾಜಕೀಯ ಪರಿಸ್ಥಿತಿಯಲ್ಲಿ ಕಲ್ಲೋಲಕಾರಕ ಪರಿವರ್ತನೆ ತಲೆದೋರಿತು. ಆ ಪೂರ್ವದಲ್ಲಿ ಬಾಳಿದ ಹಿಂದು ರಾಜರು, ಆಗಾಗ ಅವರಲ್ಲಿ ವಿರಸದ ಸಂದರ್ಭಗಳು ಬರುತ್ತಿದ್ದರೂ ಸಾಮಾನ್ಯವಾಗಿ ನಿರಾತಂಕದಿಂದ ಶಾಂತಿಯ ಜೀವನವನ್ನೇ ಸಾಗಿಸಿದ್ದರು. ಹದಿನಾಲ್ಕನೆಯ ಶತಮಾನದ ಪ್ರಾರಂಭದಲ್ಲಿ ಸಂಭವಿಸಿದ ಮುಸಲ್ಮಾನರ ಅಭಿಯೋಗವು ಅಭೂತ ಪೂರ್ವವಾದ ಆಕಸ್ಮಿಕ ರಾಜಕೀಯ ಘಟನೆಯಾಗಿತ್ತು. ಅದು ಎಲ್ಲವನ್ನೂ ಕೊಚ್ಚಿಕೊಂಡು ಹೋಗುವ ಪ್ರಚಂಡ ಹಿಮಶಿಲಾಪಾತದಂತೆ ವಿಧ್ವಂಸಕಾರಿಯಾಗಿತ್ತು. ಅದರ ಪ್ರಥಮ ಪ್ರಹಾರವು ಅನಿರೀಕ್ಷಿತವೂ ಅನರ್ಥಕಾರಿಯೂ ಆಗಿತ್ತು. ಪಾಮರ ಜನತೆಯ ಮಾತಂತಿರಲಿ, ರಾಜರು, ಪ್ರಭುಗಳು ಸಹ, ಆ ಕ್ರೂರ ದಾಳಿಗಾರರು ದೇಶದ ಒಂದು ತುದಿಯಿಂದ ಇನ್ನೊಂದು ತುದಿಗೆ, ದಕ್ಷಿಣದಲ್ಲಿ ರಾಮೇಶ್ವರದ ವರೆಗೆ ನಡೆಸಿದ ರಭಸದ ಆಘಾತವನ್ನು ಸಹಿಸಲಾರದೆ ಅಸಹಾಯ ಸ್ಥಿತಿಯಲ್ಲಿ ಕಣ್ಣುಬಿಡುತ್ತ ಸುಮ್ಮನೆ ಬಿದ್ದುಕೊಳ್ಳಬೇಕಾಯಿತು.

ಶತಕಾನುಶತಕಗಳಿಂದ ಆತ್ಮ ಸಂತೃಪ್ತಿ ಭಾವದಲ್ಲಿ ಬಾಳಿಕೊಂಡು ಬಂದಿದ್ದ ಜನರು, ಜನನಾಯಕರು ಇದೀಗ ಮೊದಲ ಬಾರಿ ಬಲವಾದ ಪೆಟ್ಟುತಿಂದು ಎಚ್ಚತ್ತು ಕಣ್ದೆರೆದರು. ಅವರಿಗೆ ಆಗೊಂದು ವಿಲಕ್ಷಣ ಅನುಭವವೇ ಕಾದಿತ್ತು. ಅವರು ಪರಮ ಪವಿತ್ರವೆಂದು ಭಾವಿಸಿದ್ದ ಎಲ್ಲವನ್ನೂ ಅಪವಿತ್ರ ಗೊಳಿಸಲಾಯಿತು. ಶತ್ರುತ್ವದಿಂದ ಬಂದ ಪರಕೀಯ ನಾಗರಿಕತೆಯ ಸಮರಾಟೋಪವೇ ಅದಾಗಿತ್ತು. ಸುದೀರ್ಘಕಾಲ ತನ್ನದೇ ಆದ ಸಂಸ್ಕೃತಿಯ ಜೀವನ ಪಥವನ್ನು ಸಂವರ್ಧಿಸಿಕೊಂಡು, ಭವ್ಯ ಪ್ರತ್ಯೇಕತೆಯಿಂದ ಬದುಕಿದ್ದ ದಕ್ಷಿಣಭಾರತವು ಎಂದಿಲ್ಲದ ಒಂದು ಹೊಸ ಸನ್ನಿವೇಶವನ್ನು ಇದಿರಿಸಬೇಕಾಯಿತು.

### ಈ ಅಭಿಯೋಗದ ವಿಪತ್ತು

ಹದಿನೈದುನೂರು ವರ್ಷಗಳ ಹಿಂದೆ ಬೌದ್ಧ, ಜೈನ ಮತಗಳೇನೋ ಉತ್ತರಭಾರತದಿಂದ ಇಲ್ಲಿಗೆ ಬಂದು ವೈದಿಕ ಪರಂಪರೆಯನ್ನು ಅನುಸರಿಸಿದ್ದ ದಕ್ಷಿಣಭಾರತದ ಧಾರ್ಮಿಕ ರಂಗದಲ್ಲಿ ಪ್ರವೇಶಮಾಡಿದ್ದವು.

ಅವು ಕೆಲವೊಂದು ಭಿನ್ನ ಆಚಾರ ವಿಚಾರಗಳಿಂದ ಕೂಡಿದ್ದರೂ ಇಲ್ಲಿಯ ಸಂಸ್ಕೃತಿಗೆ ಕೇವಲ ಪರಕೀಯು ವೆಂದೆನಿಸಲಿಲ್ಲ. ಆದ್ದರಿಂದಲೇ ಅವುಗಳಿಗೆ ಹೆಚ್ಚು ಕಡಮೆ ಪುರಸ್ಕಾರವು ದೊರೆತು ಅವು ಇಲ್ಲಿಯ ಸಾಮಾಜಿಕ ಜೀವನದಲ್ಲಿ ಹೊಂದಿಕೊಂಡವು. ಅವುಗಳ ಆಗಮನದಿಂದ ದಕ್ಷಿಣಭಾರತದ ಸಂಸ್ಕೃತಿಯ ರಂಗದಲ್ಲಿ ಅವ್ಯವಸ್ಥೆ ಏನೂ ಉಂಟಾಗಲಿಲ್ಲ. ಮುಸ್ಲಿಮ್ ಆಕ್ರಮಣಕಾರರ ವಿಷಯವು ಮಾತ್ರ ಅದಕ್ಕೆ ಭಿನ್ನವೂ ವಿಪರೀತವೂ ಆಗಿತ್ತು. ಈ ಭಿನ್ನತೆಯ ಮೂಲಕ ದಕ್ಷಿಣಭಾರತದ ಮೇಲಿನ ಮುಸ್ಲಿಮ್ ದಾಳಿಯು ದಕ್ಷಿಣಭಾರತ ಮತ್ತು ಕರ್ಣಾಟಕದ ಚರಿತ್ರೆಯಲ್ಲಿ ಪ್ರಾಚೀನ ಯುಗದ ಪರಿಸಮಾಪ್ತಿ ರೇಖೆಯೆಂದು ಪರಿಗಣಿಸಬಹುದು.

ಪ್ರಥಮ ಆಘಾತದ ಕ್ಲೇಶಗಳು ತಗ್ಗಿದ ಬಳಿಕ ಈ ನೂತನ ದಾರುಣ ವಿಪತ್ತನ್ನು ನಿರೋಧಿಸದೆ ಹಾಗೆಯೇ ಉಳಿಯಗೊಟ್ಟರೆ, ಅದು ತಾವು ಪೋಷಿಸಿಕೊಂಡು ಬಂದಿದ್ದ ಜೀವನದ ಮೌಲ್ಯಗಳನ್ನೆಲ್ಲ ಸಂಪೂರ್ಣವಾಗಿ ನಾಶಗೊಳಿಸೀತು ಎಂಬ ಭಯ, ಕಾತರತೆ ಜನರ ಮತ್ತು ಜನನಾಯಕರ ಚಿತ್ತವನ್ನು ಬಲವಾಗಿ ಆವರಿಸಿಕೊಂಡವು. ಸಾರ್ವತ್ರಿಕವಾದ ಈ ಭೀತಿಯ ಕಳವಳವು ಜನಾಂಗದ ರಾಜಕೀಯ ಶಕ್ತಿಗಳನ್ನು ಸಂಘಟಿಸಿ ಉತ್ತರದ ದಾಳಿಗಾರರನ್ನು ತಡೆದು ನಿಲ್ಲಿಸಲು ಸಮರ್ಥವಾದ ಬಲಾಢ್ಯ ಕೋಟೆಯಂತಹ ಒಂದು ರಾಜ್ಯವನ್ನು ನಿರ್ಮಿಸುವ ಕಾರ್ಯಕ್ಕೆ ಪ್ರೇರಣೆ ನೀಡಿತು. ಇಂಥ ಪ್ರಯತ್ನದ ಫಲವೇ ವಿಜಯನಗರ ಸಾಮ್ರಾಜ್ಯದ ಸ್ಥಾಪನೆ. ಈ ವಿಜಯನಗರ ಸಾಮ್ರಾಜ್ಯದ ಹುಟ್ಟು ಮತ್ತು ಬೆಳವಣಿಗೆಯ ವೃತ್ತಾಂತವನ್ನು ಈ ಮುಂದೆ ನಿರೂಪಿಸುವೆವು.

ಹದಿನಾಲ್ಕನೆಯ ಶತಮಾನದಲ್ಲಿ ಸಂಭವಿಸಿದ ವಿಜಯನಗರ ಸಾಮ್ರಾಜ್ಯಸ್ಥಾಪನೆ ಕರ್ಣಾಟಕ ಚರಿತ್ರೆಯಲ್ಲಿ ಮಾತ್ರವಲ್ಲ, ಭಾರತದ ಚರಿತ್ರೆಯಲ್ಲಿಯೇ ಯುಗಾಂತರಕಾರಕ ಘಟನೆಯಾಗಿದೆ.

**ಭಾರತದಲ್ಲಿ ಮುಸ್ಲಿಮ್ ಆಕ್ರಮಣ**

ಏಳನೆಯ ಶತಮಾನದಲ್ಲಿ ಅರಬ ಸಾಹಸಿಗರು ಸಿಂಧ ಪ್ರದೇಶದಲ್ಲಿ ಮಾಡಿದ ಚಂಚು ಪ್ರವೇಶವು, ಅನಂತರ ಹನ್ನೊಂದನೆಯ ಶತಮಾನದಲ್ಲಿ ಘಜನಿ ಮಹಮೂದನು ನಡೆಸಿದ ಅನರ್ಥಕಾರಕ ದಾಳಿಗಳು, ಮುಂದಿನ ಶತಮಾನದಲ್ಲಿ ಕಾರ್ಯರೂಪಕ್ಕೆ ಬಂದ ಮುಸ್ಲಿಮರ ಭಾರತ ವಿಜಯದ ಮಾರ್ಗವನ್ನು ಸುಗಮಗೊಳಿಸಿದವು. ಕ್ರಿ.ಶ. 1192ರಲ್ಲಿ ನಡೆದ ಸ್ಥಾನೇಶ್ವರದ ಎರಡನೆಯ ಸಂಗ್ರಾಮದಲ್ಲಿ ಮಹಮ್ಮದ ಘೋರಿ ಸಂಪಾದಿಸಿದ ನಿರ್ಣಾಯಕ ವಿಜಯವು, ಹಿಂದುಗಳು ದಾಳಿಗಾರರಿಗೆ ಒಡ್ಡಿದ ವಿರೋಧವನ್ನು ನುಚ್ಚು ನೂರಾಗಿ ಮಾಡಿತು. ಮುಂದೆ ಅಚ್ಚರಿಯೆನಿಸುವಂತೆ ಎರಡು ದಶಕಗಳಷ್ಟು ಅಲ್ಪ ಕಾಲದಲ್ಲಿ ಬಹುತರ ಸಮಸ್ತ ಉತ್ತರಭಾರತದ ಮೇಲೆ ಮುಸ್ಲಿಮ್ ಆಧಿಪತ್ಯವು ಸ್ಥಿರವಾಗಿ ಊರಿಕೊಂಡಿತು.

ಅದೇ ಪರಿಯ ದುರವಸ್ಥೆ ದಕ್ಷಿಣಭಾರತಕ್ಕೂ ಒದಗಿತು. ದೇವಗಿರಿಯ ಯಾದವ ರಾಜ್ಯದಲ್ಲಿ ಕ್ರಿ. ಶ. 1296 ರಲ್ಲಿ ಅಲ್ಲಾಉದ್ದೀನ ಖಿಲಜಿ ಪ್ರವೇಶ ಮಾಡಿದ. ಅನಂತರ ಕೆಲವೇ ವರ್ಷಗಳಲ್ಲಿ ನರ್ಮದೆಯ ದಕ್ಷಿಣ ಭೂಭಾಗವು ಆಕ್ರಮಣಕಾರರ ಆವೇಶಪೂರಿತ ಪ್ರಹಾರಗಳಿಂದ ಮತ್ತು ವಿಧ್ವಂಸ ಕಾರಕ ಅತ್ಯಾಚಾರಗಳಿಂದ ಜರ್ಜರಿತವಾಯಿತು. ಮೂರು ದಶಕಗಳಷ್ಟು ಅಲ್ಪಾವಧಿಯಲ್ಲಿ ದೇವಗಿರಿಯಿಂದ ರಾಮೇಶ್ವರದ ವರೆಗೆ ವಿಸ್ತೀರ್ಣವಾದ ದಕ್ಷಿಣಭಾರತವು ಬಹು ಭಾಗದಲ್ಲಿ ಮುಸ್ಲಿಮ್ ಆಧಿಪತ್ಯದ ವಲಯವಾಗಿ ಪರಿಣಮಿಸಿತು.

**ಪ್ರತಿಕ್ರಿಯೆ**

ಆದರೆ ಅನತಿ ಸಮಯದಲ್ಲಿ ಪುರಾತನ ಕಾಲದಿಂದ ಗೌರವಯುತವಾಗಿ ಬಾಳಿ ಬಂದಿದ್ದ ಕನ್ನಡ ನಾಡಿನಲ್ಲಿ ಒಂದು ಅಪೂರ್ವ ದೃಶ್ಯವು ಗೋಚರವಾಯಿತು. ಇನ್ನಾವ ಭಾಗದ ಜನರಿಂದಲೂ ಸಾಧ್ಯವಾಗದೆ ಇದ್ದಂಥ ಮಹಾ ಕಾರ್ಯವನ್ನು ಈ ಜನಾಂಗದ ವೀರ ಪುತ್ರರು ಸಾಧಿಸಿ ತೋರಿಸಿದರು. ಆ ಮಹಾ ಕಾರ್ಯವು ಯಾವುದೆಂದರೆ–ಸುಸಂಘಟಿತ ಸೈನ್ಯ ಬಲದಿಂದ ಶತ್ರುಗಳನ್ನು ಹೊಡೆದೋಡಿಸಿ, ಪರಕೀಯರ ಆಕ್ರಮಣದಿಂದ ದೇಶವನ್ನು ಮುಕ್ತಗೊಳಿಸಿ, ಜನಾಂಗದ ಆಕಾಂಕ್ಷೆಗಳನ್ನು ಪೂರೈಸಲು ಸಮರ್ಥವಾದ ಸರ್ವತಂತ್ರ ಸ್ವತಂತ್ರ, ಶಕ್ತಿಯುತ, ಸಂಪದ್ಭರಿತ ನವ ರಾಜ್ಯದ ಪ್ರತಿಷ್ಠಾಪನೆ. ಹಿಂದು ಧರ್ಮದ ಸಂರಕ್ಷಣೆಯ ದೀಕ್ಷೆಯನ್ನು ತೊಟ್ಟು, ಎರಡುನೂರು ವರ್ಷಗಳಿಗೆ ಮಿಕ್ಕಿದ ದೀರ್ಘಕಾಲ ಊರ್ಜಿತವಾಗಿ ಬಾಳಿದ ಭವ್ಯ ವಿಜಯನಗರ ಸಾಮ್ರಾಜ್ಯವೇ ಆ ವಿಜಯಶಾಲಿ ನವರಾಜ್ಯ.

**ಮೂರು ರಾಜ್ಯಗಳ ಪತನ**

ಮುಸ್ಲಿಮ್ ದಾಳಿಗಳಿಗೆ ದಕ್ಷಿಣ ಭಾರತದ ನಾಲ್ಕು ದೊಡ್ಡ ರಾಜ್ಯಗಳು, ಒಂದು ಚಿಕ್ಕರಾಜ್ಯವು ಕುಸಿದು ಕೊಚ್ಚಿಕೊಂಡು ಹೋದವು. ಅವುಗಳಲ್ಲಿ ಮೊದಲು ಆಹುತಿಯಾದುದು ದೇವಗಿರಿಯ ಯಾದವರ ರಾಜ್ಯ. ಇದು ಕ್ರಿ.ಶ. 1318ರಲ್ಲಿ ನಾಮಶೇಷವಾಯಿತು. ಬಳಿಕ ಎರಡನೆಯ ಸರದಿ ಬಂದುದು ವಾರಂಗಲ್ಲಿಗೆ. ಅದನ್ನು ಕ್ರಿ.ಶ. 1323ರಲ್ಲಿ ವಶಪಡಿಸಲಾಯಿತು. ಅನಂತರ ಮುರಿದು ಬಿದ್ದುದು ಕುಮ್ಮಟದ ಚಿಕ್ಕ ರಾಜ್ಯ. ಇದು ದೇವಗಿರಿ, ದೋರಸಮುದ್ರ, ವಾರಂಗಲ್ಲು —ಈಮೂರು ರಾಜ್ಯಗಳ ನಡುವೆ ಒಂದು ಸುಭದ್ರ ಸ್ತಂಭ ದಂತೆ ಬಾಳಿತ್ತು. ಇದರ ದೊರೆ ಕುಮಾರ ರಾಮನು ಉದಾರ ಚರಿತನು, ಅದ್ಭುತ ಶೌರ್ಯ ಸಂಪನ್ನನು ಆಗಿದ್ದನು. ಈತನ ವೀರಕೃತಿಗಳು ಪವಾಡಕಥೆಗಳಾಗಿ ಇಂದಿಗೂ ಜನಸಾಮಾನ್ಯರ ಸ್ಮೃತಿ ಪಥದಲ್ಲಿ ಉಳಿದು ಕೊಂಡಿವೆ. ಈ ರಾಜ್ಯವು ಮಹಾಪ್ರವಾಹದಂತೆ ಭೋರ್ಗರೆದು ಬಂದು ಶತ್ರುಗಳ ಕ್ರೂರ ಆಘಾತಗಳಿಗೆ ಕೆಲಸಮಯ ಮೈಗೊಟ್ಟು ನಿಂತಿತು. ಆದರೆ ಮುಂದೆ ಬಸವಳಿದು ಕ್ರಿ.ಶ. 1327ರಲ್ಲಿ ಪೂರ್ತಿ ನಿರ್ನಾಮ ವಾಯಿತು. ದಕ್ಷಿಣದ ಆಚೆಯ ಅಂಚಿನಲ್ಲಿದ್ದ ಪಾಂಡ್ಯರಾಜ್ಯವು ವೈರಿಗಳಿಂದ ಉಧ್ವಸ್ತವಾಗಿ, ಕ್ರಿ.ಶ. 1330ರಲ್ಲಿ ಅದರ ರಾಜಧಾನಿ ಮದುರೆಯಲ್ಲಿ ಮುಸ್ಲಿಮ್ ಪ್ರಾಂತಾಧಿಪತಿ ಅಧಿಕಾರಾರೂಢನಾದನು.

**ಹೊಯ್ಸಳ ರಾಜ್ಯ**

ದೋರಸಮುದ್ರದ ಹೊಯ್ಸಳ ರಾಜ್ಯವು ಮಾತ್ರ ಕೆಲಸಾರೆ ಆಕ್ರಮಣಕ್ಕೀಡಾದರೂ ತನ್ನ ಸತ್ವವನ್ನು ಸಂಪೂರ್ಣವಾಗಿ ಕಳೆದುಕೊಳ್ಳಲಿಲ್ಲ. ಅದರ ಪ್ರತಾಪಶಾಲಿ ನರೇಂದ್ರ ಮುಮ್ಮಡಿ ಬಲ್ಲಾಳನು (ಕ್ರಿ.ಶ. 1292–1342) ತನ್ನ ಅಪ್ರತಿಮ ಧೈರ್ಯ ಸಾಹಸಗಳಿಂದಲೂ ರಾಜನೈತಿಕ ಚಾತುರ್ಯದಿಂದಲೂ ಜನಾಂಗವನ್ನು ದೈನ್ಯದ ಶರಣಾಗತಿಯಿಂದ ಕಾಪಾಡಿದನು. ಆತನು ತನ್ನ ರಾಜಧಾನಿಯನ್ನು ದೋರ ಸಮುದ್ರದಿಂದ ಉತ್ತರ ಆರ್ಕಾಟ ಜಿಲ್ಲೆಯ ತಿರುವಣ್ಣಾಮಲೆಗೆ ಸ್ಥಳಾಂತರಿಸಿದನು. ತನ್ನ ರಾಜ್ಯದ ಗಡಿಗಳಲ್ಲಿ ಸಂಚರಿಸುತ್ತ ಶತ್ರುವನ್ನು ನಿರೋಧಿಸಲು ಸಮರ್ಥವಾದ ಸೈನ್ಯಬಲವನ್ನು ಸಂಘಟಿಸಿದನು. ಈ ಯೋಜನೆಯ ಅಂಗವಾಗಿ ಆತನು ಅದಾಗ ತಳವೂರಿದ್ದ ಮದುರೆಯ ಮುಸ್ಲಿಮ್ ಪ್ರಾಂತಾಧಿಕಾರಿಯ ವಿರುದ್ಧ ಸೈನಿಕ ಕಾರ್ಯಾಚರಣೆಯಲ್ಲಿ ತೊಡಗಿದ್ದಾಗ, ತಿರುಚಿರಾಪಳ್ಳಿಯ ಬಳಿ ಕಣ್ಣನೂರ ಕುಪ್ಪ ಎಂಬ ಸ್ಥಳದಲ್ಲಿ ಕ್ರಿ.ಶ. 1342ರಲ್ಲಿ ವಿಶ್ವಾಸಘಾತದಿಂದ ವಧಿಸಲ್ಪಟ್ಟನು. ಆಗ ಆತನ ವಯಸ್ಸು ಸುಮಾರು 80. ಆತನ ಮಗ ವಿರೂಪಾಕ್ಷ ನಾಲ್ವಡಿ ಬಲ್ಲಾಳನ ಅಲ್ಪಕಾಲಿಕ ನಿಸ್ಸತ್ವ ಆಳಿಕೆಯ ಅನಂತರ ಕ್ರಿ.ಶ. 1346ರಲ್ಲಿ ಹೊಯ್ಸಳರ

ಆಧಿಪತ್ಯವು ಕೊನೆಗೊಂಡಿತು. ಈ ಹೊತ್ತಿಗೆ ನವೋದಿತ ವಿಜಯನಗರ ರಾಜ್ಯವು ಸಾಕಾರ ಸ್ವರೂಪವನ್ನು ತಳೆದಿತ್ತು.

### ವಿಜಯನಗರದ ಸ್ಥಾಪನೆ

ವಿಜಯನಗರ ರಾಜ್ಯದ ಸ್ಥಾಪನೆಯ ಶ್ರೇಯಸ್ಸು ಶೂರರೂ ಸಾಹಸಿಗರೂ ಆದ ಐದು ಜನ ಸಂಗಮ ಪುತ್ರರಿಗೆ ಸಲ್ಲುತ್ತದೆ. ಈ ಸಂಗಮನು ಚಿಕ್ಕ ನಾಯಕನೇ ಆಗಿದ್ದರೂ ಸದ್ವಂಶ ಪ್ರಸೂತ; ಯಾದವ ಕುಲೋತ್ಪನ್ನ, ಎಂಬ ಗೌರವಕ್ಕೆ ಅರ್ಹನಾದವನು. ಹರಿಹರ, ಬುಕ್ಕಣ್ಣ, ಕಂಪಣ್ಣ, ಮಾರಪ್ಪ, ಮುದ್ದಪ್ಪ–ಇವರೇ ಆ ಸಂಗಮ ಪುತ್ರರು. ಇವರಲ್ಲಿ ಮೊದಲಿನ ಇಬ್ಬರು ಆ ಮಹಾಘಟನೆಯಲ್ಲಿ ಪ್ರಮುಖಪಾತ್ರವನ್ನು ವಹಿಸಿದ ಕಾರಣದಿಂದ ವಿಜಯನಗರ ಸಂಸ್ಥಾಪಕರೆಂದು ಸರ್ವತೋಮುಖ ಕೀರ್ತಿಗೆ ಪಾತ್ರರಾಗಿರುವರು.

### ಸ್ಥಾಪನೆಯ ಸಮಸ್ಯೆಗಳು

ಹರಿಹರ ಬುಕ್ಕರು ಈ ನವರಾಜ್ಯದ ಸ್ಥಾಪಕರೆಂಬ ವಿಷಯದಲ್ಲಿ ವಿರೋಧವನ್ನಾಗಲಿ, ಸಂದೇಹವನ್ನಾಗಲಿ ಯಾರೂ ಮುಂದುಮಾಡಿಲ್ಲ. ಆದರೂ ಅದರ ಮೂಲಸ್ಥಳ, ಪೂರ್ವದ ಸಂಬಂಧಗಳು ಮತ್ತು ಅವರು ಯಾವ ನಾಡಿನವರು ಎಂಬ ವಿಚಾರದಲ್ಲಿ ವಿದ್ವಾಂಸರು ಅನೇಕ ವಿವಾದಗಳನ್ನು ಹೂಡಿರುವರು. ಶಾಸನವೇ ಮೊದಲಾದ ಪ್ರಮಾಣಭೂತ ಸಮಕಾಲಿಕ ಆಧಾರಗಳಲ್ಲಿ ಅಂದಿನ ಘಟನೆಗಳ ವಾಸ್ತವಿಕ ಸಮಗ್ರ ಚಿತ್ರವು ಸ್ಫುಟವಾಗಿ ದೊರೆಯುತ್ತಿಲ್ಲ. ಈ ಕೊರತೆಯ ಮೂಲಕ, ಮುಸ್ಲಿಮ್ ಚರಿತ್ರಕಾರರ ಲೇಖನಗಳಿಂದ ಹಾಗೂ ಹದಿನಾರನೆಯ ಶತಮಾನದ ಮತ್ತು ಅನಂತರದ ಹಿಂದೂ ಸಾಹಿತ್ಯಕೃತಿಗಳಲ್ಲಿ ಬರುವ ಅಸಮರ್ಪಕ ನಿರೂಪಣೆಯಿಂದ ವಿಜಯನಗರದ ಇತಿಹಾಸಕಾರರು ಈ ವಿಷಯದಲ್ಲಿ ವಿಚಿತ್ರ ಅಭಿಪ್ರಾಯಗಳನ್ನು ತಳೆದಿರುವರು.

ಇತಿಹಾಸದ ವ್ಯಾಸಂಗದಲ್ಲಿ ಸಮಕಾಲಿಕ, ಸ್ವಾರ್ಥರಹಿತ, ಸ್ವಕೀಯ ಲೇಖಕರ ಸಾಕ್ಷ್ಯವು ಹೆಚ್ಚು ಮೌಲಿಕವಾದುದು ಎಂಬ ಸಿದ್ಧಾಂತಕ್ಕೆ ಬೇರೆ ಪ್ರಮಾಣದ ಅಗತ್ಯವಿಲ್ಲ. ಇಂಥ ಮೌಲಿಕ ಸಾಕ್ಷ್ಯವು ಮಿತ ಪ್ರಮಾಣದಲ್ಲಿ ಲಭ್ಯವಾದರೂ ಸ್ವಾಗತಾರ್ಹವಾಗಿರುತ್ತದೆ. ಅದು, ವಿರೋಧಿ ಪಕ್ಷದವರ ಹೇಳಿಕೆಗಳು ಮತ್ತು ಘಟನೆಗಳು ನಡೆದ ಕಾಲಕ್ಕಿಂತ ಅನಂತರದ ಸುದೂರ ಕಾಲದ ಹೆಚ್ಚು ವಿವರಗಳನ್ನು ಪೂರಯಿಸುವ ಸಂದಿಗ್ಧ ಲೇಖನಗಳಿಗಿಂತ ಹೆಚ್ಚು ವಿಶ್ವಸನೀಯವೆಂದು ಪರಿಗಣಿಸಬೇಕಾಗುತ್ತದೆ. ಈ ವಿಚಾರವನ್ನು ಮುಂದಿಟ್ಟುಕೊಂಡು ಈಗ ನಾವು ಕೆಲವು ಮುಸ್ಲಿಮ್ ಲೇಖಕರ ನಿರೂಪಣೆಯನ್ನು ಅವಲೋಕಿಸುವ.

### ಮುಸ್ಲಿಮ್ ಲೇಖಕರು

ವಿಜಯನಗರ ಸ್ಥಾಪನೆಯ ಅನಂತರ ಕೆಲವು ದಶಕಗಳ ಈಚೆಯ ಮುಸ್ಲಿಮ್ ಚರಿತ್ರಕಾರನಾದ ಬರನಿಯ ಹೇಳಿಕೆ ಹೀಗಿದೆ. ವಾರಂಗಲ್ಲ ರಾಜ್ಯದಲ್ಲಿ ಮುಹಮ್ಮದ ತುಘಲಖನ ವಿರುದ್ಧ ಕನ್ಯಾನಾಯಕನು ಬಂಡಾಯ ಹೂಡಿದನು. ಇದರ ಪರಿಣಾಮವಾಗಿ ಅಲ್ಲಿಯ ಮುಸ್ಲಿಮ್ ಪ್ರಾಂತಾಧಿಕಾರಿ ಮಲಿಕ ಮಕಬೂಲ್ ದಿಲ್ಲಿಗೆ ಪಲಾಯನ ಮಾಡಿದನು. ಅದೇ ಕಾಲಕ್ಕೆ ಕಂಪಲಿ, ಆನೆಗುಂದಿ ಪ್ರದೇಶದಲ್ಲಿ ತಲೆಯೆತ್ತಿದ ದೊಂಬಿಯನ್ನು ಹತ್ತಿಕ್ಕಲು ದಿಲ್ಲಿಯ ಸುಲ್ತಾನನು ಕನ್ಯಾನಾಯಕನ ಸಂಬಂಧಿಕನನ್ನು ಅಲ್ಲಿಗೆ ಕಳುಹಿದನು. ಮೊದಲು ಹಿಂದುವಾಗಿದ್ದರೂ ಮುಸ್ಲಿಮ್ ಮತಾಂತರ ಹೊಂದಿದ್ದ ಈತನು ಆ ಮತವನ್ನು ತ್ಯಜಿಸಿ, ಮರಳಿ

ಹಿಂದುಧರ್ಮದಲ್ಲಿ ಸೇರಿಕೊಂಡು ಬಂಡುಗಾರರ ಜೊತೆಗೆ ಕೂಡಿದನು. ಈ ಬಂಡಾಯವು ಯಶಸ್ವಿಯಾಗಿ ಆ ಭಾಗದ ಪ್ರಾಂತಾಧಿಕಾರಿಯಾಗಿದ್ದ ಮಲಿಕ ಮುಹಮ್ಮದನು ಹೊರದೂಡಲ್ಪಟ್ಟನು. ಇಂತು ದಿಲ್ಲಿ ಸುಲ್ತಾನನ ಅತಿಕ್ರಮಣದ ಆಳಿಕೆ ಅಲ್ಲಿ ಕೊನೆಗೊಂಡಿತು.

ಸಮಕಾಲೀನ ಬರೆಹಗಾರನಾದ ಇಬ್ನ ಬತೂತನ ನಿವೇದನೆ ಕೆಲವಂಶಗಳಲ್ಲಿ ಇದಕ್ಕೆ ಭಿನ್ನವಾಗಿದೆ. ಅದು ಹೀಗೆ : ಕಂಪಲಿ ರಾಜ್ಯವನ್ನು ನಾಶಮಾಡಿದ ಬಳಿಕ ದಿಲ್ಲಿಯ ಸೈನಿಕರು ಅಲ್ಲಿಯ ರಾಜನ ಹನ್ನೊಂದು ಜನ ಮಕ್ಕಳನ್ನು ಸೆರೆಹಿಡಿದು ತಮ್ಮ ರಾಜಧಾನಿಗೆ ಕೊಂಡೊಯ್ದು ಅವರನ್ನು ಮುಸಲ್ಮಾನರನ್ನಾಗಿ ಮಾಡಿದರು. ಅವರಲ್ಲಿ ಇಬ್ಬರನ್ನು ಸುಲ್ತಾನನು ಮುಂದೆ ಕಂಪಲಿ ಪ್ರದೇಶಕ್ಕೆ ತನ್ನ ಅಧಿಕಾರಿಗಳೆಂದು ಕಳುಹಿದನು.

ಇನ್ನೊಬ್ಬ ಸಮಕಾಲೀನ ಲೇಖಕನಾದ ಇಸಾಮಿ, ಮುಸಲ್ಮಾನ ಧರ್ಮವನ್ನು ಅಪ್ಪಿದ ಒಬ್ಬ ಹಿಂದು ನಾಯಕನು ಪುನಃ ಹಿಂದುಧರ್ಮಕ್ಕೆ ಸೇರಿಕೊಂಡು ಗುತ್ತಿಯಿಂದ ಪೂರ್ವಸಮುದ್ರ ತೀರದ ಕನ್ನಡ ಪ್ರದೇಶವನ್ನು ಆಕ್ರಮಿಸಿದನೆಂದು ಹೇಳುವನು.

**ಎರಡು ವಾದಗಳು**

ಈ ಎಲ್ಲ ಲೇಖಕರು ಆ ಕಾಲದಲ್ಲಿ ನಡೆದವು ಎಂದು ಹೇಳಲಾದ ಘಟನೆಗಳನ್ನು ಪ್ರತ್ಯಕ್ಷವಾಗಿ ಕಾಣದೆ, ಅನ್ಯರ ಮುಖಾಂತರ ಕೇಳಿ, ತಮ್ಮ ತಮ್ಮ ಪರಿಯಲ್ಲಿ ನಿವೇದಿಸಲು ಪ್ರಯತ್ನಿಸಿರುವರು. ವಿಜಯನಗರದ ಸ್ಥಾಪನೆಯಲ್ಲಿ ಪ್ರಮುಖ ಪಾತ್ರ ವಹಿಸಿದ ವ್ಯಕ್ತಿಗಳ ವಿಚಾರದಲ್ಲಿ ಸ್ಥೂಲವಾದ ಕೆಲವು ಸಂಗತಿಗಳನ್ನು ನೀಡಿರುವರು. ಆದರೆ ಇಲ್ಲಿ ಲಕ್ಷಿಸತಕ್ಕಂತಹ ಒಂದು ಮುಖ್ಯ ವಿಷಯವು ಇದೆ. ಅದೇನೆಂದರೆ ಈ ಬರೆಹಗಾರರು ಖಚಿತವಾಗಿ ಹಿಂದುವಿರೋಧಿ ಪಕ್ಷಕ್ಕೆ ಸೇರಿದವರಾದುದರಿಂದ ಅವರು ಕೇಳಿ ವರ್ಣಿಸಿದ ವಿವರಗಳು ಪಕ್ಷಪಾತರಹಿತವೂ, ಯಥಾರ್ಥವೂ ಆಗಿವೆಯೆಂದು ನಂಬಲು ಸಾಧ್ಯವಿಲ್ಲ. ಇಂತಹ ಸಂಶಯಾಸ್ಪದ ವೃತ್ತಾಂತಗಳನ್ನು ಸತ್ಯಸಂಗತಿಯೆಂದು ನಂಬಿ ನಮ್ಮ ಕೆಲವು ಚರಿತ್ರ-ಲೇಖಕರು ತಪ್ಪು ಅಭಿಪ್ರಾಯಗಳನ್ನು ಪ್ರಸಾರಮಾಡಿದರು. ಇಂತಹವುಗಳಲ್ಲಿ ಒಂದು, ವಿಜಯನಗರ ಸ್ಥಾಪಕರು ವಾರಂಗಲ್ಲಿನಿಂದ ಬಂದವರು, ಆದ್ದರಿಂದ ತೆಲುಗು ಮೂಲದವರು ಎಂಬುದಾಗಿದೆ. ಇನ್ನೊಂದು, ಅವರು ಹಿಂದೆ ಮುಸ್ಲಿಮ್ ಮತಾಂತರ ಹೊಂದಿದವರಾಗಿದ್ದು, ಅನಂತರ ಸಂಧಿ ಸಾಧಕತನದಿಂದ ಪುನಃ ಹಿಂದು ಧರ್ಮದಲ್ಲಿ ಪ್ರವೇಶ ಮಾಡಿ, ವಿಜಯನಗರದ ಹಿಂದು ರಾಜ್ಯ ಸಂಸ್ಥಾಪಕರಾದರು ಎಂಬುದು.

**ಅವುಗಳ ವಿಮರ್ಶೆ**

ಈ ಎರಡು ವಾದಗಳು ಐತಿಹಾಸಿಕ ದೃಷ್ಟಿಯಿಂದ ಸಮರ್ಥನೀಯವಾಗಿಲ್ಲ. ಹರಿಹರ ಬುಕ್ಕರು ವಾರಂಗಲ್ಲ ಕನ್ಯಾನಾಯಕನ ಸಂಬಂಧಿಕರಾಗಿದ್ದರು–ಎಂಬ ಮಾತಿಗೆ ಒಂದು ಕಣದಷ್ಟಾದರೂ ಆಧಾರವಿಲ್ಲ. ಇಬ್ನಬತೂತನ ಹೇಳಿಕೆಯ ಪ್ರಕಾರ ಕಂಪಲಿ ಪ್ರದೇಶದಲ್ಲಿ ಸುಲ್ತಾನನ ಪ್ರತಿನಿಧಿಗಳಾಗಿ ರಾಜ್ಯಭಾರವನ್ನು ನಡೆಯಿಸಲು ದಿಲ್ಲಿಯಿಂದ ಆಗಮಿಸಿದ ಆ ಇಬ್ಬರು ಅಧಿಕಾರಿಗಳು ಹರಿಹರ–ಬುಕ್ಕರೇ ಆಗಿದ್ದರು, ಎಂದು ಗ್ರಹಿಸುವದು ತೀರ ಅಬದ್ಧ ಮಾತು. ಏಕೆಂದರೆ ಹರಿಹರ ಬುಕ್ಕರು ಸಂಗಮ ಪುತ್ರರು. ಇಬ್ನಬತೂತನು ಹೇಳುವ ಆ ಇಬ್ಬರು ಕಂಪಲಿಯ ದೊರೆಯ ಮಕ್ಕಳು.

ನಿಜವಾಗಿ, ಇಬ್ನಬತೂತನ ಈ ಕಥನವು ಯಥಾರ್ಥತೆಯನ್ನೇ ಪ್ರಶ್ನಿಸುವಂತಿದೆ. ಏಕೆಂದರೆ,

ಕಂಪಲಿಯ ಈ ಘಟನೆಗಳು ನಂಜುಂಡನ ಕುಮಾರ ರಾಮನ ಕಥೆ ಮತ್ತಿತರ ಕಾವ್ಯಗಳಲ್ಲಿ ವರ್ಣಿಸಲಾಗಿವೆ. ಅವುಗಳಿಂದ ಕಂಪಲಿಯ ಅರಸುಮನೆತನದವರೆಲ್ಲರೂ ಈ ದಿಲ್ಲಿಯ ದಾಳಿಯಲ್ಲಿ ಹತರಾದರೆಂದು ತಿಳಿಯುತ್ತದೆ. ಹೀಗಿರುವಾಗ ಕಂಪಲಿ ದೊರೆಯ ಹನ್ನೊಂದು ಜನ ಮಕ್ಕಳು ಸೆರೆಗೆ ಸಿಲುಕಿದರು, ಮುಂತಾದ ಮುಂದಿನ ಮಾತುಗಳೆಲ್ಲ ನಿರಾಧಾರವೆಂದು ಹೇಳಬೇಕಾಗುತ್ತದೆ.

ಹರಿಹರ-ಬುಕ್ಕರು ಮುಸಲ್ಮಾನರಾಗಿದ್ದರು ಎಂಬ:ವಾದವು ಕೇವಲ ಅರ್ಥಹೀನ ಹೇಳಿಕೆ. ಇದಕ್ಕೆ ಸತ್ಯದ ಆಧಾರವೇ ಇಲ್ಲ. ಇದರ ಸಮರ್ಥನೆಗೆ ಮುಸಲ್ಮಾನ ಲೇಖಕರ ಬರವಣಿಗೆಗಳನ್ನು ಮುಂದು ಮಾಡುವುದು ವೃಥಾಸಾಹಸದ ಕೆಲಸ. ಧರ್ಮಾಂಧರಾಗಿ ತಮ್ಮ ಧರ್ಮವನ್ನು. ಬೆಳೆಯಿಸಲು ಭಾರತಕ್ಕೆ ಬಂದ ಮುಸಲ್ಮಾನರು ತಮ್ಮ ಹಿರಿಮೆಯನ್ನು, ಪ್ರತಿಷ್ಠೆಯನ್ನು ಮೆರೆಯಲು ಬಾರಿ ಬಾರಿಗೂ ತಾವು ಹಿಂದುಗಳನ್ನು ಮತಾಂತರಗೊಳಿಸಿದ ಮಾತನ್ನು ಸಾರಿ ಹೇಳುವದು ಒಂದು ಸಾರ್ವತ್ರಿಕ ಸಂಪ್ರದಾಯವೇ ಆಗಿತ್ತು. ಉದ್ದೇಶಪೂರಿತ ಮನೋವೃತ್ತಿಯಿಂದ ನಿರೂಪಿಸಿದ ಪರಕೀಯ ಚರಿತ್ರ ಲೇಖಕರ ಇಂಥ ಬರವಣಿಗೆಗಳನ್ನು ಬದಿಗಿರಿಸಿದರೆ, ವಿಜಯನಗರ ಸಂಸ್ಥಾಪಕರು ಧರ್ಮಾಂತರ ಹೊಂದಿದ್ದ ಸಂಗತಿ ಯನ್ನು ಬೆಂಬಲಿಸಲು ಮುಸಲ್ಮಾನರಲ್ಲದ ನಿಷ್ಪಕ್ಷಪಾತಿ, ವಿಕಾರ ರಹಿತ ಇತಿಹಾಸಕಾರರ ಪ್ರಮಾಣಭೂತ ಲೇಖನಗಳು, ಒಂದಾದರೂ ದೊರೆಯುವುದಿಲ್ಲ. ಈ ವಿಷಯವನ್ನು ನಾವು ಖಚಿತವಾಗಿ ಗಮನಿಸ ಬೇಕಾದುದು.

**ತೆಲುಗು ಮೂಲದ ವಾದ**

ವಿಜಯನಗರದ ಸಂಸ್ಥಾಪಕರು ತೆಲುಗು ಮೂಲದವರಾಗಿದ್ದರು ಎಂಬ ವಿಷಯವು ಕೆಲವೊಂದು ಹಿಂದು ಗ್ರಂಥಗಳಲ್ಲಿ ಸ್ವಲ್ಪ ವಿವರವಾಗಿಯೇ ವರ್ಣಿಸಲಾಗಿದೆ. ಅದನ್ನು ಹೀಗೆ ಸಂಕ್ಷೇಪಿಸಿ ಹೇಳಬಹುದು.

ವಾರಂಗಲ್ಲಿನ ಕಾಕತೀಯ ವಂಶದ ಅರಸು ಪ್ರತಾಪರುದ್ರನ ಆಳಿಕೆಯಲ್ಲಿ ಹರಿಹರ ಬುಕ್ಕರು ಆತನ ಅಧಿಕಾರಿಗಳಾಗಿದ್ದರು. ಹರಿಹರನು ಮಂತ್ರಿಯೆಂದು, ಬುಕ್ಕನು ಭಂಡಾರಿಯೆಂದು ಸೇವೆಗೆಯ್ಯುತ್ತಿದ್ದರು. ದಿಲ್ಲಿಯ ಸುಲ್ತಾನನು ಆ ರಾಜ್ಯವನ್ನು ವಶಪಡಿಸಿಕೊಂಡ ಬಳಿಕ ಅವರು ಹಂಪೆಯ ಪ್ರದೇಶಕ್ಕೆ ಹೋಗಿ ಆ ರಾಜ್ಯದ ದೊರೆ ರಾಮನಾಥನಲ್ಲಿ.ಸೇವೆಗೆ ನಿಂತರು. ಮುಂದೆ ಆ ಪ್ರದೇಶವು ಶತ್ರುಗಳ ವಶವಾಗಿ ಅವರನ್ನು ಸೆರೆ ಹಿಡಿದು ದಿಲ್ಲಿಗೆ ಕೊಂಡೊಯ್ದರು. ಅಲ್ಲಿ ಅವರು ಸುಲ್ತಾನನ ಸ್ವಾಮಿನಿಷ್ಠ ಸೇವಕರಾದರು. ಅವರ ಸ್ವಾಮಿನಿಷ್ಠೆಯಿಂದ ಸಂತುಷ್ಟನಾದ ದಿಲ್ಲಿಯ ಸುಲ್ತಾನನು ಅರಾಜಕಕ್ಕೆ ಒಳಗಾಗಿದ್ದ ಕರ್ಣಾಟ ದೇಶವನ್ನು ಆಳಲು ಪ್ರಾಂತಾಧಿಕಾರಿಗಳೆಂದು ಅವರನ್ನು ಅಲ್ಲಿಗೆ ಕಳುಹಿದನು. ಅಲ್ಲಿರುವಾಗ ಅವರಿಗೆ ವಿದ್ಯಾರಣ್ಯರ ದರ್ಶನವಾಯಿತು. ಈ ಗುರುಗಳ ಆಶೀರ್ವಾದದಿಂದ ಅವರು ಸುಲ್ತಾನನ ಆಧಿಪತ್ಯವನ್ನು ಕಿತ್ತೊಗೆದು, ಆ ಭಾಗದಲ್ಲಿ ತಮ್ಮ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದರು. ಅದುವೇ ವಿಜಯನಗರ.

**ಈ ವಾದದ ವಿಮರ್ಶೆ**

ಸುಮಾರು ಹದಿನಾರನೆಯ ಶತಮಾನದಿಂದೀಚೆಗೆ ತುಳುವಂಶದ ಆಳಿಕೆಯಲ್ಲಿ ವಿಜಯನಗರದ ಆಸ್ಥಾನದಲ್ಲಿ ಆಂಧ್ರರ ಪ್ರಭಾವವು ಊರ್ಜಿತವಾಯಿತು. ಈ ಕಾಲದಲ್ಲಿ ರಚಿತವಾದ ವಿದ್ಯಾರಣ್ಯಕಾಲ ಜ್ಞಾನ, ವಿದ್ಯಾರಣ್ಯ ವೃತ್ತಾಂತ ಮುಂತಾದ ಕೃತಿಗಳಲ್ಲಿ ಮೇಲೆ ನಿರೂಪಿಸಿದ ಕಥೆ ಕೆಲವೊಂದು ವಿವರಗಳ ವ್ಯತ್ಯಾಸದೊಂದಿಗೆ ಕಾಣಿಸಿಕೊಳ್ಳುತ್ತದೆ, ಐತಿಹಾಸಿಕ ಸಾಧನೆಗಳಲ್ಲಿ ವಿಶ್ವಸನೀಯವಾದವು ಯಾವುವು, ಅವಿಶ್ವಸನೀಯವಾದವು ಯಾವುವು, ಎಂಬುದನ್ನು ಕಂಡು ಹಿಡಿಯಲು ಶಕ್ತರಾದ ಸಂಶೋಧಕರು ಇಂಥ

ಕಥೆಗಳೆಲ್ಲ ಹೆಚ್ಚು ಕಡಮೆ ಪೌರಾಣಿಕ ನಿರೂಪಣೆಯೆಂದು, ಹಾರಿಕೆಯ ದಂತಕಥೆಗಳೆಂದು ಸುಲಭವಾಗಿ ತಿಳಿದುಕೊಳ್ಳಬಹುದು. ಏಕೆಂದರೆ ಅವು ಯಾವವೂ ಸಮಕಾಲಿಕವಾಗಲಿ, ಸಮಕಾಲಿಕತೆಗೆ ಸಮೀಪವಾಗಲಿ, ಅಲ್ಲವೇ ಅಲ್ಲ; ಮಾತ್ರವಲ್ಲ, ಆ ಐತಿಹಾಸಿಕ ಘಟನೆ ಖಚಿತವಾಗಿ ನಡೆದ ಕಾಲದ ಅನಂತರ ಹಲವು ಶತಮಾನಗಳಷ್ಟು ದೂರದ ಈಚೆಯ ಕಾಲದಲ್ಲಿ ಹುಟ್ಟಿದಂತಹವು ಎಂಬುದು ಸ್ಪಷ್ಟವಿದೆ.

ವಿಜಯನಗರದ ಸಂಸ್ಥಾಪಕರು ವಾರಂಗಲ್ಲಿನಿಂದ ಬಂದವರು ಎಂಬ ಅಭಿಪ್ರಾಯವು ಸಂಪೂರ್ಣವಾಗಿ ಇತಿಹಾಸಕ್ಕೆ ವಿರೋಧಿಯಾಗಿದೆ. ಏಕೆಂದರೆ ಅದಕ್ಕೆ ತಳಬುಡವೇ ಇಲ್ಲ. ಕಾಕತೀಯರ ಚರಿತ್ರೆಯನ್ನು ಅದರಲ್ಲಿಯೂ ಪ್ರತಾಪರುದ್ರನ ಆಳಿಕೆಯನ್ನು ಕೂಲಂಕಷವಾಗಿ ಅವಲೋಕಿಸಿದರೆ ಅಲ್ಲಿ ಪ್ರಮುಖ ಅಧಿಕಾರಿಗಳಾಗಿದ್ದರು ಎಂದು ಹೇಳಲಾಗುವ ಹರಿಹರ ಬುಕ್ಕರ ನಾಮನಿರ್ದೇಶವೇ ದೊರಕುವದಿಲ್ಲ. ಅದೇ ಪರಿಯಲ್ಲಿ ಕಂಪಲಿಯ ರಾಜರ ಚರಿತ್ರೆಯಲ್ಲಿಯೂ ಅವರು ಕಾಣಿಸಿಕೊಳ್ಳುವದಿಲ್ಲ. ಮೇಲಾಗಿ ಕಾಕತೀಯರಿಗೂ ಕಂಪಲಿಯ ಅರಸರಿಗೂ ಮೈತ್ರಿ ಇರಲಿಲ್ಲ. ತಮ್ಮ ರಾಜ್ಯಕ್ಕೆ ಗಂಡಾಂತರ ಒದಗಿದ ಸಮಯದಲ್ಲಿ ಅವರು ದೇಶನಿಷ್ಠರಾಗಿ ಶತ್ರುಗಳನ್ನು ಇದಿರಿಸಲು ತಮ್ಮ ರಾಜ್ಯದಲ್ಲಿ ಉಳಿಯುವುದನ್ನು ಬಿಟ್ಟು, ದೂರದ ಮತ್ತು ಮಿತ್ರರಲ್ಲದ ಕಂಪಲಿಯ ರಾಜರಲ್ಲಿಗೆ ಏಕೆ ಬಂದರು ಎಂಬ ವಿಷಯವು ಊಹಾತೀತವೇ ಆಗಿದೆ.

### ಶಾಸನಗಳ ಸಾಕ್ಷ್ಯ

ವಿಜಯನಗರ ಸಂಸ್ಥಾಪಕರು ಮೂಲತಃ ವಾರಂಗಲ್ಲಿನವರು ಎಂಬ ಮಾತು ನಿಜ ಸಂಗತಿಯಾಗಿದ್ದರೆ ಇದುವರೆಗೆ ಬಹುತರವಾಗಿ ಬೆಳಕಿಗೆ ಬಂದಿರುವ ಸಂಗಮ ವಂಶದ ರಾಜರ ಸಮಕಾಲಿಕ ಶಿಲಾಶಾಸನ, ತಾಮ್ರಶಾಸನಗಳಲ್ಲಿ ತೆಲುಗು ನಾಡಿನೊಂದಿಗೆ ಅಥವಾ ವಾರಂಗಲ್ ರಾಜ್ಯದೊಡನೆ ಹರಿಹರ ಬುಕ್ಕರ ಸಂಬಂಧವನ್ನು ಸೂಚಿಸುವಂತಹ ಒಂದಾದರೂ ಹೇಳಿಕೆ ದೊರೆಯಬಹುದಾಗಿತ್ತು; ಆದರೆ ಇಂತಹ ಅಸ್ಫುಟವಾಗಲಿ, ಅಪ್ರತ್ಯಕ್ಷವಾಗಲಿ, ಎಂಥದೇ ಆಗಲಿ, ಒಂದಾದರೂ ಸೂಚನೆ ಯಾವ ಮೂಲೆಯಲ್ಲಿಯೂ ದೊರೆಯುತ್ತ ಇಲ್ಲ. ಇದು ಅತ್ಯಂತ ಸೋಜಿಗದ ವಿಷಯವೇ ಸೈ. ಅವರು ಸತ್ಯವಾಗಿಯೇ ವಾರಂಗಲ್ ಪ್ರದೇಶದಿಂದ ಬಂದವರಾಗಿದ್ದರೆ, ಇಲ್ಲವೆ ಕಾಕತೀಯ ಪ್ರತಾಪರುದ್ರನ ಆಡಳಿತದಲ್ಲಿ ಸೇವೆಯನ್ನು ಸಲ್ಲಿಸಿದ್ದರೆ, ಈ ವಸ್ತುಸ್ಥಿತಿಯನ್ನು ಇಷ್ಟು ಮುಚ್ಚುಮರೆಯಾಗಿ ಇಡುವುದಕ್ಕೆ ಕಾರಣವೇನು ? ಅದನ್ನು ನಿರೂಪಿಸುವುದರಲ್ಲಿ ಅವರಿಗೆ ಹೀನಾಯಮಾನವಾದಂತಹದು ಸ್ವಲ್ಪವೂ ಇರಲಿಲ್ಲವಲ್ಲ ! ತದ್ವಿರುದ್ಧವಾಗಿ ಆ ಪ್ರಖ್ಯಾತ ರಾಜವಂಶದೊಡನೆ ತಮ್ಮ ಸಂಬಂಧ ಹೇಳಿಕೊಂಡಿದ್ದರೆ, ಅವರ ಕೀರ್ತಿ ಖಚಿತವಾಗಿ ಇನ್ನಷ್ಟು ಪ್ರಕಾಶಮಾನವಾಗುತ್ತಿತ್ತು.

ಸಂಗಮ ವಂಶದ ಅರಸರ ಎಲ್ಲ ಶಾಸನಗಳನ್ನು ಒಂದು ಬಿಡದಂತೆ ಪರೀಕ್ಷಿಸಿದರೆ, ಅವುಗಳಲ್ಲಿ ಈ ರಾಜರು ತಮ್ಮ ವಂಶವೃತ್ತಾಂತವನ್ನು ತಮ್ಮ ಪೂರ್ವಜ ಸಂಗಮನಿಂದ ಪ್ರಾರಂಭಿಸುತ್ತಾರೆ. ಮತ್ತು ಹಾಗೆ ಮಾಡುವಾಗ ಆತನು ಯದುವಂಶದಲ್ಲಿ ಹುಟ್ಟಿದವನು ಎಂದು ಮಾತ್ರ ಹೇಳುತ್ತಾರೆ—ಎಂಬ ವಿಷಯವು ಸ್ಫುಟವಾಗುತ್ತದೆ. ಕೆಲವು ಶಾಸನಗಳಲ್ಲಿ ಸಂಗಮನು ಹಂಪೆಯ ಪರಿಸರ ಪ್ರದೇಶದಲ್ಲಿ ಊರ್ಜಿತನಾದನೆಂದು, ಕರ್ಣಾಟಕ ರಾಜ್ಯಲಕ್ಷ್ಮಿಗೆ ತಿಲಕಪ್ರಾಯನಾಗಿದ್ದನೆಂದು ವರ್ಣಿಸಿದೆ. ಆತನಾಗಲಿ, ಆತನ ಪುತ್ರರು ಹರಿಹರ-ಬುಕ್ಕರಾಗಲಿ, ತೆಲುಗುದೇಶಕ್ಕೆ, ವಾರಂಗಲ್ಲಿಗೆ ಸಂಬಂಧಪಟ್ಟವರು ಎಂದು ತಪ್ಪಿಯಾದರೂ ಒಂದು ಕಡೆಗೂ ಹೇಳಿರುವುದಿಲ್ಲ. ಇದುವರೆಗಿನ ವಿವೇಚನೆಯಿಂದ ಹರಿಹರ ಬುಕ್ಕರು ವಾರಂಗಲ್ಲಿನವರು, ಆಂಧ್ರ ದೇಶದವರು ಅಲ್ಲವೇ ಅಲ್ಲ; ಅವರು ಕನ್ನಡ ನಾಡಿನವರೇ ಆಗಿದ್ದರು—ಎಂಬ ಐತಿಹಾಸಿಕ ಸಂಗತಿ ಖಚಿತವಾಗಿ ನಿಷ್ಕರ್ಷೆ ಆಗುತ್ತದೆ.

## ಅನ್ಯ ನಿದರ್ಶನಗಳು

ಸಾಹಸಿಗಳಾದ ಸೇನಾನಾಯಕರು, ಚಿಕ್ಕ ಅರಸರು, ಒಂದು ನಾಡಿನಿಂದ ಇನ್ನೊಂದು ನಾಡಿಗೆ ಹೋಗಿ ಅಲ್ಲಿ ರಾಜ್ಯವನ್ನು ಸ್ಥಾಪಿಸಿ. ನೆಲೆಯಾಗಿದ್ದ ಉದಾಹರಣೆಗಳು ಚರಿತ್ರೆಯಲ್ಲಿ ದೊರಕುತ್ತವೆ. ಹೊರನಾಡಿನಲ್ಲಿ ನೆಲಸಿದ್ದ ಇಂಥ ನಾಯಕರು ಸಾಮಾನ್ಯವಾಗಿ ತಮ್ಮ ಮೂಲ ಸ್ಥಳವನ್ನು, ಪೂರ್ವಜರನ್ನು ಮತ್ತು ಪ್ರಾಂತೀಯ ಸಂಬಂಧಗಳನ್ನು ಅಭಿಮಾನ ಗೌರವಗಳಿಂದ ಬಹುಕಾಲದ ವರೆಗೆ ಸ್ಮರಿಸಿಕೊಳ್ಳುತ್ತಿದ್ದಂತೆ ನಿದರ್ಶನಕ್ಕೆ ಬರುತ್ತದೆ. ಇಂತಹರಲ್ಲಿ ಬಂಗಾಲದ ಸೇನರನ್ನು ಮತ್ತು ಮಿಥಿಲೆಯ (ಉತ್ತರ ಬಿಹಾರದ) ಕರ್ನಾಟರನ್ನು ಎತ್ತಿ ತೋರಿಸಬಹುದು. ಈ ರಾಜವಂಶದವರು ತಮ್ಮ ರಾಜಕೀಯ ಲೇಖನಗಳಲ್ಲಿ ತಾವು ಕರ್ನಾಟಕದವರು, ಕರ್ನಾಟಕದ ಕ್ಷತ್ರಿಯ ಕುಲದಲ್ಲಿ ಹುಟ್ಟಿದವರು—ಎಂಬ ಸಂಗತಿಯನ್ನು ಸ್ಪಷ್ಟವಾಗಿ ಹೇಳಿಕೊಂಡಿರುವರು.

ಇದನ್ನು ಲಕ್ಷಿಸಿದರೆ, ಹರಿಹರ ಬುಕ್ಕರಾದವರೂ ನಿಜವಾಗಿ ತಾವು ಆಂಧ್ರದಿಂದ ಬಂದವರಾಗಿದ್ದರೆ, ಈ ಮಾತನ್ನು ತಮ್ಮ ಆನುವಂಶಿಕ ವೃತ್ತಾಂತಗಳಲ್ಲಿ ಯಾವುದಾದರೂ ಒಂದು ಸಂದರ್ಭದಲ್ಲಿ ಬಹಿರಂಗ ಪಡಿಸದೆ ಇರುತ್ತಿರಲಿಲ್ಲ. ಆದರೆ ವಸ್ತುಸ್ಥಿತಿ ಇದಕ್ಕೆ ವಿರುದ್ಧವಾಗಿದೆ. ವಿಜಯನಗರದ ಮೊದಲನೆಯ ರಾಜವಂಶದವರು ಎಂದರೆ ಸಂಗಮ ಪುತ್ರ ಪೌತ್ರರು ಆಂಧ್ರ ದೇಶದ ಕೆಲವು ನಾಯಕರೊಂದಿಗೆ ಯುದ್ಧ ಮಾಡಿದರು, ಎಂಬ ವಿಷಯ ಹಲವು ಶಾಸನಗಳ ಆಧಾರದಿಂದ ತಿಳಿದು ಬರುತ್ತದೆ. ಈ ಆಧಾರಗಳನ್ನೆಲ್ಲ ಪುನಃ ಪುನಃ ಕೂಲಂಕಷ ಪರಾಮರ್ಶಿಸಿದರೆ ವಿಜಯನಗರದ ಸಂಸ್ಥಾಪಕರು ತೆಲುಗು ಮೂಲದವರಾಗಿದ್ದರು ಎಂಬ ವಾದವು ನಿರಾಧಾರವೆಂದು ಸಿದ್ಧವಾಗುತ್ತದೆ.

## ಕರ್ನಾಟಕ ಮೂಲದವರು

ಇದಕ್ಕೆ ಪ್ರತಿಕೂಲವಾಗಿ ವಿಜಯನಗರದ ಸಂಸ್ಥಾಪಕರು ಕರ್ನಾಟಕ ಮೂಲದವರು, ಕನ್ನಡ ಬಾಂಧವ್ಯವುಳ್ಳವರು, ಎಂಬ ಸತ್ಯವನ್ನು ಸ್ಥಾಪಿಸಲು ಸಾಕಷ್ಟು ಪ್ರಮಾಣಗಳಿವೆ. ಹಿಂದೆ ಕಂಡಂತೆ ದಕ್ಷಿಣ ಭಾರತದ ಎಲ್ಲ ಪ್ರದೇಶಗಳ ಜನತೆ ಮತ್ತು ಜನನಾಯಕರು ಪರಕೀಯ ದಾಳಿಗಾರರ ಕಾಲ ತುಳಿತಕ್ಕೆ ಕುಸಿದು ಬಹುಕಾಲ ಬಿದ್ದುಕೊಳ್ಳಲಿಲ್ಲ. ದಿಲ್ಲಿ ಸುಲ್ತಾನನು ಈ ಪ್ರದೇಶಗಳನ್ನು ಜಯಿಸಿದ ಅನಂತರ ಅಲ್ಪಾವಧಿಯಲ್ಲಿಯೇ ತಮಿಳ ನಾಡು, ಆಂಧ್ರ ಮತ್ತು ಕರ್ನಾಟಕ ಪ್ರಾಂತಗಳಲ್ಲಿ ಜನರು ಸಾಮೂಹಿಕವಾಗಿ ಬಂಡೆದ್ದರು. ಈ ಬಂಡಾಯಗಳು ಪ್ರತ್ಯೇಕ ಘಟನೆಗಳಾಗಿರಲಿಲ್ಲ, ಎನ್ನುವುದಕ್ಕೆ ಸಾಕ್ಷ್ಯಗಳಿವೆ. ಈ ಬಂಡುಗಾರರ ಮುಖಂಡರು ಪರಸ್ಪರ ಸಂಪರ್ಕವನ್ನು ಇಟ್ಟುಕೊಂಡವರಾಗಿದ್ದು ಪೂರ್ವಯೋಜಿತ ಸಂಕಲ್ಪದಂತೆ ಕಾರ್ಯಾಚರಣೆಯಲ್ಲಿ ತೊಡಗಿದರೆಂದು ಊಹಿಸಲು ಅವಕಾಶವಿದೆ.

## ಹೊಯ್ಸಳ ಬಲ್ಲಾಳ

ಶತ್ರುಗಳನ್ನು ಎದೆಗಾರಿಕೆಯಿಂದ ಪ್ರತಿಭಟಿಸಿದ ನಾಯಕರಲ್ಲಿ ಹೊಯ್ಸಳ ಮುಮ್ಮಡಿ ಬಲ್ಲಾಳನು ಪ್ರಮುಖನು. ಈತನು ಸ್ವಾತಂತ್ರ್ಯದ ಆಂದೋಲನವನ್ನು ಬಲವಾಗಿ ಮುಂದುವರಿಸಿದನು. ಭದ್ರವಾದ ಸ್ಥಾನಬಲದ ಮೂಲಕ ಈತನು ಈ ಕಾರ್ಯವನ್ನು ಸುಲಭತೆಯಿಂದ ಸಾಧಿಸಲು ಶಕ್ತನಾದನು. ತುಂಗಭದ್ರೆಯ ದಕ್ಷಿಣದಲ್ಲಿ ರಾಮೇಶ್ವರದ ವರೆಗೆ ವಿಸ್ತೀರ್ಣ ಭೂ ಭಾಗವು ಬಹುತರ ಈತನ ವಶದಲ್ಲಿದ್ದಿತು ಕರ್ನಾಟಕ ಮತ್ತು ತಮಿಳು ನಾಡುಗಳಲ್ಲಿ ಈತನ ಪ್ರಭುತ್ವವು ಸ್ಥಿರವಾಗಿ ನೆಲಸಿದ್ದಿತು. ಈತನು

ಆಯಕಟ್ಟಿನ ಸ್ಥಳಗಳಲ್ಲಿ ಶತ್ರುಗಳನ್ನು ಸಂಧಿಸಿ ಸದೆಬಡಿದನು. ಅದೇ ಪರಿಯಲ್ಲಿ ಉತ್ತರದ ಭೂಭಾಗದಲ್ಲಿಯೂ ಈತನು ವಿಜಯಗಳನ್ನು ಸಂಪಾದಿಸಿದ್ದನು.

### ಪ್ರೋಲಯನಾಯಕ

ಇತ್ತೀಚೆಗೆ ನಡೆದ ಸಂಶೋಧನೆಗಳಿಂದ ಆಂಧ್ರದಲ್ಲಿ ನಡೆದ ಘಟನೆಗಳು ಬೆಳಕಿಗೆ ಬಂದಿವೆ. ಪರಕೀಯ ಆಕ್ರಮಣವನ್ನು ಪ್ರತಿಭಟಿಸಿ ರೆಡ್ಡಿಕುಲದ ಹಲವು ನಾಯಕರು ಬಂಡೆದ್ದರು. ಈ ವಿಮೋಚನಾ ಚಳವಳಿಯ ಸಂಚಾಲಕರು ಪ್ರೋಲಯನಾಯಕ ಮತ್ತು ಆತನ ಸಮೀಪದ ಬಂಧು ಕಾಪಯನಾಯಕ ಇವರು ಆಗಿದ್ದರು. ಇವರು ಮುಮ್ಮಡಿ ಬಲ್ಲಾಳನೊಂದಿಗೆ ಸಂಪರ್ಕವನ್ನು ಇಟ್ಟುಕೊಂಡು, ಆತನಿಂದ ಪ್ರೋತ್ಸಾಹ, ಪುರಸ್ಕಾರಗಳನ್ನು ಪಡೆದಂತೆ ತೋರುತ್ತದೆ. ಈ ಪ್ರತಿಭಟನೆ ಯಶಸ್ವಿಯಾಗಿ, ನೆಲ್ಲೂರು ಜಿಲ್ಲೆಯ ಕರಾವಳಿ ಪ್ರದೇಶವು ಕ್ರಿ.ಶ. ಸು. 1331ರಲ್ಲಿ ಪರಕೀಯರ ಕಪಿಮುಷ್ಟಿಯ ಹಿಡಿತದಿಂದ ಬಿಡುಗಡೆ ಹೊಂದಿತು.

### ಹರಿಹರನ ಉತ್ಕರ್ಷ

ಈ ಅವಧಿಯಲ್ಲಿ ಮುಮ್ಮಡಿ ಬಲ್ಲಾಳನ ಸಾಮಂತರು ಮತ್ತು ಅಧಿಕಾರಿಗಳು ಆತನ ಉತ್ತರ ಮತ್ತು ಪಶ್ಚಿಮ ಭಾಗಗಳಲ್ಲಿ ಕೋಟೆ ಮತ್ತು ಕೊತ್ತಳಗಳನ್ನು ಭದ್ರಪಡಿಸಿಕೊಂಡು ಶತ್ರುಗಳನ್ನು ಹಿಂದೆಗೆಯಿಸುವ ಕಾರ್ಯದಲ್ಲಿ ನಿರತರಾಗಿದ್ದರು. ಇಂತಹರಲ್ಲಿ ಸಂಗಮನಾಯಕನ ಪುತ್ರರಾದ ಹರಿಹರ ಮತ್ತು ಆತನ ಬಂಧುಗಳು ಪ್ರಮುಖರಾದವರು. ಈ ಸಂದರ್ಭದಲ್ಲಿ ಮುಖ್ಯವಾಗಿ ಹರಿಹರನ ಕಾರ್ಯಕ್ರಮಗಳನ್ನು ಗುರುತಿಸುವದು ಪ್ರಯೋಜನಕಾರಕವಾಗಿರುವದರಿಂದ ಕ್ರಿ.ಶ. 1336ರಿಂದ ಮುಂದಿನ ಒಂದು ದಶಕದಲ್ಲಿಯ ಆತನ ಸಾಧನೆಗಳನ್ನು ಇಲ್ಲಿ ಸಂಕ್ಷೇಪವಾಗಿ ನಿವೇದಿಸುತ್ತೇವೆ.

ಗಡಿರಕ್ಷಣೆಯ ಯೋಜನೆಯಲ್ಲಿ ಪ್ರಮುಖ ಸ್ಥಳವಾದ ಪಶ್ಚಿಮ ಕರಾವಳಿಯ ಬಾರಕೂರು ಬಂದರದಲ್ಲಿ ಕ್ರಿ.ಶ. 1336ರಲ್ಲಿ ಹರಿಹರನು ಕೋಟೆಯನ್ನು ಕಟ್ಟಿಸಿದನು. ಕ್ರಿ.ಶ. 1339ರ ಒಂದು ಶಾಸನದಲ್ಲಿ ಹರಿಹರನು ಪೂರ್ವ ಪಶ್ಚಿಮ ಸಮುದ್ರಾಧಿಪತಿಯೆಂಬ ಪ್ರಶಸ್ತಿಯನ್ನು ಧರಿಸಿದವನಾಗಿ, ಗುತ್ತಿಯಿಂದ ಆಳುತ್ತಿದ್ದನೆಂದು ಹೇಳಿದೆ. ಮುಂದಿನ ವರ್ಷದ ಅಂದರೆ ಕ್ರಿ.ಶ. 1340 ರ ಇನ್ನೊಂದು ಶಾಸನವು ಅದೇ ಪ್ರಶಸ್ತಿಯಿಂದ ಆತನನ್ನು ವರ್ಣಿಸುತ್ತದೆ. ಈ ಶಾಸನವು ಹರಿಹರನ ಅಂಕಿತ ಅಧಿಕಾರಿಯಾಗಿದ್ದ ಚಾಮರಸನು ಬಾದಾಮಿ ದುರ್ಗವನ್ನು ಕಟ್ಟಿಸಿದ ಸಂಗತಿಯನ್ನು ತಿಳಿಸುತ್ತದೆ. ಈ ಲೇಖವು ಹರಿಹರನ ಅಧಿಕಾರವ್ಯಾಪ್ತಿ ತುಂಗಭದ್ರೆಯ ಉತ್ತರ ಪ್ರದೇಶದಲ್ಲಿಯೂ ಹಬ್ಬಿತ್ತು ಎಂಬುದಕ್ಕೆ ಆಧಾರವಾಗಿದೆ. ಅದೇ ವರ್ಷದ ಎಂದರೆ ಕ್ರಿ.ಶ. 1340 ರ ಮತ್ತೊಂದು ಶಾಸನದಿಂದ ಹರಿಹರನು ತನ್ನ ಸಾರ್ವಭೌಮ ಆಧಿಪತ್ಯದ ಸಂಕೇತವಾದ ಚತುಃಸಮುದ್ರಾಧಿಪತಿ ಎಂಬ ಪ್ರಶಸ್ತಿಯನ್ನು ಧರಿಸಿದ್ದನೆಂದು ಗೊತ್ತಾಗುತ್ತದೆ. ಇಬ್ನಬತೂತನ ಬರವಣಿಗೆಯಿಂದ ಕ್ರಿ.ಶ. 1342 ರಲ್ಲಿ ಹರಿಹರನ ಅಧಿಕಾರವು ಅವಿರೋಧವಾಗಿ ಕೊಂಕಣ ಪ್ರದೇಶದಲ್ಲಿ ನಡೆಯುತ್ತಿದ್ದಿತೆಂದು, ಹೊನ್ನಾವರದ ಮುಸ್ಲಿಮ್ ಅಧಿಕಾರಿ ಆತನ ಪ್ರಭುತ್ವಕ್ಕೆ ಒಳಪಟ್ಟಿದನೆಂದು ತಿಳಿಯುತ್ತದೆ. ಕ್ರಿ.ಶ. 1343 ರ ಶಾಸನದಲ್ಲಿ ಹರಿಹರನು ಧರಿಸಿದ್ದ ಮಹಾರಾಜಾಧಿರಾಜ, ರಾಜಪರಮೇಶ್ವರ, ವೀರ ಪ್ರತಾಪ ಮಹಾರಾಯ–ಎಂಬ ಬಿರುದುಗಳ ಪ್ರಶಸ್ತಿಯನ್ನು ಘೋಷಿಸಲಾಗಿದೆ. ಈ ಮುಂದಿನ ಅಂದರೆ ಕ್ರಿ.ಶ. 1344 ರ ಒಂದು ಶಾಸನದಿಂದ ಪ್ರಾಂತಾಧಿಕಾರಿಯಾಗಿದ್ದ ಹರಿಹರನ ಸೋದರ ಬುಕ್ಕರಾಯನು ಸ್ವತಂತ್ರ ಪ್ರಭುತ್ವದ ಬಿರುದುಗಳನ್ನು ಧರಿಸಿದ ಸಂಗತಿ ಪ್ರಕಟವಾಗುತ್ತದೆ.

ಈ ಮೇಲಿನ ಆಧಾರಗಳ ಅವಲೋಕನದಿಂದ ಹರಿಹರನು ಪೂರ್ವ ಪಶ್ಚಿಮ ಪ್ರದೇಶಗಳಲ್ಲಿ ಹಬ್ಬಿಕೊಂಡಿದ್ದ ಶತ್ರುಗಳನ್ನು ಉಚ್ಚಾಟನ ಮಾಡಲು ಕ್ರಿ.ಶ. 1336ರಿಂದ ಸಮರ್ಥ ಯೋಜನಾ ಕ್ರಮಗಳನ್ನು ಕೈಕೊಂಡನೆಂದು, ಈ ಕಾರ್ಯದಲ್ಲಿ ಆತನು ಉತ್ತರೋತ್ತರ ಜಯಶಾಲಿಯಾದನೆಂದು ಸ್ಪಷ್ಟವಾಗುತ್ತದೆ. ಈ ಒಂದೊಂದು ಘಟನೆಗಳು ಆತನು ಮುಂದುವರಿಸಿದ ಯಶಸ್ವಿಕ್ರಮಗಳಿಗೆ ಬಲವಾದ ನಿದರ್ಶನಗಳಾಗಿವೆ.

### ಶೃಂಗೇರಿಯ ಶಾಸನ

ಈ ಸನ್ನಿವೇಶದಲ್ಲಿ ಅತ್ಯಂತ ಪ್ರಯೋಜನಕಾರಕವಾದ ಶೃಂಗೇರಿಯ ಶಿಲಾಶಾಸನವು ಪ್ರಮಾಣಭೂತ ಶಾಸನವಾಗಿದೆ. ಈ ಶಾಸನದಲ್ಲಿ ಬರುವ ಮುಖ್ಯಾಂಶಗಳು ಹೀಗಿವೆ:

ಈ ಸಮಯಕ್ಕೆ ಹರಿಹರನು ಶತ್ರುಗಳನ್ನು ಸಂಪೂರ್ಣವಾಗಿ ಪರಾಭವಗೊಳಿಸಿ ಪರಕೀಯ ಆಕ್ರಮಣದಿಂದ ದೇಶವನ್ನು ಮುಕ್ತಮಾಡಿದ್ದನು. ಈ ವಿಜಯವನ್ನು ಸಂಪಾದಿಸಿದ್ದಕ್ಕಾಗಿ ಉತ್ಸವವನ್ನು ನೆರವೇರಿಸುವ ಉದ್ದೇಶದಿಂದ ಆತನು ತನ್ನ ನಾಲ್ವರು ಸಹೋದರರು, ಕಂಪಣ್ಣೊಡೆಯರು, ಬುಕ್ಕಣ್ಣೊಡೆಯರು, ಮಾರಪ್ಪೊಡೆಯರು, ಮುದ್ದಪ್ಪೊಡೆಯರು ಮತ್ತು ಅಳಿಯ ಬಲ್ಲಪ್ಪ ದಂಡನಾಯಕರು ಹಾಗೂ ಕುಮಾರ ಸೋವಣ್ಣೊಡೆಯರು—ಇವರೊಂದಿಗೆ ಪವಿತ್ರ ಧಾರ್ಮಿಕ ಕ್ಷೇತ್ರವಾದ ಶೃಂಗೇರಿಗೆ ಬಿಜಯಮಾಡಿ ಅಲ್ಲಿಯ ಪೂಜ್ಯಗುರುಗಳಾದ ಭಾರತೀ ತೀರ್ಥ ಶ್ರೀಪಾದಂಗಳಿಗೆ ದತ್ತಿಗಳನ್ನು ಸಲ್ಲಿಸಿದನು.

### ಎರಡು ಮಿತಿಗಳು

ಅನೇಕರು ಅಂಗೀಕಾರ ಮಾಡಿದ ಪರಂಪರಾಗತ ಐತಿಹ್ಯದಂತೆ ಶಾಲಿವಾಹನ ಶಕ 1258 ಧಾತು ಸಂವತ್ಸರದ ವೈಶಾಖ ಶುಕ್ಲ ಸಪ್ತಮಿ, ಆದಿತ್ಯವಾರದಂದು, ಅಂದರೆ ಕ್ರಿ.ಶ. 1336 ಎಪ್ರಿಲ್ 18 ರಂದು ಹರಿಹರನು ವಿಜಯನಗರದ ರಾಜ್ಯವನ್ನು ಸ್ಥಾಪಿಸಿದನು. ಈ ಮೇಲೆ ನಿರೂಪಿಸಿದ ಕ್ರಿ.ಶ. 1346 ರ ಶೃಂಗೇರಿಯ ಶಾಸನದ ಆಧಾರವನ್ನು ಎತ್ತಿ ಹಿಡಿದು ಕ್ರಿ.ಶ. 1336ರ ವಿಜಯನಗರದ ಸ್ಥಾಪನೆಯ ಈ ಮಿತಿಯನ್ನು ಕೆಲವರು ಅಲ್ಲಗಳೆದಿರುವರು. ಆದರೆ ಈ ಅಭಿಪ್ರಾಯವು ಸಮರ್ಥನೀಯವಾಗಿಲ್ಲ. ವಿಮರ್ಶಿಸಿ ನೋಡಿದರೆ ಶೃಂಗೇರಿಯ ಶಾಸನ ಮತ್ತು ಈ ಪಾರಂಪರಿಕ ಐತಿಹ್ಯವು ಪರಸ್ಪರ ವಿರೋಧಿಗಳಾಗಿಲ್ಲವೆಂದು, ಈ ಐತಿಹ್ಯವು ಆಧಾರರಹಿತವಲ್ಲವೆಂದು ವ್ಯಕ್ತವಾಗುತ್ತದೆ. ಕ್ರಿ.ಶ. 1336ರ ಹೊತ್ತಿಗೆ ಮುಮ್ಮಡಿ ವೀರಬಲ್ಲಾಳನು 80ರ ಹೊಸ್ತಿಲನ್ನು ದಾಟಿದ್ದನು. ಆತನು ಕ್ಷೀಣಬಲನೂ, ವಯೋವೃದ್ಧನೂ ಆಗಿದ್ದುದರಿಂದ ಹೊಯ್ಸಳಾಧಿಪತ್ಯವು ಇಳಿಮುಖವಾಗಿತ್ತು. ಈ ಸನ್ನಿವೇಶದಲ್ಲಿ ವಿಸ್ತಾರವಾಗಿ ಹಬ್ಬಿದ್ದ ಹೊಯ್ಸಳ ಸಾಮ್ರಾಜ್ಯದ ಉತ್ತರ ಗಡಿಯಲ್ಲಿ ಅಧಿಕಾರಿಯಾಗಿದ್ದ ಹರಿಹರನು ಹೀಗೆ ಆಲೋಚಿಸಿದಂತೆ ತೋರುತ್ತದೆ :—

### ಹರಿಹರನ ರಾಜ್ಯಸ್ಥಾಪನೆ.

ದೂರದ ದಕ್ಷಿಣದಲ್ಲಿದ್ದ ರಾಜಧಾನಿಯಿಂದ ಶತ್ರುಗಳ ಆಕ್ರಮಣಪರ ಹೊಂಚುಗಳನ್ನು ಹಿಮ್ಮೆಟ್ಟಿಸುವುದು ಮತ್ತು ಸಾಮ್ರಾಜ್ಯದ ಉತ್ತರ ಭಾಗದ ಮೇಲೆ ಯೋಗ್ಯನಿಯಂತ್ರಣ ನಡೆಯಿಸುವದು ಬಲ್ಲಾಳರಾಯನಿಗೆ ಸುಲಭ ಸಾಧ್ಯವಾಗಲಾರದು. ಅದಕ್ಕಾಗಿ ತಾನೊಬ್ಬ ಮಹಾಮಂಡಲೇಶ್ವರನು, ಪ್ರಾಂತಾಧಿಕಾರಿಯು ಆಗಿದ್ದರೂ ಆ ಪ್ರದೇಶದಲ್ಲಿ ಒಂದು ಹೊಸ ರಾಜ್ಯವನ್ನು ಕಟ್ಟಿದರೆ ಅದು

ಆಕ್ರಮಣಕಾರರಿಗೆ ಪ್ರಬಲ ಪ್ರತಿಬಂಧವನ್ನು ಒಡ್ಡೀತು. ಮಾತ್ರವಲ್ಲದೆ ತನ್ನ ಅಧಿರಾಜನಿಗೆ ಹೆಚ್ಚಿನ ಶಕ್ತಿಯನ್ನು ತಂದು ಕೊಟ್ಟೀತು.

ಈ ಪರಿಯಲ್ಲಿ ಆಲೋಚಿಸಿದ ಹರಿಹರನು ತನ್ನ ಯೋಜನೆಯನ್ನು ಮುಂದುವರಿಸಿರಬಹುದು. ಈ ಯೋಜನೆಗೆ ಬಲ್ಲಾಳರಾಯನಾದರೂ ತನ್ನ ಅನುಮತಿಯನ್ನು ನೀಡಿರಬಹುದು. ತನ್ನ ವೃದ್ಧಾಪ್ಯ ಮತ್ತು ವಿಸ್ತೀರ್ಣವಾದ ರಾಜ್ಯದ ಗಡಿಗಳನ್ನು ಸಂರಕ್ಷಿಸುವ ಕಾರ್ಯದಲ್ಲಿನ ಆತಂಕ, ಇವುಗಳಲ್ಲದೆ ಇನ್ನೊಂದು ವಿಷಯ ಆತನು ಹರಿಹರನಿಗೆ ಬೆಂಬಲ ನೀಡುವದಕ್ಕೆ ಕಾರಣವಾಗಿರಬೇಕು. ಅದು ತನ್ನ ಕಾರ್ಯವನ್ನು ಮುಂದುವರಿಸಿಕೊಂಡು ಹೋಗಲು ಅರ್ಹನಾದ ವಂಶಿಕನು ಇಲ್ಲದಿರುವುದು. ಆತನಿಗೆ ವಿರೂಪಾಕ್ಷ ನಾಲ್ಕನೆಯ ಬಲ್ಲಾಳನೆಂಬ ಮಿತ್ರನೇನೋ ಇದ್ದನು. ಆದರೆ ಆತನಲ್ಲಿ ಸಾಕಷ್ಟು ಕ್ಷಾತ್ರತೇಜ ಮತ್ತು ಕರ್ತೃತ್ವ ಶಕ್ತಿ ಇರಲಿಲ್ಲ, ಹರಿಹರನ ಈ ಕಾರ್ಯವು ಆರಂಭದಲ್ಲೇನೋ ಚಿಕ್ಕದಾಗಿ ತೋರಿದರೂ ಮುಂದೆ ಅದಕ್ಕೆ ಮಹತ್ತರ ಫಲಗಳು ಪ್ರಾಪ್ತವಾದವು.

ಮೇಲೆ ಹರಿಹರನ ಕಾರ್ಯಕಲಾಪಗಳನ್ನು ಕಾಲಾನುಕ್ರಮದಿಂದ ಸಂಕ್ಷೇಪವಾಗಿ ನಿರೂಪಿಸಿದ್ದೇವೆ. ಅವುಗಳನ್ನು ಅವಲೋಕಿಸಿದರೆ ಕ್ರಿ.ಶ. 1336 ರಿಂದ ಆತನು ಉತ್ತರೋತ್ತರ ಬಲಾಢ್ಯನಾಗುತ್ತಿದ್ದನು. ಎಂಬ ವಿಷಯ ಸ್ಫುಟವಾಗುತ್ತಿದೆ. ಕ್ರಿ.ಶ. 1342ರ ಹೊತ್ತಿಗೆ ಆತನು ಸರ್ವಸಮರ್ಥನಾಗಿದ್ದನು. ಇದು ಬಲ್ಲಾಳರಾಯನ ಕೊನೆಯ ವರ್ಷವಾಗಿದ್ದಿತು. ಮುಂದೆ ಅಲ್ಪಕಾಲದಲ್ಲಿ ಹೊಯ್ಸಳ ಆಧಿಪತ್ಯವು ಕುಸಿದು ಬಿದ್ದಿತು.

ಇಲ್ಲಿ ಗಮನಿಸಬೇಕಾದ ಒಂದು ಮಹತ್ವದ ಸಂಗತಿಯೆಂದರೆ, ಮುಮ್ಮಡಿ ಬಲ್ಲಾಳರಾಯನ ಉತ್ತರಾಧಿಕಾರಿಯಾದ ನಾಲ್ಕನೆಯ ಬಲ್ಲಾಳನು ನ್ಯಾಯವಾಗಿ ರಾಜನಾಗಿದ್ದರೂ ಕ್ರಿ.ಶ. 1343ರ ಅನಂತರದ ಶಾಸನಗಳಲ್ಲಿ ಹೊಯ್ಸಳ ಆಳಿಕೆಯ ನಿರ್ದೇಶವೇ ದೊರಕುವದಿಲ್ಲ. ಈ ಮುಂದಿನ ಮೂರು ವರ್ಷಗಳಲ್ಲಿ ಹರಿಹರನು ಹೊಯ್ಸಳ ಆಧಿಪತ್ಯಕ್ಕೆ ಉತ್ತರಾಧಿಕಾರಿಯಾಗಿ ತನ್ನ ರಾಜ್ಯಬಲವನ್ನು ಸಂಘಟಿಸಿ ಪರಕೀಯ ಶತ್ರುಗಳನ್ನು ದೇಶದಿಂದ ಹೊರದೂಡುವ ಕಾರ್ಯದಲ್ಲಿ ನಿರತನಾಗಿರಬೇಕು. ಈ ವಿಧದ ಪರಿಶೀಲನೆಯಿಂದ ಕ್ರಿ.ಶ. 1346ರ ಶೃಂಗೇರಿಯ ಶಾಸನವು, ಹರಿಹರನ ಮತ್ತು ಆತನ ಸಹೋದರರ ಮಹಾಸಾಹಸ ಪರಿಶ್ರಮಗಳು ಕೊನೆಗೊಮ್ಮೆ ಜಯಶಾಲಿಯಾಗಿ ಪರಿಣಮಿಸಿದವೆಂದು ಸಾರುವ, ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯನ್ನು ಘೋಷಿಸುವ ಪ್ರಮಾಣಭೂತ ವಿಜಯಸ್ತಂಭವೆಂಬಂತೆ ಗೌರವಾರ್ಹವಾಗಿ ನಿಲ್ಲುತ್ತದೆ.

**ಹರಿಹರ ಬಂಧುಗಳು ಕನ್ನಡಿಗರು.**

ಹರಿಹರನು ಮತ್ತು ಆತನ ಸಹೋದರರು ಕನ್ನಡ ನಾಡಿನವರಾಗಿದ್ದು ಒಂದು ಸ್ವಾಭಾವಿಕ ಕ್ರಮದಿಂದ ಹೊಯ್ಸಳಾಧಿಪತ್ಯಕ್ಕೆ ನ್ಯಾಯಸಮ್ಮತ. ಉತ್ತರಾಧಿಕಾರಿಗಳಾದರು, ಎಂಬ ವಿಷಯವು ಅನೇಕ ನಿದರ್ಶನಗಳಿಂದ ಸ್ಥಾಪನವಾಗುತ್ತದೆ. ಇಂತಹ ಕೆಲವು ನಿದರ್ಶನಗಳನ್ನು ಇಲ್ಲಿ ಎತ್ತಿ ತೋರಿಸುತ್ತೇವೆ :

ಒಂದನೆಯದಾಗಿ, ಒಂದೇ ಅರಸು ಮನೆತನದ ಆನುವಂಶಿಕ ಬಾಧ್ಯಸ್ಥರಂತೆ, ಈ ಸಂಗಮಪುತ್ರರು ತಮ್ಮ ಉತ್ತರಾಧಿಕಾರಕ್ಕಾಗಿ ವಿರೋಧ ವೈಮನಸ್ಯಕ್ಕೆ ಗುರಿಯಾಗದೆ, ಸಹಜವಾಗಿಯೇ ಆ ಮೊದಲಿ

ಹೊಯ್ಸಳ ಶಾಸನಕ್ಕೆ ಒಳಪಟ್ಟಿದ್ದ ಸಮಸ್ತ ರಾಜ್ಯ ಸೀಮೆಗಳನ್ನು ಪಡೆದುಕೊಂಡರು. ಕೂಡಲೆ ಅವುಗಳ ಸಾರ್ವಭೌಮಾಧಿಪತ್ಯವನ್ನೇ ಹೊಂದಿದರು.

ಎರಡನೆಯದಾಗಿ, ಪೂರ್ವ ಕ್ರಮದಿಂದ ನಡೆದು ಬಂದಿದ್ದ ಹೊಯ್ಸಳರ ಕಾಲದ ರಾಜಕೀಯ ಮತ್ತು ಆಡಳಿತದ ವಿಧಾನಗಳನ್ನೇ ಅವರು ಅನೂಚಾನವಾಗಿ ನಡೆಯಿಸಿಕೊಂಡು ಹೋದರು. ಹಿಂದೆ ಹೊಯ್ಸಳರ ಆಳಿಕೆಯಲ್ಲಿದ್ದ ಆಡಳಿತ ವಿಭಾಗಗಳು ಹಾಗೆಯೇ ಮುಂದುವರಿದವು, ಅವುಗಳನ್ನು ಆಳುತ್ತಿದ್ದ ಅದೇ ಆ ಮಂಡಲಾಧಿಕಾರಿಗಳು, ಪ್ರಾಂತೀಯ ಸೇವಕರು ಈಗಲೂ ಸಹ ಅದೇ ವಿಧವಾಗಿ ತಮ್ಮ ಸೇವೆಯಲ್ಲಿ ಮುಂದುವರಿದರು.

ಮೂರನೆಯದಾಗಿ, ಹೊಯ್ಸಳರ ಪರಿಪಾಲಕ ಕುಲದೇವರಾಗಿದ್ದ ಹಂಪೆಯ ಶ್ರೀ ವಿರೂಪಾಕ್ಷ ಮತ್ತು ಬೇಲೂರಿನ ಶ್ರೀ ಚೆನ್ನಕೇಶವ, ಇವರು ಸಂಗಮ ವಂಶದ ಅರಸರಿಗೂ ಅಷ್ಟೇ ಆದರ ವಿಶ್ವಾಸಗಳಿಂದ ಕೂಡಿದ ಆರಾಧ್ಯ ದೇವರಾದರು.

ನಾಲ್ಕನೆಯದಾಗಿ, ಹೊಯ್ಸಳ ನರೇಂದ್ರರಂತೆ ವಿಜಯನಗರದ ನರಪತಿಗಳಾದರೂ ಶೃಂಗೇರಿಯ ಗುರುಪೀಠದಲ್ಲಿ ಗುರುಭಾವವನ್ನು ತಳೆದಿದ್ದರು.

ಐದನೆಯದಾಗಿ, ಹೊಯ್ಸಳ ಮತ್ತು ಸಂಗಮ ರಾಜವಂಶಗಳು ವೈವಾಹಿಕ ಸಂಬಂಧಗಳಿಂದ ಸಮೀಪದ ಜ್ಞಾತಿ-ಬಾಂಧವ್ಯವನ್ನು ಹೊಂದಿದ್ದವು. ಅದು ಹೀಗೆ :

ಹೊಯ್ಸಳ ಅರಸರ ಗಣ್ಯ ಅಧಿಕಾರಿಯಾಗಿದ್ದ ಸೋಮಯ ದಂಡನಾಯಕನು ಮುಮ್ಮಡಿ ಬಲ್ಲಾಳನ ಸೋದರಿಯ ಪಾಣಿಗ್ರಹಣ ಮಾಡಿದ್ದನು. ಈತನ ಮಗ ಬಲ್ಲಪ ದಂಡನಾಯಕನು ಹರಿಹರನ ಪುತ್ರಿಯನ್ನು ವರಿಸಿದ್ದನು.

ಆರನೆಯದಾಗಿ, ಹರಿಹರ-ಬುಕ್ಕರು ಹೊಯ್ಸಳ ರಾಜರಲ್ಲಿ ವಿಶ್ವಾಸಪಾತ್ರ ಮಂಡಲಾಧಿಕಾರಿಗಳಾಗಿದ್ದು, ಅವರಿಗೆ ಅಂಕಿತ ಅಧಿಕಾರಿಗಳಿಗೆ ಸಲ್ಲತಕ್ಕ ಮಹಾಮಂಡಲೇಶ್ವರ, ಒಡೆಯ ಎಂಬ ಗೌರವಾನ್ವಿತ ಉಪಾಧಿಗಳಿದ್ದವು. ತಮ್ಮ ಅಧಿಕಾರ ಪದವಿಯ ದ್ಯೋತಕಗಳಾದ ಈ ಪ್ರಶಸ್ತಿಗಳ ಕುರಿತು ಅವರಿಗೆ ವಿಪುಲ ಅಭಿಮಾನವಿದ್ದರೆ ಅದು ಸ್ವಾಭಾವಿಕವೇ. ಆದರೆ ಹೊಯ್ಸಳರ ಆಳಿಕೆ ಕೊನೆಗೊಂಡು ಆ ವಂಶದ ರಾಜನೇ ಇಲ್ಲದ ಕಾಲದಲ್ಲಿಯೂ ತಾವು ಸ್ವತಂತ್ರ ಸಾರ್ವಭೌಮರಾಗಿ ಆಳುತ್ತಿದ್ದಾಗಲೂ ಅವರು ಈ ಪ್ರಶಸ್ತಿಗಳನ್ನು ಧರಿಸುವುದರಲ್ಲಿ ಆಸ್ಥೆಯನ್ನು ವಹಿಸಿದ್ದಂತೆ- ಶಾಸನಗಳಿಂದ ಪ್ರಕಟವಾಗುತ್ತದೆ. ಇದರ ಇಂಗಿತಾರ್ಥವೇನು ? ಹೊಯ್ಸಳ ಪ್ರಭುಗಳ ಬಗೆಗೆ ಅವರಿಗಿದ್ದ ಆಳವಾದ ಗೌರವ ಭಾವನೆಗೆ ಇದೊಂದು ಖಚಿತ ನಿದರ್ಶನವೆಂದೇ ಗ್ರಹಿಸಬೇಕಲ್ಲವೆ ?

ಈ ಎಲ್ಲ ಆಧಾರಗಳನ್ನು ಪರೀಕ್ಷಿಸಿ ನೋಡಿದರೆ, ಹರಿಹರ-ಬುಕ್ಕರನ್ನು ಕನ್ನಡನಾಡು ಮತ್ತು ಕನ್ನಡ ಜನತೆಯಿಂದ ದೂರವಿರಿಸಲು ಸಹಾಯಕವಾಗುವಂತಹ ಒಂದು ರವಷ್ಟು ಆಧಾರವಾದರೂ ದುರ್ಲಭವೆಂದು ಸಿದ್ಧವಾಗುತ್ತದೆ.

## ವಿದ್ಯಾರಣ್ಯರು

ವಿದ್ವದಗ್ರೇಸರರೂ ಶ್ರೇಷ್ಠ ಧರ್ಮಗುರುಗಳೂ ಆಗಿದ್ದ ಶ್ರೀ ವಿದ್ಯಾರಣ್ಯರು ವಿಜಯನಗರದ ನಿರ್ಮಾಣ ಕಾರ್ಯದಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸಿದರೆಂದು ಸಾರ್ವತ್ರಿಕ ನಂಬಿಕೆ ಇದೆ. ಇದಕ್ಕೆ ಒಂದು ಆಧಾರವೆಂಬಂತೆ ವಿದ್ಯಾರಣ್ಯರ ಸಂಬಂಧವನ್ನು ಸೂಚಿಸುವ ವಿದ್ಯಾನಗರವೆಂಬ ಪ್ರತಿರೂಪವು ವಿಜಯನಗರ ರಾಜಧಾನಿಗೆ ನಾಮಾಂತರವಾಗಿ ಅನೇಕ ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತದೆ. ಅನೇಕ ವಿದ್ವಾಂಸರು ವಿದ್ಯಾರಣ್ಯರು ವಿಜಯನಗರದ ಸಂಸ್ಥಾಪಕರಹುದು, ಎಂಬ ಅಭಿಪ್ರಾಯವನ್ನು ಹೊಂದಿದ್ದಾರೆ. ಈ ಅಭಿಪ್ರಾಯವು ಧಾರ್ಮಿಕ ಮೂಲದ ಪಾರಂಪರಿಕ ಐತಿಹ್ಯ ಮತ್ತು ಕಾಲಾಂತರದ ಗ್ರಾಂಥಿಕ ನಿರ್ದೇಶಗಳಿಂದ ರೂಪಗೊಂಡಿದೆ. ಅದಕ್ಕೆ ಸಮಕಾಲಿಕ ಶಾಸನ ಪ್ರಮಾಣದಂತಹ ಐತಿಹಾಸಿಕ ಆಧಾರಗಳ ಬೆಂಬಲ ಇರುವುದಿಲ್ಲ. ವಿಜಯನಗರದ ಸ್ಥಾಪನೆಗೆ ವಿದ್ಯಾರಣ್ಯರ ಪ್ರತ್ಯಕ್ಷ ಸಂಬಂಧದ ವಿಚಾರವು ಹೀಗೆ ಅನಿಶ್ಚಿತತೆಯಿಂದ ಕೂಡಿದ್ದರೂ ಶೃಂಗೇರಿಯ ಧರ್ಮಗುರುಗಳ ಬಗೆಗೆ ವಿಜಯನಗರದ ನರೇಂದ್ರರು ಅಗಾಧವಾದ ಆದರ ಭಾವವನ್ನು ತಳೆದಿದ್ದರೆಂದು, ಆ ಕ್ಷೇತ್ರದ ಧಾರ್ಮಿಕ ಸಂಸ್ಥೆಗಳಿಗೆ ಅನೇಕ ದತ್ತಿಗಳನ್ನು ಬಿಟ್ಟರೆಂದು ಹಲವು ಶಿಲಾಶಾಸನಗಳು ಸಾಕ್ಷ್ಯವನ್ನು ಪೂರಯಿಸುತ್ತವೆ.

## ವಿಜಯನಗರದ ಸ್ಥಳದ ಇತಿಹಾಸ

ವಿಜಯನಗರದ ನೆಲೆಯನ್ನು ಕುರಿತು ಈ ಮುಂದಿನ ಸಂಗತಿಗಳು ಉದ್ಬೋಧಕವಾಗಿವೆ. ತುಂಗಭದ್ರೆಯ ದಕ್ಷಿಣ ತೀರ ಪ್ರದೇಶದಲ್ಲಿ ಗುಡ್ಡ-ಬೆಟ್ಟಗಳ ಆವರಣದಲ್ಲಿ ವಿಜಯನಗರ ರಾಜಧಾನಿಯ ಹೆಸರಿನಿಂದಲೇ ವಿಜಯನಗರ ರಾಜ್ಯವು, ಅನಂತರ ಊರ್ಜಿತವಾದ ಸಾಮ್ರಾಜ್ಯವು ಪ್ರಖ್ಯಾತವಾದವು. ಅದಕ್ಕೂ ಪೂರ್ವದಲ್ಲಿ ಈ ನದಿಯ ಉತ್ತರ ದಡದಲ್ಲಿ ಆನೆಗೊಂದಿಯೆಂಬ ಪ್ರಾಚೀನ ಪಟ್ಟಣವು ಅಸ್ತಿತ್ವದಲ್ಲಿ ಇದ್ದಿತು. ಉತ್ತರದ ಅಂಚಿನಲ್ಲಿದ್ದ ಈ ಹಳೆಯ ಪಟ್ಟಣವು ಅನಂತರ ಹೊಸ ರಾಜಧಾನಿಯ ವಲಯದಲ್ಲಿ ಸಮಾವೇಶಗೊಂಡು ಅದರ ಉಪನಗರವಾಗಿ ಪರಿಣಮಿಸಿತು. ಮುಮ್ಮಡಿ ಬಲ್ಲಾಳನು ಶತ್ರುಗಳ ದಾಳಿಗಳನ್ನು ತಡೆಗಟ್ಟಲು ಕೋಟೆ ಕೊತ್ತಳಗಳನ್ನು ಕಟ್ಟಿಸಿ, ಈ ಆನೆಗೊಂದಿ ಪಟ್ಟಣದ ಭದ್ರತೆಯನ್ನು ಹೆಚ್ಚಿಸಿದ್ದನು.

ಈ ಹೊಸ ರಾಜಧಾನೀಸ್ಥಳವು ಪೌರಾಣಿಕ ಐತಿಹ್ಯಗಳ ಆವರಣದಲ್ಲಿ ಪುಣ್ಯಸ್ಥಳ, ಪವಿತ್ರಕ್ಷೇತ್ರವೆಂಬ ಗೌರವವನ್ನು ತಳೆದಿತ್ತು. ಪರಂಪರಾಗತ ಸ್ಥಳೀಯ ನಂಬಿಕೆಯಂತೆ ರಾಮಾಯಣದಲ್ಲಿ ವರ್ಣಿಸಲಾದ ಪಂಪಾಸರೋವರವು ಮತ್ತು ವಾನರಾಧಿರಾಜನಾದ ವಾಲಿಯ ರಾಜಧಾನಿ ಕಿಷ್ಕಿಂಧೆ ಇದೇ ಪ್ರದೇಶದಲ್ಲಿ ನೆಲಸಿದ್ದವು.

ಏಳನೆಯ ಶತಮಾನದ ಚಾಲುಕ್ಯ ವಿನಯಾದಿತ್ಯನ ಒಂದು ತಾಮ್ರಶಾಸನದಲ್ಲಿ ಈ ಸ್ಥಳವನ್ನು ಪಂಪಾಕ್ಷೇತ್ರವೆಂದು ಕರೆದಿದೆ. ಈ ಸ್ಥಳದ ಅಧಿಷ್ಠಾನ ದೇವನಾದ ಶ್ರೀ ವಿರೂಪಾಕ್ಷದೇವನನ್ನು ಹನ್ನೊಂದನೆಯ ಶತಮಾನದ ಒಂದು ಶಿಲಾಶಾಸನದಲ್ಲಿ ಪಂಪಾಪತಿ ಮಹಾಕಾಲನೆಂದು ಸಂಬೋಧಿಸಿದೆ. ಅನಂತರದ ಶಾಸನಗಳಲ್ಲಿ ಮತ್ತು ಸಾಹಿತ್ಯದಲ್ಲಿ ಈ ಸ್ಥಳವನ್ನು ಹಲವು ವಿಧದಿಂದ ವರ್ಣಿಸಲಾಗಿದೆ. ಆರಂಭದ ಕೆಲವು ಶಾಸನಗಳಲ್ಲಿ ಈ ಹೊಸ ರಾಜಧಾನೀ ನಗರಿಯನ್ನು ಅಂಶರೂಪದಿಂದ ಇಲ್ಲವೆ ಅಧಿಕವ್ಯಾಪ್ತಿಯಿಂದ ಆನೆಗೊಂದಿ, ವಿರೂಪಾಕ್ಷಪುರ, ಹೊಸಪಟ್ಟಣ, ಹೊಸ ಹಂಪೆಯಪಟ್ಟಣ, ಹಸ್ತಿನಾವತಿ, ಹಂಪೆ ಹಸ್ತಿನಾವತಿ, ಕುಂಜರ ಕೋಣ, ವಿದ್ಯಾನಗರ—ಇವೇ ಮೊದಲಾದ ನಾನಾ ಹೆಸರುಗಳಿಂದ ನಿರ್ದೇಶಿಸಲಾಗಿದೆ. ಇವೆಲ್ಲವು

ಒಂದೊಂದು ಪರಿಯಿಂದ ಆ ಮಹಾನಗರದ ಪೌರಾಣಿಕ, ಧಾರ್ಮಿಕ, ಐತಿಹಾಸಿಕ ಹಿನ್ನೆಲೆಯನ್ನು ಸೂಚಿಸುವಂತಹವಾಗಿವೆ.

**ವಿಜಯನಗರ ಸ್ಥಾಪನೆಯ ಉದ್ದೇಶಗಳು**

ವಿಜಯನಗರದ ನಿರ್ಮಿತಿಗೆ ಕಾರಣವಾದ ಸನ್ನಿವೇಶಗಳನ್ನು ಸಮಾಲೋಚಿಸಿದರೆ ಅದರ ನಿರ್ಮಾಪಕರು ವಿಶಾಲವಾದ, ನಿಃಸ್ವಾರ್ಥವಾದ, ರಾಷ್ಟ್ರಹಿತದ ಮನೋಭಾವ ಮತ್ತು ಉದಾತ್ತ ಧ್ಯೇಯ, ಉದ್ದೇಶಗಳಿಂದ ಪ್ರೇರಣೆ ಪಡೆದಿದ್ದರು, ಎಂದು ಮನವರಿಕೆಯಾಗುತ್ತದೆ. ಈ ಧ್ಯೇಯೋದ್ದೇಶಗಳನ್ನು ಹೀಗೆ ಗುರುತಿಸಿ ಹೇಳಬಹುದು :

ಜನತೆಯ ನಾಗರಿಕ ಜೀವನದಲ್ಲಿ ತಲತಲಾಂತರಗಳಿಂದ ಬೆಳೆದು ಬಂದಿದ್ದ ಭಾರತೀಯ ಸಂಸ್ಕೃತಿಯ ರೀತಿ ನೀತಿಗಳನ್ನು ಸರ್ವವಿಧದಿಂದಲೂ ಸಂರಕ್ಷಿಸಿ, ಸಂವರ್ಧನಗೊಳಿಸುವುದು ; ಎಲ್ಲ ಧರ್ಮಪಂಥಗಳನ್ನು, ಆ ಧರ್ಮಪಂಥಗಳು ಕಟ್ಟಿಕೊಂಡಿದ್ದ ಸಂಘ ಸಂಸ್ಥೆಗಳನ್ನು ಪೋಷಿಸುವದು ; ಪರಂಪರಾಗತ ವಿದ್ಯೆ, ಜ್ಞಾನಶಾಖೆಗಳನ್ನು ಊರ್ಜಿತಗೊಳಿಸುವದು ; ಸ್ವಕೀಯ ಭಾಷೆ, ಸಾಹಿತ್ಯ, ಕಲೆಗಳನ್ನು ಪ್ರೋತ್ಸಾಹಿಸುವದು ; ಇವೇ ಆ ಧ್ಯೇಯೋದ್ದೇಶಗಳಾಗಿದ್ದವು.

ವಿಜಯನಗರ ಸಾಮ್ರಾಜ್ಯದ ಸಮಗ್ರ ಚರಿತ್ರೆಯನ್ನು, ವಿಜಯನಗರದ ಮಹೀಪಾಲರು ಶ್ರದ್ಧೆಯಿಂದ ಅನುಷ್ಠಾನಗೊಳಿಸಿದ ವಿಪುಲ ರಚನಾತ್ಮಕ ಕಾರ್ಯಗಳನ್ನು ಪರಾಮರ್ಶಿಸಿದರೆ ತಮ್ಮ ಘನವಾದ ಧ್ಯೇಯೋದ್ದೇಶಗಳ ಸಾಧನೆಯನ್ನು ಅವರು ಸಾಧ್ಯವಾದಷ್ಟು ಉತ್ತಮ ರೀತಿಯಿಂದ ನೆರವೇರಿಸಿದರು, ಎಂಬ ವಿಷಯವು ಸ್ಪಷ್ಟವಾಗುತ್ತದೆ.

ಘನವಾದ ಈ ಪ್ರತಿಜ್ಞಾ ಸಂಕಲ್ಪಗಳು ರಾಜಕೀಯದಲ್ಲಿ ಹಲವು ರೀತಿಯಿಂದ ಪ್ರತ್ಯಕ್ಷ ಸಂಕೇತ ರೂಪದಲ್ಲಿ ಪ್ರಕಟವಾದವು. ಅವುಗಳಲ್ಲಿ ಒಂದು ಹೀಗಿದೆ: ಅವರ ತಾಮ್ರಶಾಸನಗಳ ಕೊನೆಯಲ್ಲಿ ಚೊಕ್ಕಟವಾಗಿ ಕನ್ನಡ ಅಕ್ಷರಗಳಿಂದ ಅಂಕಿತವಾದ 'ಶ್ರೀ ವಿರೂಪಾಕ್ಷ' ಎಂಬ ರಾಜಮುದ್ರಿಕೆ. ಇದು ವಿಜಯನಗರ ಸಾಮ್ರಾಜ್ಯದ ಅಧಿದೇವನಾದ ಶ್ರೀ ವಿರೂಪಾಕ್ಷನ ಬಗೆಗೆ ಅವರ ಅಂತರಾಳದಲ್ಲಿ ನೆಲಸಿದ್ದ ಅಪಾರ ಭಕ್ತಿ, ವಿಶ್ವಾಸಗಳ ದ್ಯೋತಕವಾಗಿದೆ. ವಿಜಯನಗರದ ಅರಸರಲ್ಲಿ ಧರ್ಮ ದತ್ತಿಯನ್ನು ದಯಪಾಲಿಸುವ ರಾಜನು, ಅವನು ಯಾವನೇ ಆಗಿರಲಿ, ಸರ್ವಸಾಮಾನ್ಯವಾಗಿ ತನ್ನ ಶಾಸನವನ್ನು ಸಾಮ್ರಾಜ್ಯದ ಪರಿಪಾಲಕನಾದ ಈ ಸ್ವಾಮಿ ಶ್ರೀ ವಿರೂಪಾಕ್ಷ ದೇವನ ಅಂಕಿತದಿಂದಲೇ ಬರೆಯಿಸುತ್ತಿದ್ದನು. ವೈಯಕ್ತಿಕವಾಗಿ ಆಳುವ ಅರಸನ ಪ್ರತ್ಯೇಕ ಹೆಸರನ್ನು ಅಲ್ಲಿ ಕಾಣಿಸುತ್ತಲೇ ಇರಲಿಲ್ಲ.

ಎರಡನೆಯದಾಗಿ, ಈ ಅರಸರು ಶ್ರೀ ವರಾಹಮೂರ್ತಿಯನ್ನು ತಮ್ಮ ರಾಜಮುದ್ರೆಯನ್ನಾಗಿ ಅಂಗೀಕರಿಸಿದ್ದು. ಇದೊಂದು ಅರ್ಥಪೂರ್ಣವಾದ ಸಾಂಕೇತಿಕ ಚಿಹ್ನೆ. ಶ್ರೀ ವಿಷ್ಣು ವರಾಹ ಅವತಾರವನ್ನು ಧರಿಸಿ, ಹಿರಣ್ಯಾಕ್ಷ ದೈತ್ಯನು ಅಪಹರಿಸಿಕೊಂಡು ಹೋಗಿದ್ದ ಈ ಭೂಮಿಯನ್ನು ಸಾಗರದಿಂದ ಮೇಲಕ್ಕೆ ಎತ್ತಿ ಸಂರಕ್ಷಿಸಿದನು. ಅದೇ ರೀತಿಯ ಸಾಧನೆ ಈ ಮಹೀಪಾಲರದು. ಇವರು ಅಸ್ತವ್ಯಸ್ತವಾಗಿ ದೇಶವನ್ನು ವ್ಯಾಪಿಸಿಕೊಂಡಿದ್ದ ಅರಾಜಕ ಸ್ಥಿತಿಯನ್ನು ನಿವಾರಿಸಿ, ಸುವ್ಯವಸ್ಥಿತ ರಾಜ್ಯಪರಿಪಾಲನೆಯ ಭದ್ರವಾದ ಶಾಸನಕ್ರಮವನ್ನು ಪ್ರತಿಷ್ಠೆಗೊಳಿಸಿದರು. ಇದುವೇ ಈ ರಾಜ ಚಿಹ್ನೆಯಿಂದ ಸೂಚಿತವಾಗುವ ಭವ್ಯವಾದ ಅಂತರಾರ್ಥವು.

ಮೂರನೆಯದಾಗಿ, ಈ ನರಪತಿಗಳು 'ಹಿಂದುರಾಯ ಸುರತ್ರಾಣ' ಎಂಬ ಬಿರುದನ್ನು ಮೆರೆಯಿಸಿದ್ದು. ಇದು ಹಿಂದು ಧರ್ಮವನ್ನು ಸಂರಕ್ಷಿಸಿ, ಸಂವರ್ಧಿಸುವ ದೃಢಸಂಕಲ್ಪದಿಂದ ಮುಂದೆ ಬಂದ ವಿಜಯನಗರದ ರಾಜರ ದಕ್ಷ ಕಾರ್ಯಸಾಧನೆಯನ್ನು ಸಾರಿ ಹೇಳುತ್ತದೆ. ಹಿಂದುರಾಯ ಸುರತ್ರಾಣ ಎಂದರೆ ದೇವೇಂದ್ರನಂತೆ ಹಿಂದುರಾಜರ ಪರಿಪಾಲಕ. ಇಲ್ಲಿ ಸುರತ್ರಾಣ ಎಂಬ ಪದವು ಹಿಂದುಗಳ ಪ್ರತಿಕಕ್ಷಿಗಳಾದ ಮಹಮ್ಮದೀಯರ ಸುಲ್ತಾನ ಎಂಬ ಹೆಮ್ಮೆಯ ಬಿರುದಿಗೆ ಸರಿಮಿಗಿಲೆನಿಸಿ, ಪ್ರತಿಸ್ಪರ್ಧಿಯಾಗಿ ನಿಲ್ಲುವಂತಿದೆ.

ಈ ವಿಧದಲ್ಲಿ ಸನಾತನವಾದ, ವಿಶಾಲವಾದ, ಹಿಂದುರಾಷ್ಟ್ರದ ಜೀವನ ಮತ್ತು ಸಂಸ್ಕೃತಿ ಕ್ಷೇತ್ರದಲ್ಲಿ ಅಮೋಘವಾದ ಗೌರವಾನ್ವಿತವಾದ, ಉನ್ನತವಾದ ಉತ್ತಮೋತ್ತಮವಾದ ಸಕಲ ಮೂಲ್ಯಗಳು, ಭಾವಗಳು, ತತ್ವಗಳು, ನಿಷ್ಠೆಗಳು, ಸಂಪ್ರದಾಯಗಳು, ಸಾಧನೆಗಳು—ಇವೆಲ್ಲವು ಸಾಕಾರಗೊಂಡಂತೆ ವಿಜಯನಗರವು ಪ್ರತ್ಯಕ್ಷ ಸೃಷ್ಟಿಯಲ್ಲಿ ಭವ್ಯವಾಗಿ ಮೂರ್ತಸ್ವರೂಪ ಹೊಂದಿತು.

### ಸಂಗಮರಾಜವಂಶದ ಚರಿತ್ರೆ

ವಿಜಯನಗರದ ಅಧಿಪತಿಗಳಾಗಿ ಮೂರು ವಂಶದ ಅರಸರು ರಾಜ್ಯಭಾರ ಮಾಡಿದರು. ಈ ರಾಜ ವಂಶಗಳಲ್ಲಿ ಮೊದಲನೆಯದು, ಒಂದನೆಯ ಹರಿಹರನಿಂದ ಸ್ಥಾಪಿತವಾದ ಸಂಗಮ ರಾಜವಂಶವು.

### ಒಂದನೆಯ ಹರಿಹರರಾಯ

ಈ ಹರಿಹರ ರಾಜನು ತನ್ನ ಸೋದರರ ಸಹಾಯದಿಂದ ನವ ರಾಜ್ಯ ಸ್ಥಾಪಿಸಿದ ವಿಷಯವನ್ನು ಈ ಹಿಂದೆ ಪ್ರಸ್ತಾವಿಸಲಾಗಿದೆ. ಈ ರಾಯನು ಕ್ರಿ.ಶ. 1336 ರಿಂದ 1356 ರ ವರೆಗೆ ರಾಜ್ಯವಾಳಿದನು. ಈ ಕಾಲದಲ್ಲಿ ಈತನ ನಾಲ್ವರು ಸಹೋದರರು ಈತನಿಗೆ ವಿಧೇಯರಾಗಿ ಬೇರೆ ಬೇರೆ ಪ್ರಾಂತಗಳ ಆಡಳಿತವನ್ನು ವಹಿಸಿಕೊಂಡರು. ಅದು ಹೀಗೆ :

ಕಂಪಣ್ಣನು ಪೂರ್ವದ ಸೀಮೆಗೆ ಅಧಿಪತಿಯಾಗಿ ಆಂಧ್ರ ಪ್ರದೇಶದ ಮೇಲಧಿಕಾರಿಯಾಗಿದ್ದನು. ಈ ಪ್ರಾಂತವನ್ನು ಉದಯಗಿರಿ ರಾಜ್ಯವೆಂದು ಕರೆಯುತ್ತಿದ್ದರು. ಈತನ ರಾಜಧಾನಿ ವಿಕ್ರಮಸಿಂಹಪುರವು ಇಂದಿನ ನೆಲ್ಲೂರು. ಬುಕ್ಕರಾಯನು ಯುವರಾಜನಾಗಿ ಸಾಮ್ರಾಜ್ಯದ ನಡುವಣ ಪ್ರಾಂತವನ್ನು ಆಳುತ್ತಿದ್ದನು. ಈತನ ರಾಜಧಾನಿ ದೋರಸಮುದ್ರ. ಮಾರಪ್ಪನು ಪಶ್ಚಿಮ ಸೀಮೆಗೆ ಅಧಿಪತಿಯಾಗಿದ್ದನು. ಬನವಾಸಿ, ಕೊಂಕಣ, ಉತ್ತರ ಕನ್ನಡ ಮೊದಲಾದ ಕರಾವಳಿ ಪ್ರದೇಶವು ಈತನ ಅಧಿಕಾರಕ್ಕೆ ಒಳಪಟ್ಟಿದ್ದಿತು. ಮುದ್ದಪ್ಪನು ಬಹುಕಾಲ ಜೀವಿಸಲಿಲ್ಲ.

ಈ ಹೊತ್ತಿಗೆ ತುಂಗಭದ್ರೆಯ ಉತ್ತರದ ಕೆಲವು ಪ್ರದೇಶಗಳು ವಿಜಯನಗರದ ಸ್ವಾಮಿತ್ವಕ್ಕೆ ಸೇರಿದ್ದವು. ಹರಿಹರರಾಯನ ಸಾಧನೆ ಕೇವಲ ನವರಾಜ್ಯದ ಸ್ಥಾಪನೆಗೆ ಮಾತ್ರ ಸೀಮಿತವಾಗಿರಲಿಲ್ಲ. ಆತನು ತಾನು ಸ್ಥಾಪಿಸಿದ ರಾಷ್ಟ್ರದಲ್ಲಿ ಸುಯಂತ್ರಿತ ರಾಜಶಾಸನವನ್ನು, ಸುವ್ಯವಸ್ಥಿತ ಆಡಳಿತವನ್ನು ಪ್ರಚಲಿತಗೊಳಿಸಿದನು. ಪ್ರಜಾಜನರು ಸುಸಂರಕ್ಷಣೆ ಪಡೆದು, ಸುಖ ಶಾಂತಿಯಿಂದ ಬಾಳುವಂತೆ ನೋಡಿಕೊಂಡನು.

ಹರಿಹರನ ಆಳಿಕೆಯ ಅವಧಿಯಲ್ಲಿ ವಿಜಯನಗರದ ಸ್ಥಾಪನೆಯ ವಿಜಯೋತ್ಸವವು ನೆರವೇರಿದ

ಅನಂತರ ಅಲ್ಪಕಾಲದಲ್ಲಿ ದೂರಗಾಮೀ ಪರಿಣಾಮಗಳನ್ನುಂಟುಮಾಡುವಂತಹ ಒಂದು ಗಂಭೀರ ಘಟನೆ ಸಂಭವಿಸಿತು. ಇದು ಈ ನವ ರಾಜ್ಯವು ಉತ್ತರ ದಿಕ್ಕಿನಲ್ಲಿ ವಿಸ್ತರಣೆ ಪಡೆಯುವ ಮಾರ್ಗದಲ್ಲಿ ಬಲವಾದ ವಿಘ್ನವನ್ನು ಉಂಟುಮಾಡಿತು. ಮೊದಲು ಜಫರಖಾನ ಎಂಬ ಹೆಸರಿನಿಂದ ಪರಿಚಿತನಾಗಿದ್ದು ಅನಂತರ ಅಲ್ಲಾಉದ್ದೀನ ಹಸನ ಶಹ ಎಂಬ ಗೌರವದ ಅಂಕಿತವನ್ನು ಧರಿಸಿದ ಸುಲ್ತಾನನು ಗುಲ್ಬರ್ಗದಲ್ಲಿ ಕ್ರಿ.ಶ. 1347 ಆಗಷ್ಟ 13 ರಂದು ಸ್ಥಾಪನೆ ಮಾಡಿದ ಬಹಮನಿ ರಾಜ್ಯವೇ ಆ ಗಂಭೀರ ಘಟನೆಯಾಗಿದೆ.

### ಒಂದನೆಯ ಬುಕ್ಕರಾಯ

ಒಂದನೆಯ ಹರಿಹರನ ಅನಂತರ ಆತನ ಕಿರಿಯ ಸೋದರನಾದ ಒಂದನೆಯ ಬುಕ್ಕರಾಯನು ವಿಜಯನಗರದ ಮಹಾ ರಾಜ್ಯಕ್ಕೆ ಉತ್ತರಾಧಿಕಾರಿಯಾದನು. ಈತನು ಕ್ರಿ.ಶ. 1356ರಿಂದ 1377ರ ವರೆಗೆ 22 ವರ್ಷ ರಾಜ್ಯಭಾರ ಮಾಡಿದನು. ಈತನು ಈ ಮೊದಲು ಹರಿಹರರಾಯನಿಗೆ ಬಲಭುಜದಂತೆ ಇದ್ದುಕೊಂಡು ವಿಜಯನಗರ ಸ್ಥಾಪನೆಯ ಮಹಾ ಕಾರ್ಯದಲ್ಲಿ ಬಹುಮೂಲ್ಯ ಸೇವೆ ಸಲ್ಲಿಸಿದ್ದನು. ತನ್ನ ಅಣ್ಣನಿಗೆ ರಾಜಕೀಯ ಕಾರ್ಯಗಳಲ್ಲಿ ಜೊತೆ ಜೊತೆಯಾಗಿ ಸಂಪೂರ್ಣ ಸಹಕಾರ ನೀಡಿದನು. ಕೆಲವೊಂದು ಸಲ ತನ್ನ ಹೆಸರಿನಿಂದ ರಾಜಶಾಸನಗಳನ್ನು ಸಹ ಪ್ರಚಲಿತಗೊಳಿಸಿದನು. ತನ್ನ ಆಳಿಕೆಯಲ್ಲಿ ಅವಿಧೇಯ ಶಕ್ತಿಗಳನ್ನು ದಮನಮಾಡಿ ಸಾಮ್ರಾಜ್ಯದಲ್ಲಿ ಸಂಘಟನೆಯನ್ನು ಅಳವಡಿಸಿ ಅದರ ಬಲವನ್ನು ಅಭಿವೃದ್ಧಿಗೊಳಿಸುವ ಕಾರ್ಯದಲ್ಲಿ ಆತನು ನಿರತನಾದನು.

### ಮದುರೆಯ ದಂಡಯಾತ್ರೆ

ಈ ದಿಶೆಯಲ್ಲಿ ಆತನು ಇಟ್ಟ ಮೊದಲ ಹಜ್ಜೆ ದಕ್ಷಿಣದ ದಂಡಯಾತ್ರೆ. ದಕ್ಷಿಣ ಪ್ರಾಂತದ ಮೇಲಧಿಕಾರಿಯಾಗಿದ್ದ ಬುಕ್ಕರಾಯನ ಎರಡನೆಯ ಮಗ ಕಂಪಣ್ಣವೊಡೆಯನು ಕ್ರಿ.ಶ.ಸು. 1360ರಲ್ಲಿ ಈ ದಂಡಯಾತ್ರೆಯನ್ನು ಕೈಕೊಂಡನು. ಈ ದಂಡಯಾತ್ರೆ ಎರಡು ಉದ್ದೇಶಗಳಿಂದ ಪ್ರೇರಣೆ ಪಡೆದಿತ್ತು ಅವುಗಳಲ್ಲಿ ಒಂದನೆಯದು ಉತ್ತರ–ದಕ್ಷಿಣ ಆರ್ಕಾಟ ಜಿಲ್ಲೆಗಳ ಪ್ರದೇಶದಲ್ಲಿ ಆಳುತ್ತಿದ್ದು, ವಿಜಯನಗರದ ಆಧಿಪತ್ಯಕ್ಕೆ ದ್ರೋಹವನ್ನು ಬಗೆದು ವಿರೋಧವಾಗಿ ವರ್ತಿಸುತ್ತಿದ್ದ ಶಂಬವರಾಯ ವಂಶದ ನಾಯಕರನ್ನು ಅಂಕೆಗೆ ತರುವದಾಗಿತ್ತು. ಎರಡನೆಯದು, ಪಕ್ಕೆಯಲ್ಲಿಯ ಮುಳ್ಳಿನಂತೆ ಪರಿಪರಿಯ ಉಪದ್ರವಗಳಿಗೆ ಕಾರಣವಾದ ಮದುರೆಯ ಸುಲ್ತಾನರ ಆಳಿಕೆಯನ್ನು ನಿರ್ಮೂಲನಗೊಳಿಸುವದು. ಮುಂದಿನ ಒಂದು ವರ್ಷದ ಅವಧಿಯಲ್ಲಿ ಈ ಎರಡೂ ಉದ್ದೇಶಗಳು ಸಫಲವಾದವು. ಈ ಸಾಧನೆಯಿಂದಾಗಿ ತುಂಗಭದ್ರೆ ಯಿಂದ ಆಚೆಯ ದಕ್ಷಿಣ ಭಾರತದ ಸಮಗ್ರ ಭೂಭಾಗದ ಮೇಲೆ ವಿಜಯನಗರದ ಸಂಪೂರ್ಣ ಆಧಿಪತ್ಯವು ಸ್ಥಾಪನವಾಯಿತು.

ಈ ವಿಜಯದ ಅನಂತರ ಕಂಪಣ್ಣನು ಆ ಸೀಮೆಯಲ್ಲಿ ಕೆಲಕಾಲ ನೆಲಸಿದನು. ಜಯಿಸಿದ ಪ್ರದೇಶ ಗಳಲ್ಲಿ ಸುವ್ಯವಸ್ಥಿತ ಆಡಳಿತ ಕ್ರಮವನ್ನು ರೂಢಿಸಿದನು. ದೇವಾಲಯವೇ ಮೊದಲಾದ ಧಾರ್ಮಿಕ ಸಂಸ್ಥೆಗಳಲ್ಲಿ ನಿಂತು ಹೋಗಿದ್ದ ಪೂಜೆ, ಪುರಸ್ಕಾರ, ವಿಧಿ, ವಿಧಾನಗಳನ್ನು ಪುನರುಜ್ಜೀವನಗೊಳಿಸಿದನು. ಹಿಂದಿನ ರಾಜಕೀಯ ವಿಪ್ಲವದ ಕಾಲದಲ್ಲಿ ತಿರುಪತಿಗೆ ಸ್ಥಳಾಂತರಪಡಿಸಲಾಗಿದ್ದ ಶ್ರೀರಂಗನಾಥದೇವರ ವಿಗ್ರಹವನ್ನು ಮರಳಿ ಸ್ವಸ್ಥಳಕ್ಕೆ ತಂದು ಶ್ರೀರಂಗದಲ್ಲಿ ಪುನಃ ಪ್ರತಿಷ್ಠೆ ಮಾಡಲಾಯಿತು. ಈ ದಕ್ಷಿಣ ದಂಡಯಾತ್ರೆಯ ವಿವರಗಳನ್ನು ಕಂಪಣ್ಣವೊಡೆಯನ ಸತಿ ಕವಯಿತ್ರಿ ಗಂಗಾದೇವಿ 'ಮಧುರಾವಿಜಯಂ' ಅಥವಾ 'ವೀರಕಂಪಣರಾಯ ಚರಿತಂ' ಎಂಬ ತನ್ನ ಸಂಸ್ಕೃತ ಕಾವ್ಯದಲ್ಲಿ ಮನೋಹರವಾಗಿ ಚಿತ್ರಿಸಿರುವಳು.

## ಬಹಮನಿ ಸಮರಗಳು

ಅಲ್ಲಾ ಉದ್ದೀನನ ಅನಂತರ ಬಹಮನಿ ಸುಲ್ತಾನನಾದ ಮಹಮ್ಮದ ಶಹನು (ಕ್ರಿ.ಶ. 1358 ರಿಂದ 77) ಬುಕ್ಕರಾಯನ ಸಮಕಾಲಿಕನಾಗಿದ್ದನು. ಈ ರಾಜನು ಆಡಳಿತದಲ್ಲಿ ಸುಧಾರಣೆಯನ್ನು ಮಾಡಿ ತನ್ನ ರಾಜ್ಯಕ್ಕೆ ಭದ್ರತೆಯನ್ನು ತಂದನು. ಈತನು ನೆರೆಯ ರಾಜ್ಯಗಳಾದ ತೆಲಂಗಾಣ ಮತ್ತು ವಿಜಯನಗರ ಇವುಗಳ ವಿರುದ್ಧವಾಗಿ ಆಕ್ರಮಣಕಾರಕ ರಾಜನೀತಿಯನ್ನು ಮುಂದುವರಿಸಿದನು. ಇದರ ಫಲವಾಗಿ ವಿಜಯನಗರ ಮತ್ತು ಬಹಮನಿ ರಾಜ್ಯಗಳ ನಡುವೆ ನಿರಂತರ ಸಮರಗಳು ಸಂಭವಿಸಿದವು.

## ಮುಸ್ಲಿಮ್ ಇತಿಹಾಸಕಾರರು

'ಭಾರತದಲ್ಲಿ ಮಹಮ್ಮದೀಯ ಪ್ರಭುತ್ವದ ಚರಿತ್ರೆ' ಎಂಬ ತನ್ನ ಗ್ರಂಥದಲ್ಲಿ ಫೆರಿಸ್ತ ಎಂಬ ಮುಸ್ಲಿಮ್ ಚರಿತ್ರಕಾರನು ಈ ಯುದ್ಧಗಳ ವೃತ್ತಾಂತವನ್ನು ಸವಿಸ್ತರವಾಗಿ ವರ್ಣಿಸಿರುವನು. ಆದರೆ ಈ ವೃತ್ತಾಂತದ ಕುರಿತು ನಾವು ಲಕ್ಷಿಸಬೇಕಾದಂತಹ ಕೆಲವು ಸಂಗತಿಗಳು ಇವೆ. ಅವು ಹೀಗೆ: ಈ ಇತಿಹಾಸ ಲೇಖಕನು ವಿಜಯನಗರವು ಅಳಿದ ಬಳಿಕ ಹದಿನೇಳನೆಯ ಶತಕದ ಆರಂಭದಲ್ಲಿ ತನ್ನ ಗ್ರಂಥವನ್ನು ರಚಿಸಿದನು. ಅದನ್ನು ರಚಿಸುವಾಗ ಆತನು ಬಹಮನಿ ಸುಲ್ತಾನರ ಉತ್ತರಾಧಿಕಾರಿಯಾದ ವಿಜಾಪುರದ ಆದಿಲಶಹನ ಆಸ್ಥಾನದಲ್ಲಿ ಕೃಪಾಪೋಷಿತನಾಗಿದ್ದನು. ಈ ಘಟನೆಗಳನ್ನು ವಿವರಿಸುವಾಗ ಆತನ ಉದ್ದೇಶವು ತನ್ನ ಸ್ವಧರ್ಮೀಯರ ಮತ್ತು ತನ್ನ ಪೋಷಕರ ಹಿರಿಮೆಯನ್ನು ಪ್ರದರ್ಶಿಸುವದಾಗಿತ್ತು.

ಈ ಕಾರಣಗಳಿಂದಾಗಿ ಫೆರಿಸ್ತನ ಲೇಖನದಲ್ಲಿ ಅತಿಶಯೋಕ್ತಿ ಮತ್ತು ಅತಿರಂಜಿತ ವರ್ಣನೆಗಳು ಪ್ರಾಮುಖ್ಯವಾಗಿ ಕಂಡುಬರುತ್ತವೆ. ಈ ಸಂಗತಿಯನ್ನು ಲಕ್ಷಿಸಿ ಆತನು ವಿವರಿಸಿರುವ ಬಹಮನೀ ಸುಲ್ತಾನರ ಮತ್ತು ವಿಜಯನಗರದ ಅರಸರ ನಡುವೆ ನಡೆದ ಸಂಗ್ರಾಮಗಳ ಕಥೆಗಳು ವಿಶ್ವಾಸಾರ್ಹವಲ್ಲವೆಂದು ನಿರ್ಧರಿಸಬೇಕಾಗುತ್ತದೆ. ತದ್ವಿರುದ್ಧವಾಗಿ ಹಿಂದೂ ಪಕ್ಷದವರು ಈ ಘಟನೆಗಳ ಕುರಿತು ಹೇಳಿದ ಹೇಳಿಕೆಗಳು ತ್ರುಟಿತವೂ, ಸಂಕ್ಷಿಪ್ತವೂ ಆಗಿವೆ. ಇಂತಹ ಪರಿಸ್ಥಿತಿಯಲ್ಲಿ ಈ ಯುದ್ಧಗಳ ವೃತ್ತಾಂತವನ್ನು ವಿವರಿಸಲು ತೊಡಗಿದ ಆಧುನಿಕ ಇತಿಹಾಸಕಾರನು ಬಹು ಜಾಗ್ರತೆಯನ್ನು ವಹಿಸಬೇಕಾಗುತ್ತದೆ. ಪರಸ್ಪರ ವಿರೋಧಿ ವೃತ್ತಾಂತಗಳನ್ನು, ಸಂಶಯಾಸ್ಪದ ನಿರೂಪಣೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಆ ಘಟನೆಗಳ ಫಲಿತಾಂಶವನ್ನು ಸಮಾಲೋಚಿಸಿ, ಸಂಭವಿಸಿರಬಹುದಾದ ವಸ್ತುಸ್ಥಿತಿಯನ್ನು ಕಂಡುಹಿಡಿಯಬೇಕಾಗುತ್ತದೆ.

ರಾಜ್ಯದಾಹದಿಂದ ಪ್ರೇರಿತರಾದ ಬಹಮನಿ ಸುಲ್ತಾನರು ಆಂಧ್ರಪ್ರಾಂತದಲ್ಲಿಯೂ ಕೃಷ್ಣಾ ತುಂಗಭದ್ರಾ ನದಿಗಳ ಮಧ್ಯ ಪ್ರದೇಶದಲ್ಲಿಯೂ ತಮ್ಮ ಆಧಿಪತ್ಯವನ್ನು ವಿಸ್ತರಿಸುವ ಆಕಾಂಕ್ಷೆಗಳುಳ್ಳವರಾಗಿದ್ದರು. ಈ ಕಾರಣದಿಂದ ಅವರು ವಿಜಯನಗರದ ವಿರುದ್ಧ ಅನೇಕ ಕದನಗಳನ್ನು ಹೂಡಿದರು. ಅವರ ಆ ಆಕ್ರಮಣತಂತ್ರಗಳನ್ನೆಲ್ಲ ವಿಜಯನಗರದ ರಾಜರು ಬಲವಾಗಿ ವಿರೋಧಿಸಿ, ಪ್ರತೀಕಾರಗಳನ್ನು ನಡೆಯಿಸಿದರು. ಇಂಥ ಸಮರಗಳಲ್ಲಿ ಕೆಲವೊಂದು ಸಲ ವಿಜಯನಗರದವರು ಕಾಲ್ದೆಗೆಯುವ ಇಲ್ಲವೆ ಪರಾಜಯ ಹೊಂದುವ ಸಂದರ್ಭಗಳು ಬಂದಿರಬಹುದು.

ಆದರೆ ಮುಸ್ಲಿಮ್ ಚರಿತ್ರಕಾರರು ಸಾಮಾನ್ಯವಾಗಿ ಪ್ರತಿಯೊಂದು ಯುದ್ಧದಲ್ಲಿ ವಿಜಯನಗರದ ಅರಸರು ತಮ್ಮ ಅಸಮರ್ಥತೆಯನ್ನು ಪ್ರದರ್ಶಿಸಿದರೆಂದು, ಸೋತು ಶರಣಾಗತರಾದರೆಂದು, ವರ್ಣಿಸಿರುವದನ್ನು ನಂಬುವದು ಮಾತ್ರ ಸಾಧ್ಯವಿಲ್ಲ. ಏಕೆಂದರೆ ನಿಜವಾದ ಐತಿಹಾಸಿಕ ಸನ್ನಿವೇಶಗಳನ್ನು

ಪರಿಶೀಲಿಸಿದರೆ ಈ ಕಾಲದಲ್ಲಿ ವಿಜಯನಗರವು ಉತ್ತರೋತ್ತರ ಅಭಿವೃದ್ಧಿ ಹೊಂದಿ, ಬಲಶಾಲಿ ಸಂಪದ್ಭರಿತ ರಾಷ್ಟ್ರವೆಂದು ಊರ್ಜಿತವಾಯಿತು ಎಂಬ ವಿಷಯವು ಸ್ಫುಟವಾಗುತ್ತದೆ. ಈ ಸಂಗತಿಯನ್ನು ಫೆರಿಸ್ತನಂತಹ ವಿರೋಧಿ ಇತಿಹಾಸಲೇಖಕನು ಸಹ ಅನುಮೋದಿಸಿರುವನು. ವಿಜಯನಗರದ ಚಕ್ರವರ್ತಿಗಳು ರಾಜಕೀಯ ಸಾಮರ್ಥ್ಯ, ಸಿರಿವಂತಿಕೆ ಮತ್ತು ರಾಜ್ಯವಿಸ್ತಾರ—ಈ ಮೂರರಲ್ಲಿಯೂ ಬಹಮನಿ ಸುಲ್ತಾನರಿಗಿಂತ ಮಿಗಿಲಾದವರು ಎಂಬುದಾಗಿ ಆತನು ಹೇಳಿದ್ದಾನೆ.

### ಬಹಮನಿಯೊಂದಿಗೆ ಸಂಗ್ರಾಮ

ಬುಕ್ಕರಾಯನು ಅಧಿಕಾರ ವಹಿಸಿದ ಅಲ್ಪಕಾಲದಲ್ಲಿಯೇ ಗಂಡಾಂತರಕ್ಕೆ ಗುರಿಯಾಗಿದ್ದ ವಾರಂಗಲ್ ರಾಜ್ಯದೊಂದಿಗೆ ಮೈತ್ರಿಯನ್ನು ಬೆಳೆಸಿದನು. ಇದಕ್ಕೆ ಕಾರಣ ಬಹಮನಿ ಸುಲ್ತಾನ ಮಹಮ್ಮದ ಶಹನು ಕ್ರಿ.ಶ. 1358ರಲ್ಲಿ ತೆಲಂಗಾಣದ ಮುಖ್ಯ ಸ್ಥಳ ವಾರಂಗಲ್ ಮೇಲೆ ದಂಡೆತ್ತಿ ಹೋದನು. ಆಗ ಕಾಪಯ ನಾಯಕನ ಮಗ ವಿನಾಯಕ ದೇವನು ವಾರಂಗಲ್ ರಾಜ್ಯದ ಅಧಿಪತಿಯಾಗಿದ್ದನು. ಈ ಯುದ್ಧವು ಅನಿಶ್ಚಿತ ಸೋಲು ಗೆಲುವಿನ ಸ್ಥಿತಿಯಲ್ಲಿ ಕೆಲಕಾಲ ಮುಂದುವರಿಯಿತು. ಹಿಂದೂ ಸೈನ್ಯದವರು ಬಹಮನಿ ಆಕ್ರಮಣವನ್ನು ವಿರೋಧಿಸಿ ಆ ಸುಲ್ತಾನನಿಗೆ ಉಪದ್ರವ ಕೊಟ್ಟರು. ಆದರೆ ಕೊನೆಗೆ ಆತನು ಜಯಶಾಲಿಯಾಗಿ ಗೊಲ್ಕೊಂಡ ದುರ್ಗವು ಆತನಿಗೆ ವಶವಾಯಿತು.

ಬುಕ್ಕರಾಯನು ಮುಖ್ಯವಾಗಿ ಬಹಮನಿ ಅರಸರ ವಿರುದ್ಧ ಸುದೀರ್ಘ ಕಾಲದ ವರೆಗೆ ಘೋರ ಸಂಗ್ರಾಮದಲ್ಲಿ ತೊಡಗಬೇಕಾಯಿತು. ಈ ಯುದ್ಧವು ನಡುನಡುವೆ ಸ್ವಲ್ಪ ವಿರಾಮಹೊಂದುತ್ತ, ಕ್ರಿ.ಶ. 1366ರಿಂದ 1375ರ ವರೆಗೆ ಮುಂದುವರಿಯಿತು. ಇದು ಈ ಎರಡು ರಾಜ್ಯಗಳು ಪರಸ್ಪರವಾಗಿ ನಡೆಯಿಸಿದ ತಮ್ಮ ರಾಜಕೀಯ ಶಕ್ತಿಗಳ ಬಲಾಬಲ ಪರೀಕ್ಷೆಯೇ ಆಗಿತ್ತು,—ಎಂದು ವರ್ಣಿಸಬಹುದು. ಈ ರಾಜ್ಯಗಳ ಇಬ್ಬದಿಯ ಸೀಮಾರೇಖೆಗಳಂತಿದ್ದ ತುಂಗಭದ್ರೆ ಮತ್ತು ಕೃಷ್ಣೆ ಇವುಗಳ ನಡುವಿನ ಭೂಮಿಯ ಸ್ವಾಮ್ಯವೇ ಈ ಕದನಗಳ ಕೇಂದ್ರ ಉದ್ದೇಶವಾಗಿತ್ತು.

ಮೊದಲು ಮಹಮ್ಮದ ಶಹ ಅನಂತರ ಆತನ ಉತ್ತರಾಧಿಕಾರಿಯಾದ ಮುಜಾಹಿದ ಶಹ ಇವರು ಆಕ್ರಮಣಗಳನ್ನು ಹೂಡಿ ಆಯಕಟ್ಟಿನ ಸ್ಥಳಗಳಾದ ಮುದಗಲ್ ಮತ್ತು ಅದವಾನಿ ದುರ್ಗಗಳನ್ನು ಸ್ವಾಧೀನಪಡಿಸಿಕೊಳ್ಳಲು ಅತಿ ಸಾಹಸ ಗೈದರು. ಬಹಮನಿ ಅರಸರ ದಂಡುಗಳು ಹಲವು ಬಾರಿ ತುಂಗಭದ್ರೆಯ ವರೆಗೆ ನುಗ್ಗಿಬಂದು ವಿಜಯನಗರ ರಾಜಧಾನಿಯನ್ನು ಸೋಂಕಲು ಪ್ರಯತ್ನಿಸಿದವು. ಆದರೆ ಅವು ಕೊನೆಗೆ ಸೋತು ಹಿಮ್ಮೆಟ್ಟಿದವು.

ಈ ಸಮರದಲ್ಲಿ ನಡೆದ ನರಹತ್ಯೆ ಭೀಕರವಾಗಿತ್ತು. ಬಹಮನಿ ಸೈನಿಕರು ಕಾದಾಟದಲ್ಲಿ ತೊಡಗಿದ್ದ ದಂಡಾಳುಗಳನ್ನಲ್ಲದೆ ಸಮರಕ್ಕೆ ಸಂಬಂಧವಿಲ್ಲದ ನಿಷ್ಕಳಂಕ ನಿರುಪದ್ರವಿ ಪ್ರಜಾಜನರನ್ನು, ಸ್ತ್ರೀ-ಬಾಲಕರನ್ನು ಸಹ ಬಿಡದೆ ಕ್ರೂರತನದಿಂದ ಸಂಹಾರಗೆಯ್ಯುತ್ತಿದ್ದರು. ಈ ಕಗ್ಗೊಲೆಯನ್ನು ಕಂಡು ಕಳವಳಗೊಂಡ ಬುಕ್ಕರಾಯನು ಇನ್ನು ಮುಂದೆ ಈ ಪರಿಯಲ್ಲಿ ಯುದ್ಧಾಸಕ್ತರಲ್ಲದವರನ್ನು ವಧೆ ಮಾಡಬಾರದೆಂದು ಬಹಮನಿ ರಾಜ್ಯದ ಪ್ರಮುಖರಿಗೆ ವಿನಂತಿ ಮಾಡಿದನು. ಈ ನಿಯಮವನ್ನು ಇಬ್ಬಣದವರೂ ಕಟ್ಟುನಿಟ್ಟಾಗಿ ಪಾಲಿಸಬೇಕೆಂದು ಒಡಂಬಡಿಕೆ ಆಯಿತು.

**ಶಾಂತಿ–ಸುವ್ಯವಸ್ಥೆ**

ಈ ರೀತಿಯ ಕಳವಳಕಾರಕ ಘಟನೆಗಳಿಂದ ವ್ಯಗ್ರತೆಯನ್ನು ಹೊಂದುವ ಮನಸ್ಥಿತಿಯಲ್ಲಿ ಇರಬೇಕಾದ ಕಾಲದಲ್ಲಿಯೂ ಬುಕ್ಕರಾಯನು ರಚನಾತ್ಮಕ ಕಾರ್ಯಗಳತ್ತ ಲಕ್ಷ್ಯವನ್ನು ಪೂರೈಸಲು ಸಮರ್ಥನಾಗಿದ್ದನು. ಅದು ಹೀಗೆ: ಆತನು ವಿಜಯನಗರ ರಾಜಧಾನಿಯನ್ನು ಬಹುವಾಗಿ ವಿಸ್ತೀರ್ಣಗೊಳಿಸಿದನು. ಅದಕ್ಕೆ ಸುಭದ್ರತೆಯನ್ನು ತಂದನು. ಅದರ ಭವ್ಯತೆಯನ್ನು, ರಮಣೀಯತೆಯನ್ನು ಹೆಚ್ಚಿಸಿದನು. ಈ ಯೋಜನೆಗೆ ಅನುಗುಣವಾಗಿ ಸುತ್ತುಕೋಟೆಗಳನ್ನು, ಕೊತ್ತಳಗಳನ್ನು ವಿಸ್ತರಿಸಿದನು. ರಾಜ ಪರಿವಾರದವರ, ಅಧಿಕಾರಿಗಳ, ಆಡಳಿತದವರ, ಸೌಧಗಳನ್ನು ನಿರ್ಮಿಸಿದನು. ನಾಗರಿಕರ ನಿವಾಸಗಳು ಊರ್ಜಿತವಾಗುವಂತೆ ಪ್ರೋತ್ಸಾಹವಿತ್ತನು. ಸಾಮ್ರಾಜ್ಯದ ನಾನಾ ಪ್ರದೇಶಗಳ ಆಡಳಿತದಲ್ಲಿ ದಕ್ಷತೆಯನ್ನು ಕಾರ್ಯ ಕ್ಷಮತೆಯನ್ನು ರೂಢಿಸಲು ರಾಜಕುಮಾರರನ್ನು, ವಿಶ್ವಸನೀಯ ಅಧಿಕಾರಿಗಳನ್ನು ನೇಮಕ ಮಾಡಿದನು.

ಕೃಷ್ಣೆಯಿಂದ ರಾಮೇಶ್ವರದ ವರೆಗೆ ವಿಶಾಲವಾದ ದಕ್ಷಿಣ ಭಾರತದ ಭೂಭಾಗವನ್ನು ವ್ಯಾಪಿಸಿ ಕೊಂಡಿದ್ದ ವಿಜಯನಗರದ ಸಾಮ್ರಾಜ್ಯದಲ್ಲಿ ಶಾಂತಿ ಸಮೃದ್ಧಿಗಳು ನೆಲೆಗೊಂಡವು. ಈ ಸಾಮ್ರಾಜ್ಯದ ಆಧಿಪತ್ಯದಲ್ಲಿ ಸುದೀರ್ಘವಾದ ಪಶ್ಚಿಮಸಾಗರದ ಕರಾವಳಿ ಪ್ರದೇಶವು, ಗೋವೆಯಂಥ ರೇವು ಪಟ್ಟಣವು, ದುರ್ಗಗಳ ಸಂರಕ್ಷಣೆ ಪಡೆದು ಅಜೇಯವೆನಿಸಿದ ಬೆಳಗಾವಿಯಂತಹ ನಗರಗಳು, ಸ್ವಾಮಿನಿಷ್ಠ, ಸುಸಂತುಷ್ಟ, ವಿಪುಲ ಜನವರ್ಗಗಳಿಂದ ಪರಿಪುಷ್ಟವಾದ ಗ್ರಾಮ ನಗರಗಳು ಸೊಬಗುಗೊಂಡಿದ್ದವು. ಲಂಕಾದ್ವೀಪದ ನರೇಂದ್ರನು, ನೆರೆಯ ರಾಜ್ಯಗಳ ಭೂಪಾಲರು, ವಿಜಯನಗರದ ಅಧಿರಾಜನಿಗೆ ತಮ್ಮ ಕಪ್ಪ ಕಾಣಿಕೆಗಳನ್ನು ಸಲ್ಲಿಸುತ್ತಿದ್ದರು; ರಾಯಭಾರಿಗಳನ್ನು ಕಳುಹುತ್ತಿದ್ದರು. ಬುಕ್ಕರಾಯನು ಕ್ರಿ.ಶ. 1374 ರಲ್ಲಿ ಚೀನಾ ದೇಶಕ್ಕೆ ರಾಯಭಾರವನ್ನು ಕಳುಹಿದನೆಂದು ಆ ದೇಶದಲ್ಲಿ ಆಳಿದ ಮಿಂಗ ರಾಜ ಮನೆತನದ ಚರಿತ್ರೆಯಿಂದ ತಿಳಿದು ಬರುತ್ತದೆ.

**ಜೈನ-ರಾಮಾನುಜ ಒಡಂಬಡಿಕೆ**

ರಾಜಕೀಯದಂತೆ ಧಾರ್ಮಿಕ, ಸಾಮಾಜಿಕ ರಂಗದಲ್ಲಿಯೂ ಅತ್ಯಂತ ಸ್ಮರಣೀಯವಾದ ಒಂದು ಘಟನೆ ಈ ಆಳಿಕೆಯಲ್ಲಿ ಸಂಭವಿಸಿತು. ಅದು ಜೈನ-ರಾಮಾನುಜರ ಒಡಂಬಡಿಕೆ. ತಮ್ಮ ತಮ್ಮ ಧರ್ಮ ಮತ್ತು ಮತಗಳಿಗೆ ಸಂಬಂಧಿಸಿದ ಆಚಾರ ಸಂಪ್ರದಾಯಗಳ ನಡವಳಿಕೆಯ ವಿಚಾರದಲ್ಲಿ, ಜೈನ ಮತ್ತು ರಾಮಾನುಜ ಅಥವಾ ಶ್ರೀ ವೈಷ್ಣವ—ಈ ಪಂಗಡಗಳ ಜನಗಳಲ್ಲಿ ವಿವಾದವು ಹುಟ್ಟಿ ವಿಕೋಪಕ್ಕೆ ಹೋಯಿತು. ಅಲ್ಪ ಸಂಖ್ಯಾಕರಾಗಿದ್ದ ಜೈನರು ತಮಗಾಗುತ್ತಿರುವ ಅನ್ಯಾಯಗಳ ವಿರುದ್ಧವಾಗಿ ಬುಕ್ಕರಾಯನಿಗೆ ದೂರಿಕೊಂಡರು. ಬುಕ್ಕರಾಯನು ತನ್ನ ಆಸ್ಥಾನಕ್ಕೆ ಎರಡೂ ಪಂಗಡಗಳ ಮುಖ್ಯಸ್ಥ ಪ್ರತಿನಿಧಿಗಳನ್ನು ಮತ್ತು ಸಾರ್ವಜನಿಕರನ್ನು ಬರಮಾಡಿಕೊಂಡನು. ವಿವಾದದ ಕಾರಣಗಳನ್ನು ಅರಿತುಕೊಂಡನು. ಕೊನೆಗೆ ಈ ವ್ಯಾಜ್ಯದಲ್ಲಿ ತನ್ನ ತೀರ್ಪು ಏನೆಂಬುದನ್ನು ಘೋಷಿಸಿದನು. ಇದನ್ನು ಜೈನ-ರಾಮಾನುಜ ವ್ಯಾಜ್ಯ ನಿರ್ಣಯ, ಇಲ್ಲವೆ ಜೈನ-ರಾಮಾನುಜ ಒಡಂಬಡಿಕೆಯ ತೀರ್ಮಾನ, ಎಂದು ಹೇಳಬಹುದು. ಈ ತೀರ್ಮಾನದಲ್ಲಿ ಅಲ್ಪ ಸಂಖ್ಯಾಕ ನಾಗರಿಕರ ಹಿತಸಂಬಂಧಗಳನ್ನು ಸಂರಕ್ಷಿಸುವ ಹೊಣೆ ಬಹುಸಂಖ್ಯಾಕ ನಾಗರಿಕರದಾಗಿದೆ ಎಂದು ನಿರೂಪಿಸಿದೆ.

ಈ ತೀರ್ಮಾನವು ಸರ್ವಸಾಮಾನ್ಯವಾಗಿ ನಾಗರಿಕರ ಹಕ್ಕು ಬಾಧ್ಯತೆಗಳನ್ನು ನಿರ್ಧರಿಸುವ ಒಂದು ಮಹತ್ವದ ರಾಜಶಾಸನದ ಸ್ವರೂಪವನ್ನು ಹೊಂದಿದೆ. ಇದು ಬಹುಸಂಖ್ಯಾಕರಾಗಿದ್ದ ನಾಗರಿಕರು ಅಲ್ಪಸಂಖ್ಯಾಕರಾದ ನಾಗರಿಕರ ಹಿತಸಂಬಂಧಗಳ ಮೇಲೆ ಆಕ್ರಮಣ ನಡೆಯಿಸುವದನ್ನು ನಿರ್ಬಂಧಿಸುತ್ತದೆ.

ಅಲ್ಪಸಂಖ್ಯಾಕರ ಹಕ್ಕು ಬಾಧ್ಯತೆಗಳನ್ನು ಸಂರಕ್ಷಿಸುತ್ತದೆ. ಈ ತೀರ್ಪಿನ ಪ್ರಭಾವದಿಂದಾಗಿ ವಿಜಯನಗರ ಸಾಮ್ರಾಜ್ಯದ ನಾನಾ ಪ್ರಜೆಗಳಲ್ಲಿ ಪರಸ್ಪರ ವಿರಸ, ವಿತುಷ್ಟಿಗಳು ನಂದಿ, ಸೌಹಾರ್ದ ಮೈತ್ರಿಭಾವವು ಕುದುರಲು ಅನುಕೂಲ ವಾತಾವರಣವು ನಿರ್ಮಾಣವಾಯಿತು.

ಬುಕ್ಕರಾಯನು ನಿರ್ಧಾರದಿಂದ, ದೂರ ದೃಷ್ಟಿಯಿಂದ ಪ್ರಚುರಗೊಳಿಸಿದ ಈ ನಿರ್ಣಾಯಕ ಶಾಸನವು ವಿಜಯನಗರ ಸಾಮ್ರಾಜ್ಯವನ್ನು, ಆ ಸಾಮ್ರಾಜ್ಯದಲ್ಲಿ ಬಾಳಿದ್ದ ವಿವಿಧ, ವಿಸ್ತೃತ ಜನ ವರ್ಗವನ್ನು ವಿಭಜನೆಯ ಬಾಧೆಯಿಂದ, ಛಿದ್ರೀಕರಣದ ಅನರ್ಥದಿಂದ ಕಾಪಾಡಿತು. ಈ ತೀರ್ಮಾನವನ್ನು ಆತನು ಕಾರ್ಯಗತಗೊಳಿಸದೆ ಇದ್ದರೆ ನಾನಾವರ್ಣ, ಜಾತಿ, ಧರ್ಮ, ಪಂಥ, ಪಂಗಡಗಳ ವಿಷಮತೆಯಿಂದಾಗಿ ಹರಿದು ಹಂಚಿಹೋಗಿದ್ದ ಹಿಂದೂಸಮಾಜವು ತುಂಡು ತುಂಡಾಗುವ ಗಂಡಾಂತರಕ್ಕೆ ಗುರಿಯಾಗಬಹುದಿತ್ತು. ಬುಕ್ಕರಾಯನು ತೋರಿದ ಈ ಜಾಣ್ಮೆಯ ಸತ್ಪಥವನ್ನು ಅನುಸರಿಸಿ, ವಿಜಯನಗರದ ಮುಂದಿನ ರಾಜರೆಲ್ಲರೂ ವರ್ತಿಸಿದರು. ಅವರು ಧರ್ಮ ಪಂಥಗಳ ಸಂಕುಚಿತ ಭೇದಭಾವಗಳನ್ನು ಎಣಿಸಲಿಲ್ಲ. ತಮ್ಮ ಸಾಮ್ರಾಜ್ಯದ ಪ್ರಜಾಜನರಾಗಿ ನೆಲಸಿದ್ದ ಮುಸ್ಲಿಮ್, ಕ್ರೈಸ್ತರಂತಹ ಪರಧರ್ಮೀಯರ ವಿಷಯದಲ್ಲಿಯೂ ಸ್ವಧರ್ಮೀಯರಂತೆ ಸಮಭಾವನೆಯನ್ನು ತಳೆದು ಅವರಿಗೆ ನ್ಯಾಯವಾದ ಹಕ್ಕುಗಳನ್ನು, ಸೌಲಭ್ಯಗಳನ್ನು ಕಲ್ಪಿಸಿಕೊಟ್ಟರು.

### ವೇದಭಾಷ್ಯ ರಚನೆ

ಈ ಯುಗದ ಇನ್ನೊಂದು ಮಹಾಸಾಧನೆಯ ಶ್ರೇಯಸ್ಸು ಬುಕ್ಕರಾಯನಿಗೆ ಸಲ್ಲುತ್ತದೆ. ಇದು ಸಮಗ್ರ ವೇದ ಸಂಹಿತೆಗಳ ಮೇಲೆ ಭಾಷ್ಯರಚನೆ. ಸಾಯಣಾಚಾರ್ಯ ಮತ್ತು ಅವರ ಸಹೋದರ ಮಾಧವಾಚಾರ್ಯ—ಈ ಮಹಾವಿದ್ವಾಂಸರ ಧುರೀಣತ್ವದಲ್ಲಿ ಅನ್ಯಪಂಡಿತರ ಸಹಕಾರದಿಂದ ಈ ಯೋಜನೆಯನ್ನು ಕ್ರಿ.ಶ.ಸು. 1360ರಲ್ಲಿ ಪ್ರಾರಂಭಿಸಲಾಯಿತು. ಮುಂದೆ ಸುಮಾರು ಎರಡು ದಶಕಗಳ ಅವಧಿಯಲ್ಲಿ ಅದು ಪೂರ್ತಿಗೊಂಡಿತು. ಇದರಿಂದ ದುರ್ಬೋಧವಾಗಿದ್ದ ವೇದಗ್ರಂಥಗಳ ಅಧ್ಯಯನವು ಅಭ್ಯಾಸಗಳಿಗೆ ಸುಕರವಾಯಿತು. ಇದಕ್ಕಾಗಿ ವೈದಿಕ ಸಂಸ್ಕೃತಿಯ ಜ್ಞಾನಭಾಂಡಾಗಾರಕ್ಕೆ ತಾನು ನೀಡಿದ ಈ ಅಮೋಘ ಕೊಡುಗೆಯ ಸ್ಮಾರಕವೆಂಬಂತೆ ಬುಕ್ಕರಾಯನಿಗೆ 'ವೈದಿಕ ಮಾರ್ಗ ಪ್ರವರ್ತಕ' ಎಂಬ ಘನತೆಯ ಪ್ರಶಸ್ತಿ ಸಲ್ಲುವಂತಾಯಿತು.

ಈ ಆಳಿಕೆಯಲ್ಲಿ ಕನ್ನಡ ಸಾಹಿತ್ಯವು ಪ್ರೋತ್ಸಾಹ ಪುರಸ್ಕಾರ ಪಡೆಯಿತು. ವೀರಶೈವ, ಜೈನ ಮತ್ತು ಇತರ ಗ್ರಂಥಕಾರರ ಕೃತಿಗಳ ರಚನೆಯಿಂದ ಕನ್ನಡ ಸಾಹಿತ್ಯವು ಸತ್ವಶಾಲಿಯಾಯಿತು. ಈ ವಿಧ ದಿಂದ ವಿವಿಧ ಸ್ವರೂಪದ ಅನೇಕ ರಚನಾತ್ಮಕ ಕಾರ್ಯಸಾಧನೆಗಳಿಂದ ಬುಕ್ಕರಾಯನ ಆಳಿಕೆ ಧರ್ಮ, ಸಾಹಿತ್ಯ, ವಿದ್ಯೆ, ಕಲೆ, ಶಿಲ್ಪ, ಮೊದಲಾದ ಸಾಂಸ್ಕೃತಿಕ ಪ್ರಪಂಚದಲ್ಲಿ ನವೋದಯ ಮತ್ತು ನವ ಚೈತನ್ಯವನ್ನು ಸೃಷ್ಟಿಸಿ, ಜನಾಂಗದ ಉತ್ಕರ್ಷಪರ ರಾಜಮಾರ್ಗದ ಬಾಗಿಲನ್ನೇ ತೆರೆದು ತೋರಿಸಿತು.

ಭಾರತದ ಚರಿತ್ರೆಯಲ್ಲಿ ಅಗ್ರೇಸರರಾದ ಮಹಾನರೇಂದ್ರರ ಪಂಕ್ತಿಯಲ್ಲಿ ಹಿರಿಮೆಯ ಸ್ಥಾನವು ಬುಕ್ಕರಾಯನಿಗೆ ಸಲ್ಲುತ್ತದೆ. ಈತನು ವೀರಾಧಿವೀರನು, ದೂರದರ್ಶಿ ರಾಜನೀತಿಜ್ಞನು, ಪ್ರಗತಿಶೀಲನು ಆಗಿದ್ದನು, ವಿಜಯನಗರ ಸಾಮ್ರಾಜ್ಯ ಮಂದಿರವನ್ನು ನಿರ್ಮಿಸಿದ ಮಹಾಶಿಲ್ಪಿ ಈತನು. ಈತನ ಅಸಾಧಾರಣ ವ್ಯಕ್ತಿತ್ವದಿಂದ ಜನತೆಯಲ್ಲಿ, ಜನನಾಯಕರಲ್ಲಿ ಬಲ, ಉತ್ಸಾಹ, ಚೈತನ್ಯವು ಸ್ಫುರಣ ಗೊಂಡವು. ಈ ಸ್ಫೂರ್ತಿಯ ಪ್ರವಾಹವು ಮುಂದೆ ಎರಡು ಶತಮಾನಗಳಷ್ಟು ದೀರ್ಘಕಾಲ ಸಾಮರ್ಥ್ಯ

ದಿಂದ ಮುಂದುವರಿದು, ವಿಜಯನಗರ ಸಾಮ್ರಾಜ್ಯವನ್ನು ಅಭ್ಯುದಯದ, ಉತ್ಕರ್ಷದ ಪ್ರಗತಿ ಪಥದಲ್ಲಿ ಮುನ್ನಡೆಯಿಸಿಕೊಂಡು ಹೋಯಿತು.

### ಇಮ್ಮಡಿ ಹರಿಹರರಾಯ

ಒಂದನೆಯ ಬುಕ್ಕರಾಯನ ಅನಂತರ ಆತನ ಮಗನೂ ಉತ್ತರಾಧಿಕಾರಿಯೂ ಆಗಿದ್ದ ಇಮ್ಮಡಿ ಹರಿಹರ ರಾಯನು ಕ್ರಿ. ಶ. 1377 ರಿಂದ 1404ರ ವರೆಗೆ 27 ವರ್ಷ ರಾಜ್ಯಭಾರ ಮಾಡಿದನು. ಈತನ ಆಳಿಕೆ ಬಹುತರ ನಿರಾತಂಕವಾಗಿ ಶಾಂತಿಯಿಂದ ಸಾಗಿತು. ಇದರಿಂದ ವಿಜಯನಗರದ ಸರ್ವತೋಮುಖ ಅಭಿವೃದ್ಧಿಗೆ ಹೆಚ್ಚಿನ ಸಹಾಯವು ಉಂಟಾಯಿತು. ಅಲ್ಲಲ್ಲಿ ಕೆಲವು ಸ್ಥಳೀಯ ಗಲಭೆಗಳೇನೋ ಸಂಭವಿಸಿದವು. ಆದರೆ ಅವುಗಳನ್ನು ಪ್ರಧಾನ ಪ್ರಾಂತಗಳ ಮೇಲಧಿಕಾರಿಗಳಾಗಿದ್ದ ಈತನ ಮೂವರು ಪ್ರಬುದ್ಧ ಮಕ್ಕಳು ಬುಕ್ಕರಾಯ, ವಿರೂಪಾಕ್ಷ, ಮತ್ತು ದೇವರಾಯ—ಇವರು ಸಮರ್ಥ ರೀತಿಯಿಂದ ಹತ್ತಿಕ್ಕಿದರು. ವಿರೂಪಾಕ್ಷನು ಲಂಕಾದ್ವೀಪದ ಮೇಲೆ ದಂಡಯಾತ್ರೆ ಮಾಡಿ ಅಲ್ಲಿಯ ರಾಜನು ವಿಜಯ ನಗರಕ್ಕೆ ಕಪ್ಪವನ್ನು ಕೊಡುವಂತೆ ಮಾಡಿದನು. ಬಹಮನಿಸುಲ್ತಾನ ಎರಡನೆಯ ಮಹಮ್ಮದಶಹ, ಅನಂತರ ಆತನ ಉತ್ತರಾಧಿಕಾರಿಯಾದ ಫಿರೋಜಶಹ ಇವರು ಹಲವು ಬಾರಿ ವಿಜಯನಗರದ ಮೇಲೆ ದಂಡೆತ್ತಿ ಬಂದರು. ಆದರೆ ಅವರ ದಾಳಿಗಳು ಯಾವ ಪಕ್ಷಕ್ಕೂ ಲಾಭವನ್ನೇನೂ ತಾರದೆ ಕಿರಕುಳ ನಷ್ಟ, ಹಾನಿಯನ್ನು ಮಾಡಿದವು.

ಹರಿಹರರಾಯನು ಅರ್ಹ ಮಂತ್ರಿಗಳನ್ನು, ಸಮರ್ಥ ದಂಡನಾಯಕರನ್ನು, ನಿಷ್ಠ ಆಡಳಿತ ಅಧಿಕಾರಿಗಳನ್ನು ಪಡೆದಿದ್ದನು. ಇವರು ದಕ್ಷ ಶಾಸನವನ್ನು ಅಳವಡಿಸಿ ಜನತಾಕಲ್ಯಾಣ ಕಾರಕ, ರಚನಾತ್ಮಕ ಕಾರ್ಯಗಳನ್ನು ನೆರವೇರಿಸಲು ಬಹುವಾಗಿ ಸಹಾಯ ನೀಡಿದರು. ಇಂತಹರಲ್ಲಿ ಮುದ್ದಪ್ಪನೆಂಬ ಮಂತ್ರಿ ಪ್ರಮುಖನು. ಈತನು ಪ್ರಜೆಗಳಿಗೆ ಸುಖ ಸೌಕರ್ಯಗಳನ್ನು ಒದಗಿಸಲು ಶ್ರಮಿಸಿದನು. ಕೃಷಿ ಉತ್ಪಾದನೆ ಯನ್ನು ಹೆಚ್ಚಿಸಿ, ವ್ಯಾಪಾರಾಭಿವೃದ್ಧಿಯನ್ನು ಸಾಧಿಸಿ, ಜನಗಳ ಆರ್ಥಿಕ ಸ್ಥಿತಿಯನ್ನು ಸುಧಾರಿಸಿದನು. ಹೊಳೆಗಳಿಗೆ ಕಾಲುವೆಗಳನ್ನು ತೋಡಿಸಿ ಮತ್ತು ಕೆರೆಗಳನ್ನು ಕಟ್ಟಿಸಿ, ನೀರಾವರಿ ಸೌಕರ್ಯಗಳನ್ನು ದೊರಕಿಸಿಕೊಟ್ಟನು. ಇಂತಹವುಗಳಲ್ಲಿ ಹೊನ್ನೆಹೊಳೆಯಿಂದ ಪೆನುಗೊಂಡದ ವರೆಗೆ ತೋಡಿಸಿದ ಕಾಲುವೆ ಹೆಸರುವೆತ್ತಿದೆ. ಇದನ್ನು ಸಿಂಗಮ ಭಟ್ಟ ಎಂಬ ಜಲಯಂತ್ರ ವಿಶಾರದನು ಯುವರಾಜ ಇಮ್ಮಡಿ ಬುಕ್ಕ ರಾಜನ ಆದೇಶದಂತೆ ಸಿದ್ಧಪಡಿಸಿದನು.

ಹರಿಹರರಾಯನ ಆಳಿಕೆಯಲ್ಲಿಯೂ, ಹಿಂದಿನ ಆಳಿಕೆಯಂತೆ ಸಾಂಸ್ಕೃತಿಕ ಕಾರ್ಯಗಳಿಗೆ ಪೋಷಣೆ ಪ್ರೋತ್ಸಾಹಗಳು ದೊರೆತವು. ವೇದಗಳ ಮೇಲಿನ ಭಾಷ್ಯಗಳ ರಚನೆಯ ಯೋಜನೆ ಕ್ರಿ.ಶ. 1380ರಲ್ಲಿ ಪೂರ್ತಿಗೊಂಡಿತು. ಈ ಸಾಧನೆಯ ಮೂಲಕ ಹರಿಹರರಾಯನಿಗೆ ' ವೇದಮಾರ್ಗ ಸ್ಥಾಪನಾಚಾರ್ಯ ' ಎಂಬ ಪ್ರಶಸ್ತಿ ಪ್ರಾಪ್ತವಾಯಿತು. ಸಂಸ್ಕೃತದ ಜೊತೆಗೆ ಜೈನ, ವೀರಶೈವ ಮತ್ತು ಇತರ ಮತೀಯ ಲೇಖಕರಿಂದ ರಚನೆಯಾದ ಕನ್ನಡ ಸಾಹಿತ್ಯ ಕೃತಿಗಳು ಊರ್ಜಿತವಾದವು. ಈ ರಾಯನ ಕನ್ನಡ ಪ್ರೇಮದ ದ್ಯೋತಕವಾಗಿ ' ಕರ್ಣಾಟಕ–ವಿದ್ಯಾವಿಲಾಸ ' ಎಂಬ ಪ್ರಶಸ್ತಿ ಈತನಿಗೆ ಒಪ್ಪುವಂತಾಯಿತು.

### ಒಂದನೆಯ ದೇವರಾಯ

ಹರಿಹರರಾಯನ ನಿಧನಾನಂತರ ಆತನ ಪುತ್ರರಲ್ಲಿ ಸಿಂಹಾಸನಕ್ಕಾಗಿ ಸ್ಪರ್ಧೆ ನಡೆಯಿತು. ಇದರಲ್ಲಿ ರಾಜಕುಮಾರ ಒಂದನೆಯ ದೇವರಾಯನು ಜಯಶಾಲಿಯಾಗಿ ಕ್ರಿ.ಶ. 1406ರಿಂದ ತನ್ನ ಆಳಿಕೆಯನ್ನು

ಆರಂಭಿಸಿದನು. ಈ ರಾಯನು ಬಲಿಷ್ಠನು, ಕಾರ್ಯಶಾಲಿಯೂ ಆಗಿದ್ದನು. ಈತನು ತಂದೆಯಂತೆ ದಕ್ಷತೆಯಿಂದ ರಾಜ್ಯಭಾರ ಮಾಡಿದನು.

ದೇವರಾಯನು ಬಹಮನಿ ಸುಲ್ತಾನ ಫಿರೋಜಶಹನೊಂದಿಗೆ ಎರಡು ಬಾರಿ ಕದನದ ಕಣದಲ್ಲಿ ಇಳಿದನು. ಒಂದನೆಯ ಯುದ್ಧವು ದೇವರಾಯನ ರಾಜ್ಯಾರೋಹಣದ ವರ್ಷವೇ ಕ್ರಿ.ಶ.ಸು. 1406ರಲ್ಲಿ ಪ್ರಾರಂಭವಾಯಿತು. ಶಹನು ಮುದಗಲ್ ಕೋಟೆಯನ್ನು ವಶಪಡಿಸಿಕೊಂಡನು. ಆದರೆ ಅದನ್ನು ಸ್ವಾಧೀನದಲ್ಲಿ ಇಟ್ಟುಕೊಳ್ಳುವ ಆತನ ಸಾಹಸವು ವಿಫಲವಾಯಿತು. ಇದರಿಂದ ರೊಚ್ಚಿಗೆದ್ದ ಶಹನು ಸೇಡುತೀರಿಸಿಕೊಳ್ಳುವ ಉದ್ದೇಶದಿಂದ ವಿಜಯನಗರ ಪ್ರದೇಶದಲ್ಲಿ ನುಗ್ಗಿದನು. ಬಂಕಾಪುರದ ಆಯಕಟ್ಟಿನ ಕೋಟೆಯನ್ನು ಗೆದ್ದು ತನ್ನ ರಾಜ್ಯಕ್ಕೇ ಸೇರಿಸಿಕೊಂಡನು. ಮುಂದೆ ಆತನು ಆದವಾನಿ ದುರ್ಗದ ಮೇಲೆ ದಂಡೆತ್ತಿಬಂದು ಸೋತನು.

ಎರಡನೆಯ ಯುದ್ಧವು ಕ್ರಿ. ಶ. 1415 ರಿಂದ 1419ರ ವರೆಗೆ ನಾಲ್ಕು ವರ್ಷ ಮುಂದುವರಿಯಿತು. ಇದು ಎರಡು ರಾಜ್ಯಗಳ ನಡುವೆ ಆಂಧ್ರಪ್ರದೇಶದ ಸ್ವಾಮಿತ್ವದ ದೆಸೆಯಿಂದ ಹೂಡಿದ ಸ್ಪರ್ಧೆಯಾಗಿತ್ತು. ಈ ಸಮರದಲ್ಲಿ ಮೊದಮೊದಲು ಬಹಮನಿ ಸುಲ್ತಾನನಿಗೆ ಕೆಲಮಟ್ಟಿಗೆ ಲಾಭವೂ ದೊರೆತಂತಾಯಿತು. ಆದರೆ ಅನಂತರ ವಿಜಯನಗರದ ಸೈನಿಕರ ಕೈ ಮೇಲಾಯಿತು. ಅವರು ಅತಿ ಸಾಹಸದಿಂದ ತೆಲುಗು ಸೀಮೆಯಲ್ಲಿ ಭದ್ರವಾದ ಪಾನಗಲ್ ಕೋಟೆಯನ್ನು ಜಯಿಸಿದರು. ಮುಂದೆ ವೈರಿಯನ್ನು ಆತನ ರಾಜ್ಯದ ಅಂತರ್‌ಭಾಗದಲ್ಲಿ ಬೆನ್ನಟ್ಟಿಕೊಂಡು ಹೋದರು. ಘೋರವಾದ ಈ ಪರಾಜಯದ ಆಘಾತವನ್ನು ಸಹಿಸದಾದ ಫಿರೋಜ ಶಹನು ಎದೆಯೊಡೆದುಕೊಂಡು ಕ್ರಿ.ಶ. 1422ರಲ್ಲಿ ಅಸುನೀಗಿದನು. ಈ ಸಮರದ ಫಲಿತಾಂಶವೇನೆಂದರೆ ಕೃಷ್ಣಾ, ತುಂಗಭದ್ರಾನದಿಗಳ, ಮಧ್ಯ ಭೂಮಿಯ ಮೇಲೆ ವಿಜಯನಗರದ ಪ್ರಭುತ್ವವು ಸ್ಥಾಪನೆಯಾಯಿತು.

ದೇವರಾಯನು ರಚನಾತ್ಮಕ ಕಾರ್ಯಗಳನ್ನೂ ನೆರವೇರಿಸಿದನು. ಇವುಗಳಲ್ಲಿ ಮುಖ್ಯವಾದುದು ವಿಜಯನಗರ ರಾಜಧಾನಿಯ ವಿಕಾಸ, ವಿಸ್ತಾರ. ಈತನು ಕೋಟೆ ಕೊತ್ತಳಗಳನ್ನು ವಿಸ್ತಾರಗೊಳಿಸಿ ಈ ನಗರಿಗೆ ಸುಭದ್ರತೆಯನ್ನು ಒದಗಿಸಿದನು. ಅನೇಕ ಕಲಾತ್ಮಕ ಮಂದಿರಗಳನ್ನು ನಿರ್ಮಿಸಿ ಅದರ ಶೋಭೆಯನ್ನು ಹೆಚ್ಚಿಸಿದನು. ಈ ರಾಯನು ತುಂಗಭದ್ರಾನದಿಗೆ ವಿಸ್ತೀರ್ಣವಾದ ಅಣೆಕಟ್ಟನ್ನು ಸ್ಥಾಪಿಸಿ ಹದಿನೈದು ಮೈಲು ಉದ್ದನೆಯ ಕಾಲುವೆಯನ್ನು ತೋಡಿಸಿ ರಾಜಧಾನಿಗೆ ನಿರಂತರ ನೀರಿನ ಸೌಲಭ್ಯವನ್ನು ದೊರಕಿಸಿ ಕೊಟ್ಟನು. ಈ ಬೃಹತ್ ಕಾಲುವೆಯಿಂದ ಆ ಮಹಾನಗರಿಗೆ ವಿಪುಲವಾಗಿ ಜಲಸೌಕರ್ಯವು ಉಂಟಾಯಿತು. ಈ ಕಾಲುವೆ ನೀರಾವರಿಗೂ ಉಪಯೋಗಿಸಲ್ಪಟ್ಟು ತೋಟ, ಗದ್ದೆ, ಕೃಷಿ, ಬೇಸಾಯದ ಕಾರ್ಯಗಳು ಪ್ರಗತಿಯನ್ನು ಹೊಂದಿದವು.

### ಇಮ್ಮಡಿ ದೇವರಾಯ

ಒಂದನೆಯ ದೇವರಾಯನು ಕ್ರಿ.ಶ. 1422ರಲ್ಲಿ ನಿಧನ ಹೊಂದಿದನು. ಅನಂತರ ಆತನ ಮಗ ವೀರ ವಿಜಯರಾಯನು ಎರಡು ವರ್ಷ ರಾಜ್ಯಭಾರ ಮಾಡಿದನು. ಬಳಿಕ ಆತನ ಪುತ್ರ ಇಮ್ಮಡಿ ದೇವರಾಯನು ಕ್ರಿ. ಶ. (1424-46) ಪಟ್ಟವೇರಿದನು. ಈತನು ಪ್ರೌಢದೇವರಾಯನೆಂದು ಹೆಚ್ಚು ಪರಿಚಿತನಾಗಿರುವನು. ಈತನಿಗೆ ಹಲವು ಬಿರುದುಗಳಿದ್ದವು. ಅವುಗಳಲ್ಲಿ 'ಗಜಬೇಟೆಕಾರ' ಎಂಬುದು ವಿಶಿಷ್ಟವಾದುದು. ಈ ಬಿರುದು ಈತನಿಗಿದ್ದ, ಆನೆಗಳ ಬೇಟೆಯಾಡುವ ಆಸಕ್ತಿಯ ದ್ಯೋತಕವಾಗಿದೆ.

ಈ ದೇವರಾಯನ ಆಳಿಕೆಯಲ್ಲಿ ಸೈನಿಕ, ರಾಜಕೀಯ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸಂಸ್ಮರಣೀಯ ಘಟನೆಗಳು ನಡೆದವು. ಈ ಆಳಿಕೆ ವಿಜಯನಗರದ ಚರಿತ್ರೆಯಲ್ಲಿ ವೈಭವೋಪೇತಕಾಲಗಳಲ್ಲಿ ಒಂದಾಗಿದೆ.

ಈ ದೇವರಾಯನು ಇನ್ನೂ ಯುವರಾಜನಾಗಿರುವಾಗಲೇ ತನ್ನ ವೀರತನವನ್ನು ಪ್ರದರ್ಶಿಸಿದನು. ಹಿಂದಿನ ಫಿರೋಜಶಹನ ಆಳಿಕೆಯಲ್ಲಿ ವಿಜಯನಗರದ ಮೂಲಕ ಸಂಭವಿಸಿದ್ದ ಕ್ಲೇಶಕಾರಕ ಪರಾಭವದ ಸೇಡನ್ನು ತೀರಿಸಲು ಆತನ ಉತ್ತರಾಧಿಕಾರಿಯಾದ ಬಹಮನಿ ಅಹಮ್ಮದಶಹ ವಿಜಯನಗರದ ಮೇಲೆ ದಾಳಿ ಮಾಡಿದನು. ಅದನ್ನು ಯುವರಾಜ ದೇವರಾಯನು ವಿರೋಧಿಸಿ ಹಿಂದಕ್ಕೆ ಅಟ್ಟಿದನು. ಇದೇ ಕಾಲಕ್ಕೆ ಬಹಮನಿ ರಾಜ್ಯದ ರಾಜಧಾನಿಯನ್ನು ಗುಲ್ಬರ್ಗದಿಂದ ಉತ್ತರಕ್ಕೆ ಸಾಕಷ್ಟು ದೂರದಲ್ಲಿದ್ದ ಬೀದರಕ್ಕೆ ಸ್ಥಳಾಂತರಪಡಿಸಲಾಯಿತು.

ಮೇಲಿಂದ ಮೇಲೆ ನಡೆಯುತ್ತಿದ್ದ ಬಹಮನಿ ಸುಲ್ತಾನರ ದಾಳಿಗಳನ್ನು ಹೆಚ್ಚು ಸಮರ್ಥರೀತಿಯಿಂದ ನಿರೋಧಿಸುವ ಉದ್ದೇಶದಿಂದ, ಈ ದೇವರಾಯನು ವಿಜಯನಗರ ಸೈನ್ಯದಲ್ಲಿ ಕೆಲವು ಸುಧಾರಣೆಗಳನ್ನು ಕೈಕೊಂಡು ಅದರ ಕಾರ್ಯಪಟುತ್ವವನ್ನು ಅಧಿಕಗೊಳಿಸಿದನು. ಸಮರಕಾರ್ಯಗಳಲ್ಲಿ ಸೈನಿಕರಿಗೆ ಪ್ರಗತಿಪರ ಶಾಸ್ತ್ರೀಯ ಶಿಕ್ಷಣವನ್ನು ನೀಡಿ ಅವರಲ್ಲಿ ಸಂಗ್ರಾಮ ಕೌಶಲವನ್ನು ಹೆಚ್ಚಿಸಿದನು. ಧನುರ್ಧಾರಿ ಮತ್ತು ಅಶ್ವಾರೋಹಿಗಳ ಬಲವನ್ನು ಸಂಘಟಿಸಿ ವಿಸ್ತರಿಸಿದನು. ಈ ಕಾರ್ಯಗಳನ್ನು ಸಾಧಿಸಲು ದೇವರಾಯನು ಮುಸ್ಲಿಮ್ ಅಧಿಕಾರಿಗಳನ್ನು, ತುರ್ಕಿ ಸೇನಾ ಪಥಕದವರನ್ನು ಹೆಚ್ಚಿನ ವೇತನ ಕೊಟ್ಟು ತನ್ನ ಸೈನ್ಯದಲ್ಲಿ ನಿಯಮಿಸಿಕೊಂಡನು. ಇದಲ್ಲದೆ ಉತ್ತಮ ಜಾತಿಯ ಕುದುರೆಗಳನ್ನು ದ್ವೀಪಾಂತರದಿಂದ ತರಿಸಿಕೊಂಡು ಅಶ್ವದಳವನ್ನು ಸುಸಜ್ಜಿತಗೊಳಿಸಿದನು.

ದೇವರಾಯನು ವಿಜಯನಗರದ ಸುರಕ್ಷಿತತೆಯ ದೃಷ್ಟಿಯಿಂದ ಆಂಧ್ರಭಾಗದ ರಾಜಕೀಯ ವಿದ್ಯಮಾನಗಳಲ್ಲಿ ಲಕ್ಷ್ಯವನ್ನು ಪೂರೈಸಿದನು. ಆ ಪ್ರದೇಶದಲ್ಲಿ ಒರಿಸ್ಸದ ಬಲಶಾಲಿ ಗಜಪತಿ ರಾಜರು ತಮ್ಮ ರಾಜಕೀಯ ಶಕ್ತಿಯನ್ನು ಬೆಳೆಯಿಸಿಕೊಂಡು ರಾಜಮಹೇಂದ್ರಿಯ ರೆಡ್ಡಿನಾಯಕ ಅರಸರ ಮೇಲೆ ತಮ್ಮ ಪ್ರಭಾವನ್ನು ಬೀರತೊಡಗಿದ್ದರು. ದೇವರಾಯನು ಗಜಪತಿ ಕಪಿಲೇಶ್ವರರಾಯನ ನುಗ್ಗಾಟಿಕೆಯನ್ನು ಹಿಮ್ಮೆಟ್ಟಿಸಿ ಆ ರೆಡ್ಡಿರಾಜ್ಯಕ್ಕೆ ಮೊದಲಿನಂತೆ ರಾಜಕೀಯ ಸ್ವಾಸ್ಥ್ಯವನ್ನೊದಗಿಸಿದನು. ಈ ಕಾರ್ಯಾಚರಣೆಯಿಂದ ಆಂಧ್ರಪ್ರದೇಶದಲ್ಲಿ ವಿಜಯನಗರದ ಗೌರವವು ಪುನಃ ಸ್ಥಾಪಿತವಾಯಿತು.

ಕೃಷ್ಣಾ ತುಂಗಭದ್ರೆಯ ನಡುವಣ ಮಧ್ಯ ಭೂಮಿಯ ಸ್ವಾಮಿತ್ವದ ಕುರಿತು ಪುನಃ ಕದನವು ತಲೆಯೆತ್ತಿತು. ಬಹಮನಿ ಸುಲ್ತಾನ ಅಹಮ್ಮದ ಶಹನು ವಿಜಯನಗರದ ಪ್ರದೇಶದಲ್ಲಿ ಮತ್ತೆ ಪ್ರವೇಶ ಮಾಡಿದನು. ಇದಕ್ಕೆ ಪ್ರತಿಕಾರವೆಂದು ದೇವರಾಯನು ಬಹಮನಿ ರಾಜ್ಯದಲ್ಲಿ ದಂಡಯಾತ್ರೆ ನಡೆಯಿಸಿದನು. ವಿಜಯನಗರದ ಸೈನ್ಯವು ಮುದಗಲ್ ದುರ್ಗವನ್ನು ವಶಪಡಿಸಿಕೊಂಡಿತು. ರಾಯಚೂರು, ಬಂಕಾಪುರ ಕೋಟೆಗಳನ್ನು ಮುತ್ತಿತು. ಶತ್ರುಭಟರನ್ನು ಸಾಗರ, ವಿಜಾಪುರದ ವರೆಗೆ ಬೆನ್ನಟ್ಟಿಕೊಂಡು ಹೋಯಿತು. ಫೆರಿಸ್ತನು ವರ್ಣಿಸಿರುವ ಈ ಯುದ್ಧದ ವೃತ್ತಾಂತವು ಎಂದಿನಂತೆ ಅತ್ಯುಕ್ತಿಯಿಂದ ಕೂಡಿದೆ. ಮುದಗಲ್ ದುರ್ಗದಲ್ಲಿ ದೊರೆತ ದೇವರಾಯನ ಕ್ರಿ.ಶ. 1436 ರ ಶಾಸನವು ಈ ಪ್ರದೇಶವು ಆ ಕಾಲಕ್ಕೆ ವಿಜಯನಗರದ ಅಂಕಿತದಲ್ಲಿ ಇದ್ದ ಸಂಗತಿಯನ್ನು ಸ್ಪಷ್ಟಗೊಳಿಸುತ್ತದೆ.

### ಲಂಕಾ ದಂಡಯಾತ್ರೆ

ದೇವರಾಯನು ತನ್ನ ಸೇನಾಪತಿ ಲಕ್ಕಣ್ಣ ದಂಡನಾಯಕನ ನೇತೃತ್ವದಲ್ಲಿ ಲಂಕಾದ್ವೀಪದ ಮೇಲೆ

ನೌಕಾಬಲದ ದಂಡಯಾತ್ರೆ ಮಾಡಿದನು. ವಿಜಯನಗರದ ಸೇನೆಗೆ ಜಯವು ಪ್ರಾಪ್ತವಾಯಿತು. ಲಂಕೆಯ ರಾಜನ ಮೇಲೆ ಕಪ್ಪವನ್ನು ಹೇರಲಾಯಿತು. ಈ ವಿಜಯದ ನೆನಹಿಗಾಗಿ ಆ ಜಯಶೀಲ ದಂಡನಾಯಕನನ್ನು 'ದಕ್ಷಿಣ ಸಮುದ್ರಾಧಿಪತಿ' ಎಂಬ ಪ್ರಶಸ್ತಿಯಿಂದ ಗೌರವಿಸಲಾಯಿತು. ಲಂಕೆಯ ಜಾನಪದ ಗೀತಗಳಲ್ಲಿ ಈ ಘಟನೆಯ ಮೇಲೆ ಹಾಡುಗಳನ್ನು ರಚಿಸಿಲಾಗಿದೆ. ದೇವರಾಯನು ಕ್ವಿಲೋನ್, ಪುಲಿಕಟ್, ಪೇಗು, ತೆನ್ನಾಸೆರಿಂ ಪ್ರದೇಶಗಳ ರಾಜರಿಂದ ಕಪ್ಪವನ್ನು ಸೆಳೆದುಕೊಂಡನೆಂದು ನ್ಯೂನಿಜನು ಹೇಳಿರುವನು.

ಈ ಗ್ರಂಥದ ಮುಂದಿನ ಒಂದು ಭಾಗದಲ್ಲಿ ಇಮ್ಮಡಿದೇವರಾಯನ ಸಾಧನೆಗಳನ್ನು ವಿವರವಾಗಿ ನಿರೂಪಿಸಲಾಗಿದೆ.

**ಮಲ್ಲಿಕಾರ್ಜುನನ ಆಳಿಕೆ**

ಇಮ್ಮಡಿ ದೇವರಾಯನ ಉತ್ತರಾಧಿಕಾರಿಯಾದ ಮಲ್ಲಿಕಾರ್ಜುನನು ನವಯುವಕನು, ಯೋಗ್ಯತೆಯಿಲ್ಲದ ರಾಜಕುಮಾರನು ಆಗಿದ್ದನು. ಕ್ರಿ.ಶ. 1446 ರಿಂದ 1465 ರ ವರೆಗೆ ಮುಂದುವರಿದ ಆತನ ಆಳಿಕೆಯಲ್ಲಿ ವಿಜಯನಗರ ಸಾಮ್ರಾಜ್ಯವು ಬಹಳ ಹಾನಿಗೆ ಈಡಾಯಿತು. ಮೊದಲು ಬಹಮನಿಸುಲ್ತಾನ ಎರಡನೆಯ ಅಲ್ಲಾ ಉದ್ದೀನನು, ಗಜಪತಿ ಕಪಿಲೇಶ್ವರನ ಜೊತೆಗೆ ಸಂಧಾನ ನಡೆಯಿಸಿ ವಿಜಯನಗರವನ್ನು ಕಷ್ಟಕ್ಕೆ ಗುರಿ ಮಾಡಿದನು. ಬಳಿಕ ಕಪಿಲೇಶ್ವರನು ಏಕಾಕಿಯಾಗಿ ವಿಜಯನಗರದ ಮೇಲೆ ದಂಡೆತ್ತಿ ಬಂದು ಅನೇಕ ಸಮರಗಳಲ್ಲಿ ಸೋಲನ್ನು ಉಂಟುಮಾಡಿದನು. ಆತನು ಕರಾವಳಿಯ ಆಂಧ್ರ ಪ್ರದೇಶಗಳಲ್ಲಿ ನುಗ್ಗಾಡಿ, ಆಯಕಟ್ಟಿನ ದುರ್ಗಗಳಾದ ಕೊಂಡವೀಡು, ಉದಯಗಿರಿಗಳನ್ನು ಗೆದ್ದುಕೊಂಡನು. ಮೇಲಿಂದ ಮೇಲೆ ಒದಗಿದ ಈ ಪರಾಜಯಗಳಿಂದ ವಿಜಯನಗರ ಸಾಮ್ರಾಜ್ಯದ ಶಕ್ತಿ ಕುಂದಿತು. ಅದೇ ಕಾಲಕ್ಕೆ ಸಾಮ್ರಾಜ್ಯದ ಅಂತಃ ಪ್ರದೇಶಗಳಲ್ಲಿ ಅನೇಕ ಉದ್ವೇಗಕಾರಕ ಗಲಭೆಗಳು ಸಂಭವಿಸಿ ರಾಜ್ಯದಲ್ಲಿ ಅವ್ಯವಸ್ಥೆ ಉಂಟಾಯಿತು.

**ವಿರೂಪಾಕ್ಷನ ಆಳಿಕೆ**

ಮಲ್ಲಿಕಾರ್ಜುನನ ಚಿಕ್ಕಪ್ಪನ ಮಗನಾದ ವಿರೂಪಾಕ್ಷನು ಈ ಕ್ಷೋಭಕಾರಕ ಪರಿಸ್ಥಿತಿಯ ಲಾಭವನ್ನು ಪಡೆದುಕೊಂಡನು. ಆತನು ಮಲ್ಲಿಕಾರ್ಜುನನನ್ನು ಆಚೆಗೆ ತಳ್ಳಿ ರಾಜಸಿಂಹಾಸನವನ್ನು ಆಕ್ರಮಿಸಿದನು. (ಕ್ರಿ.ಶ. 1465), ಆದರೆ ಈತನು ಯೋಗ್ಯ ರೀತಿಯಿಂದ ರಾಜ್ಯಭಾರಮಾಡಲು ಸಮರ್ಥನಾಗಿರಲಿಲ್ಲ. ವಿಷಯಾಸಕ್ತನೂ ವ್ಯಸನಾಧೀನನೂ ಆಗಿದ್ದನು. ಇವರಿಂದಾಗಿ ವಿಜಯನಗರ ಸಾಮ್ರಾಜ್ಯವು ತ್ವರಿತ ಗತಿಯಿಂದ ಅವನತಿಯ ಕಂದರಕ್ಕೆ ಇಳಿಯತೊಡಗಿತು.

ಈ ದುರ್ದಶೆ ಆಂತರಿಕ ಮತ್ತು ಬಾಹ್ಯ ಕಾರಣಗಳಿಂದ ಮತ್ತಷ್ಟು ವಿಕೋಪಕ್ಕೆ ಹೋಯಿತು. ವಿಜಯನಗರದ ನಿಷ್ಠ ಸಾಮಂತರು, ಮಂಡಲೇಶ್ವರರು, ಅವಿಧೇಯತೆಯಿಂದ ವರ್ತಿಸತೊಡಗಿದರು. ನೆರೆಯ ರಾಜ್ಯಗಳ ಶತ್ರುರಾಜರು ಸಂಧಿ ದೊರೆತಾಗಲೆಲ್ಲ, ವಿಜಯನಗರ ಸಾಮ್ರಾಜ್ಯದಲ್ಲಿ ನುಗ್ಗಾಟವನ್ನು ಆರಂಭಿಸಿದರು. ಬಹಮನಿ ಸುಲ್ತಾನ ಮಹಮ್ಮದ ಶಹನು ಚೌಲ, ದಾಬುಲ, ದುರ್ಗಗಳನ್ನು ವಶಪಡಿಸಿಕೊಂಡನು. ಇದಲ್ಲದೆ ಗೋವಾ ಬಂದರವನ್ನು ಸಹ ಕಿತ್ತುಕೊಂಡನು. ಈ ಬಂದರದ ಮುಖಾಂತರ ಪಾಶ್ಚಾತ್ಯ ರಾಷ್ಟ್ರಗಳ ಜೊತೆಗೆ ವಿಜಯನಗರದ ಸಮೃದ್ಧ ವ್ಯಾಪಾರವು ನಡೆಯುತ್ತಿತ್ತು. ಅದರ ಮಾರ್ಗವಾಗಿಯೇ ವಿಜಯನಗರದ ಸೇನಾಬಲಕ್ಕೆ ಆಧಾರದಂತಿರುವ ಉತ್ತಮ ಜಾತಿಯ ಕುದುರೆಗಳನ್ನು ಪಾಶ್ಚಾತ್ಯ ದೇಶಗಳಿಂದ ಬರಮಾಡಿಕೊಳ್ಳಲಾಗುತ್ತಿತ್ತು.

**ಸಂಗಮರ ಸಮಾಪ್ತಿ**

ಈ ಮೊದಲಾದ ವಿಪತ್ಕಾರಕ ಘಟನೆಗಳಿಂದ ವಿಜಯನಗರ ಸಾಮ್ರಾಜ್ಯವು ವಿನಾಶದ ಅಂಚಿಗೆ ಬಂದು ಮುಟ್ಟಿತು. ಈ ಸಂಕಟದಿಂದ ವಿಜಯನಗರವನ್ನು ಕಾಪಾಡಲು ಒಬ್ಬ ವೀರ ಪುರುಷನು ಸಕಾಲಕ್ಕೆ ಮುಂದೆ ಬಂದನು. ಈತನು ಸಮರ್ಥನೂ ಕ್ರಿಯಾಶೀಲನೂ ಮಹತ್ವಾಕಾಂಕ್ಷಿಯೂ ಆಗಿದ್ದನು. ಈತನು ತನ್ನ ಬಲವನ್ನು ಸಂಘಟಿಸಿಕೊಂಡು ರಾಜನೀತಿ ಕೌಶಲದಿಂದ ರಾಜ್ಯ ಕ್ರಾಂತಿಯನ್ನು ಸಾಧಿಸಿ, ವಿಜಯನಗರದ ಸಿಂಹಾಸನವನ್ನು ವಶಪಡಿಸಿಕೊಂಡನು (ಕ್ರಿ.ಶ. 1485). ಈತನೇ ವಿಜಯನಗರದ ಎರಡನೆಯ ರಾಜವಂಶವನ್ನು ಸ್ಥಾಪಿಸಿದ ಸಾಳುವ ಒಂದನೆಯ ನರಸಿಂಹನು.

ಈ ವಿಧದಿಂದ ವಿಜಯನಗರದಂತಹ ಮಹಾ ಸಾಮ್ರಾಜ್ಯವನ್ನು ಸೃಷ್ಟಿಸಿ, ಭಾರತದ ಮತ್ತು ದಕ್ಷಿಣ ಭಾರತದ ಚರಿತ್ರೆಯಲ್ಲಿ ಅಪೂರ್ವ ಕರ್ತೃತ್ವವನ್ನು ಮೆರೆಯಿಸಿದ ಸಂಗಮ ರಾಜವಂಶದ ಘನತೆಯ ಆಳಿಕೆ ಮುಕ್ತಾಯವಾಯಿತು.

**ಮೂಲ ಲೇಖಕರು ಮತ್ತು ಅನುವಾದಕರು : ಡಾ ॥ ಪಿ. ಬಿ. ದೇಸಾಯಿ**

# ಇಮ್ಮಡಿ ದೇವರಾಯನ ಕಾಲ

ಸಂಗಮ ವಂಶದ ಅರಸರನಂತರ ಅಧಿಕಾರದ ಗದ್ದುಗೆಯನ್ನೇರಿದ ಸಾಳುವ ವಂಶದ ವಿಚಾರವನ್ನು ಪ್ರಸ್ತಾಪಿಸುವ ಮುನ್ನ ಇಮ್ಮಡಿ ದೇವರಾಯನ ವೈಭವೋಪೇತ ಆಳಿಕೆಯ ಬಗ್ಗೆ ಕೆಲವು ಸಂಗತಿಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಇಮ್ಮಡಿ ದೇವರಾಯನು ಅತಿವಿಸ್ತಾರವಾದ ಸಾಮ್ರಾಜ್ಯವನ್ನು ತುಂಬುವೈಭವದಿಂದ ಆಳಿದನು. ಆತನು ಕಲಾಭಿಮಾನಿಯೂ ಸಾಹಿತ್ಯ ಪೋಷಕನೂ ಆಗಿದ್ದನು. ವಿಜಯ ನಗರದ ಭವ್ಯೇತಿಹಾಸದಲ್ಲಿ ಅತ್ಯಂತ ವೈಭವದಿಂದ ರಾಜ್ಯವಾಳಿದವರಲ್ಲಿ ಮುಂದೆ ಒಂದು ಶತಮಾನದ ನಂತರ ಇಮ್ಮಡಿ ದೇವರಾಯನೂ ಸುಪ್ರಸಿದ್ಧನಾಗಿದ್ದಾನೆ ಅಧಿಕಾರಕ್ಕೆ ಬಂದ ಕೃಷ್ಣದೇವರಾಯನಂತೆಯೇ.

ಕೃಷ್ಣದೇವರಾಯನ ಕಾಲದ ಸಾಂಸ್ಕೃತಿಕ ವೈಭವ ಶಕ್ತಿ ಸಾಹಸಗಳ ಧವಳಕೀರ್ತಿಯ ಪ್ರಾರಂಭದ ಲಕ್ಷಣಗಳೆಲ್ಲಾ ಇಮ್ಮಡಿ ದೇವರಾಯನ ಆಳಿಕೆಯಲ್ಲಿ ಸುಳುಹು ಕಾಣಿಸಿದ್ದವು. ಹದಿನಾರನೆಯ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯದ ವೈಭವಕ್ಕೆ ಕೃಷ್ಣದೇವರಾಯನು ಹೆಸರಾಗಿದ್ದಂತೆ ಹದಿನೈದನೆಯ ಶತಮಾನದಲ್ಲಿ ಇಮ್ಮಡಿ ದೇವರಾಯನು ಹೆಸರು ಪಡೆದಿದ್ದನು. ಕೃಷ್ಣದೇವರಾಯನ ದಿಗ್ವಿಜಯಗಳು, ಅವನು ಸಾಹಿತ್ಯ-ಕಲೆಗಳಿಗೆ ನೀಡಿದ ಪ್ರೋತ್ಸಾಹ, ಬಹಮನಿ ರಾಜ್ಯಗಳ ವಿರುದ್ಧ ನಡೆಸಿದ ಹೋರಾಟ ಮೊದಲಾದ ಸಂಗತಿಗಳು ನೂತನ ವಿಕ್ರಮಗಳಾಗಿರದೆ ಇಮ್ಮಡಿ ದೇವರಾಯನ ವಿಕ್ರಮ ಸಾಧನೆಗಳೇ ವಿಸ್ತೃತರೂಪದಲ್ಲಿ ಕಾಣಿಸಿಕೊಂಡಿವೆ ಎಂದರೆ ಅತಿಶಯೋಕ್ತಿ ಆಗಲಾರದು.

ಇಮ್ಮಡಿ ದೇವರಾಯನು ಜನಪ್ರಿಯ ಸಾಮ್ರಾಟನಾಗಿದ್ದನು. ಆಗಿನ ಕಾಲದ ಅನೇಕ ಶಾಸನಗಳಲ್ಲಿ ಸಾಮ್ರಾಜ್ಯದ ಉನ್ನತ ಆದರ್ಶಗಳಿಗೆ ತಕ್ಕಂತಹ ಗುಣ ವಿಶೇಷಗಳನ್ನು ಆತನಿಗೆ ಬಳಸಿರುವುದನ್ನು ಕಾಣಬಹುದು. ಸಂಸ್ಕೃತ, ತೆಲುಗು, ತಮಿಳು ಮತ್ತು ಕನ್ನಡ ಕವಿಗಳು ತಮ್ಮ ಕೃತಿಗಳಲ್ಲಿ ಈತನನ್ನು ಅತಿಶಯವಾಗಿ ಬಣ್ಣಿಸಿದ್ದಾರೆ.

"ಚಂದ್ರಗುತ್ತಿ 18 ಕಂಪಣದ ಹಿರಿಯನಾದ ಪೃಥಿವಿಶೆಟ್ಟಿ ಎಂಬಾತನು ಇಮ್ಮಡಿ ದೇವರಾಯನು ಪರಂಧಾಮವನ್ನೈದಿದ ಸಂಗತಿಯನ್ನು ಕೇಳಿದ ಕೂಡಲೇ ರಹಸ್ಯವಾಗಿ ಕೊಡಕಣಿಗೆ ಹೋಗಿ ಅಲ್ಲಿ ಶ್ರೀರಾಮ ದೇವರ ದಿವ್ಯ ಸನ್ನಿಧಿಯಲ್ಲಿ ಆತ್ಮಾರ್ಪಣೆ ಮಾಡಿಕೊಂಡು ಭಗವಂತನ ಪಾದಾರವಿಂದವನ್ನು ಸೇರಿದನು" ಎಂದು ಕ್ರಿ.ಶ. 1448 ರ ಶಾಸನವೊಂದು ಸಾರುತ್ತದೆ. ದೊರೆಯ ಸಾವಿನ ಸುದ್ದಿಯನ್ನು ಕೇಳಿದ ತತ್‌ಕ್ಷಣ ಪ್ರಾಣತ್ಯಾಗ ಮಾಡಿದನು ಎಂದರೆ, ಪೃಥಿವಿಶೆಟ್ಟಿ ದೊರೆಯಲ್ಲಿ ಇಟ್ಟಿದ್ದ ರಾಜಭಕ್ತಿಯ ಪರಾಕಾಷ್ಠೆಯನ್ನು ಊಹಿಸಬಹುದು. ಇಮ್ಮಡಿ ದೇವರಾಯನು ಬಹು ಜನಪ್ರಿಯ ಸಾಮ್ರಾಟನಾಗಿದ್ದನು ಎಂಬುದಕ್ಕೆ ಶ್ರವಣಬೆಳಗೊಳದ 328 ನೆಯ ಶಾಸನ ಸಾಕ್ಷಿಯಾಗಿದೆ. ಅದರಲ್ಲಿ ದೊರೆಯನ್ನು ಅನುಪಮ ದೇವರಾಟ್ ಎಂದು ಸಂಬೋಧಿಸಿದೆ. ಆತನ ಮರಣದಿಂದ ಉಂಟಾದ ದಾರುಣ ವ್ಯಥೆಯನ್ನು ಮನೋ ವೇಧಕ ನುಡಿಗಳಲ್ಲಿ ಶಾಸನ ಬಣ್ಣಿಸುವುದನ್ನು ಡಾ॥ ಕೀಲ್‌ಹಾರ್ನ್ ಹೀಗೆ ಅನುವಾದಿಸಿದ್ದಾರೆ :—

"ದುಷ್ಟ ಕ್ಷಯಸಂವತ್ಸರದಲ್ಲಿ ಮರುತದ ದ್ವಿತೀಯ ವೈಶಾಖ ಮಾಸದಲ್ಲಿ ಅಮಂಗಳದ ಮಂಗಳವಾರದಲ್ಲಿ ಕೃಷ್ಣಪಕ್ಷದ ಚತುರ್ದಶಿಯಂದು ಅಪ್ರತಿಮವೀರಪ್ರತಾಪ ದೇವರಾಯ ಪರಂಧಾಮವನ್ನು ಸೇರಿದನು, ಅಯ್ಯೋ, ವಿಧಿಯೇ !"

## ಇಮ್ಮಡಿ ದೇವರಾಯನ ಕಾಲ.

ಇಮ್ಮಡಿ ದೇವರಾಯನು ಆಕರ್ಷಕ ವ್ಯಕ್ತಿತ್ವವನ್ನು ಹೊಂದಿದ್ದನು. ಆಗಿನ ಕಾಲದ ನಾಣ್ಯಗಳಲ್ಲಿ ಕಂಡುಬರುವ ಆನೆಯೊಡನೆ ದೊರೆ ಹೋರಾಡುತ್ತಿರುವ ಚಿತ್ರವನ್ನು ಗಮನಿಸಿದರೆ ದೊರೆ ದಷ್ಟಪುಷ್ಟನಾಗಿ ಅಪಾರ ದೈಹಿಕಬಲದಿಂದ ಕೂಡಿದ್ದನು ಎಂದು ಭಾವಿಸಬಹುದಾಗಿದೆ. ಮದಕರಿಯೊಡನೆ ಹೋರಾಡಿ ಜಯಿಸಬಲ್ಲ ಅರಿಕೇಸರಿಯಾಗಿದ್ದ ಇಮ್ಮಡಿ ದೇವರಾಯನಿಗೆ 'ಗಜಬೇಂಟೆಕಾರ' ನೆಂಬ ಪ್ರಶಸ್ತಿ ಅನ್ವರ್ಥ ವೆನಿಸಿತ್ತು. ಇಮ್ಮಡಿ ದೇವರಾಯನು ಅಪಾರ ಆತ್ಮವಿಶ್ವಾಸ, ಅದ್ಭುತ ದೈಹಿಕ ಬಲದಿಂದ ಕೂಡಿದ್ದು ಸ್ವತಃ ಸೈನ್ಯದ ಮುಂಚೂಣಿಯಲ್ಲಿ ನಿಂತು ಮೇಲ್ವಿಚಾರಣೆಯ ಜವಾಬ್ದಾರಿ ಹೊತ್ತು ಮಾರ್ಗದರ್ಶನ ನೀಡುತ್ತಿದ್ದನು.

ಇಮ್ಮಡಿ ದೇವರಾಯನು ಕೈಗೊಂಡ ಅಸಂಖ್ಯಾತ ದಂಡಯಾತ್ರೆಗಳಲ್ಲಿ ಬಹುಮಟ್ಟಿಗೆ ವಿಜಯಶಾಲಿ ಯಾಗಿದ್ದನು. ಕೆಲವು ಸಂದರ್ಭಗಳಲ್ಲಿ — ಶತ್ರು ತನಗಿಂತ ಸಮರ್ಥನಿದ್ದಾನೆಂದು ತಿಳಿದಾಗ ವಿರೋಧಿ ಗಳೊಂದಿಗೆ ಗೌರವಾನ್ವಿತ ರೀತಿಯಲ್ಲಿ ಶಾಂತಿ ಒಪ್ಪಂದಗಳನ್ನು ಮಾಡಿಕೊಳ್ಳುತ್ತಿದ್ದನು. ಇವೆಲ್ಲ ಇಮ್ಮಡಿ ದೇವರಾಯನ ದೂರದರ್ಶಿತ್ವ, ವಾಸ್ತವಿಕ ಪ್ರಜ್ಞೆ, ಔಚಿತ್ಯಪೂರ್ಣ ವಿವೇಚನಾಶಕ್ತಿಗಳಿಗೆ ನಿದರ್ಶನ ಗಳಾಗಿವೆ. ಹಲವಾರು ಸಲ ದೊರೆಯನ್ನು ಕೊಲೆಮಾಡಲು ಕೊಲೆಪಾತಕರಾದ ಸಂಚುಗಾರರು ಹೊಂಚು ಹಾಕಿದಾಗಲೆಲ್ಲಾ ಮಿಂಚಿನಂತೆ ಅಪಾಯಗಳಿಂದ ಉಪಾಯವಾಗಿ ತಪ್ಪಿಸಿಕೊಂಡಿರುವುದನ್ನು ಗಮನಿಸಿದಾಗ ದೊರೆಯ ಜಾಣ್ಮೆ ಮತ್ತು ಸಾಹಸ ಶಕ್ತಿಗಳು ಎಷ್ಟರ ಮಟ್ಟಿನವು ಎಂಬುದನ್ನು ಅರಿಯಬಹುದಾಗಿದೆ. ಹದಿನಾರನೆಯ ಶತಮಾನದಲ್ಲಿ ಇಮ್ಮಡಿ ದೇವರಾಯನ ಸಮಕಾಲೀನರಾದ ಅಬ್ದುಲ್ ರಜಾಕ್ ಮತ್ತು ನ್ಯೂನಿಜ್ ಅವರ ಬರವಣಿಗೆಗಳ ಪ್ರಕಾರ, ಸಂಚುಗಾರರ ನಾಯಕನ ವಿರುದ್ಧವಾಗಿ ದೊರೆ ಏಕಾಂಗ ವೀರನಾಗಿ ಹೋರಾಡಬೇಕಾದ ಸಂದರ್ಭವೊದಗಿತು. ಆಗ ವಿರೋಧಿಯನ್ನು ಸೋಲಿಸಿ ದೊರೆ ಸಾಹಸ ಪರಾಕ್ರಮಗಳಿಂದ ವಿಜೃಂಭಿಸಿದನು. ಆ ಸಮಯದಲ್ಲಿ ರಾಜ್ಯದ ಪ್ರಜೆಗಳು ಸೋತ ವಿರೋಧಿಯನ್ನು ಕೊಂದು ಹಾಕಿದರು. ಈ ಘಟನೆಯು ಇಮ್ಮಡಿ ದೇವರಾಯನು ಪ್ರಜೆಗಳ ಪ್ರೀತಿಯನ್ನು ಎಷ್ಟು ಮಟ್ಟಿಗೆ ಸಂಪಾದಿಸಿದ್ದನೆಂಬುದನ್ನು ವ್ಯಕ್ತಪಡಿಸುತ್ತದೆ. ಈ ಬಗ್ಗೆ ಅಬ್ದುಲ್‌ರಜಾಕ್ ಹೇಳಿರುವ ಮಾತುಗಳು ಹೀಗಿವೆ : "ಹಲವಾರು ಬಲವಾದ ಹೊಡೆತಗಳ ಫಲವಾಗಿ ಸಿಂಹಾಸನದಿಂದ ದೊರೆ ಹಿಂದಕ್ಕುರುಳಿ ಬಿದ್ದಾಗ ಪಿತೂರಿಗಾರನಾದ ದೊರೆಯ ಸೋದರನು ಸಭಾಂಗಣದ ಪಾವಟಿಗೆಗಳಲ್ಲಿ ನಿಂತು ತುಂಬಿದ ರಾಜಸಭೆಯನ್ನು ಉದ್ದೇಶಿಸಿ, ತನ್ನನ್ನು ದೊರೆಯನ್ನಾಗಿ ಅಂಗೀಕರಿಸುವಂತೆ ಕರೆಯಿತ್ತನು. ಆ ವೇಳೆಗೆ ಕೆಳಗೆ ಬಿದ್ದಿದ್ದ ದೊರೆ ಮೇಲೆದ್ದು ನಿಂತು ಸಭೆಗೆ ಕಾಣಿಸಿಕೊಂಡಾಗ. ಕೂಡಲೇ ಸಭೆಯಲ್ಲಿದ್ದ ಜನಸಮೂಹವೆಲ್ಲಾ ಜಯ ಜಯಕಾರಮಾಡಿ, ದ್ರೋಹಿಯಾದ ರಾಜಸೋದರನ ಮೇಲೆ ಬಿದ್ದು ಅವನನ್ನು ಕೊಂದು ಹಾಕಿದರು." ನ್ಯೂನಿಜನು ಈ ರೀತಿ ಹೇಳುತ್ತಾನೆ : —"ಪಿತೂರಿಗಾರನು (ದೊರೆಯ ಸೋದರಪುತ್ರ ಮತ್ತು ಮಂತ್ರಿ) ಇಮ್ಮಡಿ ದೇವರಾಯನ ಮಗನನ್ನು ಸಂಹರಿಸಿದ ಮೇಲೆ ಅರಮನೆಯತ್ತ ಸಾಗಿದನು. ಅಲ್ಲಿ ಅಂತಃಪುರದಲ್ಲಿ ದೊರೆ ರಾಣಿಯರೊಂದಿಗೆ ವಿನೋದ ವಿಹಾರಗಳಲ್ಲಿ ತಲ್ಲೀನನಾಗಿದ್ದನು. ವಿಷಪೂರಿತ ಬರ್ಜಿಯಿಂದ ಸಮಯ ಸಾಧಿಸಿ ದೊರೆಯನ್ನು ಕೊಲ್ಲಲು ಯತ್ನಿಸಿದಾಗ, ದೊರೆಗೂ ಮಂತ್ರಿಗೂ ಸೆಣಸಾಟ ಪ್ರಾರಂಭವಾಯಿತು. ದೊರೆ ವಿರೋಧಿಯ ಹೊಡೆತಗಳನ್ನು ಚಾಣಾಕ್ಷತನದಿಂದ ಬಾಗಿ ಬಳುಕಿ ತಪ್ಪಿಸಿಕೊಂಡು ಆತನನ್ನು ಹೊಡೆದು ನೆಲಕ್ಕುರುಳಿಸಿದನು." ಅಬ್ದುಲ್ ರಜಾಕ್ ಮತ್ತು ನ್ಯೂನಿಜ್ ಇಬ್ಬರೂ ನೀಡುವ ವರದಿಗಳಿಂದ ಇಮ್ಮಡಿ ದೇವರಾಯನ ಬುದ್ಧಿಸಾಮರ್ಥ್ಯ ಮತ್ತು ಶಕ್ತಿ ಸಾಹಸಗಳು ವ್ಯಕ್ತವಾಗುತ್ತವೆ.

ಇಮ್ಮಡಿ ದೇವರಾಯನಿಗೆ ಪೊನ್ನಲಾದೇವಿ ಮತ್ತು ಭೀಮಾದೇವಿ ಎಂಬ ಇಬ್ಬರು ರಾಣಿಯರಿದ್ದರು. ಭೀಮಾದೇವಿಗೆ ಮಕ್ಕಳಾದಂತೆ ಕಂಡುಬರುವುದಿಲ್ಲ. ರಾಣಿ ಪೊನ್ನಲಾದೇವಿಗೆ ಮಲ್ಲಿಕಾರ್ಜುನನೆಂಬ ಮಗ

ನಿದ್ದುದಾಗಿ ತಿಳಿದುಬರುತ್ತದೆ. ಈತನು ತಂದೆಯ ಮರಣಾನಂತರ ಸಿಂಹಾಸನವನ್ನೇರಿದನು. ಇಮ್ಮಡಿ ದೇವರಾಯನಿಗೆ ಪ್ರತಾಪ ದೇವರಾಯನೆಂಬ ಕಿರಿಯ ಸೋದರನೊಬ್ಬನಿದ್ದನು. ಅವನು ಅನುಕ್ರಮವಾಗಿ ಮುಳಬಾಗಿಲು, ಮರಕತನಗರ ಮತ್ತು ಪೆನುಕೊಂಡ ಪ್ರದೇಶಗಳಿಗೆ ರಾಜ್ಯಪಾಲನಾಗಿದ್ದನು.

ಕಲಾಸಾಹಿತ್ಯಗಳಿಗೆ ದೊರೆ ನೀಡುತ್ತಿದ್ದ ಪೋಷಣೆ, ದೇವಸ್ಥಾನ-ಧಾರ್ಮಿಕ ಸಂಸ್ಥೆಗಳಿಗೆ ನೀಡುತ್ತಿದ್ದ ಅಪಾರ ದತ್ತಿ, ಘನ ವಿದ್ವಾಂಸರಾದ ದ್ವಿಜರಿಗೆ ಮತ್ತು ಪ್ರತಿಭಾವಂತರಿಗೆ ನೀಡುತ್ತಿದ್ದ ದಾನಧರ್ಮ ಮತ್ತು ಕಾಣಿಕೆ-ಉಡುಗೊರೆಗಳು, ಆಸ್ಥಾನದಲ್ಲಿ ನಡೆಯುತ್ತಿದ್ದ ವೇದಾಂತ, ಮೀಮಾಂಸೆ, ಮೊದಲಾದ ಧಾರ್ಮಿಕ ಚರ್ಚೆಗಳಲ್ಲಿ ದೊರೆ ತೋರುತ್ತಿದ್ದ ಆಸಕ್ತಿ—ಮೊದಲಾದ ಸಂಗತಿಗಳಿಂದ ಇಮ್ಮಡಿ ದೇವರಾಯನ ಕಾಲದ ಸಾಂಸ್ಕೃತಿಕ ವೈಭವವನ್ನು ನಿಚ್ಚಳವಾಗಿ ಅರಿಯಬಹುದಾಗಿದೆ. ಇಮ್ಮಡಿ ದೇವರಾಯನ ಕಾಲವನ್ನು 'ಸಾಹಿತ್ಯದ ಸುಗ್ಗಿಯ ಕಾಲ' ಎನ್ನಬಹುದು. ಕಲೆ, ಶಾಸ್ತ್ರ, ಸಾಹಿತ್ಯ ಮೊದಲಾದ ವಿಚಾರಗಳಲ್ಲಿ ಪಾಂಡಿತ್ಯಪ್ರತಿಭೆಗಳನ್ನು ಪ್ರದರ್ಶಿಸಿ ತಮ್ಮ ಹಿರಿಮೆಯನ್ನು ಸಾರಲು ಯತ್ನಿಸುವ ಕವಿ, ಗಮಕಿ, ವಾದಿ, ವಾಗ್ಮಿ, ಕಲಾವಿದ, ವೇದಾಂತಿ, ಪಂಡಿತರುಗಳಿಗೆ ದೊರೆಯ ಆಸ್ಥಾನ ಆಶ್ರಯಸ್ಥಾನವಾಗಿತ್ತು; ಪ್ರೋತ್ಸಾಹದ ನೆಲವೀಡೆನ್ನಿಸಿತ್ತು. ಆಸ್ಥಾನದಲ್ಲಿ ಜರುಗುತ್ತಿದ್ದ ಪಾಂಡಿತ್ಯ ಪ್ರಪೂರ್ಣ ವಿದ್ವತ್‌ಗೋಷ್ಠಿಗಳಲ್ಲಿ ದೊರೆ ಅಧ್ಯಕ್ಷನಾಗಿದ್ದು ಅವರವರ ಪ್ರತಿಭಾ ಪಾಂಡಿತ್ಯಗಳಿಗೆ ತಕ್ಕಂತೆ ಪುರಸ್ಕಾರವನ್ನೀಯುತ್ತಿದ್ದನು. ಆತನ ಆಸ್ಥಾನದಲ್ಲಿ ಜರುಗುತ್ತಿದ್ದ ಅನೇಕ ಶಾಸ್ತ್ರ-ಸಾಹಿತ್ಯ ಸಂವಾದಗೋಷ್ಠಿಗಳ ಪೈಕಿ ಒಂದರಲ್ಲಿ ತೆಲುಗು ಕವಿ ಶ್ರೀನಾಥನು, ದೇವರಾಯನ ಆಸ್ಥಾನ ಕವಿಯಾಗಿದ್ದ ಗಂಡದಿಂಡಿಮನನ್ನು ಸೋಲಿಸಿದ ಪ್ರಕರಣವನ್ನು ಚೇತೋಹಾರಿಯಾಗಿ ವರ್ಣಿಸಲಾಗಿದೆ. ದೊರೆ ಸಮಸ್ತ ವಿದ್ವನ್ಮಣಿಗಳ ಘನ ಸಮ್ಮುಖದಲ್ಲಿ ತನ್ನ ಜಗತ್ಪ್ರಸಿದ್ಧವಾದ ಮುತ್ತಿನ ಸಭೆಯಲ್ಲಿ ಶ್ರೀನಾಥನಿಗೆ ಚಿನ್ನದ ಟಂಕಗಳ ಮಳೆ ಕರೆದು 'ಕನಕಾಭಿಷೇಕ' ಮಾಡಿ ಗೌರವಿಸಿದನು. ಇದೇ ರೀತಿ ಕುಮಾರವ್ಯಾಸ ಮತ್ತು ಚಾಮರಸ ಕವಿಗಳ ಕೃತಿಗಳ ಬಗ್ಗೆ ವಿವಾದವುಂಟಾದಾಗ ದೊರೆ ತೀರ್ಪುಗಾರನಾಗಿದ್ದು ಚಾಮರಸನನ್ನು ಸನ್ಮಾನಿಸಿದನೆಂದು ತೋರುತ್ತದೆ. ಅಪೂರ್ವ ಪ್ರತಿಭೆಯಿಂದ ಕೂಡಿದ ದೊರೆ ಸ್ವತಃ ವಿದ್ವಾಂಸನೂ ಕವಿಯೂ ಆಗಿದ್ದನು. ಇಮ್ಮಡಿ ದೇವರಾಯನು ಸಂಸ್ಕೃತದಲ್ಲಿ **ಬಾದರಾಯಣನ** ಬ್ರಹ್ಮಸೂತ್ರಗಳಿಗೆ ವೃತ್ತಿಯನ್ನೂ **ಮಹಾನಾಟಕ**, **ಸುಧಾನಿಧಿ** ಎಂಬ ಕೃತಿಗಳನ್ನೂ ರಚಿಸಿದ್ದಾನೆ. ಇಮ್ಮಡಿ ದೇವರಾಯನ ಕಲಾ-ಸಾಹಿತ್ಯಗಳ ಪ್ರೋತ್ಸಾಹ, ಅಭಿಮಾನ, ಆಸಕ್ತಿಗಳು ಕೇವಲ ಯಾವುದೇ ಒಂದು ಭಾಷೆಗಾಗಲಿ, ಮತಕ್ಕಾಗಲಿ, ವರ್ಗಕ್ಕಾಗಲಿ ಸೀಮಿತಗೊಂಡಿರಲಿಲ್ಲ. ಆತನು ಪ್ರತಿಭೆ, ಪಾಂಡಿತ್ಯ, ಹಿರಿಮೆ, ಸದ್ಗುಣಗಳು ಕಂಡುಬಂದೆಡೆಯೆಲ್ಲಾ ಅವುಗಳ ಸರ್ವತೋಮುಖ ಪ್ರಗತಿಗೆ ನೆರವಾಗಿದ್ದಾನೆ.

ಪ್ರಜೆಗಳು, ಆಶ್ರಿತರು ಮತ್ತು ಕವಿಗಳಿಗೆ ದೊರೆ ತೋರುತ್ತಿದ್ದ ಔದಾರ್ಯ ಅಪಾರವಾಗಿತ್ತು. ಅಸಂಖ್ಯಾತ ಕವಿಗಳಿಗೂ ಕಲಾವಿದರಿಗೂ ವಿದ್ವಾಂಸರಿಗೂ ಆತನು ಆಶ್ರಯದಾತನಾಗಿದ್ದನು. ಪ್ರಜೆಗಳ ಸುಖದುಃಖಗಳನ್ನು ವಿಚಾರಿಸಿ ಅವರ ಸಂಕಷ್ಟಗಳಿಗೆ ಪರಿಹಾರವನ್ನು ನೀಡುವುದರಲ್ಲಿ ತೋರುತ್ತಿದ್ದ ಆಸಕ್ತಿ ಮತ್ತು ತೆರಿಗೆ, ಸುಂಕ, ಕಂದಾಯಗಳ ವಿಚಾರದಲ್ಲಿ ತೋರುತ್ತಿದ್ದ ವಿನಾಯತಿ ಮೊದಲಾದ ಸಂಗತಿಗಳು ಆತನ ಉದಾರಗುಣಕ್ಕೆ ಸಾಕ್ಷಿಯಾಗಿವೆ. ದೊರೆಯು ತಕ್ಕಡಿಯಲ್ಲಿ ಕುಳಿತು ಚಿನ್ನ ಮತ್ತು ಇತರ ಅನರ್ಘ್ಯ ವಸ್ತುಗಳಿಂದ ತೂಗಿಸಿ 'ತುಲಾಭಾರ' ಮಾಡಿಸಿಕೊಂಡು, ಅದನ್ನು ಬ್ರಾಹ್ಮಣರಿಗೂ ಅಗತ್ಯವಿದ್ದ ಇತರ ಅರ್ಹ ವ್ಯಕ್ತಿಗಳಿಗೂ ನೀಡಿ 'ತುಲಾಪುರುಷದಾನ' ಮಾಡಿದ ವ್ಯಕ್ತಿಯೆನಿಸಿಕೊಂಡನು. ಕ್ರಿ.ಶ. 1430ರ ಶಾಸನವೊಂದರಲ್ಲಿ ಇಮ್ಮಡಿ ದೇವರಾಯನು, ವಜ್ರಾಲಂಕಾರ ಮಾಡಿದ ಸ್ವರ್ಣಗೋವನ್ನು ಅಗ್ರಹಾರಸಮೇತ ಬ್ರಾಹ್ಮಣರಿಗೆ ದಾನ ಮಾಡಿದ ಕುತೂಹಲಕಾರಿ ಸಂಗತಿ ಉಲ್ಲೇಖಿಸಿದೆ. ಮಂತ್ರಿಗಳಿಗೂ ಇತರ ಪ್ರಮುಖಾಧಿಕಾರಿಗಳಿಗೂ ಸಮಯೋಚಿತವಾಗಿ ಅನೇಕ ಸಂದರ್ಭಗಳಲ್ಲಿ ದೊರೆ ಉಡುಗೊರೆ-ಸನ್ಮಾನಗಳನ್ನು ನೀಡುತ್ತಿದ್ದನು. ಅದೇ ರೀತಿ

ಆತನ ಆಸ್ಥಾನಕ್ಕೆ ಭೇಟಿಯಿತ್ತ ಪರ್ಷಿಯಾದ ರಾಯಭಾರಿ ಅಬ್ದುಲ್ ರಜಾಕನಿಗೆ ಧಾರಾಳವಾಗಿ ಎಲ್ಲ ಬಗೆಯ ಸೌಕರ್ಯಗಳನ್ನೂ ದೊರಕಿಸಿದ್ದನು. ಕೊನೆಗೆ ರಾಯಭಾರಿ ರಜಾಕ್ ರಾಜ್ಯವನ್ನು ಬಿಟ್ಟು ತೆರಳುವಾಗ, ಆತನಿಗೆ ಒದಗಿಸಿದ ಆದರೋಪಚಾರಗಳಲ್ಲಿ ಕೆಳಗಿನ ಅಧಿಕಾರಿಗಳ ತಪ್ಪಿನಿಂದ ಆಗಿರಬಹುದಾದ ನ್ಯೂನತೆಗಳಿಗಾಗಿ ದೊರೆ ಕ್ಷಮಾಪಣೆ ಕೇಳಿದನೆಂದು ತಿಳಿಯುಬರುತ್ತದೆ. ದೊರೆ ಸರ್ವಧರ್ಮಪ್ರಿಯನಾಗಿದ್ದು ಎಲ್ಲ ಮತಧರ್ಮಗಳಿಗೂ ಸಮಾನ ಗೌರವಮನ್ನಣೆಗಳನ್ನು ನೀಡಿದ್ದನು. ಇದಕ್ಕೆ ಸಾಕ್ಷಿಯಾಗಿ ನಾನಾ ಮತಧರ್ಮಗಳ ದೇವರುಗಳಿಗೆ, ದೇವಸ್ಥಾನಗಳಿಗೆ, ಮಠ ಮಾನ್ಯಗಳಿಗೆ ದೊರೆಯೂ ಆತನ ವಂಶಸ್ಥರೂ ನೀಡಿರುವ ದತ್ತಿಗಳನ್ನು ಕುರಿತು ವಿವರಿಸುವ ಶಿಲಾಶಾಸನಗಳೂ ತಾಮ್ರ ಶಾಸನಗಳೂ ಅಸಂಖ್ಯಾತವಾಗಿ ದೊರಕುತ್ತವೆ. ಆದಿ ಶಂಕರಾಚಾರ್ಯರಿಂದ ಸ್ಥಾಪಿತವಾಗಿ, ಸಂಗಮ ವಂಶದ ಪುರೋಭಿವೃದ್ಧಿಗೆ, ಮುಖ್ಯವಾಗಿ ವಿಜಯನಗರದ ಸ್ಥಾಪನೆಯ ಆರಂಭ ಕಾಲದಲ್ಲಿ ನಿಕಟವಾಗಿ ಸಂಬಂಧಪಟ್ಟಿದ್ದ ಶೃಂಗೇರಿ ಮಠಕ್ಕೆ ಇಮ್ಮಡಿ ದೇವರಾಯನು ಕಾಣಿಕೆ-ಗೌರವಗಳನ್ನು ಸಲ್ಲಿಸಿ ತನ್ನ ಪೂರ್ವಿಕರ ಪರಂಪರೆಯನ್ನು ಮುಂದುವರಿಸಿದನು. ಇಮ್ಮಡಿ ದೇವರಾಯನು ಮೊದಲ ಬಾರಿಗೆ ಮುಸ್ಲಿಮರ ಬಗ್ಗೆ ಮತಸಹಿಷ್ಣುತೆಯ ಉದಾರಭಾವವನ್ನು ವ್ಯಕ್ತಪಡಿಸಿದನು. ಸಿಂಹಾಸನದ ಬಳಿ ಪವಿತ್ರ ಖುರಾನಿನ ಪ್ರತಿಯೊಂದನ್ನು ಇಟ್ಟು ಕೊಂಡಿರುತ್ತಿದ್ದನು. ಈ ಬಗೆಯ ಧೋರಣೆಯ ರಾಜಕೀಯ ಮಹತ್ವವೇನೇ ಇರಲಿ, ಇದು ಮುಸ್ಲಿಮರ ಧಾರ್ಮಿಕ ಭಾವನೆಗಳಿಗೆ ನೀಡುತ್ತಿದ್ದ ಗೌರವ ಮನ್ನಣೆಗಳ ಸಂಕೇತವಾಗಿತ್ತು ಎಂಬ ಮಾತು ನಿಜವಾದುದು. ಇದರ ಪರಿಣಾಮವಾಗಿ ಮುಸ್ಲಿಮರು ತಮ್ಮ ಮತಧರ್ಮದ ನಿಷ್ಠೆಗೆ ಕುಂದುಂಟಾಗದ ರೀತಿಯಲ್ಲಿ ದೊರೆಗೆ ವಿನಮ್ರರಾಗಿ ನಮಸ್ಕಾರಮಾಡುವಂತಾಯಿತು. ಅವರಿಗೆ ದೊರೆ ಮಸೀದಿಯನ್ನು ಕಟ್ಟಿಸಿಕೊಟ್ಟನು. ಅವರ ಧಾರ್ಮಿಕಾಚಾರಗಳಿಗೆ ಜನರಿಂದಾಗಲೀ ಅಧಿಕಾರವರ್ಗದಿಂದಾಗಲೀ ಯಾವುದೇ ರೀತಿಯಲ್ಲಿ ತೊಂದರೆ ಯುಂಟಾಗದಂತೆ ಆಜ್ಞೆಮಾಡಿ ವ್ಯವಸ್ಥೆಮಾಡಿದನು. ಈ ನಡವಳಿಕೆ ರಾಜನ ಉದಾರ ನೀತಿ, ಮತಧರ್ಮ ಸಹಿಷ್ಣುತೆಗೆ ಸಾಕ್ಷಿಯಾಗಿದೆ.

ರಾಜನೀತಿಯ ಬಗ್ಗೆ ಭಾರತೀಯ ಶಾಸ್ತ್ರಕಾರರು ನಿರೂಪಿಸಿದ ಸಂಪ್ರದಾಯದ ಆದರ್ಶಗಳು ಇಮ್ಮಡಿ ದೇವರಾಯನ ಆರ್ಥಿಕ ಮತ್ತು ಸಾಮಾಜಿಕ ಧೋರಣೆಗಳಲ್ಲಿ ಪ್ರಭಾವ ಬೀರಿದ್ದನ್ನು ಕಾಣಬಹುದಾಗಿತ್ತು. ಹಿಂದೂ ಶಾಸ್ತ್ರಕಾರರು ನಿರೂಪಿಸಿದ ವ್ಯವಸ್ಥೆ, ಆದರ್ಶಗಳನ್ನು ಇಮ್ಮಡಿ ದೇವರಾಯನು ಆರ್ಥಿಕ ಮತ್ತು ಸಾಮಾಜಿಕ ಧೋರಣೆಗಳ ಅನ್ವಯದಲ್ಲಿ ಅಳವಡಿಸಲು ಯತ್ನಿಸಿರುವುದನ್ನು ಆಗಿನ ಕಾಲದ ರಾಜಾದಾಯ ಆಡಳಿತ ಮೊದಲಾದ ವಿಚಾರಗಳಲ್ಲಿ ಪೂರ್ಣವಾಗಿ ಕಾಣಬಹುದು. ಆರ್ಥಿಕ ಸ್ಥಿತಿಗತಿಗಳ ಏರುಪೇರುಗಳನ್ನು ಗಮನಿಸಿ ತೆರಿಗೆಗಳನ್ನು ವಸೂಲುಮಾಡಲಾಗುತ್ತಿತ್ತು. ಕ್ಷಾಮ, ಪ್ರವಾಹ, ಅಥವಾ ಇನ್ನಾವುದೇ ಪೀಡೆಗಳು ಒದಗಿ ಜನರು ತೆರಿಗೆ ಕೊಡಲು ಅಶಕ್ತರಾದಾಗ ದೊರೆ ಸ್ವತಃ ವಿದ್ಯಮಾನಗಳನ್ನು ಪರಿಶೀಲಿಸಿ ಸೂಕ್ತ ಕ್ರಮಗಳನ್ನು ಕೈಗೊಂಡು ಅಗತ್ಯವೆನಿಸಿದ ಸಂದರ್ಭಗಳಲ್ಲಿ ತೆರಿಗೆ ನೀಡಲು ವಿನಾಯಿತಿ ತೋರುತ್ತಿದ್ದನು ಅಥವಾ ರದ್ದುಗೊಳಿಸುತ್ತಿದ್ದನು.

ದೊರೆಯ ಸಂಘಟನಾನೀತಿಯು ಹಿಂದೂಧರ್ಮದ ಪುನರುತ್ಥಾನಕ್ಕೆ ರಕ್ಷಾಕವಚವಾಗಿ ಪರಿಣಮಿಸಿತು. ಇದು ಇಮ್ಮಡಿ ದೇವರಾಯನ ಆಳಿಕೆಯ ಕಾಲದಲ್ಲಿನ ರಾಜಕೀಯ ಮಹತ್ವಕ್ಕೆ ಸಾಕ್ಷಿಯಾಗಿದೆ. ಮುಖ್ಯವಾಗಿ ಅಂತಃಕಲಹ, ದ್ವೇಷಾಸೂಯೆಗಳಿಂದ ಬಹಮನಿ ರಾಜ್ಯವು ಅವನತಿ ಹೊಂದಿತಾದರೂ ಆಂಧ್ರರಾಜ್ಯಗಳಿಗೂ ಬಹುಮನಿ ರಾಜ್ಯಕ್ಕೂ ಇದ್ದ ಬಾಂಧವ್ಯದ ಕೊಂಡಿಯನ್ನು ಕಳಚುವಲ್ಲಿ ದೇವರಾಯನು ಅನುಸರಿಸಿದ ಕಾರ್ಯನೀತಿಯೂ ಬಹುಮಟ್ಟಿಗೆ ಕಾರಣವಾಯಿತು ಎಂದರೆ ತಪ್ಪಾಗದು. ಇದರಿಂದ ವಿಜಯನಗರದ ಅರಸರ ಕೈಮೇಲಾಗಿ ಬಹಮನಿರಾಜ್ಯದ ಶಕ್ತಿ ಸಾಕಷ್ಟು ಕುಗ್ಗುವಂತಾಯಿತು. ಸಂಗಮವಂಶದ ಇತಿಹಾಸದಲ್ಲೇ ಮೊದಲ ಬಾರಿಗೆ ಇಮ್ಮಡಿ ದೇವರಾಯನು ಈಶಾನ್ಯ ರಕ್ಷಣಾಗಡಿಯಲ್ಲಿದ್ದ ಸಣ್ಣಪುಟ್ಟ ರೆಡ್ಡಿರಾಜ್ಯಗಳನ್ನು ಆಕ್ರಮಿಸಿಕೊಂಡನು. ಬಹು ಸಮರ್ಥನಾದ ಕೊಂಡವೀಡಿನ ಪೆದ್ದ

ಕೋಮಟಿಯ ಮರಣಾನಂತರ ಈ ರಾಜ್ಯಗಳು ರೂಪುಗೊಂಡಿದ್ದವು. ವಿರುಕೊಂಡ, ವಿನುಕೊಂಡ, ಕೊಂಡವೀಡು ಮತ್ತು ರಾಜಮಹೇಂದ್ರಿ ಮೊದಲಾದ ಸಣ್ಣಪುಟ್ಟ ಸ್ವತಂತ್ರ ರಾಜ್ಯಗಳನ್ನು ರಾಜ್ಯದಾಹದಿಂದ ಕೂಡಿದ ಬಹಮನಿ ಮತ್ತು ಗಜಪತಿ ಅರಸರು ಕಬಳಿಸಲು ಸದಾ ಹೊಂಚುಹಾಕುತ್ತಿದ್ದರು. ವಿಜಯನಗರದ ಪೂರ್ವದ ಗಡಿಪ್ರದೇಶವೂ ಸುಭದ್ರದ ನೆಲೆ ಆಗಿರಲಿಲ್ಲ. ಈ ಭಾಗದ ರಾಜ್ಯಗಳನ್ನು ವಿಜಯನಗರ ಸಾಮ್ರಾಜ್ಯಕ್ಕೆ ಅಧೀನ ಮಾಡಿ ವಿನುಕೊಂಡ ಮುಂತಾದ ಕಡೆಗಳಲ್ಲಿ ರಾಜಪ್ರತಿನಿಧಿಗಳನ್ನು ನೇಮಿಸಿದನು. ಈ ರೀತಿ ಪೂರ್ವದ ಗಡಿಭಾಗದ ಅಪಾಯವನ್ನು ತಪ್ಪಿಸಿದ ಶ್ರೇಯಸ್ಸು ಇಮ್ಮಡಿ ದೇವರಾಯನಿಗೆ ಸಲ್ಲುತ್ತದೆ. ಇಮ್ಮಡಿ ದೇವರಾಯನು ಲಕ್ಕಣ್ಣ ದಂಡನಾಯಕನ ಸಹಾಯದಿಂದ ಸಿಂಹಳದ ಗಡಿಯ ವರೆಗೆ ದಕ್ಷಿಣದಲ್ಲಿ ಸಾಮ್ರಾಜ್ಯವನ್ನು ವಿಸ್ತರಿಸಿದನು. ಕೇರಳವನ್ನು ಸ್ವಾಧೀನ ಪಡಿಸಿಕೊಂಡು ಕ್ವಿಲಾನಿನ ದೊರೆ ಮತ್ತು ಕೇರಳದ ಇತರ ನಾಯಕರುಗಳಿಂದ ಕಪ್ಪಕಾಣಿಕೆಗಳನ್ನು ಪಡೆದನು. ಹೀಗೆ ವಿಜಯನಗರ ಸಾಮ್ರಾಜ್ಯವನ್ನು ವಿಸ್ತರಿಸಿದುದಲ್ಲದೆ ಪರಿಣಾಮಕಾರಿಯಾಗಿ ಆಡಳಿತ ವ್ಯವಸ್ಥೆ ಮಾಡಿದನು. ದಕ್ಷಿಣದಲ್ಲಿ ಪ್ರಬಲ ನೌಕಾಪಡೆಯನ್ನು ಸಜ್ಜುಗೊಳಿಸಿ, ವಿಜಯನಗರ ಸಾಮ್ರಾಜ್ಯವನ್ನು ಬಹು ವಿಸ್ತಾರ ಮಾಡಿ ಸಮಸ್ತ ದಕ್ಷಿಣ ಭಾರತದ ಚಕ್ರವರ್ತಿ ಎಂದೆನ್ನಿಸಿಕೊಂಡನು. ಪರ್ಷಿಯಾದ ರಾಯಭಾರಿ ಅಬ್ದುಲ್ ರಜಾಕನ ಮಾತುಗಳಲ್ಲೇ ಹೇಳುವುದಾದರೆ, "ಸಿಲೋನಿನ ಗಡಿಯಿಂದ ಗುಲ್ಬರ್ಗದ ವರೆಗೆ ಒರಿಸ್ಸಾದಿಂದ ಮಲಬಾರಿನ ವರೆಗೆ ಇಮ್ಮಡಿ ದೇವರಾಯನ ಸಾಮ್ರಾಜ್ಯ ಹಬ್ಬಿತ್ತು."

ಸಾಹಿತ್ಯ ಮತ್ತು ಕಲೆಗೆ ಅಪಾರ ಪ್ರೋತ್ಸಾಹ ನೀಡಿ ಪೋಷಿಸಿದವರಲ್ಲಿ ಇಮ್ಮಡಿ ದೇವರಾಯ ಮತ್ತು ಕೃಷ್ಣದೇವರಾಯ ಇಬ್ಬರೂ ಒಂದೇ ವರ್ಗಕ್ಕೆ ಸೇರಿದವರು ಎನ್ನಬಹುದು. ಕೃಷ್ಣದೇವರಾಯನ ಕಾಲ ತೆಲುಗು ಸಾಹಿತ್ಯದ ಉಚ್ಛ್ರಾಯ ಕಾಲವೆನಿಸಿದರೆ, ವಿಜಯನಗರದ ಇತಿಹಾಸದಲ್ಲೇ ಮತ್ತಾವ ಅವಧಿಯಲ್ಲೂ ಕಂಡುಬಾರದಂತಹ ಕನ್ನಡ ಸಾಹಿತ್ಯದ ಅಭಿವೃದ್ಧಿ ಇಮ್ಮಡಿ ದೇವರಾಯನ ಕಾಲದಲ್ಲಿ ಆಯಿತು ಎಂಬ ಸಂಗತಿ ಗಮನಾರ್ಹವಾಗಿದೆ. ಈತನ ಕಾಲದಲ್ಲಿ ವಾಸ್ತು ಶಿಲ್ಪ, ಕುಶಲಕಲೆ, ಸಂಗೀತ, ಚಿತ್ರಕಲೆ ಮೊದಲಾದ ಲಲಿತಕಲೆಗಳಿಗೆ ಅಪಾರ ಉತ್ತೇಜನ ದೊರಕಿತು. ಕೃಷ್ಣದೇವರಾಯನ ಕಾಲಕ್ಕಿಂತಲೂ ಇಮ್ಮಡಿ ದೇವರಾಯನ ಆಳಿಕೆಯಲ್ಲಿ ಜನರು ಹೆಚ್ಚು ಸುಖ ಶಾಂತಿಗಳಿಂದಿರುತ್ತಿದ್ದರು ಎನ್ನಬಹುದು. ಇಮ್ಮಡಿ ದೇವರಾಯನ ಕಾಲದಲ್ಲಿ ಹಜಾರ ರಾಮನ ದೇವಾಲಯ ನಿರ್ಮಾಣವಾಯಿತು. ಇಲ್ಲಿನ ಶಾಸನ ವೊಂದರಲ್ಲಿ ದೊರೆಯನ್ನು ಭೋಜರಾಜನಿಗೆ ಹೋಲಿಸಲಾಗಿದೆ. ಈ ದೇವಾಲಯದಲ್ಲಿ ಮತ್ತು ಅರಮನೆ ಯಲ್ಲಿ ಕಂಡುಬರುವ ಚಿತ್ರಕಲೆಯನ್ನು ನ್ಯೂನಿಜ್ ಮತ್ತು ಪಾಯಸ್ ಅವರು ವರ್ಣಿಸಿರುವುದನ್ನು ಕಂಡರೆ, ಆ ಕಾಲದ ಕಲಾವೈಭವದ ಕಲ್ಪನೆಯಾಗುತ್ತದೆ. ಇಮ್ಮಡಿ ದೇವರಾಯನು ತನ್ನ ಅದ್ವಿತೀಯ ಸಾಧನೆಗಳಿಂದ ಭಾರತವನ್ನು ಆಳಿದ ಅತಿ ಶ್ರೇಷ್ಠ ದೊರೆಗಳಲ್ಲಿ ಒಬ್ಬನೆನಿಸಿಕೊಂಡಿದ್ದಾನೆ.

# ಸಾಳುವ ವಂಶ

ಪ್ರಾಚೀನ ಮತ್ತು ಪ್ರತಿಷ್ಠಿತ ಮನೆತನಕ್ಕೆ ಸೇರಿದ ಸಾಳುವರು ವಿಜಯನಗರದ ಅರಸರ ಕೈಕೆಳಗೆ ಸೇನೆಯಲ್ಲಿ ಅಪ್ರತಿಮ ಸೇವೆ ಸಲ್ಲಿಸಿದ ಸ್ಥಳೀಯ ನಾಯಕರಾಗಿದ್ದರು. ಸಿಂಹಾಸನವನ್ನಾಕ್ರಮಿಸಿದ ಮೇಧಾವಿ ಮತ್ತು ಮಹತ್ವಾಕಾಂಕ್ಷಿಯಾದ ನರಸಿಂಹನು ಕ್ರಿ.ಶ. 1456 ರಲ್ಲಿ ಚಂದ್ರಗಿರಿಯ ರಾಜ್ಯಪಾಲನಾಗಿ ರಾಜಕೀಯ ಜೀವನದಲ್ಲಿ ಕಾಲಿಟ್ಟನು. ಆ ವೇಳೆಗಾಗಲೇ ಮಲ್ಲಿಕಾರ್ಜುನ ಮತ್ತು ವಿರೂಪಾಕ್ಷರ ದುರ್ಬಲ ಆಡಳಿತದ, ಗಜಪತಿ ಹಾಗೂ ಬಹಮನಿ ರಾಜರುಗಳ ಆಕ್ರಮಣಗಳ ಫಲವಾಗಿ ವಿಜಯನಗರ ಸಾಮ್ರಾಜ್ಯವು ಬಹುಮಟ್ಟಿಗೆ ಬಲಹೀನವಾಗಿತ್ತು. ಈ ಸನ್ನಿವೇಶವು, ಚಾಣಾಕ್ಷ ರಾಜಕಾರಣಿಯೂ ಸಮರ್ಥ ದಂಡನಾಯಕನೂ ಆದ ನರಸಿಂಹನು ತನ್ನ ಪ್ರತಿಭೆ ಸಾಮರ್ಥ್ಯಗಳನ್ನು ಪ್ರದರ್ಶಿಸಲು ಸುವರ್ಣಾವಕಾಶವನ್ನು ದೊರಕಿಸಿತು. ಈ ಅವಕಾಶವನ್ನು ಸದುಪಯೋಗಪಡಿಸಿಕೊಂಡು ಶತ್ರುಗಳನ್ನು ಹಿಂದಕ್ಕೆ ಹೊಡೆದಟ್ಟಿ ವಿದೇಶಿಯರ ಆಕ್ರಮಣದಿಂದ ಸಾಮ್ರಾಜ್ಯವನ್ನು ಪಾರುಮಾಡಿದನು. ಈ ವಿಜಯಗಳ ಫಲವಾಗಿ ಜನಪ್ರಿಯತೆ, ಅಧಿಕಾರ ಪ್ರತಿಷ್ಠೆ, ರಾಜ್ಯಾಡಳಿತದಲ್ಲಿ ಪ್ರಾಶಸ್ತ್ಯ ಮೊದಲಾದವು ಆತನಿಗೆ ಲಭಿಸಿದವು. ಕ್ರಿ.ಶ. 1477ರ ಸುಮಾರಿನಲ್ಲಿ ಸಾಮ್ರಾಜ್ಯದ ಪೂರ್ವ ಮತ್ತು ಉತ್ತರ ಭಾಗಗಳಿಗೆ ಅಧಿಪತಿಯಾಗಿದ್ದನು. ಅನಂತರ ನರಸಿಂಹನು ವಿರೂಪಾಕ್ಷ ದೊರೆಯ ದುರಾಡಳಿತ ಮತ್ತು ಆತನ ಉತ್ತರಾಧಿಕಾರಿಯ ಅಸಾಮರ್ಥ್ಯದ ಫಲವಾಗಿ ಅತೃಪ್ತಗೊಂಡ ಗಣ್ಯರ ಮತ್ತು ಅಧಿಕಾರಿ ವರ್ಗದವರ ಬೆಂಬಲವನ್ನು ಚಾಣಾಕ್ಷತನದಿಂದ ಗಿಟ್ಟಿಸಿದನು. ಸುಸಂಧಿಯನ್ನು ಸಾಧಿಸಿ ರಾಜಧಾನಿಯತ್ತ ದಂಡೆತ್ತಿ ಹೋಗಿ, ಅಲ್ಪಸ್ವಲ್ಪ ವಿರೋಧವನ್ನು ಎದುರಿಸಿ ರಕ್ತಪಾತವೇ ಇಲ್ಲವೆನ್ನಬಹುದಾದ ರೀತಿಯಲ್ಲಿ ಸ್ವತಃ ಸಿಂಹಾಸನವನ್ನು ಆಕ್ರಮಿಸಿಕೊಂಡನು.

ಈ ಕ್ರಾಂತಿ ರಾಜಕೀಯ ಮತ್ತು ರಾಜಮನೆತನದ ಕ್ರಾಂತಿಯಾದರೂ ಸಾಳುವ ಅರಸರ ಆಕ್ರಮಣ ಪ್ರಜಾಹಿತವನ್ನು ಸಾಧಿಸಿ ಸಮರ್ಥನೀಯವೆನಿಸಿಕೊಂಡಿತು. ಹಾಗಾದರೂ ಮುಂದೆ ಎರಡು ದಶಕಗಳೊಳಗಾಗಿಯೇ ನಡೆದ ಕ್ರಾಂತಿಗೆ ಇದು ನಾಂದಿಯಾಯಿತು. ನರಸಿಂಹನ ಆರು ವರ್ಷಗಳ (ಕ್ರಿ.ಶ. 1485—1491ರ ವರೆಗೆ) ಅಲ್ಪಕಾಲಾವಧಿಯ ಆಳಿಕೆ ನಾನಾ ರೀತಿಯ ಅಡ್ಡಿ ಆತಂಕಗಳ ಫಲವಾಗಿ ಅವನಂದುಕೊಂಡಷ್ಟು ಯಶಸ್ವಿಯಾಗಲಿಲ್ಲ. ಆತನು ಪಾಳೆಯಗಾರ ದೊರೆಗಳ ದಂಗೆಗಳನ್ನು ಅಡಗಿಸಬೇಕಾಯಿತು. ಗಜಪತಿರಾಜನಾದ ಪುರುಷೋತ್ತಮನು ಆಂಧ್ರದ ತೀರ ಪ್ರದೇಶದ ಮೇಲೆ ದಾಳಿಯಿಟ್ಟು ಉದಯಗಿರಿ ಕೋಟೆಯನ್ನು ವಶಪಡಿಸಿಕೊಂಡನು. ಹೀಗೆ ಉಂಟಾದ ನಷ್ಟವನ್ನು ತುಂಬಿಸಿಕೊಳ್ಳಲು ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿರುವಷ್ಟರಲ್ಲೇ ನರಸಿಂಹನ ಆಳಿಕೆ ಅಂತ್ಯಗೊಂಡಿತು.

ನರಸಿಂಹದೊರೆಯ ಇಬ್ಬರು ಮಕ್ಕಳು ಅಪ್ರಾಪ್ತವಯಸ್ಕರಾಗಿದ್ದರಿಂದ ಆತನ ಮಂತ್ರಿಯಾಗಿದ್ದ ತುಳುವಂಶದ ನರಸನಾಯಕನು ರಾಜಕುಮಾರ ಪೋಷಕನಾಗಿಯೂ, ರಾಜಪ್ರತಿನಿಧಿಯಾಗಿಯೂ ನೇಮಕಗೊಂಡನು. ಅಧಿಕಾರ ಸೂತ್ರಗಳನ್ನು ಕೈಯಲ್ಲಿ ಹಿಡಿದ ನರಸನಾಯಕನು ನಿರಂಕುಶನಾಗಿ ವರ್ತಿಸುತ್ತ ವಾಸ್ತವವಾದ ಸಾರ್ವಭೌಮನಂತೆಯೇ ಆಳತೊಡಗಿದನು. ಇಬ್ಬರು ರಾಜಕುಮಾರರಲ್ಲಿ ಹಿರಿಯವನು ಕೊಲೆ ಮಾಡಲ್ಪಟ್ಟನು. ಕಿರಿಯವನಾದ ಇಮ್ಮಡಿ ನರಸಿಂಹನು ಸಾಂಪ್ರದಾಯಿಕವಾಗಿ ಅಧಿಕಾರದ ಗದ್ದುಗೆಯನ್ನೇರಿದರೂ ಅವನಿಗೆ ತಕ್ಕ ಗೌರವ ದೊರೆಯಲೇ ಇಲ್ಲ. ಕ್ರಿ.ಶ. 1503ರಲ್ಲಿ ನರಸನಾಯಕ ಸತ್ತ ಮೇಲೆ ಅವನ ಮಗ ವೀರನರಸಿಂಹ ತಂದೆಯ ಸ್ಥಾನದಲ್ಲಿ ತಾನೇ ನಿಂತು ರಾಜಪ್ರತಿನಿಧಿಯಾದನು. ಕ್ರಿ.ಶ. 1505ರಲ್ಲಿ ಇಮ್ಮಡಿ ನರಸಿಂಹನು ಪರಲೋಕ ಸೇರಲು, ವೀರನರಸಿಂಹನು ಸಿಂಹಾಸನಾರೋಹಣ ಮಾಡಿ ಸಾರ್ವಭೌಮನೆನಿಸಿಕೊಂಡನು. ಇಲ್ಲಿಗೆ ಸಾಳುವ ವಂಶದ ಎರಡು ದಶಕಗಳ ಅಲ್ಪಾವಧಿಯ ಆಳಿಕೆ ಅಂತ್ಯಗೊಂಡಿತು.

## ತುಳುವಂಶ

ಹೀಗೆ ವೀರನರಸಿಂಹನು ಹೊಸ ತುಳುವಂಶದ ಮೊದಲನೆಯ ದೊರೆಯಾದನು. ಈಗ ವಿಜಯ ನಗರ ಸಾಮ್ರಾಜ್ಯದ ಆಗುಹೋಗುಗಳನ್ನು ತುಳುವಂಶ ರೂಪಿಸಿ ನಡಸತೊಡಗಿತು. ನರಸನಾಯಕನ ತಂದೆ ಈಶ್ವರ ನಾಯಕನ ಪ್ರತಿಭಾಸಾಮರ್ಥ್ಯದಿಂದ ತುಳುವಂಶ ಪ್ರಸಿದ್ಧಿಗೆ ಬಂತು. ಈಶ್ವರ ನಾಯಕನು ಸಾಳುವ ನರಸಿಂಹನ ದಂಡನಾಯಕರಲ್ಲಿ ಪ್ರಸಿದ್ಧನಾದವನು. (ಸಾಳುವ ವಂಶದ ಚರಿತ್ರೆ ಮತ್ತು ಅದರ ಸಾಧನೆಗಳನ್ನು ಆಗಲೇ ಹಿಂದಿನ ಆಧ್ಯಾಯದಲ್ಲಿ ವಿವರಿಸಲಾಗಿದೆ).

ವೀರನರಸಿಂಹನು ಅತ್ಯಲ್ಪಾವಧಿ–ಕ್ರಿ.ಶ. 1505 ರಿಂದ 1509ರ ವರೆಗೆ–ಕೇವಲ ನಾಲ್ಕು ವರ್ಷಗಳ ಕಾಲ ರಾಜ್ಯವಾಳಿದನು. ಈತನ ಅವಧಿಯ ಪೂರಾ ಸಾಮಂತರ ವಿರೋಧ, ಸುತ್ತಮುತ್ತಲ ಅರಸರ ಒತ್ತುಪರಿ ಉಪಟಳ ಮೊದಲಾದವು ತುಂಬಿದ್ದವು. ಸೈನ್ಯದಲ್ಲಿ ಸುಧಾರಣೆಗಳನ್ನು ಮಾಡಲೂ ರಾಜ್ಯದ ಆಡಳಿತ ಕ್ಷೇತ್ರದಲ್ಲಿ ದಕ್ಷತೆಯನ್ನು ತರಲೂ ಅವನು ತನ್ನಿಂದ ಸಾಧ್ಯವಿದ್ದಷ್ಟೂ ಶ್ರಮಿಸಿ, ಪ್ರಯತ್ನ ಮಾಡಿದನು. ಆದರೂ ಆ ಪ್ರಯತ್ನ ಗಮನಾರ್ಹವಾದಷ್ಟು ಸಫಲವಾಗಲಿಲ್ಲ.

ಕ್ರಿ.ಶ. 1509ರಲ್ಲಿ ವೀರನರಸಿಂಹನು ಅಕಸ್ಮಾತ್ತಾಗಿ ಮಡಿದನಂತರ ಕೃಷ್ಣದೇವರಾಯನು ಪಟ್ಟಕ್ಕೆ ಬಂದನು. 1509ನೇ ಇಸವಿ ಆಗಸ್ಟ್ ಎಂಟನೆಯ ತಾರೀಖು, ಕೃಷ್ಣಜನ್ಮಾಷ್ಟಮಿ ದಿನದಂದು ಕೃಷ್ಣಪರಮಾತ್ಮನೇ ಅವತರಿಸಿದನು ಎಂಬಂತೆ–ಸಿಂಹಾಸನವನ್ನೇರಿ ಕಿರೀಟಧರನಾದನು. ದೊರೆ ಪಟ್ಟಾಭಿಷೇಕದ ವೇಳೆಗೆ ಇಪ್ಪತ್ತೈದು ವರುಷಗಳ ತುಂಬು ತಾರುಣ್ಯದ ಚೆಲುಯುವಕನಾಗಿದ್ದಿರಬೇಕು. ಪಾಯಸ್ ವರ್ಣಿಸಿರುವ ಪ್ರಕಾರ, ''ಸಾಧಾರಣ ಎತ್ತರದ, ಸೌಮ್ಯವರ್ಣದ, ಅಷ್ಟೇನೂ ನೀಳಾಂಗನಾಗಲಿ ಅಥವಾ ಭಾರಾಂಗನಾಗಲಿ ಆಗಿರದೆ, ಗೌರಾಂಗನಾದ ಸುಂದರಾಂಗನಾಗಿದ್ದನು. ಮುಖದ ಮೇಲೆ ಸಿಡುಬಿನ ಕಲೆಗಳು ಇದ್ದವು. ಅರಿಭಯಂಕರನೂ ಪರಮಶ್ರೇಷ್ಠ ಸಾರ್ವಭೌಮನೂ ನಯನಮನೋಹರ ಮಂದ ಸ್ಮಿತ ಮದನಸುಂದರನೂ ಆಗಿದ್ದನು. ವಿದೇಶೀಯರನ್ನು ವಿಶ್ವಾಸದಿಂದ ಬರಮಾಡಿಕೊಂಡು ಆದರದ ಆತಿಥ್ಯ ನೀಡಿ ಸತ್ಕರಿಸಿ ಅವರ ಯೋಗಕ್ಷೇಮವನ್ನು ವಿಚಾರಿಸುವ ಸೌಜನ್ಯಮೂರ್ತಿಯಾಗಿದ್ದನು. ಕೃಷ್ಣದೇವರಾಯನು ಆಡಳಿತ ನಿಪುಣನೂ, ನ್ಯಾಯಧುರಂಧರನೂ ಆಗಿದ್ದನು. ನಿರಂತರ ಅಂಗಸಾಧನೆ, ಕುದುರೆ ಸವಾರಿ, ಕತ್ತಿವರಸೆ, ಮೊದಲಾದ ಸಾಧನೆಗಳಿಂದ ದೃಢಾಂಗನೆನ್ನಿಸಿ ಅದ್ಭುತ ದೇಹದಾರ್ಢ್ಯಕ್ಕೆ ಹೆಸರುವಾಸಿಯಾಗಿದ್ದನು. 'ಪಾರಿಜಾತಾಪಹರಣಮು' ಎಂಬ ಕೃತಿಯಲ್ಲಿ, ಅಶ್ವವಿದ್ಯೆಯಲ್ಲಿ ದೊರೆಯನ್ನು ಪಂಚಪಾಂಡವರಲ್ಲಿ ಒಬ್ಬನಾದ ನಕುಲನಿಗೆ ಹೋಲಿಸಲಾಗಿದೆ.

ವೀರನರಸಿಂಹನು ದೇಶದ ಒಳ ಮತ್ತು ಹೊರ ಶತ್ರುಗಳನ್ನು ಅಡಗಿಸಲು ಸಾಕಷ್ಟು ಪ್ರಯತ್ನ ಪಟ್ಟಿದ್ದನಾದರೂ ಕೃಷ್ಣದೇವರಾಯನು ಅಧಿಕಾರಕ್ಕೆ ಬಂದಾಗ ಸಾಮ್ರಾಜ್ಯವು ಸುಭದ್ರ ಸ್ಥಿತಿಯಲ್ಲಿರಲಿಲ್ಲ. ಒರಿಸ್ಸಾದ ದೊರೆಯಾದ ಪ್ರತಾಪರುದ್ರನು ಗೋಲ್ಕೊಂಡ ಮೊದಲಾದ ಮುಸ್ಲಿಮ್ ರಾಜ್ಯಗಳೊಂದಿಗೆ ದುರುದ್ದೇಶದಿಂದ ಜತೆಗೂಡಿಸಲು ಪ್ರಯತ್ನಿಸಿದನಲ್ಲದೆ ಕೊಂಡವೀಡು ಮತ್ತು ಉದಯಗಿರಿಗಳನ್ನು ಆಕ್ರಮಿಸಿಕೊಂಡು, ಪ್ರತ್ಯಕ್ಷ ವಿರೋಧವನ್ನು ಸಾಮ್ರಾಟನಿಗೆ ವ್ಯಕ್ತಪಡಿಸಿದನು. ಬಹಮನಿ ಸಾಮ್ರಾಜ್ಯವು ಐದು ಸ್ವತಂತ್ರ ರಾಜ್ಯಗಳಾಗಿ ಒಡೆದುಹೋಗಿದ್ದರೂ ವಿಜಯನಗರದ ಮೇಲೆ ಯುದ್ಧ ಹೂಡುವುದಕ್ಕೆ

ತಕ್ಕಷ್ಟು ಪ್ರಚೋದನೆ ಇದ್ದೇ ಇತ್ತು; ಮೊದಲನೆಯದು, ಯುದ್ಧದಲ್ಲಿ ದೊರೆಯಬಹುದಾದ ಕೊಳ್ಳೆ ಸೂರೆಗಳ ಆಸೆ; ಎರಡನೆಯದು, ನೆರೆಯ 'ಕಾಫಿರ್' ರಾಜ್ಯದ ಮೇಲೆ ವರ್ಷೇ ವರ್ಷೇ ನಡೆಸಬೇಕಾದ 'ಜೇಹಾದ್' ದಾಳಿ. 1501ರಲ್ಲಿ ಎರಡನೆಯ ಮಹಮದ್ ಈ ವಾರ್ಷಿಕ 'ಜೇಹಾದ್' ಕಡ್ಡಾಯವಾಗಿ ಅನುಸರಿಸಬೇಕಾದ ರಾಜ್ಯದ ನೀತಿಯೆಂದು ನಿರೂಪಿಸಿದ್ದನು. ಸಾಮ್ರಾಜ್ಯದ ಉತ್ತರ ಭಾಗದ ಗಡಿನಾಡು ಬಿಜಾಪುರವನ್ನು ಆಳುತ್ತಿದ್ದ ಆದಿಲ್ ಶಾಹಿ ವಂಶದ ಯೂಸುಫ್ ಆದಿಲ್‌ಖಾನ್ ವಿಜಯನಗರದ ಮೇಲೆ ಆಕ್ರಮಣ ನಡೆಸಲು ಸದಾ ಹೊಂಚುಹಾಕುತ್ತಿದ್ದನು. ಈ ವಿಷಯವನ್ನು ಅವನು ರಹಸ್ಯವಾಗಿಯೇನೂ ಇಟ್ಟಿರಲಿಲ್ಲ. ಪಶ್ಚಿಮ ತೀರ ಪ್ರದೇಶವನ್ನು ಪೋರ್ಚುಗೀಸರು ಆವರಿಸಿಕೊಂಡು ತಮ್ಮ ವಾಣಿಜ್ಯಕ್ಷೇತ್ರವನ್ನು ವಿಸ್ತರಿಸಿಕೊಳ್ಳುವುದಕ್ಕಾಗಿ ದಕ್ಷಿಣ ಭಾರತದ ರಾಜ್ಯಗಳೊಡನೆ ರಾಜಕೀಯ ಬಾಂಧವ್ಯಗಳನ್ನು ಕುದುರಿಸಿಕೊಳ್ಳಲು ಸಮಯ ಕಾಯುತ್ತಿದ್ದರು. ಆದರೆ ವಿಜಯನಗರದ ಅರಸರು ಶತ್ರುರಾಜ್ಯಗಳೊಡನೆ ಪೋರ್ಚುಗೀಸರು ವ್ಯವಹರಿಸಲು ಅವಕಾಶವನ್ನೇ ನೀಡಿರಲಿಲ್ಲ. ಸಾಮ್ರಾಜ್ಯದಲ್ಲೇ ಹಲವು ಸಾಮಂತನಾಯಕರು ಸಾಮ್ರಾಜ್ಯದ ವಿರುದ್ಧ ದಂಗೆಯೇಳಲು ಹವಣಿಸುತ್ತಿದ್ದರು. ಇವರ ಪೈಕಿ ಪ್ರಸಿದ್ಧನಾದವನೆಂದರೆ ಉಮ್ಮತ್ತೂರಿನ ಗಂಗರಾಜ. ಶಿವಸಮುದ್ರ ಮತ್ತು ಶ್ರೀರಂಗಪಟ್ಟಣ ಈ ಎರಡು ದ್ವೀಪಮಧ್ಯದ ಬಲವಾದ ಕೋಟೆಗಳು ಈತನ ಅಧೀನದಲ್ಲಿದ್ದವು.

ಕೃಷ್ಣದೇವರಾಯನಿಗೆ ಸಾಮ್ರಾಜ್ಯದ ಉತ್ತರ ಭಾಗದಲ್ಲಿದ್ದ ಮುಸ್ಲಿಮ್ ರಾಜರೊಡನೆ ಹೋರಾಡುವ ಕಾರ್ಯ ಕೇವಲ ಸಾಮ್ರಾಜ್ಯವಿಸ್ತಾರಕ್ಕೆ ಸಂಬಂಧಿಸಿದ ರಾಜಕೀಯ ವಿದ್ಯಮಾನವಷ್ಟೇ ಆಗಿರದೆ, ನೈತಿಕ ಕರ್ತವ್ಯನಿಷ್ಠೆಗೆ ಸಂಬಂಧಿಸಿದ ವಿಷಯವೂ ಆಗಿತ್ತು. ದೊರೆ ಪಟ್ಟಾಭಿಷಿಕ್ತನಾದ ಮೇಲೆ ಒಂದು ವರ್ಷದ ಕಾಲ ರಾಜಧಾನಿಯಲ್ಲಿದ್ದು ರಾಜ್ಯದ ವಿದ್ಯಮಾನಗಳನ್ನೆಲ್ಲಾ ಚೆನ್ನಾಗಿ ಅರಿತು ತನ್ನ ಹಿಂದಿನ ಅರಸರ ಆಶೋತ್ತರ, ಆಡಳಿತ ವೈಭವ, ಸಾಧನೆಗಳನ್ನು ಚೆನ್ನಾಗಿ ಮನಗಂಡನು. ಹೀಗೆ ತನ್ನ ಹಿಂದಿನ ಅರಸರ ಆಶೆ, ಆಕಾಂಕ್ಷೆ, ನಿಶ್ಚಯ ನಿರ್ಧಾರಗಳನ್ನು ಅರಿಯುತ್ತಿರುವಾಗ ಸಾಳುವ ನರಸಿಂಹನು ರಾಯಚೂರು ಮತ್ತು ಮುದಗಲ್, ಉದಯಗಿರಿಗಳನ್ನು ಗೆಲ್ಲಬೇಕೆಂಬ ಆಸೆಯನ್ನು ಹೊಂದಿದ್ದನೆಂದು ತಿಳಿಯಿತು. ಈ ಸಂಗತಿಯ ಸತ್ಯಾಸತ್ಯತೆ ಏನೇ ಇರಲಿ, ಕೃಷ್ಣದೇವರಾಯನು ಆಗಿನ ಸಾಮ್ರಾಜ್ಯದ ಸ್ಥಿತಿಗತಿಗಳನ್ನು ಆಮೂಲಾಗ್ರವಾಗಿ ಅಧ್ಯಯನ ಮಾಡಿ ಪೂರ್ಣವಿವೇಚನೆಯಿಂದ ಖಚಿತ ನಿರ್ಧಾರದ ಕಾರ್ಯಕ್ರಮವನ್ನು ಹೊಂದಿದ್ದನೆಂಬುದು ನಿಜ. ಹೀಗೆ ಪೂರ್ವಾಪರಯೋಜನೆ, ನಿರ್ದಿಷ್ಟ ಯೋಜನೆ, ದೂರದೃಷ್ಟಿ, ದೃಢನಿಷ್ಠೆ, ಸತತಪ್ರಯತ್ನಗಳಿಲ್ಲದಿದ್ದಲ್ಲಿ ಕೃಷ್ಣದೇವರಾಯನು ಅಷ್ಟುಮಟ್ಟಿಗೆ ತನ್ನ ಉದ್ದೇಶಗಳನ್ನು ಸಾಧಿಸಿಕೊಳ್ಳುವುದು ಶಕ್ಯವಾಗುತ್ತಿರಲಿಲ್ಲ.

ಈ ಮಧ್ಯೆ ಮುಸ್ಲಿಮ್ ಸುಲ್ತಾನರು ಭಾರಿ ಪ್ರಯತ್ನಗಳನ್ನು ನಡೆಸಿದ್ದರು. ಎರಡನೆಯ ಸುಲ್ತಾನ್ ಮಹಮದ್ ಶಹ ಮತ್ತು ಯೂಸುಫ್ ಆದಿಲ್‌ಖಾನ್ ಇಬ್ಬರೂ ಸೇರಿ ಭಾರಿ ಸೇನೆಯನ್ನು ಜಮಾಯಿಸಿ ಅನೇಕ ಮುಸ್ಲಿಮ್ ಮನ್ನೆಯರನ್ನು ಒಗ್ಗೂಡಿಸಿ ದಕ್ಷಿಣದ ಕಡೆಗೆ ವಿಜಯನಗರದತ್ತ ಹೊರಟು ಹೊಸತಾಗಿ ಅಧಿಕಾರಕ್ಕೆ ಬಂದ ಸಾಮ್ರಾಟ್ ಕೃಷ್ಣದೇವರಾಯನು ತಮ್ಮನ್ನು ಎದುರಿಸಲು ಆಗದೆ ಪರಾಜಿತನಾಗುತ್ತಾನೆಂಬ ದೃಢನಂಬಿಕೆಯಿಂದ ಗಡಿಯ ವರೆಗೆ ದಂಡೆತ್ತಿ ಬಂದರು. ಆದರೆ ವಿಜಯನಗರದ ಸೇನೆ ಸುಲ್ತಾನರ ಸೇನೆಯನ್ನು ಗಡಿಯಲ್ಲಿ ತಡೆಗಟ್ಟಿತು. ಯುದ್ಧ ನಡೆದು ಶತ್ರುಸೇನೆ ನುಚ್ಚುನೂರಾಯಿತು. ಸುಲ್ತಾನನು ತೀವ್ರಾಘಾತಗಳಿಗೆ ಒಳಗಾದನು. ಮುಸ್ಲಿಮ್ ಸೈನಿಕರು ದಿಕ್ಕುಗೆಟ್ಟು ಚೆಲ್ಲಾಪಿಲ್ಲಿಯಾಗಿ ಓಡಿದರು. ತೀವ್ರವಾಗಿ ಗಾಯಗೊಂಡ ಸುಲ್ತಾನನು ಭಗ್ನಮನೋರಥನಾಗಿ ಬೀದರಿಗೆ ಹಿಂದಿರುಗಿದನು. ವಿಜಯನಗರದ ವೀರ ಯೋಧರು ಹಿಮ್ಮೆಟ್ಟಿದ ಮುಸ್ಲಿಮರನ್ನು ಮತ್ತೆ ಬೆನ್ನಟ್ಟಿ ಹಿಂದಕ್ಕೆ ಅಟ್ಟಿದರು. ಕೋವಿಲಕೊಂಡ ಎಂಬ ಸ್ಥಳದಲ್ಲಿ ಮುಸ್ಲಿಮರು ಮತ್ತೆ ಸೋತರು. ಯೂಸುಫ್ ಆದಿಲ್‌ಖಾನ್ ಸಾವಿಗೀಡಾದನು.

ಈತನ ಮರಣದಿಂದ ಬಿಜಾಪುರದ ರಾಜಕೀಯ ರಂಗದಲ್ಲಿ ಅವ್ಯವಸ್ಥೆಯುಂಟಾಗಿ ಅದರ ಪ್ರಭಾವಶಕ್ತಿಯು ಕುಡಿ ಮುರುಟಿಕೊಂಡಿತು.

ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಕೃಷ್ಣದೇವರಾಯನು ತನ್ನ ದಾರಿಯನ್ನು ಕಂಡುಕೊಂಡು ಅವಕಾಶವನ್ನು ಸದುಪಯೋಗಪಡಿಸಿಕೊಳ್ಳಲು ಪ್ರಯತ್ನಿಸಿದನು. ಕೃಷ್ಣಾ-ತುಂಗಭದ್ರೆಗಳ ನಡು ಪ್ರದೇಶದಲ್ಲಿ ಸಾಗಿ ಕ್ರಿ.ಶ. 1512ರಲ್ಲಿ ರಾಯಚೂರು ವಿಜಯ ಸಾಧಿಸಿದನು. ಅನಂತರ ಹೆಚ್ಚಿನ ಶ್ರಮವಿಲ್ಲದೆ ಗುಲ್ಬರ್ಗಕ್ಕೆ ಮುತ್ತಿಗೆ ಹಾಕಿ ಸ್ವಲ್ಪ ಸಮಯದಲ್ಲೇ ಅದನ್ನು ವಶಪಡಿಸಿಕೊಂಡನು. ಮುಸ್ಲಿಮ್ ಸೇನೆ ಬೀದರ್ ಕಡೆಗೆ ಹಿಂದಕ್ಕೆ ಸರಿಯಿತು. ಮಂತ್ರಿಯಾದ ಅಮೀರ್ ಬರೀದನು ಎರಡನೆಯ ಸುಲ್ತಾನ್ ಮಹಮುದನನ್ನು ಬೀದರಿನಲ್ಲಿ ಸೆರೆ ಹಾಕಿದನು. ಚತುರ ಚಾಣಕ್ಯನಾದ ಕೃಷ್ಣದೇವರಾಯನು ಸುಲ್ತಾನನನ್ನು ಬಂಧನದಿಂದ ಬಿಡುಗಡೆ ಮಾಡಿ ಅವನನ್ನು ಬಹಮನಿ ಸಿಂಹಾಸನದ ಮೇಲೆ ಮತ್ತೆ ಕೂಡಿಸಿದನು. ಈ ಮೂಲಕ ಒಂದೇಟಿಗೆ ಎರಡು ಹಕ್ಕಿಗಳನ್ನು ಹೊಡೆದಂತೆ ಲಾಭವಾಯಿತು. ತನ್ನ ಶತ್ರುವಾದವನು ಕೃತಜ್ಞನಾಗುವಂತಾಯಿತು. ಮತ್ತೆ ಆತನು ಈತನ ಅನುಯಾಯಿಯಾದನು. ಈ ಘಟನೆಯಿಂದ ಪಾಳೆಯಗಾರರು ಸಾಮಂತರು ವಿರುದ್ಧ ಪ್ರಯತ್ನ ಮಾಡುವುದೂ ತಮ್ಮ ಕೈಕೆಳಗಿನವರನ್ನು ಎತ್ತಿಕಟ್ಟುವುದೂ ಕಡಮೆಯಾಯಿತು. ಈ ವಿಜಯದ ಸಂಕೇತವಾಗಿ ಕೃಷ್ಣದೇವರಾಯನು "ಯವನರಾಜ್ಯ ಸ್ಥಾಪನಾಚಾರ್ಯ" ಎಂಬ ಬಿರುದನ್ನು ಧರಿಸಿದನು.

ಕೃಷ್ಣದೇವರಾಯನು ಶತ್ರುವನ್ನು ದುರ್ಬಲಗೊಳಿಸುವ ನೀತಿಯನ್ನು ಪೋರ್ಚುಗೀಸರಿಗೂ ಅನ್ವಯಿಸಲು ಯತ್ನಿಸಿದನೆಂದು ತಿಳಿಯುತ್ತದೆ. ತೀರಪ್ರದೇಶದ ಪಟ್ಟಣಗಳಲ್ಲಿ ನೆಲಸಲು ಸಹಾಯ ಮಾಡುವುದಾದರೆ ಕೃಷ್ಣದೇವರಾಯನಿಗೆ ವಿಶೇಷ ರೀತಿಯ ಅಶ್ವಗಳನ್ನು ವಿಜಯನಗರದ ರಾಜ್ಯಕ್ಕೆ ಬೇಕಾಗುವಷ್ಟನ್ನು ಬೇರಾರಿಗೂ ಕೊಡದೆ ಅವನಿಗೆ ಮಾತ್ರವೇ ಒದಗಿಸುವುದಾಗಿ, ಭಾರತದಲ್ಲಿ ಪೋರ್ಚುಗೀಸರ ಪ್ರದೇಶಗಳ ಗೌರ್ನರ್ ಅಲ್ಬುಕರ್ಕ್ 1509ರಲ್ಲಿ ಸಲಹೆಯನ್ನು ಮುಂದಿಟ್ಟನು. ಈ ಸಲಹೆಗೆ ಕೃಷ್ಣದೇವರಾಯನು ಕಿವಿಗೊಡದೆ ಉದಾಸೀನವಾಗಿದ್ದುಬಿಟ್ಟನು. ಅನೇಕ ಶತಮಾನಗಳಿಂದ ಕರ್ನಾಟಕದ ಅರಸರ ಅಧೀನದಲ್ಲಿದ್ದ ಗೋವಾವನ್ನು ಬಹಮನಿ ಸುಲ್ತಾನರು ಸ್ವಲ್ಪ ಕಾಲದ ಹಿಂದೆ ಗೆದ್ದು ತಮ್ಮ ರಾಜ್ಯಕ್ಕೆ ಸೇರಿಸಿಕೊಂಡಿದ್ದರು. ಸೂಕ್ಷ್ಮಮತಿಯಾದ ಆಲ್ಬುಕರ್ಕ್ ಸನ್ನಿವೇಶವನ್ನು ಚೆನ್ನಾಗಿ ಅರ್ಥಮಾಡಿಕೊಂಡು ತೀವ್ರಕಾರ್ಯಾಚರಣೆಗೆ ಪ್ರಾರಂಭಿಸಿದನು. ಅನೇಕ ತಿಂಗಳ ಕಾಲ ಬಿಜಾಪುರದ ಮೇಲೆ ಹೋರಾಡಿ ಅನಂತರ 1510ರಲ್ಲಿ ಗೋವಾವನ್ನು ವಶಪಡಿಸಿಕೊಂಡನು. ಇದು ಪರಿಣಾಮದಲ್ಲಿ ವಿಜಯನಗರಕ್ಕೆ ಸಾಕಷ್ಟು ನಷ್ಟವೆಂದೆನ್ನಿಸಿದರೂ ಶತ್ರುವಿಗಾದ ಸೋಲು ನಷ್ಟಗಳನ್ನು ಕಂಡು ತೃಪ್ತಿಗೊಂಡು ಕೃಷ್ಣದೇವರಾಯನು ತನ್ನ ಪಾಡಿಗೆ ತಾನು ಸುಮ್ಮನಿದ್ದನು.

ಕೃಷ್ಣದೇವರಾಯನು ಬಹಮನಿ ರಾಜ್ಯದ ಮೇಲೆ ಮಾಡಿದ ಯುದ್ಧ ಮುಗಿದ ಮೇಲೆ ಕೂಡಲೇ ಸಾಮ್ರಾಜ್ಯದ ವಿರುದ್ಧ ದಂಗೆಯೆದ್ದ ಉಮ್ಮತ್ತೂರಿನ ಗಂಗರಾಜನನ್ನು ಅಡಗಿಸಲು ಹೊರಟನು. ಪೆನುಕೊಂಡವನ್ನು ಮೊದಲು ಗೆದ್ದು ಆ ಮೇಲೆ ಶ್ರೀರಂಗಪಟ್ಟಣ ಮತ್ತು ಶಿವಸಮುದ್ರಗಳ ಮೇಲೆ ದಾಳಿಯಿಟ್ಟು ವಶಪಡಿಸಿಕೊಂಡನು. ಹೋರಾಟದಲ್ಲಿ ಗಂಗರಾಜನು ಮರಣವನ್ನಪ್ಪಿದನು. ಅವನ ವಶದಲ್ಲಿದ್ದ ಪ್ರದೇಶಗಳನ್ನೆಲ್ಲಾ ಒಂದಾಗಿ ಮಾಡಿ ಶ್ರೀರಂಗಪಟ್ಟಣವನ್ನು ಅದರ ರಾಜಧಾನಿಯನ್ನಾಗಿ ಮಾಡಿದನು.

ಅನಂತರ ಕೃಷ್ಣದೇವರಾಯ ಒರಿಸ್ಸಾದ ದೊರೆ ಗಜಪತಿ ಪ್ರತಾಪರುದ್ರದೇವನತ್ತ ತಿರುಗಿದನು. ಒರಿಸ್ಸಾ ದುರ್ಭೇದ್ಯ ಕೋಟೆ ಕೊತ್ತಲಗಳಿಂದಲೂ ದುರ್ಗಮ ಮಾರ್ಗದಿಂದಲೂ ಕೂಡಿದ್ದು ಗೆಲ್ಲಲು

ಅಸಾಧ್ಯವೆನಿಸಿದ್ದಿತು. ಆದರೆ ಕೃಷ್ಣದೇವರಾಯನು ಅನೇಕ ವೇಳೆ ಸ್ವತಃ ಸೇನೆಯನ್ನು ಮುನ್ನಡೆಸುತ್ತಿದ್ದನು. ಅವನು ಮುತ್ತಿಗೆ ಹಾಕಿ ವಶಪಡಿಸಿಕೊಂಡ ಹಲವಾರು ಬಲವಾದ ಕೋಟೆಗಳಲ್ಲಿ ಉದಯಗಿರಿ, ಕೊಂಡವೀಡು, ವಿಜಯವಾಡ, ಕೊಂಡಪಲ್ಲಿ ಮತ್ತು ರಾಜಮಹೇಂದ್ರಿ—ಇವು ಅತ್ಯಂತ ಬಲವಾದವುಗಳು. ಇವುಗಳನ್ನು ವಶಪಡಿಸಿಕೊಳ್ಳಲು ಬಳಸಿದ ಸಂಪತ್ಸಾಧನಗಳು, ಯುದ್ಧಸಾಮಗ್ರಿಗಳು, ಸೇನೆ, ಸಮರತಂತ್ರಗಳು ಮತ್ತು ಪ್ರತಾಪರುದ್ರನ ಮೇಲೆ ನಡೆದ ಅವ್ಯಾಹತ ದಾಳಿ ಮೊದಲಾದವನ್ನು ಕಂಡಾಗ, ಅಜೇಯ ಕೃಷ್ಣದೇವ ರಾಯನು ಸೇನಾತಂತ್ರದಲ್ಲಿ ನೆಪೋಲಿಯನ್ನನಂತೆ ಪ್ರತಿಭಾವಂತ ಸಮರವಿಚಕ್ಷಣ ತಂತ್ರವಿಶಾರದನೂ ವೀರಯೋಧನೂ ಆಗಿದ್ದನೆಂದು ಹೇಳಬಹುದಾಗಿದೆ. ಒರಿಸ್ಸಾದ ರಾಜಧಾನಿ ಕಟಕ್ ಬಳಿಗೆ ವಿಜಯನಗರದ ಸೇನೆ ಸಾಗಿ ಬಂದು ವಿಜಯದುಂದುಭಿಯನ್ನು ಮೊಳಗಿಸಲು, ವಿಧಿಯಿಲ್ಲದೆ ಪ್ರತಾಪರುದ್ರನು ಸಂಧಾನಕ್ಕೆ ಸಿದ್ಧನಾದನು. ಕೃಷ್ಣಾನದಿಯ ಉತ್ತರ ಭಾಗದಲ್ಲಿ ಗೆದ್ದ ರಾಜ್ಯಗಳನ್ನೆಲ್ಲಾ ಪ್ರತಾಪರುದ್ರನಿಗೆ ನೀಡಿ ಆತನ ಕುಮಾರಿಯಾದ ಜಗನ್ಮೋಹಿನಿಯನ್ನು ವರಿಸಿ ಮಧುರ ಸ್ನೇಹಬಾಂಧವ್ಯವನ್ನು ಗಳಿಸಿದ್ದನ್ನು ಕಂಡರೆ ಕೇವಲ ರಾಜ್ಯದಾಹವೇ–ಸಾಮ್ರಾಜ್ಯದ ವಿಸ್ತರಣವೇ-ಕೃಷ್ಣದೇವರಾಯನ ಪರಮ ಗುರಿಯಾಗಿರಲಿಲ್ಲವೆಂದು ವ್ಯಕ್ತವಾಗುತ್ತದೆ. ಒರಿಸ್ಸಾದ ಹೋರಾಟಕ್ಕೆ ಆರು ವರ್ಷಗಳು (ಕ್ರಿ.ಶ. 1513ರಿಂದ 1518ವರೆಗೆ) ಹಿಡಿದವು. ಪಂಚಮುಖಿಗಳಲ್ಲಿ ಸಮರತಂತ್ರವನ್ನು ನಿಯೋಜಿಸಲಾಗಿತ್ತು.

ಪ್ರತಾಪರುದ್ರನ ಸೋಲಿನಿಂದ ಒರಿಸ್ಸಾದ ರಾಜ್ಯಬಲ ಕ್ಷೀಣಗೊಂಡಿತು. ಗೋಲ್ಕೊಂಡದ ಕುಲಿ ಕುತುಬ್‌ಶಹ ಒರಿಸ್ಸಾದ ಮೇಲೆ ದಾಳಿಮಾಡಿ ಅನೇಕ ಪ್ರದೇಶಗಳನ್ನು ಆಕ್ರಮಿಸಿದನು. ಈ ವಿಜಯಗಳಿಂದ ಮದೋನ್ಮತ್ತನಾದ ಅವನು ವಿಜಯನಗರವನ್ನು ಬೆದರಿಸಲು ಯತ್ನಿಸಿದನು. ಕೃಷ್ಣದೇವರಾಯನು ಸಾಳುವ ತಿಮ್ಮನ ಕೈಕೆಳಗೆ ಸೇನೆಯನ್ನು ಕೊಟ್ಟು ಕಳುಹಿಸಿದನು. ಆತನು ಗೋಲ್ಕೊಂಡದ ಸೇನೆಯನ್ನು ಸೋಲಿಸಿ ಹೊಡೆದಟ್ಟಿದನು. ಸಾಳುವ ತಿಮ್ಮನು ಗೆದ್ದ ಪ್ರದೇಶಗಳಲ್ಲಿ ಸುಭದ್ರ ಆಡಳಿತದ ವ್ಯವಸ್ಥೆಮಾಡಿ ರಾಜಧಾನಿಗೆ ಹಿಂದಿರುಗಿದನು.

ಒರಿಸ್ಸಾ ಮೊದಲಾದ ಕಡೆ ದೊರೆ ಕೃಷ್ಣದೇವರಾಯನು ಯುದ್ಧ ಮಗ್ನನಾಗಿದ್ದಾಗ ಬಿಜಾಪುರದ ಇಸ್ಮಾಯಿಲ್ ಆದಿಲ್‌ಶಹನು ರಾಯಚೂರನ್ನು ಕೈವಶಮಾಡಿಕೊಂಡನು. ಈ ಸಂಗತಿಯನ್ನು ಕೇಳಿ ಕೆರಳಿದ ಕೇಸರಿಯಾದ ಕೃಷ್ಣದೇವರಾಯನು ಕನಲಿ ರಾಯಚೂರಿನ ಮೇಲೆ ದಂಡೆತ್ತಿ ಹೋಗಿ ಮುತ್ತಿಗೆ ಹಾಕಿದನು. ಅವನ ವಿರುದ್ಧ ಹೋರಾಡಲು ಯತ್ನಿಸಿದ ಸುಲ್ತಾನನ ಸೇನೆ ಅಪಾರ ಹಾನಿ ಹೊಂದಿತು. 1520ನೆಯ ಇಸವಿ ಮೇ ತಿಂಗಳಿನಲ್ಲಿ ರಾಯಚೂರು ದೊರೆಯ ವಶವಾಯಿತು. ಸುಲ್ತಾನನು ಈ ಸೋಲನ್ನು ಲೆಕ್ಕಿಸದೆ ಭಂಡ ಧೈರ್ಯದಿಂದ ಕೃಷ್ಣದೇವರಾಯನ ಬಳಿಗೆ ಅವನು ಗೆದ್ದಿದ್ದ ರಾಯಚೂರು ಮತ್ತು ಉಳಿದ ಪ್ರದೇಶಗಳನ್ನು ತನಗೆ ಹಿಂದಕ್ಕೆ ಒಪ್ಪಿಸುವಂತೆ ಒತ್ತಾಯ ಮಾಡಲು ರಾಯಭಾರಿಯನ್ನು ಕಳಿಸಿದನು.

ಕೃಷ್ಣದೇವರಾಯನು ಅದಕ್ಕೆ ಉತ್ತರವಾಗಿ, ಸುಲ್ತಾನನು ಮುದಗಲ್ಲಿನ ಬಳಿ ತನ್ನನ್ನು ಭೇಟಿಯಾಗಿ ಕಾಲಿಗೆ ಬಿದ್ದು ಶರಣಾದರೆ ಆತನ ಮಾತನ್ನು ನಡೆಸಿಕೊಡುವುದಾಗಿ ಹೇಳಿ ಕಳುಹಿಸಿದನು. ವಿಷಯವನ್ನು ಚೆನ್ನಾಗಿ ಅರ್ಥಮಾಡಿಕೊಂಡ ಸುಲ್ತಾನನು ಕೃಷ್ಣದೇವರಾಯನನ್ನು ಭೇಟಿಯಾಗಲು ಬರಲಿಲ್ಲ. ಕೃಷ್ಣದೇವರಾಯನು ಬಿಜಾಪುರದ ಮೇಲೆ ದಾಳಿಯಿಟ್ಟಾಗ ಅಲ್ಲಿಂದ ಸುಲ್ತಾನನು ಪರಾರಿಯಾಗಿ ಮತ್ತೆ ದೊರೆಯ ಬಳಿಗೆ ರಾಯಭಾರವನ್ನು ಕಳುಹಿಸಿದನು. ಈ ಸಲ ರಾಯಭಾರಿಯ ವಿಶ್ವಾಸಘಾತಕತನದಿಂದ ರಾಯಭಾರ ವಿಫಲಗೊಂಡಿತು. ಯುದ್ಧ ನಡೆದು ಮತ್ತೊಮ್ಮೆ ಬಿಜಾಪುರದ ಸೇನೆ ಸೋಲನ್ನು ಅನುಭವಿಸಿತು. ಬಿಜಾಪುರ ಸೂರೆಯಾಯಿತು. ಅದಾದ ಮೇಲೆ ಗುಲ್ಬರ್ಗ ಸ್ವಾಧೀನವಾಯಿತು. ಸೆರೆಮನೆಯಲ್ಲಿ ಕೊಳೆಯುತ್ತಿದ್ದ ಬಹಮನಿ ರಾಜಕುಮಾರರಲ್ಲಿ ಒಬ್ಬನನ್ನು ಸುಲ್ತಾನನನ್ನಾಗಿ ನೇಮಿಸಲಾಯಿತು.

ಇಲ್ಲಿಗೆ ಕೃಷ್ಣದೇವರಾಯನ ದಿಗ್ವಿಜಯ ಪರಂಪರೆ ಒಂದು ಘಟ್ಟವನ್ನು ಮುಟ್ಟಿತು. ಸುಸಂಘಟಿತ ರೀತಿಯಲ್ಲಿ ಸೇನೆಯನ್ನು ಸಜ್ಜುಗೊಳಿಸಿ ಮುನ್ನಡೆಸಿದುದರಿಂದಲೂ ಅದ್ಭುತ ರೀತಿಯಲ್ಲಿ ಸಮರ ತಂತ್ರಗಳನ್ನು ಅನುಸರಿಸಿದುದರಿಂದಲೂ ಒಂದೇ ಸಮನೆ ಒಂದರ ಮೇಲೊಂದು ರಾಜ್ಯವನ್ನು ಗೆಲ್ಲಲು ದೊರೆಗೆ ಸಾಧ್ಯವಾಯಿತು. ವಶಪಡಿಸಿಕೊಂಡ ರಾಜ್ಯದ ಶತ್ರುವಿನ ಬಗ್ಗೆ ತೋರುತ್ತಿದ್ದ ಮಾನವೀಯತೆಯ ಪರಿಣಾಮವಾಗಿ ಯಾವುದೇ ರೀತಿಯ ಬದ್ಧದ್ವೇಷದ ಶೇಷ ಉಳಿಯಲು ಸಾಧ್ಯವಾಗಲಿಲ್ಲ. ದೊರೆ ಉದಾರತನ, ದಯಾ ಕ್ಷಮಾಗುಣಗಳಿಂದ ದಾನಧರ್ಮ ದತ್ತಿಗಳಿಂದ ಸಕಲ ಜನಪ್ರಿಯನು ಆದನು. ಸೈನ್ಯದ ನಾಯಕತ್ವವನ್ನು ವಹಿಸಿ ಸ್ವತಃ ಹೋರಾಡುವುದರ ಮೂಲಕ ತನ್ನ ಸೈನಿಕರ ಪ್ರೀತಿವಿಶ್ವಾಸಗಳನ್ನು ಗಳಿಸಿದನು. ಹೋರಾಟದಲ್ಲಿ ಅಪ್ರತಿಮ ಶೌರ್ಯದಿಂದ ಮೆರೆದವರಿಗೆ ವಿಶೇಷ ಮನ್ನಣೆ ಬಹುಮಾನಗಳನ್ನು ನೀಡುತ್ತಿದ್ದನು. ಮತ್ತು ಗಾಯಗೊಂಡು ನೊಂದ ಸೈನಿಕರನ್ನು ಸ್ವತಃ ವಿಚಾರಿಸಿಕೊಳ್ಳುತ್ತಿದ್ದನು. ಇದರಿಂದ ಸೈನಿಕರೆಲ್ಲ ಅವನಿಗೆ ನಿಷ್ಠೆಯುಳ್ಳವರಾದರು.

ಕೃಷ್ಣದೇವರಾಯನು ತನ್ನ ಗ್ರಂಥ 'ಆಮುಕ್ತ ಮಾಲ್ಯದ'ದಲ್ಲಿ ಉಲ್ಲೇಖಿಸಿರುವ ರೀತಿಯಲ್ಲಿ ಸಾಮ್ರಾಜ್ಯದ ಆಡಳಿತ ವ್ಯವಸ್ಥೆಯನ್ನು ನಡೆಸುತ್ತಿದ್ದನು. ಆ ಗ್ರಂಥದ ನಾಲ್ಕನೆಯ ಸರ್ಗದಲ್ಲಿ "ಸರ್ಕಾರದ ಆದಾಯವನ್ನು ನಾಲ್ಕು ಭಾಗಗಳನ್ನಾಗಿ ವರ್ಗೀಕರಿಸಬೇಕು. ಒಂದು ಭಾಗವನ್ನು ದಾನಧರ್ಮಗಳಿಗಾಗಿ ಮತ್ತು ಸುಖ ಸಂತೃಪ್ತಿಗಳನ್ನು ಪಡೆಯಲು ಬಳಸಬೇಕು. ಎರಡು ಭಾಗವನ್ನು ಸುಸಜ್ಜಿತ ಸಶಕ್ತ ಸೇನಾಸಿದ್ಧತೆಗೆ ಬಳಸಬೇಕು. ಉಳಿದ ಭಾಗವನ್ನು ಆಪದ್ಧನವನ್ನಾಗಿ ಉಳಿಸಿಡಬೇಕು" ಎಂದು ಹೇಳಿದ್ದಾನೆ. ಕೃಷ್ಣದೇವರಾಯನ ಸೇನಾಬಲದ ಮಹತ್ವವನ್ನೂ ಐಶ್ವರ್ಯದ ಅಪಾರ ಪ್ರಮಾಣವನ್ನೂ ಈ ಸೂಚನೆಯಿಂದ ಊಹಿಸಿ ಅರ್ಥಮಾಡಿಕೊಳ್ಳಬಹುದಾಗಿದೆ. ಆತನು ಜನತಾ ಕಲ್ಯಾಣಕ್ಕಾಗಿ ಬಹು ಮಟ್ಟಿಗೆ ಶ್ರಮಿಸುತ್ತಿದ್ದನು ಎಂಬುದಕ್ಕೆ ಸಾಮ್ರಾಜ್ಯದಾದ್ಯಂತ ಆತನು ಕೈಗೊಂಡ ಅತಿದೀರ್ಘ ಪ್ರವಾಸಗಳೂ ಆ ಪ್ರವಾಸ ಕಾಲದಲ್ಲಿ ಪ್ರತಿಯೊಂದು ಪರಿಸ್ಥಿತಿಯನ್ನೂ ಪ್ರತ್ಯಕ್ಷವಾಗಿ ಅರಿತು ಪ್ರಾಂತಾಡಳಿತದಲ್ಲಿ ಕಂಡು ಬಂದ ಎಲ್ಲ ಬಗೆಯ ಲೋಪದೋಷಗಳನ್ನೂ ಸರಿಪಡಿಸುತ್ತಿದ್ದದ್ದೂ ಸಾಕ್ಷ್ಯಗಳಾಗಿವೆ. ಸಾಕಷ್ಟು ಅಧಿಕಾರವ್ಯಾಪ್ತಿಯನ್ನು ಹೊಂದಿದ್ದ ಪ್ರಾಂತಾಧಿಕಾರಿಗಳ ಆಡಳಿತ ವ್ಯವಸ್ಥೆಯಿದ್ದ ಸಾಮ್ರಾಜ್ಯದಲ್ಲಿ ಮೇಲ್ಕಂಡ ರೀತಿಯ ಸಂಚಾರ ಮತ್ತು ವ್ಯವಸ್ಥೆ ಅತ್ಯಗತ್ಯ ಕ್ರಮಗಳಾಗಿದ್ದವು. 'ಪ್ರಭುಶಕ್ತಿ', 'ಮಂತ್ರಶಕ್ತಿ' ಮತ್ತು 'ಉತ್ಸಾಹಶಕ್ತಿ' ಗಳೆಂಬ ತತ್ವತ್ರಯಗಳಿಗೆ ತಕ್ಕಂತೆ ಆಡಳಿತದ ಧ್ಯೇಯಧೋರಣೆಗಳನ್ನು ನಿರ್ಧರಿಸುತ್ತಿದ್ದನು. ರಾಜ್ಯದ ಭದ್ರತೆಯು, ಸಮರ್ಥ ರಾಜನ ಅಧಿಕಾರಶಕ್ತಿ, ವಿಚಕ್ಷಣ ಅಮಾತ್ಯಸಚಿವರ ಮಾರ್ಗದರ್ಶನಶಕ್ತಿ ಮತ್ತು ಅರಸರ–ಪ್ರಜೆಗಳ ಉತ್ಸಾಹ–ಚೇತನಶಕ್ತಿಗಳನ್ನು ಅವಲಂಬಿಸಿರುತ್ತದೆ. ಯಾವುದೇ ರಾಜ್ಯದ ಮೇಲೆ ದಂಡಯಾತ್ರೆ ಕೈಗೊಳ್ಳಬೇಕಾದರೂ ಪ್ರತಿಯೊಂದು ಮುಖ್ಯ ಸಂದರ್ಭದಲ್ಲೂ ತನ್ನ ಮಂತ್ರಿಗಳೊಡನೆ ಮತ್ತು ಆಪ್ತರೊಡನೆ ಸಮಾಲೋಚಿಸದೆ ಮುಂದುವರಿಯುತ್ತಿರಲಿಲ್ಲ. ಸ್ಥಳೀಯ ಸಂಸ್ಥೆಗಳು ಯಾವುದೇ ನಿರ್ಬಂಧವಿಲ್ಲದೆ ಸ್ವತಂತ್ರವಾಗಿ ತಮ್ಮ ಕಾರ್ಯವನ್ನು ನಿರ್ವಹಿಸಲು ಅವಕಾಶ ಕೊಡಲಾಗಿತ್ತು. ವ್ಯವಸಾಯಾಭಿವೃದ್ಧಿಗಾಗಿ ಭಾರಿ ನೀರಾವರಿಯೋಜನೆಗಳನ್ನು ಕೈಗೊಳ್ಳಲಾಯಿತು. ವ್ಯಾಪಾರ–ವಾಣಿಜ್ಯಗಳು ಅಭಿವೃದ್ಧಿ ಹೊಂದಿದವು. ಪದಾರ್ಥಗಳ ಬೆಲೆ ಅಗ್ಗವಾಗಿತ್ತು. ಪಾಯಸ್ ನ್ಯೂನಿಜ್ ಮೊದಲಾದ ವಿದೇಶೀ ಪ್ರವಾಸಿಕರು ಸಾಮ್ರಾಜ್ಯದ ಸಿರಿ, ಆಸ್ಥಾನದ ವೈಭವ, ಸೇನಾಸಾಮರ್ಥ್ಯ, ಜನರ ಸುಖ ಸಂತೃಪ್ತಿಗಳ ಜೀವನ—ಮೊದಲಾದವನ್ನು ಅತಿಶಯವಾಗಿ ಬಣ್ಣಿಸಿದ್ದಾರೆ. ಪೋರ್ಚುಗೀಸರು ರಾಜ್ಯಕ್ಕೆ ಕುದುರೆಗಳನ್ನು ಒದಗಿಸುವ ವ್ಯಾಪಾರದಲ್ಲಿ ತೊಡಗಿದ್ದ ಅರಬರನ್ನು ಮತ್ತು ಪರ್ಷಿಯನ್ನರನ್ನು ಹೊರಹಾಕಿದ್ದರು. ಆದರೆ ಕೃಷ್ಣದೇವರಾಯನಿಗೆ ಸೇನೆಗಾಗಿ ಉತ್ತಮಾಶ್ವಗಳ ಅಗತ್ಯ ಅಧಿಕವಾಗಿದ್ದುದರಿಂದ ಪೋರ್ಚುಗೀಸರೊಡನೆ ಮಧುರಬಾಂಧವ್ಯವನ್ನು ಇಟ್ಟುಕೊಂಡಿದ್ದನು.

ಕೃಷ್ಣದೇವರಾಯನಿಗೆ ಸ್ವಾಮಿನಿಷ್ಠೆಯಿಂದ ಸೇವೆ ಸಲ್ಲಿಸಿದ ಸಮರ್ಥರಾದ ಅಮಾತ್ಯ ಸಚಿವರಿದ್ದರು. ಅವರಲ್ಲಿ ಪ್ರಸಿದ್ಧನೂ ಪ್ರತಿಭಾವಂತನೂ ಆದವನೆಂದರೆ ಸಾಳುವ ತಿಮ್ಮರಸ. ಸಾಮ್ರಾಟನೂ ಇತರರೂ ತಿಮ್ಮರಸಾಮಾತ್ಯನನ್ನು ಆತ್ಮೀಯತೆಯಿಂದ 'ಅಪ್ಪಾಜಿ' ಎಂದು ಕರೆಯುತ್ತಿದ್ದರು. ಕ್ರಿ.ಶ. 1509 ರಲ್ಲಿ ವೀರನರಸಿಂಹನು ತನ್ನ ಎಂಟು ವರ್ಷದ ಮಗನಿಗೆ ಪಟ್ಟಕಟ್ಟುವ ಉದ್ದೇಶದಿಂದ ಕೃಷ್ಣದೇವರಾಯನ ಕಣ್ಣುಗಳನ್ನು ಕಿತ್ತು ತಂದು ತೋರಿಸಲು ತಿಮ್ಮರಸಾಮಾತ್ಯನಿಗೆ ಆಜ್ಞೆ ಮಾಡಿದಾಗ, ಆತನು ಕೃಷ್ಣದೇವ ರಾಯನನ್ನು ಬಚ್ಚಿಟ್ಟು ವೀರನರಸಿಂಹನಿಗೆ ಮೇಕೆಯ ಕಣ್ಣುಗಳನ್ನು ತಂದು ತೋರಿಸಿ ರಾಯನನ್ನು ಕಾಪಾಡಿದನು. ಯುದ್ಧರಂಗದಲ್ಲಿ ಮತ್ತು ಆಡಳಿತ ಕ್ಷೇತ್ರದಲ್ಲಿ ಕೃಷ್ಣದೇವರಾಯನಿಗೆ ಬಹು ನಿಷ್ಠೆಯಿಂದ ಅಪಾರ ಸೇವೆ ಸಲ್ಲಿಸಿದನು. ಆದರೆ ಆಳಿಕೆಯ ಕೊನೆಯಲ್ಲಿ ತನ್ನ ಮಕ್ಕಳೊಂದಿಗೆ ಸೇರಿಕೊಂಡು ಸಾಮ್ರಾಟನ ಏಕಮಾತ್ರ ಪುತ್ರನಿಗೆ ವಿಷಹಾಕುವ ಸಂಚಿನಲ್ಲಿ ಪಾಲ್ಗೊಂಡನೆಂದು ತಿಳಿದುಬಂದು ಆತನಿಗೂ ಆತನ ಇಬ್ಬರು ಮಕ್ಕಳಿಗೂ ಕಣ್ಣು ಕೀಳಿಸಿ ಕುರುಡರನ್ನಾಗಿಸಲಾಯಿತು.

ಗುಪ್ತರ ಕಾಲದ ವಿಕ್ರಮಾದಿತ್ಯನೆಂದು ಹೆಸರಾದ ಚಂದ್ರಗುಪ್ತನಂತೆ ಕೃಷ್ಣದೇವರಾಯನು ಬಹುಮುಖ ಪ್ರತಿಭೆಯನ್ನು ಹೊಂದಿದ್ದನು. ವಿವಿಧಕಲಾವಿಶಾರದನೂ, ಬಹುಶ್ರುತನೂ ಆಗಿದ್ದನು. ಸಂಸ್ಕೃತ ಮತ್ತು ತೆಲುಗು ಭಾಷೆಗಳಲ್ಲಿ ಪ್ರಸಿದ್ಧ ವಿದ್ವಾಂಸನಾಗಿದ್ದನು. '**ಆಮುಕ್ತಮಾಲ್ಯದ**' ಮತ್ತು '**ಜಾಂಬವತೀ ಕಲ್ಯಾಣ**' ಎಂಬ ಕೃತಿಗಳನ್ನು ರಚಿಸಿದನು. ತೆಲುಗಿನಲ್ಲಿ ಬರೆದ 'ಆಮುಕ್ತಮಾಲ್ಯದ' ಮಹಾಭಾರತ, ಮನುಧರ್ಮಶಾಸ್ತ್ರ ಮತ್ತು ಶುಕ್ರನೀತಿಸಾರಗಳನ್ನು ಆಧರಿಸಿ ರಾಜ್ಯಭಾರ ಕ್ರಮದ ಬಗ್ಗೆ ಅನೇಕ ವಿಷಯಗಳನ್ನೊಳಗೊಂಡಿದೆ. '**ಜಾಂಬವತೀ ಕಲ್ಯಾಣ**' ದೊರೆಯು ಸಂಸ್ಕೃತದಲ್ಲಿ ರಚಿಸಿದ ಕೃತಿ. ಅಷ್ಟದಿಗ್ಗಜಗಳೆಂದು ಪ್ರಸಿದ್ಧರಾದ ಎಂಟು ಮಂದಿ ಕವಿಗಳು ಅವನ ಆಸ್ಥಾನದಲ್ಲಿದ್ದುದರಿಂದ ಆಂಧ್ರಭೋಜನೆಂಬ ಕೀರ್ತಿಗೆ ಭಾಜನನಾಗಿದ್ದನು. ಆತನ ಕೃಪಾಪೋಷಣೆಯಲ್ಲಿ ಅನೇಕ ಜನ ತೆಲುಗು, ಕನ್ನಡ, ಸಂಸ್ಕೃತ ಕವಿಗಳು ಆಶ್ರಯ ಹೊಂದಿದ್ದರು. ಅವರ ಪೈಕಿ ಬಹು ಪ್ರಸಿದ್ಧ ತೆಲುಗು ಕವಿ ಎಂದರೆ ಅಲ್ಲಸಾನಿ ಪೆದ್ದನ. ಅವನು ಕಾವ್ಯ ಸಾಹಿತ್ಯ ಕ್ಷೇತ್ರದಲ್ಲಿ ಸಂಪ್ರದಾಯದ ಸಂಕೋಲೆಗಳನ್ನು ಕಳಚಿ ಸ್ವಚ್ಛಂದ, ಸುಂದರ ಸರಳ ಸಾಹಿತ್ಯರಚನೆಗೆ ಆದ್ಯಪುರುಷನಾದನು. '**ಆಂಧ್ರ ಕವಿತಾ ಪಿತಾಮಹ**' ನೆಂಬ ಅನ್ವರ್ಥ ಪ್ರಶಸ್ತಿ ಆತನಿಗೆ ದೊರೆತದ್ದು ನ್ಯಾಯವೇ ಆಗಿದೆ. ಕನ್ನಡದಲ್ಲಿ ಕುಮಾರವ್ಯಾಸನು ಬರೆಯದೆ ಬಿಟ್ಟ ಮಹಾಭಾರತದ ಕೊನೆಯ ಎಂಟು ಪರ್ವಗಳನ್ನು ತಿಮ್ಮಣ್ಣ ಕವಿ ರಚಿಸಿ ಕನ್ನಡ ಭಾರತವನ್ನು ಪೂರ್ಣಗೊಳಿಸಿದನು. ಈ ಕೃತಿ "ಕರ್ಣಾಟಕ ಕೃಷ್ಣರಾಯ ಭಾರತ ಕಥಾ ಮಂಜರಿ" ಎಂದು ಪ್ರಸಿದ್ಧವಾಗಿದೆ. ಕನ್ನಡದಲ್ಲಿ ಅಸಂಖ್ಯಾತ ಶ್ರೇಷ್ಠ ಭಕ್ತಿಗೀತಗಳನ್ನೂ ಕೀರ್ತನೆಗಳನ್ನೂ ಸಂಸ್ಕೃತದಲ್ಲಿ ಅನೇಕ ಶ್ರೇಷ್ಠ ಕೃತಿಗಳನ್ನೂ ರಚಿಸಿದ ವ್ಯಾಸರಾಯರು ಚಕ್ರವರ್ತಿಯ ಧರ್ಮಗುರುಗಳಾಗಿ ಮನ್ನಣೆ ಹೊಂದಿದ್ದರು. ಕೃಷ್ಣದೇವರಾಯನು ಉದಯಗಿರಿಯಿಂದ ತಂದ ಕೃಷ್ಣ ವಿಗ್ರಹವನ್ನು ವಿಜಯನಗರದಲ್ಲಿ ಪ್ರತಿಷ್ಠಾಪನೆ ಮಾಡಿದ ಮಹೋತ್ಸವವನ್ನು ನೆರವೇರಿಸಿದವರು ವ್ಯಾಸರಾಯರೇ. ಕೃಷ್ಣದೇವರಾಯನ ಆಸ್ಥಾನವನ್ನು ಬ್ರಾಹ್ಮಣ, ವೀರಶೈವ ಮತ್ತು ಜೈನ ಕನ್ನಡ ಕವಿಗಳು ಅಲಂಕರಿಸಿದ್ದರು. ದೊರೆಗೆ 'ಕನ್ನಡರಾಜ್ಯ ರಮಾರಮಣ' ನೆಂಬ ಬಿರುದಿತ್ತು.

ಕೃಷ್ಣದೇವರಾಯನು ಧರ್ಮಶ್ರದ್ಧೆಯುಳ್ಳವನೆಂದು ಪ್ರಸಿದ್ಧನಾಗಿದ್ದನು. ದೇವಸ್ಥಾನಗಳ ಜೀರ್ಣೋದ್ಧಾರ, ನೂತನ ನಿರ್ಮಾಣ, ನಿರ್ವಹಣೆ ಮೊದಲಾದವುಗಳಿಗೆ ಧಾರಾಳವಾಗಿ ದಾನಧರ್ಮ ಮಾಡಿ ದತ್ತಿಗಳನ್ನು ನೀಡಿದ್ದನು. ತನ್ನ ಪಟ್ಟಾಭಿಷೇಕ ಮಹೋತ್ಸವದ ಸ್ಮರಣಾರ್ಥವಾಗಿ ವಿರೂಪಾಕ್ಷ ದೇವಸ್ಥಾನದಲ್ಲಿ ಒಂದು ಸಭಾ ಭವನವನ್ನೂ ಗೋಪುರವನ್ನೂ ನಿರ್ಮಿಸಿದನು. ರಾಜಧಾನಿಯಲ್ಲಿ ಕೃಷ್ಣಸ್ವಾಮಿ ಮತ್ತು ವಿಜಯವಿಟ್ಠಲಸ್ವಾಮಿ ದೇವಸ್ಥಾನಗಳನ್ನು ಕಟ್ಟಿಸಲು ಪ್ರಾರಂಭಿಸಿದನು. ತನ್ನ ತಾಯಿ ನಾಗಲಾದೇವಿಯ ಜ್ಞಾಪಕಾರ್ಥವಾಗಿ ರಾಜಧಾನಿಯ ಬಳಿ ನಾಗಲಾಪುರವನ್ನು (ಈಗಿನ

ಹೊಸಪೇಟೆ) ನಿರ್ಮಿಸಿದನು. ಸಾಮ್ರಾಜ್ಯದ ನಾನಾ ಭಾಗಗಳಲ್ಲಿ ಚಕ್ರವರ್ತಿಯ ಉದಾರ ಪ್ರೋತ್ಸಾಹದ ಫಲವಾಗಿ ನಾನಾ ದೇಗುಲಗಳು ನಿರ್ಮಾಣಗೊಂಡವು.

ಕೃಷ್ಣದೇವರಾಯನ 20 ವರ್ಷಗಳ ಆಳಿಕೆಯು ದಕ್ಷಿಣ ಭಾರತದ ಇತಿಹಾಸದಲ್ಲಿ ಅಪೂರ್ವ ಕಾಲ ವೆನ್ನಿಸಿದೆ. ಪ್ರಜಾಪರಿಪಾಲನೆಯನ್ನೇ ಪರಮಾದರ್ಶವನ್ನಾಗಿಟ್ಟುಕೊಂಡು ಹಗಲಿರುಳೂ ಅದಕ್ಕಾಗಿ ಶ್ರಮಿಸುವ ರಾಜರಿಗೆ ಆದರ್ಶ ಸಾಮ್ರಾಟನೆನ್ನಿಸಿದ್ದಾನೆ. ಕೃಷ್ಣದೇವರಾಯನು ಅನೇಕ ಯುದ್ಧ ಗಳನ್ನು ಕೇವಲ ಸಾಮ್ರಾಜ್ಯದ ಹಿತದೃಷ್ಟಿಯಿಂದ ಸಾಮ್ರಾಜ್ಯದ ಭದ್ರತೆಗೆ ಅಗತ್ಯವಾದಷ್ಟು ಮಟ್ಟಿಗೆ ಮಾತ್ರ ಕೈಕೊಂಡನು. ಆತನ ಯುದ್ಧ ವಿಧಾನದಲ್ಲಿ ಅಪೂರ್ವ ದೂರದರ್ಶಿತ್ವ, ಪರಿಪೂರ್ಣ ತಂತ್ರ ನಿಯೋಜನೆ, ಸಮರ್ಥ ರೀತಿಯ ಕಾರ್ಯ ನಿರ್ವಹಣೆ, ಯುದ್ಧ ಕೆಟ್ಟದಾದರೂ ಕೇವಲ ಅನಿವಾರ್ಯ ಸಾಧನ ಮಾತ್ರ ಎಂಬ ನೀತಿಯ ವಿಜೇತ ದೊರೆಯ ಪರಮ ಔದಾರ್ಯವರ್ತನೆ ಮೊದಲಾದ ಶ್ರೇಷ್ಠಾಂಶಗಳನ್ನೂ ಸದ್ಗುಣಗಳನ್ನೂ ಕಾಣಬಹುದಾಗಿದೆ.

ಆತನು ಸ್ವತಃ ಶ್ರೇಷ್ಠ ಕವಿ ಆಗಿದ್ದುದರ ಜತೆಗೆ ಸಾಹಿತ್ಯ ಪೋಷಕನೂ ಕಲಾಭಿಮಾನಿಯೂ, ದಕ್ಷ ಆಡಳಿತಗಾರನೂ ಆಗಿದ್ದನು. ಆತನ ಕಾಲದಲ್ಲಿ ವಿಜಯನಗರದ ವೈಭವ ಪರಮೋಚ್ಚ ಸ್ಥಿತಿಗೇರಿತು.

ತಾನು ಸಾಧಿಸಿದ ದಿಗ್ವಿಜಯಗಳಿಂದ ಗಳಿಸಿದ ರಾಜ್ಯಭಾಗಗಳನ್ನು ಭದ್ರಗೊಳಿಸಿ ಸಾರ್ಥಕತೆಯನ್ನು ಕಾಣುವ ಮೊದಲೇ, ಯಾವುದೇ ಬಗೆಯ ಕುಟಿಲ ರಾಜಕೀಯದ ಚಂಚಲ-ದುಷ್ಟಶಕ್ತಿಗಳಿಂದಲೂ ಅಲ್ಲಾಡಿಸಲಾಗದಂತಹ ಸುಭದ್ರ ಸಾಮ್ರಾಜ್ಯವು ಮುಂದಿನ ಪೀಳಿಗೆಗೆ ದೊರೆಯುವಂತೆ ಮಾಡುವ ಮೊದಲೇ 1529 ರಲ್ಲಿ ಕೃಷ್ಣದೇವರಾಯನು ಕಾಯಿಲೆಬಿದ್ದು ಪರಂಧಾಮ ಸೇರಿದನು. ಮಲಸೋದರ ಅಚ್ಯುತರಾಯನನ್ನು ತನ್ನ ಮರಣಾನಂತರ ರಾಜ್ಯಕ್ಕೆ ಉತ್ತರಾಧಿಕಾರಿಯನ್ನಾಗಿ ನೇಮಿಸಿದ್ದನು. ಪಾಯಸ್ ಹೇಳುವ ಹಾಗೆ, ''ಕೃಷ್ಣದೇವರಾಯನಂತಹ ಸಕಲಾಂಗ ಪರಿಪೂರ್ಣ, ಅಪ್ರತಿಮಶೂರ ದೊರೆ ಈ ಧರೆಯಲ್ಲಿನ್ನೊಬ್ಬನಿಲ್ಲ. ಹುಡುಕಿದರೂ ಸಿಗುವುದು ದುರ್ಲಭ.''

ಮೂಲ ಲೇಖಕರು : ಶ್ರೀ ಎನ್. ಸುಬ್ರಹ್ಮಣ್ಯಂ
ಅನುವಾದಕರು : ಶ್ರೀ ಜಿ. ಅಶ್ವತ್ಥ ನಾರಾಯಣ



# ವಿಜಯನಗರದ ಕೃಷ್ಣದೇವರಾಯನ ಕಾಲ

ವಿಜಯ ನಗರದ ಸಾಮ್ರಾಜ್ಯವು ಕೃಷ್ಣದೇವರಾಯನ ಕಾಲದಲ್ಲಿ ವೈಭವದ ಶಿಖರ ಮುಟ್ಟಿತು, ಮತ್ತು ಆತನ ಕಾಲಾನಂತರ ಅದರ ಉಚ್ಛ್ರಾಯಕ್ಕೆ ಪತನ ಪ್ರಾರಂಭವಾಯಿತು. ಕೃಷ್ಣದೇವರಾಯನ ರಾಜ್ಯಭಾರದ ಮತ್ತು ಆಗಿನ ವಿಜಯನಗರದ ಸಂಪದಭಿವೃದ್ಧಿಯ ನೆಲೆ ಬೆಲೆ ಏನಿತ್ತು ಎಂಬುದನ್ನು ತುಸು ಅಳೆದು ನೋಡೋಣ.

ಕೃಷ್ಣದೇವರಾಯನ ಕಾಲಸಂಬಂಧೀಯ ವಿಷಯಸಂಗ್ರಹಕ್ಕೆ ಮೂಲಾಧಾರಗಳು ಇವು: (1) ದಕ್ಷಿಣ ಭಾರತದಲ್ಲಿ ಎಲ್ಲ ಕಡೆ ಹರಡಿರುವ ಈ ರಾಜನೇ ಬರೆಯಿಸಿದ ಶಾಸನಗಳು, (2) ರಾಜನ ಸ್ವಯಂಕೃತ ಸಂಸ್ಕೃತ ಮತ್ತು ತೆಲುಗು ಸಾಹಿತ್ಯಕೃತಿಗಳು (ಜಾಂಬವತೀ ಕಲ್ಯಾಣಂ, ಮತ್ತು ಆಮುಕ್ತ ಮಾಲ್ಯದ), (3) ರಾಜನ ಕಾಲದಲ್ಲಿ ಆತನ ರಾಜ್ಯದಲ್ಲಿ ಏಳಿಗೆಗೆ ಬಂದ ಸಮಕಾಲೀನ ಕವಿಗಳ ಕೃತಿಗಳು, (4) ವಿದೇಶೀಯರು ಬರೆದಿಟ್ಟ ಅಂದಿನ ವಿವರಣೆಗಳು–ನ್ಯೂನಿಜ್ (Nuniz), ಬರ್ಬೋಸಾ(Barbosa) ಪಾಯಸ್ (Paes) ಮೊದಲಾದ ಪೋರ್ಚುಗೀಸರ ವೃತ್ತಾಂತಗಳು. ಮಹಾಭಾರತ, ಅರ್ಥಶಾಸ್ತ್ರ, ಧರ್ಮಶಾಸ್ತ್ರಗ್ರಂಥಗಳಲ್ಲಿ ರಾಜನೀತಿಯ ಬಗೆಗೆ ಕಾಲಕಾಲಕ್ಕೆ ವಿಧಿಸಿದ ನಿಮಮುಗಳಿಗೆ ಅನುಸಾರವಾಗಿ, ಕೃಷ್ಣದೇವರಾಯನು ಉಚ್ಚ ಆದರ್ಶಗಳಿಂದ ಕೂಡಿದ ರಾಜಜೀವನ ನಡೆಸಿದನು.

ಆಡಳಿತದ ಸೌಕರ್ಯಕ್ಕೋಸ್ಕರ ಸಾಮ್ರಾಜ್ಯವನ್ನು ಪ್ರಾಂತಗಳಾಗಿ, ರಾಜ್ಯ, ಮಂಡಲ, ಸೀಮಾ, ಸ್ಥಲ ಎಂಬುದಾಗಿ ವಿಭಜಿಸಲಾಗಿತ್ತು. ಇವನ್ನು ಕೂಡ ಪುನಃ ಉಪವಿಭಾಗಗಳಾಗಿ ವಿಂಗಡಿಸಲಾಗಿತ್ತು. ನಾಯಕರ ನೇತೃತ್ವದಲ್ಲಿ ಸುಮಾರು ಎರಡು ನೂರು ಘಟಕಗಳಿದ್ದವೆಂದು ಪಾಯಸ್ (Paes) ಹೇಳಿದ್ದಾನೆ. ಆರು ಪ್ರಾಂತಗಳು ಇದ್ದವೆಂದು ಎಚ್. ಕೃಷ್ಣಶಾಸ್ತ್ರಿಗಳು ತಿಳಿಸಿರುತ್ತಾರೆ. ಒಂದೊಂದು ಪ್ರಾಂತವೂ ಒಬ್ಬ ದಂಡನಾಯಕನ ಆಳಿಕೆಗೆ ಒಳಪಟ್ಟಿರುತ್ತಿತ್ತು. ರಾಜನು ಎಲ್ಲ ಘಟಕಗಳ ಆಡಳಿತವನ್ನು ಸಮನ್ವಯ ಗೊಳಿಸುತ್ತಿದ್ದನು, ಮತ್ತು ಸಮಸ್ತ ರಾಜ್ಯಭಾರದ ಮೇಲ್ವಿಚಾರಣೆಯನ್ನು "ಮಹಾನಾಯಕಾಚಾರ್ಯ"ನ ಮುಖಾಂತರ ಮಾಡುತ್ತಿದ್ದನು. ಪ್ರಾಂತಗಳು ಮತ್ತೆ ಬೇರೆ ಅಧಿಕಾರಿಗಳನ್ನೂ ಹೊಂದಿರುತ್ತಿದ್ದವು. ಉದಾಹರಣೆಗೆ: ಸುಂಕ ತೆರಿಗೆಗಳ ಅಧಿಕಾರಿ, ಸೈನ್ಯಾಧಿಕಾರಿ—ಇತ್ಯಾದಿ.

ಹಳ್ಳಿಯೇ ಸ್ಥಾನಿಕ ಆಡಳಿತದ ಘಟಕ ಆಗಿತ್ತು. ಗ್ರಾಮ ಸಂಬಂಧೀಯ ವ್ಯವಹಾರಗಳನ್ನೆಲ್ಲ ಗ್ರಾಮಕೂಟವೇ ನಿರ್ವಹಿಸುತ್ತಿತ್ತು. ಹಳ್ಳಿಗಳಲ್ಲಿ ಶಾನಬೋವ (ಕುಲಕರಣಿ) ಮತ್ತು ತಲವಾರ (ಕಾವಲುಗಾರ) ಮೊದಲಾದ ಅಧಿಕಾರಿಗಳು ಇರುತ್ತಿದ್ದರು. ಹಳ್ಳಿಗಳು ಸ್ವಯಮಾಡಳಿತದ ಘಟಕಗಳಾಗಿದ್ದವು, ಮತ್ತು ಅವು ದಕ್ಷತೆಯಿಂದ ಕಾರ್ಯನಿರ್ವಹಿಸುತ್ತಿದ್ದವು.

ಭೂಕಂದಾಯ ಪದ್ಧತಿಯು ಬಹಳ ಸಮರ್ಥವಾಗಿತ್ತಲ್ಲದೆ, ರಾಜ್ಯಕ್ಕೆ ಭೂಕಂದಾಯವೇ ಪ್ರಮುಖ ವಾದ ಆದಾಯದ ಮೂಲವಾಗಿತ್ತು. ಇದನ್ನು 'ಅಠವಣೆ' ಎಂಬ ಶಾಖೆಗೆ ಒಪ್ಪಿಸಲಾಗಿತ್ತು, ಮೂರರಲ್ಲಿ ಒಂದರಿಂದ, ಅರ್ಧದ ವರೆಗೆ ರಾಜ್ಯಕ್ಕೆ ಸಲ್ಲಬೇಕಾದ ಭಾಗವಾಗಿತ್ತು. ಅನೇಕ ಬಗೆಯ ತೆರಿಗೆಗಳೂ ಇರುತ್ತಿದ್ದವು ಆದರೆ ಸರಕಾರವು ಜನರ ಕುಂದುಕೊರತೆಗಳನ್ನು ತೊಲಗಿಸಿ ಜನಹಿತ ಗಮನಿಸುತ್ತಿತ್ತು. ಕೃಷ್ಣದೇವರಾಯನ

ರಾಜ್ಯಭಾರವು, ಆಂತರಿಕ ಶಾಂತಿಯನ್ನು ನೆಲೆಗೊಳಿಸಿದ್ದೇ ಅಲ್ಲದೆ, ಹೊರಗಿನಿಂದ ಕೀರ್ತಿಪ್ರತಿಷ್ಠೆಗಳನ್ನೂ ಗಳಿಸಿಕೊಂಡಿತು. ಆದರೆ ಭೂಕಂದಾಯದ ಸಂಗ್ರಹವನ್ನು ಉಚ್ಚ ಮಟ್ಟದಲ್ಲಿ ಕಾಯ್ದುಕೊಳ್ಳುವ ಭರದಲ್ಲಿ ಅಧಿಕಾರಿಗಳು ಒಮ್ಮೊಮ್ಮೆ ಸ್ಥಾನಿಕ ದಬ್ಬಾಳಿಕೆ ನಡೆಸುತ್ತಿದ್ದುದೂ ಉಂಟು.

ರಕ್ಷಣಾ ಶಾಖೆಯು ಕಂದಾಚಾರ ಎಂಬ ಶಾಖೆಯ ಮೇಲ್ವಿಚಾರಣೆಯಲ್ಲಿತ್ತು ಮತ್ತು ದಂಡನಾಯಕ ಅಥವಾ ದಣ್ಣಾಯಕನು ಅದನ್ನು ನಿಯಂತ್ರಿಸುತ್ತಿದ್ದನು. ನ್ಯೂನಿಜ್ (Nuniz) ರಕ್ಷಣಾವ್ಯವಸ್ಥೆಯನ್ನು ಬಣ್ಣಿಸುತ್ತ ಪದಾತಿಗಳಿಂದ, ಕುದುರೆದಂಡಿನಿಂದ, ಆನೆಗಳಿಂದ ಮತ್ತು ಮದ್ದುಗುಂಡಿನ ಪಡೆಯಿಂದ ಕೂಡಿತ್ತು ಎಂದಿದ್ದಾನೆ. ಸುಮಾರು ಒಂದು ಲಕ್ಷ ಸೈನಿಕರಿಂದ, ಹನ್ನೆರಡು ಸಾವಿರ ಕುದುರೆದಂಡಿನಿಂದ, ಐದುನೂರು ಆನೆಗಳಿಂದ ಸಜ್ಜಿತವಾದ ಸೈನ್ಯವು ರಾಯಚೂರ ಕಾಳಗದಲ್ಲಿ ಭಾಗವಹಿಸಿತ್ತು. ಕೃಷ್ಣದೇವರಾಯನು ಆರು ಸಾವಿರ ಅರಮನೆ ಕಾವಲುಗಾರರನ್ನೂ ಇಪ್ಪತ್ತು ಸಾವಿರ ಭಲ್ಲೆಧಾಲುಗಾರರನ್ನೂ ಆನೆಗಳನ್ನು ಅಂಕೆಯಲ್ಲಿಡಲು ಮೂರು ಸಾವಿರ ಮಾವುತರನ್ನೂ, ಹದಿಮೂರು ನೂರು ಕುದರೆಯವರನ್ನೂ, ಮೂರು ನೂರು ಕುದುರೆ ಪಳಗಿಸುವವರನ್ನೂ, ಎರಡುನೂರು ಕುಂಬಾರರು, ಬಡಿಗರು, ಗಾರೆಯವರು, ಅಗಸರು ಇವರೇ ಮೊದಲಾದ ಕಸಬುಗಾರರನ್ನೂ ಹೊಂದಿದ್ದನು. ಆತನು ತನ್ನ ಸೈನ್ಯಕ್ಕೆ ಸರಿಯಾದ ಸಮರ ಶಿಕ್ಷಣ ಕೊಟ್ಟಿದ್ದನಲ್ಲದೆ, ಅದನ್ನು ಚೆನ್ನಾಗಿ ಸನ್ನಾಹಗೊಳಿಸಿದ್ದನು.

ರಾಜನೇ ಸರ್ವೋಚ್ಚ ನ್ಯಾಯದಾತನಾಗಿದ್ದರೂ ನ್ಯಾಯದಾನಕ್ಕಾಗಿ ನ್ಯಾಯಸ್ಥಾನಗಳು ಮತ್ತು ನ್ಯಾಯಾಧಿಕಾರಿಗಳು ಇದ್ದರು. ರಾಜಾಸ್ಥಾನಕ್ಕೆ "ಪ್ರಾಡ್ವಿವೇಕ" ಮತ್ತು ಇಬ್ಬರು 'ಸಭ್ಯರು' ಸಹಾಯ ಸಲ್ಲಿಸುತ್ತಿದ್ದರು. ರಾಜ್ಯಪಾಲರು ಮತ್ತು ಅಮಾತ್ಯರು ಕೂಡ ನ್ಯಾಯವಿಚಾರಣೆ ನಡೆಸುತ್ತಿದ್ದರು. ಅಪ ರಾಧ ಸಂಬಂಧೀಯ (Criminal) ತೀರ್ಪುಗಳನ್ನು ಒಡನೆಯೇ ಕೊಟ್ಟು ಬಿಡಲಾಗುತ್ತಿತ್ತು ಮತ್ತು ಅವು ಉಗ್ರವಾಗಿರುತ್ತಿದ್ದವು. ನ್ಯಾಯದಾನವು, ಪ್ರಾಚೀನರು ಹಾಕಿಕೊಟ್ಟ ಪರಂಪರಾಗತ ಶಾಸನ ನಿಯಮ ಗಳನ್ನು ಆಧರಿಸುತ್ತಿದ್ದಿತು. ವಿಚಾರಣೆಯಲ್ಲಿ ಕಠಿನ ಪರೀಕ್ಷಾ ಪದ್ಧತಿಯನ್ನೇ ವಾಡಿಕೆಯಾಗಿ ಅನುಸರಿಸ ಲಾಗುತ್ತಿತ್ತು. ಅಪರಾಧಿಗಳಿಗೆ ದಂಡನೆಗಳು ಉಗ್ರವಾಗಿರುತ್ತಿದ್ದವು. ಗಂಭೀರ ಸ್ವರೂಪದ ಅಪರಾಧಿಗಳಿಗೆ ಮರಣ ದಂಡನೆ ಅಥವಾ ಅವಯವ ಖಂಡನೆಯನ್ನೇ ವಿಧಿಸಲಾಗುತ್ತಿತ್ತು. ಎಷ್ಟೋ ಸಲ ರಾಜನೇ ದೂರುಗಳಿಗೆ ನಿರ್ಣಯ ಕೊಟ್ಟುಬಿಡುತ್ತಿದ್ದನು; ಹಾಗೂ ದುಃಖದ ಕಾರಣಗಳನ್ನು ನಿಶ್ಚಯಾತ್ಮಕ ರೀತಿ ಯಿಂದ ನಿವಾರಿಸುತ್ತಿದ್ದನು. ನಾಡಿನಲ್ಲಿ ಕಳ್ಳರು ಏಳಿಗೆ ಹೊಂದಲು ಸಾಧ್ಯವೇ ಇರಲಿಲ್ಲ.

ಪೋಲೀಸ ಪದ್ಧತಿ ಪ್ರಶಂಸಾರ್ಹವಾಗಿತ್ತು. ಪೋಲೀಸ್ ಅಧಿಕಾರಿಗಳಾದ ತಲಾರಿ, ಕಾವಲಿಗಾರ ದೇಶಕಾವಲಿಗಾರ–ಇವರು ಜಿಲ್ಲೆಗಳಲ್ಲಿ, ಹಳ್ಳಿಗಳಲ್ಲಿ ಮತ್ತು ಪಾಳಯಗಾರರು ಹೊರ ವಲಯದ ಗಡಿ ಪ್ರದೇಶಗಳಲ್ಲಿ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡಲು ರಾಜ್ಯಪಾಲರಿಗೆ ಸಹಾಯ ಮಾಡುತ್ತಿದ್ದರು.

ಎಡೋನಾರ್ಡೋ ಬಾರ್ಬೋಸಾ (Edonardo Barbosa) ಕ್ರಿ.ಶ. 1516 ರಲ್ಲಿ ಹೀಗೆ ಬರೆದಿದ್ದಾನೆ : ವಿಜಯನಗರದ ವಿಸ್ತಾರ ಬಹಳ ದೊಡ್ಡದು. ಜನದಟ್ಟಣೆಯೂ ಬಹಳ. ದೇಶೀಯ ವಜ್ರ ವ್ಯಾಪಾರದ ಮೂಲ ಸ್ಥಾನವಿದು. ಪೆಗುವಿನಿಂದ ಬಂದ ಮಾಣಿಕ್ಯಗಳು. ಚೀನಾ ಅಲೆಗ್ಸಾಂಡ್ರಿಯಾದ ರೇಶಿಮೆ, ಮತ್ತು ಮಲಬಾರದ ರಸಸಿಂಧೂರ, ಕರ್ಪೂರ, ಕಸ್ತೂರಿ, ಕರಿಮೆಣಸು ಹಾಗು ಶ್ರೀಗಂಧ— ಇವೇ ಮೊದಲಾದವುಗಳ ವ್ಯಾಪಾರ ನಡೆಯುತ್ತದೆ.

ಕೃಷ್ಣದೇವರಾಯನ ರಾಜ್ಯಭಾರದ ಸಮಯದಲ್ಲಿ ನಾಡನ್ನು ಸಂದರ್ಶಿಸಿದ ಡೊಮಿಂಗೊ ಪಾಯಸ್

# 1525 ರಲ್ಲಿ - ದಖ್ಖನ್




ಚಿತ್ರ 1

(Domingo Paes) ಎಂಬಾತನು ವಿಜಯನಗರ ಪಟ್ಟಣ, ಅರಮನೆ, ಉತ್ಸವಗಳು ಮತ್ತು ಅಲ್ಲಿನ ಮನೋರಂಜಕ ಕಾರ್ಯಕ್ರಮಗಳು—ಇವೇ ಮೊದಲಾದವುಗಳನ್ನು ಸ್ಪಷ್ಟವಾಗಿ ವರ್ಣಿಸಿದ್ದಾನೆ. ಅವನು ಕೃಷ್ಣದೇವರಾಯನ ಅಪಾರ ಸಂಪತ್ತಿನ ಮತ್ತು ಭಂಡಾರದ ವೈಭವವನ್ನು ಉಲ್ಲೇಖಿಸುತ್ತಾನೆ. ಕೃಷ್ಣದೇವರಾಯನು ತನ್ನ ಪೂರ್ವದ ರಾಜರುಗಳ ಭಂಡಾರವನ್ನು ಕಾಪಾಡಿಕೊಂಡು ಬಂದದ್ದೇ ಅಲ್ಲದೆ ಅದಕ್ಕೆ ತಾನೂ ತನ್ನ ಸಂಪತ್ತನ್ನು ಸೇರಿಸುತ್ತಲಿದ್ದನು. ತೀರ ಅಗತ್ಯದ ಪ್ರಸಂಗಗಳಲ್ಲಿ ಅದರ ವಿನಿಯೋಗವಾಗುತ್ತಿತ್ತು.

'ಈ ರಾಜನು ತನ್ನ ಮೊದಲಿನವರಿಗಿಂತ ತನ್ನ ಭಂಡಾರವನ್ನು ಬೇರೆ ಬಗೆಯಾಗಿಯೇ ರೂಪಿಸಿದ್ದಾನೆ. ಈತನು ಅದಕ್ಕೆ ಪ್ರತಿ ವರ್ಷವೂ ಒಂದು ಕೋಟಿ ವರಹಗಳನ್ನು ಸೇರಿಸುವನು. ಆದರಿಂದ ತನ್ನ ಮನೆಗೆ ಬೇಕಾದ್ದಕ್ಕಿಂತ ಹೆಚ್ಚಿಗೆ ಒಂದು ವರಹ ಸಹ ಆತನು ತೆಗೆದುಕೊಳ್ಳುವುದಿಲ್ಲ. ಈ ಅರಸು ತನ್ನ ಬೊಕ್ಕಸವನ್ನು ಎಷ್ಟೊಂದು ದೊಡ್ಡದಾಗಿ ತುಂಬಿದ್ದಾನೆ.' ! ಎಂದು ಉದ್ಗರಿಸಿದ್ದಾನೆ ಪಾಯಸ್. ರಾಜಧಾನಿಯು ವೈಭವದ ತುತ್ತತುದಿಯನ್ನು ಮುಟ್ಟಿತ್ತೆಂಬ ಬಗ್ಗೆ ಅವನು ಪ್ರಮಾಣಗಳನ್ನು ಕೊಟ್ಟಿದ್ದಾನೆ. ಕೃಷ್ಣದೇವರಾಯನ ರಾಜ್ಯವು, ಭಟ್ಕಳದಿಂದ ಒರಿಸ್ಸಾ ವರೆಗೆ ಹಬ್ಬಿತ್ತು. ಅಂಕೋಲಾ, ಮರ್ಗಸ (Margas), ಹೊನ್ನಾವರ, ಬಾರಕೂರು, ಮಂಗಳೂರು, ಭಟ್ಕಳ ಇವು—ಮುಖ್ಯ ಬಂದರುಗಳಾಗಿದ್ದವು. ವ್ಯಾಪಾರ ಹೇರನ್ನು ಭಟ್ಕಳದ ಕಡೆಗೆ ಸರಕು ಹೊರುವ ಐದು ಆರು ಸಾವಿರ ಎತ್ತುಗಳ ಮೂಲಕ ಸಾಗಿಸಲಾಗುತ್ತಿತ್ತು. ಪಾಯಸ್ ಬರೆಯುತ್ತಾನೆ—''ಪಟ್ಟಣವು, ಬೀದಿಗಳಿಂದ ಮನೆಗಳಿಂದ ವಿಶಾಲ ಮತ್ತು ಸುಂದರವಾಗಿದ್ದು, ಅಲ್ಲಿ ಜಾತ್ರೆಗಳು ಮೇಳಗಳು ನೆರೆಯುವವು. ಎಲ್ಲ ಪ್ರಕಾರಗಳ ಮಣಿ ಮಾಣಿಕ್ಯಗಳು, ವಜ್ರಗಳು, ಪಚ್ಚೆಗಳು, ಮುತ್ತುಗಳು, ವಸ್ತ್ರಗಳು ಮತ್ತು ಸಾಮಾನ್ಯ ಕುದುರೆಗಳು, ಲಿಂಬೆ, ತಾಳೆ, ಹಲಸು, ಮಾವು, ದ್ರಾಕ್ಷೆ ಮೊದಲಾದವೆಲ್ಲ ಅಲ್ಲಿ ದೊರಕುತ್ತವೆ.'' ವಿಜಯನಗರವನ್ನು ರೋಮ್ ಪಟ್ಟಣಕ್ಕೆ ಹೋಲಿಸಿ ಇದು ಬೆಟ್ಟಗಳ ಮಧ್ಯದಲ್ಲಿ ನೆಲಸಿದ್ದ ಪಟ್ಟಣ ಎನ್ನುತ್ತಾನೆ ಪಾಯಸ್. ''ನಾನು ಅಲ್ಲಿ ಕಂಡದ್ದು ರೋಮ್ ಪಟ್ಟಣದಷ್ಟು ವಿಸ್ತಾರದ ಮತ್ತು ಅತ್ಯಂತ ಸುಂದರವಾದ ನಗರ'' ಎನ್ನುತ್ತ ಅಲ್ಲಿ ಅಸಂಖ್ಯಾತ ಜನ ವಾಸವಾಗಿದ್ದಾರೆ–ಎಂದು ಅವನು ವರ್ಣಿಸಿದ್ದಾನೆ.

ಕೃಷ್ಣದೇವರಾಯನ ಬೀಡಾರದ ಸುವ್ಯವಸ್ಥಿತ ಆಡಳಿತವನ್ನು ವರ್ಣಿಸುತ್ತ ನ್ಯೂನಿಜ್ (Nuniz) ಅಂದು ಪ್ರಚಲಿತವಿದ್ದ ವೈಭವಸಂಪನ್ನ ರಾಜೋಚಿತ ಜೀವನಕ್ರಮದ ಬಗೆಗೆ ಬಣ್ಣನೆ ನೀಡುವನು ಮತ್ತು ನಗರದಲ್ಲಿ ಉಪಲಬ್ಧವಿದ್ದ ನಾನಾ ವಿಧ ಸೌಕರ್ಯಗಳ ವಿಷಯ ಪ್ರಸ್ತಾಪಿಸುವನು.

ಪಾಯಸ್ ಅರಮನೆಯನ್ನು ವಿವರ ವಿವರವಾಗಿ ಚಿತ್ರಿಸಿ ಬಾಯ್ತುಂಬ ಹೊಗಳುತ್ತಾನೆ. ಅದರ ಸಂರಕ್ಷಕ ಭಿತ್ತಿಗಳು, ಕಾವಲುಗಾರರು, ದ್ವಾರಪಾಲಕರು, ವಿಜಯಗೃಹ ಹಾಗು ಅದರ ಅಲಂಕರಣ, ರಾಜಮಾನ್ಯ ಅತಿಥಿಗಳ ಸಲುವಾಗಿ ಇಷ್ಟ ಪೀಠೋಪಕರಣ ಮತ್ತು ಅವಕ್ಕೆ ಹೊದ್ದಿಸಿದ ರತ್ನಖಚಿತ ಅಮೂಲ್ಯ ವಸ್ತ್ರಾವರಣ, ಭಿತ್ತಿಗಳನ್ನು ಅಲಂಕರಿಸಿದ ವರ್ಣರಂಜಿತ ಚಿತ್ರಗಳ ವಿಷಯ—ಇವನ್ನೆಲ್ಲ ಅವನು ಉಲ್ಲೇಖಿಸಿದ್ದಾನೆ.

ಕೃಷ್ಣದೇವರಾಯನ ರಾಜ್ಯಭಾರವು ನಾನಾವಿಧ ಉತ್ಸವಗಳಿಗಾಗಿ ಮತ್ತು ಮನೋರಂಜಕ ಕಾರ್ಯಕ್ರಮಗಳಿಗಾಗಿ ವಿಶೇಷ ಖ್ಯಾತಿ ಪಡೆದಿತ್ತು. ವಿದೇಶ ವ್ಯಾಪಾರವು ರಾಜ್ಯಕ್ಕೆ ಅಭಿವೃದ್ಧಿ ತಂದದ್ದೇ ಅಲ್ಲದೆ ರಾಜಾಸ್ಥಾನಕ್ಕೆ ವಿಲಾಸ ಸಂಪದವನ್ನೂ ಒದವಿಸಿತು. ರಾಜಧಾನಿಯ ನವರಾತ್ರಿಯ ಅದ್ದೂರಿಯ ಉತ್ಸವವನ್ನು ಪಾಯಸ್ ಹೀಗೆ ವರ್ಣಿಸಿದ್ದಾನೆ :—

"ಅರಮನೆಯಲ್ಲಿ ಅರಸನು ನೆರೆಯಿಸಿದ ದರ್ಬಾರದ ನೋಟ ಅದ್ಭುತವಾಗಿತ್ತು. ಕುಸ್ತಿಯಾಳುಗಳ ಪಂದ್ಯಗಳು, ಸುಂದರಿಯರ ನೃತ್ಯ, ಸಂಜೆಯ ವೇಳೆಯ ಪಂಜಿನ ಪ್ರದರ್ಶನ; ಕುದುರೆ ದಂಡಿನ ಅಣಕಕಾಳಗ, ಆಕಾಶಬಾಣಗಳ ಎಸೆತ ಮೊದಲಾದ ಬಿರುಸು ಬಾಣಗಳ ವಿಧವಿಧವಾದ ಮದ್ದಿನ ಬೆಳಕು ಬಣ್ಣಗಳ ಆಟ; ಅವರವರ ಸ್ಥಾನಮಾನಕ್ಕೆ ತಕ್ಕಂತೆ ಪ್ರಾಂತ ಪ್ರಾಂತಗಳ ರಾಜ್ಯಪಾಲರ ವಿಜಯ ರಥಗಳು ಸಾಲು ಸಾಲಾಗಿ ಸಾರಿಬರುವ ಮೆರವಣಿಗೆಯ ಪರಿ; ಪಟ್ಟದ ಕುದುರೆಯಿಂದ ಕೂಡಿದ ಹಿಂವಳ ಮೆರವಣಿಗೆ; ಬಂಗಾರದ ಬೆಡಗನ್ನೇ ತೊಟ್ಟು ದೀಪಕುಂಭಗಳೊಂದಿಗೆ ಬರುವ ಅರಮನೆಯ ಚೆಲುವೆಯರ ಸಾಲು, ಅರಸನಿಗೆ ಗೌರವದಿಂದ ಎರಗಲು ಕಲಿತ ಆನೆಗಳ ಸಾಲು—ಇವೆಲ್ಲವೂ ಆ ಉತ್ಸವಪ್ರಸಂಗಕ್ಕೆ ಉಲ್ಲಾಸ ತುಂಬುತ್ತಿದ್ದವು...." ಉತ್ಸವದ ಮುಕ್ತಾಯದ ವೈಶಿಷ್ಟ್ಯವೆಂದರೆ, ರಾಜನು ಸೈನ್ಯವನ್ನು ಪರೀಕ್ಷಿಸಲೆಂದು ನಡೆಸುವ ಆತನ ಆ ಅವಲೋಕನಾ ಕ್ರಮ. ಇದು ಆ ಋತುವಿನ ಉತ್ತಮೋತ್ತಮ ದೃಶ್ಯವೆಂದು ಸ್ಪಷ್ಟವಾಗಿ ಹೇಳುವಂತಹದು. (ಪಾಯಸ್ ರಾಜನ ಮೆರವಣಿಗೆಯ ವೈಭವವನ್ನೂ ಆತನ ಪುನರಾಗಮನದ ಅಂದ ಚೆಂದವನ್ನು ಕೂಡ, ಪುನಃ ಪುನಃ ಉಲ್ಲೇಖಿಸುವನು.) ಪಾಯಸ್‌ನು ಮುಂದುವರಿಸಿ ಅಂದಿದ್ದಾನೆ, "ನಾನು ಕಂಡದ್ದೆಲ್ಲ ಕನಸಿರಬಹುದೇ ಎನ್ನುವ ಮಟ್ಟಿಗೆ ನಾನು ಪ್ರಭಾವಿತನಾಗಿದ್ದೆ." ಕೃಷ್ಣದೇವರಾಯನು ನವರಾತ್ರಿಯ ಉತ್ಸವದ ಕಾಲದಲ್ಲಿ ಕೂಡುತ್ತಿದ್ದ ಸಿಂಹಾಸನದ ವಿವರವಾದ ವರ್ಣನೆಯನ್ನು ಸಹ ಪಾಯಸ್ ಕೊಟ್ಟಿದ್ದಾನೆ.

ನವರಾತ್ರಿಯ ಉತ್ಸವವಲ್ಲದೆ, ಸಾಮ್ರಾಜ್ಯದ ಅಧಿಷ್ಠಾತೃದೈವತವಾದ ವಿರೂಪಾಕ್ಷೇಶ್ವರನ ಸನ್ನಿಧಿಯಲ್ಲಿ, ವಿಶೇಷವಾಗಿ ಚೈತ್ರಮಾಸದಲ್ಲಿ ನಾಟಕ ಪ್ರದರ್ಶನಗಳೂ ನಡೆಯುತ್ತಿದ್ದವು.

ರಾಜ್ಯದ ರಕ್ಷೆಗೆಂದೂ ಜನರ ಅಭಿವೃದ್ಧಿಗೆಂದೂ ಆಚರಿಸಲಾಗುತ್ತಿದ್ದ ನವರಾತ್ರಿಯ ಉತ್ಸವ ಪರಂಪರೆಯನ್ನು ಮುಂದೆ ಮೈಸೂರ ದೊರೆಗಳು ಅಂಗೀಕರಿಸಿ ಅದರ ವೈಶಿಷ್ಟ್ಯವನ್ನೂ ವೈಭವವನ್ನೂ ಕಾಪಾಡಿಕೊಂಡು ಬಂದಿದ್ದಾರೆ. ಇಂದಂತೂ ಈ ಉತ್ಸವವು ಕರ್ಣಾಟಕಕ್ಕೆ ನಾಡಹಬ್ಬವಾಗಿ ಅದರ ಮಹತ್ವ ಇನ್ನೂ ಹೆಚ್ಚಿದೆ.

ಸಾಮಾನ್ಯವಾಗಿ ಎಲ್ಲ ಸ್ತ್ರೀಯರೂ ಬೆಲೆಬಾಳುವ ಬಂಗಾರದ ಆಭರಣ ಧರಿಸುತ್ತಿದ್ದರು ಎಂದು ಪಾಯಸ್ ಹೇಳುವನು. ತೆಲಗುಕವಿ ಪೆದ್ದನನ ಪ್ರಕಾರ ಅನೇಕ ಮಹಿಳೆಯರು ವಿದ್ಯೆಯಲ್ಲಿ, ನೃತ್ಯದಲ್ಲಿ ಅಪ್ರತಿಮರೆನಿಸಿದ್ದರು. ಇಷ್ಟೇ ಅಲ್ಲ, ಸ್ತ್ರೀಯರು ಶಸ್ತ್ರವಿದ್ಯೆ, ಕುಸ್ತಿ, ಜ್ಯೋತಿಷ್ಯ, ಸಂಗೀತ—ಇವುಗಳಲ್ಲಿ ನಿಷ್ಣಾತರಾಗಿದ್ದರು, ಮತ್ತು ಅಂಗರಕ್ಷಕರಾಗಿಯೂ ಅಡಿಗೆಯವರಾಗಿಯೂ ಕೆಲಸಮಾಡುತ್ತಿದ್ದರು. ಅವರು ಸಮಾಜದಲ್ಲಿ ಉನ್ನತ ಸ್ಥಾನಮಾನ ಹೊಂದಿ ನ್ಯಾಯಾಧೀಶರ ಸ್ಥಾನ ಅಲಂಕರಿಸಿದ್ದೂ ಉಂಟು. ಇದೇ ಬಗೆಯಾಗಿ ಮಹಿಳೆಯರು ಪೇದೆಗಳಾಗಿಯೂ ಕಾವಲುಗಾರರಾಗಿಯೂ ಕೆಲಸಮಾಡುತ್ತಿದ್ದರು. ನ್ಯೂನಿಜ್ (Nuniz) ಸತಿ ಪದ್ಧತಿಯನ್ನು ಉಲ್ಲೇಖಿಸುತ್ತಾನೆ. ವೇಶ್ಯಾವೃತ್ತಿ ಬಳಕೆಯಲ್ಲಿತ್ತಲ್ಲದೆ ಶ್ರೀಮಂತರಲ್ಲಿ ಬಹು ಪತ್ನೀತ್ವ ಸರ್ವಸಾಮಾನ್ಯವಾಗಿತ್ತು. ಬಾಲ್ಯ ವಿವಾಹ ವಾಡಿಕೆಯಾಗಿತ್ತು ಮತ್ತು ವರದಕ್ಷಿಣೆ ಬಹಳ ಹೊರೆಯಾಗಿತ್ತು.

ವಿದೇಶೀಯ ಪ್ರವಾಸಿಕರ ಪ್ರಕಾರ ಪ್ರಾಣಿಗಳ ಬಲಿದಾನ ಆಗ ಸಾಮಾನ್ಯ ಆಗಿತ್ತು. ನವರಾತ್ರಿಯ ಸಂದರ್ಭದಲ್ಲಿ 250 ಕೋಣಗಳನ್ನೂ 4,500 ಕುರಿಗಳನ್ನೂ ಬಲಿ ಕೊಡಲಾಗುತ್ತಿತ್ತು.

ಶಿಲಾಶಾಸನಗಳ ಮತ್ತು ಸಾಹಿತ್ಯಿಕ ಆಧಾರಗಳ ಪ್ರಕಾರ ವಿಜಯನಗರದ ರಾಜರು, ಹಾಗು ವಿಶೇಷವಾಗಿ ಕೃಷ್ಣದೇವರಾಯನು, ಧರ್ಮನಿಷ್ಠರಾಗಿದ್ದರು. ಬಾರ್ಬೊಸಾ (Barbosa) ಹೇಳುತ್ತಾನೆ:

" ರಾಜನು ಪ್ರತಿಯೊಬ್ಬನಿಗೂ ಬರುವ ಹೋಗುವ ಸ್ವಾತಂತ್ರ್ಯ ಕೊಟ್ಟಿದ್ದಾನೆ. ಜನರು ಕ್ರಿಶ್ಚನ್, ಜ್ಯೂ, ಮೂರ್ ಅಥವಾ ಹಿಂದು ಯಾರೇ ಇರಲಿ ತಮ್ಮ ತಮ್ಮ ಧರ್ಮವನ್ನು ಯಾವ ಕಿರುಕುಳವೂ ಇಲ್ಲದೆ ಯಾವ ಪೃಚ್ಛಾಪೃಚ್ಛೆ ಇಲ್ಲದೆ ಆಚರಿಸಿಕೊಂಡು ಇರಬಹುದು ". ಕೃಷ್ಣದೇವರಾಯನು ಸಾಮ್ರಾಜ್ಯಕ್ಕೆ ಹಾಕಿಕೊಟ್ಟ ಒಂದು ದೊಡ್ಡ ಸಂಪ್ರದಾಯ ಎಂದರೆ ಧಾರ್ಮಿಕ ಸಹಿಷ್ಣುತೆ. ಕೃಷ್ಣದೇವರಾಯನು ಸ ತಃ ಶ್ರೀವೈಷ್ಣವನಾಗಿದ್ದರೂ ಧರ್ಮಾಂಧನಾಗಿರಲಿಲ್ಲ. ಮಾಧ್ವಧರ್ಮಕ್ಕೆ ಹೆಚ್ಚಿನ ಪ್ರಾಶಸ್ತ್ಯ ಮತ್ತು ಉತ್ತೇಜನ ಕೊಡಲಾಗಿತ್ತು. ಇದಕ್ಕೆ ನಿದರ್ಶನ, ರಾಜನು ವ್ಯಾಸರಾಯ ಮಠಕ್ಕೆ ಕೊಟ್ಟ ಉದಾರಾಶ್ರಯ. ಶೃಂಗೇರಿ ಮಠಕ್ಕೂ ಸಾಮ್ರಾಜ್ಯವು ಸ್ಥಾಪಿತವಾದ ಕಾಲದಿಂದ ರಾಜರು ಗೌರವ ಉದಾರಾಶ್ರಯ ನೀಡಿದ್ದುಂಟು.

ಎಲ್ಲ ಧಾರ್ಮಿಕ ಮತ ಪಂಥಗಳ ನಡುವೆ ಸೌಹಾರ್ದದ ತಾಳಮೇಳದ ವಾತಾವರಣವಿತ್ತು. ವಿಜಯನಗರದ ಸಾಮ್ರಾಟರ ಮತ್ತು ಮುಸಲ್ಮಾನರ ನಡುವಿನ ಘರ್ಷಣೆಯು ರಾಜಕೀಯವೇ ವಿನಾ ಧಾರ್ಮಿಕವಲ್ಲ. ವಿಜಯನಗರದ ರಾಜರು ತಮ್ಮ ರಾಜ್ಯದಲ್ಲಿ ಇಸ್ಲಾಂ ಧರ್ಮವನ್ನು ಸಹನಶೀಲತೆಯಿಂದ ಕಾಣುತ್ತಿದ್ದರು. ಅವರು ಅನೇಕ ಮುಸಲ್ಮಾನರನ್ನು ತಮ್ಮ ಅಧಿಕಾರಿಗಳನ್ನಾಗಿ ನಿಯಮಿಸಿಕೊಂಡಿದ್ದರು ; ಮತ್ತು ನಾನಾವಿಧದಿಂದ ಅವರು ಮುಸಲ್ಮಾನರಿಗೆ ಪ್ರೋತ್ಸಾಹ ನೀಡುತ್ತಿದ್ದರು.

## ಸಂಗಮ ಮನೆತನದ ವಂಶಾವಳಿ



## ಸಾಳುವ ಮನೆತನದ ವಂಶಾವಳಿ




## ತುಳುವ ಮನೆತನದ ವಂಶಾವಳಿ




1. ವೆಂಕಟ I, ಈತನು ಸೋದರಮಾವ ಸಲಕರಾಜು ತಿರುಮಲ ಎಂಬಾತನಿಂದ ಕೊಲ್ಲಲ್ಪಟ್ಟನು, ಮತ್ತು ಸಲಕರಾಜು ತಿರುಮಲನೇ ಕೆಲವು ತಿಂಗಳು ರಾಜ್ಯಸೂತ್ರ ವಹಿಸಿದನು. ಆ ಮೇಲೆ ಸದಾಶಿವ ರಾಜನಾದ.

ಮೂಲ ಲೇಖಕರು : ಶ್ರೀ ಸಿ.ವಿ. ರಂಗಸ್ವಾಮಿ
ಅನುವಾದಕರು : ಶ್ರೀ ನಾರಾಯಣ ಸಂಗಮ

# ವಿಜಯನಗರದ ಅವನತಿ

**ಅಚ್ಯುತರಾಯ** (ಕ್ರಿ. ಶ. 1530–1543)

ಕೃಷ್ಣದೇವರಾಯನ ಮರಣದ ಜತೆಯಲ್ಲೇ ವಿಜಯನಗರದ ವೈಭವದ ದಿನಗಳು ಮುಗಿದವು. ಅವನು ತನ್ನನಂತರ ಹದಿನೆಂಟು ತಿಂಗಳ ಮಗುವನ್ನು ಹಕ್ಕುದಾರನಾಗಿ ಬಿಟ್ಟಿದ್ದನು. ಆದರೆ ಅವನು ಸಾಯುವ ಮೊದಲು ತನ್ನ ಮಲಸಹೋದರ ಅಚ್ಯುತರಾಯನನ್ನು ತನ್ನ ಉತ್ತರಾಧಿಕಾರಿಯನ್ನಾಗಿ ನೇಮಿಸಿದನು. ಅಚ್ಯುತರಾಯನು ಮೊದಲು ತಿರುಪತಿಯಲ್ಲೂ, ಅನಂತರ ಕಾಳಹಸ್ತಿಯಲ್ಲೂ ಕಿರೀಟ ಧಾರಣೆಯನ್ನು ಮಾಡಿಕೊಂಡು, ದಂಡೆತ್ತಿ ಬಂದಿದ್ದ ಕುತುಬ್‌ಶಹ ಮತ್ತು ಗಜಪತಿಗಳನ್ನು ಹಿಮ್ಮೆಟ್ಟಿಸಲು ಉತ್ತರಕ್ಕೆ ಸೇನಾಸಮೇತ ಹೋದನು. ಅವನ ಮಂತ್ರಿ ಚೆಲ್ಲಪ್ಪನು (ಸಾಳ್ವ ವೀರನರಸಿಂಹ) ಕೃಷ್ಣದೇವ ರಾಯನ ಹಸುಗೂಸು ಮಗನ ರಾಜಪ್ರತಿನಿಧಿಯಾಗಿ ಘೋಷಿಸಿಕೊಂಡಿದ್ದ, ಕೃಷ್ಣದೇವರಾಯನ ಅಳಿಯ ರಾಮರಾಯನ ವಿರುದ್ಧ ಸಿಂಹಾಸನವನ್ನು ಸಂರಕ್ಷಿಸಲು ನಿಂತಿದ್ದನು. ಆದರೆ ಕೃಷ್ಣದೇವರಾಯನ ಆಳಿಕೆಯಲ್ಲಿ ಸೆರೆಯಾಳಾಗಿದ್ದ ಅಚ್ಯುತನು ಶಾಂತಿಯ ಆಕಾಂಕ್ಷೆಯಿಂದ ರಾಮರಾಯನನ್ನು ರಾಜ್ಯಾಡಳಿತ ದಲ್ಲಿ ಸೇರಿಸಿಕೊಂಡನು. ಚೆಲ್ಲಪ್ಪನು ಇದನ್ನು ಪ್ರತಿಭಟಿಸಿ ದಕ್ಷಿಣದಲ್ಲಿ ಉಂಟಾಗಿದ್ದ ವಿದ್ರೋಹಕ್ಕೆ ನಾಯಕನಾದನು. ಅಚ್ಯುತರಾಯನು ತನ್ನ ಭಾವಮೈದುನನಾದ ಸಲಕರಾಜು ಚಿನ್ನ ತಿರುಮಲನ ಸಹಾಯದಿಂದ ಚೆಲ್ಲಪ್ಪನ ಮೇಲೆ ವಿಜಯವನ್ನು ಸಾಧಿಸಿದನಲ್ಲದೆ, ತೆಂಕಾಶಿ, ಕೇರಳ ಮತ್ತು ಉಮ್ಮತ್ತೂರುಗಳನ್ನು ಅಧೀನಪಡಿಸಿಕೊಂಡನು.

ದುರ್ದೈವದಿಂದ ಕೃಷ್ಣದೇವರಾಯನ ಮಗನು ಬಾಲ್ಯದಲ್ಲೇ ತೀರಿಕೊಂಡನು. ರಾಮರಾಯನು ಈಗ ಅಚ್ಯುತರಾಯನ ಸೋದರ ರಂಗನ ಮಗ ಸದಾಶಿವರಾಯನ ಹಕ್ಕನ್ನು ಎತ್ತಿಹಿಡಿದನು. ಅವನು ತನ್ನ ಸ್ವಂತ ಸಂಬಂಧಿಕರನ್ನೂ ಅಭಿಮಾನಿಗಳನ್ನೂ ರಾಜ್ಯಾಡಳಿತ ಹಾಗೂ ಸೈನ್ಯದ ಮುಖ್ಯ ಸ್ಥಳಗಳಿಗೆ ನೇಮಿಸಿ ತನ್ನ ಅಧಿಕಾರವನ್ನು ಬಲಪಡಿಸಿಕೊಂಡನು.

ಇದು ಅಚ್ಯುತನ ಸ್ವಾತಂತ್ರ್ಯವನ್ನು ಮೊಟಕು ಮಾಡಿತು. ಆದರೆ ದಕ್ಷಿಣದ ದಂಗೆಯು ರಾಮರಾಯನನ್ನು ವಿಜಯನಗರದಿಂದ ದೂರ ಸೆಳೆದಿತ್ತು. ಅಚ್ಯುತನು ವಿಜಯನಗರದಲ್ಲಿ ಮತ್ತೆ ಅಧಿಕಾರವನ್ನು ರೂಢಿಸಿಕೊಂಡನು.

ಬಿಜಾಪುರದಲ್ಲಿ ಕ್ರಿ. ಶ. 1534-35 ರಲ್ಲಿ ಇಸ್ಮಾಯಿಲನು ಮಡಿದ ಮೇಲೆ ಮಲ್ಲು ಮತ್ತು ಇಬ್ರಾಹಿಮರ ನಡುವೆ ಆರಂಭವಾದ ಯಾದವೀಕಲಹವು ಅಚ್ಯುತರಾಯನಿಗೆ ರಾಯಚೂರನ್ನು ಮತ್ತೆ ಗೆಲ್ಲಲು ಸಹಾಯಮಾಡಿತು. ಕಡೆಗೆ ಇಬ್ರಾಹಿಮನು ಗೆದ್ದು ರಾಮರಾಯನ ಸಹಾಯದಿಂದ ವಿಜಯನಗರದ ಮೇಲೆ ದಂಡೆತ್ತಿ ಹೊರಟನು. ಇದೇ ಸಮಯದಲ್ಲಿ ಅಹಮದ್‌ನಗರವು ಬಿಜಾಪುರದ ಮೇಲೆ ದಂಡೆತ್ತಿ ಬಂದುದರಿಂದ ಇಬ್ರಾಹಿಮನು ಹಿಂದಿರುಗಬೇಕಾಯಿತು. ಅಚ್ಯುತರಾಯನು ಪರಿಸ್ಥಿತಿಯ ಒಡೆಯನಾದನು.

ಅಚ್ಯುತರಾಯನ ಆಳಿಕೆಯಲ್ಲೇ ಸಾಮ್ರಾಜ್ಯದ ಭವಿಷ್ಯದ ಸಂಕೇತವಾಗಿ ನಿಂತ ಮಧುರೆ, ತಂಜಾವೂರು ಮತ್ತು ಇಕ್ಕೇರಿಯ ನಾಯಕರು ಅಸ್ತಿತ್ವಕ್ಕೆ ಬಂದರು. ಅಚ್ಯುತರಾಯನ ಆಸ್ಥಾನದಲ್ಲಿದ್ದ

ನ್ಯೂನಿಜನು ಅಚ್ಯುತರಾಯನು ದುರ್ವ್ಯಸನ ಹಾಗೂ ನಿರಂಕುಶಾಡಳಿತಕ್ಕೆ ಬಲಿಯಾಗಿದ್ದನೆಂದು ತಿಳಿಸುತ್ತಾನೆ.

" ಹೊಸ ದೊರೆಯು ಪ್ರಾಮಾಣಿಕತೆ ಮತ್ತು ಧೈರ್ಯವಿಲ್ಲದವನಾಗಿದ್ದಾನೆ. ಅವನ ದುರ್ನಡತೆಯ ಜೀವನದಿಂದಾಗಿ ರಾಜ್ಯದ ಜನತೆ ಮತ್ತು ದಳಪತಿಗಳು ಅಸಂತೃಪ್ತರಾಗಿದ್ದಾರೆ". ಎಂದಿದ್ದಾನೆ. ಆದರೆ ಎಲ್ಲ ವಿಷಯಗಳನ್ನೂ ಗಮನಿಸಿದರೆ ಅಚ್ಯುತರಾಯನು ಅಂತಹ ಕೆಟ್ಟ ದೊರೆ ಏನೂ ಆಗಿರಲಿಲ್ಲವೆನ್ನಬಹುದು. ಅವನನ್ನು ಕೃಷ್ಣದೇವರಾಯನು ತನ್ನ ಅನಂತರ ದೊರೆತನ ಮಾಡಲೆಂದೇ ಆರಿಸಿದ್ದನು. ಅಚ್ಯುತರಾಯನ ಇಡೀ ಆಳಿಕೆಯು ಅಂತರಂಗದ ದಂಗೆಗಳು, ಬಹಿರಂಗದ ದುರಾಕ್ರಮಣಗಳು, ಮಹತ್ವಾಕಾಂಕ್ಷಿಯಾದ ರಾಮರಾಯನ ವಿದ್ರೋಹಗಳು, ಇವುಗಳ ವಿರುದ್ಧ ನಡೆದ ಹೋರಾಟದಲ್ಲೇ ಮುಗಿಯಿತು. ವ್ಯಾಪಾರವು ಕುಸಿದು, ರಾಜಮಾರ್ಗಗಳನ್ನು ಮುತ್ತುತ್ತಿದ್ದ ಕಳ್ಳಕಾಕರ ಚಟುವಟಿಕೆಗಳಿಂದ ಜನರು ತೊಂದರೆಯನ್ನು ಅನುಭವಿಸಿದರು. ಈ ಭಯಂಕರ ವಿಪತ್ತುಗಳ ವಿರುದ್ಧ ಅಚ್ಯುತರಾಯನು ಧೈರ್ಯವಾಗಿ ಹೋರಾಡಿದನು, ಅವನ ವಿಷಯದಲ್ಲಿ ನ್ಯೂನಿಜನು ನೀಡಿರುವ ತೀರ್ಪಿಗೆ ಅವನು ಬಾಧ್ಯನಲ್ಲ. ಅವನ ಆಸ್ಥಾನದಲ್ಲಿದ್ದ ಕವಿ ರಾಜನಾಥ ದಿಂಡಿಮನು ತನ್ನ 'ಅಚ್ಯುತರಾಯಾಭ್ಯುದಯ'ದಲ್ಲಿ ಅವನನ್ನು ಹೊಗಳಿದ್ದಾನೆ. ಅವನು ಭಗವದ್ಭಕ್ತನೂ ಉದಾರಿಯೂ ಆಗಿದ್ದುದಲ್ಲದೆ ಅನೇಕ ಸದ್ಗುಣಗಳನ್ನು ಹೊಂದಿದ್ದನು. ಅವನ ಬಳಿ ತುಂಬಿದ ಭಂಡಾರವಿದ್ದು ನವಕೋಟಿ ನಾರಾಯಣನೆನಿಸಿದ್ದನು.

### ಒಂದನೆ ವೆಂಕಟ (1543)

ಅಚ್ಯುತರಾಯನ ಮರಣಾನಂತರ ಸಣ್ಣ ಬಾಲಕನಾಗಿದ್ದ ಅವನ ಮಗ ವೆಂಕಟನು ತಂದೆಯನಂತರ ಸಿಂಹಾಸನವನ್ನೇರಿದನು. ಅವನ ಚಿಕ್ಕಪ್ಪ ಸಲಕರಾಜುತಿಮ್ಮನು ಬಾಲಕ ದೊರೆಯ ಮೇಲೆ ಪ್ರಭಾವ ಬೀರುವ ವ್ಯಕ್ತಿಯಾಗಿದ್ದನು. ರಾಜಪ್ರತಿನಿಧಿಯಾಗಿದ್ದ ರಾಣಿಯು ವೆಂಕಟನ ಸುರಕ್ಷತೆಗಾಗಿ ಬಿಜಾಪುರದ ಸುಲ್ತಾನನ ನೆರವನ್ನು ಬೇಡಿದಳು. ಅವಳ ಕೋರಿಕೆಯಂತೆ ಸುಲ್ತಾನನು ನಡುವೆ ಪ್ರವೇಶಿಸುವುದಾಗಿ ಬೆದರಿಕೆ ಹಾಕಿದನು ಈ ಎಲ್ಲ ಬೆಳವಣಿಗೆ ಸಲಕನಿಗೆ ಸಿಂಹಾಸನವನ್ನು ಕಸಿಯಲು ಒಂದು ಒಳ್ಳೆಯ ನೆಪವಾಯಿತು. ವೆಂಕಟನನ್ನು ಕೊಲೆಮಾಡಿ ಅವನ ನಂಬಿಗೆಯ ಆಸ್ಥಾನಿಕರನ್ನು ಶಿಕ್ಷಿಸಿದನು.

ಈಗ ರಾಮರಾಯನಿಗೆ ಬೇಕಾದ ಅವಕಾಶ ದೊರಕಿತು. ಅವನು ಗುತ್ತಿಯ ಸೆರೆಮನೆಯಿಂದ ಸದಾಶಿವರಾಯನನ್ನು ತಪ್ಪಿಸಿಕೊಳ್ಳುವಂತೆ ಮಾಡಿ ಸಲಕರಾಜನ ವಿರುದ್ಧ ದೊರೆಯ ಹೆಸರಿನಲ್ಲಿ ಯುದ್ಧವನ್ನು ಹೂಡಿದನು. ಸಲಕರಾಜನು ನಾಲ್ಕು ಭಯಂಕರ ಯುದ್ಧಗಳಲ್ಲಿ ಸೋತು ಕಡೆಗೆ ತನ್ನ ಪ್ರಾಣವನ್ನು ತೆತ್ತನು. ರಾಮರಾಯನು ಸದಾಶಿವರಾಯನನ್ನು ದೊರೆಯಾಗಿ ಘೋಷಿಸಿದರೂ ತಾನೇ ಎಲ್ಲ ಅಧಿಕಾರವನ್ನು ವಹಿಸಿಕೊಂಡನು.

### ಸದಾಶಿವರಾಯ-ರಾಮರಾಯ (ಕ್ರಿ.ಶ. 1543-1571)

ಸದಾಶಿವರಾಯನು ಪಟ್ಟಾಭಿಷೇಕವಾದ ಮೊದಲಿನ ಏಳೆಂಟು ವರ್ಷಗಳು ಹೆಸರಿಗೆ ಮಾತ್ರ ದೊರೆಯಾಗಿದ್ದನು. ನಿಜವಾದ ಅಧಿಕಾರವೆಲ್ಲವೂ ರಾಮರಾಯನ ಕೈಯಲ್ಲಿತ್ತು. ಕಾಲಕ್ರಮೇಣ ರಾಮರಾಯನು ಪ್ರಭುತ್ವದ ಬಿರುದುಗಳನ್ನು ತಳೆದು, ಸದಾಶಿವರಾಯನನ್ನು ಭದ್ರವಾದ ರಕ್ಷಣೆಯಲ್ಲಿರಿಸಿದನು. ಆದರೂ ರಾಮರಾಯನು. ಅವನ ಸೋದರರಾದ ತಿರುಮಲ ಮತ್ತು ವೆಂಕಟಾದ್ರಿಯರು " ಪ್ರತಿವರ್ಷ

ಒಂದು ದಿನ ನಿಜವಾದ ಸಾಮ್ರಾಟನ ಮುಂದೆ ನಮಸ್ಕಾರಮಾಡಿ " ಆ ಮೂಲಕ ತಮ್ಮ ಅಧೀನತೆಯನ್ನು ಪ್ರದರ್ಶಿಸುತ್ತಿದ್ದರು.

ಇಲ್ಲಿ ರಾಮರಾಯನ ಅರವೀಡು ವಂಶವನ್ನು ಕುರಿತು ಸಂಕ್ಷಿಪ್ತವಾಗಿ ಪರಿಶೀಲಿಸಬಹುದು.

ಆ ಸ್ಥಾನದ ರಾಜಕವಿಗಳು ನೀಡಿರುವ ಪುರಾಣದ ದಂತಕಥೆಗಳನ್ನು ಬಿಟ್ಟರೆ ಹೆಸರೆತ್ತಿದರೆ ಶತ್ರುಗಳು ಹೆದರುತ್ತಿದ್ದ ತಾತ ಪಿನ್ನಮನಿಂದ ಚಾರಿತ್ರಿಕವಂಶಾವಳಿಯು ಆರಂಭವಾದಂತೆ ತೋರುತ್ತದೆ. ಅವನ ಮಗ ಏಳು ದುರ್ಗಗಳನ್ನು ಒಂದೇ ದಿನದಲ್ಲಿ ಹಿಡಿದ ಸೋಮಿದೇವ. ಅನಂತರ ಆರವೀಟಿಪುರದ ಒಡೆಯ ಶೂರನೂ ಸಾಹಸಿಯೂ ಆದ ರಾಘವದೇವ. ಅರವೀಡು ಎಂಬುದು ಆಂಧ್ರದ ಕಡಪ ಜಿಲ್ಲೆಯ ರಾಯ ಚೋಟಿಗೆ ಹದಿನಾರು ಮೈಲಿ ದೂರದಲ್ಲಿರುವ ಒಂದು ಹಳ್ಳಿಯೆಂದು ಗೊತ್ತುಮಾಡಲಾಗಿದೆ. ರಾಘವ ದೇವನ ಕಾಲದಿಂದಲೂ ಈ ವಂಶದ ವ್ಯಕ್ತಿಗಳು ರಾಜ್ಯಾಡಳಿತದೊಂದಿಗೆ ನಿಕಟಸಂಬಂಧ ಹೊಂದಿರು ವುದನ್ನು ನೋಡುತ್ತೇವೆ. ಬಾಲಾಂಬಿಕೆಯನ್ನು ಮದುವೆಯಾಗಿದ್ದ ಸಾಳ್ವನರಸಿಂಹನ ರಾಜ್ಯವನ್ನು ಸ್ಥಾಪಿಸಿದನೆಂದು ವರ್ಣಿತನಾದ, ಎರಡನೆ ರಾಜವಂಶಕ್ಕೆ ಮೂಲ ಪುರುಷನಾದ ಆರವೀಟಿ ಬುಕ್ಕನು ಅವನ ಮಗ. ಬುಕ್ಕನು ಕ್ರಿ.ಶ. 1486ರಲ್ಲಿ ನರಸಿಂಹನ ಮಂತ್ರಿಯೂ ದಂಡನಾಯಕನೂ ಆಗಿದ್ದ. ಬುಕ್ಕನ ಮಗ ರಾಮರಾಯನು ಲಕ್ಕಾಂಬಿಕೆಯನ್ನು ಮದುವೆ ಆಗಿದ್ದು ಮಹಾಯೋಧನೆಂದೂ ಸಪಾದನ (ಗೋಲ್ಕೊಂಡದ ಸುಲ್ತಾನ) ಸೈನ್ಯವನ್ನು ಗೆದ್ದವನೆಂದೂ ಹೇಳಲಾಗಿದೆ. ಅವನು ತನ್ನ ಸಹೋದರ ವೆಂಕಟಪತಿ ಮತ್ತು ಅದೇ ವಂಶದ ಪ್ರಮುಖರಾದ ವೆಂಕಟಾದ್ರಿ ಮತ್ತು ತಿರುಮಲರ ಸಹಾಯದಿಂದ ಗುತ್ತಿ ಮತ್ತು ಪೆನುಕೊಂಡಗಳನ್ನು ಅಧೀನಕ್ಕೆ ತಂದುಕೊಂಡು ಗೋಲ್ಕೊಂಡದ ದೊರೆಯನ್ನು ಸೋಲಿಸಿದನು. ರಾಮರಾಯನಿಗೆ ಶ್ರೀರಂಗ, ಚನ್ನ ವೆಂಕಟಪತಿ, ತಿರುಮಲ ಮೊದಲಾದ ಐವರು ಗಂಡು ಮಕ್ಕಳಿದ್ದರು. ಕೃಷ್ಣದೇವರಾಯನ ಮಂತ್ರಿಯಾಗಿದ್ದ ಶ್ರೀರಂಗನಿಗೆ ರಾಮ, ತಿರುಮಲ ಮತ್ತು ವೆಂಕಟಾದ್ರಿ ಎಂಬ ಮೂವರು ಮಕ್ಕಳಿದ್ದರು. ಇವರಲ್ಲಿ ಕೋದಂಡರಾಮನೆಂಬ ಹೆಸರಿದ್ದ ರಾಮನು ಕೃಷ್ಣದೇವರಾಯನಿಗೆ ರಾಣಿ ತಿರುಮಲಾದೇವಿಯಲ್ಲಿ ಹುಟ್ಟಿದ ಒಬ್ಬಳೇ ಮಗಳು ತಿರುಮಲಾಂಬಿಕೆಯನ್ನು ಮದುವೆಯಾಗಿದ್ದನು. ಇದರಿಂದಲೇ ಅವನ ಹೆಸರಿನೊಂದಿಗೆ ಅಳಿಯನೆಂಬ ಹೆಸರು ಸೇರಿಕೊಂಡಿತು. ರಾಮರಾಯನ ಸೋದರ ತಿರುಮಲನು ವೆಂಗಳಾಂಬೆಯನ್ನು ವಿವಾಹವಾಗಿದ್ದನು. ಇವಳು ಬಹುಶಃ ಅಚ್ಯುತರಾಯನ ಸೋದರನಾದ ರಂಗರಾಯನ ಸೋದರಿ ಇರಬೇಕು.

ಫೆರಿಸ್ತನ ಪ್ರಕಾರ ರಾಮರಾಯನು ಹಿಂದಿನಿಂದ ಬಂದಿದ್ದ ಪ್ರಾಚೀನ ರಾಜಪುತ್ರವಂಶಗಳನ್ನು ನಾಶಪಡಿಸಿ ತನ್ನ ವಂಶದ ಘನತೆಯನ್ನು ಉನ್ನತ ಶಿಖರಕ್ಕೆ ಏರಿಸಿದನು. ರಾಮರಾಯನ ವಂಶದವರಾದ ತೆಲುಗು ಚೋಳರು, ವೇಲುಗೋಟಿಯವರು ಮೊದಲಾದವರು ಅಧಿಕಾರಾರೂಢರಾದರು. ಅವನು ಅಧಿಕ ಸಂಖ್ಯೆಯಲ್ಲಿ ಮುಸಲ್ಮಾನರನ್ನು ಸೈನ್ಯದಲ್ಲಿ ಸೇರಿಸಿಕೊಂಡುದರಿಂದ ರಾಜ್ಯದ ಒಳಾಡಳಿತದ ಅನೇಕ ಅಂತರಂಗದ ವಿಷಯಗಳು ಅವರಿಗೆ ತಿಳಿದಂತಾಯಿತು. ದಖನ್ನಿನ ಮುಸಲ್ಮಾನ ರಾಜ್ಯಗಳ ಪರಸ್ಪರ ಸಂಬಂಧದಲ್ಲಿ ಪ್ರವೇಶಿಸಲು ದೊರಕುವ ಎಲ್ಲ ಅವಕಾಶಗಳನ್ನು ಅವನು ಉಪಯೋಗಿಸಿಕೊಳ್ಳುವ ಆಸೆಯುಳ್ಳವನಾಗಿದ್ದನು. ಒಬ್ಬರನ್ನು ಮತ್ತೊಬ್ಬರ ವಿರುದ್ಧ ಎತ್ತಿ ಕಟ್ಟಿ, ಅವರನ್ನು ದುರ್ಬಲಗೊಳಿಸಿ ತನ್ನ ಸ್ವಂತ ಶಕ್ತಿಯನ್ನು ಹೆಚ್ಚಿಸಿಕೊಳ್ಳುವ ಆಸೆಯುಳ್ಳವನಾಗಿದ್ದನು. ಅವನ ಮುಖ್ಯ ಉದ್ದಿಶ್ಯವು ಕೃಷ್ಣಾ ಮತ್ತು ತುಂಗಭದ್ರೆಯ ನಡುವಿನ ದೋಆಬ್ (ಮುದಗಲ್ ಮತ್ತು ರಾಯಚೂರು ಕೋಟೆಗಳು) ಪ್ರದೇಶವನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡು ಮುಸ್ಲಿಮ್ ರಾಜ್ಯಗಳನ್ನು ಕೃಷ್ಣೆಯ ಉತ್ತರಕ್ಕೆ ನೂಕ ಬೇಕೆಂಬುದೇ ಆಗಿತ್ತು; ಮುಸಲ್ಮಾನ ದೊರೆಗಳು ಬಹು ಬೇಗನೆ ರಾಮರಾಯನ ಆಟವನ್ನು ಅರಿತು, ತಮ್ಮ ಭೇದಗಳನ್ನು ತತ್ಕಾಲಕ್ಕೆ ಮರೆತರು. ರಾಮರಾಯನ ನೀತಿ ಮತ್ತು ತಪ್ಪು ಎಣಿಕೆಯು ಅಂತಿಮವಾಗಿ

ರಕ್ಕಸತಂಗಡಿಯು ಸರ್ವನಾಶಕ್ಕೆ ಕಾರಣವಾಯಿತು. ಈ ಯುದ್ಧವು ವೈಭವದ ಸಾಮ್ರಾಜ್ಯವನ್ನು ಒಡೆದು ಸಂಪದ್ಭರಿತ ನಗರವನ್ನು ಹಾಳು ಹಂಪೆಯನ್ನಾಗಿ (ಭಗ್ನಾವಶೇಷಗಳ ರಾಶಿಯನ್ನಾಗಿ) ಮಾಡಿತು.

ಪರವರು ಕನ್ಯಾಕುಮಾರಿಯ ಸುತ್ತ ಮುತ್ತಲು ಮುತ್ತು ಹುಡುಕುವ ಹಾಗೂ ಮೀನುಹಿಡಿಯುವ ಜನಾಂಗದವರು. ಅವರಿಗೂ ಮುತ್ತು ಆಯುವ ಅಧಿಕಾರ ಪಡೆದಿದ್ದ ಮುಸ್ಲಿಂ ಧನಿಗಳಿಗೂ ಆಗಾಗ್ಗೆ ಘರ್ಷಣೆಗಳಾಗುತ್ತಿದ್ದವು. ಮುಸ್ಲಿಮರು ಈ ಬಡ ಪರವರನ್ನು ನಿರಂಕುಶವಾಗಿ ನಡೆಸಿಕೊಂಡ ಕಾರಣದಿಂದ ವಿಜಯನಗರದ ಸಾಮಂತರಾದ ಮಧುರೆಯ ಹಿಂದೂ ದೊರೆಗಳು ಅವರ ನಡುವೆ ಪ್ರವೇಶಿಸ ಬೇಕಾಯಿತು. ಆದರೆ ಪಶ್ಚಿಮ ಕರಾವಳಿಯ ಕೆಳಭಾಗದಲ್ಲಿ ಹರಡಿಕೊಳ್ಳುತ್ತಿದ್ದ ಪೋರ್ಚುಗೀಸರು ಇವರ ನಡುವೆ ಪ್ರವೇಶಿಸಲು ಬಯಸಿದರು, ಏಕೆಂದರೆ ತಾವು " ಭಾರತ ದೇಶಿಯರ ಮೇಲೆ ಸುಲಿಗೆ, ಕೊಲೆ ಕಳವುಗಳನ್ನು ಮಾಡುವ ದೈವದತ್ತ ಅಧಿಕಾರ ಪಡೆದವರೆಂಬ ಭಾವನೆ ಅವರದು ". ಅವರು ಪರವರ ಕಾರಣವನ್ನು ಎತ್ತಿ ಹಿಡಿದು, ಮೊದಲು ಅವರನ್ನು ಕ್ರೈಸ್ತರನ್ನಾಗಿ ಮಾಡಿ ಅನಂತರ ಕೊಳ್ಳೆ. ಮುತ್ತಿಗೆ, ದೇವಸ್ಥಾನಗಳ ನಾಶ ಮತ್ತಿತರ ಅತ್ಯಾಚಾರಗಳಿಗೆ ಮೊದಲಿಟ್ಟರು. ಈ ಎಲ್ಲ ಗಲಭೆಗಳನ್ನು ಅಡಗಿಸಲು ರಾಮರಾಯನ ಜ್ಞಾತಿ ಸೋದರರಾದ ಅರುಕು ಚಿನ್ನ ತಿಮ್ಮ ಮತ್ತು ವಿಠಲರಾಜರು ಕನ್ಯಾಕುಮಾರಿಯ ತನಕ ದಕ್ಷಿಣಕ್ಕೆ ದಂಡೆತ್ತಿ ಹೋದರು. ಪೋರ್ಚುಗೀಸರನ್ನು ನಿಯಂತ್ರಿಸಿದ ವಿಠಲರಾಜನು ದೊರೆಯ ಕೇರಳ ಮತ್ತು ದ್ರಾವಿಡದೇಶಗಳ ಪ್ರತಿನಿಧಿಯಾಗಿ ನೇಮಕಗೊಂಡನು.

ದಖನ್ನಿನ ಸುಲ್ತಾನರ ಬಗೆಗೆ ರಾಮರಾಯನ ನೀತಿಯನ್ನು ಅನ್ಯಾಯವಾಗಿ ದೂರಲಾಗಿದೆ. ಅವನು ಆಧುನಿಕ ರೀತಿಯ ಸೂಕ್ಷ್ಮ ರಾಜತಂತ್ರಜ್ಞನಾಗಿದ್ದನು. ತನ್ನ ಸಮಕಾಲೀನರಿಗಿಂತ ಅವನೇನೂ ಹೆಚ್ಚು ನೀಚನಾಗಿರಲಿಲ್ಲ.

ವಿಜಯನಗರದಲ್ಲಿನ ಮನಸ್ತಾಪಗಳು ಬಿಜಾಪುರವನ್ನು ಅಹಮದ್‌ನಗರ ಮತ್ತು ಗೋಲ್ಕೊಂಡಗಳ ಕಡೆಗೆ ಒಲಿಸಿ ವಿಜಯನಗರದ ವಿರುದ್ಧ ದಂಡೆತ್ತಿ ಹೋಗುವಂತೆ ಮಾಡಿದವು. ವೆಂಕಟಾದ್ರಿಯು ಮುಸಲ್ಮಾನ ಆಕ್ರಮಣಕಾರರನ್ನು ಮೂರು ಬಾರಿ ಸೋಲಿಸಿದರೂ ಶತ್ರುಗಳು ಹಠಾತ್ತನೆ ದಾಳಿಯಿಟ್ಟು ಕೈಸೆರೆ ಹಿಡಿದ ತನ್ನ ಕುಟುಂಬದ ವ್ಯಕ್ತಿಗಳ ಬಿಡುಗಡೆಯ ಸಲುವಾಗಿ ಶಾಂತಿ ಸಂಧಾನ ಮಾಡಬೇಕಾಯಿತು.

ತಿರುಮಲನು ಬೀದರನ್ನೂ ಸೋಲಾಪುರದ ಹಂಡೆ ಹನುಮಪ್ಪನು ಅಹಮದ್‌ನಗರವನ್ನೂ ಬಿಜಾಪುರ ದೊಡನೆ ಇದ್ದ ತಮ್ಮ ಸ್ನೇಹ ಒಪ್ಪಂದಗಳನ್ನು ಮುರಿಯುವಂತೆ ಬಲಾತ್ಕರಿಸಿದರು. ಅಹಮದ್‌ನಗರದ ಬರುಹಾನ್ ನಿಜಾಮಶಹನ ಮೂಲಕ ರಾಮರಾಯನು ಗೋಲ್ಕೊಂಡದ ಸ್ನೇಹಗಳಿಸಿದನು. ಕ್ರಿ.ಶ. 1544 ರಲ್ಲಿ ಈ ಮೂವರ ಆಕ್ರಮಣಗಳು ಬಿಜಾಪುರದ ಸುಲ್ತಾನನನ್ನು ದೀನನಾಗಿ ಒಬ್ಬಂಟಿಗನಾಗುವಂತೆ ಮಾಡಿದುವು. ವೆಂಕಟಾದ್ರಿಯು ರಾಯಚೂರನ್ನು ಹಿಡಿದುಕೊಂಡನು.

ಆದರೆ ಬಿಜಾಪುರದ ಸೈನ್ಯವು ಅಸದ್‌ಖಾನನ ನೇತೃತ್ವದಲ್ಲಿ ಅಹಮದ್‌ನಗರದ ಜೊತೆಯಲ್ಲಿ ಬೇರೆ ಬೇರೆಯಾಗಿ ಸಂಧಾನ ನಡೆಸಿ ಕುತುಬ್‌ಶಹನನ್ನು ಗೋಲ್ಕೊಂಡದ ವರೆಗೆ ಹೊಡೆದಟ್ಟಿತು. ರಾಮರಾಯನ ಪ್ರಚೋದನೆಯಿಂದ ಅಹಮದ್‌ನಗರವು ಬಿಜಾಪುರದ ಮೇಲೆ ನಡೆಸಿದ ಗಮನಸೆಳೆಯುವ ಆಕ್ರಮಣವು ವಿಫಲಗೊಂಡಿತು. ಕ್ರಿ.ಶ. 1548ರಲ್ಲಿ ಬಿಜಾಪುರದ ಮಂತ್ರಿಯೂ ಮುಖ್ಯ ಸೇನಾನಿಯೂ ಆಗಿದ್ದ ಅಸದ್‌ಖಾನನು ಮಡಿದನು. ಬೀದರರಾಜ್ಯವು ಬಿಜಾಪುರದೊಂದಿಗೆಸೇರಿಕೊಂಡಿತು. ಇದು ರಾಮರಾಯನನ್ನು

ಕುಪಿತನನ್ನಾಗಿ ಮಾಡಿತು, ಅವನು ಬೀದರ್ ಸುಲ್ತಾನನು ಗೆದ್ದುಕೊಂಡಿದ್ದ ಕಲ್ಯಾಣವನ್ನು ಗೆಲ್ಲಲು ಅಹಮದ್ ನಗರದ ಸುಲ್ತಾನನನ್ನು ಪ್ರಚೋದಿಸಿದನು. ಬಿಜಾಪುರವು ಬೀದರಿನ ರಕ್ಷಣೆಗೆ ಆಗಮಿಸಿತು. ರಾಮರಾಯನು ಇಕ್ಕೇರಿ ಸದಾಶಿವನಾಯಕನ ಕೈಕೆಳಗೆ ಒಂದು ಸೈನ್ಯವನ್ನು ಕಳಿಸಿಕೊಟ್ಟನು. ಅವನು ಬಿಜಾಪುರದ ಸೈನ್ಯವನ್ನು ಬೆನ್ನಟ್ಟಿ ಚದರುವಂತೆ ಮಾಡಿ, ಕಲ್ಯಾಣವನ್ನು ಗೆದ್ದನು.

ಕ್ರಿ.ಶ. 1550ರಲ್ಲಿ ಗೋಲ್ಕೊಂಡದ ಜಂಶದ್ ಕುತುಬ್‌ಶಹನು ಕಾಲವಾದನು. ವಿಜಯನಗರದಲ್ಲಿ ಆಶ್ರಯಪಡೆದಿದ್ದ ಅವನ ಸೋದರ ಇಬ್ರಾಹಿಮನು ರಾಮರಾಯನ ನೆರವಿನಿಂದ ಸಿಂಹಾಸನವನ್ನೇರಿದನು. ಕ್ರಿ.ಶ. 1553ರಲ್ಲಿ ಅಹಮದ್‌ನಗರದ ಬರ್ಹಾನ್‌ಶಹನು ಮಡಿದು ಅವನ ಮಗ ಹುಸೇನ್ ನಿಜಾಮ್‌ಶಹನು ಪಟ್ಟಕ್ಕೆ ಬಂದನು. ಅವನು ಬಿಜಾಪುರದೊಂದಿಗೆ ಶಾಂತಿ ಒಪ್ಪಂದಮಾಡಿಕೊಂಡನು.

ರಾಮರಾಯನು ಬಿಜಾಪುರದ ಮೇಲೆ ಮೇಲಿಂದ ಮೇಲೆ ನಡೆಸಿದ ಆಕ್ರಮಣಗಳ ಉದ್ದೇಶವು ರಾಯಚೂರು, ಮುದಗಲ್ಲುಗಳನ್ನು ಮತ್ತೆ ಪಡೆಯುವುದೇ ಆಗಿತ್ತು. ಆದರೆ ಹುಸೇನ್ ನಿಜಾಮ್‌ಶಹನು ಗುಲ್ಬರ್ಗದ ಮೇಲೆ ಕಣ್ಣಿಟ್ಟಿದ್ದನು. ಅದನ್ನು ಗೋಲ್ಕೊಂಡದ ಕುತುಬ್‌ಶಹನ ಸಹಾಯದಿಂದ, ಬಿಜಾಪುರದವರಿಂದ ಪಡೆಯುವ ಆಸೆ ಹೊಂದಿದ್ದನು. ರಾಮರಾಯನು ನಡುವೆ ಪ್ರವೇಶಿಸಿ ಕುತುಬ್‌ಶಹನನ್ನು ಹಿಮ್ಮೆಟ್ಟಿಸಿ, ಬಿಜಾಪುರದ ಅದಿಲ್‌ಶಹನ ಕೃತಜ್ಞತೆಗೆ ಪಾತ್ರನಾದನು. ಕೆಲವು ತಿಂಗಳ ನಂತರದಲ್ಲೇ ಅದಿಲ್‌ಶಹನು ಮಡಿದು ಅವನ ನಂತರ ಸಿಂಹಾಸನಕ್ಕೆ ಬಂದ ಆಲಿ ಅದಿಲ್‌ಶಹನು ಚಿಕ್ಕವಯಸ್ಸಿನವನಾದುದರಿಂದ ನಿಜಾಮಶಹನ ದುರಾಶೆ ಹೆಚ್ಚಿತು. ಆಲಿಯು ವಿಜಯನಗರಕ್ಕೆ ಓಡಿ ಹೋದನು, ಕೋಪಗೊಂಡ ರಾಮರಾಯನು ಹುಸೇನನ ಮೇಲೆ ಬಿದ್ದನು. ಮೊದಲು ಅರ್ಧಮನಸ್ಸಿನಿಂದ ಗೋಲ್ಕೊಂಡ ಮತ್ತು ಬಿದರೆಗಳು ಅವನನ್ನು ಕೂಡಿಕೊಂಡರೂ ಅನಂತರ ಅವನ ಕೈ ಬಿಟ್ಟವು. ಹುಸೇನನು ಭಾರಿ ನಷ್ಟವನ್ನು ಅನುಭವಿಸಿದನು. ಅವನ ದೇಶವನ್ನು ಹಾಳುಗೆಡವಿ ಅಪಮಾನಕರವಾದ ಒಪ್ಪಂದಕ್ಕೆ ಒಪ್ಪುವಂತೆ ಮಾಡಲಾಯಿತು. ಮುಸಲ್ಮಾನರ ವಿರುದ್ಧ ದೌರ್ಜನ್ಯ ಕೃತ್ಯಗಳ ಆರೋಪವನ್ನು ರಾಮರಾಯನಿಗೆ ಹೊರಿಸಲಾಗಿದೆ. ಸೂರೆ ಮತ್ತು ದುರಾಕ್ರಮಗಳು ಯುದ್ಧದಲ್ಲಿ ಪ್ರಾಸಂಗಿಕ. ಅವು ಮತೀಯ ಹುಚ್ಚುತನಕ್ಕೆ ಎಡೆ ಕೊಡುತ್ತವೆ. ಹಿಂದೂ ಪ್ರದೇಶಗಳ ಮೇಲೆ ಆಕ್ರಮಣಮಾಡಿದ ಮುಸಲ್ಮಾನ ಸೈನ್ಯಗಳು ಇನ್ನೂ ಕೆಟ್ಟ ರೀತಿಯಲ್ಲಿ ನಡೆದುಕೊಂಡವು. ರಾಮರಾಯನು ಬಿಜಾಪುರದ ಪಕ್ಷ ಕಟ್ಟಿದ್ದನು. ಅವನು ಮುಸಲ್ಮಾನರ ಅಂಥ ಶತ್ರುವೇನೂ ಆಗಿರಲಿಲ್ಲ. ಗೋಲ್ಕೊಂಡ ಮತ್ತು ಬಿದರೆಗಳು ಹಿಂದುಳಿದುದರ ಫಲವಾಗಿ ಕೋಟೆಗಳು ಮತ್ತು ಅಧಿಕ ಸಂಪತ್ತು ದೊರೆತವು.

ಹುಸೇನನು ಸೇಡು ಹತಾಶೆಗಳಿಂದ ಕಾದಿದ್ದನು. ಅವನು ತನ್ನ ಮಗಳೊಬ್ಬಳನ್ನು ಕ್ರಿ.ಶ. 1558 ರಲ್ಲಿ ಗೋಲ್ಕೊಂಡದ ಇಬ್ರಾಹಿಮನಿಗೂ ಇನ್ನೊಬ್ಬ ಮಗಳು ಚಾಂದಬೀಬಿಯನ್ನು ಬಿಜಾಪುರದ ಅದಿಲನಿಗೂ ಮದುವೆ ಮಾಡಿಕೊಟ್ಟಿದ್ದನು. ಅವನ ಹಿರಿಯ ಮಗ ಮುತ್ತೂಜನು 1564 ರಲ್ಲಿ ಆಲಿಯ ಸೋದರಿಯನ್ನು ಮದುವೆಯಾದನು. ಈ ವಿವಾಹದ ಉತ್ಸವಗಳು ವಿಜೃಂಭಣೆಯ ಸಡಗರಗಳು ಹೃದಯಗಳ ಏಕತೆಯನ್ನು ತಾತ್ಕಾಲಿಕಕ್ಕಾದರೂ ಉಂಟುಮಾಡಿ, ಇಸ್ಲಾಮಿನ ಏಳಿಗೆಯನ್ನು ಎತ್ತಿ ಹಿಡಿಯುವ ಏಕಮೇವ ಉದ್ದೇಶಕ್ಕಾಗಿ ತಮ್ಮ ಶತ್ರುವಿನೊಡನೆ ಹೋರಾಡುವಂತೆ ಮಾಡಿದುವು. 1554ರ ಜನವರಿ ವೇಳೆಗೆ ಈ ಮಿತ್ರರಾಜ್ಯಗಳು ವಿಜಯನಗರದ ಮೇಲೆ ಯುದ್ಧವನ್ನು ಘೋಷಿಸಿದುವು. ಏಕೆಂದರೆ ರಾಮರಾಯನ ಪ್ರಭಾವಯುತವಾದ ನಡವಳಿಕೆಯು ಅವರನ್ನು ಹತಾಶರನ್ನಾಗಿ ಮಾಡಿತ್ತು.

1565ರ ಜನವರಿ 23ನೆ ದಿನಾಂಕ ಮಂಗಳವಾರ ಯುದ್ಧವು ನಡೆಯಿತು. ರಾಮರಾಯ ಮತ್ತು ಅವನ ಇಬ್ಬರು ಸೋದರರು ಇದರಲ್ಲಿ ಭಾಗವಹಿಸಿದ್ದರು. ರಾಮರಾಯನು ವಯಸ್ಸಾಗಿದ್ದರೂ

ಸಹ ಫಿರಂಗಿ ದಳದೊಡನೆ ಸುಸಜ್ಜಿತವಾಗಿದ್ದ ಅಹಮದ್ ನಗರದ ಸೈನ್ಯವನ್ನು ಎದುರಿಸಿ ನಿಂತ ಮಧ್ಯ ಭಾಗದ ಸೈನ್ಯದ ದಳಪತಿಯಾಗಿದ್ದನು. ಅವನ ಬಲಕ್ಕೆ ಸೋದರ ತಿರುಮಲನು ಗೋಲ್ಕೊಂಡ ಮತ್ತು ಬಿದರೆಯ ಸೈನ್ಯವನ್ನು ಎದುರಿಸಿ ನಿಂತಿದ್ದನು. ಅವನ ಎಡಕ್ಕೆ ಇನ್ನೊಬ್ಬ ಸೋದರ ವೆಂಕಟಾದ್ರಿಯು ಬಿಜಾಪುರದ ಸೈನ್ಯವನ್ನು ಎದುರಿಸಿ ನಿಂತಿದ್ದನು. ಮೊದಲು ಹಿಂದುಗಳೇ ಯುದ್ಧದಲ್ಲಿ ಗೆದ್ದರು. ಆದರೆ ರಾಮರಾಯನ ಸೈನ್ಯದಲ್ಲಿದ್ದ 70 ರಿಂದ 80 ಸಾವಿರ ಸೈನಿಕರ ದಳಪತಿಗಳಾಗಿದ್ದ ಇಬ್ಬರು ಮುಸಲ್ಮಾನರ ದಂಡನಾಯಕರು ಶತ್ರುಗಳ ಕಡೆ ಸೇರಿಕೊಂಡುದರಿಂದ ಫಲಿತಾಂಶವು ನಿರ್ಣಯವಾಯಿತು. ರಾಮರಾಯನು ನಿಜಾಮಶಹನ ಕೈಗೆ ಸೆರೆಯಾಳಾಗಿ ಸಿಕ್ಕಿದನು. ಅವನು ರಾಮರಾಯನ ತಲೆಯನ್ನು ಕತ್ತರಿಸಿ ಹಿಂದೂ ಸೈನಿಕರು ನೋಡುವಂತೆ ಅದನ್ನು ಭರ್ಜಿಗೆ ಎತ್ತರದಲ್ಲಿ ಸಿಕ್ಕಿಸಿದನು. ಸುಮಾರು ಒಂದು ಲಕ್ಷ ಸೈನಿಕರು ಕೊಲೆಯಾದರಂತೆ. ಸೈನ್ಯದಲ್ಲಿ ಗೊಂದಲವುಂಟಾಗಿ ಹಿಂದೂ ಸೈನಿಕರ ನಾಶ ಸಂಪೂರ್ಣವಾಯಿತು. ಮಹಾನಗರವಾದ ವಿಜಯನಗರದ ಹೆದ್ದಾರಿಯು ಅವರಿಗೆ ತೆರೆಯಿತು. ತಿರುಮಲನು 1550 ಆನೆಗಳ ಮೇಲೆ ಸಾಮ್ರಾಟನ ಸಂಪತ್ತನ್ನೆಲ್ಲಾ ತುಂಬಿಕೊಂಡು ಚಂದ್ರಗಿರಿಗೆ ತಪ್ಪಿಸಿಕೊಂಡನು. ಅವನು ವಿಜಯನಗರ ಹಾಗೂ ಅದರ ನಿವಾಸಿಗಳನ್ನು ಆಕ್ರಮಣಕಾರರ ಹಾಗೂ ಅಲೆಮಾರಿ ಜನಾಂಗದ ನಿಷ್ಕರುಣೆಗೆ ಬಿಟ್ಟುಹೋದನು. ಅವನು ತನ್ನ ಜೊತೆಯಲ್ಲಿ ಸೆರೆಯಾಳಾಗಿದ್ದ ಸಾಮ್ರಾಟ್ ಸದಾಶಿವರಾಯನನ್ನೂ ಅಂತಃಪುರದ ಸ್ತ್ರೀಯರನ್ನೂ ಒಯ್ದನು.

ಹೀಗೆ ರಕ್ಕಸತಂಗಡಿಯ ದುರಂತ ಯುದ್ಧವು ಕೊನೆಗೊಂಡಿತು. ರಾಮರಾಯನು ತನ್ನ ವೃದ್ಧಾಪ್ಯ ವಯಸ್ಸಿನಲ್ಲಿ, ರಣವಿದ್ಯೆಯಲ್ಲಿ ತನ್ನ ಮುಂದೆ ಮಕ್ಕಳಂತಿದ್ದ ಮುಖಂಡರ ವಿರುದ್ಧ ಹೋರಾಡುತ್ತ ಮಡಿದನು. ಹೀಗೆ ವಿಜಯನಗರ ಸಾಮ್ರಾಜ್ಯವು ಪತನವಾಯಿತು.

### ಅರವೀಡು ವಂಶ

ಆರು ತಿಂಗಳ ಕಾಲ ವಿಜಯನಗರವು ಇತಿಹಾಸದಲ್ಲೇ ಅತಿ ಕ್ರೌರ್ಯದ ಸೂರೆಗೆ ತುತ್ತಾಯಿತು. ಮುಸಲ್ಮಾನರು ಅಲ್ಲಿಂದ ಹಿಂದಿರುಗಿದ ಮೇಲೆ, ತಿರುಮಲನು ನಗರದಲ್ಲಿ ಜನ ನೆಲಸುವಂತೆ ಮಾಡಲು ಪ್ರಯತ್ನಿಸಿ ವಿಫಲನಾದನು. ಅವನು ಪೆನುಕೊಂಡೆಗೆ ಹಿಂದಿರುಗಿದನು. ಅವನ ಮಗ ವೆಂಕಟನು ಬಹುಶಃ ಅವನ ಒತ್ತಾಸೆಯಂತೆ ಸದಾಶಿವರಾಯನ ಕತೆ ಮುಗಿಸಿದನು. ಸದಾಶಿವರಾಯನ ಜೊತೆಯಲ್ಲೇ ತುಳುವ ವಂಶವು ಕೊನೆಗೊಂಡಿತು.

ಹೀಗೆ ಕ್ರಿ.ಶ. 1571 ರಲ್ಲಿ ಅರವೀಡು ವಂಶ ಆರಂಭವಾಯಿತು. ಗೋಲ್ಕೊಂಡ ಮತ್ತು ಬಿಜಾಪುರಗಳ ಪರಸ್ಪರ ಮನಸ್ತಾಪಗಳು ತನ್ನ ವಿಸ್ತಾರವಾದ ರಾಜ್ಯವನ್ನು ಆಳಲು ತಿರುಮಲನಿಗೆ ಅವಕಾಶ ದೊರಕಿಸಿಕೊಟ್ಟವು. ಅವನು ಅಮರನಾಯಕರಿಂದ ದೊರೆಯಾಗಿ ಅಂಗೀಕರಿಸಲ್ಪಟ್ಟನು. ಅಮರನಾಯಕರು ಪಡೆದಿದ್ದ ಭೂಮಿಗೆ ವಂಶಾನುಗತವಾಗಿ ಅವರೇ ಅಧಿಪತಿಗಳೆಂದು ಒಪ್ಪಿಕೊಂಡನು.

ತಿರುಮಲನು ತನ್ನ ಸಾಮ್ರಾಜ್ಯವನ್ನು ಹೆಚ್ಚು ಕಡಮೆ ಮೂರು ಭಾಷಾವಿಭಾಗವಾಗಿ ವಿಭಜಿಸಿದ್ದನು. ಶ್ರೀರಂಗನು ಆಂಧ್ರದ ಪೆನುಕೊಂಡೆಯಲ್ಲೂ ಶ್ರೀರಾಮನು ಕನ್ನಡನಾಡಿನ ಶ್ರೀರಂಗಪಟ್ಟಣದಲ್ಲೂ ವೆಂಕಟನು ತಮಿಳುನಾಡಿನ ಚಂದ್ರಗಿರಿಯಲ್ಲೂ ಅವನ ಪ್ರತಿನಿಧಿಗಳಾಗಿದ್ದರು. ಅವನು ಕೇವಲ ಹನ್ನೊಂದು ವಿಪತ್ಕಾರಕ ತಿಂಗಳುಗಳಷ್ಟು ರಾಜ್ಯವಾಳಿ ನಿವೃತ್ತನಾದನು. ಕ್ರಿ. ಶ. 1572 ರಲ್ಲಿ ಶ್ರೀರಂಗರಾಯನು ಅವನನಂತರ ಸಿಂಹಾಸನವನ್ನೇರಿದನು.

## ಒಂದನೆ ಶ್ರೀರಂಗರಾಯ (ಕ್ರಿ.ಶ. 1572–1585)

ಶ್ರೀರಂಗರಾಯನು ಕಠಿನವಾದ ಆಸ್ತಿಯ ಹೊಣೆಗಾರಿಕೆಗೆ ವಾರಸುದಾರನಾದನು. ರಾಜನ ಆಶ್ರಿತರಲ್ಲಿ ಪರಸ್ಪರ ಅಂತರ್ಯುದ್ಧಗಳು ತುಂಬಿದ್ದವು. ಗೋಲ್ಕೊಂಡದ ದೊರೆಗಳು ತಮ್ಮ ವಿಜಯ ವನ್ನು ದಕ್ಷಿಣದ ವರೆಗೂ ವಿಸ್ತರಿಸಿದ್ದರು. 1583ರ ಎಪ್ರಿಲ್ ವೇಳೆಗೆ ಅವರು ಕೊಂಡವೀಡನ್ನು ಹಿಡಿದರು. ಅದೇ ವರ್ಷ ಬಿಜಾಪುರದ ಆಲಿ ಅದಿಲ್‌ಶಹನ ಕೊಲೆಯಾಗಿ ಚಾಂದಬೀಬಿಯು ರಾಜ ಪ್ರತಿನಿಧಿಯಾಗಿ ಅಪ್ರಾಪ್ತ ವಯಸ್ಸಿನ ಇಮ್ಮಡಿ ಇಬ್ರಾಹಿಮನ ಪರವಾಗಿ ಅಧಿಕಾರವನ್ನು ಸ್ವೀಕರಿಸಿದಳು. ಗೋಲ್ಕೊಂಡದಲ್ಲಿ ಇಬ್ರಾಹಿಂ ಕುತುಬನನಂತರ ಮಹಮದ್ ಕೂಲಿಯು ಅಧಿಕಾರಾರೂಢನಾದನು. ಅವನು ಮೊದಲು ಶ್ರೀರಂಗರಾಯನ ಜೊತೆಯಲ್ಲಿ ಸ್ನೇಹ ಒಪ್ಪಂದ ಮಾಡಿಕೊಂಡಿದ್ದರೂ ಮುಂದೆ ಅವನ ವಿರುದ್ಧ ದಂಡೆತ್ತಿ ಹೊರಟನು. ಈ ಎಲ್ಲ ಬದಲಾವಣೆಗಳು ಶ್ರೀರಂಗರಾಯನಿಗೆ ಕೊಂಚ ತೊಂದರೆ ಯನ್ನುಂಟುಮಾಡಿದವು. ಅವನು ಸವರಂ ಚನ್ನಪ್ಪನಂತಹ ನಿಷ್ಠಾವಂತ ಅಧಿಕಾರಿಗಳ ಸಹಾಯದಿಂದ ಮೇಲಿಂದ ಮೇಲೆ ನಡೆವ ದಂಡಯಾತ್ರೆಗಳಿಂದ ರಾಜಧಾನಿಯಾದ ಪೆನುಕೊಂಡೆಯನ್ನು ರಕ್ಷಿಸಿದನು. ದಿನದಿನಕ್ಕೂ ಸಾಮ್ರಾಜ್ಯವು ಕುಗ್ಗುತ್ತಾ ಹೋಯಿತು. ನಿರಾಶನಾದ ದೊರೆಯು ಕ್ರಿ. ಶ. 1585ರ ನವಂಬರ್ 29ರಂದು ತನ್ನ ಕೊನೆಯುಸಿರನ್ನೆಳೆದನು.

## ಇಮ್ಮಡಿ ವೆಂಕಟಪತಿ ದೇವರಾಯ (ಕ್ರಿ.ಶ. 1586–1614)

ಶ್ರೀರಂಗರಾಯನಿಗೆ ಮಕ್ಕಳಿರಲಿಲ್ಲ. ತಿರುಮಲ ಮತ್ತು ಶ್ರೀರಂಗ ಚಿಕ್ಕರಾಯರು ಅವನ ಗತಿಸಿದ ಸೋದರ ಶ್ರೀರಾಮನ ಮಕ್ಕಳು. ಅವರು ಇನ್ನೂ ಅಪ್ರಾಪ್ತ ವಯಸ್ಕರಾಗಿದ್ದರು. ಸ್ವಾರ್ಥಿಗಳಾದ ಮುಖಂಡರು ದುರ್ಬಲರನ್ನೇ ದೊರೆಯಾಗಿ ಆಶಿಸುತ್ತಾರೆ. ಆದರೆ ಮುಸಲ್ಮಾನರ ಭೀತಿ ಒಂದು ಕಡೆ, ಚನ್ನಪಟ್ಟಣದ ಜಗದೇವನ ಒತ್ತಾಸೆ ಇನ್ನೊಂದು ಕಡೆ; ಇವುಗಳ ಫಲವಾಗಿ ಶ್ರೀರಂಗರಾಯನ ಕಿರಿಯ ಸಹೋದರ ವೆಂಕಟಪತಿಯು ಕ್ರಿ.ಶ. 1586ರ ಫೆಬ್ರವರಿ 9ರಂದು ಸಿಂಹಾಸನವನ್ನೇರಿದನು. ವೆಂಕಟನು ಚಂದ್ರಗಿರಿಯಲ್ಲಿರಲು ಆಸೆಪಡುತ್ತಿದ್ದರೂ ಪೆನುಕೊಂಡೆಯಿಂದ ರಾಜ್ಯವಾಳಿದನು.

ಗೋಲ್ಕೊಂಡದ ಕುತುಬ್‌ಶಹನು ನಂದಿಯಾಲ ಮತ್ತು ಗಂಡೀಕೋಟೆಗಳನ್ನು ಹಿಡಿದು ಕರ್ನೂಲ್ ಕಡಪ, ಅನಂತಪುರಗಳ ಮೇಲೇರಿ ಹೋಗಿ ಪೆನುಕೊಂಡೆಯನ್ನು ಮುತ್ತಿದನು. ಈ ದಾಳಿಯಿಂದ ವೆಂಕಟನು ಅಚ್ಚರಿಗೊಂಡರೂ ವಿಜೇತ ಕುತುಬ್‌ಶಹನೊಂದಿಗೆ ಶಾಂತಿ ಸಂಧಾನದ ಮಾತು ತೆಗೆಯಲು ನಿರ್ಧರಿಸಿದನು. ಅತ್ತ ಜಗದೇವ, ತಂಜಾವೂರಿನ ರಘುನಾಥ, ಮಾಟಲಿ ಅನಂತ, ಅವನ ದಂಡನಾಯಕ, ವೇಲುಗೋಟಿ ಕಸ್ತೂರಿ ರಂಗಪ್ಪ ಮತ್ತು ಅವನ ಮಗ ಎಚ್ಚಮ–ಇವರುಗಳ ನೇತೃತ್ವದಲ್ಲಿ ಸೈನ್ಯ ಸಿದ್ಧತೆಗಳು ಭರದಿಂದ ಸಾಗಿದವು. ಆಕ್ರಮಣಕಾರರಿಗೆ ಸರಿಯಾದ ಪಾಠವನ್ನು ಕಲಿಸಲಾಯಿತು. ಅವರನ್ನು ಅಟ್ಟಿಕೊಂಡು ಹೋಗಿ ಪೆನ್ನಾರಿನ ದಡದಲ್ಲಿ ಸೋಲಿಸಲಾಯಿತು.

ವೆಂಕಟಪತಿಯು ಕೃಷ್ಣಾನದಿಯ ತೀರದ ಕೊಂಡವೀಡನ್ನು ಗೋಲ್ಕೊಂಡದವರಿಗೆ ಗಡಿಯಾಗಿ ಬಿಟ್ಟನು. ಈಮಧ್ಯೆ ರಾಜಧಾನಿಯಲ್ಲಿ ವಿದ್ರೋಹ ಉಂಟಾಗಿ ಅವುಗಳನ್ನು ಎದುರಿಸಬೇಕಾಯಿತು. ಕೋಲಾರ ಮತ್ತು ನಂದ್ಯಾಲಗಳಲ್ಲಿ ಉಂಟಾದ ದಂಗೆಗಳನ್ನು ಅಡಗಿಸಲಾಯಿತು. ಆದರೆ ವಂಶಾನುಗತವಾಗಿ ಬಂದಿದ್ದ ಅಮರನಾಯಕರ ಸ್ಥಾನಪಲ್ಲಟವು ದೊರೆಯ ನೆಚ್ಚಿನ ಮುಖ್ಯಸ್ಥರಲ್ಲಿ ಮನಸ್ತಾಪವನ್ನುಂಟುಮಾಡಿತು. ಇವರಲ್ಲಿ ಕೆಲವರು ವೆಲ್ಲೂರು ದೊರೆ ಲಿಂಗಮನ ಅಧೀನದಲ್ಲಿ 1901ರ ಮೇ 31ರಂದು ದೊರೆಯನ್ನು ಪ್ರತಿಭಟಿಸಿ ದಂಗೆ ಎದ್ದರು. ಉತ್ತರಮೇರೂರಿನ ಯುದ್ಧವು ಚೆಂಗಲಪೇಟೆ ಮತ್ತು ಮದುರಾಂತಕಂ

ಒಳಗೊಂಡ ಪೆರುಂಬೀಡಿನ ಅಮರನಾಯಕನಾದ ನಿಷ್ಠಾವಂತ ವೇಲುಗೋಟಿ ಎಚ್ಚಮನ ಸಾಹಸದ ದ್ಯೋತಕವಾಯಿತು. ವೆಂಕಟನು ಲಿಂಗಮನನ್ನು ಸೋಲಿಸಿ ವೆಲ್ಲೂರನ್ನು ರಾಜ್ಯದ ಮೂರನೆ ರಾಜಧಾನಿ ಮಾಡಿಕೊಂಡನು. ಆಗಾಗ ಅಲ್ಲಿ ನೆಲಸಿ ರಾಜ್ಯವಾಳುತ್ತಿದ್ದುದರಿಂದ ಅದಕ್ಕೆ ರಾಯ ವೇಲೂರು ಎಂದು ಹೆಸರಾಯಿತು. ಈ ವೇಳೆಗಾಗಲೇ ವಿದೇಶಿ ಶಕ್ತಿ ಬಣಗಳು ದಕ್ಷಿಣ ಭಾರತದಲ್ಲಿ ತಮ್ಮ ಅದೃಷ್ಟವನ್ನು ಹುಡುಕುತ್ತಿದ್ದವು.

ಡಚ್ಚರು 1608ರ ಕೊನೆಯ ವೇಳೆಗೆ ಜಿಂಜಿ ಕೃಷ್ಣಪ್ಪನಾಯಕನಿಂದ ಕಡಲೂರಿನ ಬಳಿ ಇರುವ ದೇವನ ಪಟ್ಟಣದಲ್ಲಿ ಕೋಟೆಯೊಂದನ್ನು ಕಟ್ಟಿಕೊಳ್ಳಲು ಅನುಮತಿಯನ್ನು ದೊರಕಿಸಿಕೊಂಡರು. ವೆಂಕಟನು ಡಚರನ್ನು ತನ್ನ ರಾಜ್ಯದಿಂದ ಓಡಿಸಲು ಜಿಂಜಿನಾಯಕರಿಗೆ ಆಜ್ಞೆಮಾಡಿದನು. ಪೋರ್ಚುಗೀಸರ ಜೊತೆಯಲ್ಲಿ ಲಾಭದಾಯಕ ವ್ಯಾಪಾರ ಸಂಬಂಧವನ್ನು ಹೊಂದಿದ್ದ ಅವನಿಗೆ ಪೋರ್ಚುಗೀಸರನ್ನು ಬಿಟ್ಟುಕೊಡಲು ಇಷ್ಟವಿರಲಿಲ್ಲ. ಕೃಷ್ಣಪ್ಪನಾಯಕನು ಮೊದಲು ಈ ಆಜ್ಞೆಗೆ ತಲೆಬಾಗಲಿಲ್ಲ. ಡಚ್ಚರ ಹೊಸ ವಸತಿಗಳಿಂದ ಹೇರಳವಾದ ಲಾಭ ದೊರೆಯುವುದೆಂದು ನಿರೀಕ್ಷಿಸಿದ್ದನು. ವೆಂಕಟನು ಮೂರನೆಯ ಬಾರಿಗೆ ಆಜ್ಞೆ ಹೊರಡಿಸಲು ನಾಯಕನು ಅದರಂತೆ ನಡೆಯಬೇಕಾಯಿತು. ಡಚ್ಚರು 1609 ರಲ್ಲಿ ಇನ್ನೂ ಉತ್ತರಕ್ಕೆ ಪುಲಕಾಟಿನಲ್ಲಿ ತಮ್ಮ ಮಳಿಗೆಯನ್ನು ಪ್ರಾರಂಭಿಸಿದರು. ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯವರು ಇದೇ ಕಾಲದಲ್ಲಿ ನೆಲೆಯೂರಲು ವಿಪುಲ ಪ್ರಯತ್ನ ಮಾಡುತ್ತಿದ್ದರು. ಕಡೆಗೆ ಅವರು ಉತ್ತರದಲ್ಲಿ ಮಚಲಿಪಟ್ಟಣದಲ್ಲಿ 1611 ರಲ್ಲಿ ನೆಲಸಿದರು. ಮುಂದೆ ಮುಮ್ಮಡಿ ವೆಂಕಟನ ಆಳಿಕೆಯಲ್ಲಿ ಇಂಗ್ಲೀಷರಿಗೆ ಮದರಾಸಿನ ಫೋರ್ಟ್ ಸೆಂಟ್ ಜಾರ್ಜ್ ಕೋಟೆಯನ್ನು ಕಟ್ಟಿಕೊಳ್ಳಲು 1639 ರಲ್ಲಿ ಅನುಮತಿ ದೊರೆಯಿತು.

ಇಮ್ಮಡಿ ವೆಂಕಟಪತಿದೇವರಾಯನು ಅರವೀಡು ವಂಶದಲ್ಲೇ ಅತ್ಯಂತ ಸುಪ್ರಸಿದ್ಧ ದೊರೆ. ಅವನ ಆಳಿಕೆಯು ಪ್ರಜಾವಾತ್ಸಲ್ಯದಿಂದ ಕೂಡಿತ್ತು. ಪ್ರಜೆಗಳ ಸ್ಥಿತಿಗತಿಗಳನ್ನು ಉತ್ತಮಪಡಿಸುವ ಧಾರ್ಮಿಕ ಕಾರ್ಯಗಳಿಂದ ಕೂಡಿದ್ದು ಸಾಹಿತ್ಯ ಕಲೆಗಳಿಗೆ—ಪೋರ್ಚುಗೀಸ್ ಕಲಾವಿದರೂ ಸೇರಿ, ಆಶ್ರಯ ನೀಡಿತ್ತು. ಅವನ ಇಪ್ಪತ್ತೆಂಟು ವರ್ಷಗಳ ಆಳಿಕೆಯ ಕಾಲದಲ್ಲಿ ರಾಜ್ಯವು ಕಳೆದುಕೊಂಡಿದ್ದ ಘನತೆಯನ್ನು ಸಾಕಷ್ಟು ಮತ್ತೆ ಪಡೆದುದಲ್ಲದೆ ಕೃಷ್ಣದೇವರಾಯನ ಕಾಲದ ವಿಜಯನಗರದ ವೈಭವವನ್ನು ಕೊಂಚ ಮಟ್ಟಿಗೆ ಪಡೆಯಲು ಯತ್ನಿಸಿತು.

### ಎರಡನೆಯ ಶ್ರೀರಂಗ (ಕ್ರಿ.ಶ. 1614–1619)

ವೆಂಕಟನಿಗೆ ಮಕ್ಕಳಿರಲಿಲ್ಲ. ಅವನ ಆರು ಪತ್ನಿಯರಲ್ಲಿ ಒಬ್ಬಳಾದ ಗೊಬ್ಬೂರಿ ಜಗರಾಯನ ಸೋದರಿಯಾದ ಬಾಯಮ್ಮನು ಒಂದು ಬ್ರಾಹ್ಮಣ ಶಿಶುವನ್ನು ಪಡೆದು ತನ್ನದೆಂದು ಪ್ರಚುರಪಡಿಸಿದಳು. ವೆಂಕಟನು ಇದನ್ನು ನಂಬಿ, ಹುಡುಗನು ಹದಿನಾಲ್ಕು ವರ್ಷದವನಾದಾಗ ಅವನಿಗೆ ಜಗರಾಯನ ಮಗಳನ್ನು ಕೊಟ್ಟು ಮದುವೆ ಮಾಡಿದನು. ಆದರೆ ಸಾಯುವ ಮುನ್ನ ಸಿಂಹಾಸನವನ್ನು ತನ್ನ ಸೋದರಳಿಯ ಇಮ್ಮಡಿ ಶ್ರೀರಂಗನೆಂಬ ಹೆಸರಿನಲ್ಲಿ ದೊರೆಯಾಗಿದ್ದ ಶ್ರೀರಂಗ ಚಿಕ್ಕರಾಯನಿಗೆ ಬಿಟ್ಟುಕೊಟ್ಟನು. ಬಾಲಕ ಇಮ್ಮಡಿ ಶ್ರೀರಂಗನು ಅನನುಭವಿಯಾಗಿದ್ದು ತನ್ನ ಮೂರ್ಖತನ ಹಾಗೂ ದುರಾಶೆಗಳಿಂದ ನಿಷ್ಠಾವಂತ ಅಧಿಕಾರಿಗಳಿಂದ ಬೇರ್ಪಟ್ಟು ತನ್ನ ಕುಟುಂಬದ ವ್ಯಕ್ತಿಗಳೊಂದಿಗೆ ಜಗರಾಯನ ಸೆರೆಯಾಳಾದನು. ಜಗರಾಯನು ತನ್ನ ಅಳಿಯನನ್ನು ದೊರೆಯಾಗಿ ಘೋಷಿಸಿದನು. ಇದರಿಂದ ಸಿಂಹಾಸನದ ಹಕ್ಕುದಾರರ ಬಗೆಗೆ ಆಸ್ಥಾನದ ಸ್ವಾಮಿನಿಷ್ಠ ಸೇವಕರಲ್ಲಿ ಯಾದವೀ ಕಲಹಕ್ಕೆ ಆರಂಭವಾಯಿತು. ನಿಷ್ಠಾವಂತ ಎಚ್ಚಮನಾಯಕನ ಪ್ರಯತ್ನದ ಫಲವಾಗಿ ಶ್ರೀರಂಗನ ಮಗ ರಾಜಕುಮಾರ ರಾಮದೇವನೊಬ್ಬನು

ಮಾತ್ರ ಸೆರೆಮನೆಯಿಂದ ತಪ್ಪಿಸಿಕೊಂಡನು. ಉಳಿದ ಶ್ರೀರಂಗನ ಸಂಸಾರದವರೆಲ್ಲರೂ ಮೋಸದಿಂದ ಕೊಲೆಯಾದರು. ಇಂಥ ಹೇಯವಾದ ಕೊಲೆಯಿಂದ ಜಗರಾಯನು ಅನೇಕ ಸ್ನೇಹಿತರನ್ನು ಕಳೆದು ಕೊಂಡರೂ ಜಿಂಜಿ ಮತ್ತು ಮಧುರೆಗಳ ನಾಯಕರು ಬೆಂಬಲ ನೀಡಿದರು. ಎಚ್ಚಮನಾಯಕನು ತಂಜಾವೂರಿನ ರಘುನಾಥನನ್ನು ರಾಮದೇವನ ಪಕ್ಷಕ್ಕೆ ಒಲಿಸಿಕೊಂಡನು. ಕ್ರಿ.ಶ. 1616 ರಲ್ಲಿ ನಡೆದ ತೋಪೂರಿನ ನಿರ್ಣಾಯಕ ಯುದ್ಧದಲ್ಲಿ ಜಗರಾಯನು ಮಡಿದು ಅವನ ಆಳಿಯನು ಸೆರೆಸಿಕ್ಕಿದನು.

### ರಾಮದೇವ (ಕ್ರಿ.ಶ. 1919–1929)

ರಾಮದೇವನು ದೊರೆಯಾದರೂ ಜಗರಾಯನ ಹಿರಿಯ ಸೋದರ ಗೊಬ್ಬೂರಿ ಯತಿರಾಜನ ನೇತೃತ್ವದಲ್ಲಿ ಅವನ ಶತ್ರುಗಳು ಎಚ್ಚಮನಾಯಕನ ಏಳಿಗೆಯನ್ನು ಸಹಿಸದೆ ಸಂಘಟಿತರಾಗಿದ್ದರು. ಎಚ್ಚಮನ ಪ್ರಯತ್ನದ ಫಲವಾಗಿ ಯತಿರಾಜನು ರಾಮದೇವನಿಗೆ ಮಗಳನ್ನು ಕೊಟ್ಟು ಅಳಿಯನನ್ನಾಗಿ ಮಾಡಿಕೊಂಡನು.

ರಾಜ್ಯದಲ್ಲಿ ಶಾಂತಿ ಇರಲಿಲ್ಲ. ಜಿಂಜಿ ಮತ್ತು ಮಧುರೆಗಳ ನಾಯಕರು ದುರ್ಬಲ ದೊರೆಯನ್ನು ಬಯಸಿದ್ದರೇ ಹೊರತು, ಸ್ನೇಹಿತನಾದ ಗೊಬ್ಬೂರಿ ಯತಿರಾಜನ ಬೆಂಬಲ ಪಡೆದ ದೊರೆಯನ್ನಲ್ಲ. ಅವರು ರಾಮದೇವನ ವಿರುದ್ಧ ನಿಂತರು. ಎಚ್ಚಮನು ದಂಡಯಾತ್ರೆ ಕೈಗೊಂಡನು. ಅವನ ಸೋದರ ಸಿಂಗಪ್ಪನು ತನ್ನ ಸಂಬಂಧಿಯಾದ ಯತಿರಾಜ ತಿಮ್ಮನಿಗೆ ಸೇರಿದ್ದ ಪುಲಿಕಾಟನ್ನು ಮುತ್ತಿದನು. ಅನಂತರ ಸ್ಯಾಂಥೋಮಿನ ಮೇಲೆ ಏರಿಹೋದನು. ಪುದುಚೇರಿ ರಂಗಪ್ಪನೂ ಕಾಳಹಸ್ತಿಯ ದಾಮೆರ್ಲ ವೆಂಕಟಪತಿಯೂ ದೊರೆಗೆ ಕಿರುಕುಳ ಕೊಟ್ಟರು. ಆದರೆ ಮಗನ ಸಹಾಯವನ್ನೂ ತಿರುವೆಂಗಡನಾಥನ ನೆರವನ್ನೂ ಪಡೆದಿದ್ದ ಯತಿರಾಜನು ಶತ್ರುಗಳಿಗಿಂತ ಪ್ರಬಲನಾಗಿದ್ದನು.

ಬಿಜಾಪುರದ ಸುಲ್ತಾನನು ಈ ಯಾದವೀ ಕಲಹಗಳ ಲಾಭವನ್ನು ಪಡೆದುಕೊಂಡನು. ಈ ಆಳಿಕೆಯ ಆರಂಭದಲ್ಲಿ ಬಿಜಾಪುರದ ಇಬ್ರಾಹಿಮನು ಕರ್ನೂಲನ್ನು ಮುತ್ತಿದನು. ಗೋಪಾಲರಾಜನೆಂಬವನು ಗೋಲ್ಕೊಂಡದವರ ನೆರವನ್ನು ಬೇಡಿದನು. ಅವನು ಮಾತಲಿ, ಹಂಡೆ, ಮತ್ತು ಪೆಮ್ಮಸಾನಿಗಳ ನಾಯಕರ ಬೆಂಬಲ ಪಡೆದಿದ್ದರೂ ಆ ಪ್ರದೇಶವನ್ನು ಶತ್ರುಗಳಿಗೆ ಸೋತನು. ಕರ್ನೂಲ್ ಬಿಜಾಪುರ ಕೈ ಸೇರಿತು.

### ಮೂರನೆ ವೆಂಕಟಪತಿದೇವ (ಕ್ರಿ.ಶ. 1630–1642)

ರಾಮನ ಮರಣಾನಂತರ ಸಿಂಹಾಸನಕ್ಕಾಗಿ ಸ್ಪರ್ಧಿಸಿದ ಮೂವರೆಂದರೆ : ರಾಮನು ತನ್ನ ಉತ್ತರಾಧಿಕಾರಿಯಾಗಿ ನೇಮಿಸಿದ್ದ ಅಳಿಯ ರಾಮರಾಯನ ಮೊಮ್ಮಗ ಪೆದ್ದ ವೆಂಕಟಪತಿ. ಎರಡನೆಯವನು ರಾಮನ ಚಿಕ್ಕಪ್ಪನಾದ ತಿಮ್ಮ. ಮೂರನೆಯವನೆಂದರೆ ರಾಮನ ಸೋದರಳಿಯ ಕಂದನವೋಲಿನ (ಕರ್ನೂಲ್) ಗೋಪಾಲ ರಾಜನ ದತ್ತಪುತ್ರ ಶ್ರೀರಂಗ. ಇವರಲ್ಲಿ ಕಿರುಕುಳವನ್ನು ಕೊಡುತ್ತಿದ್ದ ತಿಮ್ಮನನ್ನು 1635ರಲ್ಲಿ ಜಿಂಜಿಯ ನಾಯಕನು ಕೊಂದನು. ಶ್ರೀರಂಗನು ಡಚ್ ಮತ್ತು ಮುಸಲ್ಮಾನರಿಂದ ಸಹಾಯವನ್ನು ಪಡೆದು ರಾಜ್ಯದ ಶಾಂತಿಯನ್ನು ಕದಡಿದನು. ರಾಮನು ಹಕ್ಕುದಾರನಾಗಿ ಆರಿಸಿದ್ದ ಮುಮ್ಮಡಿ ವೆಂಕಟಪತಿದೇವನು ಸಿಂಹಾಸನವನ್ನೇರಿದನು.

ಪೆದ್ದ ವೆಂಕಟನ ಆಳಿಕೆಯು ಒಳಗಿನ ಮತ್ತು ಹೊರಗಿನ ವಿದ್ರೋಹ ದುರಾಕ್ರಮಣಗಳ

ಕೊನೆಯಿಲ್ಲದ ಕಥೆಯಾಗಿತ್ತು. ಬಿಜಾಪುರದ ರಣದುಲ್ಲಾಖಾನನು ಇಕ್ಕೇರಿಯ ವೀರಭದ್ರನಾಯಕನನ್ನು ಮುತ್ತಿದನು. ಇಕ್ಕೇರಿ ಮತ್ತು ಭುವನಗಿರಿಗಳು ಪತನ ಹೊಂದಿದವು. ಮಲೆನಾಡು ದಾಳಿಗೆ ಬಲಿಯಾಯಿತು. ಬೆಂಗಳೂರನ್ನು ಕೆಂಪೇಗೌಡನಿಂದ ಕಿತ್ತುಕೊಂಡು ಅದಕ್ಕೆ ಷಹಜಿಯನ್ನು ರಾಜ್ಯಪಾಲನನ್ನಾಗಿ ನೇಮಿಸಿದನು. ಅನಂತರ ಶ್ರೀರಂಗಪಟ್ಟಣವನ್ನು ಮುತ್ತಲಾಯಿತು. ಕಂಠೀರವ ನರಸರಾಜನು ರಣಮುಲ್ಲಾಖಾನನನ್ನು ಹಿಂದಿರುಗುವಂತೆ ಮಾಡಿದನು. ಆದರೆ ಖಾನನು ವೆಂಕಟನ ಸೋದರಳಿಯ ಶ್ರೀರಂಗನ ನೆರವು ಪಡೆದು ಮತ್ತೆ ದಾಳಿಯಿಟ್ಟನು. ರಣದುಲ್ಲಾಖಾನನು ಚಿಕ್ಕನಾಯಕನ ಹಳ್ಳಿ, ಬಳ್ಳಾಪುರ, ಕುಣಿಗಲ್ಲುಗಳನ್ನು ಮುತ್ತಿ ಲೂಟಿ ಮಾಡಿದನು. ಮುಸಲ್ಮಾನ ಸೈನ್ಯವು ವೆಲ್ಲೂರಿನ ಕಡೆಗೆ ದಾಳಿಯಿಟ್ಟಿತು. ಆದರೆ ಪೆದ್ದ ವೆಂಕಟನ ರಾಜಧಾನಿಯಾದ ವೆಲ್ಲೂರನ್ನು ದಕ್ಷಿಣದ ಸಾಮಂತರ ನಾಯಕರು ರಕ್ಷಿಸಿದರು.

## ಮೂರನೆಯ ಶ್ರೀರಂಗರಾಯ (ಕ್ರಿ.ಶ. 1642–1678)

ಈ ವಂಶದ ಅನೇಕ ದೊರೆಗಳ ಹಾಗೆ ಪೆದ್ದ ವೆಂಕಟನಿಗೂ ಸಂತಾನವಿರಲಿಲ್ಲ. ಇದುವರೆಗೂ ವಿಜಯನಗರದ ವಿರುದ್ಧ ಬಿಜಾಪುರದ ಮಿತ್ರನಾಗಿದ್ದ ಶ್ರೀರಂಗನು ಸಿಂಹಾಸನವನ್ನು ಏರಿದನು. ಈ ಕಾಲದಲ್ಲಿ ಹಿಂದುಗಳ ನೈತಿಕ ಜೀವನವು ತುಂಬಾ ಅಧೋಗತಿಯನ್ನು ಹೊಂದಿತ್ತು. ದೊರೆಗಳು ಮತ್ತು ಸಂಸ್ಥಾನಿಕರು ಸ್ವಾರ್ಥಲೋಲುಪರಾಗಿದ್ದರೇ ಹೊರತು ಪ್ರಜೆಗಳ ಅಥವಾ ದೇಶದ ಹಿತಾಸಕ್ತಿಯನ್ನು ಗಮನಿಸುತ್ತಿರಲಿಲ್ಲ.

ಗೋಲ್ಕೊಂಡದ ಸೈನ್ಯ ಉದಯಗಿರಿಗೆ ಮುತ್ತಿಗೆ ಹಾಕಿತ್ತು. ಶ್ರೀರಂಗನಿಗೆ ಇದ್ದ ಸ್ನೇಹಿತರು ಬಿಜಾಪುರದವರು ಮಾತ್ರ. ಅವರು ಮಲೆನಾಡಿನ ಮುತ್ತಿಗೆಯಲ್ಲಿ ತೊಡಗಿದ್ದರು. ಪೆನುಕೊಂಡ ಮತ್ತು ಚಂದ್ರಗಿರಿಗಳು ರಾಜಧಾನಿಗಳೆಂದು ಆ ಕಾಲದ ಶಾಸನಗಳಲ್ಲಿ ಉಲ್ಲಿಖಿತವಾಗಿದ್ದರೂ ಶ್ರೀರಂಗನು ವೆಲ್ಲೂರಿನಲ್ಲಿ ವಾಸಿಸುತ್ತಿದ್ದನು. ಅವನು ಸ್ವಜನರ ವಿರುದ್ಧ ಬಿಜಾಪುರದವರ ಮಿತ್ರನಾಗಿದ್ದನೆಂಬ ಸಂಗತಿಯು ಅವನಿಗೆ ಪ್ರತಿಕೂಲವಾಗಿತ್ತು. ಪುಲಿಕಾಟಿನ ರಾಜ್ಯಪಾಲ ದಾಮರ್ಲ ವೆಂಕಟಾದ್ರಿಯು ಗೋಲ್ಕೊಂಡದವರ ಸಹಾಯವನ್ನು ಯಾಚಿಸಿದನು. ದಕ್ಷಿಣದಲ್ಲಿದ್ದ ಜಿಂಜಿ ಮತ್ತು ಮಧುರೆಯ ನಾಯಕರು ಅವನ ವಿರೋಧವಾಗಿದ್ದರು.

ಬಿಜಾಪುರದವರು ಶ್ರೀರಂಗರಾಯನಿಂದ ಹದಿನೈದು ಲಕ್ಷ ಚಿನ್ನದ ನಾಣ್ಯಗಳನ್ನು ಪಡೆದು ತಮ್ಮ ಸೈನ್ಯವನ್ನು ಕೊಟ್ಟರು. ದೊರೆಯು 1644ರಲ್ಲಿ ಉದಯಗಿರಿಯನ್ನು ಹಿಂದಕ್ಕೆ ಪಡೆದನು. ತನ್ನ ವಿರುದ್ಧ ನಿಂತ ಸಾಮಂತರನ್ನು ತಾತ್ಕಾಲಿಕವಾಗಿ ಅಡಗಿಸಿದನು. ಆದರೆ ಒಂದು ಶತಮಾನದ ಹಿಂದೆ ನಡೆದಿದ್ದ ಘಟನೆಯು ಪುನರಾವರ್ತನೆಯಾಯಿತು. ಬಿಜಾಪುರ ಮತ್ತು ಗೋಲ್ಕೊಂಡದವರು ಒಟ್ಟುಗೂಡಿ ವೆಲ್ಲೂರನ್ನು ಮುತ್ತಿದರು. ಶ್ರೀರಂಗರಾಯನು ಓಡಿಹೋಗಿ ಕೆಳದಿಯ ಶಿವಪ್ಪನಾಯಕನ ಬಳಿ ಆಶ್ರಯ ಪಡೆದನು. ಶಿವಪ್ಪನಾಯಕನು 1645 ರಲ್ಲಿ ಮುಸಲ್ಮಾನ ದಾಳಿಕಾರರಿಂದ ವೆಲ್ಲೂರನ್ನು ರಕ್ಷಿಸಿದನು. ಬೇಲೂರು ಕೆಲವು ವರ್ಷಗಳ ವರೆಗೆ ಶ್ರೀರಂಗರಾಯನ ರಾಜಧಾನಿಯಾಗಿತ್ತು.

ರಾಯನು ತನ್ನ ಸಾಮಂತರನ್ನು ದಂಗೆ ಏಳದಂತೆ ನೋಡಿಕೊಳ್ಳಲು ಹಿಂದುಗಳೊಡನೆ ಕಣ್ಣು ಮುಚ್ಚಾಲೆಯಾಡುತ್ತಿದ್ದ ಹಣಕೊಟ್ಟು ಕೊಂಡಿದ್ದ ಮುಸ್ಲಿಮರ ದಂಡನ್ನು ಆಶ್ರಯಿಸಬೇಕಾಗಿತ್ತು. ಸಾಮ್ರಾಜ್ಯವು ಬಿಜಾಪುರ ಮತ್ತು ಗೋಲ್ಕೊಂಡಗಳ ಪ್ರಭಾವಕ್ಕೆ ಸಿಲುಕಿದ ಎರಡು ವಲಯಗಳಾಗಿ ವಿಭಾಗವಾಯಾಗಿತ್ತು. ವಿಜಯನಗರದ ದಂಡನಾಯಕರಾದ ಉದಯಗಿರಿಯ ಚಿನ್ನಶೆಟ್ಟಿ ಮತ್ತು ಕೋನೇರಿ

ಚೆಟ್ಟಿಗಳು ಶತ್ರುಗಳನ್ನು ಸೇರಿದರು. ಕಾಲ ಮಿಂಚಿದರೂ ಮಧುರೆಯ ನಾಯಕನನ್ನು ಬಿಟ್ಟು ಉಳಿದ ನಾಯಕರು ದೊರೆಗೆ ಸಹಾಯ ಮಾಡಲು ಪ್ರಯತ್ನಿಸಿದರು. ಜನ ಹಾಗೂ ಧನ ಒದಗಿದವು. ಈ ಸ್ವಾತಂತ್ರ್ಯದ ಯುದ್ಧಕ್ಕಾಗಿ ವೆಲ್ಲೂರಿನ ರಾಜಸ್ತ್ರೀಯರು ತಮ್ಮ ಬೆಲೆ ಬಾಳುವ ಆಭರಣಗಳನ್ನು ಕೊಟ್ಟರು. ತಿರುಪತಿದೇವಾಲಯದ ವಿಪುಲ ಸಂಪತ್ತನ್ನೂ ಬಳಸಿದರು.

ಇದರಿಂದೇನೂ ಪ್ರಯೋಜನವಾಗಲಿಲ್ಲ. ದೊರೆಯು ಮೊದಲು ತಂಜಾವೂರಿನಲ್ಲೂ ಅನಂತರ ಮೈಸೂರಿನಲ್ಲೂ ಆಶ್ರಿತನಾಗಬೇಕಾಯಿತು. ಮೈಸೂರಿನ ಕಂಠೀರವ ನರಸಿಂಹರಾಜ ಒಡೆಯರು ಅವನಿಗೆ ಸಹಾಯ ಮಾಡಿದರು. ಆದರೆ ನಾಯಕರಲ್ಲಿನ ಸ್ಪರ್ಧೆ, ಮಧುರೆಯ ತಿರುಮಲನಾಯಕನ ವಿರೋಧ ಇವುಗಳು ಮೈಸೂರಿನ ಪೂರ್ವ ತೀರದ ಪ್ರದೇಶದಲ್ಲಿ ಮುಸ್ಲಿಮ್ ಸುಲ್ತಾನರು ತಮ್ಮ ಸ್ಥಾನಗಳನ್ನು ಭದ್ರಪಡಿಸಿಕೊಳ್ಳುವಂತೆ ಮಾಡಿದವು. 1659ರಲ್ಲಿ ಕಂಠೀರವ ನರಸರಾಜರ ಮರಣವೂ 1660ರಲ್ಲಿ ಶಿವಪ್ಪನಾಯಕನ ಮರಣವೂ ವಿಜಯನಗರ ಸಾಮ್ರಾಜ್ಯವನ್ನು ಪುನರ್ವ್ಯವಸ್ಥೆಗೊಳಿಸಬೇಕೆಂಬ ಶ್ರೀರಂಗರಾಯನ ಆಸೆಗಳನ್ನು ಪುಡಿ ಪುಡಿ ಮಾಡಿದವು. ಅವನು ಮೈಸೂರಿನಲ್ಲೂ ಮತ್ತೆ ಕೆಲವು ವರ್ಷಗಳು ಬೇಲೂರಿನಲ್ಲೂ ಆಶ್ರಯ ಪಡೆಯಬೇಕಾಯಿತು. 1678ರ ವರೆಗೂ ಶ್ರೀರಂಗನ ಶಾಸನಗಳು ದೊರಕುತ್ತವೆ. ಅನಂತರ ಅವನ ಹೆಸರು ಕಾಣದಾಗುತ್ತದೆ.

ಹೀಗೆ ಕ್ರಿ. ಶ. 1336ರಲ್ಲಿ ಮೂರೂವರೆ ಶತಮಾನಗಳ ಹಿಂದೆ ವಿಜಯನಗರದಲ್ಲಿ ಹೊತ್ತಿಸಲ್ಪಟ್ಟ ಸ್ವಾತಂತ್ರ್ಯದ ದೀವಿಗೆಯು ನಂದಿಹೋಯಿತು. ಅರವೀಡು ವಂಶದ ಮನೆತನ ಉಳಿದು ಆನೆಗೊಂದಿಯ ಸಂಸ್ಥಾನಿಕರು ಆಧುನಿಕ ಕಾಲದಲ್ಲಿ ಅದರ ಪ್ರತಿನಿಧಿಗಳಾಗಿದ್ದರೂ ಹಿಂದಿನ ಶಕ್ತಿಯನ್ನಾಗಲೀ ವೈಭವವನ್ನಾಗಲೀ ಅದು ಹೊಂದಲಿಲ್ಲ.

ಆದರೇನು ? ಶ್ರೀರಂಗರಾಯನ ಅವಸಾನವಾಗುವ ಮುನ್ನ ಹಿಂದೂ ರಾಷ್ಟ್ರೀಯತೆಯು 1674ರಲ್ಲಿ ಪಟ್ಟಕ್ಕೇರಿದ ಶಿವಾಜಿಯಲ್ಲಿ ಹೊಸನಾಯಕನನ್ನು ಪಡೆಯಿತು. ವಿಜಯನಗರವು ಯಾವ ಘನ ಉದ್ದೇಶಕ್ಕಾಗಿ ಸಂಪ್ರದಾಯಗಳಿಗಾಗಿ ಸ್ಥಾಪನೆಯಾಯಿತೋ ಅವುಗಳನ್ನು ಮುಂದೊಯ್ಯಲು ನೇತಾರನೊಬ್ಬನ ಉದಯವಾಯಿತು.

## ಅರವೀಡು ವಂಶವೃಕ್ಷ




(ಪಿ.ಸೂ. ಕಂಸಗಳಲ್ಲಿ ಕೊಟ್ಟಿರುವ ಅಂಕಿಗಳು ಆಳಿಕೆಗೆ ಬಂದ ಕ್ರಮವನ್ನು ತಿಳಿಸುತ್ತವೆ.)

ಮೂಲಲೇಖಕರು : ಶ್ರೀ ಓ. ರಾಮಚಂದ್ರಯ್ಯ
ಅನುವಾದಕರು : ಶ್ರೀ ಕೊರಟಿ ಶ್ರೀನಿವಾಸರಾವ್

# ಬಹಮನಿ ರಾಜ್ಯ

ಇದುವರೆಗೂ ನಾವು ವಿಜಯನಗರ ಸಾಮ್ರಾಜ್ಯದ ಉಗಮ, ಬೆಳವಣಿಗೆ, ಉಚ್ಛ್ರಾಯಸ್ಥಿತಿ ಮತ್ತು ಅದರ ಅವನತಿಯನ್ನು ನೋಡಿದ್ದೇವೆ. ಈ ಸಾಮ್ರಾಜ್ಯದ ಅರಸುಗಳ ಚರಿತ್ರೆಯು ಕ್ರಿ.ಶ. ಹದಿನೇಳನೆಯ ಶತಮಾನದ ಕೊನೆಯ ಭಾಗದ ವರೆಗೂ ನಮ್ಮ ಗಮನವನ್ನು ಸೆಳೆದಿದೆ. ಇನ್ನು ಮುಂದಿನ ರಾಜಕೀಯ ಚರಿತ್ರೆಯ ಪರಿಚಯವನ್ನು ಮಾಡಿಕೊಳ್ಳುವುದಕ್ಕೆ ಮುಂಚೆ ಸಮಕಾಲೀನ ಕರ್ಣಾಟಕ ರಾಜ್ಯಗಳ ವಿಷಯವನ್ನು ಗಮನಿಸಬೇಕು. ಆದುದರಿಂದ ಕರ್ಣಾಟಕದಲ್ಲಿ ಮೂರು ಶತಮಾನಗಳಿಗೂ ಹೆಚ್ಚಿಗೆ ಆಳಿದ ಬಹಮನಿ ಮತ್ತು ಇತರ ಮಹಮದೀಯ ರಾಜರ ಉಗಮ, ಬೆಳವಣಿಗೆ ಮತ್ತು ಅವನತಿಯ ಚರಿತ್ರೆಯನ್ನು ಅಧ್ಯಯನಮಾಡಬೇಕು. ಅವರುಗಳು ವಿಜಯನಗರ ಸಾಮ್ರಾಜ್ಯದ ಸಮಕಾಲೀನರಾಗಿದ್ದರು. ಮಧ್ಯ ಕಾಲೀನ ಭಾರತದಲ್ಲಿದ್ದಂತೆ ಅವರ ಚರಿತ್ರೆಯು ಸಮಕಾಲೀನ ಸಾಮ್ರಾಜ್ಯದ ಬೆಳವಣಿಗೆಯ ಮೇಲೆ ಆಧಾರಿತವಾಗಿದ್ದಿತು. ಅವರು ತಾವು ಆಳಿದ ಪ್ರದೇಶಗಳಲ್ಲಿ ಕಲೆ ಮತ್ತು ಸಂಸ್ಕೃತಿಯ ಮೇಲೆ ತಮ್ಮ ಪ್ರಭಾವವನ್ನು ಬೀರಿದ್ದಾರೆ. ವಿಜಯನಗರ ಸಾಮ್ರಾಜ್ಯದ ಚರಿತ್ರೆಯಲ್ಲಿ ಈ ರಾಜರುಗಳಿಗೆ ಸಂಬಂಧಿಸಿದ ವಿಷಯುಗಳನ್ನು ಆಗಲೇ ಕೊಟ್ಟಿದ್ದೇವೆ. ಅಷ್ಟೇ ಅಲ್ಲದೆ ವಿಜಯನಗರದ ಅರಸುಗಳಿಗೂ ಇವರಿಗೂ ಇದ್ದ ರಾಜಕೀಯ ಸಂಬಂಧಗಳನ್ನು ವಿವೇಚಿಸಿದ್ದೇವೆ. ಆದರೂ ಕೂಡ ಈ ಮುಸ್ಲಿಮ್ ದೊರೆಗಳ ಸಮಗ್ರ ಇತಿಹಾಸವನ್ನು ವಿವೇಚಿಸುವುದು ಆವಶ್ಯಕ; ಏಕೆಂದರೆ ಕರ್ಣಾಟಕದ ಬಹುಭಾಗ ಪ್ರದೇಶಗಳನ್ನು ಬಹಳ ಕಾಲದ ವರೆಗೆ ಅವರು ಆಳಿದರು.

ಬಹಮನಿ ಮತ್ತು ಇತರ ಮಹಮ್ಮದೀಯ ರಾಜ್ಯಗಳ ಹುಟ್ಟು ಮತ್ತು ಬೆಳವಣಿಗೆಯನ್ನು ಈಗ ವಿವೇಚಿಸೋಣ.

ಮಹಮದ್ ತುಗಲಖನ ಆಡಳಿತದ ಅಂತ್ಯಕಾಲದಲ್ಲಿ ದೆಹಲಿಯ ಸುಲ್ತಾನರ ಮೇಲೆ ದಕ್ಷಿಣಾಪಥ ದಲ್ಲಿ ಅನೇಕ ದಂಗೆಗಳು ನಡೆದವು. ಮಲ್ಲಿಕ್ ಕಾಫರನ ದಕ್ಷಿಣದ ದಂಡಯಾತ್ರೆಗಳು ಕೇವಲ ದಾಳಿ ಗಳಾಗಿದ್ದವೇ ಹೊರತು ರಾಜ್ಯವನ್ನು ಕಟ್ಟುವ ಆಕಾಂಕ್ಷೆಯಿಂದ ಕೂಡಿರಲಿಲ್ಲ. ಇದು ದಕ್ಷಿಣದ ರಾಜರುಗಳನ್ನು ಹುರಿದುಂಬಿಸಿತು. ಹಿಂದೂ ರಾಷ್ಟ್ರೀಯತೆಯು ಉಗ್ರವಾಗತೊಡಗಿತು. ಕ್ರಿ.ಶ. 1344ರಲ್ಲಿ ಇಮ್ಮಡಿ ಪ್ರತಾಪರುದ್ರನ ಮಗನಾದ ಕನ್ಯನಾಯಕನು, ಆಗಿನ ಕಾಲದಲ್ಲಿ ಅತ್ಯಂತ ಬಲಯುತವಾಗಿದ್ದ ಹೊಯ್ಸಳ ನಾಲ್ಕನೆಯ ಬಲ್ಲಾಳನ ಸಹಾಯದಿಂದ, ಸುಲ್ತಾನರ ವಿರುದ್ಧ ಒಂದು ಗುಂಪನ್ನು ಕಟ್ಟಿದನು. ವಾರಂಗಲ್ ರಾಜ್ಯವು ಮುಸ್ಲಿಮರ ರಾಜ್ಯಭಾರವನ್ನು ಕಿತ್ತೊಗೆಯಿತು. ಮುಸ್ಲಿಮ್ ಸೈನ್ಯದಿಂದ ಧ್ವಂಸ ಮಾಡಲ್ಪಟ್ಟ ದೋರಸಮುದ್ರವು ಚೇತರಿಸಿಕೊಂಡಿತ್ತು. ಹಿಂದೆ ಹಿಂದೂ ಪುನರುದ್ಧಾರದಲ್ಲಿ ಮುಂದಾಳ್ತನವನ್ನು ವಹಿಸಿದ್ದ ಮತ್ತು ಯುದ್ಧ ತಾಂತ್ರಿಕ ದೃಷ್ಟಿಯಿಂದ ಪ್ರಾಮುಖ್ಯವನ್ನು ಹೊಂದಿದ್ದ ಸಣ್ಣ ಕಂಪಿಲಿ ರಾಜ್ಯವು ಮುಸ್ಲಿಮ್ ಆಡಳಿತದಿಂದ ಸ್ವತಂತ್ರವಾಯಿತು. ಪ್ರೋಲಯ ನಾಯಕನು ಕೊಂಡವೀಡು ರಾಜ್ಯವನ್ನು ಸ್ಥಾಪಿಸಿದ್ದನು. ಪೂರ್ವ ಕರಾವಳೀ ಪ್ರದೇಶವು ಮುಸ್ಲಿಮರ ರಾಜ್ಯದಿಂದ ವಿಮೋಚನೆಗೊಳಿಲ್ಪಟ್ಟಿದ್ದಿತು. ವಿದ್ಯಾರಣ್ಯರಿಂದ ಆಶೀರ್ವದಿಸಲ್ಪಟ್ಟ ಹರಿಹರನು ಕ್ರಿ.ಶ. 1336ರಲ್ಲಿ ಹೊಸತಾಗಿ ಸ್ಥಾಪಿತವಾದ ವಿಜಯನಗರ ಸಾಮ್ರಾಜ್ಯಕ್ಕೆ ರಾಜನಾಗಿ ಮಾಡಲ್ಪಟ್ಟನು.

ದಕ್ಷಿಣಾಪಥದಲ್ಲಿ ದೆಹಲಿಯ ಪ್ರತಿನಿಧಿಗಳಾಗಿದ್ದ ವಿದೇಶೀಯ ಅಮೀರರುಗಳಲ್ಲಿ ಅತೃಪ್ತಿ ಮತ್ತು ಸಂಶಯಗಳು ತಲೆದೋರಿದವು. ಅವರು ದಂಗೆಯೆದ್ದು ಇಮದ್-ಉಲ್-ಮುಲ್ಕ್ ಎಂಬ ಸೇನಾಧಿಪತಿಯನ್ನು ಪದಚ್ಯುತಿಗೊಳಿಸಿ ದೌಲತಾಬಾದ್ (ದೇವಗಿರಿ) ಅನ್ನು ಸ್ವಾಧೀನಪಡಿಸಿಕೊಂಡರು. ಸ್ವಲ್ಪ ಕಾಲದ ಮುಂಚೆ ಇಪ್ಪತ್ತಮೂರು ಪ್ರಾಂತಗಳನ್ನೊಳಗೊಂಡಿದ್ದ ಮಹಮದ್ ತುಗಲಖನ ರಾಜ್ಯವು ಅನೇಕ ಭಾಗಗಳಾದವು,

ದೌಲತಾಬಾದಿನ ಪತನಕ್ಕೆ ಕಾರಣರಾದ ದಕ್ಷಿಣಾಪಥದ ಅಮೀರರ ನಾಯಕನೇ ಇಸ್ಮಾಯಿಲ್ ಮುಖ್. ಇವನು ದಕ್ಷನಾದ ಹಸನ್ ಎಂಬವನಿಗೆ ನಾಯಕತ್ವವನ್ನು ಬಿಟ್ಟುಕೊಟ್ಟನು. ಕ್ರಿ.ಶ. 1347ರಲ್ಲಿ ತನ್ನ ಅನುಯಾಯಿಗಳಿಂದ ಹಸನ್ನನು ರಾಜನಾಗಿ ಮಾಡಲ್ಪಟ್ಟನು. ಇವನ ಪೂರ್ಣ ಹೆಸರು ಅಲ್ಲಾಉದ್ದೀನ್ ಹಸನ್ ಬಹಮನ್ ಷಾ. ಇವನು ಗುಲ್ಬರ್ಗವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು, ಬಹಮನಿರಾಜ್ಯ ಎಂದು ಚರಿತ್ರೆಯಲ್ಲಿ ಪ್ರಸಿದ್ಧವಾಗಿರುವ ರಾಜ್ಯವನ್ನು ಸ್ಥಾಪಿಸಿದನು.

ಈ ಹಸನ್ನನು ದೆಹಲಿಯ ಬ್ರಾಹ್ಮಣ ಜ್ಯೋತಿಷಿಯ ಆಶ್ರಯದಲ್ಲಿದ್ದನೆಂದೂ ಅದರಿಂದ ಹಸನ್ನನು ರಾಜನಾದ ಮೇಲೆ ಈ ಬ್ರಾಹ್ಮಣನನ್ನು ತನ್ನ ಮಂತ್ರಿಯನ್ನಾಗಿ ಆರಿಸಿಕೊಂಡನು ಎಂಬ ಫೆರಿಸ್ತನ ಅಭಿಪ್ರಾಯವು ಕಲ್ಪನೆಯೇ ಹೊರತು ನಿಜವಲ್ಲ. ಬಹಮನಿ ರಾಜ್ಯವು ಬ್ರಾಹ್ಮಣನಿಂದ ಉಗಮವಾಯಿತು ಎಂಬ ಸಿದ್ಧಾಂತವನ್ನು ಇತ್ತೀಚಿನ ಸಂಶೋಧನೆಗಳು ಸ್ಫೋಟನಗೊಳಿಸಿ, ಹಸನ್ನನು ಪರ್ಶಿಯಾ ದೇಶದ ಬಹಮನ್ ಷಾ ಎಂಬವನ ವಂಶಸ್ಥನೆಂದು ನಿರೂಪಿಸಿವೆ.

ಬುರ್ಹಾನ್-ಇ-ಮಸಿರ್ ಗ್ರಂಥದ ಕರ್ತೃವೂ ತಬಾಕತ್-ಇ-ಅಕ್ಬರ್ ಗ್ರಂಥದ ಕರ್ತೃವಾದ ನಿಜಾಮ್ ಉದ್ದೀನ್ ಅಹಮ್ಮದ್, ಹಫ್ತ್ ಇಕ್ಲಿಮ್ ಮತ್ತು ಹಜಿ-ಉದ್-ದಬೀರ್ ಗ್ರಂಥಗಳ ಕರ್ತೃವಾದ ಅಹಮದ್ ಅಮೀನ್ ರಾಜ್ ಮತ್ತು ಗುಜರಾತಿನ ಪ್ರಖ್ಯಾತ ಅರಾಬಿಕ್ ಚರಿತ್ರಕಾರನೇ ಮೊದಲಾದ ನಂಬಲರ್ಹವಾದ ಚರಿತ್ರಕಾರರು ಬ್ರಾಹ್ಮಣ ಜ್ಯೋತಿಷಿಯ ವಿಚಾರವನ್ನು ಹೇಳುವುದೇ ಇಲ್ಲ.

ಕ್ರಿ. ಶ. 1351ರಲ್ಲಿ ಮಹಮದ್ ತುಗಲಖನು ಮರಣಹೊಂದಲು ಕಳೆದುಕೊಂಡಿದ್ದ ರಾಜ್ಯವನ್ನು ಗೆಲ್ಲಲು ಸಾಮರ್ಥ್ಯವು ಮತ್ತು ಆಕಾಂಕ್ಷೆಯೂ ಇಲ್ಲದ ಫಿರೋಜ್ ಉತ್ತರಾಧಿಕಾರಿಯಾದನು. ಇದರಿಂದ ಅಲ್ಲಾಉದ್ದೀನನು ರಾಜ್ಯದ ವಿಸ್ತರಣೆಯನ್ನು ಪ್ರಾರಂಭಿಸಿದನು. ಕಾಂದಹಾರಿನ ಕೋಟೆ, ಬಿದರೆ, ಮಳಖೇಡ, ಬೊಂಬಾಯಿ ಪ್ರಾಂತದ ರತ್ನಗಿರಿ ಜಿಲ್ಲೆಯ ಕೊಂಕಣದ ಡಾಭೋಲ್ ಎಂಬ ಸಣ್ಣ ರೇವು ಪಟ್ಟಣ ಮತ್ತು ಗೋವವೂ ಗೆಲ್ಲಲ್ಪಟ್ಟು ಸುಲ್ತಾನನ ಸಾಮ್ರಾಜ್ಯಕ್ಕೆ ಸೇರಿಸಲ್ಪಟ್ಟವು. ಈ ಸಾಮ್ರಾಜ್ಯದ ಪಶ್ಚಿಮ ಗಡಿಯು ಡಾಭೋಲ್, ಪೂರ್ವದಲ್ಲಿ ನಿಜಾಮರ ರಾಜ್ಯಕ್ಕೆ ಸೇರಿರುವ ಭೊಂಗೀರ್, ಉತ್ತರ ಮತ್ತು ದಕ್ಷಿಣಗಳಲ್ಲಿ ಕ್ರಮವಾಗಿ ಪೆನ್‌ಗಂಗಾ ಮತ್ತು ಕೃಷ್ಣಾ ನದಿಗಳೂ ಇದ್ದವು.

ಮಹಮದ್ ತುಗಖಲನ ಆಸ್ಥಾನದಲ್ಲಿ ಪ್ರಚಲಿತವಾಗಿದ್ದ ಆಡಳಿತ ಪದ್ಧತಿಗಳನ್ನು ಹಸನ್ನನು ಅನುಕರಿಸಿದನು. ಬರ್ಹಾನ್-ಇ-ಮಸಿರ್ ಗ್ರಂಥದ ಕರ್ತೃವು ಈ ಕೆಳಗಿನ ಅಧಿಕಾರಗಳು ಸುಲ್ತಾನನಿಂದ ನಿರ್ಮಿತವಾದವು ಎಂದು ಹೇಳುತ್ತಾನೆ :

1. ಸಾಹಿಬ್-ಇ-ಅರ್ಜ್ : ಸೈನ್ಯವನ್ನು ಪರಿಶೀಲಿಸುವವನು
2. ನಾಯಿಬ್ ಒರ್ಬಕ್ : ಸಹಾಯಕ ದ್ವಾರಪಾಲಕ

3. ಕುರ್ ಬೇಗ್-ಇ-ಮಕ್‌ಸರನ್ : ಎಡಗಡೆ ಸೈನ್ಯವಿಭಾಗದ ಅಧಿಕಾರಿ
4. ದಬೀರ್ : ಕಾಯದರ್ಶಿ
5. ದೀವಾನ್ : ಮಂತ್ರಿ
6. ಕುರ್‌ಬೇಗ್ ಇ ಮೈಮರಹ್ : ಬಲಗಡೆ ಸೈನ್ಯವಿಭಾಗದ ಅಧಿಕಾರಿ
7. ಶಹ್ನಾ-ಇ-ಫಿಲ್ : ಕರಿವೃಂದ ನಾಥ
8. ದವತ್–ದಾರ್ : ಮುದ್ರಾಧಿಕಾರಿ
9. ಸೈಯದ್–ಉಲ್–ಹುಜ್ಜಬ್ : ದ್ವಾರಪಾಲಕ
10. ಹಾಜಿಬ್–ಉಲ್–ಕಾಸ್‌ಬಾಹ್ : ನಗರದ ಪೋಲೀಸ್ ಅಧಿಕಾರಿ
11. ಶಹ್ನಾ–ಇ–ಬರ್ಗಾ : ದರ್ಬಾರ್ ಅಧಿಕಾರಿ
12. ಸಲಾರ್ ಖ್ವಾನ್ ಅಥವಾ ಚಸ್ನಿಗಿರ್ : ಪಾಕಶಾಲಾಧಿಕಾರಿ
13. ಸರ್–ಪರ್‌ದಾಹ್–ದಾರ್ : ನೇಪಥ್ಯಾಧಿಕಾರಿ ?

ಅಲ್ಲಾಉದ್ದೀನನು ತನ್ನ ರಾಜ್ಯವನ್ನು ನಾಲ್ಕು 'ತರಫ್' ಅಥವಾ ಭಾಗಗಳಾಗಿ ವಿಂಗಡಿಸಿದನು. ಅವುಗಳು (1) ದಾಬೋಳ್‌ವರೆಗಿನ ಮತ್ತು ಕೃಷ್ಣಾ–ತುಂಗಭದ್ರಾ ಪ್ರದೇಶಗಳನ್ನು ಒಳಗೊಂಡ ಅಹಸನಾಬಾದ್–ಗುಲ್ಬರ್ಗ (2) ದೌಲತಾಬಾದ್ (3) ಬೀದರ ಮತ್ತು (4) ಕಾಂದಹಾರ್, ಇಂದೂರಾ ಮತ್ತು ತೆಲಂಗಾಣದ ಕೆಲವು ಪ್ರದೇಶಗಳನ್ನೊಳಗೊಂಡ ಬಿದರೆ.

ಪ್ರತಿಯೊಬ್ಬ ಅಮೀರನಿಗೂ ಒಂದು ಜಹಗೀರಿಯು ಕೊಡಲ್ಪಟ್ಟಿದ್ದಿತು. ಈ ಅಮೀರನು ಸಮಯ ಬಂದಾಗ ಸಹಾಯ ಮಾಡಲು ಒಂದು ಸೈನ್ಯವನ್ನು ಇಡಬೇಕಾಗಿದ್ದಿತು.

ಕ್ರಿ. ಶ. 1358ರಲ್ಲಿ ಹಸನ್ನನು ಮರಣ ಹೊಂದಿದಾಗ, ಮುಸ್ಲಿಮ್ ಚರಿತ್ರಕಾರರು, ತಮ್ಮ ಸಂಪ್ರದಾಯಕ್ಕನುಸಾರವಾಗಿ ಅವನ ರಾಜ್ಯಭಾರ ಕಾಲದಲ್ಲಿ ಅವರ ಧರ್ಮಕ್ಕೆ ಬಹುವಾಗಿ ಪ್ರೋತ್ಸಾಹ ಕೊಟ್ಟನು ಎಂದು ತೀರ್ಮಾನವನ್ನು ಕೊಟ್ಟರು.

ಅವನ ಮಗನಾದ ಒಂದನೆಯ ಮಹಮದ್ ಷಾ ವಿಶೇಷ ವೈಭವದೊಡನೆ ಸಿಂಹಾಸನಕ್ಕೆ ಬಂದನು. ಅವನ ಆಳಿಕೆಯಲ್ಲಿ ಮುಖ್ಯವಾಗಿ ವಿಜಯನಗರ ಮತ್ತು ತೆಲಂಗಾಣದ ಮೇಲೆ ಯುದ್ಧಗಳು ನಡೆದವು. ಚರಿತ್ರಕಾರ ಈಶ್ವರಿ ಪ್ರಸಾದರು ಹೇಳುವಂತೆ, ತೆಲಂಗಾಣದ ಮೇಲಿನ ಯುದ್ಧಮಧ್ಯದಲ್ಲಿ ತೆಲಂಗಾಣ ರಾಜಕುಮಾರನು ಕ್ರೌರ್ಯದಿಂದ ಕೊಲ್ಲಿಸಲ್ಪಟ್ಟನು. ತೆಲಂಗಾಣದ ರಾಜನು ಫಿರೋಜ್ ತುಗಲಖನ ಸಹಾಯವನ್ನು ಕೋರಿ ವಿಫಲನಾದನು. ತುಗಲಖನು ತನ್ನ ಸುಧಾರಣಾ ಕಾರ್ಯಗಳಲ್ಲಿ ನಿರತನಾಗಿದ್ದುದರಿಂದ ಇಷ್ಟೊಂದು ದೂರದ ತೆಲಂಗಾಣದ ಯುದ್ಧವನ್ನು ಕೈಗೊಳ್ಳಲು ಸಿದ್ಧನಿರಲಿಲ್ಲ. ಸುಲ್ತಾನನು ತನ್ನ ರಾಜಧಾನಿಯ ರಕ್ಷಣೆಗೆ ಮಂತ್ರಿಯಾದ ಸಯಫ್ ಉದ್ದಿನ್ ಘೋರಿಯನ್ನು ನಿಯಮಿಸಿ ತೆಲಂಗಾಣದ ಕಡೆ ಹೊರಟನು. ಹಿಂದೂಗಳು ಸುಮ್ಮನೆ ಶರಣಾಗತರಾಗಲಿಲ್ಲ. ಸುಲ್ತಾನನು ಎರಡು ವರ್ಷಗಳ ಕಾಲ ವಿರೋಧಿ ದೇಶದಲ್ಲಿರಬೇಕಾಯಿತು. ಕೊನೆಗೆ ಈ ಇಬ್ಬರಿಗೆ ಸಂಧಾನ ವೇರ್ಪಟ್ಟು, ರಾಜನು ಗೋಲ್ಕೊಂಡ ಕೋಟೆಯನ್ನು ಮತ್ತು ಯುದ್ಧದ ಖರ್ಚಿಗಾಗಿ ವಿಶೇಷ ಹಣವನ್ನು ಸುಲ್ತಾನನಿಗೆ ಕೊಡಲು ಒಪ್ಪಿದನು. ಅಷ್ಟೇ ಅಲ್ಲದೆ ರಾಜನು ಚಿನ್ನದ ಸಿಂಹಾಸನವನ್ನು ಸುಲ್ತಾನನಿಗೆ ಅರ್ಪಿಸಿದನು. ಈ ಸಿಂಹಾಸನವು ವೈಭವಯುತವಾಗಿ ಗುಲ್ಬರ್ಗದ ಅರಮನೆಯ ಸಭಾಂಗಣದಲ್ಲಿ ಸ್ಥಾಪಿತವಾಯಿತು.

ವಿಜಯನಗರದ ರಾಜನು ಮುದಗಲ್ ಕೋಟೆಯನ್ನು ಆಕ್ರಮಿಸಿಕೊಂಡದ್ದರಿಂದ, ಘೋರ ಯುದ್ಧವು ನಡೆದು ಅನೇಕ ನಿರಪರಾಧಿ ಜನಗಳು ಕೊಲ್ಲಲ್ಪಟ್ಟರು.

ಆಂತರಿಕವಾಗಿ ಅವನ ನಿರ್ದಾಕ್ಷಿಣ್ಯವಾದ ಮತ್ತು ವೀರ್ಯವತ್ತಾದ ಆಳಿಕೆಯ ಕಾಲದಲ್ಲಿ ಬಟ್ಟೆ ಇಳಿಸುವ ಕಾರಖಾನೆಗಳು ಮುಚ್ಚಲ್ಪಟ್ಟವು ಮತ್ತು ಪುಂಡಾಟಗಳು ನಿಂತವು. ಅವನು ಬಹಮನಿ ರಾಜ್ಯಕ್ಕೆ ಒಂದು ಹೊಸ ಆಡಳಿತ ಕ್ರಮವನ್ನು ರೂಢಿಸಿದನು. ರಾಜ್ಯದ ವಿವಿಧ ಪ್ರಾಂತಗಳನ್ನು ತನ್ನ ವಾರ್ಷಿಕ ಭೇಟಿಗಳಿಂದ ಹಿಡಿತದಲ್ಲಿಟ್ಟುಕೊಂಡಿದ್ದನು. 17 ವರ್ಷ ಮತ್ತು 7 ತಿಂಗಳುಗಳ ಆಳಿಕೆಯ ನಂತರ ಕ್ರಿ.ಶ. 1375ರಲ್ಲಿ ಅವನು ಮರಣಹೊಂದಿದನು.

ಅವನ ಮಗನೂ ಉತ್ತರಾಧಿಕಾರಿಯೂ ಆದ ಮುಜೋಹಿದ್ ಶಹನು ವಿಜಯನಗರದೊಡನೆ ಯುದ್ಧವನ್ನು ಪುನರಾರಂಭಿಸಿದನು. ವಿಜಯನಗರದ ಕೋಟೆಯ ಹೊರಗಡೆ ಅವನು ಅಪಜಯವನ್ನನು ಭವಿಸಿದನು. ಸ್ವಲ್ಪ ಕಾಲದನಂತರ ಅವನು ಭ್ರಾತೃವರ್ಗದ ದಾವುದನಿಂದ ಕೊಲ್ಲಲ್ಪಟ್ಟನು. ಅನಂತರ ದಾವುದನೇ ರಾಜ್ಯವನ್ನು ಅಪಹರಿಸಿಕೊಂಡನು.

ದಾವುದನೇ ಒಬ್ಬ ಗುಲಾಮನಿಂದ ಕೊಲ್ಲಲ್ಪಟ್ಟು, ಅವನ ಸಹೋದರನಾದ ಇಮ್ಮಡಿ ಮುಹಮ್ಮದ್ ಶಹನು ಅಮೀರರಿಂದಲೂ ಅಧಿಕಾರಿಗಳಿಂದಲೂ ಕ್ರಿ.ಶ. 1378ರಲ್ಲಿ ರಾಜನಾಗಿ ಮಾಡಲ್ಪಟ್ಟನು. ಇವನು ಶಾಂತಿಪ್ರಿಯನಾಗಿದ್ದನು. ಇವನು ತನ್ನ ಜೀವಿತ ಕಾಲವನ್ನೆಲ್ಲಾ ಸಾಹಿತ್ಯ ಮತ್ತು ವಿಜ್ಞಾನದ ಅಧ್ಯಯನದಲ್ಲಿ ಕಳೆದನು. ಇವನ ಔದಾರ್ಯದ ಫಲವಾಗಿ ಏಷ್ಯಾದ ವಿವಿಧ ಭಾಗಗಳಿಂದ ವಿದ್ವಾಂಸರು ಇವನ ರಾಜಾಸ್ಥಾನಕ್ಕೆ ಬಂದರು. ಇವನ ಆಹ್ವಾನವನ್ನು ಮನ್ನಿಸಿ ಪ್ರಖ್ಯಾತ ಪರ್ಷಿಯನ್ ಕವಿಯಾದ ಹಾಫೀಸನು ಪ್ರಯಾಣವನ್ನು ಪ್ರಾರಂಭಿಸಿದನು. ಆದರೆ ಮಾರ್ಗಮಧ್ಯದಲ್ಲಿ ಸಾಗರಾಸ್ವಸ್ಥತೆಯಿಂದ ತನ್ನ ಪ್ರಯಾಣವನ್ನು ಮುಂದುವರಿಸಲಾಗಲಿಲ್ಲ. ಆದರೆ ಇವನು ಅದಕ್ಕೆ ಪ್ರತಿಯಾಗಿ ಸುಲ್ತಾನನನ್ನು ಕುರಿತು ಒಂದು ಗೀತವನ್ನು ರಚಿಸಿದನು. ಇದರಿಂದ ಸಂತೋಷಗೊಂಡ ಸುಲ್ತಾನನು ಕವಿಗೆ ಬಹುಮಾನವನ್ನು ಕೊಟ್ಟನು.

ಸರಳನೂ ಮಿತಾಹಾರಿಯೂ ಆದ ಇಮ್ಮಡಿ ಮಹಮುದ್ ಶಹನು ರಾಜತ್ವದ ವಿಚಾರದಲ್ಲಿ ಉನ್ನತವೂ ಉದಾತ್ತವೂ ಆದ ಮತ್ತು ಇತ್ತೀಚಿನದೆಂದು ಹೇಳಬಹುದಾದ ' ರಾಜನು ಪ್ರಜೆಗಳ ನ್ಯಾಸವಿಶ್ವಾಸಿ ' ಎಂಬ ತತ್ವವನ್ನು ಪ್ರತಿಪಾದಿಸಿದನು. ಅವನು ತನ್ನ ಪ್ರಜೆಗಳ ಕ್ಷೇಮಾಭಿವೃದ್ಧಿ ಕೆಲಸಗಳಲ್ಲಿ ವಿಶೇಷ ಆಸಕ್ತಿಯನ್ನು ವಹಿಸಿದನು. ಒಂದು ಸಾರಿ ಕ್ಷಾಮವುಂಟಾದಾಗ ಅದರ ಭೀಕರತೆಯನ್ನು ತಪ್ಪಿಸಲು ಅವನು ಹತ್ತುಸಾವಿರ ಎತ್ತುಗಳ ಸಹಾಯದಿಂದ ಮಾಳವ ಮತ್ತು ಗುಜರಾತಿನಿಂದ ಧಾನ್ಯಗಳನ್ನು ತರಿಸಲು ಏರ್ಪಾಡು ಮಾಡಿದನು.

ಅವನ ಇಬ್ಬರು ಮಕ್ಕಳಾದ ಘಿಯಾಸುದ್ದೀನ್ ಮತ್ತು ಶಂಸುದ್ದೀನ್ ಒಬ್ಬರನಂತರ ಇನ್ನೊಬ್ಬರು ಕ್ರಿ.ಶ. 1397ರಲ್ಲಿ ಕೇವಲ ಆರು ತಿಂಗಳುಗಳ ಕಾಲ ಮಾತ್ರ ರಾಜ್ಯವಾಳಿದರು.

ಹಸನ್ ಬಹಮನ್ ಶಹನ ಮೊಮ್ಮಗನಾದ ಫಿರೂಜನು (ಕ್ರಿ.ಶ. 1397–1422) ಕ್ರಿ.ಶ. 1397ರಲ್ಲಿ ಸಿಂಹಾಸನವನ್ನು ಆಕ್ರಮಿಸಿಕೊಂಡನು. ಇವನು ಅತಿಯಾಗಿ ಮದ್ಯಸೇವನೆ ಮಾಡುತ್ತಿದ್ದುದೇ ಅಲ್ಲದೆ, ದೊಡ್ಡ ಅಂತಃಪುರವನ್ನು ಇಟ್ಟುಕೊಂಡಿದ್ದು, ಸಂಗೀತ ಲೋಲನಾಗಿದ್ದನು. ವಿಜಯನಗರದ ರಾಜನಾದ ಇಮ್ಮಡಿ ಹರಿಹರನು ರಾಯಚೂರು ಪ್ರದೇಶಕ್ಕೆ ಸೈನ್ಯ ಸಮೇತನಾಗಿ ಹೊರಟನು. ಆದರೆ ಕುತಂತ್ರದಿಂದ

ಹರಿಹರನ ಮಗನು ಕೊಲ್ಲಲ್ಪಟ್ಟನು. ಇದರಿಂದ ಶಾಂತಿ ಏರ್ಪಟ್ಟಿತು. ಆದರೆ ಕ್ರಿ.ಶ. 1406ರಲ್ಲಿ ಮತ್ತೆ ಕಲಹಗಳು ಪ್ರಾರಂಭವಾದವು. ಒಬ್ಬ ಸುವರ್ಣಕಾರನ ಅತ್ಯಂತ ಸುಂದರಳಾದ ಮಗಳನ್ನು ಹೊಂದುವುದಕ್ಕೋಸ್ಕರ ದೇವರಾಯನು ಮುದಗಲ್ ಕೋಟೆಗೆ ಮುತ್ತಿಗೆ ಹಾಕಿದನು. ಈ ಯುದ್ಧವು ವಿಜಯನಗರದವರಿಗೆ ಪ್ರತಿಕೂಲವಾಗಿ ಪರಿಣಮಿಸಿತು. ಇದರಿಂದ ಅವಮಾನಯುಕ್ತವಾದ ಸಂಧಾನವನ್ನು ರಾಯನು ಮಾಡಿಕೊಂಡು ತನ್ನ ಮಗಳನ್ನು ಫಿರೋಜನಿಗೆ ವಿವಾಹಮಾಡಿಕೊಟ್ಟು, ಬಂಕಾಪುರವನ್ನು ವರ ದಕ್ಷಿಣೆಯಾಗಿ ಕೊಡಬೇಕಾಯಿತು.

ಫಿರೋಜನಿಗೆ ಕಟ್ಟಡ ನಿರ್ಮಾಣಕಾರ್ಯಗಳಲ್ಲಿ ವಿಶೇಷ ಆಸಕ್ತಿ ಇದ್ದಿತು. ಸ್ಪೇನಿನ ಕೊರ್ಡೋವ ಎಂಬಲ್ಲಿರುವ ಸುಂದರವಾದ ಮಸೀದಿಯ ಮಾದರಿಯಲ್ಲಿ ಗುಲ್ಬರ್ಗದ ಮಸೀದಿಯು ಕಟ್ಟಿಸಲ್ಪಟ್ಟಿತು. ಪೂರ್ಣವಾಗಿ ಛಾವಣಿಯಿಂದ ಆವೃತವಾಗಿರುವ ಮಸೀದಿಯು ಭಾರತದಲ್ಲಿ ಇರುವುದು ಇದು ಒಂದೇ.

ಫಿರೋಜನ ಸಹೋದರನಾದ ಅಹಮದ್‌ಶಹ (1422–1436) ಎಂಬವನು ಬಸ್ರಾಹ್‌ನಲ್ಲಿ ವ್ಯಾಪಾರಿಯಾಗಿದ್ದ ಖಲಾಫ್ ಹಸನ್ ಎಂಬವನ ಸಹಾಯದಿಂದ ಸುಲ್ತಾನನಾದನು. ವಿಜಯನಗರ, ತೆಲಂಗಾಣ, ಮಾಳವ, ಗುಜರಾತ್ ಮುಂತಾದವುಗಳ ಮೇಲಿನ ಯುದ್ಧಗಳಲ್ಲದೆ, ರಾಜಧಾನಿಯನ್ನು ಗುಲ್ಬರ್ಗದಿಂದ ಹಿತಕರವಾದ ಬಿದರೆಗೆ ಬದಲಾಯಿಸಿದ ಕಾರ್ಯವು ಇವನ ಆಳಿಕೆಯ ಗಮನಾರ್ಹವಾದ ಕೆಲಸ. ಮುಕ್ಕಾಲು ಮೈಲಿ ಉದ್ದ ಮತ್ತು ಅರ್ಧ ಮೈಲಿ ಅಗಲವುಳ್ಳ ಚತುರ್ಭುಜಾಕಾರದ ಕೋಟೆಯನ್ನು ಬಿದರೆಯಲ್ಲಿ ನಿರ್ಮಿಸಿದನು. ಈಗಲೂ ಅಲ್ಲಲ್ಲಿ ಹೊಳೆಯುವ ಮೆರುಗುಹಾಕಿರುವ ಫಲಕಗಳಿಂದ ಕೂಡಿರುವ ಮತ್ತು ಇರಾನಿಯನ್ ಪ್ರಭಾವವನ್ನು ವ್ಯಕ್ತಪಡಿಸುವ ತಖ್ತ್‌ಮಹಲ್ ಮತ್ತು ಅಂಡಾಕಾರದ ಭಾಗದ ಮೇಲೆ ನಿಂತಿರುವ ಕಮಾನುಗಳನ್ನುಳ್ಳ ಸುಲ್ತಾನನ ಗೋರಿ ಮುಂತಾದವು ಆಗಿನ ಕಾಲದಲ್ಲಿ ನಿರ್ಮಿತವಾದ ಕಟ್ಟಡಗಳು.

ಅಹಮದ್‌ಶಹನ ಜ್ಯೇಷ್ಠಪುತ್ರನಾದ ಅಲ್ಲಾಉದ್ದೀನ್ ಅಹಮದನು (ಕ್ರಿ.ಶ. 1439-1450) ಅನಂತರ ಸುಲ್ತಾನನಾದನು. ಇವನ ಆಳಿಕೆಯಲ್ಲಿ ದಖ್ಖನ್ ಜನಗಳಿಗೂ ವಿದೇಶೀಯರಿಗೂ ಇದ್ದ ಅಂತರ ಹೆಚ್ಚಾಯಿತು. ಇದೇ ಮುಂದೆ ಚಕನ್ ಪ್ರಕರಣಕ್ಕೆ ಎಡೆಮಾಡಿಕೊಟ್ಟಿತು. ದಖ್ಖನಿಗಳು ಪಿತೂರಿ ನಡೆಸಿ ಸುಲ್ತಾನನ ಅಪ್ಪಣೆಯನ್ನು ಪಡೆದು 1,200 ಮಂದಿ ಸಯ್ಯದಿಗಳನ್ನು ಮತ್ತು 1,000 ಇತರರನ್ನು ಕೊಲ್ಲಿಸಿದರು.

ಇಮ್ಮಡಿ ಅಹಮದನನಂತರ ಅವನ ಜ್ಯೇಷ್ಠ ಪುತ್ರನಾದ ಹುಮಾಯೂನನು (1458–61) ರಾಜನಾದನು. ಇವನೊಬ್ಬ ಪ್ರಜಾಪೀಡಕ (ಜಲೀಂ) ದೊರೆಯಾಗಿದ್ದನೆಂದು ಎಲ್ಲ ಚರಿತ್ರಕಾರರೂ ಅಭಿಪ್ರಾಯ ಪಡುತ್ತಾರೆ. ಇವನ ಮರಣದಿಂದ ಪ್ರಪಂಚಕ್ಕೆ ಒಳಿತಾಯಿತೆಂದು ಒಬ್ಬ ಕವಿಯು ಹಾಡಿದ್ದಾನೆ. ಆದರೆ ಇವನ ಮಂತ್ರಿಯಾಗಿದ್ದ ಪ್ರಖ್ಯಾತ ಮಹಮೂದ್ ಗವಾನ್ ಮತ್ತು ಬಹಮನಿ ಸಾಮ್ರಾಜ್ಯದಲ್ಲಿ ಅತ್ಯಂತ ಸಮರ್ಥಳಾದ ಇವನ ಪತ್ನಿ ನರ್ಗೀಸ್ ಬೇಗಂ ಇವನ ಆಳಿಕೆಯ ಮಹತ್ವಕ್ಕೆ ಕಾರಣರಾಗಿದ್ದಾರೆ.

ಹುಮಾಯೂನನ ಮೊದಲನೆಯ ಮಗನಾದ ಮುಮ್ಮಡಿ ಅಹಮದನು ತನ್ನ ಎಂಟನೆಯ ವಯಸ್ಸಿನಲ್ಲಿ ಸಿಂಹಾಸನಕ್ಕೆ ಬಂದನು. ಮಹಮೂದ್ ಗವಾನ್ ಮತ್ತು ಡೊವೇಜರ್ ರಾಣಿಯೇ ಮುಂತಾದವರನ್ನುಳ್ಳ ರಾಜಪ್ರತಿನಿಧಿ ಮಂಡಳಿಯು ರಾಜ್ಯಭಾರವನ್ನು ನೋಡಿಕೊಳ್ಳುತ್ತಿದ್ದಿತು.

ಮೂರನೆಯ ಅಹಮದನ ಮರಣಾನಂತರ ಅವನ ತಮ್ಮನಾದ ಮೂರನೆಯ ಮಹಮದ್ ಶಹ (1463–82) ಕ್ರಿ.ಶ. 1463 ರಲ್ಲಿ ಸುಲ್ತಾನನಾದನು. ಇವನು ಮಹಮೂದ್ ಗವಾನನನ್ನು ಮುಖ್ಯ ಮಂತ್ರಿಯಾಗಿ ನಿಯಮಿಸಿದನು.

ಮಧ್ಯಕಾಲೀನ ಕರ್ಣಾಟಕದ ಚರಿತ್ರೆಯಲ್ಲಿ ಮಹಮೂದ್ ಗವಾನನು ಒಬ್ಬ ಆಕರ್ಷಕ ವ್ಯಕ್ತಿ. ಇವನು ತನ್ನ ನಲವತ್ತೆರಡನೆಯ ವಯಸ್ಸಿನಲ್ಲಿ ಗಿಲಾನ್‌ನಿಂದ ವ್ಯಾಪಾರಕ್ಕೋಸ್ಕರ ಕ್ರಿ.ಶ. 1453ರಲ್ಲಿ ಇಲ್ಲಿಗೆ ಬಂದನು. ಆದರೆ ಅದೃಷ್ಟವಶಾತ್ ಬಿದರೆಗೆ ಹೋಗಿ ಪ್ರಖ್ಯಾತ ಪುರುಷನೆನಿಸಿಕೊಂಡನು. ರಾಜ್ಯಾಡಳಿತದ ಯಾವ ವಿಭಾಗವೂ ಇವನ ದೃಷ್ಟಿಗೆ ಗೋಚವಾಗದೆ ಇರಲಿಲ್ಲ. ಅರ್ಥಶಾಖೆಯನ್ನು ಸುವ್ಯವಸ್ಥಿತಗೊಳಿಸಿದನು. ಜನಗಳ ವಿದ್ಯಾಭ್ಯಾಸಕ್ಕೆ ವಿಶೇಷ ಪ್ರೋತ್ಸಾಹಕೊಟ್ಟನು ಮತ್ತು ನ್ಯಾಯಾಡಳಿತವನ್ನು ಉತ್ತಮಪಡಿಸಿದನು. ಹಳ್ಳಿಗಳಲ್ಲಿ ಉಳುವ ಭೂಮಿಯನ್ನು ಅಳೆಯಿಸಿ ಸರಕಾರಕ್ಕೆ ನ್ಯಾಯವಾಗಿ ಬರಬೇಕಾದ ಆದಾಯವನ್ನು ನಿಷ್ಕರ್ಷೆಮಾಡುವ ಕೆಲಸವನ್ನು ಪ್ರಾರಂಭಿಸಿದನು. ಭ್ರಷ್ಟಾಚಾರಗಳನ್ನು ನಿರ್ಮೂಲಗೊಳಿಸಿದುದೇ ಅಲ್ಲದೆ, ಅಕ್ರಮವಾಗಿ ಸರಕಾರದ ಹಣವನ್ನು ಬಳಸಿ ಕೊಂಡವರನ್ನು ತರಾಟೆಗೆ ತೆಗೆದುಕೊಂಡನು. ಇವನು ಸೇನಾವಿಭಾಗವನ್ನು ಸುವ್ಯವಸ್ಥಿತಗೊಳಿಸಿ ಅದರ ಪೂರ್ಣ ಅಧಿಕಾರವನ್ನು ಸುಲ್ತಾನನಿಗೆ ಒಪ್ಪಿಸಿ, ಅರಮನೆಯ ಶ್ರೀಮಂತರ ಪ್ರಭಾವವನ್ನು ಮೊಟಕುಗೊಳಿಸಿ ರಾಜನನ್ನೇ ಕಡೆಗಣಿಸುವ ಅವರ ಪ್ರವೃತ್ತಿಯನ್ನು ನಿರ್ಮೂಲವಮಾಡಿದನು.

ವಿದ್ವತ್‌ಪ್ರೇಮಿಯಾದ ಇವನು ತನ್ನ ಗ್ರಂಥಾಲಯದಲ್ಲಿದ್ದ 3,000 ಪುಸ್ತಕಗಳನ್ನು ಬಿದರೆಯಲ್ಲಿರುವ ಪ್ರಖ್ಯಾತ ಕಾಲೇಜಿಗೆ ಕೊಟ್ಟನು.

ಇವನು ಅಧಿಕಾರದ ಉತ್ತುಂಗಶಿಖರವನ್ನು ಮುಟ್ಟಿದ್ದರೂ ಸರಳ ಜೀವನವನ್ನು ನಡೆಸಿದನು ಮತ್ತು ಬಡವರ ಹಿತವನ್ನು ಎಂದೂ ಮರೆಯಲಿಲ್ಲ. ಅನೀತಿಗೊಳಗಾಗದ ಇವನ ಗುಣವು ಎಲ್ಲಾ ವಿಧವಾದ ಲೋಭಗಳನ್ನೂ ಜಯಿಸಿತು. ಅತ್ಯಂತ ಹೀನವಾದ ದುರ್ಮಾರ್ಗಗಳೂ ಮನ್ನಣೆಗೆ ಅರ್ಹವಾದ ಇಲ್ಲವೇ ಪರೋಕ್ಷ ಸಮ್ಮತಿ ಪಡೆದಿದ್ದ ಆ ಕಾಲದಲ್ಲಿ ಇವನು ಅತ್ಯಂತ ಶ್ಲಾಘ್ಯವಾದ ನೈತಿಕ ಮೌಲ್ಯಗಳನ್ನು ಪ್ರತಿಪಾದಿಸಿದನು. ಇವನು ತನ್ನ ಜೀವನವನ್ನೇ ದೇಶದ ಮತ್ತು ರಾಜನ ಹಿತಸಾಧನೆಗೆ ಮುಡುಪಾಗಿಟ್ಟಿದ್ದನು. ದುರದೃಷ್ಟವಶಾತ್, ಆಗಿನ ಕಾಲದಲ್ಲಿ ಇವನ ಸರ್ವತೋಮುಖವಾದ ಪ್ರತಿಭೆಯನ್ನು ಅರ್ಥಮಾಡಿಕೊಳ್ಳಲು ಅನೂಚಾನವಾಗಿ ಬಂದ ಆಚಾರವು ಅಡ್ಡ ಬಂದಿತು. ಚರಿತ್ರಕಾರ ಈಶ್ವರೀ ಪ್ರಸಾದ್ ಅಭಿಪ್ರಾಯಪಡುವಂತೆ ಹಿಂಸೆ, ರಕ್ತಪಾತ ಮತ್ತು ಮದ್ಯಪಾನದಿಂದ ಆವೃತವಾಗಿದ್ದ ಬಿದರೆಯ ರಾಜಾಸ್ಥಾನದಿಂದ ನಿಷ್ಕಲ್ಮಷವೂ ಸರಳವೂ ಆದ ಜನಹಿತಕಾರ್ಯಗಳಲ್ಲಿಯೇ ಆಸಕ್ತನಾಗಿದ್ದ ಈ ಪ್ರಖ್ಯಾತ ಮಂತ್ರಿಯ ಜೀವನದತ್ತ ನಮ್ಮ ಗಮನವನ್ನು ಹರಿಸಿದರೆ ನವಚೈತನ್ಯವುಂಟಾಗುತ್ತದೆ.

ಮಹಮೂದ್ ಗವಾನನ ಸುಧಾರಣಾಶ್ರದ್ಧೆ, ಅವರ ಸಫಲತೆ ಮತ್ತು ಅವನ ಪ್ರಭಾವ ಇವುಗಳಿಂದ ದಖ್ಖನೀ ಶ್ರೀಮಂತರಲ್ಲಿ ಅಸೂಯೆಯುಂಟಾಯಿತು. ಅವನ ಸಹಿಯ ಮುದ್ರೆಯನ್ನು ಇಟ್ಟುಕೊಂಡಿದ್ದ ಅಧಿಕಾರಿಗೆ ಲಂಚಕೊಟ್ಟು, ಬರೆಯದ ಕಾಗದದ ಮೇಲೆ ಮುದ್ರೆಯನ್ನು ಒತ್ತಿಸಿಕೊಂಡು ಅನಂತರ ಅದರ ಮೇಲೆ ಗವಾನನು ಒರಿಸ್ಸದ ಪುರುಷೋತ್ತಮನಿಗೆ ಬರೆದಂತೆ ಅವರು ರಾಜದ್ರೋಹಕರವಾದ ಪತ್ರವನ್ನು ತಯಾರಿಸಿದರು. ಈ ಪತ್ರವನ್ನು ಸುಲ್ತಾನನು ನೋಡಿದಾಗ ಅವನು ಕೋಪಾವಿಷ್ಟನಾದನು. ಕೂಡಲೆ ಅವನು ಗವಾನನನ್ನು ಕೊಲ್ಲಲು ಆಜ್ಞೆಮಾಡಿದನು. ಈ ರೀತಿ ನೀಚ ಕೊಲೆಗಾರನೊಬ್ಬನಿಂದ ಪರಿಣತ ಜನಸೇವಕನೊಬ್ಬನು ತನ್ನ 73 ನೆಯ ವಯಸ್ಸಿನಲ್ಲಿ ಕಣ್ಮರೆಯಾದನು. ಭ್ರಾಂತಿಗೊಳಿಸಲ್ಪಟ್ಟ ಸುಲ್ತಾನನು

ಬಹುಬೇಗ ತಾನು ಮೋಸಗೊಳಿಸಲ್ಪಟ್ಟೆನೆಂದು ತಿಳಿದು ಅತ್ಯಂತ ದುಃಖಾಕ್ರಾಂತನಾಗಿ ತನ್ನ ಮಂತ್ರಿಯು ಕೊಲ್ಲಿಸಲ್ಪಟ್ಟ ಕೇವಲ ಒಂದು ವರ್ಷದನಂತರ, ತನ 29ನೆಯ ವಯಸ್ಸಿನಲ್ಲಿ ಕಾಲವಾದನು.

ಮಹಮೂದ್ ಗವಾನನ ಮರಣದೊಡನೆ ಬಹಮನಿ ರಾಜ್ಯದ ಭದ್ರತೆ, ಸಂಬದ್ಧತೆ ಮತ್ತು ಅಧಿಕಾರಗಳು ಕಣ್ಮರೆಯಾದವು. ದುರಾಡಳಿತ ಮತ್ತು ಅರಾಜಕತೆಗಳು ತಾಂಡವವಾಡಿ ರಾಜ್ಯವು ನಾಶದ ಪ್ರವೃತ್ತಿಗಳಿಗೆ ಎಡೆಮಾಡಿಕೊಟ್ಟಿತು.

ಮೂರನೆಯ ಮಹಮದ್‌ಶಹನ ಮಗನಾದ ಮಹಮೂದನು (1482–1518) ಕೇವಲ ಹನ್ನೆರಡು ವರ್ಷದ ಬಾಲಕನಾಗಿದ್ದುದರಿಂದಲೂ ಅಸಮರ್ಥನಾಗಿದ್ದುದರಿಂದಲೂ ನಿಜವಾದ ಅಧಿಕಾರವು ಕುತಂತ್ರಿಯಾದ ಟರ್ಕಿವಂಶದ ಕಾಸಿಂ ಬರೀದನ ಕೈಸೇರಿತು. ಪ್ರಾಂತದ ಅಧಿಕಾರಿಗಳಾದ ಬಿಜಾಪುರದ ಯೂಸುಫ್ ಅದಿಲ್‌ಶಹ ಮತ್ತು ಅಹಮದ್‌ನಗರವನ್ನು ಸ್ಥಾಪಿಸಿದ.ಮಲ್ಲಿಕ್ ಅಹಮದ್ ಬಹಮನಿ ರಾಜ್ಯದಿಂದ ಬೇರೆಯಾದರು. ಬಿರಾರಿನಲ್ಲಿ ಇಮದ್ ಉಲ್ ಮುಲ್ಕನೂ ಗೋಲ್ಕೊಂಡದಲ್ಲಿ ಕುತುಬ್ ಉಲ್ ಮುಲ್ಕನೂ ಸ್ವತಂತ್ರರಾದರು. ಇದರಿಂದ ಬಹಮನಿ ರಾಜ್ಯವು ಬಿದರೆ ಮತ್ತು ಅದರ ಸುತ್ತ ಮುತ್ತಣ ಪ್ರದೇಶಗಳಿಗೆ ಮಾತ್ರ ಸೀಮಿತವಾಯಿತು. ಕಾಸಿಂ ಬರೀದನ ಮಗನಾದ ಆಲಿ ಬರೀದನು ಕಾರ್ಯತಃ ತಾನೇ ರಾಜನಾಗಿ, ಚರಿತ್ರಕಾರ ಶೆರ್ವಾನಿಯವರು ಹೇಳುವಂತೆ, ಸುಲ್ತಾನನಿಗೆ ಒಂದು ಹಳ್ಳಿಯಃ ಆದಾಯವನ್ನು ರಾಜಧನವನ್ನಾಗಿ ಕೊಟ್ಟನು.

ಅನಂತರ ಬಹಮನಿ ರಾಜ್ಯವನ್ನು ಆಳಿದ ನಾಲ್ವರು ರಾಜರು ಕೇವಲ ಹೆಸರಿಗೆ ಮಾತ್ರ ರಾಜರಾಗಿದ್ದರೆಂದು ತಿಳಿದು ಬಂದಿದೆ. ಮಹಮದ್ ಶಹನ ಮಗನಾದ ನಾಲ್ಕನೆಯ ಅಹಮದ್ ಶಹನ (1518–20) ಪರಿಸ್ಥಿತಿಯು ಎಷ್ಟೊಂದು ಕಷ್ಟಕರವಾಗಿತ್ತೆಂದರೆ, ಅವನು ತನ್ನ ಪಿತ್ರಾರ್ಜಿತವಾದ ಕಿರೀಟವನ್ನು ಭಾಗಮಾಡಿ ಅದರಿಂದ ಬಂದ ಹಣದಲ್ಲಿ ತನ್ನ ಸುಖಮಯ ಜೀವನವನ್ನು ಸಾಗಿಸಬೇಕಾಯಿತು. ಅವನ ಮರಣಾನಂತರ ಆಲಿ ಬರೀದನು ದಿವಂಗತನಾದ ರಾಜನ ಮಗ ಅಲ್ಲಾಉದ್ದೀನನನ್ನು (1520–23) ಸಿಂಹಾಸನದಲ್ಲಿ ಕೂರಿಸಿದನು. ಆದರೆ ಅವನು ರಾಜ್ಯದ ಅಧಿಕಾರವನ್ನು ತಾನೇ ತೆಗೆದುಕೊಳ್ಳಲು ಪ್ರಯತ್ನಿಸಿದುದರಿಂದ ಆಲಿ ಬರೀದನು ಅವನನ್ನು ಪದಚ್ಯುತನನ್ನಾಗಿ ಮಾಡಿದನು. ಅಲ್ಲಾಉದ್ದೀನನ ನಂತರ ರಾಜನಾದ ಮಹಮದ್ ಶಹನ ಇನ್ನೊಬ್ಬ ಮಗನಾದ ವಲಿಯುಲ್ಲನು (1523–26) ಆಲಿ ಬರೀದನ ಆಜ್ಞೆಯಂತೆ ಶಿರಶ್ಛೇದನ ಮಾಡಲ್ಪಟ್ಟನು. ವಲಿಯುಲ್ಲನ ತಮ್ಮನಾದ ಕಲಿಮುಲ್ಲನೇ (1526–28) ಬಹಮನಿ ರಾಜ್ಯದ ಕೊನೆಯ ದೊರೆ. ಇವನು ಬರೀದನ ಪ್ರಭುತ್ವದಿಂದ ವಿಮೋಚನೆ ಹೊಂದುವ ಸಲುವಾಗಿ ಬಾಬರನಿಗೆ ಪತ್ರಬರೆದು, ತನಗೆ ಸಹಾಯ ಮಾಡಿದರೆ ಬಿರಾರ್ ಮತ್ತು ದೌಲತಾಬಾದ್‌ಗಳನ್ನು ಕೊಡುವುದಾಗಿ ತಿಳಿಸಿದನು. ಈ ಪತ್ರದ ವಿಚಾರವು ಎಲ್ಲರಿಗೂ ತಿಳಿಯಲು, ಇದರಿಂದ ತನ್ನ ಜೀವನಕ್ಕೇ ಧಕ್ಕೆ ಬರಬಹುದೆಂದು ಹೆದರಿ. ಇವನು ಅಹಮದ್ ನಗರಕ್ಕೆ ಓಡಿಹೋಗಿ, ಅಲ್ಲಿ ಪ್ರಾಯಶಃ 1538ರಲ್ಲಿ ಮರಣಹೊಂದಿದನು,

ಬಹಮನಿ ರಾಜ್ಯದ ಪತನದ ಫಲವಾಗಿ ಐದು ರಾಜ್ಯಗಳು ಹುಟ್ಟಿಕೊಂಡವು. ಅವು ಯಾವುವೆಂದರೆ :

(1) ಇಮದ್ ಶಾಹಿ ವಂಶದ ಆಶ್ರಯದಲ್ಲಿ ಬಿರಾರ್

(2) ನೈಜಾಮ್ ಶಾಹಿ ವಂಶದ ಆಶ್ರಯದಲ್ಲಿ ಅಹಮದ್‌ನಗರ

(3) ಆದಿಲ್ ಶಾಹಿ ವಂಶದ ಆಶ್ರಯದಲ್ಲಿ ಬಿಜಾಪುರ



(4) ಕುತುಬ್ ಶಾಹಿ ವಂಶದ ಆಶ್ರಯದಲ್ಲಿ ಗೋಲ್ಕೊಂಡ
(5) ಬರೀದ್ ಶಾಹಿ ವಂಶದ ಆಶ್ರಯದಲ್ಲಿ ಬಿದರೆ

ಬಹಮನಿ ರಾಜರ ಗುಣದೋಷಗಳ ಗಣನೆಯ ವಿಚಾರದಲ್ಲಿ ಚರಿತ್ರಕಾರರಲ್ಲಿ ಡಾ॥ ವಿ.ಎ. ಸ್ಮಿತ್ ಅವರು ಈ ರಾಜರು ನೀರೋ ಮತ್ತು ಕಲಿಗುಲ ಮುಂತಾದವರಂತೆ ರಕ್ತಪಿಪಾಸುಗಳೂ ಸರ್ವಾಧಿಕಾರಿಗಳೂ ಆಗಿದ್ದರೆಂದು ಹೇಳಿದ್ದಾರೆ. ಇದಕ್ಕೆ ವಿರುದ್ಧವಾಗಿ ಮೆಡೋಸ್ ಟೈಲರ್ ಅವರು ಅವರನ್ನು ಮುಕ್ತ ಕಂಠದಿಂದ ಹೊಗಳಿದ್ದಾರೆ. ನಿಷ್ಪಕ್ಷಪಾತಿಯಾದ ಇತಿಹಾಸದ ವಿದ್ಯಾರ್ಥಿಯು, ಬಹಮನಿ ರಾಜರ ಆಶ್ರಯದಲ್ಲಿ ಕರ್ಣಾಟಕವು ಪ್ರಗತಿಯನ್ನು ಸಾಧಿಸಿತು ಎಂದು ಹೇಳಬೇಕಾಗುತ್ತದೆ. ಘೋರಯುದ್ಧಗಳ ನಡುವೆಯೂ ರೈತನಿಗೆ ತೊಂದರೆಯುಂಟಾಗಲಿಲ್ಲ. ಮಹಮೂದ್ ಗವಾನನು ರೈತರಿಂದ ಹಣವನ್ನು ವಸೂಲುಮಾಡುವ ಪದ್ಧತಿಯನ್ನು ಉತ್ತಮಗೊಳಿಸಿದ್ದನು ಮತ್ತು ರೈತರು ರಾಜಾದಾಯವನ್ನು ದ್ರವ್ಯ ರೂಪವಾಗಿ ಇಲ್ಲವೇ ಧಾನ್ಯರೂಪವಾಗಿ ಕೊಡುವ ಸ್ವಾತಂತ್ರ್ಯವನ್ನು ಕಲ್ಪಿಸಿದ್ದನು. ನೀರಾವರಿ ಕೆಲಸಗಳನ್ನು ಒದಗಿಸುವ ಪ್ರಯತ್ನಗಳೂ ವಿಶೇಷವಾಗಿ ನಡೆಯುತ್ತಿದ್ದುವು.

ಬಿದರೆಯಲ್ಲಿ 1470ರಲ್ಲಿ ಸಂಚಾರ ಮಾಡಿದ ರಷ್ಯನ್ ವ್ಯಾಪಾರಿಯಾದ ನಿಕಿಟಿನ್ನನು, ರಾಜ್ಯವು ಜನಭರಿತವಾಗಿದ್ದು, ಮಾರ್ಗಗಳು ಸುರಕ್ಷಿತವಾಗಿದ್ದು, ರಾಜಧಾನಿಯೂ ಶೋಭಾಯಮಾನವಾಗಿ ಉದ್ಯಾನಗಳಿಂದಲೂ ವಿಹಾರಪಥಗಳಿಂದಲೂ ಕೂಡಿದ್ದಿತು ಎಂದು ಹೇಳಿದ್ದಾನೆ. ಆದರೆ ಅವನು ಮಧ್ಯಕಾಲೀನ ಭಾರತದ ಮುಖ್ಯಲಕ್ಷಣವಾದ ಶ್ರೀಮಂತರ ಶ್ರೀಮಂತಿಕೆಯನ್ನೂ ಭೀಕರ ಬಡತನವನ್ನೂ ಗಮನಿಸಿದ್ದಾನೆ.

ಸರ್ವಾಧಿಕಾರಿಗಳಾದ ಅನೇಕ ಬಹಮನಿ ರಾಜರು ತಾವು ಅಧಮರಾದರೂ ಸಾಹಿತ್ಯ ಮತ್ತು ಕಲೆಗಳ ಆಶ್ರಯದಾತರಾಗಿದ್ದರು. ಅವರು ವಿದ್ಯೆಗೆ ಪ್ರೋತ್ಸಾಹವನ್ನು ಕೊಟ್ಟದ್ದೇ ಅಲ್ಲದೆ, ಅತ್ಯಂತ ಮಹತ್ತರವಾದ ಅನೇಕ ಸೌಧಗಳನ್ನು ಕಟ್ಟಿ ರಾಜಧಾನಿಯಾದ ಬಿದರೆಯನ್ನು ಸಿಂಗರಿಸಿದರು.

ಸುಲ್ತಾನ್ ರಾಜ್ಯಗಳಲ್ಲಿ ನಮ್ಮ ಗಮನವನ್ನು ಮತ್ತೆ ಸೆಳೆಯುವುದು ಆದಿಲ್‌ಶಾಹಿ ರಾಜರ ಬಿಜಾಪುರ. ಇದು ಕರ್ಣಾಟಕದಲ್ಲಿದ್ದು ಕ್ರಿ.ಶ. 1596 ರಲ್ಲಿ ಅಕ್ಬರನ ಮಗನಾದ ಮುರಾದನಿಗೆ ಕೊಡಲ್ಪಟ್ಟಿತು.

**ಬಿಜಾಪುರ**

ಮಹಮೂದ್ ಗವಾನನ ಆಶ್ರಯದಲ್ಲಿ ಬೆಳೆದ, ಜಾರ್ಜಿಯ ಪ್ರಾಂತದವನಾದ ಮತ್ತು ತನ್ನ ಬಾಲ್ಯವನ್ನು ಗುಲಾಮನಾಗಿ ಕಳೆದ ಯೂಸುಫ್ ಆದಿಲ್ ಖಾನನು ಬಿಜಾಪುರ ಸುಲ್ತಾನ ರಾಜ್ಯದ ನಿರ್ಮಾತ. ಆದರೆ ಇವನು ತುರ್ಕಿಯ ಎರಡನೆಯ ಮುರಾದನ ಮಗನೆಂದು ಫೆರಿಸ್ತನ ಅಭಿಪ್ರಾಯ. ಬಿಜಾಪುರದ ಪ್ರಾಂತಾಧಿಕಾರಿಯಾಗಿದ್ದ ಇವನು 1499 ರಲ್ಲಿ ಸ್ವತಂತ್ರನಾದನು.

ಯೂಸುಫ್ ಆದಿಲ್ ಖಾನನು ದಖ್ಖನಿನ ಪ್ರತಿಭಾವಂತ ರಾಜರುಗಳಲ್ಲೊಬ್ಬ. ಇವನು ಮತಾಂಧನಾಗಿಲ್ಲದೆ ಇದ್ದುದರಿಂದ ಮತ್ತು ತನ್ನ ಮರಾಠೀ ರಾಣಿಯಿಂದ ಪ್ರಭಾವಿತನಾಗಿ ತನ್ನ ಹಿಂದೂ ಪ್ರಜೆಗಳನ್ನು ಗಣ್ಯತೆಯಿಂದ ನೋಡಿಕೊಳ್ಳುತ್ತಿದ್ದನು. ಇವನು ಸಾಹಿತಿಗಳಿಗೆ ಆಶ್ರಯದಾತನಾಗಿದ್ದನು. ಮತಧರ್ಮದ ಆಧಾರದ ಮೇಲೆ ಅಧಿಕಾರಿಗಳನ್ನು ನಿಯಮಿಸುತ್ತಿರಲಿಲ್ಲ. ಇವನಿಗೆ ಮಾನವ ಪ್ರಕೃತಿಯ ಪರಿಚಯವು

ಚೆನ್ನಾಗಿದ್ದಿತೆಂದೂ ನೋಡಲು ಸುಂದರನಾಗಿದ್ದನೆಂದೂ ನಿರರ್ಗಳವಾಗಿ ಮಾತನಾಡಬಲ್ಲವನಾಗಿದ್ದನೆಂದೂ ಚೆನ್ನಾಗಿ ಅಧ್ಯಯನ ಮಾಡಿದವನಾಗಿದ್ದನೆಂದೂ ನುರಿತ ಸಂಗೀತಗಾರನಾಗಿದ್ದನೆಂದೂ ಫೆರಿಸ್ತನು ತಿಳಿಸಿದ್ದಾನೆ.

ಇವನು ಆಗಸ್ಟ್ 1510 ರಲ್ಲಿ ಗೋವೆಯನ್ನು ಆಲ್ಬುಕರ್ಕನಿಂದ ಕಿತ್ತುಕೊಂಡನು. ಆದರೆ ಇವನು ತನ್ನ 74 ನೆಯ ವಯಸ್ಸಿನಲ್ಲಿ ಮರಣ ಹೊಂದಲು, ಅದರ ರಕ್ಷಣೆಯು ಶಿಥಿಲಗೊಂಡು ಅದು ಅವರಿವರ ಕೈವಶವಾಯಿತು. ಇವನು ಪೂಜಿಸುತ್ತಿದ್ದ ಸಂತನ ಸಮಾಧಿಯ ಸಮೀಪದಲ್ಲಿ, ಗೋಗಿ ಎಂಬಲ್ಲಿ ಇವನು ಹೂಳಲ್ಪಟ್ಟನು.

ಇಸ್ಮಾಯಿಲನು ಪಟ್ಟಕ್ಕೆ ಬಂದಾಗ ಕೇವಲ ಒಂಬತ್ತು ವರ್ಷಗಳ ಬಾಲಕನಾಗಿದ್ದನು. ಅಮೀರ್ ಬರೀದನ ಸಹಾಯದಿಂದ ರಾಜ್ಯವನ್ನು ಆಕ್ರಮಿಸಿಕೊಳ್ಳಲು ಹೊಂಚುಹಾಕುತ್ತಿದ್ದ ರಾಜಪ್ರತಿನಿಧಿಯಾದ ಕಮಲ್ ಖಾನನು ರಾಣಿಯ ಆಜ್ಞಾನುಸಾರ ಕೊಲ್ಲಲ್ಪಟ್ಟನು. ಇಸ್ಮಾಯಿಲನ ಆಳಿಕೆಯ ಕಾಲದಲ್ಲಿ ವಿಜಯನಗರವು ರಾಯಚೂರು ಪ್ರದೇಶವನ್ನು ಬಿಜಾಪುರಕ್ಕೆ ಸೋತಿತು. ಪರ್ಷಿಯಾ ದೇಶದ ರಾಜನು ಬಿಜಾಪುರವು ಒಂದು ಸ್ವತಂತ್ರ ರಾಜ್ಯವೆಂದು ಪರಿಗಣಿಸಿ, ಒಂದು ರಾಯಭಾರವನ್ನು ಕಳುಹಿಸಿದನು.

ಇಸ್ಮಾಯಿಲನು 1534 ರಲ್ಲಿ ಮರಣ ಹೊಂದಲು, ಅವನ ಮಗನಾದ ಮಲ್ಲು ಎಂಬವನನ್ನು ಕಡೆಗಣಿಸಿ, 1535 ರಲ್ಲಿ ಮೊದಲನೆಯ ಇಬ್ರಾಹಿಮನು ರಾಜನಾದನು. ಇವನು ವಿಜಯನಗರದ ರಾಮರಾಯನೊಡನೆ ಸ್ನೇಹವನ್ನು ಬೆಳೆಸಿ, ತನ್ನ ಖ್ಯಾತ ಮಂತ್ರಿ ಅಸದ್ ಖಾನನ ಸಹಾಯದಿಂದ ಅಹಮದ್ ನಗರ, ಬಿದರೆ ಮತ್ತು ಗೋಲ್ಕೊಂಡ ರಾಜ್ಯಗಳ ಮೇಲೆ ಯುದ್ಧ ಮಾಡಿದನು. ಯುದ್ಧದನಂತರ ಸುಖಲೋಲುಪ ಜೀವನವನ್ನು ನಡೆಸಲು ಪ್ರಾರಂಭಿಸಿ 1557 ರಲ್ಲಿ ಮರಣಹೊಂದಿದನು.

ಅನಂತರ ರಾಜನಾದ ಇಬ್ರಾಹಿಮನ ಮಗ ಆಲಿಯು ಷಿಯಾ ಧರ್ಮವನ್ನು ಪ್ರತಿಷ್ಠಿಸಿದುದಕ್ಕಾಗಿ ಅತೃಪ್ತಿಯ ಬಿರುಗಾಳಿಯನ್ನು ಎದುರಿಸಬೇಕಾಯಿತು. 1558 ರಲ್ಲಿ ಇವನು ರಾಮರಾಯನೊಡನೆ ಸಂಧಾನ ಮಾಡಿಕೊಂಡು ಅಹಮದ್‌ನಗರ ರಾಜ್ಯದ ಮೇಲೆ ದಾಳಿ ನಡೆಸಿದನು. ಎರಡು ಸೈನ್ಯಗಳೂ ಸೇರಿ ಅಹಮದ್ ನಗರ ರಾಜ್ಯವನ್ನು ನಿರ್ದಯವಾಗಿ ನಾಶಮಾಡಿದವು. ರಾಮರಾಯನು ಮಾಡಿದ ಅತ್ಯಾಚಾರಗಳಿಂದ ಆಲಿಗೂ ಅವನಿಗೂ ಆಗಿದ್ದ ಸಂಧಾನವು ಮುರಿದು ಬಿದ್ದಿತು. ಇಷ್ಟೇ ಅಲ್ಲದೆ ಯಾವ ಒಬ್ಬ ಮುಸ್ಲಿಮ್ ಸುಲ್ತಾನನೂ ಹಿಂದೂ ಸಾಮ್ರಾಜ್ಯವಾದ ವಿಜಯನಗರದ ಶಕ್ತಿ ಮತ್ತು ಶ್ರೀಮಂತಿಕೆಗೆ ಸಮನಲ್ಲವೆಂದೂ ಹೇಳಿದ ಚಾಡಿಯ ಮಾತನ್ನು ಆಲಿಯು ನಂಬಿದನು. ವಿಜಯನಗರವನ್ನು ಪತನಗೊಳಿಸುವ ಸಲುವಾಗಿ ಒಂದು ಚತುರ್ಮುಖ ಸಖ್ಯವೇರ್ಪಟ್ಟಿತು. ಎರಡು ವಿವಾಹ ಸಂಬಂಧಗಳಿಂದ ಈ ಸಖ್ಯವು ಬಲಗೊಳಿಸಲ್ಪಟ್ಟಿತು. ಅಹಮದ್ ನಗರದ ರಾಜ ಹುಸೇನ್ ನಿಜಾಮ್ ಶಹನ ಮಗಳಾದ ಚಾಂದಬೀಬಿಯನ್ನು ಆಲಿ ಆದಿಲ್ ಶಹ ಎಂಬವನಿಗೂ, ಆಲಿ ಆದಿಲ್‌ಶಹನ ಸಹೋದರಿ ಬೀಬಿ ಹದಿಯ ಬೇಗಂ ಎಂಬವಳನ್ನು ಹುಸೇನ್ ನಿಜಾಮ್‌ಶಹನ ಮಗ ರಾಜಕುಮಾರ ಮುರ್ತುಜಾ ಎಂಬವನಿಗೂ ಕೊಟ್ಟು ವಿವಾಹ ಮಾಡಲಾಯಿತು. ಎಲ್ಲಾ ಸೈನ್ಯಗಳೂ ಒಟ್ಟುಗೂಡಿ ರಾಮರಾಯನೊಡನೆ ಯುದ್ಧ ಮಾಡಿ, ವಿಜಯನಗರವನ್ನು 1565 ರಲ್ಲಿ ನಾಶಮಾಡಿದವು. ಆಲಿ ಆದಿಲನು 1579 ರಲ್ಲಿ ಕೊಲ್ಲಲ್ಪಟ್ಟನು.

ಆಲಿಯು ಮರಣ ಹೊಂದಿದಾಗ ಇನ್ನೂ ಅಪ್ರಾಪ್ತ ವಯಸ್ಕನಾದುದರಿಂದ ಇಮ್ಮಡಿ ಇಬ್ರಾಹಿಮನ ಆಳಿಕೆಯ ಕಾಲದಲ್ಲಿ ಚಾಂದ ಬೀಬಿಯೆ ರಾಜ್ಯಾಡಳಿತವನ್ನು ನೋಡಿಕೊಳ್ಳುತ್ತಿದ್ದಳು.

ಇಮ್ಮಡಿ ಇಬ್ರಾಹಿಮನು 1626 ರಲ್ಲಿ ತನ್ನ 56 ನೆಯ ವಯಸ್ಸಿನಲ್ಲಿ ಮರಣ ಹೊಂದಿದನು. ಆದಿಲ್ ಶಾಹಿ ರಾಜರಲ್ಲಿ ಆ ವಂಶದ ಸ್ಥಾಪಕನನ್ನು ಬಿಟ್ಟರೆ ಇವನೇ ಅತ್ಯಂತ ಸಮರ್ಥನೆಂದು ಮೆಡೋಸ್ ಟೈಲರ್ ಅವರು ಅಭಿಪ್ರಾಯಪಡುತ್ತಾರೆ. ಇವನು ತೋದರ ಮಲ್ಲನ ಮುಜರಾಯಿ ಆಡಳಿತವನ್ನು ಸ್ಥಳೀಯ ಬದಲಾವಣೆಗಳೊಂದಿಗೆ ತನ್ನ ರಾಜ್ಯದಲ್ಲಿ ಜಾರಿಗೆ ತಂದನು.

ಇವನು ಗೋವೆಯ ಪೋರ್ಚುಗೀಸರೊಡನೆ ಸ್ನೇಹದಿಂದ ವರ್ತಿಸಿದನು ಮತ್ತು ಹಿಂದುಗಳನ್ನು ಸ್ನೇಹಿತರನ್ನಾಗಿ ಮಾಡಿಕೊಂಡನು. ಮೆಡೋಸ್ ಟೈಲರ್‌ನ ಅಭಿಪ್ರಾಯದಂತೆ ಇವನ ಅನೇಕ ಉನ್ನತ ದರ್ಜೆಯ ಅಧಿಕಾರಿಗಳು ಹಿಂದುಗಳೇ ಆಗಿದ್ದರು.

ಇಮ್ಮಡಿ ಇಬ್ರಾಹಿಮನು ಕಟ್ಟಡಗಳ ನಿರ್ಮಾಪಕನೂ ಆಗಿದ್ದನು. ಕಸಿನ್ಸ್‌ರವರ ಮಾತಿನಲ್ಲಿ ಇಬ್ರಾಹಿಮ್ ರೋಜಾ ಎಂದು ಪ್ರಸಿದ್ಧವಾಗಿರುವ ಕಟ್ಟಡಗಳ ಗುಂಪು ಅಲಂಕರಣ ಭವ್ಯತೆಗೆ ಅತ್ಯಂತ ಪ್ರಸಿದ್ಧವಾಗಿದೆ.

ಅನಂತರ ರಾಜನಾದ ಇಮ್ಮಡಿ ಇಬ್ರಾಹಿಮನ ಮಗ ಮಹಮ್ಮದನು ಕ್ರಿ.ಶ. 1626ರಲ್ಲಿ ಷಹಜಹಾನನ ನೇತೃತ್ವದಲ್ಲಿ ಮುಗಲರ ದಾಳಿಯನ್ನೆದುರಿಸಿ ಸೋತು ಕಪ್ಪಕಾಣಿಕೆಗಳನ್ನು ಕೊಡಲು ಒಪ್ಪಿಕೊಂಡನು. ಇವನು ಬಿಜಾಪುರದಲ್ಲಿ ಸ್ತಬ್ಧಗೊಳಿಸುವ ಗುಮ್ಮಟವುಳ್ಳ ಮತ್ತು ಪಿಸುಮಾತನ್ನೂ ಕೇಳಿಸುವಂತಹ ಧ್ವನಿಗುಣವುಳ್ಳ ಗೋಲ್ ಗುಂಬಜ್ ಕಟ್ಟಡವನ್ನು ನಿರ್ಮಿಸಿದನು. ಈ ಕಟ್ಟಡವು ಗಾಂಭೀರ್ಯ ಮತ್ತು ಪೌರುಷಗಳ ಸಂಕೇತವಾಗಿದ್ದು ಇಬ್ರಾಹಿಮ್ ರೋಜಾದ ಅಲಂಕಾರ ಪ್ರವೃತ್ತಿಗೆ ವ್ಯತಿರಿಕ್ತವಾಗಿದೆ.

ಅನಂತರ ರಾಜನಾದ ಎರಡನೆಯ ಆಲಿ ಆದಿಲ್ ಶಹ (1656–1672) ಹದಿನೆಂಟು ವರ್ಷದ ಯುವಕನಾಗಿದ್ದನು. 1661 ರಿಂದ 1666ರ ವರೆಗೆ ಇವನು ಧೈರ್ಯ ಸ್ಥೈರ್ಯಗಳನ್ನು ಮತ್ತು ಸಮರ್ಥತೆಯನ್ನು ಬೆಳೆಸಿಕೊಂಡನು. ಇವನು ಶಿವಾಜಿಯ ಅಧಿಕಾರವನ್ನು ಮೊಟಕು ಮಾಡಿ, ಕರ್ನೂಲಿನಲ್ಲಿ ಆಳುತ್ತಿದ್ದ ಹಟಮಾರಿ ಅಧಿಕಾರಿಗಳನ್ನು ಶರಣಾಗತರನ್ನಾಗಿ ಮಾಡಿ, ಬಿದನೂರು ರಾಜನನ್ನು ಸೋಲಿಸಿದುದೇ ಅಲ್ಲದೆ, ಖ್ಯಾತ ಮುಗಲ್ ಸೇನಾಧಿಪತಿ ಜೈಸಿಂಗನ ನೇತೃತ್ವದಲ್ಲಿ ಬಿಜಾಪುರಕ್ಕೆ ಮುತ್ತಿಗೆ ಹಾಕಿದ ಮುಗಲ್ ದಂಡಯಾತ್ರೆಯನ್ನು ಹಿಂದಕ್ಕಟ್ಟಿದನು. ಅನಂತರ ಇವನು ತನ್ನ ಕಾಲವನ್ನೆಲ್ಲಾ ಮದ್ಯಪಾನದಲ್ಲಿಯೂ ಅಂತಃಪುರದ ಸ್ತ್ರೀಯರೊಡನೆಯೂ ಕಳೆದನು. ಇವನ ವಜೀರನು ರಾಜ್ಯದ ಆಡಳಿತವನ್ನು ದಕ್ಷತೆಯಿಂದ ನೋಡಿಕೊಳ್ಳುತ್ತಿದ್ದನು.

ಇಮ್ಮಡಿ ಆಲಿಯು 1672 ರಲ್ಲಿ ಮರಣಹೊಂದಲು ಬಿಜಾಪುರದ ವೈಭವವು ಕಣ್ಮರೆಯಾಯಿತು, ಸಿಕಂದರ್ ಎಂಬ ನಾಲ್ಕು ವರ್ಷದ ಬಾಲಕನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ, ಅಧಿಕಾರವನ್ನು ಪಡೆಯುವ ಸಲುವಾಗಿ ಶ್ರೀಮಂತರಲ್ಲಿ ರಾಜಪ್ರತಿನಿಧಿಗಳ ಕಲಹಗಳು ಪ್ರಾರಂಭವಾದವು. ಪ್ರಖ್ಯಾತ ಚರಿತ್ರಕಾರ ಯದುನಾಥ ಸರ್ಕಾರರು ಹೇಳುವಂತೆ 1672 ರಿಂದ 1686 ರ ವರೆಗಿನ ಬಿಜಾಪುರದ ಚರಿತ್ರೆಯು ನಿಜ ವಾಗಿಯೂ ಅಲ್ಲಿನ ವಜೀರರ ಚರಿತ್ರೆಯೇ ಸರಿ. ಈ ರೀತಿ ಸ್ವಾರ್ಥಪರ ಗುಂಪುಗಳಿಂದ ಕೂಡಿದ ರಾಜ್ಯವು ಔರಂಗಜೇಬನ ಮುಂದಾಳುತನದಲ್ಲಿ ಮುಗಲರ ದಂಡಯಾತ್ರೆಗಳನ್ನು ಎದುರಿಸಲಾರದೆ ಹೋಯಿತು. 1686 ರಲ್ಲಿ ಸಿಕಂದರನು ಔರಂಗಜೇಬನಿಗೆ ಶರಣಾಗತನಾದನು. ಅವನು ದೌಲತಾಬಾದಿನ ಕಾರಾಗಾರದಲ್ಲಿ ಗೋಲ್ಕೊಂಡದ ಪದಚ್ಯುತ ಸುಲ್ತಾನನಾದ ಅಬುಲ್ ಹಸನ್ನನ ಜೊತೆ ಅನೇಕ ವರ್ಷಗಳ ಕಾಲ ಕಷ್ಟವನ್ನನುಭವಿಸಬೇಕಾಯಿತು.

ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವರ್ಗಾಯಿಸಲ್ಪಡುತ್ತಿದ್ದ ಇವನು ಕೊನೆಗೆ 1700 ರಲ್ಲಿ ಮರಣಹೊಂದಿದನು. ಆಗ ಇವನಿಗೆ ಕೇವಲ 32 ವಯಸ್ಸು. ಅದರಲ್ಲಿ ಮೊದಲ ಹದಿನಾಲ್ಕು ವರ್ಷಗಳನ್ನು ಅಧಿಕಾರವಿಲ್ಲದೆ ಬೊಂಬೆಯಂತೆ ತನ್ನ ಮಂತ್ರಿಗಳ ಕೈಕೆಳಗೆ ಕಳೆದು ಮಿಕ್ಕ 14 ವರ್ಷಗಳನ್ನು ಔರಂಗಜೇಬನ ಖೈದಿಯಾಗಿಯೂ ಕಳೆದನು.

ಸ್ವತಂತ್ರರಾಜವಂಶದ ಅವನತಿಯನಂತರ ದಕ್ಷಿಣಭಾರತಕ್ಕೆ ಪಟ್ಟ ಮಹಿಷಿಯಂತೆ ಇದ್ದ ಬಿಜಾಪುರವು ಪೂರ್ಣವಾಗಿ ನಾಶವಾಯಿತೆಂದು ಚರಿತ್ರಕಾರ ಭೀಮಸೇನ್ ಅಭಿಪ್ರಾಯಪಡುತ್ತಾರೆ. ಕಲೆ ಮತ್ತು ಸಂಸ್ಕೃತಿಗಳ ಆಶ್ರಯಸ್ಥಾನವಾಗಿದ್ದ ಅದು ಫೆರಿಸ್ತನೇ ಮೊದಲಾದ ಖ್ಯಾತ ಬರಹಗಾರರನ್ನು ಪೋಷಿಸಿ ದಖ್ಖನೀ ವರ್ಣಚಿತ್ರದ 348 ದ್ವಿಪತ್ರಗಳನ್ನೂ, 876 ಸೂಕ್ಷ್ಮ ಪ್ರತಿರೂಪ ಚಿತ್ರಗಳನ್ನೂ ಒಳಗೊಂಡ ನಾಜುಮಲ್ ಉಲುಮ್ ಎಂಬ ವಿಶ್ವಕೋಶರೂಪವಂತಹ ಗ್ರಂಥಗಳು ಹೊರಬರಲು ಕಾರಣವಾಯಿತು.

### ಅಹಮದ್‌ನಗರ

ನಿಜಾಮು ಶಾಹಿ ರಾಜವಂಶದ ಸ್ಥಾಪಕನಾದ ನಿಜಾಮ್-ಉಲ್-ಮುಲ್ಕ್ ಬಹ್ರಿ ಎಂಬವನು ದಖ್ಖನೀ ಪಕ್ಷದ ಮುಖಂಡನಾಗಿ ಮಹಮೂದ್‌ಗವಾನನ ಶತ್ರುವಾಗಿದ್ದು ಅವನ ಕೊಲೆಗೆ ಸಂಚನ್ನು ನಡೆಸಿದ್ದನು. ಅನಂತರ ದುರ್ಗತಿಯುಂಟಾಗಿ, ಅವನೂ ಘೋರಪರಿಣಾಮಕ್ಕೆ ಒಳಗಾದನು. 1490ರಲ್ಲಿ ಅವನ ಮಗ ಜುನ್ನಾರಿನ ಪ್ರಾಂತಾಧಿಕಾರಿಯಾಗಿದ್ದ ಮಲ್ಲಿಕ್ ಅಹಮದನು ಸ್ವತಂತ್ರವಾದ ಅಹಮದ್‌ನಗರ ರಾಜ್ಯವನ್ನು ಸ್ಥಾಪಿಸಿದನು. 1499 ರಲ್ಲಿ ದೌಲತಾಬಾದನ್ನು ತನ್ನ ವಶಮಾಡಿಕೊಂಡು ರಾಜ್ಯವನ್ನು ಬಲಪಡಿಸಿಕೊಂಡನು.

ಅಹಮದ್ ನಿಜಾಮ್‌ಶಹನ ಮಗನೂ ಉತ್ತರಾಧಿಕಾರಿಯೂ ಆಗಿದ್ದ ಬುರ್ಹಾನನು (1508–53) ವಿಜಯನಗರದೊಡನೆ ಸೇರಿಕೊಂಡು ಬಿಜಾಪುರವನ್ನು ಸೂರೆಮಾಡಿದನು. ಅವನ ಉತ್ತರಾಧಿಕಾರಿಯಾದ ಹುಸೇನ್ ನಿಜಾಮ್ ಶಹನು 1565 ರಲ್ಲಿ ವಿಜಯನಗರವನ್ನು ಧ್ವಂಸಮಾಡಿದ ಕೂಟಕ್ಕೆ ಸೇರಿಕೊಂಡಿದ್ದನು. ಅನಂತರ ಸುಲ್ತಾನನಾದ ಮುರ್ತುಜಾ ಹೆಸರಿಗೆ ಮಾತ್ರ ರಾಜನಾಗಿದ್ದನು. ಅಕ್ಬರನ ಮಗನಾದ ಮುರಾದನು ಅಹಮದ್‌ನಗರವನ್ನು ಮುತ್ತಿದಾಗ ಚಾಂದಬೀಬಿಯು ತೋರಿಸಿದ ಧೈರ್ಯಸಾಹಸಗಳನ್ನು ಬಿಟ್ಟರೆ, ಅಹಮದ್ ನಗರದ ಮುಂದಿನ ಚರಿತ್ರೆಯು ಅಷ್ಟೊಂದು ಆಸಕ್ತಿಕರವಾಗಿಲ್ಲ. 1596ರಲ್ಲಿ ಬಿರಾರ್ ರಾಜ್ಯವು ಮುಗಲ್ ಸಾಮ್ರಾಜ್ಯಕ್ಕೆ ಸೇರಿಸಲ್ಪಟ್ಟಿತು. 1600 ರಲ್ಲಿ ಚಾಂದಬೀಬಿಯ ಮರಣದೊಡನೆ ಅಹಮದ್‌ನಗರರಾಜ್ಯದ ಪತನವಾಯಿತು. ಅಕ್ಬರನ ಕಾಲದಲ್ಲಿ ಅಹಮದ್‌ನಗರವು ಒಂದು ಸುಬ (ಪ್ರಾಂತ) ವಾಗಿದ್ದರೂ, ಅದನ್ನು ಪೂರ್ಣವಾಗಿ ಜಯಿಸಲು ಅಕ್ಬರನಿಗೆ ಸಾಧ್ಯವಾಗಲಿಲ್ಲ. ಕೊನೆಗೆ ಅಹಮದ್‌ನಗರ ರಾಜ್ಯವು 1637ರಲ್ಲಿ ಷಹಜಹಾನನಿಂದ ಮುಗಲ್ ಸಾಮ್ರಾಜ್ಯದಲ್ಲಿ ವಿಲೀನಗೊಳಿಸಲ್ಪಟ್ಟಿತು.

### ಗೋಲ್ಕೊಂಡ

ಮಹಮೂದ್ ಗವಾನನ ಕಾಲದಲ್ಲಿ ತುರ್ಕಿ ಮನೆತನದ ಅಧಿಕಾರಿಯಾಗಿದ್ದು ತೆಲಂಗಾಣದ ಪ್ರಾಂತಾಧಿಕಾರಿಯಾಗಿ ನಿಯಮಿತನಾದ ಕುಲಿ ಕುತುಬ್ ಶಹ ಎಂಬವನು ಸ್ವತಂತ್ರ ರಾಜ್ಯವಾದ ಗೋಲ್ಕೊಂಡದ ಸ್ಥಾಪನೆಗೆ ಕಾರಣನಾದನು. ಇವನು 1518ರ ವರೆಗೆ ಮಹಮದ್‌ಶಹನಿಗೆ ವಿಧೇಯನಾಗಿದ್ದು ಬಹಮನಿ ರಾಜ್ಯವು ಕಾಸಿಮ್ ಬರೀದನ ಆಧಿಪತ್ಯಕ್ಕೆ ಒಳಪಟ್ಟನಂತರ ಬಹಮನಿ ರಾಜ್ಯದಿಂದ

ಬೇರೆಯಾದನು. ಇವನು ದೀರ್ಘವಾದ ಮತ್ತು ಸುಭಿಕ್ಷಯುತವಾದ ಆಳಿಕೆಯನ್ನು ನಡೆಸಿ 1543ರಲ್ಲಿ ತನ್ನ 90ನೆಯ ವಯಸ್ಸಿನಲ್ಲಿ ತನ್ನ ಮಗನಿಂದ ಕೊಲ್ಲಲ್ಪಟ್ಟನು. ಈ ಕೊಲೆಗಾರನ ಸಹೋದರನಾದ ಇಬ್ರಾಹಿಮನು ವಿಜಯನಗರದ ವಿರುದ್ಧ ಕೂಟದಲ್ಲಿ ಸೇರಿಕೊಂಡು 1580ರ ವರೆಗೆ ಆಳಿದನು. ಅನೇಕ ಹಿಂದೂಗಳನ್ನು ಉತ್ತಮ ರೀತಿಯಲ್ಲಿ ನೋಡಿಕೊಳ್ಳುತ್ತಿದ್ದನು. ಅವನ ಆಳಿಕೆಯಲ್ಲಿ ಅನೇಕ ಹಿಂದೂಗಳು ಗರಿಷ್ಠ ವರ್ಗದ ಅಧಿಕಾರಿಗಳಾಗಿದ್ದರು. ಅವನ ಮಗನಾದ ಮಹಮದ್ ಕುಲಿ ಕುತುಬ್ ಶಹನು 1611ರ ವರೆಗೆ ಜೀವಿಸಿದ್ದನು. ಇಬ್ರಾಹಿಮನು ತನ್ನ ರಾಜಧಾನಿಯಾದ ಗೋಲ್ಕೊಂಡ ವನ್ನು ಒಳ್ಳೆಯ ನಗರವನ್ನಾಗಿ ಮಾಡಿದ್ದನು. ಆದರೆ 1589ರ ಹೊತ್ತಿಗೆ ಅದು ಅನಾರೋಗ್ಯಕರವಾಗಿ ಪರಿಣಮಿಸಿದುದರಿಂದ ರಾಜಧಾನಿಯು ಭಾಗನಗರ (ಹೈದರಾಬಾದ್) ಕ್ಕೆ ಬದಲಾಯಿಸಲ್ಪಟ್ಟಿತು.

ಅಬ್ದುಲ್ಲಾ ಕುತುಬ್ ಶಹನ (1626–1672) ಆಳಿಕೆಯು ಆಲಸ್ಯ ಮತ್ತು ದುರ್ಬಲತೆಯಿಂದ ಕೂಡಿದ್ದಿತು. ರಾಜನು ತನ್ನ ಮನಶ್ಶಕ್ತಿಯನ್ನು ಕಳೆದುಕೊಂಡಿದ್ದನೆಂದು ಬರ್ನಿಯರ್ ತಿಳಿಸುತ್ತಾನೆ.

ಅಬ್ದುಲ್ಲನ ಅಳಿಯನಾದ ಅಬುಲ್ ಹಸನ್ನನ ಕಾಲದಲ್ಲಿ ಅವ್ಯವಸ್ಥೆ ಮತ್ತು ಒಳಸಂಚುಗಳು ಮುಂದುವರಿದವು. ಮಾದಣ್ಣ ಮತ್ತು ಅಕ್ಕಣ್ಣ ಇವರಿಗೆ ಅಧಿಕಾರವನ್ನು ಕೊಟ್ಟಿದ್ದುದು ಔರಂಗಜೇಬನಿಗೆ ಸರಿಬೀಳಲಿಲ್ಲ. ಇವರಿರ್ವರನ್ನು ಕೊಲ್ಲಿಸಿದರೂ ತೃಪ್ತನಾಗದ ಅವನು 1686 ರಲ್ಲಿ ಗೋಲ್ಕೊಂಡ ಕೋಟೆಗೆ ಮುತ್ತಿಗೆ ಹಾಕಿದನು. ಆದರೆ ಅದು 1687 ರಲ್ಲಿ ಲಂಚದಿಂದ ಔರಂಗಜೇಬನ ವಶವಾಯಿತು ಮತ್ತು ಅದು ಮುಗಲ್ ಸಾಮ್ರಾಜ್ಯಕ್ಕೆ ಸೇರಿಸಲ್ಪಟ್ಟಿತು.

## ಬಿಜಾಪುರ ಸುಲ್ತಾನರ ವಂಶವೃಕ್ಷ

ಯೂಸುಫ್ ಆದಿಲ್‌ಖಾನ್ (ಕ್ರಿ.ಶ. 1489–1510)
|
ಇಸ್ಮಾಯಿಲ್
|
- ಮಲ್ಲು (ಕ್ರಿ.ಶ. 1534)
  |
  ಇಬ್ರಾಹಿಂ ಆದಿಲ್ ಶಹ II ಜನನ ಕ್ರಿ.ಶ. 1570
  (ಕ್ರಿ.ಶ. 1579-1628)
  (ಚಾಂದ ಬೀಬಿಯು ಅವನ ಬಾಲ್ಯದಲ್ಲಿ ರಾಜಪ್ರತಿನಿಧಿ)
  |
  ಮಹಮದ್ (ಕ್ರಿ.ಶ. 1626–56)
  |
  ಆಲಿ ಆದಿಲ್ ಶಹ II (ಕ್ರಿ.ಶ. 1656-72)
  |
  ಸಿಕಂದರ್ (ಕ್ರಿ.ಶ. 1672-86)
  |
  ವಜೀರರ ಆಳಿಕೆ
  ಔರಂಗಜೇಬನಿಂದ ಸೆರೆಹಿಡಿಯಲ್ಪಟ್ಟು
  ಕಾರಾಗೃಹದಲ್ಲಿ ಮರಣ (ಕ್ರಿ.ಶ. 1700)
- ಇಬ್ರಾಹಿಮ್ (ಕ್ರಿ.ಶ. 1535-57)
  |
  ಆಲಿ ಆದಿಲ್ ಶಹ (ಕ್ರಿ.ಶ. 1557-79)
  ವಿವಾಹ ಚಾಂದಬೀಬಿಯೊಡನೆ

## ಬಹಮನಿ ರಾಜ್ಯದ ವಂಶವೃಕ್ಷ

1 ಅಲ್ಲಾಉದ್ದೀನ್ ಹಸನ್ ಬಹಮನ್‌ಶಹ (ಕ್ರಿ.ಶ.1347–58)

2. ಮುಹಮ್ಮದ್ I (ಕ್ರಿ.ಶ. 1358-75)

ಮಹಮೂದ್

ಅಹಮದ್

3. ಮುಜಾಹಿದ್ (ಕ್ರಿ.ಶ. 1375-78)

4. ದಾವುದ್ I (ಕ್ರಿ.ಶ. 1378)

5. ಮಹಮೂದ್ II (ಕ್ರಿ.ಶ. 1378-97)

6. ಘಿಯಾಸುದ್ದೀನ್ (ಕ್ರಿ.ಶ. 1397)

ಶಂಸುದ್ದೀನ್ (ಕ್ರಿ.ಶ. 1397)

ಮಗಳು ವಿವಾಹ 8. ಫಿರೋಜ್

ಮಗಳು ವಿವಾಹ 9 ಅಹಮದ್ I

8. ಫಿರೋಜ್ (ಕ್ರಿ.ಶ. 1397-1422)

9. ಅಹಮದ್ I (ಕ್ರಿ.ಶ. 1322-36)

10. ಅಲ್ಲಾಉದ್ದೀನ್ ಅಹಮದ್ II (ಕ್ರಿ.ಶ. 1436-58)

11. ಹುಮಾಯೂನ್ (ಕ್ರಿ.ಶ. 1458-61)

12. ಅಹಮದ್ III (ಕ್ರಿ.ಶ. 1461-63)

13. ಮುಹಮ್ಮದ್ III (ಕ್ರಿ.ಶ. 1463-82)

14. ಮಹಮೂದ್ (ಕ್ರಿ.ಶ. 1482-1518)

15. ಅಹಮದ್ IV (ಕ್ರಿ.ಶ. 1518-20)

16. ಅಲ್ಲಾಉದ್ದೀನ್ (ಕ್ರಿ.ಶ. 1520-23)

ವಲಿಯುಲ್ಲಾ (ಕ್ರಿ.ಶ. 1523-26)

ಕಲಿಮುಲ್ಲಾ (ಕ್ರಿ.ಶ. 1526-28)

ಮೂಲಲೇಖಕರು ಮತ್ತು ಅನುವಾದಕರು : ಡಾ॥ ಎಂ. ಶೇಷಾದ್ರಿ

# ಧರ್ಮ, ಸಮಾಜ ಮತ್ತು ಸಂಸ್ಕೃತಿ

## (ವಿಜಯನಗರ ಕಾಲ)

ದಕ್ಷಿಣ ದೇಶಕ್ಕೆ ಮುಸಲ್ಮಾನರು ಇಟ್ಟ ದಾಳಿಯು ರಾಜರನ್ನೂ ಜನರನ್ನೂ ಅಲ್ಲಾಡಿಸಿ ಬಿಟ್ಟಿತು. ಅವರು ಸ್ವಲ್ಪ ಕಾಲ ದಿಗ್ಭ್ರಾಂತರಾದರು. ಆದರೆ, ಅವರು ಪುನಶ್ಚೇತನಗೊಂಡದ್ದು ತುಂಬ ಕ್ಷಿಪ್ರವೂ ಪರಿಣಾಮಕಾರಕವೂ ಆಗಿತ್ತು. ತುಂಗಭದ್ರಾ ನದಿಯ ಉತ್ತರಕ್ಕೆ ತಲೆಯೆತ್ತಿದ ಬಹಮನಿ ರಾಜ್ಯದ ಹುಂಕಾರವನ್ನೂ ಅವರು ಎದುರಿಸಬೇಕಾಯಿತು. ದಕ್ಷಿಣ ದೇಶದ ಹಿಂದೂಗಳು ತಮ್ಮ ತಮ್ಮೊಳಗಿನ ಮೇಲಾಟ ಮತ್ಸರ ತೊರೆಯಲೇಬೇಕಾದ ಸಂದರ್ಭವದು. ಇಷ್ಟೇ ಅಲ್ಲ, ತಮ್ಮ ಸ್ವಾತಂತ್ರ್ಯ, ಧರ್ಮ ಸಂಸ್ಕೃತಿಗಳ ಉಳಿವಿಗಾಗಿ ಆಗ ಅವರೆಲ್ಲ ಒಂದಾಗುವದು ಅನಿವಾರ್ಯವೂ ಆಗಿತ್ತು. ಮುಸಲ್ಮಾನ ದಾಳಿಗಾರರಿಗೆ ನಮ್ಮವರು ಸರಿದೊರೆ ಆಗಿರಲಿಲ್ಲ ಎಂದೇನಲ್ಲ. ಕುಮಾರರಾಮನು ಕುಮ್ಮಟ ದುರ್ಗವನ್ನು ಶೌರ್ಯದಿಂದ ಸಂರಕ್ಷಿಸಿ, ನಮ್ಮವರು ವೀರರಷ್ಟೇ ಅಲ್ಲ, ದಾಳಿಗಾರರಿಗಿಂತ ಶ್ರೇಷ್ಠ ಮಟ್ಟದ ಪ್ರತಾಪ ಶಾಲಿಗಳು ಎಂಬುದನ್ನೂ ತೋರಿಸಿಕೊಟ್ಟನು. ಪ್ರಸಕ್ತ ಪ್ರಸಂಗದಲ್ಲಿ ನಮ್ಮವರಿಗೆ ಬೇಕಾದ್ದು, ಕ್ರಮಬದ್ಧ ಕ್ರಿಯಾಚರಣೆಯ ಪ್ರೇರಣೆ, ತನ್ಮೂಲಕ ತಮ್ಮ ಮನೆ, ಮಠ, ಧರ್ಮ, ಸಂಸ್ಕೃತಿ ಎಲ್ಲವನ್ನೂ ಸಂರಕ್ಷಿಸಿಕೊಳ್ಳಬೇಕೆಂಬ ಸಂಕಲ್ಪ. ಪರಂಪರೆಯ ಪ್ರಕಾರ ಇದನ್ನು ಒದಗಿಸಿಕೊಟ್ಟವರು—ಆ ಮಹಾನು ಭಾವಿಯೂ ಮುತ್ಸದ್ದಿಯೂ ಆದ ವಿದ್ಯಾರಣ್ಯರು. ಶತ್ರುಬಲದ ಆಕ್ರಮಣದ ವಿರುದ್ಧ ಹೋರಾಡಲು, ಸ್ವಸಂರಕ್ಷಣೆ ಮಾಡಿಕೊಳ್ಳಲು, ವಿಜಯನಗರ ಸಾಮ್ರಾಜ್ಯವು ಅಸ್ತಿತ್ವದಲ್ಲಿ ಬಂದಿತು ಮತ್ತು ಹಿಂದೂ ಜನಾಂಗಕ್ಕೆ ಅದು ವಜ್ರಪಂಜರಪ್ರಾಯವಾಗಿತ್ತು. ವಿಜಯನಗರ ಸಾಮ್ರಾಜ್ಯವು ಎರಡು ಶತಮಾನ ಗಳಿಗಿಂತ ಹೆಚ್ಚುಕಾಲ ಉಚ್ಛ್ರಾಯಸ್ಥಿತಿಯಲ್ಲಿತ್ತು. ಅಂದಿನ ಕಾಲದಲ್ಲಿ ಅದು ದಕ್ಷಿಣದ ಪ್ರಭಾವ ಶಾಲಿಯಾದ ರಾಜಕೀಯ ಬಲವಾಗಿ ಇದ್ದುಕೊಂಡು ಜನತೆಗೆ ಶಾಂತಿ ಮತ್ತು ಸಂರಕ್ಷಣೆಯ ಭರವಸೆ ನೀಡುತ್ತಿತ್ತು. ರಕ್ಕಸ-ತಂಗಡಿಯ ದುರಂತಾನಂತರ ಕೂಡ, ಹಿಂದುಗಳ ಶೌರ್ಯ ಮತ್ತು ಸಂಸ್ಕೃತಿಯ ಸತ್ವ ಇವುಗಳು ಸ್ಫೂರ್ತಿದಾಯಕ ಕಥೆಗಳಾಗಿ ಜನಮನದಲ್ಲಿ ಉಳಿದುಕೊಂಡವು.

ಇದು, ವಿಜಯನಗರ ಸಾಮ್ರಾಜ್ಯದ ನಿಜವಾದ ಕೊಡುಗೆ ಆಗಿದೆ. ಕೇವಲ ರಾಜಕೀಯ ಶಕ್ತಿಯು ಈ ಬಗೆಯ ಸ್ಫೂರ್ತಿದಾಯಕ ಪರಿಣಾಮವನ್ನು ಉಂಟುಮಾಡಲಾರದು. ಈ ಪುನರುತ್ಥಾನವು ರಾಜರ ಪ್ರಯತ್ನದ ಫಲ. ಹಿಂದೂ ದರ್ಮದಲ್ಲಿ, ಹಿಂದೂ ಪರಂಪರೆಯಲ್ಲಿ ಓತಪ್ರೋತವಾಗಿದ್ದ, ಮಹತ್ತರವೂ ಉದಾತ್ತವೂ ಆಗಿದ್ದ ಗುಣ ವಿಶೇಷಗಳನ್ನು ಈ ರಾಜರು ಪುನರುಜ್ಜೀವನಗೊಳಿಸಿದರು. ಈ ಪ್ರಕರಣದಲ್ಲಿ, ವಿಜಯನಗರದ ಕೊಡುಗೆ ಈ ದಿಶೆಯಲ್ಲಿ ಏನು ಎಂಬುದರ ಸ್ಥೂಲ ಪರಿಚಯ ಮಾಡಿಕೊಡಲು ಪ್ರಯತ್ನಿಸಿದೆ.

# ಧರ್ಮ ಮತ್ತು ತತ್ತ್ವಜ್ಞಾನ

## ಅದ್ವೈತ

ತತ್ತ್ವಜ್ಞಾನದ ಗಗನದಲ್ಲಿ ಕ್ರಿ.ಶ. 14 ಮತ್ತು 16ನೇ ಶತಮಾನದ ನಡುವೆ, ಕರ್ಣಾಟಕದ ಅದ್ವಿತೀಯ ಅದ್ವೈತಸಿದ್ಧಾಂತ ಪಟುಗಳೆನಿಸಿ ಮೆರೆದವರಲ್ಲಿ ವಿದ್ಯಾರಣ್ಯರು ಉಜ್ಜ್ವಲ ನಕ್ಷತ್ರ ಪ್ರಾಯರು. ಅದ್ವೈತ ಮತದ ಭಾರತೀಯ ಇತಿಹಾಸದಲ್ಲಿ ವಿದ್ಯಾರಣ್ಯರ ಸ್ಥಾನವು ಅತಿ ಉಚ್ಚವಾಗಿದೆ. " ವಿವರಣಾ ಸಂಪ್ರದಾಯ " ಎಂದು ವರ್ಣಿಸಲಾಗುವ ಅದ್ವೈತ ಪರಂಪರೆಯ ಮಹತ್ವಪೂರ್ಣವಾದ ಒಂದು ವಿಶೇಷ ಪ್ರಕಾರವನ್ನು ವಿದ್ಯಾರಣ್ಯರು ಜನಪ್ರಿಯಗೊಳಿಸಿದರು. ಅವರು ಕ್ರಿ.ಶ. 14 ನೆಯ ಶತಮಾನದಲ್ಲಿ ಬಾಳಿದರು ಮತ್ತು ಪರಂಪರಾಗತ ಆಖ್ಯಾಯಿಕೆಯ ಪ್ರಕಾರ, ಅವರು ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಪ್ರೇರಣೆ ನೀಡಿದವರು. ವಿಜಯನಗರ ಸಾಮ್ರಾಜ್ಯ ಸಂಸ್ಥಾಪಕರಾದ ಮೊದಲನೆಯ ಹರಿಹರ ಮತ್ತು ಬುಕ್ಕ ಇವರಿಗೆ ವಿದ್ಯಾರಣ್ಯರು ಕುಲಗುರುಗಳಾಗಿದ್ದರು. ಕ್ರಿ.ಶ. 1377—1386 ರ ಮಧ್ಯದಲ್ಲಿ ಅವರು ಶ್ರೀ ಶೃಂಗೇರಿ ಮಠದ ಪೀಠವನ್ನು ಅಲಂಕರಿಸಿದ್ದರು. ಶ್ರೀ ಶಂಕರಾಚಾರ್ಯರ ತರುವಾಯದ ವಿಖ್ಯಾತ ವೈಚಾರಿಕರಲ್ಲಿ ವಿದ್ಯಾರಣ್ಯರು ಅದ್ವಿತೀಯರು.

ಮಾಧವ ಮತ್ತು ವಿದ್ಯಾರಣ್ಯ ಇವರಿಬ್ಬರೂ ಅಭಿನ್ನರೇ ಭಿನ್ನರೇ ಎಂಬ ವಿಷಯ ವಾದಗ್ರಸ್ತ ವಾಗಿದೆ. ಈ ಸಮಸ್ಯೆಯ ಬಗೆಗೆ ಪಂಡಿತರಲ್ಲಿ ಬಹಳ ಮತಭೇದ ಉಂಟು. ಕೆಲವು ವಿದ್ವಾಂಸರು ವಿದ್ಯಾರಣ್ಯರೇ ಮಾಧವರೆಂದೂ ವೇದ ಭಾಷ್ಯಕಾರರೆಂದು ವಿಖ್ಯಾತರಾದ ಸಾಯಣಾಚಾರ್ಯರ ಸೋದರರು ಇವರೆಂದೂ ಅಭಿಪ್ರಾಯಪಡುತ್ತಾರೆ. ಎಲ್ಲ ಉಪನಿಷತ್ತುಗಳಿಗೂ ವಿವರಣೆಯನ್ನು ಬರೆದ ಶಂಕರಾನಂದ ಎಂಬವರ ಶಿಷ್ಯರು ಇವರು ಎಂದೂ ಪ್ರತೀತಿಯಿದೆ.

ಶ್ರೀ ಶಂಕರರ ತರುವಾಯದ ವಿಚಾರವೇತ್ತರಿಂದಾಗಿ ಅದ್ವೈತ ಸಿದ್ಧಾಂತವು ಶತಮಾನ ಶತಮಾನ ಗಳಿಂದಲೂ ವಿಪುಲವಾಗಿ ವಿಕಾಸ ಹೊಂದಿದೆ. ಶ್ರೀ ಶಂಕರರ ಪ್ರತಿಷ್ಠಾಪಾತ್ರವಾದ **ಬ್ರಹ್ಮಸೂತ್ರ** ಭಾಷ್ಯಕ್ಕೆ ವಾಚಸ್ಪತಿ ಎಂಬವರು " **ಭಾಮತಿ** " ನಾಮಕ ವ್ಯಾಖ್ಯೆ ಬರೆದಿದ್ದಾರೆ. ಅಮಲಾನಂದರು (ಕ್ರಿ.ಶ. 13 ನೆಯ ಶತಕ) ತಮ್ಮ " **ವೇದಾಂತ ಕಲ್ಪತರು** " ಎಂಬ ಕೃತಿಯಲ್ಲಿ " **ಭಾಮತಿ** " ಗೆ ವಿವೃತಿ ನೀಡಿದ್ದಾರೆ. ಈ " **ವೇದಾಂತ ಕಲ್ಪತರು** " ಗ್ರಂಥಕ್ಕೆ ಅಪ್ಪಯ್ಯದೀಕ್ಷಿತರು (ಕ್ರಿ.ಶ. 16 ನೆಯ ಶತಕ) " **ಪರಿಮಳ** " ಎಂಬ ಹೆಸರಿನಲ್ಲಿ ವಾರ್ತಿಕ ಬರೆದರೆ, ಕ್ರಿ.ಶ. 17 ನೆಯ ಶತಕದಲ್ಲಿ ಲಕ್ಷ್ಮೀನರಸಿಂಹ ಎಂಬವರು ಇದೇ ಗ್ರಂಥಕ್ಕೆ (ವೇದಾಂತ ಕಲ್ಪತರು) " **ಆಭೋಗ** " ಎಂಬ ಅಭಿಧಾನದ ಟೀಕೆ ಒದಗಿಸಿದ್ದಾರೆ. ಈ ಸಮಸ್ತ ವಿವರಣಾತ್ಮಕ ಕೃತಿತತಿಗಳಿಗೆ " ಭಾಮತಿಕಾರನ ಪರಂಪರೆ " ಎಂದು ಪ್ರತೀತಿ.

ಅರ್ಥವಿವರಣೆಯ ದ್ವಿತೀಯ ಪದ್ಧತಿಯೊಂದು ಅಂದು '' ವಿವರಣಾಸಂಪ್ರದಾಯ " ಎಂಬ ಹೆಸರಿನಲ್ಲಿ ಪ್ರಸಾರಗೊಂಡಿತ್ತು. ಶ್ರೀ ಶಂಕರರ ನೇರ ಶಿಷ್ಯರಾದ ಪದ್ಮಪಾದರು, ಅವರ **ಸೂತ್ರ ಭಾಷ್ಯಕ್ಕೆ** '' **ಪಂಚಪಾದಿಕಾ** '' ಎಂಬ ಟೀಕೆ ಬರೆದರು. ಪ್ರಕಾಶಾತ್ಮನ್ ಎಂಬವರು '' **ಪಂಚಪಾದಿಕಾ ವಿವರಣಾ** '' ಎಂದು ಪ್ರತಿಯಾಗಿ ಪದ್ಮಪಾದರ ಈ ಕೃತಿಗೆ ವ್ಯಾಖ್ಯಾನ ಮಾಡಿದರು. ಈ ಕೃತಿ

ಯಿಂದಾಗಿಯೇ "ವಿವರಣಾ ಸಂಪ್ರದಾಯ" ಎಂಬ ಮಾತು ಬಳಕೆಗೆ ಬಂದದ್ದು. ಶ್ರೀವಿದ್ಯಾರಣ್ಯರು, ಈ "ವಿವರಣಾ ಸಂಪ್ರದಾಯದ" ವಿಷಯವನ್ನು ಅದ್ವೈತಸಿದ್ಧಾಂತದಲ್ಲಿ ಅತ್ಯಂತ ಪ್ರಖ್ಯಾತಿ ಪಡೆದ **"ವಿವರಣಾಪ್ರಮೇಯ ಸಂಗ್ರಹ"** ಎಂಬ ತಮ್ಮ ಕೃತಿಯಲ್ಲಿ, ಬಹು ಅಧಿಕಾರಯುಕ್ತ ವಾಣಿಯಲ್ಲಿ ಕ್ರೋಢೀಕರಿಸಿ ಹೇಳಿದ್ದಾರೆ. ಈ ಕೃತಿಯಲ್ಲದೆ, ಅದ್ವೈತ ವೇದಾಂತದ ಬಗೆಗೆ ಶ್ರೀ ವಿದ್ಯಾರಣ್ಯರು, **"ಪಂಚದಶಿ"** ಎಂಬ ಛಂದೋಬದ್ಧವಾದ ಕೈಪಿಡಿ ರಚಿಸಿದ್ದು ಅದು ಅತ್ಯಂತ ಜನಪ್ರಿಯ ಪ್ರಮಾಣಗ್ರಂಥ ಎನಿಸಿದೆ. ಅವರು **"ಜೀವನ್ಮುಕ್ತಿ ವಿವೇಕ"** ಎಂಬ ಕೃತಿಯ ಕರ್ತೃವೂ ಆಗಿದ್ದಾರೆ.

ವಿದ್ಯಾರಣ್ಯರ ಅದ್ವೈತ ಪ್ರತಿಪಾದನೆಯ ವಿಧಾನ ತುಂಬ ನೀಟು, ಪ್ರಭಾವ ಸಂಪನ್ನ, ಸ್ಪಷ್ಟ. ಅದ್ವೈತ ಸಿದ್ಧಾಂತವಾದಿಗಳು ಅವರ ವಿವರಣೆಯನ್ನು ಪ್ರಮಾಣವೆಂದೂ ಅಧಿಕಾರ ಸಂಪನ್ನ ಎಂದೂ ಅಂಗೀಕರಿಸುತ್ತಾರೆ. ಬ್ರಹ್ಮವೇ ಕೇವಲ ಏಕೈಕ ಸದ್ವಸ್ತುವು. ಬ್ರಹ್ಮ ಎಂದರೆ ಅವಿಮಿಶ್ರಿತ ಅವ್ಯಯ ಚಿದ್ರೂಪ ಎಂದು ವರ್ಣಿಸಲಾಗಿದೆ. ನೋಟಗಳು ಬಗೆಬಗೆಯಾಗಿದ್ದರೂ ನೋಟಗಾರ ಒಬ್ಬನೆ. ಬ್ರಹ್ಮ ನಿರ್ಜೀವ ಜಡವಸ್ತುವಲ್ಲ. ಅದ್ವೈತವೇದಾಂತವು ಭೌತಿಕವಾದವಲ್ಲ; ಅದು "ಭೂತಾದ್ವೈತ" ವಲ್ಲ, 'ಆತ್ಮಾದ್ವೈತ'. ಬ್ರಹ್ಮನು ಚೈತನ್ಯರೂಪ, ಅಥವಾ ಆತ್ಮರೂಪ. ಆತ್ಮವೇ ಅಂತಿಮ ಸತ್ಯವಾಗಿದ್ದು, ಅದರ ನಿರಾಕರಣವು ಅಸಾಧ್ಯ. ಏಕೆಂದರೆ, ಅದನ್ನು ನಿರಾಕರಣ ಮಾಡುವವನ ಅಂತರಾತ್ಮವೂ ಇದೇ ಆಗಿದೆ. ಅದ್ವೈತದ ಬ್ರಹ್ಮ ಅನಂತ. ಬ್ರಹ್ಮ ಅಲ್ಲದೆ ಇನ್ನಾವುದೂ ಸತ್ಯವಲ್ಲ. ಬ್ರಹ್ಮ ಸತ್ಯ, ಬ್ರಹ್ಮ ಪ್ರಪೂರ್ಣ. ಬ್ರಹ್ಮ ವಸ್ತುವಿಗೆ ಸಂಬಂಧ ಬಂಧನ ಎಂಬುದೇ ಇಲ್ಲ. ಏಕೆಂದರೆ, ಅದರೊಂದಿಗೆ ಸಂಬಂಧ ಹೊಂದುವುದಕ್ಕೆ ಬೇರೊಂದು ವಸ್ತುವೇ ಇಲ್ಲ. ಅದು "ಶುದ್ಧಚೈತನ್ಯ." ಅದರಂತಹದು ಬೇರೆ ಇನ್ನಾವುದೂ ಇಲ್ಲ. ಅದು ಅಸದೃಶ. ಅದು ರಚನೆಯಲ್ಲ, ಸೇಂದ್ರಿಯ ವಸ್ತುವಲ್ಲ ಅಥವಾ ಒಂದು ವ್ಯಕ್ತಿರೂಪವೂ ಅಲ್ಲ. ಅದು ಆತ್ಮತತ್ತ್ವ. ಅದು ಸ್ವಯಂಭು; ಸಮಸ್ತಕ್ಕೂ ಮೂಲ ಕಾರಣ ಅದಾಗಿದೆಯೇ ವಿನಾ, ಅದು ಯಾವ ಕ್ರಿಯಾ ಮೂಲಕವೂ ಉದ್ಭವಿಸಿ ದಂತಹದಲ್ಲ. ನಮ್ಮ ಸಾಮಾನ್ಯ ಪ್ರಜ್ಞೆಗೆ ಗೋಚರಿಸುವ ವಸ್ತುಗಳಿಗಿಂತ ಅದು ಮೂಲತಃ ತೀರ ಭಿನ್ನವಾದದ್ದು, ಮತ್ತು ಸರ್ವಶಃ ತದ್ವಿರುದ್ಧವಾದದ್ದು. ಅದನ್ನು ಕೇವಲ ನೇತಿ, ನೇತಿ ಎಂದು ನಕಾರಾತ್ಮಕವಾಗಿಯೇ ವ್ಯಕ್ತಗೊಳಿಸಬೇಕಾಗುವದು. ವಿದ್ಯಾರಣ್ಯರು ತಮ್ಮ **"ಪಂಚದಶಿ"**ಯಲ್ಲಿ ಈ ವಾದಸರಣಿಯನ್ನು ಮಂಡಿಸುತ್ತ ಹೇಳಿದ್ದಾರೆ—ಬ್ರಹ್ಮನು ಜಾಗ್ರತ್, ಸ್ವಪ್ನ, ಸುಷುಪ್ತಿ ಈ ಮೂರು ಅವಸ್ಥೆಗಳಲ್ಲಿರುವ ಚೈತನ್ಯದ ತೇಜೋರೂಪನೆಂದು. ಬ್ರಹ್ಮನು ಸೂರ್ಯನಂತೆ ಸ್ವಯಂ ಪ್ರಕಾಶಮಾನ. ಬ್ರಹ್ಮನು, ಸ್ವಪ್ರಕಾಶ ಮೂಲಕ ನಮಗೆಲ್ಲ ಸಮಸ್ತವಸ್ತುಗಳೂ ಗೋಚರಿಸುವಂತೆ—ಪ್ರತೀತಿಗೆ ಬರುವಂತೆ ಮಾಡುವದೇ ಅಲ್ಲದೆ, ಈ ಬೆಳಕಿನಲ್ಲಿ ತಾನೂ ಗೋಚರನಾಗುವನು, ಪ್ರತೀತಿಗೆ ಬರುವನು. ಬ್ರಹ್ಮನ ಸತ್ಯಮೂಲಕವಾಗಿಯೇ ನಮಗೆ ಆನಂದಾನುಭವವಾಗುವದು, ಮತ್ತು ನಮ್ಮ ಜೀವನದ ಎಲ್ಲ ಅನುಭವಗಳ ತಿಳಿವಳಿಕೆಯೂ ಆಗುವದು.

ಬ್ರಹ್ಮನು ಅನಿರ್ದೇಶ್ಯನೆಂದು, ಅನಿರ್ವಚನೀಯನೆಂದು ವರ್ಣಿತನಾಗಿದ್ದರೂ ಅವನು "ನಿಃಸ್ವರೂಪ" ನಲ್ಲ. ಉಪನಿಷತ್ತುಗಳು ಬ್ರಹ್ಮನನ್ನು ನಕಾರಾತ್ಮಕವಾಗಿ ವರ್ಣಿಸುತ್ತವೆ. ಅದು ಇದರಂತೆ ಅಲ್ಲ ಎಂಬ ಬಗೆ ಅದು. 'ನೇತಿ' 'ನೇತಿ' ಎಂಬ ಆ ಸುಪ್ರಸಿದ್ಧ ವಿಧಾನ ಇದೇ, ಅರ್ಥಾತ್ ನಿಗೂಢ ಅನುಭಾವಿಗಳ (Mystics) ಪದ್ಧತಿ ಇದು. ಬ್ರಹ್ಮ ವಸ್ತುವು ಇದು ಅಥವಾ ಅದು ಎಂದು ವರ್ಣಿಸಲು ತಾರ್ಕಿಕ ದೃಷ್ಟಿಯಿಂದ ಕೆಲವೊಂದು ತೊಡಕುಗಳುಂಟು. ಈ ಬಗೆಯ ಬಣ್ಣನೆಯಿಂದ ಬ್ರಹ್ಮ ವಸ್ತುವಿನ ಪ್ರಪೂರ್ಣತೆಗೆ ಭಂಗ ಬಂದು ಅದು ಸೀಮಿತವಾಗುತ್ತದೆ. 'ಇದಮಿತ್ಥಂ' ಎಂದದ್ದೇ ಆದರೆ ಅದು ಪ್ರಪೂರ್ಣತೆಯ ಪೂರ್ಣತ್ವಕ್ಕೆ ನ್ಯೂನತೆ ಉಂಟು ಮಾಡುತ್ತದೆ. ವರ್ಣನೆಯಿಂದಾಗಿ, ಆ ವರೇಣ್ಯ ವರ್ಣ್ಯ ವಸ್ತುವಿಗಿಂತ ವಿಭಿನ್ನವಾದ ಬೇರೊಂದು ವಸ್ತುವನ್ನು ನಿರ್ದೇಶಿಸಿದಂತಾಗುವುದು. ಬ್ರಹ್ಮನನ್ನೇ

ನಿರ್ದೇಶಿಸಬಲ್ಲ ವಸ್ತುವಿಶೇಷ ನಮಗೆ ಲಭ್ಯವಿಲ್ಲ. ಯಾವುದೇ ಬಗೆಯ ಬಣ್ಣನೆಗೆ, ಕಥನ ಅಥವಾ ನಿರೂಪಣ ಅನಿವಾರ್ಯವಾಗಿದ್ದು, ಅದು ತಾರ್ಕಿಕ ದೃಷ್ಟಿಯಿಂದ ಅಸಮರ್ಥನೀಯವಾಗುವುದು, ಮತ್ತು ಅದು ಪ್ರತಿವಾದಕ್ಕೆ ಎಡೆಯನ್ನೂ ಮಾಡಿಕೊಡುವದು. ಆದ್ದದರಿಂದ, ಅದ್ವೈತವು ಬ್ರಹ್ಮ ವಸ್ತುವಿನ ಬಣ್ಣನೆಯ ಗೊಡವೆಗೆ ಹೋಗುವುದಿಲ್ಲ.

ಪ್ರೇಕ್ಷಕ ಮತ್ತು ಪ್ರೇಕ್ಷಿತ ವಸ್ತು–ಇವೆರಡೂ ಸದಾ ಭಿನ್ನಭಿನ್ನವಾಗಿದ್ದು ಅವು ಸರ್ವಥಾ ಪರಸ್ಪರ ಪ್ರತ್ಯೇಕವಾಗಿಯೇ ಇರುವಂಥವು. ಬ್ರಹ್ಮನು ಪ್ರೇಕ್ಷಕ ಅಥವಾ ಸಾಕ್ಷಿ; ಇನ್ನು ಆ ಪ್ರೇಕ್ಷಿತ ವಸ್ತುವು ಮಾಯೆ. ಇದೇ ಸಮಸ್ತ ವೇದಾಂತದ ನಿರ್ಘೋಷ. ಬ್ರಹ್ಮ ವಸ್ತುವನ್ನು ನೇರವಾಗಿ ತಿಳಿಯಲಾಗದಿದ್ದರೂ ಧರ್ಮಗ್ರಂಥಗಳು "ತಟಸ್ಥ ಲಕ್ಷಣ"ದ ಮೂಲಕ ಆತನನ್ನು ತಿಳಿಸಲು ಹವಣಿಸಿವೆ. ಬ್ರಹ್ಮಾನುಭವವನ್ನು ಆಧ್ಯಾತ್ಮಿಕವಾಗಿ ಹೊಂದಬಹುದಾಗಿದೆ, ಮತ್ತು ಧರ್ಮಗ್ರಂಥಗಳ ಮುಖಾಂತರ ಪರೋಕ್ಷವಾಗಿ ತಿಳಿಯ ಬಹುದಾಗಿದೆ. ಭಗವದ್ಗೀತೆ ಹೇಳುವುದೇನೆಂದರೆ,—

"ನಾಸತೋ ವಿದ್ಯತೇ ಭಾವಃ । ನಾಭಾವೋ ವಿದ್ಯತೇ ಸತಃ ॥"

(ಗೀತಾ. ಅ. 2; ಶ್ಲೋ 16)

'ಅಸದ್ವಸ್ತುವಿಗೆ ಅಸ್ತಿತ್ವವಿಲ್ಲ; ಸದ್ವಸ್ತುವು ಇಲ್ಲದಿಲ್ಲ.'

ಅದ್ವೈತವೂ ಸೇರಿದಂತೆ, ಸಮಸ್ತ ವೇದಾಂತದ ಸಾರಭೂತ ಸಮಸ್ಯೆ, ಬ್ರಹ್ಮನನ್ನೂ ಈ ಪ್ರಕಟ ಸೃಷ್ಟಿ ಯನ್ನೂ ಕುರಿತದ್ದೇ ಆಗಿದೆ; ಅರ್ಥಾತ್ ಅದು ಭೌತಿಕ ಜಗತ್ತು ಮತ್ತು ಆತ್ಮಿಕ ಜಗತ್ತು ಇವನ್ನೇ ಕುರಿತದ್ದು. ಶ್ರೀ ಶಂಕರಾಚಾರ್ಯರು ತಾರ್ಕಿಕ ದೃಷ್ಟಿಯಿಂದ ನೈಯಾಯಿಕರ "ಆರಂಭವಾದ"ವನ್ನು (Creationist Hypothesis) ಅಂಗೀಕರಿಸುವದಿಲ್ಲ. ಅದೇ ಬಗೆಯಾಗಿ ಅವರು ಸಾಂಖ್ಯರ "ಪರಿಣಾಮ ವಾದ"ವನ್ನೂ ಒಪ್ಪುವದಿಲ್ಲ. ಇದಕ್ಕೆ ಸ್ವಯಂ ಸ್ಪಷ್ಟಕಾರಣವೆಂದರೆ, ಕಾರ್ಯಕಾರಣಭಾವ (Causation) ಸಿದ್ಧಾಂತವು ತರ್ಕಸಂಗತವಲ್ಲ: ಅವರು ತಮ್ಮ "ವಿವರ್ತ" ಎಂಬ ಅನ್ಯಾದೃಶ ಸಿದ್ಧಾಂತದಲ್ಲಿ ಈ ಪ್ರಪಂಚ ಮತ್ತು ಜೀವಾತ್ಮಗಳ ಸಂಬಂಧವನ್ನು ತಿಳಿಸಿ ಹೇಳಿದ್ದಾರೆ. ಜೀವಜಗತ್ತು ಮತ್ತು ಜಡಜಗತ್ತು ಬ್ರಹ್ಮನ ಆವಿರ್ಭಾವಗಳು. ಬ್ರಹ್ಮ ಸತ್ಯ. ಬ್ರಹ್ಮನಿಲ್ಲದಿದ್ದರೆ ಜಗತ್ತೂ ಇಲ್ಲ. ಜಗದ ಅಸ್ತಿತ್ವ ಭಾವದಿಂದ ಬ್ರಹ್ಮವಸ್ತುವಿಗೆ ಯಾವ ಬಗೆಯ ಬಾಧೆಯೂ ಬರುವುದಿಲ್ಲ. ವಿದ್ಯಾರಣ್ಯರು ಈ ಅಂಶವನ್ನು ದೃಢವಾಗಿ ಸಮರ್ಥಿಸುತ್ತ, "ಬ್ರಹ್ಮನು ಈ ಪ್ರಪಂಚದಿಂದ ಅಭಿನ್ನನೆಂದು ಹೇಳಿದಾಗ, ಬ್ರಹ್ಮನೂ ಜಗತ್ತೂ ಸಮ ಸಮಾನ ಎಂದು ಅದರ ಅರ್ಥವಲ್ಲ, ಆದರೆ ಭಿನ್ನಭಾವವನ್ನು, ಅಥವಾ ದ್ವೈತ ಭಾವನೆ ಯನ್ನು ತನ್ಮೂಲಕ ನಿರಸನಗೊಳಿಸಲಾಗುತ್ತದೆ"—ಎಂದಿದ್ದಾರೆ. **ಛಾಂದೋಗ್ಯವು** ಈ ವಿಷಯವನ್ನು ಚೆನ್ನಾಗಿ ಹೇಳುತ್ತದೆ: ನಾಮರೂಪಗಳಿಂದ ಕೂಡಿದ ನಾನಾವಿಧ ಪ್ರಾಣಿಕೋಟಿಗಳನ್ನು, ಅವು ಸ್ವತಂತ್ರ ಸ್ವಯಂ ಸಮರ್ಥ ಎಂದು ನೋಡಿದರೆ, ಅದು ತಪ್ಪು. ಆದರೆ ಅವಕ್ಕೆಲ್ಲ ಆಧಾರಭೂತವಾಗಿ ಒಂದು ಸದ್ವಸ್ತುವು ಉಂಟು ಎಂದು ನೋಡಿದಾಗ, ಅದು ಸರಿ." ಶ್ರೀ ಶಂಕರರು ಜಗತ್ತು "ಮಾಯೆ" ಎಂದು ಘೋಷಿಸಿದಾಗ, ಅದರರ್ಥ ಜಗತ್ತು ಸತ್ಯ ಅಥವಾ ಮಿಥ್ಯೆ—ಅಥವಾ ಸತ್ಯ ಮತ್ತು ಮಿಥ್ಯೆ—ಇವುಗಳ ಸಮ್ಮಿಶ್ರಣ ಎಂದು ನಿರ್ದಿಷ್ಟವಾಗಿ ಗುಣಲಕ್ಷಣ ಹೇಳಲು ಬಾರದು ಎಂದು. ಬ್ರಹ್ಮ ವಸ್ತುವು ಅನಿರ್ವಚನೀಯ. ಈ ಆತ್ಮಿಕ ಜಗತ್ತು ಮತ್ತು ಈ ವಿಶ್ವ (ಅಖಿಲಾಂಡ ಕೋಟಿ ಬ್ರಹ್ಮಾಂಡ) ಬ್ರಹ್ಮ ನಿಂದಲೇ ಆವಿರ್ಭವಿಸಿದಂತಹವು. ಜಗತ್ತು ಆತ್ಮನ ಸೃಷ್ಟಿಯಲ್ಲ. ಅದು ಈಶ್ವರಸೃಷ್ಟಿ; ಈಶ್ವರನು ಮೂರ್ತೀ ಭವಿಸಿದ ದೇವರು. ಆತನು ವಿಶೇಷ ಗುಣೋಪೇತನಾದ ಬ್ರಹ್ಮನೇ ಅಲ್ಲದೆ ಮತ್ತೇನೂ ಅಲ್ಲ. **ಪಂಚದಶಿಯು**

ಆರನೆಯ ಪ್ರಕರಣವಾದ "ಚಿತ್ರದೀಪ ವಿವೇಕ"ದಲ್ಲಿ, ವರ್ಣರಂಜಿತ ಚಿತ್ರಪಟದ ದೃಷ್ಟಾಂತವನ್ನು ಜಾಣ್ಮೆಯಿಂದ ಬಳಸಿ, ಈ ವಿಶ್ವೋತ್ಪತ್ತಿಯ ಕ್ರಮಾಗತ ಅವಸ್ಥಾಂತರಗಳನ್ನು ಶ್ರೀ ವಿದ್ಯಾರಣ್ಯರು ತಿಳಿಸಿ ಹೇಳಿದ್ದಾರೆ. ಅದ್ವೈತನೆನಿಸಿದ ಆ ಏಕೈಕ ಪರಮಾತ್ಮನು, ವಿಶ್ವವಿಕಾಸದ ಅವಸ್ಥಾಂತರಗಳಿಗೆ ತಕ್ಕಂತೆ ಅನುಕ್ರಮವಾಗಿ ಈಶ್ವರ, ಹಿರಣ್ಯಗರ್ಭ ಮತ್ತು ವಿರಾಟ್ ಎಂಬುದಾಗಿ ಹೇಳಲ್ಪಡುತ್ತಾನೆ. ಆ ಅವಸ್ಥಾಂತರಗಳು ಕಾರಣ ಸಂಬಂಧೀಯ, ಸೂಕ್ಷ್ಮಸಂಬಂಧೀಯ ಮತ್ತು ಸ್ಥೂಲ ಸಂಬಂಧೀಯ. ಈ ದೃಷ್ಟಾಂತದ ಅವಸ್ಥಾ ಸ್ವರೂಪಗಳನ್ನು ಶ್ರೀ ವಿದ್ಯಾರಣ್ಯರು ಹೀಗೆ ವಿವರಿಸಿದ್ದಾರೆ :

"ಸ್ವತಃ ಶುಭ್ರೋऽತ್ರ ಧೌತಃ ಸ್ಯಾತ್ । ಘಟ್ಟಿತೋऽನ್ನ ವಿಲೇಪನಾತ್ ॥
ಮಷ್ಯಾಕಾರೈರ್ಲಾಂಛಿತಃ ಸ್ಯಾತ್ । ರಂಜಿತೋ ವರ್ಣಪೂರಣಾತ್ ॥

1 ಸ್ವತಃ ಶುಭ್ರವಾದ ಪಟವು ಅನ್ನಲೇಪನದಿಂದ "ಘಟ್ಟಿತ"ವಾಗುವುದು (ಗಟ್ಟಿ ಆಗುವದು).
2 ಮಸಿಯಿಂದ ಆಕಾರ ರೇಖೆಗಳನ್ನು ಬರೆದಾಗ ಪಟವು ಲಾಂಛಿತವಾಗುವದು.
3 ಪಟದ ಚಿತ್ರವನ್ನು ಬಣ್ಣಗಳಿಂದ ತುಂಬಿಸಿದಾಗ ಅದು ರಂಜಿತವಾಗುವದು.

ಈಶ್ವರ ಎಂದರೆ ಮಾಯೆಯ ಮತ್ತು ಅದರ ಕಾರ್ಯಸಂಬಂಧ ಬಂದ ಬ್ರಹ್ಮ ಅಥವಾ ಆತ್ಮನು. ಈಶ್ವರನೇ ಈ ಭೌತಿಕವಾದ ಮತ್ತು ಕ್ರಿಯಾಶಕ್ತವಾದ ಜಗದುತ್ಪತ್ತಿಗೆ ಕಾರಣನು. ಗಂಜಿಯ ಲೇಪನದಿಂದ ಬಿರುಸಾದ ಬಿಳಿಯ ಚಿತ್ರಪಟವು ಚಿತ್ರ ಬರೆಯಲು ಮೂಲ ಆಧಾರ ಒದಗಿಸುವ ಹಾಗೆ, ಈಶ್ವರನು ಜಗದುತ್ಪತ್ತಿಗೆ ಆಧಾರಭೂತನು. ಜೀವಾತ್ಮನು, ಶಂಕರರು ಹೇಳುವ ಗುಣೋಪೇತ ರೂಪಾತ್ಮಕದೇವರ ಉಪಾಸನೆಯನ್ನು ಉಪೇಕ್ಷಿಸಕೂಡದು. ರೂಪಾತ್ಮಕ ದೇವತಾರಾಧನೆಯ ಮೂಲಕ ಆತನನ್ನು ಉಪೇಕ್ಷಿಸುವುದರಿಂದಲ್ಲ, ಆತನನ್ನೂ ಮಿಕ್ಕಿ ಮೀರಿ, ಮೇಲೇರಿ, ಮೋಕ್ಷವನ್ನು ಹೊಂದಬೇಕು. ಶಂಕರರು ಅಜ್ಞೇಯವಾದಿಯಲ್ಲ, ಭೌತವಾದಿಯಲ್ಲ, ನಿರೀಶ್ವರವಾದಿಯೂ ಆಗಿರಲಿಲ್ಲ. ಅವರು ಪರಮ-ಈಶ್ವರವಾದಿ. ಹಾಗೆಂದೇ ಅವರು ನೈಯಾಯಿಕರ ಪರಮಾಣುವಾದವನ್ನೂ ಸಾಂಖ್ಯರ ಪರಿಣಾಮವಾದವನ್ನೂ ಖಂಡಿಸುತ್ತಾರೆ. ಮಾಯಾವಾದವೇ ಈ ಮೂರು ವಿಧ ವರ್ಗೀಕರಣಕ್ಕೆ ಕಾರಣವಾಗಿದೆ : (1) ವ್ಯಕ್ತಿಗತ ಅಥವಾ ರೂಪಾತ್ಮಕ ದೇವರು—ಈಶ್ವರ, (2) ಜೀವರು, (3) ಜಗತ್ತು. ಮಾಯೆಯ ಅಸ್ತಿತ್ವ ನಿಶ್ಚಿತ, ಮತ್ತು ಅದು ಅನಾದಿಯಾದದ್ದು, ಮತ್ತು ಬ್ರಹ್ಮ ಸಾಕ್ಷಾತ್ಕಾರವಾಗುತ್ತಲೇ ಅದು ನಷ್ಟವಾಗುತ್ತದೆ. ಮಾಯೆಯು ತನ್ನ ಆವರಣ ಶಕ್ತಿಯ ಮೂಲಕ ಸತ್ಯವನ್ನು ಮರೆಮಾಡುತ್ತದೆ, ಮತ್ತು ಅದು ತನ್ನ ವಿಕ್ಷೇಪ ಶಕ್ತಿಯ ಮೂಲಕ ತಾನು ಮರೆಮಾಡಿದ ಮೂಲ ವಸ್ತುವಿನ ಬದಲು ಬೇರೊಂದರ ಆಭಾಸ ಜಾಲವನ್ನು ಪಸರಿಸುತ್ತದೆ. ಮಾಯಾ ಮೂಲಕ ಪ್ರತಿಫಲಿತ ಬ್ರಹ್ಮನೇ ಈಶ್ವರನು. ಹಾಗೆಂದು ಈಶ್ವರನು ಕಲಂಕಿತನಲ್ಲ. ಅವಿದ್ಯೆಯಲ್ಲಿ ಪ್ರತಿಬಿಂಬಿತನಾದ ಬ್ರಹ್ಮನೇ ಜೀವಾತ್ಮ. ಜೀವಾತ್ಮವು ಮಾಯಾ ಕಲುಷಿತವು.

ಸತ್ವ ಶುದ್ಧ್ಯ ವಿಶುದ್ಧಿಭ್ಯಾಂ। ಮಾಯಾऽವಿದ್ಯೇ ಚ ತೇ ಮತೇ॥
ಮಾಯಾ ಬಿಂಬೋ ವಶೀಕೃತ್ಯ। ತಾಂ ಸ್ಯಾತ್ ಸರ್ವಜ್ಞ ಈಶ್ವರಃ॥ 16॥ ಪಂಚದಶಿ. ಪ್ರ. 1.

ಅವಿದ್ಯಾ ವಶಗಸ್ತ್ವನ್ಯಃ। ತದ್ವೈಚಿತ್ರ್ಯಾದನೇಕಧಾ॥ 17॥ ಪಂಚದಶಿ. ಪ್ರ 1.

ಸತ್ಯದ ವಿಷಯದಲ್ಲಿ ಅದ್ವೈತವು ಮೂರು ಬಗೆಯ ದೃಷ್ಟಿಯನ್ನು ತಳೆಯುತ್ತದೆ. ಒಂದು, ಕೇವಲ ದೃಷ್ಟಿ, ಅಂದರೆ ಪಾರಮಾರ್ಥಿಕ ದೃಷ್ಟಿಕೋನ. ಇದರ ಪ್ರಕಾರ ಬ್ರಹ್ಮ ಮಾತ್ರವೇ ಸತ್ಯ. ಎರಡು, ಅನುಭವಜನ್ಯ ದೃಷ್ಟಿ (Empirical) ; ಇದರ ಪ್ರಕಾರ ಜಗತ್ತು ಸತ್ಯ. ಇದಕ್ಕೆ

ವ್ಯಾವಹಾರಿಕ ದೃಷ್ಟಿಯೆಂದೂ ಹೇಳಲಾಗುತ್ತದೆ. ರಾಧಾಕೃಷ್ಣನ್ ಅನ್ನುತ್ತಾರೆ, ''ಜಗತ್ತೇನೋ ಮಿಥ್ಯೆಯೇ, ಆದರೆ ಅದು ಭ್ರಮೆಯೂ ಅಲ್ಲ.'' ಇನ್ನು ಮೂರನೆಯ ದೃಷ್ಟಿ ಎಂದರೆ **'ಪ್ರಾತಿಭಾಸಿಕ'** ಅಂದರೆ ಸ್ವಪ್ನಲೋಕದ ಅನುಭವಕ್ಕೆ ಸಂಬಂಧಿಸಿದ್ದು. ಇದು ವೈಯಕ್ತಿಕ ಲೋಕವಾಗಿದ್ದು. ಆಯಾ ವ್ಯಕ್ತಿಯ ಕಲ್ಪನಾಬಿಂಬವಾದ ಇದನ್ನು ಆಯಾ ವ್ಯಕ್ತಿಯೇ ತಾನು ಕಂಡುದನ್ನು ಗುರುತಿಸಬಲ್ಲನು ಮತ್ತು ಅನುಭವಿಸಬಲ್ಲನು. ಅದಕ್ಕೆ (Objective Reality) ಬಹಿರ್ಗೋಚರಣೆಯ ವಾಸ್ತವ ಅಸ್ತಿತ್ವವಿಲ್ಲ. ಅನುಭವಜನ್ಯವಾದ ವ್ಯಾವಹಾರಿಕ ಸತ್ಯವಾಗಿ ಗೋಚರಿಸುವ ಜಗತ್ತಿನಂತೆ ಈ ಸ್ವಪ್ನಗೋಚರ ಜಗತ್ತಿಲ್ಲ. ಏಕೆಂದರೆ, ವ್ಯಾವಹಾರಿಕ ದೃಷ್ಟಿಯಿಂದ ಪ್ರತ್ಯಕ್ಷಗೋಚರ ಜಗತ್ತು, ಸರ್ವರ ಅನುಭವಸಾಮ್ಯದ ಸಂಬಂಧ ಪಡೆದಿದೆ, ಹಾಗು ಅದು ಒಬ್ಬ ಜೀವಾತ್ಮನ ವ್ಯಕ್ತಿಗತ ಸೃಷ್ಟಿಯಲ್ಲ. ಜಾಗೃತಾವಸ್ಥೆಯಲ್ಲಿ ಪ್ರತೀತಿಗೆ ಬರುವ ಜಗತ್ತು ಪ್ರತ್ಯಕ್ಷ, ಅಂದರೆ ವಸ್ತುಗತ (Objective). ಅದು ಸಾಪೇಕ್ಷ ಸತ್ಯ.

" ಈ ಜಗತ್ತಿಗೆ 'ಪ್ರಪಂಚ' ಎಂದು ಹೇಳಲಾಗುತ್ತದೆ. ಏಕೆಂದರೆ, ಅದು ಐದು ವಿಧದ ಲಕ್ಷಣಗಳನ್ನು ಉಳ್ಳದ್ದು : (1) ಅಸ್ತಿ, (2) ಭಾತಿ, (3) ಪ್ರಿಯ, (4) ನಾಮ, (5) ರೂಪ—ಇವೇ ಆ ಲಕ್ಷಣಗಳು. ಇವುಗಳಲ್ಲಿ ಕೊನೆಯ ಎರಡು—ನಾಮ ಮತ್ತು ರೂಪ, ಇವು ವಸ್ತು ವಸ್ತುವಿಗೂ ಸತ್ವ ಸತ್ವಕ್ಕೂ ಭಿನ್ನ ಭಿನ್ನ. ಅವು ಮಾಯಾಜನ್ಯ. ಅಜ್ಞರು ನಾಮರೂಪಗಳೇ ಜಗತ್ತೆಂದು ಭಾವಿಸಿ ಭ್ರಮಿಸುತ್ತಾರೆ. ಅಸ್ತಿ, ಭಾತಿ, ಪ್ರಿಯ—ಎಂಬೀ ಮೂರು ಮಾತ್ರ ಬ್ರಹ್ಮನ ಮೂಲಭೂತ ಲಕ್ಷಣಗಳು. ಜ್ಞಾನಿಯಾದವನು ಇದನ್ನು ತಿಳಿದಿರುತ್ತಾನೆ. "

ಪಂಚದಶಿಯು ಈ ವಿಷಯವನ್ನು ಕ್ರೋಡೀಕರಿಸುತ್ತ ಹೇಳುತ್ತದೆ,—" ಅನುಭವಜನ್ಯ ವ್ಯಾವಹಾರಿಕ ದೃಷ್ಟಿಯಿಂದ ಈ ಜಗತ್ತು ಸತ್ಯ ; ತಾರ್ಕಿಕ ದೃಷ್ಟಿಯಿಂದ ಇದು ಅನಿರ್ಣೇಯ ; ಇನ್ನು ಅಪೌರುಷೇಯವೆನಿಸಿದ ಶ್ರುತಿ ಪ್ರಮಾಣದ ಪ್ರಕಾರ ಜಗತ್ತು ಮಿಥ್ಯೆ. "

ತತ್ತ್ವತಃ, ಜೀವಾತ್ಮ ಬ್ರಹ್ಮನಿಂದ ಅಭಿನ್ನವೇ. ಮಾಯೆಯ ಮುಸುಕಿನಿಂದಾಗಿ ಮತ್ತು ಬೇರೆ ಇನ್ನಾವುದೋ ಒಂದರ ಪ್ರಕ್ಷೇಪದಿಂದಾಗಿ, ಪ್ರತ್ಯೇಕತೆಯ ಭಾವ ಹಾಗು ದ್ವೈತಭಾವ ತಲೆದೋರುತ್ತದೆ. ಏಕೈಕವಾಗಿ ಇದ್ದುದೇ ಅನೇಕವಾಗಿ ಕಾಣಿಸಿಕೊಳ್ಳುತ್ತದೆ. ಇದು ಅಜ್ಞಾನದ ಫಲ. ಇದಕ್ಕೆ ಪ್ರತ್ಯುಪಾಯ ಎಂದರೆ ಅದ್ವಯಜ್ಞಾನ. ಈ ಸತ್ಯದ ಸಾಕ್ಷಾತ್ಕಾರವೇ ಮೋಕ್ಷ. ಸ್ವಾನುಭವ ಸಿದ್ಧವಾದ ಅಹಂಕಾರ ಅಹಂಭಾವಗಳು, ಪ್ರಕೃತಿಗುಣಗಳಿಂದಾಗಿ ಅನೇಕ, ಅನೇಕವಿಧ. ಆ ಪರಮ ಆತ್ಮ ಎಂಬುದು ಏಕಮೇವ ಆಗಿದೆ. " ಆತ್ಮಾ ಸರ್ವಸ್ಯ ಆತ್ಮಾ " ಬ್ರಹ್ಮವು ಸರ್ವಾಂತರ್ಗತ. ಪ್ರಾಣಿಸಹಜ ವೃತ್ತಿ ಪ್ರವೃತ್ತಿ, ಕಾಲ ಪರಿಮಿತಿ, ಅಜ್ಞಾನ, ಕಷ್ಟ ದುಃಖ—ಇವೆಲ್ಲ ಮಾಯಾ ಜನ್ಯವೇ ವಿನಾ, ಇವು ಮಾನವ,ಸ್ವಭಾವಗತ ಸ್ಥಿರ ಲಕ್ಷಣಗಳಲ್ಲ. ಆತ್ಮನಿಗೆ ಇವು ಆಕಸ್ಮಿಕ ಮಾತ್ರ, ಸ್ವಾಭಾವಿಕವಲ್ಲ. ಅದ್ವೈತವು, ಮಾನವ, ಆತ್ಮ ಮತ್ತು ಪರಮಾತ್ಮರಲ್ಲಿ ಸಮಸ್ವಭಾವವನ್ನು ಅಥವಾ ಏಕಜಾತೀಯತೆಯನ್ನು ಪ್ರಸ್ಥಾಪಿಸುತ್ತದೆ. ಛಾಂದೋಗ್ಯ ಉಪನಿಷತ್ತಿನ ಅವಿಸ್ಮರಣೀಯವಾದ ವಚನವು ಘೋಷಿಸುವದೇನೆಂದರೆ—

''ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ
ಸ ಆತ್ಮಾ। ತತ್ತ್ವಮಸಿ ಶ್ವೇತಕೇತೋ''

ಅಂದರೆ, ಆ ಸತ್ ಎಂಬುದು ಅತ್ಯಂತ ಸೂಕ್ಷ್ಮವು. ಅದೆಲ್ಲವೂ ಆತ್ಮಸ್ವರೂಪವು. ಅದು ಸತ್ಯವು, ಅದು ಆತ್ಮವು. ಶ್ವೇತಕೇತುವೇ, ನೀನು ಅದೇ ಇರುವಿ.

ಮೋಕ್ಷ ವಿಷಯಕವಾದ ಅದ್ವೈತಿಯ ಕಲ್ಪನೆಯು ಭಾರತೀಯ ತತ್ವಜ್ಞಾನದಲ್ಲಿ ಅಸದೃಶವಾದದ್ದು. ಪ್ರಪಂಚದಲ್ಲಿ ಮತ್ತಾವ ತಾತ್ತ್ವಿಕ ಸಿದ್ಧಾಂತಗಳಲ್ಲಿಯೂ ಇದಕ್ಕೆ ಸರಿಸಮಾನವಾದದ್ದು ಸಿಕ್ಕುವದಿಲ್ಲ. ಇದು ಒಂದು ಪ್ರಕಾರದ ಆತ್ಮಸಾಕ್ಷಾತ್ಕಾರ. ಹೊಸದೇನನ್ನೂ ವಶಪಡಿಸಿಕೊಳ್ಳುವ ಮಾತೇ ಇಲ್ಲಿ ಇಲ್ಲ. ಈಗಾಗಲೇ ಇದ್ದುದರ ಅರಿವನ್ನೇ ಮಾಡಿಕೊಂಡರೆ ಅದೇ ಸಾಕ್ಷಾತ್ಕಾರ. ಯಾವುದು ಈಗಾಗಲೇ ಇರುವದಿಲ್ಲವೋ ಅದನ್ನು ಅಸ್ತಿತ್ವದಲ್ಲಿ ತರುವ ಪ್ರಶ್ನೆ ಇದಲ್ಲ. ವಿದ್ಯಾರಣ್ಯರ ಮಾತುಗಳಲ್ಲಿ ಹೇಳುವದಾದರೆ, ಇದುವರೆಗೆ ನಮ್ಮ ಮೈಮೇಲೆಯೇ ಇದ್ದ, ಆದರೆ ಮರೆತು ಹೋದ ಬಂಗಾರದ ಒಡವೆಯನ್ನು ಮತ್ತೆ ಪಡೆದಂತೆ ಈ ಸಾಕ್ಷಾತ್ಕಾರ ಎಂಬುದು. ಅದೇನೂ ಮೇಲಿಂದ ಇಳಿದು ಬಂದ ಕಾಣಿಕೆ ಅಲ್ಲ. ಆದರೆ ಅದು ನಮ್ಮ ಒಳಗಿಂದಲೇ ಬಂದ ತಿಳಿವಳಿಕೆ ಮಾತ್ರ. ಅದು ಉತ್ಪನ್ನ ಫಲವಲ್ಲ; ಹಾಗಿದ್ದ ಪಕ್ಷದಲ್ಲಿ ಅದು ಅಳಿದು ಹೋದೀತು, ಕಳೆದೂ ಹೋದೀತು; ಅದು ಚಿರಂತನವಾಗಿ ಇರಲರಿಯದು. ಅದು ಮರಣಾನಂತರ ಹೊಂದಬೇಕಾದ ಅವಸ್ಥಾ ವಿಶೇಷವೂ ಅಲ್ಲ. ದೇಹಿಯು ಇಲ್ಲಿಯೇ, ಈಗಲೇ ಈ ಸಾಕ್ಷಾತ್ಕಾರ ಹೊಂದಬಲ್ಲ. 'ಅಹಂ ಬ್ರಹ್ಮಾಸ್ಮಿ' ಎಂಬ ತಾದಾತ್ಮ್ಯ ಜ್ಞಾನ ಮೂಲಕ ಲಭಿಸುವ ಅಖಂಡಾನುಭವವದು. ಮೋಕ್ಷ ಎಂಬುದು, ಭಾರತೀಯ ದಂತಕಥೆಯ ರಾಜಕುಮಾರನು ಪಡೆದ ಪ್ರತೀತಿಯಂತಿದೆ. ಅವನಿಗೆ ತಾನು ರಾಜಪುತ್ರ ಎಂಬ ಅರಿವೇ ಇರಲಿಲ್ಲ. ಅವನು ಹತ್ತೆಂಟು ವರ್ಷ ಬೇಟೆಗಾರರ ನಡುವೆ ಬೆಳೆದಿದ್ದನು. ಅವನಿಗೆ ಏಕಾ ಏಕಿ, ತಾನು ರಾಜ ಕುಮಾರ ಎಂಬುದು ತಿಳಿದುಬಂದಿತು. ಈ ಬಗೆಯ ತಿಳಿವಳಿಕೆಯೇ ಮೋಕ್ಷ ಲಕ್ಷಣ. ದೇಹಿಯು ಇಹ ಜೀವನದಲ್ಲಿಯೇ ಬ್ರಹ್ಮಸಾಕ್ಷಾತ್ಕಾರ ಹೊಂದಿದರೆ, ಅದು 'ಜೀವನ್ಮುಕ್ತಿ' ಎನಿಸಿಕೊಳ್ಳುತ್ತದೆ. ಶ್ರೀ ಶಂಕರಾಚಾರ್ಯರು ತಾವು ಪಡೆದ ಈ ಬಗೆಯ ಜೀವನ್ಮುಕ್ತಿಯ ಅನುಭವದ ವಿಷಯವನ್ನು ಆನುಷಂಗಿಕವಾಗಿ "ವೇದಾಂತ ಸೂತ್ರಾಃ" ಎಂಬ ತಮ್ಮ ಭಾಷ್ಯದಲ್ಲಿ ಪ್ರಸ್ತಾಪಿಸಿದ್ದುಂಟು. ಜೀವನ್ಮುಕ್ತರು, ಅದ್ವೈತ ಸಾಕ್ಷಾತ್ಕಾರದ ಮಹದಾದರ್ಶ ಪುರುಷರಾಗಿದ್ದಾರೆ. ಜೀವನ್ಮುಕ್ತರ ಉಕ್ತಿಗಳೆಂದರೆ ಜ್ಞಾನದ ಮುಕ್ತಾಫಲಗಳು; ಅವರೆಸಗುವ ಕೆಲಸ, ಪೂಜಾವಿಶೇಷ. ಅವರ ನಿತ್ಯವರ್ತನೆ, ಸರ್ವಸಮರ್ಪಣೆ.

ಜೀವನ್ಮುಕ್ತ ಕಲ್ಪನೆಯನ್ನಲ್ಲದೆ, ಅದ್ವೈತವು ತನ್ನ ವ್ಯಾಪಕವಾದ ವಿಶ್ವವಿಮೋಚಕ ಸಿದ್ಧಾಂತವನ್ನು ಮುಂಡಿಸುತ್ತದೆ. ಈ ಬಗೆಯ ಸಾರ್ವತ್ರಿಕ ಔದಾರ್ಯ ಇನ್ನಾವ ತತ್ತ್ವ ಪ್ರಣಾಲಿಯಲ್ಲಿಯೂ ಕಾಣಬರದು. ಅದ್ವೈತದ ಪ್ರಕಾರ, ಮೋಕ್ಷವು ಸಮಸ್ತರ ಜನ್ಮಸಿದ್ಧ ಬಾಧ್ಯತೆಯಾಗಿದೆ. ಇದು ಕೇವಲ ಕೆಲವರಿಗೆ ಮಾತ್ರ ಮೀಸಲಾದ ವಿಶೇಷಾಧಿಕಾರವಲ್ಲ. ಮೋಕ್ಷ ಪ್ರಾಪ್ತಿಗೆ ಹೆಚ್ಚು ಕಡಮೆ ಕಾಲಾವಕಾಶದ ಪ್ರಶ್ನೆ ಬರಬಹುದು, ಅಷ್ಟೇ. ಇನ್ನು ಬೇರೆ ಪಾರಮಾರ್ಥಿಕ ಸಿದ್ಧಾಂತಗಳಲ್ಲಿ ಇರುವಂತೆ. ಇದರಲ್ಲಿ ಜೀವಾತ್ಮರ ವಿಷಯಕ್ಕೆ ಅಪಾತ್ರ, ಸತ್ಪಾತ್ರ ಎಂಬ ತಾರತಮ್ಯ ಗೋಚರಿಸುವದಿಲ್ಲ. ಮೋಕ್ಷಪ್ರಾಪ್ತಿಯು ಯಾರೊಬ್ಬರಿಂದಲೂ ನಮಗೆ ಕಾಣಿಕೆಯಾಗಿ ಬರುವಂತಹದಲ್ಲ. ನಮ್ಮ ನಿಜಸ್ವರೂಪವು ಅವಿದ್ಯೆಯ ಮತ್ತು ಮಿಥ್ಯೆಯ ಘನಸಿಬಿಡ ಆವರಣದಿಂದ ಮರೆಯಾಗಿದ್ದು, ಅದನ್ನು ಆಚೆಗೆ ಓಸರಿಸಿದರೆ, ಅದೇ ಮೋಕ್ಷ, ಅದೇ ಸಾಕ್ಷಾತ್ಕಾರ. ಈ ಸಿದ್ಧಾಂತವು "ಸರ್ವಮುಕ್ತಿ" ಎಂದು ವರ್ಣಿತವಾಗಿದೆ. ಇದು ಅದ್ವೈತದ ವಿಶೇಷ ಲಕ್ಷಣವೆನಿಸಿಕೊಂಡಿದೆ. ಅದ್ವೈತವು ಮಾನವನ ದೇವತ್ವವನ್ನೂ ದೊಡ್ಡಿತೆಯನ್ನೂ ಒತ್ತಿಒತ್ತಿ ಹೇಳುತ್ತದೆ. ಕೆಲವರು ಅದ್ವೈತವನ್ನು ಕೊಂಡಾಡುತ್ತ, ಇದು ವಿವೇಕಸಮ್ಮತವೂ, ಲೋಕಾನುರಾಗರತವೂ ಆದ ವಿಶ್ವವ್ಯಾಪಕ ದೃಷ್ಟಿಯುಳ್ಳ ಸಿದ್ಧಾಂತ ಎಂದಿದ್ದಾರೆ.

ಅದ್ವೈತವು ಕೇವಲ ಬೌದ್ಧಿಕ ಚಿಂತನಪರ ಪದ್ಧತಿಯಲ್ಲ. ಅದು ಪಾರಮಾರ್ಥಿಕ ಪಥದಲ್ಲಿ ಮಾರ್ಗದರ್ಶಕವೂ ಅಹುದು. ಆಧ್ಯಾತ್ಮಿಕ ಸಾಕ್ಷಾತ್ಕಾರ ಸಿದ್ಧಿಗೆ ಉಪಯುಕ್ತವಾದ ಜೀವನ ವಿಧಾನವನ್ನೂ ಅದು ಸಾಧಕರಿಗಾಗಿ ರೇಖಿಸಿ ನಿರ್ದೇಶಿಸುತ್ತದೆ. ಜ್ಞಾನ ಮೂಲಕ ಮೋಕ್ಷ ಪ್ರಾಪ್ತಿಯ

ವಿಷಯವನ್ನು ಅದ್ವೈತವು ಮಂಡಿಸುವದಾದರೂ ಇನ್ನುಳಿದ ಸಾಧನ ವಿಧಾನಗಳನ್ನು ಅದು ಉಪೇಕ್ಷಿಸುವದಿಲ್ಲ. ಧಾರ್ಮಿಕ ವ್ರತೋಪವಾಸಗಳನ್ನು ಆಚರಿಸಿ ಮತ್ತು ನೈತಿಕ ಶ್ರೇಷ್ಠತೆಯನ್ನು ಕಾಪಾಡಿಕೊಂಡು, ಮನಶ್ಶುದ್ಧಿಯನ್ನು ಪಡೆಯಬೇಕಾಗುತ್ತದೆ. ಕರ್ಮಮಾರ್ಗವು ನೇರವಾಗಿ ಮೋಕ್ಷಕ್ಕೆ ಮುಟ್ಟಿಸಲಾರದು; ಆದರೆ ಅದು ಪರ್ಯಾಯವಾಗಿ ಪ್ರಯೋಜನಕಾರಿಯಾಗುವದು. ಅದೇ ಪ್ರಕಾರ ನೀತಿನಿಷ್ಠ ಜೀವನ ಕೂಡ. ನೀತಿಯ ನಿಯಮಪಾಲನೆಯನ್ನೂ ಸ್ವಧರ್ಮಾನುಕೂಲ ಆಚರಣೆಯನ್ನೂ ಊರೂರಿ ಹೇಳಿದ್ದಿದೆ. ನಿತ್ಯದ ಅನುಷ್ಠಾನ ಕ್ರಮಗಳು ಮತ್ತು ಕರ್ಮನಿಷ್ಠ ಆಚಾರ ಶೀಲ ಜೀವನವು ಚಿತ್ತಶುದ್ಧಿಗೆ ಸಹಾಯಕವಾಗಿವೆ. ಆದುದರಿಂದ ಅವನ್ನು ಕಡೆಗಣಿಸಕೂಡದು. ಶ್ರೀಶಂಕರರು, ಪಾರಮಾರ್ಥಿಕ ಪ್ರಗತಿಗಾಗಿ ನಾನಾವಿಧ ಕಟ್ಟುಪಾಡುಗಳನ್ನೂ ಮೆಟ್ಟಲುಗಳನ್ನೂ ಹಾಕಿಕೊಟ್ಟಿದ್ದಾರೆ. ಉತ್ತಮ ಜೀವನ ಕ್ರಮವಷ್ಟೇ ಪಾರಮಾರ್ಥಿಕ ಸಾಕ್ಷಾತ್ಕಾರಕ್ಕೆ ನೇರದಾರಿ ಅಲ್ಲದಿದ್ದರೂ ಪಾವನ ಜೀವನವು ಅದಕ್ಕೆ ಅನಿವಾರ್ಯವಾಗಿದೆ. ಮನೋನಿಗ್ರಹ ಮತ್ತು ಇಂದ್ರಿಯ ನಿಗ್ರಹ, ಅಂದರೆ ಶಮ, ದಮ-ಇವು ಈ ದಿಶೆಯಲ್ಲಿ ಆವಶ್ಯಕ ಪೂರ್ವಸಿದ್ಧತೆಗಳು. ಇವು ಮಿತವಚನಕ್ಕೂ ವಿಚಾರ ನಿಯಮನಕ್ಕೂ ಸಾಧಕವಾಗಿವೆ. ತರುವಾಯ ನಾವು ನಮ್ಮ ಕೃತಿಮತಿಗಳಲ್ಲಿ ಉಪರತಿಯನ್ನೂ ತಿತಿಕ್ಷೆಯನ್ನೂ ಸಾಧಿಸಬೇಕು—ಅಂದರೆ ತ್ಯಾಗವನ್ನು ಸಂಕಲ್ಪದೃಢತೆಯನ್ನು ಅಂಗವಿಸಿಕೊಳ್ಳಬೇಕು. ಇನ್ನು ಐದನೆಯ ಆವಶ್ಯಕ ಗುಣ, ಚಿತ್ತೈಕಾಗ್ರತೆ. ಕೊನೆಯದಾಗಿ ನಿಶ್ಚಲ ಶ್ರದ್ಧೆ.

ಅಧ್ಯಾತ್ಮದ ಸಾಧಕನು, ವೇದಾಂತವನ್ನು ಓರ್ವ ಅನುಭವಿಕ ಪ್ರಾಜ್ಞನಾದ ಗುರುಮುಖಾಂತರ ತಿಳಿಯಬೇಕಲ್ಲದೆ, ಕೇವಲ ಸ್ವಾಧ್ಯಾಯದಿಂದ ಕಲಿತರಾಗದು. ' ಗುರು ಇದ್ದವನೇ ಜ್ಞಾನಿ.'

ಸಕೃದಾಪ್ತೋಪದೇಶೇನ। ಪರೋಕ್ಷಜ್ಞಾನಮುದ್ಭವೇತ್ ॥ ಪಂಚದಶಿ, ಪ್ರ. 9 ಶ್ಲೋ. 25.

ಆಪ್ತೋಪದೇಶ ಮಾತ್ರೇಣ। ಹ್ಯನುಷ್ಠಾನಂ ಹಿ ಸಂಭವೇತ್॥ ಅದೇ, ಪ್ರ 9. ಶ್ಲೋ. 29.

ಗುರುವನ್ನು ಆರಸಿಕೊಂಡು ಅವನ ಬಳಿಸಾರುವುದು ಕೇವಲ ಒಂದು ಶಿಷ್ಟಾಚಾರವಲ್ಲ, ಅಥವಾ ಸಂಪ್ರದಾಯ ಮಾತ ವಲ್ಲ, ಅಥವಾ ಹೊಣೆ ಹಾರಿಸಿಕೊಳ್ಳುವುದೂ ಅಲ್ಲ. ಗುರು ಮುಖಾಂತರವೇ ಜ್ಞಾನದಾನ ಆಗಬೇಕು. ಈ ಬಗೆಯ ಕಲಿಕೆಗೆ ' ಶ್ರವಣ ' ಎಂದು ಹೆಸರು. ಗುರುವಿನಿಂದ ಕಲಿತದ್ದನ್ನು ನಮ್ಮೊಳಗೇ ಮನಮನದಲ್ಲಿ ಪೃಚ್ಛಾಪೃಚ್ಛೆ ನಡೆಸಿ ಸತತ ಚಿಂತನೆ ಮಾಡಬೇಕು. ತನ್ಮೂಲಕ, ಕಲಿತದ್ದು ನಮ್ಮದಾಗಬೇಕು. ಇದಕ್ಕೆ ' ಮನನ ' ಎಂದು ಹೆಸರು. ವಿವೇಕಪೂರ್ಣ ಚಿಂತನೆಗೆ ಅದ್ವೈತವು ಬಹಳ ಬೆಲೆ ಕೊಡುತ್ತದೆಯಲ್ಲದೆ, ಅಂಧವಾದ ಅಂಗೀಕಾರ ಅದಕ್ಕೆ ಸಮ್ಮತವಿಲ್ಲ.

ನಮ್ಮ ನಮ್ಮ ಬೌದ್ಧಿಕ ಪ್ರತ್ಯಯವು ಪರೋಕ್ಷಜ್ಞಾನವಲ್ಲ. ಅದು ಸದ್ವಸ್ತುವಿನ ನೇರ ಪ್ರತೀತಿಯೂ ಅಲ್ಲ. ವೃತ್ತಿ ಪರಿವರ್ತನೆಯ ಅನುಭವ ನಮಗೆ ಬರುವ ವರೆಗೂ ನಾವು ತಿಳಿದ ಸತ್ಯಾಂಶಗಳನ್ನು ಸತತ ಮಥಿಸಿ ಮನನ ಮಾಡಬೇಕು. ಸಿದ್ಧಾಂತವು ಸಾಕ್ಷಾತ್ಕಾರವಾಗಿ ಪರಿವರ್ತನೆ ಹೊಂದಬೇಕು. ಈ ವಿಧಾನಕ್ಕೆ 'ನಿದಿಧ್ಯಾಸ'ವೆಂದು ಹೆಸರು. "ಮನಸ್ಸು ಅನಾದಿಯಾದ ತನ್ನ ಅಭ್ಯಾಸಬಲದಿಂದ ಲೌಕಿಕ ವಿಷಯಗಳಲ್ಲಿಯೇ ಸದಾ ಅನುರಕ್ತವಾಗಿರುತ್ತದೆ. ಅದನ್ನು ಅವುಗಳಿಂದ ಸೆಳೆದು ತಂದು, ಅಂದರೆ ಚಿತ್ತ ವೃತ್ತಿ ನಿರೋಧ ಮೂಲಕ ಆತ್ಮನಲ್ಲಿ ಕೇಂದ್ರೀಕರಿಸಬೇಕು." ಪರಮಾತ್ಮ ಸಾಕ್ಷಾತ್ಕಾರವು ಮಾನವ ಜೀವನದ ಅಂತಿಮ ಸಿದ್ಧಿಯಾಗಿದೆ.

ಅದ್ವೈತವು ಅನೀತಿಕರವೆಂಬ ಆಕ್ಷೇಪಕ್ಕೂ ಟೀಕೆಗೂ ಶ್ರೀ ವಿದ್ಯಾರಣ್ಯರು ಉತ್ತರ ಕೊಡುತ್ತ, ಒಳಿತು ಕೆಡುಕುಗಳ ಆಚೆಗಿರುವ ಅವಸ್ಥಾವಿಶೇಷ ಒಂದನ್ನು ನಿರ್ದೇಶಿಸುತ್ತಾರೆ. ಸದ್ವಸ್ತುವಿನ ಮೂಲಭೂತ

ಏಕತ್ವವನ್ನು ಅರಿತು ಅನುಭವಿಸುವ ವರೆಗೆ ನೈಜವಾದ ಮಾನವ ಪ್ರೇಮ ಸಾಧ್ಯವಿಲ್ಲ ಎಂದು ವಿದ್ಯಾರಣ್ಯರು ಹೇಳುತ್ತಾರೆ. ಈ ಬಗೆಯ ಅನುಭವದಿಂದ ಮಾತ್ರವೇ ನಮ್ಮಲ್ಲಿ ಧಾರ್ಮಿಕ ಸಮಭಾವ ಅಂಕುರಿಸಬಲ್ಲದು. ವಿದ್ಯಾರಣ್ಯರ ಅದ್ವೈತ ಸಿದ್ಧಾಂತ ಕಥನವು ಪರಿಪೂರ್ಣ ಮತ್ತು ಸ್ಪಷ್ಟ. ಅದು, ಶ್ರೀ ಶಂಕರರ ಪ್ರತಿಭಾನ್ವಿತ ಸಂದೇಶದ ಸತ್ವಸಾರವನ್ನು ಬಲು ಚೆನ್ನಾಗಿ ಬಿಂಬಿಸುತ್ತದೆ.

ಮೂಲಲೇಖಕರು : ಡಾ॥ ಪಿ. ನಾಗರಾಜ ರಾವ್
ಅನುವಾದಕರು : ಶ್ರೀ ಹಂ. ಪ. ನಾಗರಾಜಯ್ಯ

# ವಿಶಿಷ್ಟಾದ್ವೈತ

ಶ್ರೀಮದ್ರಾಮಾನುಜರು ಪ್ರವರ್ತನಗೊಳಿಸಿದ ವಿಶಿಷ್ಟಾದ್ವೈತ ವೈಷ್ಣವ ಧರ್ಮ ದ್ವಾರಸಮುದ್ರದ ಹೊಯ್ಸಳರ ಆಳಿಕೆಯಲ್ಲಿ ರಾಜ್ಯದ ಧರ್ಮವಾಗಿ, ದರ್ಶನವಾಗಿ ಬೆಳಗಿತು; ಕರ್ಣಾಟಕದಲ್ಲಿ ಭಕ್ತಿ ಪ್ರಪತ್ತಿಗಳ ಶ್ರೀಮಂತ',ಪರಂಪರೆಯನ್ನು ಹಾಕಿಕೊಟ್ಟಿತು; ಶ್ರದ್ಧಾವಂತರಾದ ಮುಮುಕ್ಷುಗಳೆಲ್ಲರಿಗೂ ಜಾತಿಕುಲಗಳ ಭೇದವಿಲ್ಲದೆ ಮೋಕ್ಷಮಾರ್ಗವನ್ನು ತೆರೆಯಿತು.

ವಿಜಯನಗರ ಸಾಮ್ರಾಜ್ಯದ ಉದಯ ಹಾಗೂ ಉಚ್ಛ್ರಾಯದ ಕಾಲದಲ್ಲಿ ಎಂದರೆ ಕೃಷ್ಣದೇವರಾಯ, ಅಚ್ಯುತ ಮತ್ತು ಸದಾಶಿವರ ಆಳಿಕೆಯ ಕಾಲದಲ್ಲಿ ವಿಶಿಷ್ಟಾದ್ವೈತ ವೈಷ್ಣವಧರ್ಮ ನೂತನವಾದ ಪ್ರಾಬಲ್ಯವನ್ನೂ ಪ್ರಭಾವವನ್ನೂ ಹೊಂದಿದಂತೆ ಕಾಣುತ್ತದೆ. ಕ್ರಿ.ಶ. ಹದಿನಾಲ್ಕನೆ ಶತಮಾನದಿಂದ ಹದಿನಾರನೆ ಶತಮಾನದ ವರೆಗಿನ ಮೂರು ಶತಮಾನಗಳಿಗೆ ಅನ್ವಯಿಸುವ ಈ ಕಾಲವಲ್ಲಿ ರಾಮಾನುಜ ಸಿದ್ಧಾಂತದಲ್ಲಿ ಗಮನೀಯವಾದ ಅನೇಕ ಬದಲಾವಣೆಗಳಾದವು. ಸ್ವಲ್ಪಮಟ್ಟಿಗೆ ವಿರುದ್ಧವಾಗಿ ತೋರುವ ಅನೇಕಾನೇಕ ವಿವರಗಳನ್ನು ಈ ದರ್ಶನದ ಪ್ರತಿಪಾದಕರು ಮುಂದೆ ಮಾಡಿದುದರಿಂದ ಈ ಬದಲಾವಣೆಗಳು ತಲೆದೋರಿದವು.

ಇಂಥ ಸ್ವಾರಸ್ಯವಾದ ಬದಲಾವಣೆಗಳಲ್ಲಿ ಆಳ್ವಾರರುಗಳಿಗೆ ಕೊಡಬೇಕಾದ ಪ್ರಾಧಾನ್ಯದ ವಿಚಾರವೂ ಒಂದಾಗಿದೆ. ರಾಮಾನುಜರೂ ಅವರ ಪೂರ್ವಾಚಾರ್ಯರುಗಳೂ ಯಾರಿಂದ ಸ್ಫೂರ್ತಿಯನ್ನು ಪಡೆದರೆಂದು ಹೇಳಲಾಗಿದೆಯೋ ಅಂಥ ಆಳ್ವಾರರುಗಳಿಗೆ, ತಮಿಳುನಾಡಿನ ವೈಷ್ಣವ ಸಂತರುಗಳಿಗೆ ಪ್ರಧಾನ್ಯ ಕೊಟ್ಟುದು ಒಂದು ಮುಖ್ಯವಾದ ಬದಲಾವಣೆಯಾಗಿದೆ. ಉಭಯ ವೇದಾಂತವೆಂಬ ಶಬ್ದ ರೂಢಿಗೆ ಬಂದುದು ಈ ಕಾಲದಲ್ಲಿಯೇ. ಇವುಗಳಲ್ಲಿ ಒಂದು ಸಂಸ್ಕೃತ ಅಥವಾ ವೇದಕ್ಕೆ ಸಂಬಂಧಿಸಿದ್ದರೆ, ಮತ್ತೊಂದು ತಮಿಳು ಅಥವಾ ಪ್ರಬಂಧಕ್ಕೆ ಸಂಬಂಧಿಸಿದೆ. ವಿಜಯನಗರದ ಕೃಷ್ಣದೇವರಾಯನಂಥ ಪರಮಭಕ್ತನ ಹೃನ್ಮನಗಳ ಮೇಲೆ ಆಳ್ವಾರರುಗಳ ಪ್ರಭಾವ ಅಮಿತವಾಗಿ ಆಯಿತು. ಕ್ರಿ.ಶ. 1519ರಲ್ಲಿ ಅವನಿಂದ ರಚಿಸಲ್ಪಟ್ಟುದೆಂದು ಹೇಳಿರುವ 'ಆಮುಕ್ತಮಾಲ್ಯದಾ' ಎಂಬ ತೆಲುಗು ಕಾವ್ಯ ಇದಕ್ಕೆ ಸಾಕ್ಷಿಯಾಗಿದೆ. ಆಂಡಾಳ್ ಅಥವಾ ಗೋದಾದೇವಿ ಎಂದು ವಿಖ್ಯಾತಳಾಗಿ ಆಳ್ವಾರರುಗಳ ಗೋಷ್ಠಿಯಲ್ಲಿ ಸೇರಿರುವ ಏಕೈಕ ಭಕ್ತೆಗೆ ಸಂಬಂಧಿಸಿದ ಕಥೆ ಇದು. ಈ ಕೃತಿಯ ಉಪನಾಮ ವಿಷ್ಣುಚಿತ್ತೀಯ. ವಿಷ್ಣುಚಿತ್ತರು ಆಂಡಾಳ್ ದೇವಿಯ ಸಾಕುತಂದೆ. ತಮಿಳು ಭಾಷೆಯಲ್ಲಿ ಆಂಡಾಳನ್ನು ವರ್ಣಿಸಿರುವ 'ಶೂಡಿಕ್ಕೊಡುತ್ತ ನಾಚ್ಚಿಯಾರ್' ಎಂಬ ಅಭಿಧಾನಕ್ಕೆ 'ಆಮುಕ್ತಮಾಲ್ಯದಾ' ಎಂಬುದು ಸಮಾನಾರ್ಥಕವಾಗಿದೆ. ಭಗವಂತನನ್ನು ಪತಿಯನ್ನಾಗಿ ತಾನೇ ವರಿಸಿದಳು ಆಂಡಾಳ್. ಅವಳ ಇಚ್ಛಾನುಸಾರವಾಗಿ ವಿಷ್ಣುಚಿತ್ತರು ಅವಳನ್ನು ಭಗವಂತನಿಗೆ ವಧುವಾಗಿ ಅರ್ಪಿಸಿದರು. ಅವಳಿಗೆ ಭಗವಂತನಲ್ಲಿ ಗಾಢವಾದ ಪ್ರೇಮವಿತ್ತು. 'ತಾನು ಮುಡಿದು ತೆಗೆದ ಪೂಮಾಲೆಯನ್ನು ಭಗವಂತನಿಗೆ ಕೊಟ್ಟವಳು' ಎಂಬುದು 'ಆಮುಕ್ತಮಾಲ್ಯದಾ' ಎಂಬ ಶಬ್ದದ ಅರ್ಥ. ಆಂಡಾಳ್ ಕಥೆಯ ಸ್ವಾರಸ್ಯವಾದ ಘಟನೆಯನ್ನು ಇದು ಸೂಚಿಸುತ್ತದೆ. ತನ್ನ ತಂದೆ ದಿನ ದಿನವೂ ಹೂದೋಟದಿಂದ ಬಿಡಿಸಿ ತಂದ ಕುಸುಮಗಳನ್ನು ಸ್ಥಳೀಯ ದೇವಾಲಯದಲ್ಲಿನ ದೇವರಿಗೆ ಸಮರ್ಪಿಸಲು ಆಂಡಾಳ್ ಮಾಲೆ ಮಾಡುತ್ತಿದ್ದಳು. ಆ ಹೂಗಳನ್ನೆಲ್ಲಾ ಮಾಲೆಯಾಗಿ ಕಟ್ಟಿದ ಮೇಲೆ ಅದನ್ನು ತನ್ನ

ತಂದೆ ದೇವಾಲಯಕ್ಕೆ ತೆಗೆದುಕೊಂಡು ಹೋಗುವ ಮೊದಲು ತನ್ನ ಮುಡಿಯಲ್ಲಿ ಅದನ್ನು ಮುಡಿದುಕೊಂಡು ಕನ್ನಡಿಯಲ್ಲಿ ಪ್ರತಿಬಿಂಬವನ್ನು ತಾನು ನೋಡಿಕೊಳ್ಳುತ್ತಿದ್ದಳು. ತನ್ನ ಮುಡಿಯಲ್ಲಿ ಆ ಮಾಲೆ ಚಂದವಾಗಿರುವುದನ್ನು ಖಚಿತಪಡಿಸಿಕೊಂಡು ಭುವನಸುಂದರನಾದ ಭಗವಂತನಿಗೆ ಅದನ್ನು ಧರಿಸಿದಾಗಲೂ ಅದು ಸುಂದರವಾಗಿರುವುದೆಂದು ತಿಳಿದುಕೊಳ್ಳುತ್ತಿದ್ದಳು. ಆಕೆಯ ವಿಚಿತ್ರವಾದ ಈ ವರ್ತನೆಯನ್ನು ಅವರ ತಂದೆ ಒಂದು ದಿನ ನೋಡಿಬಿಟ್ಟರು. ದುರದೃಷ್ಟದ ಕಾರಣ ತನ್ನ ಮುಗ್ಧ ಬಾಲಿಕೆ ಆ ಅಪರಾಧಕ್ಕೊಳಗಾದಳೆಂದೂ ಅದು ಮಹದಪಚಾರವೆಂದೂ ಅವರು ಭಾವಿಸಿದರು. ಭಗವಂತನೇ ಅವರಿಗೆ ಕನಸಿನಲ್ಲಿ ಕಾಣಿಸಿಕೊಂಡು ಆಂಡಾಳ್ ಯಾವ ತಪ್ಪನ್ನೂ ಮಾಡಿಲ್ಲವೆಂದು ಸಮಾಧಾನಪಡಿಸಿದನು. ತನ್ನ ಪರಮ ಭಕ್ತೆಯಾದ ಆಂಡಾಳ್ ಮುಡಿದುಕೊಟ್ಟ ಪೂಮಾಲೆಯನ್ನೇ ತನ್ನ ಪೂಜೆಗಾಗಿ ಪ್ರತಿದಿನವೂ ತರಬೇಕೆಂದು ಅವರಿಗೆ ಭಗವಂತನು ಅಪ್ಪಣೆ ಮಾಡಿದನು. ಆಂಡಾಳ್ ಯಾವ ಮರ್ತ್ಯ ಪುರುಷನನ್ನೂ ಪತಿಯನ್ನಾಗಿ ವರಿಸಲು ನಿರಾಕರಿಸಿದಳು. ಅವಳು ತನ್ನ ಹೃದಯಾಂತರಂಗದಲ್ಲಿ ಭಗವಂತನನ್ನು ವರಿಸಿಬಿಟ್ಟಿದ್ದಳು. ದೈವಿಕವಾದ ಈ ವಿವಾಹವನ್ನು ಎಲ್ಲರೂ ಕಾಣುವಂತೆ ಆಚರಿಸಿ ತೋರಿಸಬೇಕಾಗಿತ್ತು. ಅದನ್ನೂ ಬಲು ಬೇಗ ನಿರ್ವಹಿಸಲಾಯಿತು. ವಧುವಿನ ಮೆರವಣಿಗೆ ಭಗವಂತನ ದಿವ್ಯವಾದ ದೇವಾಲಯದ ಕಡೆಗೆ ಹೊರಟಿತು. ಆಂಡಾಳಿಗೆ ವಧುವಿನ ಅಲಂಕಾರವನ್ನೆಲ್ಲಾ ಮಾಡಲಾಗಿತ್ತು. ಕೈಯಲ್ಲಿ ಪುಷ್ಪ ಮಾಲೆಯನ್ನು ಹಿಡಿದ ಆಂಡಾಳನ್ನು ವಿಷ್ಣುಚಿತ್ತರು ಹಾಗೂ ಆ ಊರಿನ ಮಹಾಜನರೆಲ್ಲರೂ ಆ ಊರಿನ ದೇವಾಲಯದ ಗರ್ಭಗೃಹಕ್ಕೆ ಮೆಲ್ಲಮೆಲ್ಲನೆ ಕರೆದೊಯ್ದರು. ನಯನಗಳಲ್ಲಿ ಆನಂದಬಾಷ್ಪಗಳು ಸುರಿಯುತ್ತಿರಲು ಪ್ರೇಮಗೀತಗಳನ್ನು ಬಾಯಲ್ಲಿ ಹೇಳುತ್ತಾ ಪವಿತ್ರಳಾದ ಆಂಡಾಳ್ ಪರಮ ಪವಿತ್ರನಾದ ಭಗವಂತನನ್ನು ಸೇರಿದಳು. ಆದಿಶೇಷನ ಮೇಲೆ ಪವಡಿಸಿದ್ದ ಶ್ರೀರಂಗನಾಥನಲ್ಲಿ ಅವಳು ನಿಜ ಶರೀರ ದೊಡನೆ ಐಕ್ಯವಾದಳು. ಭಗವಂತನು ಅವಳನ್ನು ತನ್ನ ವಧುವನ್ನಾಗಿ ಸ್ವೀಕರಿಸಿದನು. ಅವಳು ರಚಿಸಿದ 'ತಿರುಪ್ಪಾವೈ' ಮತ್ತು 'ನಾಯ್ಚಿಯಾರ್ ತಿರುಮೊಳಿ' ಎಂಬ ಕೃತಿಗಳು ಅವಳಿಗೆ ಭಗವಂತನಲ್ಲಿದ್ದ ಗಾಢವಾದ ಪ್ರೇಮವನ್ನು ತಿಳಿಸುತ್ತವೆ. ಅಗಾಧವಾದ ಆ ಭಕ್ತಿಯ ಮುಂದೆ ಮಾನವ ಪ್ರೇಮ ಒಂದು ತೋರಿಕೆಯೇ ಸರಿ.

ಈ ಮೇಲಿನ ಪದ್ಯಕಾವ್ಯಗಳಿಗೆ ಸ್ವಾಪದೇಶಾರ್ಥಗಳನ್ನು ವ್ಯಾಖ್ಯಾನ ಮಾಡಿರುವ ವ್ಯಾಖ್ಯಾಕಾರರು ರಾಮಾನುಜರ ಪರಮಪ್ರಿಯ ಸಿದ್ಧಾಂತವಾದ 'ಭಕ್ತಿ ರೂಪಾಪನ್ನಜ್ಞಾನ' ಅಥವಾ 'ಭಗವಂತನ ಅರಿವು ಆವನನ್ನು ಕುರಿತ ಪ್ರೇಮವಾಗಿ ಪರಿಪಕ್ವವಾಗುವುದನ್ನು' ಅವು ಪ್ರತಿಪಾದಿಸುವುವೆಂದು ಸಮರ್ಥಿಸಿದ್ದಾರೆ. ವಿಶಿಷ್ಟಾದ್ವೈತದರ್ಶನವನ್ನು ಉಪದೇಶಿಸಿ ರಾಮಾನುಜರು ನಮ್ಮ ದೇಶದ ಈಶ್ವರವಾದಕ್ಕೆ ಹೊಂದಿದಂತೆ ಭಗವಂತನ ಸ್ವರೂಪವನ್ನು ಅದ್ಭುತವಾಗಿ ನಿರೂಪಿಸಿದ್ದಾರೆ. ಇವರ ಮತದಲ್ಲಿ ಭಗವಂತನು ಭಕ್ತನನ್ನು ಪ್ರೇಮಿಸುವವನಾಗಿ, ಸೌಶೀಲ್ಯಯುಕ್ತನೂ ಪರಮ ಸುಂದರನೂ ಆಗಿ ಲಾವಣ್ಯ ಸಮುದ್ರನಾಗಿದ್ದಾನೆ. ಮನುಷ್ಯನು ಕಲ್ಪಿಸಲು ಸಾಧ್ಯವಾದ ಸಕಲ ಕಲ್ಯಾಣಗುಣಗಳಿಗೂ ಏಕಾಶ್ರಯನಾಗಿದ್ದಾನೆ. ರಾಮನಾಗಿ ಕೃಷ್ಣನಾಗಿ ಮೈದೋರಿದ ಈ ಭುವನ ಸುಂದರನಾದ ಭಗವಂತನ ಸಂಶ್ಲೇಷದಿಂದ ಆಂಡಾಳಿನ ಹಾಗೆ ಆಳ್ವಾರರುಗಳೂ ಪರಮಾನಂದ ಭರಿತರಾಗಿ ಮೈಮರೆತಿರುವುದು ಅಚ್ಚರಿಯೇನಲ್ಲ. ಆಳ್ವಾರರುಗಳು ತಮ್ಮ ಅಲೌಕಿಕವೂ ಅನಿರ್ವಚನೀಯವೂ ರಸಾತ್ಮಕವೂ ಆಧ್ಯಾತ್ಮಿಕವೂ ಆದ ಅನುಭವ ಸಾರಸರ್ವಸ್ವವನ್ನು ಇಲ್ಲಿ ಬಿಟ್ಟು ಹೋಗಿದ್ದಾರೆ. ಇವು ಶ್ರೀವೈಷ್ಣವಪಂಥದ ಕವಿಗಳಿಗೂ ದಾರ್ಶನಿಕರಿಗೂ ತತ್ವಬೋಧೆಯನ್ನು ಪರಮಾನಂದವನ್ನು ಉಂಟುಮಾಡುವ ಆಧಾರಗಳಾಗಿ ಉಳಿದು ಬಂದಿವೆ.

ಕೃಷ್ಣದೇವರಾಯನು ಸರ್ವಾತ್ಮನಾ ವಿಶಿಷ್ಟಾದ್ವೈತ ಮಾರ್ಗವನ್ನನುಸರಿಸುವ ವೈಷ್ಣವ ಭಕ್ತನಾಗಿದ್ದನು. ಆದರೂ ಬಹಳ ಹೆಚ್ಚಿನ ಮಟ್ಟದ ಧಾರ್ಮಿಕ ಸಹಿಷ್ಣುತೆಯ ಮನೋಭಾವವನ್ನು

ಹೊಂದಿದ್ದ ಸಾರ್ವಭೌಮನಾಗಿದ್ದನು. ಬೇರೆ ಬೇರೆ ಮತಗಳನ್ನೂ ದರ್ಶನ ಪದ್ಧತಿಗಳನ್ನೂ ಅನುಸರಿಸು ವವರಲ್ಲಿ ಯಾವ ಭೇದವನ್ನೂ ಚಕ್ರವರ್ತಿಯಾದ ಅವನು ಕಾಣುತ್ತಿರಲಿಲ್ಲ. ಈ ವಿಷಯದಲ್ಲಿ ಆತನನ್ನು ನೋಡಿದರೆ ಅಶೋಕನ ನೆನಪು ಬರುತ್ತದೆ. ಅವನ ಹಿಂದೆ ರಾಜ್ಯವಾಳಿದ ಒಂದನೆಯ ಬುಕ್ಕಮಹಾರಾಜನೂ ಇದೇ ರೀತಿಯ ಮನೋಭಾವವನ್ನು ಪ್ರದರ್ಶಿಸಿದ್ದನು. 'ಧರ್ಮದ್ವೇಷಕ್ಕೆ ಅವಕಾಶವನ್ನೇ ಒದಗಿಸದ ಪರಿಸ್ಥಿತಿಗಳಲ್ಲಿ ವಿಜಯನಗರ ಸಾಮ್ರಾಜ್ಯದ ಸಂಸ್ಥಾಪನೆಯಾಯಿತು' ಎಂದು ಡಾ. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ಯರವರು ಹೇಳುತ್ತಾರೆ (Early History of Vaishnavism in South India P. 96). ಈ ವಿಜಯನಗರ ಸಾಮ್ರಾಜ್ಯದ ಸುವರ್ಣಯುಗ ಒಂದುಕಡೆ ದ್ವೈತಾದ್ವೈತ ವಿಶಿಷ್ಟಾದ್ವೈತಗಳ ಶೈವವೈಷ್ಣವ ಪಂಥಗಳ ಹಾಗೂ ಮತ್ತೊಂದು ಕಡೆ ಜೈನ ಧರ್ಮದ ಸ್ನೇಹಯುಕ್ತವಾದ ಸಹಬಾಳ್ವೆಯ ಯುಗವಾಗಿತ್ತೆಂಬುದು ಗಮನಾರ್ಹವಾದ ಮುಖ್ಯಾಂಶವಾಗಿದೆ. ಇದೇ ಕಾಲದಲ್ಲಿಯೇ 'ಕವಿತಾರ್ಕಿಕ ಸಿಂಹ' ಎಂದು ಪ್ರಸಿದ್ಧರಾದ ವೇದಾಂತದೇಶಿಕರು ವಿಶಿಷ್ಟಾದ್ವೈತ ಸಿದ್ಧಾಂತದ ಪ್ರಬಲ ಪ್ರವರ್ತಕ ರಾಗಿದ್ದರು. ವೇದಾಂತದೇಶಿಕರ ಯಾದವಾಭ್ಯುದಯಕ್ಕೆ ಸಂಸ್ಕೃತದಲ್ಲಿ ವ್ಯಾಖ್ಯಾನ ಬರೆದ ಸುಪ್ರಸಿದ್ಧ ಅದ್ವೈತ ವಿದ್ವಾಂಸರಾದ ಅಪ್ಪಯ್ಯದೀಕ್ಷಿತರು ಇವರನ್ನು ಕವಿತಾರ್ಕಿಕಸಿಂಹರೆಂದು ಕೊಂಡಾಡಿದ್ದಾರೆ. ದ್ವೈತಸಿದ್ಧಾಂತದ ಪ್ರವರ್ತಕರಲ್ಲಿ, ದಾರ್ಶನಿಕರಲ್ಲಿ ಬಹಳ ಪ್ರಸಿದ್ಧರಾದ ವ್ಯಾಸತೀರ್ಥರೂ ಈ ಕಾಲ ದಲ್ಲಿಯೇ ಇದ್ದವರು. ಪುರಂದರದಾಸರು ಮತ್ತು ಕನಕದಾಸರಂತೆ ದಾಸಪಂಥಕ್ಕೆ ಸೇರಿದ ಅನೇಕ ಹರಿದಾಸರೂ ಈ ಕಾಲದಲ್ಲಿದ್ದರು. ಈ ದಾರ್ಶನಿಕರ ಪವಿತ್ರ ಮಾರ್ಗದರ್ಶನದಲ್ಲಿ ವಿಜಯನಗರದ ರಾಜರುಗಳು ಅತ್ಯತಿಶಯವಾಗಿ ಶಕ್ತಿವಂತರಾದರು.

ವಿದ್ಯಾರಣ್ಯರು ಭಾರತೀಯ ದರ್ಶನಗಳೆಲ್ಲವನ್ನೂ ವಿವೇಚಿಸುವ 'ಸರ್ವದರ್ಶನ ಸಂಗ್ರಹ'ವೆಂಬ ಕೃತಿಯೊಂದನ್ನು ರಚಿಸಿದರು. ಈ ಕೃತಿಯಲ್ಲಿ ಅವರು ರಾಮಾನುಜ ದರ್ಶನಕ್ಕೂ ಒಂದು ಅಧ್ಯಾಯ ವನ್ನು ಮೀಸಲಾಗಿಟ್ಟಿದ್ದಾರೆ. ರಾಮಾನುಜರ ವಿಶಿಷ್ಟಾದ್ವೈತವನ್ನು ಕೆಳಗಿನ ಶ್ಲೋಕದಲ್ಲಿ ಅವರು ಸಂಗ್ರಹಿಸಿದ್ದಾರೆ.

> ವಾಸುದೇವಃ ಪರಂಬ್ರಹ್ಮ ಕಲ್ಯಾಣಗುಣ ಸಂಯುತಃ ।
> ಭುವನಾನಾಮುಪಾದಾನಂ ಕರ್ತಾ ಜೀವನಿಯಾಮಕಃ॥

'ವಾಸುದೇವನೇ ಪರಬ್ರಹ್ಮವಸ್ತು. ಅಸಂಖ್ಯವಾದ ಮಂಗಳ ಗುಣಗಣಗಳನ್ನವನು ಹೊಂದಿ ದ್ದಾನೆ. ಸಕಲಲೋಕಗಳಿಗೂ ಅವನೇ ಉಪಾದಾನಕಾರಣ ಮತ್ತು ನಿಮಿತ್ತ ಕಾರಣ. ಸಕಲ ಜೀವರು ಗಳಿಗೂ ಅವನೇ ನಿಯಾಮಕ.'

ಇನ್ನು 'ಪರಮಕಾರುಣಿಕ' ಮತ್ತು 'ಭಕ್ತವತ್ಸಲ' ಎಂಬ ಗುಣಗಳನ್ನು ಅವರು ಉಲ್ಲೇಖಿಸುತ್ತಾರೆ. ಅವನೇ ಪರಮಪುರುಷ. ಆದರೂ ಭಕ್ತರಿಗೆ ಅವನು ಪರಮಸುಲಭನು. ಭಕ್ತರಿಗಾಗಿ ಅವನು ಅನೇಕ ಅವತಾರಗಳನ್ನು ಹೊಂದುತ್ತಾನೆ. ಚೈತನ್ಯವಿಲ್ಲದ ಶಿಲಾದಾರುಮಯವಾದ ಆದರೆ ಪೂಜಾರ್ಹವಾದ ವಿಗ್ರಹಗಳ ರೂಪದಲ್ಲಿ ಅರ್ಚಾವತಾರವನ್ನೂ ಅವನು ತನ್ನ ಭಕ್ತರಿಗಾಗಿ ಪಡೆಯುತ್ತಾನೆ.

ವೇದಾಂತದೇಶಿಕರೂ ವಿದ್ಯಾರಣ್ಯರೂ ಪರಮಮಿತ್ರರಾಗಿದ್ದರು. ಬೇರೆ ಬೇರೆ ದರ್ಶನಗಳನ್ನವರು ಅನುಸರಿಸುತ್ತಿದ್ದುದು ಅವರ ಬೌದ್ಧಿಕ ಮೈತ್ರಿಗಾಗಲೀ ಪರಸ್ಪರ ಗೌರವವನ್ನು ತೋರುವುದರಲ್ಲಾಗಲೀ ಅಡ್ಡಿಬರಲಿಲ್ಲ. ಮುಸ್ಲಿಮರ ಹಾವಳಿಯಿಂದ ಪಾರಾಗಲು ಕೆಲಕಾಲ ಶ್ರೀರಂಗದಿಂದ ದೂರವಾಗಿ ಬಂದ ದೇಶಿಕರು ವಿಜಯನಗರದ ಸೈನ್ಯ ಶ್ರೀರಂಗವನ್ನು ಮುಸ್ಲಿಮರ ಹಿಡಿತದಿಂದ ಬಿಡಿಸಿದುದನ್ನು ಕೇಳಿದ

ಮೇಲೆ ಮತ್ತೆ ಅಲ್ಲಿಗೇ ಹಿಂದಿರುಗಿದರು. ವಿಜಯನಗರ ಚಕ್ರವರ್ತಿಗಳ ಸಾಮಂತರಲ್ಲಿ ಒಬ್ಬನಾದ ಗೊಪ್ಪಣಾರ್ಯನು ತನ್ನ ಪ್ರಯತ್ನಗಳಿಂದ ಶ್ರೀರಂಗನಾಥನ ಉತ್ಸವ ಮೂರ್ತಿಯನ್ನು ಮತ್ತೆ ಅಲ್ಲಿಯೇ ಪ್ರತಿಷ್ಠೆ ಮಾಡಿಸಿದನು.

ವೇದಾಂತ ದೇಶಿಕರ ಬಡತನವನ್ನು ಕಂಡು ನೊಂದ ವಿದ್ಯಾರಣ್ಯರು ತಮ್ಮ ಮಿತ್ರರಾದ ಅವರಿಗೆ ರಾಜಾಸ್ಥಾನದ ವಿದ್ವಾಂಸರಾಗಿ ಬರಬೇಕೆಂಬ ಆಹ್ವಾನವನ್ನೆ ಕಳುಹಿಸಿಕೊಟ್ಟರು. ತಾವು ಬಹಳ ಆಪ್ತ ಮಿತ್ರರಾಗಿದ್ದರೂ ದೇಶಿಕರು ವಿನಯಪೂರ್ವಕವಾಗಿ ಆ ಆಹ್ವಾನವನ್ನು ನಿರಾಕರಿಸಿದರು. ತಮ್ಮ ಬಡತನದಲ್ಲಿಯೇ ಅವರಿಗೆ ಸಂತೃಪ್ತಿ ಇತ್ತು. ಕುಲಧನವಾಗಿ ತಮ್ಮ ಕರಗತವಾಗಿದ್ದ ಶ್ರೀನಿಧಿಯಿಂದ ತಾವು ಶ್ರೀಮಂತರೆಂದೇ ಅವರು ಭಾವಿಸಿದ್ದರು. ತೆಂಗಲೈಪರಂಪರೆಯ ಹಿರಿಯ ಆಚಾರ್ಯರಾಗಿದ್ದ ಪಿಳ್ಳೈಲೋಕಾಚಾರ್ಯರು ದೇಶಿಕರಿಗಿಂತ ಹಿರಿಯರಾಗಿ ಅವರ ಸಮಕಾಲೀನರಾಗಿದ್ದರು. ಅವರು ದೇಶಿಕರನ್ನು ಶ್ಲಾಘಿಸಿ ಪ್ರೀತಿಸುತ್ತಿದ್ದರು.

ವಿಶಿಷ್ಟಾದ್ವೈತ ಶ್ರೀವೈಷ್ಣವಧರ್ಮ ಎರಡು ಕವಲುಗಳಾಗಿ ಒಡೆದುದು ಈ ಕಾಲದಲ್ಲಿಯೇ. ತೆಂಗಲೈ ಮತ್ತೆ ವಡಗಲೈ ಎಂಬ ಹೆಸರುಗಳುಳ್ಳ ಎರಡು ಕಲೆಗಳು ಈ ಧರ್ಮದಲ್ಲಿ ತಲೆದೋರಿದವು. ವಡಗಲೈ ಎಂದರೆ ಉತ್ತರದ ಶಾಖೆ ಎಂದರ್ಥ. ತೆಂಗಲೈ ಎಂಬುದು ದಕ್ಷಿಣ ಭಾಗದ ಶಾಖೆ. ವಡಗಲೆಯವರು ಸಂಸ್ಕೃತ ಪ್ರಮಾಣ ಗ್ರಂಥಗಳಿಗೆ ಪ್ರಾಧಾನ್ಯಕೊಡುತ್ತಿದ್ದುದರಿಂದಲೂ ಹಾಗೆಯೇ ತೆಂಗಲೆಯವರು ದ್ರಾವಿಡ ಪ್ರಬಂಧಗಳಿಗೆ ಹೆಚ್ಚು ಪ್ರಾಧಾನ್ಯಕೊಡುತ್ತಿದ್ದುದರಿಂದಲೂ ಈ ವಿಭಾಗ ಪ್ರಾಯಶಃ ಬಂದಿರಬಹುದೆಂದು ತೋರುತ್ತದೆ. ತೆಂಗಲೈ ಶಾಖೆ ವರ್ಣಾಶ್ರಮ ಧರ್ಮ ನಿಯಮಗಳನ್ನು ಸಡಿಲಗೊಳಿಸುವ ಮನೋಭಾವ ಹೊಂದಿತ್ತು. ಆದರೆ ವಡಗಲೈ ಶಾಖೆ ವರ್ಣಾಶ್ರಮ ಧರ್ಮಗಳನ್ನು ವಿಧಿಸುವ ಪುರಾತನ ನಿಯಮಗಳನ್ನು ಸಡಿಲಗೊಳಿಸಲಿಚ್ಛಿಸಲಿಲ್ಲ.

ಇವೆರಡು ಶಾಖೆಗಳಿಗಿರುವ ಅನೇಕಾನೇಕ ಭೇದಗಳನ್ನು ನಿರೂಪಿಸಲಾಗಿದೆ. ವಡಗಲೈ ಶಾಖೆಯ ಪ್ರಧಾನ ಪ್ರವರ್ತಕರು ವೇದಾಂತದೇಶಿಕರು. ಪಿಳ್ಳೈಲೋಕಾಚಾಯರು ಮತ್ತು ಮಣವಾಳ ಮಹಾ ಮುನಿಗಳು ತೆಂಗಲೈ ಶಾಖೆಯ ಮುಖ್ಯ ಪ್ರವರ್ತಕರಾಗಿದ್ದಾರೆ. ಇವೆರಡು ಶಾಖೆಗಳಲ್ಲಿನ ಅತಿ ಮುಖ್ಯವಾದ ಭಿನ್ನಾಭಿಪ್ರಾಯ ಭಗವದ್ದಯೆಯನ್ನು ಕುರಿತದ್ದಾಗಿದೆ. ಭಗವಂತನ ದಯೆಯನ್ನು ಸಂಪಾದಿಸಿಕೊಳ್ಳಲು ಪುರುಷಪ್ರಯತ್ನ ಅತ್ಯಾವಶ್ಯಕವೆಂಬುದು ವಡಗಲೆಯವರ ಸಿದ್ಧಾಂತ. ಆದರೆ ತೆಂಗಲೆಯವರು ಪುರುಷಪ್ರಯತ್ನಕ್ಕೆ ಬೆಲೆಯೇ ಇಲ್ಲವೆಂದು ಭಗವಂತನ ದಯೆ ಸಹಜವೂ ಅನಿವಾರ್ಯವೂ ಆಗಿರುವುದು ಇದಕ್ಕೆ ಕಾರಣವೆಂದೂ ಹೇಳಿ 'ನಿರ್ಹೇತುಕ ಕೃಪೆಯ' ಸಿದ್ಧಾಂತವನ್ನು ಪ್ರತಿಪಾದಿಸುತ್ತಾರೆ. 'ಮರ್ಕಟಕಿಶೋರನ್ಯಾಯ' ಮೊದಲನೆಯದಕ್ಕೂ 'ಮಾರ್ಜಾರಕಿಶೋರನ್ಯಾಯ' ಎರಡನೆಯ ಸಿದ್ಧಾಂತಕ್ಕೂ ಅನ್ವಯಿಸುತ್ತದೆ. ತನ್ನ ತಾಯಿ ತನ್ನನ್ನು ಬೇರೆಡೆಗೆ ಎತ್ತಿಕೊಂಡು ಹೋಗುವಾಗ ಹೇಗೆ ಕಪಿಯ ಮರಿ ಸ್ವಪ್ರಯತ್ನದಿಂದ ತನ್ನ ತಾಯಿಯನ್ನು ಅಪ್ಪಿ ಹಿಡಿದುಕೊಳ್ಳುವುದೋ ಹಾಗೆ ಮಾನವನು ಭಗವಂತನ ದಯೆಯನ್ನು ಹರಿಯಿಸಲು ಸ್ವಪ್ರಯತ್ನವನ್ನು ಮಾಡಬೇಕೆಂದು ಇದು ತಿಳಿಸುತ್ತದೆ. ಮತ್ತೊಂದು ನಿದರ್ಶನ ಬೆಕ್ಕಿಗೂ ಅದರ ಮರಿಗೂ ಅನ್ವಯಿಸುತ್ತದೆ. ಬೆಕ್ಕಿನ ಮರಿ ಯಾವ ಪ್ರಯತ್ನವನ್ನೂ ಮಾಡುವುದಿಲ್ಲ. ತನ್ನ ತಾಯಿ ತನ್ನನ್ನು ಕಚ್ಚಿಕೊಂಡು ಹೋಗುವುದರಲ್ಲಿಯೇ ತೃಪ್ತಿಪಟ್ಟುಕೊಳ್ಳುತ್ತದೆ. ತಾಯಿ ಬೆಕ್ಕೇ ಮರಿಗಾಗಿ ಎಲ್ಲಾ ಪ್ರಯತ್ನವನ್ನೂ ಮಾಡುತ್ತದೆ. ಹಾಗೆಯೇ ಭಗವಂತನ ದಯೆ ಸಹಜವಾದುದು, ನಿರ್ಹೇತುಕವಾದುದು. ಅವನೇ ಎಲ್ಲವನ್ನೂ ಮಾಡುತ್ತಾನೆ. ಪ್ರೇರಣೆಯೂ ಅವನಿಂದಲೇ ಬರುತ್ತದೆ. ಅವನ ದಯೆ ಸಹಜವಾಗಿ ಯಾವ ನಿರ್ಬಂಧಕ್ಕಾಗಲೀ ಕೋರಿಕೆಗಾಗಲೀ ಒಳಪಡದೆ ನಮ್ಮ ಮೇಲೆ ಆಕಾಶದಿಂದ ಸುರಿಯುವ ಮಳೆಯಂತೆ ವರ್ಷಿಸುತ್ತದೆ.

ಈ ಎರಡು ಶಾಖೆಗಳವರಲ್ಲಿರುವ ಇತರ ಭಿನ್ನಾಂಶಗಳು ಅಷ್ಟು ಮುಖ್ಯವಾದವಲ್ಲ. ಆ ಕಾಲದಲ್ಲಿ ವೈಷ್ಣವ ಧರ್ಮ ಮತ್ತು ಜೈನ ಧರ್ಮಗಳು ಒಂದರ ಮೇಲೊಂದು ಅಮಿತವಾದ ಪ್ರಭಾವವನ್ನು ಬೀರಿದವು. ಇವೆರಡು ಧರ್ಮಗಳೂ ಅಹಿಂಸೆಯನ್ನು ಕಠಿನವಾಗಿ ಪರಿಪಾಲಿಸುತ್ತಿರುವುದು ಈ ಅಂಶಕ್ಕೆ ಸಾಕ್ಷಿಯಾಗಿದೆ.

ಅಳಿಯ ರಾಮರಾಯನ ಆಳಿಕೆಯಲ್ಲಿ ಶ್ರೀ ವೈಷ್ಣವ ಧರ್ಮ ಬಹಳ ಹೆಚ್ಚಿನ ಮಟ್ಟದಲ್ಲಿ ರಾಜಾಶ್ರಯ ಪಡೆಯಿತು. ರಾಯನು ಅನೇಕ ಸುಪ್ರಸಿದ್ಧ ವೈಷ್ಣವ ವಿದ್ವಾಂಸರನ್ನು ಸನ್ಮಾನಿಸಿದನು. ಇವರಲ್ಲಿ ತಾಲ್ಲಪಾಕಂ ತಿರುವೇಂಗಡನಾಥರು ಒಬ್ಬರು. ಸುಪ್ರಸಿದ್ಧವಾಗ್ಗೇಯಕಾರರಾದ ಅಣ್ಣಮಾಚಾರ್ಯರು ಇವರ ವಂಶದವರು. ಅಣ್ಣಮಾಚಾರ್ಯರು ವೇಂಕಟೇಶ್ವರಸ್ವಾಮಿಯನ್ನು ಸ್ತುತಿಸಿ, ತಾಮ್ರಫಲಕಗಳ ಮೇಲೆ ಬರೆದ ಗೀತೆಗಳು ಈಗಲೂ ಉಪಲಬ್ಧವಾಗಿವೆ; ಹಾಗೂ ಈಚೆಗೆ ಪ್ರಕಟವಾಗಿವೆ. ಹಾಗೆಯೇ ರಾಮಾನುಜರ ಶ್ರೀ ಭಾಷ್ಯವನ್ನುಪದೇಶಿಸುವುದರಲ್ಲಿ ಪ್ರಸಿದ್ಧ ವಿದ್ವಾಂಸರೆನಿಸಿದವರೂ ಅನಂತರಾಯರ ಸುತರೂ ಆದ ಆಚಾರಯ್ಯನವರನ್ನು ಸದಾಶಿವರಾಯನು ಸನ್ಮಾನಿಸಿದನು. ತಾತಾಚಾರ್ಯರ ವಂಶದವರಾದ ಲಕ್ಷ್ಮೀಕುಮಾರ ತಾತಾಚಾರ್ಯರು ಮತ್ತು ಕೋಟಿ ಕನ್ಯಾದಾನಂ ತಾತಾಚಾರ್ಯರು (ಮೊದಲನೆಯ ವೆಂಕಟನ ಗುರು) ಸಹ, ಮುಂದಿನ ವಿಜಯನಗರ ರಾಜರುಗಳ ಆಳಿಕೆಯಲ್ಲಿ ರಾಜಸನ್ಮಾನ ಪಡೆದರು. ತೆಲುಗು ರಾಜ್ಯದ ರಾಜರುಗಳಲ್ಲಿ ರಾಮಾನುಜ ಸಿದ್ಧಾಂತವನ್ನುಪದೇಶಿಸಿ ಪ್ರಚಾರಕ್ಕೆ ತರಲು ಯತ್ನಿಸಿದ ಇನ್ನೂ ಅನೇಕಾನೇಕ ಶ್ರೀವೈಷ್ಣವಾಚಾರ್ಯರುಗಳು ಆ ಕಾಲದಲ್ಲಿದ್ದರೆಂದು ಕಂಡುಬರುತ್ತದೆ. ರಾಮರಾಯನ ಮರಣಾನಂತರದ ಮುಂದಿನ ಅರ್ಧಶತಮಾನದಲ್ಲಿ ಶ್ರೀವೈಷ್ಣವಧರ್ಮ ದಕ್ಷಿಣಭಾರತದ ಪ್ರಧಾನಧರ್ಮವಾಗಿ ಅನೇಕಾನೇಕ ವರ್ಗಗಳಲ್ಲಿ ವಿರಾಜಿಸಿತ್ತು (Mysore Gazetter, Hayavadana Rao Vol II, Part III. P.210). ಚಂದ್ರಗಿರಿಗೆ ರಾಜಧಾನಿಯನ್ನು ಬದಲಾಯಿಸಿದ ಮೇಲೆ ತಿರುಪತಿಯು ಶ್ರೀವೈಷ್ಣವರ ಕೇಂದ್ರವಾಗಿ ಪ್ರಾಧಾನ್ಯ ಹೊಂದಿತು ಹಾಗೂ ಶ್ರೀವೇಂಕಟೇಶ್ವರ ಸ್ವಾಮಿ ಆಳರಸರನ್ನು ಕಾಪಾಡುವ ರಕ್ಷಕ ದೈವವಾದನು.

ಮೂಲ ಲೇಖಕರು : ಶ್ರೀ ಎಂ. ಯಾಮುನಾಚಾರ್ಯ
ಅನುವಾದಕರು : ಶ್ರೀ ಎನ್. ಎಸ್. ಅನಂತರಂಗಾಚಾರ್ಯ

# ದ್ವೈತ

ಶ್ರೀ ಮಧ್ವಾಚಾರ್ಯರ ಧರ್ಮಪ್ರಸಾರಣ ಕಾರ್ಯವನ್ನು ಮುಂದಿನ ಶತಮಾನಗಳಲ್ಲಿ ಭರದಿಂದ ಮುಂದುವರಿಸಲಾಯಿತು. ಆಚಾರ್ಯರ ಸಾಕ್ಷಾತ್ ಶಿಷ್ಯರಾದ ಪದ್ಮನಾಭತೀರ್ಥ, ನರಹರಿತೀರ್ಥ, ಮಾಧವತೀರ್ಥ, ಅಕ್ಷೋಭ್ಯತೀರ್ಥ–ಈ ನಾಲ್ವರು ಅವರ ಉಪದೇಶವನ್ನು ಎಲ್ಲ ಕಡೆಗಳಲ್ಲಿಯೂ ಹರಡಿದರು. ದ್ವೈತಸಿದ್ಧಾಂತದ ಪ್ರತಿಪಾದನೆಯಲ್ಲಿ ಅತ್ಯಂತ ಪ್ರಬಲ ಪಾತ್ರವಹಿಸಿದವರೆಂದರೆ ಶ್ರೀ ಜಯತೀರ್ಥರು. ಅವರು ಆ ಸಿದ್ಧಾಂತವನ್ನು ಶಾಸ್ತ್ರೀಯ ವಿಶ್ಲೇಷಣೆ ಹಾಗೂ ವಿವರಣೆಗಳಿಂದ ವ್ಯಾಖ್ಯಾನಿಸಿದರು. ಶ್ರೀ ಜಯತೀರ್ಥರು ಅಕ್ಷೋಭ್ಯತೀರ್ಥರ ಶಿಷ್ಯರು. ಅವರಿಬ್ಬರೂ ಶ್ರೀ ವಿದ್ಯಾರಣ್ಯರ ಸಮಕಾಲೀನರು. ಶ್ರೀ ಜಯತೀರ್ಥರ 'ನ್ಯಾಯ ಸುಧಾ' ಎಂಬ ಬೃಹದ್ಗ್ರಂಥದಲ್ಲಿ ಷಡ್ದರ್ಶನಗಳನ್ನು ವಿಮರ್ಶಾತ್ಮಕವಾಗಿ ಸಮಾಲೋಚಿಸಿ ದ್ವೈತ ಸಿದ್ಧಾಂತದ ಸತ್ಯತೆಯನ್ನು ಪ್ರತಿಪಾದಿಸಲಾಗಿದೆ. ಶ್ರೀ ಮಧ್ವರ ಬಹುತೇಕ ಎಲ್ಲ ಗ್ರಂಥಗಳಿಗೂ ಅವರು ವ್ಯಾಖ್ಯಾನಗಳನ್ನು ರಚಿಸಿದ್ದಾರೆ. ಆ ಕಾರಣ 'ಟೀಕಾಚಾರ್ಯ'ರೆಂದು ಅವರನ್ನು ಕರೆದಿರುವುದು ಯೋಗ್ಯವೇ ಸರಿ. ಆ ಯುಗದ ಘನವಿದ್ವಾಂಸರೆನಿಸಿದ ವಿದ್ಯಾರಣ್ಯರು ಶ್ರೀ ಜಯತೀರ್ಥರ ವಿದ್ವತ್ಪೂರ್ಣವಾದ ವ್ಯಾಖ್ಯಾನಗಳನ್ನು ಕಂಡು ಮಹದಾನಂದಭರಿತರಾಗಿ ಅವರಿಗೆ ಅಪಾರ ರಾಜಸನ್ಮಾನಗಳನ್ನು ಮಾಡಿದರೆಂಬ ವಿಷಯವು ಜಯತೀರ್ಥರ ಜೀವನಚರಿತ್ರೆಯಲ್ಲಿ ನಿರೂಪಿತವಾಗಿದೆ. ವಿಜಯನಗರದ ಸಂಗಮವಂಶದ ಆಳಿಕೆಯ ಬಳಿಕ, ಸಾಳುವರು ಹಾಗೂ ತುಳುವರು ವಿಜಯನಗರದ ಸಿಂಹಾಸನಕ್ಕೆ ಉತ್ತರಾಧಿಕಾರಿಗಳಾದರು. ಅವರ ಆಳಿಕೆಯ ಕಾಲದಲ್ಲಿ ಮಹಾ ಪೀಠಾಧಿಪತಿಯೂ ತತ್ವಜ್ಞಾನಿಯೂ ಆದ ಶ್ರೀ ವ್ಯಾಸತೀರ್ಥರ (1447-1539) ನೇತೃತ್ವದಲ್ಲಿ ಉತ್ತರ ಪ್ರದೇಶ ಹಾಗೂ ಬಂಗಾಳದ ವರೆಗೂ ಎಲ್ಲೆಲ್ಲೂ ದ್ವೈತಸಿದ್ಧಾಂತ ವ್ಯಾಪಿಸಿತು. ಆ ಎರಡು ಮನೆತನಗಳ ರಾಜರಿಗೆ ಎಂದರೆ ಸಾಳ್ವ ನರಸಿಂಹ, ವೀರನರಸಿಂಹ, ಕೃಷ್ಣದೇವರಾಯ ಹಾಗೂ ಅಚ್ಯುತ ದೇವರಾಯ—ಇವರಿಗೆ ವ್ಯಾಸತೀರ್ಥರು ರಾಜಗುರುವಾಗಿದ್ದರು. ಕ್ರಿ.ಶ. 1480ರಿಂದ 1539ರ ವರೆಗಿನ ದೀರ್ಘಾವಧಿಯಲ್ಲಿ ಅವರು ವಿದ್ವತ್ಪೂರ್ಣವಾದ ವಾಗ್ವಾದ, ಮೂಲ ಗ್ರಂಥರಚನೆ, ಹಾಗೂ ಶಿಷ್ಯರಿಗೆ ಶಾಸ್ತ್ರಾಭ್ಯಾಸಗಳ ಬೋಧನೆ—ಇವುಗಳ ಮೂಲಕ ಶ್ರೀಮಧ್ವರ ಧರ್ಮಪ್ರಸಾರ ಕಾರ್ಯವನ್ನು ಮುಂದುವರಿಸಿದರು. ಅವರ ಶಿಷ್ಯರಲ್ಲಿ ವಿಜಯೀಂದ್ರ, ವಾದಿರಾಜ ಮತ್ತು ಪುರಂದರದಾಸರು ಬಹು ಪ್ರಖ್ಯಾತರಾದವರು. ವ್ಯಾಸತೀರ್ಥರು ಹಂಪೆ ಅಥವಾ ವಿಜಯನಗರದಲ್ಲಿನ ಒಂದು ವಿಶ್ವವಿದ್ಯಾನಿಲಯದಂತಿದ್ದ ಪೀಠವೊಂದರ ಪೂಜ್ಯ ಗುರುವಾಗಿದ್ದರೆನ್ನಬಹುದು. ದೇಶದ ಎಲ್ಲ ಭಾಗಗಳಿಂದಲೂ ಅಸಂಖ್ಯಾತವಾಗಿ ವಿದ್ಯಾರ್ಥಿಗಳೂ ವಿದ್ವಾಂಸರೂ ಅಲ್ಲಿಗೆ ಬರುತ್ತಿದ್ದರು. ಅವರು ರಚಿಸಿರುವ 'ನ್ಯಾಯಾಮೃತ' 'ತರ್ಕತಾಂಡವ' ಮತ್ತು 'ತಾತ್ಪರ್ಯಚಂದ್ರಿಕಾ' ಎಂಬ ಮೂರು ಗ್ರಂಥಗಳು ದ್ವೈತಸಿದ್ಧಾಂತದಲ್ಲಿನ ಸಮಸ್ತ ತಾತ್ತ್ವಿಕ ವಿಚಾರಪ್ರಪಂಚವನ್ನೇ ಒಳಗೊಂಡು ಇಂದಿಗೂ ಅವರ ಜ್ಞಾನ ಹಾಗೂ ಪಾಂಡಿತ್ಯವನ್ನು ನೆನಪಿಗೆ ತಂದುಕೊಡುವ ಸ್ಮಾರಕ ಕೃತಿಗಳಾಗಿವೆ. ವಲ್ಲಭಾಚಾರ್ಯರ ಅಧ್ಯಕ್ಷತೆಯಲ್ಲಿ ಕೃಷ್ಣದೇವರಾಯನ ಆಸ್ಥಾನದಲ್ಲಿ ನಡೆದ ತೀವ್ರ ಚರ್ಚೆಯೊಂದರಲ್ಲಿ ಶ್ರೀ ವ್ಯಾಸತೀರ್ಥರು ದ್ವೈತದರ್ಶನದ ಪಾರಮ್ಯವನ್ನು ಸ್ಥಾಪಿಸಿದರೆಂದು ಹೇಳಲಾಗಿದೆ. ಅವರು ಕೆಳಗಿನ ವೃತ್ತದಲ್ಲಿ ಆ ದರ್ಶನದ ಸೂತ್ರಗಳನ್ನು ಸಂಗ್ರಹಿಸಿರುವರು.

ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ವತೋ
ಭೇದೋ ಜೀವಗಣಾ ಹರೇರನುಚರಾಃ ನೀಚೋಚ್ಚ ಭಾವಂಗತಾಃ
ಮುಕ್ತಿರ್ನೈಜ ಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿತ್ರಿತಯಂ ಪ್ರಮಾಣಮ ಖಿಲಾಮ್ನಾಯೈಕ ವೇದ್ಯೋ ಹರಿಃ

" ಭವ್ಯವಾದ ಮಧ್ವದರ್ಶನದಲ್ಲಿ ಹರಿಯೇ ಪರಮೋಚ್ಚ ದೈವ; ಜಗತ್ತು ತತ್ತ್ವತಃ ಸತ್ಯವಾದುದು; ಭೇದಗಳು ಸತ್ಯವಾದುವು. ಎಲ್ಲ ಜೀವಗಳೂ ಹರಿಯನ್ನೇ ಆಶ್ರಯಿಸಿವೆ. ಅವು ಅಸಂಖ್ಯಾತವಾದ ಉಚ್ಚನೀಚಭಾವಗಳಿಂದ ಕೂಡಿವೆ. ನೈಜಸುಖಾನುಭೂತಿಯಲ್ಲಿಯೇ ಜೀವನ ಮುಕ್ತಿಯಿದೆ. ನಿರ್ಮಲವಾದ ಹರಿಭಕ್ತಿಯೇ ಆ ಮುಕ್ತಿಯ ಸಾಧನ. ಸಪ್ರಮಾಣವಾದ ಜ್ಞಾನದ ಪ್ರಮಾಣಗಳು ಮೂರು ವಿಧವಾದವು: ಪ್ರತ್ಯಕ್ಷ, ಅನುಮಾನ ಮತ್ತು ಆಗಮ ಎಂದು. ಹರಿಯ ಪರಿಪೂರ್ಣಜ್ಞಾನವನ್ನು ಪಡೆಯಲು ವೇದಗಳ ಮೂಲಕವೇ ಸಾಧ್ಯ." ವಿಷಯಗಳ ಈ ಪ್ರಸ್ತಾಪ ಪ್ರಾಸಂಗಿಕವಾಗಿ ದರ್ಶನ ಪದ್ಧತಿಯೊಂದು ಚರ್ಚಿಸಿ ವ್ಯಾಖ್ಯಾನಿಸಬೇಕಾದ ಸಮಸ್ಯೆಗಳ ಸ್ವರೂಪವನ್ನು ಸೂಚಿಸುತ್ತದೆ.

ಮಧ್ವಾಚಾರ್ಯರು ಸಿದ್ಧಮಾಡಿಕೊಟ್ಟ ಈ ಪ್ರಮಾಣ ಪ್ರಮೇಯ ವಿಚಾರಗಳು ಹಾಗೂ ವ್ಯಾಖ್ಯಾನಗಳು ದ್ವೈತದರ್ಶನದ ಅಪಾರವಾದ ಆಸ್ತಿ. ಈ ಸಾಧನಗಳಿಂದ ಕೂಡಿ ಈ ಸಿದ್ಧಾಂತಕ್ಕೆ ಸೇರಿದ ಮುಂದಿನ ಗ್ರಂಥಕಾರರು ಶಂಕರ, ಭಾಸ್ಕರ ಮತ್ತು ರಾಮಾನುಜರ ಮಾಯಾವಾದ ಪರಿಣಾಮವಾದಗಳನ್ನು ವಿಶ್ಲೇಷಿಸಿ ಖಂಡಿಸಿದರು. ಅಲ್ಲದೆ ಶ್ರೀ ಹರಿಯೇ ಇಂದ್ರಿಯ ಜ್ಞಾನವಿಶಿಷ್ಟ ಹಾಗೂ ಇಂದ್ರಿಯ ವ್ಯಾಪಾರ ರಹಿತ ತತ್ತ್ವಲೋಕದ ಸ್ವತಂತ್ರ ನಿಮಿತ್ತಕಾರಣವೆಂದೂ ಆ ತತ್ತ್ವಗಳಾದರೂ ನಿತ್ಯವಾದುವಾಗಿ ಪರಮಾತ್ಮನ ಸಂಕಲ್ಪಾಧೀನವೆಂದೂ ಸ್ಥಾಪಿಸಿದರು. ಮಾಯೆ ಅಥವಾ ಅಜ್ಞಾನದ ತೆರೆ ಸರ್ವಜ್ಞನೂ ಸ್ವತಃಸಿದ್ಧನೂ ಆದ ಬ್ರಹ್ಮನನ್ನು ಆಚ್ಛಾದಿಸಲಾರದೆಂದೂ ಆ ಬ್ರಹ್ಮನನ್ನು ಅಜ್ಞಾನ ಹಾಗೂ ದೌರ್ಬಲ್ಯದಿಂದ ಕೂಡಿದ ಜೀವರನ್ನಾಗಿ ಪರಿವರ್ತಿಸಲಾರದೆಂದೂ ಅವರು ಹೇಳಿದರು. ಬ್ರಹ್ಮನೊಡನೆ ಉಪಾಧಿಯ ಸಂಪರ್ಕದಿಂದ ಈ ಜಗತ್ತು ಉಂಟಾಯಿತು ಎಂದೂ ಆ ಕಾರಣ ಅದು ಕೆಂಪು ದಾಸವಾಳದ ಹೂವಿನ ಬಳಿಯ ಸ್ಫಟಿಕ ಶಿಲೆಯ ಕೆಂಬಣ್ಣದಂತೆ ಮಿಥ್ಯವಾದುದು ಎಂದೂ ವಿವರಿಸಲಾಗದು. ಸರ್ವವ್ಯಾಪಿ ಬ್ರಹ್ಮನೊಡನೆ ಉಪಾಧಿಯ ಸಂಗವುಂಟಾಗುವುದು ಅಸಾಧ್ಯ. ಆದುದರಿಂದ ಈ ಜಗತ್ತು ಸತ್ಯವೆಂಬುದು ಪ್ರಮಾಣಸಿದ್ಧವಾದುದು. ತತ್ತ್ವವು ಸ್ವತಂತ್ರ ಮತ್ತು ಅಸ್ವತಂತ್ರ ಎಂದು ಎರಡು ವಿಧ. ಸ್ವತಂತ್ರವೆನಿಸಿದುದೇ ಭಗವಾನ್ ವಿಷ್ಣು; ಮಹಾಲಕ್ಷ್ಮಿ ಅಥವಾ ಪ್ರಕೃತಿ ಸಮೇತ ಮಿಕ್ಕೆಲ್ಲವೂ ಅಸ್ವತಂತ್ರವಾದುವು. ಅಸ್ವತಂತ್ರವು ಭಾವ ಮತ್ತು ಅಭಾವ ರೂಪದಲ್ಲಿ ಅಸಂಖ್ಯಾತ ತಂಡಗಳಾಗಿ ವಿಭಿನ್ನವಾಗಿದೆ (ಸತ್ಯಂ ಜಗತ್, ತತ್ತ್ವತೋ ಭೇದಾಃ). ಜೀವಗಳು ಅಸಂಖ್ಯಾತ. ಭಗವಾನ್ ಶ್ರೀಹರಿಯೊಡನೆ ಆ ಜೀವವಸ್ತುಗಳು ಬಿಂಬ ಪ್ರತಿಬಿಂಬ ಭಾವದಂತೆ ಅಗಲದ ಸಂಬಂಧವನ್ನುಳ್ಳವು. ಬ್ರಹ್ಮಸೂತ್ರಗಳಲ್ಲಿ ಉಕ್ತವಾಗಿರುವಂತೆ :

"ಓಂ ಆಭಾಸ ಏವ ಚ ಓಂ", (2, 3–50),
" ಓಂ ತದ್ಗುಣ–ಶರತ್ವಾ ಚೈತ್ಯುಪದೇಶಃ ಪ್ರಾಜ್ಞವತ್ ಓಂ "- (2, 3–29)
"ಓಂ ಅಂಸೋ ನಾನಾ ವ್ಯಪದೇಶಾನ್ ಓಂ" (2, 3–43) ಇತ್ಯಾದಿ.

ಈ ಸಂಬಂಧವು ಸ್ವಾಮಿ ಭೃತ್ಯರಿಗೆ ಇರುವ ಭೇದವೇ (ಈಶದಾಸಭಾವ) ಆಗಿದೆ; ಎಲ್ಲ ಅವಸ್ಥೆಗಳಲ್ಲಿಯೂ, ಮುಕ್ತಿಸ್ಥಿತಿಯಲ್ಲಿ ಸಹ, ಈ ಭೇದ ಅಡಗಿದೆ. ಜೀವಾತ್ಮರು ಸಾತ್ತ್ವಿಕ, ರಾಜಸ ಹಾಗೂ ತಾಮಸ ಎಂದು ತಾರತಮ್ಯ ಹೊಂದಿರುವಂತೆ ಉಚ್ಚ ನೀಚ ಎಂದೂ ಭೇದವುಳ್ಳವರು. ಸಾತ್ವಿಕ ಭಾಗದಲ್ಲಿ ಈ ತಾರತಮ್ಯದ ತುತ್ತತುದಿ ವಿಷ್ಣು ಅಥವಾ ಹರಿ, ಭಗವದ್ಗೀತೆಯಲ್ಲಿ ಉಕ್ತವಾಗಿರುವಂತೆ :

## ದ್ವೈತ

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ**
**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ**

(ಅ. 15 ಶ್ಲೋ. 16. 17.)

"ಕ್ಷರ (ಜೀವರು) ಮತ್ತು ಅಕ್ಷರ (ಪ್ರಕೃತಿ ಅಥವಾ ಲಕ್ಷ್ಮಿ)–ಈ ಇಬ್ಬರು ಪುರುಷರು. ಮತ್ತೊಬ್ಬ ಉಚ್ಚ ಪುರುಷ (ಉತ್ತಮಪುರುಷ) ನುಂಟು. ಆತನನ್ನೇ ಪರಮಾತ್ಮನೆನ್ನುವುದು ; ಮೂರು ಲೋಕಗಳನ್ನೂ ಆವರಿಸಿಕೊಂಡು ಅವುಗಳಿಗೆ ಆಧಾರನಾಗಿ ಅವ್ಯಯನಾಗಿಯೇ ಉಳಿದಿರುವವನು." (ಶ್ರೀಮನ್ ಮಧ್ವಮತೇ ಹರಿಃ ಪರತರಃ).

ಈಶ್ವರ, ಜೀವ ಹಾಗೂ ಜಡವಸ್ತುಗಳಿಗೆ ಇರುವ ಭೇದವು ಪರಸ್ಪರವೂ ಅನುಕ್ರಮವೂ ಆಗಿ ಐದು ವಿಧವಾದುದು(ಪಂಚಭೇದಃ ತತ್ತ್ವತೋ ಭೇದೋ ಜೀವಗಣಾಃ ಹರೇರನುಚರಾಃ ನೀಚೋಚ್ಚ ಭಾವಂಗತಾಃ)

ಭಗವತ್ಸಂಕಲ್ಪದಿಂದ ಜೀವರು ಯೋಗ್ಯದೇಹವನ್ನು ಧರಿಸಿ ಈ ಜಗತ್ತಿನಲ್ಲಿ ಹುಟ್ಟುವರು. ಜನನ ಮರಣಗಳ ದೀರ್ಘಪರಂಪರೆಯ ಬಳಿಕ ತಮ್ಮ ಗುರುಗಳ ನೇತೃತ್ವದಲ್ಲಿ ಪಡೆದ ಜ್ಞಾನ ಹಾಗೂ ಹರಿಭಕ್ತಿಯ ಮೂಲಕ ತಮ್ಮ ನಿಗೂಢಶಕ್ತಿಯನ್ನು ಸಮಗ್ರವಾಗಿ ರೂಪಿಸಿಕೊಳ್ಳುವರು. ಕಡೆಗೆ ತಮ್ಮ ನೈಜಸ್ವರೂಪವನ್ನು ಆವರಿಸಿದ ಅಸಹಜವಾದ ಪ್ರತ್ಯೇಕವಸ್ತುಗಳನ್ನು ತೊಲಗಿಸಿ, ತಮ್ಮ ಪೂರ್ಣ ಆತ್ಮತ್ವವನ್ನು ಹೊಂದುವರು. ಇದನ್ನೇ ಮುಕ್ತಿ ಎನ್ನುವುದು (ಮುಕ್ತಿರ್ಹಿತ್ವಾನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ). ಮುಕ್ತಿಸ್ಥಿತಿಯಲ್ಲಿ ದುಃಖಮಿಶ್ರಿತವಾಗದ ತಮ್ಮ ಸಹಜಸುಖಾನುಭವವನ್ನು ಹೊಂದುವರು (ಮುಕ್ತಿರ್ನೈಜಸುಖಾನುಭೂತಿಃ).

ಈ ಮುಕ್ತಿಸ್ಥಿತಿಯನ್ನು ಹೊಂದುವ ಸಾಧನಗಳನ್ನು ಬ್ರಹ್ಮಸೂತ್ರಗಳ ಸಾಧನಾಧ್ಯಾಯದಲ್ಲಿ ವಿವರಿಸಿದೆ. ಅವ್ಯವಹಿತ ಕಾರಣವೆಂದರೆ ಪರಮಾತ್ಮನ ಸಂಕಲ್ಪ ಅಥವಾ ಪ್ರಸಾದ. ವಿರಕ್ತಿ ಇಲ್ಲವೆ ಲೌಕಿಕದಲ್ಲಿನ ನಿಸ್ಸಂಗಭಾವವು ಇಲ್ಲದೆ, ಭಕ್ತಿ ತನ್ನ ಉದ್ದೇಶವನ್ನು ಸಾಧಿಸಲಾರದು. ಭಗವಂತನು ಅಪರಿಮಿತವೂ ಅಗಾಧವೂ ಆದ ಮಂಗಳಗುಣಗಣಗಳಿಂದ ಭರಿತನಾದವನು. ಆ ಪರಮಾತ್ಮನನ್ನು ಸಂಪೂರ್ಣವಾಗಿ ತಿಳಿದುಕೊಳ್ಳಲಾಗದಿದ್ದರೂ ಗುರುವಿನ ಮಾರ್ಗದರ್ಶನ ಹಾಗೂ ಉಪದೇಶದ ಪ್ರಕಾರ ವೇದಾಭ್ಯಾಸದ ಮೂಲಕವೇ ಆ ಪರಮಾತ್ಮನನ್ನು ತನ್ನ ಯೋಗ್ಯತಾನುಸಾರವಾಗಿ ಅರಿಯಬಹುದು. (ಅಖಿಲಾಮ್ನಾಯೈಕ ವೇದ್ಯೋ ಹರಿಃ). ಶ್ರೀ ಹರಿಯ ಮಹಿಮೆಯನ್ನು ಕುರಿತ ವೇದಗಳ ಶ್ರವಣ, ಮನನ ಹಾಗೂ ನಿಧಿಧ್ಯಾಸನ ಮತ್ತು ಅನನ್ಯ ಸೇವಾಭಾವಗಳಿಂದ ಅಪರೋಕ್ಷಜ್ಞಾನವು ಲಭಿಸುವುದು. ಎಲ್ಲ ಕರ್ಮಗಳೂ ಕಳೆದ ಬಳಿಕ ಜೀವರಿಗೆ ಭಗವಂತನು ತನ್ನ ದಯೆ ಹಾಗು ಅನುಕಂಪಗಳಿಂದ ಆ ಜೀವರಿಗೆ ಲಭಿಸಬೇಕಾದ ಆನಂದವನ್ನು ದಯೆಪಾಲಿಸುವನು. ಎಲ್ಲ ಮಾರ್ಗಗಳಿಗಿಂತಲೂ ಭಗವಂತನಲ್ಲಿಟ್ಟ ಪರಿಶುದ್ಧವಾದ ಭಕ್ತಿಯೇ ಆತನನ್ನು ಸಮೀಪಿಸಲು ಇರುವ ಅತ್ಯುತ್ತಮ ಮಾರ್ಗ (ಅಮಲಾ ಭಕ್ತಿಶ್ಚ ತತ್ಸಾಧನಂ.)

ಹೀಗೆ ದ್ವೈತವೇದಾಂತದಲ್ಲಿ ಮಾನುಷ ಮತ್ತು ಅತಿಮಾನುಷ ಶಕ್ತಿಗಳಿಗೆ ಅವುಗಳಿಗೆ ಯೋಗ್ಯವಾದ ಸ್ಥಾನವನ್ನು ಕೊಡಲಾಗಿದೆ. ದೋಷರಹಿತ ಮಾನವಾನುಭವವು ಪ್ರಾಮಾಣ್ಯಜ್ಞಾನಕ್ಕೆ ಆಧಾರ ಎಂಬುದಾಗಿ ಗೌರವಸ್ಥಾನವನ್ನು ಗಳಿಸುತ್ತದೆ. ಪರಮಾತ್ಮನ ಮಹಿಮೆಯನ್ನು ಏಕೈಕ ಸ್ವತಂತ್ರತತ್ತ್ವ ವೆಂಬುದಾಗಿ ಒಪ್ಪಿಕೊಳ್ಳಲಾಗಿದೆ. ತನ್ನ ಅಸ್ತಿತ್ವ ಹಾಗೂ ಕಾರ್ಯಚಟುವಟಿಕೆಗಳಿಗೆಲ್ಲ ಇಡೀ ಜಗತ್ತು

ಆತನನ್ನೇ ಸಂಪೂರ್ಣವಾಗಿ ಅವಲಂಬಿಸಿದೆ. ಸೇವಾತತ್ಪರತೆಯಿಂದೊಡಗೂಡಿದ ಪ್ರೇಮಾತಿಶಯತೆ ಹಾಗೂ ಭಕ್ತಿಯೇ ಭಗವಂತನ ಪ್ರಸಾದವನ್ನು ಪಡೆಯುವ ಸಾಧನಗಳು. ಆ ಈಶನ ಪ್ರಸಾದವೇ ಮುಕ್ತಿಗೂ ದುಃಖವಿಮೋಚನೆಗೂ ದಾರಿತೋರಿಸುವುದು.

ವಿಜಯನಗರದ ಸಾಳುವ, ತುಳುವ ಹಾಗೂ ಅರವೀಡುವಂಶಗಳ ರಾಜರು ವೈಷ್ಣವ (ದ್ವೈತ) ಮತ್ತು ಶ್ರೀವೈಷ್ಣವ (ವಿಶಿಷ್ಟಾದ್ವೈತ) ಮತಗಳ ಅನುಯಾಯಿಗಳೂ ಉದಾರಪೋಷಕರೂ ಆಗಿದ್ದರು. ಶ್ರೀರಾಮಾನುಜರ ಶಿಷ್ಯರು ಧರ್ಮಪ್ರಸಾರದ ಉಜ್ಜ್ವಲಾಪೇಕ್ಷೆಯಿಂದ ಭಕ್ತಿಪಂಥವನ್ನು ಉತ್ತರ ಭಾರತಕ್ಕೆ ಪ್ರಸಾರ ಮಾಡಿದಂತೆಯೇ ಶ್ರೀಮಧ್ವಾಚಾರ್ಯ ಹಾಗೂ ಶ್ರೀವ್ಯಾಸತೀರ್ಥರ ಅನುಯಾಯಿಗಳೂ ಈಶಾನ್ಯಭಾರತಕ್ಕೆ ಭಕ್ತಿಪಂಥವನ್ನು ಹಬ್ಬಿಸಿದರು. ಒರಿಸ್ಸಾದಲ್ಲಿ ಮಂತ್ರಿಯಾಗಿದ್ದ ನರಹರಿತೀರ್ಥರು ಶ್ರೀಮಧ್ವಾಚಾರ್ಯರ ಶಿಷ್ಯರಾಗಿ ಅವರ ಮಠಗಳಲ್ಲಿ ಮುಖ್ಯವಾದವುಗಳಲ್ಲೊಂದರ ಪೀಠಾಧಿಪತಿಗಳಾದರು. ಅಕ್ಷೋಭ್ಯತೀರ್ಥ ಮತ್ತು ಪದ್ಮನಾಭತೀರ್ಥರು* ಕೂಡ ಮಧ್ವಾಚಾರ್ಯರ ಶಿಷ್ಯರಾಗಿ ಮಧ್ವಮಠಗಳ ಅಧಿಪತಿಗಳಾದರು. ಅವರು ಮಹಾ ತಾರ್ಕಿಕರಾಗಿ ಅನ್ಯದರ್ಶನದವರೊಡನೆ ವಾದಗಳನ್ನು ನಡೆಸುವುದರಲ್ಲಿ ನಿರತರಾದರು. ವಿಶೇಷವಾಗಿ ಅದ್ವೈತದ ಮಾಯಾವಾದವನ್ನು ಖಂಡಿಸಿ, ದ್ವೈತದರ್ಶನದ ಸಂದೇಶವನ್ನು ಕರ್ನಾಟಕದ ಹೊರಗೂ ಪ್ರಸಾರಮಾಡಿದರು.

ಒರಿಸ್ಸಾದ ಧಾರ್ಮಿಕ ಕೇಂದ್ರವಾದ ಪುರಿಪಟ್ಟಣವು ನರಹರಿತೀರ್ಥರ ಪ್ರಭಾವದ ದೆಸೆಯಿಂದ ಮಧ್ವಮತದ ಕೇಂದ್ರವಾಯಿತು ಎಂದು ಹೇಳುವರು. ಈ ಮತ ಬಳಿಕ ಬಂಗಾಳ, ಗಯಾ, ವಾರಣಾಸಿ ಮತ್ತು ಪ್ರಯಾಗಗಳಿಗೂ ಹಬ್ಬಿತು. ಇದು ಚೈತನ್ಯ (1485–1533) ನಿಗಿಂತಲೂ ಮೊದಲೇ ಆದದ್ದು. ಚೈತನ್ಯನಿಗೆ ಭಕ್ತಿಮಾರ್ಗವನ್ನು ಮೊದಲು ಉಪದೇಶಿಸಿದವರು ಗಯೆಯ ಮಧ್ವಗುರುವಾದ ಈಶ್ವರಪುರಿ. ಮಧ್ವಮತದ ಕೇಂದ್ರವಾದ ಉಡುಪಿಯಲ್ಲಿ ಇಂದೂ ಕೃಷ್ಣನ ಪೂಜಾಪದ್ಧತಿಯು ಪ್ರಧಾನವಾಗಿದೆ ಎಂಬುದನ್ನು ನಿರೂಪಿಸಿದಾಗ ಕ್ರಿ.ಶ. 1508ರಲ್ಲಿ ಆದ ಈ ಉಪದೇಶದ ಪ್ರಾಧಾನ್ಯವನ್ನು ಸುಲಭವಾಗಿ ಊಹಿಸಿಕೊಳ್ಳಬಹುದಾಗಿದೆ. ಮತಪ್ರಸಾರಣೆಯಲ್ಲಿ ಚೈತನ್ಯನಿಗೆ ಮುಖ್ಯ ಸಹಾಯಕನಾಗಿದ್ದ ನಿತ್ಯಾನಂದನೂ ಮತ್ತೊಬ್ಬ ಮಾಧ್ವ ಸಂನ್ಯಾಸಿ. ಚೈತನ್ಯನಿಗೆ 1510ರಲ್ಲಿ ಸಂನ್ಯಾಸದೀಕ್ಷೆಯನ್ನಿತ್ತ ಗುರು ಕೇಶವಭಾರತಿಯೂ ಒಬ್ಬ ಮಧ್ವಗುರು. ಚೈತನ್ಯನು ತನ್ನ ಭಾರತಯಾತ್ರೆಯ ಕಾಲದಲ್ಲಿ ಸಂದರ್ಶಿಸಿದ ಪ್ರಮುಖ ಸ್ಥಳಗಳು ಶ್ರೀಕೂರ್ಮಂ, ಸಿಂಹಾಚಲಂ, ಶ್ರೀರಂಗಂ ಮತ್ತು ಉಡುಪಿ......ಈ ಎಲ್ಲ ಕ್ಷೇತ್ರಗಳೂ ಮಾಧ್ವರಿಗೆ ಪವಿತ್ರಸ್ಥಳಗಳು. ಆತನು ತೀರ್ಥಯಾತ್ರೆಯಲ್ಲಿ ಸಂದರ್ಶಿಸಿದನೆಂದು ತಿಳಿಸಿರುವ ಇತರ ಸ್ಥಳಗಳಲ್ಲಿ ವಿದ್ಯಾನಗರವೂ ಇದೆ. **ಭಾಗವತ ಪುರಾಣದ** ಪ್ರಾಮುಖ್ಯವನ್ನು ಒತ್ತಿ ಹೇಳಿದವರಲ್ಲಿ ಮೊದಲಿಗರಾದ ಆನಂದತೀರ್ಥರಂತೆ ಚೈತನ್ಯನೂ ಆತನ ಅನುಯಾಯಿಗಳೂ **ಭಾಗವತವನ್ನು** ಆಧರಿಸಿ ತಮ್ಮ ಉಪದೇಶವನ್ನು ನೀಡಿದರು. (ಸಿ. ಹಯವದನ ರಾವ್ ಸಂಪಾದಿತ ಶ್ರೀಕರಭಾಷ್ಯ ಸಂ. I ರ ಉಪೋದ್ಘಾತದಿಂದ, ಪು. 183—4.)

---

*ನರಹರಿತೀರ್ಥರ (ದಿ. 1333) ಮತ್ತು ಪದ್ಮನಾಭತೀರ್ಥರ (ದಿ. 1324) ವೃಂದಾವನಗಳು ಹಂಪೆಯ ಬಳಿಯಲ್ಲಿಯೇ ಇವೆಯೆಂಬುದು ಗಮನಾರ್ಹ. ನರಹರಿತೀರ್ಥರ ವೃಂದಾವನವು ವಿಜಯವಿಠಲ ದೇವಾಲಯದ ಹಿಂದುಗಡೆ ತುಂಗಭದ್ರಾ ನದೀಪಾತ್ರದಲ್ಲಿಯೇ ಇದೆ. ಪದ್ಮನಾಭತೀರ್ಥರ ಬೃಂದಾವನವು ಆನೆಗೊಂದಿ ಬಳಿ ಆ ನದಿಯ ನಡುಗಡ್ಡೆಯಲ್ಲಿರುವ 'ನವವೃಂದಾವನ' ಗಳಲ್ಲೊಂದು. ಮಧ್ವಮತದ ಮಹಾಗುರುಗಳ ಒಂಬತ್ತು ವೃಂದಾವನಗಳಲ್ಲಿ ವ್ಯಾಸತೀರ್ಥರದೂ ಇದೆ. ಪದ್ಮನಾಭ ತೀರ್ಥರದೇ ಮೊದಲನೆಯದು. ನರಹರಿತೀರ್ಥ ಪದ್ಮನಾಭ ತೀರ್ಥರಿಬ್ಬರೂ ವಿಜಯನಗರದ ಸ್ಥಾಪನೆಯ ಕಾಲದಲ್ಲಿ ಆನೆಗೊಂದಿಯಲ್ಲಿದ್ದರೆಂದು ಕಾಣುತ್ತದೆ. ಆ ಮಹಾಕಾರ್ಯದಲ್ಲಿ ಅವರು ಏನು ಪಾತ್ರವಹಿಸಿದರು ಅಥವಾ ಏನಾದರೂ ಪಾತ್ರವಹಿಸಿದ್ದರೆ ಎಂಬುದು ಇನ್ನೂ ತಿಳಿಯದಾಗಿದೆ.

ಶ್ರೀಮಧ್ವರ ಉಪದೇಶವನ್ನು ತಮ್ಮ ಸಂಸ್ಕೃತಗ್ರಂಥ ಹಾಗೂ ಕನ್ನಡ ಪದಗಳ ಮೂಲಕ ದೇಶದಲ್ಲೆಲ್ಲ ಬಹಳವಾಗಿ ಪ್ರಸಾರಮಾಡಿದ ಮತ್ತೊಬ್ಬ ಗುರೂತ್ತಮನೆಂದರೆ ವಾದಿರಾಜತೀರ್ಥ (1480–1600). ಅವರು ಶ್ರೀವ್ಯಾಸತೀರ್ಥರ ಶಿಷ್ಯ. ಇಂಪಾದ ಸಂಸ್ಕೃತ ಪದ್ಯಗಳ ರೂಪದಿಂದಿರುವ ಅವರ **'ತೀರ್ಥಪ್ರಬಂಧ'** ಭಾರತದ ಬೇರೆ ಬೇರೆ ಸ್ಥಳಗಳಲ್ಲಿ ಅವರು ಪೂಜಿಸಿದ ದೇವತೆಗಳ ಸ್ತೋತ್ರ ಪದ್ಯಗಳನ್ನುಳ್ಳ ಒಂದು ಯಾತ್ರಾವರ್ಣನೆಯ ಗ್ರಂಥವಾಗಿದೆ. ಈ ಸ್ಥಳಗಳಲ್ಲಿ ಪುರಿ (ಒರಿಸ್ಸ), ಗಂಗಾಸಾಗರ (ಬಂಗಾಳ), ಗಯಾ (ಬಿಹಾರ್), ವಾರಣಾಸಿ ಮತ್ತು ಪ್ರಯಾಗ (ಉತ್ತರಪ್ರದೇಶ)—ಇವುಗಳೂ ಸೇರಿರುವುದೊಂದು ಆಸಕ್ತಿಯ ಸಂಗತಿ. ವಾದಿರಾಜತೀರ್ಥರು ಸೋದೆಮಠದ (ಉಡುಪಿಯ ಶ್ರೀಕೃಷ್ಣದೇವಸ್ಥಾನದಲ್ಲಿ ಅರ್ಚನೆಗಾಗಿ ಶ್ರೀ ಮಧ್ವಾಚಾರ್ಯರಿಂದ ಸ್ಥಾಪಿತವಾದ ಎಂಟು ಮಠಗಳಲ್ಲಿ ಒಂದು) ಪೀಠಾಧಿಪತಿಗಳಾಗಿದ್ದರು. ಅವರು ಈ ಪೂಜಾವ್ಯವಸ್ಥೆಯನ್ನು ಸರದಿಯ ಮೇಲೆ ನಡೆಯುವಂತೆ ಮಾಡಿದ ಕೀರ್ತಿಗೆ ಪಾತ್ರರು. ಇದರಂತೆ ಪ್ರತಿಯೊಬ್ಬ ಸ್ವಾಮಿಯೂ (ದೇವಸ್ಥಾನದ ಅರ್ಚಕರಲ್ಲ) ಒಂದು ಬಾರಿಗೆ (ಪರ್ಯಾಯವೆಂದು ಹೆಸರಾಗಿದೆ) ಎರಡು ವರ್ಷಗಳ ಕಾಲ ಪೂಜಿಸಬೇಕಾಯಿತು. ಈ ವಿಶಿಷ್ಟ ಯೋಜನೆಯ ಪ್ರಕಾರ ದೇವಸ್ಥಾನ ಹಾಗೂ ಅದರ ಆಸ್ತಿಪಾಸ್ತಿಗಳ ಹಕ್ಕಿನ ದೃಷ್ಟಿ ಬೆಳೆಯಲವಕಾಶವಿಲ್ಲದಂತಾಗಿ, ಇಂದಿಗೂ ಅದು ಹಾಗೆಯೇ ನಡೆದುಕೊಂಡು ಬರುತ್ತಿದೆ.

ಕ್ರಿ.ಶ. 14 ರಿಂದ 17ನೆಯ ಶತಮಾನಗಳ ನಡುವಣ ಅವಧಿಯನ್ನು ವೈಷ್ಣವ ಧರ್ಮಕ್ಕೆ ಭಾರತದಲ್ಲೆಲ್ಲ ಲಭಿಸಿದ ಉತ್ಕರ್ಷಕಾಲವೆನ್ನಬಹುದು.

ಮೂಲ ಲೇಖಕರು : ಡಾ॥ ಆರ್. ಎಸ್. ಪಂಚಮುಖಿ
ಅನುವಾದಕರು : ಶ್ರೀ ಸಿ. ಮಹಾದೇವಪ್ಪ

# ವೀರಶೈವ ಧರ್ಮ
## ಶಕ್ತಿವಿಶಿಷ್ಟಾದ್ವೈತ

12 ನೆಯ ಶತಮಾನದಲ್ಲಿ ಸಿದ್ಧಪುರುಷರೂ ಅನುಭಾವಿಗಳೂ ಆದ ಬಸವೇಶ್ವರ, ಅಲ್ಲಮಪ್ರಭು ಮೊದಲಾದವರಿಂದ ಪ್ರವರ್ಧಮಾನಕ್ಕೆ ಬಂದ ವೀರಶೈವ ಧರ್ಮದ ಮುಖ್ಯ ತತ್ತ್ವಗಳನ್ನೂ ಈ ಹಿಂದೆಯೇ ಪ್ರಸ್ತಾಪಿಸಲಾಗಿದೆ. ಶರಣಸಂಪ್ರದಾಯದವರ ಧರ್ಮಪ್ರಚಾರದ ಶ್ರದ್ಧೆಯ ಫಲವಾಗಿ ಸುತ್ತಮುತ್ತಲ, ಮಹಾರಾಷ್ಟ್ರ, ಆಂಧ್ರ ಮತ್ತು ತಮಿಳು ದೇಶಗಳಲ್ಲಿ ಎಲ್ಲೆಲ್ಲೂ ಧರ್ಮಪ್ರಸಾರಕಾರ್ಯ ವ್ಯಾಪಿಸುವಂತಾಯಿತು. ಧರ್ಮಪ್ರಸಾರದ ಈ ಕಾರ್ಯಗತಿ ತೀವ್ರವಾದುದಕ್ಕೆ ಜಯಶಾಲಿಗಳಾದ ಮುಸ್ಲಿಮರು ವೀರಶೈವ ಧರ್ಮಪ್ರಸಾರದ ಜನ್ಮಭೂಮಿಯಾದ ಕಲ್ಯಾಣಪ್ರಾಂತವನ್ನು ಮುತ್ತಿದುದೇ ಕಾರಣ. 14 ನೆಯ ಶತಮಾನದಲ್ಲಿ ಬಹಮನಿ ರಾಜ್ಯದ ಸ್ಥಾಪನೆಯೇ ಅದರ ಪರಿಣಾಮ. ವೀರಶೈವರ ಕಾರ್ಯ ಪರಂಪರೆಗೆ ಆಂಧ್ರದೇಶ ಅತಿ ಹಿತವಾದ ಆವಾಸಸ್ಥಾನವಾಯಿತು. ವಿಜಯನಗರ ಸಾಮ್ರಾಜ್ಯಸ್ಥಾಪನೆ ಮತ್ತು ಅದರ ಮಾರ್ಗವನ್ನನುಸರಿಸಿ ಆದ ಹಿಂದೂ ಧರ್ಮದ ಪುನರುತ್ಥಾನ ವೀರಶೈವ ತತ್ತ್ವಶಾಸ್ತ್ರಜ್ಞರು ಹಾಗೂ ಪಂಡಿತೋತ್ತಮರ ಮೇಲೂ ತನ್ನ ಪ್ರಭಾವವನ್ನು ಬೀರಿತು. ಹಿಂದೂಧರ್ಮದ ಇತರ ಸಂಪ್ರದಾಯಗಳ ಪ್ರತಿಪಾದಕರು ಅನುಸರಿಸಿದ ಮಾರ್ಗದಲ್ಲಿ ವೀರಶೈವ ತತ್ತ್ವವೇತ್ತರೂ ಜ್ಞಾನಿಗಳೂ ಕ್ರಮಬದ್ಧವಾಗಿ ಈ ಶೈವತತ್ತ್ವವನ್ನು ಸಮನ್ವಯಗೊಳಿಸಿ ಪರಿಪೋಷಿಸಿದರು. ಬ್ರಹ್ಮಸೂತ್ರವೃತ್ತಿಯ ಕರ್ತೃವಾದ ವಿಜಯನಗರದ ರಾಜ ಎರಡನೆಯ ದೇವರಾಯ (ಕ್ರಿ.ಶ. 1424-1446) ನ ಆಳಿಕೆಯಲ್ಲಿ ವೀರಶೈವ ಮತಕ್ಕೆ ವಿಶೇಷ ಪ್ರೋತ್ಸಾಹ ದೊರಕಿತು. (ವಿಜಯನಗರದ ಆರನೆಯ ಶತಮಾನೋತ್ಸವದ ಸ್ಮಾರಕ ಗ್ರಂಥದಲ್ಲಿ ಡಾ॥ ವಿ. ರಾಘವನ್ ಅವರ ಲೇಖನ ನೋಡಿ).

ಆಂಧ್ರದೇಶದ ವಿಜಯವಾಡ ಪ್ರಾಂತದವನಾದ ಸುಮಾರು ಕ್ರಿ.ಶ. 1400ರ ಕಾಲಕ್ಕೆ ಸೇರಿದವನೆನ್ನುವ ಶ್ರೀಪತಿ ಪಂಡಿತನು ಬರೆದಿರುವ ಬ್ರಹ್ಮಸೂತ್ರ ಭಾಷ್ಯವನ್ನು ಈಗ ಇಲ್ಲಿ ವಿವೇಚಿಸೋಣ.

ತರ್ಕಬದ್ಧವಾದ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವು ಶ್ರೀಕಂಠರ ಬ್ರಹ್ಮಸೂತ್ರ ಭಾಷ್ಯದಲ್ಲಿ ಹಿಂದೆಯೇ ಪ್ರಕಟವಾಗಿರುವುದನ್ನು ನಾವು ಕಾಣಬಹುದು. ವೇದ, ಉಪನಿಷತ್, ಶೈವಾಗಮಗಳ ಆಧಾರದ ಮೇಲೆ ಶ್ರೀಪತಿ ಪಂಡಿತನು ಆ ಬಳಿಕ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದು, ದೀಕ್ಷಾಪೂರ್ವಕವಾದ (ದೀಕ್ಷೆಯನ್ನು ಸ್ವೀಕರಿಸಿ ಅಂಗದ ಮೇಲೆ ಲಿಂಗವನ್ನು ಧರಿಸುವ) ಲಿಂಗಧಾರಣ ಕರ್ಮಸಮೇತವಾದ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವನ್ನು ತನ್ನ ಶ್ರೀಕರಭಾಷ್ಯದಲ್ಲಿ ಸ್ಥಿರಪಡಿಸಿದ್ದಾನೆ.

ಶ್ರೀಪತಿ ಪಂಡಿತರ ಅಭಿಪ್ರಾಯಗಳನ್ನು ವೀರಶೈವ ಧರ್ಮಕ್ಕೆ ಮೂಲಾಧಾರವಾದ ತತ್ತ್ವಗಳು ಎಂದು ಒಪ್ಪಿದ್ದಾರೆ.

'ವೀರಶೈವ' ಎಂಬ ಪದವು ಅನೇಕ ಆಗಮಗಳು ಹಾಗೂ ಪುರಾಣಗಳಲ್ಲಿ ಕಂಡುಬರುತ್ತದೆ. ಪಂಡಿತರು ಈ ಪದವನ್ನು ನಾನಾರೀತಿಯಲ್ಲಿ ವ್ಯಾಖ್ಯಾನಮಾಡಿದ್ದಾರೆ.

'ವೀ' ಎಂದರೆ ಜೀವ ಶಿವರೆಂಬವರು ಎರಡಿಲ್ಲ ಒಂದೇ ಎಂದು ಸೂಚಿಸುವ ಜ್ಞಾನ. ಇಂತಹ ಜ್ಞಾನದಲ್ಲಿ ಆನಂದಾನುಭವವುಳ್ಳ ಶೈವ ಧರ್ಮಾವಲಂಬಿಗಳೆ ವೀರಶೈವರು (ಸಿದ್ಧಾಂತ ಶಿಖಾಮಣಿ ನೋಡಿ). 'ವೀ' ಎಂದರೆ ಸಂಶಯ, ಭಿನ್ನಭಾವನೆ, ವಿಕಲ್ಪ. 'ರ' ಎಂದರೆ ಇವುಗಳಿಲ್ಲದೆ ಇರುವುದು, ರಹಿತ ಎಂದರ್ಥ. 'ವೀರಶೈವ' ಎಂದರೆ ಶೈವಧರ್ಮ ಮತ್ತು ಸಿದ್ಧಾಂತ ಎಂದು. ವೀರಶೈವವು ಭ್ರಾಂತಿ, ಸಂಶಯ, ಭಿನ್ನಭಿನ್ನ ಭಾವನೆಗಳಿಂದ ರಹಿತವಾದದ್ದು (ಕ್ರಿಯಾಸಾರ ನೋಡಿ).

ವೇದಾಂತದ ಅಭ್ಯಾಸದಿಂದ ಬಂದ ಜ್ಞಾನವನ್ನು 'ವೀ' ಎಂಬ ಅಕ್ಷರವು ಸೂಚಿಸುತ್ತದೆ. ಯಾರು ಈ ಜ್ಞಾನದಲ್ಲಿ ಮನಃ ಶಾಂತಿಯನ್ನು ಹೊಂದುತ್ತಾನೆಯೋ ಅವನು ವೀರ. (ಕ್ರಿಯಾಸಾರ 3).

ದೀಕ್ಷೆಯನ್ನು ಕೈಕೊಳ್ಳುವ ಧಾರ್ಮಿಕಾಚರಣೆಯಲ್ಲಿ ಗುರು ವಟುವಿಗೆ ಈ ರೀತಿ ಉಪದೇಶಿಸು ತ್ತಾನೆ : "ಪರಮಾತ್ಮನಾದ ಶಿವನ ಸಂಕೇತವಾದ ಲಿಂಗವನ್ನು ನಿನ್ನ ಜೀವಾತ್ಮವೆಂದೇ ಭಾವಿಸಿ ನಿಶ್ಚಯಿಸು. ನಿನ್ನ ಪ್ರಾಣವಿರುವ ವರೆಗೂ ಇದನ್ನು ಬಿಟ್ಟಿರಬೇಡ" (ಶ್ರೀಕರ ಭಾಷ್ಯ ಭಾಗ II, 92).

ದೀಕ್ಷಾಕಾಲದ ಈ ಪ್ರತಿಜ್ಞೆಯ ಅರ್ಥವೇನೆಂದರೆ ಶಿಷ್ಯನು ಜೀವನದ ಕಡೆಯ ವರೆಗೂ ಪರಬ್ರಹ್ಮ ಸ್ವರೂಪನಾದ ಶಿವನಲ್ಲಿ ಗಾಢವಾದ ಪ್ರೇಮಾತಿಶಯವನ್ನು, ದೃಢ ನಂಬಿಕೆಯನ್ನು ಇಡಬೇಕೆಂಬುದೇ ಆಗಿರುತ್ತದೆ. ಲಿಂಗಪೂಜೆಯ ಮೂಲಕ ವೀರಶೈವ ಧರ್ಮಾಚರಣೆಯನ್ನುಳ್ಳವನು ವೀರಶೈವನೆಂದೆನಿಸಿ ಕೊಳ್ಳುವನು ಎಂಬುದು ಮೇಲಿನ ಮಾತುಗಳಿಂದ ಸ್ಪಷ್ಟವಾಗುವುದು.

### ಪರಬ್ರಹ್ಮಸ್ವರೂಪ

ಬ್ರಹ್ಮ ಅಥವಾ ಪರತತ್ತ್ವವನ್ನು ಈ ಸಂಪ್ರದಾಯದಲ್ಲಿ ಪರಶಿವನೆಂದು ಕರೆಯುವರು. ಪರಶಿವನು ಸತ್ ಚಿತ್ ಆನಂದಸ್ವರೂಪನು, ಅನಂತ ಮತ್ತು ಅಪರಿಮಿತ ಶಕ್ತಿಯುಳ್ಳವನು, ನಿರ್ಗುಣನು. ಆದರೆ ಚಲನ ವ್ಯಾಪ್ತಿಯುಳ್ಳ ಶಕ್ತಿಯುತನು. ಜೀವಾತ್ಮನು ಬಂಧನದಿಂದ ಬಿಡುಗಡೆಯನ್ನು ಹೊಂದಿ ಕೊನೆಗೆ ತನ್ನ ನೆಲೆ ಯನ್ನು ಸೇರುವ 'ಸ್ಥಲ' ಶಬ್ದದಿಂದ ನಿರ್ದೇಶಿಸಲ್ಪಟ್ಟವನು. ಜೀವಾತ್ಮನಿಗೂ ಭೌತಶರೀರಕ್ಕೂ ಇರುವ ಸಂಬಂಧದಂತೆಯೇ ಜೀವಾತ್ಮನಿಗೂ ಪರಮಾತ್ಮನಿಗೂ ಸಂಬಂಧವಿರುತ್ತದೆ. ಆದರೆ ಪರಮಾತ್ಮನು ಜೀವಾತ್ಮನ ಗುಣಧರ್ಮಗಳಿಂದ ಅಂಟದೆ ಇರುತ್ತಾನೆ. ಅವನು ಯಾವಾಗಲೂ ಸ್ವತಂತ್ರನು. ಮರದ ಎಲೆ, ಹಣ್ಣು ಮೊದಲಾದವು ಯಾವ ರೀತಿ ಬೀಜದಲ್ಲಿ ಅಡಗಿರುತ್ತವೆಯೋ ಹಾಗೆ ಭೌತಪ್ರಪಂಚ ಅಂದರೆ ಜಡ ಮತ್ತು ಚೇತನವೆಲ್ಲವು ಪರಶಿವನಲ್ಲಿ ಅಡಗಿರುತ್ತವೆ. ಅವನು ಮೂಲ ಕಾರಣನೂ ಹೌದು, ನಿಮಿತ್ತ ಕಾರಣನೂ ಹೌದು. ಜೇಡರ ಹುಳು ಯಾವ ರೀತಿ ತನ್ನಲ್ಲಿಯೇ ತನ್ನಿಂದಲೇ ಜಾಲವನ್ನು ನೆಯ್ದುಕೊಂಡಿರುತ್ತದೆಯೋ ಹಾಗೆಯೇ ಪರಶಿವನು ಈ ವಿಶ್ವವನ್ನು ತನ್ನಲ್ಲಿಯೇ ತನ್ನಿಂದಲೇ ನಿರ್ಮಿಸಿರುತ್ತಾನೆ. ಯೋಗಿಯು ಯಾವ ರೀತಿ ವಾಯುವನ್ನು ತನ್ನಲ್ಲಿ ಎಳೆದುಕೊಂಡು ಶ್ವಾಸಬಂಧನದಿಂದ ಸಮಾಧಿಯನ್ನು ಹೊಂದಿ ಪುನಃ ವಾಯುವನ್ನು ಹೊರಗೆಡವಿ ಅಂದರೆ ಬಹಿರ್ಮುಖವಾಗಿ ಕಾರ್ಯೋದ್ಯಮಕ್ಕೆ ನಿಯೋಜಿಸುತ್ತಾನೆಯೋ ಹಾಗೆ ಪರಶಿವನು ಪ್ರಳಯಕಾಲದಲ್ಲಿ ಈ ಪ್ರಪಂಚವನ್ನು ತನ್ನಲ್ಲಿಯೇ ಅಡಕಮಾಡಿಕೊಂಡು ಸೃಷ್ಟಿ ಕಾಲದಲ್ಲಿ ಹೊರಹೊಮ್ಮಿಸುತ್ತಾನೆ (ಶ್ರೀಕರಭಾಷ್ಯ, ಭಾಗ 2, ಪುಟ 29, 59). ಈ ಭೌತ ಪ್ರಪಂಚವು ಮಿಥ್ಯವಲ್ಲ. ಅದು ನಮ್ಮ ಕಣ್ಣಿಗೆ ಕಾಣಿಸುವಂಥದಾಗಿ ಜೀವನವನ್ನು ನಡೆಸುವುದಕ್ಕೆ ಎಲ್ಲಾ ವಿಧದಲ್ಲಿಯೂ ಆಶ್ರಯವುಳ್ಳದ್ದಾಗಿರುವುದು. ಪ್ರಳಯ ಕಾಲದಲ್ಲಿಯೂ ಕೂಡ ಈ ಪ್ರಪಂಚವು ಪರಶಿವನ ಶಕ್ತಿಯಲ್ಲಿ ಅಡಗಿರುತ್ತದೆ.

ಪರಶಿವನು ಸ್ವತಂತ್ರನು. ಸಕಲ ರೂಪಗಳಿಗೂ ಅತೀತನಾಗಬಲ್ಲ ಆತನು ಎಲ್ಲಾ ರೂಪಗಳನ್ನು ಹೊಂದಬಲ್ಲನು. ಸೃಷ್ಟಿಯಿಂದ ಆಗತಕ್ಕ ಸುಖ ದುಃಖ ಪರಿಣಾಮಗಳಿಗೆ ಅವನವನ ಜನ್ಮಾಂತರ ಕರ್ಮವೇ ಕಾರಣವಲ್ಲದೆ ಪರಶಿವನು ಕಾರಣನಲ್ಲ (ಶ್ರೀಕರ ಭಾಷ್ಯ, ಭಾಗ III, 202, 208).

> ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಮ್
> ತದೇತತ್ ಲಿಂಗಮಿತ್ಯುಕ್ತಂ ಲಿಂಗತತ್ತ್ವ ಪರಾಯಣೈಃ

ಯಾವುದರಲ್ಲಿ ಚರಾಚರಾತ್ಮಕವಾದದ್ದು ಅಡಕವಾಗುತ್ತದೆಯೋ ಯಾವುದರಿಂದ ಚಲನವಾಗುತ್ತದೆಯೋ ಆ ವಸ್ತುವೇ 'ಲಿಂಗ' ಎಂದು ತತ್ತ್ವಪರಾಯಣರಾದ ದಿವ್ಯಜ್ಞಾನಿಗಳು ಹೇಳಿದ್ದಾರೆ. 'ಲಿ' ಎಂದರೆ ಚರಾಚರಾತ್ಮಕವಾದ ಪ್ರಪಂಚವೆಲ್ಲವೂ ಯಾವುದರಲ್ಲಿ ಅಡಕವಾಗುವುದೋ 'ಗ' ಎಂದರೆ ಯಾವುದರಿಂದ ಅದೇ ಮೂಡುವುದೋ ಅದೇ ಪರತತ್ತ್ವ. ಅದನ್ನೇ ಲಿಂಗ ಎಂದು ಸಂಬೋಧಿಸುವುದು. ಲಿಂಗ ಮತ್ತು ಬ್ರಹ್ಮ ಇವೆರಡನ್ನು ಅಸ್ಮಿ–ಪ್ರಕಾಶ–ನಂದಾನಿ ಎಂಬ ಮೂರು ಪದಗಳ ವಿವೇಚನೆಯಿಂದ ಅರ್ಥವಿಸಿ ತಿಳಿಯಬಹುದು. ಪರಶಿವನು ತನ್ನ ಅಸ್ತಿತ್ವದ ಪರಿವೆಯುಳ್ಳವನು, ಪ್ರಕಾಶಮಯನು, ಕೇವಲ ಆನಂದ ಮಯನು. ಆತನು ವಿಶ್ವಾತ್ಮಕನೂ ಹೌದು, ವಿಶ್ವಾತೀತನೂ ಹೌದು. ಸರ್ವಕ್ಕೂ ಆಧಾರಭೂತನು. ಎಲ್ಲವೂ ಕೊನೆಗೆ ಅವನಲ್ಲೇ ಸೇರುವುದು. ಅವನು ವಿಮರ್ಶಮಯನು. ಅವನ ಇಚ್ಛಾ ಜ್ಞಾನ ಕ್ರಿಯಾ ಶಕ್ತಿಗಳು ಆತನ ವಿಮರ್ಶನ ಶಕ್ತಿಯ ನಾನಾ ಪ್ರಕಾರಗಳು. ಪ್ರಕಾಶವೆಂಬುದು ಅವನ ಕರ್ತೃತ್ವಶಕ್ತಿಯ ಆವಿರ್ಭಾವ ರೂಪವಾದದ್ದು. ಎಲ್ಲಾ ಗ್ರಾಹ್ಯಗಳೂ ಶಕ್ತಿಗಳೂ ಆತನಲ್ಲಿ ಅಡಕವಾಗಿ ಇದ್ದೇ ಇರುತ್ತವೆ. ಅವು ಕೇವಲ ಆತನ ಪ್ರಕಾಶದ ರೂಪಗಳು. ಆದುದರಿಂದ ಅವನನ್ನು ಪ್ರಕಾಶ-ವಿಮರ್ಶಮಯನೆಂದು ಕರೆಯುವರು.

### ಭೇದಾಭೇದ ವಾದ

ಪರಮಾತ್ಮ ಮತ್ತು ಪ್ರಪಂಚ ಇವುಗಳ ಸಂಬಂಧ ಭೇದಾಭೇದವಾದ್ದು. ಪ್ರಪಂಚವು ಪರಮಾತ್ಮನಿಂದ ಬೇರೆಯಾಗಿ ಕಾಣುವುದಕ್ಕೆ ಕಾರಣವಿಷ್ಟೆ. ಇವುಗಳ ಸ್ವಭಾವ ಮತ್ತು ಗುಣಗಳು ಪರಮಾತ್ಮನ ಸ್ವಭಾವ ಗುಣಗಳಿಂದ ಪ್ರತ್ಯೇಕವಾಗಿ ಕಾಣುತ್ತವೆ. ಆದರೂ ಅವು ನಿಜವಾಗಿ ಪ್ರತ್ಯೇಕವಾದವುಗಳಲ್ಲ. ಕಾರಣವಿಷ್ಟೆ : ಈ ಪ್ರಪಂಚವು ಸ್ವತಃ ತನ್ನ ಅಸ್ತಿತ್ವದಿಂದಲೇ ನಿಲ್ಲಲಾರದು; ಪರಮಾತ್ಮನ ಆಶ್ರಯದಿಂದಲೇ ಇರಬೇಕಾಗಿದೆ. ಆದುದರಿಂದ ಅಂತ್ಯದಲ್ಲಿ ನಾವು ಭಿನ್ನಭಿನ್ನವಾಗಿರುವುದರಲ್ಲಿ ಏಕತ್ವವನ್ನು ಕಾಣುತ್ತೇವೆ. ಆದರೆ ನಾನಾತ್ವ ಮತ್ತು ಏಕತ್ವ ಇವೆರಡೂ ಸತ್ಯವಾದವುಗಳೇ ಆಗಿವೆ.

ಶ್ರೀಪತಿ ಪಂಡಿತನು ಶಕ್ತಿ ವಿಶಿಷ್ಟಾದ್ವೈತ ತತ್ತ್ವವನ್ನು ಪ್ರತಿಪಾದಿಸುವುದರಲ್ಲಿ (ಶ್ರೀಕಂಠ ಶಿವರ ಶಕ್ತಿ ವಿಶಿಷ್ಟಾದ್ವೈತ ತತ್ತ್ವಕ್ಕಿಂತ ತನ್ನ ವ್ಯಾಖ್ಯಾನವು ಪ್ರತ್ಯೇಕವಾದದ್ದೆಂದು ತೋರಿಸುವುದಕ್ಕಾಗಿ ತನ್ನದು ವಿಶೇಷಾದ್ವೈತವೆಂದು ಹೇಳಿಕೊಂಡಿದ್ದಾನೆ) ನಮ್ಮ ಕಣ್ಣಿಗೆ ಕಾಣುವ ಪ್ರಪಂಚವು ಮಿಥ್ಯವಾದದ್ದಲ್ಲ, ಸತ್ಯವೆಂದು ಸಮರ್ಥಿಸಿದ್ದಾನೆ. ಈತನು ಪರಿಣಾಮವಾದವನ್ನು ಸಮರ್ಥಿಸುತ್ತಾ ಅನೇಕಾಂತವಾದದ ರೀತಿಯಾಗಿ ಎಲ್ಲವೂ ಶಾಶ್ವತವಾದದ್ದು. ಬೀಜದಲ್ಲಿ ಮರದ ಎಲ್ಲ ಭಾಗಗಳೂ ಹೇಗೆ ಅಡಕವಾಗಿವೆಯೋ ಹಾಗೆಯೇ ಈ ಪ್ರಪಂಚವೆಲ್ಲವೂ ಆ ಪರಮಾತ್ಮನ ಶಕ್ತಿಯಲ್ಲಿ ಅಡಗಿವೆ. ಏಕತ್ವವೂ ಅನೇಕತ್ವವೂ ಆ ಪರಮಾತ್ಮನ ಎರಡು ಮುಖಗಳೆಂದೂ ಅನಭಿವ್ಯಕ್ತವಾದ ಸ್ಥಿತಿಯೇ ಏಕತ್ವವೆಂದು ವ್ಯಕ್ತರೂಪವೇ ಬಹುತ್ವವೆಂದು ಸಮರ್ಥಿಸಿದ್ದಾನೆ. ಅಭಿವ್ಯಕ್ತವಾಗದೆ ಇರುವ ಸ್ಥಿತಿಯನ್ನೇ ಶಿವಶಕ್ತಿಗಳು ಅಭಿನ್ನವಾಗಿರುವ ಸ್ಥಿತಿಯೆಂದೇ ತಿಳಿಯುವುದು ಒಂದು ಮೂಲಕಾರಣ, ಇನ್ನೊಂದು ಉಪಾದಾನ

ಕಾರಣ. ಇವುಗಳ ಪರಸ್ಪರ ಸಂಬಂಧವನ್ನು ಅಯಸ್ಕಾಂತ ಮತ್ತು ಅದರ ಆಕರ್ಷಣ ಶಕ್ತಿಗೆ ಅಥವಾ ಬೆಂಕಿ ಮತ್ತು ಅದರ ಸುಡುವ ಶಕ್ತಿಗೆ ಹೋಲಿಸಬಹುದು. ಇದನ್ನೇ ಶಿವಶಕ್ತಿಗಳ ತಾದಾತ್ಮ್ಯವೆಂದು ಹೇಳುವುದು.

ಶಿವ-ಜೀವರ ಸಂಬಂಧವು ಪೂಜ್ಯ–ಪೂಜಕರ ಸಂಬಂಧ. ಪೂಜಕನು ಮಿತಜ್ಞಾನವುಳ್ಳವನು. ಪೂಜ್ಯನು, ಸರ್ವಜ್ಞನು, ಸರ್ವವ್ಯಾಪಕನು. ಜೀವಾತ್ಮನ ಪರಿಮಿತ ಸಂಕೋಚಗಳು ಆದಿಯಿಲ್ಲದವು ಮತ್ತು ಸ್ವಾಭಾವಿಕವಾದವು. ಆದರೆ ನದಿಯು ಹರಿಯುತ್ತಾ ಹೋಗಿ ಹೇಗೆ ಸಮುದ್ರವನ್ನು ಸೇರುತ್ತದೆಯೋ ಹಾಗೆ ಈ ಪರಿಮಿತ ಸಂಕೋಚಗಳು ಮತ್ತು ವ್ಯತ್ಯಾಸಗಳೆಲ್ಲವೂ ಬ್ರಹ್ಮನಲ್ಲಿ ಸೇರಿ ಜೀವಾತ್ಮನು ಬಿಡುಗಡೆಯನ್ನು ಹೊಂದುವನು. ಕಪ್ಪೆ ಚಿಪ್ಪಿನಲ್ಲಿ ಬಿದ್ದ ಮಳೆ ಹನಿಗಳು ಹೇಗೆ ಮುತ್ತುಗಳಾಗಿ ಪರಿಣಮಿಸುತ್ತವೆಯೋ ಹಾಗೆ ಮಾನವನ ದೌರ್ಬಲ್ಯಗಳು ಮತ್ತು ಪರಿಮಿತ ಸಂಕೋಚಗಳು ಶಿವನಲ್ಲಿ ಸೇರಿ ಮಾಯವಾಗುವವು—ಎಂದು ಶ್ರೀಪತಿ ಪಂಡಿತನು ಅಭಿಪ್ರಾಯಪಟ್ಟಿದ್ದಾನೆ.

**ಶಿವ–ಶಕ್ತಿ**

ಶಿವನು ಸದಾ ಶಕ್ತಿಯೊಂದಿಗೆ ಕೂಡಿದ್ದಾನೆ. ಈ ಶಕ್ತಿಯು ಅವನನ್ನು ಎಡೆಬಿಡದೆ, ಚಿತ್‌ಸ್ವರೂಪದಲ್ಲಿರುವುದಾಗಿದೆ. ಶಿವ ಶಕ್ತಿಯರು ಅವಿಭಾಜ್ಯವಾಗಿ ಒಂದೇ ಪರತತ್ತ್ವದ ಎರಡು ಮುಖಗಳು. ಆದರೆ ಶಕ್ತಿಯು ಶಿವನ ಆಜ್ಞೆಯ ಪ್ರಕಾರ ಕಾರ್ಯೋನ್ಮುಖವಾಗಿ ಕಾರ್ಯ ನಡೆಸುವವಳು. ಈ ಕಾರಣದಿಂದ ಶಿವನನ್ನು ಶಕ್ತಿವಿಶಿಷ್ಟನೆಂದು ಹೇಳುವುದು. ಅಸಾಧಾರಣವಾದ ಕಾರ್ಯವನ್ನು ನಡೆಸುವ ಶಕ್ತಿ ಸಾಮರ್ಥ್ಯವುಳ್ಳ ಗುಣಧರ್ಮಗಳಿಂದ ಕೂಡಿರುವುದು. ಶಿವ ಶಕ್ತಿಯರು ಅವಿನಾಭಾವದಿಂದ ಕೂಡಿರುವುದರಿಂದ ಶಕ್ತಿ ವಿಶಿಷ್ಟಾದ್ವೈತವೆಂದು ವೀರಶೈವ ಮತಕ್ಕೆ ಹೆಸರು ಬಂದಿತು.

> ಲಿಂಗಂ ಶೈವಂ ಇದಂ ಸಾಕ್ಷಾತ್
> ಶಿವ ಶಕ್ತ್ಯುಭಯಾತ್ಮಕಂ (ಸೂಕ್ಷ್ಮಾಗಮ IV, 3)

ಲಿಂಗವೆಂಬುದು ಶಿವಶಕ್ತಿಯರ ಆಧ್ಯಾತ್ಮಿಕ ಸತ್ ಸ್ವರೂಪ.

ಪರಶಿವನೇ ವಿಶ್ವಸೃಷ್ಟಿಗೆ ಮೂಲಕಾರಣ. ಈ ರೀತಿಯಾದ ವಿಶ್ವಸೃಷ್ಟಿಯಿಂದ ಅವನ ಶಕ್ತಿಯಲ್ಲಿ ಯಾವ ಕುಂದಾಗಲೀ ಕೊರತೆಯಾಗಲಿ ಉಂಟಾಗುವುದಿಲ್ಲ. ಇದಕ್ಕೆ ಕಾರಣವಿಷ್ಟೆ : ಅವಿನಾಭಾವದಿಂದಿರುವ ತನ್ನ ಶಕ್ತಿಯಿಂದಲೇ ಸೃಷ್ಟಿಯಾಗುವುದು. ಈ ಶಕ್ತಿಯನ್ನೇ ಪರಾಶಕ್ತಿಯೆಂದು ಕರೆಯುವುದು. ಇದು ಅಘಟಿತ ಘಟನಾ ಸಾಮರ್ಥ್ಯವುಳ್ಳದ್ದು. ಈ ಪರಾಶಕ್ತಿಯು ಮಹಾ ಮಾಯಾ ಅಥವಾ ಊರ್ಧ್ವಮಾಯಾ ಮತ್ತು ಅಧೋಮಾಯಾ ಅಥವಾ ಮಾಯಾ–ಎಂದು ಎರಡು ರೂಪಗಳಲ್ಲಿ ಅಭಿವ್ಯಕ್ತವಾಗುತ್ತದೆ. ಮಹಾ ಮಾಯೆಯು ಶುದ್ಧಾಧ್ವ ಸ್ವರೂಪವುಳ್ಳದ್ದು. ಅದು ಮೋಹವನ್ನುಂಟುಮಾಡುವುದಿಲ್ಲ. ಅಧೋ ಮಾಯೆಯೇ ಮೋಹವನ್ನುಂಟುಮಾಡತಕ್ಕದ್ದು. ಸ್ವಸ್ವರೂಪವನ್ನು ಮರೆಸತಕ್ಕದ್ದು. ಪರಮೇಶ್ವರನ ಪಂಚಶಕ್ತಿಗಳನ್ನು ಸಂಕೋಚಗೊಳಿಸಿ ಮೂವತ್ತು ತತ್ವಗಳಿಂದ ಕೂಡಿದ ಪ್ರಪಂಚವನ್ನು ಸೃಷ್ಟಿ ಮಾಡುವುದು. ಶೈವ ಧರ್ಮದಂತೆ ಪ್ರಪಂಚವು 36 ತತ್ವಗಳಿಂದ ಕೂಡಿದ್ದಾಗಿರುವುದು. ಪರಶಿವನ ವಿಮರ್ಶ ಶಕ್ತಿಯಿಂದ ಇಚ್ಛಾ ಜ್ಞಾನ ಕ್ರಿಯಾ ಶಕ್ತಿಗಳು ಆವಿರ್ಭಾವವಾಗುವುವು ; "ಸ್ವಾಶ್ರಯಾ ಮೋಹ ಕಾರಿಣೀ" ಅಂದರೆ ತನ್ನಿಂದಲೇ ತನ್ನಲ್ಲೆ ಮೋಹವನ್ನುಂಟುಮಾಡುವುದು. ಈ ಮಾಯೆಯೇ ನಿಜಸ್ವರೂಪವನ್ನು ಮರೆಯಿಸಿ ಪರಶಿವನ ಶಕ್ತಿಗಳನ್ನು ಸಂಕೋಚಗೊಳಿಸಿ, ಮೂವತ್ತು ತತ್ತ್ವಗಳಾಗಿ ಪರಿಣಮಿಸುವುದು.

ಶೈವ ತತ್ವ ಸಂಪ್ರದಾಯದಂತೆ ಈ ಭೌತಿಕ ಪ್ರಪಂಚವು 36 ತತ್ತ್ವಗಳಿಂದ ಕೂಡಿರುವುದು. ಪರಶಿವನ ಇಚ್ಛಾ ಜ್ಞಾನ ಕ್ರಿಯಾಶಕ್ತಿಗಳು ವಿಮರ್ಶ ಶಕ್ತಿಯ ನಾನಾ ರೂಪಗಳು. ಪ್ರಕಾಶವೆಂಬುದು ಪರಶಿವನ ಅಭಾವರೂಪವಾದ ಸೃಷ್ಟಿಮಾಡುವ ಶಕ್ತಿ. ಇಂದ್ರಿಯ ಗೋಚರವಾದ ವಸ್ತುಗಳೂ ಶಕ್ತಿಗಳೂ ಆ ಪರಶಿವನಲ್ಲಿ ಅಡಗಿವೆ. ನಾವು ಕಾಣುವುದು ಅವುಗಳ ಅಭಿವ್ಯಕ್ತ ರೂಪ. ಆದುದರಿಂದ ಶಿವನು ಪ್ರಕಾಶ-ವಿಮರ್ಶಮಯನು. ಇಲ್ಲಿ ಮಾಯೆಯೆಂಬುದನ್ನು ಅದ್ವೈತವಾದಿಗಳು ಹೇಳುವಂತೆ ಮಿಥ್ಯೆ ಎಂಬರ್ಥದಲ್ಲಿ ಉಪಯೋಗಿಸಿಲ್ಲ. ವಿಶ್ವ ಸೃಷ್ಟಿಗೂ ಜೀವಾತ್ಮರುಗಳ ಸೃಷ್ಟಿಗೂ ಕಾರಣವಾದ ಪರಮೇಶ್ವರನ ಮಧ್ಯವರ್ತಿಯಾದ ಶಕ್ತಿಯೇ ಮಾಯೆಯೆಂಬುದು.

ಶಿವನು ತನ್ನಲ್ಲಿ ಯಾವ ವ್ಯತ್ಯಾಸವನ್ನೂ ಹೊಂದದೆ ಲಿಂಗ (ಶುದ್ಧಚಿತ್) ಮತ್ತು ಅಂಗ (ಜೀವಾತ್ಮ) ಈ ಎರಡು ರೂಪದಲ್ಲಿ ಪ್ರಕಾಶಿತನಾಗಿದ್ದಾನೆ. ಸ್ಥಲ ಶಬ್ದವಾಚ್ಯನಾದ ಪರಮೇಶ್ವರನು ಬ್ರಹ್ಮಜೀವರುಗಳಾಗಿರುವ ಹಾಗೆ ಅವನ ಶಕ್ತಿಯೂ ಕೂಡ ಎರಡು ರೂಪದಲ್ಲಿ ಅಭಿವ್ಯಕ್ತವಾಗಿದೆ. ಶಕ್ತಿಯು ಮಧ್ಯವರ್ತಿಯಾಗಿ ಮಹೇಶ್ವರಿ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಅದು ಒಂದು ರೀತಿಯಾಗಿ ಬ್ರಹ್ಮ ಸ್ವರೂಪವಾದ ಲಿಂಗಕ್ಕೆ ಸಂಬಂಧಪಟ್ಟದ್ದಾಗಿಯೂ ಇನ್ನೊಂದು ಜೀವಕ್ಕೆ ಸಂಬಂಧಪಟ್ಟದ್ದಾಗಿಯೂ (ವ್ಯವಹರಿಸುತ್ತದೆ. ವಸ್ತುತಃ ಶಕ್ತಿಯೂ ಭಕ್ತಿಯೂ ವ್ಯವಹಾರದಲ್ಲಿ ಎರಡೂ ಒಂದೇ ಆಗಿವೆ. ಶಕ್ತಿಭಕ್ತ್ಯೋರ್ನ ಭೇದೋಽಸ್ತಿ). ಸೃಷ್ಟಿಮಾಡುವುದಕ್ಕೆ ಶಕ್ತಿಯು ಹೊರಟಾಗ ಅದು ಪ್ರವೃತ್ತಿಯೆಂದೂ ಅದೇ ಹಿಂದಿರುಗಿ ಮೂಲವನ್ನು ಸೇರುವುದಾದರೆ ನಿವೃತ್ತಿ ಎಂದೂ ಹೆಸರು. ಶಕ್ತಿಯು ಎರಡು ರೀತಿಯಾಗಿ ತನ್ನ ಕಾರ್ಯವನ್ನು ನೆರವೇರಿಸುತ್ತದೆ. ಒಂದು ಪ್ರಪಂಚ ಸೃಷ್ಟಿರೂಪವಾಗಿದೆ; ಇನ್ನೊಂದು ಭಕ್ತಿರೂಪವಾಗಿ ಪರಶಿವನಲ್ಲಿ ಸೇರುತ್ತದೆ.

ಶಕ್ತ್ಯಾ ಪ್ರಪಂಚ ಸೃಷ್ಟಿಃಸ್ಯಾತ್
ಭಕ್ತ್ಯಾ ತದ್ವಿಲಯೋ ಮತಃ (ಅನುಭವ ಸೂತ್ರ)

ಪ್ರಪಂಚ ವ್ಯವಹಾರವೆಲ್ಲಾ ಶಕ್ತಿ. ಅದು ಭಕ್ತಿಯಿಂದ ನಾಶ.

ಒಂದೇ ಶಕ್ತಿಯು ಎರಡು ರೂಪವಾಗಿ ಮಾಯಾ ಮತ್ತು ಭಕ್ತಿ ಎಂಬ ಹೆಸರಿನಿಂದ ಕರೆಯಲ್ಪಟ್ಟಿದೆ. ಲಿಂಗದಲ್ಲಿನ ಶಕ್ತಿಯು ಅಂಗದಲ್ಲಿ ಭಕ್ತಿಯಾಗಿ ಪರಿಣಮಿಸುತ್ತದೆ. ಲಿಂಗಾಂಗ ಸಾಮರಸ್ಯವೇ ಶಿವ ಜೀವರ ಐಕ್ಯ.

### ಪ್ರಪಂಚ ಸೃಷ್ಟಿ–36 ತತ್ತ್ವಗಳು

ಈ ಭೌತ ಪ್ರಪಂಚವು 36 ತತ್ತ್ವಗಳಿಂದ ಕೂಡಿದೆಯೆಂದು ವೀರಶೈವರು ತಿಳಿದಿರುವರು. ಪರಶಿವನೇ ಘನತರವಾದ ಪರತತ್ತ್ವ. ಅವನಿಗಿಂತಲೂ ಹೆಚ್ಚಿನದು ಯಾವುದೂ ಇಲ್ಲ. ಭೌತ ಪ್ರಪಂಚವೂ ಜೀವಾತ್ಮನೂ ಆ ಪರಶಿವನ ಅಭಿವ್ಯಕ್ತ ರೂಪಗಳು. ಪ್ರಪಂಚವೂ ಜೀವಾತ್ಮನೂ 36 ತತ್ತ್ವಗಳ ಪುಂಜ. ಮೊದಲಿನ ಶಿವ, ಶಕ್ತಿ, ಸದಾಶಿವ, ಈಶ್ವರ, ಶುದ್ಧವಿದ್ಯಾ ತತ್ತ್ವಗಳು ಚಿತ್ಸ್ವರೂಪದಲ್ಲಿನ ಅಭಿವ್ಯಕ್ತ ಶುದ್ಧ ವರ್ಗಕ್ಕೆ ಸೇರಿದವುಗಳು. ಇವುಗಳನ್ನು ತರ್ಕದಿಂದ ಸಮರ್ಥಿಸುವುದಕ್ಕೆ ಸಾಧ್ಯವಿಲ್ಲ. ಆದರೆ ಅನುಭವದಿಂದ ಗ್ರಹಿಸಬಹುದು. ಶೈವಾಗಮಗಳೇ ಇವಕ್ಕೆ ಆಧಾರ. ಪರಶಿವನು ತನ್ನಿಂದಲೇ ಪ್ರಪಂಚ ಸೃಷ್ಟಿಯನ್ನು ಮಾಡಲು ಉದ್ದೇಶಿಸಿ ತಾನೇ ಆ ಐದು ತತ್ತ್ವಗಳಾಗಿ ಹೊರ ಹೊಮ್ಮುತ್ತಾನೆ. ಆಗ ಪ್ರಪಂಚ ಸೃಷ್ಟಿಗೆ ಅನುಕೂಲವಾಗಿ ತನ್ನ ಸೂಕ್ಷ್ಮವಾದ ಗುಣಗಳನ್ನು ಸಂಕೋಚ

ಗೊಳಿಸಿಕೊಂಡು ಈ ಲೋಕವನ್ನು ಸೃಷ್ಟಿಸುತ್ತಾನೆ. ಇವೆಲ್ಲ ನಡೆಯುವುದು ಚಿತ್ಸ್ವರೂಪಾವಸ್ಥೆಯಲ್ಲಿ. ಇವುಗಳಲ್ಲಿ ಯಾವ ವಿಧವಾದ ಮಲಗಳಿಲ್ಲ. ಇಲ್ಲಿ ಚಿತ್ಸ್ವರೂಪವೇ ಪ್ರಧಾನವಾಗಿರುವುದರಿಂದ ಇವುಗಳನ್ನು ಶುದ್ಧ ವಿದ್ಯಾತತ್ತ್ವಗಳೆಂದು ಕರೆಯುವರು.

ಉಳಿದ ಏಳು ತತ್ತ್ವಗಳು: ಮಾಯಾ, ಕಾಲ, ನಿಯತಿ, ಕಲಾ, ವಿದ್ಯಾ, ರಾಗ ಮತ್ತು ಪುರುಷ. ಇವುಗಳು ಚಿತ್–ಅಚಿತ್ ರೂಪಗಳು. ಇವುಗಳನ್ನು ಶುದ್ಧಾಶುದ್ಧ ತತ್ತ್ವಗಳೆನ್ನುವರು. ಇವುಗಳನ್ನು ತಾತ್ತ್ವಿಕವಾಗಿ ಒಂದು ಗುಂಪಾಗಿ ವಿಂಗಡಿಸಿದ್ದಾರೆ. ಈ ಶೈವ ಸಂಪ್ರದಾಯದಂತೆ ಜೀವಾತ್ಮನು ಪರಮಾತ್ಮನಿಗಿಂತ ಬೇರೆಯಲ್ಲ. ಆದರೆ ಕೆಲವು ಶಕ್ತಿ ಸಂಕೋಚರೂಪವಾದ ಮಲಗಳಿಂದ ಆವೃತನಾಗಿದ್ದಾನೆ. ಇಲ್ಲಿ ಮಾಯೆಯೆಂಬುದು ಕೆಳಗಿನ ತತ್ತ್ವಗಳಿಗೆ ಮೂಲ ಕಾರಣ. ಮಾಯೆಯ ಪ್ರಭಾವದಿಂದ ಜೀವನು ಸಂಕೋಚಗಳನ್ನು ಹೊಂದಿ ಬದ್ಧಾತ್ಮನಾಗಿದ್ದಾನೆ. ಮಾಯೆಯ ಮೊದಲಿನ ಸೃಷ್ಟಿಯೆಂದರೆ: ಕಾಲ, ನಿಯತಿ, ಕಲಾ, ರಾಗ ಮತ್ತು ವಿದ್ಯೆ. ಉಳಿದ 24 ತತ್ತ್ವಗಳು ಅಶುದ್ಧ ತತ್ತ್ವಗಳು. ಇವುಗಳು ಸಾಂಖ್ಯರ 24 ತತ್ತ್ವಗಳನ್ನೆ ಹೋಲುವುವು (ಸಿದ್ಧಾಂತ ಶಿಖಾಮಣಿ 1, 3, ಶಿವಾದ್ವೈತ ಮಂಜರಿ).

ವೀರಶೈವ ಸಂಪ್ರದಾಯದವರ ಷಟ್ಸ್ಥಲ ತತ್ತ್ವವನ್ನು ಈ ರೀತಿಯಾಗಿ ವಿವೇಚಿಸಬಹುದು : ಷಟ್ಸ್ಥಲಗಳು—ಲಿಂಗ ಮತ್ತು ಅಂಗವೆಂಬ ಉಭಯ ರೂಪವಾದ ಆರು ಆಧ್ಯಾತ್ಮಿಕ ನಿಲವುಗಳು.

ಅರವಿಂದಾಶ್ರಮದ ಶ್ರೀ ಎಂ. ಪಿ. ಪಂಡಿತರು ಗ್ರಂಥ ವಿಮರ್ಶೆಯೊಂದರಲ್ಲಿ ಸಂಗ್ರಹವಾಗಿ ಹೇಳಿರುವ ಈ ಷಟ್ಸ್ಥಲ ವಿವರಣೆಯನ್ನೇ ಈ ಕೆಳಗೆ ಉದಾಹರಿಸಿದೆ.

ಇಲ್ಲಿ ಪರತತ್ತ್ವ ಪರಮಾತ್ಮವನ್ನು ಸಾಕಾರವೆಂದೂ ನಿರಾಕಾರವೆಂದೂ ವಿಭಜನೆ ಮಾಡಿ ವಿವೇಚಿಸಿದೆ.

ಪರತತ್ತ್ವವನ್ನು 'ಸ್ಥಲ' ಶಬ್ದದಿಂದ ವ್ಯವಹರಿಸುವರು. ಇದು ರೂಪರಹಿತ ಮತ್ತು ರೂಪ ಸಹಿತವಾಗಿದೆ. (ಸ್ಥಲ: ಸ್ಥ–ಮೂಲ, ಲ–ಅಂತ್ಯದ ನೆಲೆ). ಸೃಷ್ಟಿಗೆ ಕಾರಣಕರ್ತನಾದವನೇ ಶಿವ. ಅವನು ಸ್ವಾಭಾವಿಕವಾಗಿ ವಿಮರ್ಶ ಶಕ್ತಿಯಿಂದ ಕೂಡಿದ್ದಾನೆ. ಈ ಶಕ್ತಿಯಿಂದ ತಾನು ಸ್ವತಂತ್ರನಾಗಿ ಹೊರಹೊಮ್ಮಬಲ್ಲನು. ಹೊರಗಿನದನ್ನು ತನ್ನಲ್ಲಿ ಅಡಗಿಸಿಕೊಳ್ಳಬಲ್ಲನು. ಹೊರ ಹೊಮ್ಮದೆ ಇರುವ ಸ್ಥಿತಿಯಲ್ಲಿ ಅವನು ಸ್ವಯಂಭುವಾಗಿರುವನು. ಇನ್ನೊಂದು ಸ್ಥಿತಿಯಲ್ಲಿ ತಾನು ಅಭಿವ್ಯಕ್ತ ಸ್ಥಿತಿಯಲ್ಲಿರುವನು. ಅಂದರೆ ಪರಶಿವನು ತನ್ನ ಇಚ್ಛಾಮನೋಭಾವದ ಪ್ರಕಾರ ಸರೂಪವಾಗಿಯಾಗಲಿ ನೀರೂಪವಾಗಿಯಾಗಲಿ ಇರುವನು. ಇದು ಅವನ ಲೀಲೆ. ಸ್ಥಲಶಬ್ದವಾಚ್ಯನಾದ ಶಿವನು ತನ್ನ ಲೀಲಾವಿನೋದದಿಂದ ಲಿಂಗ-ಅಂಗ, ಶಿವ-ಜೀವ ಎಂಬ ಎರಡು ರೂಪದಲ್ಲಿ ವ್ಯವಹರಿಸುವನು. ಅವಿಭಾಜ್ಯವಾದ ಶಕ್ತಿಯೇ ಅಂಗವನ್ನಾಶ್ರಯಿಸಿ ಅದು ಭಕ್ತಿಯೆನಿಸಿಕೊಂಡಿರುವುದು. ಕಲಾ ಎನಿಸಿ ಲಿಂಗವನ್ನಾಶ್ರಯಿಸಿಕೊಂಡಿರುವುದು. (ಶರಣಾಗತಿಯಿಂದ ಕೂಡಿದ ಪೂಜೆಯೇ ಇಲ್ಲಿ ಭಕ್ತಿ ಎನ್ನಿಸಿಕೊಳ್ಳುವುದು).

ಲಿಂಗ (ಶಿವಸ್ವರೂಪ)—ಶಿವನೇ ಈ ರೂಪವಾಗಿರುವುದು, ಇದನ್ನೇ ಇಷ್ಟಲಿಂಗವೆಂದು ಸಂಬೋಧಿಸುವುದು. ಜೀವಾತ್ಮನು ಜಾಗ್ರತಾವಸ್ಥೆಯಲ್ಲಿ ಇಷ್ಟಲಿಂಗಾರಾಧನೆಯಿಂದ ತ್ಯಾಗಾಂಗ ಭಾವವನ್ನು ಹೊಂದುವನು. ಇಷ್ಟಲಿಂಗವು ಆಚಾರಲಿಂಗ ಮತ್ತು ಗುರುಲಿಂಗ ಎಂಬ ಎರಡು ರೂಪಗಳನ್ನು ತಾಳುವುದು. ಆಚಾರಲಿಂಗಾರಾಧನೆಯಿಂದ ತ್ಯಾಗಾಂಗದಲ್ಲಿ ಭಕ್ತಿಯು ನೆಲೆಗೊಂಡು ಭಕ್ತಸ್ಥಲವೆನ್ನಿಸಿಕೊಳ್ಳುವುದು.

ಗುರುಲಿಂಗಾರಾಧನೆಯಿಂದ ತ್ಯಾಗಾಂಗಭೂಮಿಕೆಯಲ್ಲಿ ದೃಢಭಕ್ತಿಯು ನೆಲೆಗೊಂಡು ಮಹೇಶ್ವರ ಸ್ಥಲವನ್ನು ಹೊಂದುವುದು.

ಶಿವನು ಸರೂಪಿಯಾಗಿ 'ಸಕಲ'ನೆಂದೂ, ರೂಪಿಲ್ಲದೆ (ಚಿದ್ರೂಪಿ) 'ನಿಷ್ಕಲ' ನೆಂದೂ ಪ್ರಾಣ ಲಿಂಗಾರಾಧಕನಾಗುವನು. ಜೀವಾತ್ಮನು ಸ್ವಪ್ನಾವಸ್ಥೆಯಲ್ಲಿ ಸೂಕ್ಷ್ಮಗತಿಯಿಂದ ಭೋಗಾಂಗಿ ಯಾಗುವನು. ಪ್ರಾಣಲಿಂಗವು ಶಿವಲಿಂಗ ಚರಲಿಂಗವೆಂದು ಎರಡು ಭೇದಗಳನ್ನು ತಾಳುವುದು. ಶಿವ ಲಿಂಗಾರಾಧನೆಯಿಂದ ಭೋಗಾಂಗಿಯು ಧ್ಯಾನಮಗ್ನನಾಗಿ ಪ್ರಸಾದಿಸ್ಥಲವನ್ನು ಹೊಂದುವನು. ಚರ ಲಿಂಗಾರಾಧನೆಯಿಂದ ಭೋಗಾಂಗಿಯಾಗಿ ಅನುಭವಾರೂಢನಾಗಿ ಪ್ರಾಣಲಿಂಗಿ ಸ್ಥಲವನ್ನು ಹೊಂದುವನು.

ರೂಪಿಲ್ಲದ ಶಿವನು (ನಿಷ್ಕಲ) ಭಾವಲಿಂಗವೆನ್ನಿಸಿಕೊಳ್ಳುವನು. ಸುಷುಪ್ತ್ಯವಸ್ಥೆಯಲ್ಲಿ ಯೋಗಾಂ ಗಿಯಾಗಿರುವನು. ಭಾವಲಿಂಗವು ಪ್ರಸಾದಲಿಂಗ ಮಹಾಲಿಂಗವೆಂದು ಎರಡು ರೂಪವನ್ನು ತಾಳುವುದು. ಪ್ರಸಾದಲಿಂಗಿಯು ಧ್ಯಾನಮಗ್ನನಾಗಿ ಹರ್ಷಚಿತ್ತನಾಗಿ ಶರಣಸ್ಥಲವನ್ನು ಸೇರುವನು. ಮಹಾಲಿಂಗಿಯು ಘನ ಚಿತ್ತೋಪಾಸನೆಯಿಂದ ಯೋಗಾಂಗಿಯಾಗಿ ಐಕ್ಯಸ್ಥಲವನ್ನು ಹೊಂದುವನು.

ಈ ರೀತಿಯಾಗಿ ಪರತತ್ತ್ವವು ಸಕಲ–ನಿಷ್ಕಲ ರೂಪಗಳೆರಡನ್ನೂ ಹೊಂದುವುದು. ಮೇಲೆ ವಿವರಿಸಿದ ರೂಪಗಳಿಂದ ವಿಕಾಸವಾಗುವುದು. ಹಾಗೆಯೇ ವಿಶ್ವವು 36 ತತ್ತ್ವಗಳಿಂದಕೂಡಿ ಪ್ರಕಾಶಕ್ಕೆ ಬಂದಿರುವುದು: ಶಿವ, ಶಕ್ತಿ, ಸದಾಶಿವ, ಈಶ್ವರ, ಸದ್ವಿದ್ಯಾ, ಮಾಯಾ, ಐದು ಕಂಚುಕಗಳು(ಕಾಲ, ನಿಯತಿ, ರಾಗ, ವಿದ್ಯಾ, ಕಲಾ), ಪುರುಷ, ಪ್ರಕೃತಿ, ಮಹತ್, ಅಹಂಕಾರ, ಐದು ತನ್ಮಾತ್ರೆಗಳು, ಮನಸ್ಸು, ಐದು ಜ್ಞಾನೇಂದ್ರಿಯ ಗಳು, ಐದು ಕರ್ಮೇಂದ್ರಿಯಗಳು ಮತ್ತು ಪಂಚಭೂತಗಳು. ಪರಮೇಶ್ವರನ ಶಕ್ತಿ ಯಾವಾಗ ಉನ್ಮೇಷವಾಗಿ ಹೊರಹೊಮ್ಮುತ್ತದೆಯೋ ಆಗ ವಿಶ್ವವು ಪ್ರಕಾಶಕ್ಕೆ ಬರುತ್ತದೆ. ಪರಶಿವನೇ ಈ ರೀತಿಯಾಗಿ ವಿಕಾಸವನ್ನು ಹೊಂದಿ ಅಭಿವ್ಯಕ್ತನಾಗಿದ್ದರೂ ಅವನ ಮೂಲಸ್ವರೂಪಕ್ಕೆ ಯಾವ ಚ್ಯುತಿಯೂ ಇರುವುದಿಲ್ಲ. ಅವನು ಸ್ವಯಂಭುವಾಗಿಯೇ ಇರುವನು. ಒಂದೇ ಮಾತಿನಲ್ಲಿ ಹೇಳುವುದಾದರೆ, ಈ ವಿಶ್ವೋತ್ಪತ್ತಿಯು ಪರಮೇಶ್ವರನ ಲೀಲೆಯಿಂದ ಉತ್ಪನ್ನವಾಯಿತೆನ್ನಬಹುದು. ಹೀಗೆ ಅಭಿವ್ಯಕ್ತವಾದ ಪ್ರತಿಯೊಂದು ಮಟ್ಟದ ಉತ್ಪನ್ನದಲ್ಲಿಯೂ ಸೃಷ್ಟಿಕರ್ತನಾದ ಪರಮೇಶ್ವರನಿಗೂ ಸೃಷ್ಟಿಸಿದ ವಿಶ್ವಕ್ಕೂ ಲಿಂಗ ಅಂಗದ ಅನನ್ಯ ಭಾವವು ನೆಲೆಗೊಂಡಿರುತ್ತದೆ. ಈ ಕಾರಣದಿಂದ ಶಿವ—ಜೀವರ ಐಕ್ಯವು ಪ್ರತಿಯೊಂದು ಆಧ್ಯಾತ್ಮಿಕ ಹಂತದಲ್ಲಿಯೂ ತಕ್ಕ ಸಾಧನಾಭ್ಯಾಸಗಳಿಂದ ಸಮರಸವನ್ನು ಹೊಂದಿ, ಮುಂದೆ ಸಾಗುವುದು.

**ಶಿವಯೋಗ**

ಪರಶಿವನೊಂದಿಗೆ ಐಕ್ಯವನ್ನು ಹೊಂದುವ ಸಾಧನಾಕ್ರಮವನ್ನೇ ಶಿವಯೋಗವೆನ್ನುವರು ಅಂತರ್ಯವಾಗಿ ಧ್ಯಾನಾಭ್ಯಾಸಗಳನ್ನು ಮಾಡುವುದೇ ನಿಜವಾದ ಪೂಜೆ ಎನ್ನಿಸಿಕೊಳ್ಳುವುದು. ಆದರೆ ಕಾಯಕ್ರಮಗಳಿಂದ ಮಾಡುವ ಬಾಹ್ಯ ಪೂಜೆಯಿಂದ ಪರಿಪುಷ್ಟನಾಗಿ ಅಂತರ್ಯ ಧ್ಯಾನಾಭ್ಯಾಸಗಳು ಮುಂದುವರಿಯುವುವು. ಈ ಕಾರಣದಿಂದ "ಮುಖ್ಯಾಭ್ಯಂತರ ಪೂಜಾ ಸಾ ಚ ಬಾಹ್ಯಾರ್ಚನೋದಿತಾ" (ಶಿವಯೋಗ ಪ್ರದೀಪಿಕಾ)–ಸ್ವತಂತ್ರವಾಗಿ ಅಂತರ್ಯವಾಗಿ ಮಾಡುವ ಪೂಜೆಯೇ ಬಾಹ್ಯಾರ್ಚನ ರೂಪವಾಗಿ ಹೊರಹೊಮ್ಮುವುದು. ಇದನ್ನೇ ಕ್ರಿಯಾಮಾರ್ಗವೆಂದು ಹೇಳುವುದು. ಹೊರಗೆ ಮಾಡುವ ಲಿಂಗಾರ್ಚನೆಯ ಮೂಲಕ ಮಾಡುವ ಪೂಜೆಯು ಅಂತರ್ಯದ ಪೂಜೆ (ಸನ್ಮಾರ್ಗ) ಯಲ್ಲಿ ಕೊನೆ ಗೊಳ್ಳುವುದು.

ಶಿವಪೂಜೆ ಮತ್ತು ಶಿವಧ್ಯಾನಗಳಿಗೆ ಅತ್ಯಾವಶ್ಯಕವಾಗಿರುವುದು ಲಿಂಗಾರಾಧನೆ. ಇದಕ್ಕಾಗಿ ಶಿವನ ಗುರುತಾದ ಲಿಂಗವನ್ನು ದೇಹದ ಮೇಲೆ ಧರಿಸುವುದು ಅಗತ್ಯ. ಭಕ್ತನು ಲಿಂಗವನ್ನು ಅಂಗದ ಮೇಲೆ ಧರಿಸುವುದಕ್ಕೆ ಮುಂಚೆ ದೀಕ್ಷಾ ಸಂಸ್ಕಾರವನ್ನು ಹೊಂದಬೇಕು. ಬಂಧನಕ್ಕೊಳಗಾದ ಜೀವಾತ್ಮನು ಬಂಧನ ದಿಂದ ಬಿಡಿಸಿಕೊಳ್ಳಲು ದೀಕ್ಷಾಸಂಸ್ಕಾರವು ಏರ್ಪಟ್ಟಿದೆ. ಈ ದೀಕ್ಷೆಯು ವೇಧಾ, ಕ್ರಿಯಾ, ಮನು ಎಂದು ಮೂರು ವಿಧವಾಗಿದೆ. ಈ ಮೂರು ವಿಧವಾದ ಸಂಸ್ಕಾರಗಳು ಕ್ರಮವಾಗಿ ತ್ಯಾಗಾಂಗ, ಭೋಗಾಂಗ, ಯೋಗಾಂಗಗಳಿಗೆ ಅನುಸರಿಸಿಕೊಂಡಿವೆ. ಜೀವಾತ್ಮನಿಗೆ ಅಂಟಿಕೊಂಡಿರುವ ಆಣವ, ಮಾಯೀಯ, ಕಾರ್ಮಿಕವೆಂಬ ಮಲಗಳನ್ನು ನಾಶಮಾಡುವ ಮಾನಸಿಕ ಸಂಸ್ಕಾರ ಹಾಗು ಸಂಸ್ಕೃತಿಯೇ ದೀಕ್ಷೆ.

ಈ ಮೇಲೆ ವಿವರಿಸಿರುವ ಇಷ್ಟ–ಪ್ರಾಣ–ಭಾವ ಲಿಂಗಗಳ ಸ್ವರೂಪವನ್ನು ನಿಜಗುಣ ಶಿವಯೋಗಿ ಗಳು ಹೃದಯಂಗಮವಾಗಿ ವಿವೇಚಿಸಿರುತ್ತಾರೆ.

ಇಷ್ಟಲಿಂಗವು ಭೌತಿಕಲಿಂಗವು. ಅದರ ಪೀಠ, ಪಿಂಡಿಕೆ ಹಾಗೂ ಗೋಮುಖಗಳು ಬಿಂದು, ನಾದ, ಕಲೆಗಳ ಪ್ರತಿನಿಧಿಗಳು. ಅದು ಪ್ರಪಂಚವೃಕ್ಷದ ಬೀಜ, ಬೇರು, ಕೊಂಬೆಗಳೆಂದು ಕರೆಯಲಾಗಿದೆ. ಇದು ಸಾಧಾರಣವಾಗಿ ಮತಪ್ರಕ್ರಿಯೆಯ ವಿವರಣೆ. ಆದರೆ ಇವರಲ್ಲಿಯ ದಾರ್ಶನಿಕ ಅಂಶಗಳು ವಿಚಾರಣೀಯವಾದವುಗಳು. ಇಷ್ಟಲಿಂಗವು ಬೋಧ ಮಾತ್ರವಿರುವುದು. ಅಂದರೆ ಇದು ಶುದ್ಧ ಪ್ರಜ್ಞೆಯೊಡನೆ ಏಕರೂಪವಾಗಿರುವುದು. ತನಗೆ ತಾನೇ ಆಧಾರವಾಗಿರುವುದು. ಯಾವುದು ತನ್ನಲ್ಲಿಯೇ ನೆಲಸಿ ತನ್ನಿಂದಲೇ ತನ್ನನ್ನು ಅರಿಯಬಲ್ಲುದೋ ಅದು ಮೂಲವಸ್ತುವಾದ ಲಿಂಗ. ಇದೇ ಇಷ್ಟ ಲಿಂಗದ ಸ್ವರೂಪ.

ಪ್ರಾಣಲಿಂಗವು ಗೂಢವಾದ ಅನುಭಾವಿಕ ಲಿಂಗ. ಇದು ನಾದರೂಪವಿರುವುದು. ಇದನ್ನೇ ಅನಾಹತನಾದವೆನ್ನುವುದು. ಇದು ಶ್ರವಣರೂಪವಾದ ಪರಮನಾದ. ಇದು ವಿವಿಧ ಚಕ್ರಗಳಲ್ಲೆಲ್ಲಾ ಪ್ರವಹಿಸಿ ದೇಹವನ್ನೆಲ್ಲಾ (ದೇಹಕರ್ಣಿಕಾರ ಮುಖದೊಳು) ವ್ಯಾಪಿಸಿಕೊಂಡು ತನ್ನ ಬೆಳಕನ್ನು ಬೀರು ತ್ತದೆ. ಒಳಗೆ ದೀಪವಿದ್ದ ವಿವರವುಳ್ಳ ಕುಂಭದೊಳಗಿನಿಂದ ಹೊರಬರುವ ಕಿರಣಗಳ ರೂಪವಿರುವುದು. ಇದು ಜ್ಯೋತಿರ್ಮಯವಾದುದು. ಸಮರಸವಾಗಿ ಬಗೆ ಬಗೆಯ ಬಣ್ಣಗಳಿಂದ ಕೂಡಿ ಹೊರಸೂಸುವಂತೆ ಪ್ರಕಾಶಮಯವಾಗಿರುವುದು.

ಭಾವಲಿಂಗವು ಮೂಲಕಾರಣ, 'ಪರಮ ಕಾರಣ'; ಅಂದರೆ ಕಾರಣ, ಕಾರ್ಯ, ಕರ್ಮ–ಇವು ಮೂರೂ ಇಲ್ಲಿಂದಲೇ ಆವಿರ್ಭಾವವಾಗುವುವು. ಇದು 'ಅಖಿಲ ಸಾಕ್ಷಿಕ' ವಾದುದು. ಇದು 'ಸಾಕ್ಷಿ ದೋರದ ತ್ರಿಪುಟಮಯ'ವಾದದ್ದು. ಪುರುಷನು ಬರಿಯ ಸಾಕ್ಷಿ ಇಲ್ಲವೆ ದ್ರಷ್ಟಾರನೆಂದು ಬಗೆಯ ಲಾಗುವುದು. ಇದು ಪರಮಕಾರಣವಾಗಿರುವುದು. ಪರಮಸಾಕ್ಷಿಯಾಗಿರುವುದು. ಉನ್ನತತಮ ಆನಂದಮಯವು.

ಶಿವಜ್ಞಾನ, ಶಿವಭಕ್ತಿ, ಶಿವಧ್ಯಾನ, ಶಿವವ್ರತ, ಶಿವಾರ್ಚನ–ಎಂಬಿವು ಶಿವಯೋಗದ ಐದು ಪ್ರಕ್ರಿಯೆಗಳು. ಕೊನೆಯದಾದ ಶಿವಾರ್ಚನೆಯು ಪ್ರಮುಖವಾದುದು. ಇದರಲ್ಲಿ ಉಳಿದ ನಾಲ್ಕು ಪ್ರಕ್ರಿಯೆಗಳೂ ಅಡಕವಾಗಿವೆ. ಶಿವಪೂಜಾರಾಧನೆಯಲ್ಲಿ ಮಂತ್ರಯೋಗ, ಲಯಯೋಗ, ಭಕ್ತಿಯೋಗ, ಕರ್ಮಯೋಗ, ಜ್ಞಾನಯೋಗಗಳ ಸಮನ್ವಯವನ್ನು ಕಾಣಬಹುದು.

ಜ್ಞಾನಂ ಶಿವಮಯಂ ಭಕ್ತಿಃ ಶೈವೀಧ್ಯಾನಂ ಶಿವಾತ್ಮಕಂ।
ಶಿವವ್ರತಂ ಶಿವಾರ್ಚೇತಿ ಶಿವಯೋಗಶ್ಚ ಪಂಚಧಾ॥

## ಮೋಕ್ಷ

ಬಂಧನಕ್ಕೊಳಗಾದ ಜೀವಾತ್ಮನು ಪಶುವೆನ್ನಿಸಿಕೊಳ್ಳುವನು. ಇವನು ಆಣವ, ಮಾಯಾ, ಕರ್ಮ ಎಂಬ ಮೂಲ ಮಲಗಳಿಂದ ಕೂಡಿರುವನು. ಈ ಮೂರು ಮಲಗಳಿಂದ ನಿವೃತ್ತಿಹೊಂದಿ ಶಿವೈಕ್ಯನಾಗುವುದೇ ಮೋಕ್ಷವೆನ್ನಿಸಿಕೊಳ್ಳುವುದು. ಸೃಷ್ಟಿ ಯಾವ ರೀತಿ ಆಯಿತೋ ಅದಕ್ಕೆ ವಿಮುಖವಾಗಿ ಸ್ವಸ್ಥಾನವನ್ನು ಸೇರುವುದೇ ಮುಕ್ತಿ. ಮೋಕ್ಷವು ಕೇವಲ ಜ್ಞಾನಾರ್ಜನೆಯಿಂದ ಆಗತಕ್ಕದ್ದಲ್ಲ. ಜೀವಾತ್ಮ ಪರಮಾತ್ಮ ಇವೆರಡೂ ಒಂದೇ ಎಂಬ ಆಧ್ಯಾತ್ಮಿಕ ಪ್ರತಿಭೆಯಿಂದುಂಟಾಗುವುದೇ ಮೋಕ್ಷ. ಪರಶಿವನನ್ನು ಲಿಂಗಾರ್ಚನೆ ಮತ್ತು ಶಿವಧ್ಯಾನದ ಮೂಲಕ ಸಾಕ್ಷಾತ್ಕಾರ ಮಾಡಿಕೊಂಡು ಮೋಕ್ಷವನ್ನು ಪಡೆಯಬಹುದು. ಅದಕ್ಕಾಗಿಯೇ ಶಿವನ ಚಿಹ್ನೆಯಾದ ಲಿಂಗಾರ್ಚನೆಯು ಅತ್ಯಾವಶ್ಯಕ. 'ಶಿವೋ ಭೂತ್ವಾ ಶಿವಂ ಯಜೇತ್' ಎನ್ನುವಂತೆ ಶಿವನ ಗುಣಗಳನ್ನು ತನ್ನಲ್ಲಿ ಅಳವಡಿಸಿಕೊಂಡು ಆರಾಧಿಸುವುದರಿಂದ ಪರಶಿವಪ್ರಾಪ್ತಿಯಾಗುತ್ತದೆ. ನದಿಗಳು ಯಾವ ರೀತಿ ಸಮುದ್ರವನ್ನು ಸೇರುತ್ತವೆಯೋ ಹಾಗೆ ಜೀವಾತ್ಮನು ಜ್ಞಾನಮಾರ್ಗದಿಂದ ಪರಶಿವನನ್ನು ಸೇರುವವನಾಗುವನು. ಜೀವಾತ್ಮನು ಐಕ್ಯವನ್ನು ಹೊಂದುವುದು ಎಂದರೆ ಎಲ್ಲವೂ ಪ್ರಕಾಶಮಯವಾಗುವುದು. ಇದು ಬ್ರಹ್ಮಸಾಕ್ಷಾತ್ಕಾರ. ಜೀವಾತ್ಮನು ಧರ್ಮಾನುಷ್ಠಾನ ಕರ್ತವ್ಯಗಳನ್ನು ಮಾಡುತ್ತಾ ಅವುಗಳ ಫಲಗಳನ್ನು ಶಿವನಿಗರ್ಪಿಸುತ್ತಾ ಪರಿಶುದ್ಧಾತ್ಮನಾಗಿ ಭಕ್ತಿಪೂರ್ವಕವಾಗಿ ಶಿವನನ್ನಾರಾಧಿಸಿ ಅವನ ಅನುಗ್ರಹವನ್ನು ಪಡೆಯುವುದೇ ಮೋಕ್ಷ. (ಶ್ರೀಕರ ಭಾಷ್ಯ ಭಾಗ II, 138, 202).

ಮೂಲ ಲೇಖಕರು ಮತ್ತು ಅನುವಾದಕರು : ಡಾ॥ ಜೆ. ರುದ್ರಪ್ಪ

# ಜೈನ ಧರ್ಮ

ಜೈನ ಧರ್ಮದ ಪ್ರಮುಖ ತತ್ವಗಳು ಮತ್ತು ಆ ಧರ್ಮಕ್ಕೆ ಆರಂಭದ ಶತಮಾನಗಳಲ್ಲಿ ದೊರೆತ ಅನೇಕ ರಾಜ ಮನೆತನಗಳ ಉದಾರಾಶ್ರಯ ಇವುಗಳನ್ನು ಕುರಿತು ಈಗಾಗಲೇ ವಿವರಿಸಲಾಗಿದೆ. 1336 ರಲ್ಲಿ ವಿಜಯನಗರ ಸಾಮ್ರಾಜ್ಯವು ಅಸ್ತಿತ್ವಕ್ಕೆ ಬರುವ ಹೊತ್ತಿಗಾಗಲೇ ಕರ್ಣಾಟಕದಲ್ಲಿ ಜೈನ ಧರ್ಮವು ಸುದೀರ್ಘವಾದ ಮತ್ತು ಸುವಿಖ್ಯಾತವಾದ ಐತಿಹಾಸಿಕ ವೈಭವದಿಂದ ಮೆರೆದಿತ್ತು. ದೇಶದ ಪ್ರಾಚೀನ ಅಮೂರ್ತ ಶಕ್ತಿ ಚೈತನ್ಯಗಳ ಸ್ವರೂಪವಾಗಿ ವಿಜಯನಗರ ಸಾಮ್ರಾಜ್ಯವು ಆವಿರ್ಭವಿಸಿತ್ತು. ರಾಷ್ಟ್ರೀಯ ಪರಂಪರೆಯಲ್ಲಿದ್ದ ಚಿರಮೌಲ್ಯಗಳನ್ನೆಲ್ಲ ಉಳಿಸಿಕೊಳ್ಳಬೇಕೆಂಬುದೇ ಅದರ ಸಂಕಲ್ಪ. ಅದೇ ಹೊತ್ತಿಗೆ ತನ್ನ ಸಮುನ್ನತ ಹಿತಾಸಕ್ತಿಗಳಿಗೆ ಬಾಧಕವಾಗುವುದೆಲ್ಲವನ್ನೂ ನಿಶ್ಶಂಕೆಯಿಂದ ಬಲವತ್ತರವಾಗಿ ಆ ಸಾಮ್ರಾಜ್ಯವು ವಿರೋಧಿಸುತ್ತ ಬಂದಿತ್ತು. ಆರ್ಷೇಯ ಮೌಲ್ಯಗಳ ಸ್ಫೂರ್ತಿ ಸೆಲೆಯಾದ ಈ ಸಾಮ್ರಾಜ್ಯದ ಉಚ್ಛ್ರಾಯ ಕಾಲದಲ್ಲಿ ಅದರ ಪರಮತ ಸಹಿಷ್ಣುತೆಯ ಪರಿಣಾಮ ಫಲವೆಂಬ ಸುಂದರ ವರ್ಣಚಿತ್ರದಲ್ಲಿ ಜೈನಧರ್ಮದ ಸ್ಥಿತಿಗತಿಗಳು ಲಕ್ಷಣವಾದ ರೇಖೆಯಾಗಿ ಎದ್ದು ಕಾಣಿಸಿದವು.

ದೊರೆತಿರುವ ದಾಖಲೆಗಳನ್ನೆಲ್ಲ ನೋಡಿ ಪರಿಶೀಲಿಸಿದರೆ ಈ ಒಂದು ಖಚಿತಾಭಿಪ್ರಾಯ ಸಾಧ್ಯ: 'ಜೀವಿಸು ಮತ್ತು ಜೀವಿಸಗೊಡು' ಎಂಬ ಉದಾರವಾದ ಈ ಭಾವನೆ ಜನ ನಂಬುವಂತೆ ಮಾಡುವ ರಾಜಕೀಯ ಅಥವಾ ಅವಸರದ ಉಪಾಯ ಆಗಿರಲಿಲ್ಲ. ಆ ದೇಶ ಮತ್ತು ಕಾಲಗಳ ಸಂಸ್ಕೃತಿ ಸಂಪ್ರದಾಯದಲ್ಲಿ ಇದು ಬೇರುಬಿಟ್ಟಿತ್ತು. 'ಯಥಾ ರಾಜಾ ತಥಾ ಪ್ರಜಾ'—ರಾಜ ಪ್ರಜೆಗಳಲ್ಲೆಲ್ಲ ಈ ಪರಮತ ಸಹಿಷ್ಣುತೆಯ ಭಾವನೆ ಮೇಲು ತೋರಿಕೆಯದು ಮಾತ್ರವಲ್ಲ, ತೀರ ಆಳಕ್ಕಿಳಿದು ನೆಲೆನಿಂತು ಹರಿವ ಸೆಲೆಯಾಗಿತ್ತು. ಸ್ನಿಗ್ಧ ಸಾಮಾಜಿಕ ಸಂಬಂಧಗಳನ್ನು ಏರ್ಪಡಿಸುವ ಸಚೇತನ ಸೌಹಾರ್ದವಾಗಿತ್ತು ಆ ಭಾವನೆ. ಈ ಮಾತನ್ನು ಸಮರ್ಥಿಸುವುದಕ್ಕೆ ಅಧಿಕೃತವಾಣಿಯ ಕೆಲವು ಸ್ಪಷ್ಟಸಂಗತಿಗಳನ್ನು ಇಲ್ಲಿ ಉದ್ಧರಿಸುವುದು ಯುಕ್ತ. ಮೊದಲನೆಯ ಬುಕ್ಕರಾಯನ (ಕ್ರಿ.ಶ. 1368) ಉದ್ಬೋಧಕ ಶಾಸನವೊಂದು ನಿಚ್ಚಳವಾಗಿ ಹೀಗೆನ್ನುತ್ತದೆ: "ಶ್ರೀ ವೀರ ಬುಕ್ಕರಾಯರ ಕಾಲದಲ್ಲಿ ಭವ್ಯರ (ಜೈನರ) ಮತ್ತು ಭಕ್ತರ (ಶ್ರೀ ವೈಷ್ಣವರ) ನಡುವೆ ವಿವಾದವೊಂದು ತಲೆ ಹಾಕಿತು. ಭಕ್ತರು ಮಾಡಿದ ಅನ್ಯಾಯವನ್ನು ಕುರಿತು ಎಲ್ಲ ಪ್ರದೇಶಗಳ ಜೈನರು ಬುಕ್ಕರಾಯರಿಗೆ ಮನವಿಮಾಡಿಕೊಂಡರು. ಹದಿನೆಂಟು ನಾಡುಗಳ ಶ್ರೀ ವೈಷ್ಣವರೊಡನೆ ಜೈನರ ಕೈಗಳನ್ನು ಕೊಡಿಸಿದ ಬುಕ್ಕರಾಯ—ಅವರಲ್ಲಿ ಆಯಾ ಸ್ಥಳಗಳ ಆಚಾರ್ಯರೂ ಸೇರಿದ್ದರು... ಜೈನದರ್ಶನ ಮತ್ತು ವೈಷ್ಣವ ದರ್ಶನಗಳ ನಡುವೆ ಭೇದವಿಲ್ಲವೆಂದು ಅವನು ಸಾರಿದನು. ಆ ಮೇಲೆ ವಿಧಿಸಿದ್ದೇನೆಂದರೆ......"

ಈ ಶಾಂತಿಸಂಧಾನದ ಸ್ಫೂರ್ತಿಯು ಜೈನರಿಗೆ ವಿಜಯನಗರ ಸಾಮ್ರಾಜ್ಯಕಾಲದಲ್ಲಿ ದೊರೆತ ರಾಜಾಶ್ರಯದ ಒಂದು ಮುಖ ಮಾತ್ರ ಎನ್ನುವುದಕ್ಕೆ ಸಾಕಷ್ಟು ಸಾಕ್ಷ್ಯಗಳಿವೆ. ವಿಜಯನಗರ ಕಾಲದಲ್ಲಿ ಅನೇಕಜನ ಪ್ರಮುಖ ಜೈನ ಕವಿಗಳಾಗಿ ಹೋದರು. ಅವರಲ್ಲಿ ಇರುಗಪ್ಪ ದಂಡನಾಥ, ಮಧುರ, ನೇಮಿಚಂದ್ರ ಮತ್ತು ವಿದ್ಯಾನಂದ ಇವರು ಪ್ರಮುಖರು. ವಿಜಯನಗರದ ಮಾಂಡಲಿಕರಲ್ಲಿ ಮುಖ್ಯವಾಗಿ ಕಾರ್ಕಳದ ಭೈರರಸರು, ಅಜಿಲರು ಮತ್ತು ಚೌಟರು ಜೈನ ಧರ್ಮಕ್ಕೆ ಉದಾರಾಶ್ರಯದಾತರಾಗಿದ್ದರು. ಬಸದಿಗಳನ್ನೂ ಜೈನ ಮಂದಿರಗಳನ್ನೂ ಕಟ್ಟಿಸುವುದು, ಅವುಗಳ ವ್ಯವಸ್ಥೆಗಾಗಿ ಭೂಮಿಕಾಣಿಕೆಗಳ ದಾನದತ್ತಿ

ಉಂಬಳಿಗಳನ್ನು ಕೊಡುವುದು, ಯತಿಗಳಿಗೆ ಭಕ್ತಿಗೌರವಗಳನ್ನು ಸಲ್ಲಿಸುವುದು ಮತ್ತು ವೈದುಷ್ಯಕ್ಕೆ ಪ್ರೋತ್ಸಾಹವನ್ನು ಕೊಡುವುದು—ಇವೇ ಮುಂತಾದುವು ಅವರು ನಡೆಸುತ್ತಿದ್ದ ಇತರ ಮುಖ್ಯ ಕಾರ್ಯಗಳು.

ಇದೇ ರೀತಿಯ ಉದಾರ ದೃಷ್ಟಿಯನ್ನು ತೋರಿಸಿದ ರಾಣಿಯರು, ಮಂತ್ರಿಗಳು, ದಂಡನಾಯಕರು, ರಾಜಮನ್ನೆಯರು ಮತ್ತಿತರ ಅನೇಕರು ಇದ್ದರು.

ಮೊದಲನೆಯ ದೇವರಾಜನ ರಾಣಿ ಭೀಮಾದೇವಿಯು ಅಭಿನವ ಚಾರುಕೀರ್ತಿ ಪಂಡಿತಾಚಾರ್ಯರ ಶಿಷ್ಯೆಯಾಗಿದ್ದಳು. ಈಕೆ ಶ್ರವಣಬೆಳುಗೊಳದ ಮಾಂಗಾಯಿ ಬಸದಿಯಲ್ಲಿ ಶಾಂತಿನಾಥ ಪ್ರತಿಮೆಯನ್ನು ಸ್ಥಾಪಿಸಿದಳು (ಎಪಿಗ್ರಾಫಿಯಾ ಕರ್ಣಾಟಿಕಾ, II ಶ್ರಬೆ. 337). ಎರಡನೆಯ ಹರಿಹರನ ಕಾಲದಲ್ಲಿ ರಾಜಧಾನಿಯಲ್ಲಿಯೇ ಇರುಗಪ್ಪ ದಂಡನಾಯಕನು ಜೈನ ಮಂದಿರಗಳನ್ನು ಸ್ಥಾಪಿಸಿ ಅವಕ್ಕೆ ಬೇಕಾದಷ್ಟು ಉಂಬಳಿಗಳನ್ನು ಹಾಕಿಸಿಕೊಟ್ಟನು. ಜೈನ ಶಬ್ದಕೋಶವಾದ **ನಾನಾರ್ಥರತ್ನಮಾಲಾ** ವನ್ನು ಅವನು ರಚಿಸಿದನು (ಹುಲ್ಷ್, ಎಸ್. ಐ.ಐ.I. ಪುಟ 156).

ಇತರ ಸುತ್ತುಮುತ್ತಿನ ಪ್ರಾಂತಗಳಲ್ಲಿಯೂ ಇಂಥ ಉದಾರಾಶ್ರಯದಾತರೂ ಪ್ರೋತ್ಸಾಹಕರೂ ಜೈನಧರ್ಮಕ್ಕಿದ್ದರು. ನಿದರ್ಶನವಾಗಿ, ಎರಡನೆ ದೇವರಾಯನ ಕಾಲದಲ್ಲಿ ದಕ್ಷಿಣ ಕನ್ನಡದ ಮೂಡ ಬಿದರೆಯ ಶಾಸನವೊಂದು (XII ಕನ್ನಡ ಸಾಹಿತ್ಯ ಸಮ್ಮೇಳನದ ವರದಿ, 1927, ಪುಟ 152) ನಾಗಮಂಗಲದ ದೇವರಾಜವೊಡೆಯರು (ಕ್ರಿ.ಶ. 1430) ಮಣಲೂರು ರಾಜ್ಯದಲ್ಲಿ ಕೊಡಮಾಡಿದ ಕಾಣಿಕೆಗಳನ್ನು ನಿರ್ದೇಶಿಸುತ್ತದೆ. ಇನ್ನೊಂದು ಶಾಸನವು, ಎರಡನೆಯ ದೇವರಾಯನ ಮಗ ವಿರೂಪಾಕ್ಷನ ಆಶ್ರಯದಲ್ಲಿ ಬಾರಕೂರು ರಾಜ್ಯದ ವಿಟ್ಟರಸರು ಆಳುವ ಕಾಲಕ್ಕೆ ಎಂಟು ಮಂದಿ ಶೆಟ್ಟಿಗಾರರು ಬಿದರೆಯ ಜೈನಮಂದಿರಕ್ಕೆ ದತ್ತಿಯನ್ನು ಕೊಟ್ಟಿದ್ದನ್ನು ಹೇಳುತ್ತದೆ (ಅದೇ, ಪುಟ 157).

ಇದು, ಅಂದರೆ ಇಲ್ಲಿ ಕೊನೆಗೆ ಹೇಳಿದ ಶೆಟ್ಟಿಗಾರರ ದಾನಧರ್ಮಗಳ ವಿಚಾರವು, ಅನೇಕ ವರ್ತಕರು ಕೊಡಮಾಡಿದ ಇಂಥ ದತ್ತಿ ಕಾಣಿಕೆಗಳ ಉಲ್ಲೇಖಗಳಲ್ಲಿ ಒಂದು. ದೂರದ ಮಾರ್ವಾರ (ರಾಜಾಸ್ಥಾನ್) ದಿಂದ ಸಹ ವ್ಯಾಪಾರಸ್ಥರು ಬಂದು ಶ್ರವಣಬೆಳಗೊಳದಲ್ಲಿ ಪ್ರತಿಮೆಗಳನ್ನು ಸ್ಥಾಪಿಸಿದ, ಜಿನಮಂದಿರಗಳನ್ನು ಕಟ್ಟಿಸಿ ಅವುಗಳಿಗೆ ದತ್ತಿಗಳನ್ನು ಏರ್ಪಡಿಸಿದ ಎಷ್ಟೋ ಉದಾಹರಣೆಗಳಿರುವುವು (ಎಪಿಗ್ರಾಫಿಯಾ ಕರ್ಣಾಟಿಕಾ II. ಪುಟಗಳು 192, 203).

ಜೈನಧರ್ಮದ ಮಹತ್ವದ ಕೆಲವು ಆಚಾರಗಳನ್ನು ಕುರಿತು ಕೂಡ ಇಲ್ಲಿ ಪ್ರಸ್ತಾಪಿಸುವುದು ಪ್ರಸ್ತುತ. ಸಲ್ಲೇಖನ ಅಥವಾ ಪಂಡಿತ ಮರಣವು ಜೈನಯತಿಗಳ ಆಚಾರದಲ್ಲಿ ಪ್ರಾಚೀನ ಕಾಲದಿಂದಲೂ ಇದ್ದಿತು. ಈ ಪರಂಪರಾಗತ ಪದ್ಧತಿಯಲ್ಲಿ ಮರಣವನ್ನು ಪಡೆದ ಶ್ರಾವಕರಿಗೂ ಕೊರತೆಯಿಲ್ಲ. ಸಿದ್ಧಾಂತದೇವನ (ಕ್ರಿ.ಶ. 1366) ಗೃಹಸ್ಥ ಶಿಷ್ಯನೊಬ್ಬನು ಸಲ್ಲೇಖನವನ್ನು ಆಚರಿಸಿ ಸ್ವರ್ಗವನ್ನು ಪಡೆದಂಥ ಪ್ರಕರಣ ವೊಂದನ್ನು ಇಲ್ಲಿ ಎತ್ತಿ ಹೇಳಬಹುದು (ಎಪಿಗ್ರಾಫಿಯಾ ಕರ್ಣಾಟಿಕಾ VIII, ಶ್ರ.ಬೆ. 102). ಇದರ ಉಪಷ್ಟಂಭಕವಾಗಿ ಕ್ರಿ.ಶ. 1354 ರಲ್ಲಿ ಸಹಗಮನವನ್ನು ಮಾಡಿದ ಒಬ್ಬ ಜೈನ ಸತಿಯನ್ನು ನಾವು ಉಲ್ಲೇಖಿಸಬಹುದು (ಅದೇ, 104).

ಮೇಲೆ ಉಲ್ಲೇಖಿಸಿದಂಥ ಕೆಲವು ಸಂಗತಿಗಳು ಈ ನಿಟ್ಟಿನಲ್ಲಿ ಒಂದೆರಡು ಉದಾಹರಣೆಗಳು ಮಾತ್ರ. ಡಾ॥ ಭಾಸ್ಕರ ಆನಂದ ಸಾಲೆತ್ತೂರರು ಹೇಳುವಂತೆ "ಆವಳಿನಾಡಿನ ಗೌಡರಲ್ಲಿ

ಈ ರೀತಿ ಸಾಂಪ್ರದಾಯಿಕವಾಗಿ ಜೀವ ತ್ಯಜಿಸುವುದು ಆ ಕಾಲದಿಂದ (ಕ್ರಿ.ಶ. 1366) ಸುಮಾರು ಐವತ್ತೈದು ವರ್ಷಗಳ ವರೆಗೆ ತುಂಬ ಜನಪ್ರಿಯವಾಗಿತ್ತೆಂದು ಕಾಣುತ್ತದೆ." (Med. Jainism P. 832.)

ಕೊನೆಗೆ ಈಗ ಅಹಿಂಸೆಯ ಬಗ್ಗೆ ಹೇಳಬೇಕಾಗಿದೆ. ಜೈನಧರ್ಮದ ಪ್ರಾರಂಭಕಾಲದಿಂದಲೂ ಅದಕ್ಕೆ ಆಧಾರವಾಗಿ ನೆಲೆನಿಲ್ಲಿಸಿದ್ದೇ ಅಹಿಂಸೆ. ಅದರ ಪ್ರಭಾವವು ಮಹಾತ್ಮಗಾಂಧಿಯವರ ಕಾಲದ ವರೆಗೂ ಅನಂತರವೂ ಮುಂದುವರಿಯುತ್ತ ಬಂದಿರುವುದು. ಆದರೆ ಆದರ್ಶ ಮತ್ತು ವ್ಯವಹಾರಗಳ ನಡುವಿನ ಅನನ್ವಯ ಇಂದಿಗೂ ಪರಿಹಾರಗೊಂಡಿಲ್ಲ. ಮೈಸೂರಿನ ಒಂದು ಶಾಸನದಲ್ಲಿ (ಎಪಿಗ್ರಾಫಿಯಾ ಕರ್ಣಾಟಿಕಾ, VIII, ಶ್ರವಣಬೆಳ್ಗೊಳ, 152) ಜೈನಯೋಧ ಬೈಚಪ್ಪನು "ಕೊಂಕಣಿಗರನೇಕರನ್ನು ಕೊನೆಗೊಳಿಸಿ ಸ್ವರ್ಗವನ್ನು ಪಡೆದು ಜಿನಪಾದವನ್ನು ಸೇರಿದನು" ಎಂದಿದೆ.

ಮೂಲಲೇಖಕರು : ಡಾ॥ ಎಸ್.ಆರ್. ಶರ್ಮಾ
ಅನುವಾದಕರು : ಹಂಪ. ನಾಗರಾಜಯ್ಯ

ಒಂದು ವಿಚಿತ್ರವೆಂದರೆ, ಈ ನಗರದ ಹೃದಯದಂತಿರುವ ಅರಮನೆಯ ವಿಷಯವಾಗಿ ಮತ್ತು ಅದರ ಆಡಳಿತ ಕಛೇರಿಗಳ ಹಾಗೂ ವಿಜಯಭವನ ಇತ್ಯಾದಿಗಳ ಬಗ್ಗೆ, ಶಾಸನಗಳಲ್ಲಿ ಸ್ವಲ್ಪವೂ ಪ್ರಸ್ತಾಪವೇ ಇಲ್ಲ. ಒಂದು ರಾಜಬೀದಿಯ ಹೆಸರು ಮಾತ್ರ ಕ್ರಿ. ಶ. 1557ರ ಶಾಸನವೊಂದರಲ್ಲಿ ಉಲ್ಲಿಖಿತವಾಗಿದೆ[17]. ಈ ಬೀದಿಗೆ ಹೊಂದಿಕೊಂಡ ಹಾಗೆ ಇದ್ದ, ಜಮೀನಿನ ಭಾಗವೊಂದನ್ನು ಚಿಕ್ಕದೇವರ ಬಸದಿಯ ಶಾಂತಿನಾಥನಿಗೆ ದತ್ತಿಯಾಗಿ ಬಿಡಲಾಗಿತ್ತು. ಇದಲ್ಲದೆ ಅಂಜನಗಿರಿಯೆಂಬ ಪ್ರದೇಶದಲ್ಲಿದ್ದ ತಿರುವೇಂಗಳನಾಥ ದೇವಸ್ಥಾನಕ್ಕೆ ತಿರುಮಲದೇವಿಯರು ಜಮೀನನ್ನು ದಾನವಾಗಿ ಕೊಟ್ಟಿದ್ದರು. ದಾನವಾಗಿ ಬಿಟ್ಟ ಈ ಜಮೀನಿನ ಗಡಿ ಹೀಗಿದೆ: ಪೂರ್ವಕ್ಕೆ—ಹಿರಿಯ ಕುಂಬಾರ ಕೇರಿ; ಉತ್ತರಕ್ಕೆ—ಅಕ್ಕಿಪೇಟೆ; ಪಶ್ಚಿಮಕ್ಕೆ—ಮೀನವನ ಗುಂಡಿ, ಮತ್ತು ದಕ್ಷಿಣಕ್ಕೆ—ಕೋಟೆ[18].

ರಾಮಪುರವೆಂಬ ನಗರಭಾಗವೊಂದಿತ್ತು[19]. ಬಹುಶಃ ಇದು ಹಜಾರ ರಾಮನ ದೇವಸ್ಥಾನದ ಹತ್ತಿರ ಇದ್ದಿರಬೇಕು. ಶ್ರೀರಾಮಾನುಜರ ದೇವಸ್ಥಾನವಿದ್ದಂತೆ ಒಂದೆಡೆ ಉಲ್ಲೇಖ ದೊರೆಯುತ್ತದೆಯಾದರೂ, ಅದನ್ನು ಇದುವರೆಗೂ ಪತ್ತೆ ಹಚ್ಚಲು ಆಗಿಲ್ಲ[20].

ವಿಜಯನಗರದ ಮುಖ್ಯ ಪ್ರವೇಶದ್ವಾರವಿದ್ದುದು ದಕ್ಷಿಣದಲ್ಲಿ, ರಾಯನಕೆರೆಯ ಕಡೆಗೆ. ಈ ಕೆರೆಗೆ ಕೃಷ್ಣರಾಯ ತಟಾಕವೆಂದೂ ಹೆಸರು (ತಿರುಮಲದೇವಿ ಪಟ್ಟಣಕ್ಕೆ ಇಲ್ಲಿಂದಲೇ ನೀರು ಸರಬರಾಜಾಗುತ್ತಿತ್ತು)[21]. ಪೂರ್ವದ ಕಡೆಯ ಪ್ರವೇಶದ್ವಾರವಿದ್ದುದು ಕಂಪಿಲಿಯ ಕಡೆಯಿಂದ. ಕಂಪಿಲಿಯು ರಾಜಧಾನಿಯ ಗಡಿಕಾವಲು ದಳದ ಠಾಣೆಯಂತಿದ್ದು, ವಿಜಯವಿರೂಪಪುರವೆಂಬ ಹೆಸರಿನ ನಗರೋಪಭಾಗವಾಗಿತ್ತು[22].

ರಾಜಧಾನಿಯಾದ ವಿಜಯನಗರದ ವಿವಿಧ ಭಾಗಗಳಿಗೆ ತುಂಗಭದ್ರಾನದಿಯ ನಾಲೆಗಳಿಂದ ನೀರಿನ ಪೂರೈಕೆಯಾಗುತ್ತಿತ್ತು. ಈಗಲೂ ಅಂಥ ಕೆಲವು ನಾಲೆಗಳನ್ನು ನೋಡಬಹುದು. ಇವಲ್ಲದೆ ನೀರಿನ ಪೂರೈಕೆಗೆ ಬಾವಿಗಳೂ ಕೆರೆಗಳೂ ಇದ್ದವು.

ಕನಕದಾಸರ ಮೋಹನತರಂಗಿಣಿಯಲ್ಲಿ ದೇಶಾಧಿಪ ಕೃಷ್ಣರಾಯನ ದ್ವಾರಕಾನಗರದ ವರ್ಣನೆ ಬರುತ್ತದೆ[23]. ಇದನ್ನು ಬರೆದಾಗ ಕನಕದಾಸರು ವಿಜಯನಗರವನ್ನೆ ಕುರಿತಂತೆ ಕಾಣಿಸುತ್ತದೆ. ದೇಶ ವಿದೇಶಗಳೊಂದಿಗೆ ಹಡಗುಗಳಲ್ಲಿ ವ್ಯಾಪಾರ ನಡೆಸುತ್ತಿದ್ದ ಆ ನಗರದ ವರ್ತಕರ ಸಂಪತ್ತು ಕುಬೇರನಿಗೂ ಸಹ ಸಾಲಕೊಡುವಷ್ಟಿತ್ತೆಂದು ಕನಕದಾಸರು ಹೇಳುತ್ತಾರೆ. ಅಂಗಡಿ ಬೀದಿಗಳಲ್ಲಿ ಇಂಥ ವರ್ತಕರು ಧನ ಕನಕರಾಶಿಯ ನಡುವೆ ಕುಳಿತಿರುತ್ತಿದ್ದರಂತೆ.

ನಗರದ ಬೇರೆ ಬೇರೆಯ ಬಡಾವಣೆಗಳ ಆಡಳಿತವು ಸೆಟ್ಟಿ ಪಟ್ಟಣಸ್ವಾಮಿಗಳೆಂಬ ನಗರಾಧ್ಯಕ್ಷರುಗಳ ಅಧೀನದಲ್ಲಿತ್ತು[24]. ಇವರಿಗೆ ತಳವಾರರೆಂಬ ರಕ್ಷಣಾದಳದ ನೆರವೂ ಇತ್ತು[25].

ಈ ಸಾಮ್ರಾಜ್ಯದ ಇತರ ಮುಖ್ಯ ಪಟ್ಟಣಗಳು—ಪಶ್ಚಿಮ ಕರಾವಳಿಯಲ್ಲಿ ಅಂಕೋಲಾ, ಮಿರ್ಜಾನ್, ಹೊನ್ನಾವರ, ಭಟ್ಕಳ. ಬೈಂದೂರು, ಬಾರಕೂರು, ಬಸರೂರು, ಮಂಗಳೂರು ಮತ್ತು ಕುಂಬಳೆ[26]. ರಾಯಚೂರು, ಆದವಾನಿ, ಪೆನುಗೊಂಡ, ಶ್ರೀರಂಗಪಟ್ಟಣ, ದೋರಸಮುದ್ರ, ಇಕ್ಕೇರಿ, ಮತ್ತು ಬಂಕಾಪುರ[27]—ಇವು ಈ ಸಾಮ್ರಾಜ್ಯದ ಮಧ್ಯದಲ್ಲಿದ್ದ ಮುಖ್ಯ ಪಟ್ಟಣಗಳು.

**ಜಾತಿ ಮತಗಳು**

ಬಾರ್ಬೋಸಾ (Barbosa) ಎಂಬ ಲೇಖಕನು ಹೇಳುತ್ತಾನೆ—"ಈ ಸಾಮ್ರಾಜ್ಯದ ಎಲ್ಲ ಹಳ್ಳಿ-ಕೊಪ್ಪಲುಗಳೂ ಹೀದೆನ್ಸ್ (ಹಿಂದೂ) ಗಳಿಂದ ನಿವಾಸಿತವಾಗಿವೆ. ಇವರ ನಡುವೆ ಕೆಲವು ಮೂರರೂ (ಮುಸ್ಲಿಮ್) ಇದ್ದಾರೆ. ಮುಸ್ಲಿಮರಲ್ಲಿ ಕೆಲವರು, ವಿದೇಶಗಳೊಂದಿಗೆ ವಾಣಿಜ್ಯಕ್ಕಾಗಿ ಪಶ್ಚಿಮ ಕರಾವಳಿಯಲ್ಲಿ ನೆಲಸಿದ್ದಾರೆ. ಕೆಲವರು ವಿಜಯನಗರದ ಸೈನ್ಯದಲ್ಲಿದ್ದಾರೆ"[28]. ಹಿಂದೂಗಳಲ್ಲಿ ಕೆಲವು ಒಳಪಂಗಡಗಳಿದ್ದುವೆಂದು, ಅವುಗಳ ಲಕ್ಷಣವನ್ನು ಬಾರ್ಬೋಸಾ (Barbosa) ಹೇಳುತ್ತಾನೆ: 'ಆ ಒಳಪಂಗಡಗಳು— ಕ್ಷತ್ರಿಯರು, ಬ್ರಾಹ್ಮಣರು ಮತ್ತು ವೀರಶೈವರು[29]. ಕ್ಷತ್ರಿಯರು-ಪ್ರಭುಗಳು ಅಥವಾ ಆಡಳಿತಗಾರರು ಮತ್ತು ಯೋಧರೂ ಆಗಿದ್ದರು. ಇವರು ಬಹು ಪತ್ನೀಕರಾಗಿದ್ದರು. ಅವರ ಹೆಂಡಿರು 'ಸತಿ' ಪದ್ಧತಿಯನ್ನು ಆಚರಿಸುತ್ತಿದ್ದರು. ಬ್ರಾಹ್ಮಣರು ಪುರೋಹಿತರಾಗಿದ್ದುಕೊಂಡು ದೇವಸ್ಥಾನದ ಮೇಲ್ವಿಚಾರಕರಾಗಿರುತ್ತಿದ್ದರು. ಅವರು ಸಸ್ಯಾಹಾರಿಗಳು. ಏಕಪತ್ನೀವ್ರತಸ್ಥರು ಮತ್ತು ಇತರರಿಂದ ದಾನವನ್ನು ಸ್ವೀಕರಿಸುವವರಾಗಿದ್ದರು. ವೀರಶೈವರು ಕೊರಳಲ್ಲಿ ತಮ್ಮ ಇಷ್ಟ ದೈವದ ಸಂಕೇತವನ್ನು ಕಟ್ಟಿಕೊಳುತ್ತಿದ್ದರು. ಇವರಿಗೆ ವಿಶೇಷವಾದ ಮಾನ್ಯತೆಯಿತ್ತು. ಅವರಲ್ಲಿ ಅನೇಕರು ವರ್ತಕರೂ ವಾಣಿಜ್ಯೋದ್ಯಮಿಗಳೂ ಆಗಿದ್ದರು. ಇವರೂ ಸಸ್ಯಾಹಾರಿಗಳೂ ಏಕಪತ್ನೀವ್ರತಸ್ಥರೂ ಆಗಿದ್ದರು. ಸತ್ತವರನ್ನು ಹೂಳುವ ಪದ್ಧತಿ ಇವರಲ್ಲಿತ್ತು.'[30]. ಇವರಲ್ಲದೆ ವೈಶ್ಯರೂ ಜೈನರೂ ಇದ್ದರೆಂದು ಶಾಸನಗಳ ಆಧಾರದಿಂದ ತಿಳಿದುಬರುತ್ತದೆ. ಜತೆಗೆ ಅಸ್ಪೃಶ್ಯರೂ ಇದ್ದರೆಂದು ಪುರಂದರದಾಸರ ಕೃತಿಗಳಲ್ಲಿ[31] ಉಲ್ಲೇಖವಿದೆ.

**ಸ್ತ್ರೀಯರ ಪರಿಸ್ಥಿತಿ**

ಮದುವೆ ಮತ್ತು ಕುಟುಂಬಜೀವನ ಸ್ತ್ರೀಯರ ಜೀವನದ ಮುಖ್ಯಭಾಗವಾಗಿತ್ತು. ಆದರೂ ಬೇರೆ ಬೇರೆಯ ಜೀವನ ಕ್ಷೇತ್ರಗಳಲ್ಲಿ ಸ್ತ್ರೀಯರು ಭಾಗವಹಿಸಿದ ನಿದರ್ಶನಗಳೂ ಇವೆ. ಬಾರ್ಬೋಸಾ (Barbosa) ಹೇಳುತ್ತಾನೆ—ಅವರು ಬಾಲ್ಯಕಾಲದಿಂದಲೂ ಸ್ತ್ರೀಯರಿಗೆ ಗೀತ, ವಾದನ, ನರ್ತನಗಳನ್ನು ಕಲಿಸುತ್ತಾರೆ'[32]. ರಾಜನ ಪತ್ನಿಯರಾದ ರಾಣಿಯರು ಸಹ, ಸಂಗೀತದಲ್ಲಿ ಪ್ರವೀಣೆಯರಾಗಿದ್ದರು[33].

'ಅರಮನೆಯ ಒಳಗೆ ಪುರುಷರು ಮಾಡಬಹುದಾದ ಕಾರ್ಯಗಳನ್ನೆಲ್ಲ ಸ್ತ್ರೀಯರೂ ಮಾಡಬಲ್ಲವರಾಗಿದ್ದರು. ಕತ್ತಿ ಗುರಾಣಿಗಳನ್ನು ಹಿಡಿದು ಕಾದಾಡಬಲ್ಲರು. ಮಲ್ಲಯುದ್ಧವನ್ನೂ ಮಾಡಬಲ್ಲರು. ಅರಮನೆಯ ಒಳಗಿನ ಎಲ್ಲ ವ್ಯವಹಾರಗಳ ಲೆಕ್ಕ ಪತ್ರವನ್ನು ಇಡಬಲ್ಲರು. ಅಷ್ಟೇ ಅಲ್ಲ, ಎಲ್ಲ ಸಂಗತಿಗಳ ವಿವರಗಳನ್ನೂ ಗಮನಿಸಿ, ಅಂಥದೇ ರೀತಿಯ ಹೊರಗಿನ ವ್ಯವಹಾರಗಳೊಂದಿಗೆ ತುಲನೆ ಮಾಡಬಲ್ಲವರಾಗಿದ್ದರು'[34]—ಎಂದು ಪಾಯಸ್ (Paes) ಮತ್ತು ನುನಿಜ್ (Nuniz) ಹೇಳುತ್ತಾರೆ. ಅರಮನೆಯ ಒಳಗೆ ಈ ರೀತಿಯ ಕಾರ್ಯದಕ್ಷತೆಯನ್ನು ಪ್ರಕಟಿಸಿದ ಸ್ತ್ರೀಯರ ವಿಷಯ ಶಾಸನಗಳಲ್ಲಿ ದೊರೆಯುತ್ತದೆ. ಪ್ರೌಢದೇವರಾಯನ (ಕ್ರಿ.ಶ. 1458) ಅರಮನೆಯಲ್ಲಿ ಹೊನ್ನಮ್ಮನೆಂಬ ವರದಿಗಾರಳು (Reader) ಇದ್ದಳು[35]. ಅಚ್ಯುತರಾಯನ ಕಾಲದಲ್ಲಿ ಇದೇ ರೀತಿಯ ಕಾರ್ಯ ನಿರ್ವಹಣೆ ಮಾಡಿದವಳು ತಿರುಮಲಮ್ಮ. ಆಕೆ ಸಂಸ್ಕೃತದಲ್ಲಿ ಕವಯಿತ್ರಿಯೂ ಆಗಿದ್ದಳು. ಅಚ್ಯುತರಾಯನು ಮೆಚ್ಚಿ ಅವಳಿಗೆ ಪ್ರಶಸ್ತಿಯನ್ನು ಕೊಟ್ಟಾಗ ಆಕೆ ಸ್ವಯಂರಚಿತವಾದ ಶ್ಲೋಕವೊಂದನ್ನು ಹೇಳಿದಳು[36].

ವಾಣಿಜ್ಯ ಕ್ಷೇತ್ರಗಳಲ್ಲೂ ಸ್ತ್ರೀಯರು ಕೆಲಸ ಮಾಡುತ್ತಿದ್ದರು. ಕನಕದಾಸರು ಹೇಳುತ್ತಾರೆ: ಈ ಸ್ತ್ರೀಯರು ಅಂಗಡಿಗಳಿಗೆ ಭೂಷಣವಂತಿದ್ದರು—ಎಂದು. ಅವರ ಬಿಚ್ಚಿದ ಜಡೆಮುಡಿಯನ್ನೂ ಬೆವರಿನ

ಬಿಂದುಗಳಿಂದ ಕೂಡಿದ ಮುಖವನ್ನೂ ಏರಿಳಿಯುವ ವಕ್ಷಸ್ಥಳವನ್ನೂ ಕನಕದಾಸರು ವರ್ಣಿಸುತ್ತಾರೆ[37]. ಸ್ತ್ರೀಯರು ನಾಟಕಗಳಲ್ಲಿ ಪಾತ್ರವಹಿಸುತ್ತಿದ್ದರು. ಪುರಂದರದಾಸರು ಬೂಟಾಟಿಕೆಯ ವ್ಯಕ್ತಿಗಳ ನಡೆವಳಿಕೆಯನ್ನು ನಾಟಕದ ಸ್ತ್ರೀಯರಿಗೆ ಹೋಲಿಸುತ್ತಾರೆ[38]. ಸಾಮಾನ್ಯವಾಗಿ ಸ್ತ್ರೀಯರ ಪಾತ್ರಗಳನ್ನು ಹಿಂದೆ ಪುರುಷರೂ ವಹಿಸುತ್ತಿದ್ದರೆಂದು ಹೇಳಬಹುದು. ಆದರೆ ತಿಮ್ಮಯ್ಯನೆಂಬ ನಟನ ಮಗಳಾದ ಪಾತ್ರಿ ಎಂಬ ನಟಿಯು 'ತಾಯಿಕುಂಡ ನಾಟಕ' ದಲ್ಲಿ ಪಾತ್ರವಹಿಸಿದಳೆಂದು ಖಚಿತವಾದ ಒಂದು ಉಲ್ಲೇಖ ದೊರೆಯುತ್ತದೆ[39].

ಇಲ್ಲಿನ ವರೆಗೆ ಸ್ತ್ರೀಯರನ್ನು ಕುರಿತ ಸಂಗತಿಗಳೇನೋ ಉಜ್ವಲವಾಗಿವೆ. ಆದರೆ ........ ಏನೂ ಹೇಳದೆ ಅವಜ್ಞೆಗೈದರೆ ಅಪ್ರಾಮಾಣಿಕವಾಗುವ, ಹೇಳಿದರೆ ಹಿತವಲ್ಲದ ಬೆಳವಣಿಗೆಯೂ ಅವರ ವಿಷಯದಲ್ಲಿದೆ[40]. ಇವು ವೇಶ್ಯಾವೃತ್ತಿ, ದೇವದಾಸೀ ಮತ್ತು ಸತೀ ಹೋಗುವ ಪದ್ಧತಿ. ಇವುಗಳನ್ನು ಅಬ್ದುಲ್ ರಜಾಕ್ (Abdur Razzak)[41] ಮತ್ತು ಬಾರ್ಬೋಸಾ (Barbosa)[42] ಅವರು ವರ್ಣಿಸಿದ್ದಾರೆ.

### ಜೀವನದ ಮಟ್ಟ

**ಆಹಾರ:** ಬ್ರಾಹ್ಮಣರು, ಜೈನರು, ವೈಶ್ಯರು ಮತ್ತು ವೀರಶೈವರು ಸಸ್ಯಾಹಾರಿಗಳಾಗಿದ್ದರು. ಉಳಿದವರು ಮಾಂಸಾಹಾರಿಗಳು. ಕುಮಾರವ್ಯಾಸನು ಮಾಂಸಾಹಾರ ಭಕ್ಷ್ಯಗಳನ್ನು ವರ್ಣಿಸುತ್ತಾನೆ[43]. 'ಆಮುಕ್ತಮಾಲ್ಯದ'ವೆಂಬ ಕಾವ್ಯದಲ್ಲಿ[44] ವರ್ಣಿತವಾಗಿರುವ ಸಸ್ಯಹಾರ ಭಕ್ಷ್ಯಗಳು ಇವತ್ತಿಗೂ ಬಳಕೆಯಲ್ಲಿವೆ. ಸಾಮಾನ್ಯ ಜನತೆಯ ಆಹಾರ ಇಂದಿನಂತೆ ರೊಟ್ಟಿ, ಸಾರು ಮತ್ತು ಮೆಣಸಿನಕಾಯಿ.

**ಉಡಿಗೆ-ತೊಡಿಗೆ:** ಪುರಂದರದಾಸರ ಕೀರ್ತನೆಗಳಲ್ಲಿ ವರ್ತಕನೊಬ್ಬನ ಉಡಿಗೆ–ತೊಡಿಗೆಗಳ ವರ್ಣನೆ ಇದೆ. ಅವನು ಧೋತಿ ಉಟ್ಟು, ಅಂಗಿಯನ್ನು ತೊಟ್ಟು, ತಲೆಗೆ ಪೇಟ ಸುತ್ತಿಕೊಂಡು, ಮೈಮೇಲೆ ಒಂದು ಛಾದರವನ್ನು ಹೊದ್ದು, ಕಾಲಿಗೆ ಚಪ್ಪಲಿ ಮೆಟ್ಟಿಕೊಂಡಿದ್ದನೆಂದು ಹೇಳುತ್ತಾರೆ[45]. ಸಾಮಾನ್ಯನ ಉಡುಪು ಸೊಂಟದ ಸುತ್ತ ಒಂದು ತುಂಡು ದಟ್ಟಿ ಮಾತ್ರ. ಸ್ತ್ರೀಯರ ಉಡುಪು ಎಂದಿನಂತೆ ಸೀರೆ. ಬಾರ್ಬೊಸಾ (Barbosa) ಈ ಉಡುಪುಗಳನ್ನು ಧರಿಸುತ್ತಿದ್ದ ರೀತಿಗಳನ್ನು ಸಮರ್ಪಕವಾಗಿ ವರ್ಣಿಸಿದ್ದಾನೆ[46].

### ಮನೆಗಳು

ಆ ಕಾಲದ ಮನೆಗಳನ್ನು ಕುರಿತು ಲಾಂಘುರ್ಸ್ಟ್ (Lnghurst) ಹೇಳುತ್ತಾನೆ: 'ದೇವಸ್ಥಾನಗಳು, ಅರಮನೆಗಳು ಮತ್ತು ನಾಗರಿಕ ಭವನಗಳು ಅದ್ಧುರಿಯಾಗಿ ಕಟ್ಟಲ್ಪಟ್ಟಿದ್ದರೂ ವಾಸಗೃಹಗಳೂ, ಖಾಸಗಿ ಮನೆಗಳೂ ತೀರ ಸರಳ ಸಾಧಾರಣದವುಗಳಾಗಿದ್ದಿರಲೇಬೇಕು. ಆದರೆ ಅವುಗಳ ಬಗ್ಗೆ ದೊರೆತಿರುವುದು ಕೇವಲ ಶೇರಿನ ಬೀದಿಯ ಹಾಳು ಬೀಳುಗಳು ಮಾತ್ರ. ತೀರಾ ಬಡವರ ಮನೆಗಳಂತೂ ಕೊಳಕಿನ ಮುದ್ದೆಯಾಗಿ ಇವತ್ತಿನ ಯಾವ ದೊಡ್ಡ ನಗರದೊಳಗಿರುವ ಕೊಳಚೆ ಪ್ರದೇಶಗಳನ್ನು ನೆನಪಿಗೆ ತರುವಂತೆ ಇದ್ದುವು[47]. ಈ ಲೇಖಕ ಹೇಳುವಂತೆ, ಈ ಬಗೆಯ ನಿರಾಶಾದಾಯಕವಾದ ಚಿತ್ರಕ್ಕೆ ಯಾವ ಆಧಾರವೂ ಇಲ್ಲವೆಂದು ನಮ್ಮ ಅಭಿಪ್ರಾಯ. ವಿಜಯನಗರ ಕಾಲದಲ್ಲಿ ಅಂದಿನ ಸಾಮಾನ್ಯ ಜನರ ಮನೆಗಳನ್ನು ಕಣ್ಣಾರೆ ಕಂಡ ಅಂದಿನ ಸಮಕಾಲೀನ ಪ್ರವಾಸಿಗಳು ಕೊಡುವ ಚಿತ್ರ ಬೇರೆ ಬೇರೆಯೇ ಆಗಿದೆ. ಬಾರ್ಬೋಸಾ (Barbosa)ನ

ಪ್ರಕಾರ[48] ಸಾಮಾನ್ಯ ಜನತೆಯ ಮನೆಗಳು ಹುಲ್ಲುಹೊದಿಸಿದವುಗಳೆ ಆಗಿದ್ದರೂ, ಅವರವರ ವೃತ್ತಿಗಳಿಗನು ಸಾರವಾಗಿ ವಿಂಗಡಿಸಲ್ಪಟ್ಟು, ಉದ್ದವಾದ ಬೀದಿಯ ಅಕ್ಕಪಕ್ಕದಲ್ಲಿ ಅಗಲವಾದ ಅಂಗಳದಿಂದ ಕೂಡಿ ನಿರ್ಮಿತವಾಗಿದ್ದವು[49]. ಪಾಯಸ್ (Paes) ಕೂಡಾ ಬಾರ್ಬೋಸನ ಈ ಅಭಿಪ್ರಾಯವನ್ನು ಸಮರ್ಥಿಸುತ್ತಾನೆ. ಪಾಯಸ್ (Paes) ಹೇಳುತ್ತಾನೆ: ' ಹಂಪೆಯ ಬಜಾರವು ಅತ್ಯಂತ ಸುಂದರವಾದ ಮುಹಡಿಗಳಿಂದ, ಕಮಾನಿನಂಥ ಮೇಲ್ಛಾವಣಿಯಿಂದ ನಿರ್ಮಿತವಾದ ಮನೆಗಳಿಂದ ತುಂಬಿತ್ತು. ನಾಗಲಾಪುರದ ಮನೆಗಳೆಲ್ಲ ಒಂದು ಅಂತಸ್ತಿನ, ತಾರಸಿ ಮನೆಗಳಾಗಿದ್ದವು. ಅತಿಥಿಗಳನ್ನು ಬರಮಾಡಿಕೊಂಡು ಕೂಡ್ರಿಸಲು ತಕ್ಕ ವಿಶಾಲವಾದ ಅಂಗಳವಿತ್ತು. ಆ ಒಂದೊಂದೂ ಅರಮನೆಗಳೋ ಎಂಬ ಭ್ರಮೆಯನ್ನು ಉಂಟುಮಾಡುವಂತಿದ್ದುವು[50].

## ವ್ಯವಸಾಯ

ರೈತನು ರಾಷ್ಟ್ರದ ಬೆನ್ನೆಲುಬು ಎಂದು ಪರಿಗಣಿಸಲ್ಪಟ್ಟಿದ್ದನು[51]. ಬಾರ್ಬೋಸಾ (Barbosa), ಪಾಯಸ್ (Paes) ಮತ್ತು ನುನಿಜ್ (Nuniz) ಇವರು ವಿಜಯನಗರ ಸಾಮ್ರಾಜ್ಯದ ಬೇರೆ ಬೇರೆ ಭಾಗ ಗಳಲ್ಲಿ ಸಂಚರಿಸಿ ಅವುಗಳ ಫಲವತ್ತಾದ ಭೂಮಿ, ಬೆಳೆಗಳು ಹಾಗೂ ದನಕರುಗಳು—ಇವುಗಳ ವಿವರಗಳನ್ನು ಕೊಟ್ಟಿದ್ದಾರೆ. ಪಶ್ಚಿಮ ಕರಾವಳಿಯು ಫಲವತ್ತಾದ, ಅನೇಕ ವ್ಯವಸಾಯ ಕ್ಷೇತ್ರಗಳಿಂದ ಕೂಡಿತ್ತು[52]. ಅಲ್ಲಿ ವಿಶೇಷವಾಗಿ ಬೆಳೆದ ಅಕ್ಕಿಯನ್ನು ಮಲಬಾರ್ ಮತ್ತು ಆರ್‌ಮುಜ್‌ಗೆ ರಫ್ತು ಮಾಡಲಾಗುತ್ತಿತ್ತು[53]. ಗೋವಾದ ಬಳಿಯ ವ್ಯವಸಾಯಕ್ಷೇತ್ರಗಳಲ್ಲಿ ಗೋಧಿ, ದ್ವಿದಳಧಾನ್ಯಗಳು, ಎಣ್ಣೆಯ ಬೀಜಗಳು ಮತ್ತು ಹತ್ತಿ ಇವುಗಳನ್ನು ಬೆಳೆಯಲಾಗುತ್ತಿತ್ತು[54]. ಪಾಯಸನು (Paes) ಭಟ್ಕಳದಿಂದ ವಿಜಯನಗರದ ವರೆಗಿನ ಮಾರ್ಗವನ್ನು—ಮಧ್ಯಕರ್ಣಾಟಕವನ್ನು-ವರ್ಣಿಸಿ ಉದ್ದಕ್ಕೂ ಅದು ಉತ್ತಮ ಕೃಷಿಕ್ಷೇತ್ರಗಳಿಂದ ಫಲವತ್ತಾಗಿದ್ದಿತೆಂದು ಹೇಳುತ್ತಾನೆ[55]. ಹತ್ತಿ ಮತ್ತು ಗೋಧಿಯ ಬೆಳೆ ಅಲ್ಲಿ ಸಮೃದ್ಧವಾಗಿತ್ತು. ಈಗಿನ ಧಾರವಾಡ ಜಿಲ್ಲೆಯಲ್ಲಿರುವ ಬಂಕಾಪುರ ಮತ್ತು ಸುತ್ತಮುತ್ತಲಿನ ಪ್ರದೇಶವು ವಿಜಯನಗರ ಕಾಲದಲ್ಲಿ ಬೀಜೋತ್ಪಾದನ ಹಾಗೂ ಪಶುಸಂಗೋಪನ ಕ್ಷೇತ್ರಗಳಿಂದ ಸಮೃದ್ಧವಾಗಿತ್ತೆಂದು ನುನಿಜ್ ಹೇಳುತ್ತಾನೆ[56].

## ನೀರಾವರಿ ವ್ಯವಸಾಯ

ರಾಯಲ ಸೀಮೆಯ ಜಿಲ್ಲೆಗಳಾದ ಬಳ್ಳಾರಿ ಅನಂತಪುರಗಳಲ್ಲಿ, ನೀರಾವರಿ ಸಾಧ್ಯತೆಗಳ ಬಗ್ಗೆ ಸರ್ ಥಾಮಸ್ ಮನ್ರೋ ಹೀಗೆ ಹೇಳುತ್ತಾನೆ: "ಈ ಪ್ರದೇಶದಲ್ಲಿ ಹೊಸ ಕೆರೆಗಳನ್ನು ಕಟ್ಟುವ ಪ್ರಯತ್ನ ತೀರಾ ನಿರರ್ಥಕವಾದದ್ದು, ಅದರ ಬದಲು ಇರುವ ಕೆರೆಗಳನ್ನು ರಿಪೇರಿ ಮಾಡಿಸುವುದೆ ಉತ್ತಮ. ಏಕೆಂದರೆ ಇಲ್ಲಿನ ನಿವಾಸಿಗಳಿಂದ ನೀರಾವರಿಗೆಂದು ಕಟ್ಟಲ್ಪಟ್ಟಿರುವ ಕೆರೆಗಳೇ ಬೇಕಾದಷ್ಟಿರುವಾಗ ಬೇರೆಯ ಕೆರೆಗಳ ನಿರ್ಮಾಣಕ್ಕೆ ಸ್ಥಳವೇ ಇಲ್ಲದಾಗಿದೆ"[57]. ಇದಕ್ಕೆ ವಿಜಯನಗರ ಕಾಲದ ರಾಜರುಗಳಿಂದ ಅನುಸರಿಸಲ್ಪಟ್ಟ ನೀರಾವರಿ ಯೋಜನೆಗಳೇ ಕಾರಣ. ಶ್ರೀಕೃಷ್ಣದೇವರಾಯನೇ ಈ ಬಗ್ಗೆ ಸ್ಪಷ್ಟವಾಗಿ ಘೋಷಿಸಿದ್ದಾನೆ. "ಈ ಸಾಮ್ರಾಜ್ಯವು ನೀರಾವರಿ ವ್ಯವಸಾಯಕ್ಕೆ ಕೆರೆ, ಕಾಲುವೆಗಳ ಸೌಲಭ್ಯವನ್ನು ಒದಗಿಸಬೇಕು. ಜಮೀನನ್ನು ಅನುಕೂಲವಾದ ಕಂದಾಯದ ದರದ ಮೇಲೆ ಬಡ ರೈತರಿಗೆ ವ್ಯವಸಾಯಕ್ಕೆ ಕೊಡಬೇಕು ಇದರಿಂದ ರಾಜ್ಯದ ಬೊಕ್ಕಸಕ್ಕೆ ಲಾಭವುಂಟು"[58].

## ಕೈಗಾರಿಕೆ, ವ್ಯಾಪಾರ ಮತ್ತು ವ್ಯವಹಾರಸಂಪರ್ಕ

ಅಂತರ್ದೇಶೀಯ ಮತ್ತು ವಿದೇಶೀಯ ವ್ಯಾಪಾರವು ವಿಜಯನಗರ ಕಾಲದ ಆರ್ಥಿಕ ಜೀವನದ ಒಂದು ಮುಖ್ಯವಾದ ವೈಶಿಷ್ಟ್ಯವಾಗಿತ್ತು. ಕಲ್ಲಿಕೋಟೆಯು ಅಂದಿನ ಮುಖ್ಯ ಬಂದರಾಗಿತ್ತು. ಅಬ್ದುಲ್ ರಜಾಕ್ (Abdur Razzak)ನ ಪ್ರಕಾರ ಈ ಸಾಮ್ರಾಜ್ಯದಲ್ಲಿ ಮುನ್ನೂರು ಬಂದರುಗಳಿದ್ದವು. ಹಿಂದೂಸಾಗರದ ದ್ವೀಪಗಳೊಂದಿಗೆ ಮಲಯ, ಬರ್ಮಾ, ಚೀನಾ, ಅರೇಬಿಯಾ, ಪರ್ಷಿಯಾ, ದಕ್ಷಿಣ ಆಫ್ರಿಕಾ, ಅಬಿಸೀನಿಯಾ ಮತ್ತು ಪೋರ್ಚುಗಲಿನೊಂದಿಗೆ ವಾಣಿಜ್ಯ ಸಂಪರ್ಕಗಳನ್ನು ಈ ರಾಜ್ಯವು ಇರಿಸಿಕೊಂಡಿತ್ತು. ಆನೆ, ಕುದುರೆ, ಮುತ್ತು, ತಾಮ್ರ, ಹವಳ, ಪಾದರಸ, ಚೀನಾಂಬರ, ರೇಷ್ಮೆ ಮತ್ತು ವೆಲ್ವೆಟ್ ಬಟ್ಟೆಗಳನ್ನು ಆಮದು ಮಾಡಿಕೊಳ್ಳುತ್ತಿತ್ತು. ಒಳನಾಡಿನ ಸಾಗಾಣಿಕೆ ಅಗ್ಗವಾಗಿತ್ತು. ಕಾವಡಿ (ಅಡ್ಡೆ)ಗಳು, ತಲೆಹೊರೆಗಳು, ಕುದುರೆಗಳು, ಎತ್ತುಗಳು, ಗಾಡಿಗಳು ಮತ್ತು ಕತ್ತೆಗಳು–ಇವುಗಳ ಮೇಲೆ ಸಾಮಾನುಗಳ ಸಾಗಾಣಿಕೆ ನಡೆದಿತ್ತು. ಕರಾವಳಿ ಪ್ರದೇಶದ ವ್ಯಾಪಾರವು ಹಡಗುಗಳಲ್ಲಿ ನಡೆಯುತ್ತಿತ್ತು. ಬಾರ್ಬೋಸಾ (Barbosa)ನ ಪ್ರಕಾರ ದಕ್ಷಿಣ ಭಾರತವು ಮಾಲ್ಡೀವ್ ದ್ವೀಪಗಳಲ್ಲಿ ತಯಾರಾದ ಹಡಗುಗಳನ್ನು ಪಡೆದಿತ್ತು. ಶಾಸನಗಳ ಪ್ರಕಾರ ವಿಜಯನಗರದ ರಾಜರು, ಹಡಗಿನ ಪಡೆಯೊಡೆಯರಾಗಿದ್ದುದಲ್ಲದೆ, ಆಗಿನ ಜನ ಹಡಗುಗಳನ್ನು ಕಟ್ಟುವ ಕಲೆಯನ್ನು ಪೋರ್ಚುಗೀಸರಿಗಿಂತ ಮೊದಲೇ ಬಲ್ಲವರಾಗಿದ್ದರು. ಜವಳಿ ಉತ್ಪಾದನೆ, ಗಣಿಯಿಂದ ಅದುರು ತೆಗೆಯುವುದು, ಲೋಹ ತೆಗೆಯುವುದು ಮತ್ತು ಸುಗಂಧ ದ್ರವ್ಯಗಳ ನಿರ್ಮಾಣ–ಇವು ರಾಜ್ಯದ ಮುಖ್ಯ ಕೈಗಾರಿಕೆಗಳಾಗಿದ್ದುವು.

ಕಲ್ಲಿಕೋಟೆಯಿಂದ ಸುಮಾರು 167 ಮೈಲಿಗಳ ದೂರದಲ್ಲಿ ಕಾನ್–ಪಾ–ಮಾಯ್ (Kan-Pa-Mai) ಎಂಬುದು (ಈಗ ಅದು ಕೊಯಮತ್ತೂರು ಎಂದು ಗುರುತಿಸಲಾಗಿದೆ) ಹತ್ತಿಯ, ರೇಷ್ಮೆಯ ತಯಾರಿಕೆಗೆ ಬಹು ದೊಡ್ಡ ಕೇಂದ್ರವಾಗಿತ್ತು[59]. ಗೋವಾದಲ್ಲಿ ಅತ್ಯಂತ ಸೊಗಸಾದ ಬಟ್ಟೆ ತಯಾರಾಗುತ್ತಿತ್ತು[60]. ರಾಜಧಾನಿಯಾದ ವಿಜಯನಗರವೇ ರತ್ನವ್ಯಾಪಾರಕ್ಕೆ ಕೇಂದ್ರವಾಗಿತ್ತು. ಈ ವ್ಯಾಪಾರಕ್ಕೆ ಬೇಕಾದ ವಜ್ರಗಳಲ್ಲಿ ಹೆಚ್ಚಿನವು ಗುತ್ತಿಯ (ಅನಂತಪುರ ಜಿಲ್ಲೆಯಲ್ಲಿರುವ ಗೂತಿ ಎಂಬ ಊರು) ಸಮೀಪದ ವಜ್ರಕೆರೂರ್ ಎಂಬಲ್ಲಿಂದ ಬರುತ್ತಿದ್ದವು. ಈ ಪ್ರದೇಶದ ರಾಜ್ಯಪಾಲನು ಇಲ್ಲಿ ದೊರೆತ ವಜ್ರಗಳನ್ನು ರಾಜರಿಗೇ ಒಪ್ಪಿಸಬೇಕಾಗಿತ್ತು[61]. ವಿಜಯನಗರದ ರಾಜರುಗಳ ಹಾಗೂ ವರ್ತಕರ ಬಹುಮಟ್ಟಿನ ಐಶ್ವರ್ಯವೆಲ್ಲಾ ಈ ವಜ್ರಗಳ ವ್ಯಾಪಾರದಿಂದ ಬರುತ್ತಿತ್ತು. ಹದ ಮಾಡಿದ ಮತ್ತು ಹದಮಾಡದಿರುವ ಲೋಹಗಳು ವಿಜಯನಗರದಲ್ಲಿದ್ದುವು[62]. ಭಟ್ಕಳದಿಂದ ಕಬ್ಬಿಣದ ಅದುರು ಹೊರೆ ಹೊರೆಯಾಗಿ ರಫ್ತಾಗುತ್ತಿತ್ತು[63].

ಹದಿನೈದು ಹದಿನಾರನೆಯ ಶತಮಾನಗಳಲ್ಲಿ ದಕ್ಷಿಣ ಭಾರತದ ವಿದೇಶೀವ್ಯಾಪಾರವು ಬಹುಮಟ್ಟಿಗೆ ಕಲ್ಲಿಕೋಟೆ ಮತ್ತು ಪಶ್ಚಿಮದ ಕನ್ನಡ ಕರಾವಳಿಯ ಬಂದರುಗಳ ಮೂಲಕ ನಡೆದಿತ್ತು. ಪೆಗು ಮತ್ತು ಮಲಕ್ಕಾದಿಂದ, ಕೆಂಪು ಸಮುದ್ರಕ್ಕೆ ಹೋಗುತ್ತಿದ್ದ ಹಡಗುಗಳೆಲ್ಲ ದಾರಿಯಲ್ಲಿ ಸಿಗುವ ಈ ಬಂದರುಗಳಲ್ಲಿ ನಿಂತು, ಇಂಡಿಯಾ ದೇಶದ ಸಾಮಾನುಗಳನ್ನು ತುಂಬಿಕೊಂಡು ಹೋಗಿ ಬೇರೆ ಬೇರೆಯ ದಿಕ್ಕುಗಳಿಗೆ ಹಂಚುತ್ತಿದ್ದುವು. ಈ ವ್ಯಾಪಾರವೆಲ್ಲ ಬಹುಮಟ್ಟಿಗೆ ಪಶ್ಚಿಮ ಕರಾವಳಿಯಲ್ಲಿ ನೆಲಸಿದ್ದ ಅರಬರ ಕೈಯಲ್ಲಿತ್ತು. ಆದರೆ ಹದಿನಾರನೆಯ ಶತಮಾನದ ವೇಳೆಗೆ ಇಂಡಿಯಾದ ಸಾಗಾಣಿಕೆ ವ್ಯಾಪಾರವನ್ನೆಲ್ಲ ಪೋರ್ಚುಗೀಸರು ಅರಬರಿಂದ ತೆಗೆದುಕೊಂಡರು[64].

ಹೀಗೆ ಹೊರಕ್ಕೆ ರಫ್ತಾಗುತ್ತಿದ್ದ ಇನ್ನು ಕೆಲವು ಪದಾರ್ಥಗಳೆಂದರೆ–ಬಟ್ಟೆ, ಅಕ್ಕಿ, ಕಬ್ಬಿಣ, ಯವಕ್ಷಾರ, ಸಕ್ಕರೆ ಮತ್ತು ಸಾಂಬಾರ ಪದಾರ್ಥಗಳು[65]. ಪೋರ್ಚುಗೀಸರು ವಿಜಯನಗರದ ವರ್ತಕರಿಂದ ಅಂಕೋಲಾ

ಇಲ್ಲವೆ ಹೊನ್ನಾವರದಲ್ಲಿ ಬಟ್ಟೆಯನ್ನು ಕೊಂಡುಕೊಳ್ಳುತ್ತಿದ್ದರು[66]. ಬಸರೂರು, ಬಾರಕೂರು, ಮತ್ತು ಮಂಗಳೂರಿಂದ ಮಲಬಾರ್, ಮಾಲ್ಡೀವ್ ದ್ವೀಪಗಳು, ಏಡನ್ ಮತ್ತು ಆರ್ಮುಜ್–ಈ ಪ್ರದೇಶಗಳಿಗೆ ಅಕ್ಕಿಯು ರಫ್ತಾಗುತ್ತಿತ್ತು[67]. ಹೊರಗಿನಿಂದ ಆಮದಾಗುತಿದ್ದವುಗಳಲ್ಲಿ ಮುಖ್ಯವಾದವು ಕುದುರೆಗಳು[68].

ವಿಜಯನಗರವು ದಕ್ಷಿಣ ಇಂಡಿಯಾದ ಸಂಚಾರೀವ್ಯವಸ್ಥೆಯ ಕೇಂದ್ರವಾಗಿತ್ತು. ಒಂದು ಹೆದ್ದಾರಿಯು ವಿಜಯನಗರದಿಂದ ಗೋವಾಕ್ಕೆ ಬಂಕಾಪುರದ ಮೂಲಕ ಹೋಗುತ್ತಿತ್ತು[69]. ಮತ್ತೊಂದು ಬಂಕಾಪುರವನ್ನು ಹೊನ್ನಾವರ ಭಟ್ಕಳಗಳೊಡನೆ ಒಂದುಗೂಡಿಸಿತ್ತು[70]. ಬಹುಶಃ ಹರಿಹರದ ಮಾರ್ಗವಾಗಿ ವಿಜಯನಗರದಿಂದ ಭಟ್ಕಳಕ್ಕೆ ಇನ್ನೊಂದು ಹೆದ್ದಾರಿಯಿತ್ತು[71]. ವಿಜಯನಗರದಿಂದ ಮೈಲಾಪುರಕ್ಕೆ (ಮದ್ರಾಸಿಗೆ) ಪೆನುಕೊಂಡೆ, ತಿರುಪತಿ, ಚಂದ್ರಗಿರಿ ಮತ್ತು ಪುಲಿಕಾಟ್‌ಗಳ ಮೂಲಕ ಒಂದು ದಾರಿಯಿತ್ತು. ಈ ಮಾರ್ಗವಾಗಿಯೆ ಕೊಂಟಿ (Conty) ಎಂಬ ಪ್ರವಾಸಿಗ ಪ್ರಯಾಣ ಮಾಡಿದ್ದು[72].

### ವಿಜಯನಗರದ ನಾಣ್ಯವ್ಯವಸ್ಥೆ

ವಿಜಯನಗರ ಸಾಮ್ರಾಜ್ಯವು ದಖನ್ನಿನ ಸಮಸ್ತ ಪ್ರಾಚೀನ ಸಾಮ್ರಾಜ್ಯಗಳ ಪರಂಪರೆಯನ್ನು ಪ್ರತಿನಿಧಿಸುವಂತಿತ್ತು. ವಿಜಯನಗರದ ರಾಜ್ಯಚಿಹ್ನವು ವರಾಹವಾಗಿದ್ದರೂ ನಾಣ್ಯಗಳ ಮೇಲೆ ಹನೂಮಾನ್, ಗರುಡ ಮತ್ತು ಆನೆಗಳ ಲಾಂಛನವನ್ನು ಕಾಣುತ್ತೇವೆ. ಒಂದನೆ ಹರಿಹರನ ಕಾಲದ ನಾಣ್ಯಗಳ ಮೇಲೆ ಗರುಡ, ಹನುಮಾನ್ ಅವರ ಚಿತ್ರಗಳಿರುವುವಲ್ಲದೆ, ಕನ್ನಡ ಇಲ್ಲವೆ ದೇವನಾಗರಿ ಲಿಪಿಯಲ್ಲಿ 'ಶ್ರೀವೀರ ಹರಿಹರ' ಎಂಬ ಅಂಕಿತವೂ ಕಂಡುಬರುತ್ತದೆ. ಮೊದಲನೆ ಬುಕ್ಕನ ಕಾಲದ ನಾಣ್ಯಗಳ ಮೇಲೆ 'ಶ್ರೀ ವೀರಬುಕ್ಕರಾಯ' 'ಶ್ರೀ ವೀರಭೂಪ (ಕಲ್ಪ)ತಿ ರಾಯ' ಎಂಬ ಲಿಖಿತವಿದೆ. ಎರಡನೆ ಹರಿಹರನ ಕಾಲದ ಚಿನ್ನದ ಅರ್ಧವರಹಗಳು, 26.4 ಗ್ರೆಯ್ನ್ ತೂಕದವಾಗಿವೆ. ನಾಣ್ಯದ ಮೇಲ್ಮುಖದಲ್ಲಿ ಶಿವ–ಪಾರ್ವತಿ, ಲಕ್ಷ್ಮೀ-ನಾರಾಯಣ, ಸರಸ್ವತೀ–ಬ್ರಹ್ಮ ಮತ್ತು ಲಕ್ಷ್ಮೀ–ನರಸಿಂಹ, ಇವರ ಚಿತ್ರಗಳಿವೆ. ಇದರ ಇನ್ನೊಂದು ಮುಖದ ಮೇಲೆ 'ಶ್ರೀ ಪ್ರತಾಪ ಹರಿಹರ' ಎಂದು ನಾಗರಿಲಿಪಿಯಲ್ಲಿ ಕೆತ್ತಲಾಗಿದೆ. ತಾಮ್ರದ $\frac{1}{8}$ ವರಹವು ತೂಕದಲ್ಲಿ 6 ಗ್ರೆಯ್ನ್ ಇದ್ದು, ಅದರ ಮೇಲೆ ನಂದಿಶೂಲಗಳ ಚಿತ್ರವಿದ್ದು, 'ಪ್ರತಾಪಹರಿಹರ' ಎಂಬ ಅಂಕಿತವಿದೆ. ಎರಡನೆಯ ಬುಕ್ಕ ಅಥವಾ ವಿಜಯದೇವರಾಯನ ಕಾಲದ ತಾಮ್ರದ ನಾಣ್ಯಗಳ ಮೇಲೆ ನಂದಿ, ಸೂರ್ಯ, ಚಂದ್ರರ ಚಿತ್ರವಿದ್ದು ನಾಗರಿ ಲಿಪಿಯಲ್ಲಿ 'ಜಯ ಬುಕ್ಕರಾಯ' ಎಂಬ ಅಂಕಿತವಿದೆ. ಒಂದನೆ ದೇವರಾಯನ ಕಾಲದ ಚಿನ್ನದ ವರಹಗಳು 52.3 ಗ್ರೆಯ್ನ್ ತೂಕದವಾಗಿವೆ. ಅವುಗಳ ಮೇಲೆ ಶಿವ–ಪಾರ್ವತಿ, ವಿಷ್ಣು–ಲಕ್ಷ್ಮಿ, ಇವರ ಚಿತ್ರಗಳು ಮತ್ತು ನಾಗರಿ ಲಿಪಿಯಲ್ಲಿ 'ಶ್ರೀಪ್ರತಾಪದೇವರಾಯ' ಎಂಬ ಅಂಕಿತ ಇದೆ. ಬಹುಶಃ ಅವನ ಕಾಲದವಾದ ತಾಮ್ರದ ನಾಣ್ಯಗಳ ಮೇಲೆ ನಂದಿ, ಶಂಖ, ಸೂರ್ಯ, ಚಂದ್ರ ಇವರ ಚಿತ್ರವೂ ಕನ್ನಡದಲ್ಲಿ 'ದೇ' 'ಶ್ರೀದೇವರಾಯ' 'ಶ್ರೀನೀಲಕಂಠ' ಮತ್ತು ನಾಗರಿ ಲಿಪಿಯಲ್ಲಿ 'ಶ್ರೀ ಪ್ರತಾಪದೇವರಾಯ' ಎಂಬ ಅಂಕಿತಗಳೂ ಇವೆ.

ಎರಡನೆ ದೇವರಾಯನ ಕಾಲದಲ್ಲಿ, ಈ ರಾಜ್ಯದಲ್ಲಿ ಪ್ರವಾಸ ಕೈಕೊಂಡ ಅಬ್ದುಲ್ ರಜಾಕ್ (Abdur Razzak)ನು ಈ ಕಾಲದ ವರಹ (ಪಗೋಡಾ, ತಾರ ಮತ್ತು ಜಿತಲ್)ಗಳ ಸಂಗತಿಯನ್ನು ಹೇಳಿದ್ದಾನೆ. $\frac{1}{4}$ ವರಹವು ಚಿನ್ನದ್ದಾಗಿದ್ದು 13.2 ಗ್ರೆಯ್ನ್ ತೂಗುತ್ತಿತ್ತು. ದೇವರಾಯನು ಗಜಬೇಂಟೆಕಾರನಾಗಿದ್ದ ಕಾರಣ, ಅವನ ಕಾಲದ ನಾಣ್ಯಗಳ ಮೇಲೆ ಆನೆಯ ಚಿತ್ರಗಳು ಕಾಣಿಸುತ್ತವೆ. 'ತಾರ' ಎಂಬುದು ಒಂದು ಬೆಳ್ಳಿಯ ನಾಣ್ಯ. ಅದರ ಮೇಲೆ ಒಂದೆಡೆ ಆನೆಯ ಚಿತ್ರವೂ, ಇನ್ನೊಂದೆಡೆ

ದೇವನಾಗರಿ ಲಿಪಿಯಲ್ಲಿ 'ಶ್ರೀದೇವರಾಯ' ಎಂಬ ಅಂಕಿತವೂ ಇವೆ. ಅನೇಕ ತಾಮ್ರದ ನಾಣ್ಯಗಳ ಮುಂಭಾಗದಲ್ಲಿ ಆನೆ, ಸೂರ್ಯ, ಮತ್ತು ರಾಜನು ಆನೆಯನ್ನು ಬೇಟೆಯಾಡುವ ಚಿತ್ರ ಇವೆ. ಇದರ ಹಿಂಭಾಗದಲ್ಲಿ ಕನ್ನಡ ಮತ್ತು ಸಂಸ್ಕೃತಗಳಲ್ಲಿ 'ಶ್ರೀದೇವರಾಯ' 'ಶ್ರೀಪ್ರತಾಪದೇವರಾಯ' 'ಶ್ರೀದೇವರಾಯ ಗಜಬೇಂಟೆಕಾರ' 'ರಾಯಗಜಗಂಡಭೇರುಂಡ' ಎಂಬ ಉಲ್ಲೇಖಗಳಿವೆ.

ಲಕ್ಕಣ್ಣ ದಂಡೇಶನು ಕೂಡ ತಾನು ಹೊರಡಿಸಿದ ನಾಣ್ಯಗಳ ಮೇಲೆ ಆನೆಯ ಚಿತ್ರವನ್ನೂ ಲ (ಖ)ಮಣ ದಣ್ಣಾಯಕ ಎಂದು ಕನ್ನಡ ಲಿಪಿಯಲ್ಲಿ ಬರೆದ ಅಂಕಿತವನ್ನೂ ಹಾಕಿಸಿದ್ದಾನೆ.

ಸಾಳುವರ ಕಾಲದ ನಾಣ್ಯಗಳ ವಿಷಯ ನಮಗೆ ದೊರೆತಿಲ್ಲ. ಕೃಷ್ಣದೇವರಾಯನ ಕಾಲದ ಸುವರ್ಣವರಹಗಳು 52 ಗ್ರೆಯ್ನ್ ತೂಕವಿದ್ದು ನಂದಿ, ದುರ್ಗಾ, ವರಾಹ, ಶಂಖ ಮತ್ತು ಚಕ್ರಗಳ ಚಿತ್ರದಿಂದ ಕೂಡಿ, ನಾಗರಿಲಿಪಿಯಲ್ಲಿ 'ಶ್ರೀ ಪ್ರತಾಪಕೃಷ್ಣರಾಯ' ಎಂಬ ಲಿಖಿತವನ್ನು ಹೊಂದಿವೆ. ಆತನ ಅರ್ಧ ಮತ್ತು ಕಾಲುವರಹಗಳ ಮೇಲೆ ಬಾಲಕೃಷ್ಣನ ಚಿತ್ರವಿದೆ. ಅಚ್ಯುತನ ಕಾಲದ ವರಹಗಳ ಮೇಲೆ ಗಂಡಭೇರುಂಡವು ಆನೆಯನ್ನು ಆಕ್ರಮಿಸಿರುವ ಚಿತ್ರವೂ ನಾಗರಿ ಲಿಪಿಯಲ್ಲಿ 'ಶ್ರೀ ಪ್ರತಾಪ ಅಚ್ಯುತರಾಯ' ಎಂಬ ಅಂಕಿತವೂ ಇವೆ.

ಚಕ್ರವರ್ತಿಯಾದ ಸದಾಶಿವನ ಕಾಲದ ನಾಣ್ಯಗಳ ಮೇಲೆ ಶಿವ ಪಾರ್ವತಿ, ಲಕ್ಷ್ಮೀನಾರಾಯಣ–ಇವರ ಚಿತ್ರಗಳೂ ನಾಗರಿಲಿಪಿಯಲ್ಲಿ 'ಶ್ರೀ ಸದಾಶಿವರಾಯರು' ಎಂಬ ಅಂಕಿತವೂ ಇವೆ. ಅರವೀಡು ದೊರೆಗಳು ತಾವು ಹೊರಡಿಸಿದ ನಾಣ್ಯಗಳ ಮೇಲೆ ಶ್ರೀವೆಂಕಟೇಶ್ವರನ ಚಿತ್ರವನ್ನೂ 'ಶ್ರೀವೆಂಕಟಪತಿರಾಯ' ಎಂಬ ಅಂಕಿತವನ್ನೂ ಹಾಕಿಸಿದ್ದಾರೆ.

## ಅಡಿ ಟಿಪ್ಪಣಿಗಳು

1. R. Sewell: A Forgotten Empire, Publication Division New Delhi, 1962. P. 247.
2. ಅಲ್ಲೇ ಪುಟ. 80
3. ಅಲ್ಲೇ. ಪುಟ. 86.
4. ಅಲ್ಲೇ. ಪುಟ. 248.
5. ಅಲ್ಲೇ. ಪುಟ 247.
6. ಅಲ್ಲೇ. ಪುಟ 277.
7. ಕೆ.ಟಿ. ಪಾಂಡುರಂಗಿ: 'ಸಂಸ್ಕೃತ ಕವಯಿತ್ರಿಯರು' ಪುಟ 37, 38.
8. South Indian Inscription. IX (ii) No. 564.
9. A.H. Longhurst: Hampi Ruins P. 102.
10. V. Raghavacharya: Inscriptions of the Madras Presidency, I Bellary, No. 327.

11. S.I.I. IV No 262
12. ಅಲ್ಲೇ, ನಂ. 265.
13. ಅಲ್ಲೇ, ನಂ. 263.
14. F. E. P. 345. 'ಈ ರಾಜನು (ಕೃಷ್ಣರಾಯ) ಈಕೆಯ ಮೇಲಿನ ಗೌರವದಿಂದಾಗಿ ನಗರವೊಂದನ್ನು ನಿರ್ಮಿಸಿ, ಅವಳ ಬಗೆಗೆ ಇದ್ದ ಪ್ರೀತಿಯ ದ್ಯೋತಕವಾಗಿ ನಾಗಲಾಪುರವೆಂದು ಅದಕ್ಕೆ ಹೆಸರಿಟ್ಟನು. ಇಲ್ಲಿ ಈ ಎರಡು ಉಪನಗರಗಳ ವಿಷಯದಲ್ಲಿ—ಒಂದು ಕೃಷ್ಣದೇವರಾಯನು ತನ್ನ ರಾಣಿ ತಿರುಮಲದೇವಿಯ ಗೌರವಾರ್ಥವಾಗಿ ಇನ್ನೊಂದು ತನ್ನ ತಾಯಿ ನಾಗಲಾದೇವಿಯ ಗೌರವಾರ್ಥವಾಗಿ ಕಟ್ಟಿದ್ದು—ಸ್ವಲ್ಪ ಗೊಂದಲವಿದೆ. ಈ ಎರಡೂ ಈಗಿನ ಹೊಸಪೇಟೆಯ ಹತ್ತಿರ ಒಂದರ ಬದಿಗೊಂದು ಇದ್ದುವು. 'ದಕ್ಷಿಣ ಭಾರತದ ಶಾಸನಗಳು' (S.I.I.) IX (ii)-ಅನ್ನು ನೋಡಿ. ಹೊಸಪೇಟೆಯಲ್ಲಿ ಅಥವಾ ಅದರ ಹತ್ತಿರ ಕೃಷ್ಣದೇವರಾಯನ ಕಾಲದಲ್ಲಿ ಕಟ್ಟಲ್ಪಟ್ಟ ನಾಗಲಾದೇವಿ ಪುರದ ವಿಷಯ ನಂ. 504 ರಲ್ಲಿ ದೊರೆಯುತ್ತದೆ.
15. ಅಲ್ಲೇ. ಪು. 271.
16. S.I.I. XI (ii) No. 595.
17. ಅಲ್ಲೇ. IV No. 247.
18. ಅಲ್ಲೇ. XI (ii) No. 510.
19. V.R. I No. 369.
20. ಅಲ್ಲೇ. No. 347.
21. F.E. P. 351.
22. S.I.I. XI (ii) No. 530.
23. ಕಟ್ಟಿ ಶೇಷಾಚಾರ್ : ಕವಿ ಕನಕದಾಸ. ಪು. 62—63.
24. S.I.I. XI (ii) No. 573.
25. ಅಲ್ಲೇ. ನಂ. 536.
26. The Book of Durte Barbosa: I. P. 182—197.
27. ರಾಯಚೂರ್ ಬಗ್ಗೆ ನೋಡಿ. F.E., P. 319. ಆದವಾನಿ ಬಗ್ಗೆ ನೋಡಿ. V.R., I. No. 4. ಶ್ರೀರಂಗಪಟ್ಟಣ ಮತ್ತು ಇಕ್ಕೇರಿಯ ಬಗ್ಗೆ ನೋಡಿ. Sources of Vijayanagar History, Ed. by Dr. S. Krishnaswamy Ayyangar, P. 111 ಬಂಕಾಪುರದ ಬಗ್ಗೆ, ನೋಡಿ F.E., P. 119 : f.n. ಉಳಿದ ಸ್ಥಳಗಳ ವಿವರಗಳಿಗೆ E.C., V. BI. 75 ನೋಡಿ.
28. Barbosa. I. P. 200.
29. ಅಲ್ಲೇ. ಪು. 213—220.
30. ಅಲ್ಲೇ. 1. ಪು. 213—220.
31. ಪುರಂದರದಾಸರ ಪದಗಳು : ಸಂ. ಪಾವಂಜೆ ಗುರುರಾವ್. ಭಾಗ II ಪು. 99.
32. Barbosa. 1. P. 208.
33. Nuniz. F.E., P. 363.
34. Paes. F.E., PP. 204—41 and Nuniz. F.E., PP. 362—63.
35. S.I.I. IX. (ii) No. 458.
36. ಅಲ್ಲೇ. No. 557.
37. ಕನಕದಾಸ. II ಪು. 192.
38. ಪುರಂದರದಾಸ II ಪು. 15.
39. S.I.I. IX (ii) No. 498.

40. Legacy of Rome. P. 227.
41. Major: India in the 15th Century. pp. 29—30.
42. Barbosa. 1. P. 222. (Devadasi) and P. 213 (Sati).
43. ವಿರಾಟಪರ್ವ. vv. 35—36.
44. ಆಮುಕ್ತಮಾಲ್ಯದ: I. VV. 80—83.
45. ಅಲ್ಲೇ. II ಪು. 8.
46. Barbosa, I, pp. 205—7.
47. Hampi Ruins, pp. 105—7.
48. Barbosa, 1, P. 202,
49. Paes, F.E., P. 251.
50. ಅಲ್ಲೇ. ಪು. 238.
51. ಸರ್ವಜ್ಞ: ಎ. ಆರ್. ಕೃಷ್ಣಶಾಸ್ತ್ರೀ. ಪು. 39.
52. Barbosa, I, P. 184.
53. ಅಲ್ಲೇ. ಪು. 183 ಮತ್ತು 188.
54. Nuniz, F.E., P. 367.
55. Paes, F.E., P. 230.
56. Nuniz, F.E., P. 230.
57. Gibbs' History of Deccan I, P. 188. ಅಲ್ಲಿ ಉದಾಹೃತವಾಗಿದೆ.
58. ಆಮುಕ್ತಮಾಲ್ಯದ. IV, V. 26.
59. Mahaun. J.R.A.S. 1896. P. 345.
60. Nuniz, F.E., 367.
61. ಅಲ್ಲೇ. ಪು. 368.
62. Barbosa, I, P. 203.
63. ಅಲ್ಲೇ. ಪು. 189.
64. Barbosa, I, P. 203.
65. H. Heras: The Aravidu Dynasty. P.P. 62—3 and Barbosa: I, P. 189—198.
66. Heras: PP. 62—63.
67. Barbosa: I. PP. 189—198.
68. Heras: P. 59.
69. F.E., P. 119. F.n.
70. ಅಲ್ಲೇ. ಪು. 119. F.n.
71. Paes, F.E., pp. 224—30.
72. Major. P. 7.



ಮೂಲ ಲೇಖಕರು: ಡಾ|| ಜಿ. ಎಸ್. ದೀಕ್ಷಿತ್
ಅನುವಾದಕರು: ಡಾ|| ಜಿ. ಎಸ್. ಶಿವರುದ್ರಪ್ಪ

# ಶಿಕ್ಷಣ ಮತ್ತು ವಿಜ್ಞಾನ

## (ಮಧ್ಯಕಾಲದಲ್ಲಿ)

### ರಾಜಕುಮಾರರ ಶಿಕ್ಷಣ

ವಿಜಯನಗರದ ರಾಜರು ವಿದ್ವತ್ತನ್ನು ಮತ್ತು ಶಿಕ್ಷಣದ ಪ್ರಸಾರವನ್ನು ಪ್ರೋತ್ಸಾಹಿಸಿದ್ದಕ್ಕೆ ಕಾರಣ, ಅವರೇ ಸ್ವತಃ ವಿದ್ಯಾವಂತರಾಗಿದ್ದರು ಎನ್ನುವುದು. ಮೊದಲನೆಯ ಬುಕ್ಕನು ಆ ಕಾಲದ ವಿದ್ವತ್ ಲೋಕದಲ್ಲಿ ಅದ್ಭುತ ವ್ಯಕ್ತಿದ್ವಯರಾದ ಭಾರತೀತೀರ್ಥ ಮತ್ತು ವಿದ್ಯಾರಣ್ಯರ ಶಿಷ್ಯನಾಗಿದ್ದನು[1]. ರಾಜಗುರುವಾದ ಕ್ರಿಯಾಶಕ್ತಿಯು ಬುಕ್ಕ, ಹರಿಹರ, ಮತ್ತು ಮೊದಲನೆ ದೇವರಾಯನ ಆಚಾರ್ಯನಾಗಿದ್ದನು[2]. ಒಂದನೆ ಹರಿಹರನು ವಿದ್ಯಾರಣ್ಯರ ಕೃಪೆಯಿಂದ, ರಾಜಾಧಿರಾಜರಿಗೂ ದುರ್ಲಭವಾದ ಜ್ಞಾನ ಸಾಮ್ರಾಜ್ಯವನ್ನು ವಶಪಡಿಸಿಕೊಂಡನು[3]. ಅವನು 'ಕರ್ಣಾಟಕ ವಿದ್ಯಾ ವಿಲಾಸ' ನೆಂದು ಪ್ರಶಂಸಿಸಲ್ಪಟ್ಟಿದ್ದಾನೆ[4]. ಮೊದಲನೆ ದೇವರಾಯನು ಸಂಗೀತ–ಸಾಹಿತ್ಯವೆರಡರಲ್ಲಿಯೂ ಪ್ರವೀಣ ನಾಗಿದ್ದನು[5]. ಅವನ ಅನಂತರ ಪಟ್ಟಕ್ಕೆ ಬಂದ ವಿಜಯರಾಯನು (ಕ್ರಿ.ಶ. 1426), 'ಭೋಜರಾಜನ ಮರಣದಿಂದ ದುಃಖಾಕ್ರಾಂತೆಯಾದ ಸರಸ್ವತಿಯ ಕಂಬನಿಗಳನ್ನು ಒರಸಿದ'ನೆಂದು ಹೇಳಲಾಗಿದೆ[6].

ರಾಜಕುಮಾರರ ವಿದ್ಯಾಭ್ಯಾಸದಿಂದ ಮುಂದುವರಿದ ಈ ಪರಂಪರೆಯು ವಿಜಯನಗರದ ರಾಜರ ಅನಂತರ ಬಂದ ದೊರೆಗಳಿಂದಲೂ ಅನುಸರಿಸಲ್ಪಟ್ಟಿತು. ಎಷ್ಟೋ ವೇಳೆ ರಾಜನೇ ಈ ಬಗ್ಗೆ ತನ್ನ ಉತ್ತರಾಧಿಕಾರಿಯಾಗುವವರಿಗೆ ತಿಳಿವಳಿಕೆ ಕೊಟ್ಟದ್ದೂ ಉಂಟು. ಕೆಳದಿಯ ಅರಸನಾದ ಚಿಕ್ಕ ಸಂಕಣ್ಣ ನಾಯಕನು ತನ್ನ ಉತ್ತರಾಧಿಕಾರಿಯಾದ ವೆಂಕಟಪ್ಪನಾಯಕನಿಗೆ ಸಪ್ತಾಂಗದ ಓನಾಮವನ್ನು (ಬೀಜ ರೂಪಗಳನ್ನು) ಹೇಳಿಕೊಟ್ಟದ್ದು ಇದಕ್ಕೆ ಒಂದು ನಿದರ್ಶನ[7]. ವೆಂಕಟಪ್ಪನಾಯಕನು ವಿದ್ವಾಂಸರಿಂದ ಕಾವ್ಯ, ನಾಟಕ ಮತ್ತು ಧರ್ಮಶಾಸ್ತ್ರಗಳನ್ನು ಕುರಿತು ಅನೇಕ ಗ್ರಂಥಗಳನ್ನು ಬರೆಯಿಸಿದ್ದಲ್ಲದೆ, ತಾನೇ ಕೆಲವನ್ನು ರಚಿಸಿದನು[8]. ಕೆಳದಿಯ ರಾಣಿಯಾದ ಚೆನ್ನಮ್ಮಾಜಿಯು, ಬಸವಪ್ಪನನ್ನು ಉತ್ತರಾಧಿಕಾರಿ ಯನ್ನಾಗಿ ಆಯ್ಕೆ ಮಾಡಿದಾಗ, ಆತನಿಗೆ ವಿದ್ಯಾಶಾಸ್ತ್ರದ ಹಾಗೂ ದೈಹಿಕ ಶಿಕ್ಷಣವನ್ನು ಕೊಡಿಸಿ, ಅವನು ರಾಜನಾಗಲು ಬೇಕಾಗುವ ಶಿಕ್ಷಣ ಕ್ರಮಗಳಲ್ಲಿ ಆತನನ್ನು ತರಬೇತುಗೊಳಿಸಿದಳು. ಅವನು ಎಷ್ಟರ ಮಟ್ಟಿಗೆ ಶಿಕ್ಷಣ ಪಡೆದನೆನ್ನುವುದಕ್ಕೆ ಅವನ ಆಳಿಕೆಯ ಉಜ್ವಲವಾದ ಘಟನೆಗಳೂ ಅವನು ವಿದ್ವಜ್ಜ ನಾಶ್ರಯನಾಗಿ 'ಸೂರಿನಿಕರ ಕಲ್ಪದ್ರುಮ'ನೆಂದು ಪ್ರಶಂಸೆಯನ್ನು ಪಡೆದದ್ದೂ ಸಾಕ್ಷಿಗಳಾಗಿವೆ. ಶಿವತತ್ವ ರತ್ನಾಕರ' ಎಂಬ ಒಂದು ವಿಶ್ವಕೋಶದ ಸಂಗ್ರಹ ಕಾರ್ಯದಲ್ಲಿ ಆತನು ಪಟ್ಟ ಪ್ರಯತ್ನಗಳು ಪ್ರಖ್ಯಾತವಾಗಿವೆ[9].

'ಚಿಕ್ಕದೇವರಾಯ ವಂಶಾವಳಿ'ಯಲ್ಲಿ, ಮೈಸೂರು ಚಿಕ್ಕದೇವರಾಯರು (ಕ್ರಿ.ಶ. 1672–1704) ಪಡೆದ ಶಿಕ್ಷಣದ ವಿವರಗಳು ನಿರೂಪಿತವಾಗಿವೆ. ಅವರಿಗೆ ಬೇರೆ ಬೇರೆಯ ವಿಷಯಗಳನ್ನು ಕಲಿಸಲು ಬೇರೆ ಬೇರೆಯ ಶಿಕ್ಷಕರಿದ್ದರು. ಕಾವ್ಯ ಶಿಕ್ಷಾಚಾರ್ಯರು ಅವರಿಗೆ, ಉಚ್ಚಾರಣಾ ಕ್ರಮವನ್ನೂ ಓದುವುದನ್ನೂ ಕಲಿಸಿದರು. ಈ ಶಿಕ್ಷಣಕ್ಕೆ 'ಲಿಪಿಗ್ರಹಣ' ವೆಂದು ಹೆಸರು. ಮತ್ತೊಬ್ಬ ಶಿಕ್ಷಕರು 'ಪದವಾಕ್ಯ ಪ್ರಮಾಣ' ಅಥವಾ ವ್ಯಾಕರಣವನ್ನು ಹೇಳಿಕೊಟ್ಟರು. ಮೂರನೆಯವರು ಅನೇಕ

ವಿಷಯಗಳ ಜತೆಗೆ ಚರಿತ್ರೆ ಭೂಗೋಳಗಳನ್ನೂ ಒಳಗೊಂಡ ಪುರಾಣಗಳನ್ನು ಕಲಿಸಿದರು. ಚಿಕ್ಕದೇವರಾಯರು ವಾದ್ಯ ಸಂಗೀತವನ್ನು ಕಲಿತು ವೀಣಾವಾದನದಲ್ಲಿ ನಿಪುಣರಾದರು. ಕಡೆಗೆ ಹಿಂದಿನಿಂದ ಈ ಆಧುನಿಕ ಕಾಲದ ವರೆಗೂ ಉಳಿದುಕೊಂಡು ಬಂದಿರುವ ಭಾರತೀಯ ಶಾಲೆ (ಗರುಡಿ) ಯ ಶಿಕ್ಷಣವನ್ನು ಹೋಲುತ್ತಿದ್ದ ಅಂಗಸಾಧನೆಯನ್ನು ಕಲಿತರು[10]. ಇದು ಅಂದು ರಾಜಕುಮಾರರಿಗೆ ನಿಯತವಾಗಿ ನೀಡುತ್ತಿದ್ದ ಶಿಕ್ಷಣದ ವೈಲಕ್ಷಣ್ಯವೆಂದು, ಕೃಷ್ಣದೇವರಾಯನನ್ನು ಕುರಿತು ಪಾಯಸನು (Paes) ಬರೆದ ವರದಿಗಳಿಂದ ಸ್ಪಷ್ಟವಾಗುತ್ತದೆ[11].

### ಪ್ರಾಥಮಿಕ ಶಿಕ್ಷಣ

ಪ್ರಾಥಮಿಕ ಶಿಕ್ಷಣಕ್ಕೆ ಬಾಲಬೋಧೆ ಎಂಬ ಹೆಸರಿತ್ತು[12]. ಕನಕದಾಸರ 'ಮೋಹನತರಂಗಿಣಿ' ಯಲ್ಲಿ, ಕಸೆ ಅಂಗಿ ತೊಟ್ಟು ಕೈಯಲ್ಲಿ ಬೆತ್ತ ಹಿಡಿದು, ಚೌಪದಿಗಳನ್ನು ರಚಿಸುವುದರಲ್ಲಿ ನಿಪುಣರಾದ, ಪ್ರಾಥಮಿಕ ಶಾಲೆಯ ಉಪಾಧ್ಯಾಯರ ಚಿತ್ರವೂ ಅಂದಿನ ಮಕ್ಕಳ ಪುಸ್ತಕಗಳು ವರ್ಣ ಚಿತ್ರಗಳಿಂದ ಕೂಡಿದ್ದವೆಂಬ ಸಂಗತಿಯೂ ದೊರೆಯುತ್ತದೆ[13]. ಮೊದಮೊದಲು ಮಕ್ಕಳು ಮಣ್ಣಿನ ಅಥವಾ ಮರಳಿನ ಮೇಲೆ ಅಕ್ಷರಾಭ್ಯಾಸ ಮಾಡುವುದನ್ನು ಕಲಿತರು ; ಜತೆಗೆ ಕಾಗುಣಿತಗಳನ್ನೂ ನೂರರ ತನಕ ಅಂಕೆಗಳನ್ನೂ, ಮಗ್ಗಿಯನ್ನೂ ಪೂರ್ಣಾಂಕಗಳಿಂದ ಭಿನ್ನಾಂಕಗಳನ್ನು ಗುಣಿಸುವುದನ್ನೂ ನಾಣ್ಯ, ಅಳತೆ–ತೂಕಗಳಿಗೆ ಸಂಬಂಧಿಸಿದ ಕೋಷ್ಟಕಗಳನ್ನೂ ಕಲಿತರು. ಇದೆಲ್ಲಕ್ಕೂ 'ಧೂಳಾಕ್ಷರ' ವೆಂದು ಹೆಸರು[14]. (ಕ್ರಿ.ಶ. 1623 ರಲ್ಲಿ ಇಂಡಿಯಾಕ್ಕೆ ಪ್ರವಾಸಿಯಾಗಿ ಬಂದಿದ್ದ ಪಿಯಟ್ರೋ ಡೆಲ್ಲಾ ವಾಲ್ಲೆ (Pietro Della Valle) ಎಂಬಾತನು, ಕರ್ಣಾಟಕದ ಒಂದು ಹಳ್ಳಿಯ ಶಾಲೆಯ ಶಿಕ್ಷಣದ ಈ ಹಂತವನ್ನು ವರ್ಣಿಸಿದ್ದಾನೆ. "ಶಾಲೆಯೊಂದರಲ್ಲಿ ಉಪಾಧ್ಯಾಯರಿಂದ ಕಲಿತ ಪಾಠವನ್ನು ಮರೆಯದೆ ನೆನಪಿನಲ್ಲಿಟ್ಟುಕೊಳ್ಳಲು, ವಿದ್ಯಾರ್ಥಿಗಳು ಬಾಯಿಪಾಠದಲ್ಲಿ ತೊಡಗಿದ್ದನ್ನು ಕಂಡನು. ಅದರಲ್ಲೂ ಒಬ್ಬ ವಿದ್ಯಾರ್ಥಿ ಸೊಗಸಾದ ಕಂಠದಲ್ಲಿ ಪಾಠದ ಒಂದು ಭಾಗವನ್ನು ಅತ್ಯಂತ ಪರಿಣಾಮಕಾರಿಯಾದ ರೀತಿಯಲ್ಲಿ ಪುನರಾವರ್ತನೆ ಮಾಡುತ್ತಿದ್ದನು. ನಿದರ್ಶನಕ್ಕೆ 'ಒಂದೊಂದ್ಲೆ ಒಂದು'[15] ಎಂಬಂತೆ. ಇಂಥ ಪುನರಾವರ್ತನೆಯನ್ನು ಕೇಳುತ್ತಲೆ ಉಳಿದ ಹುಡುಗರು, ಅದನ್ನೆ ಬಾಯಲ್ಲಿ ಹೇಳುತ್ತ ಎದುರಿಗೆ ಹರಹಿದ ಮರಳಿನ ಮೇಲೆ ಅದೇ ಪ್ರಕಾರ ಬರೆಯುತ್ತಿದ್ದರು. ಹೀಗೆ ಪಾಠ ಸಾಗುತ್ತಿತ್ತು". ಪಿಯಡ್ರೋಡೆಲ್ಲಾ ವಾಲ್ಲೆ ಈ ರೀತಿಯ ಸರಳವಾದ ಶಿಕ್ಷಣ ಕ್ರಮವನ್ನು ಬಹುವಾಗಿ ಮೆಚ್ಚಿಕೊಂಡಿದ್ದಾನೆ. "ವಿದ್ಯಾರ್ಥಿಗಳು ಕಾಗದವನ್ನಾಗಲಿ, ಮಸಿಯನ್ನಾಗಲಿ ವ್ಯರ್ಥಮಾಡದೆ ಓದುಬರೆಹವನ್ನು ಕಲಿಯುವ ಈ ವಿಧಾನ ನಿಜವಾಗಿಯೂ ಸುಲಭವಾದದ್ದು"[16] ಎಂದು ಹೇಳುತ್ತಾನೆ. ತರಗತಿಯಲ್ಲಿ ಬುದ್ಧಿವಂತನಾದ ವಿದ್ಯಾರ್ಥಿಯೊಬ್ಬ ಅಧ್ಯಾಪನದಲ್ಲಿ ಉಪಾಧ್ಯಾಯರಿಗೆ ನೆರವಾಗುವ ಈ 'ಮಾನಿಟರ್ ಪದ್ಧತಿ'ಯ ಮೊತ್ತಮೊದಲ ಉಲ್ಲೇಖವನ್ನು ನಾವು ಕಾಣುವುದು ಪಾಶ್ಚಾತ್ಯನಾದ ಪಿಯಡ್ರೋ ಡೆಲ್ಲಾ ವಾಲ್ಲೆಯ ವರದಿಯಲ್ಲಿ. ಈ ಒಂದು ಶಿಕ್ಷಣ ಪದ್ಧತಿ, ಪಾಶ್ಚಾತ್ಯ ಶಿಕ್ಷಣ ಶಾಸ್ತ್ರಕ್ಕೆ ಭಾರತೀಯರ ಕೊಡುಗೆಯಾಗಿದೆ[17].

ಧೂಳಿನ ಮೇಲೆ ಅಕ್ಷರ ತಿದ್ದುವ ಅಭ್ಯಾಸವಾದ ಅನಂತರ ವಿದ್ಯಾರ್ಥಿಗಳು ಕಾಗದದ ಮೇಲೆ ಬರೆಯುತ್ತಿದ್ದರು. ಅನಂತರ ಓದುವುದು, ಲೆಕ್ಕ ಮಾಡುವುದು, ಗಣಿತದಲ್ಲಿ ಸಂಕಲನ-ವ್ಯವಕಲನ-ಗುಣಾಕಾರ–ಭಾಗಕಾರ–ಸರಳ ಬಡ್ಡಿ ಮತ್ತು ತ್ರೈರಾಶಿಯನ್ನು ಕಲಿಯುತ್ತಿದ್ದರು[18].

ಇನ್ನೂ ಮುಂದುವರಿದಂತೆ ಅವರು ಅಭ್ಯಾಸ ಮಾಡಬೇಕಾದ ಗ್ರಂಥಗಳು : ಜೈಮಿನಿ ಭಾರತ, ವಿದುರನೀತಿ, ಅಮರಕೋಶ, ಪಂಚತಂತ್ರ, ಮತ್ತು ಸೋಮೇಶ್ವರ ಶತಕ. ಕೆಲವು ವಿದ್ಯಾರ್ಥಿಗಳು

ಸಂವತ್ಸರಗಳ, ನಕ್ಷತ್ರಗಳ, ದಿಕ್ಸೂಚಿಯ ವಿವರಗಳನ್ನೂ ದೇವರ ಮಹಿಮಾ ವಿಶೇಷಗಳನ್ನು ಸ್ತುತಿಸುವ ಹಲವು ಬಗೆಯ ಹಾಡುಗಳನ್ನೂ ಕಲಿಯುತ್ತಿದ್ದರು[19].

ಮಗುವಿಗೆ ಆರಂಭದಲ್ಲಿ ಓದು–ಬರೆಹ–ಲೆಕ್ಕವನ್ನಷ್ಟೆ ಕಲಿಸುತ್ತಿದ್ದರು ಎಂದಲ್ಲ. ಅದಕ್ಕೂ ಮೊದಲು ಮಗುವಿನ ಕಿವಿಗೆ ತಾಯಿ ಎರೆವ ಹಾಲಿನ ಜತೆಗೆ 'ಬಾಲ ಬೋಧೆ' ಯೂ ಸಾಗುತ್ತಿತ್ತು. ಮೊದಲನೆ ದೇವರಾಯನ ಮಂತ್ರಿಯಾದ ಲಕ್ಷ್ಮೀಧರನಿಗೆ ಅವನ ತಾಯಿ ದಿನವೂ ಹಾಲೆರೆಯುವಾಗ 'ಕೆರೆಯನ್ನು ಕಟ್ಟಿಸು, ಬಾವಿಯನ್ನು ತೋಡಿಸು, ದೇವಾಲಯಗಳನ್ನು ಕಟ್ಟಿಸು, ಸೆರೆಯಲ್ಲಿ ಸಿಕ್ಕಿದ ಅನಾಥರನ್ನು ಬಿಡಿಸು. ಮಿತ್ರರಿಗೆ ಆಶ್ರಯನಾಗು. ನಂಬಿದವರಿಗೆ ನೆಲೆಯಾಗು' ಎಂದು ಹೇಳುತ್ತಾ ಬೆಳೆಯಿಸಿದಳಂತೆ[20].

## ಪ್ರೌಢ ಶಿಕ್ಷಣ ಸಂಸ್ಥೆಗಳು

ಪ್ರಾಚೀನ ಹಾಗೂ ಮಧ್ಯಕಾಲೀನ ಕರ್ಣಾಟಕದಲ್ಲಿ ಅಗ್ರಹಾರಗಳು, ಮಠಗಳು, ದೇವಸ್ಥಾನಗಳು, ಬ್ರಹ್ಮಪುರಿಗಳು ಮತ್ತು ಘಟಿಕಾ ಸ್ಥಾನಗಳು ಪ್ರೌಢ ವಿದ್ಯಾಕೇಂದ್ರಗಳಾಗಿದ್ದುವೆಂಬ ಸಂಗತಿಯನ್ನು ಆಗಲೇ ಹಿಂದಿನ ಅಧ್ಯಾಯಗಳಲ್ಲಿ ವಿವರಿಸಲಾಗಿದೆ. ಇವುಗಳಲ್ಲಿ ಘಟಿಕಗಳು ಈ ಕಾಲದಲ್ಲಿದ್ದ ಬಗ್ಗೆ ಉಲ್ಲೇಖಗಳು ಅತಿ ವಿರಳವಾಗಿವೆ[21]. ಈ ಕಾಲದಲ್ಲಿ ಬ್ರಹ್ಮಪುರಿ ಮತ್ತು ದೇವಸ್ಥಾನಗಳು ಹಿಂದಿನಂತೆ ವಿದ್ಯಾ ಪ್ರಸಾರ ಕೇಂದ್ರಗಳಾಗಿ ಮುಂದುವರಿದುವೆಂದು ಹೇಳುವುದರ ಹೊರತು ಇನ್ನೇನನ್ನೂ ಹೇಳುವಂತಿಲ್ಲ. ಅಗ್ರಹಾರಗಳು : ವಿಜಯನಗರದ ಉಚ್ಛ್ರಾಯ ಕಾಲದಲ್ಲಿ ಅಗ್ರಹಾರಗಳು, ಮಠಗಳು ಎಂದಿನಂತೆ ತಮ್ಮ ಶೈಕ್ಷಣಿಕ ಕಾರ್ಯಕಲಾಪಗಳನ್ನು ಮುಂದುವರಿಸಿದವು. ಆದರೆ ವಿಜಯನಗರದ ಪತನಾನಂತರ, ಈ ವಿದ್ಯಾ ಕೇಂದ್ರಗಳ ಘನತೆ ಕುಗ್ಗುವಂತೆ ಮಾಡಿದ ಅನೇಕ ಘಟನೆಗಳು ಜರಗಿದುವು. ಕೆಲವು ಅಗ್ರಹಾರಗಳು ಹಾಳಾದವು. ಅವುಗಳನ್ನು ಜೀರ್ಣೋದ್ಧಾರ ಮಾಡಿದಾಗ ಅವು ಬ್ರಾಹ್ಮಣರಿಗೆ ಊಟ ಹಾಕುವ ಸತ್ರಗಳಾಗಿ ಮಾರ್ಪಟ್ಟವು[22] ಅಥವಾ ಹೊಸ ಅಗ್ರಹಾರಗಳು ಸ್ಥಾಪಿತವಾದಾಗ ಅವುಗಳ ನಿರ್ಮಿತಿಗೆ ಕಾರಣರಾದವರು, ಅವುಗಳ ಉದ್ದೇಶ ವಿದ್ಯಾಪ್ರಸಾರವೆಂಬ ಅಂಶವನ್ನು ಒತ್ತಿ ಹೇಳಲಿಲ್ಲ[23]. ಈ ಕಾಲದಲ್ಲಿ ಸ್ಥಾಪಿತವಾದ ಕೆಲವು ಅಗ್ರಹಾರಗಳಲ್ಲಿ ಕ್ರಿ. ಶ. 1748ರಲ್ಲಿ ಕಟ್ಟಲ್ಪಟ್ಟ ದಳವಾಯಿ ಅಥವಾ ರಾಮಚಂದ್ರಪುರ ಅಗ್ರಹಾರವೂ ಒಂದು[24]. ಇದು ಮಧ್ಯಕಾಲೀನ ಅಗ್ರಹಾರದ ಮಾದರಿಯಲ್ಲಿ–ಎಂದರೆ ಮೂಲತಃ ವಿದ್ಯಾಕೇಂದ್ರವಾಗಿರಬೇಕೆಂದು ಆಶಿಸಲಾಗಿತ್ತು. ಇದರ ನಿರ್ಮಿತಿಗೆ ಹೇರಳವಾಗಿಯೇ ಹಣ ಖರ್ಚಾಯಿತು. ದಳವಾಯಿ ದೇವರಾಯನು ಇಲ್ಲಿ ವಿಶಾಲವಾದ ಮನೆಗಳನ್ನು ಕಟ್ಟಿಸಿದನು ; ಸೊಗಸಾದ ಹಾಸಿಗೆಗಳಿಂದ ಮಲಗುವ ಮನೆಗಳನ್ನು ಸಜ್ಜುಗೊಳಿಸಿದನು. ಬೆಲೆ ಬಾಳುವ ದಿಂಬು, ಜಮಖಾನೆ, ದುಪ್ಪಟ್ಟಿಗಳನ್ನೂ ಪೂಜಾಗೃಹದ ಪರಿಕರಾದಿಗಳನ್ನೂ ಏರ್ಪಡಿಸಿದನು. ವೇದ ವೇದಾಂಗ ಶಾಸ್ತ್ರ ಪರಿಣತರಾದ ನೂರ ಇಪ್ಪತ್ತು ಬ್ರಾಹ್ಮಣರನ್ನು ಆಯ್ಕೆ ಮಾಡಿದನು. ದುರದೃಷ್ಟವಶಾತ್ ಈ ಸಂಸ್ಥೆ ಇಂಥ ಘನೋದ್ದೇಶದಿಂದ ಆರಂಭವಾದರೂ ಕ್ರಿ.ಶ. 1807ರ ಹೊತ್ತಿಗೆ—ಈ ಅಗ್ರಹಾರದ ಜಮೀನು ದಿವಾನ್ ಪೂರ್ಣಯ್ಯನವರಿಗೆ ಕೊಟ್ಟ ಎಳಂದೂರಿನ ಆಸ್ತಿಯಲ್ಲಿ ಸಮಾವೇಶಗೊಂಡಾಗ—ಅಂತ್ಯಗೊಂಡಿತು. **ಮಠಗಳು** : ಎಂದರೆ ಮಧ್ಯ ಯುಗದ ವಿದ್ಯಾಕೇಂದ್ರಗಳಿಗೆ ಬೇರೊಂದು ಹೆಸರು ಮಾತ್ರ. ಬಳ್ಳಿಗಾವೆಯ ಕೋಡಿಯ ಮಠ ಇಂಥ ವಿದ್ಯಾಕೇಂದ್ರಗಳಲ್ಲಿ ಒಂದು. ಈ ಕಾಲದಲ್ಲಿ ಅಗ್ರಹಾರಗಳಂತೆ ಸಂಪೂರ್ಣ ಮರೆವಿನಲ್ಲಿ ಮರೆಯಾಗದಿದ್ದರೂ ವಿದ್ಯಾಭ್ಯಾಸದ ಚಟುವಟಿಕೆಗಳಿಗೆ ನೆಲೆಯಾದ ಮಠಗಳು ಅಷ್ಟೇನೂ ಪ್ರಮುಖವೆನ್ನಿಸಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಈ ಕಾಲದ ಮಠಗಳ ಒಂದು ವೈಶಿಷ್ಟ್ಯವೆಂದರೆ, ಅವು ಒಂದು ಮತ ಧರ್ಮದ, ಆಚಾರ್ಯ ಧೋರಣೆಯ ಪೀಠಗಳಾದವು. ಇಂಥ ಒಬ್ಬ ಗುರುವಿನ ಸುತ್ತ ಮಠಗಳು ತಮ್ಮ ಬಹು ಬಗೆಯ

ಚಟುವಟಿಕೆಗಳನ್ನು ನಿರ್ವಹಿಸಿದವು. ಕೆಲವು ಮಠಗಳಲ್ಲಿ ಪುಸ್ತಕ ಭಂಡಾರವಿತ್ತು[26]. ಬಹುಮಟ್ಟಿಗೆ ಇವೆಲ್ಲವೂ ದಾರಿಗರಿಗೆ ಮತ್ತು ವಿದ್ಯಾರ್ಥಿಗಳಿಗೆ ಸತ್ರಗಳಾಗಿದ್ದುವು[27]. ಕೆಲವು ಮಠಗಳಲ್ಲಿ ಷಡ್ದರ್ಶನಗಳನ್ನು ಕಲಿಸಲಾಗುತ್ತಿತ್ತು[28]. ಬರುಬರುತ್ತಾ ಇಲ್ಲಿ ಮೂಲತಃ ವಿದ್ಯಾಕೇಂದ್ರಗಳೆಂಬುದಕ್ಕಿಂತ, ಮತಧರ್ಮದ ಪ್ರಭಾವಶಾಲೀ ಕೇಂದ್ರಗಳಾದ ಕಾರಣ, ರಾಜರುಗಳು ಆಯಾ ಪೀಠಗಳ ಉತ್ತರಾಧಿಕಾರಿಗಳನ್ನು ಗೊತ್ತುಮಾಡುವ ಹಕ್ಕು ತಮಗೆ ಉಂಟೆಂದು ಭಾವಿಸಿದರು. ಕೆಳದಿಯ ಅರಸರೊಬ್ಬರು, 'ಇಂಥ ಮಠಗಳ ಮುಖ್ಯಸ್ಥರಾಗತಕ್ಕವರು ರಾಜರೊಂದಿಗೆ ಏಕಾಭಿಪ್ರಾಯ ಉಳ್ಳವರಾಗಿರತಕ್ಕದ್ದು' ಎಂಬ ನಿಯಮವನ್ನು ಹಾಕಿದ್ದುಂಟು. ಇಕ್ಕೇರಿ ಸಂಸ್ಥಾನದಲ್ಲಿ ಬೇರೆಬೇರೆಯ ಮಠಗಳು—ವಶೀಕೃತ ಮಠ[29], ಮಹತ್ತು ಮಠ[30], ಮತ್ತು ವಿರಕ್ತ ಮಠ[31]—ಇತ್ಯಾದಿ ಇದ್ದವು. ಇದಕ್ಕೆ ಮುನ್ನ ಸಂಜೆಯ ಮಠವೊಂದಿತ್ತು .

## ಶಿಕ್ಷಣ ವ್ಯವಸ್ಥೆ

**ಅಧ್ಯಯನದ ವಿಷಯಗಳು :**—ರಾಜರ ಸಭೆಯು ಕವಿಗಳು, ಗಾಯಕರು, ಪೌರಾಣಿಕರು, ಹಾಸ್ಯಗಾರರು, ಚರಿತ್ರಕಾರರು, ಜ್ಯೋತಿಷಿಗಳು, ಚತುರ ವಾಗ್ಮಿಗಳು ಮತ್ತು ಯುದ್ಧಕಲಾನಿಪುಣರು[33]—ಇವರುಗಳಿಂದ ಮಾತ್ರ ಶೋಭಿಸುತ್ತದೆ ಎಂದು ಸೋಮೇಶ್ವರ ಶತಕವು ಹೇಳುತ್ತದೆ. ಈ ಎಲ್ಲಾ ಕಲಿಕೆಗಳಿಗೆ ಅಂದಿನ ಕಾಲದಲ್ಲಿ ಅವಕಾಶವಿತ್ತೆಂದು ನಾವು ಭಾವಿಸಬಹುದು. ಸೋಮೇಶ್ವರ ಶತಕವು ಒಂದೆಡೆ ಮಂತ್ರಿಯಾಗುವವನ ಲಕ್ಷಣವನ್ನು ಹೇಳುತ್ತಾ, ಮಂತ್ರಿಯಾದವನು ಬಹು ಭಾಷಾ ಲಿಪಿ ವಿಶಾರದನಾಗಿರಬೇಕು ಎನ್ನುತ್ತದೆ[34]. ಇಂಥ ಲಕ್ಷಣಗಳನ್ನುಳ್ಳ ಮಂತ್ರಿಯೂ ಇಲ್ಲದಿರಲಿಲ್ಲ. ಕೃಷ್ಣದೇವರಾಯನ ಮಂತ್ರಿಯಾದ ಕೊಂಡಮರಸನು ಬಹುಭಾಷಾಲಿಪಿಗಳನ್ನು ಓದುವುದರಲ್ಲಿ ನಿಷ್ಣಾತನಾಗಿದ್ದನು[35]. ಕ್ರಿ. ಶ. 1420ರ ಒಂದು ಕೃತಿಯಲ್ಲಿ ಅಧ್ಯಯನದ ವಿಷಯಗಳೆಂದು—ವೇದ, ಮೀಮಾಂಸಾ, ನ್ಯಾಯ, ವ್ಯಾಕರಣ, ಪುರಾಣ, ಧರ್ಮಶಾಸ್ತ್ರ, ಸಂಗೀತ, ವೈದ್ಯ ಮತ್ತು ಯುದ್ಧ ವಿದ್ಯೆಗಳನ್ನು ಹೇಳಿದೆ[36].

## ಅಧ್ಯಯನ ವಿಧಾನ

ಸೋಮೇಶ್ವರ ಶತಕದ ಪ್ರಕಾರ ಅಧ್ಯಯನದ ವಿಧಾನಗಳು ಹೀಗಿವೆ : (1) ಕೆಲವನ್ನು ಬಲ್ಲವರಿಂದ ಕಲಿಯಬೇಕು. (2) ಕೆಲವನ್ನು ಶಾಸ್ತ್ರಗಳಿಂದ ಕಲಿಯಬೇಕು. (3) ಕೆಲವನ್ನು ಇತರರ ಕೃತಿಗಳಿಂದ ಅರಿಯಬೇಕು. (4) ಕೆಲವನ್ನು ತನ್ನ ಬುದ್ಧಿಶಕ್ತಿಯಿಂದ ತಿಳಿಯಬೇಕು. (5) ಕಡೆಯದಾಗಿ ಕೆಲವನ್ನು ಸಜ್ಜನಸಂಗದಿಂದ ಅರಿಯಬೇಕು. ಹೀಗಾದಾಗ ಮನುಷ್ಯನು, ಹಲವು ಹಳ್ಳ ಕೂಡಿ ಸಮುದ್ರವಾಗುವ ಹಾಗೆ, ಸರ್ವಜ್ಞನಾಗುತ್ತಾನೆ[37].

ಇಂದಿನಂತೆ ಹಿಂದಿನ ಕಾಲದಲ್ಲಿ ಅಧ್ಯಯನದ ತುದಿಗೆ ಪರೀಕ್ಷೆಗಳಿರಲಿಲ್ಲ. ಆದರೆ ವಿದ್ವಾಂಸನಾದವನಿಗೆ ಸರ್ಕಾರದ ಸಹಾಯ ಬೇಕಾಗಿದ್ದರೆ, ಒಮ್ಮೊಮ್ಮೆ ಅವನ ವಿದ್ವತ್ತು ಸಾರ್ವಜನಿಕವಾಗಿ ಪರೀಕ್ಷಿತವಾಗುತ್ತಿತ್ತು. ಕ್ರಿ.ಶ. 1447 ರಲ್ಲಿ 'ಭಾಷ್ಯಭೂಷಣ'ವೆಂಬ ಗ್ರಂಥದ ಲೇಖಕನಾದ ಆದಿತ್ಯಾರ್ಯನು ಇಂಥ ಒಂದು ವಿದ್ವತ್ ಸಭೆಯ ಮುಂದೆ, ಅಧ್ಯಯನದ ಎಲ್ಲಾ ವಿಷಯಗಳ ಬಗೆಗೂ ಪರೀಕ್ಷಿತನಾಗಿ ವಿದ್ವಾಂಸರ ಪ್ರೀತಿಗೆ ಪಾತ್ರನಾದನು. ಆಗ ರಾಜನು ಅವನಿಗೆ ನಲ್ಲಂಗಿ ಎಂಬ ಗ್ರಾಮವನ್ನು ದತ್ತಿಯಾಗಿ ಕೊಟ್ಟನು[38]. ಇದಕ್ಕೂ ಪೂರ್ವದಲ್ಲಿ ಅಗ್ರಹಾರದ ಸದಸ್ಯರನ್ನು ಆಯ್ಕೆ ಮಾಡುವ ಸಂದರ್ಭದಲ್ಲಿ ಕದಂಬ ರಾಜನೊಬ್ಬ

ತಾನೇ ಸ್ವತಃ ನಿಂತು, ವಿದ್ವಾಂಸರಾದ ಅಭ್ಯರ್ಥಿಗಳನ್ನು ಪರೀಕ್ಷಿಸಿದನು[39]. ಕೃಷ್ಣದೇವರಾಯನು ತನ್ನಿಂದ ಬಹುಮಾನಾಪೇಕ್ಷಿಗಳಾದ ಅಭ್ಯರ್ಥಿಗಳನ್ನು ಪರೀಕ್ಷಿಸುತ್ತಿದ್ದನು. ಈ ಪರೀಕ್ಷೆಗಳು ಬುದ್ಧಿಕೌಶಲ ವನ್ನು ಪ್ರದರ್ಶಿಸುವ ಸಮಾರಂಭಗಳಾಗಿದ್ದು, ಕೃಷ್ಣದೇವರಾಯನೇ ಮನಃಪೂರ್ವಕವಾಗಿ ಇವುಗಳಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದನು. ಈ ಸಮಾರಂಭಗಳಲ್ಲಿ ಕೃಷ್ಣದೇವರಾಯನಿಗೆ ಅಚ್ಚು ಮೆಚ್ಚಾಗಿದ್ದ ಒಂದು ವಿಧಾನವೆಂದರೆ, ಅಪೂರ್ಣವಾದ ಪದ್ಯವೊಂದನ್ನು ಕೊಟ್ಟು ಅದನ್ನು ಒಂದು ನಿರ್ದಿಷ್ಟವಾದ ರೀತಿಯಲ್ಲಿ ಪೂರ್ಣಗೊಳಿಸುವಂತೆ ಕೇಳುವುದು[40].

### ಗುರು-ಶಿಷ್ಯ ಸಂಬಂಧ

ವಿದ್ಯೆಗಿಂತ ಬೇರೆಯ ಬಂಧುವಿಲ್ಲವೆಂದೂ ಗುರುವಿಗಿಂತ ಪೂಜ್ಯರು ಇಲ್ಲವೆಂದೂ ಸೋಮೇಶ್ವರನ ಅಭಿಪ್ರಾಯ. ವರ್ಣಮಾತ್ರವನ್ನು ಕಲಿಸಿದಾತನೆ ಗುರು—ಎಂದು ಅವನ ಭಾವನೆ[41]. ವಿದ್ಯೆಯನ್ನು ಕಲಿಸುವುದು ವಿದ್ವಾಂಸರ ಕರ್ತವ್ಯವೆಂದೂ ತಾವು ಮಾತ್ರ ಕಲಿತು ಇತರರಿಗೆ ಕಲಿಸದವರು ಅಸ್ಪೃಶ್ಯ ರೆಂದೂ ಪುರಂದರದಾಸರು ಹೇಳುತ್ತಾರೆ[42]. ಉತ್ತಮವಾದ ಗುರುವಿನ ಆವಶ್ಯಕತೆಯನ್ನು ಸರ್ವಜ್ಞನು ಎತ್ತಿಹೇಳಿ, ಅದಕ್ಕಾಗಿ ಅಂಥ ಗುರುವಿನ ಸೇವೆ ಮಾಡಬೇಕು ಎನ್ನುತ್ತಾನೆ, ''ಗುರುವಿನ ಬಳಿ, ಅವನ ಎತ್ತಾಗಿ, ತೊತ್ತಾಗಿ, ಹಿತ್ತಲಿನ ಗಿಡವಾಗಿ, ಅವನ ಕಾಲಿನ ಒತ್ತಾಗಿ (ಚಪ್ಪಲಿಯಾಗಿ)" ಇರಬೇಕು[43], ಪುರಂದರ ದಾಸರು ಹಾಡಿದರು—'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ' ಎಂದು[44]. ಆದರೆ ಸರ್ವಜ್ಞನ ಪ್ರಕಾರ, ಪೂಜ್ಯತೆಯನ್ನು ಪಡೆಯಬೇಕಾದರೆ ಅಂಥವನು ಮೊದಲು ಉತ್ತಮವಾದ ಗುರುವಾಗಬೇಕು; ತನ್ನ ನೆಲೆಯನ್ನರಿಯದ ಗುರು, ಹೊಲಬನ್ನರಿಯದ ಶಿಷ್ಯ ಮತ್ತು ಗೊತ್ತು ಗುರಿಯಿಲ್ಲದ ಶಿಕ್ಷಣ, ಇದು ಕುರುಡನಾದವನು ನೀರಿಗಿಳಿದಂತಾಗುತ್ತದೆ–ಎನ್ನುತ್ತಾನೆ[45].

### ಜನಸಾಮಾನ್ಯರ ಶಿಕ್ಷಣ

ಇದುವರೆಗೂ ವಿವರಿಸಲಾದ ಶಿಕ್ಷಣ ಪದ್ಧತಿ ಎಲ್ಲರಿಗೂ ಪಡೆಯಲು ಸಾಧ್ಯವಾಗುತ್ತಿರಲಿಲ್ಲ. ಜನಸಾಮಾನ್ಯಕ್ಕೆ ಬೇಕಾದದ್ದು ಒಂದು ರೀತಿಯಲ್ಲಿ ಜನಪ್ರಿಯವಾದ ಶಿಕ್ಷಣ. ಇದನ್ನು ಎಲ್ಲರಿಗೂ ಎಟಕುವಂತೆ ಮಾಡುವುದರಲ್ಲಿ ಈ ಕಾಲ ಸುಪ್ರಸಿದ್ಧವಾಯಿತು. ಹನ್ನೆರಡನೆ ಶತಮಾನದ ಪೂರ್ವಾರ್ಧ ದಲ್ಲಿ ವೀರಶೈವ ಧಾರ್ಮಿಕ ಚಳವಳಿ ಆರಂಭವಾಗಿ, ಸಾಮಾನ್ಯ ಜನದ ನೈತಿಕ ಸುಧಾರಣೆಯನ್ನು ಅಂದಿನ ಜನತೆಯ ಆಡುಮಾತಿನ ಅಭಿವ್ಯಕ್ತಿಯ ಮೂಲಕ ತಂದಿತು.

ಹದಿಮೂರನೆ ಶತಮಾನದ ವೇಳೆಗೆ ಈ ಚಳವಳಿ ತಗ್ಗಿದಂತೆ ತೋರುತ್ತದೆ. ಆದರೆ ಮತ್ತೆ ಹದಿನಾಲ್ಕನೆ ಶತಮಾನದಲ್ಲಿ ಇದು ಪುನರುಜ್ಜೀವನಗೊಂಡಿತು. ವಿಜಯನಗರ ಮತ್ತು ಎಡೆಯೂರು, ಈ ಪುನರುಜ್ಜೀವನದ ಕೇಂದ್ರಗಳಾದವು. ಹಿಂದಿನಂತೆ ಮತ್ತೆ ಈ ಕಾಲದಲ್ಲಿ ವಚನರಚನೆ ಮುಂದುವರಿ ಯಿತು. ನಿಜಗುಣ ಶಿವಯೋಗಿ, ಸರ್ವಜ್ಞ, ಮತ್ತಿತರರು ಸಾಮಾನ್ಯ ಜನತೆಯ ಶಿಕ್ಷಣಕ್ಕೆ ಗಮನಾರ್ಹ ವಾದ ಸಹಾಯ ಮಾಡಿದರು.

ಜನಸಾಮಾನ್ಯರ ಭಾಷೆಯಲ್ಲಿ ಬರೆಯಲು ಹಿಂಜರಿಯುತ್ತಿದ್ದ ಬ್ರಾಹ್ಮಣ ಲೇಖಕರು ಈ ವೇಳೆಗೆ "ಮೇಲೆನ್ನದೆ ಕೀಳೆನ್ನದೆ ಸರ್ವರ ಉದ್ಧಾರಕ್ಕಾಗಿ ತಮ್ಮ ಪವಿತ್ರ ಗ್ರಂಥಗಳ ಜ್ಞಾನ ಭಾಂಡಾರವನ್ನು ತೆರೆದಿಡಲು ಧಾವಿಸಿದರು[46]." ಇದೇ ಹರಿದಾಸ ಪಂಥವೆನ್ನಿಸಿಕೊಂಡಿತು. ಇದರ ಪ್ರಮುಖವಾದ

ವ್ಯಾಖ್ಯಾನಕಾರರು ಪುರಂದರ ದಾಸರು. ಇವರಲ್ಲದೆ ಇನ್ನೂ ನೂರಾರು ಮಂದಿ ಈ ಮುಕ್ತಿಯ ಸಂದೇಶ ವನ್ನು ಹೊತ್ತು ವಿವೇಕಮೂಲವಾದ ಮತ್ತು ಧಾರ್ಮಿಕವಾದ ಅನುಭವಗಳ ಹಾಡುಗಳನ್ನು ಹಾಡುತ್ತಾ ದೇಶಾದ್ಯಂತ ಸಂಚಾರ ಮಾಡಿದರು[47]. ಭಾಷೆಗಿಂತ ಅರ್ಥದ ಕಡೆಗೆ ಹೆಚ್ಚು ಮಹತ್ವವನ್ನು ಕೊಟ್ಟ ಈ ಒಂದು ಪಂಥವು ಹಳೆಯ ಪದ್ಧತಿಗೆ ಜೋತುಬಿದ್ದ ಸಾಂಪ್ರದಾಯಿಕ ವಿಭಾಗದ ಜೊತೆ ಜೊತೆಗೇ ಉಳಿದು ಬಂದಿತು[48].

ವೀರಶೈವರ ವಚನ ಮತ್ತು ಹರಿದಾಸ ಪದಗಳು—ಇವುಗಳಲ್ಲದೆ ಸಂಗೀತ, ಸಂವಾದ ಹಾಗೂ ಹಾಸ್ಯವನ್ನೊಳಗೊಂಡ ಕೀರ್ತನೆಗಳು ಬಹುಶಃ ವಿಜಯನಗರದ ಕಾಲಕ್ಕೆ ಸಾರ್ವಜನಿಕ ಶಿಕ್ಷಣದ ಅತ್ಯಂತ ಶಕ್ತವಾದ ಸಾಧನಗಳಾದುವು. ಹದಿನೆಂಟನೆಯ ಶತಮಾನವು, ಯಕ್ಷಗಾನವೆಂಬ ಜಾನಪದ ನಾಟಕ ಪ್ರಕಾರದ ಉದಯವನ್ನು ಕಂಡಿತು[49]. ಅವುಗಳಿಗೆ ಸಂಗೀತ-ಕುಣಿತ ಮತ್ತು ಸಂವಾದಗಳನ್ನು ಒಳ ಗೊಂಡ ಒಂದು ಬಿಗಿಯಾದ ಬಂಧವಿದೆ. ಇದಲ್ಲದೆ ಅಂದು ಮನೆಯಿಂದ ಮನೆಗೆ ಹೋಗಿ, ದೈನಂದಿನ ಜೀವನದ ದೃಶ್ಯಗಳನ್ನು ಅತ್ಯಂತ ಕುಶಲವಾಗಿ ನಾಟ್ಯರೂಪದಲ್ಲಿ ಅಭಿನಯಿಸಿ ತೋರಿಸುತ್ತಿದ್ದ ಜಾತಿ ಗಾರ ಅಥವಾ ವೇಷಗಾರರು ಇದ್ದರು[50].

ವಿಜಯನಗರದ ಅರಮನೆಯಲ್ಲಿ ಸುಶಿಕ್ಷಿತರಾದ ಸ್ತ್ರೀಯರು ಅನೇಕ ಬಗೆಯ ಕೆಲಸಗಳನ್ನು ನಿರ್ವಹಿಸು ತ್ತಿದ್ದರು. ಪವಿತ್ರ ಗ್ರಂಥಗಳ ಪಠನ, ಅರಮನೆಯ ಸ್ತ್ರೀಯರಿಗೆ ಶಿಕ್ಷಣ ನೀಡುವ ಒಂದು ವಿಧಾನ ವಾಗಿತ್ತಲ್ಲದೆ, ಆ ಕಾಲದ ಕೆಲವು ಸ್ತ್ರೀಯರಿಗೆ ಗೌರವಯುತವಾದ ವೃತ್ತಿಯೂ ಆಗಿತ್ತು. ಇಷ್ಟಲ್ಲದೆ. ಅರಮನೆಯ ಒಳಗಿನ ಭಿತ್ತಿಗಳನ್ನು ಅಲಂಕರಿಸಿದ ವರ್ಣಚಿತ್ರಗಳು ಕೇವಲ ಅಲಂಕಾರಕ್ಕೆ ಮಾತ್ರವಲ್ಲದೆ, ಅರಮನೆಯ ನಿವಾಸಿಗಳಿಗೆ ಶಿಕ್ಷಣ ನೀಡುವ ಸಾಧನಗಳೂ ಆಗಿದ್ದುವು. ಪಾಯಸ್ (Paes) ಎಂಬಾತನು, ಇಂಥದೊಂದು ಭವನವನ್ನು ಕಂಡು ಹೀಗೆ ಬರೆದಿದ್ದಾನೆ: 'ಇಲ್ಲಿನ ವರ್ಣಚಿತ್ರಗಳಲ್ಲಿ ಭಾರತೀಯರಿಂದ ಹಿಡಿದು ಪೋರ್ಚುಗೀಸರ ತನಕ, ಎಲ್ಲಾ ಜನಗಳ ನಡೆವಳಿಕೆಗಳನ್ನು ಕಾಣಬಹುದಾಗಿದೆ. ರಾಜನ ಅಂತಃ ಪುರದ ಸ್ತ್ರೀಯರು, ಕುರುಡ ಭಿಕ್ಷುಕರಿಂದ ಹಿಡಿದು ಪ್ರತಿಯೊಬ್ಬನೂ ತನ್ನ ತನ್ನ ದೇಶದಲ್ಲಿ ಯಾವ ರೀತಿಯಲ್ಲಿ ನಡೆದುಕೊಳ್ಳುತ್ತಾನೆ ಎಂಬುದನ್ನು ತಿಳಿಯಲಿ ಎಂಬ ಉದ್ದೇಶದಿಂದ ಇವು ಚಿತ್ರಿತವಾಗಿವೆ'[51].

ಒಳ್ಳೆಯ ನರ್ತನಕ್ಕೆ ಅಗತ್ಯವಾದದ್ದು ಸುಕುಮಾರವಾದ ಶರೀರ. ಇದಕ್ಕಾಗಿ ಸ್ತ್ರೀಯರು ಅನೇಕ ರೀತಿಯ ವ್ಯಾಯಾಮವನ್ನು ಮಾಡುತ್ತಿದ್ದರು. ವಿಜಯನಗರದಲ್ಲಿ ಅರಮನೆಗೆ ಸಂಬಂಧಿಸಿದಂತೆ ಇಂಥ ಒಂದು ವ್ಯಾಯಾಮ ಶಾಲೆ ಇತ್ತು. 'ಈ ಗೃಹದ ಒಂದು ತುದಿಯ ಎಡ ಬದಿಗೆ ಚಿತ್ರಾಲಂಕಾರಗಳಿಂದ ಕೂಡಿದ ಒಂದು ಏಕಾಂತ ಸ್ಥಳವಿತ್ತು. ಅಲ್ಲಿ ಸ್ತ್ರೀಯರು ಕೈ ಕಾಲುಗಳನ್ನು ಚಾಚಿ ತಮ್ಮ ಶರೀರವನ್ನು ಸಡಿಲಗೊಳಿಸಲೋಸುಗ ಜೋಲಾಡುವ ಅಂಗಸಾಧನೆಗಳಲ್ಲಿ ತೊಡಗುತ್ತಿದ್ದರು. ನರ್ತನವು ಸೊಗಸಾಗಬೇಕಾದರೆ, ನರ್ತಕಿಯ ಶರೀರವು ಹೇಗೆ ಬಾಗಿ ಬಳುಕಬೇಕೆನ್ನುವ ವಿಚಾರದಲ್ಲಿ ಶಿಕ್ಷಣ ಕೊಡುತ್ತಿದ್ದರು"[52]. ವಿಜಯನಗರದ ಹೊರಗೂ ಇಂಥ ನರ್ತನ ಶಾಲೆಗಳಿದ್ದವು.[53].

**ಮುಸ್ಲಿಮರ ಶಿಕ್ಷಣ**

ಬಹಮನಿ ಅರಸರು ತಮ್ಮ ಪ್ರಜೆಗಳ ವಿದ್ಯಾಭ್ಯಾಸಕ್ಕೆ ಉತ್ತಮವಾದ ಏರ್ಪಾಡುಗಳನ್ನು ಮಾಡಿದರು. ಆ ಬಗ್ಗೆ ಅವರು ಆಳಿದ ಪ್ರದೇಶಗಳಲ್ಲಿ ಇಂದಿಗೂ ಸಾಕ್ಷ್ಯಗಳನ್ನು ಕಾಣಬಹುದು. ಬಹು ಮಟ್ಟಿಗೆ ಮಸೀದಿಗಳಿಗೆ ಲಗತ್ತಾದ ಮುಕ್ತಾಬ್ ಮತ್ತು ಮದರಸಾಗಳು ಶಿಕ್ಷಣದ ಮಾಧ್ಯಮ ವಾಗಿದ್ದುವು[54]. ಬಹಮನಿ ರಾಜ್ಯದ ಹೊರವಲಯವಾದ ಪಶ್ಚಿಮ ತೀರಗಳಲ್ಲಿ ಕೂಡ ಇದೇ ವ್ಯವಸ್ಥೆ

ನೆಲೆಗೊಂಡಿತ್ತು. ಕ್ರಿ.ಶ. 1343 ರಂದು ಈ ಭಾಗದಲ್ಲಿ ಪ್ರವಾಸ ಮಾಡಿದ ಇಬನ್ ಬತೂತನು (Ibn Batuta) ಹೀಲಿ ಎಂಬ ಊರಿನ ಮಸೀದಿಯಲ್ಲಿ, ಮಸೀದಿಯ ನಿಧಿಯಿಂದ ಪೋಷಿತವಾದ ವಿದ್ಯಾರ್ಥಿ ವೇತನಗಳನ್ನು ಪಡೆದು ಅನೇಕ ಶಾಸ್ತ್ರಗಳನ್ನು ಅಭ್ಯಸಿಸುತ್ತಿದ್ದ ಅನೇಕ ವಿದ್ಯಾರ್ಥಿಗಳನ್ನು ಕಂಡನು. ಇದೇ ಪ್ರವಾಸಿಯು ಹಿನಾವರ್ (ಹೊನ್ನಾವರ) ದಲ್ಲಿ ಹುಡುಗಿಯರಿಗಾಗಿ ನಡೆಸಲಾದ ಇಪ್ಪತ್ತೊಂದು ಶಾಲೆಗಳನ್ನು, ಬೇರೆಲ್ಲಿಯೂ ಕಾಣದಿದ್ದ ಒಂದು ಮಾದರಿಯಲ್ಲಿದ್ದುದನ್ನು ಕಂಡನು. ಖುರಾನನ್ನು ಬಾಯಿಪಾಠ ಮಾಡುತ್ತಿದ್ದ ಹೊನ್ನಾವರದ ಮುಸ್ಲಿಮ್ ಮಹಿಳೆಯರನ್ನು ಅವನು ವಿಶೇಷವಾಗಿ ಹೊಗಳಿದನು[55].

ಮತ್ತೆ ಬಹಮನಿ ರಾಜ್ಯಗಳ ವಿಷಯಕ್ಕೆ ಬರೋಣ. ವಿದ್ಯಾಪ್ರಸಾರಕ್ಕೆ ತೃಪ್ತಿಕರವಾದ ಏರ್ಪಾಡು ಗಳನ್ನು ಮಾಡಿದ ರಾಜರುಗಳಲ್ಲಿ ಎರಡನೆಯ ಮಹಮ್ಮದನು ಮೊದಲಿಗ. ಈತ ಬಹಮನಿ ರಾಜ ಸಂತತಿಯಲ್ಲಿ ಐದನೆಯವನು. ತನ್ನ ತಂದೆಯಾದ ಮೊದಲನೆ ಅಲ್ಲಾ ಉದ್ದೀನನಿಂದ ಉತ್ತಮವಾದ ಶಿಕ್ಷಣವನ್ನು ಪಡೆದಿದ್ದನು. ಅವನು ಕ್ರಿ.ಶ. 1378 ರಲ್ಲಿ ಅನಾಥರಿಗಾಗಿ ಮದರಸಾವೊಂದನ್ನು ಸ್ಥಾಪಿಸಿದನು ; ಅಲ್ಲಿ ಆ ಮಕ್ಕಳಿಗೆ ಅಶನ–ವಸತಿಗೆ ಹಾಗೂ ಉಚಿತ ಶಿಕ್ಷಣಕ್ಕೆ ಅವಕಾಶವಿತ್ತು. ಆ ಸಂಸ್ಥೆಯ ಅಧ್ಯಾಪಕರು ಸುಶಿಕ್ಷಿತರಾಗಿದ್ದರು. ಗುಲ್‌ಬರ್ಗಾ, ಬೀದರ್ ಮತ್ತಿತರ ಕಡೆಗಳಲ್ಲಿ ಶಾಲೆಗಳು ಆತನಿಂದ ಸ್ಥಾಪಿತವಾದವು. ಹಿಂದೆ ಹೇಳಿದ ಅನಾಥಾಲಯದಲ್ಲಿ ಹೇಗೋ ಹಾಗೆ ಈ ಶಾಲೆಗಳಲ್ಲಿ ಕೂಡ ಶಿಕ್ಷಣದ ಮತ್ತು ಉಚಿತ ವಸತಿಯ ಏರ್ಪಾಡು ಇತ್ತು[56]. ಎರಡನೆಯ ಮಹಮ್ಮದನು ಉತ್ತಮ ಯೋಧನಾಗಿ ಯುದ್ಧಶಿಕ್ಷಣದಲ್ಲಿ ಆಸಕ್ತಿವಹಿಸಿದ್ದನು. ಅದಕ್ಕಾಗಿ ಅವನೇ ಸೈನಿಕ ಶಿಕ್ಷಣ ಶಾಲೆಗಳನ್ನು ಸ್ಥಾಪಿಸಿದನು. ಅಲ್ಲಿ ಸದ್ವಂಶಕ್ಕೆ ಸೇರಿದ ಮಕ್ಕಳು ಸೈನಿಕ ಶಿಕ್ಷಣ ಪಡೆಯುತ್ತಿದ್ದರು[57].

ಆದರೆ ಬಹಮನಿ ಅರಸರ ಕಾಲದಲ್ಲಿ ವಿದ್ಯಾಭ್ಯಾಸಕ್ಕೆ ಅತ್ಯುತ್ತಮವಾದ ಆಶ್ರಯದಾತನಾಗಿದ್ದವನು ಮಹಮ್ಮದ್ ಗವಾನ್. ಈತನು ಬಹಮನಿಯ ಇತ್ತೀಚಿನ ಅರಸರಲ್ಲಿ ಮಂತ್ರಿಯಾಗಿದ್ದುದಲ್ಲದೆ, ಕ್ರಿ.ಶ. 1458 ರಿಂದ 1481ರ ವರೆಗೆ ಬಹಮನಿ ರಾಜವಂಶದ ಸೂತ್ರಧಾರಿಯಾಗಿದ್ದನು. ಅವನ ನೆನಪಿಗೆ ಸಾಕ್ಷಿಯಾಗಿ ಇಂದಿಗೂ ಬೀದರಿನಲ್ಲಿ ಉಳಿದಿರುವುದು ಅವನು ಕ್ರಿ.ಶ. 1472ರಲ್ಲಿ ತನ್ನ ಸ್ವಂತ ಹಣದಿಂದ ಕಟ್ಟಿಸಿದ ಕಾಲೇಜು. ಈ ಮಹಾ ವಿದ್ಯಾಸಂಸ್ಥೆ ಖುರಾಸಾನ್ ಮತ್ತಿತರ ಇಸ್ಲಾಮ್ ದೇಶ ಗಳಲ್ಲಿದ್ದ ಇಂಥ ವೈಭವಾನ್ವಿತ ಸಂಸ್ಥೆಗಳ ಮಾದರಿಯಲ್ಲಿ ಯೋಜಿತವಾಗಿದೆ. ಅಲ್ಲಿ ಅವನು ದಕ್ಷರಾದ ತತ್ವಶಾಸ್ತ್ರಜ್ಞರನ್ನು ಮಾತ್ರವಲ್ಲದೆ ವಿಜ್ಞಾನಿಗಳನ್ನೂ ನೇಮಿಸಿದ್ದನು. ಅಷ್ಟೇ ಅಲ್ಲದೆ, ತಾನೇ ಸ್ವತಃ ಪ್ರಾಧ್ಯಾಪಕತನವನ್ನೂ ವಹಿಸಿದನು. ಮೂರು ಸಾವಿರ ಹಸ್ತಪ್ರತಿಗಳನ್ನು ಒಳಗೊಂಡ ಪುಸ್ತಕ ಭಂಡಾರ ವನ್ನು ಕೊಟ್ಟನು. ಅವನ ಸ್ವಂತ ಪುಸ್ತಕ ಭಂಡಾರದಲ್ಲಿ ಒಂದು ಸಾವಿರ ಹಸ್ತಲಿಖಿತ ಪ್ರತಿಗಳಿದ್ದುವು[58].

ಮಹಮ್ಮದ್ ಗವಾನ್ ಸ್ಥಾಪಿಸಿದ ಪ್ರೌಢ ವಿದ್ಯಾಸಂಸ್ಥೆ (ಕಾಲೇಜು) ಯಲ್ಲಿ ಎಲ್ಲಾ ಕಾಲಕ್ಕೂ ವಾಸಯೋಗ್ಯವಾದ ಕೊಠಡಿಗಳಿದ್ದುವು. ಈ ಮೂರಂತಸ್ತಿನ ಕಟ್ಟಡದಲ್ಲಿ ಇಂಥ ಮೂವತ್ತಾರು ಕೋಣೆ (Suites) ಗಳಿದ್ದು, ಒಂದೊಂದು ಕೊಠಡಿಗೂ ಮೂರು ಮಂದಿ ವಿದ್ಯಾರ್ಥಿಗಳಂತೆ ಒಟ್ಟು ನೂರಎಂಟು ವಿದ್ಯಾರ್ಥಿಗಳ ವಾಸಕ್ಕೆ ಅನುಕೂಲವಾಗಿತ್ತು. ಒಂದೊಂದು ಕೊಠಡಿಯಲ್ಲಿ, ಇಬ್ಬರು ಇರುವಂತಹ, ಹನ್ನೆರಡು ಜನ ಪ್ರಾಧ್ಯಾಪಕರ ವಾಸಕ್ಕೂ ಬೇರೆ ಬೇರೆಯ ಆರು ಕೊಠಡಿಗಳಿದ್ದುವು. ವಿದ್ಯಾರ್ಥಿಗಳಿಗೆ ಉಚಿತವಾದ ಅಶನ–ವಸತಿಯ ಏರ್ಪಾಡಿತ್ತು[59]. ಇಂದಿಗೂ ಬೀದರಿನಲ್ಲಿ ಮಹಮ್ಮದ್ ಗವಾನನಿಂದ ನಿರ್ಮಿತವಾದ ಈ ಮಹಾವಿದ್ಯಾಲಯವು, ಬೀದರಿನ ಗತವೈಭವವನ್ನು ನೆನಪಿಗೆ ತರುವ ಒಂದು ಉಜ್ವಲವಾದ ವಜ್ರದಂತಿದೆ. ''ಮಹಾಮಂತ್ರಿಯಾದ ಮಹಮ್ಮದ್‌ಗವಾನನಿಂದ ಪೋಷಿತವಾದ ಜ್ಞಾನದ ಕಾರಂಜಿಯಂತೆ, ಮುಂಭಾಗದಲ್ಲಿ ಬಣ್ಣ ಬಣ್ಣದ ಹೆಂಚುಗಳಿಂದ ಆಕರ್ಷಕವಾದ ಈ ಕಟ್ಟಡವು

ಭಾರತೀಯ ಹಾಗೂ ವಿದೇಶೀಯ ವಿದ್ವಾಂಸರನ್ನೊಳಗೊಂಡು, ಬೀದರನ್ನು ಅಂದಿನ ಜ್ಞಾನತೃಷಿತರ ಸಂಗಮಸ್ಥಾನವನ್ನಾಗಿ ಮಾಡಿದ್ದಿರಬೇಕು "[60].

ಬಹಮನಿ ಅರಸರ ಬಳಿಕ ಬಂದ ಆದಿಲ್ ಷಾಹಿಗಳು ಬಿಜಾಪುರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು, ಸುಮಾರು ನೂರೈವತ್ತು ವರ್ಷಗಳ ಕಾಲ ಉತ್ತರ ಕರ್ನಾಟಕವನ್ನು ಆಳಿದರು. ವಿದ್ಯಾ ಪ್ರಸಾರಕ್ಕೆ ಅವರು ಆಳುತ್ತಿದ್ದ ಪ್ರದೇಶಗಳಲ್ಲಿ ಏನು ಖಚಿತವಾದ ಕ್ರಮಗಳನ್ನು ಕೈಗೊಂಡರೆಂಬುದು ನಮಗೆ ತಿಳಿಯದಾದರೂ ಅವರು ಸಾರ್ವತ್ರಿಕ ಮತ್ತು ತಾಂತ್ರಿಕ ಶಿಕ್ಷಣಕ್ಕೆ ತಕ್ಕಷ್ಟು ಗಮನ ಕೊಟ್ಟಿರಬೇಕೆನ್ನುವುದಕ್ಕೆ ಆಧಾರಗಳಿವೆ. ಈ ರಾಜಮನೆತನದ ಅನೇಕ ರಾಜರು ಸ್ವತಃ ವಿಶೇಷ ಸುಸಂಸ್ಕೃತರೂ ಬಹುಮುಖ ಸಾಮರ್ಥ್ಯವುಳ್ಳವರೂ ಆಗಿ ವಿದ್ವಾಂಸರಿಗೆ ಆಶ್ರಯದಾತರಾಗಿದ್ದರು. ಅವರ ಕಾಲದಲ್ಲಿ ಬಿಜಾಪುರದ ಸುಲ್ತಾನರ ಆಸ್ಥಾನವು ಅರೇಬಿಕ್ ಮತ್ತು ಪರ್ಷಿಯನ್ ಭಾಷೆಗಳಲ್ಲಿ ವಿದ್ವಾಂಸರಾದವರ ಆಶ್ರಯಸ್ಥಾನವಾಗಿತ್ತು. ಜೊತೆಗೆ, ಆದಿಲ್ ಷಾಹಿ ಅರಸರು ಬಿಜಾಪುರವನ್ನು ಕೇವಲ ವಿದ್ವತ್ ಕೇಂದ್ರವನ್ನಾಗಿ ಮಾತ್ರವಲ್ಲದೆ, ಆ ಕಾಲದ ಅತ್ಯಂತ ಸುಂದರವಾದ ನಗರಗಳಲ್ಲಿ ಒಂದನ್ನಾಗಿ ಮಾಡಿದರು. ಅವರ ಆಶ್ರಯದಲ್ಲಿದ್ದ ಶಿಲ್ಪಿಗಳು ವಾಸ್ತು ಶಿಲ್ಪದಲ್ಲಿ ಹಾಗೂ ವೈಜ್ಞಾನಿಕ ವಿದ್ಯೆಯಲ್ಲಿ ಸುಪ್ರಸಿದ್ಧರಾಗಿದ್ದರು. ಕಡೆಯದಾಗಿ ಆದಿಲ್‌ಷಾಹಿ ಅರಸರು, ಹೊರಗಿನಿಂದ ಆಗಂತುಕರಂತೆ ಕರ್ನಾಟಕಕ್ಕೆ ಬಂದವರಾದರೂ ಬಹು ಬೇಗನೆ ತಾವು ಆಳುತ್ತಿದ್ದ ಪ್ರದೇಶದ ಜನರೊಂದಿಗೆ ಹೊಂದಿಕೊಂಡು ತಾವು ಅಲ್ಲಿಯವರೇ ಎಂಬಂತೆ ನಡೆದುಕೊಂಡರು. ಈ ಕಾರಣಕ್ಕಾಗಿಯೆ ಬಿಜಾಪುರದ ಜನತೆ ಇಂದಿಗೂ ಅವರನ್ನು ಕೃತಜ್ಞತೆಯಿಂದ ನೆನಸಿಕೊಳ್ಳುತ್ತದೆ[61].

## ವಿಜ್ಞಾನ ಮತ್ತು ವೈದ್ಯವಿದ್ಯೆ

ವಿಜಯನಗರದ ಕಾಲದಲ್ಲಿ ದೊರೆಯುವ ತೀರ ಮೊತ್ತಮೊದಲನೆ ವೈದ್ಯ ಗ್ರಂಥ 'ಆಯುರ್ವೇದ ಸುಧಾನಿಧಿ' ಎನ್ನುವುದು. ಇದನ್ನು ಸಾಯಣರ ಅಪ್ಪಣೆಯ ಮೇರೆಗೆ ಏಕಾಂಬರನಾಥನು ಬರೆದನು[62]. ಅವನ ಮೊಮ್ಮಗನಾದ ಶ್ರೀ ಶೈಲನಾಥನು 'ಪ್ರಶ್ನೋತ್ತರ ರತ್ನಮಾಲೆ' ಎಂಬ ವೈದ್ಯಕೀಯ ಗ್ರಂಥವನ್ನು ಬರೆದನು[63]. ಲಕ್ಷ್ಮಣ ಪಂಡಿತನು, 'ವೈದ್ಯ ರಾಜವಲ್ಲಭ' ಎಂಬ ಆಯುರ್ವೇದ ವಿವರಣ ಗ್ರಂಥವನ್ನು ಬರೆದನು. ಕ್ರಿ.ಶ. 1150 ರಲ್ಲಿ ಶ್ರೀಧರ ದೇವನು 'ವೈದ್ಯಾಮೃತ' ಎಂಬ ಕೃತಿಯನ್ನು ರಚಿಸಿದ್ದಾನೆ[64]. ಇದರಲ್ಲಿ ಚಿಕಿತ್ಸೆಯ ವಿಧಾನಗಳನ್ನೂ ಮಂತ್ರಗಳನ್ನೂ ಹೇಳಲಾಗಿದೆ. ಅನಂತರದ ಲೇಖಕ ಸಾಳ್ವನು (ಕ್ರಿ.ಶ. 1550) ಶರೀರದ ಬೇನೆಗಳಿಗೆ ಔಷಧಿಯಾಗಿ ಚೂರ್ಣಗಳನ್ನು ತಯಾರಿಸುವ ಕ್ರಮಗಳನ್ನು ವಿವರಿಸಿದ್ದಾನೆ[65]. ಸುಮಾರು 1570ರಲ್ಲಿ ನರಸಿಂಹಶಾಸ್ತ್ರೀ ಎನ್ನುವವರು 'ವೈದ್ಯಸಾರ ಸಂಗ್ರಹ'ವೆಂಬ ಗ್ರಂಥವನ್ನು ಬರೆದಿದ್ದಾರೆ. ಚಿಕ್ಕದೇವರಾಯರ ಕಾಲದಲ್ಲಿ ಒಬ್ಬ ಜೈನ ವಿದ್ವಾಂಸನು 'ವೈದ್ಯ ನಿಘಂಟು ಸಾರ'[66]. ಎಂಬ ನಿಘಂಟನ್ನು ರಚಿಸಿದ್ದಾನೆ[67]. ಸು. 1750ರಲ್ಲಿ, ತಿಮ್ಮರಾಜಗೌಡನು ಸ್ತ್ರೀಯರಿಗೆ ಸಂಬಂಧಿಸಿದ ರೋಗಗಳನ್ನು ಮಾತ್ರ ಕುರಿತ 'ಸ್ತ್ರೀ ವೈದ್ಯ'ವೆಂಬ ಗ್ರಂಥವನ್ನು ಬರೆದಿದ್ದಾನೆ[68]. ಕೆಳದಿಯ ಅರಸನಾದ ಮೊದಲನೆಯ ಬಸವರಾಜನ (ಕ್ರಿ.ಶ. 1619–1637) ಪ್ರೋತ್ಸಾಹದಿಂದ ರಚಿತವಾದ 'ಶಿವತತ್ವ ರತ್ನಾಕರ'ವೆಂಬ ನಿಘಂಟು, ವಿಸ್ತಾರವಾದ ರೀತಿಯಲ್ಲಿ ಈ ಕೃತಿಯ ಲೇಖಕನಿಗೆ ವೈದ್ಯಕೀಯ ವಿಜ್ಞಾನದಲ್ಲಿ ಬತ್ತದ ಚಿಲುಮೆಯಂತಿರುವ ಧನ್ವಂತರಿ, ಅಶ್ವಿನಿ ಮತ್ತು ಚರಕ ಇವರ ಕೃತಿಗಳನ್ನು ಕುರಿತು ವಿವರಿಸುತ್ತದೆ[69]. ಅದು ಆಯುರ್ವೇದದ ಉಗಮವನ್ನು ಕುರಿತು ಹೇಳುವುದಲ್ಲದೆ ಅದರ ಅಷ್ಟಾಂಗಗಳನ್ನೂ ಚತುರ್ವಿಧ ಚಿಕಿತ್ಸಾಕ್ರಮವನ್ನೂ ತಿಳಿಸುತ್ತದೆ. ಮುಂದೆ ವೈದ್ಯನ ಲಕ್ಷಣಗಳು ವಿವರಿಸಲ್ಪಟ್ಟಿವೆ. ಅನಂತರದ ವಿಷಯ ಪಚನ ಕ್ರಿಯೆಯನ್ನು ಕುರಿತದ್ದು. ಆದಾದ ಮೇಲೆ ಷಡ್ರುಚಿಗಳ ಭೇದವನ್ನೂ ಅವುಗಳ ಸ್ವರೂಪ ಹಾಗೂ ಪರಿಣಾಮವನ್ನೂ ಹೇಳಲಾಗಿದೆ. ಮುಂದೆ

ರೋಗ ಪರೀಕ್ಷೆಯ ವಿಷಯವನ್ನೂ ಅಂಗರಚನಾ ಶಾಸ್ತ್ರವನ್ನೂ ವಿವರಿಸಲಾಗಿದೆ. ಅನಂತರ ವಿವಿಧ ನಾಡೀಸ್ಪಂದನದ ವಿಚಾರವನ್ನೂ ಖಾಯಿಲೆಗಳಿಗೆ ಅನುಗುಣವಾಗಿ ಅದರಲ್ಲಾಗುವ ವ್ಯತ್ಯಾಸಗಳನ್ನೂ ಹೇಳಲಾಗಿದೆ. ವಾತ ಪ್ರಕೋಪ ಮತ್ತು ಪಿತ್ತೋದ್ರೇಕ ಇವುಗಳಿಗೆ ಕಾರಣವನ್ನೂ ಚಿಕಿತ್ಸೆಯನ್ನೂ ವಿವರಿಸಲಾಗಿದೆ. ಅನಂತರ ಜ್ವರಗಳಲ್ಲಿರುವ ಪ್ರಭೇದಗಳನ್ನೂ ಅವುಗಳ ಪರಿಣಾಮವನ್ನು ಮತ್ತು ಯಾವ ಯಾವ ಋತುಗಳಲ್ಲಿ ಯಾವ ಯಾವ ಔಷಧಿಗಳನ್ನು ಕೊಡುವುದು ಉತ್ತಮಎನ್ನುವ ವಿಚಾರವನ್ನು ಹೇಳಲಾಗಿದೆ[70].

ನಾವು ಪರಿಶೀಲಿಸುತ್ತಿರುವ ಈ ಕಾಲಮಾನದಲ್ಲಿ ಅನೇಕ ವೈದ್ಯಕೀಯ ಗ್ರಂಥಗಳು ರಚಿತವಾದರೂ ಔಷಧಿಗಳ ಪ್ರಯೋಗ ಪದ್ಧತಿಯನ್ನು ಕುರಿತವು ಕೆಲವೇ ಕೆಲವು. 'ವೈದ್ಯರಾಜ ವಲ್ಲಭಂ' ಎಂಬ ಪ್ರಬಂಧವನ್ನು ಬರೆದ ಲಕ್ಷ್ಮಣ ಪಂಡಿತನು (ಇವನ ವಿಚಾರವನ್ನು ಆಗಲೇ ಹೇಳಿದೆ) ಎರಡನೆ ಬುಕ್ಕರಾಯನ ಆಸ್ಥಾನದಲ್ಲಿ ರಾಜ ವೈದ್ಯನಾಗಿದ್ದನು[71]. ಸಿಂಗೇಯಭಟ್ಟನೆಂಬಾತನು ಇನ್ನೊಬ್ಬ ಸುಪ್ರಸಿದ್ಧ ವೈದ್ಯ. ಕ್ರಿ.ಶ. 1388ರಲ್ಲಿ ಒಂದು ದಾಖಲೆಯು ಈತನು ವೈದ್ಯ ಚಿಕಿತ್ಸೆಯಲ್ಲಿ, ಅದರಲ್ಲೂ ರಸ ವೈದ್ಯ ವಿಧಾನದಲ್ಲಿ ಅದ್ವಿತೀಯನಾಗಿದ್ದನೆಂದು ಹೇಳುತ್ತದೆ. ಅವನು ಹೆನ್ನೆನದಿಯನ್ನು ಪೆನುಗೊಂಡೆಗೆ ತಂದ ಜಲಸೂತ್ರ (Hydraulic Engineer) ನೂ ಆಗಿದ್ದನು[72]. ಹದಿನೈದನೆ ಶತಮಾನದಲ್ಲಿ, ಎರಡನೆ ದೇವರಾಯನ ಕಾಲದಲ್ಲಿ 'ಸಾಲಗ್ರಾಮೆ' ಎಂದು ಹೆಸರಾದ ಒಂದು ವೈದ್ಯರ ತಂಡವೇ ಇತ್ತು[73].

### ಪಶುವೈದ್ಯ ವಿಜ್ಞಾನ

ಪಶುವೈದ್ಯ ವಿಜ್ಞಾನದಲ್ಲಿ ಬಹುಮಟ್ಟಿಗೆ, ಆನೆ ಕುದುರೆಗಳಿಗೆ ಸಂಬಂಧಿಸಿದ ಗ್ರಂಥಗಳಿವೆ. ಕಾರಣ, ಆನೆ ಕುದುರೆಗಳು ಯುದ್ಧಕ್ಕೆ ಉಪಯುಕ್ತವಾದ ಪ್ರಾಣಿಗಳಾಗಿದ್ದವು. ಸುಮಾರು ಕ್ರಿ.ಶ. 1500ರಲ್ಲಿ ಬಾಚರಸನು ಅಶ್ವವೈದ್ಯವನ್ನು ಬರೆದನು[74]. ಪಶುವೈದ್ಯದಲ್ಲಿ ಇದರ ಅನಂತರ ಬಂದದ್ದು 'ಅಶ್ವ ಶಾಸ್ತ್ರ'. ಇದು ಕ್ರಿ.ಶ. 1625 ರಲ್ಲಿ ರಾಮಚಂದ್ರನೆಂಬಾತನಿಂದ ರಚಿತವಾಯಿತು[75]. ಇದು, ಶಾಲಿಹೋತ್ರನ (ಇದೇ ಹೆಸರಿನ) ಗ್ರಂಥದ ಭಾಷಾಂತರ. ಇದರಲ್ಲಿ ಕುದುರೆಗಳ ಖಾಯಿಲೆಗಳನ್ನು, ಚಿಕಿತ್ಸಾ ಕ್ರಮಗಳನ್ನು, ಮತ್ತು ಕುದುರೆಗಳನ್ನು ಪಳಗಿಸುವ, ತರಬೇತು ಕೊಡುವ ವಿಧಾನಗಳನ್ನು ಹೇಳಲಾಗಿದೆ[76]. ಸುಮಾರು 1627 ರಲ್ಲಿ ಪದ್ಮಣ ಪಂಡಿತನು 'ಹಯಸಾರ ಸಮುಚ್ಚಯ'ವೆಂಬ ಸ್ವತಂತ್ರ ಕೃತಿಯನ್ನು ಬರೆದಿದ್ದಾನೆ[77]. ಕೆಳದಿಯ ಅರಸನಾದ ವೆಂಕಟಪ್ಪ ನಾಯಕನ ಆಶ್ರಯದಲ್ಲಿ, ಒಬ್ಬ ಅಶ್ವ ನಿಪುಣನು 'ಮಾನಪ್ರಿಯ'ವೆಂಬ ವಿಸ್ತಾರವಾದ ಕೃತಿಯನ್ನು ರಚಿಸಿದನು[78]. ಇನ್ನೊಂದು ವಿಸ್ತಾರವಾದ ಪ್ರಕರಣ ಗ್ರಂಥ, ಇದೇ ವಿಷಯದ ಮೇಲೆ, 'ಶಿವತತ್ವರತ್ನಾಕರ'. ಇದರಲ್ಲಿ ಬೇರೆ ಬೇರೆ ದೇಶದ ಅಶ್ವಲಕ್ಷಣವನ್ನು ಮತ್ತು ಅವುಗಳನ್ನು ಪಳಗಿಸುವ, ತರಬೇತು ಕೊಡುವ, ವಿಧಾನಗಳನ್ನು ಹೇಳಲಾಗಿದೆ[79]. ಈ ಕೃತಿಯಲ್ಲಿ ಆನೆಗಳ ವಿಚಾರಕ್ಕೆ ಹೆಚ್ಚು ಗಮನ ಕೊಡಲಾಗಿದೆ[80].

### ಖಗೋಳ ವಿಜ್ಞಾನ ಮತ್ತು ಗಣಿತಶಾಸ್ತ್ರ

ವಿದ್ಯಾಮಾಧವ ಸೂರಿ ಎಂಬ ಖಗೋಳ ವಿಜ್ಞಾನಿಯು 'ಮುಹೂರ್ತ ದರ್ಶನ' ಅಥವಾ 'ವಿದ್ಯಾ ಮಾಧವೀಯ' ಎಂಬ ಕೃತಿಯನ್ನು ರಚಿಸಿದನು. ಈ ಕೃತಿಯನ್ನು ಕುರಿತು, ಅವನ ಮಗನಾದ ವಿಷ್ಣು ಸೂರಿಯು 'ಮುಹೂರ್ತ ದೀಪಿಕಾ' ಎಂಬ ವ್ಯಾಖ್ಯಾನವನ್ನು ಬರೆದಿದ್ದಾನೆ. ಈತ ಬುಕ್ಕರಾಯನ ಮಗನಾದ ಮಲ್ಲಪ್ಪ ಒಡೆಯರ ಸಮಕಾಲೀನನಾಗಿದ್ದನು[81]. 'ಶಿವತತ್ವ ರತ್ನಾಕರ'ವು ಖಗೋಳ ವಿಜ್ಞಾನ ಮತ್ತು ಜ್ಯೋತಿಷ ಈ ಎರಡರ ವಿಷಯವನ್ನು ಒಳಗೊಂಡಿದೆ. ಇದೇ ಕೃತಿಯಲ್ಲಿ ಪವನಶಾಸ್ತ್ರ

(Meteorology) ದ ಸಂಗತಿಗಳೂ ಇವೆ[82]. ಸುಮಾರು, ಕ್ರಿ.ಶ. 1650 ರಂದು ಭಾಸ್ಕರನು ಗಣಿತ ಶಾಸ್ತ್ರಕ್ಕೆ ಸಂಬಂಧಿಸಿದ 'ಬೇಹಾರ ಗಣಿತ' ವೆಂಬ ಕೃತಿಯನ್ನು ರಚಿಸಿದ್ದಾನೆ. ತನ್ನ ಕಾವ್ಯಶಕ್ತಿ ಗಣಿತ ಪ್ರೌಢಿಮೆಯನ್ನು ಪ್ರಕಟಿಸುವ ಉದ್ದೇಶದಿಂದ ತಾನು ಇದನ್ನು ಬರೆದೆನೆಂದು ಹೇಳುತ್ತಾನೆ[83]. ಸು. 1715 ರಲ್ಲಿ 'ಬಾಲವೈದ್ಯದ ಚೆಲುವ' ಎಂದು ತನ್ನನ್ನು ಕರೆದುಕೊಂಡ ಲೇಖಕನೊಬ್ಬನು, ಕನ್ನಡದಲ್ಲಿ 'ಲೀಲಾವತಿ' ಎಂಬ ಕೃತಿಯನ್ನು ಬರೆದನು. ಇದರಲ್ಲಿ ಕ್ಷೇತ್ರಗಣಿತ ಅಥವಾ ರೇಖಾಗಣಿತದ ವಿಷಯವಿದೆ[84].

## ರಸಾಯನಿಕ ಶಾಸ್ತ್ರ ಮತ್ತು ಭೌತಶಾಸ್ತ್ರ

ಈ ದಿನ ನಾವು ಯಾವುದನ್ನು ರಸಾಯನ ಶಾಸ್ತ್ರವೆಂದು ಕರೆಯುತ್ತೇವೋ ಅದಕ್ಕೆ ಸಂಬಂಧಿಸಿದ ವಿಶೇಷ ಸಂಗತಿಗಳು 'ಶಿವ ತತ್ವ ರತ್ನಾಕರ' ದಲ್ಲಿ ದೊರೆಯುತ್ತವೆ. ರಸ ವಿದ್ಯೆ ಎಂಬ ಅಧ್ಯಾಯದಲ್ಲಿ, ಪಾದರಸ ಮೂಲವಾದ ತಯಾರಿಕೆಗಳಿಂದ ಚಿಕಿತ್ಸೆ ಮಾಡುವುದರ ವಿವರಣೆಯಿದೆ[85]. ಅನಂತರ ಕೆಲವು ಲೋಹಗಳ-ಅಭ್ರಕ, ಸುವರ್ಣಮುಖಿ, ಮೈಲು ತುತ್ತ, ಹರಿದಾಳ, ಸಿಂದೂರ, ಶಂಖಪಾಷಾಣ, ಸುರಮ ಅಥವಾ ಅಂಜನ ಕಲ್ಲು, ಕಂದು ಬಣ್ಣದ ವಸ್ತುಗಳ—ಮೂಲವನ್ನು, ಗುಣ, ಸ್ವಭಾವ, ವರ್ಣಗಳನ್ನು ಮತ್ತು ಅವುಗಳ ಉಪಯೋಗವನ್ನು ಕುರಿತ ವಿವರಣೆಗಳಿವೆ[86]. ರಸ ಅಥವಾ ಪಾದರಸವನ್ನು ಕುರಿತು, ಅದರ ಶುದ್ಧೀಕರಣವನ್ನೂ ಉಪಯೋಗವನ್ನೂ ಪರಿಣಾಮಗಳನ್ನೂ ಬೇರೆ ಬೇರೆಯ ಅವಲೋಹಗಳನ್ನು ಬೆಳ್ಳಿ ಅಥವಾ ಬಂಗಾರವನ್ನಾಗಿ ಪರಿವರ್ತಿಸುವ ರಸವಿದ್ಯೆಯ ವಿವರಗಳನ್ನೂ ಕುರಿತ ಒಂದು ಪ್ರತ್ಯೇಕವಾದ ಅಧ್ಯಾಯವೆ ಇದೆ. ಕಡೆಯದಾಗಿ, ಪ್ರಯೋಗ ಶಾಲೆ (ರಸ ಶಾಲೆ) ಯನ್ನು ಇಡಬೇಕಾದ ರೀತಿಯನ್ನೂ ಪ್ರಯೋಗದ ಉಪಕರಣ ಮತ್ತು ಯಂತ್ರಗಳನ್ನು ಸಜ್ಜುಗೊಳಿಸುವ ವಿಧಾನವನ್ನು ತಿಳಿಸುವ ಅಧ್ಯಾಯವೂ ಒಂದಿದೆ[87].

ಭೌತಶಾಸ್ತ್ರಕ್ಕೆ ಸಂಬಂಧಿಸಿದ ಸಂಗತಿಗಳನ್ನು ವಜ್ರ, ಹವಳ, ಪದ್ಮರಾಗ, ನೀಲಮಣಿ, ಪಚ್ಚೆ. ಸ್ಫಟಿಕ, ಗೋಮೇಧಿಕಾ ಮೊದಲಾದ ಅಮೂಲ್ಯ ಶಿಲೆ (ಹರಳು) ಗಳ ವಿಷಯವನ್ನು ವಿವರಿಸುವಲ್ಲಿ ಪ್ರಸ್ತಾಪಿಸಲಾಗಿದೆ[88]. ಗಣಿತದ ವಿಷಯವನ್ನು ಹೇಳುವಾಗ 'ಬಾಲ ವೈದ್ಯದ ಚೆಲುವ' ನೆಂದು ಹೆಸರಿಸಲಾದ ಲೇಖಕನು ಸು.ಕ್ರಿ.ಶ. 1715 ರಲ್ಲಿ ವಜ್ರ ಮತ್ತು ನವರತ್ನಗಳ ವಿಷಯವನ್ನು ಕುರಿತು ರತ್ನ ಶಾಸ್ತ್ರವೆಂಬ ಗ್ರಂಥವನ್ನು ಬರೆದಿದ್ದಾನೆ[89].

## ತೋಟಗಾರಿಕೆ

ತೋಟಗಾರಿಕೆಯನ್ನು ಕುರಿತು ಶಿವತತ್ವ ರತ್ನಾಕರದಲ್ಲಿ ಈ ಬಗೆಯ ವಿಷಯ ವಿವೇಚನೆ ಇದೆ: (1) ತೋಟಗಳ ಆವಶ್ಯಕತೆ, (2) ಅಲ್ಲಿ ನೆಡಬೇಕಾದ ಸಸ್ಯಗಳ ವಿವರ, (3) ತೋಟದ ನಕ್ಷೆ ಅಥವಾ ಯೋಜನೆ, (4) ಅದಕ್ಕೆ ಬೇಕಾದ ಮಣ್ಣು, (5) ಸಸ್ಯಗಳನ್ನು ಬೆಳೆಯಿಸುವ ವಿಧಾನ, (6) ಗೊಬ್ಬರಗಳು, (7) ಸಸಿ ನೆಡಲು ಮತ್ತು ನೀರು ಹಾಕಲು ತಕ್ಕ ಕಾಲಗಳು, (8) ಸಸ್ಯಗಳಿಗೆ ತಗಲುವ ರೋಗಗಳು ಮತ್ತು ಅವುಗಳ ಚಿಕಿತ್ಸಾ ವಿಧಾನ, (9) ತೋಟದ ಅಂದವನ್ನು ಹೆಚ್ಚಿಸುವ ಕ್ರಮಗಳು[90].

## ಸಂಕೀರ್ಣ

ಶಿವತತ್ವ ರತ್ನಾಕರವು, ವಿಜ್ಞಾನ ಮತ್ತು ಯಂತ್ರ ವಿಜ್ಞಾನಾದಿಗಳ ಬಗ್ಗೆ ವಿಶೇಷವಾದ ವಿಷಯ

ಗಳನ್ನೂ ಒಳಗೊಂಡು ಸಂಕೀರ್ಣ ಸ್ವರೂಪದ್ದಾಗಿದೆ. ಖಡ್ಗಗಳ ತಯಾರಿಕೆ[91], ಚಿತ್ರಪರಿಕರಗಳಾದ ಬಣ್ಣ, ಹಲಗೆ, ಕುಂಚ ಇತ್ಯಾದಿಗಳನ್ನು ಕುರಿತು[92], ಡೋಲು ಮೊದಲಾದ ಸಂಗೀತ ವಾದ್ಯಗಳನ್ನು ಕುರಿತು ಪಾಕಶಾಸ್ತ್ರದ ವಿವರಗಳನ್ನು ಕುರಿತು[93], ವಿಷವೈದ್ಯ [94], ಹಸ್ತ ಸಾಮುದ್ರಿಕ[95], ಯೋಗ ಶಾಸ್ತ್ರದ ಪ್ರಾಣಾಯಾಮಾದಿ[96], ಸೂತ್ರಗಳನ್ನು ಕುರಿತು[97], ಕಡೆಯದಾಗಿ ಇಂದ್ರಜಾಲ ಮತ್ತು ಸಮ್ಮೋಹಿನಿ, ವಿದ್ಯೆಯನ್ನು ಕುರಿತು ಇದರಲ್ಲಿ ವಿವರಣೆಗಳಿವೆ.

## ಅಡಿ ಟಿಪ್ಪಣಿಗಳು

1. M.A.R. 1916. p.p. 56—59.
2. E.C. VII, SK, 28 : EC.. V. Cn. 256 and E.C. XI Dg. 23.
3. M.A.R. 1916. p. 58.
4. E.C. VI Koppa. 34.
5. S.I.I. IX No. 433.
6. Mys. Gaz : II. (III) pp. 1559—60.
7. ಕೆಳದಿಯ ಬಸವರಾಜನ ಶಿವತತ್ವರತ್ನಾಕರ : ಸಂ. ರಾಮರಾವ್ ಮತ್ತು ಸುಂದರ ಶಾಸ್ತ್ರಿಯರು. ಪು. 35.
8. ಅಲ್ಲೇ. ಪು. 37.
9. ಲಿಂಗಣ್ಣಕವಿ : ಕೆಳದಿ ನೃಪವಿಜಯಂ. ಸಂ : ಆರ್ ಶ್ಯಾಮಶಾಸ್ತ್ರಿ ಪು. 175. V. 17.
10. ತಿರುಮಲಾರ್ಯ : ಚಿಕದೇವರಾಯ ವಂಶಾವಳಿ. ಪು. 138. ff.
11. F.E. P. 241—2.
12. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ : ಸಂ. XIV. 1. ಪು. 31.
13. ಕನಕದಾಸ : ಮೋಹನತರಂಗಿಣಿ. ಸಂ.ಎ. ರಾಮಾನುಜ ಅಯ್ಯಂಗಾರ್, ಅಧ್ಯಾಯ II. ಪು. 13. VV. 37—41.
14. Parulekar R.V. : Survey of Indigenous Education in the Province of Bombay.

ಚಿಕ್ಕನಂಜೇಶನ ರಾಘವಾಂಕ ಚರಿತೆ (ಸಂ. ಸ.ಸ. ಮಾಳವಾಡ) ಸಂಧಿ II. V. 53ರಲ್ಲಿ ಧೂಳಾಕ್ಷರದ ವಿಷಯ ಬಂದಿದೆ.

15. Travels of pietro Della Valle, II, p.p. 227—28.
16. ಅಲ್ಲೇ II. ಪು. 227—28.
17. Parulekar, p. 31.
18. ಅಲ್ಲೇ. ಪು. 31.
19. ಅಲ್ಲೇ. ಪು. 31.
20. S.I.I. IV, No. 267. p. 62.
21. E.C. V., Cn. and S.T.R. Ghatikavidvan. p. 5.
22. E.C. VIII. Sb. 475.
23. E.C. XIII, Kunigal 37, p. 39 and E.C. VIII Ti. 7.
24. E.C. III. Tn. 63. (Eng. p. 8)

25. ಅಲ್ಲೇ. and Q.J.M.S. VII, pp. 162. ff.
26. A.S.I. 1936—37. p. 108.
27. E.C. VIII, Ti 2—33. S.I.I. IX (II) Nos. 523, 655, 659, 673 and 675.
28. ಅಲ್ಲೇ. Ti. 42. 184.
29. ಅಲ್ಲೇ. Ti. 81.
30. ಅಲ್ಲೇ. Ti. 55.
31. ಅಲ್ಲೇ. Ti. 71, and 51.
32. E.C. V. Cn. 165. p. 198, S.I.I. IX, (1) p. 140
33. ಸೋಮೇಶ್ವರ ಶತಕ. V. 58.
34. ಅಲ್ಲೇ. V. 61.
35. S.I.I. IX. (II) No. 507. p. 321.
36. ಪದ್ಮರಾಜ ಪುರಾಣ : ಪದ್ಮರಸ, ಸಂ.ಆರ್.ಸಿ. ಹಿರೇಮಠ. ಪು. 34. V. 74.
37. ಸೋಮೇಶ್ವರ ಶತಕ. V. 1
38. E.C.XIII. Pg. 69. p. 128.
39. J.B.B.R.A.S. IX. XVII. P. 275.
40. Mys. Gaz. II (III) p.p. 1914—15.
41. ಸೋಮೇಶ್ವರ ಶತಕ : V. 6—8.
42. ಮಾಸ್ತಿವೆಂಕಟೇಶ ಅಯ್ಯಂಗಾರ್ : Popular culture in Karnataka, p. 59
43. ಅಲ್ಲೇ. ಪು. 95.
44. ಪುರಂದರ ದಾಸರ ಪದಗಳು : III. 149. p. 82.
45. ಚನ್ನಪ್ಪ ಉತ್ತಂಗಿ : (ಸಂ.) : ಸರ್ವಜ್ಞನ ವಚನಗಳು, V. 69. p. 10.
46. ಡಿ.ಎಲ್. ನರಸಿಂಹಾಚಾರ್ : Article on Kannada Literature. VSC. p. 361.
47. ಮಾಸ್ತಿ. p. 89—90.
48. op. cit. No. 30.
49. ರಂ. ಶ್ರೀ. ಮುಗಳಿ : ಕನ್ನಡ ಸಾಹಿತ್ಯ ಚರಿತ್ರೆ. ಪು. 185.
50. ಅಲ್ಲೇ. ಪು. 185.
51. F.E. p. 274.
52. ಅಲ್ಲೇ. ಪು. 277.
53. E.C. XII. pg. 29. p. 36.
54. Mir Ahmed Ali Khan : "the Condition of Education under the Bahamanies" Proceedings of Indian History Congress. 1941. pp. 388 ff.
55. Mahdhi Hussain (Ed) : The Rehla of Ibn Batuta. p. 170.
56. Mer Ahmed Ali Khan : op. cit.
57. ಅಲ್ಲೇ.
58. ಅಲ್ಲೇ.
59. Yazdani G. : Bidar, Its history and monuments. pp. 24. ff. and 91—99.



60. Sherwani H.K. : The Bahamani Kingdom. p. 39.

61. Basu, K. K. : Bijapur Court Culture, in the Proceedings of Indian History Congress, 1941. pp. 598—599 and Cambridge History of India, Vol. IV, pp. 570—574. 62. V.S.C. p. 301.

62. V.S.C. p. 301.

63. Srikanta Shastri S. : Sanskrit Literature under Vijayanagar. V.S.C., p. 301.

ಡಿ.ಎಲ್. ನರಸಿಂಹಾಚಾರ್ಯರು (V.S.C. p. 364ರಲ್ಲಿ) ಹೇಳುತ್ತಾರೆ : ಹರಿಹರ ರಾಜನ ಆಶ್ರಯದಲ್ಲಿದ್ದ ಮಂಗರಾಜನು (1360) ಬರೆದ ಖಗೇಂದ್ರ ಮಣಿದರ್ಪಣದಲ್ಲಿ, ಅನೇಕ ಬಗೆಯ ವಿಷಗಳ ಮತ್ತು ಅವುಗಳ ಪರಿಣಾಮವನ್ನೂ ಅದರ ಪ್ರತಿರೋಧನ (antidotes)ವನ್ನೂ ಅತ್ಯಂತ ಸಮರ್ಥವಾದ ರೀತಿಯಲ್ಲಿ ವಿವರಿಸಲಾಗಿದೆ— ಎಂದು.

64. ಕವಿಚರಿತೆ. II. pp. 166—67.

65. ಅಲ್ಲೇ. ಪು. 251.

66. ಅಲ್ಲೇ. ಪು. 301.

67. M.A.R. 1921. p. 33.

68. ಕವಿ ಚರಿತೆ. III. ಪು. 102.

69. S.T.R. P. 28.

70. ಅಲ್ಲೇ. ಪು. 28.

71. Nilakanta Sastry K. A. and Venkataramanayya N. : Further Sources of Vijayanagar History, I.P. 2.

72. E.C., X. Gd. 6.

73. Rice L. : Mysore and Coorg from Inscriptions, P. 188.

74. ಕವಿ ಚರಿತೆ. II. P. 171.

75. ಅಲ್ಲೇ. ಪು. 367-368.

76. ಅಲ್ಲೇ. ಪು. 368-369.

77. ಅಲ್ಲೇ. ಪು. 368-369.

78. ಕೆಳದಿನೃಪ ವಿಜಯ. P. 88.

79. S.T.R. VII Kallola, Chap. XII pp. 338-345.

80. ಅಲ್ಲೇ. VII Kallola Ch. XI pp. 331-338.

81. V.S.C., P. 303.

82. S.T.R. VII Kallola Ch. VIII pp. 312-315.

83. ಕವಿಚರಿತೆ. II ಪು. 367-77

84. ಅಲ್ಲೇ. III ಪು. 5-8.

85. S.T.R. VI, Kallola, Chs. F F.—XXIII and XXIV pp. 263.

86. ಅಲ್ಲೇ. Chs. XXIII and XXIV PP. 263-267.

87. ಅಲ್ಲೇ. Chs. XXV pp. 274-276.

88. ಕವಿಚರಿತೆ III p. 8.

89. S.T.R. VI, Kallola, Chs. pp. 201-205.

90. ಅಲ್ಲೇ. Ch. II pp. 168-172.
91. ಅಲ್ಲೇ. Ch. II p. 168-172.
92. ಅಲ್ಲೇ. Chs. XVIII and XIX.
93. ಅಲ್ಲೇ. Chs. XXVI and XXVII.
94. ಅಲ್ಲೇ. VII, Kallola, Chs. IX and X pp. 320-331.
95. ಅಲ್ಲೇ. VII, Kallola, Chs. XVXX pp. 358-364.
96. ಅಲ್ಲೇ. VII, Kallola, Chs. XVXX pp. 358-364.
97. ಅಲ್ಲೇ. Ch. II, 189-295.

ಮೂಲ ಲೇಖಕರು : ಡಾ ॥ ಜಿ. ಎಸ್. ದೀಕ್ಷಿತ್
ಅನುವಾದಕರು : ಡಾ ॥ ಜಿ. ಎಸ್. ಶಿವರುದ್ರಪ್ಪ

# ಕನ್ನಡ

## (ವಿಜಯನಗರ ಕಾಲ ಕ್ರಿ.ಶ. 1336-1565)

**ಹಿನ್ನೋಟ**

ಕನ್ನಡ ಸಾಹಿತ್ಯ ವಿಜಯನಗರದ ಪ್ರಭಾವಕ್ಕೆ ಒಳಗಾಗುವ ಕಾಲಕ್ಕಾಗಲೆ ಎರಡು ಪ್ರಬಲ ಆಂದೋಲನಗಳನ್ನು ಕಂಡಿತ್ತು. ಅವು ತನ್ನ ರೀತಿ ಲಕ್ಷಣಗಳ ಮೇಲೆ ಶಾಶ್ವತವಾದ ಮುದ್ರೆಯನ್ನೊತ್ತಿದ್ದವು. ಮೊದಲನೆಯದು ಜೈನಧರ್ಮದ ವಿಕಸನ. ನೃಪತುಂಗನ ಬಳಿಕ ಸ್ವಲ್ಪ ಕಾಲದಲ್ಲಿಯೇ ಅದು ಆರಂಭವಾಗಿತ್ತು. ಸುಮಾರು ಹನ್ನೆರಡನೆಯ ಶತಮಾನದ ಅಂತ್ಯಕ್ಕೆ ಉನ್ನತಿಗೆ ಬಂದಿತು. ಈ ಕಾಲದಲ್ಲಿ ಜೈನಧರ್ಮ ಜನಜೀವನದಲ್ಲಿ ಆದರಣೀಯ ಸ್ಥಾನವನ್ನು ಗಳಿಸಿತು. ಧರ್ಮಪ್ರಚಾರಕ್ಕೆ ಸಾಹಿತ್ಯವನ್ನು ಒಂದು ಮಾಧ್ಯಮವಾಗಿ ಬಳಸಲಾಯಿತು. ಸಂಸ್ಕೃತ ಮತ್ತು ಪ್ರಾಕೃತಗಳಲ್ಲಿ ಮಹಾ ವಿದ್ವಾಂಸರಾದ ಜೈನ ಕವಿಗಳ 'ಮಾರ್ಗೀ' ಶೈಲಿಗೆ ಹಳೆಯ 'ದೇಶಿ' ಶೈಲಿ ಎಡೆಮಾಡಿಕೊಟ್ಟಿತು. ಕವಿಗಳು ತಮ್ಮ ಮೂಲ ಕೃತಿಗಳನ್ನು ಎಷ್ಟರ ಮಟ್ಟಿಗೆ ಅನುಕರಿಸಿದರೆಂದರೆ, ಭಾಷೆ ಸಾಮಾನ್ಯವಾಗಿ ಕನ್ನಡ ಪ್ರತ್ಯಯಗಳಿಂದ ಕೂಡಿದ ಸಂಸ್ಕೃತವೇ ಆಗಿತ್ತು. ತಮ್ಮ ಅಭಿಪ್ರಾಯಗಳನ್ನು ಅಭಿವ್ಯಕ್ತಗೊಳಿಸಲು ದೇಶೀಯ ಮಟ್ಟುಗಳನ್ನು ಹಿನ್ನೆಲೆಗೆ ದೂಡಿ ಸಂಸ್ಕೃತ ವೃತ್ತಗಳನ್ನು ಅನುಸರಿಸಿದರು. ಕೇವಲ ದಾಕ್ಷಿಣ್ಯಕ್ಕೆ ಆಗೊಮ್ಮೆ ಈಗೊಮ್ಮೆ ಹಿಂದಿರುಗಿ ನೋಡಿ ಒಂದೋ ಎರಡೊ ಪದ್ಯಗಳನ್ನು ದೇಶೀಯ ಛಂದಸ್ಸುಗಳಲ್ಲಿ ಬರೆದರು. ಪಂಪನಂತಹ ಕೆಲವು ಕವಿಗಳು ಈ ಎರಡೂ ಶೈಲಿಗಳನ್ನು ಹೊಂದಿಸಲು ಪ್ರಯತ್ನಿಸಿದರು. ಭಾಷೆಯ ಗತಿ ಗೌರವಗಳ ಮೇಲೆ ತೀಕ್ಷ್ಣದೃಷ್ಟಿಯನ್ನು ಹರಿಸಿದರು. ನಿಧಾನವಾಗಿ ಸೃಷ್ಟಿಕಾರ್ಯದ ಉಲ್ಬಣ ತಗ್ಗಿತು. ಆ ಬಳಿಕ ಬಂದ ಕವಿಗಳು ಹಿಂದೆ ಹಾಕಿದ ಗೆರೆಯಲ್ಲಿಯೇ ಸಿಕ್ಕಿಬಿದ್ದರು. ಹೊಸತನ ನಷ್ಟವಾಯಿತು. ಪಾಂಡಿತ್ಯ ಸರಳತೆಯನ್ನೂ ಲಾವಣ್ಯವನ್ನೂ ಅಟ್ಟಿ ಓಡಿಸಿತು. ನಯಸೇನನಂತಹ ಕೆಲವು ಕವಿಗಳು ಸಂಸ್ಕೃತ ಪದ ಹಾಗೂ ಪದಪುಂಜಗಳಿಗೆ ಕೊಟ್ಟ ಅನುಚಿತ ಪ್ರಾಧಾನ್ಯದ ವಿರುದ್ಧ ತೀವ್ರವಾಗಿ ಪ್ರತಿಭಟನೆ ವ್ಯಕ್ತಪಡಿಸಿದರು. ಆದರೆ ಅವುಗಳಿಗೆ ಯಾರೂ ಲಕ್ಷ್ಯ ಕೊಡಲಿಲ್ಲ. ಅದಲ್ಲದೆ ಜೈನಧರ್ಮಕ್ಕೂ ಅಳಿಗಾಲ ಒದಗಿತ್ತು. ಅದರ ಪ್ರಭಾವ ಕ್ಷೀಣ ದೆಸೆಯಲ್ಲಿತ್ತು. ಎರಡನೆಯ ಪ್ರಚೋದನೆ ಅಗತ್ಯವಾಗಿತ್ತು. ಮಹಾಸುಧಾರಕ ಬಸವೇಶ್ವರನ ಉದಯದಿಂದ ವೀರಶೈವ ಆಂದೋಲನವು ಬಿರುಗಾಳಿಯಂತೆ ದೇಶದಾದ್ಯಂತ ಎದ್ದಿತು.

'ದೇಸಿ' ಶೈಲಿ ಶ್ರೇಷ್ಠವೆನಿಸಿತು. ಬಸವಣ್ಣನವರು ತಮ್ಮ ಭಾವನೆಗಳನ್ನು ಹೊರಗೆಡಹಲು ಒಂದು ಹೊಸ ಶೈಲಿಯನ್ನು, ಹೆಚ್ಚು ಕಡಮೆ ಒಂದು ಹೊಸ ಭಾಷೆಯನ್ನೇ ಸೃಷ್ಟಿಸಿದರು. ಚಂಪೂ ಕಾವ್ಯಗಳ ಹಳಗನ್ನಡವು ಆ ಕಾಲಕ್ಕೆ ಗ್ರಾಂಥಿಕವೂ ಕೃತಕವೂ ಆಗಿತ್ತು. ಗ್ರಂಥಗಳ ಭಾಷೆ ಸಾಗದೆ ನಿಂತು ಕಠಿನವಾಗಿದ್ದ ಕಾಲದಲ್ಲಿ ಜನಸಾಮಾನ್ಯರ ಆಡುನುಡಿ ಬೆಳವಣಿಗೆಯನ್ನು ಹೊಂದಿತ್ತು. ಆ ಸಮೆಕಲಾಗಿದ್ದ ಮಾಧ್ಯಮವನ್ನು ತ್ಯಾಜ್ಯ ಮಾಡಿ, ಜನಸಾಮಾನ್ಯರ ಭಾಷೆಯನ್ನು ಬೆಳೆಸಲು ಇದೊಂದು ಒಳ್ಳೆಯ ಸಮಯವಾಗಿತ್ತು. ಬಸವಣ್ಣನವರು ಮುನ್ನುಗ್ಗಿ ಸಾಹಸ ಹಾಗು ವಿವೇಕದಿಂದ ಇದನ್ನು ಸಾಧಿಸಿದರು. ತ್ರಿಪದಿ, ಸಾಂಗತ್ಯ, ರಗಳೆ ಹಾಗೂ ಜನರೂಢಿಯ ಹಾಡುಗಳಂತಹ ದೇಶೀಯ ಛಂದಸ್ಸುಗಳು ಮತ್ತೆ ಚೇತರಿಸಿಕೊಂಡು ಹೊಸ

ಧರ್ಮದ ಸಾಧನಗಳಾದವು. ಮುಂದೆ ಬಹು ಮುಖ್ಯ ಪಾತ್ರವನ್ನು ವಹಿಸಬೇಕಾದ ಷಟ್ಪದಿಯಂತಹ ಹೊಸ ಛಂದಸ್ಸುಗಳನ್ನು ಕಂಡುಹಿಡಿದರು ; ಬಹುಶಃ ಹೊಸದಾಗಿಯೇ ಸೃಷ್ಟಿಸಿದರು. ಹರಿಹರನಂತಹ ಪಂಡಿತರಾದ ಕವಿಗಳು ಆ ಹಳೆಯ ಶೈಲಿಯಲ್ಲಿಯೂ ತಾವು ಬರೆಯಬಲ್ಲವರೆಂದು ತೋರಿಸಿಕೊಳ್ಳಲು ತವಕಗೊಂಡಿದ್ದರೂ ಹಳೆಯ ಚಂಪೂಕಾವ್ಯ ಶೈಲಿಯ ಅಭ್ಯಾಸ ತಪ್ಪಿಹೋಯಿತು. ಹಿಂದಿನ ಜೈನಸಾಹಿತ್ಯ ವೈರಾಗ್ಯವನ್ನು ಹಾಗೂ ಇಹಲೋಕದ ಅನಿತ್ಯತೆಯನ್ನು ಒತ್ತಿಹೇಳುತ್ತಿರಲು, ಆ ಕಾಲದ ಹೊಸ ವೀರಶೈವ ಸಾಹಿತ್ಯವು ಇಷ್ಟಲಿಂಗದಲ್ಲಿನ ಭಕ್ತಿಯನ್ನು ಎತ್ತಿಹಿಡಿಯಿತು.

ಕೆಲವು ಕಾಲ ಇದು ನಡೆದುಕೊಂಡು ಬಂದಿತು. ಆದರೆ ನಾಯಕನು ಕಾರ್ಯರಂಗದಿಂದ ದೂರ ಸರಿದೊಡನೆ ಜನತೆಯ ಪ್ರಯತ್ನ ಪರಂಪರೆಗೆ ತೀವ್ರವಾದ ಆಘಾತ ಒದಗಿತು. ಕಲ್ಯಾಣವು ಸುಮಾರು ಕ್ರಿ.ಶ. 1200 ರಲ್ಲಿ ಹಾಳಾಯಿತು. ವೀರಶೈವರು ತಾವಾಗಿ ಎಲ್ಲ ದಿಕ್ಕಿಗೂ ಚದರಬೇಕಾಗಿ ಬಂದಿತು ; ಕರ್ಣಾಟಕದಲ್ಲಿ ಎಲ್ಲೆಲ್ಲೂ ಹರಡಿಕೊಂಡರು. ಪರಕೀಯರ ಆಕ್ರಮಣಗಳು ಭಯವನ್ನು ಹಬ್ಬಿಸಿದವು. 13 ನೆಯ ಶತಮಾನದ ಅಂತ್ಯದ ವೇಳೆಗೆ ನಿಧಾನವಾಗಿ ವೈಷ್ಣವರ ವಿರುದ್ಧ ಕಾರ್ಯಪರಂಪರೆಯೂ ರೂಪುಗೊಳ್ಳುತ್ತಿತ್ತು. ಅವರೂ ಕೂಡ ಭಕ್ತಿಗೆ ಪ್ರಾಶಸ್ತ್ಯಕೊಟ್ಟರು.

## ಭಕ್ತಿ ಪ್ರಸಾರ ಕಾರ್ಯ

ಅದ್ವೈತಬ್ರಹ್ಮದ ಬದಲು ಪ್ರಾರ್ಥನೆಮಾಡಿ ಅರ್ಚಿಸಬಹುದಾದ ಇಷ್ಟದೈವದ ಬಯಕೆ ಜನಸಾಮಾನ್ಯರಿಗೆ ಎಷ್ಟು ತೀವ್ರವಾಗಿತ್ತೆಂದರೆ ಎರಡು ಬಗೆಯ ದೈವಭಕ್ತಿಯ ಧರ್ಮಗಳು ಮುಂದೆ ಬಂದುವು. ಒಂದು ತಮಿಳು ಶೈವಧರ್ಮದ ಶಿವಭಕ್ತಿ. ಮತ್ತೊಂದು ಹನ್ನೆರಡನೆಯ ಶತಮಾನದ ಆದಿಯಲ್ಲಿ ರಾಮಾನುಜರೂ ಹದಿಮೂರನೆಯ ಶತಮಾನದಲ್ಲಿ ಮಧ್ವಾಚಾರ್ಯರೂ ಬೋಧಿಸಿದ ವೈಷ್ಣವ ಭಕ್ತಿ. ಇದರ ಪರಿಣಾಮವಾಗಿ ಅವತಾರಪುರುಷರ ಸ್ಥಾನವನ್ನು ಗಳಿಸಿದ್ದ ಇತಿಹಾಸಕಾವ್ಯನಾಯಕರಾದ ರಾಮ ಮತ್ತು ಕೃಷ್ಣರಂತಹವರನ್ನು ಪರಮದೈವವೆಂದೇ ಭಾವಿಸಿದ್ದರು. ಅವರ ಸಂಕಲ್ಪವೇ ಇಡೀ ಸೃಷ್ಟಿಯ ಅದೃಷ್ಟವನ್ನು ನಿಯಂತ್ರಿಸಿತೆಂದೂ ಪರಿಗಣಿಸಿದರು. ಈ ಆಸ್ತಿಕ್ಯ ಮನೋಧರ್ಮಕ್ಕನುಗುಣವಾಗಿ ಮಾನವನು ಮಾಡಬೇಕಾದ ಕರ್ತವ್ಯವು ಪ್ರಾರ್ಥನೆ, ಉಪವಾಸ ಹಾಗೂ ನಾನಾ ಬಗೆಯ ಪೂಜೆಗಳಿಂದ ಪರಮದೈವದ ಕೃಪೆಯನ್ನು ಪಡೆಯಲು ಪ್ರಯತ್ನಪಡುವುದೇ ಆಗಿತ್ತು. ಆ ಕಾರಣ, ದೇವಾಲಯವು ಸಾಮಾಜಿಕ ಹಾಗೂ ಧಾರ್ಮಿಕ ಜೀವನದ ಕೇಂದ್ರವಾಯಿತು. ದೇವಾಲಯಗಳನ್ನು ಕಟ್ಟಲೂ ಇಷ್ಟಲಿಂಗದ ಬದಲು ದೇವತೆಗಳನ್ನು ಪೂಜಿಸಲೂ ವೀರಶೈವರು ಪ್ರೋತ್ಸಾಹ ನೀಡದಿದ್ದರೂ ಶೈವ ಸರ್ವದೇವತಾ ಪುರಾಣಗಳ ವಿವಿಧ ದೇವರುಗಳಿಗೆ ತಮ್ಮದೇ ಆದ ದೇವಾಲಯಗಳನ್ನು ಕಟ್ಟಿಸುವುದಕ್ಕೂ ಹಿಂಜರಿಯಲಿಲ್ಲ. ಈ ಭಕ್ತಿಪಂಥದ ಉಪದೇಶ ಹಾಗೂ ಪ್ರಚಾರ ನಿರಂತರವಾಗಿ ನಡೆಯತೊಡಗಿತು. ವೀರಶೈವರು ಅಂತೆಯೆ ವೈಷ್ಣವರು, ಜೈನರೂ ಸಹಿತ ವಾದ್ಯಗಳಿಗೆ ಅಳವಡಿಸಿ ಗಾನಮಾಡುವುದಕ್ಕಾಗಿ ಜನಾದರಣೀಯವಾದ ಧಾಟಿಗಳಲ್ಲಿ ಹಾಡುಗಳನ್ನು ರಚಿಸಿದರು. ಈ ಭಕ್ತಿಗೀತಗಳನ್ನು ಹಾಡುತ್ತ ಜನಸಾಮಾನ್ಯರ ಮನಸ್ಸನ್ನು ಎಚ್ಚರಿಸುತ್ತ ಚಾರಣಗಾಯಕರು ಇಡೀ ಕರ್ಣಾಟಕದಲ್ಲೆಲ್ಲ ಸಂಚಾರಮಾಡಿದರು. ಒಂದು ವಿಸ್ತಾರವಾದ ಸಾಮ್ರಾಜ್ಯವನ್ನು ಕಟ್ಟಿದ ಸಂಗತಿಯೇ ಆ ಕಾಲದ ಸಾಹಸಕಾರ್ಯಶಕ್ತಿಗೆ ಸಾಕ್ಷಿಯಾಗಿದೆ.

## ವರ್ಗೀಕರಣ

ಕನ್ನಡ ಸಾಹಿತ್ಯದ ಚರಿತ್ರಕಾರರಲ್ಲಿ ಅದರ ವಸ್ತುವನ್ನು ಜೈನ, ವೀರಶೈವ ಮತ್ತು ಬ್ರಾಹ್ಮಣ ಎಂಬ ಮೂರು ಮುಖ್ಯವಾದ ಧರ್ಮಗಳ ಆಧಾರಗಳ ಮೇಲೆ ವಿಂಗಡಿಕೆ ಮಾಡುವುದು ವಾಡಿಕೆ.

ಈ ವರ್ಗೀಕರಣಕ್ಕೆ ತನ್ನದೇ ಆದ ಅನುಕೂಲತೆಗಳಿವೆ. ಆದರೆ ಕಥಾವಸ್ತುವನ್ನೇ ಆಧರಿಸಿದ ವಿಂಗಡಣೆಗೆ ಪ್ರಯತ್ನಿಸುವುದೊಳ್ಳಿತು. ಕವಿಗಳ ವಿವಿಧ ಕಾವ್ಯವಸ್ತುಗಳ ಪ್ರಮುಖ ಆಕರಗಳೆಂದರೆ ಜೈನ ಮಹಾಕಾವ್ಯಗಳು, ಕಥೆಗಳು, ತಮಿಳು ಶೈವರಾದ ಅರುವತ್ತುಮೂವರು ಪುರಾತನರ ಜೀವನ ಚರಿತ್ರೆಗಳು, ಶಿವಪುರಾಣಗಳು ಮತ್ತು ಬ್ರಾಹ್ಮಣ ಮಹಾಕಾವ್ಯಗಳು ಹಾಗೂ ಇತರ ಐತಿಹ್ಯಗಳು. ಬಹುಮಟ್ಟಿಗೆ ಸಾಹಿತ್ಯವೆಲ್ಲ ಈ ಮೂರು ಪ್ರಮುಖ ಪಂಗಡಗಳಲ್ಲಿ ಅಳವಟ್ಟಿದೆ.

ಈ ಮೂರು ಪಂಗಡಗಳಲ್ಲಿ ಯಾವ ಒಂದು ಪಂಗಡಕ್ಕೇ ಆಗಲಿ ಸೇರಿದ ಯಾವ ಕವಿಯೂ ಕೆಲವು ತಾಂತ್ರಿಕ ವ್ಯಾವಹಾರಿಕ ಕೃತಿಗಳನ್ನು ಬಿಟ್ಟು, ತನ್ನ ಧರ್ಮಕ್ಕೆ ಸಂಬಂಧಿಸಿದ ಏನನ್ನೂ ಎಂದೂ ಬರೆಯಲು ಪ್ರಯತ್ನಿಸಲಿಲ್ಲ ಎಂಬುದು ಗಮನಾರ್ಹವಾದುದು. ಪ್ರಸ್ತುತ ಪುನರ್ವಿಮರ್ಶೆಯ ಕಾಲದಲ್ಲಿ ವೀರಶೈವ ಧರ್ಮಕ್ಕಾಗಿ ಹೋರಾಡಿದ ಇಬ್ಬರು ಪ್ರಮುಖ ವೀರರಾದ ಚಾಮರಸ ಮತ್ತು ಸುರಂಗರು ತಮ್ಮ ಮನೋಧರ್ಮವನ್ನು ಬಹು ತೀಕ್ಷ್ಣವಾಗಿ ವ್ಯಕ್ತಪಡಿಸಿದ್ದಾರೆ. ಶಿವನ ಮಹಿಮೆಯನ್ನು ಕೀರ್ತಿಸಲು ತನ್ನ ನಾಲಗೆಯನ್ನು ಮಾರಿರುವುದಾಗಿ ಸುರಂಗನು ತಿಳಿಸಿದನು. ಚಾಮರಸನಾದರೊ ಶಿವಶರಣರ ಕಥೆಗಳನ್ನು ಬಿಟ್ಟು ಮಿಕ್ಕವರ ಕಥೆ ಜನನಮರಣಗಳ ಕತ್ತಲಲ್ಲಿ ತೊಳಲಾಡಿ ಕುದಿಯುವ ಕರ್ಮಿಗಳ ಕಥೆಯೆಂದೂ ಅಂತಹ ಕಥೆಗಳು ಕಾಲವನ್ನು ಯೋಗ್ಯವಾಗಿ ಕಳೆಯಲರಿಯದ ಕೇವಲ ಕುಜನರು ಕೇಳುವ ಕಥೆಗಳೆಂದೂ ಸಾಧಿಸಿದನು. ಈ ಮನೋಭಾವವನ್ನು ಇಷ್ಟೊಂದು ಕಾಲ ಗತಿಸಿದ ಮೇಲೆ ಈಗ ನೋಡುವಲ್ಲಿ ಅದು ಎರಡು ಅಪೇಕ್ಷಣೀಯವಾದ ವೈಲಕ್ಷಣ್ಯಗಳಿಗಾಗಿ ಶ್ಲಾಘ್ಯವೆನಿಸಿದೆ : ಬ್ರಾಹ್ಮಣಿಕ ಮಹಾಕಾವ್ಯಗಳನ್ನು ಹಾಗೂ ಸಂಗತಿಗಳನ್ನು ಕುರಿತು ವೀರಶೈವ ಕವಿಗಳು ಬರೆಯದಂತೆ ತಡೆಯೊಡ್ಡಿತು. ಅಲ್ಲದೆ ಅವರ ಕಥೆಗಳು ಪರಿಮಿತವಾದುದರಿಂದಲೋ ಏನೋ ಪುರಾತನರ ಜೊತೆಗೆ ನೂತನ ಹಾಗೂ ಸಮಕಾಲೀನ ಶರಣರ ಚಾರಿತ್ರಕಥೆಗಳನ್ನು ಹೇಳುವಂತೆ ಒತ್ತಾಯಪಡಿಸಿತು. ಇದರಿಂದ ಓದುಗರ ಅಭ್ಯಾಸಕ್ಕೆ ಹೊಸ ಸಾಮಗ್ರಿಯನ್ನು ನೀಡಿದಂತಾಯಿತು.

ಈ ಮೂರು ವರ್ಗಗಳಿಗೆ ಸೇರಿದ ಕೃತಿಗಳ ಜೊತೆಗೆ ಲೌಕಿಕ ಶಾಸ್ತ್ರಗಳು, ವ್ಯಾಖ್ಯಾನಗಳು ಹಾಗೂ ಅರ್ಧ ಚಾರಿತ್ರಿಕ ಕೃತಿಗಳು—ಇವುಗಳಿಗೆ ಸಂಬಂಧಿಸಿದ ಸಾಹಿತ್ಯ ಕೆಲವಿವೆ.

ಅವುಗಳನ್ನು ನಾವು ಕಾಲಾನುಕ್ರಮಕ್ಕೆ ಅನುಗುಣವಾಗಿ ಉಚಿತ ಕ್ರಮದಲ್ಲಿ ಇನ್ನು ವಿವರಿಸೋಣ.

**ತೀರ್ಥಂಕರ ಚರಿತೆಗಳು**

ಮೊದಮೊದಲ ಕನ್ನಡ ಜೈನ ಕವಿಗಳಿಗೆ ತಾವು ಮೆಚ್ಚಿದ ತೀರ್ಥಂಕರನೊಬ್ಬನ ಜೀವನವನ್ನು ಕುರಿತು ಕಾವ್ಯರಚನೆ ಮಾಡುವುದು ವಾಡಿಕೆಯಾಗಿತ್ತು. ಪಂಪನು ತನ್ನ 'ಆದಿಪುರಾಣ' ವನ್ನು ರಚಿಸಿ ಅತ್ಯುತ್ತಮವಾದ ಮಾದರಿಯೊಂದನ್ನು ಅವರ ಮುಂದಿಟ್ಟಿದ್ದನು. ವಿಜಯನಗರದ ಸ್ಥಾಪನೆಯಾದೊಡನೆ ಬಾಹುಬಲಿ (ಕ್ರಿ.ಶ. 1352) ಮತ್ತು ಮಧುರ (ಕ್ರಿ.ಶ. 1385) ಒಬ್ಬೊಬ್ಬರೂ 15ನೆಯ ತೀರ್ಥಂಕರನಾದ ಧರ್ಮನಾಥನ ಜೀವನವನ್ನು ಕುರಿತು ಸಾಂಪ್ರದಾಯಿಕ ಚಂಪೂ ಶೈಲಿಯಲ್ಲಿ ಒಂದೊಂದು ಕಾವ್ಯವನ್ನು ರಚಿಸಿರುವುದನ್ನು ಕಾಣುತ್ತೇವೆ. ಅವರಿಬ್ಬರೂ ಸಂಸ್ಕೃತದ ಹಾಗೂ ಕನ್ನಡದ ಬಳಕೆಯಲ್ಲಿ ಚತುರರಾದ ಪಂಡಿತರು ; ಜೈನರ 'ಮಾರ್ಗೀ' ಶೈಲಿಯ ಕಟ್ಟಕಡೆಯ ಪ್ರತಿನಿಧಿಗಳು. ಸಂಸ್ಕೃತ ಮತ್ತು ಅಪಭ್ರಂಶಗಳಲ್ಲಿ ಹಿಂದಿನ ಕವಿಗಳು ಹೇಳಿದ ಜೈನತೀರ್ಥಂಕರನ ಕಥೆಯನ್ನು ಈ ಕವಿಗಳು ಮಹಾಕಾವ್ಯ ಲಕ್ಷಣವಾದ ಹದಿನೆಂಟು ವಿಷಯಗಳ ದೀರ್ಘವಾದ ಹಾಗೂ ವಿಪುಲವಾದ ವರ್ಣನೆಗಳಿಂದ ಸಾವಕಾಶವಾದ ರೀತಿಯಲ್ಲಿ ವಿಸ್ತೃತಗೊಳಿಸಿದರು. ಈ ತನಕ ಬಾಹುಬಲಿಯ ಕಾವ್ಯದ ತಾಡೋಲೆಯ ಗ್ರಂಥದ ಒಂದೇ

ಒಂದು ಪ್ರತಿ ದೊರೆತಿತ್ತು. ಇತ್ತೀಚೆಗೆ ಆ ಗ್ರಂಥದ ಸಮಗ್ರ ಹಸ್ತಪ್ರತಿ ಬೆಳಕಿಗೆ ಬಂದಿರುವುದೊಂದು ಸಂತೋಷದ ವಿಷಯ. ಮಧುರನು ಬುಕ್ಕರಾಜನ ಮಗ ಹರಿಹರನ ಮಂತ್ರಿಯಾದ ಮುದ್ದದಂಡೇಶನ ಆಶ್ರಯ ಹೊಂದಿ ಆಸ್ಥಾನ ಕವಿಯಾಗಿದ್ದನು. ಆತನ ಕೃತಿಯ ನಾಲ್ಕೇ ನಾಲ್ಕು ಅಧ್ಯಾಯಗಳು ಈ ವರೆಗೆ ದೊರೆತಿವೆ. ಅವು ಆತನ ಪ್ರಜ್ಞಾಶಕ್ತಿಯೇನೆಂಬುದರ ಭಾವನೆಯನ್ನು ನೀಡಲು ಸಾಕು. ಕನ್ನಡ ಕವಿಗಳನೇಕರ ಕೃತಿಗಳಲ್ಲಿ ಸಾಮಾನ್ಯವಾಗಿ ಕಂಡುಬರುವಂತೆ ತನ್ನನ್ನೂ ತನ್ನ ಕವಿತೆಯನ್ನೂ ಹೊಗಳಿಕೊಳ್ಳುವ ಆತನ ಪೀಠಿಕಾಪದ್ಯಗಳು ಇಡೀ ಗ್ರಂಥದಲ್ಲಿ ಅತ್ಯುತ್ಕೃಷ್ಟವಾದವು. ಸಮಕಾಲೀನ ಜೀವನ ಹಾಗೂ ನಡೆನುಡಿಗಳಿಗೆ ಧಾರ್ಮಿಕ ಕಥನಕಾವ್ಯಗಳಲ್ಲಿ ಎಡೆಯಿಲ್ಲವಾದ ಕಾರಣ ಅವುಗಳ ಬಗೆಗೆ ನಮಗೆ ತಿಳಿದು ಬರುವ ಅಂಶಗಳು ಬಹಳ ಕಡಮೆ. ಕಣ್ಣಿಗೆ ಕಟ್ಟಿದಂತೆ ಸುಸ್ಪಷ್ಟವಾದ ಭಾಷೆಯಲ್ಲಿ ಪ್ರಕೃತಿದೃಶ್ಯವನ್ನು ವರ್ಣಿಸುವ ಸುಂದರವಾದ ಪದ್ಯಗಳು ಒಮ್ಮೊಮ್ಮೆ ಕಣ್ಣಿಗೆ ಬಿದ್ದಾಗ ಬೇಸರ ಕಳೆಯುತ್ತದೆ. ಕಥೆಯ ಸ್ವರೂಪವನ್ನು ಸೂಚಿಸಲು, ಕಾವ್ಯ ಅಸಮಗ್ರವಾಗಿರುವುದರಿಂದ, ಸಾಧ್ಯವಿಲ್ಲ. ಇತರ ತೀರ್ಥಂಕರರ ಜೀವನ ಚರಿತ್ರೆಗಳಿಗಿಂತ, ತೀರ ಭಿನ್ನವಾಗಿರಲಾರದೆಂಬ ಒಂದು ತೃಪ್ತಿಯಿಂದಿರಬಹುದು. ದೇವರಾಯನ ಮಂತ್ರಿಯಾದ ಲಕ್ಷ್ಮೀಧರನು ಪೋಷಕನಾಗಿದ್ದಾಗ ಕ್ರಿ.ಶ. 1410 ರಲ್ಲಿ ಹಂಪಿಯ ಕೃಷ್ಣದೇವಾಲಯದ ಬಳಿಯ ಒಂದು ಶಾಸನವನ್ನು ಅದೇ ಕವಿ ರಚಿಸಿದ್ದಾನೆ.

ನೇಮಿನಾಥನ ಕಥೆ ಅನೇಕ ಕನ್ನಡ ಕವಿಗಳಿಗೆ ಬಹು ಮೆಚ್ಚಿನ ಕಥಾವಸ್ತು. ಆದರೆ ಅದನ್ನು ದೇಸಿ ಛಂದಸ್ಸಿನಲ್ಲಿ ಮಂಗರಸನ (ಕ್ರಿ.ಶ. 1508) ಕಾಲದ ವರೆಗೆ ಹಾಡಿರಲಿಲ್ಲ. ಆತನ ಕೀರ್ತಿಯನ್ನುಳಿಸುವ ಕೃತಿಗಳು ಅನೇಕವಿವೆ. ನಿರರ್ಗಳ ಶೈಲಿ ಆತನದು. ಅನೇಕ ಸಂದರ್ಭಗಳಲ್ಲಿ ಅದನ್ನು ಸಫಲವಾದ ರೀತಿಯಲ್ಲಿ ಬಳಸಬಲ್ಲವನು. ಮೈಸೂರಿನ ಬಳಿ ಇರುವ ಪಿರಿಯಾಪಟ್ಟಣದ ದೊಡ್ಡಯ್ಯ ಕ್ರಿ.ಶ. 1550 ರಲ್ಲಿ ಚಂದ್ರಪ್ರಭ ಜಿನನ ಜೀವನವನ್ನು ಕುರಿತು ಒಂದು ಕಾವ್ಯವನ್ನು ರಚಿಸಿದನು. ಪದ್ಮಾಕರನು ವರ್ಧಮಾನನ ಮೇಲೆ ಒಂದು ಗ್ರಂಥವನ್ನು ರಚಿಸಿದನು. ಶಾಂತಿಕೀರ್ತಿ ಕ್ರಿ.ಶ. 1519 ರಲ್ಲಿ ಸಾಂಗತ್ಯದಲ್ಲಿ ಬರೆದ ' ಶಾಂತಿನಾಥ ಚರಿತೆ 'ಯೂ ಇದೆ.

ಆದರೆ ವಿಜಯನಗರ ಕಾಲದ ಜೈನಮಹಾಕಾವ್ಯ ಇನ್ನೂ ಬರಬೇಕಾಗಿತ್ತು. ಸುಮಾರು ಕ್ರಿ.ಶ.1557 ರಲ್ಲಿ ಭರತೇಶವೈಭವ ರತ್ನಾಕರವರ್ಣಿಯಿಂದ ರಚಿತವಾಯಿತು. ಅದು ಹತ್ತು ಸಾವಿರ ಪದ್ಯಗಳನ್ನುಳ್ಳ ಒಂದು ದೀರ್ಘಕಾವ್ಯ. ಕವಿ ಅದನ್ನು ಒಂಬತ್ತು ತಿಂಗಳಲ್ಲಿ ಪೂರ್ಣಮಾಡಬಲ್ಲವನಾದ. ಆತನ ಸರಳ ಹಾಗೂ ಸಹಜ ಶೈಲಿಯನ್ನು ಕಂಡ ಯಾರಿಗಾದರೂ ಆಶ್ಚರ್ಯವುಂಟಾಗುವುದು. ಆತನು ಪ್ರಥಮ ಜಿನೇಶನಾದ ಆದಿನಾಥನ ಮಗನಾದ ಭರತನ ಕಥೆಯನ್ನು ನಿರೂಪಿಸುತ್ತಾನೆ. ತನ್ನ ತಂದೆ ನಿರ್ವಾಣ ಹೊಂದಿದ ಮೇಲೆ ಭರತನು ಪ್ರಪಂಚದ ಏಕೈಕ ಚಕ್ರವರ್ತಿಯಾಗಬೇಕೆಂದು ಬಯಸಿದನು. ತನ್ನ ತಮ್ಮನಾದ ಬಾಹುಬಲಿಯೊಬ್ಬನನ್ನು ಬಿಟ್ಟು ಆತನು ತನ್ನ ಕಾಲದ ಎಲ್ಲ ರಾಜರನ್ನೂ ಗೆದ್ದು ತನ್ನ ಹೆಬ್ಬಯಕೆಯನ್ನು ಬಹುಮಟ್ಟಿಗೆ ಸಾಧಿಸಿದ್ದನು. ಆ ಮೇಲೆ ಸೋದರರಲ್ಲಿ ಕದನವುಂಟಾಯಿತು. ಬಾಹುಬಲಿ ಇಹಲೋಕದ ಸುಖ ಹಾಗೂ ಮಾನವನ ದುರಭಿಮಾನಗಳಿಗೆ ಹೇಸಿ ಎಲ್ಲವನ್ನೂ ತ್ಯಜಿಸಿ ಸಂನ್ಯಾಸಿಯಾದನು. ಸಕಲ ರಾಗಭಾವಗಳನ್ನು ನಿಗ್ರಹಿಸಿ ಕೇವಲಿಯಾದನು. ಚಾವುಂಡರಾಯನು ಶಿಲಾಕಾವ್ಯವೆನಿಸಿದ ಗೊಮ್ಮಟನ ಬೃಹನ್ಮೂರ್ತಿಯಲ್ಲಿ ಆತನನ್ನು ಅಮರನನ್ನಾಗಿ ಮಾಡಿದ್ದಾನೆ. ರತ್ನಾಕರನು ಆ ಶಿಲ್ಪಕಲೆಯನ್ನೇ ಮಾತಿನಲ್ಲಿ ಕಾಣಿಸಿದ್ದಾನೆ. ಎರಡೂ ವಿಶಾಲತೆ ಹಾಗೂ ಗಾಂಭೀರ್ಯದಲ್ಲಿ ಸಮಾನವಾದುವು. ಕವಿಯು ಈ ಕೃತಿಯಲ್ಲಿ ಭೋಗಯೋಗಗಳನ್ನು ಸಮನ್ವಯಗೊಳಿಸಲು ಯತ್ನಿಸಿದ್ದಾನೆ. ಪ್ರಾಪಂಚಿಕ ಸುಖಭೋಗಗಳ ತುಂಬುಬಾಳಿನ ಬಳಿಕ ಬರುವ ಯೋಗವು ಬಹು ನಿತ್ಯವಾದುದು, ಅರ್ಥವತ್ತಾದುದು ಎಂದು ತೋರಿಸಿಕೊಡುವಲ್ಲಿ ಯಶಸ್ವಿಯಾಗಿದ್ದಾನೆ. ಈ ಕೃತಿಯಲ್ಲಿ ಕಾವ್ಯ ಸೌಂದರ್ಯದ ಅನೇಕ ಉತ್ತುಂಗ ಶಿಖರಗಳಿವೆ : ನೃತ್ಯದ ರಾಗ ಭಾವರಂಜಿತವಾದ ವರ್ಣನೆಗಳಿವೆ ; ಸಂಗೀತದ ಸೌಖ್ಯವಿದೆ. ಈ ಜಗತ್ತು ನೀಡಲಿರುವ

ಸಂಸಾರಜೀವನದ ಚಿತ್ರ ಹಾಗೂ ಸುಖ ಸಂತೋಷಗಳಿವೆ. ಶೈಲಿ ಸರಳ, ಸುಂದರ ಮತ್ತು ಸುಸಂಸ್ಕೃತ; ಅತಿ ದೂರದಿಂದ ಕೇಳಿಬರುವ ಗಾಯನದಂತೆ ಮನೋಮೋಹಕ,

ಹಾಗೆಯೆ ಸಾಳ್ವನ (ಸು. 1550) ಭಾರತವನ್ನಿಲ್ಲಿ ಹೆಸರಿಸಬಹುದು. ಅದು ಬಹಳ ಹಿಂದಿನ ಕಾಲದಿಂದಲೂ ಜೈನಕವಿಗಳು ನೇಮಿಜಿನನ ಕಥೆಯೊಡನೆ ಹೆಣೆದ ಮಹಾಭಾರತದ ಜೈನಭಾಷಾಂತರ.

**ಕಥೆಗಳು**

ನಯಸೇನನ (ಕ್ರಿ.ಶ. 1112) ಕಾಲದಿಂದಲೂ ಕನ್ನಡ ಜೈನಕವಿಗಳು ತಮ್ಮ ಸಧರ್ಮೀಯರಿಗೆ ಆತ್ಮ ಸಾಧನೆಯ ದಾರಿ ತೋರಿಸುವ ಸಲುವಾಗಿ ಕಥೆ ಹೇಳುವುದರಲ್ಲಿ ನಿರತರಾದರು. ಆ ಕಥೆಗಳ ಗುಣ ದೃಷ್ಟಾಂತಪೂರ್ವಕವಾದ ವಿವರಣೆ. ಜೈನಧರ್ಮದ ಅಹಿಂಸೆ ಅಥವಾ ಅಸ್ತೇಯದಂತಹ ನಿರ್ದಿಷ್ಟ ಬೋಧನೆಯನ್ನು ಕಟ್ಟುನಿಟ್ಟಾಗಿ ಅನುಸರಿಸಿದಾಗ ಅದು ನಿಜವಾಗಿಯೂ ಗಣ್ಯತೆಯನ್ನು ತಂದುಕೊಟ್ಟು ಮನುಷ್ಯನನ್ನು ಮೇಲ್ಮಟ್ಟಕ್ಕೆ ಒಯ್ಯುತ್ತದೆ. ಈ ನೀತಿಗಳನ್ನು ಮನಸ್ಸಿಗೆ ಹಿಡಿಸುವಂತೆ ಉಪದೇಶಿಸುವುದೇ ಈ ಕಥೆಗಳ ಮೂಲೋದ್ದೇಶ. ಆದರೆ ಅವುಗಳಲ್ಲಿ ಕೆಲವು ಕಥೆಗಳು ಸೊಗಸಾದ ಸಾಹಿತ್ಯಸತ್ವವನ್ನು ಪ್ರದರ್ಶಿಸಿದವು. 'ಜೀವಂಧರಚರಿತೆ' ಅಂಥ ಒಂದು ಕಥೆ. ಸುಮಾರು ಮುಕ್ಕಾಲು ಶತಮಾನದ ಅಂತರದಲ್ಲಿ ಕ್ರಿ.ಶ. 1424 ರಿಂದ 1500 ತನಕ ಮೂವರು ಕವಿಗಳು ಈ ಕಥೆಯನ್ನು ಬಳಸಿಕೊಂಡಿರುವುದನ್ನು ಕಾಣುತ್ತೇವೆ. ಅನೇಕ ಸಂಸ್ಕೃತ ಹಾಗೂ ತಮಿಳು ಕವಿಗಳು ನಿರೂಪಿಸಿರುವುದರಿಂದ ಕಥಾವಸ್ತುವೇ ಬಹಳ ಹಳೆಯದು. ಕ್ರಿ ಶ. 1424ರಲ್ಲಿ ರಚಿತವಾದ ಭಾಸ್ಕರನ ಜೀವಂಧರ ಚರಿತೆ ಈ ಸಾಹಿತ್ಯಪ್ರಕಾರದ ಒಂದು ಸೊಗಸಾದ ಮಾದರಿ. ಅದರ ಕಥೆ ರಾಜಪುರದ ರಾಜನಾದ ಸತ್ಯಂಧರ, ಆತನ ರಾಣಿ ವಿಜಯ—ಇವರ ಮಗನಾದ ಜೀವಂಧರನ ರಮಣೀಯವಾದ ಸಾಹಸಗಳನ್ನು ನಿರೂಪಿಸುತ್ತದೆ. ಕಾಷ್ಠಾಂಗಾರನು ಕಥೆಯ ಖಳಪಾತ್ರ. ಆತನ ಸ್ವಭಾವ ಕಥೆಯಲ್ಲಿ ಪರಿಣಾಮಕಾರಿಯಾಗಿ ಚಿತ್ರಿತವಾಗಿದೆ. ನಾಯಕನು ಹುಟ್ಟಿದ ಸಂಕಟಕಾರಿಯಾದ ಸಂದರ್ಭ, ಆತನು ದಾರಿಯಲ್ಲಿ ಒಡ್ಡಿನಿಂತ ಅಡ್ಡಿಗಳನ್ನೆಲ್ಲ ಗೆದ್ದ ಬಗೆ, ತಾನು ಏನು ಹೇಳಿದರೂ ಮುಂದೆ ಮುಂದೆ ತನ್ನನ್ನು ಒಯ್ಯುವ ಆತನ ಹಿಂದಿನ ಜನ್ಮದ ಪುಣ್ಯಫಲ, ಶತ್ರುಗಳ ದುಷ್ಟ ತಂತ್ರಗಳು, ಆತನ ಅನೇಕ ಸಾಹಸ ಕೃತ್ಯಗಳು ಹಾಗೂ ವಿವಾಹಗಳು, ಕಡೆಗೆ ಶತ್ರುವಾದ ಕಾಷ್ಠಾಂಗಾರನನ್ನು ಆತನು ವಿನಾಶಗೊಳಿಸಿದ್ದು— ಇವೆಲ್ಲವೂ ಸುಸ್ಪಷ್ಟವಾಗಿ ವರ್ಣಿತವಾಗಿವೆ. ಎಲ್ಲ ಸಾಹಸ ಕಾರ್ಯಗಳೂ ಅದೇ ನಾಯಕನಿಗೆ ಸಂಬಂಧ ಪಟ್ಟುವು ಎಂಬುದೊಂದನ್ನು ಬಿಟ್ಟರೆ ಸುಸಂಘಟಿತವಾಗಿ ಚೆನ್ನಾಗಿ ಹೆಣೆದ ಕಥಾ ಸಂವಿಧಾನವೇನೂ ಇದರಲ್ಲಿ ಕಂಡುಬರುವುದಿಲ್ಲ. ಆದ್ದರಿಂದ ಉಪಕಥೆಯ ಲಕ್ಷಣವುಳ್ಳದ್ದು. ಆದರೂ ಆಸಕ್ತಿಯನ್ನು ಮೂಡಿಸುವುದು. ಶೈಲಿಯು ಕೂಡ ವಿಚಿತ್ರವಾಗಿದೆ; ಯಾವ ಪಾಂಡಿತ್ಯವನ್ನೂ ತೋರಿಸದು. ಅದರಲ್ಲಿ ಕುಮಾರವ್ಯಾಸನ ಪ್ರಭಾವದ ಸ್ಪಷ್ಟವಾದ ಕುರುಹುಗಳಿವೆ. ತೆರಕಣಾಂಬಿಯ ಬೊಮ್ಮರಸನ 'ಜೀವಂಧರ ಸಾಂಗತ್ಯ' (ಸು. 1485 ಎನ್ನುವರು) ಮತ್ತು ಕೋಟೀಶ್ವರನ (ಸು: 1500) 'ಜೀವಂಧರ ಷಟ್ಪದಿ' ಕಾವ್ಯಗಳು ಅದೇ ಕಥೆಯನ್ನೂ ಕುರಿತವು.

ಉಳಿದ ಕಥೆಗಳಲ್ಲಿ ಕಲ್ಯಾಣಕೀರ್ತಿಯ (1439) 'ಜ್ಞಾನಚಂದ್ರಾಭ್ಯುದಯ' ಮತ್ತು ಕಾಮನ ಕಥೆ ಗಮನಾರ್ಹವಾದುವು. ಮೇಲೆ ಹೇಳಿದ ಬೊಮ್ಮರಸನ 'ಸನತ್ಕುಮಾರನ ಕಥೆ' ಮತ್ತು ಬಾಹುಬಲಿಯ (ಸು. 1560) 'ನಾಗಕುಮಾರನ ಕಥೆ'ಗಳು ಹಳೆಯಮಾದರಿಗಳನ್ನು ಅನುಸರಿಸಿದವು. ಕಥೆಯ ದೃಷ್ಟಿಯಿಂದ ನೋಡಿದಾಗ ಹಿಂದೆ ಹೇಳಿದ ಮಂಗರಸನು ಷಟ್ಪದಿಗಳಲ್ಲಿ ಎರಡನ್ನೂ ಸಾಂಗತ್ಯದಲ್ಲಿ ಮತ್ತೆರಡನ್ನೂ ಹೇಳಿರುವ ನಾಲ್ಕು ಬೇರೆ ಬೇರೆ ಕಥೆಗಳ ಹಾಗೆ ಅವು ಅಷ್ಟಾಗಿ ಸೊಗಸಾದುವೂ ಅಲ್ಲ. ಶ್ರುತಕೀರ್ತಿಯ (ಸು. 1567)

'ವಿಜಯಕುಮಾರಿಯ ಕಥೆ' ಈ ಮಾದರಿಯ ಸಾಹಿತ್ಯ ಪ್ರಕಾರದ ಪರಿಸಮಾಪ್ತಿಯನ್ನು ಗುರುತಿಸುತ್ತದೆ. ಇವುಗಳಲ್ಲೆಲ್ಲ ತಮಗೆ ತೋರಿದ ಬದಲಾವಣೆಗಳನ್ನು ಮಾಡಿಕೊಳ್ಳಲು ಕವಿಗಳಿಗೆ ಬಹಳ ಸ್ವಾತಂತ್ರ್ಯ ಸಿಕ್ಕಿತ್ತು. ಹಾಗಿರುವಾಗ ಅವುಗಳ ವಿವರವಾದ ಅಭ್ಯಾಸದಿಂದ ಸಮಕಾಲೀನ ಸಾಮಾಜಿಕ ಹಾಗೂ ಧಾರ್ಮಿಕ ಜೀವನದ ಅಮೂಲ್ಯ ಅಂಶಗಳು ಪ್ರಕಟವಾಗಬಹುದು.

## ವ್ಯಾಖ್ಯಾನಗಳು

ಸಂಸ್ಕೃತ ಅಥವಾ ತಮಿಳಿನಲ್ಲಿ ದೊರೆಯುವ ಹೇರಳವಾದ ವ್ಯಾಖ್ಯಾನ ಸಾಹಿತ್ಯದೊಡನೆ ಹೋಲಿಸಿದರೆ ಕನ್ನಡದಲ್ಲಿ ಆ ಬಗೆಯ ಸಾಹಿತ್ಯ ವಿರಳವೆಂದೇ ಹೇಳಬಹುದು. ಕನ್ನಡ ಮಹಾ ಕಾವ್ಯಗಳ ಟೀಕೆಗಳ ಆವಶ್ಯಕತೆ ಬಹಳವಾಗಿದ್ದರೂ ಈಗ ಅವುಗಳಲ್ಲಿ ಉಳಿದುಕೊಂಡಿರುವ ಕೆಲವೂ ಸಂಸ್ಕೃತ ಅಥವಾ ಪ್ರಾಕೃತ ಗ್ರಂಥಗಳನ್ನು ಕುರಿತವು. ಮಹಾ ಕಾವ್ಯಗಳ ಅಭ್ಯಾಸದ ಬಳಕೆ ತಪ್ಪಿಹೋಯಿತೆಂದೂ ವ್ಯಾಪಕವಾಗಿ ಲಕ್ಷ್ಯಕ್ಕೆ ಬಾರದೆ ಅವುಗಳನ್ನು ಜನಪ್ರಿಯಗೊಳಿಸುವ ಯಾವ ಪ್ರಯತ್ನವೂ ನಡೆಯಲಿಲ್ಲ ವೆಂದೂ ನಾವು ಊಹಿಸಿದ ಹೊರತು ಕನ್ನಡದಲ್ಲಿ ವ್ಯಾಖ್ಯಾನ ಸಾಹಿತ್ಯದ ಅಭಾವ ಏಕೆ ಉಂಟಾಯಿತೆಂದು ವಿವರಿಸುವುದು ಕಷ್ಟ. ಲಭ್ಯವಾದ ಕೆಲವು ವ್ಯಾಖ್ಯಾನಗಳು ವಿಜಯನಗರದ ಮೊದಮೊದಲ ಕಾಲಕ್ಕೆ ಸೇರಿದವು. ಕ್ರಿ.ಶ. 1359 ರಲ್ಲಿ ಕೇಶವವರ್ಣಿಯು ಬಹುಶಃ ಪ್ರಾಕೃತದಲ್ಲಿ ನೇಮಿಚಂದ್ರನು ಟೀಕೆಯನ್ನು ಬರೆದ 'ಗೊಮ್ಮಟಸಾರ'ದ ಮೇಲೆಯೂ ಅಮಿತಗತಿಯ ' ಶ್ರಾವಕಾಚಾರ 'ದ ಮೇಲೆಯೂ ವಿವರಣಾತ್ಮಕ ಟೀಕೆಯನ್ನು ಬರೆದನು. ಅಭಿನವಸೂತ್ರ ಮುನಿ (ಸು. 1365) ಮಲ್ಲಿಸೇನ ಕವಿವಿರಚಿತ ' ಸಜ್ಜನಚಿತ್ತ ವಲ್ಲಭ' ವನ್ನು ಕುರಿತು ಕನ್ನಡದಲ್ಲಿ ವ್ಯಾಖ್ಯಾನವನ್ನು ಬರೆದಿರಬೇಕೆನ್ನುತ್ತಾರೆ. ವಿದ್ಯಾನಾಥನು ಕ್ರಿ.ಶ. 1455 ರಲ್ಲಿ ತನ್ನ ಸಂಸ್ಕೃತಗ್ರಂಥವಾದ 'ಪ್ರಾಯಶ್ಚಿತ್ತ 'ದ ಮೇಲೆ ತಾನೆ ಟೀಕೆಯನ್ನು ರಚಿಸಿದನು. ಸು. 1500ರಲ್ಲಿ ' ಧರ್ಮಶರ್ಮಾಭ್ಯುದಯ 'ದ ಟೀಕೆಯನ್ನು ಬರೆದ ಯಶಃಕೀರ್ತಿಯ ಹೆಸರನ್ನು ಇಲ್ಲಿ ಸೂಚಿಸಬಹುದೆಂದು ಕಾಣುತ್ತದೆ.

## ಮಿಶ್ರ

ಈ ವಿಭಾಗದಲ್ಲಿ ಯಾವ ನಿರ್ದಿಷ್ಟವಾದ ಕಥನಮೌಲ್ಯವನ್ನೂ ಹೊಂದದ, ಕೇವಲ ತತ್ತ್ವ ಮತ್ತು ಜೈನ ನೀತಿನಿಯಮಗಳನ್ನು ಪ್ರತಿಪಾದಿಸುವುದರಲ್ಲಿ ನಿರತವಾದ ಎಲ್ಲ ಗ್ರಂಥಗಳನ್ನೂ ತೀರ್ಥಂಕರರನ್ನು ಕುರಿತ ಸ್ತೋತ್ರಗಳನ್ನೂ ಸೇರಿಸಬಹುದು.

ಆಯತವರ್ಮನು ಸು. 1400ರಲ್ಲಿ ರಚಿಸಿದ ತನ್ನ ' ರತ್ನ ಕರಂಡಕ ' ದಲ್ಲಿ ಜೈನಧರ್ಮದ ' ತ್ರಿರತ್ನ ' ತತ್ತ್ವವನ್ನು ಕುರಿತು ಚಂಪೂಶೈಲಿಯಲ್ಲಿ ವಿವೇಚಿಸಿದ್ದಾನೆ. ಆತನು ತನ್ನ ಗ್ರಂಥವನ್ನು ಸಮಂತಭದ್ರ ಬರೆದನೆಂದು ಹೇಳುವ ಅದೇ ಹೆಸರಿನ ಒಂದು ಸಂಸ್ಕೃತ ಗ್ರಂಥದ ಆಧಾರದ ಮೇಲೆ ರಚಿಸಿರುವಂತೆ ತೋರುತ್ತದೆ. ಚಂದ್ರಕೀರ್ತಿ (1400) ತನ್ನ ' ಪರಮಾಗಮಸಾರ ' ವನ್ನು 132 ಪದ್ಯಗಳಲ್ಲಿ ರಚಿಸಿದನು. ಆತನು ಅದರಲ್ಲಿ ಐಹಿಕಜೀವನದ ಅಶಾಶ್ವತತೆಯನ್ನೂ ಎಲ್ಲ ಮಾನವರೂ ಸಾಧಿಸಬೇಕಾದ ಉತ್ತಮ ಆದರ್ಶವನ್ನೂ ಪ್ರಸ್ತಾವಿಸಿದ್ದಾನೆ. ಕಲ್ಯಾಣಕೀರ್ತಿ ಮತ್ತು ವಿಜಯಣ್ಣರ ಎರಡು 'ಅನುಪ್ರೇಕ್ಷೆಗಳು' ಜೈನಧರ್ಮದ ಹನ್ನೆರಡು ಮರುನೆನಪುಗಳನ್ನು ಪ್ರತಿಪಾದಿಸುತ್ತವೆ. ನೇಮಣ್ಣನ (1559) ' ಜ್ಞಾನ ಭಾಸ್ಕರ ಚರಿತೆ ' ಶಾಸ್ತ್ರಾಧ್ಯಯನದಿಂದಲೂ ಧ್ಯಾನದಿಂದಲೂ ಜ್ಞಾನತತ್ತ್ವವನ್ನು ಸಾಧಿಸುವ ಮಾರ್ಗ ವನ್ನು ಕುರಿತದ್ದು. ಮಧುರನು ಗೊಮ್ಮಟನನ್ನು ಕುರಿತು ಮಾಡಿದ ಎಂಟು ಪದ್ಯಗಳನ್ನುಳ್ಳ ಸ್ತೋತ್ರ ಅಥವಾ ಪ್ರಾರ್ಥನೆಯೂ ಕಲ್ಯಾಣ ಕೀರ್ತಿಯ ' ಜೈನಸ್ತುತಿ ' ಯೂ ಭಕ್ತಿ ಸ್ವರೂಪವನ್ನುಳ್ಳವು.

**ವೀರಶೈವ ಪುರಾಣಗಳು**

ವಿಜಯನಗರದ ಸ್ಥಾಪನೆಯ ಬಳಿಕ ದಕ್ಷಿಣ ಕರ್ಣಾಟಕದಲ್ಲಿ ವೀರಶೈವರ ಎರಡು ಕಾರ್ಯಕೇಂದ್ರಗಳು ಕಂಡುಬರುತ್ತವೆ. ಜಕ್ಕಣಾರ್ಯ ಮತ್ತು ಲಕ್ಕಣ್ಣ ದಂಡೇಶರಂತಹ ಕೆಲವು ಸೇನಾಧಿಪತಿಗಳ ಪೋಷಣೆಯಲ್ಲಿ ಒಂದು ಕೇಂದ್ರ ವಿಜಯನಗರದಲ್ಲಿಯೇ ಸ್ಥಾಪಿತವಾಯಿತು. ಮತ್ತೊಂದು ತೋಂಟದ ಸಿದ್ಧಲಿಂಗ ಯತಿಗಳ ಆಧ್ಯಾತ್ಮಿಕ ಮಾರ್ಗದರ್ಶನದಲ್ಲಿ ನಾಗಿಣೀನದಿಯ ತೀರದ ಕುಣಿಗಲಿನಲ್ಲಿ ಸ್ಥಾಪಿತವಾಯಿತು. ಈ ಎರಡೂ ಕೇಂದ್ರಗಳು ಅಧಿಕಾರಯುತವಾದುವು. ಇವು ವೀರಶೈವ ಸಮಾಜದ ಮೇಲೆ ಪ್ರಬಲವಾದ ಪ್ರಭಾವವನ್ನು ಬೀರಿದವು. ಎರಡೂ, ಜನರಿಗೆ ಶಿಕ್ಷಣವನ್ನು ಕೊಟ್ಟು ಧರ್ಮಪ್ರಸಾರದ ಸಲುವಾಗಿ ಅವರನ್ನು ಇತರ ಸ್ಥಳಗಳಿಗೆ ಕಳುಹಿಸುವ ಕಾರ್ಯವನ್ನು ಕೈಗೊಂಡವು. ಅವರಿಂದ ಧರ್ಮ ಹರಡಿ ಅನೇಕ ಸಣ್ಣ ಪುಟ್ಟ ಮಠಗಳು ಕರ್ಣಾಟಕದಲ್ಲೆಲ್ಲಾ ಸ್ಥಾಪಿತವಾಗುವಂತಾಯಿತು. ವೀರಶೈವ ಜನಾಂಗವು ತನಗುಂಟಾಗಿದ್ದ ನಷ್ಟವನ್ನು ಸರಿಪಡಿಸಿಕೊಳ್ಳಲು ಹಾಗೂ ಮತ್ತೊಮ್ಮೆ ಜನಸಾಮಾನ್ಯರನ್ನು ತನ್ನ ಕೈಗೆ ತೆಗೆದುಕೊಳ್ಳಲು ತೀವ್ರವಾಗಿ ಪ್ರಯತ್ನ ಮಾಡುತ್ತಿತ್ತು. ಹೀಗೆ ವೀರಶೈವರ ಎರಡನೆಯ ಚಳವಳಿ ಅಸ್ತಿತ್ವಕ್ಕೆ ಬಂದಿತು. ಇದು ಮೊದಲನೆಯದರಂತೆ ಗಣನೀಯವಾದುದಲ್ಲ ಅಥವಾ ಕ್ರಾಂತಿಕಾರಿಯಾದುದಲ್ಲ. ಆದರೂ ಅದೊಂದು ಪುನರುತ್ಥಾನ. ಹಿಂದಿನ ಧಾರ್ಮಿಕಸಾಹಿತ್ಯದ ಸಂಗ್ರಹ, ಕ್ರೋಡೀಕರಣ ಹಾಗೂ ಸಂರಕ್ಷಣೆ ತೀವ್ರಗತಿಯಲ್ಲಿ ಸಾಗಿತು. ಚೆಲ್ಲಾಪಿಲ್ಲಿಯಾದ ತುಣುಕುಗಳನ್ನು ಸರಗೊಳಿಸಿದರು. ಕ್ಲಿಷ್ಟತರವಾದ ಗ್ರಂಥಗಳಿಗೆ ವ್ಯಾಖ್ಯಾನಗಳನ್ನು ರಚಿಸಿದರು. ವಚನಸಾಹಿತ್ಯವು ತಾತ್ಕಾಲಿಕವಾದ ಪುನಶ್ಚೈತನ್ಯದ ಅನುಭವವನ್ನು ಪಡೆಯಿತು; ವಚನಗಳ ಸಂಕಲನಗಳೂ ಆದವು. ಒಟ್ಟಿನಲ್ಲಿ ಸಮಾಜ ಬಹು ಕಾರ್ಯ ಚಟುವಟಿಕೆಯಿಂದ ಕೂಡಿತ್ತು. ಕ್ರಿ.ಶ. 1336 ರಿಂದ 1565ರ ವರೆಗೆ ಹುಟ್ಟಿದ ವಿಪುಲವಾದ ಸಾಹಿತ್ಯ ಸಮೂಹವನ್ನು ನೋಡಿದಲ್ಲಿ ಈ ಕಾರ್ಯಚಟುವಟಿಕೆಯ ಮುದ್ರೆ ಎಂತಹದು ಎಂಬುದು ಗೋಚರವಾಗುತ್ತದೆ.

ವೀರಶೈವರ ಪೌರಾಣಿಕ ಸಾಹಿತ್ಯವನ್ನು ಐದು ಪ್ರಧಾನ ವರ್ಗಗಳಾಗಿ ವಿಂಗಡಿಸಬಹುದು : (ಅ) ಶೈವ ಪುರಾಣಗಳಿಂದ ತೆಗೆದುಕೊಂಡ ಕಥೆಗಳು, (ಆ) ಅರುವತ್ತುಮೂರು ಪುರಾತನರ ಆಧ್ಯಾತ್ಮಿಕ ಸಾಧನೆಗಳನ್ನು ವರ್ಣಿಸುವ ಕಥೆಗಳು, (ಇ) ಬಸವಾದಿ ತತ್ಸಮಕಾಲೀನರಾದ ನೂತನ ಪುರಾತನರ ಕಥೆಗಳು, (ಈ) ಆಧುನಿಕ ಶರಣರ ಅಥವಾ ನೂತನರ ಕಥೆಗಳು, (ಉ) ವೀರಶೈವ ಧರ್ಮಕ್ಕೆ ಸಂಬಂಧಿಸಿದ ವಿವಿಧ ಕಥೆಗಳ ಸಾರಸಂಗ್ರಹಗಳು.

(ಅ) ಶಿವಪುರಾಣಗಳಿಂದ ಕಥೆ, ಉಪಕಥೆಗಳನ್ನು ಬೇರ್ಪಡಿಸಿ ಅವುಗಳಲ್ಲಿ ಆಗಲೆ ಕಂಡು ಬಂದ ಶೈವ ಸಂಬಂಧವಾದ ಕಥಾವಸ್ತುವನ್ನು ಅಗತ್ಯವಿದ್ದ ಕಡೆ ಎತ್ತಿ ಹಿಡಿದು ಸ್ವತಂತ್ರ ಕೃತಿಗಳನ್ನಾಗಿ ರಚಿಸಿದರು. ಅಂಥ ಕಥೆಗಳಲ್ಲಿ ಬಹು ಜನಪ್ರಿಯವಾದುದೆಂದರೆ ಹರಿಶ್ಚಂದ್ರನ ಕಥೆ. ರಾಘವಾಂಕನು ಅದೇ ಕಥೆಯನ್ನು ಆಗಲೇ ಸತ್ವಪೂರ್ಣವಾಗಿ ನಿರೂಪಿಸಿದ್ದನು. ಆತನ ಕೃತಿ ಆ ಅನಂತರದ ಕವಿಗಳಿಗೆಲ್ಲ ಮಾದರಿಯಾಗಿತ್ತು. ಓದುವ ಗಿರಿಯ (ಸು. 1525) ಮತ್ತು ಬೊಮ್ಮೆಯ ಲಕ್ಕ (1538)—ಈ ಒಬ್ಬೊಬ್ಬನೂ ಆ ಕಾಲದಲ್ಲಿ ಅತ್ಯಂತ ಜನಾನುರಾಗ ಪಡೆದಿದ್ದ ಹಾಡು ವೃತ್ತವಾದ ಸಾಂಗತ್ಯದಲ್ಲಿ ಆ ಕಥೆಯನ್ನು ಹೇಳಿರುವುದನ್ನು ಕಾಣಬಹುದು. ಅವರಿಬ್ಬರೂ ರಾಘವಾಂಕನನ್ನು ಯಥಾವತ್ತಾಗಿ ಅನುಸರಿಸಿರುವರು. ಎರಡನೆಯವನು ಮೂಲದ ಭಾವ, ಅದೇ ಪದ ಪುಂಜಗಳನ್ನು ಅನೇಕ ಕಡೆ ಹೇಗಿದೆಯೋ ಹಾಗೆಯೇ ತಂದಿದ್ದಾನೆ. ಕಾಲಾನುಕ್ರಮದಲ್ಲಿ ಮುಂದೆ ಮೇಲೆ ಉಕ್ತವಾದ ಓದುವಗಿರಿಯನಿಂದ ರಚಿತವಾದ 'ಸಾನಂದ ಗಣೇಶನ ಕಥೆ' ಬರುತ್ತದೆ. ಆ ಕಥೆ ಸ್ಕಾಂದ ಪುರಾಣದಲ್ಲಿದೆ. ಕನ್ನಡದಲ್ಲಿ ಪದ್ಮರಸನು (ಸು. 1180) ಅದನ್ನು ಹೇಳಿದ್ದನು. ಅದು 'ಪಂಚಾಕ್ಷರೀ ಮಂತ್ರ'ದ ಮಹಿಮೆಯನ್ನು ಕೊಂಡಾಡಿದೆ.

ನಾಯಕನಾದ ಸ್ಕಂದ ನರಕವನ್ನು ಸಂದರ್ಶಿಸುತ್ತ ಅಲ್ಲಿ ನರಳುತ್ತಿದ್ದ ನತದೃಷ್ಟರನ್ನು ಆ ಮಂತ್ರೋಚ್ಚಾರಣೆಯ ಬಲದಿಂದ ಮೇಲೆತ್ತುತ್ತಿರುವುದನ್ನು ಕಾಣಬಹುದು. ಅದು ನರಕದ ಎಲ್ಲ ಶಿಕ್ಷೆಗಳನ್ನೂ ಅತ್ಯುಕ್ತಿಮಾಡಿ ವರ್ಣಿಸುತ್ತದೆ. ವೀರಭದ್ರರಾಜನ (ಸು. 1530) 'ವೀರಭದ್ರವಿಜಯ' ದಕ್ಷಯಾಗದ ಬಳಿಕ ಆದ ಅನರ್ಥಗಳ ಕಥೆಯನ್ನು ಮುಂದಿಟ್ಟಿದೆ. ಅದರ ಕಾವ್ಯಾದರ್ಶ ಮಹತ್ವಾಕಾಂಕೆಯುಳ್ಳದ್ದು; ಆದರೆ ಅದನ್ನು ಕೃತಿಯಲ್ಲಿ ಸಾಧಿಸಿದ್ದು ಮಧ್ಯಮತರವಾದುದು. ಗುರುಲಿಂಗವಿಭುವಿನ (ಸು. 1550) 'ಭಿಕ್ಷಾಟನ ಚರಿತೆ' ಯಲ್ಲಿ ಉತ್ತಮ ಕವಿತ್ವವಿದೆ. ಅದರ ಕಥೆ ಶಿವನ ಪಂಚವಿಂಶತಿ ಲೀಲೆಗಳಲ್ಲಿ ಒಂದನ್ನು ಕುರಿತದ್ದು. ಬ್ರಹ್ಮನ ತಲೆಗಳಲ್ಲಿ ಅನಗತ್ಯವಾದ ಒಂದನ್ನು ತಾನು ಕತ್ತರಿಸಿದುದರಿಂದ ಶೋಕಭರಿತನಾದ ಶಿವನು ಆ ಬ್ರಹ್ಮಕಪಾಲವನ್ನು ಕೈಯಲ್ಲಿ ಹಿಡಿದು ದ್ವಾರಕಾಪಟ್ಟಣದಲ್ಲಿ ಕೃಷ್ಣನನ್ನು ಕಾಣುವ ತನಕ ಭೂಲೋಕದಲ್ಲೆಲ್ಲ ಅಲೆದ ಪ್ರಸಂಗ ಅದರಲ್ಲಿದೆ. ಅದೊಂದು ಚಿಕ್ಕ ಕೃತಿಯಾದರೂ ಚಮತ್ಕಾರಪೂರ್ಣವಾಗಿದೆ. ಮಲ್ಲಿಕಾರ್ಜುನನ (1485) 'ಶ್ವೇತನ ಸಾಂಗತ್ಯ'ವನ್ನು ಹೆಸರಿಸಬಹುದು. ಅದರ ನಾಯಕ ಪೌರಾಣಿಕ ಪಾತ್ರವೆಂದು ಕಾಣುತ್ತದೆ. ಭಕ್ತಿಯಿಂದ ಆತ ಶಿವನ ಕೃಪೆ ಪಡೆದವನು. ಆ ಕಥೆ ಹಿಂದೆಯೇ ಬಸವ ಪುರಾಣದಲ್ಲಿ ನಿರೂಪಿತವಾಗಿದ್ದಿತು.

(ಆ) ಅರುವತ್ತು ಮೂವರು ಪುರಾತನರಲ್ಲಿ ಸುಂದರ ನಂಬಿಯ ಕಥೆ ಬಹಳ ಮನೋಜ್ಞವಾದುದು. ಮೊದಲು ಅದನ್ನು ತಿಳಿಯಾದ ಹಾಗೂ ನಯವಾದ ಹಾಸ್ಯದಿಂದ ಕನ್ನಡದಲ್ಲಿ ಹೇಳಿದವನು ಹರಿಹರ. ಬೊಮ್ಮರಸ ಅದನ್ನು ಮತ್ತೆ ಹೊಸತಾಗಿ ಸು. 1430ರಲ್ಲಿ ರಚಿಸಿ 'ಸೌಂದರಪುರಾಣ'ವೆಂದು ಕರೆದನು. ಅದರಲ್ಲಿ ಸುಂದರವಾದ ಪದ್ಯಗಳಿವೆ. ವರ್ಣನೆಗಳು ಎಡೆಬಿಡದೆ ರಸಭರಿತವಾದುವು. ಸುರಂಗನನ್ನು (ಸು. 1500) ನಾವು ಹಿಂದೆಯೇ ಗಮನಿಸಿದ್ದೇವೆ. ಆ ಕವಿ ಹರಿಹರನ ಚಂಪೂಶೈಲಿಯನ್ನು ಅನುಕರಿಸಿ ಅರುವತ್ತು ಮೂವರು ಪುರಾತನರ ಕಥೆಗಳನ್ನು ರಚಿಸಿದ್ದಾನೆ. ಅವುಗಳನ್ನು ಆತನು ಲಿಂಗಪುರಾಣದಿಂದ ತೆಗೆದುಕೊಂಡಿರುವಂತೆ ಕಾಣುತ್ತದೆ. ಬೇಟೆಯ ವರ್ಣನೆಯಲ್ಲಿ ತನ್ನ ಗುರಿಯನ್ನೇ ಗಮನದಲ್ಲಿಟ್ಟುಕೊಂಡು ಒಳ್ಳೆಯ ಕವಿಯ ಜಾಣ್ಮೆಯನ್ನೇ ತೋರಿದ್ದಾನೆ. ಆತನ ಗ್ರಂಥ ಕೆಲವು ವರ್ಷಗಳ ಹಿಂದೆ ಮುದ್ರಿತವಾಗಿ ದೊರೆಯುವಂತಾದರೂ ಪಂಡಿತರ ಮಂಡಲಿಯಲ್ಲಿ ಆತನು ಸುಪ್ರಸಿದ್ಧಿಯನ್ನು ಹೊಂದಿಲ್ಲ. ಆತನ ಕಾವ್ಯ ಹೆಚ್ಚು ಅಭ್ಯಾಸಯೋಗ್ಯವಾದುದು. ಅದೇ ವಸ್ತುವನ್ನು ಬಳಸಿಕೊಂಡಿರುವ ಕೃತಿಗಳೆಂದರೆ ಮಲ್ಲಣಾರ್ಯನು (ಸು. 1513) ರಚಿಸಿರುವ 'ಭಾವಚಿಂತಾರತ್ನ' ಮತ್ತು ಲಿಂಗಕವಿಯ 'ಚೋಳರಾಜ ಸಾಂಗತ್ಯ'. ಮೊದಲನೆಯದು ತಮಿಳಿನ ಆಕರವೊಂದರಿಂದ ಸ್ಫೂರ್ತಿಪಡೆದದ್ದು. 'ಪಂಚಾಕ್ಷರೀ' ಮಹಿಮೆಯನ್ನು ಮೆರೆಯುವುದೇ ಆ ಕಥೆಯ ಮುಖ್ಯ ಆಶಯ. ಶಿವಭಕ್ತಶಿಶುವನ್ನು ಉದ್ದೇಶವಿಲ್ಲದೆ ಕೊಂದ ಪಾಪಕ್ಕಾಗಿ ಮಗನನ್ನು ವಧೆಮಾಡಿಸಿದ ಸತ್ಯೇಂದ್ರ ಚೋಳನ ಐತಿಹ್ಯವನ್ನದು ಹೇಳುತ್ತದೆ. ಆ ಮಗನ ತಲೆಗಡಿದ ಮೇಲೆ ಬೇರೆ ಏಳು ತಲೆಗಳು ಕಡಿದುರುಳ ಬೇಕಾದ ಘಟನೆಯೊದಗಿತು. ಕಡೆಗೆ ರಾಜನು ಮಡಿದವರ ಪ್ರಾಣವನ್ನು ಮರಳಿ ಪಡೆದು ಅವರೊಡನೆ ಕೈಲಾಸಕ್ಕೇರಿದನು. ಕಾವ್ಯ ಪರಿಪಕ್ವವಾಗದೆ, ವಿಲಕ್ಷಣವಾದುದಾದರೂ ಪಾಂಡಿತ್ಯದ ಉತ್ಕೃಷ್ಟತೆಯನ್ನು ಹೊಂದದೆಯಿಲ್ಲ. ಕಾಲಕ್ರಮೇಣ ಅದು ಬಹು ಪ್ರಸಿದ್ಧವಾದ 'ರಾಜಶೇಖರವಿಲಾಸ'ವೆಂಬ ಕಾವ್ಯಕ್ಕೆ ಸ್ಫೂರ್ತಿಯ ಆಕರವಾಯಿತು. ವಿರೂಪರಾಜ (1519) ಮತ್ತು ಚೇರಮ (1526) ಒಬ್ಬೊಬ್ಬನೂ ಅರುವತ್ತು ಮೂವರು ಪುರಾತನರಲ್ಲಿ ಒಬ್ಬನಾದ ಚೇರಮನ ಕಥೆಯನ್ನು ಹೇಳಿದ್ದಾರೆ.

(ಇ) ಬಸವಣ್ಣನವರ ಜೀವನವನ್ನು ಕುರಿತ ಕೃತಿಗಳು ಈ ವಿಭಾಗದ ಒಂದು ಪ್ರಧಾನ ತಂಡ. ಈ ಕಾಲದಲ್ಲಿ ಬಸವಣ್ಣನವರ ಬಗೆಗೆ ಬರೆದ ವೀರಶೈವ ಕೃತಿಕರ್ತರೊಳಗೆ ಪ್ರಧಾನ ಸಂಗತಿಗಳ ಬಗೆಗೆ ಭಿನ್ನಾಭಿಪ್ರಾಯವುಳ್ಳ ಎರಡು ವಿಶಿಷ್ಟ ಪಂಥಗಳಿರುವಂತೆ ತೋರುತ್ತದೆ. ಮೊದಲ ಪಂಥದ ನಾಯಕನೇ ಭೀಮಕವಿ (1369); ಬಸವ ಪುರಾಣದ ಕರ್ತೃ. ಆತನ ಬಸವಪುರಾಣ ಪಾಲ್ಕುರಿಕೆ ಸೋಮನಾಥನ

ತೆಲುಗು ಬಸವಪುರಾಣದ ಬಹುಮಟ್ಟಿನ ಪದಶಃ ಭಾಷಾಂತರ. ಅದು ಬಸವಚಾರಿತ್ರದ ಜೊತೆಗೆ ಶೈವಪುರಾತನರ ಹಾಗೂ ಬಸವೇಶ್ವರರ ಸಮಕಾಲೀನರ ಕಥೆಗಳಿಂದ ತುಂಬಿದೆ. ಕಾವ್ಯಲಕ್ಷಣದ ಗುಣ ಅತ್ಯಂತ ಉನ್ನತ ಮಟ್ಟದ್ದಾಗದಿದ್ದರೂ ವೀರಶೈವರಲ್ಲಿ ಸತ್ಪುರುಷರ ಕಥೆಗಳ ಜ್ಞಾನದ ಕಣಜವಾಗಿ ಅದು ಇನ್ನೂ ತನ್ನ ಸ್ಥಾನವನ್ನು ಉಳಿಸಿಕೊಂಡಿದೆ. ಎರಡನೆ ಪಂಥದ ನಾಯಕ ಬಹುಶಃ ಲಕ್ಕಣ್ಣದಂಡೇಶ (1428). ಆತನ ಕೃತಿಯಲ್ಲಿ ಉಳಿದ ವಿಷಯಗಳೊಡನೆ ಬಸವಣ್ಣನವರ ಜೀವನಚಾರಿತ್ರದ ಒಂದು ಕಥನಭೇದವೂ ಇದೆ. ಅವನ ಹಿರಿಯ ಅನುಯಾಯಿ ಸಿಂಗಿರಾಜ (ಸು. 1500), (ಅ)ಮಲಬಸವ ಚಾರಿತ್ರದ ಕರ್ತೃ. ಬಸವಣ್ಣನವರ ಜೀವನ ಚರಿತ್ರೆಯನ್ನು ನಿರೂಪಿಸಿದ ಬಳಿಕ ಆ ಮಹಾನಾಯಕನು ಮೆರೆದ 88 ಪವಾಡಗಳಲ್ಲಿ ಕೆಲವನ್ನು ಆ ಕಾವ್ಯ ವರ್ಣಿಸತೊಡಗುತ್ತದೆ. ಇತರ ಸಂಗತಿಗಳ ಜೊತೆಗೆ ಈ ಎರಡು ಪಂಥಗಳ ತುಲನಾತ್ಮಕವಾದ ಅಭ್ಯಾಸ ಬಸವೇಶ್ವರನ ಮತ್ತು ಆತನ ಕಾರ್ಯಗಳ ಬಗೆಗೆ ಇರುವ ಕೆಲವು ತಪ್ಪುಭಾವನೆಗಳನ್ನು ತೊಡೆದುಹಾಕಲು ಪ್ರಯೋಜನವಾದೀತು.

ಕೆರೆಯ ಪದ್ಮರಸ, ಅಲ್ಲಮಪ್ರಭು ಮತ್ತು ಪಾಲ್ಕುರಿಕೆ ಸೋಮೇಶ್ವರರ ಜೀವನ ಚರಿತ್ರೆಗಳನ್ನು ಕ್ರಮವಾಗಿ ಪದ್ಮಣಾಂಕ (ಸು. 1385), ಚಾಮರಸ (ಸು. 1430) ಮತ್ತು ವಿರಕ್ತತೋಂಟದಾರ್ಯ (ಸು. 1560) ರು ರಚಿಸಿರುವರು. ಮೊದಲನೆಯ ಜೀವನಚರಿತ್ರೆಯಾದ ಪದ್ಮರಾಜಪುರಾಣವು ಅದರ ಕಥೆಯಲ್ಲಿ ನರಸಿಂಹಬಲ್ಲಾಳನಲ್ಲಿ ಮಂತ್ರಿಯಾಗಿದ್ದ ನಾಯಕನ ಜೀವನದ ಘಟನೆಗಳನ್ನು ವರ್ಣಿಸುತ್ತದೆ. ಅವನು ಒಂದು ಪವಾಡವನ್ನು ಮಾಡಿ ಆ ಮೊದಲು ಏನೂ ಇಲ್ಲದ ಸ್ಥಳದಲ್ಲಿ ಕೆರೆಯೊಂದನ್ನು ಕಾಣಿಸಿದನಾದ ಕಾರಣ ಆತನ ಹೆಸರಿನ ಹಿಂದೆ 'ಕೆರೆಯ' ಎಂಬ ವಿಶೇಷಣ ಬಂದು ಸೇರಿತು. ಆತನು ತ್ರಿಭುವನತಾತನೆಂಬ ವೈಷ್ಣವ ವಾದಿಯನ್ನು ಚರ್ಚೆಯಲ್ಲಿ ಸೋಲಿಸಿ, ಆತನನ್ನು ವೀರಶೈವನನ್ನಾಗಿ ಮಾಡಿದನು. ಪದ್ಮಣಾಂಕನು ಷಟ್ಪದೀಛಂದಸ್ಸನ್ನು ಬಳಸಿದ್ದರೂ ಪಾಂಡಿತ್ಯಪೂರ್ಣವಾದ ಶೈಲಿಯಲ್ಲಿ ಬರೆಯುತ್ತಾನೆ. ಚಾಮರಸನ ಪ್ರಭುಲಿಂಗ ಲೀಲೆಯು ವೀರಶೈವ ಸಾಹಿತ್ಯದಲ್ಲಿ ವಿಶೇಷ ಕೃತಿ. ಅದು ಜ್ಞಾನಾನುಭಾವಿಯೂ ವೀರಶೈವ ಧರ್ಮ ಕ್ರಾಂತಿಯ ಜ್ಞಾನಕೇಂದ್ರನೂ ಆದ ಪ್ರಭುದೇವ ಉಪನಾಮಾಂಕಿತ ಅಲ್ಲಮನ ಕಥೆಯನ್ನು ನಿರೂಪಿಸುತ್ತದೆ. ಕಥಾನಾಯಕನ ಪಾತ್ರಕಲ್ಪನೆ ಘನವಾದುದು. ಆತನ ಆಧ್ಯಾತ್ಮಿಕ ಮಹಿಮೆ ನಮ್ಮ ಕಣ್ಣ ಮುಂದೆ ಎದ್ದು ತೋರುತ್ತದೆ. ಶೈಲಿಯೂ ವಸ್ತುವಿಗೆ ತಕ್ಕ ರೀತಿಯಲ್ಲಿದೆ. ಈ ಮಟ್ಟಕ್ಕೆ ಬರುವ ವೀರಶೈವ ಕೃತಿಗಳು ಬಹು ವಿರಳ. ಪಾಲ್ಕುರಿಕೆ ಸೋಮನಾಥ ತೆಲುಗು, ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ಹೇರಳವಾಗಿ ಕೃತಿರಚನೆ ಮಾಡಿದವನು. ಆದರೆ ಪಾಲ್ಕುರಿಕೆ ಸೋಮೇಶ್ವರ ಪುರಾಣವನ್ನು ಬರೆದ ವಿರಕ್ತ ತೋಂಟದಾರ್ಯನು ಒಳ್ಳೆಯ ಜೀವನಚರಿತ್ರಕಾರನಾಗದೆ ಹೋದುದು ಆತನ ದುರದೃಷ್ಟ. ಆ ಕಥಾನಾಯಕನ ಜೀವನ ಸಂಗತಿಗಳು ಅನಗತ್ಯವೂ ಬೇಸರ ತರುವಂತಹವೂ ಆದ ಉಪಕಥೆಗಳ ದೀರ್ಘ ಅಂತರಗಳ ಅನಂತರ ವರ್ಣಿತವಾಗಿವೆ. ಅದು ಒಂದಕ್ಕೊಂದು ಸಂಬಂಧವಿಲ್ಲದ ನೂರಾರು ಕಥೆಗಳ ತೇಪೆ ಕೆಲಸ ; ವಿಜಾತೀಯ ಅಂಶಗಳ ಒಂದು ಸಂಗ್ರಹ. ವೀರಶೈವ ಕಥೆಗಳ ಆಯ್ಕೆಯಾಗಿಯಾದರೂ ಅದು ಅಮೂಲ್ಯವಾದುದಾಗಿದೆ.

ರೇವಣಸಿದ್ಧೇಶ್ವರರು ಪುರಾತನರೆ ಅಥವಾ ನೂತನ ಪುರಾತನರೆ ಎಂಬುದನ್ನು ನಿರ್ಣಯಿಸುವುದು ಕಷ್ಟ. ವೀರಶೈವರ ಉಚ್ಚ ಶಾಸ್ತ್ರಕ್ರಮಾನುಸಾರಿ ವರ್ಗದವರು—ಎಂದರೆ ಆರಾಧ್ಯರು, ಅವರನ್ನು ಅತಿ ಪುರಾತನರೆಂದು ಹೇಳುವರು. ಬಸವಣ್ಣನವರ ಅನುಯಾಯಿಗಳು ಅವರ 'ಗುರು'ವಿನ ಹಿರಿಯ ಸಮಕಾಲೀನರೆನ್ನುವರು. ರೇವಣಸಿದ್ಧರ ಬಗೆಗೆ ದೊರೆಯುವ ಅತಿ ಪ್ರಾಚೀನ ಕಥೆ ರಚಿತವಾದುದು ಹರಿಹರನಿಂದ. ಮಲ್ಲಣ (1413) ಮತ್ತು ಚತುರ್ಮುಖ ಬೊಮ್ಮರಸ (ಸು 1500) ಅದೇ ಸಾಂಪ್ರದಾಯಿಕ ಕಥೆಯನ್ನು ಮುಂದುವರಿಸಿರುವರು. ವೀರಶೈವ ಪಂಚಾಚಾರ್ಯರಲ್ಲಿ ಒಬ್ಬರಾದ

ಪಂಡಿತಾರಾಧ್ಯರ ಸಾಹಸಕಾರ್ಯವನ್ನು ವರ್ಣಿಸುವ ನೀಲಕಂಠಶಿವಾರ್ಯರ (ಸು 1485) 'ಆರಾಧ್ಯ ಚಾರಿತ್ರ' ಅದರ ತಾಂತ್ರಿಕಗುಣದಿಂದ ಇಲ್ಲಿ ಹಾಗೆಯೇ ಹೆಸರಿಸಲು ಯೋಗ್ಯವಾಗಿದೆ.

ಮಹಾದೇವಿ ಅಕ್ಕನ ಹೆಸರು ವೀರಶೈವಸಾಹಿತ್ಯದಲ್ಲಿ ಬಹು ಪ್ರಖ್ಯಾತವಾದ ಹೆಸರುಗಳಲ್ಲೊಂದು. ಹರಿಹರನಿಂದೀಚೆಗೆ ಆಕೆಯ ಜೀವನ ಚರಿತ್ರೆಯನ್ನು ಬರೆದವರು ಹಲವರು. ಅವರಲ್ಲಿ ಚೆನ್ನಬಸವಾಂಕನ (ಸು. 1550) 'ಮಹಾದೇವಿ ಅಕ್ಕ ಪುರಾಣ' ಬಹು ಗಾತ್ರವಾದುದು. ಕಾವ್ಯಲಕ್ಷಣವಿಲ್ಲದೆಯಿಲ್ಲ. ನಾನಾ 'ದೇಶೀ' ವೃತ್ತಗಳಲ್ಲಿ ರಚಿತವಾದುದು. ಕಥಾನಾಯಕಿಯ ಪವಿತ್ರಪಾತ್ರವನ್ನೂ ಆಕೆಯ ಬಾಳಿನ ಎಲ್ಲ ಕಷ್ಟಕಾರ್ಪಣ್ಯಗಳನ್ನೂ ಸ್ಪಷ್ಟವಾಗಿ ಹೊರಗೆಡಹಲಾಗಿದೆ. ಬಸವಣ್ಣನವರ ಸಮಕಾಲೀನನೂ ವಚನಕಾರನೂ ಆದ ಚಿಕ್ಕಯ್ಯನ ಕಥೆಯನ್ನು ಕವಿ ಬಸವ (ಸು. 1550) ಸಾಂಗತ್ಯದಲ್ಲಿ ಹೇಳಿದ್ದಾನೆ. ವೃತ್ತಿಯಲ್ಲಿ ಚೋರನಾದ ಕಥಾನಾಯಕನು ಬಸವಣ್ಣನವರನ್ನು ಕೊಲ್ಲಲು ಹೋಗಿ ತಾನೇ ಶಿವಶರಣನಾಗಿ ಪರಿವರ್ತಿತನಾದನು. ಬಸವಾಂಕನ (ಸು. 1550) 'ಉದ್ಭಟದೇವ ಚರಿತೆ'ಯನ್ನು ಇಲ್ಲಿ ಸೂಚಿಸ ಬಹುದಾಗಿದೆ.

(ಈ) ಕೆಲವರು ನೂತನ ಪುರಾತನರು ಜೀವನ ಚರಿತ್ರೆಯೊಂದರಿಂದ ಪ್ರಖ್ಯಾತರಾಗುವ ಅದೃಷ್ಟ ಪಡೆದವರು. ಹಿಂದೆ ಉಕ್ತವಾಗಿರುವ ತೋಂಟದ ಸಿದ್ಧಲಿಂಗಯತಿಯ ಮಹಾಮಹಿಮೆಗಳನ್ನು ಕೊಂಡಾಡುವ ಎರಡು ಪುರಾಣಗಳಿವೆ. ಒಂದು 'ಸಿದ್ಧೇಶ್ವರ ಪುರಾಣ'ವೆಂಬ ಹೆಸರಿನಿಂದ ರಚಿತವಾದ ವಿರಕ್ತ ತೋಂಟದಾರ್ಯರ (ಸು. 1560) ಕೃತಿ. ಇನ್ನೊಂದು 'ತೋಂಟದ ಸಿದ್ಧೇಶ್ವರ ಪುರಾಣ'ವೆಂದು ಅಂಕಿತವಾದ ಶಾಂತೇಶನ (ಸು. 1561) ಕೃತಿ. ಈ ಎರಡು ಕೃತಿಗಳೂ ಕಥಾನಾಯಕನ ಸಂಗತಿಗಳನ್ನು ಹೇಳಿ ಆತನು ಮೆರೆದ ಪವಾಡಗಳನ್ನೂ ಆತನು ಕೈಕೊಂಡ ಪ್ರಯಾಣದ ಸಮಯದಲ್ಲಿ ಹಲವೆಡೆ ತಂಗಿದ್ದಾಗ ನಡೆದ ಘಟನೆಗಳನ್ನೂ ದೀರ್ಘವಾಗಿ ವಿವರಿಸುತ್ತವೆ. ಕಪಿಲಾನದೀತೀರದ ಹರದನ ಹಳ್ಳಿಯ ಗೋಸಲ ಚನ್ನ ಬಸವೇಶ್ವರರೇ ಆತನ ಆಧ್ಯಾತ್ಮಿಕ ಗುರು.

(ಉ) ವೀರಶೈವ ಪೌರಾಣಿಕ ಕಥಾಸಂಗ್ರಹವೆಂದು ಪರಿಗಣಿಸಹುದಾದ ಕೃತಿಗಳು ಕೆಲವಿವೆ. ಅವುಗಳಲ್ಲಿ ಪ್ರಮುಖವಾದುವು ಲಕ್ಕಣ್ಣದಂಡೇಶನ 'ಶಿವತತ್ತ್ವ ಚಿಂತಾಮಣಿ'ಯ (1420) ಅನಂತರ ಗುಬ್ಬಿಯ ಮಲ್ಲಣಾರ್ಯನ (1513) 'ವೀರಶೈವಾಮೃತ ಪುರಾಣ'. ಅದು ದೀರ್ಘಷಟ್ಪದೀ ಛಂದಸ್ಸಿನಲ್ಲಿರುವ 7,000 ಪದ್ಯಗಳನ್ನೊಳಗೊಂಡ ಬೃಹದ್ಗ್ರಂಥ. ಮುಂಚಿನ ಆಕರಗಳಿಂದ ಅದು ತನ್ನ ವಸ್ತುವಿಗೆ ಐತಿಹ್ಯ ಹಾಗೂ ಕಥೆಗಳನ್ನು ತೆಗೆದುಕೊಂಡಿದೆ. ಕುಮಾರ ಚನ್ನಬಸವಾಂಕನ ಕೃತಿ (ಸು. 1550) ಮೊದಲೆ ಬಸವಪುರಾಣದಲ್ಲಿದ್ದ ಕಥೆಗಳನ್ನು ಇನ್ನೂ ವಿವರವಾಗಿ ವರ್ಣಿಸಿದೆ. ಕಿಕ್ಕೇರಿಯ ಆರಾಧ್ಯ ನಂಜುಂಡನ (1550) ಕೃತಿಯಾದರೊ ಬಹು ಸಾಮಾನ್ಯವೂ ಪರಿಮಿತ ವ್ಯಾಪ್ತಿಯುಳ್ಳುದೂ ಆಗಿ ಮಿಕ್ಕ ಕೆಲವು ಕಥೆಗಳನ್ನು ನಿರೂಪಿಸುತ್ತದೆ.

**ವಚನಗಳು**

ವೀರಶೈವ ಧರ್ಮ ಪ್ರಸಾರದ ಪುನರಾರಂಭದ ವಿಷಯವನ್ನು ಅದರ ವಿಶಿಷ್ಟ ಸಾಹಿತ್ಯವಾದ ವಚನಗಳಿಲ್ಲದೆ ಯೋಚಿಸುವುದಕ್ಕೂ ಆಗದು. ಆ ಪುನಃ ಪ್ರಸಾರ ಎರಡು ಬೇರೆ ಬೇರೆ ವರ್ಗದವು: ಮೂಲ ಹಾಗೂ ಸಂಕಲಿತ. ಮೂಲ ಕೃತಿ ಕರ್ತರಲ್ಲಿ ಆ ಪ್ರಸಾರದ ಕೇಂದ್ರವ್ಯಕ್ತಿಯಾದ ತೋಂಟದ ಸಿದ್ಧಲಿಂಗಯತಿಯೇ (ಸು. 1470) ನಮಗೆ ಸುಲಭವಾಗಿ ಕಾಣಿಸುವ ಶ್ರೇಷ್ಠ ವಚನಕಾರ. ಆದರೆ ಆತನ ವಚನಗಳು ನೀರಸ ಹಾಗೂ ಉಪದೇಶಾತ್ಮಕ; ಸಾಹಿತ್ಯದ ಪ್ರೋಜ್ಜ್ವಲತೆ ಕಂಡುಬರುವುದು ಅಪರೂಪ.

ಬಸವಣ್ಣನವರು ಹಾಗೂ ಅವರ ಅನುಯಾಯಿಗಳ ವಚನಗಳಿಗೆ ಹೋಲಿಸಿದಾಗ ಆತನ ವಚನ ರಚನೆ ಪ್ರಭಾವ ಬೀರುವಂಥದಲ್ಲ. ಆತನ ಜೊತೆಗೆ ಜಕ್ಕಣಾರ್ಯ (ಸು. 1430) ಸ್ವತಂತ್ರ ಸಿದ್ಧಲಿಂಗ (1480) ಗುಮ್ಮಳಾಪುರದ ಸಿದ್ಧಲಿಂಗರ (ಸು. 1410) ಹೆಸರನ್ನು ಹೇಳಬಹುದು. ಹಿಂದಿನ ವಚನಕಾರರ ಗ್ರಂಥಗಳಿಂದ ನಿರ್ದಿಷ್ಟ ಯೋಜನೆ ಹಾಗೂ ಉಪದೇಶಗಳಿಂದ ಜೋಡಿಸಿ ವ್ಯಾಖ್ಯಾನ ಮಾಡಿದ ಸಂಕಲನಗಳು ಹಲವಿವೆ. 'ಶೂನ್ಯ ಸಂಪಾದನೆ'ಯು ಅತಿ ಶ್ರೇಷ್ಠವಾದುದು, ಎಲ್ಲರಿಗೂ ಮನಸ್ಸಿಗೆ ಒಪ್ಪುವಂಥದು.



### ವ್ಯಾಖ್ಯಾನಗಳು

ಹತ್ತು ಹನ್ನೆರಡು ಹಿರಿಯ ಹಾಗೂ ಕಿರಿಯ ವ್ಯಾಖ್ಯಾನಗಳು ಉಳಿದುಕೊಂಡಿವೆ. ಕೆಲವು ಕನ್ನಡ ಗ್ರಂಥಗಳಿಗೂ ವ್ಯಾಖ್ಯಾನ ಮಾಡಿರುವುದನ್ನು ಗಮನಿಸಲು ಕುತೂಹಲವುಂಟಾಗುತ್ತದೆ. ಅವುಗಳಲ್ಲಿ ವಿಶೇಷ ಅರ್ಥವನ್ನುಳ್ಳ ಕೆಲವನ್ನು ಮಾತ್ರ ನಾವು ಇಲ್ಲಿ ಲಕ್ಷಿಸಬಹುದು. ಅವುಗಳಲ್ಲಿ ಅತಿ ಮೊದಲಿನವು ಗುರುದೇವ (ಸು. 1350) ನಿಂದ ವ್ಯಾಖ್ಯಾತವಾದ ಐದಾರು ಸಂಸ್ಕೃತ ಸ್ತೋತ್ರಗಳು. ಭಟ್ಟ ಭಾಸ್ಕರನ 'ಯಜುರ್ವೇದ ಭಾಷ್ಯ'ದ ಮೇಲಣ ಗುರುನಂಜ (ಸು. 1500)ನ ಕನ್ನಡ ವ್ಯಾಖ್ಯಾನ ಬಹು ಪ್ರೌಢ ವಾದುದೆನ್ನುವರು. 'ಸಾರಸ್ವತ ವ್ಯಾಕರಣ' ಮತ್ತು ಇತರ ಕೃತಿಗಳ ಮೇಲಣ ಚನ್ನವೀರನ ವ್ಯಾಖ್ಯಾನಗಳು ಪಾಂಡಿತ್ಯ ಪರಿಪೂರ್ಣವಾದುವು. ಆತನ 'ಕಾಶಕೃತ್ಸ್ನ ಧಾತು ವ್ಯಾಖ್ಯಾ' ಭಾಷಾ ವಿಜ್ಞಾನದೃಷ್ಟಿಯಿಂದ ವಿಲಕ್ಷಣವಾದುದು. ಬೃಹದ್ವ್ಯಾಖ್ಯಾನಗಳ ಕರ್ತೃಗಳಾದ ಶ್ರೀಧರಾಂಕ (ಸು. 1550) ಮತ್ತು ಸಾನಂದ ಶಿವಯೋಗಿ (ಸು. 1480)ಗಳ ಹೆಸರನ್ನು ತಿಳಿಸುವುದುಚಿತ. ವಿರಕ್ತ ತೋಂಟದಾರ್ಯನು (ಸು. 1560) ಮಗ್ಗೆಯ ಮಾಯಿದೇವರ ಶತಕತ್ರಯಕ್ಕೆ ವ್ಯಾಖ್ಯಾನ ಮಾಡಿದ್ದಾನೆ.

### ಸಂಕೀರ್ಣ

ಈ ವಿಭಾಗದೊಳಗೆ ಬರುವ ಕೃತಿ ಸಾಮಗ್ರಿಯಲ್ಲಿ ಆಸಕ್ತಿ ಕೆರಳಿಸುವ ಹಲವು ಅಂಶಗಳಿವೆ. ಸಾಹಿತ್ಯದ ಸೇವೆಯಲ್ಲಿ ರಾಜಮನೆತನದ ಸಂಬಂಧಿಗಳೆನ್ನುವ ಇಬ್ಬರು ಕವಿಗಳನ್ನು ನಾವು ಇಲ್ಲಿ ಕಾಣಬಹುದು. ವಿಜಯನಗರದ ರಾಜಮನೆತನಕ್ಕೆ ಸೇರಿದ ದೇಪರಾಜನು (ಸು. 1410) ಒಬ್ಬ. ಆತನು 'ಸೊಬಗಿನ ಸೋನೆ' ಮತ್ತು 'ಅಮರುಕ' ಎಂಬ ಎರಡು ಕೃತಿಗಳ ಕರ್ತೃ. ಮೊದಲನೆಯದು ಅದ್ಭುತ ರಸದ ಕಥೆಗಳ ಗೊಂಚಲು. ಎರಡನೆಯದಾದರೊ ಸಂಸ್ಕೃತದ ಅಮರು ಕವಿಯ ಪ್ರಸಿದ್ಧವಾದ ಶತಕದ ಭಾಷಾಂತರ. ಎರಡನೆಯ ಕವಿ ಕಾರ್ಕಳದ ನಾಯಕನಾದ ರಾಮದೇವ (ಸು. 1550); ಪ್ರಧಾನವಾಗಿ ತ್ರಿಪದಿ ಛಂದಸ್ಸಿನಲ್ಲಿ ರಚಿತವಾದ 'ಸೌಂದರ್ಯ ಕಥಾರತ್ನ'ದ ಕರ್ತೃ. ತನ್ನ ಕಾವ್ಯಕ್ಕೆ ಆತನು ಕ್ಷೇಮೇಂದ್ರನ ಗ್ರಂಥವನ್ನು ಆಧಾರವಾಗಿಟ್ಟುಕೊಂಡಿದ್ದಾನೆ. ಭಾರತೀಯ ಸಾಹಿತ್ಯದಲ್ಲಿ ಪ್ರಸಿದ್ಧವಾದ ಮೂವತ್ತೆರಡು ಬೊಂಬೆಯ ಕಥೆಗಳನ್ನು ಅದರಲ್ಲಿ ಹೇಳಿದ್ದಾನೆ. ಕಥನದ ಉದ್ದೇಶಕ್ಕೆ ತ್ರಿಪದಿಯನ್ನು ಬಳಸಿರುವುದರಲ್ಲಿ ವಿಶಿಷ್ಟತೆಯಿದೆ. ಚಂದ್ರಕವಿ (ಸು. 1430) ಹಂಪೆಯ ದೇವಾಲಯದ ದೇವನಾದ ವಿರೂಪಾಕ್ಷನ ಆಸ್ಥಾನವನ್ನು ವರ್ಣಿಸುವ ಕಾವ್ಯವನ್ನು, ಓದುತ್ತಿದ್ದರೆ ಆನಂದವನ್ನುಂಟುಮಾಡುವ ಹಳಗನ್ನಡದ ಶೈಲಿಯಲ್ಲಿ ರಚಿಸಿದ್ದಾನೆ. ಆತನ ಪದ್ಯಗಳನ್ನು ಅಭಿನವವಾದಿ ವಿದ್ಯಾನಂದನು (1533) ರಚಿಸಿರುವ ಹಳಗನ್ನಡ ಪದ್ಯಸಂಕಲನದಲ್ಲಿ ಉದ್ಧರಿಸಲಾಗಿದೆ. ಅದರಿಂದ ಕವಿಗೆ ಯೋಗ್ಯವಾದ ಮಾನ್ಯತೆಯನ್ನು ನೀಡಿದಂತಾಗಿದೆ. ಇಂಥದೇ ಒಂದು ಉದ್ದೇಶದಿಂದ ಕೂಡಿದ ಪ್ರಭುಗನ (ಸು. 1500) 'ಚೂಡನಾಸ್ಥಾನ' ಮತ್ತು 'ವೈಭೋಗ ರಾಜಾಸ್ಥಾನ' ಎಂಬ ಎರಡು ಕಾವ್ಯಗಳು ಕೈಲಾಸದ ಶಿವನ ವೈಭವವನ್ನು ಅದೇ ಹಳಗನ್ನಡ ಶೈಲಿಯಲ್ಲಿ ಕೊಂಡಾಡಿವೆ. ಉಳಿದ ಕೃತಿಗಳಲ್ಲಿ ಸದಾಶಿವ

ಯೋಗಿಯ (1554) ರಾಮನಾಥ ವಿಲಾಸವನ್ನೂ ಮುರಿಗೆಯ ದೇಶಿಕೇಂದ್ರನ (ಸು. 1560) ರಾಜೇಂದ್ರ ವಿಜಯವನ್ನೂ ಅವುಗಳ ಚಂಪೂ ಶೈಲಿಗಾಗಿ ನೆನಪಿಗೆ ತಂದುಕೊಡಬಹುದು. ಅವರ ಕಾಲದಲ್ಲಿ ಚಂಪೂ ಶೈಲಿಯನ್ನು ಪರಿಣಾಮಕಾರಿಯಾಗಿ ಬಳಸಿದ್ದು ಅತಿ ವಿರಳವೆಂದೇ ಹೇಳಬಹುದು.

## ಬ್ರಾಹ್ಮಣಿಕ ವೀರಕಾವ್ಯಗಳು

ವೈಷ್ಣವ ಧರ್ಮ ಬಹು ಹಿಂದೆಯೇ ಪ್ರಾರಂಭವಾದಂತೆ ತೋರುತ್ತದೆ. ಸಾಹಿತ್ಯದ ಮೇಲಣ ಅದರ ಪ್ರಭಾವವನ್ನು ರುದ್ರಭಟ್ಟನ (ಸು 1180) ಕಾವ್ಯದಲ್ಲಿ ಹಾಗೂ ನರಹರಿ ತೀರ್ಥರ (1281) ಪದಗಳಲ್ಲಿ ಕಾಣಬಹುದು. ಆ ಧರ್ಮಪ್ರಸಾರ ವಿಜಯನಗರದ ಆಳಿಕೆಯ ಕಾಲದಲ್ಲಿ ಪ್ರಾಬಲ್ಯವನ್ನು ಹೊಂದಿತು. ಆ ಕಾಲದ ಬಹು ಪ್ರವರ್ಧಮಾನಸ್ಥಿತಿಗೇರುತ್ತಿದ್ದ ಪ್ರಸಾರವದು. ಜನಸಾಮಾನ್ಯರ ಮೇಲೆ ಅಪಾರವಾದ ಪ್ರಭಾವವನ್ನು ಬೀರಿದ್ದಿತು. ಸಂಸ್ಕೃತಕ್ಕಿಂತ ದೇಶೀಸಾಹಿತ್ಯದ ಕೃಷಿಗೆ ಈ ತನಕ ಹೆಚ್ಚು ಸಂಖ್ಯೆಯಲ್ಲಿ ಕೈಹಾಕದೆ ಇದ್ದ ಬ್ರಾಹ್ಮಣಕವಿಗಳು ಜಾತಿಮತಗಳ ಎಣಿಕೆಯಿಲ್ಲದೆ ಎಲ್ಲ ಜನರ ಉದ್ಧಾರಕ್ಕಾಗಿ ತಮ್ಮ ಪವಿತ್ರಗ್ರಂಥಗಳಲ್ಲಿದ್ದ ಸಕಲ ಜ್ಞಾನವನ್ನು ತೆರೆದಿಡಲು ಮುನ್ನುಗ್ಗಿದರು. ಅವರಲ್ಲಿ ಕೆಲವರು ಭಾರತದ ಮಹಾಕಾವ್ಯಗಳನ್ನು ದೇಶಭಾಷೆಗಳಿಗೆ ಅನುವಾದ ಮಾಡುವುದರಲ್ಲಿ ನಿರತರಾದರೆ ಇತರರು ತಮ್ಮ ಸರ್ವಸ್ವವನ್ನೂ ತ್ಯಜಿಸಿ ಉಪನಿಷದ್ದರ್ಶನವನ್ನು ಸಂಗೀತಕ್ಕೆ ಹೊಂದಿಸಿದ ಸರಳ ಸಾಮಾನ್ಯವಾದ ಭಾಷೆಯಲ್ಲಿ ಬೋಧಿಸುತ್ತ ಒಂದೆಡೆಯಿಂದ ಮತ್ತೊಂದೆಡೆಗೆ ಸಂಚರಿಸುತ್ತಾ ಹೋದರು. ಕವಿಗಳು ತಮ್ಮ ಮಹಾಕಾವ್ಯಗಳ ಮೂಲಕ ಬೋಧಿಸಿದ್ದನ್ನು ಗಾಯಕಕವಿಗಳು ಅಥವಾ ದಾಸರು ತಮ್ಮ ಹಾಡುಗಳ ಮೂಲಕ ಉಪದೇಶಿಸಿದರು. ಈ ಜನರ ಅತ್ಯದ್ಭುತವಾದ ಶ್ರದ್ಧೆ ಜನ ಸಾಮಾನ್ಯರಿಗೆ ರುಚಿಸಿತು. ದೇಶದಲ್ಲಿ ಎಲ್ಲೆಲ್ಲೂ ಈ ಕಾಲದ ಶಾಸನಗಳಲ್ಲಿ ನಿರೂಪಿತವಾದ ದಾನಧರ್ಮಗಳಲ್ಲಿ ಉದಾತ್ತ ಸಂಸ್ಕೃತಿ ಹಾಗೂ ಘನತರ ಆದರ್ಶಗಳ ನಿದರ್ಶನಗಳನ್ನು ಕಾಣುತ್ತೇವೆ.

'ಮಹಾ ಭಾರತ,' 'ರಾಮಾಯಣ' ಮತ್ತು 'ಭಾಗವತ'—ಈ ಮೂರು ಪುರಾಣ ಕಾವ್ಯಗಳ ಅನುವಾದಗಳ ಗುಣವಿಮರ್ಶೆಗೆ ನಾವು ಈಗ ಸಾಗಬಹುದು. ನಮಗೆ ತಿಳಿದಿರುವಷ್ಟು ಮಟ್ಟಿಗೆ ಮಹಾಭಾರತವೆ ಕನ್ನಡಿಗರ ಹೃದಯವನ್ನು ಮೊತ್ತಮೊದಲು ಸೂರೆಗೊಂಡದ್ದು. ಕನ್ನಡ ಕಾವ್ಯಪಿತನಾದ ಪಂಪ ಹತ್ತನೆಯ ಶತಮಾನದಲ್ಲಿ ಅದರ ಘನವೂ ಸತ್ತ್ವಪೂರ್ಣವೂ ಆದ ಕಥನವನ್ನು ನೀಡಿದನು ; ಆದರೆ ಸುಸಂಸ್ಕೃತರಾದ ಕೆಲವೇ ಕೆಲವು ಮಂದಿಗೆ ಮಾತ್ರ ರುಚಿಸುವಂತೆ ಮಾಡಲು ಸಾಧ್ಯವಾಯಿತು. ಜನ ಸಾಮಾನ್ಯರಲ್ಲಿ 'ಗದುಗಿನ ಭಾರತ'ವೆಂದು ಪ್ರಸಿದ್ಧವಾದ ತನ್ನ ಕಾವ್ಯಾನುವಾದದಿಂದ ಜನಜಂಗುಳಿಯನ್ನು ಮನ ಕರಗುವಂತೆ ಮಾಡಿ, ಹುರಿದುಂಬಿಸಿ, ಸಬಲರನ್ನಾಗಿ ಮಾಡುವ ಕಾರ್ಯ ಕುಮಾರವ್ಯಾಸನ (ಸು. 1430) ಪಾಲಿಗೆ ಬಿದ್ದಿತು. ಅದು ಮೂಲದ ಭಾಷಾಂತರವಲ್ಲ. ಆದರೆ ಸರಳ ಹಾಗೂ ಸ್ವತಂತ್ರ ಅನುವಾದ ಕೃತಿ. ಕೃಷ್ಣನನ್ನು ಪರಮಾತ್ಮನೆಂದು ಮೆರೆದು ಅವನ ಸ್ತುತಿಗಾನವನ್ನು ಮಾಡುವುದು ಕವಿ ನಾರಣಪ್ಪನ ಗುರಿ. ಏಕೆಂದರೆ ಆ ಕೃಷ್ಣಪರಮಾತ್ಮನ ಚೈತನ್ಯವೇ ಅನೇಕ ಕಥಾನಾಯಕರ ಜೀವನವನ್ನು ಉದ್ಧರಿಸುವ ಹಾಗು ವಿನಾಶಗೊಳಿಸುವ ಮೂಲಕ ಮಹಾಭಾರತದ ಉದ್ದಕ್ಕೂ ಹರಿದಿರುವಂಥದು. ನಾರಣಪ್ಪ (ಕುಮಾರವ್ಯಾಸ) ಸೊಬ್ಬು ರಸಾವೇಶದಿಂದ ಕೂಡಿದ್ದ ಕವಿ. ಗದುಗಿನ ವೀರನಾರಾಯಣನ ಕೃಪೆಯಿಂದ ಕವಿತಾಶಕ್ತಿಯು ಆತನಲ್ಲಿ ತಾನಿಚ್ಛಿಸಿ ಕರೆದಂತೆಲ್ಲ ಹೊರ ಹೊಮ್ಮಿತು. ಆತನ ಅಪಾರ ಪ್ರತಿಭೆ, ಶ್ರೀಮಂತವಾದ ಅನುಭವ, ಸುಸ್ಪಷ್ಟವೂ ಸಬಲವೂ ಸುಂದರವೂ ಆದ ಶೈಲಿ, ಧೈರ್ಯ, ಸಾಹಸ, ತೀಕ್ಷ್ಣತೆ, ಶ್ರದ್ಧಾಭಕ್ತಿಗಳು, ಪಾತ್ರ ಹಾಗೂ ಸನ್ನಿವೇಶಗಳ ಚಿತ್ರಸದೃಶ ಭಾವನೆ, ನೂತನ ಹಾಗೂ ಅನಿರೀಕ್ಷಿತ ಉಪಮೆಗಳು, ರೂಪಕಗಳು—ಈ ಎಲ್ಲವೂ ಆತನ ಕವಿತೆಯನ್ನು ಭವ್ಯವನ್ನಾಗಿಯೂ ಬತ್ತದ

ಸ್ಫೂರ್ತಿಯ ಚಿಲುಮೆಯನ್ನಾಗಿಯೂ ಮಾಡಿವೆ. ಆತನ ಕೀರ್ತಿ ಎಂದೂ ಮರೆಯಲಾಗದುದು, ಇಲ್ಲವೆ ಮಸುಳಿಸಲಾಗದುದು.

ಕುಮಾರವ್ಯಾಸನು 'ಮಹಾಭಾರತ'ದ ಕೊನೆಯ ಎಂಟು ಪರ್ವಗಳ ಕಥೆಯನ್ನು ಹೇಳಲಿಲ್ಲ. ತಿಮ್ಮಣ್ಣನು ಕೃಷ್ಣದೇವರಾಯನ ಅಪ್ಪಣೆಯ ಮೇರೆಗೆ ಉಳಿದ ಭಾಗವನ್ನು ಕನ್ನಡಕ್ಕೆ ತಂದಿದ್ದಾನೆ. ಆದರೂ ಅದು ಅಷ್ಟೇನೂ ಸತ್ತ್ವಪೂರ್ಣವಾಗಿಲ್ಲ. ಚಾಯಣ ಎಂದು ಬೇರೊಂದು ಹೆಸರು ಪಡೆದ ಸುಕುಮಾರ ಭಾರತಿ (ಸು. 1550) ರಚಿಸಿದ ಮಹಾಭಾರತದ ಅನುವಾದ ಮತ್ತೊಂದಿದೆ. ಮದರಾಸು ಓಲೆಯ ಗ್ರಂಥ ಭಂಡಾರದಲ್ಲಿರುವ ಶಿಥಿಲವಾದ ಒಂದು ಓಲೆಯ ಪ್ರತಿಯಲ್ಲಿ ದೊರೆಯುವ ಅದರ ಎರಡು ಅಧ್ಯಾಯಗಳ ಹೊರತು ಸಂಪೂರ್ಣ ಗ್ರಂಥ ದೊರೆತಿಲ್ಲ.

'ರಾಮಾಯಣ'ದ ಅನುವಾದಗಳಲ್ಲಿ ನರಹರಿಯ (ಕುಮಾರ ವಾಲ್ಮೀಕಿ ಸು. 1500) ಕೃತಿ ಅಷ್ಟೇನೂ ತೃಪ್ತಿಕರವಲ್ಲದಿದ್ದರೂ ಬಹು ಪ್ರಖ್ಯಾತವಾದುದು. ಕುಮಾರ ವ್ಯಾಸನ ಮಾತನ್ನು ಅನುಕರಿಸಲು ಯತ್ನಿಸಿದನು. ಆದರೆ ಆತನು ತನ್ನ ಗುರಿಯನ್ನು ಸಾಧಿಸಲಾರದೆ ಹೋದನು. ಧರ್ಮದಲ್ಲಿ ವೀರಶೈವನಾದ ಬತ್ತಲೇಶ್ವರನ ರಾಮಾಯಣ ಮೇಲೆ ಉಕ್ತವಾದ ಹೇಳಿಕೆಗೆ ಹೊರತಾದ ಗಮನಾರ್ಹವಾದ ಕೃತಿ. ಅದರ ಒಂದು ಪ್ರತಿಯನ್ನು ಮೈಸೂರು ಓರಿಯಂಟಲ್ ಲೈಬ್ರರಿ ಈಚೆಗೆ ಸಂಪಾದಿಸಿಕೊಂಡಿದೆ. ಅದನ್ನೊಮ್ಮೆ ಅವಲೋಕಿಸಿದಾಗ ಅದರ ವೀರಶೈವಧರ್ಮದ ಆವರಣ ಹಾಗೂ ವಾಲ್ಮೀಕಿಯ ರಾಮಾಯಣದಿಂದ ಅದು ಮಾಡಿಕೊಂಡಿರುವ ಮಾರ್ಪಾಟು ಎದ್ದು ಕಾಣುತ್ತದೆ.

ಪ್ರಸಕ್ತ ಪುನರ್ವಿಚಾರಕ್ಕೊಳಗಾದ ಕಾಲದಲ್ಲಿ 'ಭಾಗವತ'ವು ಕನ್ನಡಕ್ಕೆ ಎರಡು ಬಾರಿ ಅನುವಾದ ವಾಯಿತು. ನಾರಾಯಣ ಕವಿ (ಸು. 1450) ಅದನ್ನು ಗದ್ಯಕ್ಕೆ ಭಾವಾನುವಾದಮಾಡಿದಂತೆ ತೋರುತ್ತದೆ. ಆದರೆ ಆ ಗ್ರಂಥ ಉಳಿದಿಲ್ಲ. ಇನ್ನೊಂದು ಅನುವಾದ ಬರಲು ಅದು ದಾರಿ ಮಾಡಿಕೊಟ್ಟು ತನ್ನ ಸ್ಥಾನವನ್ನು ಬಿಟ್ಟುಕೊಟ್ಟಂತೆ ಕಾಣುತ್ತದೆ. ಸು. 1530ರಲ್ಲಿ ನಿತ್ಯಾತ್ಮಶುಕನೆಂದು ಪ್ರಸಿದ್ಧನಾದ ಸದಾನಂದಯೋಗಿ ಆ ಕೃತಿಯನ್ನು ಪದ್ಯರೂಪಕ್ಕೆ ತಿರುಗಿಸಿ ಪೂರ್ಣಗೊಳಿಸಿದನಂತೆ. ಆದರೆ ಹಾಗೆ ಪೂರ್ಣಗೊಳಿಸುವಲ್ಲಿ ಬೇರೆ ಬೇರೆ ಐವರ ಕೈವಾಡವಿರುವುದಾಗಿ ವಿದ್ವಾಂಸರ ಭಾವನೆ. ಅದೇನೇ ಆಗಿರಲಿ, ಕುಚೇಲನಂತಹರ ಕೆಲವು ಉಪಕಥೆಗಳು ಜನಸಾಮಾನ್ಯರ ಹೃದಯಗಳಲ್ಲಿ ಅಚ್ಚುಮೆಚ್ಚಿನ ಸ್ಥಾನಗಳನ್ನು ಗಳಿಸಿವೆಯೆನ್ನಬಹುದು. ಆ ಗ್ರಂಥದ ಕಾವ್ಯಗುಣಕ್ಕೆ ಅದೊಂದು ಸಾಕ್ಷಿ.

**ಕಥೆಗಳು**

ಈ ಕಾಲದ ಬ್ರಾಹ್ಮಣ ಕವಿಗಳು ವಿಜಯನಗರದ ಶಿಲ್ಪಿಗಳ ಹಾಗೆ ಬೃಹತ್ಕಾರ್ಯಗಳನ್ನು ಸಾಧಿಸಲು ಬಯಸಿದರು. ತಮ್ಮ ಕವಿತಾಸಾಮರ್ಥ್ಯವನ್ನು ಪ್ರದರ್ಶಿಸಲು ವಿಸ್ತಾರವಾದ ಚಿತ್ರಪಟಗಳನ್ನೇ ಆರಿಸಿಕೊಂಡರು. ಕರ್ನಾಟಕದಲ್ಲಿ ಮನೆಮಾತಾಗಿರುವ ಕನಕದಾಸರು, ಆಧ್ಯಾತ್ಮಿಕವಾಗಿ ಶ್ರೇಷ್ಠ ಬ್ರಾಹ್ಮಣನಿಗಿಂತಲೂ ಮಿಗಿಲಾಗಿ, ಮಹಾಕಾವ್ಯಗಳಿಂದ ಮುದ್ದಾದ ಕಥೆಗಳನ್ನು ಆರಿಸಿಕೊಂಡು ಅವುಗಳನ್ನು ನಯವಾಗಿ ಮತ್ತೆ ಹೇಳಿದರು. ಆತನ 'ನಳಚರಿತ್ರೆ' ಎಷ್ಟು ಜನಪ್ರಿಯ ಎಂದರೆ ಶಾಲಾಬಾಲಕರು ಅದನ್ನು ಕಂಠಪಾಠ ಮಾಡಿದ್ದಾರೆ. ಸರಳತೆ, ಚಿತ್ತಾಕರ್ಷತೆ, ಸೂಕ್ಷ್ಮವಾದ ಹಾಸ್ಯ ಹಾಗೂ ತೀವ್ರಗತಿಯ ಕಥನ ಅದನ್ನು ಸುಂದರವಾದ ಕೃತಿಯನ್ನಾಗಿಸಿವೆ. 'ಮೋಹನತರಂಗಿಣಿ'ಯು ಈ ಕವಿಯಿಂದಲೇ ರಚಿತವಾದ ಕಥೆ; ಶ್ರೀಕೃಷ್ಣನ ಜೀವನವನ್ನು ನಿರೂಪಿಸಲು ಮೀಸಲಾದುದು. ಅಷ್ಟು ಪ್ರಸಿದ್ಧವಲ್ಲವಾದರೂ ಕವಿಯ

ವ್ಯಕ್ತಿತ್ವದ ವಿಶಿಷ್ಟಗುಣಗಳ ಮುದ್ರೆಯನ್ನು ಹೊಂದಿದೆ. ಆತನ 'ರಾಮಧಾನ್ಯ ಚರಿತ್ರೆ' ಕುತೂಹಲಕರವಾದ ಕಥೆ; ಸಾಮಾನ್ಯಜನರ ಮುಖ್ಯ ಆಹಾರಧಾನ್ಯವಾದ ರಾಮಧಾನ್ಯ ಅಥವಾ ರಾಗಿಯು ಹಿರಿಮೆಯನ್ನು ಸ್ತುತಿಸುವ ಈ ಕಥೆಯನ್ನು ಕವಿಯೇ ಸೃಷ್ಟಿಸಿದನೆಂದು ತೋರುತ್ತದೆ. ಅದರಲ್ಲಿ ಬಹಳ ಕಟಕಿ ಹಾಗು ಮೃದು ಹಾಸ್ಯ ತುಂಬಿರುವಂತಿದೆ. ಇಲ್ಲಿ ಮತ್ತೊಬ್ಬ ಕವಿ ರಾಮರಸ ವಿರೂಪಾಕ್ಷನ (ಕ್ರಿ.ಶ. 1538) ಹೆಸರನ್ನು ಹೇಳಬಹುದು. ಇವನ ಕೃತಿ 'ಹರಿಶ್ಚಂದ್ರ ಸಾಂಗತ್ಯ'.

### ಭಕ್ತಿಗೀತಗಳು

'ದಾಸರ ಪದಗಳು' ಎಂದು ಜನಪ್ರಿಯವಾಗಿ ಕರೆದಿರುವ ಭಾವಗೀತಸಾಹಿತ್ಯದ ಒಂದು ವಿಪುಲರಾಶಿಯೇ ಇದೆ. ಅವರಲ್ಲಿ ಬಹುಪಾಲು ಇನ್ನೂ ಮುದ್ರಿತವಾಗಬೇಕಾಗಿದೆ. ಅದರ ವ್ಯಾಪ್ತಿ ನಿರ್ದಿಷ್ಟವಾಗಿ ಇನ್ನೂ ತಿಳಿದಿಲ್ಲ. ಜನಸಾಮಾನ್ಯರ ನಡುವೆ ಅನೇಕ ಹಾಡುಗಳು ಶಾಂತ ಸರೋವರದ ಮೇಲೆ ಬಿದ್ದ ಕುಸುಮಗಳಂತೆ ತೇಲುತ್ತಿವೆ. ಅವುಗಳಲ್ಲಿ ಎಷ್ಟನ್ನು ಸಂಗ್ರಹಿಸಲು ಸಾಧ್ಯವೋ ಅಷ್ಟನ್ನೂ ಒಟ್ಟುಗೂಡಿಸಿ ಮುದ್ರಿಸಲು ಪ್ರಯತ್ನವನ್ನು ಮಾಡಲಾಗುತ್ತಿದೆ. ಹೀಗಿರುವಾಗ ಈ ಸಾಹಿತ್ಯದ ಯಾವುದೇ ಅಭ್ಯಾಸ ಬೇಕಾಬಿಟ್ಟಿಯಾಗದೆ ವಿಧಿಯಿಲ್ಲ. ಆದರೆ ಅದರ ಮೂಲಸತ್ತ್ವ ಹಾಗೂ ಉದ್ದೇಶವನ್ನರಿಯಲು ಸಾಕಾದಷ್ಟು ಗೊತ್ತಾಗಿದೆ. ಅವುಗಳಲ್ಲಿ ಕೆಲವು ಕ್ರಮಬದ್ಧವಾದ ಹಾಡುಗಳು ಅಥವಾ ಕೀರ್ತನೆಗಳು; ನಿರ್ದಿಷ್ಟ ಸಂಗೀತಸ್ವರಗಳನ್ನುಳ್ಳವು. 'ಸುಳಾದಿ'ಗಳೆಂಬ ಮತ್ತೆ ಕೆಲವಾದರೊ ಗಾಯನ ಗುಣವಿಲ್ಲದೆ ಇಲ್ಲದ, ಒಂದು ಬಗೆಯ ಸರಳರಗಳೆಯಲ್ಲಿ ರಚಿತವಾಗಿ ವಿವಿಧ ತಾಳಕ್ಕೆ ಹೊಂದಿದವಾಗಿವೆ. ಈ ಕೃತಿಕಾರರು ಯಾವುದೇ ಜಾತಿಯವರಾಗಲಿ, ಅವರ ಕೀರ್ತನೆಗಳೆಲ್ಲವೂ ಭಕ್ತಿ ವೈರಾಗ್ಯಗಳ ಸತ್ತ್ವದ ಉಸಿರಾಗಿವೆ. ಅವರು ಪ್ರಾರ್ಥಿಸುವ ದೇವರ ಹೆಸರುಗಳು ಬೇರೆಯಾದರೂ ಉಳಿದೆಲ್ಲವೂ ಎಲ್ಲರಿಗೂ ಸರ್ವಸಮಾನವಾದುವು. ಈ ಕಾರಣದಿಂದಲೆ ಜೈನ ಮತ್ತು ವೀರಶೈವರ ಹಾಡುಗಳನ್ನು ಕೂಡ ಈ ವಿಭಾಗದಲ್ಲಿ ಸೇರಿಸಬಹುದಾಗಿದೆ.

ಈ ಸಮೀಕ್ಷೆಯ ವ್ಯಾಪ್ತಿಯೊಳಗೆ ಬರುವ ವೈಷ್ಣವ ಕೀರ್ತನಕಾರರಲ್ಲಿ ಕೀರ್ತನ ಕಲಾ ಪ್ರವೀಣರಾದ ಮೂವರನ್ನು ಕಾಣುತ್ತೇವೆ: ಶ್ರೀಪಾದರಾಯ (ಸು. 1500), ಪುರಂದರದಾಸ (ಸು. 1540) ಮತ್ತು ಕನಕದಾಸ (ಸು. 1550). ಶ್ರೀಪಾದರಾಯರು ಮುಳಬಾಗಿಲಿನ ಒಂದು ಮಾಧ್ವಮಠದ ಪೀಠಾಧಿಪತಿ; ತನ್ನ ಕಾಲದ ವಿಜಯನಗರದ ರಾಜರಲ್ಲಿ ಸ್ವಲ್ಪಮಟ್ಟಿಗೆ ಪ್ರಭಾವ ಹೊಂದಿದ್ದವರು. ಅವರು ರಚಿಸಿದ ಕೀರ್ತನೆಗಳ ಸಂಖ್ಯೆ ತಿಳಿದಿಲ್ಲ. ಆದರೆ ಅವರ ಹಾಡುಗಳ ಕೊನೆಯಲ್ಲಿ ಕಂಡುಬರುವ 'ರಂಗವಿಠಲ' ಎಂಬ ಅಂಕಿತದಿಂದ, ಅವರ ಹಾಡುಗಳನ್ನು ಬೇರೆಯ ಹಾಡುಗಳಿಂದ ಸುಲಭವಾಗಿ ಬೇರ್ಪಡಿಸಿ ತೋರಿಸಬಹುದು. ಕರ್ಣಾಟಕದಲ್ಲಿ ಪ್ರತಿದಿನವೂ ಪುರಂದರ ದಾಸರ ಅಥವಾ ಕನಕದಾಸರ ಹಾಡುಗಳನ್ನು ರೇಡಿಯೋ ಹಾಗೂ ಗ್ರಾಮೊಫೋನುಗಳ ಮೂಲಕ ಪ್ರಸಾರ ಮಾಡುತ್ತಿರುವ ಕಾರಣ, ಅವರ ಬಗೆಗೆ ಏನನ್ನೂ ಹೇಳಬೇಕಾದ ಅಗತ್ಯವಿಲ್ಲ.

ವೈಷ್ಣವದಾಸರ ಹಾಡುಗಳಿಗೆ ಹೋಲಿಸಿದಾಗ ವೀರಶೈವರ ಮತ್ತು ಜೈನರ ಹಾಡುಗಳ ಪ್ರಮಾಣ ಅಲ್ಪವೆ. ವೀರಶೈವರಲ್ಲಿ ಗುರುಬಸವ (ಸು. 1430) ಮತ್ತು ನಿಜಗುಣ ಶಿವಯೋಗಿ (ಸು. 1500) ಗಳು ಕೆಲವು ಹಾಡುಗಳನ್ನು ರಚಿಸಿದವರೆಂದು ಖ್ಯಾತರಾಗಿದ್ದಾರೆ. ಜೈನಕವಿ ರತ್ನಾಕರ (1557) ತನ ಮತದವರಿಗೆ ಇಂಥದೇ ಸೇವೆಯನ್ನು ಸಲ್ಲಿಸಿದ್ದಾನೆ. ಆ ಹಾಡುಗಳಲ್ಲಿ ಕೀರ್ತನಕಾರರಿಗೆ ಇನ್ನೂ ದೊರೆಯದೆ ಹೋಗಿರುವವು ಅನೇಕವಿರಬೇಕು.

### ಶತಕಗಳು

ಈ ಕಾಲದ ಶತಕಸಾಹಿತ್ಯ ಬಹಳ ಫಲವತ್ತಾದುದೆ. ಆರು ಮುಂದಿಗಿಂತ ಹೆಚ್ಚು ಕವಿಗಳು ಬರೆದಿರುವ ಸುಮಾರು ಹದಿನೈದು ಶತಕಗಳಿವೆ. ಪ್ರತಿಯೊಬ್ಬ ಕವಿಯ ಉದ್ದೇಶವೂ ತನ್ನ ಮನೋಧರ್ಮಕ್ಕನು ಗುಣವಾಗಿಯೇ ಕೆಲವು ನೈತಿಕ ಸತ್ಯಗಳನ್ನು ಮನಸ್ಸಿಗೆ ಹತ್ತುವಂತೆ ಬೋಧಿಸುವುದಾಗಿತ್ತು. ಅವರಲ್ಲಿ ಪ್ರತಿಯೊಬ್ಬನೂ ಮಾನವನ ನಿಸ್ಸಹಾಯಕತೆ ಹಾಗೂ ದೇವರ ಸರ್ವವ್ಯಾಪಕ ಶಕ್ತಿಗಳ ಬಗೆಗೆ ತನ್ನ ಹೃದಯವನ್ನು ತೋಡಿಕೊಂಡು ಆ ಸರ್ವಾಂತರ್ಯಾಮಿ ತನ್ನ ಕಷ್ಟಕ್ಕೊದಗಿ, ತನಗುಂಟಾದ ದುಃಖ ವನ್ನು ದೂರ ಮಾಡುವಂತೆ ಆತನಿಗೆ ಮೊರೆಯಿಟ್ಟಿದ್ದಾನೆ. ನಿರಾಶಾವಾದ ಹಾಗೂ ಭಗವತ್ಪ್ರಾರ್ಥನೆಗಳೇ ಎಲ್ಲ ಶತಕಗಳ ಉಸಿರು, ಜೈನರ ಜಗದುತ್ಪತ್ತಿಯನ್ನು ವರ್ಣಿಸುವ ರತ್ನಾಕರನ 'ತ್ರಿಲೋಕ ಶತಕ' ವೊಂದರಲ್ಲಿ ಬಿಟ್ಟು ಉಳಿದೆಲ್ಲ ಶತಕಗಳಲ್ಲಿ ಪ್ರತಿಪಾದಿತವಾಗಿರುವ ಪ್ರಮುಖ ವಿಷಯಗಳೆಂದರೆ ಭಕ್ತಿ, ಜ್ಞಾನ ಮತ್ತು ವೈರಾಗ್ಯ. ಮಗ್ಗೆಯ ಮಾಯಿದೇವ (ಸು. 1430) ಈ ತಂಡದ ಪ್ರಾರಂಭದ ಶತಕಕಾರ; ಗಮನಾರ್ಹವಾದ ಮನಃಪರಿಣಾಮಕಾರಿಯಾದ ಶಕ್ತಿಯಿಂದೊಡಗೂಡಿದ ಮೂರು ಶತಕಗಳನ್ನು ನೀಡಿದ್ದಾನೆ. ಚಂದ್ರ (ಸು. 1430), ಗುಮ್ಮಟಾರ್ಯ (ಸು. 1500), ಸಿರಿನಾಮಧೇಯ (ಸು. 1560) ಮತ್ತು ಚನ್ನಮಲ್ಲಿಕಾರ್ಜುನ (ಸು. 1560)—ಈ ಒಬ್ಬೊಬ್ಬರು ಮನಮುಟ್ಟಿ ರಸಾವೇಶವನ್ನುಂಟು ಮಾಡುವ ಒಂದೊಂದು ಶತಕವನ್ನು ರಚಿಸಿ ಆಸ್ತಿಯಾಗಿ ಬಿಟ್ಟು ಹೋಗಿದ್ದಾರೆ. ಈ ವಿಷಯದಲ್ಲಿ ರತ್ನಾಕರನ ಅಪರಾಜಿತೇಶ್ವರ ಶತಕವೇ ಬಹು ಶ್ರೇಷ್ಠವೆಂದು ಹೇಳಬಹುದು. ವೀರಭದ್ರರಾಜನು (ಸು. 1530) ಅಸಾಧಾರಣ ಗುಣದಿಂದ ಕೂಡಿದ ಐದು ಶತಕಗಳನ್ನು ಬರೆದಿದ್ದಾನೆ.

### ಲೌಕಿಕವಿದ್ಯಾಶಾಸ್ತ್ರಗಳು

ಈ ಕಾಲದ ವೈಜ್ಞಾನಿಕ ಸಾಹಿತ್ಯದ ವಿವರವಾದ ವ್ಯಾಸಂಗ ಅದರ ಆಧುನಿಕ ಅರ್ಥಸಂಬಂಧ ವನ್ನುಳ್ಳ ಈ ವಿಶೇಷಣವನ್ನು ಖಚಿತವಾಗಿ ಹೊಂದಲು ಅರ್ಹವಲ್ಲದಿದ್ದರೂ ಆಸಕ್ತಿಯನ್ನುಂಟುಮಾಡುವುದಾಗಿದೆ; ಪ್ರಯೋಜನಕಾರಿಯೂ ಆಗಿದೆ. ಈ ವಿಭಾಗದಲ್ಲಿ ಮನುಷ್ಯವೈದ್ಯ, ಪಶುವೈದ್ಯ, ಅಲಂಕಾರ, ನಿಘಂಟು, ಜೋತಿಷ್ಯ, ಕಾಮ ಹಾಗೂ ಪಾಕಶಾಸ್ತ್ರಗಳನ್ನು ಕುರಿತ ಗ್ರಂಥಗಳು ಬರುತ್ತವೆ.

ಇವುಗಳಲ್ಲಿ ವ್ಯಾಪಕವಾಗಿ ಕೃಷಿ ಮಾಡಿದ್ದೆಂದರೆ ವೈದ್ಯಶಾಸ್ತ್ರ ಮತ್ತು ಅದರ ಪ್ರಯೋಗ. ಈ ಶಾಸ್ತ್ರಕ್ಕೆ ಸಂಬಂಧಿಸಿದ ಆರು ಗ್ರಂಥಗಳಿವೆ. ಶ್ರೀಧರದೇವನ (ಸು. 1500) 'ವೈದ್ಯಾಮೃತ' ಮತ್ತು ಸಾಳ್ವನ (ಸು. 1550) 'ವೈದ್ಯ ಸಾಂಗತ್ಯ' ಮನುಷ್ಯ ವ್ಯಾಧಿಗಳಿಗೆ ಕೆಲವು ವೈದ್ಯಗಳನ್ನು ಹೇಳುತ್ತವೆ. ದೊರೆ ಹರಿಹರನ ಆಶ್ರಯದಲ್ಲಿ ಬರೆದ ಮಂಗರಾಜನ (ಸು. 1360) 'ಖಗೇಂದ್ರಮಣಿದರ್ಪಣ'ವಾದರೊ ನಾನಾ ಬಗೆಯ ವಿಷಗಳು, ಅವುಗಳ ಪರಿಣಾಮ ಹಾಗೂ ವಿಷಹಾರಿಗಳ ಮೇಲೆ ರಚಿತವಾದ ಉದ್ಗ್ರಂಥ. ಅಭಿನವ ಚಂದ್ರ (ಸು. 1400) ಮತ್ತು ಬೇಚರಸ (ಸು. 1500) ಇವರೊಬ್ಬೊಬ್ಬರೂ ಬಗೆಬಗೆಯ ಕುದುರೆಗಳು, ಅವುಗಳ ರೋಗಗಳು ಹಾಗೂ ಔಷಧಿಗಳು—ಇವುಗಳನ್ನು ವಿವರವಾಗಿ ವರ್ಣಿಸುವ ಗ್ರಂಥಗಳನ್ನು ರಚಿಸಿದ್ದಾರೆ.

ಅಲಂಕಾರಶಾಸ್ತ್ರದ ಅಭ್ಯಾಸದಲ್ಲಿ ತೊಡಗಿದ ಗ್ರಂಥಕಾರರು ಮೂವರು ಮಾತ್ರ ಇದ್ದಾರೆ. ಅವರಲ್ಲಿ ಬಹಳ ಪ್ರಸಿದ್ಧನಾದವನು ಸಾಳ್ವ (ಸು 1550). ಆತನು 'ರಸರತ್ನಾಕರ' ಮತ್ತು 'ಶಾರದಾವಿಲಾಸ'ಗಳ ಕರ್ತೃ. ಅವು ಕ್ರಮವಾಗಿ 'ರಸ' ತತ್ತ್ವವನ್ನೂ ಸಾಹಿತ್ಯದಲ್ಲಿ 'ಧ್ವನಿ'ಯ ಕಲ್ಪನೆಯನ್ನೂ ಪ್ರಾಚೀನ ಗ್ರಂಥಗಳಿಂದ ಆರಿಸಿದ ಅನೇಕ ಲಕ್ಷ್ಯಪದ್ಯಗಳೊಡನೆ ಅರ್ಥ ವಿವರಣೆ ಮಾಡಿವೆ. ಅವುಗಳ ಕರ್ತೃ ಈ

ವಿಷಯಗಳನ್ನು ಕುರಿತು ಬರೆದಿರುವ ಹಿಂದಿನ ಆಲಂಕಾರಿಕರು ಮಾಡಿದ ಪರಿಶೋಧನೆಗೆ ತನ್ನದೇ ಆದ ಯಾವ ಕೊಡುಗೆಯನ್ನು ನೀಡದಿದ್ದರೂ ಆತನ ಗ್ರಂಥಗಳಿಗೆ ತಕ್ಕ ಬೆಲೆ ಇನ್ನೂ ಇದ್ದೇ ಇದೆ. 'ಕವಿಜಿಹ್ವಾಬಂಧನ'ದ ಕರ್ತೃ ಈಶ್ವರಕವಿ (ಸು 1550) ಚಮತ್ಕಾರದ ಕವಿ ; ನಾಲ್ಕು ಆಶ್ವಾಸಗಳ ಸಣ್ಣ ಗ್ರಂಥದಲ್ಲಿ ಛಂದಸ್ಸು, ವ್ಯಾಕರಣ ಮತ್ತು ಕನ್ನಡ ಭಾಷೆಯ ಉಪಭಾಷೆಗಳನ್ನು ಕುರಿತು ಕೆಲವು ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾನೆ. ಯಾವುದೇ ವಿಶಿಷ್ಟ ಉದ್ದೇಶ ಅದರದಲ್ಲ. ಛಂದಸ್ಸು ಮತ್ತು ವ್ಯಾಕರಣಗಳ ಬಗೆಗೆ ಮಾಡಿದ ಟೀಕೆಗಳಲ್ಲಿ ಹೊಸತೇನೂ ಇಲ್ಲ. ಕನ್ನಡದಲ್ಲಿ 1200 ಬಗೆಯ ಭಾಷಾ ರೂಪಭೇದಗಳುಂಟೆಂಬ ಹೇಳಿಕೆಯಲ್ಲಿ ಅನುಮಾನ ಹುಟ್ಟುತ್ತದೆ. ಮಾಧವನ (ಸು 1500) 'ಮಾಧವಾಲಂಕಾರ' ದಂಡಿಯ 'ಕಾವ್ಯಾದರ್ಶ'ದ ಅಕ್ಷರಶಃ ಭಾಷಾಂತರ.

ನಿಘಂಟು ರಚನೆಯನ್ನು ಕುರಿತು ಹೆಚ್ಚು ಹೇಳುವಂತಹದಿಲ್ಲ. ಬಹಳ ಮೊದಲು ಬರೆದವನೆಂದರೆ ಅಭಿನವ ಮಂಗರಾಜ (1398) ; 'ಮಂಗಾಭಿಧಾನ'ದ ಕರ್ತೃ. ಬೊಮ್ಮರಸನ (ಸು 1450) 'ಚತುರಾಸ್ಯ ನಿಘಂಟು,' ಲಿಂಗಮಂತ್ರಿಯ (ಸು 1530) 'ಕಬ್ಬಿಗರ ಕೈಪಿಡಿ' ಗಾತ್ರದಲ್ಲಿ ಕಿರಿದಾಗಿ ಹೆಚ್ಚು ಜನಪ್ರಿಯವಾದುವು. ವಿರಕ್ತ ತೋಂಟದಾರ್ಯನ (ಸು 1560) 'ಕರ್ಣಾಟಕ ಶಬ್ದಮಂಜರಿ'ಯಾದರೋ ಅವುಗಳನ್ನು ಮೀರಿಸುವಂಥದು. ತಮಿಳು ಸಾಹಿತ್ಯದಲ್ಲಿ ದೊರೆಯುವ ಅಸಂಖ್ಯಾತ ನಿಘಂಟುಗಳ ಪ್ರಮಾಣಕ್ಕೆ ಉದಾಹರಣೆಗಾಗಿ ಹೋಲಿಸುವುದಾದರೆ, ಕನ್ನಡದ ನಿಘಂಟುಗಳ ಮೊತ್ತ ನಿಜವಾಗಿಯೂ ಅಲ್ಪವೇ ಸರಿ.

ಜೋತಿಷ ಹಾಗೂ ಶಕುನ ಕುರಿತಿರುವ ನಾಲ್ಕು ಗ್ರಂಥಗಳು ದೊರೆಯುತ್ತವೆ. ಶುಭಚಂದ್ರನ 'ನರಪಿಂಗಳಿ' ಲಕ್ಷ್ಮಣಾಂಕನ 'ಶಕುನಸಾರ' ಹಾಗೂ ಚಾಕರಾಜನ 'ಶಕುನ ಪ್ರಪಂಚ'–ಸು 1500 ಕ್ಕೆ ಸೇರಿದ ಈ ಎಲ್ಲವೂ ಪಕ್ಷಿ, ಪ್ರಾಣಿ ಮತ್ತು ಶುಭಾಶುಭ ಶಕುನವಸ್ತುಗಳನ್ನು ಕುರಿತವು. ಗಂಗಾಧರನ (ಸು 1550) 'ರಟ್ಟಜಾತಕ' ಜ್ಯೋತಿಷ ಹಾಗೂ ಜಾತಕ ವಿದ್ಯೆಯನ್ನು ಕುರಿತು ರಚಿತವಾದುದು. ಕೆಲವು ಸಮಕಾಲೀನ ಮೂಢ ನಂಬಿಕೆಗಳನ್ನು ರಾಜರ ಕಾರ್ಯಗಳೂ ಅವಲಂಬಿಸಿದ್ದುವೆಂಬುದನ್ನು ಈ ಎಲ್ಲವೂ ಹೊರಗೆಡಹುತ್ತವೆ.

ಕಾಮಶಾಸ್ತ್ರ, ಪಾಕಶಾಸ್ತ್ರಗಳನ್ನು ನಿರೂಪಿಸುವ ಒಂದೊಂದು ಗ್ರಂಥವುಂಟು. ದೊರೆ ಮಲ್ಲಿಕಾರ್ಜುನನ ಮನೋಲ್ಲಾಸಕ್ಕಾಗಿ ರಚಿತವಾದ ಕಲ್ಲರಸನ (ಸು 1450) 'ಜನವಶ್ಯ' ಕಾಮ ಹಾಗು ಕಾಮೋದ್ದೀಪಕ ವಸ್ತುಗಳ ವಿಷಯವನ್ನು ನಿರೂಪಿಸುತ್ತದೆ. ಮೂರನೆ ಮಂಗರಾಜನ (1508) 'ಸೂಪಶಾಸ್ತ್ರ' ಒಳ್ಳೆಯ ಜೀರ್ಣಶಕ್ತಿಯಿರುವ ಕೆಲವರಿಗೆ ಸಂತೋಷವನ್ನು ತರುತ್ತದೆ.

**ಅಸಮಗ್ರ ಐತಿಹಾಸಿಕ ಕೃತಿಗಳು**

ಕನ್ನಡ ಸಾಹಿತ್ಯ, ಚರಿತ್ರೆಯನ್ನು ಚರಿತ್ರೆಯ ಸಲುವಾಗಿಯೇ, ವ್ಯಾಸಂಗದ ಒಂದು ವಿಶಿಷ್ಟ ಶಾಖೆಯಾಗಿ ಹೆಚ್ಚು ಲಕ್ಷ್ಯಕ್ಕೆ ತೆಗೆದುಕೊಳ್ಳದಿದ್ದರೂ ಅಸಂಖ್ಯಾತ ಬಖೈರುಗಳು, ಕೈಫಿಯತ್ತುಗಳು ಮತ್ತು ಸ್ಥಳೀಯ ಕಾಗದ ಪತ್ರಗಳು ತುಂಬಿವೆ. ಅವುಗಳನ್ನು ಪರಿಶೋಧಿಸಿ ಕ್ರಮಬದ್ಧವಾಗಿ ಅಭ್ಯಾಸ ಮಾಡಿಲ್ಲ. ಅವುಗಳಲ್ಲಿ ಕೆಲವು ಇಲ್ಲಿ ವರ್ಣಿಸುವ ಕಾಲಾವಧಿಗೆ ಸಂಬಂಧಪಟ್ಟವು ಇರಬಹುದು. ಸಾಹಿತ್ಯವಲ್ಲಿ ಈ ಬಗೆಯ ಉದಾಹರಣೆ ಒಂದೇ ಒಂದಿದೆ. ನಂಜುಂಡನ (ಸು 1525) 'ಕುಮಾರರಾಮನ ಕಥೆ' ಕಲ್ಪಿತ ಹಾಗೂ ಸಾಹಸಕಥನಗಳೊಡನೆ ಬೆರೆತ ಚರಿತ್ರೆ. ಚರಿತ್ರಕಾರರು ಒಬ್ಬಿಬ್ಬರು ಆ ಕಾವ್ಯವನ್ನು

ವಿಶ್ಲೇಷಿಸಿ ಕೆಲವು ಐತಿಹಾಸಿಕ ವಾಸ್ತವಾಂಶಗಳನ್ನು ಗುರುತಿಸಿದ್ದಾರೆ. ಕಾವ್ಯದೃಷ್ಟಿಯಿಂದ ಆ ಕೃತಿ ಸಂಪೂರ್ಣವಾಗಿ ಅಲಕ್ಷಿಸುವಂತಿಲ್ಲ.

ಸುಮಾರು ಎರಡೂವರೆ ಶತಮಾನಗಳ ಕಾಲದ ಸಾಹಿತ್ಯಚಟುವಟಿಕೆಯ ಈ ಮೇಲಣ ಪರಿಚಯದಿಂದ ಕವಿತ್ವದಲ್ಲಿ ಕೆಲವು ಗುಣೋತ್ಕರ್ಷಗಳ ಶಿಖರಸ್ಥಾನಗಳಿವೆಯೆಂಬುದು ಸುಸ್ಪಷ್ಟವಾಗಿದೆ. ವಿಜಯನಗರ ಸಂಸ್ಕೃತಿ ಕಲೆಗಳ ಉಚ್ಚ ಹಾಗೂ ಪರಿಪೂರ್ಣ ಅಭಿವ್ಯಕ್ತಿಯನ್ನು ಸುಲಭವಾಗಿ ಕುಮಾರವ್ಯಾಸನಲ್ಲಿ ಕಾಣಬಹುದು. ಜೈನರಲ್ಲಿ ರತ್ನಾಕರನ ಸರ್ವೋತ್ಕೃಷ್ಟತೆಯನ್ನು ಸ್ಪರ್ಧಿಸುವವನು ಯಾವನೂ ಇಲ್ಲ. ವೀರಶೈವರಲ್ಲಿ ಚಾಮರಸನ ಹಿರಿಮೆಯ ಹಕ್ಕು ಗುರುತರವಾದರೂ ಅವನ್ನು ಸೌಂದರ ಪುರಾಣದ ಬೊಮ್ಮರಸ ಹಾಗೂ ಗುರುಲಿಂಗವಿಭು ಒಪ್ಪಿಕೊಂಡಿಲ್ಲ. ವೈಷ್ಣವದಾಸರ ಅದ್ಭುತ ಚಟುವಟಿಕೆ ಸಕಲರ ಕೃತಜ್ಞತೆಯನ್ನು ಸಂಪಾದಿಸಿ ಕೊಟ್ಟಿದೆ. ಭಾರತದ ಬಹು ಭಾಗಗಳಲ್ಲಿ ನ್ಯಾಯವಾಗಿ ಸ್ತುತ್ಯವಾಗಿರುವ 'ಕರ್ಣಾಟಕ ಪದ್ಧತಿ' ಎಂಬ ಸಂಗೀತದ ಸಂಪ್ರದಾಯನ್ನು ಸ್ಥಾಪಿಸುವಲ್ಲಿ ಅವರು ಯಶಸ್ವಿಗಳಾದರು.

ಮೂಲ ಲೇಖಕರು : ಡಾ॥ ಡಿ. ಎಲ್. ನರಸಿಂಹಾಚಾರ್
ಅನುವಾದಕರು : ಶ್ರೀ ಸಿ. ಮಹಾದೇವಪ್ಪ



# ಸಂಸ್ಕೃತ

## (ವಿಜಯನಗರದ ಕಾಲ ಕ್ರಿ.ಶ. 1336-1565)

ವಿಜಯನಗರದ ಕಾಲವು ಒಟ್ಟಿನಲ್ಲಿ ಭಾರತ ದೇಶದ, ನಿರ್ದಿಷ್ಟವಾಗಿ ಕರ್ಣಾಟಕ ಚರಿತ್ರೆಯಲ್ಲಿ ಅತ್ಯಂತ ಉಜ್ವಲವಾದ ಕಾಲಗಳಲ್ಲೊಂದು. ಈ ಮಾತು ಸಾಹಿತ್ಯ ಚರಿತ್ರೆಗೆ ವಿಶೇಷವಾಗಿ ಅನ್ವಯಿಸುತ್ತದೆ. ಈ ಚಕ್ರಾಧಿಪತ್ಯವು ಬೇರೆ ಬೇರೆ ಸಂಸ್ಕೃತಿಗಳನ್ನೂ ಮತಗಳನ್ನೂ ನಾಶಪಡಿಸುವುದಕ್ಕೆ ಪ್ರಯತ್ನಿಸದೆ, ಮುಖ್ಯವಾಗಿ ಹಿಂದೂ ಸಮಾಜದ ಸಂಸ್ಕೃತಿಯನ್ನು ಸ್ಥಿರಗೊಳಿಸಿ ಅಭಿವೃದ್ಧಿಪಡಿಸುವುದಕ್ಕೆ ಶ್ರಮಿಸಿತು. ವಿಜಯನಗರದ ರಾಜರ ಪ್ರಜಾಹಿತಕರವಾದ ಚಟುವಟಿಕೆಗಳಲ್ಲಿ ವಾಸ್ತುಶಿಲ್ಪಿಗಳಿಗೂ ಕಲೆಗಾರರಿಗೂ ವಿದ್ವಾಂಸರಿಗೂ ಆಶ್ರಯಕೊಡುವುದು ಬಹು ಪ್ರಧಾನವಾದ ಅಂಶವಾಗಿತ್ತು. ರಾಜ್ಯದ ಮನ್ನೆಯರೂ ಶ್ರೀಮಂತ ಪೌರರೂ ಕೂಡ ರಾಜರು ಹಾಕಿದ ಮೇಲ್ಪಂಕ್ತಿಯನ್ನೇ ಅನುಸರಿಸಿದರು. ಈ ಸಂಪ್ರದಾಯವು ಸಾಮ್ರಾಜ್ಯ ಒಡೆದು ಚೂರಾದ ಮೇಲೂ ನಿಲ್ಲದೆ ನಡೆದುಕೊಂಡೇ ಬಂತು; ತಂಜಾವೂರು, ಮಧುರೆ, ತಿರುವಾಂಕೂರುಗಳಂಥ ಕೇಂದ್ರಗಳಲ್ಲಿ ಮುಂದುವರಿಯುತ್ತಲೇ ಇತ್ತು.

ರಾಜಕೀಯ ಪರಿಸ್ಥಿತಿಗಳು ಸಂಸ್ಕೃತ ಸಾಹಿತ್ಯದ ನಿರ್ಮಾಣದಲ್ಲಿ ಗಣನೀಯ ಪರಿಣಾಮವನ್ನೇನೂ ಉಂಟುಮಾಡಲಿಲ್ಲ; ಸಾಹಿತ್ಯ ನಿರ್ಮಾಣ ಅವಿಚ್ಛಿನ್ನವಾಗಿ ನಡೆಯುತ್ತಲೇ ಇತ್ತು; ಆದರೆ ಅದರಲ್ಲಿ ಬಹು ಪಾಲಿನದರಲ್ಲಿ ಸ್ವತಂತ್ರ ಕಲ್ಪನೆಯಾಗಲಿ ಸೃಷ್ಟ್ಯಾತ್ಮಕ ಪ್ರತಿಭೆಯಾಗಲಿ ಕಾಣುತ್ತಿರಲಿಲ್ಲವೆಂದು ಒಪ್ಪಿಕೊಳ್ಳಲೇ ಬೇಕು. ಬಹು ಪಾಲಿನ ಗ್ರಂಥಗಳು ವಿದ್ವಾಂಸರಿಗೆ ಮಾತ್ರ ಉದ್ದೇಶಿತವಾಗಿದ್ದವು; ಅದರಲ್ಲಿ ತಕ್ಕಷ್ಟು ಭಾಗ ಮತಸಂಬಂಧವಾದ ವಾದವಿವಾದಗಳಿಗೆ ಮೀಸಲಾಗಿತ್ತು. ವಿದ್ವಜ್ಜನರು ಪ್ರಮಾಣಗ್ರಂಥಗಳನ್ನು ರಚಿಸುವುದಕ್ಕೂ ಪ್ರಯತ್ನಪಡುತ್ತಿದ್ದರು.

ವಿಜಯನಗರದ ರಾಜರಲ್ಲಿ ಅನೇಕರು ಒಂದಕ್ಕಿಂದ ಹೆಚ್ಚು ಭಾಷೆಗಳನ್ನು ಬಲ್ಲವರಾಗಿದ್ದರು. ಕೆಲವರು ತಾವೇ ಸ್ವತಃ ಕವಿಗಳೂ ಗ್ರಂಥಕಾರರೂ ಆಗಿದ್ದರು. ಆ ಕಾಲದಲ್ಲಿ ದೇಶದ ಇತರ ಭಾಗಗಳಲ್ಲಿ ಅಶಾಂತ ಪರಿಸ್ಥಿತಿಯಿದ್ದದ್ದರಿಂದ ಕವಿಗಳೂ ಪಂಡಿತರೂ ಎಲ್ಲಾ ಕಡೆಗಳಿಂದಲೂ ವಿಜಯನಗರದ ರಾಜರ ಆಸ್ಥಾನಕ್ಕೆ ಬಂದು ಸೇರುತ್ತಿದ್ದರು. ಅವರ ಪರಿಶ್ರಮದ ಫಲವಾಗಿ ಬಹು ಸಂಖ್ಯೆಯ ಸಾಹಿತ್ಯ ಕೃತಿಗಳೂ ವ್ಯಾಖ್ಯಾನ ಗ್ರಂಥಗಳೂ ಇತರ ಗೌಣ ಗ್ರಂಥಗಳೂ ರಚಿತವಾದುವು. ಆದರೆ, ಹಳೆಯ ಗ್ರಂಥಗಳ ಮೇಲಿನ ವ್ಯಾಖ್ಯಾನಗಳೇ ಹೆಚ್ಚು. ಸ್ವತಂತ್ರಗಳು ಬಹು ವಿರಳ. ಆದರೆ, 1565ರಲ್ಲಿ ಆದ ನಗರದ ಸರ್ವನಾಶದಲ್ಲಿ ಆಗ ಹಸ್ತ ಪ್ರತಿಗಳಲ್ಲಿ ಇದ್ದಿರಬಹುದಾದ ಅಪಾರ ಗ್ರಂಥರಾಶಿ ಪೂರ್ತಿಯಾಗಿ ನಷ್ಟವಾಗಿ ಹೋಗಿರುವ ಸಂಭವವುಂಟೆಂಬುದನ್ನು ಮರೆಯಬಾರದು. ಆ ಪ್ರಳಯದಲ್ಲಿ ಕಳೆದುಳಿದಿರುವುದು ಆ ಮೊದಲು ಇದ್ದಿರಬಹುದಾದ ಸೃಷ್ಟಿಯ ಕೇವಲ ಅತ್ಯಲ್ಪಾಂಶ.

ವಿಜಯನಗರದ ಹೆಸರನ್ನೆತ್ತಿದೊಡನೆಯೇ ಪಾಂಡಿತ್ಯಪೂರ್ಣ ಸಂತಮೂರ್ತಿಯಾದ ವಿದ್ಯಾರಣ್ಯರ ನೆನಪಾಗುತ್ತದೆ.

ಬ್ರಹ್ಮತೇಜಸ್ಸೂ ಕ್ಷಾತ್ರತೇಜಸ್ಸೂ ಸರಿಯಾದ ಪ್ರಮಾಣದಲ್ಲಿ ಜೊತೆಗೂಡಿದರೆ ಮಾತ್ರ ಒಳ್ಳೆಯ ರಾಜ್ಯಾಡಳಿತ ಸಾಧ್ಯವೆಂಬುದು ವೈದಿಕ ಆದರ್ಶ. ವಿದ್ಯಾರಣ್ಯರು ಸದಾ ಈ ಆದರ್ಶವನ್ನು ಮುಂದಿಟ್ಟು ಕೊಂಡಿದ್ದರು. ಹುಕ್ಕ ಬುಕ್ಕರಿಂದ 'ರಾಷ್ಟ್ರೀಯ ಸರ್ಕಾರ' ಸ್ಥಾಪಿತವಾದ ಮೇಲೆ ವಿದ್ಯಾರಣ್ಯರು ತಾತ್ತ್ವಿಕ ಮತ್ತು ಇತರ ಬಗೆಯ ಸಾಹಿತ್ಯಸಾಮ್ರಾಜ್ಯದತ್ತ ಗಮನ ಹರಿಸಿದರು. ವಿದ್ವತ್ತಿನ ಬೇರೆ ಬೇರೆ ಶಾಖೆಗಳಲ್ಲಿ ನಿಷ್ಣಾತರಾದವರಿಗೆಲ್ಲ ಅವರು ಕರೆಕಳಿಸಿದರು. ಸಾಮ್ರಾಜ್ಯದ ವಿದ್ವದ್ವರ್ಗ ಮನಃಪೂರ್ವಕವಾಗಿ ಅವರಿಗೆ ಸಹಕಾರ ನೀಡಿತು. ಇದರ ಫಲವಾಗಿ ಆ ಕಾಲದಲ್ಲಿ ಅನೇಕಾನೇಕ ಸಾಹಿತ್ಯಕೃತಿಗಳು ರಚಿತವಾದವು. ಬಹುಪಾಲಿನ ಕೃತಿಗಳು 'ಮಾಧವೀಯ' ಎಂಬ ಹೆಸರಿನಿಂದ ಪ್ರಸಿದ್ಧವಾಗಿವೆ. ಇದರಿಂದ ವ್ಯಕ್ತವಾಗುವುದೇನೆಂದರೆ, ಈ ಸಾಹಿತ್ಯ ಚಟುವಟಿಕೆಗಳಿಗೆಲ್ಲಾ ಸ್ಫೂರ್ತಿದಾತನೂ ನಿರ್ದೇಶಕನೂ ಆಶ್ರಯದಾತನೂ ಮಾಧವನೇ ಆಗಿದ್ದನೆಂಬುದು. ಆದರೆ. ಗ್ರಂಥಕಾರರೆಂದು ನಮಗೆ ಗೊತ್ತಿರುವುದು ಎರಡೇ ಹೆಸರುಗಳು; ಮಾಧವ ಮತ್ತು ಅವನ ಸೋದರ ಸಾಯಣ. ಅತ್ಯದ್ಭುತವಾದ ಆ ವಿಪುಲ ಗ್ರಂಥರಾಶಿಯ ನಿರ್ಮಾಣದಲ್ಲಿ ನೇರವಾಗಿ ಪಾಲ್ಗೊಂಡಿದ್ದ ಮಹಾಪಂಡಿತರುಗಳು ತಾವು ಸದಾ ಹಿನ್ನೆಲೆಯಲ್ಲೇ ಉಳಿದು ತಮ್ಮ ರಚನೆಗಳೆಲ್ಲಾ ಮಹಾಮಹಿಮನಾದ ತಮ್ಮ ನಿರ್ದೇಶಕನ ಹೆಸರಿನಲ್ಲೇ ಪ್ರಕಟವಾಗುವುದಕ್ಕೆ ಅವಕಾಶ ಮಾಡಿದರು. ಭಾರತೀತೀರ್ಥರು ವಿದ್ಯಾರಣ್ಯರ ಗುರುಗಳು; ಅವರಿಗಿಂತ ಮೊದಲು ಶೃಂಗೇರೀ ಪೀಠಸ್ಥರಾಗಿದ್ದವರು. ಅವರೂ ಸಾಯಣಭೋಗನಾಥರೂ ಅವರ ಸೋದರರೂ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಆದರೆ, ಅವೆಲ್ಲಾ ಸಾಧಾರಣವಾಗಿ ವಿದ್ಯಾರಣ್ಯ ಅಥವಾ ಮಾಧವ ಎಂಬ ಹೆಸರಿನಲ್ಲೇ ಪ್ರಸಿದ್ಧವಾಗಿವೆ.

## 1 ವೇದ ಮತ್ತು ಅದಕ್ಕೆ ಸಂಬಂಧಿಸಿದ ಸಾಹಿತ್ಯ

**ವೇದಾರ್ಥಪ್ರಕಾಶ :**

ಈ ಕಾಲದ ಸರ್ವೋತ್ತಮ ಕೃತಿಯೆಂದರೆ 'ವೇದಾರ್ಥಪ್ರಕಾಶ'. ವೇದಗಳಿಗೆ ಸ್ಪಷ್ಟವಾದ ಸರಳವಾದ ವ್ಯಾಖ್ಯಾನ ಬರೆಯಬೇಕೆಂಬ ಘನಕಾರ್ಯವನ್ನು ಸಾಯಣರಿಗೆ ವಹಿಸಿತ್ತು. ಸಾಯಣ ವಿದ್ಯಾರಣ್ಯರಿಗೆ ತಕ್ಕ ಸೋದರ. ವಿದ್ಯಾರಣ್ಯರು ಸಮಗ್ರಕಾರ್ಯದ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದರು. ಭಾರತ ದೇಶದ ಬೇರೆ ಬೇರೆ ಪ್ರದೇಶಗಳಲ್ಲಿ ಹುಟ್ಟಿ ಬೆಳೆದವರೂ ವೇದಗಳ ಬೇರೆ ಬೇರೆ ಕ್ಷೇತ್ರಗಳಲ್ಲಿ ಪಾಂಡಿತ್ಯ ಪಡೆದ ನಿಷ್ಣಾತರೂ ಸಾಯಣರ ಜೊತೆ ಸೇರಿ ಸಹಕರಿಸಿ ಕಾರ್ಯ ನಡೆಸುವುದಕ್ಕಾಗಿ ವಿಜಯನಗರಕ್ಕೆ ಬರಬೇಕೆಂದು ಪ್ರಾರ್ಥಿಸಲಾಯಿತು. ಸಾಯಣರಿಗೆ ಸಹಾಯಕರಾಗಿದ್ದ ವಿದ್ವಾಂಸರೆಷ್ಟು ಮಂದಿ, ಅವರ ಹಿನ್ನೆಲೆಯೇನು, ಅವರು ಯಾವ ರೀತಿ ಸಾಯಣರಿಗೆ ಸಹಾಯಮಾಡಿದರು—ಎಂಬ ಸಂಗತಿಗಳನ್ನು ತಿಳಿಯುವುದಕ್ಕೆ ನಮಗಿನ್ನೂ ಸಾಧ್ಯವಾಗಿಲ್ಲ. ಆದರೂ ಶಾಸನಗಳಿಂದ ದೊರೆತಿರುವ ಸಾಕ್ಷ್ಯಾಧಾರಗಳಿಂದಲೂ ಮಹತ್ತಾದ ಆ ಭಾಷ್ಯಗ್ರಂಥದಲ್ಲೇ ಅಡಕವಾಗಿರುವ ಆಂತರಿಕ ಸಾಕ್ಷ್ಯಾಧಾರಗಳಿಂದಲೂ ಈ ಕೆಲವು ಹೆಸರುಗಳನ್ನು ಆಯ್ದುಕೊಳ್ಳುವುದು ಸಾಧ್ಯವಾಗಿದೆ : ಪಂಚಾಗ್ನಿ ಮಾಧವ, ನರಹರಿ ಸೋಮಯಾಜಿ. ನಾರಾಯಣ ವಾಜಪೇಯಿ, ಪಂಢರಿ ದೀಕ್ಷಿತ, ನಾಗಾಭರಣ ಮತ್ತು ವಾಮನ ಭಟ್ಟ. ವೇದಾರ್ಥಪ್ರಕಾಶ ಎಂಬ ಈ ಅದ್ಭುತ ಸಾಹಿತ್ಯಕೃತಿ ಮತ್ತೊಂದು ಸಂಗತಿಯನ್ನು ಸ್ಪಷ್ಟಪಡಿಸುತ್ತದೆ : ಸಮಗ್ರ ವೇದಕ್ಕೆಲ್ಲ ಸಂಪೂರ್ಣ ವ್ಯಾಖ್ಯಾನವೊಂದಿರಲಿಲ್ಲವಾದರೂ ಭಾರತ ದೇಶದ ಎಲ್ಲಾ ಭಾಗಗಳಲ್ಲೂ ವೈದಿಕ ಸಂಪ್ರದಾಯವು 14 ನೆಯ ಶತಮಾನದ ವರೆಗೂ ಅಚ್ಚಳಿಯದೆ ಉಳಿದು ಬಂದಿತ್ತು. ಮೇಲಿಂದ ಮೇಲೆ ಪರಕೀಯರ ದಾಳಿಗಳಿಗೆ ತುತ್ತಾಗುತ್ತಿದ್ದರೂ ವೈದಿಕ ಪರಂಪರೆ ಅಳಿಯದೆ ಉಳಿದು ಬಂದಿತ್ತು.

ಈ ಭಾಷ್ಯವು ಪೂರ್ವದ ವೈದಿಕ ಸಂಪ್ರದಾಯಕ್ಕೆ ಬಲಕೊಟ್ಟು ಅದನ್ನು ಸ್ಥಿರಗೊಳಿಸಿತು;

ವೇದಾಭ್ಯಾಸಿಗಳೆಲ್ಲರಿಗೂ ಅದರ ಸೂಕ್ಷ್ಮಗಳನ್ನು ಅರಿತುಕೊಳ್ಳಲು ಸಾಧ್ಯಮಾಡಿತು. ವೇದಾರ್ಥ ಪ್ರಕಾಶವೇ ವೇದಗಳ ಮೇಲಿನ ಮೊತ್ತಮೊದಲಿನ ಸಮಗ್ರ ವ್ಯಾಖ್ಯಾನ ; ನಮಗೆ ಈಗ ಲಭ್ಯವಾಗಿರುವ ಪ್ರಪ್ರಥಮ ವ್ಯಾಖ್ಯಾನ.

ಈ ಭಾಷ್ಯಸರಣಿಯಲ್ಲಿ ವ್ಯಾಖ್ಯಾನಹೊಂದಿರುವ ಗ್ರಂಥಗಳು ಇವು :

1. (1) ತೈತ್ತಿರೀಯ ಸಂಹಿತಾ (ಕೃಷ್ಣ ಯಜುರ್ವೇದ), (2) ತೈತ್ತಿರೀಯ ಬ್ರಾಹ್ಮಣ, (3) ತೈತ್ತಿರೀಯ ಆರಣ್ಯಕ, (4) ಋಕ್ಸಂಹಿತಾ, (5) ಐತರೇಯ ಬ್ರಾಹ್ಮಣ, (6) ಐತರೇಯ ಆರಣ್ಯಕ, (7) ಸಾಮ ಸಂಹಿತಾ, (8) ಪಂಚವಿಂಶ ಅಥವಾ ತಾಂಡ್ಯಮಹಾಬ್ರಾಹ್ಮಣ, (9) ಷಡ್ವಿಂಶ ಬ್ರಾಹ್ಮಣ, (10) ಸಾಮವಿಧಾನ ಬ್ರಾಹ್ಮಣ, (11) ಆರ್ಷೇಯ ಬ್ರಾಹ್ಮಣ, (12) ದೇವತಾಧ್ಯಾಯ, (13) ಉಪನಿಷದ್ಬ್ರಾಹ್ಮಣ, (14) ಸಂಹಿತೋಪನಿಷದ್ಬ್ರಾಹ್ಮಣ, (15) ವಂಶ ಬ್ರಾಹ್ಮಣ, (16) ಕಾಣ್ವ ಸಂಹಿತಾ (ಶುಕ್ಲಯಜುರ್ವೇದ), (17) ಅಥರ್ವ ಸಂಹಿತಾ, (18) ಶತಪಥ ಬ್ರಾಹ್ಮಣ.

ವ್ಯಾಖ್ಯಾನಗಳನ್ನು ರಚಿಸಿದ ಕಾಲಾನುಕ್ರಮಕ್ಕೆ ಅನುಸಾರವಾಗಿ ಇವನ್ನು ಇಲ್ಲಿ ಕೊಟ್ಟಿದೆ. ಕೊನೆಯವೆರಡು ಹೊರತು ಇವೆಲ್ಲಾ ಬುಕ್ಕನ ಆಳಿಕೆಯಲ್ಲಿ ರಚಿತವಾದವು. ಕೊನೆಯವೆರಡು ಇಮ್ಮಡಿ ಹರಿಹರನ ಆಳಿಕೆಯಲ್ಲಿ ರಚಿತವಾದವು. ಪ್ರತಿಯೊಂದು ಸಂಹಿತಾ ಭಾಷ್ಯಕ್ಕೂ ಮೊದಲು ವಿಸ್ತಾರವಾದ ಭೂಮಿಕೆ (ಪೀಠಿಕೆ)ಯಿದೆ. ಈ ಭೂಮಿಕೆಗಳನ್ನು ಸರಳವಾದ ಆದರೆ ಸಶಕ್ತವಾದ ಗದ್ಯದಲ್ಲಿ ಬರೆದಿದೆ. ವೇದವಾಕ್ಯಗಳಿಗೆ ಅರ್ಥ ಮಾಡುವಾಗ ಬರುವ ಅನೇಕ ತೊಡಕಿನ ವಿಷಯಗಳನ್ನು ಬಹು ಉಪಯುಕ್ತವಾದ ಈ ಪೀಠಿಕಾ ಭಾಗಗಳಲ್ಲಿ ಚರ್ಚಿಸಲಾಗಿದೆ.

2. ಯಜ್ಞಗಳಲ್ಲಿ ನಡೆಸುವ ಕರ್ಮ ಕ್ರಮಗಳನ್ನು ವಿವರಿಸುವ 'ಯಜ್ಞತಂತ್ರ ಸುಧಾನಿಧಿ' ಎಂಬ ಕೈಪಿಡಿಯನ್ನೂ ಸಾಯಣರು ಬರೆದಿದ್ದಾರೆ. ಅದನ್ನು ರಚಿಸಿದ್ದು ಇಮ್ಮಡಿ ಹರಿಹರನ ಆಳಿಕೆಯಲ್ಲಿ. ಅದೇ ರೀತಿ ಚೌಂಡಪಾಚಾರ್ಯನು (ಸುಮಾರು ಕ್ರಿ.ಶ. 1404) ವೈದಿಕ ಕರ್ಮ ತಂತ್ರಗಳ ವಿಷಯವಾಗಿ ಒಂದು ಕೈಪಿಡಿಯನ್ನು ರಚಿಸಿದನು. ಆ ಗ್ರಂಥದಲ್ಲಿ ಆಪಸ್ತಂಭ ಶಾಖೆಗನುಸಾರವಾದ ವಿವರಣೆಯಿರುವುದರಿಂದ ಅದಕ್ಕೆ 'ಪ್ರಯೋಗರತ್ನಮಾಲಾ' ಅಥವಾ 'ಆಪಸ್ತಂಭ ಅಧ್ವರ ತಂತ್ರ ವ್ಯಾಖ್ಯಾ' ಎಂದು ಆತನು ಹೆಸರಿಟ್ಟನು.

3 'ಪರಾಶರ ಮಾಧವೀಯ'ವು ಪರಾಶರ ಸ್ಮೃತಿಗೆ ವಿದ್ಯಾರಣ್ಯರು ರಚಿಸಿದ ವ್ಯಾಖ್ಯಾನ. ಇದರಲ್ಲಿ ದೀರ್ಘ ಚರ್ಚೆಗಳಲ್ಲಿ ತೊಡಗದೆ ವಿಷಯವನ್ನು ತಿಳಿಯಾಗಿಯೂ ಸ್ಪಷ್ಟವಾಗಿಯೂ ವಿವರಿಸಿದೆ. ಇಲ್ಲಿನ ಒಂದು ಸ್ವಾರಸ್ಯ ಸಂಗತಿಯೆಂದರೆ, 'ವ್ಯವಹಾರ ಮಾಧವೀಯ'ವು ಇದರ ಒಂದು ಭಾಗವಾಗಿರುವುದು. ಈ ಭಾಗವು ಒಟ್ಟು ಗ್ರಂಥದಲ್ಲಿ ನಾಲ್ಕನೆಯ ಒಂದು ಭಾಗದಷ್ಟಾಗುತ್ತದೆ. ಇದು ಆಚಾರ ಕಾಂಡದಲ್ಲಿರುವ ಪರಾಶರರ ಕೆಲವು ಶ್ಲೋಕಗಳ ಆಧಾರದ ಮೇಲೆ ರಚಿಸಿರುವ 'ವ್ಯವಹಾರ' ವಿಷಯವಾದ ಒಂದು ಸ್ವತಂತ್ರ ಪ್ರಬಂಧ.

ಪ್ರಾಯಶ್ಚಿತ್ತಗಳ ವಿಷಯವನ್ನು ವಿವರಿಸುವ ಕೈಪಿಡಿ 'ಪ್ರಾಯಶ್ಚಿತ್ತ ಸುಧಾನಿಧಿ' ಯನ್ನು ಸಾಯಣರು ಸಿದ್ಧಗೊಳಿಸಿದರು. ಅವರ 'ಪುರುಷಾರ್ಥ ಸುಧಾನಿಧಿ'ಯು ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಕುರಿತ ಪುರಾಣ ಶ್ಲೋಕಗಳನ್ನು ಆಯ್ದುಮಾಡಿದ ಸಂಗ್ರಹ. ಬುಕ್ಕ ರಾಜನ ಅಪೇಕ್ಷೆಯ

ಪ್ರಕಾರ ಸಾಯಣರು ಈ ಗ್ರಂಥವನ್ನು ರಚಿಸಿದರು. ದೇವಣ್ಣ ಭಟ್ಟನು (ಕ್ರಿ.ಶ. 1445) ಸ್ಮೃತಿ ಚಂದ್ರಿಕೆಯನ್ನು ಬರೆದನು ; ಇದು ಧರ್ಮಶಾಸ್ತ್ರ ವಿಷಯವಾದ ಒಂದು ಕೈಪಿಡಿ. ಅಂಥದೇ ಇನ್ನೊಂದು ಗ್ರಂಥ 'ಸ್ಮೃತಿಕೌಸ್ತುಭ'. ಇದರ ಕರ್ತೃ ವರದರಾಜಾಚಾರ್ಯರ ಮಗ ನರಹರಿ.

4. 'ತಾತ್ಪರ್ಯದೀಪಿಕೆ'ಯು ಸೂತಸಂಹಿತೆಯ ಮೇಲಿನ ಒಂದು ವ್ಯಾಖ್ಯಾನ. ಸೂತಸಂಹಿತೆ ಪದ್ಮ ಪುರಾಣದ ಒಂದು ಭಾಗ. ವಿದ್ಯಾರಣ್ಯರ ಸಮಕಾಲೀನನಾದ ಮಾಧವ ಮಂತ್ರಿಯು ಇದರ ಕರ್ತೃ. ಆತ ಶೈವ ; ಕಾಶೀವಿಲಾಸ ಕ್ರಿಯಾಶಕ್ತಿ ಆಚಾರ್ಯನ ಶಿಷ್ಯ. ವರದರಾಜಾಚಾರ್ಯರ ಮಗ ನರಹರಿಯು ವಿಷ್ಣುಪುರಾಣದ ಮೇಲೆ ಟಿಪ್ಪಣಿ ಬರೆದನು.

ಕೃಷ್ಣದೇವರಾಯನ ಪ್ರೇರಣೆಯಿಂದ ಈಶ್ವರ ದೀಕ್ಷಿತನು ರಾಮಾಯಣದ ಮೇಲೆ ಎರಡು ವ್ಯಾಖ್ಯಾನಗಳನ್ನು ಬರೆದನು. ಇವುಗಳಲ್ಲಿ ಒಂದು ಸಂಕ್ಷೇಪವಾದದ್ದೆಂದೂ ಇನ್ನೊಂದು ವಿವರ ವಾದದ್ದೆಂದೂ ಹೇಳುತ್ತಾರೆ. ಅವನು ರಾಮಾಯಣದ ಎಲ್ಲಾ ಕಾಂಡಗಳನ್ನೂ ಇಪ್ಪತ್ತ ನಾಲ್ಕು ಗಂಟೆಯೊಳಗೆ ಹೇಳಿ ಮುಗಿಸಿ ರಾಯನಿಗೆ ಮಹದಾಶ್ಚರ್ಯವುಂಟುಮಾಡಿದನಂತೆ.

ವರದರಾಜಾಚಾರ್ಯನು ವ್ಯಾಸರಾಯರ ಸಮಕಾಲೀನ. ಆತನು ಆನಂದ ತೀರ್ಥರ ಮಹಾಭಾರತ ತಾತ್ಪರ್ಯನಿರ್ಣಯಕ್ಕೆ 'ವರದರಾಜೀಯ' ಎಂಬ ವ್ಯಾಖ್ಯಾನವನ್ನು ಬರೆದಿದ್ದಾನೆ. ಉಡುಪಿಯ ಪೇಜಾವರ ಮಠಾಧಿಪತಿಯಾದ ವಿಜಯಧ್ವಜತೀರ್ಥರು (ಕ್ರಿ.ಶ. 1378–1438) ಭಾಗವತಕ್ಕೆ ಒಂದು ವ್ಯಾಖ್ಯಾನ ಬರೆದರು. ವರದರಾಜಾಚಾರ್ಯರ ಮಗ ನರಹರಿಯು ಭಾಗವತ ತಾತ್ಪರ್ಯ ನಿರ್ಣಯಕ್ಕೆ ಟಿಪ್ಪಣಿ ರಚಿಸಿ ಸೇರಿಸಿದ್ದಾನೆ.

## 2. ಕಾವ್ಯಗಳು

ಈ ಕಾಲದ ಕಾವ್ಯಗಳು ಸಾಮಾನ್ಯವಾಗಿ ರಾಮ, ಕೃಷ್ಣ ಅಥವಾ ಆಯಾ ಕವಿಗಳ ಆಶ್ರಯದಾತರ ವಿಷಯವಾಗಿ ರಚಿತವಾಗಿರುವವು. ಚಾರಿತ್ರಿಕ ಕಾವ್ಯಗಳಲ್ಲಿ ಕವಿಗಳು ಚಾರಿತ್ರಿಕ ಘಟನೆಗಳನ್ನು ಯಥಾವತ್ತಾಗಿ ಅನುಸರಿಸಿ ಬರೆಯುತ್ತಾರೆ ; ತಮ್ಮ ಕಲ್ಪನೆಯನ್ನು ಸ್ವೇಚ್ಛೆಯಾಗಿ ಹರಿಯಬಿಡದೆ ನಡೆದ ಸಂಗತಿಗಳನ್ನೇ ವರ್ಣಿಸುತ್ತಾರೆ. ಇದರಿಂದ ಆ ಕಾಲದ ಚರಿತ್ರೆಯನ್ನು ತಿಳಿದುಕೊಳ್ಳುವುದಕ್ಕೆ ಈ ಕಾವ್ಯಗಳು ಬಹು ಬೆಲೆಯುಳ್ಳ ಆಧಾರಗ್ರಂಥಗಳಾಗಿವೆ.

1 'ಶಂಕರವಿಜಯ' ಮತ್ತು 'ರಾಜಕಾಲನಿರ್ಣಯ'—ಈ ಎರಡೂ ವಿದ್ಯಾರಣ್ಯರು ರಚಿಸಿದ ವೆಂದು ಹೇಳುತ್ತಾರೆ. ಮೊದಲನೆಯದು ಪ್ರಖ್ಯಾತ ಅದ್ವೈತಾಚಾರ್ಯರಾದ ಶಂಕರರ ಜೀವನ ಚರಿತ್ರೆ. ಇದು ಒಳ್ಳೆಯ ಕಾವ್ಯಶೈಲಿಯಲ್ಲಿ ರಚಿತವಾಗಿದೆ. ರಾಜಕಾಲನಿರ್ಣಯದಲ್ಲಿ ವಿಜಯನಗರದ ಚರಿತ್ರೆ, ಅದರ ಸ್ಥಾಪನಕಾಲದಿಂದ ಮೊದಲುಗೊಂಡು ನಿರೂಪಿತವಾಗಿದೆಯೆಂದು ತಿಳಿಯಬರುತ್ತದೆ. ಸಾಯಣರು 'ಸುಭಾಷಿತ ಸುಧಾನಿಧಿ' ಎಂಬ ಒಳ್ಳೆಯ ಮಾತುಗಳ ಸಂಕಲನಗ್ರಂಥವನ್ನು ರಚಿಸಿದರು. ಈ ಗ್ರಂಥದಲ್ಲಿ ನಾಲ್ಕು ಭಾಗಗಳಿವೆ : ಧರ್ಮ, ಅರ್ಥ, ಕಾಮ, ಮೋಕ್ಷ ಎಂದು. ಸಾಯಣರು ಒಬ್ಬ ಸಂಗಮ ರಾಜಕುಮಾರನಿಗೆ ಪಾಲಕರಾಗಿದ್ದಾಗ ಅವನಿಗಾಗಿ ಈ ಗ್ರಂಥವನ್ನು ಸಂಕಲಿಸಿದರಂತೆ. ಈ ಗ್ರಂಥ ಪೂರ್ತಿಯಾಗಿ ಸಿಕ್ಕಿಲ್ಲ.

ಸಾಯಣರ ಒಬ್ಬ ಸೋದರ ಭೋಗನಾಥನೂ ಅನೇಕ ಗ್ರಂಥಗಳನ್ನು ರಚಿಸಿರುವುದಾಗಿ ತಿಳಿಯ

ಬರುತ್ತದೆ. ಅವನು ಎರಡನೆಯ ಸಂಗಮಂಸಿಗೆ ಸಚಿವನಾಗಿದ್ದನು. ಅವನು ಉನ್ನತ ಮಟ್ಟದ ಕವಿ. ಸಾಯಣರಿಗೆ ತಮ್ಮ ಸೋದರನ ಸಾಹಿತ್ಯ ಶಕ್ತಿಯ ಬಗೆಗೆ ಬಹಳ ಒಳ್ಳೆಯ ಅಭಿಪ್ರಾಯವಿತ್ತು. ಸಾಯಣರ ಅಲಂಕಾರ ಸುಧಾನಿಧಿಯಲ್ಲಿರುವ ಉದ್ಧರಣಗಳ ಆಧಾರದ ಮೇಲೆ ಭೋಗನಾಥನ ಆರು ಗ್ರಂಥಗಳ ಹೆಸರುಗಳನ್ನು ತಿಳಿಯಬಹುದು. ಈ ಗ್ರಂಥಗಳು ನಮಗೆ ದೊರೆತಿಲ್ಲ. ಅವು ಯಾವು ವೆಂದರೆ :—

1. ಉದಾಹರಣಮಾಲಾ : ಅಲಂಕಾರ ಶಾಸ್ತ್ರದಲ್ಲಿ ಹೇಳಿರುವ ನಿಯಮಗಳಿಗೆ ಉದಾಹರಣೆ ಯಾಗಿ ರಚಿಸಿರುವ ಪದ್ಯಗಳ ಸಂಗ್ರಹ ಈ ಗ್ರಂಥ. ಈ ಪದ್ಯಗಳಲ್ಲಿ ಒಂದು ವಿಶೇಷವಿದೆ ; ಅವೆಲ್ಲಾ ಸಾಯಣರ ಪ್ರಶಂಸಾಪರವಾದವು.
2. ರಾಮೋಲ್ಲಾಸ : ರಾಮಾಯಣ ಕಥೆಯನ್ನು ನಿರೂಪಿಸುವ ಗ್ರಂಥ.
3. ತ್ರಿಪುರವಿಜಯ : ಶಿವನು ತ್ರಿಪುರಗಳನ್ನು ಗೆದ್ದ ಕಥೆಯನ್ನು ಕುರಿತ ಕಾವ್ಯ.
4. ಶೃಂಗಾರ ಮಂಜರಿ : ಇದರಲ್ಲಿ ಶೃಂಗಾರ ರಸವನ್ನೊಳಗೊಂಡ ಪದ್ಯಗಳು ತುಂಬಿವೆ.
5. ಮಹಾಗಣಪತಿಸ್ತವ : ಗಣಪತಿಯ ಸ್ತೋತ್ರ.
6. ಗೌರೀನಾಥಾಷ್ಟಕ : ಶಿವನ ಸ್ತೋತ್ರ.

ಭೋಗನಾಥನ ಪದ್ಯಗಳು ವಿಚಾರಪರಿಪ್ಲುತವಾಗಿವೆ ; ಪ್ರಸನ್ನ ಗಂಭೀರ ಶೈಲಿಯಲ್ಲಿ ಸರಾಗವಾಗಿ ಓಡುತ್ತವೆ.

ಆ ಕಾಲದ ಸ್ತ್ರೀಯರೂ ಸಂಸ್ಕೃತ ಸಾಹಿತ್ಯಕ್ಕೆ ಅಮೂಲ್ಯವಾದ ಸೇವೆ ಸಲ್ಲಿಸಿದ್ದಾರೆ. ಗಂಗಾದೇವಿ, ಅಭಿರಾಮ ಕಾಮಾಕ್ಷಿ, ತಿರುಮಲಾಂಬಾ—ಈ ಮೂವರೂ ಕ್ರಮವಾಗಿ ವಿಜಯನಗರ ಚರಿತ್ರೆಯ ಆದಿ ಮಧ್ಯ ಮತ್ತ ಅಂತ್ಯಕಾಲದ ಪ್ರತಿನಿಧಿಗಳಾಗಿದ್ದಾರೆಂದು ಹೇಳಬಹುದು.

ಗಂಗಾದೇವಿಯ 'ಮಧುರಾವಿಜಯ' ಅಥವಾ 'ವೀರ ಕಂಪರಾಯ ಚರಿತ'ವು ಈಗ ನಮಗೆ ದೊರೆತಿರುವ ಆ ಕಾಲದ ಮಹಾ ಕಾವ್ಯಗಳಲ್ಲಿ ಅತ್ಯಂತ ಆದಿಕಾಲಕ್ಕೆ ಸೇರಿದ್ದೆಂದು ಹೇಳಬಹುದು. ಆಕೆ ತನ್ನ ಗಂಡ ಕಂಪರಾಯ ಅಥವಾ ಕಂಪಣನ (ಮರಣ ಕ್ರಿ.ಶ. 1377) ವಿಜಯ ಯಾತ್ರೆಗಳನ್ನು ಸರಳ ಸುಂದರ ಶೈಲಿಯಲ್ಲಿ ಬಹು ಮನೋಹರವಾಗಿ ವರ್ಣಿಸುತ್ತಾಳೆ. ಕಂಪಣನು ಮೊದಲನೆಯ ಬುಕ್ಕರಾಯನ ಎರಡನೆಯ ಮಗ. ಮಧುರೆಯ ಸುಲ್ತಾನನನ್ನು ಕಂಪಣನು ಯುದ್ಧದಲ್ಲಿ ಗೆದ್ದದ್ದೇ ಈ ಕಾವ್ಯದ ಮುಖ್ಯ ವಿಷಯ. ಮಧುರಾವಿಜಯವು ಕಂಪರಾಯನ ಹುಟ್ಟು ಮತ್ತು ವಂಶವರ್ಣನೆಯಿಂದ ಪ್ರಾರಂಭ ವಾಗುತ್ತದೆ. ಈ ಕಾವ್ಯದಲ್ಲಿ ಬುಕ್ಕನ ವ್ಯಕ್ತಿಚಿತ್ರ ಮತ್ತು ಗುಣವಿಶೇಷಗಳೂ ಸ್ವಲ್ಪಮಟ್ಟಿಗೆ ತಿಳಿಯ ಬರುತ್ತವೆ. ಗಂಗಾದೇವಿಯೊಡನೆ ವಿವಾಹವಾದ ಮೇಲೆ ಕಂಪಣನು ದಕ್ಷಿಣಕ್ಕೆ ದಿಗ್ವಿಜಯ ಹೊರಟನು. ಅವನು ಸಂಬುವರಾಯನನ್ನು ಸೋಲಿಸಿ ಕಾಂಚೀಪುರದಲ್ಲಿ ನ್ಯಾಯಪರವಾದ ರಾಜ್ಯಾಡಳಿತವನ್ನು ಸ್ಥಾಪಿಸಿದನು. ಆ ಮೇಲೆ ಮಧುರೆಯ ಸುಲ್ತಾನನೊಡನೆ ಘೋರ ಕಾಳಗ ನಡೆಸಿ, ಅವನನ್ನು ಸೋಲಿಸಿದನು. ಕಂಪಣನು ಪಟ್ಟಣವನ್ನು ಸ್ವಾಧೀನಕ್ಕೆ ತೆಗೆದುಕೊಂಡನು. ಇಲ್ಲಿ ಕಾವ್ಯ ಇದ್ದಕ್ಕಿದ್ದಂತೆ ನಿಂತುಬಿಡುತ್ತದೆ. ಮುಕ್ಕಾಲು ಪಾಲು ಆಕೆ ತನ್ನ ಗಂಡನ ದಿಗ್ವಿಜಯ ಯಾತ್ರೆಯಲ್ಲಿ ಅವನ ಜೊತೆ ಹೋಗಿದ್ದು, ತಾನು ವರ್ಣಿಸಿರುವ ಸಂಗತಿಗಳನ್ನೆಲ್ಲಾ ವಿವರವಾಗಿ ನೋಡಿ ತಿಳಿದಿರಬೇಕು. ಕಾವ್ಯದ ಮೊದಮೊದಲಿನ ಭಾಗಗಳಲ್ಲಿ ಆಕೆ ತನ್ನ ಸಮಕಾಲೀನರಾಗಿದ್ದ ಕವಿಗಳಲ್ಲಿ ಕೆಲವರನ್ನು ಹೆಸರಿಸುತ್ತಾಳೆ. ಅವರಲ್ಲಿ 'ಪ್ರತಾಪ ರುದ್ರ ಯಶೋಭೂಷಣ'ವನ್ನು ರಚಿಸಿದ ವಿದ್ಯಾನಾಥನೊಬ್ಬ. ಆತ ಆಕೆಯ ಗುರು ; ಆತನನ್ನು

ಕವೀಶ್ವರ ಎಂದು ಕರೆಯುತ್ತಾಳೆ. ಈ ಕಾವ್ಯದ ಚಾರಿತ್ರಿಕ ಮೂಲ್ಯ ನಿಜವಾಗಿಯೂ ಬಹಳ ಹೆಚ್ಚು. ಆದರೆ ದುರದೃಷ್ಟದಿಂದ ಕಾವ್ಯ ಅಪೂರ್ಣವಾಗಿಯೇ ಉಳಿದಿದೆ. ಮೊದಲಿನ ಎಂಟು ಸರ್ಗಗಳೂ ಒಂಬತ್ತನೆಯದರಲ್ಲಿ ಸ್ವಲ್ಪ ಭಾಗ ಮಾತ್ರವೇ ಸಿಕ್ಕಿದೆ. ಈ ಭಾಗದಲ್ಲಿ ಕೂಡ ಅನೇಕ ಪದ್ಯಗಳು ನಷ್ಟವಾಗಿ ಹೋಗಿವೆ. ಇದುವರೆಗೂ ಈ ಕಾವ್ಯದ ಒಂದೇ ಒಂದು ಹಸ್ತಪ್ರತಿ ಮಾತ್ರ ಸಿಕ್ಕಿರುವುದು ತುಂಬ ವಿಚಿತ್ರ ವಾಗಿದೆ. ವೇದಾಂತ ದೇಶಿಕ ಎಂಬ ಹೆಸರಿನಿಂದ ವಿಶೇಷ ಪ್ರಸಿದ್ಧರಾಗಿರುವ ವೆಂಕಟನಾಥರು ಕೃಷ್ಣನ ಜೀವನಕ್ಕೆ ಸಂಬಂಧಿಸಿದ 'ಯಾದವಾಭ್ಯುದಯ'ವೆಂಬ ಮಹಾಕಾವ್ಯವನ್ನು ರಚಿಸಿದರು. ವೇದಾಂತ ದೇಶಿಕರು ವಿದ್ಯಾರಣ್ಯರ ಸಮಕಾಲೀನರು. ಅವರು 'ಹಂಸ ಸಂದೇಶ'ವೆಂಬ ಒಂದು ಸಂದೇಶ ಕಾವ್ಯವನ್ನು ಬರೆದಿದ್ದಾರೆ. ಬಹು ಸಂಖ್ಯಾತ ಸ್ತೋತ್ರಗಳನ್ನೂ 'ಪಾದುಕಾ ಸಹಸ್ರ'ವೆಂಬ ಚಿತ್ರಕಾವ್ಯವನ್ನೂ ರಚಿಸಿದ್ದಾರೆ.

ವಿರೂಪಾಕ್ಷರಾಜನು (ಸು. 1385) 'ನರಕಾಸುರ ವಿಜಯ'ದ ಕರ್ತೃವಾದ ಮಾಧವನಿಗೆ ಆಶ್ರಯದಾತ ನಾಗಿದ್ದನು. ಈ ಕಾವ್ಯದಲ್ಲಿ ಒಂಬತ್ತು ಆಶ್ವಾಸಗಳು ಮಾತ್ರ ಸಿಕ್ಕಿವೆ. ಈ ಕಾವ್ಯದ ಭಾಷೆ ಬಹು ಬಿಗಿ. ತನ್ನ ಸಮಕಾಲೀನ ಕವಿಗಳನ್ನು ಈತ ವಿಶೇಷವಾಗಿ ಪ್ರಶಂಸೆ ಮಾಡುತ್ತಾನೆ. ಇದು ಈ ಕಾವ್ಯದ ಉಪ ಯುಕ್ತತೆಯನ್ನು ಹೆಚ್ಚಿಸಿದೆ. 'ವಿರೂಪಾಕ್ಷ ಸ್ಥಾನ ಕಾವ್ಯ'ವು ವಿಜಯನಗರವನ್ನು ವರ್ಣಿಸುತ್ತದೆ. ಈ ಕಾವ್ಯವನ್ನು ಇಮ್ಮಡಿ ದೇವರಾಯನ ಮಂತ್ರಿಗಳಲ್ಲೊಬ ನಾದ ಗುರುರಾಜನ ಅಪ್ಪಣೆಯ ಪ್ರಕಾರ ಚಂದ್ರ ಕವಿ ರಚಿಸಿದನು.

ಗಂಗಾಧರನು 'ಗಂಗದಾಸ ಪ್ರತಾಪ ವಿಲಾಸ'ವನ್ನು ರಚಿಸಿದನು. ವಿಜಯನಗರದ ರಾಜ ಮಲ್ಲಿ ಕಾರ್ಜುನನು (ಕ್ರಿ.ಶ. 1446–87) ಈ ಕವಿಗೆ ಆಶ್ರಯ ನೀಡಿದನು. ಪಾವಾಚಲ ರಾಜ್ಯದ ರಾಜಧಾನಿ ಯಾದ ಚಂಪಕಪುರದಲ್ಲಿ ಈ ಕಾವ್ಯ ರಚಿತವಾಯಿತೆನ್ನುತ್ತಾರೆ. ಗಂಗದಾಸನ ವಿಜಯ ಈ ಕಾವ್ಯದ ವಸ್ತು. ಆದರೆ, ಈ ರಾಜ್ಯ ಯಾವುದೆಂದು ಗೊತ್ತುಮಾಡುವುದು ಕಷ್ಟ.

ಸಾಳುವ ವಂಶಕ್ಕೆ ಸೇರಿದ ವಿಜಯನಗರದ ರಾಜ ಸಾಳುವ ನರಸಿಂಹನು (ಕ್ರಿ.ಶ. 1486–97) ಸ್ವತಃ ಪಂಡಿತನಾಗಿದ್ದನು; ವಿದ್ವಾಂಸರಿಗೆ ಉದಾರವಾಗಿ ಆಶ್ರಯ ನೀಡುತ್ತಿದ್ದನು. ಇಪ್ಪತ್ತನಾಲ್ಕು ಆಶ್ವಾಸಗಳುಳ್ಳ 'ರಾಮಾಭ್ಯುದಯ'ವೆಂಬ ಸುಂದರ ಕಾವ್ಯ ಅವನು ರಚಿಸಿದ್ದೆಂದು ಹೇಳಲಾಗಿದೆ. ಆದರೆ ಅದರ ನಿಜವಾದ ಕರ್ತೃ ಡಿಂಡಿಮ ವಂಶದ ಶೋಣಾದ್ರಿನಾಥ ಅಥವಾ ಮೊದಲನೆಯ ಅರುಣಗಿರಿನಾಥ ನಾಗಿರಬೇಕೆಂದು ತೋರುತ್ತದೆ. ಮೊದಲನೆಯ ಅರುಣಗಿರಿನಾಥನು ಎರಡನೆಯ ದೇವರಾಯನ ಆಸ್ಥಾನದಲ್ಲಿದ್ದನು. ಈ ಕಾವ್ಯದ ಕರ್ತೃತ್ವವನ್ನು ಇಮ್ಮಡಿ ದೇವರಾಯನಿಗೂ ಆರೋಪಿಸುವುದುಂಟು. ರಾಮಾಭ್ಯುದಯ ಮತ್ತು 'ಮಹಾ ನಾಟಕ'—ಈ ಎರಡು ಗ್ರಂಥಗಳೂ ಒಬ್ಬನಿಂದಲೇ ರಚಿತವಾಗಿರಬೇಕು; ಆತ ಮೊದಲನೆಯ ಅರುಣಗಿರಿನಾಥನೇ ಆಗಿರಬೇಕು. ರಾಮಾಭ್ಯುದಯದಲ್ಲಿ ಕವಿ ತನ್ನ ಸ್ವಂತ ಮಾತುಗಳಲ್ಲಿ ರಾಮಾಯಣದ ಕಥೆ ಹೇಳಿದ್ದಾನೆ. ಗ್ರಂಥದ ಪ್ರಾರಂಭದಲ್ಲಿ ಸಾಳುವ ನರಸಿಂಹನ ಪೂರ್ವಿಕರ ವರ್ಣನೆಯಿದೆ; ನರಸಿಂಹನು ಮಹಾ ವಿದ್ವಾಂಸನೆಂದು ವರ್ಣಿಸಲಾಗಿದೆ.

ವಿಜಯನಗರದ ರಾಜರಿಗೆ ಸಂಬಂಧಿಸಿದ ಕೆಲವು ಅಧಿಕೃತ ದಾಖಲೆ ಪತ್ರಗಳನ್ನು ಶ್ರೇಷ್ಠವರ್ಗದ ಕವಿಗಳು ರಚಿಸಿದ್ದಾರೆ. ಅಂಥ ಶ್ರೇಷ್ಠ ಲೇಖಕರಲ್ಲಿ ಡಿಂಡಿಮ ವಂಶದ ಕವಿಗಳು ಸೇರಿದ್ದಾರೆ. ಈ ವಂಶದವರು ಒಂದಕ್ಕಿಂತ ಹೆಚ್ಚು ಭಾಷೆಗಳಲ್ಲಿ ಪರಿಣತರಾಗಿದ್ದರು. ಈ ವಂಶದ ಬಹುಪಾಲಿನ ಲೇಖಕರಿಗೆ, 'ಡಿಂಡಿಮ ಕವಿಸಾರ್ವಭೌಮ' ಎಂಬ ಬಿರುದು ಕೊಡಲಾಗಿತ್ತು. ಈ ವಂಶಕ್ಕೆ ಸೇರಿದ ಮೊದಲನೆಯ ಅರುಣಗಿರಿನಾಥನಿಗೆ 'ಅಷ್ಟಭಾಷಾ ಪರಮೇಶ್ವರ' ಎಂಬ ಬಿರುದಿತ್ತು. ಪರಮೇಶ್ವರನಿಗೆ ಎಂಟು ಮುಖಗಳಿರುವ ಹಾಗೆಯೇ ಈ ಕವಿಗೆ ಎಂಟು ಭಾಷೆಗಳಲ್ಲಿ ಪ್ರಭುತ್ವವಿದೆ ಎಂಬುದು ಇದರ ಸೂಚ್ಯಾರ್ಥ.

ಎರಡನೆಯ ಡಿಂಡಿಮ ರಾಜನಾಥನು ತನ್ನ ಆಶ್ರಯದಾತನಾದ ಸಾಳುವ ನರಸಿಂಹನ ಕಾರ್ಯಸಾಧನೆಗಳನ್ನು ಪ್ರಶಂಸಿಸುವ 'ಸಾಳುವಾಭ್ಯುದಯ'ವೆಂಬ ಕಾವ್ಯವನ್ನು ರಚಿಸಿ ತನ್ನ ಕೃತಜ್ಞತೆ ಸೂಚಿಸಿದ್ದಾನೆ. ಅದರಲ್ಲಿ, ನರಸಿಂಹನು ವಿಜಯನಗರದ ರಾಜನೆಂದು ವರ್ಣಿಸಿಲ್ಲವಾದ್ದರಿಂದ ಆ ಕಾವ್ಯದ ರಚನೆ ಕ್ರಿ.ಶ. 1486ಕ್ಕೆ ಮೊದಲೇ ಪೂರ್ತಿಯಾಗಿದ್ದಿರಬೇಕು.

ವ್ಯಾಸತೀರ್ಥರು ತಮ್ಮ ಗುರುವಾದ ಜಯತೀರ್ಥರ (ಇವರು ಸಾಯಣರ ಸಮಕಾಲೀನರು) ಮಹಿಮೆಯನ್ನು 'ಜಯತೀರ್ಥ ವಿಜಯ'ವೆಂಬ ಕಥನ ಕಾವ್ಯದಲ್ಲಿ ಹಾಡಿ ಹೊಗಳಿದ್ದಾರೆ.

ಮಹಾರಾಜ ಕೃಷ್ಣದೇವರಾಯನು (ಕ್ರಿ.ಶ. 1509-20) ರಾಜಕೀಯ ಕ್ಷೇತ್ರದಲ್ಲಿ ಹೇಗೋ ಹಾಗೆ ಸಾಹಿತ್ಯ ಕ್ಷೇತ್ರದಲ್ಲಿಯೂ ಬಹು ಪ್ರಸಿದ್ಧ ಪುರುಷನಾಗಿದ್ದನು. ಅವನು ಸಂಸ್ಕೃತದಲ್ಲಿಯೂ ತೆಲುಗಿನಲ್ಲಿಯೂ ಪ್ರೌಢ ಪಂಡಿತನಾಗಿದ್ದನು. ಎರಡು ಭಾಷೆಗಳಲ್ಲಿಯೂ ಅವನು ಬರೆದಿದ್ದಾನೆ. ಇದರ ಜೊತೆಗೆ ಅವನು ವಿದ್ವಾಂಸರಿಗೆ ಬಹು ಉದಾರವಾಗಿ ಆಶ್ರಯ ಕೊಡುತ್ತಿದ್ದನು. ಅವನನ್ನು 'ಸಕಲ ಕಲಾ ಭೋಜರಾಜ' ಎಂದೂ ಕರೆಯುತ್ತಿದ್ದರು. ಅವನು ರಚಿಸಿರುವ 'ಆಮುಕ್ತ ಮಾಲ್ಯದಾ' ಎಂಬ ತೆಲುಗು ಕಾವ್ಯದಿಂದ ಮದಾಲಸಾ ಚರಿತ, ಸತ್ಯವಧೂ ಸಾಂತ್ವನ, ಸಕಲ ಕಥಾಸಾರ ಸಂಗ್ರಹ, ರಸಮಂಜರಿ ಮತ್ತು ಜ್ಞಾನ ಚಿಂತಾಮಣಿ—ಎಂಬವು ಕೃಷ್ಣದೇವರಾಯನ ರಚನೆಗಳೆಂದು ತಿಳಿಯಬರುತ್ತದೆ. ಈ ಗ್ರಂಥಗಳ ಕರ್ತೃತ್ವದ ವಿಷಯದಲ್ಲಿ ಸ್ವಲ್ಪಮಟ್ಟಿಗೆ ಸಂದೇಹವನ್ನು ವ್ಯಕ್ತಪಡಿಸುವರಾದರೂ ಕೃಷ್ಣದೇವರಾಯನೇ ಸ್ವತಃ ಇವನ್ನು ರಚಿಸಿರಬೇಕೆಂದು ನಂಬುವುದು ಸಾಧುವಾಗಿ ತೋರುತ್ತದೆ.

ಡಿಂಡಿಮ ವಂಶದ ಸಭಾಪತಿಯು ಕೃಷ್ಣದೇವರಾಯನ ಆಸ್ಥಾನದಲ್ಲಿ ಪ್ರಸಿದ್ಧನಾಗಿದ್ದು ರಾಜ್ಯದ ಅಧಿಕೃತ ಪತ್ರಗಳನ್ನು ಸಂಸ್ಕೃತದಲ್ಲಿ ಬರೆಯುತ್ತಿದ್ದನು. ಅದೇ ಆಸ್ಥಾನದಲ್ಲಿದ್ದ ಪೆದ್ದಣನು ತೆಲುಗಿನಲ್ಲಿ ಬರೆಯುತ್ತಿದ್ದನು. ಒರಿಸ್ಸದ ಗಜಪತಿಯ ಆಸ್ಥಾನದಲ್ಲಿದ್ದ ಲೊಲ್ಲಲಕ್ಷ್ಮೀಧರ ಮತ್ತು ದಿವಾಕರ—ಇವರುಗಳು ಕೃಷ್ಣದೇವರಾಯನು ಗಜಪತಿಯ ಮಗಳನ್ನು ಮದುವೆಮಾಡಿಕೊಂಡ ಮೇಲೆ ಕೃಷ್ಣದೇವರಾಯನ ಆಸ್ಥಾನಕ್ಕೆ ಬಂದರು. ದಿವಾಕರನು ನಲವತ್ತು ಸರ್ಗಗಳುಳ್ಳ ತನ್ನ 'ಭಾರತಾಮೃತ'ದಲ್ಲಿ ಮಹಾಭಾರತದ ಕಥೆಯನ್ನು ವರ್ಣಿಸಿದ್ದಾನೆ.

ಈ ಕಾಲದ ಕವಯಿತ್ರಿಯರ ಕೃತಿಗಳಲ್ಲಿ ಅಭಿರಾಮ ಕಾಮಾಕ್ಷಿ ಮತ್ತು ತಿರುಮಲಾಂಬಾ—ಈ ಇಬ್ಬರ ಕೃತಿಗಳೇ ಕಾಲದ ಒರೆಗಲ್ಲಿನಲ್ಲಿ ಉಳಿದುಬಂದಿರುವವು. ಅಭಿರಾಮ ಕಾಮಾಕ್ಷಿಯು ಮೊದಲನೆಯ ಅರುಣಗಿರಿನಾಥನ ಅಳಿಯನ ಸೋದರಿ. ಈಕೆ ಮನೋಹರ ಸುಂದರ ಪದ್ಯಗಳಲ್ಲಿ 'ಅಭಿನವ ರಾಮಾಭ್ಯುದಯ'ವನ್ನು ರಚಿಸಿದ್ದಾಳೆ. ರಾಮಾಯಣ ಕಥೆಯನ್ನು ಹೇಳುವ ಈ ಕಾವ್ಯದಲ್ಲಿ ಇಪ್ಪತ್ತ ನಾಲ್ಕು ಸರ್ಗಗಳಿವೆ. ಅದೇ ಕಾಲದಲ್ಲಿ ರಚಿತವಾದ 'ರಾಮಾಭ್ಯುದಯ'ವೆಂಬ ಹೆಸರಿನ ಮತ್ತೊಂದು ಕಾವ್ಯವೂ ಇದೂ ಬೇರೆ ಬೇರೆ ಎಂದು ತೋರಿಸುವುದಕ್ಕಾಗಿ ಇದಕ್ಕೆ 'ಅಭಿನವ' ಎಂಬ ವಿಶೇಷಣವನ್ನು ಸೇರಿಸಲಾಯಿತು. ಅದೃಷ್ಟವಶದಿಂದ ಈ ಕಾವ್ಯ ಪೂರ್ಣವಾಗಿ ನಮಗೆ ದೊರೆತಿದೆ.

ಸ್ವಯಂಭುವಿನ ಮಗನೂ ಎರಡನೆಯ ರಾಜನಾಥನ ಸೋದರ ಪುತ್ರನೂ ಆದ ಶಿವಸೂರ್ಯನು 'ಪಾಂಡವಾಭ್ಯುದಯ'ದ ಕರ್ತೃ. ಇದು ಮಹಾಭಾರತ ಕಥೆಯನ್ನು ಹೇಳುವ ಎಂಟು ಸರ್ಗಗಳ ಒಂದು ಕಾವ್ಯ. ವಿಜಯನಗರದ ದೊರೆ ಅಚ್ಯುತರಾಯನೂ ತನ್ನ ಪೂರ್ವಿಕರ ಮೇಲ್ಪಂಕ್ತಿಯನ್ನೇ ಅನುಸರಿಸಿ ವಿದ್ವಾಂಸರಿಗೆ ಆಶ್ರಯ ಕೊಡುತ್ತಿದ್ದನು. ಡಿಂಡಿಮ ವಂಶದ ಮೂರನೆಯ ರಾಜನಾಥನು ತನ್ನ ಆಶ್ರಯದಾತನಾದ ಅಚ್ಯುತರಾಯನ ಖ್ಯಾತಿ ಮಹಿಮೆಗಳನ್ನು ವಿವರಿಸುವುದಕ್ಕಾಗಿ ಹನ್ನೆರಡು ಸರ್ಗಗಳ ಒಂದು

ಕಾವ್ಯವನ್ನು ರಚಿಸಿದನು. 'ಅಚ್ಯುತರಾಯಾಭ್ಯುದಯ' ಕಾವ್ಯದಲ್ಲಿ ಅಚ್ಯುತರಾಯನ ದಕ್ಷಿಣ ದಿಗ್ವಿಜಯ, ಶ್ರೀರಂಗ ಕಾಳಹಸ್ತಿ ಮೊದಲಾದ ಕ್ಷೇತ್ರಗಳಿಗೆ ಅವನು ಮಾಡಿದ ತೀರ್ಥಯಾತ್ರೆ, ಬಿಜಾಪುರಕ್ಕೆ ಮುತ್ತಿಗೆ ಹಾಕಿ ಗೆದ್ದ ವಿಷಯ—ಇವನ್ನು ವಿವರಿಸಲಾಗಿದೆ. ಅವನು ಹಿಂದಿರುಗಿ ರಾಜಧಾನಿಗೆ ಬಂದು ಸೇರಿದ ವೃತ್ತಾಂತದಿಂದ ಕಾವ್ಯ ಮುಗಿಯುತ್ತದೆ. ಇದರ ಜೊತೆಗೆ, ಸಾಳುವ ನರಸಿಂಹನಿಗೆ ಸಂಬಂಧಿಸಿದ ಕೆಲವು ಸ್ವಾರಸ್ಯಕರ ಸಂಗತಿಗಳನ್ನೂ ಕವಿ ವಿವರಿಸುತ್ತಾನೆ. ಒಟ್ಟಿನಲ್ಲಿ, ತುಳುವ ವಂಶದ ಹಿಂದಿನ ಪ್ರತಿಯೊಬ್ಬ ರಾಜನ ಆಳಿಕೆಯನ್ನೂ ಸಂಕ್ಷೇಪವಾಗಿ ವರ್ಣಿಸುತ್ತಾನೆ. ರಾಜ್ಯದ ಅಧಿಕೃತ ದಾಖಲೆ ಪತ್ರಗಳನ್ನು ಬರೆಯುವ ಅಧಿಕಾರ ಹೊಂದಿದ್ದ ವಂಶಕ್ಕೆ ಸೇರಿದವನಾದ್ದರಿಂದ ರಾಜನಾಥನಿಗೆ ಈ ವಿಷಯವನ್ನೆಲ್ಲಾ ಬರೆಯುವುದಕ್ಕೆ ಸಾಧ್ಯವಾಯಿತು. ಹಿಂದಿನ ರಾಜ್ಯ ಪತ್ರಗಳನ್ನೆಲ್ಲಾ ಓದಿ ನೋಡುವುದಕ್ಕೆ ಅವನಿಗೆ ಅವಕಾಶ ದೊರಕಿತ್ತು. ಹೀಗೆ ಈ ಕಾವ್ಯಕ್ಕೆ ಚಾರಿತ್ರಿಕವಾಗಿ ವಿಶೇಷ ಪ್ರಾಮಾಣ್ಯವುಂಟು. ಎರಡನೆಯ ಅರುಣಗಿರಿನಾಥನ ಸೋದರ ಪುತ್ರನಾದ ಸ್ವಯಂಭೂನಾಥನು ಹದಿನಾಲ್ಕು ಆಶ್ವಾಸಗಳುಳ್ಳ 'ಕೃಷ್ಣ ವಿಲಾಸ'ದಲ್ಲಿ ಶ್ರೀಕೃಷ್ಣನ ಜೀವನ ಚರಿತ್ರೆಯನ್ನು ವರ್ಣಿಸಿದ್ದಾನೆ.

ವಾದಿರಾಜರ ಎರಡು ಕೃತಿಗಳನ್ನು ಇಲ್ಲಿ ಹೆಸರಿಸಬಹುದು. ಸೋದೆ ಮಠದ ಪೀಠಾಧಿಪತಿಗಳಾದ ಈ ದ್ವೈತಾಚಾರ್ಯರು 16 ನೆಯ ಶತಮಾನದ ಕಡೆಯ ಭಾಗದಲ್ಲಿ 'ರುಕ್ಮಿಣೀವಿಜಯ' ಮತ್ತು 'ತೀರ್ಥ ಪ್ರಬಂಧ' ಎಂಬ ಎರಡು ಗ್ರಂಥಗಳನ್ನು ರಚಿಸಿದರು. ರುಕ್ಮಿಣೀ ವಿಜಯವು ಭಾಗವತದಲ್ಲಿನ ಶ್ರೀ ಕೃಷ್ಣ ಚರಿತ್ರೆಯನ್ನು ಇಪ್ಪತ್ತೊಂದು ಸರ್ಗಗಳಲ್ಲಿ ವರ್ಣಿಸುತ್ತದೆ. ಕೃಷ್ಣನ ಹುಟ್ಟು, ಅವನ ಬಾಲ್ಯ, ಕಂಸವಧೆ, ಕೃಷ್ಣರುಕ್ಮಿಣಿಯರ ವಿವಾಹ, ಜಾಂಬವತಿ ಮೊದಲಾದ ಇತರ ಮಹಿಷಿಯರನ್ನು ಮದುವೆಯಾದದ್ದು—ಇವನ್ನೆಲ್ಲಾ ಈ ಕಾವ್ಯದಲ್ಲಿ ಸೊಗಸಾಗಿ ವರ್ಣಿಸಿದೆ. ಕೃಷ್ಣಪುತ್ರರ ಜನನದಲ್ಲಿ ಈ ಕಾವ್ಯ ಮುಕ್ತಾಯ ವಾಗುತ್ತದೆ. ತೀರ್ಥಪ್ರಬಂಧವೆಂಬ ಇನ್ನೊಂದು ಕಾವ್ಯವು ಕವಿಯ ದೇಶಾಟನೆಯನ್ನು ಕುರಿತದ್ದು ; ಭಾರತದ ಬೇರೆ ಬೇರೆ ಯಾತ್ರಾಸ್ಥಳಗಳನ್ನು ವರ್ಣಿಸುತ್ತದೆ.

ಈ ಕಾಲದ ವ್ಯಾಖ್ಯಾನಕಾರರಲ್ಲಿ ವಾದಿರಾಜ ಶಿಷ್ಯನಾದ ನರಹರಿಯನ್ನು ನೆನೆಯಬಹುದು. ಆತನು ಶ್ರೀಹರ್ಷನ ನೈಷಧ ಮಹಾಕಾವ್ಯದ ಮೇಲೆ 'ನೈಷಧ ದೀಪಿಕೆ'ಯನ್ನು ಬರೆದನು. ಸ್ಮರಣೀಯವಾದ ಮತ್ತೊಂದು ವ್ಯಾಖ್ಯಾನವು ಶಂಕರಾಚಾರ್ಯರ ಸೌಂದರ್ಯಲಹರಿಗೆ ಅರುಣಗಿರಿನಾಥನು ಬರೆದಿರುವ ವ್ಯಾಖ್ಯಾನ. ಈತನು ಎರಡನೆಯ ದೇವರಾಯನ ಆಸ್ಥಾನದಲ್ಲಿದ್ದವನು.

ಅನಂತಭಟ್ಟನು (ಸು.ಕ್ರಿ.ಶ. 1500) 'ಭಾರತ ಚಂಪೂ'ವನ್ನು ರಚಿಸಿದನು. ಈ ಗ್ರಂಥದಲ್ಲಿ ಮಹಾಭಾರತ ಕಥೆಯನ್ನು ಹನ್ನೆರಡು ಆಶ್ವಾಸಗಳಲ್ಲಿ ಹೇಳಿದೆ. ಅವನ ಸೋದರಪುತ್ರನಾದ ಸೋಮ ನಾಥನು 'ವ್ಯಾಸಯೋಗಿಚರಿತ ಚಂಪು' ವಿನಲ್ಲಿ ವ್ಯಾಸರಾಯರ ಜೀವನ ಚರಿತ್ರೆಯನ್ನು ನಿರೂಪಿಸಿದ್ದಾನೆ.

ಮುಮ್ಮಡಿ ರಾಜನಾಥನು ಶ್ರೀಕೃಷ್ಣನ ಚರಿತ್ರೆಯನ್ನು ನಿರೂಪಿಸುವ 'ಭಾಗವತ ಚಂಪು' ವನ್ನು ರಚಿಸಿದ್ದಾನೆ. ದೊರೆ ಅಚ್ಯುತರಾಯನ ಇಷ್ಟ ಪ್ರಕಾರ ಕವಿ ಈ ವೈಷ್ಣವ ಗ್ರಂಥವನ್ನು ರಚಿಸಿದನು ; ಅಚ್ಯುತರಾಯನು ಸ್ವತಃ ಪರಮ ವಿಷ್ಣು ಭಕ್ತ. ಈ ಕಾವ್ಯ ರಾಜನಿಗೆ ಅರ್ಪಿತವಾಗಿದೆ. ಇಮ್ಮಡಿ ಅರುಣ ಗಿರಿನಾಥನ ಸೋದರ ಪುತ್ರನಾದ ಸ್ವಯಂಭೂನಾಥನು 'ಶಂಕರಾನಂದ ಚಂಪು' ವನ್ನು ರಚಿಸಿದನು. ಈ ಗ್ರಂಥದಲ್ಲಿ ಶಿವನಿಗೂ ಅರ್ಜುನನಿಗೂ ನಡೆದ ಕಾಳಗವನ್ನು ವರ್ಣಿಸಿದ್ದಾನೆ. ಅವನ ಸೋದರ ಗುರುರಾಮನು 'ಹರಿಶ್ಚಂದ್ರ ಚಂಪು' ವಿನ ಕವಿ. ಹರಿಶ್ಚಂದ್ರ ಮಹಾರಾಜನ ಕಥೆಯನ್ನು ನಿರೂಪಿಸುವ ಆ ಗ್ರಂಥ ಕ್ರಿ.ಶ. 1610ರಲ್ಲಿ ರಚಿತವಾಯಿತೆಂದು ತಿಳಿಯಬರುತ್ತದೆ.

ತಿರುಮಲಾಂಬೆ ಒಬ್ಬ ಕವಯಿತ್ರಿ. ಈಕೆಯ ಸಾಹಿತ್ಯ ಸಿದ್ಧಿಯನ್ನು ಅಚ್ಯುತರಾಯನ ಆಸ್ಥಾನದವರೆಲ್ಲರೂ ಬಹುವಾಗಿ ಮೆಚ್ಚಿಕೊಂಡಿದ್ದರು. ಹಂಪೆಯ ವಿಠಲದೇವಸ್ಥಾನದಲ್ಲಿನ ಒಂದು ಶಾಸನದಲ್ಲಿರುವ (ಕ್ರಿ.ಶ. 1533) ಸಂಸ್ಕೃತ ಪದ್ಯವನ್ನು ರಚಿಸಿದ ಓದುವತಿರುಮಲಮ್ಮನೇ ಈ ಕವಯಿತ್ರಿಯೆಂದು ನಿರ್ಧರಿಸಿದ್ದಾರೆ. ಆಕೆ ಅಚ್ಯುತರಾಯನ ರಾಣಿಯರಲ್ಲೇ ಒಬ್ಬಳೆಂದು ಡಾ॥ ಲಕ್ಷ್ಮಣ ಸರೂಪ್ ಭಾವಿಸುತ್ತಾರೆ. ಇತರ ವಿದ್ವಾಂಸರು ಆಕೆ ಅಳಿಯ ರಾಮರಾಯನ ಹೆಂಡತಿಯೆಂದು ಭಾವಿಸಿದ್ದಾರೆ. ಆಕೆ ಸೂಕ್ಷ್ಮ ಸಾಹಿತ್ಯಾಭಿರುಚಿಯುಳ್ಳ ಸುಸಂಸ್ಕೃತ ಮಹಿಳೆಯೆಂಬುದರಲ್ಲಿ ಸಂಶಯವಿಲ್ಲ. ಆಕೆ ಅನೇಕ ಭಾಷೆಗಳಲ್ಲಿ ಒಳ್ಳೆಯ ವಿದುಷಿಯಾಗಿದ್ದಳು ; ಅನೇಕ ಲಿಪಿಗಳನ್ನು ಬಲ್ಲವಳಾಗಿದ್ದಳು. ತಿರುಮಲಾಂಬೆ ರಚಿಸಿದ ಗ್ರಂಥಗಳಲ್ಲಿ ಈಗ ಉಪಲಬ್ಧವಾಗಿರುವುದು 'ವರದಾಂಬಿಕಾ ಪರಿಣಯ' ಎಂಬ ಚಂಪೂಗ್ರಂಥವೊಂದೇ. ಅಚ್ಯುತನ ತಂದೆ ನರಸನಿಗೂ ಚೋಳರಾಜನಿಗೂ ನಡೆದ ಯುದ್ಧವರ್ಣನೆಯಿಂದ ಕಾವ್ಯ ಪ್ರಾರಂಭವಾಗುತ್ತದೆ. ಓಬಲಾಂಬೆಯೊಡನೆ ನರಸನ ಪರಿಣಯ, ಅಚ್ಯುತನ ಜನನ, ಅವನ ವಂಶಾವಳಿಗಳನ್ನು ವರ್ಣಿಸುತ್ತದೆ. ಆ ಮೇಲೆ ಕಾವ್ಯದ ಮುಖ್ಯವಸ್ತುವನ್ನು ಸಲಗವಂಶದ ರಾಜಪುತ್ರಿ ವರದಾಂಬೆಯ ಮೇಲೆ ಅಚ್ಯುತರಾಯನಿಗುಂಟಾದ ಪ್ರೇಮ, ಮತ್ತು ಅವರ ವಿವಾಹ ವಿಷಯವನ್ನು–ತೆಗೆದುಕೊಳ್ಳುತ್ತದೆ. ಅಲ್ಲಿಂದ ಮುಂದೆ ರಾಜಕುಮಾರ ಚಿನ್ನವೆಂಕಟಾದ್ರಿಯ ಜನ್ಮವೃತ್ತಾಂತ ಬರುತ್ತದೆ. ತರುಣರಾಜಪುತ್ರನ ಯೌವರಾಜ್ಯ ಪಟ್ಟಾಭಿಷೇಕದಲ್ಲಿ ಕಾವ್ಯ ಸಮಾಪ್ತಿಯಾಗುತ್ತದೆ. ಅರ್ಥಮಾಡಿಕೊಳ್ಳುವುದಕ್ಕೆ ಸ್ವಲ್ಪ ಕಷ್ಟವೆನ್ನಿಸಿದರೂ ಈ ಚಂಪು ಬಹು ಮನೋಹರವಾದ ಶೈಲಿಯಲ್ಲಿ ರಚಿತವಾಗಿದೆ. ಆ ಕಾಲದ ಕವಯಿತ್ರಿಯರ ಗ್ರಂಥಗಳಲ್ಲಿ ಪೂರ್ಣಗ್ರಂಥವೊಂದು ಅಚ್ಚಿನಲ್ಲಿ ದೊರೆಯುವುದು ಇದೊಂದೇ.

ವಿಜಯನಗರದ ದೊರೆ ಇಮ್ಮಡಿ (ಪ್ರೌಢ) ದೇವರಾಯನು (ಕ್ರಿ.ಶ. 1424—1446) ರಾಮಾಯಣ ಕಥೆಯನ್ನು ಹೇಳುವ 'ಮಹಾನಾಟಕ ಸುಧಾನಿಧಿ' ಎಂಬ ಕೃತಿಯನ್ನು ರಚಿಸಿದನು. ಈ ಕೃತಿಯ ಕರ್ತೃತ್ವ ವಿಚಾರದಲ್ಲಿ ಅಭಿಪ್ರಾಯ ಭೇದವಿದೆ. ಕೆಲವರು ಇದು ಮೊದಲನೆಯ ಅರುಣ ಗಿರಿನಾಥನು ರಚಿಸಿದನೆನ್ನುತ್ತಾರೆ; ಮತ್ತೆ ಕೆಲವರು ವಿದ್ವಾಂಸರು ಇದರ ಕರ್ತೃ ಮಲ್ಲಿಕಾರ್ಜುನ ಇಮ್ಮಡಿ ದೇವರಾಯ (ಕ್ರಿ.ಶ. 1446—1487) ನಾಗಿರಬೇಕು ಎಂದು ಭಾವಿಸುತ್ತಾರೆ.

ಕೃಷ್ಣದೇವರಾಯನ ಪ್ರಸಿದ್ಧ ಮಂತ್ರಿ ಸಾಳುವ ತಿಮ್ಮನು ಅಗಸ್ತ್ಯರಚಿತವಾದ ಚಂಪೂ ಭಾರತಕ್ಕೆ 'ಮನೋಹರ' ಎಂಬ ವ್ಯಾಖ್ಯಾನವೊಂದನ್ನು ರಚಿಸಿದನು. ಈ ಅಗಸ್ತ್ಯನು ಓರಂಗಲ್ಲಿನ ಪ್ರತಾಪರುದ್ರನ ಆಸ್ಥಾನಕವಿ.

ಈ ಕಾಲದ ನಾಟಕ ಸಾಹಿತ್ಯವೆಲ್ಲ ಲಘು ಬಗೆಯವು. ಭಾಣ, ಡಿಮ, ವ್ಯಾಯೋಗ, ಪ್ರಹಸನ ತರಗತಿಗೆ ಸೇರಿದವು. ಲಕ್ಷಣಬದ್ಧವಾದ ನಾಟಕಗಳು ಬಹು ವಿರಳ.

ವಾಮನಭಟ್ಟ ಬಾಣನು ವಿದ್ಯಾರಣ್ಯರ ಶಿಷ್ಯರಲ್ಲೊಬ್ಬ. ಅವನು ವಿಜಯನಗರದ ಹುಟ್ಟು ಬೆಳವಣಿಗೆಗಳನ್ನು ಸ್ವತಃ ಕಂಡ ಪ್ರತ್ಯಕ್ಷ ದರ್ಶಿಯೆಂದು ತೋರುತ್ತದೆ. ಅವನು ಸುಮಾರು ಮೂವತ್ತು ವರ್ಷ ವಯಸ್ಸಿನವನಾಗಿದ್ದಾಗ, ಕೊಂಡವೀಡಿನಲ್ಲಿ ಆಳುತ್ತಿದ್ದ ವೇಮಭೂಪಾಲ ಅಥವಾ ವೀರನಾರಾಯಣನ (ಕ್ರಿ.ಶ. 1402—1420) ಆಸ್ಥಾನಕ್ಕೆ ವಲಸೆ ಹೋದ ಹಾಗೆ ಕಾಣುತ್ತದೆ. ವಿರೂಪಾಕ್ಷನ ಉತ್ಸವ ಕಾಲದಲ್ಲಿ ನೆರೆದ ಸಭಿಕರ ಮನೋರಂಜನೆಗಾಗಿ ಪ್ರದರ್ಶಿಸುವುದಕ್ಕೋಸ್ಕರ ಅವನು 'ಶೃಂಗಾರಭೂಷಣ ಭಾಣ' ವನ್ನು ರಚಿಸಿದನು. ಅವನ ಆ ನಾಟಕದಲ್ಲಿ ವಿಜಯನಗರದಲ್ಲಿ ಬಹು ಮುಂದುವರಿದಿದ್ದ ಆಗಿನ ಪೌರಜೀವನದ ಇಣುಕುನೋಟ ನಮಗೆ ಗೋಚರವಾಗುತ್ತದೆ.

ಕೃಷ್ಣಮಿಶ್ರನ 'ಪ್ರಬೋಧ ಚಂದ್ರೋದಯ'ದ ಮಾದರಿಯಲ್ಲಿ ವೆಂಕಟನಾಥರು 'ಸಂಕಲ್ಪಸೂರ್ಯೋದಯ'ವೆಂಬ ತಾತ್ತ್ವಿಕ ನಾಟಕವನ್ನು ರಚಿಸಿದರು. ರಾಮಾನುಜರ ವಿಜಯವನ್ನು ನಿರೂಪಿಸುವ 'ವೇದಾಂತ ವಿಲಾಸ'ವನ್ನು ವರದಾಚಾರ್ಯನು ರಚಿಸಿದನು. ಅವನು 'ವಸಂತ ತಿಲಕ'ವೆಂಬ ಭಾಣವನ್ನೂ ರಚಿಸಿದ್ದಾನೆ.

'ಕಾದಂಬರೀ ಕಲ್ಯಾಣ' ಎಂಬ ಹೆಸರಿನಿಂದ ಬಾಣನ ಕಾದಂಬರಿಯ ಕಥೆಯನ್ನು ರೂಪಕವಾಗಿ ತಿರುಗಿಸಲಾಯಿತು. ಇದರಲ್ಲಿ ಎಂಟು ಅಂಕಗಳಿವೆ. ಚಂದ್ರಾಪೀಡನು ಕಿನ್ನರ ಮಿಥುನವನ್ನು ಬೆಂಬತ್ತಿ ಹೋಗುವಲ್ಲಿಂದ ಕಥೆ ಪ್ರಾರಂಭವಾಗುತ್ತದೆ; ಪ್ರಣಯಿಗಳ ಪುನಸ್ಸಮಾಗದಲ್ಲಿ ಮುಕ್ತಾಯವಾಗುತ್ತದೆ. ಈ ನಾಟಕದ ರಚನಕಾರ ಅಗಸ್ತ್ಯನ ಸೋದರಳಿಯ ನರಸಿಂಹನು ಮೂಲ ಕಥೆಯಲ್ಲಿ ಸ್ವಲ್ಪ ಮಾರ್ಪಾಟು ಮಾಡಿಕೊಂಡಿದ್ದಾನೆ. ಐದನೆಯ ಅಂಕದಲ್ಲಿ ಒಂದು ಅಂತರ್ನಾಟಕವನ್ನು ಅಳವಡಿಸಿ ಆ ಮೂಲಕ ಕಾದಂಬರಿ ಚಂದ್ರಾಪೀಡನ ಸಮ್ಮುಖಕ್ಕೆ ಬರುವಂತೆ ಮಾಡುತ್ತಾನೆ. ಇದು ಈ ಕೃತಿಯ ವಿಶಿಷ್ಟ ಲಕ್ಷಣವಾಗಿದೆ. ಈ ನಾಟಕ ಕ್ರಿ.ಶ. 1400 ಕ್ಕಿಂತ ಮುಂಚೆ ರಚಿತವಾಗಿರಬೇಕು.

ಭಾಸ್ಕರನು (ಇವನು ಇಮ್ಮಡಿ ಹರಿಹರನ ಆಸ್ಥಾನ ಕವಿಯಾಗಿದ್ದಿರಬಹುದು) 'ಉನ್ಮತ್ತರಾಘವ' ಎಂಬ ಪ್ರೇಕ್ಷಣಕ (ಎಂದರೆ ' ನೋಟಕ ') ವೊಂದನ್ನು ರಚಿಸಿದ್ದಾನೆ. ದುರ್ವಾಸನ ಶಾಪದಿಂದ ಸೀತೆ ಒಂದು ಜಿಂಕೆಯಾದವಳೆಂದೂ ಆ ಮೂಲಕ ಸೀತೆಯ ಅಗಲಿಕೆಯುಂಟಾದ್ದರಿಂದ ರಾಮ ಹುಚ್ಚನಾದನೆಂದೂ ಅಗಸ್ತ್ಯನ ಸಹಾಯದಿಂದ ಶಾಪವಿಮೋಚನೆಯಾಗಿ ಸತಿಪತಿಯರಿಗೆ ಪುನಸ್ಸಮಾಗಮವಾಯಿತೆಂದೂ ನಿರೂಪಿಸುತ್ತದೆ ಈ ಪ್ರೇಕ್ಷಣಕ. ಇದರಲ್ಲಿ ಬರುವ ಸ್ವಾಗತ ಭಾಷಣಗಳು ಕಾಳಿದಾಸನ ವಿಕ್ರಮೋರ್ವಶೀಯದ ನಾಲ್ಕನೆಯ ಅಂಕದ ಅನುಕರಣೆ. ಇದರ ಶೈಲಿ ಲಲಿತವಾಗಿದೆ. ಯೋಗಿ ವಿದ್ಯಾರಣ್ಯರಿಗೆ ಗೌರವಾರ್ಪಣೆ ಮಾಡಲು ನೆರೆದಿದ್ದ ಸಭಿಕರ ಮುಂದೆ ಈ ಪ್ರೇಕ್ಷಣಕವನ್ನು ಪ್ರದರ್ಶಿಸಿದರಂತೆ. ಅಂಥದೇ ವಸ್ತುವನ್ನೊಳಗೊಂಡ ಅಂಥದೇ ಹೆಸರಿನ ರೂಪಕವೊಂದನ್ನು ಇಮ್ಮಡಿ ಹರಿಹರನ ಮಗ ವಿರೂಪಾಕ್ಷನೂ ರಚಿಸಿರುವಂತೆ ಕಾಣುತ್ತದೆ. ಉನ್ಮತ್ತರಾಘವ ಒಂದಂಕದ ರೂಪಕ. ಅವನು 'ನಾರಾಯಣ ವಿಲಾಸ' ಎಂಬ ಐದಂಕದ ಮತ್ತೊಂದು ನಾಟಕವನ್ನೂ ರಚಿಸಿದ್ದಾನೆ. ಮೊದಲನೆಯ ಅರುಣಗಿರಿನಾಥನು 'ಸೋಮವಲ್ಲೀ ಯೋಗಾನಂದ ಪ್ರಹಸನ'ವೆಂಬ ವಿನೋದ ರೂಪಕದಲ್ಲಿ ಒಬ್ಬ ಯತಿಯು ಹೆಂಗಸೊಬ್ಬಳಲ್ಲಿ ಮೋಹಗೊಂಡು ನಡೆಸುವ ಪ್ರೇಮಚೇಷ್ಟೆಗಳನ್ನು ಹಾಸ್ಯಮಾಡಿದ್ದಾನೆ. ವಿಜಯನಗರದ ರಾಜ ವೀರನರಸಿಂಹನ (ಕ್ರಿ.ಶ. 1501–1509)ಆಸ್ಥಾನದಲ್ಲಿದ್ದ ಎರಡನೆಯ ಅರುಣಗಿರಿನಾಥನು 'ವೀರಭದ್ರ ವಿಜಯ' ವೆಂಬ ಡಿಮವೊಂದನ್ನು ರಚಿಸಿದ್ದಾನೆ. ವೀರಭದ್ರನ ಜನ್ಮ ಮತ್ತು ದಕ್ಷಯಜ್ಞಧ್ವಂಸ–ಈ ನಾಟಕದ ವಸ್ತು. ಭೂಪತಿರಾಯಪುರದಲ್ಲಿ ರಾಜನಾಥನ ಉತ್ಸವದಲ್ಲಿ ಈ ಭಾಣವನ್ನು ಪ್ರದರ್ಶಿಸಲಾಯಿತು. ಕವಿಯನ್ನು ಕುಮಾರಡಿಂಡಿಮನೆಂದು ಕರೆದರು. ಅವನಿಗೆ ಡಿಂಡಿಮ ಕವಿಸಾರ್ವಭೌಮ, ಕವಿರಾಜರಾಜ ಎಂಬ ಬಿರುದುಗಳಿದ್ದವು.

'ಜಾಂಬವತೀ ಪರಿಣಯ'ವೆಂಬ ಐದಂಕದ ನಾಟಕವನ್ನು ಕೃಷ್ಣದೇರಾಯನು ರಚಿಸಿದನು. ಸ್ಯಮಂತಕ ಮಣಿಯ ವಿಚಾರ, ಜಾಂಬವಂತನ ಮಗಳು ಜಾಂಬವತಿಗೂ ಕೃಷ್ಣನಿಗೂ ನಡೆದ ವಿವಾಹ–ಇದೇ ಇದರ ವಸ್ತು. ವಿರೂಪಾಕ್ಷನ ಚೈತ್ರೋತ್ಸವದಲ್ಲಿ ಈ ನಾಟಕ ಪ್ರದರ್ಶನ ನಡೆಯಿತು. 'ಉಷಾಪರಿಣಯ' ವೆಂಬ ಇನ್ನೊಂದು ನಾಟಕವು ಕೃಷ್ಣದೇವರಾಯ ರಚಿತವೆಂದು ಹೇಳುತ್ತಾರೆ.

ಮಲ್ಲಿಕಾರ್ಜುನ ಅಥವಾ ಸ್ಫುಲಿಂಗಕವಿ ಎಂಬವನು ಎರಡನೆಯ ಅರುಣಗಿರಿನಾಥನ ಅಳಿಯ. 'ಸತ್ಯಭಾಮಾಪರಿಣಯ' ಎಂಬ ನಾಟಕ ಅವನ ಹೆಸರಿನಲ್ಲಿದೆ. ಕೃಷ್ಣನಿಗೂ ಸತ್ಯಭಾಮೆಗೂ ಆದ ವಿವಾಹವನ್ನು ಈ ಐದಂಕದ ನಾಟಕ ನಿರೂಪಿಸುತ್ತದೆ.

ಗುರುರಾಯನು ಎರಡು ನಾಟಕಗಳನ್ನು ರಚಿಸಿದನು. ಮೊದಲನೆಯದು 'ಸುಭದ್ರಾಧನಂಜಯ,' ಐದಂಕದ್ದು. ಅರ್ಜುನಸುಭದ್ರೆಯರ ವಿವಾಹ ಇದರ ವಸ್ತು. 'ರತ್ನೇಶ್ವರ ಪ್ರಸಾದ' ವೆಂಬ ಇನ್ನೊಂದೂ ಐದಂಕದ ನಾಟಕ. ರತ್ನೇಶ್ವರ ದೇವರ ಅನುಗ್ರಹದಿಂದಾದ ರತ್ನಚೂಡ ಮತ್ತು ರತ್ನಾವಳಿಯರ ವಿವಾಹವನ್ನು ಕವಿ ಈ ನಾಟಕಕ್ಕೆ ವಸ್ತುವಾಗಿ ಆಯ್ದುಕೊಂಡಿದ್ದಾನೆ.

ನಾದಿಂಡ್ಮಗೋಪನು 'ಪ್ರಬೋಧ ಚಂದ್ರೋದಯ' ವೆಂಬ ತಾತ್ವಿಕನಾಟಕಕ್ಕೆ ವ್ಯಾಖ್ಯಾನ ಬರೆದಿದ್ದಾನೆ.

## 3. ಅಲಂಕಾರ, ಸಂಗೀತ ಮತ್ತು ಇತರ ಶಾಸ್ತ್ರಗಳು.

ಸಾಯಣರ ಅಲಂಕಾರ ಸುಧಾನಿಧಿಯು ಈಗ ಚೂರುಪಾರಾಗಿ ಮಾತ್ರ ಸಿಕ್ಕಿದೆ. ಅದರಲ್ಲಿ ಹೊಸತೇನೂ ಇಲ್ಲದಿರಬಹುದಾದರೂ ನಿರೂಪಣೆಯ ರೀತಿ ಬೋಧಪ್ರದವಾಗಿದೆ, ಅಭ್ಯಾಸಯೋಗ್ಯವಾಗಿದೆ. ಇದು ಹತ್ತು ಉನ್ಮೇಷ (ಅಧ್ಯಾಯ)ಗಳಲ್ಲಿ ರಚಿತವಾಯಿತಂತೆ. ಉದಾಹರಣೆಗಾಗಿ ಕೊಡುವ ಪದ್ಯಗಳೆಲ್ಲಾ ಸಾಯಣರ ಪ್ರಶಂಸಾಪರವಾದವೇ ; ಇವನ್ನು ಅವರ ಸೋದರ ಭೋಗನಾಥನ ಉದಾಹರಣಮಾಲಾದಿಂದ ತೆಗೆದು ಕೊಂಡಿದೆ. ಈ ಪದ್ಯಗಳು ಸಾಯಣರ ವೈಯಕ್ತಿಕ ಜೀವನದ ಮೇಲೆ ಬೆಳಕು ಬೀಳಿಸುವುದು ಮಾತ್ರವೇ ಅಲ್ಲ; ವಿಜಯನಗರದ ಆದಿಕಾಲದ ಚರಿತ್ರೆಯ ಹಲಕೆಲವು ಮುಖಗಳನ್ನೂ ವಿಶದಪಡಿಸುತ್ತವೆ. ಅಲಂಕಾರ ಶಾಸ್ತ್ರದ ಮತ್ತೊಂದು ಗ್ರಂಥ ರಸಮಂಜರಿ. ಇದು ಕೃಷ್ಣದೇರಾಯನದೆಂದು ಪ್ರತೀತಿ. ಇದರ ಉದಾಹರಣ ಪದ್ಯಗಳು ರಾಯನಿಗೇ ಸಂಬಂಧಪಟ್ಟಿವೆ.

'ನೈಷಧ ದೀಪಿಕೆ'ಯ ಕರ್ತೃ ನರಹರಿಯೂ 'ಕಾವ್ಯ ಪ್ರಕಾಶಕ್ಕೆ' ಒಂದು ವ್ಯಾಖ್ಯಾನವನ್ನು ಬರೆದಿದ್ದಾನೆ. ಇಮ್ಮಡಿ ದೇವರಾಯನ ಕೈಕೆಳಗೆ ಮುಳಬಾಗಿಲಿನಲ್ಲಿ ರಾಜಪ್ರತಿನಿಧಿಯಾಗಿದ್ದ ಸಾಳುವ ಗೋಪ ತಿಪ್ಪ ಭೂಪಾಲನು ಮಹಾಪಂಡಿತನಾಗಿದ್ದನು. ಅವನು ಅನೇಕ ಗ್ರಂಥಗಳನ್ನು ರಚಿಸಿದ್ದಾನೆ. 'ಅವನ ಕಾಮಧೇನು', ವಾಮನನ 'ಕಾವ್ಯಾಲಂಕಾರ ಸೂತ್ರವೃತ್ತಿ'ಯ ಮೇಲಿನ ಒಂದು ವ್ಯಾಖ್ಯಾನ. ಅದು ಲಲಿತವಾಗಿದೆ; ಅಲಂಕಾರ ಶಾಸ್ತ್ರಕ್ಕೊಂದು ಮುಖ್ಯವಾದ ಕೊಡುಗೆ.

ಸಂಗೀತ ವಿಷಯದ ಗ್ರಂಥಗಳು ಈ ಕಾಲದ ಬಹು ಮುಖ್ಯವಾದ ಕೊಡುಗೆ. ವಿದ್ಯಾರಣ್ಯರೇ ಸ್ವತಃ 'ಸಂಗೀತ ಸಾರ' ಎಂಬ ಕೃತಿಯನ್ನು ರಚಿಸಿದರೆಂದು ಹೇಳಲಾಗಿದೆ. ಸಂಗೀತ ಸಂಬಂಧದ ಸಿದ್ಧಾಂತವನ್ನೂ ಪ್ರಯೋಗವನ್ನೂ ಈ ಗ್ರಂಥ ವಿವರಿಸುತ್ತದೆ. ಮೈಸೂರಿನ ಚಿಕ್ಕದೇವರಾಯನು ತನ್ನ 'ಭಾರತ ಸಾರ ಸಂಗ್ರಹ'ದಲ್ಲಿ ಈ ಗ್ರಂಥದಿಂದ ಉದ್ಧರಣಗಳನ್ನು ಎತ್ತಿಕೊಂಡಿದ್ದಾನೆ. ಗೋಪ ತಿಪ್ಪ ಭೂಪಾಲನು 'ತಾಳದೀಪಿಕಾ' ಎಂಬ ಒಂದು ಪ್ರಬಂಧವನ್ನು ರಚಿಸಿದನು. ಅದರಲ್ಲಿ ಬಗೆಬಗೆಯ ತಾಳಗಳನ್ನು ವಿವರಿಸಿದ್ದಾನೆ. ಮಾರ್ಗ ಮತ್ತು ದೇಶೀ ತಾಳಗಳನ್ನು ಮೂರು ಅಧ್ಯಾಯಗಳಲ್ಲಿ ಚರ್ಚಿಸಿದ್ದಾನೆ. ಅವನು ನರ್ತನದ ಮೇಲೆಯೂ ಬರೆದಿದ್ದಾನೆಂದು ತಿಳಿಯುಬರುತ್ತದೆ. ದೇವಣ್ಣ ಭಟ್ಟನು (ಸು. ಕ್ರಿ.ಶ. 1445) 'ಸಂಗೀತ ಮುಕ್ತಾವಳೀ' ಎಂಬ ಸಂಗೀತ ವಿಷಯದ ಕೈಪಿಡಿಯೊಂದನ್ನು ರಚಿಸಿದ್ದಾನೆ.

ಲಕ್ಷ್ಮೀನಾರಾಯಣನು ಕೃಷ್ಣದೇವರಾಯನ ಆಸ್ಥಾನದಲ್ಲಿ ನಾಟ್ಯಾಚಾರ್ಯನಾಗಿದ್ದನು. ಅವನನ್ನು ಅಭಿನವ ಭರತ ಎಂದು ಕರೆಯುತ್ತಿದ್ದರು. ಅವನು ಸಂಗೀತಕ್ಕೂ ಪ್ರಮಾಣ ಪುರುಷನಾಗಿದ್ದನು. 'ಸಂಗೀತ ಸೂರ್ಯೋದಯ'ವು ಅವನು ರಚಿಸಿದ ಸಂಗೀತ ವಿಷಯದ ಪ್ರಬಂಧ. ಈ ಗ್ರಂಥವಲ್ಲಿ ತಾಳ, ವೃತ್ತ, ಸ್ವರಗೀತ, ಜತಿ ಮತ್ತು ಪ್ರಬಂಧ—ಈ ಐದು ವಿಷಯಗಳನ್ನು ಐದು ಅಧ್ಯಾಯಗಳಲ್ಲಿ ವಿವರಿಸಿದ್ದಾನೆ.

ಕಲ್ಲರಸ ಅಥವಾ ಕಲ್ಲಾಮಾತ್ಯನು ಶಾರ್ಙ್ಗಧರನ 'ಸಂಗೀತ ರತ್ನಾಕರ'ಕ್ಕೆ 'ಕಲಾನಿಧಿ' ಎಂಬ ಒಂದು ವ್ಯಾಖ್ಯಾನ ಬರೆದಿದ್ದಾನೆ. ಇಮ್ಮಡಿ ದೇವರಾಯನು ರಾಜ್ಯವಾಳುತ್ತಿದ್ದಾಗ ರಾಜಕುಮಾರ ಮಲ್ಲಿಕಾರ್ಜುನನು ಅವನಿಗೆ ಆಶ್ರಯ ನೀಡಿದನು.

'ರತಿರತ್ನ ಪ್ರದೀಪಿಕಾ' ಇಮ್ಮಡಿ ದೇವರಾಯನು ರಚಿಸಿದ ಕಾಮಶಾಸ್ತ್ರ ಗ್ರಂಥ. ಇದರಲ್ಲಿ ಏಳು ಅಧ್ಯಾಯಗಳಿವೆ. ಕಾಮಶಾಸ್ತ್ರ ಮತ್ತು ಕಾಮ ಕಲೆಯ ವಿಷಯದಲ್ಲಿ ಇದೊಂದು ವಿವರವಾದ ಮತ್ತು ಸ್ವಾರಸ್ಯವಾದ ಗ್ರಂಥ.

'ಆಯುರ್ವೇದ ಸುಧಾನಿಧಿ'ಯು ಸಾಯಣರಚಿತವಾದ ಒಂದು ವೈದ್ಯಗ್ರಂಥ. ಅವರ ಅಲಂಕಾರ ಸುಧಾನಿಧಿಯಲ್ಲಿ ಈ ಗ್ರಂಥದ ಪ್ರಸ್ತಾಪವಿದೆ. ಇಮ್ಮಡಿ ಬುಕ್ಕರಾಜನು ಲಕ್ಷ್ಮಣ ಪಂಡಿತನೆಂಬ ವೈದ್ಯನೊಬ್ಬನಿಗೆ ಆಶ್ರಯಕೊಟ್ಟನು. ಆತನು 'ವೈದ್ಯರಾಜವಲ್ಲಭ' ಎಂಬ ಗ್ರಂಥವೊಂದನ್ನು ರಚಿಸಿದನು.

ಈ ಕಾಲದಲ್ಲಿ ಕರ್ಣಾಟಕದಲ್ಲಿ ವ್ಯಾಕರಣವಿಷಯವಾಗಿ ರಚಿತವಾದ ಗಮನಾರ್ಹ ಗ್ರಂಥ ಸಾಯಣರ 'ಧಾತುವೃತ್ತಿ'ಯೊಂದೇ ಎಂದು ತೋರುತ್ತದೆ. ಇದು ಪಾಣಿನಿಯ ಧಾತುಪಾಠದ ಮೇಲಿನ ಒಂದು ವ್ಯಾಖ್ಯಾನ. ಧಾತುಗಳು ತಳೆಯುವ ಮುಖ್ಯವಾದ ರೂಪಗಳನ್ನು ಇದು ವಿವರಿಸುವುದಲ್ಲದೆ, ಅವುಗಳಿಂದ ಸಿದ್ಧವಾಗುವ ಹಲವು ಶಬ್ದಗಳನ್ನೂ ಸೂಚಿಸಿ ಪಾಣಿನಿಯ ಸೂತ್ರಗಳಿಗನುಸಾರವಾಗಿ ಅವನ್ನು ಚರ್ಚಿಸುತ್ತದೆ.

ಜ್ಯೋತಿಷ (ಫಲಜ್ಯೋತಿಷ ಮತ್ತು ಖಗೋಳಶಾಸ್ತ್ರ) ವಿಷಯವಾದ ಗ್ರಂಥಗಳೂ ಬಹು ವಿರಳ. ವಿದ್ಯಾರಣ್ಯರ 'ಕಾಲಮಾಧವ' ಎಂಬ ಪ್ರಬಂಧವು ಕಾಲ, ಅದರ ಸ್ವಭಾವ, ಅದರ ವಿಭಾಗ–ಇವನ್ನು ನಿರೂಪಿಸುತ್ತದೆ. ಅದರಲ್ಲಿ ಐದು ಅಧ್ಯಾಯಗಳಿವೆ. ವರ್ಷ, ಋತು, ಮಾಸ, ಮತ್ತು ಅಧಿಕ ಮಾಸ–ಇವನ್ನು ವಿವರಿಸಲಾಗಿದೆ. ಈ ವಿಷಯಗಳ ಜೊತೆಗೆ ತಿಥಿ, ನಕ್ಷತ್ರ, ಯೋಗ, ಕರಣ, ಸಂಕ್ರಾಂತಿ, ಗ್ರಹಣಗಳು––ಇವನ್ನೂ ಎತ್ತಿಕೊಂಡು ವಿವರಿಸಿದ್ದಾರೆ.

ವಿದ್ಯಾಮಾಧವಸೂರಿ (14ನೆಯ ಶತಮಾನದ ಆದಿಭಾಗ) ಎಂಬ ಖಗೋಳಶಾಸ್ತ್ರಜ್ಞನು 'ಮುಹೂರ್ತ ದರ್ಶನ'ದ ಕರ್ತೃ. ಇದು ಮುಹೂರ್ತ ವಿಷಯದಲ್ಲಿ ಬಹು ವಿವರವಾದ ಜ್ಯೋತಿಷ ಗ್ರಂಥ. ಇದಕ್ಕೆ 'ವಿದ್ಯಾ ಮಾಧವೀಯ' ಎಂಬ ಹೆಸರೂ ಉಂಟು. ಅವನ ಮಗ ವಿಷ್ಣುಸೂರಿಯು ಬುಕ್ಕರಾಜನ (ಕ್ರಿ.ಶ. 1363) ಮಗ ಮಲ್ಲಪ್ಪ ಒಡೆಯನ ಸಮಕಾಲೀನ. ಅವನು ವಿದ್ಯಾ ಮಾಧವೀಯಕ್ಕೆ ಒಂದು ವ್ಯಾಖ್ಯಾನ ಬರೆದನು. ಅದಕ್ಕೆ 'ಮುಹೂರ್ತ ದೀಪಿಕಾ' ಎಂದು ಹೆಸರು. ಇನ್ನೊಬ್ಬ ವಿದ್ವಾಂಸ ಲೊಲ್ಲ ಲಕ್ಷ್ಮೀಧರನು 'ಜ್ಯೋತಿಷದರ್ಪಣ'ದ ಒಂದು ಭಾಗವನ್ನು ರಚಿಸಿದನು. ಇದು ಖಗೋಳಶಾಸ್ತ್ರ ವಿಷಯದಲ್ಲಿ ವಿಶ್ವಕೋಶದಂಥ ಗ್ರಂಥ.

## 4. ತತ್ತ್ವಶಾಸ್ತ್ರ (ವೇದಾಂತ)

ಬೇರೆ ಬೇರೆ ದರ್ಶನಗಳು ಕೂಡ ಅನೇಕ ಗ್ರಂಥಗಳಿಗೆ ವಿಷಯಗಳಾಗಿದ್ದವು. ವಿದ್ಯಾರಣ್ಯರು, ಅವರ ಗುರು ಮತ್ತು ಸೋದರರ ನಾಯಕತ್ವದಲ್ಲಿ ಅದ್ವೈತವೇದಾಂತ, ವೇಂಕಟನಾಥರ ನಾಯಕತ್ವದಲ್ಲಿ ವಿಶಿಷ್ಟಾದ್ವೈತವೇದಾಂತ, ಅಕ್ಷೋಭ್ಯತೀರ್ಥ ಮತ್ತು ಅವರ ಶಿಷ್ಯರ ನಾಯಕತ್ವದಲ್ಲಿ ದ್ವೈತ ವೇದಾಂತ,

ಕ್ರಿಯಾಶಕ್ತಿ ಆಚಾರ್ಯರ ನೇತೃತ್ವದಲ್ಲಿ ಶೈವ ಸಿದ್ಧಾಂತ, ಪಾಲ್ಕುರಿಕೆ ಸೋಮ ಮತ್ತು ಶ್ರೀಪತಿ ಪಂಡಿತರ ಮುಂದಾಳುತನದಲ್ಲಿ ವೀರಶೈವ ಮತ–ಇವು ಪಾಂಡಿತ್ಯಪೂರ್ಣವಾಗಿ ನಿರೂಪಿಸಲ್ಪಡುತ್ತಿದ್ದವು. ಜೈನ ಮತಕ್ಕೂ ರಾಜಾಶ್ರಯ ದೊರೆತಿತ್ತು. ವೈದಿಕ ಗ್ರಂಥಗಳ ಅಧ್ಯಯನ ಪರಿಶೋಧನೆಗಳನ್ನು ನಿರ್ದೇಶಿಸಿ ನಡೆಸುತ್ತಿದ್ದ ಸಾಯಣರೇ ' ಸರ್ವದರ್ಶನ ಸಂಗ್ರಹ'ವನ್ನು ರಚಿಸಿದ್ದರೂ ಇರಬಹುದು. ಜನಪ್ರಿಯವಾದ ಈ ವೇದಾಂತ ಗ್ರಂಥದ ಕರ್ತೃತ್ವವಿಷಯದಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದ್ದು ಇನ್ನೂ ವಾದವಿವಾದ ನಡೆಯುತ್ತಲೇ ಇರುವುದಾದರೂ ಇದು ಸಾಯಣರಚಿತವೆಂಬುದು ಹೆಚ್ಚು ಸಂಭವನೀಯವಾಗಿದೆ. ನಮ್ಮ ದೇಶದಲ್ಲಿ ನಡೆದಿರುವ ಬೇರೆ ಬೇರೆ ದರ್ಶನಗಳ ಸಾರಗ್ರಾಹೀ ವಿಮರ್ಶೆಗಳಲ್ಲಿ ಉಳಿದೆಲ್ಲಕ್ಕಿಂತಲೂ ಈ ಸರ್ವದರ್ಶನ ಸಂಗ್ರಹವು ಬಹಳ ಹೆಚ್ಚಾಗಿ ಪ್ರಚಾರವಲ್ಲಿದೆ ; ಬಹುಜನವಿದಿತವಾಗಿದೆ. ಇದು ವಿಮರ್ಶೆಗೆ ಹದಿನಾರು ದರ್ಶನಗಳನ್ನು ತೆಗೆದುಕೊಂಡಿದೆ. ಚಾರ್ವಾಕದರ್ಶನದಿಂದ ಸಂಗ್ರಹವು ಪ್ರಾರಂಭವಾಗುತ್ತದೆ. ಅದಾದ ಮೇಲೆ ಬೌದ್ಧ ಜೈನದರ್ಶನಗಳು ಬರುತ್ತವೆ. ಆ ಮೇಲೆ ರಾಮಾನುಜರ ಮತ್ತು ಪೂರ್ಣಪ್ರಜ್ಞರ ದರ್ಶನಗಳಿವೆ. ಆ ಬಳಿಕ ಲಕುಲೀಶ ಪಾಶುಪತ ಶೈವ, ಪ್ರತ್ಯಭಿಜ್ಞಾ, ರಸೇಶ್ವರ, ಔಲೂಕ್ಯ, ಅಕ್ಷಪಾದ, ಜೈಮಿನಿ, ಪಾಣಿನಿ, ಸಾಂಖ್ಯ ಮತ್ತು ಪಾತಂಜಲದರ್ಶನ–ಇವುಗಳನ್ನು ಅನುಕ್ರಮವಾಗಿ ವಿಮರ್ಶಿಸಲಾಗಿದೆ. ಗ್ರಂಥವು ಶಾಂಕರದರ್ಶನದಲ್ಲಿ ಮುಕ್ತಾಯಹೊಂದುತ್ತದೆ.

ವಿದ್ಯಾರಣ್ಯರ ಗುರು ಭಾರತೀತೀರ್ಥರು 'ವೈಯಾಸಿಕ ನ್ಯಾಯಮಾಲಾ'ವನ್ನು ಬರೆದರು. ಇದು ಬ್ರಹ್ಮಸೂತ್ರಗಳ ಸಾರಸಂಗ್ರಹ. ಇದರಲ್ಲಿ ನಾಲ್ಕು ಅಧ್ಯಾಯಗಳಿವೆ. ಪ್ರತಿಯೊಂದು ಅಧಿಕರಣದಲ್ಲಿ ಅಡಕವಾಗಿರುವ ವಿಷಯಗಳನ್ನೂ ಸಂಗ್ರಹಿಸಿ, ಸರಳವಾದ ಶ್ಲೋಕಗಳಲ್ಲಿ ಹೇಳಿದ್ದಾರೆ. ಅದಕ್ಕೆ ಗದ್ಯದಲ್ಲಿ ' ವಿಸ್ತಾರ ' ಎಂಬ ಹೆಸರಿನ ವ್ಯಾಖ್ಯಾನವನ್ನೂ ಸೇರಿಸಿದ್ದಾರೆ. ವಿದ್ಯಾರಣ್ಯರು 'ಜೀವನ್ಮುಕ್ತಿವಿವೇಕ'ವನ್ನು ಬರೆದರು. ಇದರ ಜೊತೆಗೆ ಅವರು 'ಪಂಚದಶಿ'ಯ ರಚನೆಯಲ್ಲಿ ಭಾರತೀತೀರ್ಥರೊಡನೆ ಸಹಕರಿಸಿ ಸಹ ಗ್ರಂಥಕರ್ತೃವಾಗಿದ್ದರೆಂದೂ ತೋರುತ್ತದೆ. ಗ್ರಂಥದಲ್ಲಿ ದೊರೆಯುವ ಆಂತರಿಕ ಸಾಕ್ಷಿಯಿಂದ ಅದರಲ್ಲಿ ಇಬ್ಬರ ಕೈವಾಡವಿದೆಯೆಂದು ಅನುಮಾನಿಸಬಹುದು. ಹದಿನೈದು ಅಧ್ಯಾಯಗಳಲ್ಲಿ ಪಂಚದಶಿಯು ಅದ್ವೈತ ವೇದಾಂತದ ಸಿದ್ಧಾಂತಗಳನ್ನು ವಿಶದವಾಗಿ, ತಿಳಿಯಾಗಿ, ನಿರೂಪಿಸುತ್ತದೆ. ಜೀವನ್ಮುಕ್ತಿ ವಿವೇಕದಲ್ಲಿ ಅದ್ವೈತ ವೇದಾಂತದ ಸಿದ್ಧಾಂತಗಳಲ್ಲೊಂದಾದ ಜೀವನ್ಮುಕ್ತಿಯನ್ನು ಕುರಿತ ವಿವೇಚನೆಯಿದೆ. ಇದರ ಜೊತೆಯಲ್ಲಿ ಪ್ರಾಸಂಗಿಕವಾಗಿ ಸಂನ್ಯಾಸ ಮತ್ತು ವಿದೇಹ ಮುಕ್ತಿಗಳ ವಿಷಯನ್ನೂ ಚರ್ಚಿಸಿದ್ದಾರೆ. 'ಅನುಭೂತಿ ಪ್ರಕಾಶ'ದಲ್ಲಿ ವಿದ್ಯಾರಣ್ಯರು ಉಪನಿಷತ್ತುಗಳ ಉಪದೇಶವನ್ನು ಸಂಗ್ರಹವಾಗಿ ತಿಳಿಯಪಡಿಸುತ್ತಾರೆ. ಐತರೇಯ, ತೈತ್ತಿರೀಯ, ಛಾಂದೋಗ್ಯ, ಮುಂಡಕ, ಕೌಶೀತಕಿ, ಮೈತ್ರಾಯಣಿ, ಕಠ, ಶ್ವೇತಾಶ್ವತರ, ಬೃಹದಾರಣ್ಯಕ, ತಳವಕಾರ, ನೃಸಿಂಹತಾಪಿನಿ—ಈ ಉಪನಿಷತ್ತುಗಳ ಆಧಾರದ ಮೇಲೆ ಗ್ರಂಥ ರಚನೆಯಾಗಿದೆ. ಈ ಗ್ರಂಥದಲ್ಲಿ ಇಪ್ಪತ್ತು ಅಧ್ಯಾಯಗಳಿವೆ. 'ವಿವರಣ ಪ್ರಮೇಯ ಸಂಗ್ರಹ'ವು ವಿದ್ಯಾರಣ್ಯರ ಮತ್ತೊಂದು ಗ್ರಂಥ. ಇದು ಪ್ರಕಾಶಾತ್ಮರ 'ಪಂಚಪಾದಿಕಾ' ವಿವರಣದ ಸಂಗ್ರಹ ನಿರೂಪಣೆ; ಅಲ್ಲೊಮ್ಮೆ ಇಲ್ಲೊಮ್ಮೆ ಟಿಪ್ಪಣಿಗಳನ್ನೂ ಸೇರಿಸಿದ್ದಾರೆ.

ಇಮ್ಮಡಿ ದೇವರಾಯನು 'ಬ್ರಹ್ಮ ಸೂತ್ರ'ದ ಮೇಲೆ ಒಂದು ವೃತ್ತಿಯನ್ನು ಬರೆದಿದ್ದಾನೆ. ಅವನು ಶಂಕರ ಮತ್ತು ವಾಚಸ್ಪತಿ ಮಿಶ್ರರನ್ನು ಬಹು ಮಟ್ಟಿಗೆ ಅನುಸರಿಸುತ್ತಾನೆ. ಅನೇಕ ವೇಳೆ ಅವರ ಮಾತುಗಳನ್ನೇ ಉಪಯೋಗಿಸಿಕೊಂಡು ತಾತ್ಪರ್ಯ ಹೇಳುತ್ತಾನೆ. ' ಚಂದ್ರಿಕಾ ' ಪ್ರಬೋಧ ಚಂದ್ರೋದಯದ ಮೇಲಿನ ವ್ಯಾಖ್ಯಾನ. ಇದನ್ನು ಸಾಳುವ ತಿಮ್ಮನ ಸೋದರ ಪುತ್ರ ನಾದಿಂಡ್ಲ ಗೋಪನು ಬರೆದಿದ್ದಾನೆ. ವೇದಾಂತ ಮತ್ತು ಚರಿತ್ರೆಗಳಲ್ಲಿ ಆಸಕ್ತರಾದವರಿಗೆಲ್ಲಾ ಇದು ಬಹು ಸ್ವಾರಸ್ಯಕರವಾಗಿದೆ.

ಸುಪ್ರಸಿದ್ಧ ಶ್ರೀ ವೈಷ್ಣವ ವೇದಾಂತಿಗಳಾದ ವೇದಾಂತದೇಶಿಕರು ಅನೇಕ ವೇದಾಂತಗ್ರಂಥಗಳನ್ನು ಬರೆದಿದ್ದಾರೆ. ಸೇಶ್ವರ ಮೀಮಾಂಸಾ, ನ್ಯಾಯಸಿದ್ಧಾಂಜನ, ತತ್ತ್ವಮುಕುಟ ಕಲಾಪ, ತಾಳವಾಲಿಕ, ತಾತ್ಪರ್ಯ ಚಂದ್ರಿಕಾ–ಇವು ರಾಮಾನುಜರ ಶ್ರೀಭಾಷ್ಯ ಮತ್ತು ಗೀತಾಭಾಷ್ಯಗಳ ಮೇಲಿನ ವ್ಯಾಖ್ಯಾನಗಳು.

ದ್ವೈತವೇದಾಂತದ ಕಡೆಗೆ ಗಮನ ಹರಿಸಿದರೆ, ನಮಗೆ ಗೋಚರಿಸುವುದು ಅಕ್ಷೋಭ್ಯತೀರ್ಥರ ಪ್ರಖ್ಯಾತವಾದ ಹೆಸರು. ಅವರು ವಿದ್ಯಾರಣ್ಯರ ಸಮಕಾಲೀನರು. 'ಮಧ್ವತತ್ತ್ವಸಾರ ಸಂಗ್ರಹ' ಅವರು ರಚಿಸಿರುವ ಕೃತಿ. ಅದರಲ್ಲಿ ದ್ವೈತದರ್ಶನದ ಮುಖ್ಯ ತತ್ತ್ವಗಳನ್ನೆಲ್ಲಾ ಸಂಕ್ಷೇಪವಾಗಿ ವಿವರಿಸಿ ಹೇಳಿದ್ದಾರೆ. ಅವರ ಶಿಷ್ಯ ಜಯತೀರ್ಥರು ಟೀಕಾಚಾರ್ಯ ಎಂದು ಪ್ರಸಿದ್ಧರಾದರು. ಆನಂದತೀರ್ಥರ (ಮಧ್ವಾಚಾರ್ಯರ) ಕೃತಿಗಳನ್ನು ವಿವರಿಸಿದ ವ್ಯಾಖ್ಯಾನಕಾರರಲ್ಲೆಲ್ಲಾ ಜಯತೀರ್ಥರು ಅಪೂರ್ವಕಲ್ಪನಾ ಭಕ್ತಿಯುಳ್ಳವರು. ಅವರು ಅನೇಕ ಸ್ವತಂತ್ರ ಗ್ರಂಥಗಳನ್ನು ರಚಿಸಿದರು. 'ಪ್ರಮಾಣಪದ್ಧತಿ' ಅವರದೊಂದು ಸ್ವತಂತ್ರ ಗ್ರಂಥ. ದ್ವೈತದರ್ಶನದಲ್ಲಿ ಜ್ಞಾನಮೂಲಗಳೆಂದು ಅಂಗೀಕರಿಸಿರುವ ಪ್ರತ್ಯಕ್ಷ, ಅನುಮಾನ, ಆಗಮ ಎಂಬ ಪ್ರಮಾಣತ್ರಯಗಳ ವಿಷಯವಾಗಿ ರಚಿಸಿರುವ ಗ್ರಂಥ ಅದು. 'ವಾದಾವಳಿ' ಮತ್ತು 'ಅಧ್ಯಾತ್ಮತರಂಗಿಣಿ'—ಇವು ಅವರ ಇನ್ನೆರಡು ಸ್ವತಂತ್ರಗ್ರಂಥಗಳು. ಅವರ ಮಹಾವ್ಯಾಖ್ಯಾನ ಗಳಲ್ಲಿ ಭಗವದ್ಗೀತೆಯ ಮೇಲಿನ ತತ್ತ್ವಪ್ರಕಾಶಿಕಾ, ಪ್ರಮೇಯ ದೀಪಿಕಾ ಮತ್ತು ಋಗ್ಭಾಷ್ಯಟೀಕಾ ಇವನ್ನು ಎತ್ತಿ ಹೇಳಬಹುದು.

ರಘೂತ್ತಮನು (ಸು.ಕ್ರಿ.ಶ. 1500) 'ಭಾವಬೋಧ'ವನ್ನು ಬರೆದನು. ಇದು ಆನಂದತೀರ್ಥರ 'ನ್ಯಾಯವಿವರಣ ವಾಗ್ವಜ್ರ'ದ ಮೇಲಿನ ವ್ಯಾಖ್ಯಾನ. ವೀರನರಸಿಂಹನು (ಕ್ರಿ.ಶ. 1506–1509) ವಿಶೇಷವಾಗಿ ಗೌರವಿಸುತ್ತಿದ್ದ ಶ್ರೀಪಾದನು 'ವಾಗ್ವಜ್ರ'ವೆಂಬ ಒಂದು ಸಂಸ್ಕೃತ ಗ್ರಂಥವನ್ನು ರಚಿಸಿದ್ದನೆಂದು ಪ್ರತೀತಿ.

ದ್ವೈತಸಿದ್ಧಾಂತವನ್ನು ವಿವರಿಸಿ ತಿಳಿಸಿದ ವ್ಯಾಖ್ಯಾನಕಾರರಲ್ಲೆಲ್ಲಾ ವ್ಯಾಸರಾಯರು (ಕ್ರಿ.ಶ. 1447–1539) ಮಹಾಪ್ರಸಿದ್ಧರು. ಅವರ ವಿದ್ವತ್ತು ತಪಶ್ಶಕ್ತಿಗಳ ಪ್ರಭಾವಕ್ಕೆ ಒಳಗಾದವರಲ್ಲಿ ಕೃಷ್ಣದೇವರಾಯನೂ ಒಬ್ಬ. ಅವರ ಮೂರು ಕೃತಿಗಳು: ತಾತ್ಪರ್ಯ ಚಂದ್ರಿಕಾ, ನ್ಯಾಯಾಮೃತ, ಮತ್ತು ತರ್ಕತಾಂಡವ—ಇವು ಪ್ರಸಿದ್ಧವಾಗಿವೆ. ಜಯತೀರ್ಥರ ತತ್ತ್ವಪ್ರಕಾಶವೆಂಬ ಪ್ರಸಿದ್ಧವ್ಯಾಖ್ಯಾನದ ವ್ಯಾಖ್ಯಾನ ಈ 'ತಾತ್ಪರ್ಯ ಚಂದ್ರಿಕಾ'; ತತ್ತ್ವಪ್ರಕಾಶವು ಮಧ್ವಾಚಾರ್ಯರ ಸೂತ್ರಭಾಷ್ಯದ ವ್ಯಾಖ್ಯಾನ. ಪೂರ್ವದ ಗ್ರಂಥಗಳಲ್ಲಿ ಸ್ಪಷ್ಟವಾಗದೆ ಉಳಿದಿರುವ ಅನೇಕ ವಿಷಯಗಳನ್ನು ಚಂದ್ರಿಕಾ ಸ್ಪಷ್ಟಪಡಿಸುತ್ತದೆ, ಮತ್ತು ಇತರ ದರ್ಶನಗಳವರು ಎತ್ತಿದ ಆಕ್ಷೇಪಣೆಗಳಿಗೆ ಸಮಾಧಾನ ಕೊಡುತ್ತದೆ. ದ್ವೈತವೇದಾಂತದ ದರ್ಶನ ಸಾಹಿತ್ಯಕ್ಕೆ ಇದು ಬಹು ಮುಖ್ಯವಾದ ಕೊಡುಗೆ. ದ್ವೈತಸಿದ್ಧಾಂತದ ಪ್ರಕಾರ ನ್ಯಾಯ ವಾದಗಳಿಗೆ ಸಂಬಂಧಿಸಿದ ಕೆಲವು ಮುಖ್ಯವಿಷಯಗಳನ್ನು ವಿವೇಚಿಸುವ ವಿವರಣಗ್ರಂಥ 'ತರ್ಕ ತಾಂಡವ'. ಆನಂದತೀರ್ಥರ ಮತ್ತು ಜಯತೀರ್ಥರ ಗ್ರಂಥಗಳ ಸಾರವನ್ನು ಸಂಗ್ರಹಿಸಿರುವುದಾಗಿಯೂ ಅವಶ್ಯವೆನ್ನಿಸಿದ ಕಡೆಗಳಲ್ಲಿ ವಿಷಯಗಳನ್ನು ವಿವರಿಸಿ ಹೇಳಿರುವುದಾಗಿಯೂ ಹೇಳುತ್ತಾರೆ ಕೃತಿಕಾರರು. ಭೇದೋಜ್ಜೀವನವು ವ್ಯಾಸರಾಯರ ಮತ್ತೊಂದು ಸ್ವತಂತ್ರ ಕೃತಿ. ಅವರ ನೇರ ಶಿಷ್ಯರಲ್ಲಿ ವಾದಿರಾಜ ಮತ್ತು ವಿಜಯೀಂದ್ರರು ಬಹು ಮುಖ್ಯರು.

ದ್ವೈತವೇದಾಂತವನ್ನು ಸ್ಪಷ್ಟಪಡಿಸಿ ತಿಳಿಸುವ ಮತ್ತೊಬ್ಬ ಉಜ್ಜ್ವಲ ವಿವರಣಕಾರರು ವಾದಿರಾಜರು. ಅವರು ದೇಶದಲ್ಲೆಲ್ಲ ಪರ್ಯಟನ ಮಾಡಿ ಮಧ್ವವೇದಾಂತವನ್ನು ಪ್ರಚಾರಪಡಿಸಿದರು. ಅನೇಕ ದ್ವೈತ

ಗ್ರಂಥಗಳಿಗೆ ಅವರು ವ್ಯಾಖ್ಯಾನ ಬರೆದರು. ಅವರು ರಚಿಸಿದ ಗ್ರಂಥಗಳು ಅಸಂಖ್ಯಾತ. ಅವರ 'ಯುಕ್ತಿಮಲ್ಲಿಕಾ' ಒಂದು ಮೌಲಿಕ ಗ್ರಂಥ; ದ್ವೈತ ಸಿದ್ಧಾಂತಗಳನ್ನು ಸುಲಭಶೈಲಿಯ ಶ್ಲೋಕಗಳಲ್ಲಿ ವಿವರಿಸುವ ಒಂದು ಗಂಭೀರ ಕೃತಿ; ಬಹು ಸೊಗಸಾದ ಅವರ ಶ್ರೇಷ್ಠಗ್ರಂಥಗಳಲ್ಲೊಂದೆಂದು ಅದನ್ನು ಪರಿಗಣಿಸಿದ್ದಾರೆ. ಮಲ್ಲಿಕಾ ಎಂಬ ಹೆಸರಿಗೆ ಅನುಗುಣವಾಗಿ ಅಧ್ಯಾಯಗಳನ್ನು 'ಸೌರಭ' ಎಂದು ಕರೆದಿದ್ದಾರೆ. ಅವರ 'ನ್ಯಾಯರತ್ನಾವಳಿ'ಯು ಐದು ಅಧ್ಯಾಯಗಳಲ್ಲಿ ಅದ್ವೈತವಾದವನ್ನು ಖಂಡಿಸುತ್ತದೆ. ಪ್ರತಿ ಅಧ್ಯಾಯಕ್ಕೂ 'ಸಾರ' ಎಂದು ಹೆಸರು. ಗುರ್ವರ್ಥದೀಪಿಕಾ, ತಂತ್ರಸಾರ ಟೀಕಾ, ತಾತ್ಪರ್ಯ ಪ್ರಕಾಶಿಕಾ, ಚಕ್ರಮೀಮಾಂಸಾ, ಗೀತಾವ್ಯಾಖ್ಯಾನ ವಿವರಣ, ಭೂಗೋಳ ವಿವರಣ—ಇವು ಅವರ ಇತರ ಗ್ರಂಥಗಳಲ್ಲಿ ಕೆಲವು. ಅವರ ಕಿರಿಯ ಸಮಕಾಲೀನರಾದ ವಿಜಯೀಂದ್ರರು 104 ರಷ್ಟು ಗ್ರಂಥಗಳನ್ನು ಬರೆದಿರುವುದಾಗಿ ತಿಳಿಯಬರುತ್ತದೆ. ಅದ್ವೈತ ಮಹಾಪಂಡಿತ ಅಪ್ಪಯ್ಯ ದೀಕ್ಷಿತರ ಟೀಕೆಗಳಿಗೆ ಉತ್ತರವಾಗಿ ಈ ಗ್ರಂಥಗಳನ್ನು ರಚಿಸಿದ್ದಾರೆ. ಅವರ ಗ್ರಂಥಗಳಲ್ಲಿ ಈ ಕೆಲವನ್ನು ಎತ್ತಿ ಹೇಳಬಹುದು: ಭೇದ ವಿದ್ಯಾವಿಲಾಸ, ನ್ಯಾಯಯುಕ್ತಿ ಮಾಲಾ, ಅಧಿಕರಣ ಮಾಲಾ, ಮೀಮಾಂಸನ್ಯಾಯ ಮಾಲಾ, ನ್ಯಾಯ ಚಂಪಕಮಾಲಾ, ನಯಮುಕುರ, ನಯಮಂಜರಿ ಮತ್ತು ಪರತತ್ತ್ವಪ್ರಕಾಶಿಕಾ.

ಆ ಕಾಲದ ಕೆಲವು ವಿದ್ವಾಂಸರ ಮನಸ್ಸನ್ನು ಪೂರ್ವಮೀಮಾಂಸಾ ಶಾಸ್ತ್ರವು ಸಂಪೂರ್ಣವಾಗಿ ಸೆಳೆಯಿತು. 'ಜೈಮಿನೀಯ ನ್ಯಾಯಮಾಲಾ' ವಿದ್ಯಾರಣ್ಯ ವಿರಚಿತವಾದ ಪೂರ್ವಮೀಮಾಂಸಾಗ್ರಂಥ; ಹನ್ನೆರಡು ಅಧ್ಯಾಯಗಳಿರುವ ಈ ಗ್ರಂಥವು ಪೂರ್ವಮೀಮಾಂಸಾ ಸೂತ್ರಗಳ ಸಾರಸಂಗ್ರಹ. ವೈಯಾಸಿಕ ನ್ಯಾಯಮಾಲಾ ರೀತಿಯಲ್ಲೇ ಅದರ ಅಧಿಕರಣ ಕ್ರಮವನ್ನು ಅನುಸರಿಸಿಯೇ ರಚಿತವಾಗಿದೆ. ಈ ಗ್ರಂಥ ಸರಳವಾದ ಪದ್ಯಗಳಲ್ಲಿ ರಚಿತವಾಗಿದೆ. ಅದಕ್ಕೆ 'ವಿಸ್ತಾರ' ಎಂಬ ಹೆಸರಿನ ಒಂದು ವ್ಯಾಖ್ಯಾನವಿದೆ.

ನ್ಯಾಯವೈಶೇಷಿಕ ದರ್ಶನವನ್ನು ತೆಗೆದುಕೊಂಡು, ಚೆನ್ನುಭಟ್ಟನು ಕೇಶವಮಿಶ್ರನ 'ತರ್ಕಭಾಷಾ' ಗ್ರಂಥಕ್ಕೆ ಒಂದು ವ್ಯಾಖ್ಯಾನ ಬರೆದನು. ಅವನು ಇಮ್ಮಡಿ ಹರಿಹರನ ಆಸ್ಥಾನದಲ್ಲಿದ್ದನು. ತರ್ಕ ಭಾಷಾಕ್ಕೆ ಮಾಧವಭಟ್ಟ ಮತ್ತು ಬಲಭದ್ರರು ಬರೆದ ಬೇರೆ ವ್ಯಾಖ್ಯಾನಗಳೂ ಇದ್ದವು. ತರ್ಕ ಪ್ರಕಾಶವೆಂಬುದು ತರ್ಕ ಶಾಸ್ತ್ರದ ಮೇಲೆ ಮುರಾರಿ ಭಟ್ಟನು ಬರೆದಿರುವ ಒಂದು ಸ್ವತಂತ್ರ ಗ್ರಂಥ.

ಮಾಧವ ಮಂತ್ರಿಯು ಶೈವಸಿದ್ಧಾಂತ ವಿಷಯವಾಗಿ ಗ್ರಂಥಗಳನ್ನು ರಚಿಸಿದನು. ಇವನು ಶೈವಾಮ್ನಾಯಸಾರವನ್ನು ಸಂಕಲಿಸಿದನು. 15 ನೆಯ ಶತಮಾನದ ಅಂತ್ಯಭಾಗದಲ್ಲಿ ಸೆಸಲಿ ವೀರಣಾರಾಧ್ಯನು 'ಪಂಚರತ್ನ'ವನ್ನು ರಚಿಸಿದನು. ರೇವಣಾರಾಧ್ಯನು ಅದಕ್ಕೆ ವ್ಯಾಖ್ಯಾನ ಬರೆದನು.

ವೀರಶೈವ ಗ್ರಂಥದಲ್ಲಿ ಪಾಲ್ಕುರಿಕೆ ಸೋಮನಾಥನ ಸೋಮನಾಥ ಭಾಷ್ಯ (ಬಸವರಾಜೀಯ)ವನ್ನು ಹೆಸರಿಸಬಹುದು. ಇದು ಇಮ್ಮಡಿ ವೀರಪ್ರತಾಪರುದ್ರನ ಆಸ್ಥಾನದಲ್ಲಿ ರಚಿತವಾಯಿತು. ರುದ್ರಭಾಷ್ಯ, ಅಷ್ಟಕ, ಪಂಚಕ, ನಮಸ್ಕಾರಗದ್ಯ, ಅಕ್ಷರಾಂಕಗದ್ಯ, ಬಸವೋದಾರಣ, ಚತುರ್ವೇದ ತಾತ್ಪರ್ಯ ಸಂಗ್ರಹ—ಇವನ್ನೂ ಅವನು ರಚಿಸಿದ್ದಾನೆ. ಶಕ್ತಿ ವಿಶಿಷ್ಟಾದ್ವೈತವನ್ನು ವಿವರಿಸಲು ಬ್ರಹ್ಮ ಸೂತ್ರಗಳ ಮೇಲೆ ಶ್ರೀಪತಿ ಪಂಡಿತನು ರಚಿಸಿರುವ ಶ್ರೀಕರ ಭಾಷ್ಯವು ಆ ಕಾಲದ ಮತ್ತೊಂದು ಅಮೋಘ ಗ್ರಂಥ.

## 5 ನಿಘಂಟುಗಳು

ಈ ಕಾಲದಲ್ಲಿ ಕೆಲವು ನಿಘಂಟುಗಳೂ ರಚಿತವಾದವು.

'ಏಕಾಕ್ಷರ ರತ್ನಮಾಲಾ' : ಇದನ್ನು ಸ್ವರಕಾಂಡ, ವ್ಯಂಜನ ಕಾಂಡ, ಸಂಯುಕ್ತವ್ಯಂಜನಕಾಂಡ ಎಂದು ಮೂರು ಕಾಂಡಗಳಾಗಿ ವಿಭಾಗಿಸಿದೆ. ಮಾಯಣನ ಮಗ ಮಾಧವನು ಇದನ್ನು ಸಂಕಲಿಸಿದನು. ಮೊದಲನೆಯ ಬುಕ್ಕ ಮತ್ತು ಇಮ್ಮಡಿ ಹರಿಹರ–ಇವರ ಸೈನ್ಯಾಧಿಪತಿಯಾಗಿದ್ದ ಇರುಗಪ್ಪ ದಂಡಾಧಿನಾಥನು 'ನಾನಾರ್ಥ ರತ್ನಮಾಲಾ' ಎಂಬ ನಿಘಂಟೊಂದನ್ನು ರಚಿಸಿದ್ದಾನೆ. ಈ ಗ್ರಂಥ ಆರು ಭಾಗಗಳಾಗಿ ವಿಭಾಗವಾಗಿದೆ :—ಏಕಾಕ್ಷರ, ದ್ವ್ಯಕ್ಷರ, ತ್ರ್ಯಕ್ಷರ, ಚತುರಕ್ಷರ, ಸಂಕೀರ್ಣ, ಅವ್ಯಯ—ಇವೇ ಆರು ವಿಭಾಗಗಳು. ಸುಮಾರು ಒಂದು ಲಕ್ಷ ಕ್ಲಿಷ್ಟ ಶಬ್ದಗಳನ್ನೊಳಗೊಂಡ, ವಾದಿರಾಜ ಸಂಕಲಿತವಾದ 'ಲಕ್ಷಾಭರಣ' ವನ್ನೂ ಇಲ್ಲಿ ಪ್ರಸ್ತಾಪಿಸಬಹುದು.

ವಿಜಯನಗರ ಕಾಲದಲ್ಲಿ ಸಂಸ್ಕೃತ ಸಾಹಿತ್ಯದ ಬೆಳೆ ವಿಪುಲವಾಗಿಯೂ ವಿವಿಧವಾಗಿಯೂ ಇತ್ತೆಂಬ ಸಂಗತಿಯನ್ನು ಈ ಸಂಗ್ರಹ ನಿರೂಪಣೆ ಸ್ಪಷ್ಟಪಡಿಸುತ್ತದೆ. ಅನೇಕ ಗ್ರಂಥಗಳು ನಷ್ಟವಾಗಿ ಹೋಗಿವೆಯೆಂಬುದು ನಿಸ್ಸಂಶಯ. ಆದುದರಿಂದ ಆ ಕಾಲದ ಸಮಗ್ರ ಸಂಸ್ಕೃತ ಸಾಹಿತ್ಯ ಸಂಪತ್ತನ್ನು ಸರಿಯಾಗಿ ಬೆಲೆಕಟ್ಟುವುದು ಬಹು ಕಷ್ಟ.

ಮೂಲಲೇಖಕರು : ಡಾ॥ ಎಸ್.ರಾಮಚಂದ್ರರಾವ್
ಅನುವಾದಕರು : ಶ್ರೀ ಎಲ್. ಗುಂಡಪ್ಪ

# ವಾಸ್ತುಶಿಲ್ಪ ಮತ್ತು ಇತರ ಕಲೆಗಳು

## (ವಿಜಯನಗರದ ಕಾಲದಲ್ಲಿ)

**ಶುಕ್ರನೀತಿಸಾರವು** ರಾಜಧಾನಿಯ ನಿರ್ಮಾಣದ ಸ್ಥಳದ ಬಗ್ಗೆ ಹೀಗೆ ಹೇಳುತ್ತದೆ. "ಅನೇಕ ರೀತಿಯ ಮರ, ಗಿಡ, ಪೊದರುಗಳಿಂದ ಕೂಡಿದ, ದನಕರುಗಳು ಹಕ್ಕಿಗಳು ಇತರ ಪ್ರಾಣಿಗಳಿಂದ ಸಮೃದ್ಧವಾಗಿರುವ, ಒಳ್ಳೆಯ ಜಲಾಶಯಗಳಿರುವ, ಧಾನ್ಯ ಸಮೃದ್ಧಿಯಿಂದಿರುವ, ತೃಣಕಾಷ್ಠಾದಿಗಳು ಯಥೇಚ್ಛವಾಗಿ ದೊರಕುವ, ಸಮುದ್ರದ ವರೆಗೆ ಹೋಗಿ ಬರುವ ದೋಣಿಗಳಿಂದ ಸದಾ ಚೈತನ್ಯದಿಂದೊಡಗೂಡಿರುವ, ಬೆಟ್ಟಗಳಿಂದ ಬಹಳ ದೂರದಲ್ಲಿರದ, ಸುಂದರ ಸಮಪ್ರದೇಶದಲ್ಲಿರುವ, ಭೂಮಿಯ ಮೇಲೆ ರಾಜನು ತನ್ನ ರಾಜಧಾನಿಯನ್ನು ಕಟ್ಟಬೇಕು. ಹಂಪೆಯನ್ನು ಆರಿಸಿ ಅಲ್ಲಿ ರಾಜಧಾನಿಯನ್ನು ಕಟ್ಟಿರುವುದು **ಶುಕ್ರನೀತಿಸಾರದ** ಆ ನಿಯಮಗಳಿಗೆ ಅನುಗುಣವಾಗಿದೆ—ಎರಡನ್ನು ಹೊರತಾಗಿ: ಒಂದು–'ಸಮುದ್ರದ ವರೆಗೆ' ಎಂಬುದು; ಮತ್ತೊಂದು 'ಸಮಪ್ರದೇಶ' ಎಂಬುದು. ಹಂಪೆಯಲ್ಲಿ ಜಲಸಮೃದ್ಧಿ ಮತ್ತು ಸಸ್ಯ ಸಂಪತ್ತನ್ನು ಒಳಗೊಂಡಿರುವ ಏಳು ಪರ್ವತಗಳಿವೆ–ಹೇಮಕೂಟ, ಋಷ್ಯಶೃಂಗ, ಮಾತಂಗ, ಮಾಲ್ಯವಂತ, ಅಂಜನಿ, ಸುಗ್ರೀವ, ಮತ್ತು ಜಾಂಬವಂತ. ಪಾಯಸನ (Paes) ಪ್ರಕಾರ ಪಟ್ಟಣವು ಈ ಪರ್ವತಗಳಿಂದ ಆವೃತವಾಗಿದ್ದಿತು; "ಈ ಪರ್ವತ ಶ್ರೇಣಿಯು 24 ಹರದಾರಿಗಳ ಸುತ್ತಳತೆಯಿಂದ ಪಟ್ಟಣವನ್ನು ಸುತ್ತುವರಿದಿದೆ. ಈ ಶ್ರೇಣಿಯೊಳಗೆ ಪಟ್ಟಣವನ್ನು ಇನ್ನೂ ಹತ್ತಿರದಿಂದ ಸುತ್ತುವರಿದ ಬೇರೆ ಶ್ರೇಣಿಗಳಿವೆ. ಈ ಶ್ರೇಣಿಗಳಲ್ಲಿ ಎಲ್ಲಿ ಸಮತಟ್ಟು ಭೂಮಿಯಿದೆಯೋ ಅಲ್ಲಿ ದೊಡ್ಡ ಗೋಡೆಗಳನ್ನು ಎಬ್ಬಿಸಿರುತ್ತಾರೆ. ಇದರಿಂದಾಗಿ ಎಲ್ಲ ಬೆಟ್ಟಗಳೂ ಮುಚ್ಚಿದಂತಿರುತ್ತವೆ. ಪಟ್ಟಣಕ್ಕೆ ಪ್ರವೇಶ ಮೊದಲ ಶ್ರೇಣಿಯನ್ನು ಪ್ರವೇಶಿಸುವ ಮಾರ್ಗಗಳ ಬಾಗಿಲುಗಳ ಮೂಲಕ ಮಾತ್ರ. ವರ್ಥೇಮ ಮತ್ತು ನಿಕಿತಿನಿಯರು ಈ ಹೇಳಿಕೆಯನ್ನು ಸಮರ್ಥಿಸುವರಲ್ಲದೆ, ಪಟ್ಟಣವು ಏಳು ಮೈಲಿಗಳ ಸುತ್ತಳತೆಯುಳ್ಳದಾಗಿದೆ ಎಂದೂ ಹೇಳುತ್ತಾರೆ–"ಅದು ಇರುವ ನಿವೇಶನ ಅತಿ ಸುಂದರ. ಅಲ್ಲಿ ಬೀಸುವ ಗಾಳಿ ಅತ್ಯಂತ ಹಿತಕರ......ಆಶ್ಚರ್ಯವುಂಟುಮಾಡುವ ಪ್ರದೇಶ...ಇತ್ಯಾದಿ. 1ನೇ ಬುಕ್ಕ (ಕ್ರಿ.ಶ. 1353-79) ಅದನ್ನು ವಾಸ್ತವವಾಗಿ ಕ್ರಿ.ಶ. 1368 ರಲ್ಲಿ ಆರಂಭಿಸಿ, ಕ್ರಿ.ಶ. 1378 ರಲ್ಲಿ ಮುಗಿಸಿ, ಅದಕ್ಕೆ ವಿದ್ಯಾನಗರವೆಂದು ಹೆಸರಿಟ್ಟನು. ಆ ಹೊತ್ತಿಗಾಗಲೇ ಅದು ಸುಪ್ರಸಿದ್ಧವಾದ ಊರಾಗಿದ್ದಿತಲ್ಲದೆ, ಪಶ್ಚಿಮ ಚಾಲುಕ್ಯ ಚಕ್ರವರ್ತಿ ವಿನಯಾದಿತ್ಯ ಸತ್ಯಾಶ್ರಯ (ಕ್ರಿ.ಶ. 689–90) ಮತ್ತು ಹೊಯ್ಸಳ ದೊರೆ ಸೋಮೇಶ್ವರರಿಂದ (ಕ್ರಿ.ಶ. 1236) ಅನೇಕ ರಾಜದತ್ತಿಗಳನ್ನೂ ಪಡೆದಿದ್ದಿತು. ಪಶ್ಚಿಮ ಚಾಲುಕ್ಯ ಚಕ್ರವರ್ತಿ ಜಗದೇಕಮಲ್ಲ ಜಯಸಿಂಹನು ಅಲ್ಲಿಗೆ ಭೇಟಿ ಕೊಟ್ಟಿದ್ದನು (ಕ್ರಿ.ಶ. 1018–19 ರ ಕಾಲದ ಶಾಸನ). ಪಶ್ಚಿಮ ಚಾಲುಕ್ಯರ ದಂಡನಾಯಕ ಮಹಾದೇವನು ಅಲ್ಲಿಯ ದೇವರಿಗೆ ಬಿಟ್ಟು ಕೊಟ್ಟ ದತ್ತಿಯಲ್ಲಿ ಹಂಪಿಯೆಂದು–'ಸ್ವಾಮಿ ಪಂಪಾಸ್ಥಲ'–ಎಂದು ಕರೆದಿದ್ದಾನೆ.

### ದೇವಸ್ಥಾನವಾಸ್ತು ಮತ್ತು ಶಿಲ್ಪ

ಸಾಮ್ರಾಜ್ಯದ ಆರಂಭದ ವರ್ಷಗಳಲ್ಲಿ ಕ್ರಿ.ಶ. 12 ಮತ್ತು 13 ನೆ ಶತಮಾನಗಳಿಂದ ದತ್ತವಾಗಿ ಬಂದ ಬೇರೆ ಬೇರೆ ಸಂಪ್ರದಾಯಗಳನ್ನು ಒಟ್ಟಿಗೆ ಕೂಡಿಸುವ ಪ್ರಯತ್ನಗಳು ವಿಶೇಷವಾಗಿ ನಡೆದಂತೆ

ಕಾಣುತ್ತದೆ. ಮೊದಮೊದಲು ವಾಸ್ತುಶೈಲಿಯು ಅಂತಹ ಅಲಂಕಾರವಾಗಲಿ ಕೆತ್ತನೆಯ ಕೆಲಸವಾಗಲಿ ಕಾಣಿಸದ ಕದಂಬರ ಕಾಲದ ಚತುರಸ್ರಾಕಾರ ಶೈಲಿಯ ಅನುಕರಣವೇ ಆಗಿದ್ದಿತು. ಚಕ್ರತೀರ್ಥದ ಬಳಿಯ ವಿಠ್ಠಲಸ್ವಾಮಿ ದೇವಸ್ಥಾನಕ್ಕೆ ಹೋಗುವ ಮಾರ್ಗದಲ್ಲಿನ ಮತ್ತು ಹೇಮಕೂಟ ಪರ್ವತದ ಮೇಲಿನ ಜೈನ ಬಸದಿಗಳು ಮತ್ತು ಹಿಂದೂ ದೇವಾಲಯಗಳು, ಮೊದಲನೆಯ ಹರಿಹರನ ಜೈನ ದಂಡಾಧಿಪ ಇರುಗಪ್ಪ ಕ್ರಿ.ಶ. 1385 ರಲ್ಲಿ 'ರಾಣಿಯರ ಸ್ನಾನದ ತೊಟ್ಟಿ'ಯ ಪಶ್ಚಿಮದಲ್ಲಿ ಕಟ್ಟಿಸಿದ ಗಾಣಗಿತ್ತಿ ದೇವಾಲಯ–ಹಂಪೆಯಲ್ಲಿನ ಈ ದೇವಾಲಯಗಳಲ್ಲಿ ಕದಂಬ ವಿಮಾನಗಳ ಸಮತಲರೇಖಾತ್ಮಕವಾದ ಶೈಲಿಯ ಹಂತಗಳಿಗೆ ಉದಾಹರಣೆಗಳನ್ನು ಗುರುತಿಸಬಹುದು. ಸರಳ ಚತುರಸ್ರಾಕಾರದ ಸಮತಲರೇಖಾತ್ಮಕವಾದ ಚಿತ್ರಗಳುಳ್ಳ ಕಡಲೇಕಾಯಿ ಗಣಪತಿಯ ದೇವಾಲಯ, ಅದರ ಚಚ್ಚೌಕನೆಯ ಕಂಬಗಳ ಮೇಲೆ ಸಣ್ಣ ಉಬ್ಬು ಚಿತ್ರಗಳಲ್ಲಿ ಕಾಣಿಸಿರುವ ಹಿಂದೂ ದೇವತೆಗಳ ಸರಳ ಕೆತ್ತನೆಗಳಾಗಿ ಅದೇ ವರ್ಗಕ್ಕೆ ಸೇರಿದುವಾಗಿವೆ. ಇಲ್ಲಿಯ ಮತ್ತು ಸಾಸಿವೇಕಾಳು ಗಣಪತಿಯ ದೇವಾಲಯಗಳಲ್ಲಿನ ಗಣೇಶನ ವಿಗ್ರಹಗಳು ಮತ್ತು ಕೃಷ್ಣದೇವರಾಯನ ಕಾಲದಲ್ಲಿ ಕೊರೆಯಲಾದ ಯೋಗಾನರಸಿಂಹನ ಅಖಂಡ ಶಿಲೆಯ ಬೃಹತ್ ವಿಗ್ರಹವು ಗುಪ್ತ ಶಿಲ್ಪದಲ್ಲಿ ಅತ್ಯುತ್ತಮವೆಂದು ಕರೆಯುವ ಸರಳ ನೈಜ ವೈಭವವನ್ನು ಮೈಗೂಡಿಸಿಕೊಂಡಿವೆ. (ಗುಪ್ತ ಶಿಲ್ಪದ ಈ ವೈಭವದ ಪ್ರತಿಬಿಂಬಗಳನ್ನು ಪಟ್ಟದಕಲ್, ಬಾದಾಮಿ, ಎಲ್ಲೋರ ಮುಂತಾದೆಡೆಗಳಲ್ಲಿ ಕಾಣಬಹುದು). ವಿಜಯನಗರದ ದೊರೆಗಳು ಪ್ರಬಲರಾದಂತೆ ಹೊಯ್ಸಳರೊಡನೆ ಅವರು ಹೊಂದಿದ್ದ ನಿಕಟ ಸಂಪರ್ಕದ ಫಲವಾಗಿ, ಅದರಲ್ಲೂ ಶ್ರೀಕೃಷ್ಣದೇವರಾಯನ ಉಜ್ವಲ ಆಳಿಕೆಯ ಕಾಲದಲ್ಲೆಲ್ಲಾ ಚಾಲುಕ್ಯ ಮತ್ತು ಹೊಯ್ಸಳ ಮಾದರಿಗಳನ್ನು, ಸೂಕ್ಷ್ಮ ಕುಸುರಿ ಕೆತ್ತನೆಗಳನ್ನು ರಾಜಧಾನಿಯ ಅಲಂಕರಣಕ್ಕಾಗಿ ಯಥೇಷ್ಟವಾಗಿ ಉಪಯೋಗಿಸಿಕೊಂಡರು.

ಈ ಕಾಲದ ಸಜೀವ (Plastic) ಅಲಂಕರಣದಲ್ಲಿ ಭಾರತೀಯ ವಾಸ್ತುಶಿಲ್ಪವು ಒಂದು ಹೊಸ ಮುಖವನ್ನೇ ಪಡೆಯಿತು. ಪರ್ಸಿಬ್ರೌನ್ ಸರಿಯಾಗಿಯೇ ಊಹಿಸಿರುವಂತೆ, ಅದು ಒಂದು ಕಲ್ಪನಾಶಕ್ತಿಯುಳ್ಳ ಮನಸ್ಸು ಮಾತ್ರ ಕಲ್ಪಿಸಬಲ್ಲ ಮತ್ತು ಅತ್ಯುತ್ತಮ ಶಿಲ್ಪ ಮಾತ್ರ ಪಡಿಮೂಡಿಸಬಲ್ಲ ಎಲ್ಲ ರೀತಿಯ ಭಾವನೆಗಳ, ಅನುಭವಗಳ, ಚಿತ್ತವೃತ್ತಿಗಳ, ಅದ್ಭುತಗಳ, ಅಸಹಜಗಳ, ರೂಪಗಳ, ಅರೂಪಗಳ, ವಿಲಕ್ಷಣಗಳ ಶಿಲೆಯ ದಾಖಲೆಯೇ ಆಗಿದೆ. ವಿಜಯನಗರ ಶೈಲಿಯ ದೇವಸ್ಥಾನದ ಗಹನತೆ ಮತ್ತು ಶ್ರೀಮಂತ ಸೌಂದರ್ಯಕ್ಕೆ ಕಾರಣ ಅದರ ಕಂಬಗಳ ಪ್ರಾಧಾನ್ಯ ಮತ್ತು ಆಸರೆಗಂಬಗಳ (Piers) ಸಂಖ್ಯೆ. ಕಂಬದ ವಿನ್ಯಾಸ ಬಹು ಗಮನಾರ್ಹವಾದುದು. ಇಲ್ಲಿ ಸಾಮಾನ್ಯವಾಗಿ ಶಿಲೆಯ ಕಾಂಡವು ಮಧ್ಯದ ಆಸರೆಯಾಗಿ ಪರಿಣಮಿಸಿ ಅದರ ಸುತ್ತಮುತ್ತ ಪೂರ್ತ ಒಂದರೊಡನೊಂದು ಹೊಂದಿಕೊಂಡಿರುವ ಅನೇಕ ವಿಗ್ರಹಗಳನ್ನು, ಕೆಲವುಸಾರಿ ಬೃಹತ್ ವಿಗ್ರಹಗಳನ್ನು, ಅದಕ್ಕೆ ಸೇರಿಸಿ ಕೆತ್ತಲಾಗುತ್ತದೆ. ಇವುಗಳಲ್ಲಿ ಎದ್ದು ಕಾಣುವಂತಿರುತ್ತವೆ ಮುಂಗಾಲೆತ್ತಿರುವ ಉಗ್ರಾಶ್ವದ ಚಿತ್ರ ಅಥವಾ ಅಂತಹದೇ ಭಂಗಿಯಲ್ಲಿರುವ ಪೌರಾಣಿಕವಾದ ಶಾರ್ದೂಲದ ಚಿತ್ರ. ಕೆಲವು ಸಾರಿ ಇಂತಹ ಕಂಬದೊಡನೆ ಸೇರಿಕೊಂಡು, ಕೆಲವು ಸಾರಿ ಇದರ ಜೊತೆ ಜೊತೆಯಾಗಿ ಕಾಣಿಸಿಕೊಳ್ಳುವ, ಇನ್ನೊಂದು ಮಾದರಿಯ ಕಂಬವುಂಟು. ಇಲ್ಲಿ ಮಧ್ಯ ಕಂಬದ ಸುತ್ತ ತೆಳುವಾದ, ಗಂಭೀರವೂ ಸ್ವಾಪ್ನಿಕವೂ ಆದ ಗಾಥಿಕ್ ಶೈಲಿಯ ಮೂಲೆಗಂಬಗಳನ್ನು ಹೋಲುವ ಕಂಬಗಳ ಗುಂಪೊಂದು ಸುತ್ತುವರಿದಿರುತ್ತದೆ. ಕಂಬದ ಬೋದಿಗೆಯ ಮೇಲಿನ ಚಾಚುಪೀಠದ ಕೆಳಗೆ ಚಾಚಿರುವ ಲೋಲಕದಲ್ಲಿ ಅನೇಕ ಸುರುಳಿಗಳನ್ನು ಕೆತ್ತಿ ಕೊನೆಯಲ್ಲಿ ಕೆಳಮುಖವಾಗಿರುವ ಕಮಲದ ಮೊಗ್ಗನ್ನು ತೋರಿಸಿರಲಾಗುತ್ತದೆ.

ಈ ಕಾಲದ ಕಂಬಗಳ ಮೇಲಿನ ಕುದುರೆಯ ಆಕಾರ ಒಳಗೊಂಡ ಅಲಂಕರಣವು (Motif) ತಿರುಚಿನಾಪಳ್ಳಿಯ ಹತ್ತಿರದ ಶ್ರೀರಂಗಂ ದೇವಸ್ಥಾನದ ಮಂಟಪದಲ್ಲಿ ಅತ್ಯುಚ್ಛ್ರಾಯ ವೈಭವವನ್ನು ಪಡೆಯುತ್ತದೆ. ಅಶ್ವಗಳು ಸುಮಾರು ಒಂಬತ್ತು ಅಡಿ ಎತ್ತರಕ್ಕೆ ಕಾಲುಚಾಚಿ ನಿಲ್ಲುತ್ತವೆ. ಇಡೀ ಕೆತ್ತನೆ

ಎಷ್ಟು ಪರಿಣಾಮಕಾರಿಯಾಗಿದೆಯೆಂದರೆ, ಅದು ಕಲ್ಲು ಎನ್ನುವ ಭಾವನೆಯೇ ಬರುವುದಿಲ್ಲ. ಕಾಯಿಸಿ ಬಡಿದ ಉಕ್ಕು ಎನ್ನುವ ಭಾವನೆ ಬರುತ್ತದೆ. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಈ ಅಲಂಕರಣ ವಿಧಾನ (Motif) ಎಷ್ಟರ ಮಟ್ಟಿಗೆ ಪ್ರಕಟವಾಗಿದೆಯೆಂದರೆ, ಅದು ಎಲ್ಲ ರೀತಿಯ ಕಲ್ಪನೆಯನ್ನು ಆಕ್ರಮಿಸಿದೆಯೆಂದೂ ಅದೊಂದು ಗೀಳಾಗಿ ಪರಿಣಮಿಸಿದೆಯೆಂದೂ ನಮಗೆ ಅನ್ನಿಸಬಹುದು. ಈ ಕಾಲದ ಕಲೆಯಲ್ಲಿ ಅತೀವವಾದ ಅಜೇಯತ್ವದ ಭಾವನೆ, ದುಷ್ಟಶಕ್ತಿಯ ಮೇಲೆ ದೈವೀಶಕ್ತಿಯ ವಿಜಯದ ಸಂಕೇತವಾಗಿ ಕಲ್ಲಿನಲ್ಲಿ ಮೂಡಿದೆ. ಇದರಿಂದಾಗಿಯೇ ಇಲ್ಲಿ ದೈತ್ಯಾಕಾರದ ಪ್ರಾಣಿಗಳೊಡನೆ ಭೀಕರವಾಗಿ ಹೋರಾಡುತ್ತಿರುವ ಬೃಹತ್ತಾದ ಅಶ್ವಗಳ ಮೇಲೆ ಉಪೇಕ್ಷೆಯಿಂದ ಕುಳಿತಿರುವ ಧೀರ ಸವಾರರ ಸ್ತಂಭಶ್ರೇಣಿಗಳು ಕಾಣಿಸಿಕೊಳ್ಳುವುವು.

ವಿಜಯನಗರದಲ್ಲೆಲ್ಲ ಬಹುಶಃ ಅತ್ಯಂತ ಪ್ರಾಚೀನ ದೇವಾಲಯವೆಂದರೆ ಪಂಪಾಪತಿಯದು. ಚರಕಿಯಂತ್ರದಲ್ಲಿ (lathe) ಸುತ್ತಿ ಕೊರೆದ ಕಂಬಗಳು, ಸೊಗಸಾದ ಕೆತ್ತನೆಯ ಬಾಗಿಲು, ಅಲಂಕೃತ ಚಾವಣಿಗಳಿಂದೊಡಗೂಡಿದ ಪ್ರಾಚೀನ ಹೊಯ್ಸಳ ದೇವಾಲಯವೊಂದರ ಸುತ್ತ ಈ ದೇವಸ್ಥಾನ ನಿರ್ಮಾಣವಾಗಿದೆ. ಲೊಂಘರ್ಸ್ಟ್ (Longhurst) ನ ಪ್ರಕಾರ, ತನ್ನ ಗುರು ವಿದ್ಯಾರಣ್ಯರ ಪೂಜಾಕಾರ್ಯ, ಸ್ವಂತ ಉಪಯೋಗ ಇತ್ಯಾದಿಗಳಿಗಾಗಿ ಮೊದಲನೆಯ ಹರಿಹರ ಈ ಭವ್ಯ ದೇವಾಲಯದ ಕೆಲವು ಭಾಗಗಳನ್ನು ಕಟ್ಟಿಸಿದ. ಕೃಷ್ಣದೇವರಾಯನು ತನ್ನ ಪಟ್ಟಾಭಿಷೇಕದ ಸ್ಮಾರಕವಾಗಿ ಕ್ರಿ.ಶ. 1509–10ರಲ್ಲಿ ಅದರ ರಂಗಮಂಟಪವನ್ನು ಕಟ್ಟಿಸಿದ. ಈ ಮಹಾಸ್ಮಾರಕವು ವಿಜಯನಗರದ ವೈಭವದ ದಿನಗಳಲ್ಲಿ ಸಂಪತ್ಸಮೃದ್ಧವಾದ ಅಂಗಡಿಗಳಿಂದ ಕಿಕ್ಕಿರಿದಿದ್ದ ರಾಜಬೀದಿಯತ್ತ ಮುಖಮಾಡಿ ಹಾಳುಹಂಪೆಯ ವಿಸ್ತಾರವಾದ ಹಾಳು ಅವಶೇಷಗಳ ಮಧ್ಯೆ ದಷ್ಟಪುಷ್ಟ ಸಿಪಾಯಿಕಾವಲುಗಾರನಂತೆ ನಿಂತಿವೆ.

ವಿಜಯನಗರದ ದೊರೆಗಳಾಗಲಿ ಅವರ ಪ್ರಜೆಗಳಾಗಲಿ ಭಕ್ತಿಯಿಂದ ಕಟ್ಟಿಸಿದ ಅಸಂಖ್ಯಾತ ದೇವಾಲಯಗಳಲ್ಲಿ ಪ್ರಾತಿನಿಧಿಕವಾದುವೆಂದರೆ : ಹಂಪೆಯಲ್ಲಿರುವ ವಿರೂಪಾಕ್ಷ, ಕೃಷ್ಣಸ್ವಾಮಿ, ಹಜಾರ ರಾಮಸ್ವಾಮಿ ಮತ್ತು ವಿಠಲಸ್ವಾಮಿ ದೇವಾಲಯಗಳು, ತಾಡಪತ್ರಿಯ ಚಿಂತಲರಾಯ ದೇವಾಲಯ, ಲೇಪಾಕ್ಷಿಯ ವೀರೇಶ್ವರ ಅಥವಾ ಪಾಪನಾಶೇಶ್ವರ ದೇವಾಲಯ. ಇದರ ಜೊತೆಗೆ ಶ್ರೀರಂಗಂ, ಚಿದಂಬರಂ, ಕಾಂಚಿ ಮುಂತಾದೆಡೆಗಳಲ್ಲಿ ಹಿಂದಿನ ಸುಪ್ರಸಿದ್ಧ ದೇವಾಲಯಗಳಿಗೆ ಸೇರಿಸಿದ ಅತ್ಯಂತ ವೈಭವಪೂರ್ಣವೂ ಭವ್ಯವೂ ಆದ ಅನೇಕ ಸಾವಿರ ಕಂಬದ ಮಂಟಪಗಳು, ಸಭಾಮಂಟಪಗಳು, ಇಕ್ಕೆಲದ ಹಜಾರಗಳು ಮುಂತಾದವನ್ನು ಹೆಸರಿಸಲೇ ಬೇಕು. ಹಂಪೆಯ ಭುವನೇಶ್ವರಿ ದೇವಾಲಯ, ಹೂವಿನ ಹಡಗಲಿಯ ಪಾಪನಾಶೇಶ್ವರ ದೇವಾಲಯ, ಕುರುವತ್ತಿಯ ಶಿವದೇವಾಲಯ, ಇಲ್ಲಿಯ ಕರಿಕಲ್ಲಿನ ಬಾಗಿಲುವಟ್ಟಗಳು, ಕಾಮಲಾಪುರದಲ್ಲಿ ಈಚೆಗೆ ಭೂಮಿಯಿಂದ ಹೊರತೆಗೆದ ಮಕರತೋರಣ—ಇವು ಚುಚ್ಚುರಂಧ್ರದ ಕಲ್ಪಲತೆಗಳ ವಿನ್ಯಾಸಕ್ಕೆ ಸೊಗಸಾದ ಮಾದರಿಗಳಾಗಿವೆ. ಈ ಕಲ್ಪಲತೆಗಳ ವಿನ್ಯಾಸಗಳ ಮಧ್ಯೆ ನರ್ತನ ಭಂಗಿಯ ಮನುಷ್ಯರ, ನಟರಾಜನ, ಗಜೇಂದ್ರ ಮೋಕ್ಷದ, ಶಿವನ ಅವತಾರಗಳ ಚಿತ್ರಗಳಿರುತ್ತವೆ. ಇಲ್ಲೆಲ್ಲ ಹೊಯ್ಸಳ ಶೈಲಿಯ ವೈಭವದ ಸಮೃದ್ಧಿಯನ್ನೂ ಕುಸುರಿ ಕೆಲಸವನ್ನೂ, ಅತ್ಯಂತ ಲಯಬದ್ಧವಾದ ನಾಜೂಕನ್ನೂ ಭಕ್ತರಿಗೆ ಸಹಜವಾದ ಸ್ವಾತಂತ್ರ್ಯವನ್ನೂ ಕಾಣಬಹುದು. ಸೂರ್ಯನಾರಾಯಣ, ಗುಲಗಂಜೀ ಮಾಧವ (ವಿಷ್ಣು), ಶ್ರೀದೇವಿ, ವಿಠ್ಠಲಸ್ವಾಮಿ ದೇವಾಲಯದ ಕಾಲೀಯದಮನ ಕೃಷ್ಣ, ತ್ರಿವಿಕ್ರಮ, ಯೋಗಾನರಸಿಂಹ, ಸಾಸಿವೆಕಾಳು ಮತ್ತು ಕಡಲೆಕಾಳು ಗಣಪತಿ (ಈ ಭವ್ಯ ಏಕಶಿಲಾವಿಗ್ರಹಗಳು ಕ್ರಮವಾಗಿ 16' ಮತ್ತು 22' ಎತ್ತರವಾಗಿವೆ), ನಿಶ್ಚಲರಾಗಿ ನಿಂತಿರುವ ನರ್ತಕರು, ತಾಳ ಬಾರಿಸುವವರು, ಮೃದಂಗ ಬಾರಿಸುವವರು, ಅಚ್ಯುತರಾಯಸ್ವಾಮಿ ದೇವಾಲಯದ ದ್ವಾರಪಾಲಕರು, ವಿಶ್ವವ್ಯಾಪಿ ವೀರಭದ್ರ, 'ಹತ್ತು ಕೈಯಮ್ಮ ಕಾಳಿ', ಭೈರವ— ಇವೆಲ್ಲ ಹಂಪೆಯವು,— ಕುರುವತ್ತಿ ದೇವಾಲಯದ ಮದನಿಕಾ ವಿಗ್ರಹಗಳು, ಲೇಪಾಕ್ಷಿಯಲ್ಲಿನ ಶಿವನ ಅವತಾರಗಳು, ಸಪ್ತರ್ಷಿಗಳು ಮತ್ತು ಅಷ್ಟದಿಕ್ಪಾಲಕರು,

ತಾಡಪತ್ರಿಯ ಪರಿಪೂರ್ಣ ಮಾದರಿಯ ಮತ್ತು ಅಲಂಕೃತವಾದ ಗೋಪುರ, ವಿಷಪಾನಮೂರ್ತಿ—ಇವೆಲ್ಲವೂ ಅತಿ ಮೋಹಕವಾದವು ಮಾತ್ರವಲ್ಲದೆ ವಿಜಯನಗರದ ಕಲಾವಿದನು ಸಂಪ್ರದಾಯಬದ್ಧ ಸಂಯಮದಿಂದೊಡಗೂಡಿದವನಾಗಿದ್ದು ಪಡೆದ ಕಲಾಸಿದ್ಧಿಯ ಕುರುಹುಗಳಾಗಿವೆ. ಈ ಸಂದರ್ಭದಲ್ಲಿ, ಹೊಸಪೇಟೆಯ ಅನಂತಶಯನ ದೇವಾಲಯದಲ್ಲಿ ಸ್ಥಾಪಿಸಲೆಂದಿದ್ದ ಶ್ರೀ ರಂಗನಾಥನ ವಿಗ್ರಹ (ಇದು ಹೊಳಲು ಗ್ರಾಮದಲ್ಲಿ ನೆಲಕ್ಕೆ ಒರಗಿ ಬಿದ್ದಿದೆ), ಲೇಪಾಕ್ಷಿಯ ಅತ್ಯಂತ ಸುಂದರವೂ ಭವ್ಯವೂ ಆದ ಏಕಶಿಲೆಯ ನಂದಿ (28' × 18') ಇವು ಕೂಡ ಗಮನಾರ್ಹವಾದುವು.

ಶೃಂಗೇರಿಯಲ್ಲಿ 1356—58 ರಲ್ಲಿ ನಿರ್ಮಾಣವಾದ ವಿದ್ಯಾಶಂಕರ ದೇವಾಲಯವು ಹೊಯ್ಸಳ ಮತ್ತು ದ್ರಾವಿಡ ವಾಸ್ತುಶೈಲಿಗಳೆರಡನ್ನೂ ಒಳಗೊಂಡಿದೆ. ಕೆಲವು ಶಿಲ್ಪಗಳು—ಅದರಲ್ಲೂ ಶ್ರೀ ಶಂಕರಾಚಾರ್ಯರ ಜೀವನಕ್ಕೆ ಸಂಬಂಧಪಟ್ಟಂಥವು--ಬಹಳ ಸ್ವಾರಸ್ಯವಾದುವಾಗಿವೆ. ಶೈವ ಪ್ರತಿಮೆಗಳನ್ನೇ ಬಹುಮಟ್ಟಿಗೆ ಒಳಗೊಂಡಿರುವ 61 ಗುಂಪು ಭಿತ್ತಿವಿಗ್ರಹಗಳು ಅಲ್ಲಿವೆ.

ಶ್ರೇಷ್ಠತೆಯಲ್ಲಿ ಪರಸ್ಪರ ಸ್ಪರ್ಧಿಗಳಾಗಿರುವ ಒಟ್ಟು ಮೂರು ದೇವಾಲಯಗಳು ಹಂಪೆಯಲ್ಲಿವೆ. ಮೊದಲನೆಯದು ವಿಠಲಸ್ವಾಮಿ ದೇವಾಲಯ. ಇದರ ಕಲಾತ್ಮಕವಾದ ಮುಂಭಾಗವನ್ನು ಮತ್ತು 'ಫಲಪೂಜಾ' ಮತ್ತು 'ಕಲ್ಯಾಣ ಮಂಟಪ'ಗಳೆರಡನ್ನೂ ಕೃಷ್ಣದೇವರಾಯನು ತನ್ನ ದಿಗ್ವಿಜಯಾನಂತರ (ದಿಗ್ವಿಜಯ ಕ್ರಿ.ಶ. 1513) ಸೇರಿಸಿದ. ಇದನ್ನು ಬಹು ಕೋನಗಳುಳ್ಳ ಮೇಲು ಪಾಯದ ಮೇಲೆ ಕಟ್ಟಲಾಗಿದೆ. ಇದರ ಸಂಯುಕ್ತಸ್ತಂಭಗಳನ್ನು (Compound Pillars) ಬಹು ಸೂಕ್ಷ್ಮವಾಗಿ, ಏಕಶಿಲೆಯಿಂದ ಕೊರೆದು ಸಾಲುಸಾಲಾಗಿ ನಿಲ್ಲಿಸಿದ್ದಾರೆ. ಅವುಗಳ ಮೇಲೆ ಅನೇಕ ಪ್ರಾಣಿಗಳ, ಪಕ್ಷಿಗಳ, ಬಳ್ಳಿಗಳ, ಚಿತ್ರಗಳನ್ನು ಬಿಡಿಸಿದ್ದಾರೆ. ಅದರ ಅಡಿಪಾಯದ ಅಡ್ಡ ಪಟ್ಟಿಕೆಗಳ ಮೇಲೂ ಅಂತಹದೇ ಕೆತ್ತನೆ ಕೆಲಸಮಾಡಿ, ಮಧ್ಯೆ ಮಧ್ಯೆ ಇರುವ ಸಣ್ಣ ಗೂಡುಗಳಲ್ಲಿ "ಭದ್ರಮಂಟಪ"ಗಳ ರೀತಿಯಲ್ಲಿ ದೇವಾನುದೇವತೆಗಳ ಸಣ್ಣ ಉಬ್ಬು ಚಿತ್ರಗಳನ್ನು ಕೊರೆದಿದ್ದಾರೆ. ಇವು ತಂಜಾವೂರಿನ ಬೃಹದೀಶ್ವರ ದೇವಸ್ಥಾನದ ಅಥವಾ ಪಟ್ಟದ ಕಲ್ಲಿನ ವಿಶ್ವೇಶ್ವರ ದೇವಸ್ಥಾನದ ಹೊರ ಅಲಂಕಾರಗಳನ್ನು ನೆನಪಿಗೆ ತರುತ್ತವೆ. ಆದರೆ ಕಾರ್ನೀಸಿನಿಂದ ಜೋಲುತ್ತ ಉದ್ದಕ್ಕೆ ಹರಿದಿರುವ ಮತ್ತು ಕಲ್ಲಿನ ಶಲಾಕೆಗಳಿಂದ ಒಟ್ಟಿಗೆ ಹಿಡಿದಿಡಲ್ಪಟ್ಟಿರುವ ಕಮಲದ ಎಲೆಗಳು, ಕಮಲಗಳನ್ನು ಕಮಲನಾಳಗಳನ್ನು ಕಚ್ಚಿ ಹಾರುತ್ತಿರುವ ಹಂಸಗಳನ್ನು ಕೆತ್ತಿರುವ ಕಾರ್ನೀಸು, ಅನೇಕ ಜಟಿಲ ವಿನ್ಯಾಸಗಳಲ್ಲಿ ಕಾಣಿಸಿಕೊಳ್ಳುವ ಕಲ್ಪಲತೆಗಳು, ಬಹು ಸುಂದರವಾಗಿ ಕೊರೆದಿರುವ ಯೋಗಾಸನಗಳ ಅಕ್ಕಪಕ್ಕಗಳಲ್ಲಿ ಅಲ್ಲಿ ಇಲ್ಲಿ ಕೆತ್ತಿರುವ ಕೊಕ್ಕರೆ ಮುಂತಾದ ನೀರು ಹಕ್ಕಿಗಳು, ಬಹುಶಃ ಚಾತಕಗಳು, ತುದಿಯಲ್ಲಿ ಎದ್ದು ಕಾಣುವಂತೆ ಅಲ್ಲಿ ಇಲ್ಲಿ ಗೋಚರವಾಗುವ ಸಣ್ಣ ಗೋಪುರಗಳು ಇವೆಲ್ಲವೂ ವಿಜಯನಗರದ ಶೈಲಿಯೆಂಬ ಪ್ರತ್ಯೇಕ ಶೈಲಿಯೊಂದನ್ನು ಇತರ ಶೈಲಿಗಳಿಂದ ಪ್ರತ್ಯೇಕಿಸಿ ತೋರುತ್ತವೆ. ಕಲ್ಯಾಣ ಮಂಟಪಕ್ಕೊಯ್ಯುವ ಮೆಟ್ಟಲುಗಳ ಅಕ್ಕಪಕ್ಕಗಳಲ್ಲಿ ಸುಂದರವಾಗಿ, ಆದರೆ ಹೊಯ್ಸಳ ಶೈಲಿಯ ತುಂಬು ಅಲಂಕಾರವಿಲ್ಲದೆ ಕೆತ್ತಿರುವ ಆನೆಗಳು, ಮಕರಗಳು ಇವುಗಳು ಒಂದಾದ ಮೇಲೊಂದರಂತೆ ಕಾಣಿಸಿಕೊಳ್ಳುತ್ತವೆ. ಎರಡನೆಯದಾಗಿ, ಕಲ್ಯಾಣ ಮತ್ತು ಫಲಪೂಜಾ ಮಂಟಪಗಳು ವಿಜಯನಗರ ಶೈಲಿಯ ವೈಶಿಷ್ಟ್ಯವೆನ್ನಬೇಕು. ಇಲ್ಲಿ ಮೇಲೆ ಹೇಳಿದಂತಹ ಸಾಲುಗಂಬಗಳಿಗೆ ಹೊಸ ವಿನ್ಯಾಸಗಳನ್ನು ಸೇರಿಸಿರುತ್ತಾರೆ. ಉದಾಹರಣೆಗೆ: ಹಿಂಗಾಲಿಂದ ಕುಪ್ಪಳಿಸಿ ಮೇಲೆದ್ದಿರುವ ಯಾಳಿಗಳ ಮೇಲೆ ಕುಳಿತಿರುವ ವಿಜಯನಗರದ ರಾವುತರು, ಮತ್ತು ಕೆಲವು ಸಾರಿ ದೇವತೆಗಳು, ಮೂರನೆಯದಾಗಿ, ಸಮಕಾಲೀನ ಪ್ರವಾಸಿಯೊಬ್ಬ ವರ್ಣಿಸಿರುವ ನೃತ್ಯಕೂಟ ಅಲ್ಲಿ ಉಂಟು. ಈ ಮಂಟಪಗಳ ಚತುಷ್ಕೋನಾಕಾರದ ಕಂಬಗಳ ಮೇಲೆ ಪ್ರತಿ ಮುಖದಲ್ಲೂ ಮೂರು ಹಂತಗಳಲ್ಲಿ ಸಣ್ಣ ಉಬ್ಬು ಚಿತ್ರಗಳಾಗಿ ಮೋಹಕ ಭಂಗಿಗಳಲ್ಲಿ ದಶಾವತಾರಗಳು, ನರ್ತನ ಭಂಗಿಗಳು, ಬಹು ಸುಂದರ ಹರ್ಷ ಭಂಗಿಗಳಲ್ಲಿ ಮೂರು ಮುಖದ

ಅಥವಾ ಐದು ಮುಖದ ವಿಚಿತ್ರ ವೇಣುಗೋಪಾಲಕರು—ಇವರನ್ನು ಕೆತ್ತಲಾಗಿದೆ. ಒರಿಸ್ಸದ ಕೊನಾರ್ಕದ ಸೂರ್ಯ ದೇವಸ್ಥಾನದಿಂದ ಪ್ರಚೋದನೆ ಪಡೆದಿರಬಹುದಾದ ಒಂದು ಏಕಶಿಲೆಯ ರಥ ಅಲ್ಲಿದೆ. ಅಲ್ಲಿ ಶಿಲ್ಪಿಗಳು ಅನಿವಾರ್ಯವಾಗಿ ಬಳಸಬೇಕಾಗಿದ್ದ ಒರಟು ಬೆಣಚುಗಲ್ಲಿನ ಮೇಲೆ ಮೂಡಿಸಿರುವ ಅರೆಯುಬ್ಬು ಚಿತ್ರಗಳ ಲಯ, ಬಳುಕುಗಳು ಬೇರೆಡೆ ಗೋಚರವಾಗಿರುವುದು ವಿರಳವೇ ಸರಿ. ಇಲ್ಲಿಯ ಚಿತ್ರ ಪಟ್ಟಿಕೆಗಳಲ್ಲೂ ಸೈನಿಕರು, ಬೇಟೆಗಾರರು, ಸವಾರರು (ಮಹಾನವಮಿ ದಿಬ್ಬದಲ್ಲೂ ಇವು ಉಂಟು), ಪೋರ್ಚುಗೀಸರು, ಅರಬರು, ಪರ್ಷಿಯನರು ಮುಂತಾದ ಪರದೇಶದ ಜನರು—ಇವರ ಚಿತ್ರಗಳನ್ನು ಕಾಣಬಹುದು. ಫರ್ಗೂಸನ್ ಗಮನಿಸಿರುವಂತೆ, ವಿಠಲ ದೇವಾಲಯದಲ್ಲಿ " ಈ ಶೈಲಿಯು ಮುಟ್ಟಿದ ಪರಾಕಾಷ್ಠೆಯೆನ್ನಬಹುದಾದ ಸಸ್ಯಾಲಂಕಾರ ವೈಭವ "ವನ್ನು ಕಾಣಬಹುದು. ಆದರೆ ಈ ವೈಭವದಲ್ಲಿ ಅಪಾರ ಸಂಯಮವೂ ಉಂಟು.

ವಿಠಲಸ್ವಾಮಿ ದೇವಾಲಯದಲ್ಲಿ ಎಂದೂ ವಿಗ್ರಹವಿರಲಿಲ್ಲವೆಂದೂ ಪೂಜಾದಿಗಳು ನಡೆಯಲಿಲ್ಲವೆಂದೂ ಜನಸಾಮಾನ್ಯರ ನಂಬಿಕೆ. ಆದರೆ ಅಲ್ಲಿ ಬೆಳಕಿಗೆ ಬಂದಿರುವ ಶಾಸನಗಳು ಇದನ್ನು ಸುಳ್ಳುಗೈಯುತ್ತವೆ.

ಕೃಷ್ಣದೇವರಾಯ ಮತ್ತು ಅವನ ಸೋದರ ಅಚ್ಯುತರಾಯರು ಕ್ರಮವಾಗಿ ಕ್ರಿ.ಶ. 1513 ಮತ್ತು ಕ್ರಿ.ಶ. 1539 ರಲ್ಲಿ ಕಟ್ಟಿಸಿದ ಕೃಷ್ಣಸ್ವಾಮಿ ದೇವಾಲಯ ಮತ್ತು ಆದರ ಪಡಿಯಚ್ಚು ಅಚ್ಯುತರಾಯ ದೇವಸ್ಥಾನಗಳು ದ್ರಾವಿಡ ಶೈಲಿಯಲ್ಲಿದ್ದು ದೀರ್ಘಚತುರಸ್ರಾಕಾರದ ತಳಪಾಯದ ಮೇಲೆ ನಿಂತಿವೆ. ಈ ಎರಡರ ಕಲ್ಯಾಣ ಮಂಟಪಗಳೂ ವಿಠ್ಠಲಸ್ವಾಮಿ ದೇವಾಲಯದಂತೆಯೇ ಕಲ್ಯಾಣ ಮಂಟಪದ ಪಡಿಯಚ್ಚುಗಳಾಗಿವೆ. ವಿಠ್ಠಲಸ್ವಾಮಿ ದೇವಾಲಯದಂತೆಯೇ ಇಲ್ಲಿಯೂ ಅನೇಕ ಸಾಲುಗಳ ಏಕಶಿಲೆಯಲ್ಲಿ ಮಾಡಿದ ಜವಳಿ ಕಂಬಗಳಿದ್ದು ಅವುಗಳ ಮೇಲೆ ಅಲಂಕಾರಕ್ಕಾಗಿ ಯಾಳಿ ವಿನ್ಯಾಸಗಳು, ಸಸ್ಯ ವಿನ್ಯಾಸಗಳು ಮತ್ತು ಪೌರಾಣಿಕ ಕಥೆಗಳನ್ನು ಬಿಡಿಸಿದ್ದಾರೆ. ಇವು ವಿಠ್ಠಲಸ್ವಾಮಿ ದೇವಾಲಯದ ಅಲಂಕಾರಗಳಷ್ಟೇ ಉತ್ತಮಾಭಿರುಚಿಯುಳ್ಳುವಾದರೂ ಅಲ್ಲಿಯ ಗಹನತೆ ಮತ್ತು ಸೂಕ್ಷ್ಮತೆಗಳು ಇಲ್ಲಿ ಕಾಣಿಸುವುದಿಲ್ಲ. ಈ ಮೂರರ ಬಾಗಿಲುವಾಡದ ತೋಳುಗಂಬಗಳ ಮೇಲೆ ಎರಡು ಕಡೆಗಳಲ್ಲೂ ಗಂಗಾದೇವತೆಯ ಮತ್ತು ನರ್ತನ ಭಂಗಿಯಲ್ಲಿರುವ ಅವಳ ಎತ್ತಿದ ಕೈಗಳಿಂದ ಮನೋಹರವಾಗಿ ಬೆಳೆದು ಇಳಿಬಿದ್ದಿರುವ ಕಲ್ಪಲತೆಗಳು ಮತ್ತು ಅವುಗಳ ಮಧ್ಯೆ ಪರ್ಯಾಯವಾಗಿ ಕೋಲಾಟದ ನರ್ತನ ಭಂಗಿಗಳ ಮತ್ತು ಯೋಗ ಭಂಗಿಗಳ ಚಿತ್ರಗಳು ಕೊರೆಯಲ್ಪಟ್ಟಿವೆ. ಬಾಗಿಲುವಾಡದ ತೋಳುಗಂಬಗಳ ಬಹು ಸೊಗಸಾದ ಮಾದರಿ ಜೋಡಿಯನ್ನು ಕೃಷ್ಣಸ್ವಾಮಿ ದೇವಾಲಯದ ಮುಖ್ಯ ದ್ವಾರದಲ್ಲಿ ಕಾಣಬಹುದು. ಆದರೆ ಇವುಗಳಲ್ಲೆಲ್ಲ ಅತ್ಯಂತ ಭವ್ಯವಾದುದೆಂದರೆ ಅಚ್ಯುತರಾಯ ಸ್ವಾಮಿ ದೇವಾಲಯದ ಬಾಗಿಲುವಾಡ. ಅದರ ಸ್ತಂಭಪೀಠದ ಮೇಲೆ ಮತ್ತು ಅಕ್ಕಪಕ್ಕಗಳಲ್ಲಿ ಸೂಕ್ಷ್ಮ ಕೆತ್ತನೆಯ ಮತ್ತು ಭಾವಪೂರ್ಣವಾದ ದಶಾವತಾರಗಳನ್ನು ಕಾಣಿಸಿದ್ದಾರೆ. ಅಚ್ಯುತರಾಯ ದೇವಸ್ಥಾನದ ಮತ್ತು ಸುತ್ತಮುತ್ತಣ ಮಂಟಪಗಳ ಪೀಠದ ಮೇಲಿನ ಚಿತ್ರಪಟ್ಟಿಕೆಗಳಲ್ಲಿನ ಆನೆಗಳು, ಕುದುರೆಗಳು, ಅರಬ್ ನರ್ತಕರು ಮತ್ತು ಇತರ ಪರದೇಶೀಯರು—ಇವರ ಚಿತ್ರಗಳು ಇತರ ಕಡೆಗಳಿಂದ ಬಹು ಮುದ್ದಾಗಿ, ಹೆಚ್ಚು ವಾಸ್ತವತೆಯಿಂದ ಕೂಡಿದುವಾಗಿರುವಂತೆ ಚಿತ್ರಿಸಲಾಗಿದೆ.

ಅರಮನೆಯ ಪ್ರದೇಶಕ್ಕೆ ತೀರ ಹತ್ತಿರವಾಗಿರುವ ಹಜಾರ ರಾಮಸ್ವಾಮಿ ದೇವಸ್ಥಾನವು ಕೂಡ (ಕ್ರಿ.ಶ. 1513) ಕೃಷ್ಣದೇವರಾಯನ ದಿಗ್ವಿಜಯ ಸ್ಮಾರಕವಾಗಿ ನಿರ್ಮಾಣಗೊಂಡಿತು. ಇದೂ ಇದರ ಛಾಯೆಯಂತಿರುವ ಪೆನುಗೊಂಡೆಯ ವಿಷ್ಣು ದೇವಾಲಯವೂ ಚಿಕ್ಕವಾಗಿದ್ದರೂ ಅವುಗಳ ಹೊರ ಗೋಡೆಗಳ ಮೇಲೆ ಉಚಿತ ಅಂತರದಲ್ಲಿ ಕೆತ್ತಿದ ಅಂಕಣಗಳಲ್ಲಿ ರಾಮಾಯಣದಿಂದ, ವಿಶೇಷವಾಗಿ ಕೃಷ್ಣಲೀಲಾ ಪ್ರಸಂಗದಿಂದ ಆರಿಸಿದ ದೃಶ್ಯಗಳನ್ನು ಅತ್ಯಂತ ಮನೋಹರವಾದ ಉಬ್ಬು ಚಿತ್ರಗಳಲ್ಲಿ ಮೂಡಿಸಿದ್ದಾರೆ.

ರಾವಣವಧೆ ಮತ್ತು ಪುತ್ರಕಾಮೇಷ್ಟಿಯಾಗದ ದೃಶ್ಯಗಳು ಗಮನಾರ್ಹವಾದುವು. ಹಜಾರ ರಾಮಸ್ವಾಮಿ ದೇವಸ್ಥಾನದ ಹೊರಗೋಡೆಗಳ ಮೇಲೆ ಮೇಲಿನಿಂದ ಕೆಳಕ್ಕೆ ಚಿತ್ರಪಟ್ಟಿಕೆಗಳ ಸಾಲುಗಳು ಕಿಕ್ಕಿರಿದಿವೆ. ಆ ಪಟ್ಟಿಕೆಗಳಲ್ಲಿ ಅನೇಕ ಯೋಗಭಂಗಿಗಳ ನಿರೂಪಣೆಯ ಜೊತೆಗೆ ಲಯಬದ್ಧವಾದ ರೇಖೆ ಮತ್ತು ಆಕಾರಗಳನ್ನು ಪಡೆದಿರುವ ಎಲ್ಲ ಹಿಂದೂ ದೇವತೆಗಳನ್ನೂ ಕಾಣಬಹುದು. ಈ ದೇವಸ್ಥಾನದಲ್ಲಿ ಮೊತ್ತಮೊದಲು ಸಾಬೂನುಗಲ್ಲಿನ ಕಂಬಗಳನ್ನು ನೋಡುತ್ತೇವೆ. ಇವುಗಳನ್ನು ನಾಲ್ಕು ಚೌಕಗಳಾಗಿ ಕೆತ್ತಿದ್ದಾರೆ. ಒಂದೊಂದು ಮುಖದಲ್ಲೂ ಮೂರು ಹಂತಗಳು. ಅವುಗಳಲ್ಲಿ ಪ್ರಧಾನಹಂತ ಮತ್ತು ಅವುಗಳ ಕೆಳಗಿನ ಅಲಂಕೃತ ಗೂಡುಗಳಲ್ಲಿ ದಶಾವತಾರದ ಮತ್ತು ಇತರ ವೈಷ್ಣವ ದೇವಾನುದೇವತೆಗಳನ್ನು ಕೊರೆದಿದ್ದಾರೆ. ಅಲ್ಲಿ ಒಟ್ಟು 48 ಹಂತಗಳಿವೆ. ಅಲ್ಲಿಯ ಚಿತ್ರಗಳೆಲ್ಲವೂ ಕೃಷ್ಣದೇವರಾಯನಿಗಿದ್ದ ವೈಷ್ಣವ ಧರ್ಮದ ಒಲವಿನ ಕುರುಹುಗಳಾಗಿವೆ. ಇಲ್ಲಿಯ ಚಿತ್ರಗಳ ಕೆತ್ತನೆಯಲ್ಲಿ ಅಂತಹ ನಾಜೂಕು ಇಲ್ಲ. 'ಹನುಮಾನ್–ಜಾಂಬವತಿ,' ವೇಣುಗೋಪಾಲ ಮತ್ತು 'ಕೈಯಲ್ಲಿ ಹಾರ ಹಿಡಿದಿರುವ ಹನುಮಾನ್,' 'ಸಮುದ್ರದ ಆಳವನ್ನು ಪರೀಕ್ಷಿಸುತ್ತಿರುವ ರಾಮ'—ಈ ಮೂರ್ತಿಗಳನ್ನು ಬಿಟ್ಟರೆ ಉಳಿದವು ಭಾವಪೂರ್ಣವಾಗಿಲ್ಲ. ಅರಮನೆಯ ಆವರಣದಲ್ಲಿದ್ದ ರಾಜಮನೆತನದವರ ದಿನನಿತ್ಯದ ಪೂಜೆಗಾಗಿ ನಿರ್ಮಾಣವಾದ ಈ ದೇವಸ್ಥಾನ ಅವರ ನಾಟಕ ಪ್ರದರ್ಶನಗಳ ವೇದಿಕೆಯೂ ಆಗಿದ್ದಿತು.

ಕೃಷ್ಣದೇವರಾಯ ಕಟ್ಟಿಸಿದ ಮಾನವಮಿ ದಿಬ್ಬವನ್ನು ಪೋರ್ಚುಗೀಸ್ ಪ್ರವಾಸಿ ಪಾಯಸ್ ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾನೆ. ಆ ವೇದಿಕೆಯ ಪೀಠದ ಬೇರೆ ಬೇರೆ ಅಚ್ಚುಪಟ್ಟಿ ಸಾಲುಗಳ ಮಧ್ಯದ ಜಾಗದಲ್ಲಿ ಹಜಾರ ರಾಮಸ್ವಾಮಿ ದೇವಸ್ಥಾನದಲ್ಲಿಯ ಆ ಆಶ್ಚರ್ಯಕರ ಉಬ್ಬು ಚಿತ್ರಗಳನ್ನು ಹೋಲುವ ಚಿತ್ರಗಳನ್ನು ವಿವರವಾಗಿ ಕೊರೆದಿದ್ದಾರೆ. ಅವುಗಳಲ್ಲಿ ಬೇಟೆಯ ದೃಶ್ಯಗಳು, ಮೋಹಕವಾದ ನೃತ್ಯ ಭಂಗಿಗಳು, ಪೌರಾಣಿಕ ಪ್ರಾಣಿಗಳನ್ನು ಕಾಣಬಹುದು. ವೇದಿಕೆಯ ದಕ್ಷಿಣ ಪಾರ್ಶ್ವದಲ್ಲಿ ಕೆಲವು ಬಹು ಸ್ವಾರಸ್ಯಕರವಾದ ಶಿಲ್ಪಗಳನ್ನು ಕಾಣಬಹುದು. ಮೇಲ್ಭಾಗದಲ್ಲಿರುವ ಆನೆಗಳ ಮೆರವಣಿಗೆಯಲ್ಲದೆ, ಒಂದು ಆಸನದ ಮೇಲೆ ಕುಳಿತಿರುವ ವ್ಯಕ್ತಿಗಳಿಗೆ ಬಾಗುತ್ತಿರುವಂತೆ ಚಿತ್ರಿಸಿರುವ ಮೊನಚುಗಡ್ಡದ ಪರ್ಷಿಯನ್ ಟೋಪಿಗಳ ಇಬ್ಬರು ಪರದೇಶೀಯರಂತಿರುವ ವ್ಯಕ್ತಿಗಳನ್ನು ಕಾಣಿಸಿದ್ದಾರೆ. ಲಾಂಘರ್ಸ್ಟ್ ಸೂಚಿಸುವಂತೆ, ಆಸ್ಥಾನಕ್ಕೆ ಭೇಟಿಯಿತ್ತಿರುವ ಅನ್ಯ ದೇಶದ ರಾಯಭಾರಿಗಳನ್ನು ಆ ದೃಶ್ಯವು ಚಿತ್ರಿಸುತ್ತದೆ. ವೇದಿಕೆಯ ಪಶ್ಚಿಮ ಪಾರ್ಶ್ವದಲ್ಲಿ ಹೋಳಿ ಹಬ್ಬದ ದೃಶ್ಯವೊಂದನ್ನು ಚಿತ್ರಿಸಿದೆ.

ವಿಜಯನಗರದ ಕಾಲದಲ್ಲಿ ಇಂಡೋ–ಮುಸ್ಲಿಮ್ ಶೈಲಿಗೆ ಸೇರುವ ಮಂದಿರಗಳ ನಿರ್ಮಾಣ ಕಾರ್ಯವೂ ನಡೆಯಿತು. ರಾಣಿಯರ ಸ್ನಾನಗೃಹ, ಅಷ್ಟಕೋನಾಕಾರದ ಮಂಟಪ ಇವು ಈ ಗುಂಪಿಗೆ ಸೇರುತ್ತವೆ. ಆದರೆ ಈ ಶೈಲಿಯ ವಾಸ್ತುಶಿಲ್ಪದ ಪ್ರಮುಖ ಕೇಂದ್ರಗಳು ಬಹಮನಿ ರಾಜದಲ್ಲಿದ್ದುವು: ಗುಲ್ಬರ್ಗ, ಬೀದರ್ ಮತ್ತು ಬಿಜಾಪುರ.

ಮೈಸೂರು ದೇಶದ ಹೊರಗಡೆಯಿದ್ದರೂ ಎರಡು ದೇವಸ್ಥಾನಗಳ ಹೆಸರುಗಳನ್ನು ಇಲ್ಲಿ ಹೇಳಬಹುದಾಗಿದೆ. ಒಂದು—ವೀರಣ್ಣ ಎಂಬವನಿಂದ ನಿರ್ಮಾಣವಾಗಿ (ಕ್ರಿ.ಶ. 1535) ಅವನಿಂದಲೇ ಪ್ರತಿಷ್ಠಿತವಾದ ಲೇಪಾಕ್ಷಿಯ ವೀರೇಶ್ವರ ದೇವಾಲಯ. ಮತ್ತೊಂದು ಚಿಂತಲ ರಾಯನಿಂದ ತಾಡಪತ್ರಿಯಲ್ಲಿ ಪ್ರತಿಷ್ಠಿತವಾದ (ಕ್ರಿ.ಶ. 1535) ಶಿವದೇವಾಲಯ. ಇವೆರಡೂ ಅಚ್ಯುತರಾಯನ ಕಾಲದಲ್ಲಿ (ಕ್ರಿ.ಶ. 1530–42) ನಿರ್ಮಾಣಗೊಂಡುವು. ಇವು ವಿಜಯನಗರ ಕಾಲದ ಸೊಗಸಾದ ಶಿಲ್ಪ ಮತ್ತು ಚಿತ್ರಕಲೆಗಳಿಗೂ ಪ್ರಸಿದ್ಧವಾಗಿವೆ. ಲೇಪಾಕ್ಷಿಯಲ್ಲಿ ಶಿವಪುರಾಣಕ್ಕೆ ಸಂಬಂಧಿಸಿದ ವರ್ಣಚಿತ್ರಗಳ ಬಾಹುಳ್ಯವಿರುವುದರಿಂದ, ಶಿವನ ಅವತಾರಗಳು, ಸಪ್ತರ್ಷಿಗಳು ಮತ್ತು ಅಷ್ಟದಿಕ್ಪಾಲಕರ ಬಹು ಸೊಗಸಾದ ಶಿಲ್ಪಕೃತಿಗಳಿಂದ, ಲೇಪಾಕ್ಷಿ ದೇವಾಲಯವನ್ನು ಶೈವ ಸಿದ್ಧಾಂತದ ಅಜಂತ ಎಂದು ಕರೆಯಬಹುದು. ತಾಡಪತ್ರಿ ದೇವಾಲಯವು ಬಹು ಅಲಂಕೃತವೂ ಅನೇಕ ರೀತಿಯ ವೈವಿಧ್ಯವುಳ್ಳ

ಶಿಲ್ಪಗಳಿಂದ ಕೂಡಿದುದೂ ಆದ ಗೋಪುರಕ್ಕೆ ಪ್ರಸಿದ್ಧವಾಗಿದೆ. ಅದನ್ನು ನಿರ್ಮಿಸಿದ ಪ್ರತಿಭಾಶಾಲಿ ಶಿಲ್ಪಿಯ ಹಸ್ತಕೌಶಲವು ಮೆಚ್ಚತಕ್ಕದ್ದಾಗಿದೆ. ಅಲ್ಲಿಯ ಶಿಲ್ಪಗಳಲ್ಲಿ ವಾಸ್ತವತೆಯಿದೆ, ಉತ್ಕೃಷ್ಟ ನಯಗಾರಿಕೆ ಇದೆ.

ಲೇಪಾಕ್ಷಿಯಂಲ್ಲಿ ನಂದಿಯ (28'×16')ಭವ್ಯ ಶಿಲ್ಪವನ್ನು ಬಿಟ್ಟರೆ ಉಳಿದ ಕಲಾಕೃತಿಗಳೆಲ್ಲವೂ ವೀರೇಶ್ವರ ಅಥವಾ ಪಾಪನಾಶೇಶ್ವರ ದೇವಾಲಯದಲ್ಲಿವೆ. ಅಲ್ಲಿ ನಟರಾಜ, ಗಂಗಾಧರ, ಅರ್ಧನಾರೀಶ್ವರ, ಕಲ್ಯಾಣ ಸುಂದರ, ವೀರಭದ್ರ, ಕಾಲಾರಿಮೂರ್ತಿ, ಭಿಕ್ಷಾಟನಶಿವ, ಮಹಿಷಾಸುರ ಮರ್ದಿನಿ, ಮೋಹಿನಿ, ವಿಷ್ಣು, ಅಷ್ಟದಿಕ್ಪಾಲಕರು, ಸಪ್ತರ್ಷಿಗಳು ಮತ್ತು ಇತರ ವಿಗ್ರಹಗಳಿವೆ. ಇವೆಲ್ಲವನ್ನೂ ದೇವಸ್ಥಾನದ ಅಪೂರ್ಣವಾಗಿಯೇ ಉಳಿದಿರುವ ಕಲ್ಯಾಣ ಮಂಟಪ ಮತ್ತು ಅದರ ಪೂರ್ಣಗೊಂಡ ರಂಗಮಂಟಪದ ಚೌಕಾಕಾರದ ಕಂಬಗಳ ಹಂತಗಳ ಮೇಲೆ ಅರ್ಧ ಅಥವಾ ಕಾಲುಭಾಗದಷ್ಟು ಉಬ್ಬಿರುವ ಚಿತ್ರಗಳಲ್ಲಿ ಕಾಣಬಹುದು. ಅವುಗಳ ಭಂಗಿ, ಆ ಭಂಗಿಯಲ್ಲಿ ಕಾಣುವ ಚೈತನ್ಯ ಮತ್ತು ಶಕ್ತಿಗಳು ಆಶ್ಚರ್ಯಕರ. ದಿಕ್ಪಾಲಕರು ಮತ್ತು ಸಪ್ತರ್ಷಿಗಳು ಇವರಲ್ಲಿ ಒಬ್ಬೊಬ್ಬರನ್ನು ಅವರವರ ವಿಶಿಷ್ಟ ಅಭಿವ್ಯಕ್ತಿ, ಪರಿವಾರ ದೇವತೆಗಳು, ಆಯುಧಗಳು, ಕೇಶವಿನ್ಯಾಸ ಮತ್ತು ಅಲಂಕಾರಗಳೊಂದಿಗೆ ಬಿಡಿಸಿದ್ದಾರೆ. ಈ ಚಿತ್ರಗಳು ಉತ್ಸಾಹದಿಂದ ತುಂಬಿ ತುಳುಕುತ್ತಿದ್ದು, ಕಲ್ಯಾಣಸುಂದರ ಮತ್ತು ಪಾರ್ವತಿಯರ ಮದುವೆಯಲ್ಲಿ ಅದೇ ಉತ್ಸಾಹದಿಂದ ಪಾಲ್ಗೊಂಡಿರುವಂತೆ ಕಾಣುತ್ತದೆ. ರಂಗಮಂಟಪದ ಕಂಬಗಳ ಮೇಲೆ ವಿಷ್ಣುವಿನ ದಶಾವತಾರಗಳು, ಭರತನಾಟ್ಯದ ಭಂಗಿಗಳು, ಸಾಮಾನ್ಯರ ಜೀವನಕ್ಕೆ ಸಂಬಂಧಿಸಿದ ದೃಶ್ಯಗಳು, ಬೇಟೆಯು, ಜಾತ್ರೆಗಳಿಗೆ ಹೋಗುವ, ಬತ್ತಕುಟ್ಟುವ—ಇತ್ಯಾದಿ ದೃಶ್ಯಗಳನ್ನು ಕಾಣಬಹುದು. ಅಲಂಕಾರಕ್ಕಾಗಿ ಸಾಮಾನ್ಯವಾಗಿ ಬಳಸುವ ಕಲ್ಪಲತೆಗಳ ಮತ್ತು ಭರತನಾಟ್ಯ ಭಂಗಿಗಳ ಕೆತ್ತನೆಯು ಸೂಕ್ಷ್ಮವಾಗಿದ್ದು, ಕುಶಲರಾದ ಅಕ್ಕಸಾಲಿಗರು ಇವುಗಳನ್ನು ಮೇಲ್ಪಂಕ್ತಿಯಾಗಿ ಇಟ್ಟುಕೊಳ್ಳಲು ಯೋಗ್ಯವಾಗಿವೆ.

ತಾಡಪತ್ರಿಯ ಅಪೂರ್ಣ ಗೋಪುರವನ್ನು ಅದರ ಲಂಬಭಾಗಕ್ಕಿಂತ ಮೇಲಕ್ಕೆ ಯಾವಾಗಲೂ ಕಟ್ಟಲಿಲ್ಲವೆಂದು ಕಾಣುತ್ತದೆ. ಆ ಕಾಲದ ಇತರ ಅಪೂರ್ಣ ಗೋಪುರಗಳಂತೆ ಅದನ್ನು ಬೋಳು ಬೋಳಾಗಿ ಬಿಡದೆ, ಮೂರ್ತಿಗಳಿಂದ, ಸಾಮಾನ್ಯವಾಗಿ ಅಲಂಕಾರಕ್ಕೆ ಬಳಸುವ ವಿನ್ಯಾಸಗಳಿಂದ, ಬಳ್ಳಿಗಳು ಹೂವುಗಳು ಹಕ್ಕಿಗಳು ಯೋಗಾಸನ ಮತ್ತು ಭರತನಾಟ್ಯ ಭಂಗಿಗಳು—ಇವುಗಳಿಂದ ಬಹುವಾಗಿ ಅಲಂಕರಿಸಿದ್ದಾರೆ. ಇವೆಲ್ಲವನ್ನೂ ಕರಾರುವಾಕ್ಕಾಗಿ ಕೆತ್ತಿದ್ದಾರೆ. ಇದನ್ನು ಸೊಗಸಾದ ಒತ್ತುಕಣದ ಹಾರ್ನ್‌ಬ್ಲೆಂಡೆ ಶಿಲೆಯಿಂದ (close-grained hornblende stone) ಮಾಡಿರುವುದು ಬಹು ಒಳ್ಳೆಯ ಪರಿಣಾಮವನ್ನು ಬೀರುತ್ತದೆ. ಫರ್ಗ್ಯೂಸನ್ ಗಮನಿಸಿರುವಂತೆ, " ಹಳೇಬೀಡು ಬೇಲೂರುಗಳಿಗೆ ಯಾರಾದರೂ ಹೋಲಿಸಿದರೆ, ವಿಜಯನಗರದ ಅರಸರ ಇತರ ಕೃತಿಗಳಿಗಿಂತ ಈ ಗೋಪುರಗಳು ಅಂತಹ ಹೋಲಿಕೆಯನ್ನು ತಡೆದುಕೊಳ್ಳಬಲ್ಲವು ".

ವಿಜಯನಗರದ ಕಲೆಯ, ಅದರಲ್ಲೂ ಅದರ ದೇವಸ್ಥಾನ ವಾಸ್ತುಕಲೆಯ ವೈಶಿಷ್ಟ್ಯವೆಂದರೆ— ಒಳ್ಳೆಯ ಬೆಳಕಿನಲ್ಲಿ ಸ್ಪಷ್ಟವಾಗಿ ಕಾಣುವಂತೆ ಇರುವ ವಿಗ್ರಹಗಳು ; ಮತ್ತು ಅಲಂಕಾರಕ್ಕಾಗಿ ಬಳಸಿಕೊಂಡಿರುವ ವಸ್ತುವಿನ ವೈವಿಧ್ಯ ಮತ್ತು ಐತಿಹಾಸಿಕತೆ. ಅಲಂಕಾರಕ್ಕಾಗಿ ಬಳಸುವ ಬಿಡಿಭಾಗಗಳನ್ನು ಜೋಡಿಸಿ ಸಾಂಕೇತಿಕ ಆಕಾರಗಳನ್ನು ಮೂಡಿಸುವುದು ಹಳೆಯ ಸಂಪ್ರದಾಯದಿಂದ ಸಂಪೂರ್ಣ ಭಿನ್ನವಾದುದಾಗಿದೆ. ಇಲ್ಲಿ ವಾಸ್ತವತೆಯನ್ನು ಗಮನದಲ್ಲಿಟ್ಟುಕೊಂಡಿರುವುದರಿಂದ ಹೆಚ್ಚಾಗಿ ಸಾಮಾನ್ಯ ಮತ್ತು ಸಹಜ ಆಕಾರಗಳ ಬಗ್ಗೆ ಹೆಚ್ಚು ಒಲವಿದೆ. ಎಲ್ಲಕ್ಕಿಂತ ಹೆಚ್ಚಾಗಿ, ಅಗತ್ಯ ವಿವರಗಳನ್ನು ಆಯ್ಕೆಮಾಡಿ ಮೂಡಿಸುವುದರ ಮೂಲಕ ಅಲಂಕಾರ ವಿನ್ಯಾಸಗಳ ಬಳಕೆಯಲ್ಲಿ ತೋರಿರುವ ಸಂಯಮವೂ ಮೆಚ್ಚತಕ್ಕದ್ದು.

**ಲೌಕಿಕ ವಾಸ್ತು (Civil Architecture)**

ವಿಜಯನಗರ ಕಾಲದ ರಾಜಧಾನಿ ಮತ್ತು ಅದರ ಸುತ್ತಮುತ್ತಣ ಜೀವನವು ವೈಭವೋಪೇತವಾಗಿದ್ದಿತು. ರಾಜ್ಯದಲ್ಲಿ ಅಪಾರವಾದ ಐಶ್ವರ್ಯವಿದ್ದಿತು. ಜನರಲ್ಲಿ ಬಾಳಿನ ಬಗ್ಗೆ ತೀವ್ರ ಆಸಕ್ತಿಯಿದ್ದಿತು. ಇದು ಆ ಕಾಲದ ವಾಸ್ತುವಿನಲ್ಲಿಯೂ ಪಡಿಮೂಡಿದೆ. ಗೃಹವಾಸ್ತುವಿಗೆ ಸಂಬಂಧಿಸಿದಂತೆ ಕಮಲಮಹಲ್, ರಾಣಿಯರ ಸ್ನಾನಗೃಹ, ಅಂತಃಪುರದ ಕಾವಲುಗೋಪುರ, ಆನೆಯ ಲಾಯ, ಕಾವಲುಗಾರರ ವಸತಿಗಳು, ಆಕ್ವಾಯ್ ಅಥವಾ ಕಮ್ಮಟ ಗೃಹ ಇವುಗಳನ್ನು ಬಿಟ್ಟರೆ ಅರಮನೆಗಳು, ಮಂದಿರಗಳು, ಸಭಾಸದರ ವಾಸಗೃಹಗಳು ಇವುಗಳ ಕುರುಹುಗಳೂ ಈಗ ಉಳಿದಿಲ್ಲ. ಉಳಿದು ಬಂದಿರುವ ಮಂದಿರಗಳು ಹಿಂದೂ ಮತ್ತು ಮುಸ್ಲಿಮ್ ಶೈಲಿಗಳ ಸಾಮರಸ್ಯವನ್ನು ಸೂಚಿಸುತ್ತವೆ. ವಿಠ್ಠಲಸ್ವಾಮಿ ದೇವಾಲಯದ ಬಳಿ ಇರುವ ತುಲಾಭಾರ ಸ್ತಂಭದಲ್ಲಿ ಎರಡು ಎತ್ತರವಾದ ಕಂಬಗಳು, ಮೇಲೆ ಮೂರು ಸಣ್ಣಗೋಪುರಗಳಿರುವ ಅಡ್ಡತೊಲೆಯಿದೆ. ಇದು ಆ ಕಾಲದ ರಾಜರ ಔದಾರ್ಯ ಮತ್ತು ಉತ್ಸವ ಪ್ರೇಮವನ್ನು ಸೂಚಿಸುತ್ತವೆ. ರಾಜರು ಪಟ್ಟಾಭಿಷೇಕದ ಮತ್ತು ಇತರ ಉತ್ಸವದ ದಿನಗಳಲ್ಲಿ ತಮ್ಮನ್ನು ತಾವು ಚಿನ್ನ, ಮತ್ತು ಇತರ ಅಮೂಲ್ಯ ರತ್ನಗಳೊಡನೆ ತೂಗಿಸಿಕೊಂಡು, ಐಶ್ವರ್ಯವನ್ನು ದೀನ ದರಿದ್ರರಿಗೆ ಹಂಚುತ್ತಿದ್ದರು.

**ನರ್ತನ**

ನರ್ತನ ಮತ್ತು ಸಂಗೀತಗಳು ಸೋದರ ಕಲೆಗಳು ಮತ್ತು ಅವು ಪರಸ್ಪರ ಬೇರ್ಪಡಿಸಲಾಗದಷ್ಟು ಒಂದುಗೂಡಿವೆ. ಸಂಗೀತವು ಭಾವಗಳನ್ನು ಉಕ್ಕಿಸುತ್ತದೆ. ನರ್ತನವು ಅಂತಹ ಭಾವದ ದೈಹಿಕ ಅಭಿವ್ಯಕ್ತಿಯಾಗಿದೆ. ಕಾವ್ಯದಲ್ಲಿ ಪದಗಳು, ಚಿತ್ರದಲ್ಲಿ ಕುಂಚವು ಸಾಧನವಾಗುವಂತೆ ನರ್ತನದಲ್ಲಿ ಮನುಷ್ಯನ ದೇಹವೇ ಸಾಧನವಾಗಿ ಪರಿಣಮಿಸುತ್ತದೆ. ಆ ಕಾಲದ ಅನೇಕ ಸಂಗೀತ ಗ್ರಂಥಗಳನ್ನು ನೋಡಿದರೆ— ಸಾಳ್ವಗೋಪ ತಿಪ್ಪನ **ತಾಲದೀಪಿಕಾ,** ಚತುರ ಕಲ್ಲಿನಾಥನ **ಸಂಗೀತ ರತ್ನಾಕರ ಟೀಕಾ** (ಕ್ರಿ.ಶ. 1460), ಪುಂಡರೀಕ ವಿಠ್ಠಲನ **ಷಡ್ರಾಗ ಚಂದ್ರೋದಯ, ರಾಗಮಂಜರಿ, ರಾಗಮಾಲಾ** ಮತ್ತು **ನಟನ ನಿರ್ಣಯ,** ರಾಮ ಅಮಾತ್ಯನ **ಸ್ವರಮೇಳ ಕಲಾನಿಧಿ** (ಇವೆಲ್ಲವೂ ಕ್ರಿ.ಶ. 1510—60 ರೊಳಗೆ ರಚಿತವಾದವು)— ಆ ಕಾಲದಲ್ಲಿ ಸಂಗೀತಕ್ಕೆ, ಸಂಗೀತ ಶಾಸ್ತ್ರಕ್ಕೆ ವಿಶೇಷ ಪ್ರೋತ್ಸಾಹ ದೊರಕಿದ್ದಿತು ಎಂದು ತಿಳಿದು ಬರುತ್ತದೆ.

ಬಂಧಂ ಲಕ್ಷ್ಮೀನಾರಾಯಣನ **ಸಂಗೀತ ಸರ್ವೋದಯವು** (ಕ್ರಿ.ಶ. 1520) ಆ ಶಾಸ್ತ್ರದ ವ್ಯವಸ್ಥೆಗೆ ಕೊಟ್ಟ ಕಾಣಿಕೆ ಕಡಮೆಯೇನೂ ಅಲ್ಲ. ಏಕೆಂದರೆ ಅವನು ಕೃಷ್ಣದೇವರಾಯನಿಗೆ ಮತ್ತು ಅವನ ರಾಣಿವಾಸಕ್ಕೆ ಸಂಗೀತ ಮತ್ತು ನರ್ತನಾಚಾರ್ಯನಾಗಿದ್ದ. ಅರಮನೆಯ ಒಂದು ಭಾಗವಾಗಿದ್ದ ನರ್ತನ ಶಾಲೆ ಇಲ್ಲಿಯ ವರೆಗೆ ಉಳಿದುಕೊಂಡು ಬಂದಿಲ್ಲವಾದರೂ, ಪಾಯಸ್ ಕೊಟ್ಟಿರುವ ಅದರ ವರ್ಣನೆಯನ್ನು ನೋಡಿದರೆ ವಿಜಯನಗರ ಕಾಲದಲ್ಲಿ ನರ್ತನ ಕಲೆ ಪಡೆದಿದ್ದ ಸಿದ್ಧಿಯ ಅರಿವು ನಮಗೆ ಉಂಟಾಗುತ್ತದೆ. ವಿಜಯನಗರದ ದೇವಾಲಯಗಳ ಗೋಡೆ ಮತ್ತು ಕಂಬಗಳ ಮೇಲೆ, ಚಿತ್ರಪಟ್ಟಿಕೆಗಳ ಮೇಲೆ ಕೊರೆದಿರುವ ನರ್ತನ ಭಂಗಿಗಳು ಆ ಕಲೆ ಪಡೆದಿದ್ದ ಪ್ರಗತಿಯನ್ನು ಸಾರಿ ಹೇಳುತ್ತವೆ. ಪಾಯಸ್ ಕೊಟ್ಟಿರುವ ನರ್ತನ ಶಾಲೆಯ ವರ್ಣನೆ ಹೀಗಿದೆ :—

“ ತನ್ನ ರಾಣಿಯರು ನರ್ತನವನ್ನು ಕಲಿಯಲೆಂದು ರಾಜನು ಕಳುಹಿಸುವ ಸಭಾಂಗಣ ಇದು. ಇದು ಒಂದು ಉದ್ದನೆಯ ಸಭಾಂಗಣ. ಅಷ್ಟು ಅಗಲವಾಗಿಯೇನೂ ಇಲ್ಲ. ಗೋಡೆಗಳಿಂದ ಒಂದು ಮಾರುದ್ದ

ದೂರವಿರುವ ಕಂಬಗಳಿಂದ ಕೂಡಿದೆ. ಕಂಬಗಳ ಮೇಲೆಲ್ಲ ಕಲ್ಲಿನ ಶಿಲ್ಪವಿದೆ. ಅರ್ಧ ಕಂಬಗಳು, ಉಳಿದ ಭಾಗವೆಲ್ಲ ಟೊಳ್ಳು. ಮೇಲೆ ಗಿಲೀಟು. ಕಂಬಗಳ ಮೇಲೆ ಜಿಂಕೆ ಮತ್ತು ಇತರ ಪ್ರಾಣಿಗಳ ಚಿತ್ರಗಳಿವೆ. ಅವುಗಳಿಗೆ ಬಣ್ಣವನ್ನು ಹಾಕಿದ್ದಾರೆ. ಮುಖಗಳಿಗೆ ಎಳಗೆಂಪು ಬಣ್ಣ ಹಾಕಿದ್ದಾರೆ. ಆನೆಗಳ ಮೇಲೆ ಮತ್ತು ಚಿತ್ರಪಟ್ಟಿಕೆಗಳಲ್ಲಿನ ಮೂರ್ತಿಗಳೆಲ್ಲ ಕೈಯಲ್ಲಿ ಕಂಜೀರ ಹಿಡಿದು ನರ್ತಿಸುವ ಸ್ತ್ರೀಯರೇ ಆಗಿವೆ. ಚಿತ್ರಪಟ್ಟಿಕೆಗಳಲ್ಲಿನ ವಿನ್ಯಾಸಗಳು ನರ್ತನದ ಕೊನೆಯ ಭಂಗಿಯನ್ನು ಒಳಗೊಂಡಿರುತ್ತವೆ. ಪ್ರತಿ ಪಟ್ಟಿಕೆಯಲ್ಲೂ ನರ್ತಕನ ಇಂತಹ ಒಂದು ಭಂಗಿಯಿರುತ್ತದೆ. ಇದು ಸ್ತ್ರೀಯರ ಮಾರ್ಗದರ್ಶನಕ್ಕಾಗಿ. ಏಕೆಂದರೆ ಅವರು ನರ್ತನ ಮುಗಿದನಂತರ ಯಾವ ಭಂಗಿಯಲ್ಲಿ ನಿಲ್ಲಬೇಕೆಂಬುದನ್ನು ಮರೆತುಬಿಟ್ಟಿದ್ದರೆ ಯಾವುದಾದರೂ ಚಿತ್ರಪಟ್ಟಿಕೆಯನ್ನು ನೋಡಿ ಕೊನೆಯ ಭಂಗಿ ಯಾವುದೆಂಬುದನ್ನು ತಿಳಿದುಕೊಳ್ಳಬಹುದು; ಇದರಿಂದ ತಾವು ಮಾಡಬೇಕಾದ್ದು ಏನನ್ನು ಎಂಬುದನ್ನು ಮನಸ್ಸಿನಲ್ಲಿಟ್ಟುಕೊಳ್ಳಲು ಸಾಧ್ಯವಾಗುತ್ತದೆ. ..................ಈ ಮನೆಯ ಇನ್ನೊಂದು ತುದಿಯಲ್ಲಿ ಒಂದು ವಿಶ್ರಾಂತಿ ಗೃಹವಿದೆ. ಅಲ್ಲಿ ಸ್ತ್ರೀಯರು ತಮ್ಮ ಅಂಗಾಂಗಗಳನ್ನು ಚೆನ್ನಾಗಿ ಚಾಚಲು ಮತ್ತು ಸಡಿಲಮಾಡಿಕೊಳ್ಳಲು ಅನುಕೂಲತೆಯಿದೆ. ಅಲ್ಲಿ ಅವರ ನರ್ತನ ಇನ್ನೂ ಹೆಚ್ಚು ಲಲಿತವಾಗಬೇಕಾದರೆ ಇಡೀ ದೇಹವನ್ನು ವಿಧೇಯವಾಗಿ ಮಾಡಿಕೊಳ್ಳುವ ರೀತಿ ಹೇಗೆ ಎಂಬುದನ್ನು ಕಲಿಸಿಕೊಡಲಾಗುತ್ತದೆ. ಇನ್ನೊಂದು ತುದಿಯಲ್ಲಿ ನರ್ತನವನ್ನು ನೋಡಲು ರಾಜ ಕುಳಿತುಕೊಳ್ಳುತ್ತಾನೆ. ಎಲ್ಲ ನೆಲಗಳೂ ಗೋಡೆಗಳೂ ಚಿನ್ನದಿಂದ ಆವೃತವಾಗಿವೆ. ಗೋಡೆಯ ಮಧ್ಯೆ 12 ವರ್ಷದ ಹುಡುಗಿಯ ಗಾತ್ರದ ಒಂದು ಚಿನ್ನದ ವಿಗ್ರಹವಿದೆ. ಅದು ನರ್ತನದ ಕೊನೆಯ ಭಂಗಿಯಲ್ಲಿರುವಂತೆ ಕೈಗಳನ್ನು ಇಟ್ಟುಕೊಂಡಿದೆ.

ಈ ವಿಸ್ತಾರವಾದ ವರ್ಣನೆಯನ್ನು ನೋಡಿದರೆ, ಭರತನ ನಾಟ್ಯಶಾಸ್ತ್ರದಲ್ಲಿ ನಿರೂಪಿಸಿರುವ ಬಹುಮಟ್ಟಿನ ಎಲ್ಲ ಭಂಗಿಗಳನ್ನೂ ಆ ಚಿತ್ರಪಟ್ಟಿಗಳಲ್ಲಿ ಎಚ್ಚರಿಕೆಯಿಂದ ಮತ್ತು ಬಹು ಸುಂದರವಾಗಿ ರೂಪಿಸಿದ್ದರು ಎಂದು ಊಹಿಸುವುದರಲ್ಲಿ ಅಂತಹ ತಪ್ಪೇನೂ ಕಾಣದು. ಚಿದಂಬರಂ ದೇವಸ್ಥಾನದ ಗೋಪುರದ ಮೇಲಿನ ಚಿತ್ರಪಟ್ಟಿಕೆಗಳಲ್ಲಿ 108 ನರ್ತನ ಭಂಗಿಗಳ ಶಿಲ್ಪವಿರುವುದು ಮೇಲಿನ ಊಹೆಯನ್ನು ಸಮರ್ಥಿಸುತ್ತದೆ.

**ಚಿತ್ರಕಲೆ**

ಹಂಪೆಯ ಪಂಪಾಪತಿ ದೇವಸ್ಥಾನದ ರಂಗಮಂಟಪದ ಮೇಲ್ಛಾವಣಿಯಲ್ಲಿನ ಕೆಲವು ತಂಜಾವೂರ್ ಶೈಲಿಯ ಚಿತ್ರಗಳು ದೇಶೀಯವಾಗಿದ್ದು, ಕಲ್ಯಾಣಸುಂದರ ಮತ್ತು ಪಾರ್ವತಿಯರ ದಿವ್ಯ ವಿವಾಹವನ್ನು ನಿರೂಪಿಸುತ್ತವೆ. ಇವನ್ನು ಬಿಟ್ಟರೆ ಹಂಪೆಯಲ್ಲಿ ಈ ಕಾಲಕ್ಕೆ ಸೇರಿದ ಹಳೆಯ ಚಿತ್ರಕಲೆಯ ಒಳ್ಳೆಯ ನಿದರ್ಶನಗಳು ಇಲ್ಲವೇ ಇಲ್ಲ. ಆನೆಗುಂದಿ ಅರಮನೆಯಲ್ಲಿರುವ ಕೆಲವು ಚಿತ್ರಗಳು ಒರಟಾಗಿವೆ. ಇವು ವಿಜಯನಗರ ಕಾಲಕ್ಕಿಂತ ಹಿಂದಿನವು. ಹೆಚ್ಚೆಂದರೆ ಇವು ಬಂಗಾಳದ ಕುಂಭ ಚಿತ್ರಗಳನ್ನು ಹೋಲುತ್ತವೆ. ಈ ಸಂದರ್ಭದಲ್ಲಿ, ಲೇಪಾಕ್ಷಿಯಂತಹ ಕಡೆ ಜೈನ ಸಂಪ್ರದಾಯಗಳು ಸ್ಪಷ್ಟವಾಗಿದ್ದರೂ ಎಲ್ಲಿಯೂ ಅಜಂತದ ಮಾದರಿಯನ್ನನುಸರಿಸಿ ಚಿತ್ರಕಲೆಯನ್ನು ಬೆಳಸುವ ಯಾವ ಪ್ರಯತ್ನವೂ ನಡೆಯಲಿಲ್ಲ ವೆಂಬುದನ್ನು ಗಮನಿಸಬಹುದಾಗಿದೆ. ಲೇಪಾಕ್ಷಿಯ ವೀರೇಶ್ವರ ದೇವಸ್ಥಾನ (ಕ್ರಿ. ಶ. 1535), ಸೋಮಪಲ್ಲಿಯ ಚನ್ನಕೇಶವ (ಕ್ರಿ.ಶ. 1535). ಕಂಚಿಯ ವರದರಾಜ, ಹಂಪಿಯ ಪಂಪಾಪತಿ, ತಂಜಾವೂರಿನ ಬೃಹದೇಶ್ವರ—(ಕ್ರಿ.ಶ. 1546-1547)—ಇಲ್ಲಿಯ ಚಿತ್ರಗಳು ಈ ಕಾಲದ ಉಳಿದು ಬಂದಿರುವ ಮಾದರಿಗಳು. ಇವು ಸಿತ್ತಲವಾಸನ್. ಮಾಮಂಡೂರ್, ಎಲ್ಲೋರ ವರ್ಣ ಚಿತ್ರಗಳಿಗಿಂತ ಭಿನ್ನವಾದ ಶೈಲಿಯನ್ನು ಸೂಚಿಸುತ್ತವೆ. ಫ್ . ಡ-ಜರಿಕ್ ಗಮನಿಸಿದಂತೆ, ಎರಡನೆಯ ವೆಂಕಟನ ಕಾಲದಲ್ಲಿ

(ಕ್ರಿ.ಶ. 1584–1614), ಅವನ ಆಸ್ಥಾನದ ಅಲಂಕರಣಕ್ಕಾಗಿ ಪೋರ್ಚುಗೀಸ್ ಚಿತ್ರಕಾರರನ್ನು ಬಹು ಸಂಖ್ಯೆಯಲ್ಲಿ ಕರೆಯಿಸಿಕೊಳ್ಳಲಾಯಿತು.

ಇದ್ದುದರಲ್ಲಿ ಅತ್ಯುತ್ತಮ ಚಿತ್ರಗಳೆಂದರೆ ಅಚ್ಯುತರಾಯನ ಕಾಲದಲ್ಲಿ ಬರೆಯಿಸಲಾದ ಲೇಪಾಕ್ಷಿಯ (ಕ್ರಿ.ಶ. 1535) ಚಿತ್ರಗಳು. ಇವುಗಳಲ್ಲಿ ದೇಶೀಯವಾದ ತಂಜಾವೂರ್ ಶೈಲಿ, ಕುಂಭ ಮತ್ತು ಜೈನ ಶೈಲಿಗಳನ್ನು ಬಿಡಿಯಾಗಿ ಮತ್ತು ಪರಸ್ಪರ ಸಂಯೋಗಗಳಲ್ಲಿ ಕಾಣಬಹುದು. ಕುಂಭ ಮತ್ತು ಜೈನ ಶೈಲಿಗಳು ಅಭಿವ್ಯಕ್ತಿಯಲ್ಲಿ ಪ್ರಾಕ್ತನವಾಗಿದ್ದರೂ ತಂಜಾವೂರ್ ಶೈಲಿಯು ರೇಖೆ ಮತ್ತು ಲಾಲಿತ್ಯದಲ್ಲಿ ಅಪಾರವಾದ ಬಳುಕನ್ನು ಸಿದ್ಧಿಸಿಕೊಂಡಿದ್ದುದರಿಂದ ಉಳಿದೆರಡು ಶೈಲಿಗಳಿಗಿಂತ ಹೆಚ್ಚು ಐಂದ್ರಿಯ ವಾಗಿರುತ್ತದೆ. ಲೇಪಾಕ್ಷಿಯಲ್ಲಿ ಪಡೆದಿರುವ ಈ ಸಿದ್ಧಿ ತೆರಬೇಕಾದ ದಂಡವೆಂದರೆ ಆ ಕಲೆ ಓಜಸ್ಸನ್ನು ಶಕ್ತಿಯನ್ನು ಕಳೆದುಕೊಂಡದ್ದು. ಅದರಲ್ಲೂ ಶಿವ-ಪಾರ್ವತಿಯರ, ಶೈವ ಸಿದ್ಧಾಂತದ ಅನೇಕ ಕತೆಗಳಲ್ಲಿ ಬರುವ ಇತರ ದೇವತೆಗಳ ದೈವಿಕ ಮೂರ್ತಿಗಳನ್ನು ಚಿತ್ರಿಸಿರುವಲ್ಲಿ ಇದು ಸ್ಪಷ್ಟವಾಗುತ್ತದೆ.

## ಮುಸ್ಲಿಮ್ ಕಲೆ

ಮುಸ್ಲಿಮ್ ವಾಸ್ತು ಶಿಲ್ಪದಲ್ಲಿ ಪ್ರಯೋಜನೋದ್ದೇಶ ಮತ್ತು ಋತು ಪರಿವರ್ತನೆಗಳಿಗೆ ತಕ್ಕಂತಹ ನಿಯೋಜನೆ—ಇವು ಪ್ರಮುಖ ಲಕ್ಷಣಗಳಾಗಿ ಕಾಣಿಸುತ್ತವೆ. (ಹಿಂದೂ ವಾಸ್ತು ಶಿಲ್ಪದಲ್ಲಿ ಇವು ಅಷ್ಟು ಪ್ರಮುಖವಲ್ಲ). ಮುಸ್ಲಿಮ್ ಮಂದಿರಗಳನ್ನು ಕಣ್ಣಿಗೆ ಅಂದವಾಗಿ ಕಾಣುವಂತೆ ಮಾಡಲು ಶ್ರಮ ಮತ್ತು ಹಣವನ್ನು ಲೆಕ್ಕಿಸಲಿಲ್ಲ. ಒಟ್ಟಿನಲ್ಲಿ, ದೆಹಲಿ ಮತ್ತು ದಕ್ಷಿಣದ ಬಹಮನಿ ರಾಜ್ಯದಂತಹ ಮುಸ್ಲಿಮ್ ರಾಜ್ಯಗಳ ರಾಜಕೀಯ ಸಂಬಂಧವು ಕ್ರಿ. ಶ. 1347 ರಲ್ಲಿ ಕಡಿದುಹೋದರೂ ದೆಹಲಿಯ ವಾಸ್ತುಶಿಲ್ಪದ ಮೇಲ್ಪಂಕ್ತಿಯನ್ನು ದಕ್ಷಿಣದಲ್ಲಿ ಅನುಕರಿಸಿದರು. ಹಿಂದೂ ರಾಜರಂತೆ ಬಹಮನಿ ದೊರೆಗಳೂ ಅವರ ಉತ್ತರಾಧಿಕಾರಿಗಳೂ ಕಲೆ ಸಾಹಿತ್ಯ, ವಿಜ್ಞಾನ ಮತ್ತು ಪಾಂಡಿತ್ಯಗಳ ಉದಾರಪೋಷಕರಾಗಿದ್ದರು. ಆರಂಭದಲ್ಲಿ, ಬಹಮನಿ ರಾಜ್ಯದ ವಾಸ್ತು ಶೈಲಿಯು ಇತರ ಯಾವುದೇ ಮುಸ್ಲಿಮ್ ವಾಸ್ತುಶಿಲ್ಪದ 'ಪ್ರಾಂತೀಯ ಶೈಲಿ'ಗಿಂತಲೂ ಕಡಮೆ ಪ್ರಮಾಣದಲ್ಲಿ ತನ್ನ ಸುತ್ತಮುತ್ತಣ ಶೈಲಿಗಳಿಂದ ಪ್ರಭಾವಿತ ವಾಗಿದ್ದಿತು. ಬಹಮನಿಗಳ ರಾಜ್ಯದಲ್ಲಿ ಯುರೋಪ್ ಮತ್ತು ಪರ್ಷಿಯದಿಂದ ಬಂದ ಶಿಲ್ಪಿಗಳು, ಅವರ ಸೈನ್ಯದಲ್ಲಿ ಅಲ್ಲಿಂದಲೇ ಬಂದ ಕೂಲಿ ಸಿಪಾಯಿಗಳು ಕೆಲಸ ಮಾಡುತ್ತಿದ್ದರು. ಗುಲ್ಬರ್ಗದ ಜಾಮಿ ಮಸೀದಿ, ದೌಲತಾಬಾದಿನ ಚಾಂದ್ ಮಿನಾರ್ (ಕ್ರಿ.ಶ. 1435), ಪರೆಂದದ ಕೋಟೆ, ಬೀದರಿನ ಮಹಮುದ್ ಗವಾನನ ವಿದ್ಯಾಲಯ ಮುಂತಾದ ಮುಖ್ಯವಾಗಿ ಪರ್ಷಿಯನ್ ಶೈಲಿಯ ಮಸೀದಿಗಳನ್ನು, ಸಮಾಧಿ ಭವನಗಳನ್ನು ಕಟ್ಟಲು ಆ ಶಿಲ್ಪಿಗಳನ್ನು ನೇಮಿಸಿಕೊಳ್ಳಲಾಗಿದ್ದಿತು.

ಕ್ರಿ.ಶ. ಹದಿನೈದನೆ ಶತಮಾನದ ಉತ್ತರಾರ್ಧದ ಹೊತ್ತಿಗೆ ಬಿಜಾಪುರದ ವಾಸ್ತುಶಿಲ್ಪದ ಮೇಲೆ ದಖನ್ನಿನ ಹಿಂದೂ ಸಂಪ್ರದಾಯಗಳು ತಮ್ಮ ಪ್ರಭಾವವನ್ನು ಸ್ಥಾಪಿಸಿಕೊಳ್ಳಲಾರಂಭಿಸಿದುವು. ಇದಕ್ಕೆ ಕಾರಣ ದೇಶೀಯ ಕೆಲಸಗಾರರನ್ನು ಹೆಚ್ಚು ಸಂಖ್ಯೆಯಲ್ಲಿ ನೇಮಿಸಿಕೊಳ್ಳಲಾರಂಭಿಸಿದ್ದು. ಕ್ರಿ.ಶ, 1294–1347 ಈ ಅವಧಿಯಲ್ಲಿ ಅನೇಕ ಹಿಂದೂ ದೇವಾಲಯಗಳು ಕೋಟೆಗಳು ಮಸೀದಿಗಳಾಗಿ ಸಮಾಧಿಭವನಗಳಾಗಿ ಪರಿವರ್ತಿತವಾದುವು. ಉದಾಹರಣೆಗೆ ದೌಲತಾಬಾದಿನ ಜಾಮಿ ಮಸೀದಿ (ಕ್ರಿ.ಶ. 1315), ಬೋಧನ್ನಿನ ದೇವಲ್ ಮಸೀದಿ (ಮಹಮದ್ ತೊಗಲಖನ ಕಾಲ) ಮತ್ತು ರಾಯಚೂರು (ಕ್ರಿ.ಶ. 1294) ಮತ್ತು ಮುದ್ಗಲ್ಲಿನ ಕೋಟೆಗಳು. ಇವೆಲ್ಲವೂ ಹಿಂದಿನ ಹಿಂದೂ ದಳವಾಯಿಗಳು ಮತ್ತು ಯಾದವ ದೊರೆಗಳು ಕಟ್ಟಿಸಿದಂಥವು.

ಗುಲ್ಬರ್ಗ ಮತ್ತು ಬೀದರ್‌ಗಳು ಮುಸ್ಲಿಮ್ ದೊರೆಗಳ ಸಮಾಧಿ ಮತ್ತು ಸಮಾಧಿಭವನಗಳಿಗೆ ಕೇಂದ್ರಗಳಾಗಿದ್ದವು. ಅಲಂಕರಣದ ವಿವರಗಳಲ್ಲಿ ಕಾಲದಿಂದ ಕಾಲಕ್ಕೆ ವ್ಯತ್ಯಾಸಗಳು ನಡೆದಿರುವುದನ್ನು ಗುರುತಿಸಬಹುದು. ಮೊದಲನೆಯದಾಗಿ, ಸುಲ್ತಾನ್ ಹಸನ್ನನ ಸಮಾಧಿಯು ದೆಹಲಿಯ ತೊಗಲಖಿನ ಶೈಲಿಯನ್ನು ಅನುಕರಿಸುತ್ತದೆ. ಗಯಾಸುದ್ದೀನನ ಸಮಾಧಿಯು (15 ನೆ ಶತಮಾನದ ಆದಿ ಅಥವಾ 14ನೆ ಶತಮಾನದ ಅಂತ್ಯ) ಪ್ರಾರ್ಥನೆಯ ಗೂಡಿನ ಸುತ್ತ ಇರುವ ಅಲಂಕರಣದ ವಿನ್ಯಾಸಗಳು ಹಿಂದೂ ಶೈಲಿಯವಾಗಿವೆ. ಮುಂದಿನ ಘಟ್ಟದಲ್ಲಿ, ಅದರಲ್ಲೂ ಫಿರೋಜ್‌ಷಹ ಮತ್ತು ಅವನ ಮನೆತನದವರ ಸಮಾಧಿಭವನದಲ್ಲಿ ಹಿಂದೂ ಪ್ರಭಾವ ಬೆಳೆಯುತ್ತಿರುವುದನ್ನು ಗುರುತಿಸಬಹುದು. ಏಕೆಂದರೆ ಹೊರಭಾಗದಲ್ಲಿ ಅದು ಹಿಂದೂ ಆಗಿದೆ; ಒಳಗೆ ಅಲಂಕರಣದಲ್ಲಿ ಪರ್ಷಿಯನ್ ಆಗಿದೆ. ಒಳಭಾಗದ ಹೊಳೆ ಹೊಳೆಯುವ ಗಾರೆಕೆಲಸ ಮತ್ತು ವರ್ಣಾಲಂಕರಣಗಳು ಪರ್ಷಿಯದ ಪುಸ್ತಕಗಳ ರಟ್ಟುಗಳ ಮತ್ತು ಕಸೂತಿಕೆಲಸಗಳ ಉಜ್ವಲ ವಿನ್ಯಾಸಗಳನ್ನು ನೆನಪಿಗೆ ತರುತ್ತವೆ. (ಕೆ.ಎ.ಎನ್. ಶಾಸ್ತ್ರಿ ಅವರ A History of South India P. 478).

ಬೀದರಿನ ವಾಸ್ತುಶಿಲ್ಪವು ಅಹಮದ್ ಷಹ ವಾಲಿಯ ಆಡಳಿತದಿಂದ (ಕ್ರಿ.ಶ. 1422–35) ಆರಂಭವಾಗುತ್ತದೆ. ಮೊದಮೊದಲ ಸಮಾಧಿಭವನಗಳು ಈಚಿನ ಬಹಮನಿ ದೊರೆಗಳ ಸಮಾಧಿ ಭವನಗಳನ್ನು ಹೋಲುತ್ತವೆಯಾದರೂ " ಅವುಗಳ ಪ್ರಮಾಣ ಇನ್ನೂ ದೊಡ್ಡದು, ಗುಮ್ಮಟಗಳು ಇನ್ನೂ ಎತ್ತರ ಮತ್ತು ಹೆಚ್ಚು ಉಬ್ಬಿವೆ. ಅವುಗಳ ಮುಖಭಾಗಗಳನ್ನು ಅನೇಕ ವಿಧವಾದ ಕಮಾನುಗೂಡುಗಳಿಂದ ಅಥವಾ ಜಾಲಂಧ್ರ ಕಿಟಕಿಗಳಿಂದ ಅಲಂಕರಿಸಿರುತ್ತಾರೆ ", ಇವುಗಳಲ್ಲೆಲ್ಲ ಬಹು ಸುಂದರವಾದುದು ಅಹಮದ್ ವಾಲಿಯ ಸಮಾಧಿ ಭವನವೇ ಆಗಿದೆ. ಅದರ ಒಳಭಾಗವು "ಪರ್ಷಿಯನ್ ಶೈಲಿಯ ಉಜ್ವಲ ವರ್ಣಚಿತ ಗಳಿಂದ ಅಲಂಕೃತವಾಗಿದೆ ". ತಖ್ತ್‌ಮಹಲ್ (ಅರಮನೆ)ಯ ಮುಖಭಾಗವು ಹುಲಿ ಮತ್ತು ಹುಟ್ಟುತ್ತಿರುವ ಸೂರ್ಯನ ಲಾಂಛನದಿಂದ ಅಲಂಕೃತವಾಗಿದೆ. ಪರ್ಷಿಯದ ರಾಜಲಾಂಛನವು ಹುಟ್ಟುತ್ತಿರುವ ಸೂರ್ಯ ಸಮೇತವಾದ ಸಿಂಹದ ಚಿತ್ರವಾಗಿದ್ದಿತು. ದಖಿನಿನಲ್ಲಿ ಸಿಂಹಗಳಿಲ್ಲವಾದುದರಿಂದ ಕಲಾವಿದರು ಸಹಜವಾಗಿಯೇ ಸಿಂಹದ ಬದಲು ಹುಲಿಯನ್ನು ತಂದರು. ಅಹಮದ್ ಷಹ ವಾಲಿಯ ಸಮಾಧಿಯಲ್ಲದೆ ಅಲ್ಲಾ ಉದ್ದೀನ್', ಹುಮಾಯೂನ್, ನಿಜಾಮುಷಹ, ಮೂರನೆಯ ಮಹಮದ್ ಷಹ ಮತ್ತು ಕಲೀಮುಲ್ಲಾ ಇವರ ಸಮಾಧಿಗಳೂ ಅಲ್ಲಿವೆ. ಅಲ್ಲಾ ಉದ್ದೀನ್ ಅಹಮದ್‌ಷಹನ ಕಾಲದ (ಕ್ರಿ.ಶ. 1436–58) ದೌಲತಾಬಾದಿನ ಚಾಂದಮಿನಾರ್ ಕಟ್ಟಡವು ಸಮಾಧಿಯ ಮುಂಭಾಗದ ಮುಖಭಾಗಕ್ಕೆ ಬಹಳ ಪ್ರಸಿದ್ಧವಾಗಿದೆ. ಮುಂದೆ ನಿರ್ಮಾಣವಾದ ಲಾಹೋರ್ ಕೋಟೆಯ ಮಾದರಿಯಲ್ಲಿ ಆ ಭಾಗವನ್ನು ನೀಲವರ್ಣದ ಬೇರೆ ಬೇರೆ ಛಾಯೆಯ ಮೆರುಗು ಬಿಲ್ಲೆಗಳಿಂದ ಅಲಂಕರಿಸಿದ್ದಾರೆ. ಬೀದರಿನ ಗವಾನನ ಮದರಸಾ ಮಂದಿರವು (ಕ್ರಿ.ಶ. 1472) 205 × 180 ಅಡಿಯಷ್ಟು ಪ್ರದೇಶವನ್ನು ವ್ಯಾಪಿಸಿದೆ. ಇದರ ಬಯಲು ಅಂಗಳದ ನಾಲ್ಕೂ ಕಡೆಗಳಲ್ಲಿ ಉಪನ್ಯಾಸ ಮಂದಿರಗಳು, ಪ್ರಾರ್ಥನಾ ಮಂದಿರ, 3,000 ಹಸ್ತಪ್ರತಿಗಳಿದ್ದ ಗ್ರಂಥಾಲಯ, ಪ್ರಾಧ್ಯಾಪಕರ ಕೊಠಡಿಗಳು, ವಿದ್ಯಾರ್ಥಿಗಳ ಮಲಗುಕೋಣೆಗಳನ್ನು ಕಟ್ಟಿದ್ದರು. ವಿಶೇಷವಾಗಿ ಅದರ ಮುಖಭಾಗ ಮತ್ತು ಮಿನಾರತ್ತುಗಳನ್ನು ಸೂಡುಚಿತ್ರದ ಬಿಲ್ಲೆಗಳಿಂದ (encaustic tiles) ಸೊಗಸಾಗಿ ಅಲಂಕರಿಸಿದ್ದರು. ಈ ಮೂರು ಮಹಡಿಯ ಮಂದಿರವು ಕ್ರಿ.ಶ. 1696 ರಲ್ಲಿ ಉಂಟಾದ ಸಿಡಿಲ ಹೊಡೆತದಿಂದಲೋ ಔರಂಗಜೇಬನ ಕಾಲದ ಸಿಡಿಮದ್ದಿನ ಆಸ್ಫೋಟನೆಯಿಂದಲೋ ಬಹಳ ನಷ್ಟವನ್ನನುಭವಿಸಿತು.

ಬೀದರಿನ ವಾಸ್ತು ಶಿಲ್ಪ ವೈಭವಕ್ಕೆ ಬರೀದ್ ದೊರೆಗಳೂ ಕಾಣಿಕೆ ಸಲ್ಲಿಸಿದ್ದಾರೆ. ಖಾಸಿಮ್ ಬರೀದ್, ಅಮೀರ್ ಬರೀದ್, ಆಲಿಬರೀದ್ ಮತ್ತು ಇಬ್ರಾಹಿಮರ ಸಮಾಧಿಗಳು- ಈ ಮಂದಿರಗಳಲ್ಲದೆ, ಆಲಿ ಬರೀದನ ' ರಂಗೀನ್ ' ಮಹಲ್ (ಹೀಗೆ ಕರೆಯಲು ಕಾರಣ ಅಲ್ಲಿ ಸಿಕ್ಕಾಬಟ್ಟೆ ಉಪಯೋಗಿಸಿರುವ ಬಣ್ಣಬಣ್ಣದ

ಬಿಲ್ಲೆಗಳು) ಸೊಗಸಾದ ಮರದ ಕೆತ್ತನೆ ಕೆಲಸಕ್ಕೂ 'ಮುತ್ತುಗಳ—ತಾಯಿ' ಕೆಲಸಕ್ಕೂ ಪ್ರಸಿದ್ಧವಾಗಿದೆ. ಒಳಕೊಠಡಿ ಅಥವಾ ರಾಜನ ವಾಸಗೃಹವು ನಕ್ಷತ್ರಾಕಾರದಲ್ಲಿದೆ, ಮತ್ತು ಯಾಜ್ಡಾನಿಯವರು ಸೂಚಿಸುವಂತೆ ಅದರ ನಕ್ಷೆ ಬಹುಶಃ ಹಿಂದೂ ಶಿಲ್ಪಿಯೊಬ್ಬನಿಂದ ಸಿದ್ಧಗೊಂಡಿದೆ.

ಬಿಜಾಪುರದ ಆದಿಲ್‌ಷಾಹಿ ದೊರೆಗಳು ಬಿಜಾಪುರವನ್ನು ಅತ್ಯದ್ಭುತವಾಗಿ ಕಟ್ಟಿದರು. ಕಾರಣ ಅದು ಅವರ ಆಡಳಿತದ ಸುಭದ್ರ ಕೇಂದ್ರವಾಗಿದ್ದಿತು. ಬಿಜಾಪುರವಲ್ಲಿ ಅರಮನೆಗಳು, ಮಸೀದಿಗಳು, ಹೆಬ್ಬಾಗಿಲುಗಳು ಮತ್ತು ಟಂಕಸಾಲೆಗಳನ್ನು ಕಾಣಬಹುದು. ಆದಿಲ್‌ಷಹನಿಂದ ಆರಂಭಗೊಂಡು ಅಪೂರ್ಣವಾಗಿಯೇ ಉಳಿದ ಜಾಮಿ ಮಸೀದಿಯು (ಕ್ರಿ.ಶ. 1565) ಒಂದು ಬಹು ವಿಶಿಷ್ಟವಾದ ಕಟ್ಟಡ. ಭಾರಿ ಆಧಾರಸ್ತಂಭಗಳ ಮೇಲೆ ನಿಂತಿರುವ ಪ್ರಾರ್ಥನಾ ಮಂದಿರ, ಅದರ ಸೊಗಸಾದ ಹಜಾರಗಳು ಮತ್ತು ಮುಚ್ಚುಹಾದಿ, ಮೇಲ್ಭಾಗದಲ್ಲಿರುವ ಭಾರಿ ಗುಮ್ಮಟ ಇವು—ಅಲ್ಲಿ ಗಮನಾರ್ಹವಾಗಿವೆ. ಅದರ ಅಲಂಕರಣ ವಿರಳವಾಗಿದ್ದರೂ ಅದರ ಗೋಡೆಗಳು ಹೊಳೆಯುತ್ತಿರುವ ಲೇಪನದಂತೆ ಪ್ರಜ್ವಲಿಸುತ್ತವೆ. ಮಧ್ಯದ ಅಂಗಳವನ್ನು, ಬಹುಶಃ ಈಚೆಗೆ ಯಾರೋ, ಕಣ್ಣಿಗೆ ಕುಕ್ಕುವಂತಹ ವಿನ್ಯಾಸಗಳಲ್ಲಿ ಬಣ್ಣ ಮತ್ತು ಚಿನ್ನಗಳಲ್ಲಿ ಅಲಂಕರಿಸಿದ್ದಾರೆ. ಉಳಿದ ಭಾಗಗಳಲ್ಲಿ ಕಾಣುವ ಸರಳ ಗಂಭೀರ ಅಭಿರುಚಿಗೆ ಇದು ಹೊಂದಿಕೆಯಾಗುವುದಿಲ್ಲ. ಎರಡನೆಯ ಇಬ್ರಾಹಿಮ್ ಸುಲ್ತಾನನ ಗೋರಿ ಮತ್ತು ಅದಕ್ಕೆ ಹೊಂದಿಕೊಂಡಂತಿರುವ ಮಸೀದಿ—ಇದು ಅತ್ಯಂತ ಸೊಗಸಾದ ಯಾವುದೇ ಮೊಗಲ್ ಕಟ್ಟಡವನ್ನೂ ಮರೆಯಿಸಬಲ್ಲದು. ಅದರ ಸ್ಥಳೀಯ ಕುಶಲಕರ್ಮಿಗಳ ಕೆತ್ತನೆಯು ಅಲಂಕಾರಗಳು ಮತ್ತು ಕಲೆಗಾರಿಕೆಯು ಒಪ್ಪ ಅದ್ಭುತವಾಗಿದೆ. ಆದರೆ ಗೋಳಗುಂಬಜ್ ಇಂಜಿನಿಯರಿಂಗ್ ಕ್ಷೇತ್ರದಲ್ಲಿ ಒಂದು ಆಶ್ಚರ್ಯವೇ ಸರಿ. ಅದರ 120 ಅಡಿ ವ್ಯಾಸದ ಪಿಸುಗುಟ್ಟುವ ಕೈಸಾಲೆ (whispering gallery) ಮತ್ತು 198 ಅಡಿ ಎತ್ತರದ ಭಾರಿ ಗುಮ್ಮಟ ಇವು ಬಿಜಾಪುರದ ಕೆಲಸಗಾರರ ಕೌಶಲಕ್ಕೆ ಸಾಕ್ಷಿಯಾಗಿರುವುದು ಮಾತ್ರವಲ್ಲದೆ, ಎಲ್ಲೋರದ ಕೈಲಾಸದ ದೇವಾಲಯದಂತೆ, ಬರೀ ಭಾರತದ ಮಾತ್ರವಲ್ಲ, ಇಡೀ ವಿಶ್ವದ ವಾಸ್ತುಕೌತುಕಗಳಲ್ಲಿ ಒಂದಾಗಿದೆ. ಮುಹಮದ್ ಅಲಿಷಹನ ಕಾಲದಲ್ಲಿ (ಕ್ರಿ.ಶ. 1627—56) ಬಿಜಾಪುರವು ತನ್ನ ಕಲಾ ಮತ್ತು ರಾಜಕೀಯ ವೈಭವದ ತುತ್ತತುದಿಯನ್ನು ಮುಟ್ಟಿತು. ಇದರ ಬುರುಜುಗಳು ಅಷ್ಟಕೋನಾಕಾರವಾಗಿದ್ದು ಏಳು ಹಂತಗಳುಳ್ಳವಾಗಿವೆ. ಅವನ ತಂದೆ ಎರಡನೆಯ ಇಬ್ರಾಹಿಮನು ಇಬ್ರಾಹಿಮ್ ರೋಜ ಎಂಬ ಸುಂದರವಾದ ಎತ್ತರವಾದ ಕಟ್ಟಡವನ್ನು ಎತ್ತಿಸಿದ್ದ. ಇದು ಅಲಂಕರಣ ಮತ್ತು ಶ್ರೀಮಂತ ವೈಭವಗಳಲ್ಲಿ ಕೊನೆಯ ಮಾತು ಎಂದು ಹೇಳಬಹುದು. ಆದ್ದರಿಂದ ಮುಹಮದ್ ಬೇರೊಂದು ದಾರಿಯನ್ನು ಹಿಡಿದನು. ಇವನು ಅಗಾಧ ಗಾತ್ರದಿಂದ ಅಲಂಕಾರ ಮತ್ತು ಉಳಿದ ಎಲ್ಲವನ್ನೂ ಮೀರಿಸಲು ಪ್ರಯತ್ನಪಟ್ಟನು. ಗೋಳಗುಂಬಜ್ ಕಟ್ಟಡದ ಮಹಾಗುಮ್ಮಟವು ಅದರ ಕೆಳಗಿನ 'ಪಿಸುಮಾತಿನ ಕೈಸಾಲೆ' ಯಂತೆಯೇ ಆಶ್ಚರ್ಯಕರವಾಗಿದೆ. ಶ್ರೀ ಕಸೆನ್ಸ್ ಬರೆಯುತ್ತಾರೆ—ಗೋಳಗುಂಬಜ್ ಇಬ್ರಾಹಿಮ್ ರೋಜಕ್ಕೆ ಪ್ರತಿಯಾಗಿ ನಿಲ್ಲುತ್ತದೆ. ಒಂದರ ಕಲ್ಪನೆಯು ಗಂಡು ಪೌರುಷ ಇನ್ನೊಂದರ ಕೋಮಲ ಹೆಣ್ತನಕ್ಕೆ ವಿರೋಧವಾಗಿರುವಂತೆ ಕಂಡುಬರುತ್ತದೆ.

ಮೂಲಲೇಖಕರು : ಶ್ರೀ ಪಿ. ಶಾಮರಾವ್
ಅನುವಾದಕರು : ಡಾ॥ ಎಂ. ಚಿದಾನಂದಮೂರ್ತಿ

# ಕರ್ಣಾಟಕ ಸಂಗೀತ

## (ವಿಜಯನಗರದ ಕಾಲ)

ದಕ್ಷಿಣ ಭಾರತದ ಸಂಗೀತವು ಕರ್ಣಾಟಕ ಸಂಗೀತವೆಂದು ಪ್ರಸಿದ್ಧವಾಗಿದೆ. ಇದು ಉತ್ತಮ ಶಾಸ್ತ್ರೀಯ ಬುನಾದಿಯ ಮೇಲೆ ರೂಪತಾಳಿ, ವಿಶಾಲವಾಗಿ ಬೆಳೆದು ಬಂದಿದೆ. ಈ ಸಂಗೀತವು ವೇದಗಳ ಕಾಲದಲ್ಲಿ ಉಗಮ ಹೊಂದಿತೆಂದು ಇದರ ದೀರ್ಘ ಚರಿತ್ರೆ ತೋರುತ್ತದೆ. ಹದಿನಾಲ್ಕನೆ ಶತಮಾನದಲ್ಲಿ ದಕ್ಷಿಣ ಭಾರತದ ಸಂಗೀತಕ್ಕೆ ಕರ್ಣಾಟಕ ಸಂಗೀತವೆಂಬ ಹೆಸರು ಬಳಕೆಗೆ ಬಂತು. ಕಾಲಕ್ರಮಾನುಗತವಾಗಿ ಕರ್ಣಾಟಕವು ಕರ್ಣಾಟಕ ಸಂಗೀತಕ್ಕೆ ಇತ್ತ ಕೊಡುಗೆಯ ಪರಿಶೀಲನೆ ಸಂಗೀತಾಭಿಮಾನಿಗಳಿಗೆ ಬಹಳ ಸ್ವಾರಸ್ಯಕರವಾಗಿದೆ.

ಭರತನು ' ನಾಟ್ಯಶಾಸ್ತ್ರ ' ವನ್ನು ಬರೆದ ಮೇಲೆ ಮೊದಲಾಗಿ ಕಂಡುಬರುವ ಮುಖ್ಯವಾದ ಗ್ರಂಥ, ಮತಂಗನ ' ಬೃಹದ್ದೇಶಿ '. ಈ ಗ್ರಂಥದಲ್ಲಿ.ಮತಂಗನು ತನ್ನ ಕಾಲದಲ್ಲಿ ಬಳಕೆಯಲ್ಲಿದ್ದ ಜಾನಪದ ಗೀತಗಳ ಸಂಗೀತದ ಶಾಸ್ತ್ರೀಯತೆಯನ್ನು ವಿವರಿಸಿದ್ದಾನೆ. ಅಂದು ಪ್ರಚಲಿತವಾಗಿದ್ದ ಸ್ವರಮೇಳಗಳನ್ನು ಮೊದಲಾಗಿ ' ರಾಗ ' ಎಂದು ಹೆಸರಿಸಿದವನು ಮತಂಗನೇ. ಇದೇ ಇಂದಿನ ರಾಗಪದ್ಧತಿಗೆ ಬುನಾದಿ ಎಂದು ಹೇಳಬಹುದು.

ದೇವಗಿರಿಯ ಯಾದವರಾಜನಿಂದ ಪ್ರೋತ್ಸಾಹಪಡೆದು ಹದಿಮೂರನೆ ಶತಮಾನದ ಆದಿಯಲ್ಲಿ ಶಾರ್ಙ್ಗದೇವನು ' ಸಂಗೀತ ರತ್ನಾಕರ ' ಎಂಬ ಮಹದ್ಗ್ರಂಥವನ್ನು ರಚಿಸಿದ್ದಾನೆ. ಇಂದಿಗೂ ಉತ್ತರಾದಿ ಮತ್ತು ದಕ್ಷಿಣಾದಿ ಸಂಗೀತ ಪದ್ಧತಿಗಳಿಗೆ ಸಂಗೀತ ರತ್ನಾಕರ ಆಧಾರ ಗ್ರಂಥವಾಗಿ ನಿಂತಿದೆ. ನಾರದನ ಮತವನ್ನೇ ಅನುಸರಿಸಿ, ಅಂದು ಬಳಕೆಯಲ್ಲಿದ್ದ ರಾಗಗಳನ್ನು ಪುರುಷ ಮತ್ತು ಸ್ತ್ರೀ ಪಂಗಡಗಳಾಗಿ ವಿಂಗಡಿಸಿ, ಒಟ್ಟು ಇಪ್ಪತ್ತಾರು ರಾಗಗಳನ್ನು ಶಾರ್ಙ್ಗದೇವನು ಹೆಸರಿಸಿದ್ದಾನೆ. ರಾಗಗಳ ವರ್ಗೀಕರಣಕ್ಕೆ ಆಧಾರವನ್ನು ಸೂಚಿಸದಿದ್ದರೂ ರಾಗಾಲಾಪನೆಯಲ್ಲಿ ಅನುಸರಿಸಬೇಕಾದ ಕೆಲವು ನಿಯಮಗಳನ್ನು ಶಾರ್ಙ್ಗ ದೇವನು ವಿವರಿಸಿದ್ದಾನೆ. ಸಂಗೀತ ರತ್ನಾಕರ ಗ್ರಂಥಕ್ಕೆ ಏಳು ಭಾಷ್ಯಗಳಿವೆ. ಈ ಭಾಷ್ಯಕಾರರಲ್ಲಿ ಚತುರ ಕಲ್ಲಿನಾಥ ಪ್ರಮುಖನಾಗಿದ್ದಾನೆ. ಕಾಲಕ್ರಮೇಣ ಉತ್ತರಾದಿ ಸಂಗೀತಕ್ಕೆ ಪರ್ಷಿಯಾ ಮತ್ತು ಅರೇಬಿಯಾ ದೇಶಗಳು ಪ್ರಭಾವ ಬೀರಿದಂತೆ ಕಂಡು ಬರುತ್ತದೆ.

ಧರ್ಮ ಸಂಸ್ಥಾಪನಾಚಾರ್ಯರೆಂದು ಪ್ರಸಿದ್ಧರಾದ ವಿದ್ಯಾರಣ್ಯರು ಹದಿನಾಲ್ಕನೆ ಶತಮಾನದಲ್ಲಿ ಸಂಗೀತ ಪುನಾರುತ್ಥಾನಾಚಾರ್ಯರೂ ಆಗಿದ್ದಾರೆ. ' ಸಂಗೀತಸಾರ ' ಅವರು ಬರೆದ ಮಹದ್ಗ್ರಂಥ. ಇತರ ಸಂಗೀತ ಗ್ರಂಥಕಾರರು ಸಂಗೀತಸಾರದಿಂದ ತಮ್ಮ ಗ್ರಂಥಗಳಲ್ಲಿ ಉದ್ಧರಿಸಿದರೂ ವಿದ್ಯಾರಣ್ಯರ ಸಂಪೂರ್ಣ ಗ್ರಂಥ ಉಪಲಬ್ಧವಿಲ್ಲ. ವಿದ್ಯಾರಣ್ಯರು ಹದಿನೈದು ಜನಕ ರಾಗಗಳನ್ನು ಹೆಸರಿಸಿ, ಇಂದಿನ ಜನಕ ಜನ್ಯ ರಾಗಪದ್ಧತಿಗೆ ಮಾರ್ಗದರ್ಶಕರಾಗಿದ್ದಾರೆ. ವಿದ್ಯಾರಣ್ಯರ ಕಾಲದಿಂದ ದಕ್ಷಿಣಾದಿ ಸಂಗೀತ ಪದ್ಧತಿಗೆ ' ಕರ್ಣಾಟಕ ಸಂಗೀತ ' ವೆಂದು ಹೆಸರು ಬಂದಿರುವುದಾಗಿ ಕಂಡು ಬರುತ್ತದೆ.

ಹದಿನೈದನೆ ಶತಮಾನದ ಪೂರ್ವಾರ್ಧದಲ್ಲಿದ್ದವನು ಚತುರ ಕಲ್ಲಿನಾಥ. ಇವನು ವಿಜಯನಗರದ ಇಮ್ಮಡಿ ದೇವರಾಯನಿಂದ ಪ್ರೋತ್ಸಾಹ ಪಡೆದು, ಶಾರ್ಙ್ಗದೇವನ ಸಂಗೀತರತ್ನಾಕರ ಗ್ರಂಥಕ್ಕೆ ಸೊಗಸಾದ ಭಾಷ್ಯವನ್ನು ಬರೆದಿದ್ದಾನೆ. 'ಕಲಾನಿಧಿ' ಎಂದು ಈ ಗ್ರಂಥದ ಹೆಸರು. ಕಲ್ಲಿನಾಥನಿಗೆ 'ರಾಯವಾಗ್ಗೇಯಕಾರ' ನೆಂಬ ಬಿರುದಿತ್ತು.

ವಿಜಯನಗರ ರಾಜಾಸ್ಥಾನವು ಇತರ ಲಲಿತಕಲೆಗಳಿಗೆ ನೀಡಿದಂತೆ, ಸಂಗೀತಕ್ಕೂ ಅಪಾರ ಪ್ರೋತ್ಸಾಹ ಕೊಟ್ಟಿತ್ತು.

ವಿಜಯನಗರ ಸಂಸ್ಥಾನದ ಆಡಳಿತಕ್ಕೆ ಸೇರಿದ ಚಂದ್ರಗಿರಿಯ ರಾಜನಾದ ಸಾಳ್ವ ನರಸಿಂಗರಾಯ (ಕ್ರಿ.ಶ. 1487–1493) ನಿಗೆ ಗುರುಗಳಾಗಿದ್ದವರು ಶ್ರೀಪಾದರಾಯರು. ಮಧ್ವಮತ ಸಂಪನ್ನರಾದ ಶ್ರೀಪಾದರಾಯರು ಸಂಗೀತದಲ್ಲೂ ಉದ್ದಾಮರು. 'ರಂಗವಿಠಲ' ಮುದ್ರಿಕೆಯಿಂದ ಕನ್ನಡ ಭಾಷೆಯಲ್ಲಿ ನೂರಾರು ಭಗವದ್ಭಕ್ತಿರಸಭರಿತ ಕೀರ್ತನೆಗಳನ್ನು ರಚಿಸಿದ್ದಾರೆ. ಅವರ ಶಿಷ್ಯರಾದ ವ್ಯಾಸರಾಯರಿಗೂ ಪ್ರಶಿಷ್ಯರಾದ ಪುರಂದರದಾಸರಿಗೂ ಈ ರಚನೆಗಳು ಮಾರ್ಗದರ್ಶನ ಮಾಡಿವೆ. ಪ್ರಸಿದ್ಧ ತೆಲುಗು ಕೀರ್ತನೆಗಳ ರಚನಾಕಾರರಾದ ಅಣ್ಣಮಾಚಾರ್ಯರು ಶ್ರೀಪಾದರಾಯರ ಸಮಕಾಲೀನರು, ಸ್ನೇಹಿತರು.

ಇದೇ ಕಾಲದಲ್ಲಿ (ಕ್ರಿ.ಶ. 1500) ಮೈಸೂರು ಪ್ರಾಂತ್ಯಕ್ಕೆ ದಕ್ಷಿಣದ ಕೊಳ್ಳೆಗಾಲದಲ್ಲಿ ಪರಮ ಶಿವಭಕ್ತರಾದ ನಿಜಗುಣ ಶಿವಯೋಗಿಗಳು ಪ್ರಸಿದ್ಧರಾಗಿದ್ದರು. ಅವರು ಒಬ್ಬ ಸಣ್ಣ ರಾಜರು. ಚೆನ್ನ ಸದಾಶಿವಯೋಗಿಗಳು ಅವರ ಗುರುಗಳು. ನಿಜಗುಣರು ತಮ್ಮ ಸರ್ವಸ್ವವನ್ನೂ ತ್ಯಾಗಮಾಡಿ, ತಮ್ಮ ಆರಾಧ್ಯ ದೇವನಾದ ಶಂಭುಲಿಂಗನನ್ನು ಸೇವಿಸುತ್ತಾ ಕೊಳ್ಳೆಗಾಲದ ಸಮೀಪದಲ್ಲಿರುವ ಶಂಭುಲಿಂಗನ ಬೆಟ್ಟದಲ್ಲಿ ನೆಲಸಿದರು. ನಿಜಗುಣರು ವೇದಾಂತ ಮತ್ತು ಸಂಗೀತಗಳೆರಡರಲ್ಲೂ ಮಹಾಪಂಡಿತರು. ಜನತೆಯನ್ನು ಉದ್ಧರಿಸುವ ಸಲುವಾಗಿ ಅನೇಕ ವೀರಶೈವಸಿದ್ಧಾಂತ ಗ್ರಂಥಗಳನ್ನು ರಚಿಸಿದ್ದಾರೆ. ಇವುಗಳಲ್ಲಿ 'ವಿವೇಕಚಿಂತಾಮಣಿ' ಎಂಬ ಗ್ರಂಥ ಧರ್ಮದ ವಿಶ್ವಕೋಶವಾಗಿದೆ. ಈ ಗ್ರಂಥದ ಒಂದು ಅಧ್ಯಾಯದಲ್ಲಿ ಸಂಗೀತ ಶಾಸ್ತ್ರವನ್ನು ವಿವರಿಸಿದ್ದಾರೆ. ಶ್ರುತಿ, ಸ್ವರ, ಅಲಂಕಾರ, ಜತಿ, ಗ್ರಾಮ, ರಾಗ ಮತ್ತು ವಾದ್ಯ – ಇವೆಲ್ಲವನ್ನೂ ವಿವರಿಸಿದ್ದಾರೆ. ರಾಗಗಳನ್ನು ರಾಗಾಂಗ, ಉಪಾಂಗ, ಕ್ರಿಯಾಂಗ ಮತ್ತು ಭಾಷಾಂಗವೆಂದು ವರ್ಗೀಕರಿಸಿರುವುದಲ್ಲದೆ, ಅವನ್ನು ಪುಂ, ಸ್ತ್ರೀ ಮತ್ತು ನಪುಂಸಕಗಳೆಂದು ವಿಂಗಡಿಸಿದ್ದಾರೆ. ಕನ್ನಡಭಾಷೆಯಲ್ಲಿ ಸಂಗೀತ ಶಾಸ್ತ್ರವನ್ನು ವಿಶದೀಕರಿಸಿರುವ ಮೊದಲ ಗ್ರಂಥ 'ವಿವೇಕ ಚಿಂತಾಮಣಿ.' 'ವಿಜ್ಞಾನ ಚಕ್ರವರ್ತಿ', 'ಅಧಿಕವಿದ್ಯಾಸಂಪನ್ನ' ಮುಂತಾದ ಪ್ರಶಸ್ತಿಗಳನ್ನು ನಿಜಗುಣರು ಪಡೆದಿದ್ದರಂತೆ. ನಿಜಗುಣ ಶಿವಯೋಗಿಗಳು ಶೈವಸಿದ್ಧಾಂತವನ್ನು ಪ್ರತಿಪಾದಿಸುವ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಕೀರ್ತನೆಯ ಅಂಗಗಳಾದ ಪಲ್ಲವಿ ಮತ್ತು ಚರಣಗಳನ್ನು ಮೊದಲಾಗಿ ತೋರಿಕೊಟ್ಟವರು ನಿಜಗುಣ ಶಿವಯೋಗಿಗಳೆಂದು ಹೇಳಬಹುದು. ಇವರ ಕೆಲವು ಕೀರ್ತನೆಗಳು ಅಂದು ಪ್ರಚಲಿತವಾಗಿದ್ದ ರಾಗಗಳನ್ನೂ ವೀಣೆಯ ಸ್ವರೂಪವನ್ನೂ ಚಿತ್ರಿಸುತ್ತವೆ.

ಕ್ರಿ.ಶ. 1513 ರಿಂದ 1669ರ ವರೆಗೆ ಕೃಷ್ಣದೇವರಾಯ ಮತ್ತು ಅಚ್ಯುತ ದೇವರಾಯ ಈ ಇಬ್ಬರ ಆಳಿಕೆಯಲ್ಲೂ ವಿಜಯನಗರ ಸಂಸ್ಥಾನಕ್ಕೆ ಅಧೀನ ರಾಜನಾಗಿದ್ದವನು ಮಾಗಡಿ ಕೆಂಪೇಗೌಡ. ಈತನೇ ಕಲ್ಯಾಣನಗರಿಯೆನಿಸಿದ ಬೆಂಗಳೂರು ನಗರದ ನಿರ್ಮಾಪಕ. ಬೆಂಗಳೂರಿನ ಬಸವೇಶ್ವರ ದೇವಸ್ಥಾನದ ಎದುರಿನ ಶಿಲಾಸ್ತಂಭದ ಮೇಲಿರುವ ಕಿನ್ನರಿವಾದಕನ ಕೆತ್ತನೆ, ಕೆಂಪೇಗೌಡನಿಗಿದ್ದ ಅಪಾರ ಸಂಗೀತಪ್ರೇಮದ ದ್ಯೋತಕವಾಗಿದೆ. ಯಕ್ಷಗಾನ ರಚನೆಯಲ್ಲಿ ಕೆಂಪೇಗೌಡನು ಸಿದ್ಧಹಸ್ತ; 'ಗಂಗಾ ಗೌರೀವಿಲಾಸ' ವೆಂಬುದು ಅವನ ಅತ್ಯುತ್ತಮ ಯಕ್ಷಗಾನ. ಸಂಗೀತ ಕೃತಿರೂಪಗಳಲ್ಲಿ ಒಂದಾದ

'ದರು'ಗಳನ್ನು ಬೇರೆ ಬೇರೆ ರಾಗತಾಳಗಳಲ್ಲಿ ಕೆಂಪೇಗೌಡ ರಚಿಸಿದ್ದಾನೆ. ರಚನೆಗಳ ಸಾಹಿತ್ಯ ಅವನ ಮಾತೃಭಾಷೆಯಾದ ತೆಲುಗಿನಲ್ಲಿದೆ.

ವಿಜಯನಗರದ ಕೃಷ್ಣದೇವರಾಯನಿಗೆ ಧರ್ಮಗುರುಗಳಾಗಿದ್ದವರು ವ್ಯಾಸರಾಯರು. ಪ್ರಸಿದ್ಧರಾದ ಶ್ರೀಪಾದರಾಯರ ಶಿಷ್ಯರಾದ ವ್ಯಾಸರಾಯರು ಸಂಸ್ಕೃತದಲ್ಲೂ ಸಂಗೀತದಲ್ಲೂ ಮಹಾಪಂಡಿತರಾಗಿದ್ದರು. ತಮ್ಮ ಕಾಲದಲ್ಲಿ ಬಳಕೆಯಲ್ಲಿದ್ದ ರಾಗತಾಳಗಳಲ್ಲಿ ಅನೇಕ ಕನ್ನಡ ಕೀರ್ತನೆಗಳನ್ನೂ ಸುಳಾದಿಗಳನ್ನೂ ವ್ಯಾಸರಾಯರು ರಚಿಸಿದ್ದಾರೆ. 'ಶ್ರೀಕೃಷ್ಣ' ಎಂದು ಇವರ ಕೃತಿಮುದ್ರೆ. ಪುರಂದರದಾಸರೂ ಕನಕದಾಸರೂ ವ್ಯಾಸರಾಯರ ಪ್ರಸಿದ್ಧ ಶಿಷ್ಯರು.

ಸುಮಾರು ಇದೇ ಕಾಲದಲ್ಲಿ ವಿಜಯನಗರದ ರಾಮರಾಯನ ಮಂತ್ರಿಯಾಗಿದ್ದ ರಾಮ ಅಮಾತ್ಯನ 'ಸ್ವರಮೇಳಕಲಾನಿಧಿ' ಎಂಬ ಸಂಗೀತ ಗ್ರಂಥ ಕಂಡುಬರುತ್ತದೆ. ಈ ಗ್ರಂಥದ ಮೇಳ ಪ್ರಕರಣದಲ್ಲಿ ರಾಮ ಅಮಾತ್ಯನ ರಾಗಗಳ ಹೋಲಿಕೆ ಮತ್ತು ಸ್ವರಗಳ ಸಾಂಗತ್ಯದ ಆಧಾರದ ಮೇಲೆ ರಾಗಗಳನ್ನು ವರ್ಗೀಕರಿಸಲು ಪ್ರಯತ್ನಿಸಿದ್ದಾನೆ. ಅವನ್ನು ಉತ್ತಮ, ಮಧ್ಯಮ ಮತ್ತು ಅಧಮಗಳೆಂದೂ ವಿಂಗಡಿಸಿದ್ದಾನೆ. ಇಪ್ಪತ್ತು ಜನಕರಾಗಗಳನ್ನು ಹೆಸರಿಸಿ, ಶುದ್ಧ ಮೇಳರಾಗಗಳಲ್ಲಿ ಮುಖಾರಿಗೆ ಮೊದಲನೆಯ ಸ್ಥಾನ ಕೊಟ್ಟಿದ್ದಾನೆ. ಈ ಗ್ರಂಥ ಸಂಸ್ಕೃತದಲ್ಲಿದೆ.

ಕರ್ನಾಟಕದ ಜೈನಕವಿಗಳಲ್ಲಿ ಪ್ರಸಿದ್ಧನಾದ ರತ್ನಾಕರವರ್ಣಿಯು (ಕ್ರಿ.ಶ. 1557) ಸಂಗೀತ ಮತ್ತು ನೃತ್ಯಶಾಸ್ತ್ರಗಳಲ್ಲಿ ನಿಷ್ಣಾತ ವಿದ್ವಾಂಸನಾಗಿದ್ದನು. ಈತನ ಸ್ಥಳ, ದಕ್ಷಿಣಕನ್ನಡ ಜಿಲ್ಲೆಯ ಮೂಡಬಿದರೆ. ಇವನ ಗುರು, ಹಂಸನಾಥ. ಸಂಗೀತ ಶಾಸ್ತ್ರವನ್ನೇ ಕುರಿತು ಪ್ರತ್ಯೇಕವಾದ ಗ್ರಂಥ ಬರೆಯದಿದ್ದರೂ ತನ್ನ ಗುರುವಿನ ಅಪ್ಪಣೆಯ ಮೇರೆ ಈತನು ಬರೆದಿರುವ ಮಹದ್ಗ್ರಂಥವಾದ 'ಭರತೇಶ ವೈಭವ'ದಲ್ಲಿ ಸಂಗೀತ ಮತ್ತು ಇತರ ಲಲಿತ ಕಲೆಗಳನ್ನು ಕುರಿತು ವರ್ಣಿಸಿರುವ ಮಹತ್ತರವಾದ ಉಲ್ಲೇಖಗಳಿವೆ. ಭರತೇಶ ಚಕ್ರವರ್ತಿಯ ಆಸ್ಥಾನದ ಗಾಯಕರ ಸಂಗೀತ ಕಚೇರಿಗಳ ವರ್ಣನೆಗಳಲ್ಲಿ ರತ್ನಾಕರವರ್ಣಿ, ಗಾಯಕರು ದೈವಿಕವಾದ ಗಾನ ಹಾಡಲು ಅನುಸರಿಸಬೇಕಾದ ನಿಯಮಗಳನ್ನು ಸೂಚಿಸಿರುವುದೇ ಅಲ್ಲದೆ, ಗಾಯಕ ದೋಷಗಳನ್ನೂ ಮನನೀಯವಾಗಿ ಚಿತ್ರಿಸಿದ್ದಾನೆ. ಅವನು ವಿವರಿಸಿರುವ ನಾದೋತ್ಪತ್ತಿಯ ಕ್ರಮ ಮನೋಜ್ಞವಾಗಿದೆ. ಶಾಸ್ತ್ರೀಯ ಸಂಗೀತದ ಮುಖ್ಯ ಪರಿಕರಗಳಾದ ಲಯ, ಭಜಾವಣೆ, ಗಮಕ, ಆಲಾಪ ಮುಂತಾದುವನ್ನು ಸ್ಪಷ್ಟವಾಗಿ ವಿವರಿಸಿದ್ದಾನೆ. ವೀಣೆ, ದಂಡಿಗೆ, ಸ್ವರಮಂಡಲ, ಕಿನ್ನರಿ ಮತ್ತು ಕೊಳಲು ವಾದ್ಯಗಳು ಅವನ ಕಾಲದಲ್ಲಿ ಉಪಯೋಗದಲ್ಲಿದ್ದವು; ಈ ವಾದ್ಯಗಳು ಭರತೇಶ ಚಕ್ರವರ್ತಿಯ ಚರಿತ್ರೆಯಲ್ಲಿ ಹೆಸರಿಸಲ್ಪಟ್ಟಿವೆ. 'ವೀಣಾಸಂಧಿ'ಯಲ್ಲಿ 'ತಾನ'ವನ್ನು ಹಾಡಿಕೆಯಲ್ಲೂ ವೀಣೆಯಲ್ಲೂ ಹೇಗೆ ಹೇಗೆ ಹಾಡಿ ನುಡಿಸಬೇಕೆಂಬ ಸೊಗಸಾದ ವಿವರಣೆ ಕೊಟ್ಟಿದ್ದಾನೆ. ರತ್ನಾಕರವರ್ಣಿಗೆ ವೀಣಾವಾದ್ಯದ ಮೇಲೆ ಹೆಚ್ಚು ಒಲವಿದ್ದಂತೆ ಕಾಣುತ್ತದೆ; ವೀಣಾವಾದನದೊಂದಿಗೆ ಸಂಚು ಶಾರೀರದ ಸುಮಧುರ ಹಾಡಿಕೆಯ ಮೇಳೈಕೆ ಅವನಿಗೆ ಹೆಚ್ಚು ಪ್ರೇಮ. ಉದಯ ರಾಗಗಳನ್ನೂ ದೇವಗಾಂಧಾರ, ಭೂಪಾಳಿ, ಧನ್ಯಾಸಿ, ವೇಳಾವಳಿ, ಮತ್ತು ಸೌರಾಷ್ಟ್ರ ರಾಗಗಳನ್ನು ಹೆಸರಿಸಿದ್ದಾನೆ. ರತ್ನಾಕರವರ್ಣಿಯು ಉದ್ದಾಮ ವಾಗ್ಗೇಯಕಾರನೂ ಹೌದು ; ಅವನ ರಚನೆಗಳು 'ಅಣ್ಣಗಳ ಪದಗಳು' ಎಂದು ಪ್ರಸಿದ್ಧವಾಗಿವೆ.

ಸಂಗೀತ ಶಾಸ್ತ್ರದಲ್ಲೂ ಅಭ್ಯಾಸ ಕ್ರಮದಲ್ಲೂ ಹೊಸ ಯುಗವನ್ನೇ ಪ್ರಾರಂಭಿಸಿ, ಇಂದು ಪ್ರಚಾರ ದಲ್ಲಿರುವ ಸಂಗೀತ ರೂಪದ ಆದ್ಯ ಪ್ರವರ್ತಕರು ಪುರಂದರದಾಸರು. ಧನಿಕರಾಗಿದ್ದ ದಾಸರಾಯರು ತಮ್ಮ ಸರ್ವಸ್ವವನ್ನೂ ಸರ್ವೇಶ್ವರನ ಹೆಸರಿನಲ್ಲಿ ದಾನಮಾಡಿ, ಭಗವಂತನ ಸಂಕೀರ್ತನ ಹಾಡುತ್ತಾ ಜನತೆಯಲ್ಲಿ ಭಗವದ್ಭಕ್ತಿ ಮೂಡಿಸಲು ಬದ್ಧ ಕಂಕಣರಾದರು. ಮಹತ್ತರವಾದ ವೇದಾಂತ ತತ್ವಗಳು ಜನಸಾಮಾನ್ಯರಿಗೆ

ಸುಲಭವಾಗಿ ಅರ್ಥವಾಗುವಂತೆ, ತಿಳಿಗನ್ನಡದಲ್ಲಿ ಕೀರ್ತನೆಗಳನ್ನು ರಚಿಸಿ, ದೊಡ್ಡ ಭಂಡಾರವನ್ನೇ ಒದಗಿಸಿದ್ದಾರೆ. ರಚನೆಗಳೆಲ್ಲಾ ಭಗವದ್ಭಕ್ತಿ ಪ್ರಧಾನವಾಗಿವೆ. ಬೋಧಪ್ರದವಾಗಿವೆ. ದೇಶದೇಶಗಳನ್ನು ತಿರುಗಿ ತಮ್ಮ ಕೀರ್ತನೆಗಳ ಹಾಡಿಕೆಯಿಂದ ಭಗವದ್ಭಕ್ತಿಯ ಮಹಿಮೆಯನ್ನು ಸಾರಿ, ಜನರು ಸನ್ಮಾರ್ಗ ಪ್ರವರ್ತಕರೂ ಉಪಕಾರಿಗಳೂ ಆಗುವಂತೆ ಮಾರ್ಗದರ್ಶನ ಮಾಡಿದ್ದಾರೆ. ಸಂಗೀತವು ಒಂದು ವಿಶ್ವಭಾಷೆ. ಸಂಗೀತದಲ್ಲಿನ ಸುಪ್ತಶಕ್ತಿಯನ್ನು ಪುರಂದರದಾಸರಂತೆ ಅರಿತವರು ಇನ್ನೊಬ್ಬರಿಲ್ಲ. ಆ ಕಾರಣ, ಪುರಂದರ ದಾಸರು ಜನತೆಯನ್ನು ಉದ್ಧರಿಸಿ, ಅದನ್ನು ಭಗವಂತನ ಕಡೆಗೆ ತಿರುಗಿಸುವ ತಮ್ಮ ಜೀವನ ಧ್ಯೇಯದಲ್ಲಿ ಸಂಗೀತವನ್ನು ಸಂಪೂರ್ಣವಾಗಿ ಬಳಸಿಕೊಂಡರು. ಭಗವಂತನು ಗಾನಲೋಲ, ಗಾನವಿನೋದ, ಎಂದು ಅವರ ದೃಢ ನಂಬಿಕೆ. ಸಂಗೀತಕ್ಕೂ ಸಾಹಿತ್ಯಕ್ಕೂ ಅಪೂರ್ವವಾದ ಸುಮಧುರ ಸಮ್ಮಿಲನವನ್ನು ಸೃಷ್ಟಿಸಿ, ಅಮೋಘವಾದ ಸಂಗೀತ ಕೃತಿಗಳು ಮತ್ತು ಉನ್ನತ ಮಟ್ಟದ ಪದ್ಯ ಸಾಹಿತ್ಯವೂ ಆಗಿ ಶೋಭಿಸುವ ರಚನೆಗಳ ಭಂಡಾರವನ್ನೇ ದಾಸರಾಯರು ನಮಗೆ ಒದಗಿಸಿದ್ದಾರೆ.

ಶಾಸ್ತ್ರೀಯ ಕರ್ಣಾಟಕ ಸಂಗೀತದ ಕ್ರಮವಾದ ಅಭ್ಯಾಸಪಾಠಗಳಿಗೆ ಮಾಯಾಮಾಳವಗೌಳ ರಾಗವೇ ಅರ್ಹವಾದ ರಾಗವೆಂದು ನಿರ್ಧರಿಸಿ, ಪುರಂದರದಾಸರು ಸರಳೆ, ಸ್ವರಾವಳಿ, ಜಂಟಿವರಸೆಗಳು, ಸುಳಾದಿ ಸಪ್ತತಾಳಗಳಲ್ಲಿ ಅಲಂಕಾರಗಳು—ಇವನ್ನು ರಚಿಸಿರುವುದಲ್ಲದೆ, ಬೇರೆ ಬೇರೆ ರಾಗಗಳಲ್ಲಿ ಸಾಮಾನ್ಯ ಗೀತಗಳನ್ನೂ ಒದಗಿಸಿದ್ದಾರೆ. ಸುವ್ಯವಸ್ಥಿತವಾದ ಈ ಅಭ್ಯಾಸ ಪಾಠಕ್ರಮಗಳ ಭದ್ರ ಬುನಾದಿಯ ಮೇಲೆ ಇಂದಿನ ಕರ್ಣಾಟಕ ಸಂಗೀತದ ಬೃಹತ್ ಸೌಧ ಸೃಷ್ಟಿಯಾಗಿ ಕಂಗೊಳಿಸುತ್ತದೆ. ನಿಜಕ್ಕೂ ಪುರಂದರದಾಸರು 'ಕರ್ಣಾಟಕ ಸಂಗೀತ ಪಿತಾಮಹ'ರೇ ಹೌದು.

ದಾಸರಾಯರು ಒದಗಿಸಿರುವ ಮತ್ತೊಂದು ಕೃತಿರೂಪ, ಸುಳಾದಿ. ಸುಳಾದಿಯ ರಚನೆಗೆ ಮಾರ್ಗ ದರ್ಶಕರು ಶ್ರೀಪಾದರಾಯರು. ಸುಳಾದಿ ತಾಳಗಳಲ್ಲಿ ಐದು ಅಥವಾ ಏಳು ತಾಳಗಳನ್ನು ಬಳಸಿ. ಪಲ್ಲವಿ ಮತ್ತು ಚರಣಗಳಿರುತ್ತವೆ. ಚರಣಗಳನಂತರ, ಕಡೆಯಲ್ಲಿ, 'ಜೊತೆ' ಎಂಬ ಎರಡು ಸಾಲುಗಳ ಅಂಗವಿರುತ್ತದೆ. ಇದು ಸುಳಾದಿಯ ಸ್ವರೂಪ. ಪಲ್ಲವಿ ಚರಣಗಳನ್ನು ಹಾಡಿದ ಮೇಲೆ, ಕಡಯ 'ಜೊತೆ' ಯನ್ನು ಪಲ್ಲವಿ ಚರಣಗಳಲ್ಲಿ ಉಪಯೋಗಿಸಿದ ಐದು ಅಥವಾ ಏಳು ತಾಳಗಳಲ್ಲೂ ಹಾಡಬೇಕು. ಇದು ಸುಳಾದಿ ಹಾಡಿಕೆಯ ಸಂಪ್ರದಾಯ. ಆದಕಾರಣ, ಸುಳಾದಿಯ ಹಾಡಿಕೆ ಗಾಯಕನಿಂದ ಅಸಾಧಾರಣವೂ ಅಪಾರವೂ ಆದ ಲಯಗತಿಗಳ ಜ್ಞಾನ ಮತ್ತು ಬುದ್ಧಿಕೌಶಲವನ್ನು ಬಯಸುತ್ತದೆ. ಶಿವ ಶರಣರ ವಚನಗಳನ್ನು ಹೋಲುವ 'ಉಗಾಭೋಗ' ಗಳೆಂಬ ರಚನೆಗಳನ್ನೂ ದಾಸರಾಯರು ನಮಗೆ ಇತ್ತಿದ್ದಾರೆ. ದಾಸರಾಯರನಂತರ ಒಂದು ಶತಮಾನಕ್ಕೂ ಮೀರಿ ಜನ್ಮ ತಾಳಿದ ವಿಜಯದಾಸರು ತಮ್ಮ ಪುರಂದರ ದಾಸರ ಚರಿತ್ರೆಯಲ್ಲಿ, ದಾಸರಾಯರ ಕಾಲದಲ್ಲಿ 'ಬತ್ತೀಸ' ಎಂದರೆ ಮೂವತ್ತೆರಡು ರಾಗಗಳು ಬಳಕೆ ಯಲ್ಲಿದ್ದವೆಂದು ಹೇಳಿದ್ದಾರೆ. ಹನ್ನೆರಡನೆ ಶತಮಾನದಲ್ಲಿದ್ದ ಭಕ್ತಿ ಭಂಡಾರಿ ಬಸವಣ್ಣನವರು ತಮ್ಮ ವಚನ ಒಂದರಲ್ಲಿ 'ಬತ್ತೀಸ ರಾಗವ ಹಾಡಿಸಯ್ಯ' ಎಂದಿದ್ದಾರೆ. ಅಂದಮೇಲೆ, ಹನ್ನೆರಡನೆ ಶತಮಾನದಿಂದ ಪುರಂದರದಾಸರ ಕಾಲದ ವರೆಗೂ ಕರ್ಣಾಟಕ ಸಂಗೀತದಲ್ಲಿ ಮೂವತ್ತೆರಡು ರಾಗಗಳು ಬಳಕೆಯಲ್ಲಿದ್ದವೆಂಬ ಅಂಶ ಸ್ಥಿರಪಡುತ್ತದೆ. ದಾಸರು ತಮ್ಮ ಅನೇಕ ರಚನೆಗಳಲ್ಲಿ ಕೆಲವು ರಾಗಗಳನ್ನು ಹೆಸರಿಸಿದ್ದಾರೆ.

ವಿಜಯನಗರದ ಕೃಷ್ಣದೇವರಾಯನ ಆಸ್ಥಾನದಲ್ಲಿ ನೃತ್ಯಾಚಾರ್ಯನಾಗಿದ್ದ ಬಂಧಂ ಲಕ್ಷ್ಮೀನಾರಾಯಣನು ಸಂಸ್ಕೃತದಲ್ಲಿ 'ಸಂಗೀತ ಸೂರ್ಯೋದಯ' ಎಂಬ ಶಾಸ್ತ್ರಗ್ರಂಥವನ್ನು ಬರೆದು ಕರ್ಣಾಟಕ ಸಂಗೀತದ ಸುವ್ಯವಸ್ಥೆಯ ಕಾರ್ಯದಲ್ಲಿ ಸಹಾಯ ಮಾಡಿದ್ದಾನೆ.

ಕರ್ಣಾಟಕ ಸಂಗೀತದ ರಾಗಗಳು ವೆಂಕಟಮುಖಿಯ ಕಾಲದ ವರೆಗೂ 'ಅಸಂಪೂರ್ಣ ಮೇಳ' ಪದ್ಧತಿಗೆ ಸೇರಿದ್ದವೆಂದು ಕಾಣಬರುತ್ತದೆ. ಅವು 'ಸ್ವೇಚ್ಛಾ' ಮೇಳಗಳಾಗಿದ್ದವು. ಪ್ರಸಿದ್ಧನಾದ ವೆಂಕಟಮುಖಿ (ಕ್ರಿ.ಶ. 1660) 'ಕ್ರಮಸಂಪೂರ್ಣ' ಮೇಳ ಪದ್ಧತಿಯಲ್ಲಿ ಎಪ್ಪತ್ತೆರಡು ಜನಕರಾಗಗಳನ್ನು ನಿರ್ಮಿಸಿದ ಮೇಲೆ ಕರ್ಣಾಟಕ ರಾಗಗಳು ಪರಿಪೂರ್ಣತೆ ಹೊಂದಿ, ಒಂದು ವ್ಯವಸ್ಥಿತ ಪದ್ಧತಿಗೆ ಸೇರಿದವು. ತ್ಯಾಗರಾಜರು ವೆಂಕಟಮುಖಿಯ ಕ್ರಮಸಂಪೂರ್ಣ ಪದ್ಧತಿಯನ್ನು ಅನುಸರಿಸಿ ಕೃತಿ ರಚನೆ ಮಾಡಿದ್ದಾರೆ. ಮುತ್ತುಸ್ವಾಮಿ ದೀಕ್ಷಿತರು ಹಿಂದಿನ ಅಸಂಪೂರ್ಣ ಮೇಳ ಪದ್ಧತಿಯನ್ನೇ ಅನುಸರಿಸಿ ಕೃತಿ ರಚನೆ ಮಾಡಿದ್ದಾರೆ. ಅಂದ ಮೇಲೆ, ಪುರಂದರದಾಸರ ಕಾಲದಲ್ಲಿ ಬಳಕೆಯಲ್ಲಿದ್ದ ಮೂವತ್ತೆರಡು ರಾಗಗಳು ಕಾಲಾನುಗತವಾಗಿ ಅಸಂಪೂರ್ಣ ಮೇಳ ಪದ್ಧತಿಗೇ ಸೇರಿರಬಹುದು. ಪುರಂದರದಾಸರು ನಾಲ್ಕೂಮುಕ್ಕಾಲು ಲಕ್ಷ ರಚನೆಗಳನ್ನು ಒದಗಿಸಿದ್ದಾರೆಂದು ಪ್ರಸಿದ್ಧವಾಗಿದೆ; ಆದರೆ ಬಹಳ ರಚನೆಗಳು ಉಪಲಬ್ಧವಿಲ್ಲ. ತಲೆಮಾರಿನಿಂದ ತಲೆಮಾರಿಗೆ ದಾಸರಾಯರ ರಚನೆಗಳು ಕಂಠಸ್ಥವಾಗಿಯೇ ಸಾಗಿ ಬಂದಿರುವ ಕಾರಣ, ಅವುಗಳು ರಾಗರೂಪದಲ್ಲಿ ವ್ಯತ್ಯಾಸ ಹೊಂದುವುದು ಆಶ್ಚರ್ಯವೇನಲ್ಲ; ಅದು ಅನಿವಾರ್ಯ. ಅಸಂಪೂರ್ಣ ಮತ್ತು ಕ್ರಮ ಸಂಪೂರ್ಣ ಪದ್ಧತಿಗಳೆರಡರಲ್ಲೂ ಒಂದೇ ಸ್ವರೂಪದಲ್ಲಿ ಸಾಗಿ ಬಂದಿದೆಯೆಂದು ನಂಬಲು ಅರ್ಹವಾದ ಶಂಕರಾಭರಣ, ತೋಡಿ, ಕಲ್ಯಾಣಿ, ಮೋಹನ, ಕಾಂಭೋಜಿ, ಭೈರವಿ, ಶ್ರೀ—ಮುಂತಾದ ಕೆಲವು ರಾಗಗಳನ್ನು ಬಿಟ್ಟರೆ, ಪುರಂದರದಾಸರ ಇತರ ರಚನೆಗಳ ರಾಗ ಸ್ವರೂಪಗಳು ಸಂದೇಹಾಸ್ಪದವಾಗಿವೆ.

ಪ್ರಸಿದ್ಧನಾದ ಪದಚಕ್ರವರ್ತಿ ಕ್ಷೇತ್ರಜ್ಞ (ಕ್ರಿ.ಶ. 1800)ನಿಗೂ ಹತ್ತೊಂಬತ್ತನೆ ಶತಮಾನದ ಆದಿಭಾಗದಲ್ಲಿ ಪ್ರಸಿದ್ಧ ವಾಗ್ಗೇಯಕಾರರಾದ ಸಂಗೀತ ತ್ರಿಮೂರ್ತಿಗಳೆನಿಸಿದ ಶ್ಯಾಮಾ ಶಾಸ್ತ್ರಿಗಳು, ತ್ಯಾಗರಾಜರು ಮತ್ತು ಮುತ್ತುಸ್ವಾಮಿ ದೀಕ್ಷಿತರಿಗೆ ಪುರಂದರದಾಸರ ರಚನೆಗಳು ಸ್ಫೂರ್ತಿ ಕೊಟ್ಟಿವೆ. ತ್ಯಾಗರಾಜರಿಗೆ ಅವರ ಮಾತಾಪಿತೃಗಳು ಅನೇಕ ಪುರಂದರದಾಸರ ರಚನೆಗಳನ್ನು ಪಾಠಮಾಡಿಸಿದ್ದರೆಂದು ಪ್ರತೀತಿಯಿದೆ. 'ಪ್ರಹ್ಲಾದ ಭಕ್ತಿವಿಜಯ' ವೆಂಬ ಗೇಯನಾಟಕದ ಮಂಗಳ ಶ್ಲೋಕಗಳಲ್ಲಿ ತ್ಯಾಗರಾಜರು ಪುರಂದರದಾಸರಿಗೆ ತಮ್ಮ ಭಕ್ತಿ ಕಾಣಿಕೆಯನ್ನರ್ಪಿಸಿದ್ದಾರೆ.

ಉತ್ತರಾದಿ ಸಂಗೀತದಲ್ಲಿ ಶಾಸ್ತ್ರಕ್ಕೂ ಅಭ್ಯಾಸಕ್ಕೂ ಸುಮಧುರ ಒಪ್ಪಂದವನ್ನು ವ್ಯವಸ್ಥೆ ಮಾಡುವುದಕ್ಕಾಗಿ ಖಾನ್‌ದೇಶದ ಬರ್‌ಹಾನ್‌ಖಾನನು ಪುಂಡರೀಕ ವಿಠಲನನ್ನು ಆಮಂತ್ರಿಸಿದನೆಂದು ತಿಳಿದುಬರುತ್ತದೆ. ಬೆಂಗಳೂರು ಜಿಲ್ಲೆ ಶಿವಗಂಗೆಯ ಸಮೀಪದ ಸಾತನೂರಿಗೆ ಸೇರಿದವನು ಪುಂಡರೀಕ ವಿಠಲ (ಕ್ರಿ.ಶ. 1562–1599). ಈತನು ಉತ್ತರಾದಿ ಮತ್ತು ದಕ್ಷಿಣಾದಿ ಸಂಗೀತಗಳೆರಡರಲ್ಲೂ ಉದ್ದಾಮ ಪಂಡಿತನಾಗಿದ್ದನು. ಖಾನನ ಕೋರಿಕೆಯಂತೆ ಪುಂಡರೀಕ ವಿಠಲನು 'ಷಡ್ರಾಗ ಚಂದ್ರೋದಯ' ಎಂಬ ಗ್ರಂಥವನ್ನು ಬರೆದಿದ್ದಾನೆ; ಈ ಗ್ರಂಥದಲ್ಲಿ ಉತ್ತರಾದಿ ಮತ್ತು ದಕ್ಷಿಣಾದಿ ಸಂಗೀತಗಳೆರಡನ್ನೂ ವಿವರಿಸಿದ್ದಾನೆ. ಆಧುನಿಕ ಉತ್ತರಾದಿ ಸಂಗೀತದ ಅನೇಕ ರಾಗಗಳು ಪುಂಡರೀಕ ವಿಠಲನ ಸ್ವರಮೇಳವನ್ನೇ ಇಂದಿಗೂ ಉಳಿಸಿಕೊಂಡು ಬಂದಿವೆಯೆಂದು ಉತ್ತರಾದಿ ಸಂಗೀತ ವಿದ್ವಾಂಸರ ಅಭಿಪ್ರಾಯವಾಗಿದೆ. ಕಾಲಕ್ರಮೇಣ, ಜಯಪುರದ ಮಹಾರಾಜನ ಪ್ರೋತ್ಸಾಹದಿಂದ 'ರಾಗಮಾಲಾ' ಎಂಬ ಸಂಗೀತ ಗ್ರಂಥವನ್ನು ಪುಂಡರೀಕ ವಿಠಲನು ಬರೆದಿದ್ದಾನೆ. ಈ ಗ್ರಂಥದಲ್ಲಿ ಆರು ಜನಕ ರಾಗಗಳೂ ಒಂದೊಂದು ಜನಕರಾಗಕ್ಕೂ ಐದು 'ರಾಗಿಣಿ'ಯರೂ ಸೇರಿರುವಂತೆ ರಾಗ ವರ್ಗೀಕರಣ ಕಂಡುಬರುತ್ತದೆ. ಇದು ಉತ್ತರಾದಿ ಸಂಗೀತಕ್ಕೆ ಒಂದು ಆಧಾರ ಗ್ರಂಥವಾಗಿದೆ. ರಾಗಗಳ ಹಾಡಿಕೆಗೆ ಕಾಲ ನಿರ್ಣಯವೂ ಕಂಡು ಬರುತ್ತದೆ. 'ರಾಗಮಂಜರಿ' ಮತ್ತು 'ನರ್ತನನಿರ್ಣಯ' ಎಂಬ ಗ್ರಂಥಗಳೂ ಪುಂಡರೀಕ ವಿಠಲನ ಕೃತಿಗಳೇ. ರಾಗಮಂಜರಿಯಲ್ಲಿ ಇಪ್ಪತ್ತು ಜನಕ ರಾಗಗಳನ್ನು ಹೆಸರಿಸಿ, ಇವುಗಳಲ್ಲಿ ಹದಿನಾರು ರಾಗಗಳು ಪರ್ಷಿಯಾ ರಾಗಗಳ ಸಾಮ್ಯ ಹೊಂದಿರುವಂತೆ ಹೋಲಿಸಿದ್ದಾನೆ. ನರ್ತನ ನಿರ್ಣಯವು ನಾಟ್ಯಕ್ಕೆ

ಮೀಸಲಾದ ಗ್ರಂಥ. ತಂಜಾವೂರಿನಲ್ಲಿ ಮಂತ್ರಿ ಪದವಿಯಲ್ಲಿದ್ದ ಗೋವಿಂದ ದೀಕ್ಷಿತರು (ಕ್ರಿ.ಶ. 1577–1614), ರಾಜ್ಯದಲ್ಲಿ ಸಂಸ್ಕೃತಿಯ ಹಾಗೂ ಲಲಿತ ಕಲೆಗಳ ಅತ್ಯಾವಶ್ಯಕ ಪ್ರಾಮುಖ್ಯವನ್ನು ಅರಿತು 'ಸಂಗೀತ ಸುಧಾ' ಎಂಬ ಮಹದ್ಗ್ರಂಥವನ್ನು ಬರೆದಿದ್ದಾರೆ. ಇದರಲ್ಲಿ ರಾಗಗಳ ಸಮಗ್ರ ಲಕ್ಷಣಗಳು ಕಂಡುಬರುವುದೇ ಅಲ್ಲದೆ, 'ಜಾತಿ' ಎಂದು ಹೆಸರು ತಾಳಿದ್ದ ರಾಗಗಳಿಗೆ, ಅವುಗಳ ಲಕ್ಷಣ ವಿವರಣೆಗಾಗಿ ಸ್ವರಲಯ ಸಂಯೋಜನೆ ಹೊಂದಿದ ರಚನೆಗಳೂ ಕಂಡುಬರುತ್ತವೆ. ಗೋವಿಂದ ದೀಕ್ಷಿತರ ರಾಗವಿಂಗಡಣೆ ಮತಂಗನ ಪದ್ಧತಿಯ ಸುಧಾರಿತ ರೂಪದಲ್ಲಿದ್ದು ಹತ್ತು ಪ್ರಮುಖ ವಿಭಾಗಗಳಲ್ಲಿ ವರ್ಗೀಕರಣ ಹೊಂದಿದೆ. ಸುಮಾರು ಈ ಕಾಲಕ್ಕೆ ಅಸಂಪೂರ್ಣ ಮೇಳ ಪದ್ಧತಿಯಲ್ಲಿ ಎಪ್ಪತ್ತೆರಡು ರಾಗಗಳ ಪದ್ಧತಿ ಪ್ರಕಟವಾಗಿದ್ದರೂ ಗೋವಿಂದ ದೀಕ್ಷಿತರು ಮತ್ತು ಅವರ ಮಗ ವೆಂಕಟಮಖಿ ಈ ರಾಗಗಳಿಗೆ ಶಾಸ್ತ್ರೀಯ ಬುನಾದಿ ನಿರ್ಮಿಸಿ, ಅದಕ್ಕೆ 'ಕ್ರಮಸಂಪೂರ್ಣ' ಪದವಿ ನೀಡಿದರು. ಗೋವಿಂದ ದೀಕ್ಷಿತರು ಜಯಂತಸೇನ ಮತ್ತು ಇನ್ನೂ ಕೆಲವು ರಾಗಗಳ ನಿರ್ಮಾತೃವೂ ಆಗಿದ್ದಾರೆ.

ಗೋವಿಂದ ದೀಕ್ಷಿತರಿಗೆ ಎಂಟು ಮಂದಿ ಗಂಡು ಮಕ್ಕಳೂ ಒಬ್ಬ ಹೆಣ್ಣು ಮಗಳೂ ಇದ್ದರೆಂದು ತಿಳಿದು ಬಂದಿದೆ. ಗಂಡು ಮಕ್ಕಳಲ್ಲಿ ಮೊದಲ ಇಬ್ಬರೂ ವೇದಾಂತ ಸಂಗೀತಗಳಲ್ಲಿ ಪ್ರಸಿದ್ಧ ವಿದ್ವಾಂಸರು. ಈ ಇಬ್ಬರಲ್ಲಿ ಯಜ್ಞನಾರಾಯಣ ದೀಕ್ಷಿತರು ಹಿರಿಯರು; ವೆಂಕಟೇಶ ದೀಕ್ಷಿತ ಅಥವಾ ವೆಂಕಟಮಖಿ ಕಿರಿಯರು. ತಮ್ಮಂದಿರಾದ ವೆಂಕಟಮಖಿಗೆ ವೇದಾಂತ ಸಂಗೀತಗಳೆರಡರಲ್ಲೂ ಅಣ್ಣಂದಿರಲ್ಲಿಯೇ ಶಿಕ್ಷಣ. ಕೆಲಕಾಲದನಂತರ ವೆಂಕಟಮಖಿಗೆ ತಾನಪ್ಪಾಚಾರ್ಯ (ಇವರ ವಿಚಾರ ಹೆಚ್ಚು ತಿಳಿದುಬಂದಿಲ್ಲ) ಎಂಬ ಪ್ರಸಿದ್ಧ ವಾಗ್ಗೇಯಕಾರರಲ್ಲಿ ಶಿಷ್ಯಪಟ್ಟ ದೊರೆಯಿತು. ಇವರಿಂದ ವೆಂಕಟಮಖಿಗೆ ಸಂಗೀತಕಲೆಯ ಲಕ್ಷಣ ಲಕ್ಷ್ಯಗಳ ಸಮಗ್ರ ಬೋಧೆಯಾಯಿತು. ವೆಂಕಟಮಖಿಗೆ ತಂಜಾವೂರಿನ ರಘುನಾಥನಾಯಕನ ಆಸ್ಥಾನದಲ್ಲಿ ವಿದ್ವಾಂಸಪದವಿಯೂ ಲಭಿಸಿತು. ದೊರೆಯ ಪ್ರೋತ್ಸಾಹದಿಂದ ವೆಂಕಟಮಖಿ 'ಚತುರ್ದಂಡಿ ಪ್ರಕಾಶಿಕೆ' ಎಂಬ ಚಿರಸ್ಥಾಯಿಯಾದ ಸಂಗೀತ ಗ್ರಂಥವನ್ನು ಬರೆದಿದ್ದಾರೆ. ಕರ್ಣಾಟಕ ಸಂಗೀತ ಪದ್ಧತಿಯ ಗ್ರಂಥವಿದು. ಶ್ರುತಿ, ಸ್ವರ, ಮೇಳ, ರಾಗ, ಆಲಾಪ, ಲಯ, ಗೀತ, ಪ್ರಬಂಧ ಮತ್ತು ತಾಳ ಇವುಗಳನ್ನು ಕುರಿತು ಈ ಗ್ರಂಥದಲ್ಲಿ ಪ್ರತ್ಯೇಕ ಅಧ್ಯಾಯಗಳಿವೆ. ವಿಕೃತಿ ಸ್ವರಗಳ ಪ್ರಭೇದಗಳನ್ನೆಲ್ಲಾ ಉಪಯೋಗಿಸಿ ಎಪ್ಪತ್ತೆರಡು ಕ್ರಮಸಂಪೂರ್ಣ ಮೇಳಕರ್ತರಾಗಗಳನ್ನು ಸಂಯೋಜಿಸಿದ ಕೀರ್ತಿ ವೆಂಕಟಮಖಿಗೆ ಸಲ್ಲುತ್ತದೆ. ಹೀಗೆ, ವಿದ್ಯಾರಣ್ಯರ ಹದಿನೈದು ಮೇಳಗಳಿಂದ ಮೊದಲಾಗಿ, ರಾಮ ಅಮಾತ್ಯರ ಇಪ್ಪತ್ತು ಮೇಳಗಳಿಗೆ ತಲಪಿ, ಎಪ್ಪತ್ತೆರಡು ಜನಕರಾಗಗಳಿಗೆ ಏರಿಸಿ, ಸಂಪೂರ್ಣತೆ ಪರಿಪೂರ್ಣತೆಗಳನ್ನು ಮೇಳ ಕರ್ತ ರಾಗಗಳಿಗೆ ವೆಂಕಟಮಖಿ ಒದಗಿಸಿದ್ದಾರೆ. ಈ ಎಪ್ಪತ್ತೆರಡು ಮೇಳಕರ್ತ ರಾಗಗಳಲ್ಲಿ ವೆಂಕಟಮಖಿಯ ಕಾಲದಲ್ಲಿ ರೂಢಿಯಲ್ಲಿದ್ದ ಹತ್ತೊಂಬತ್ತು ಪ್ರಸಿದ್ಧ ರಾಗಗಳೂ ಸೇರುತ್ತವೆ. ವೆಂಕಟಮಖಿಯ ಲಕ್ಷಣಗೀತಗಳು ಚಿರಸ್ಮರಣೀಯ ರಚನೆಗಳು; ರಾಗಲಕ್ಷಣಕ್ಕೆ ಅವು ಈಗಲೂ ಆಧಾರವಾಗಿವೆ. ವೀಣಾವಾದ್ಯಕ್ಕೆ ಪೂರ್ಣತೆಯನ್ನು ಒದಗಿಸಲು ಶ್ರದ್ಧೆ ಸಾಧನೆಗಳಿಂದ ಶ್ರಮಿಸಿ, ಮೆಟ್ಟಿಲುಗಳ ಸಂಖ್ಯೆಯನ್ನು ಇಪ್ಪತ್ತನಾಲ್ಕಕ್ಕೆ ಏರಿಸಿ, ಅದನ್ನು ಸರ್ವರಾಗಮೇಳ ವಾದ್ಯವನ್ನಾಗಿ ಮಾಡಿ, ಇಂದು ಬಳಕೆಯಲ್ಲಿರುವ ರೂಪಕ್ಕೆ ಸುಧಾರಿಸಿದವರು ವೆಂಕಟಮಖಿಯೆಂದು ತಿಳಿದು ಬಂದಿದೆ. ಇಂದಿಗೂ ಈಗ ಬಳಸುವ ವೀಣೆಗೆ 'ರಘುನಾಥಮೇಳ ವೀಣೆ'ಯೆಂದು ಹೆಸರಿದೆ.

ವಿಜಯನಗರದ ಅರಸರು ಮತ್ತು ತಂಜಾವೂರಿನ ನಾಯಕ ದೊರೆಗಳು ಸಂಗೀತ ಸಾಹಿತ್ಯಗಳಲ್ಲಿ ಉದ್ದಾಮ ಪಂಡಿತರಾಗಿದ್ದರು. ಈ ರಾಜರುಗಳ ಪ್ರೋತ್ಸಾಹವಿಲ್ಲದಿದ್ದರೆ, ತಲೆಮಾರಿನಿಂದ ತಲೆಮಾರಿಗೆ ಸಂಗೀತ ಪರಂಪರೆ ಪುಷ್ಟಿಗೊಂಡು ಸಾಗಿ ಬರುತ್ತಿರಲಿಲ್ಲ. ಅಂತೆಯೇ ಮೈಸೂರಿನ ದೊರೆಗಳೂ ಸಂಗೀತ ಸಾಹಿತ್ಯಗಳಲ್ಲಿ ನಿಷ್ಣಾತ ವಿದ್ವಾಂಸರಾಗಿದ್ದರೆಂಬ ಅಂಶ ಕನ್ನಡಿಗರೆಲ್ಲರ ಹೆಮ್ಮೆಗೆ ಕಾರಣವಾಗಿದೆ. ಸಂಗೀತ ಸಾಹಿತ್ಯಗಳ ಬೆಳವಣಿಗೆಯಲ್ಲಿ ಮೈಸೂರು ರಾಜರ ಕೊಡುಗೆಯು ಅಮೂಲ್ಯವಾಗಿದೆ. ಈ ದೊರೆಗಳಲ್ಲಿ

ಚಿಕ್ಕದೇವರಾಯರು (ಕ್ರಿ.ಶ. 1672–1704) ಬಹಳ ಪ್ರಸಿದ್ಧರು. ಇವರು ಸಂಸ್ಕೃತ, ಕನ್ನಡ ಮತ್ತು ಸಂಗೀತದಲ್ಲಿ ದೊಡ್ಡ ವಿದ್ವಾಂಸರಾಗಿದ್ದರು. ಇವರ ಇತರ ಪ್ರಸಿದ್ಧ ಕನ್ನಡ ಗ್ರಂಥಗಳೊಂದಿಗೆ 'ಗೀತ ಗೋಪಾಲ' ಎಂಬ ಅಮರ ಸಂಗೀತ ಗ್ರಂಥ ವಿಶೇಷ ಪ್ರಸಿದ್ಧಿಯಾಗಿದೆ. ಜಯದೇವನಂತೆ ಚಿಕ್ಕದೇವರಾಯರು ಗೀತಗೋಪಾಲದಲ್ಲಿ ಕೃಷ್ಣಲೀಲೆಯನ್ನು ವರ್ಣಿಸುವ ಕೃತಿಗುಚ್ಛವನ್ನು ನೀಡಿದ್ದಾರೆ. ಜಯದೇವನ 'ಗೀತಗೋವಿಂದ' ದಲ್ಲಿ ಪ್ರತಿರಚನೆಗೂ ಎಂಟು ಪಾದಗಳಿದ್ದರೆ, ಗೀತ ಗೋಪಾಲದಲ್ಲಿ ಪ್ರತಿ ರಚನೆಗೂ ಏಳು ಪಾದಗಳಿವೆ. ಆ ಕಾರಣ, ರಚನೆ 'ಸಪ್ತಪದಿ' ಎಂದು ಪ್ರಸಿದ್ಧವಾಗಿದೆ. ರಚನೆಗಳು ಬೇರೆ ಬೇರೆ ರಾಗ ತಾಳಗಳಲ್ಲಿವೆ.

ಹೀಗೆ, ರಾಜಕೀಯ ಜಯಾಪಜಯಗಳ ಆಂದೋಲನದಲ್ಲು ಸಹ, ಕರ್ನಾಟಕದಲ್ಲಿ ಸಂಗೀತ ಕಲೋಪಾಸಕರ ಶ್ರದ್ಧೆ, ಭಕ್ತಿಗಳಿಂದ ಕರ್ನಾಟಕ ಸಂಗೀತ ಪದ್ಧತಿಯ ಪರಂಪರೆ ಉಳಿದು ಅನೂಚಾನವಾಗಿ ಸಾಗಿ ಬಂದಿದೆ.

ಮೂಲ ಲೇಖಕರು ಮತ್ತು ಅನುವಾದಕರು : **ಶ್ರೀ ಎಲ್. ರಾಜಾರಾವ್**

# ಅಧ್ಯಾಯ 2

## ಪೋರ್ಚುಗೀಸರು ಮತ್ತು ಕರ್ಣಾಟಕ

ಭಾರತಕ್ಕೆ ಬರಲು ಜಲಮಾರ್ಗವನ್ನು ಹುಡುಕುವ ಐರೋಪ್ಯರ ಯತ್ನ ಜಗತ್ತಿನಾದ್ಯಂತ ಐರೋಪ್ಯರ ಪ್ರಾಬಲ್ಯ ಬೆಳೆಯಲು ನಾಂದಿ ಮಾಡಿತು. ಕ್ರಿ.ಶ. 1492 ರಲ್ಲಿ ಕೊಲಂಬಸ್ ಅಮೆರಿಕದೆಡೆ ಹೋಗುವ ಮಾರ್ಗ ಕಂಡುಹಿಡಿದರೆ, 1498 ರಲ್ಲಿ ಪೋರ್ಚುಗಲ್‌ನ ವಾಸ್ಕೊಡಿ ಗಾಮಾ ಭಾರತದ ಕರಾವಳಿಯನ್ನು ತಲಪಿದ. ಗಾಮಾನ ಕಾಲದಿಂದಲೇ ಕರ್ಣಾಟಕ ಮತ್ತು ಪೋರ್ಚುಗೀಸರ ನಡುವೆ ನಿಕಟ ಸಂಪರ್ಕ ಆರಂಭವಾಯಿತು.

ಕ್ರಿ.ಶ. 1504 ರಲ್ಲಿ ಗಾಮಾ ಭಾರತದ ಎರಡನೇ ಯಾತ್ರೆ ಕೈಕೊಂಡಾಗ, ಗೆರಸೊಪ್ಪೆಯ ಬಳಿಯ ಕರಾವಳಿಯಲ್ಲಿನ ತಿಮ್ಮೋಜ ಎಂಬ ನಾವಿಕನೊಡನೆ ಸೆಣಸಿದನೆಂದೂ ಭಟ್ಕಳದ (ಹಾಡುವಳ್ಳಿ) ದೊರೆಯೊಡನೆ ಹೋರಾಡಿ, ಕೊನೆಗೆ ಅವನ ಜೊತೆ ಒಪ್ಪಂದ ಮಾಡಿಕೊಂಡನೆಂದೂ ತಿಳಿಯುತ್ತದೆ (Correia, G., Three Voyages of Gama, III, P. 309; Danvers, C.F., Portuguese in India, P. 81–82). 1505ರಲ್ಲಿ ಇದೇ ರೀತಿ ಹೊನ್ನಾವರದ ಮೇಲೆ ದಾಳಿಮಾಡಿ ಪೋರ್ಚುಗೀಸರು ಆ ಬಂದರಿನಿಂದ ಕಪ್ಪ ಸಂಗ್ರಹಿಸಿದರು (Heras, H., Aravidu Dynasty, P. 213–14). ತುರುಕರ ವೈರಿಗಳಾದ ಪೋರ್ಚುಗೀಸರ ಜೊತೆ ತಿಮ್ಮೋಜನು ಸ್ನೇಹ ಮಾಡಿಕೊಂಡ. ತಿಮ್ಮೋಜನು ವಿಜಯನಗರದ ದೊರೆಗಳ ಸೇವೆಯಲ್ಲಿರುವ ಒಬ್ಬ ನಾವಿಕನಾಗಿದ್ದು, ಬಿಜಾಪುರದ ಆದಿಲಶಹನ ವಿರುದ್ಧ ಹೋರಾಡಲು ನೇಮಿಸಲ್ಪಟ್ಟ ವ್ಯಕ್ತಿಯೆಂದು ರೆ. ಹೆರಾಸರ ಅಭಿಪ್ರಾಯ.

ತಿಮ್ಮೋಜನ ನೆರವಿನಿಂದಲೇ 1510 ರಲ್ಲಿ ಪೋರ್ಚುಗೀಸ್ ಮಂಡಲಾಧಿಕಾರಿ ಅಲ್ಬುಕರ್ಕ್ ಗೋವೆಯನ್ನು ಆದಿಲಶಹನಿಂದ ವಶಪಡಿಸಿಕೊಂಡ. (Faria y Sousa, Asia Portuguesa, I, P. 304; Whiteway, R. S., The Rise of Portuguese Power in India, 138-40).

ಗೆರಸೊಪ್ಪೆ ರಾಜ್ಯದಲ್ಲಿ ಉತ್ತರಾಧಿಕಾರಕ್ಕಾಗಿ ಜಗಳವಾದಾಗ, 'ಮೆಲ್ರಾವೊ' ಎಂದು ಉಲ್ಲಿಖಿತದಾದ ಗೆರಸೊಪ್ಪೆಯ ನ್ಯಾಯಬದ್ಧ ಉತ್ತರಾಧಿಕಾರಿ ಪೋರ್ಚುಗೀಸರ ಆಶ್ರಯ ಪಡೆದ; ಗೋವೆಯಲ್ಲಿ ಅವನಿಗೆ ಹಿರಿಯ ಅಧಿಕಾರ ಕೊಡಲಾಯಿತು. ಮುಂದೆ ಈ ರಾಜಕುಮಾರ ಗೋವೆಯನ್ನು ತ್ಯಜಿಸಿ, ಮತ್ತೆ ತನ್ನ ಸಿಂಹಾಸನ ಗಳಿಸಿಕೊಂಡ–(Whiteway, P. 140; Danvers, I, 242-3).

ಆದಿಲಶಹನಿಂದ ಗೋವೆಯನ್ನು ವಶಪಡಿಸಿಕೊಂಡ ಪೋರ್ಚುಗೀಸರ ಜೊತೆ ಸ್ನೇಹ ಬೆಳೆಸಲು ವಿಜಯನಗರದ ದೊರೆ ಕೃಷ್ಣದೇವರಾಯನು ಉತ್ಸುಕನಾಗಿದ್ದ. ಪೋರ್ಚುಗೀಸರಿಗೂ ಮುಸಲ್ಮಾನರಿಗೂ ಇದ್ದ ಪಾರಂಪರಿತ ದ್ವೇಷದ ವಿಚಾರ ವಿಜಯನಗರಕ್ಕೆ ತಿಳಿದಿತ್ತು. ಪರ್ಶಿಯಾ ದೇಶದಿಂದ ಉತ್ತಮ

ಯುದ್ಧಾಶ್ವಗಳನ್ನು ಭಾರತಕ್ಕೆ ತರುತ್ತಿದ್ದ ಅರಬ್ಬರು ಆ ಕುದುರೆಗಳನ್ನು ಹೆಚ್ಚಾಗಿ ಬಿಜಾಪುರಕ್ಕೇ ಮಾರುತ್ತಿದ್ದರು. ಅರಬ್ಬರ ವೈರಿಗಳಾದ ಪೋರ್ಚುಗೀಸರನ್ನು ಒಲಿಸಿಕೊಂಡಲ್ಲಿ ಈ ಅಶ್ವಗಳು ತಮಗೇ ಸಿಗುವುವೆಂದು ವಿಜಯನಗರ ನಂಬಿತ್ತು. ವಿಜಯನಗರಕ್ಕೆ ಪೋರ್ಚುಗೀಸ್ ವ್ಯಾಪಾರಿಗಳ ಯಾತಾಯಾತ ಹೆಚ್ಚಿತು.

ಜಗಳಗಂಟತನಕ್ಕೆ ಹೆಸರಾದ ಪೋರ್ಚುಗೀಸರು, ವಿಜಯನಗರದ ಈ ಸ್ನೇಹದ ನೀತಿಯ ದುರುಪಯೋಗ ಪಡೆದು, ಶೀಘ್ರವೇ ತಾವು ಪಶ್ಚಿಮ ಕರಾವಳಿಯ ವ್ಯಾಪಾರದ ಸರ್ವಸ್ವಾಮಿಗಳೆಂಬಂತೆ ವರ್ತಿಸತೊಡಗಿದರು. ಕುಂದಾಪುರ (ಬಾರ್ಸೆಲೂರ್), ಬಾರ್ಕೂರು, ಮಂಗಳೂರು, ಮಂಜೇಶ್ವರ, ಕುಂಬ್ಳೆ, ಮೂಲ್ಕಿ, ಕಾಸರ್ಗೋಡ್, ಚಿತ್ತಾಕುಲ (ಕಾರವಾರ ಬಳಿ), ಅಂಕೋಲೆ, ಗೋಕರ್ಣ, ಮಿರ್ಜಾನ್, ಹೊನ್ನಾವರ ಮುಂತಾದ ಕನ್ನಡ ಬಂದರುಗಳಿಂದ ವಾರ್ಷಿಕ ಕಪ್ಪ ಸಂಗ್ರಹಿಸತೊಡಗಿದರು. (Sturrock, South Kanara Gazetteer, PP. 68-69; Bombay Gazetteer, Kanara, II, P. 114). ಕರಾವಳಿಯ ಬಂದರುಗಳ ವ್ಯಾಪಾರಿಗಳನ್ನು ಸದೆಬಡಿದು, ಪಟ್ಟಣಗಳನ್ನು ಸೂರೆ ಮಾಡಿ ಹಾಗು ನಾನಾ ವಿಧದ ಹಿಂಸಾಚಾರಗಳಿಂದ ಅವರು ಈ ಸಂಗ್ರಹಣ ಪದ್ಧತಿಯನ್ನು ಮಾಮೂಲಾಗಿ ಮಾಡಿಕೊಂಡಿದ್ದರು. 1515 ರಲ್ಲಿ ಮಂಗಳೂರು ಪಟ್ಟಣವನ್ನು ಅವರು ಸುಟ್ಟ ವಿಚಾರ ದಾಖಲೆಗಳಲ್ಲಿ ಕಾಣಿಸುತ್ತದೆ (Faria, II, P. 109). ಅದೇ ವರ್ಷ ಬಾರ್ಕೂರನ್ನೂ ಅವರು ಸೂರೆ ಮಾಡಿದರು (Faria, II, 118-19). 1530 ರಲ್ಲಿ ಮಂಗಳೂರನ್ನು ಮತ್ತೆ ಇದೇ ರೀತಿ ಸುಟ್ಟರು (ಮೇಲಿನದೇ, 191–92). 1542 ರಲ್ಲಿ ಭಟ್ಕಳವನ್ನು ಸುಟ್ಟು ನಾಶ ಮಾಡಿದ ವಿಚಾರ, ಹಾಡುವಳ್ಳಿಯ ಇತಿಹಾಸದಲ್ಲಿ ಉಲ್ಲೇಖಿಸಿದೆ. ಈ ರೀತಿ ಪೋರ್ಚುಗೀಸರ ವ್ಯವಹಾರವೆಲ್ಲ ದುಂಡಾವರ್ತಿಯದೇ ಆಗಿತ್ತು. ("ಪೋರ್ಚುಗೀಸ್" ಎಂದರೆ 'ಜಗಳಗಂಟ' ಎಂಬ ಅರ್ಥ ಕನ್ನಡ ಕರಾವಳಿಯಲ್ಲಿ ರೂಢಿಯಲ್ಲಿದೆ).

1547 ರಲ್ಲಿ ಪೋರ್ಚುಗೀಸರು ವಿಜಯನಗರದ ಸಮ್ರಾಟರ ಜೊತೆ ಒಂದು ವ್ಯಾಪಾರ ಒಪ್ಪಂದ ಮಾಡಿಕೊಂಡರು. ಇದರಂತೆ, ಗೋವೆಯಲ್ಲಿ ಬಂದಿಳಿದ ಎಲ್ಲ ಯುದ್ಧಾಶ್ವಗಳನ್ನು ಪೋರ್ಚುಗೀಸರು ವಿಜಯನಗರಕ್ಕೇ ಮಾರಬೇಕು; ಸಾಮ್ರಾಜ್ಯದೊಳಗಿನ ಎಲ್ಲ ವ್ಯಾಪಾರಿಗಳು ತಮ್ಮ ವಸ್ತುಗಳನ್ನು ಕುಂದಾಪುರ (ಬಾರ್ಸೆಲೂರ್) ಮತ್ತು ಹೊನ್ನಾವರ ಬಂದರುಗಳ ಮೂಲಕ ಪೋರ್ಚುಗೀಸರಿಗೇ ಮಾರಬೇಕು, ಎಂದು ಕರಾರಾಯಿತು. (Bombay Gazetteer, Kanara, II, 115; quoting Subsidios, II, 255–57).

ಕನ್ನಡ ನಾಡಿನ ಕಾಡುತ್ಪತ್ತಿ (ಕರಿಮೆಣಸು, ಶುಂಠಿ, ಮಸಾಲೆಸಾಮಾನು), ಅಕ್ಕಿ, ಸಕ್ಕರೆ, ಕೊಬ್ಬರಿಗಳನ್ನು ವಿಶೇಷವಾಗಿ ಪೋರ್ಚುಗೀಸರು ಕೊಳ್ಳುತ್ತಿದ್ದರು. ವಿಜಯನಗರ ಸಾಮ್ರಾಜ್ಯಕ್ಕೆ ಬೇಕಾದ ಯುದ್ಧಸಾಮಗ್ರಿಗಳು, ವಿಲಾಸದ ವಸ್ತುಗಳು,–ಇವನ್ನು ಯುರೋಪಿನಿಂದ ಪೂರೈಸುತ್ತಿದ್ದರು. ವಿಜಯನಗರ ರಾಜಧಾನಿಗೆ ನಿಕಟವಾಗಿದ್ದುದರಿಂದ ಗೋವೆ ಲಿಸ್ಬನ್‌ನಷ್ಟೇ ಘನವಂತಿಕೆಯ ನಗರವಾಗಿ ಬೆಳೆಯಿತು. ಆದರೆ 1565ರಲ್ಲಿ ವಿಜಯನಗರ ನಾಶವಾದಾಗ, ಗೋವೆಯ ವ್ಯಾಪಾರ ಭಾರಿ ದೊಡ್ಡ ಆಘಾತವನ್ನು ಎದುರಿಸಿತು. ಪೋರ್ಚುಗೀಸ್ ಮೂಲಗಳನ್ನು ಉದಾಹರಿಸುತ್ತ, "ಗೋವೆಯ ನಿವಾಸಿಗಳ ಸಂಖ್ಯೆ ಕಡಮೆಯಾಗುತ್ತ ಹೋಯಿತು. ಮತ್ತೊಮ್ಮೆ ಗೋವೆ ಚೇತರಿಸಿಕೊಳ್ಳಲಿಲ್ಲ", ಎಂದು ರೆ. ಹೆರಾಸ್ ಹೇಳಿದ್ದಾರೆ (Aravidu Dynasty, p. 240). ಸಿವೆಲ್ಲರೂ ಇದೇ ಮಾತನ್ನು ಉಚ್ಚರಿಸಿದ್ದಾರೆ (Sewell, Forgotten Empire).

ಆದರೆ ಕೃಷ್ಣಾತೀರದ ಕಾಳಗದ (ತಾಳಿಕೋಟೆ, 1565) ಅನಂತರ ಕರಾವಳಿಯ ಮೇಲಣ ವಿಜಯನಗರದ ಹಿಡಿತ ಸಡಿಲಾದಾಗ ಪೋರ್ಚುಗೀಸರ ದುಂಡಾವರ್ತನೆಯೂ ಹೆಚ್ಚಿತು. ಗೋವೆಯ

ದಕ್ಷಿಣಕ್ಕೆ ಕೆಲವು ಮಳಿಗೆಗಳನ್ನು ಸ್ಥಾಪಿಸಲು ಅವರು ಯತ್ನಿಸಿದರು. 1567ರಲ್ಲಿ ಅವರು ಮಂಗಳೂರಿನ ಕೆಲ ಭಾಗಗಳನ್ನು ವಶಪಡಿಸಿಕೊಂಡು, ಸೆಂಟ್ ಸೆಬೆಸ್ಟಾವು ಎಂಬ ಕೋಟೆಯನ್ನು ಕಟ್ಟಿಕೊಂಡರು (Faria, II, 435–8 ; Sewell, p. 190). 1569ರಲ್ಲಿ ಹೊನ್ನಾವರ (ಓನೋರ್) ವನ್ನು ಗೆದ್ದು ಅಲ್ಲೂ ಒಂದು ಕೋಟೆ ಕಟ್ಟಿದರು (Danvers, I, p. 547). ಅದೇ ವರ್ಷ ಕುಂದಾಪುರ (ಬಾರ್ಸೆಲೋರ್) ವಶಪಡಿಸಿಕೊಳ್ಳಲು ಯತ್ನಿಸಿ ವಿಫಲರಾದರೂ 1570ರಲ್ಲಿ ಅದನ್ನು ಜಯಿಸಿ, ಅಲ್ಲಿದ್ದ ಹಳೆಯ ಕೋಟೆಯನ್ನು ದುರುಸ್ತಿಮಾಡಿದರು (Danvers, 547). ಡಚ್ ಪ್ರವಾಸಿ ಲಿನ್ಸ್‌ಕೊತಿನ್ ಹೇಳುವಂತೆ, 1595ರಲ್ಲಿ ಪೋರ್ಚುಗೀಸರು ಪಶ್ಚಿಮ ಕರಾವಳಿಯಲ್ಲಿ ಅತಿಶಯ ಪ್ರಬಲರಾಗಿದ್ದರು. ಅವರಿಂದ ರಹದಾರಿ ಪಡೆಯದ ಯಾವ ನೌಕೆಯೂ ಅರಬಿಸಮುದ್ರದಲ್ಲಿ ಓಡಾಡುವಂತಿರಲಿಲ್ಲ (Greenlee: Voyages of Linschoten to East Indies, II, p. 67).

ಆದರೆ ಅನಂತರ ಮೆಲ್ಲಮೆಲ್ಲನೆ ಪೋರ್ಚುಗೀಸರ ಪ್ರಭಾವ ಕುಂದತೊಡಗಿತು. 1580ರಲ್ಲಿ ಪೋರ್ಚುಗಲ್ ಸ್ಪೇನ್‌ನ ದೊರೆಯ ಒಡೆತನಕ್ಕೆ ಸೇರಿಹೋಗಿತ್ತು. ಆಗ ಸಾಗರದ ಮೇಲೆ ಸ್ವಾಮ್ಯವನ್ನು ಪಡೆದಿದ್ದ ಸ್ಪೇನ್ 1588ರಲ್ಲಿ ಮತ್ತು ಅನಂತರ ಇಂಗ್ಲೆಂಡಿನ ನೌಕಾಸೇನೆಯ ಕೈಯಲ್ಲಿ ಸೋಲನ್ನುಂಡಿತು. ಹೀಗಾಗಿ ಸ್ಪೇನ್ ಹಾಗೂ ಪೋರ್ಚುಗಲ್‌ಗಳ ನೌಕಾಬಲ ದುರ್ಬಲವಾಯಿತು. ಇದೇ ಕಾಲಕ್ಕೆ ಕರ್ನಾಟಕದಲ್ಲಿ ಕೆಳದಿದೊರೆಗಳು ಪ್ರಬಲರಾಗಿ ಕನ್ನಡ ಕರಾವಳಿಯ ಮೇಲಣ ತಮ್ಮ ಹಿಡಿತವನ್ನು ಬಲಗೊಳಿಸಿದರು. ಇದರ ಜೊತೆ, ಇಂಗ್ಲೀಷರ, ಡಚ್ಚರ ಮತ್ತು ಫ್ರೆಂಚರ ಸ್ಪರ್ಧೆಯೂ ಹೆಚ್ಚಿ, ಪೋರ್ಚುಗೀಸರ ಭಾರತದಲ್ಲಿನ ವ್ಯಾಪಾರ ಕುಂದಿತು.

1618ರಲ್ಲಿ ಪೋರ್ಚುಗೀಸರನ್ನು ಕೆಳದಿ ವೆಂಕಟಪ್ಪ ನಾಯಕನು ಮಂಗಳೂರಲ್ಲಿ ಸೋಲಿಸಿ, ಅವರ ಕೋಟೆಯ ಹೊರತು ಪಟ್ಟಣದ ಬಹುಭಾಗಗಳನ್ನು ಗೆದು ಕೊಂಡ (Faria, III, 326). ಕನ್ನಡ ಕರಾವಳಿಯಲ್ಲಿ ಪೋರ್ಚುಗೀಸರ ನೌಕಾಪಡೆಗೆ (ಕೆಳದಿ ದೊರೆಗಳ ಕೈಯಲ್ಲಿ) ಆದ ಭಾರಿ ಸೋಲೊಂದನ್ನು (1630) ಇಂಗ್ಲಿಷ್ ದಾಖಲೆಗಳು ವರದಿಮಾಡಿವೆ (Foster, W., The English Factories in India, 1630–36, p. 98–99). ಮುಂದೆ 1633ರಲ್ಲಿ ಪೋರ್ಚುಗೀಸರಿಗೂ ಕೆಳದಿನಾಯಕರಿಗೂ ಆದ ಒಂದು ಒಪ್ಪಂದದಂತೆ ಗಂಗೊಳ್ಳಿ (ಕ್ಯಾಂಬೊಲಿಂ)ಯನ್ನು ಪೋರ್ಚುಗೀಸರಿಗೆ ಒಪ್ಪಿಸಲು ನಾಯಕರು ಸಮ್ಮತಿಸಿದರು (K. D. Swaminathan : Nayakas of Ikkeri, p. 76 ; quoting Pizes-e-Tratados, 1671, Folio, 17–19),

ಕೆಳದಿಯ ಅಪ್ರತಿಮ ದೊರೆ ಶಿವಪ್ಪನಾಯಕನು ಮಾತ್ರ 1652 ರ ಹೊತ್ತಿಗೆ ಪೋರ್ಚುಗೀಸರನ್ನು ಕನ್ನಡ ಕರಾವಳಿಯಿಂದ ಪೂರ್ತಿಯಾಗಿ ಓಡಿಸಿಬಿಟ್ಟು, ಪಶ್ಚಿಮ ಕರಾವಳಿಯ ಮೇಲೆ ತನ್ನ ಪೂರ್ತಿ ಸ್ವಾಮ್ಯವನ್ನು ಸ್ಥಾಪಿಸಿದನೆಂದು ‘ ಕೆಳದಿನೃಪವಿಜಯಂ ’ ಹಾಗೂ ಇತರ ಮೂಲಗಳು ತಿಳಿಸುತ್ತವೆ. 1652ರಲ್ಲಿ ಮಂಗಳೂರನ್ನು ಕಳೆದುಕೊಂಡು ಪೋರ್ಚುಗೀಸರು ಅದರ ಜೊತೆ ಕನ್ನಡ ಕರಾವಳಿಯಲ್ಲಿನ ಎಲ್ಲ ನೆಲೆಗಳನ್ನೂ ಕಳೆದುಕೊಂಡರೆಂದು ಡಾ॥ ಮೊರೇಸ್ ಹೇಳಿದ್ದಾರೆ (ಲಿಂಗಣ್ಣ : ಕೆಳದಿನೃಪವಿಜಯಂ, VII, 7, 8 ; Moraes, G., Mangalore, quoting Souza, Orienta Conquistrado, III, 19).

ಹೀಗಿದ್ದರೂ ಸುಮಾರು 17ನೆಯ ಶತಕದ ಕೊನೆಯ ವರೆಗೆ ಮಂಗಳೂರಿನ ಒಳನಾಡಿನ ಅಡ್ಯಾರ್‌ನಲ್ಲಿ (“ ಫರಂಗಿಪೇಟೆ) ಪೋರ್ಚುಗೀಸರು ಮಳಿಗೆಯೊಂದನ್ನು ಇಟ್ಟುಕೊಂಡಿದ್ದರೆಂದು ಶ್ರೀ ಗೋವಿಂದ ಪೈ

ಹೇಳಿದ್ದಾರೆ (ತೆಂಕನಾಡು. P. 50). ಆದರೆ ಅವರ ರಾಜಕೀಯ ಅಧಿಕಾರ ಮಾತ್ರ ಕರ್ನಾಟಕದಲ್ಲಿ ಉಳಿಯಲಿಲ್ಲ.

ಹೈದರ್‌ನ ಕಾಲದಲ್ಲಿ ಪಿಕ್ಕೊಸ್ತೊ ಎಂಬ ಒಬ್ಬ ಪೋರ್ಚುಗೀಸ್ ಸಾಹಸಿಗ ತನ್ನ ಕೆಲ ಪೋರ್ಚುಗೀಸ್ ಸಹಚರರೊಂದಿಗೆ ಮೈಸೂರಿನ ಸೇನೆಯಲ್ಲಿ ಸೇವೆಸಲ್ಲಿಸುತ್ತಿದ್ದ. 1764ರಲ್ಲಿ ಹೈದರ್ ಸೋದೆಯನ್ನು ಗೆದ್ದಾಗ ಸೋದೆಯ ದೊರೆ ಸದಾಶಿವನಾಯಕ ಪೋರ್ಚುಗೀಸರ ಆಶ್ರಯ ಪಡೆದು ಪೋಂಡಾದಲ್ಲಿ ನೆಲಸಿದ. ಪೋರ್ಚುಗೀಸರ ಸಂಪರ್ಕದ ಪರಿಣಾಮ ಮಾತ್ರ ಕರ್ನಾಟಕದ ಮೇಲೆ ಅಚ್ಚಳಿಯದಂತೆ ಉಳಿದಿದೆ. ಕರ್ನಾಟಕಕ್ಕೆ ಕ್ರಿಸ್ತ ಧರ್ಮವನ್ನು ಜನಪ್ರಿಯಗೊಳಿಸಿದವರು ಪೋರ್ಚುಗೀಸರು. ಮಂಗಳೂರು, ಹೊನ್ನಾವರ, ಕುಂದಾಪುರಗಳಲ್ಲಿನ ತಮ್ಮ ಕೋಟೆಗಳ ಜೊತೆ ಅವರು ಇಗರ್ಜಿಗಳನ್ನು ಕಟ್ಟಿದರು. ಮತಾಂತರವನ್ನೂ ಆರಂಭಿಸಿದರು. ಕರಾವಳಿಯ ಜನಕ್ಕೆ ಕೃಷಿ, ಪಶುಸಂಗೋಪನಗಳ ಸುಧಾರಿತ ವಿಧಾನಗಳನ್ನು ಕಲಿಸಿದರು. ವಿಲಾಯಿತಿ ಹಂದಿ, ಕುಕ್ಕುಟಗಳ ತಳಿಗಳನ್ನು ಜನಪ್ರಿಯಗೊಳಿಸಿದರು. ಬಸಳೆ, ಪಪ್ಪಾಯಿ (ಫರಂಗಿಹಣ್ಣು), ಅನನಾಸು, ಬಟಾಟೆ, ತಂಬಾಕು, ಗೋಡಂಬಿ, ಮುಸುಕಿನ ಜೋಳ ಗಳನ್ನು ಭಾರತಕ್ಕೆ ತಂದವರು ಅವರೇ.

'ಸಾಬೂನು' 'ತಂಬಾಕು' 'ಮೇಜು' 'ಇಸ್ತ್ರಿ' 'ಕಾಡತೂಸು' 'ಲೀಲಾವು' ಮುಂತಾದ ಪೋರ್ಚುಗೀಸ್ ಶಬ್ದಗಳು ಇಂದಿಗೂ ಕನ್ನಡ ಭಾಷೆಯಲ್ಲಿವೆ. ಪೋರ್ಚುಗೀಸರು ಕಟ್ಟಿದ ಐರೋಪ್ಯ ಶೈಲಿಯ ಕಟ್ಟಡಗಳು (ಚರ್ಚ್ ಇತ್ಯಾದಿ) ನಮ್ಮ ವಾಸ್ತುಶಿಲ್ಪದ ಮೇಲೆ ಪ್ರಭಾವ ಬೀರಿವೆ. ಕರ್ನಾಟಕದ ಇತಿಹಾಸರಚನೆಗೆ ಪೋರ್ಚುಗೀಸ್ ಕಾಗದ ಪತ್ರಗಳು, ಗ್ರಂಥಗಳು ಅಮೂಲ್ಯ ಮೂಲಾಧಾರಗಳಾಗಿವೆ. ಕರ್ನಾಟಕದ ಗಡಿಯಲ್ಲಿದ್ದ ಪೋರ್ಚುಗೀಸರ ವಸಾಹತಾಗಿದ್ದ ಗೋವೆ ಕರ್ನಾಟಕದ ಜನಜೀವನ ಸಂಸ್ಕೃತಿಗಳ ಮೇಲೆ ತನ್ನದೇ ಆದ ಪ್ರಭಾವ ಬೀರಿದೆ.

ಲೇಖಕರು : ಡಾ।। ಸೂರ್ಯನಾಥ ಕಾಮತ್

# ಸಣ್ಣ ರಾಜ್ಯಗಳು

ವಿಜಯನಗರ ಸಾಮ್ರಾಜ್ಯ ಮತ್ತು ಬಹಮನಿ ರಾಜ್ಯಗಳು 14 ರಿಂದ 17 ನೆಯ ಶತಮಾನಗಳ ವರೆಗೆ ಏಳ್ಗೆ ಪಡೆದುದರ ವೈಭವದ ಬಗ್ಗೆ ಮತ್ತು ಆ ಕಾಲದ ಸಾಮಾಜಿಕ, ಸಾಂಸ್ಕೃತಿಕ ಜೀವನವನ್ನು ಕುರಿತು ಈ ಮೊದಲು ವಿವೇಚಿಸಿದ್ದೇವೆ. ಇದೇ ಕಾಲದಲ್ಲಿ ಕೆಲವು ಪಾಳೆಯಗಾರರು ಕಟ್ಟಿದ ಸಣ್ಣ ಪುಟ್ಟ ರಾಜ್ಯಗಳೂ ಕರ್ಣಾಟಕದಲ್ಲಿ ಅಸ್ತಿತ್ವದಲ್ಲಿದ್ದು ಪ್ರಧಾನ ಆಳಿಕೆಯನ್ನು ನಡೆಸಿದವು. ಅವುಗಳಲ್ಲಿ ಕೆಲವು ಬಹು ಮಟ್ಟಿಗೆ ಸಾರ್ವಭೌಮತ್ವವನ್ನು ಹೊಂದಿದ್ದವು ಅಥವಾ ಹೆಸರು ಮಾತ್ರಕ್ಕೆ ವಿಜಯ ನಗರದ ಅಥವಾ ಇತರರ ಅಧೀನತೆಯನ್ನು ಹೊಂದಿದ್ದವು. ನಮ್ಮ ದೇಶದಲ್ಲಿ ಆ ರೀತಿಯ ವಿಕೇಂದ್ರಿತ ಅಧಿಕಾರವು ಪ್ರಾಚೀನ ಮತ್ತು ಮಧ್ಯಕಾಲೀನ ಗುಣವಿಶೇಷವೇ ಆಗಿತ್ತು. ಈ ಸಣ್ಣ ಪುಟ್ಟ ರಾಜ್ಯಗಳು ಹಲವು ಕಾಲದ ವರೆಗೆ ಮೆರೆದಿದ್ದು ಮಹತ್ವದ ಪಾತ್ರವನ್ನು ವಹಿಸಿದ್ದವು. ಅವು ದೇಶದಲ್ಲಿ ರಾಜಕೀಯ ಜೀವನದ ಸ್ಥಿರತೆಯನ್ನುಳಿಸಿಕೊಂಡು ತಮ್ಮ ಪ್ರದೇಶದಲ್ಲಿ ವಿದ್ಯೆ-ಕಲೆಗಳನ್ನು ಬೆಳೆಸಿದವು. ಅಲ್ಲದೆ ದೇಶದ ಸಾಂಸ್ಕೃತಿಕ ಅಭಿವೃದ್ಧಿಗೂ ಕಾಣಿಕೆಯನ್ನು ಸಲ್ಲಿಸಿದವು.

ಕರ್ಣಾಟಕದಲ್ಲಿ ಪ್ರಗತಿ ಪಡೆದ ಈ ಸಣ್ಣ ರಾಜ್ಯಗಳ ವಿಷಯವಾಗಿ ಈಗ ವಿವೇಚಿಸೋಣ.

## ಯಲಹಂಕ ಪ್ರಭುಗಳು

### (ಬೆಂಗಳೂರಿನ ಸ್ಥಾಪಕರು)

ಕೆಂಪೇಗೌಡನು ಆಧುನಿಕ ಬೆಂಗಳೂರು ನಗರದ ಸ್ಥಾಪಕನೆಂದು ಖ್ಯಾತಿಗೊಂಡಿದ್ದಾನೆ. ಕೆಂಪೇಗೌಡನ ಪೂರ್ವಿಕರು ಮೊತ್ತಮೊದಲು ಬೆಂಗಳೂರಿನ ಎಂಟು ಮೈಲಿ ಉತ್ತರಕ್ಕಿರುವ ಯಲಹಂಕನಾಡಿನಲ್ಲಿ ನೆಲಸಿದ್ದರು. ಕ್ರಮೇಣ ವಿಜಯನಗರದ ಸಮ್ರಾಟರಿಗೆ ಕಾಣಿಕೆಗಳನ್ನು ಕೊಡುತ್ತಾ ಈ ಪ್ರದೇಶದ ಅರಸರಾದರು. ಆ ಸಮಯದ ರಾಜಕೀಯ ಆವಶ್ಯಕತೆಗಳಿಗೆ ಅನುಗುಣವಾಗಿ ಅವರು ಮರಾಠ ಮತ್ತು ಮುಸ್ಲಿಮ್ ರಾಜರ ಆಶ್ರಿತರಾದರು. (ಕ್ರಿ.ಶ. 1728ರಲ್ಲಿ ಮೈಸೂರಿನ ದೊಡ್ಡ ಕೃಷ್ಣರಾಜ ಒಡೆಯರಿಗೆ ಸೋತು ಇವರ ಮೂರು ಶತಮಾನದ ಆಳಿಕೆಯು ಕೊನೆಗಂಡಿತು).

ರಣಭೈರಗೌಡನೆಂಬವನು ಕೆಂಪೇಗೌಡನ ಪೂರ್ವಿಕರಲ್ಲಿ ಒಬ್ಬನು. ಅವನು ತನ್ನ ಕುಟುಂಬ ಸಮೇತ ಕಾಂಚೀಪುರದ ಬಳಿಯ ಆತ್ತೂರಿನಿಂದ ದೇವನಹಳ್ಳಿಯ ಸಮೀಪದ ಆವತಿ ಎಂಬ ಹಳ್ಳಿಗೆ ವಲಸೆ ಬಂದನು. ರಣಭೈರಗೌಡನ ಕೊನೆಯ ಮಗನಾದ ಜಯಗೌಡನು ಯಲಹಂಕದಲ್ಲೇ ನೆಲೆತಿಂತು ಕ್ರಿ.ಶ. 1418–1433 ರ ವರೆಗೆ ರಾಜ್ಯವಾಳಿದನು. ಜಯಗೌಡನ ಉತ್ತರಾಧಿಕಾರಿಗಳು ಗಿಡ್ಡೇಗೌಡ (ಕ್ರಿ.ಶ. 1433—1443) ಮತ್ತು ಕೆಂಪನಂಜೇಗೌಡ (ಕ್ರಿ.ಶ. 1443–1513). ಅವರ ಕುಲದೇವತೆ ಕೆಂಪಮ್ಮ

ನಾದುದರಿಂದ ಈ ಕುಟುಂಬದ ಪ್ರತಿಯೊಬ್ಬರೂ ಕೆಂಪೇಗೌಡ ಎಂಬ ಹೆಸರನ್ನು ಇಟ್ಟುಕೊಂಡರು. ಆ ದೇವತೆಯ ಆಶೀರ್ವಾದದಿಂದ ಗಿಡ್ಡೇಗೌಡನು ಕೆಂಪನಂಜೇಗೌಡನೆಂಬ ಮಗನನ್ನು ಪಡೆದನು. ಆ ಕುಲದಲ್ಲಿ ಮೂವರು ಶ್ರೇಷ್ಠ ಕೆಂಪೇಗೌಡರು ಇದ್ದರು. ಆದುದರಿಂದ ಆಯಾ ಚಾರಿತ್ರಿಕ ಸಾಧನೆಗಳನ್ನು ಆಯಾ ವ್ಯಕ್ತಿಗೆ ಹೊಂದಿಸುವುದರಲ್ಲಿ ನಾಮಸಾಮ್ಯದಿಂದಾಗಿ ತೊಡಕುಂಟಾಗಿದೆ.

ಕೆಂಪನಂಜೇಗೌಡನ ಮಗನಾದ ಒಂದನೆ ಕೆಂಪೇಗೌಡನು ಆ ಕುಲದ ಉಲ್ಲೇಖನಾರ್ಹ ರಾಜನಾಗಿದ್ದು ಕ್ರಿ.ಶ. 1513 ರಿಂದ 1569 ರ ವರೆಗೆ ಆಳಿದನು. ಅವನು ವಿಜಯನಗರದ ಕೃಷ್ಣದೇವರಾಯ ಮತ್ತು ಅಚ್ಯುತರಾಯರಿಂದ ಪೋಷಿತನಾದನು. ಈ ಒಂದನೆ ಕೆಂಪೇಗೌಡನು ಆಧುನಿಕ ಬೆಂಗಳೂರು ನಗರವನ್ನು ಕ್ರಿ.ಶ. 1537 ರಲ್ಲಿ ಸ್ಥಾಪಿಸಿದನು. ಅವನ ರಾಜಧಾನಿಯಿಂದ ಹತ್ತು ಮೈಲಿ ದೂರದಲ್ಲಿರುವ ಶಿವಸಮುದ್ರದಲ್ಲಿದ್ದುಕೊಂಡು ತಾನು ಸ್ಥಾಪಿಸುವ ಹೊಸನಗರಕ್ಕೆ ಈ ಬೆಂಗಳೂರನ್ನೇ ಯೋಗ್ಯ ಸ್ಥಳವಾಗಿ ಆರಿಸಿಕೊಂಡನೆಂದು ಹೇಳುತ್ತಾರೆ. ಮಂಗಳಕರವಾದ ದಿನದಲ್ಲಿ ಈ ನಗರವನ್ನು ಸ್ಥಾಪಿಸಿ, ಮಣ್ಣಿನ ಕೋಟೆಯನ್ನು ಕಟ್ಟಿ ಅವುಗಳ ಮೇಲೆ ನಾಲ್ಕು ಫಿರಂಗಿಗಳ ಸೇನೆಯನ್ನು ಏರಿಸಿದನು. ಈ ಸ್ಥಳದ ಸಂಬಂಧವಾಗಿ ಒಂದು ಮೊಲವು ಒಂದು ನಾಯಿಯನ್ನು ಪ್ರತಿಭಟಿಸಿದ ಕಥೆಯಿದೆ.

ಬೆಂಗಳೂರು ಹಳ್ಳಿಯಾದರೊ, ಕೆಂಪೇಗೌಡನು ಸ್ಥಾಪಿಸಿದ ನಗರಕ್ಕಿಂತ ಬಹಳ ಹಳೆಯದು. ಹೆಬ್ಬಾಳದ ಸಮೀಪವಿರುವ ಹಳೆ ಬೆಂಗಳೂರು ಹೊಯ್ಸಳರಾಜ ಎರಡನೆ ವೀರಬಲ್ಲಾಳನು ಸ್ಥಾಪಿಸಿದು ದೆಂದು ಹೇಳುತ್ತಾರೆ. ಬೇಗೂರಿನ ಕ್ರಿ.ಶ. 900 ರ ಒಂದು ಶಾಸನವು ಬೆಂಗಳೂರನ್ನು ಉಲ್ಲೇಖಿಸುತ್ತದೆ. ಬೆಂಗಳೂರು ಗ್ರಾಮವು ಸು. ಕ್ರಿ.ಶ. 900 ರಿಂದಲೇ ಅಸ್ತಿತ್ವದಲ್ಲಿತ್ತೆಂದು ಹೇಳಬಹುದು. ಆದರೆ ಈಗಿನ ಬೆಂಗಳೂರು ಒಂದನೆ ಕೆಂಪೇಗೌಡನು ಸ್ಥಾಪಿಸಿದಂದಿನಿಂದ ಇದೆ.

ವಿಜಯನಗರದ ರಾಜನಾದ ಅಚ್ಯುತರಾಯನು ಕೆಂಪೇಗೌಡನ ಬಗ್ಗೆ ಬಹಳ ಸಂತೋಷಪಟ್ಟು ಅವನಿಗೆ 30,000 ಪಗೋಡಗಳ (ಅಥವಾ 12 ಹೋಬಳಿ) ಉತ್ಪನ್ನ ಬರುವ ಬೆಂಗಳೂರಿನ ಸುತ್ತಣ ಪ್ರದೇಶವನ್ನು ಕೊಟ್ಟನು. ಆ ಮೇಲೆ ಕೆಂಪೇಗೌಡನು ಆ ಪಟ್ಟಣವನ್ನು ಅಭಿವೃದ್ಧಿಪಡಿಸಿ, ವಿದೇಶದ ವ್ಯಾಪಾರಿಗಳು ಮತ್ತು ಪಾಂಚಾಳರು ಅಲ್ಲಿ ನೆಲಸುವಂತೆ ಪ್ರೋತ್ಸಾಹಿಸಿದನು. ಕೆಂಪೇಗೌಡನ ಸೊಸೆಯಾದ ಲಕ್ಷಮ್ಮನು ಬೆಂಗಳೂರಿನ ಮುಖ್ಯದ್ವಾರದ ನಿರ್ಮಾಣಕ್ಕಾಗಿ ತನ್ನನ್ನೇ ಬಲಿಕೊಟ್ಟಳೆಂದು ಹೇಳುತ್ತಾರೆ ಅವಳ ನೆನಪಿಗಾಗಿಯೇ ಕೋರಮಂಗಲದಲ್ಲಿ ಆಕೆಯ ಪ್ರತಿಮೆಯನ್ನು ನಿಲ್ಲಿಸಿ ಒಂದು ದೇವಾಲಯವನ್ನು ಕಟ್ಟಿಸಿದನು. ಅಲ್ಲಿ ಈಗಲೂ ಪೂಜೆ ನಡೆಯುತ್ತದೆ.

ಕೆಂಪೇಗೌಡನು ಸ್ವಭಾವತಃ ಭಕ್ತಿವಂತನೂ ಉದಾರಿಯೂ ಆಗಿದ್ದನು. ಅವನು ಬಹು ಸಂಖ್ಯೆಯಲ್ಲಿ ದೇವಾಲಯಗಳನ್ನೂ ಅಗ್ರಹಾರಗಳನ್ನೂ ಕಟ್ಟಿಸಿದನು. ಆ ದೇವಾಲಯಗಳ ಅಭಿವೃದ್ಧಿ ಮತ್ತು ಪೂಜೆಗಳಿಗಾಗಿ ಧಾರಾಳವಾಗಿ ದತ್ತಿಗಳನ್ನು ಬಿಟ್ಟಿದ್ದನು. ತನ್ನ ಕುಲದೇವತೆಯ ಹೆಸರಿನಲ್ಲಿ ಗವಿಗಂಗಾಧರೇಶ್ವರ ದೇವಾಲಯವನ್ನೂ ಕೆಂಪಾಂಬುಧಿ ಕೆರೆಯನ್ನೂ ಬೆಂಗಳೂರಿನಲ್ಲಿ ಕಟ್ಟಿಸಿದನು. ಗಂಗಾಧರೇಶ್ವರ ದೇವಾಲಯವು ಒಂದು ಗುಹೆಯ ಮೇಲೆ ನಿರ್ಮಾಣವಾಗಿದೆ. ಭದ್ರವಾದ ಬಂಡೆಯ ಮೇಲೆ ಹನ್ನೆರಡು ಅಡಿ ಎತ್ತರದಲ್ಲಿ ಆ ಗುಂಡುಕಲ್ಲಿನಿಂದಲೇ ಕೆತ್ತಲಾದ ಎರಡು ಛತ್ರಿಗಳು, ಒಂದು ತ್ರಿಶೂಲ, ಭೇರಿಯೂ ಅಲ್ಲಿವೆ. ಮಲಗಿದ ಭಂಗಿಯಲ್ಲಿರುವ ಹನ್ನೊಂದು ಅಡಿ ಎತ್ತರದ ಸುಂದರವಾದ ಬಸವನಿಂದ ಕೂಡಿದ ಬಸವೇಶ್ವರ ದೇವಾಲಯವು ಕೂಡ ಕೆಂಪೇಗೌಡನಿಂದಲೇ ನಿರ್ಮಿತವಾಗಿದೆ. ವೃಷಭಾವತಿಯೆಂಬ ನದಿಯು ಇದೇ ದೇವಾಲಯದ ಹಿಂದುಗಡೆಯಿರುವ ಸಣ್ಣಕೆರೆಯಲ್ಲಿ ಹುಟ್ಟಿ, ಕೆಂಪಾಂಬುಧಿ ಕೆರೆಯನ್ನು ಪೋಷಿಸುತ್ತಲಿದೆ ಎಂದು ಹೇಳುವರು. ಬಸವೇಶ್ವರ ದೇವಾಲಯದ ಸುತ್ತಲೂ ಗಣಪತಿ, ಆಂಜನೇಯ,

ನಂದೀಶ್ವರ ಮತ್ತು ಮಲ್ಲಿಕಾರ್ಜುನ ದೇವಾಲಯಗಳನ್ನು ಕೆಂಪೇಗೌಡನು ಕಟ್ಟಿಸಿರುವನು. ಈ ಎಲ್ಲ ದೇವಾಲಯಗಳಲ್ಲಿಯೂ ಕಲ್ಲಿನಿಂದಲೇ ಕೆತ್ತಿದ ಮಹಾವಿಗ್ರಹಗಳಿವೆ. ಇವುಗಳೊಡನೆ ಕೆಂಪೇಗೌಡನು ಅಲಸೂರಿನಲ್ಲಿ ಸೋಮೇಶ್ವರ ದೇವಾಲಯವನ್ನೂ ಕೋಟೆಯೊಳಗಡೆ ಚೆನ್ನಿಗರಾಯ ದೇವಾಲಯವನ್ನೂ ಕಟ್ಟಿಸಿ, ಅವುಗಳಿಗೆ ಧಾರಾಳವಾದ ಕೊಡುಗೆಗಳನ್ನು ಸಲ್ಲಿಸಿದನು.

ನಗರದ ನಾಲ್ಕು ದಿಕ್ಕುಗಳಲ್ಲಿ ಪ್ರಸಿದ್ಧವಾದ ನಾಲ್ಕು ಕಾವಲು ಗೋಪುರಗಳನ್ನು ಅವನು ಕಟ್ಟಿಸಿದನು. ಅವನು ಹೀಗೆ ಮಾಡಿದುದು ನಗರದ ಮುಂದಿನ ವಿಸ್ತರಣದ ಎಲ್ಲೆಯನ್ನು ಸೂಚಿಸುವುದಕ್ಕಾಗಿ ಎಂದು ಹೇಳುತ್ತಾರೆ. (ಪೂರ್ವದಿಕ್ಕಿನದು ಅಲಸೂರಿನಲ್ಲಿಯೂ ಉತ್ತರದಿಕ್ಕಿನದು ಹೆಬ್ಬಾಳದಲ್ಲಿಯೂ ದಕ್ಷಿಣ ದಿಕ್ಕಿನದು ಲಾಲ್‌ಬಾಗಿನಲ್ಲಿಯೂ ಪಶ್ಚಿಮದಿಕ್ಕಿನದು ಕೆಂಪಾಂಬುಧಿ ಕೆರೆಯ ದಡದಲ್ಲಿಯೂ ಇದೆ. ಬಸವೇಶ್ವರ ದೇವಾಲಯದ ಹಿಂದುಗಡೆಯೂ ಒಂದಿದೆ. ನಾಲ್ಕು ಕಂಬಗಳಿಂದ ಕೂಡಿದ ಮಂಟಪದ ಮೇಲೆ ಕಟ್ಟಿದ ಸುಂದರವಾದ ಸಣ್ಣ ಗೋಪುರಗಳು ದೃಷ್ಟಿಗೆ ಎದ್ದು ಕಾಣುವ ಸ್ಥಳಗಳಲ್ಲಿವೆ).

ಕೆಂಪೇಗೌಡನು ಕ್ರಿ.ಶ. 1550ರಲ್ಲಿ ಬೆಂಗಳೂರಿನಿಂದ ಸುಮಾರು ಇಪ್ಪತ್ತೈದು ಮೈಲಿ ದೂರದಲ್ಲಿ ವಾಯವ್ಯ ದಿಕ್ಕಿನಲ್ಲಿರುವ ಪವಿತ್ರವಾದ ಶಿವಗಂಗೆಯ ಬೆಟ್ಟವನ್ನು ಅಧೀನಗೊಳಿಸಿಕೊಂಡನು. ಅಲ್ಲಿ ಅವನು ಬಹುಸಂಖ್ಯೆಯಲ್ಲಿ ದೇವಾಲಯ, ಗೋಪುರ, ಸತ್ರಗಳನ್ನು ಕಟ್ಟಿಸಿ, ಜಾತ್ರೆ-ಪೂಜಾದಿಗಳನ್ನು ತಪ್ಪದೆ ಆಚರಿಸುವುದಕ್ಕಾಗಿ ದಾನ ಮಾಡಿದನು. ಅವನು ದೊಡ್ಡದೊಂದು ಸಭಾಮಂಟಪವನ್ನು ಕಟ್ಟಿಸಿ, ಅಲ್ಲಿ ತನ್ನ ಪ್ರತಿಮೆಯನ್ನು ಸ್ಥಾಪಿಸಿದನೆಂದು ಹೇಳುತ್ತಾರೆ.

ಇಷ್ಟರಲ್ಲಿ ಕೆಂಪೇಗೌಡನು ದೇಶದಲ್ಲಿ ಬಲಶಾಲಿಯಾಗಿ ಪರಿಣಮಿಸಿದನು. ಅವನು ಸಾರ್ವಭೌಮನ ಅಪ್ಪಣೆಯಿಲ್ಲದೆ ತನ್ನ ಸ್ವಂತದ ನಾಣ್ಯಗಳನ್ನು ಭೈರೇಶ್ವರನ ಮುದ್ರೆಯ ಪಗೋಡಗಳಾಗಿ ಹೊರಡಿಸಿ ತನ್ನ ಸ್ವತಂತ್ರವಾದ ಗೌರವಸ್ಥಾನವನ್ನು ದೃಢಪಡಿಸಿಕೊಂಡನು. ವಿಜಯನಗರದ ರಾಮರಾಯನು ನೈಜವಾಗಿ ಇದನ್ನು ವಿರೋಧಿಸಿ ಆನೆಗೊಂದಿಯಲ್ಲಿ ಕೆಂಪೇಗೌಡನನ್ನು ಸೆರೆ ಹಾಕಿದನು ಮತ್ತು ಕೆಂಪೇಗೌಡನ ರಾಜ್ಯವನ್ನು ವಶಪಡಿಸಿಕೊಂಡನು. ಕೆಂಪೇಗೌಡನು ಸುಮಾರು ಐದು ವರ್ಷ ಸೆರೆಯಲ್ಲಿ ಇದ್ದು ಬಳಿಕ, ದೊಡ್ಡ ಮೊತ್ತದ ದಂಡವನ್ನು ಕೊಟ್ಟು ತನ್ನ ಸ್ವಾತಂತ್ರ್ಯವನ್ನು ಮತ್ತೆ ಗಳಿಸಿಕೊಂಡನು. ಐವತ್ತು ವರ್ಷಗಳ ಘಟನಾಪೂರ್ಣವಾದ ಆಡಳಿತದ ಅನಂತರ ಅವನು ಕ್ರಿ.ಶ. 1569 ರಲ್ಲಿ ಮಡಿದನು.

ಶಿವನ ಒಂದು ಸ್ವರೂಪವಾಗಿರುವ ಭೈರೇಶ್ವರನ ಭಕ್ತನಾದರೂ ಕೆಂಪೇಗೌಡನು ತನ್ನ ಕೋಟೆಯೊಳಗಡೆ (ಈಗ ಅದು ಅಸ್ತಿತ್ವದಲ್ಲಿಲ್ಲ) ವಿಷ್ಣುವಿಗಾಗಿ ಕೇಶವ ದೇವಾಲಯವನ್ನು ಕಟ್ಟಿಸಿ, ತನ್ನ ಧಾರ್ಮಿಕ ಸಹಿಷ್ಣುತೆಯನ್ನು ತೋರಿಸಿದನು.

ಒಂದನೆ ಕೆಂಪೇಗೌಡನ ಅನಂತರ ಅವನ ಮಗ ಗಿಡ್ಡೇಗೌಡನು ಕ್ರಿ.ಶ. 1578 ರ ವರೆಗೆ ಆಳಿದನೆಂದು ತೋರುತ್ತದೆ. ಅವನ ಆಳಿಕೆಯ ವಿಚಾರವಾಗಿ ನಮಗೇನೂ ವಿಷಯ ತಿಳಿದಿಲ್ಲ. ಅವನ ಬಳಿಕ 2ನೆ ಕೆಂಪೇಗೌಡನು ಅರಸನಾದನು. ಅವನು ಕ್ರಿ.ಶ. 1578 ರಿಂದ 1638 ರ ವರೆಗೆ ಆಳಿದನು. ಈ ರಾಜನು ಸಹ ಹೊಸ ಹಳ್ಳಿಗಳು, ದೇವಾಲಯಗಳು ಮತ್ತು ಕೆರೆಗಳ ನಿರ್ಮಾಪಕನಾಗಿ ಹೆಸರುವಾಸಿಯಾದನು. ಬೆಂಗಳೂರಿನ ಸಮೀಪದ ಕೆಂಪಾಪುರ ಅಗ್ರಹಾರವನ್ನೂ ಹೆಸರಘಟ್ಟದ ಪತ್ತಿರ ವರಕಂಡಾಪುರದ ಅಗ್ರಹಾರವನ್ನೂ ಹೀಗೆ ಎರಡು ಅಗ್ರಹಾರಗಳನ್ನು ಅವನು ಕಟ್ಟಿಸಿದನು (ಕ್ರಿ.ಶ. 1605). ಬೇಲೂರಿನಿಂದ ಶಿಲ್ಪಿಗಳನ್ನು ಕರೆಸಿ, ಸೋಮೇಶ್ವರ ದೇವಾಲಯವನ್ನು (ಅಲಸೂರಿನಲ್ಲಿ) ಜೀರ್ಣೋದ್ಧಾರ ಮಾಡಿ, ಆ ದೇವಾಲಯದ ಗೋಡೆಗಳಲ್ಲಿ 'ಗಿರಿಜಾ ಕಲ್ಯಾಣ' ದ ಉಪಕಥೆಗಳನ್ನು

ಕೆತ್ತಿಸಿದನು. ಇವು ಗಟ್ಟಿಯಾದ ಕರಿಗಲ್ಲಿನ ಬಂಡೆಯಲ್ಲಿ ಕೆತ್ತಿದ ಸಹಜ ಸುಂದರವಾದ ಕೆತ್ತನೆಯ ಕೆಲಸಗಳಾಗಿವೆ. ಈಗಿನ ಬಿನ್ನಿಮಿಲ್ಲಿನ ಕೆರೆ ಮತ್ತು ಕೋಟೆಯ ದಕ್ಷಿಣಕ್ಕೆ ಇರುವ, ಕೋಟೆಗೆ ನೀರನ್ನು ಒದಗಿಸುವ, ಕಾರಂಜಿಕೆರೆ ಎಂಬೀ ಎರಡು ಕೆರೆಗಳನ್ನು ತನ್ನ ತಂದೆಯ ನೆನಪಿಗಾಗಿ ಕಟ್ಟಿಸಿದನು. ಈ ಕಾರಂಜಿ ಕೆರೆಯಂತು ಈಗ ಕಂಡುಬರುವುದಿಲ್ಲ. ಅದು ಬಹಳ ಹಿಂದೆಯೇ ಒಣಗಿ ಹೋಯಿತು. ಆ ಸ್ಥಳದಲ್ಲಿ ಬೆಂಗಳೂರಿನ ದಕ್ಷಿಣದ ವಿಸ್ತರಣಗಳಾದ ವಿಶ್ವೇಶ್ವರಪುರ ಮತ್ತು ಶಂಕರಪುರದ ಭಾಗಗಳು ಈಗ ಆವರಿಸಿವೆ. ಕ್ರಿ.ಶ. 1623 ರಲ್ಲಿ ಅವನು ಮಾಗಡಿಯನ್ನು, ಸಾವನದುರ್ಗವನ್ನು, ಆಕ್ರಮಣಕಾರಿ ತಲಾರಿ ಗಂಗಪ್ಪನಾಯಕನಿಂದ ವಶಪಡಿಸಿಕೊಂಡು ಅವನನ್ನು ನಿಷ್ಕರುಣೆಯಿಂದ ಕೊಂದುಹಾಕಿದನು.

ಬಳಿಕ ಅವನು ಮಾಗಡಿಯ ಮಣ್ಣಿನ ಕೋಟೆಯನ್ನು ಅಭಿವೃದ್ಧಿಗೊಳಿಸಿ, ಒಂದು ಪಟ್ಟಣವನ್ನು ನಿರ್ಮಿಸಿ, ಅಲ್ಲಿ ನೆಲಸಲು ವ್ಯಾಪಾರಿಗಳನ್ನು ಮತ್ತು ಉದ್ಯಮಿಗಳನ್ನು ಬರಮಾಡಿಸಿದನು. ಅವನು ಸಾವನದುರ್ಗವನ್ನು ಬಲಗೊಳಿಸಿ ಅಲ್ಲಿ ಸೈನ್ಯವನ್ನು ಕಾವಲಿಟ್ಟನು. ಬೆಂಗಳೂರನ್ನೂ ಮಾಗಡಿಯನ್ನೂ ಅವನು ಹದಿನಾಲ್ಕು ವರ್ಷ ಆಳಿದನು. ಕ್ರಿ.ಶ. 1638 ರಲ್ಲಿ ಬಿಜಾಪುರದ ಸರದಾರನಾದ ರಣದುಲ್ಲಾಖಾನನು ಕೆಂಪೇಗೌಡನನ್ನು ಸೋಲಿಸಿ ಸೆರೆ ಹಿಡಿದು ಬೆಂಗಳೂರನ್ನು ವಶಪಡಿಸಿಕೊಂಡನು. ಕೆಂಪೇಗೌಡನು ಬಿಜಾಪುರಕ್ಕೆ ಕಪ್ಪ ಕೊಡಲು ಒಪ್ಪಿ ತನ್ನ ಸ್ವಾತಂತ್ರ್ಯವನ್ನು ಪುನಃ ಗಳಿಸಿಕೊಂಡನು. ಅವನು ಮಾಗಡಿಯಲ್ಲಿ ಮತ್ತೆ ಹದಿನೆಂಟು ವರ್ಷ ಆಳಿದನು. ಅವನ ಮುಂದಿನವರು ಮಾಗಡಿ ಕೆಂಪೇಗೌಡರೆಂದು ಖ್ಯಾತಿಗಳಿಸಿದರು.

2ನೆ ಕೆಂಪೇಗೌಡನು ಹುಳಿಕಲ್, ಹುಲಿಯೂರುದುರ್ಗ, ಉತ್ರಿದುರ್ಗ, ಭೈರನದುರ್ಗ ಮತ್ತು ಕುಣಿಗಲ್‌ಗಳನ್ನು ಗೆದ್ದುಕೊಂಡನು. ಅವನು ಶ್ರೀರಂಗಪಟ್ಟಣದ ವೈಸರಾಯಿಯಾದ ಶ್ರೀರಂಗರಾಯನನ್ನು ಸೋಲಿಸಿ, ದೊಡ್ಡ ಸೂರೆಸೊತ್ತನ್ನು ವಶಪಡಿಸಿಕೊಂಡನು. ಸಾವನದುರ್ಗದ ಬೆಟ್ಟದ ತಪ್ಪಲಿನಲ್ಲಿ ನರಸಿಂಹ ಮತ್ತು ವೀರಭದ್ರ ದೇವಾಲಯಗಳನ್ನು ಕಟ್ಟಿಸಿದನು. ಅವುಗಳ ಸಮೀಪದಲ್ಲಿ ನೆಲಪಟ್ಟಣ ಎಂಬ ಪುರವನ್ನು ಸ್ಥಾಪಿಸಿದನು. ಅವನು ಮಾಗಡಿಯಲ್ಲಿ ರಂಗನಾಥ ದೇವಾಲಯವನ್ನು ಅಭಿವೃದ್ಧಿ ಮಾಡಿದನು. ತನ್ನ ಪಿತಾಮಹನಂತೆ ಈ ಕೆಂಪೇಗೌಡನೂ ಶ್ರೇಷ್ಠ ನಿರ್ಮಾಪಕನೆನಿಸಿದನು.

ಎರಡನೆ ಕೆಂಪೇಗೌಡನ ಮಗನಾದ ಮುಮ್ಮಡಿ ಕೆಂಪೇಗೌಡನು (ಕ್ರಿ. ಶ. 1658-1678) ಸಹ ಶ್ರೇಷ್ಠ ನಿರ್ಮಾಪಕನೂ ಉದಾರ ದಾನಿಯೂ ಆಗಿದ್ದನು. ಆತನು ಕೂಡ ಬಹು ಸಂಖ್ಯೆಯಲ್ಲಿ ದೇವಾಲಯಗಳನ್ನು ಮತ್ತು ಅಗ್ರಹಾರಗಳನ್ನು ಕಟ್ಟಿಸಿದನು. ಅವನಿಗೆ 'ಮಳೆ ಕೆಂಪರಾಯ' ಎಂಬ ಹೆಸರೂ ಇದ್ದಿತು. ಏಕೆಂದರೆ ಒಂದು ಬರಗಾಲದ ಸಂದರ್ಭದಲ್ಲಿ ಅವನು ದೇವರಿಗೆ ಸಲ್ಲಿಸಿದ ಭಕ್ತಿ ಪೂರ್ಣವಾದ ಪ್ರಾರ್ಥನೆಯಿಂದ ಜಡಿಮಳೆಯನ್ನು ಸುರಿಸಿದ್ದನೆಂದು ಪ್ರತೀತಿಯಿದೆ. ಅವನು ಕ್ರಿ. ಶ. 1676 ರಲ್ಲಿ ಮಾಗಡಿಯಲ್ಲಿ ಪ್ರಸನ್ನ ವೀರೇಶ್ವರ ಸ್ವಾಮಿ ದೇವಾಲಯವನ್ನೂ ಕೆಂಪಸಾಗರವನ್ನೂ ಕಟ್ಟಿಸಿದನು.

ಯಲಹಂಕ ಪ್ರಭುಕುಲದ ಕಟ್ಟಕಡೆಯ ಹಿರಿಯ ರಾಜನೆಂದರೆ ದೊಡ್ಡ ವೀರಪ್ಪಗೌಡನ (ಕ್ರಿ.ಶ. 1678-1705) ಮಗನೂ ಮಳೆ ಕೆಂಪೇಗೌಡನ ಮೊಮ್ಮಗನೂ ಆದ ಮುಮ್ಮಡಿ ಕೆಂಪವೀರಪ್ಪ ಗೌಡ (ಕ್ರಿ.ಶ. 1705-1728). ಅವನು ಕ್ರಿ.ಶ. 1712ರಲ್ಲಿ ಪ್ರಸಿದ್ಧವಾದ ಈಶ್ವರ ದೇವಾಲಯವನ್ನು ಮಾಗಡಿಯಲ್ಲಿ ಕಟ್ಟಿಸಿದನು. ದೇವಸ್ಥಾನದ ಸಮೀಪದಲ್ಲಿ ಒಂದು ಸುಂದರವಾದ ಕೊಳವನ್ನು ಕಟ್ಟಿಸಿ, ಮಾಗಡಿಯ ಸಮೀಪವಿರುವ ಚೆಲುವರಾಯ ಪೇಟೆಯಲ್ಲಿ ಚೆಲುವರಾಯ ಸ್ವಾಮಿಯ ಮೂರ್ತಿಯನ್ನು ಪ್ರತಿಷ್ಠೆಗೊಳಿಸಿದನು. ಅವನು ಬಹು ಸಂಖ್ಯೆಯಲ್ಲಿ ಲಿಂಗಗಳನ್ನು ಪ್ರತಿಷ್ಠಿಸಿ, ಲಿಂಗಾಯತರಿಗಾಗಿ ಮಠವನ್ನು ಕಟ್ಟಿಸಿದನು. ಅವನು ಸೀಗೆಕುಪ್ಪ ಗ್ರಾಮವನ್ನು ಶೃಂಗೇರಿಗೆ ಉಂಬಳಿ ಬಿಟ್ಟನು. ಅವನು

ವಿದ್ವಾಂಸರಿಗೆ ಶ್ರೇಷ್ಠ ಆಶ್ರಯದಾತನಾಗಿದ್ದನು. ಆತನ ಆಶ್ರಯದಲ್ಲಿ ಏಕಾಂಬರ ದೀಕ್ಷಿತರು 'ವೀರ ಭದ್ರ ವಿಜಯ'ವನ್ನು ಬರೆದರು. ಆ ಕೃತಿಯು ಯಲಹಂಕ ಪ್ರಭುಗಳ ಕುಲದ ಚರಿತ್ರೆಯನ್ನು ತಿಳಿಸು ವುದಲ್ಲದೆ ಮಾಗಡಿಯ ವೀರಭದ್ರನ ಉತ್ಸವವನ್ನು ವರ್ಣಿಸುತ್ತದೆ. ಈ ಕೆಂಪೇಗೌಡನು ಶಿವಾಜಿಯ ತಂದೆಯಾದ ಷಹಜಿಯನ್ನು ಮತ್ತು ಮೈಸೂರಿನ ಕಂಠೀರವ ನರಸಿಂಹರಾಜರನ್ನು ಸೋಲಿಸಿದನೆಂದು ತಿಳಿದು ಬರುತ್ತದೆ.

ಮೂರನೆಯ ಕೆಂಪೇಗೌಡನು ಸಿರಾ ನವಾಬರ ದಾಳಿಗಳಿಂದ ತನ್ನನ್ನು ಉಳಿಸಿಕೊಳ್ಳುವುದಕ್ಕಾಗಿ ದುರ್ಗಮವಾದ ನೆಲಪಟ್ಟಣವನ್ನು ತನ್ನ ಎರಡನೆಯ ರಾಜಧಾನಿಯಾಗಿ ಮಾಡಿಕೊಂಡನು. ಅವನು ಮಾಗಡಿಯಲ್ಲಿ ವಾಸಮಾಡಿದರೂ ಆಪತ್ಕಾಲಗಳಲ್ಲಿ ಹತ್ತಿರವಿರುವ ನೆಲಪಟ್ಟಣಕ್ಕೆ ಹಿಂದೆರಳುತ್ತಿದ್ದನು.

ಪ್ರಾರಂಭ ಕಾಲದ ಯಲಹಂಕ ಪ್ರಭುಗಳು ಹರಿ-ಹರರಿಬ್ಬರ ಭಕ್ತರಾಗಿದ್ದರು. ಆದರೆ ಮುಮ್ಮಡಿ ಕೆಂಪೇಗೌಡನು ಈ ಸಹಿಷ್ಣುತೆಯ ಧ್ಯೇಯ ಧೋರಣೆಗೆ ವಿರುದ್ಧವಾಗಿ ವರ್ತಿಸಿದನು. ಭಾರ್ಗವತಿ ಎಂಬ ಒಬ್ಬ ಲಿಂಗಾಯತ ಮಹಿಳೆಯ ಪ್ರಭಾವದಿಂದ ಕೆಂಪವೀರಪ್ಪನು ವೀರಶೈವನಾದನೆಂದು ಹೇಳು ತ್ತಾರೆ. ಅವನ ಅನುಯಾಯಿಗಳಲ್ಲಿ ಒಡಕು ಇದ್ದಿತು. ಮೈಸೂರಿನ ದೊಡ್ಡ ಕೃಷ್ಣರಾಜ ಒಡೆಯರು ಈ ಒಳ ಒಡಕನ್ನು ತಮ್ಮ ಲಾಭಕ್ಕಾಗಿ ಬಳಸಿಕೊಂಡರು. ಅವರು ದಳವಾಯಿ ದೇವರಾಜಯ್ಯ ನೊಡನೆ ದೊಡ್ಡ ಸೈನ್ಯವನ್ನು ಕಳುಹಿದರು. ಇದರಿಂದ ಕೆಂಪೇಗೌಡನ ಸೇನಾಪತಿಯಾದ ವೀರಭದ್ರ ನಾಯಕನು ಸೆರೆಯಾದನು. ಆ ಮೇಲೆ ದೇವರಾಜಯ್ಯನು ನೆಲಪಟ್ಟಣವನ್ನು ಸ್ವಾಧೀನಪಡಿಸಿಕೊಂಡು, ಕೆಂಪೇಗೌಡನನ್ನು ಸೆರೆಯಾಳಾಗಿ ಮಾಡಿದನು. ಕೆಂಪೇಗೌಡ ಮತ್ತು ಅವನ ಕುಟುಂಬದವರನ್ನು ಶ್ರೀರಂಗಪಟ್ಟಣಕ್ಕೆ ಒಯ್ದರು. ಕಡೆಗೆ ಅಲ್ಲಿ ಅವನು ಮಡಿದನು. ಇದರಿಂದ ಮಾಗಡಿ ಪ್ರಾಂತವು ಮೈಸೂರು ರಾಜರ ಪ್ರಾಂತಕ್ಕೆ ಸೇರಿಕೊಂಡಿತು.



# ಕೆಳದಿಯ ರಾಜರು

ವಿಜಯನಗರದ ಸಾರ್ವಭೌಮರಿಗೆ[1] ಅಧೀನವಾಗಿದ್ದ 16ನೆ ಶತಮಾನದ ಕರ್ಣಾಟಕದ ಹಲವಾರು ಸಂಸ್ಥಾನಗಳಲ್ಲಿ ಕೆಳದಿಯ ಸಂಸ್ಥಾನವು–ಆ ಮೇಲೆ ಇಕ್ಕೇರಿ ಎಂದು ಹೆಸರನ್ನು ಪಡೆದುದು–ಬಹಳ ಪ್ರಮುಖ ವಾದುದು[2]. ವಿಜಯನಗರದ ಆಶ್ರಯ ಆಶ್ರಿತ ಸಂಬಂಧವನ್ನುಳ್ಳ ಆಡಳಿತದ ವಿಕೇಂದ್ರೀಕರಣವು ತಂಜಾವೂರು, ಜಿಂಜಿ, ಮಧುರಾ, ಕೆಳದಿ, ಬೆಳ್ಳೂರು, ಮೈಸೂರು, ಉಳ್ಳಾಲ—ಮುಂತಾದ ಸಣ್ಣ ಸಂಸ್ಥಾನಗಳು ಸಾಮ್ರಾಜ್ಯದ ಸುತ್ತಲು ಮೇಲೆ ಬರಲು ಸಹಾಯಕವಾಯಿತು. ಇಕ್ಕೇರಿ ನಾಯಕರು ಪಶ್ಚಿಮ ಕರಾವಳಿಯಲ್ಲಿ ಬಲಿಷ್ಠವಾದ ಮತ್ತು ಉನ್ನತಿ ಹೊಂದುವ ರಾಜ್ಯವನ್ನು ಸ್ಥಾಪಿಸಿದರು[3]. ದಕ್ಷಿಣದಲ್ಲಿ ಆಗ ಅಸ್ಥಿರ ಸ್ಥಿತಿಯಲ್ಲಿದ್ದ ಕಾಲದಲ್ಲಿ ಈ ಹಿಂದೂ ರಾಜ್ಯವು ಸು. 250 ವರ್ಷಗಳ ಕಾಲ (ಕ್ರಿ. ಶ. 1500-1763) ಒಳ್ಳೆಯ ಬಲಿಷ್ಠವಾದ ರಾಜ್ಯವೆನಿಸಿದ್ದಿತು. ಈ ರಾಜರುಗಳು ಒಂದೆಡೆ ಪಶ್ಚಿಮ ಕರಾವಳಿಯಲ್ಲಿ ಪೋರ್ಚುಗೀಸರ ರಾಜ್ಯವಿಸ್ತರಣೆಯ ವರ್ತನೆಗಳನ್ನು ಯಶಸ್ವಿಯಾಗಿ ತುಳಿದುಹಾಕಿದರು. ಮತ್ತೊಂದೆಡೆ, ಬಿಜಾಪುರದ ಸುಲ್ತಾನರು ತಮ್ಮ ಸಾಮ್ರಾಜ್ಯವನ್ನು ವಶಪಡಿಸಿ ಕೊಳ್ಳುವುದನ್ನು ಮುರಿದು ಹಾಕಿದರು. ವಿಜಯನಗರದ ಸಾಮ್ರಾಜ್ಯದ ಪತನಾನಂತರ, ಇಕ್ಕೇರಿಯು ಹಿಂದೂ ತತ್ವ ಮತ್ತು ಸಂಸ್ಕೃತಿಯ ರಕ್ಷಣೆಯ ಸ್ಥಾನವನ್ನು ವಹಿಸಿತು. ಕೆಳದಿ ಸಾಮ್ರಾಜ್ಯವು ತನ್ನ ಉನ್ನತಿಯ ಕಾಲದಲ್ಲಿ ಉತ್ತರದಲ್ಲಿ ಗೋವೆಯ ವರೆಗೂ ದಕ್ಷಿಣದಲ್ಲಿ ಕಣ್ಣಾನೂರಿನ ವರೆಗೂ ವ್ಯಾಪಿಸಿ ಕೊಂಡು, ಇಂದಿನ ಶಿವಮೊಗ್ಗ ಮತ್ತು ಹಾಸನದ ಕೆಲವು ಭಾಗಗಳನ್ನು ಒಳಗೊಂಡಿತ್ತು.

ಕೆಳದಿ ರಾಜರುಗಳನ್ನು ಕುರಿತ ಅಧ್ಯಯನಕ್ಕೆ ಐತಿಹಾಸಿಕ ಸಾಹಿತ್ಯವು ಸಮೃದ್ಧವಾಗಿ ದೊರೆಯುತ್ತಿದೆ. ಅದರ ಪ್ರಮುಖವಾದ ಆಕರಗಳಲ್ಲಿ ಬಹು ಸಂಖ್ಯೆಯ ಶಾಸನಗಳೂ[4] ಪೋರ್ಚುಗೀಸ್[5], ಡಚ್[6], ಇಂಗ್ಲಿಷ್[7] ಇವರ ದಾಖಲೆಗಳೂ ಲೆಕ್ಕಪತ್ರಗಳೂ ಇವೆ. ಇವಲ್ಲದೆ ಐತಿಹಾಸಿಕವೆಂದು ತೋರುವ ಕೃತಿಗಳು—ಆಸ್ಥಾನ ಕವಿ ಲಿಂಗಣ್ಣನು ಬರೆದ 'ಕೆಳದಿ ನೃಪವಿಜಯ'[8] ಮತ್ತು ಬಸವರಾಜನು ಬರೆದ 'ಶಿವತತ್ತ್ವ ರತ್ನಾಕರ'[9] ಎಂಬಿವೆರಡು ವಿಶೇಷ ಉಲ್ಲೇಖನಕ್ಕೆ ಅರ್ಹವಾಗಿವೆ.

ಇನ್ನಿತರ ಗೌಣ ಆಧಾರಗಳಾಗಿ ಯಾತ್ರಿಕರ ವೃತ್ತಾಂತಗಳನ್ನು ಮತ್ತು ಸ್ವಾನುಭವದ ಇತಿಹಾಸ ಕಥನಗಳನ್ನು[10], ವಿದ್ವಾಂಸರು ಈ ದಿಶೆಯಲ್ಲಿ ನಡೆಸಿದ ಸಂಶೋಧನೆಗಳನ್ನು[11] ಹೆಸರಿಸಬಹುದಾಗಿದೆ.

ವೀರಶೈವ ಬೇಸಾಯಗಾರನೊಬ್ಬನ ಮಕ್ಕಳಾದ ಚೌಡ ಮತ್ತು ಭದ್ರ ಎಂಬ ಸಹೋದರರು ಸಾಗರದ ಸಮೀಪದ ಕೆಳದಿಯಲ್ಲಿ ತಮ್ಮ ಹೊಲದಲ್ಲಿ ಹುದುಗಿಟ್ಟ ನಿಧಿಯನ್ನು ಪಡೆದವರಾಗಿ ಈ ನಾಯಕತನವನ್ನು ಸ್ಥಾಪಿಸಿದರೆಂದು 'ಶಿವತತ್ತ್ವರತ್ನಾಕರ' ಮತ್ತು 'ಕೆಳದಿ ನೃಪವಿಜಯ' ಕೃತಿಗಳಿಂದ ತಿಳಿದು ಬರುತ್ತದೆ. ಹೊಸತಾಗಿ ದೊರೆತ ಈ ನಿಧಿಯಿಂದ ಹಿರಿಯ ಸಹೋದರನು 'ಗ್ರಾಮಾಧಿಪತಿ' ಯಾದನು. ಮತ್ತು ಕೃಷ್ಣದೇವರಾಯನು ಇವನನ್ನು ತನ್ನ ಆಸ್ಥಾನಕ್ಕೆ ಬರಮಾಡಿಕೊಂಡನು. ಕೃಷ್ಣ ದೇವರಾಯನು ಈ ಸಹೋದರರನ್ನು ದಂಗೆಕೋರ ಮುಖಂಡರಿಗೆ ವಿರುದ್ಧವಾಗಿ ಎತ್ತಿ ಕಟ್ಟಿದನು[12]. ಅವರ ಭಕ್ತಿ ಮತ್ತು ಪರಾಕ್ರಮಗಳಿಗೆ ಮೆಚ್ಚಿ ಚಕ್ರವರ್ತಿಯು ಚೌಡನನ್ನು ಪುಲ್ಲದೇಶಕ್ಕೆ ಮಂಡಲಾಧಿ ಪತಿಯನ್ನಾಗಿ ಮಾಡಿ, ಅವನಿಗೆ ಕೆಳದಿ ಮೂಲಸಂಸ್ಥಾನದ ಚೌಡಪ್ಪನಾಯಕ[13], ಎಂಬ ಬಿರುದನ್ನು

ಕೊಟ್ಟನು. ಚೌಡಪ್ಪನಾಯಕನು (ಕ್ರಿ.ಶ.ಸು. 1500) ಕೆಳದಿಯ ರಾಜನಾಗಿ ತಾನೇ ಪಟ್ಟಾಭಿಷಿಕ್ತನಾದ ನೆಂದು 'ಕೆಳದಿ ನೃಪವಿಜಯ' ದಲ್ಲಿ ಹೇಳಲಾಗಿದೆ[14]. ರೈಸರ ಅಭಿಪ್ರಾಯದಂತೆ ಮಾಳವಗೌಡ ನೆಂಬವನು ವಿಜಯನಗರಕ್ಕೆ ಹೋಗಿ, ಸದಾಶಿವರಾಯನಿಂದ 'ಸದಾಶಿವ ನಾಯಕ' ಎಂಬ ಬಿರುದನ್ನು ಪಡೆದುಕೊಂಡುದಲ್ಲದೆ ಬಾವನ್ ಕೆರೆ, ಮುಂಗಳೂರು ಮತ್ತು ಚಂದ್ರಗುತ್ತಿ–ಎಂಬ ನೆಲೆಗಳನ್ನು ದತ್ತಿಯಾಗಿ ಪಡೆದುಕೊಂಡನು[15]. ಸಾಮ್ರಾಜ್ಯ ಸ್ಥಾಪನಾನಂತರ ಚೌಡಪ್ಪನು ಮೃತನಾದನು[16]. ಅವನ ಮಗ ಸದಾಶಿವನು ಮುಂದೆ ಅರಸನಾದನು.

ಸದಾಶಿವನಾಯಕನು ಇಕ್ಕೇರಿಯ ಸಿಂಹಾಸನವನ್ನು ಕ್ರಿ.ಶ. 1513 ರಲ್ಲಿ ಏರಿ[17], 1545 ರ ವರೆಗೆ ಆಳಿದನೆಂದು ಸ್ಪಷ್ಟವಾಗಿ 'ಕೆಳದಿನೃಪ ವಿಜಯ'ವು ತಿಳಿಸುತ್ತಿದೆ. ಆದರೆ ಶಾಸನಾಧಾರದಂತೆ ಸದಾಶಿವನ ರಾಜ್ಯಾರೋಹಣವು ಕ್ರಿ.ಶ 1544 ರಲ್ಲಿ ಆಗಿರುವುದಾಗಿಯೂ ಕ್ರಿ.ಶ. 1565 ರ ವರೆಗೆ ಮುಂದುವರಿ ದಂತೆಯೂ ತಿಳಿದುಬರುತ್ತದೆ.

ಸದಾಶಿವನಾಯಕನು ತನ್ನ ಬಲಿಷ್ಠವಾದ ಪಾರುಪತ್ಯದಿಂದ ಇಕ್ಕೇರಿ ಸಾಮ್ರಾಜ್ಯದ ಮುಂದಿನ ಹಿರಿಮೆಗಾಗಿ ಸುಭದ್ರವಾದ ತಳಹದಿಯನ್ನು ಹಾಕಿದನು. ಅವನು ವಿಜಯನಗರದ ಸೇನಾಪತಿಯಾಗಿ ಕಲ್ಯಾಣದ ಮತ್ತು ಕಲಬುರ್ಗಿಯ[19] ರಾಜರುಗಳ ವಿರುದ್ಧವಾಗಿ ದಂಡೆತ್ತಿ, ಅವರನ್ನು ಪೂರ್ಣವಾಗಿ ಸೋಲಿಸಿದನು. ಮಾತ್ರವಲ್ಲದೆ, ಅವನು ಬೀದರಿನ ಸುಲ್ತಾನನನ್ನೂ ಬಂಕಾಪುರದ ರಾಜರುಗಳನ್ನೂ ತುಳುವ ಮತ್ತು ಕೇರಳ ರಾಜ್ಯದ ಅರಸರನ್ನೂ ಸೋಲಿಸಿದನು. ಸಾಮ್ರಾಜ್ಯದ ಏಳಿಗೆಗಾಗಿ ಸಲ್ಲಿಸಿದ ಈ ಎಲ್ಲ ಸೇವೆಯನ್ನೂ ಒಪ್ಪಿ ರಾಮರಾಯನು ಸದಾಶಿವನಾಯಕನಿಗೆ 'ಕೋಟೆ ಕೋಲಾಹಲ', 'ಶತ್ರು ಸಪ್ತಾಂಗ ಹರಣ' ಮತ್ತು 'ರಾಯನಾಯಕ' ಎಂಬ ಬಿರುದುಗಳಿಂದ ಗೌರವಿಸಿದನು. ಇದಲ್ಲದೆ ಅವನು ನಾಯಕನಿಗೆ ಆರಗದ ಹದಿನೆಂಟು ಕಂಪಣಗಳ ಒಡೆತನವನ್ನು ಕೊಟ್ಟನು. ಕ್ರಿ.ಶ. 1563 ರ ಹೊತ್ತಿಗೆ ಸದಾಶಿವನಾಯಕನ ಸಾಮ್ರಾಜ್ಯವಿಸ್ತರಣವು ಆರಗ, ತುಳುರಾಜ್ಯ, ಬಾರಕೂರು ಮತ್ತು ಮಂಗಳೂರು– ಇವನ್ನು ಒಳಗೊಂಡಿತ್ತು[20].

ಸದಾಶಿವನಾಯಕನು ತನ್ನ ಸೈನಿಕ ಶೂರಕೃತ್ಯಗಳ ಅನಂತರ ತನ್ನ ಗಮನವನ್ನು ತಾನು ಹೊಸತಾಗಿ ಗಳಿಸಿದ ಸಾಮ್ರಾಜ್ಯವನ್ನು ಒಂದುಗೂಡಿಸುವ ಕಾರ್ಯಕ್ಕೆ ಹರಿಸಿದನು. ಅವನು ಕೆಳದಿ ಮತ್ತು ಚಂದ್ರಗಿರಿಗಳಲ್ಲಿ[21] ಕೋಟೆಗಳನ್ನು ಕಟ್ಟಿಸಿದನು. ರಾಜಧಾನಿಯನ್ನು ಕೆಳದಿಯಿಂದ ಇಕ್ಕೇರಿಗೆ ಬದಲಾಯಿಸಿದನು[22]. ಅವನು ಕುಶಾವತೀನದಿಯ ದಡದಲ್ಲಿ ಒಂದು ಅಗ್ರಹಾರವನ್ನು ಕಟ್ಟಿಸಿದನೆಂದು 'ಕೆಳದಿ ನೃಪವಿಜಯ'ವು ಹೇಳುತ್ತದೆ[29]. ಸದಾಶಿವನಾಯಕನು ಉತ್ಕಟವಾದ ಧರ್ಮಾಭಿಮಾನಿ ಯಾಗಿದ್ದನು. ಹಲವಾರು ಈಶ್ವರ ದೇವಾಲಯಗಳನ್ನು ಆತನು ಕಟ್ಟಿಸಿದ್ದಲ್ಲದೆ, ಬ್ರಾಹ್ಮಣ ಮತ್ತು ವೀರಶೈವ ಮಠಗಳಿಗೆ ಧಾರಾಳವಾಗಿ ದತ್ತಿಯನ್ನು ಬಿಟ್ಟಿದ್ದನು. ಜೈನ ತೀರ್ಥಂಕರರೊಬ್ಬರಿಗೆ ಭೂಮಿ ಯನ್ನು ಉಂಬಳಿ ಬಿಟ್ಟಂತಹ ಘಟನೆಯು ಆತನ ಧಾರ್ಮಿಕ ಸಮಾಸತೆಯ ಮನೋಭಾವವನ್ನು ತೋರಿಸುತ್ತದೆ[24]. ಶಿವತತ್ತ್ವರತ್ನಾಕರದ ಪ್ರಕಾರ ಸದಾಶಿವನು ತನ್ನ ಜೀವನದ ಕೊನೆಯ ಕಾಲದಲ್ಲಿ ತನ್ನ ರಾಜ್ಯಾಡಳಿತವನ್ನು ಬಿಟ್ಟು ಅದನ್ನು ಭದ್ರಪ್ಪನಾಯಕನಿಗೆ ವಹಿಸಿಕೊಟ್ಟನು.

ಇಮ್ಮಡಿ ಸದಾಶಿವನಾಯಕನೆಂದು ಪ್ರಸಿದ್ಧನಾದ ಭದ್ರಪ್ಪನು ಎಲ್ಲಾ ಆಧಾರಗಳಿಂದ ಸ್ವಲ್ಪ ಕಾಲ ಮಾತ್ರ ರಾಜ್ಯವಾಳಿದನೆಂದು ತಿಳಿದುಬರುತ್ತದೆ[25]. ಅವನು ತನ್ನ ಅಳಿಯನಾದ ದೊಡ್ಡ ಸಂಕಣ್ಣನಿಗೆ ಕ್ರಿ.ಶ. 1567ರಲ್ಲಿ ಪಟ್ಟಾಭಿಷೇಕ ಮಾಡಿದನು. ಬಹುಶಃ ಈ ಸಂಕಣ್ಣನು ಕ್ರಿ.ಶ. 1571ರ ವರೆಗೆ

ಆಳಿರಬಹುದು. ತನ್ನ ಸ್ವಲ್ಪಕಾಲದ ಆಳಿಕೆಯಲ್ಲಿಯೆ ಸಂಕಣ್ಣನು ಜಂಬೂರಿನ ದಂಗೆಯನ್ನು ಅಡಗಿಸಿ ಉಡುಗಣಿಯ ಕೋಟೆಯನ್ನು[26] ಮುತ್ತಿ, ಕಾರ್ಕಳದ ನಾಯಕನಿಂದ ವಾರ್ಷಿಕ ಕಪ್ಪಗಳನ್ನು ಸಂಗ್ರಹಿಸಿದನು. ಅವನ ಆಳಿಕೆಯ ಮತ್ತೊಂದು ಉಲ್ಲೇಖನಾರ್ಹವಾದ ಐತಿಹಾಸಿಕ ಘಟನೆಯೆಂದರೆ ಗೋವೆಯಲ್ಲಿ ಪೋರ್ಚುಗೀಸರ ವಿರುದ್ಧವಾಗಿ, ವಿಠಲದವರ ಜತೆಯಲ್ಲಿ ಮಾಡಿದ ಮುತ್ತಿಗೆ[27]. ದೊಡ್ಡ ಸಂಕಣ್ಣನು ಅವನ ಪೂರ್ವಿಕರಂತೆಯೇ ಆಧ್ಯಾತ್ಮಿಕ ಸಾಧನೆಗಳಲ್ಲಿ ಆಸಕ್ತನಾಗಿದ್ದನು. ಅವನ ಸಹೋದರ ಚಿಕ್ಕ ಸಂಕಣ್ಣನಿಗೆ ಸಿಂಹಾಸನವನ್ನು ಬಿಟ್ಟುಕೊಟ್ಟನು[28].

ಚಿಕ್ಕಸಂಕಣ್ಣನಾಯಕನು ಮಹತ್ವಾಕಾಂಕ್ಷಿಯಾದ ನಾಯಕನಾಗಿದ್ದನು. ಅವನು ಬಿಜಾಪುರದ ಸಲಾಬತ್‌ಖಾನ್[29], ಗೆರಸೊಪ್ಪೆಯ ಭೈರಾದೇವಿ ಮತ್ತು ಸೋದೆಯ ಅರಸಪ್ಪನಾಯಕ—ಇವರ ಮೇಲೆ ಸಮರವನ್ನು ಹೂಡಿ ಯಶಸ್ವಿಯಾದನು. 'ಶಿವತತ್ತ್ವರತ್ನಾಕರ'ದ ಪ್ರಕಾರ ಅವನು ಸಂಗಳದಲ್ಲಿ ದೊಡ್ಡ ಕೆರೆಯನ್ನು, ಒಂದು ದೊಡ್ಡ ಹೂದೋಟವನ್ನು ನಿರ್ಮಿಸಿದನು. ಅವನು ಕ್ರಿ.ಶ. 1580ರಲ್ಲಿ ಸತ್ತನಂತರ ಅವನ ಕಿರಿಯ ಸೋದರನಾದ ರಾಮರಾಜಯ್ಯನು[30] ಅರಸನಾಗಿ ಕ್ರಿ.ಶ. 1586ರ ವರೆಗೆ ಆಳಿ ಗೆರಸೊಪ್ಪೆಯಲ್ಲಿ ಮೃತನಾದನು.

ಸದಾಶಿವನಾಯಕನ ಬಳಿಕ ಇಕ್ಕೇರಿಯ ರಾಜರಲ್ಲಿ ಅತ್ಯಂತ ವಿಜಯಶಾಲಿಯಾದವನು, ಬಹುಶಃ ವೆಂಕಟಪ್ಪನಾಯಕನು. ಅವನು ವಿಜಯನಗರದಿಂದ ಪ್ರತ್ಯೇಕವಾಗಿ ಸ್ವತಂತ್ರನೆನಿಸಿದುದಲ್ಲದೆ ತನ್ನ ರಾಜ್ಯವನ್ನು ಎಲ್ಲ ಕಡೆಗಳಿಗೂ ವಿಸ್ತರಿಸಿದನು. ಇದರಿಂದ ಇಕ್ಕೇರಿಯು ಆ ಕಾಲದ ರಾಜಕೀಯ ಹೋರಾಟಗಳಲ್ಲಿ ಅತಿ ಬಲಿಷ್ಠವಾದ ರಾಜ್ಯವೆನಿಸಿತು. ಅವನು ಕೆಳದಿಯ ಪ್ರಭಾವವನ್ನು ಮುರಿಯಲು ಬಂದ ಬಿಜಾಪುರದ ಸೈನ್ಯಗಳನ್ನು ಗೆದ್ದು ಹಿಂದಕ್ಕೆ ಅಟ್ಟಿದನು. ಒಂದು ಯುದ್ಧದಲ್ಲಿ ಅವನು ಗೆರಸೊಪ್ಪೆಯ 'ಮೆಣಸಿನ ರಾಣಿ' ಎನಿಸಿದ ಭೈರಾದೇವಿಯನ್ನು ಸೋಲಿಸಿ ಸೆರೆಹಿಡಿದನು. ಅವನು ಪಶ್ಚಿಮ ಕರಾವಳಿಯ ಉದ್ದಕ್ಕೂ ಹಲವಾರು ಸಣ್ಣಪುಟ್ಟ ಮುಖಂಡರ[31] ಪ್ರದೇಶಗಳನ್ನು ವಶಪಡಿಸಿಕೊಂಡು ಮಲಬಾರಿನ ಗಡಿಯ ವರೆಗೂ ನಡೆದನು. ಕ್ರಿ.ಶ. 1623ರಲ್ಲಿ ಇಕ್ಕೆರಿಯನ್ನು ಸಂದರ್ಶಿಸಿದ್ದ ಇಟಲಿಯ ಪ್ರವಾಸಿ ಪಿಯಟ್ರೆ ಡೆಲ್ಲಾ ವಾಲ್ಲೋ ಎಂಬಾತ ಬರೆದಿಟ್ಟ ವರದಿಯ ಮಾತುಗಳಿವು: "ರಾಜಕುಮಾರ ವೆಂಕಟಪ್ಪನಾಯಕನು ವಿದ್ಯಾನಗರದ ಮಹಾರಾಜನ ಮಂತ್ರಿಗಳ ಕೈ ಕೆಳಗಿನವನಾಗಿ ಕೆಲ ಸಮಯವಿದ್ದನು. ಆದರೆ ಮಹಾರಾಜನ ಪತನಾನಂತರ ವೆಂಕಟಪ ನಾಯಕನು ರಾಜ್ಯದ ಏಕೈಕ ಸಾರ್ವಭೌಮ ರಾಜಕುಮಾರನೆನಿಸಿದನು. ಅವನು ಸ್ವತಃ ಒಳ್ಳೆಯ ಸೈನಿಕನಾದುದರಿಂದ ಆ ರಾಜ್ಯವನ್ನೂ ಮತ್ತಷ್ಟು ವಿಸ್ತರಿಸಿದನು"[32]. ವೆಂಕಟಪ್ಪನಾಯಕನು ತನ್ನ ರಾಜ್ಯವಿಸ್ತರಣೆಯ ಧೋರಣೆಯನ್ನು ಮುಂದುವರಿಸುತ್ತಾ ಆ ಸಮಯದಲ್ಲಿ ಕರಾವಳಿಯ ಉದ್ದಕ್ಕೂ ವ್ಯಾಪಾರ ಕೇಂದ್ರಗಳನ್ನು ಸ್ಥಾಪಿಸಿದ್ದ ಮತ್ತು ಭಾರತದ ಭೂಮಿಯಲ್ಲಿ ತಮ್ಮ ನೆಲೆಯನ್ನು ಭದ್ರಗೊಳಿಸುವುದರಲ್ಲಿ ತತ್ಪರರಾಗಿದ್ದ ಪೋರ್ಚುಗೀಸರಿಗೆ ಎದುರು ಬಿದ್ದನು. ಪೋರ್ಚುಗೀಸರು ಗೆರಸೊಪ್ಪೆಯ ಘಟನೆಗಳಲ್ಲಿ ತಮ್ಮ ಪ್ರಭಾವ ಮತ್ತು ಗೌರವಗಳನ್ನು ಕಳೆದುಕೊಂಡರು. ಅವರ ವ್ಯಾಪಾರವು ಅಸ್ತವ್ಯಸ್ತವಾಯಿತು. ಕರಾವಳಿಯ ಅಕ್ಕಿ ಮತ್ತು ಕರಿಮೆಣಸಿನ ವ್ಯಾಪಾರವು ಪೂರ್ತಿಯಾಗಿ ಇಕ್ಕೇರಿಯ ನಾಯಕರ ಕೈಗೆ ದಾಟಿತು[33]. ವೆಂಕಟಪ್ಪನೂ ಅವನ ಮುಂದಿನವರೂ ಈ ಅನುಕೂಲಕರವಾದ ಪರಿಸ್ಥಿತಿಯನ್ನು ಸದುಪಯೋಗಪಡಿಸಿಕೊಂಡು ರಾಜಕೀಯವಾಗಿಯೂ ಆರ್ಥಿಕವಾಗಿಯೂ ಬಲಿಷ್ಠರಾದರು. ಗೋವೆಯಲ್ಲಿದ್ದ ಪೋರ್ಚುಗೀಸ್ ವೈಸರಾಯ್ ವೆಂಕಟಪ್ಪನಾಯಕನೊಡನೆ ಸ್ನೇಹವನ್ನು ಹೊಂದಿ ವ್ಯಾಪಾರದ ರಿಯಾಯಿತಿಗಳನ್ನು ಪಡೆಯಲು ಬಯಸಿದನು. ಅಲ್ಲದೆ ಇಕ್ಕೇರಿಯ ಆಸ್ಥಾನಕ್ಕೆ ರಾಯಭಾರಿಯನ್ನು ಕಳಿಸಿದನು[34].

ವೆಂಕಟಪ್ಪನು ತನ್ನ ಪ್ರಜೆಗಳ ಕ್ಷೇಮದಲ್ಲಿ ಅತ್ಯಂತ ಆಸಕ್ತನಾಗಿದ್ದನು. ಅವನು ಹಲವಾರು ಹೊಸ

ಅಗ್ರಹಾರಗಳನ್ನು ಸ್ಥಾಪಿಸಿ ಅನೇಕ ದೇವಾಲಯಗಳನ್ನು ನಿರ್ಮಿಸಿದನು. ಹಿಂದುಗಳ ಪರಂಪರೆಗೆ ಅನುಗುಣವಾದ ಧಾರ್ಮಿಕ ಸಮಾನತೆಯನ್ನು ಎತ್ತಿ ಹಿಡಿದನು. ಅವನು ಭುವನಗಿರಿದುರ್ಗದಲ್ಲಿ ಒಂದು ಮುಸಲ್ಮಾನರ ಮಸೀದಿಗೆ ದತ್ತಿಕೊಟ್ಟುದು ಇಲ್ಲಿ ಉಲ್ಲೇಖನೀಯವಾಗಿದೆ[35]. ಇದಲ್ಲದೆ ಅವನು ವಿದ್ವಜ್ಜನರಿಂದ ರಚಿತವಾದ ಕಾವ್ಯ, ನಾಟಕ, ಧರ್ಮಶಾಸ್ತ್ರ ಮತ್ತು ಇತರ ವಿಷಯಗಳ ಸಾಹಿತ್ಯ ಕೃತಿಗಳಿಗೆ ಪ್ರೋತ್ಸಾಹವನ್ನು ಕೊಟ್ಟನು[36]. ವೆಂಕಟಪ್ಪನಾಯಕನ ದೀರ್ಘ ಕಾಲದ ಆಳಿಕೆಯು ಕ್ರಿ.ಶ. 1629ರಲ್ಲಿ ಕೊನೆಗೂಡಿತು. ಅವನ ಮೊಮ್ಮಗನಾದ ವೀರಭದ್ರನು ಅದೇ ವರ್ಷ ಸಿಂಹಾಸನವನ್ನೇರಿ ಕ್ರಿ.ಶ. 1645ರ ವರೆಗೆ ಆಳಿದನು.

ಅತ್ಯಂತ ಬಲಶಾಲಿಯಾದ ವೆಂಕಟಪ್ಪನಾಯಕನಂಥವನ ನಿರ್ಗಮನವು ಅವ್ಯವಸ್ಥೆಯ ಮತ್ತು ಗೊಂದಲದ ಪರಿಸ್ಥಿತಿಯ ಸಂಕೇತವಾಗಿ ಪರಿಣಮಿಸಿತು. ರಾಜ್ಯದ ಎಲ್ಲಾ ಕಡೆಯೂ ಅರಾಜಕತೆಯ ಶಕ್ತಿಗಳು ಮೇಲೆದ್ದುವು. ಆದರೆ ಕಿರಿಯನಾದ ವೀರಭದ್ರನು ಶಿವಪ್ಪನ ಸಮರ್ಥಸಹಾಯದಿಂದ ರಾಜ್ಯದಲ್ಲಿ ಶಾಂತಿಯನ್ನು ಸ್ಥಾಪಿಸಿ ತನ್ನ ರಾಜ್ಯವನ್ನು ಆಕ್ರಮಿಸಲು ಬಂದ ಹಲವಾರು ನಾಯಕರ ಪ್ರಯತ್ನಗಳನ್ನು ಮುರಿದು ಹಾಕಿದನು. ಕರಾವಳಿ ಪ್ರದೇಶದ ಅವ್ಯವಸ್ಥಿತ ಪರಿಸ್ಥಿತಿಯಿಂದ ಪ್ರೇರಿತನಾಗಿ ತನಗೆ ಅನುಕೂಲವೆಂದು ಭಾವಿಸಿದ ಬಿಜಾಪುರದ ಸುಲ್ತಾನನು, ಕೆಳದಿಯ ಪಾಳೆಯಗಾರರ ಜತೆ ಸೇರಿಕೊಂಡು ಕ್ರಿ.ಶ. 1630ರಲ್ಲಿ ಇಕ್ಕೇರಿಯ ಮೇಲೆ ಆಕ್ರಮಣವೆಸಗಿದನು[37]. ವೀರಭದ್ರನು ಮುಸ್ಲಿಮ್ ಸೈನಿಕರನ್ನು ಹಿಂದಟ್ಟಲು ಸಾಧ್ಯವಾಗದೆ ಒಪ್ಪಂದ ಮಾಡಿಕೊಂಡು ಬಿಜಾಪುರದ ಮೇಲಧಿಕಾರವನ್ನು ಸ್ವೀಕರಿಸಿದನು. ಆದರೆ ಅವನು ಕೆಂಗೋ ಹನುಮ ಮತ್ತು ಮೈಸೂರಿಗೆ ಎದುರಾಗಿ ಯುದ್ಧಮಾಡಲು ಸುಲ್ತಾನನಿಗೆ ಸಹಾಯಮಾಡಿ ಕಳೆದುಕೊಂಡಿದ್ದ ತನ್ನ ರಾಜ್ಯವನ್ನು ಪುನಃ ಪಡೆದುಕೊಂಡನು. ವೀರಭದ್ರನಾಯಕನು ತನ್ನ ಅಜ್ಜನ ಮರಣಾನಂತರ ತನಗೆ ಎದುರು ನಿಂತ ರಾಜರುಗಳ ಮೇಲೆ ಜಯವನ್ನು ಗಳಿಸಿದನೆಂದು 6 ನೆ ಫೆಬ್ರವರಿ ಕ್ರಿ.ಶ. 1635 ರಲ್ಲಿ ಬರೆದ ಒಂದು ಪೋರ್ಚುಗೀಸ್ ಪತ್ರದಿಂದ ಗೊತ್ತಾಗುತ್ತದೆ. ಕ್ರಿ.ಶ. 1631 ರಲ್ಲಿ ಅವನು ಪೋರ್ಚುಗೀಸರೊಡನೆ ಒಂದು ಒಪ್ಪಂದವನ್ನು ಮಾಡಿಕೊಂಡನು. ಅದರ ಪ್ರಕಾರ ಅವನು ಕೆಂಬೋಲಿನ್ ಮತ್ತು ಬಾರ್ಕಲೂರು ಎಂಬ ಎರಡು ಸ್ಥಳಗಳನ್ನು, ಇನ್ನೂ ಕೆಲವು ವ್ಯಾಪಾರದ ಅಧಿಕಾರವನ್ನು[38] ಪೋರ್ಚುಗೀಸರಿಗೆ ಕೊಡಲು ಒಪ್ಪಿದನು. ಅವರು ತಮ್ಮ ಶಕ್ತಿಯನ್ನು ಹೆಚ್ಚಿಸಿ ಕೊಂಡಿರುವುದನ್ನು ಅವನು ಸ್ಪಷ್ಟವಾಗಿ ತಿಳಿದುಕೊಂಡನು. ಆದ್ದರಿಂದ ಅವನು ಕೆಂಬೋಲಿನ್ ಮತ್ತು ಬಾರೂಕರಿನ ಕೆಲವು ಕೋಟೆಗಳನ್ನು ನೆಲಸಮ ಮಾಡುವಂತೆ ಪೋರ್ಚುಗೀಸರೊಡನೆ ಪತ್ರ ವ್ಯವಹಾರ ಮಾಡಿದನು. ಪೀಟರ್ ಮುಂಡಿ ಎಂಬವನ ಆಶ್ರಯದಲ್ಲಿ ಒಂದು ಆಂಗ್ಲೇಯ ಸಂಸ್ಥೆಯು ಇಕ್ಕೇರಿಯನ್ನು ಸಂದರ್ಶಿಸಿ ಭಟ್ಕಳದಲ್ಲಿ ಕೋಟೆಯನ್ನು ಸ್ಥಾಪಿಸಲು ಅನುಮತಿಯನ್ನು ಪಡೆಯಿತು. ಕರಾವಳಿಯ ವ್ಯಾಪಾರವು ಮೆಲ್ಲಮೆಲ್ಲನೆ ಪೋರ್ಚುಗೀಸರ ಕೈಯಿಂದ ಇಂಗ್ಲಿಷರಿಗೆ ದಾಟಿತು. ಕ್ರಿ.ಶ. 1638 ರಲ್ಲಿ ವೀರಭದ್ರನಾಯಕನು ತನ್ನ ರಾಜಧಾನಿ ಇಕ್ಕೇರಿಯನ್ನು ಭದ್ರತೆಯ ದೃಷ್ಟಿಯಿಂದ ಮೇಲೆನಿಸಿದ ಬಿದರೂರಿಗೆ (ವೇಣುಪುರ) ಸಾಗಿಸಿದನು[39].

ನಾಯಕನು ತನ್ನ ರಾಜ್ಯದಲ್ಲಿ ಒಂದು ಒಳ್ಳೆಯ ಆಡಳಿತ ಪದ್ಧತಿಯನ್ನು ಸ್ಥಾಪಿಸಿದನು. ಅವನು ವ್ಯಾಪಾರಿಗಳ ಮತ್ತು ಅವರ ಕೂಟಗಳ ಅಧಿಕಾರಗಳನ್ನು ಮತ್ತು ನಾಗರಿಕ ಹಕ್ಕುಗಳನ್ನು ಗೌರವಿಸಿದನು[40]. ಅವನು ಎಲ್ಲರಿಗೂ ಧಾರಾಳವಾದ ಆಶ್ರಯವನ್ನು ಕೊಟ್ಟನು.

ಕೆಳದಿ ಮನೆತನದಲ್ಲಿ ಅತ್ಯಂತ ಪ್ರಖ್ಯಾತವಾಗಿ ಹೆಸರುಗೊಂಡ ಶಿವಪ್ಪನಾಯಕನು ಕ್ರಿ.ಶ. 1645 ರಲ್ಲಿ ಕಿರೀಟಧಾರಣೆ ಮಾಡಿದನು[41]. ಅವನ ತಮ್ಮನಾದ ವೆಂಕಟಪ್ಪನಾಯಕನ ಮಹಾ ಪರಾಕ್ರಮ ಮತ್ತು

ಉದಾರತೆಯ ಸಹಾಯದಿಂದ ರಾಜ್ಯವಾಳಿದನು. ಚಿಕ್ಕಪುಟ್ಟ ಸಾಮಂತರೆಲ್ಲರೂ ಬಿದನೂರಿನ ವಂಶಕ್ಕೆ ಒಳಗಾಗುವಂತಾದರು.

ಶಿವಪ್ಪನಾಯಕನ ಅತ್ಯಂತ ಪ್ರಸಿದ್ಧವಾದ ಸೇನೆಯ ಶೂರಕೃತ್ಯಗಳಲ್ಲಿ ವೆಲ್ಲೂರಿನ ಮುತ್ತಿಗೆಯು ಒಂದಾಗಿದೆ[42]. ಅವನ ಅಧಿರಾಜನಾದ ಶ್ರೀರಂಗರಾಯನು ಎಲ್ಲೆಡೆಯಲ್ಲಿಯೂ ಮೋಸಕ್ಕೆ ಗುರಿಯಾದ ನೆಂತಲೂ ವೆಲ್ಲೂರನ್ನು ಬಿಜಾಪುರದ ಮತ್ತು ಗೋಲ್ಕೊಂಡದ ಸೈನ್ಯಗಳು ವಶಪಡಿಸಿದವೆಂಬುದನ್ನು ಕೇಳಿದೊಡನೆ ಅವನು ವೈರಿಗಳಿಗೆ ಎದುರಾಗಿ ದಂಡಯಾತ್ರೆಯನ್ನು ಕೈಗೊಂಡನು. ಆ ಕೋಟೆಯನ್ನು ಎಲ್ಲಾ ಕಡೆಗಳಿಂದಲೂ ತಡೆಗಟ್ಟಿದನು ಮತ್ತು ಅವರು ಶರಣಾಗುವಂತೆ ಮಾಡಿದನು[43]. ಸಂಚಾರಿಯಾಗಿದ್ದ ಸಾರ್ವಭೌಮನು ಈ ಸುದ್ದಿಯನ್ನು ಕೇಳಿ ವೆಲ್ಲೂರಿಗೆ ಬಂದು ಶಿವಪ್ಪ ನಾಯಕನನ್ನು ತುಂಬಾ ಗೌರವಿಸಿದನು. ಶ್ರೀರಂಗದ ಇತರ ಹಲವು ಪಾಳೆಯಗಾರರನ್ನು ಸೋಲಿಸಿ, ಅವರ ರಾಜ್ಯಗಳನ್ನೆಲ್ಲಾ ಶ್ರೀರಂಗರಾಯನಿಗೆ ಕೊಟ್ಟು ತನ್ನ ರಾಜಧಾನಿಗೆ ಶಿವಪ್ಪನಾಯಕನು ಮರಳಿದನು.

ತನ್ನ ನೆಲೆಯ ಸಮೀಪದ ಹೊಸ ಪ್ರಾಂತಗಳಾದ ತುರುವೇಕೆರೆ, ಬೆಳಗುತ್ತಿ, ಸ್ವಾಸೆ, ಹೊಸೂರು, ಬಿಳಗಿ ಮುಂತಾದವನ್ನು ಅಧೀನಗೊಳಿಸಿ, ಮಂಗಳೂರಿನ ತನಕ ತನ್ನ ಆಳಿಕೆಯನ್ನು ವಿಸ್ತರಿಸಿದನು. ಬಿಜಾಪುರದ ಸುಲ್ತಾನನು ಸತ್ತ ಕೂಡಲೇ ಶಿವಪ್ಪನಾಯಕನು ಇಕ್ಕೇರಿ, ಉಡುಗಣಿ, ಸೊರಬ, ಮತ್ತು ಹಿಂದೆ ಕಾಳಗದಲ್ಲಿ ಕಳೆದುಕೊಂಡ ಇತರ ಕೋಟೆಗಳನ್ನು ಪುನಃ ಪಡೆದನು.

ಪೋರ್ಚುಗೀಸರೊಡನೆ ವ್ಯವಹಾರದಲ್ಲಿ ಶಿವಪ್ಪನಾಯಕನು ಅವನ ವಿಶಿಷ್ಟವಾದ ಸಮರ ಸಾಮರ್ಥ್ಯ ಹಾಗೂ ತಂತ್ರಗಳನ್ನು ಪ್ರದರ್ಶಿಸಿದನು. ಕ್ರಿ.ಶ. 1652 ರಲ್ಲಿ ಅವನು ಪಶ್ಚಿಮ ಕರಾವಳಿಯಲ್ಲಿನ ಪೋರ್ಚುಗೀಸರ ನಿರ್ಭಯವಾದ ಸ್ಥಾನವನ್ನು ದೊಡ್ಡ ಸೈನ್ಯದಿಂದ ಎದುರಿಸಿ ಪೋರ್ಚುಗೀಸರನ್ನು ಮಂಗಳೂರು, ಕುಂದಾಪುರ, ಗಂಗೊಳ್ಳಿ ಮತ್ತು ಹೊನ್ನಾವರ—ಇವುಗಳಿಂದ ಬಿಟ್ಟು ಓಡಿಸಿದನು. ಪೋರ್ಚುಗೀಸರು ತಮ್ಮ ಜನರನ್ನೂ ಯುದ್ಧ ಸಾಮಗ್ರಿಗಳನ್ನೂ ಕಳೆದುಕೊಂಡರು. ಶಿವಪ್ಪನಾಯಕನು ತಾಡ್ರೆಯಿಂದ ಕಾಸರಗೋಡಿನ ವರೆಗೆ ಕರಾವಳಿಯ ಪ್ರದೇಶಕ್ಕೆ ಒಡೆಯನಾದನು. ಕೆ.ಡಿ. ಸ್ವಾಮಿನಾಥರು ಹೇಳುವಂತೆ " ಇಂಗ್ಲಿಷರಿರಲಿ, ಡಚ್ಚರಿರಲಿ, ಪೋರ್ಚುಗೀಸರು ಅಥವಾ ಅರಬರಿರಲಿ ಯಾವ ವ್ಯಾಪಾರಿಗಳು ಹೆಚ್ಚು ಹಣವನ್ನು ಕೊಡಬಲ್ಲರೋ ಅಂಥವರಿಗೆ ಕನ್ನಡ ಜಿಲ್ಲೆಯ ಕರಾವಳಿಯ ಅಕ್ಕಿ ಮತ್ತು ಕರಿಮೆಣಸಿನ ಮಾರುಕಟ್ಟೆಗಳು ತೆರೆದಿರುತ್ತಿದ್ದವು ".

ಕ್ರಿ.ಶ. 1659ರಲ್ಲಿ ನಾಯಕನು ಶ್ರೀರಂಗಪಟ್ಟಣವನ್ನು ವಶಪಡಿಸಿಕೊಳ್ಳಲು ದಂಡಯಾತ್ರೆಯನ್ನು ಕೈಗೊಂಡು ಸೋತುಹೋದನು. ಈ ಘಟನೆಯ ಬಳಿಕ ಬಿದನೂರು ಮತ್ತು ಮೈಸೂರಿನ ಸಂಬಂಧಗಳು ಕಹಿಯಾದವು.

ಶಿವಪ್ಪನಾಯಕನು ತನ್ನ ರಾಜ್ಯಕ್ಕೆ ಭದ್ರತೆ ಮತ್ತು ಸ್ಥಿರತೆಗಳನ್ನು ತಂದನು. ಇದರಿಂದಾಗಿ ಬಿದನೂರು ದಕ್ಷಿಣ ಹಿಂದೂಸ್ಥಾನದಲ್ಲಿ ಶಕ್ತಿಸಂಪನ್ನ ರಾಜ್ಯವಾಗಿ ಪರಿಗಣಿಸಲ್ಪಟ್ಟಿತು. ಅವನು ಕೇರಳದಲ್ಲಿ ಹಲವು ಹೊಸಕೋಟೆಗಳನ್ನು ಕಟ್ಟಿಸಿದನು ಮತ್ತು ಅನೇಕ ದೇವಾಲಯಗಳನ್ನೂ ಬಾವಿ-ಕೆರೆಗಳನ್ನೂ ಮಾಡಿಸಿದನು[45]. ಅವನು ತನ್ನ ರಾಜ್ಯಕ್ಕೆ ಒಳ್ಳೆಯ ಆದಾಯಕರವಾದ ಆಡಳಿತವನ್ನು ಕೊಟ್ಟವನೆಂದು ಪ್ರಸಿದ್ಧನಾದನು. 'ಶಿಸ್ತು'-ಎಂಬ ಭೂ ಕಂದಾಯ ಕ್ರಮವನ್ನು ಜಾರಿಗೆ ತಂದನು. ಈ ಪದ್ಧತಿ ಬಹುಕಾಲದ ವರೆಗೆ ಜಾರಿಯಲ್ಲಿತ್ತು,

ಶಿವಪ್ಪನಾಯಕನು ಅವನ ಆದಾಯ ನಿರ್ಣಯದ ವಿಷಯದಲ್ಲಿ ಬಹು ಪ್ರಖ್ಯಾತನಾದವನು. ಇದರಿಂದ ಅವನನ್ನು ಅಕ್ಬರನ ಮಂತ್ರಿ ತೋಡರಮಲ್ಲನಿಗೆ ಹೋಲಿಸುತ್ತಾರೆ. ಅವನು ಭೂಮಿಯನ್ನು ಐದು ವರ್ಗಗಳಾಗಿ ವಿಂಗಡಿಸಿದನು:—ಮೊದಲನೆ ವರ್ಗ ಮರಳು ಮಿಶ್ರವಾದ ಕಪ್ಪು ಮಣ್ಣು; ಎರಡನೆಯದು ಮಧ್ಯಮ ವರ್ಗ ಎಂದರೆ ಕೆಂಪು ಮಣ್ಣು ಅಥವಾ ಬೆರಕೆಯದು; ಮೂರನೆಯ ವರ್ಗ ಸ್ವಲ್ಪ ನೀರಿನಿಂದ ಕೂಡಿದ ಬೆರಕೆಯ ಕಪ್ಪು ಮಣ್ಣು; ನಾಲ್ಕನೆಯ ವರ್ಗ ಬರೀ ಕೆಟ್ಟದ್ದು–ಒಣಗಿದ ಗಟ್ಟಿಮಣ್ಣು; ಐದನೆಯ ವರ್ಗ ಕೃಷಿಗೆ ಅಯೋಗ್ಯವಾದ ಬಂಜರು ಭೂಮಿ.

ಪ್ರತಿಯೊಂದು ಹಳ್ಳಿಯಲ್ಲಿ ನೆಲವು ಅಳತೆಗೆ ಒಳಪಟ್ಟು ಮಾದರಿಯ ನೆಲವು ರಾಜನ ತೀರ್ಪೆಗಾಗಿ ಕೃಷಿಗೊಳ್ಳುತ್ತಿದ್ದಿತು. ಬೀಜಗಳ ಬೆಲೆ, ಕೃಷಿಯ ವೆಚ್ಚ, ಒಟ್ಟು ಉತ್ಪತ್ತಿ, ಅದರ ಬೆಲೆ—ಇವೆಲ್ಲವೂ ಲೆಕ್ಕಕ್ಕೆ ಬಂದು ಸರಿಯಾದ ಲೆಕ್ಕ ಪತ್ರಗಳನ್ನು ಇಡುವ ವ್ಯವಸ್ಥೆಯಾಗಿತ್ತು. ಐದು ವರ್ಷದ ಉತ್ಪನ್ನ ಮತ್ತು ಅದರ ಮಾರುಕಟ್ಟೆಯ ಬೆಲೆ–ಇವುಗಳನ್ನು ಲೆಕ್ಕ ಹಾಕುತ್ತಿದ್ದರು. ಆ ಮೇಲೆ ಪ್ರತಿ ವರ್ಷದ ಸರಾಸರಿಯನ್ನು ನಿಶ್ಚಯಿಸುತ್ತಿದ್ದರು. ಸರಾಸರಿ ಬೆಲೆಯ ಮೂರನೆ ಒಂದಂಶವು ಸರಕಾರದ ಪಾಲೆಂದು ನಿಶ್ಚಯವಾಗುತ್ತಿತ್ತು. ಆ ಮೇಲೆ ಗರಿಷ್ಠಾಂಶ ಮತ್ತು ಕನಿಷ್ಠಾಂಶದ ತೆರಿಗೆಯ ಬೆಲೆ ನಿರ್ಧಾರವಾಗುತ್ತಿತ್ತು.

ಅಡಕೆ ತೋಟಗಳ ವಿಷಯವಾಗಿ ಅವನು ಸಾವಿರ ಅಡಕೆ ಮರಗಳನ್ನು ಒಂದು ಘಟಕವಾಗಿ ನಿರ್ಣಯಿಸುತ್ತಿದ್ದನು. ಹದಿನೆಂಟು ಅಡಿ ಎತ್ತರದ ಅಡಕೆ ಮರವನ್ನು ಮಾತ್ರ ಲೆಕ್ಕಕ್ಕೆ ತೆಗೆದು ಕೊಳ್ಳಲಾಗುತ್ತಿತ್ತು, ಎಷ್ಟು ಪ್ರದೇಶವನ್ನು ಮರಗಳು ಆವರಿಸಿವೆ ಎಂಬ ಲೆಕ್ಕದ ಮೇಲೆ ತೆರಿಗೆಯನ್ನು ವಿಧಿಸಲಾಗುತ್ತಿತ್ತು. ಸಾವಿರ ಮರಗಳ ಉತ್ಪನ್ನದ ಮೇಲೆ ತೆರಿಗೆಯಂನ್ನು ವಿಧಿಸಲಾಗುತ್ತಿತ್ತು. ಶಿವಪ್ಪನಾಯಕನು ಸ್ವತಃ ತನ್ನ ತೋಟಗಳಲ್ಲಿಯೇ ಅಡಕೆ ಮರಗಳನ್ನು ಬೆಳಸಿ ಅವನ ಸ್ವಂತ ಅನುಭವದ ಆಧಾರದಿಂದ ತೆರಿಗೆಯನ್ನು ನಿರ್ಣಯಿಸುತ್ತಿದ್ದನೆಂಬುದು ಗುರುತಿಸಲು ಸ್ವಾರಸ್ಯಕರವಾದ ಸಂಗತಿಯಾಗಿದೆ. ಇಂದಿಗೂ ಕೂಡ 'ಶಿವಪ್ಪನಾಯಕನ ಶಿಸ್ತು' ಎಂಬುದು ಸಾಮರ್ಥ್ಯ, ಶಿಸ್ತು, ನ್ಯಾಯಕ್ಕೆ ಸಲ್ಲುವ ನಾಣ್ಣುಡಿಯಾಗಿದೆ. ಶಿವಪ್ಪನು ಕ್ರಿ.ಶ. 1661 ರಲ್ಲಿ ತೀರಿ ಹೋದನು.

ಅದೇ ವರ್ಷದಲ್ಲಿ ತನ್ನ ಸೋದರನ ಬಳಿಕ ಬಂದ ವೆಂಕಟಪ್ಪನಾಯಕನು ಸ್ವಲ್ಪ ಕಾಲ ಮಾತ್ರ ಆಳಿದನು. ಆ ಮೇಲೆ ಭದ್ರಪ್ಪನು ಬಂದನು. ಬಿಜಾಪುರ ಮತ್ತು ಮೈಸೂರಿನಿಂದ ತೊಂದರೆಗಳು ಉಂಟಾದವು. ಭದ್ರಪ್ಪನು ಆಳುತ್ತಿದ್ದಾಗ ಕ್ರಿ.ಶ. 1663 ರಲ್ಲಿ ಬಿಜಾಪುರದ ಸೈನ್ಯಗಳು ಬಿದನೂರನ್ನು ಮುತ್ತಿದವು. ತನಗೆ ದೊಡ್ಡ ನಷ್ಟವನ್ನು ಭರ್ತಿ ಮಾಡಿದುದರಿಂದ ಸುಲ್ತಾನನು ಹಿಂದೆಗೆದನು. ಭದ್ರಪ್ಪನಾಯಕನು ಸಮರ್ಥ ಪ್ರಭುವಾಗಿದ್ದು ಎಳೆವಯಸ್ಸಿನಲ್ಲಿಯೆ ತೀರಿಹೋದನು. ಇದು, ಸಿಂಹಾಸನಕ್ಕೆ ಉತ್ತರಾಧಿಕಾರಿಯ ವಿಚಾರದಲ್ಲಿ ಸ್ವಲ್ಪ ಗೊಂದಲವನ್ನು ಹುಟ್ಟಿಸಿರಬೇಕು. ಹೇಗೂ ಸತ್ತ ರಾಜನ ಸೋದರನಾದ ಸೋಮಶೇಖರ ನಾಯಕನು ಕ್ರಿ.ಶ. 1664 ರಲ್ಲಿ ಪಟ್ಟಾಭಿಷಿಕ್ತನಾದನು.

ಆಸ್ಥಾನ ಚರಿತ್ರಕಾರನಾದ ಲಿಂಗಣ್ಣನು ಹೇಳುವುದೇನೆಂದರೆ : ಸೋಮಶೇಖರನು ಅಧಿಕಾರಕ್ಕೆ ಬಂದ ಸ್ವಲ್ಪ ಸಮಯದಲ್ಲಿ ಅವನು ಮೈಸೂರಿನ ಸೈನ್ಯಗಳೊಡನೆ ಹೋರಾಡಿ ಬಲಗೋಡ, ಕನತ್ತೂರು, ಅಬ್ಬಿನ ಮತ್ತು ಬೇಲೂರುಗಳನ್ನು[46] ವಶಪಡಿಸಿಕೊಂಡನು. ತರೀಕೆರೆಯ ಹನುಮಪ್ಪನಾಯಕನ ಅತ್ಯಂತ ದುರಾಡಳಿತದ ಸುದ್ದಿಯನ್ನು ಕೇಳಿದೊಡನೆ, ಸಬ್ನೀಸ್ ಕೃಷ್ಣಪ್ಪಯ್ಯನ ಅಧೀನದಲ್ಲಿ ಒಂದು ಸೈನ್ಯವನ್ನು ಕಳುಹಿಸಿ ಹನುಮಪ್ಪನಾಯಕನನ್ನು ಪದಚ್ಯುತನನ್ನಾಗಿ ಮಾಡಿದನು[47]. ಕ್ರಿ.ಶ. 1664 ರಲ್ಲಿ ಶಿವಾಜಿಯು

ಬಿದನೂರಿಗೆ ಬಂದು ವಿಸ್ಮಯಕರವಾದ ರೀತಿಯಲ್ಲಿ ಮುತ್ತಿಗೆ ಹಾಕಿ, ದೊಡ್ಡ ಸೂರೆ ಮಾಡಿ, ಪ್ರತಿಭಟನೆ ಬರುವುದರೊಳಗಾಗಿ ತ್ವರಿತದಿಂದ ಹಿಂದಿರುಗಿದನು.

ಕರಾವಳಿಯ ವ್ಯಾಪಾರದ ಸ್ಪರ್ಧೆಯ ದೆಸೆಯಿಂದ ಬಿದನೂರಿನ ಆಸ್ಥಾನದ ಅನುಗ್ರಹವನ್ನು ಸ್ವಲ್ಪ ಕಾಲ ಪಡೆದಿರಬಹುದಾದ ಡಚ್ಚರಿಗೆ ಪ್ರವೇಶ ದೊರೆಯಿತು. ಆದರೆ ನಾಯಕನು ಮಲಬಾರಿನ ಪಾಳೆಯಗಾರರೊಡನೆ ಹೋರಾಡುವಾಗ ಡಚ್ಚರು ಅವರಿಗೆ ಸಹಾಯ ಮಾಡಿದುದರಿಂದ ನಾಯಕನ ವಿರೋಧಿಗಳಾಗಿ ಪರಿಣಮಿಸಿ ಆತನ ಪ್ರೀತಿಯನ್ನು ಕಳೆದುಕೊಂಡರು. ಸೋಮಶೇಖರನು ತನ್ನ ಬಾಳಿನ ಕೊನೆಯ ವೇಳೆಗೆ ಕೆಟ್ಟವರ ಸಂಗಕ್ಕೆ ಬಿದ್ದು ಹುಚ್ಚನೇ ಆದನು[48]. ಅವನ ಹೆಂಡತಿ ಚನ್ನಮ್ಮಾಜಿಯು ಅವನಿಂದ ರಾಜ್ಯಾಧಿಕಾರವನ್ನು ವಹಿಸಿಕೊಂಡಳು. ಪ್ರಖ್ಯಾತಳಾದ ಆಕೆ ಚಿತ್ತೂರನ್ನು (ಕ್ರಿ.ಶ. 1671-1696) ಆಳಿದಳು.

ಸೋಮಶೇಖರ ನಾಯಕನ ಮರಣಾನಂತರ ಉಂಟಾದ ಕುಟುಂಬದ ಜಗಳದ ವಿವರವನ್ನು 'ಕೆಳದಿನೃಪವಿಜಯ'ವು ಕೊಡುತ್ತಿದೆ. ಆದರೆ ಚನ್ನಮ್ಮಾಜಿಯು ಬಿಜಾಪುರದ ಸರದಾರನ ಸಂಚಿಗೆ ಒಳಗಾಗಿ ಹಕ್ಕಿಲ್ಲದಂತಹ ಅಂಧಕ ಕೃಷ್ಣಪ್ಪನ ಮಗನನ್ನು ಅಥವಾ ಭದ್ರಯ್ಯನ ಮಗನನ್ನು ಸಿಂಹಾಸನಕ್ಕೆ ಏರಿಸಬೇಕೆಂದು ಪ್ರಯತ್ನಶೀಲರಾಗಿದ್ದ ವಿರೋಧಿ ಗುಂಪುಗಳನ್ನು ನಿಷ್ಫಲಗೊಳಿಸಿದಳು.

ಮೈಸೂರಿನೊಡನೆ ಪರಂಪರೆಯಿಂದಲೇ ಬಂದ ವಿರೋಧವು ಚನ್ನಮ್ಮಾಜಿಗೂ ಮೈಸೂರಿನ ಚಾಮರಾಜ ಒಡೆಯರಿಗೂ ಹಲವಾರು ಹೋರಾಟಗಳಿಗೆ ಕಾರಣವಾಯಿತು. ಇದರಿಂದ ಏನೂ ನಿರ್ಣಾಯಕ ಪರಿಣಾಮವು ಆಗದಿದ್ದರೂ ಅರಕಲಗೂಡಿನಲ್ಲಿ ಕ್ರಿ.ಶ. 1695 ರಲ್ಲಿ ನಡೆದ ಘೋರ ಯುದ್ಧವು ಮೈಸೂರಿಗೆ ಅನುಕೂಲವನ್ನುಂಟುಮಾಡಿತು. ಇದರಿಂದ ಮೈಸೂರಿಗೆ ಹೊಸ ಪ್ರಾಂತಗಳು ಸೇರಿದವು[49].

ಚನ್ನಮ್ಮಾಜಿಯ ಆಳಿಕೆಯ ಅತ್ಯಂತ ಸ್ಮರಣೀಯವಾದ ಘಟನೆಯೆಂದರೆ ಔರಂಗಜೇಬನ ಸೈನಿಕರು ಬೆನ್ನಟ್ಟಿದಾಗ ಬಂದ ಶಿವಾಜಿಯ ಮಗ ರಾಜಾರಾಮನಿಗೆ ಆಕೆಯು ರಕ್ಷಣೆಯನ್ನು ಒದಗಿಸಿದುದು. ರಾಣಿಯುಮೊಗಲರ ಬೆದರಿಕೆಗಳನ್ನು ತಿರಸ್ಕಾರಭಾವದಿಂದ ಕಂಡಳು. ಕ್ರಿ.ಶ. 1690ರಲ್ಲಿ ನಡೆದ ಯುದ್ಧದಲ್ಲಿ ರಾಣಿಯು ಮೊಗಲ ಸೈನ್ಯಗಳಿಗೆ ಬಲವಾದ ಏಟು ಹೊಡೆದು, ಅವರ ಮೇಲೆ ನಿರ್ಣಾಯಕವಾದ ವಿಜಯವನ್ನು ಗಳಿಸಿದಳು. ಈ ಘಟನೆಯನ್ನು ಕರ್ಣಾಟಕದ ಜಾನಪದ ಸಾಹಿತ್ಯವು ಅಮರವನ್ನಾಗಿ ಮಾಡಿದೆ. ಅದನ್ನು ಇಂದಿಗೂ ಹಾಡುತ್ತಾರೆ. ಈ ಘಟನೆಯಾದ ಬಳಿಕ ಸ್ವಂತ ಸಾಮಂತರು ಆಕೆಯ ಎದುರು ನಿಂತಾಗ ಅವರನ್ನು ಅವಳು ಬಗ್ಗುಬಡಿದು ಅಧೀನವಾಗುವಂತೆ ಮಾಡಿದಳು[50].

ವಿದೇಶೀಯ ಶಕ್ತಿಗಳೊಡನೆ ಆಕೆ ಬೆಳೆಸಿದ ಸಂಬಂಧದ ವಿಷಯದಲ್ಲಿ ಪೋರ್ಚುಗೀಸರೊಡನೆ ಕ್ರಿ.ಶ. 1678ರಲ್ಲಿ ಮಾಡಿದ ಒಪ್ಪಂದವು ಸೂಚಿಸಲು ಅರ್ಹವಾಗಿದೆ[51].

ಮಂತ್ರಿ ಸಮೂಹದವರೂ, ಸೇನಾಧಿಕಾರಿಗಳೂ ಆದ ಅಮಾತ್ಯ ಗುರುಬಸಪ್ಪದೇವ ಮತ್ತು ಸಬ್ನಿಸ್ ಕೃಷ್ಣಪ್ಪಯ್ಯ ಮತ್ತು ತಿಮ್ಮರಸಯ್ಯ ಇವರಿಂದ ವಿಶ್ವಾಸಾರ್ಹವಾದ ಸಹಾಯವನ್ನು ಚನ್ನಮ್ಮಾಜಿಯು ಪಡೆದಳು.

ಅವಳು ಧಾರ್ಮಿಕ ಸಹಿಷ್ಣುತೆಯನ್ನು ತೋರಿದಳು. ಎಲ್ಲಾ ಮತಗಳ ಧಾರ್ಮಿಕ ಸಂಸ್ಥೆಗಳಿಗೆ ಪೋಷಕಳಾದಳು. ಉದಾಹರಣೆಗಾಗಿ ಹಲವು ಕರಾವಳಿಯ ಪಟ್ಟಣಗಳಲ್ಲಿ ಪೋರ್ಚುಗೀಸರು ಚರ್ಚುಗಳನ್ನು

ಕಟ್ಟಲು ಅವಳು ಅನುಮತಿಯಿತ್ತಳು. ಆಕೆಯು ಮೂಕಾಂಬಾ ದೇವಿಗೆ ವಿಸ್ತಾರವಾದ ಭೂಮಿಯನ್ನು ಬಿಟ್ಟಳು ಮತ್ತು ತನ್ನ ಹೆಸರಿನಲ್ಲಿ 'ಚನ್ನಮ್ಮಾಂಬಾಪುರ' ಎಂಬ ಅಗ್ರಹಾರವನ್ನು ಸ್ಥಾಪಿಸಿದಳು.

ಚನ್ನಮ್ಮಾಜಿಗೆ ಮಕ್ಕಳಿರಲಿಲ್ಲ, ಆಕೆಯು ತನ್ನ ದತ್ತುಮಗನಾದ ಬಸವಪ್ಪನನ್ನು ರಾಜಕೀಯದಲ್ಲಿಯೂ ಯುದ್ಧದಲ್ಲಿಯೂ ನುರಿತವನನ್ನಾಗಿ ಮಾಡಿ ಕ್ರಿ.ಶ. 1696ರಲ್ಲಿ ರಾಜ್ಯಾಧಿಕಾರವನ್ನು ವಹಿಸಿಕೊಟ್ಟಳು. ಆಕೆ ಧ್ಯಾನಶೀಲ ಜೀವನವನ್ನು ಅನುಸರಿಸಿದವಳು. ಆಕೆ ಕ್ರಿ.ಶ. 1698ರಲ್ಲಿ ತೀರಿಹೋದಳೆಂದು ಕಾಣುತ್ತದೆ.

ಬಸವಪ್ಪನಾಯಕನು (ಕ್ರಿ.ಶ. 1696–1714) ತನ್ನ ಗಡಿನಾಡಿನ ರಾಜ್ಯಗಳ ಮೇಲೆ ತನ್ನ ತಾಯಿಯಂತೆಯೇ ಆಕ್ರಮಣಕಾರಿ ಧೋರಣೆಯನ್ನು ಮುಂದುವರಿಸಿದನು. ಆತನು ಮಲಯಾಳಿ ನಾಯಕನಿಂದ ಚಂದ್ರಗಿರಿ ಮತ್ತು ವಸುಧಾರೆ ಕೋಟೆಗಳನ್ನು ವಶಪಡಿಸಿ, ಅವನೊಡನೆ ಸ್ನೇಹದ ಒಪ್ಪಂದ ಮಾಡಿಕೊಂಡನು[52]. ಮುಸಲ್ಮಾನ ಸೈನ್ಯಗಳನ್ನು ಹೊನ್ನಾಥ, ಜಡೆ, ಮಿರ್ಜಾನ್ ಮತ್ತು ಮಹಾದೇವಪುರಗಳಿಂದ[53] ಅವನು ಹಿಂದಕ್ಕೆ ಓಡಿಸಿದನು. ಸವಣೂರಿನ ನವಾಬನು ಬಿದನೂರನ್ನು ಆಕ್ರಮಿಸಲು ಬಂದು ಸಂಪೂರ್ಣವಾಗಿ ಸೋತುಹೋದನು.

ಪೋರ್ಚುಗೀಸರು ಅಕ್ಕಿ ಮತ್ತು ಕರಿಮೆಣಸಿನ ವ್ಯಾಪಾರದಲ್ಲಿ ಸರ್ವಸ್ವಾಮಿತ್ವವನ್ನು ಪಡೆಯಲು ಬಹಳ ಪ್ರಯತ್ನಿಸಿದರೆಂಬುದು ಬಸವಪ್ಪನಾಯಕನು ಗೋವೆಯ ವೈಸರಾಯೊಡನೆ ಮಾಡಿದ ಶಾಂತಿಯ ಒಪ್ಪಂದದಿಂದ ಸ್ಪಷ್ಟವಾಗುತ್ತದೆ (ಕ್ರಿ.ಶ. 1707).

ಬಸವಪ್ಪನು ಕಲೆ ಮತ್ತು ಸಾಹಿತ್ಯಗಳಿಗೆ ಶ್ರೇಷ್ಠ ಆಶ್ರಯದಾತನಾಗಿದ್ದನು. ಅವನು ಸ್ವತಃ ವಿದ್ವಾಂಸನಾಗಿದ್ದನು. ಅವನು ವಿಶ್ವಕೋಶವೆನಿಸಿದ ಮತ್ತು ಆ ಕಾಲದ ಚರಿತ್ರೆಗೆ ಮುಖ್ಯ ಆಧಾರ ಗ್ರಂಥವಾಗಿರುವ 'ಶಿವತತ್ತ್ವರತ್ನಾಕರ' ಗ್ರಂಥದ ಕರ್ತೃವೂ ಆಗಿದ್ದನು. ಇದಲ್ಲದೆ ಅವನು 'ಸುರದ್ರುಮ' ಎಂಬ ಸಂಸ್ಕೃತ ಗ್ರಂಥದ ಮತ್ತು 'ಸೂಕ್ತಿ ಸುಧಾಕರ'– ಎಂಬ ಗೀರ್ವಾಣ–ಕರ್ಣಾಟಕ (ಸಂಸ್ಕೃತ–ಕನ್ನಡ) ಭಾಷಾಗ್ರಂಥದ ಕರ್ತೃವೂ ಆಗಿದ್ದನೆಂದು ನಂಬಿಕೆಯಿದೆ[54].

ಬಸವಪ್ಪನಾಯಕನ ಮಗನಾದ ಸೋಮಶೇಖರನು ಕ್ರಿ.ಶ. 1714 ರಲ್ಲಿ ಅಧಿಕಾರಕ್ಕೆ ಬಂದನು. ಕನ್ನಡ ಜಿಲ್ಲೆಯ ಕರಾವಳಿಯಲ್ಲಿ ಆಗ ವಿದೇಶೀಶಕ್ತಿಗಳ ವ್ಯಾಪಾರದ ಸ್ಪರ್ಧೆಗಳು ಉಲ್ಬಣ ಸ್ಥಿತಿಗೆ ಏರಿದ್ದವು. ಇಂಗ್ಲಿಷರ ಪ್ರವೇಶ ಮತ್ತು ಅವರು ದೇಶೀಯ ರಾಜರಿಗೆ ಮಾಡಿದ ಸಹಾಯ—ಇವುಗಳಿಂದಾಗಿ ರಕ್ತಪಾತದ ಸಮರಗಳು ನಡೆದವು. ಸೋಮಶೇಖರ ನಾಯಕನು ತನ್ನ ಸೈನ್ಯವನ್ನು ನೀಲೇಶ್ವರ ನದಿಯಿಂದ ಕೆಳಗೆ ಕಣ್ಣಾನೂರು ತನಕ ಕೊಂಡೊಯ್ದನು. ಆದರೆ ಇಂಗ್ಲಿಷರು ಮತ್ತು ಡಚ್ಚರು ಕೇರಳದ ತುಂಡರಸರ ಸಹಾಯಕ್ಕೆ ಬಂದುದರಿಂದ ದೊಡ್ಡ ನಷ್ಟವನ್ನು ಅನುಭವಿಸಿಕೊಂಡು ಹಿಂದೆ ತೆರಳಬೇಕಾಯಿತು. ಬಿದನೂರಿನ ದಕ್ಷಿಣದ ಮೇರೆ ಕಾಸರಗೋಡು ಎಂದು ಒಪ್ಪುವಂತಾಯಿತು.

ಆ ಮೇಲೆ ಅವನು ಸಣ್ಣ ಪುಟ್ಟ ಪ್ರಾದೇಶಿಕ ಪಾಳೆಯಗಾರರ ಮೇಲೆ ಹಲವಾರು ಆಕ್ರಮಣಗಳನ್ನು ನಡೆಸಿದನು ಮತ್ತು ಇದರಿಂದ ಮೊಗಲರ ವಶದಲ್ಲಿದ್ದ ಅಜ್ಜಂಪುರ ಮತ್ತು ಸಿರಾಗಳನ್ನು ವಶಪಡಿಸಿಕೊಂಡನು. ಸೋಮಶೇಖರನು ಇಪ್ಪತ್ತೈದು ವರ್ಷಗಳ ದೀರ್ಘಾವಧಿಯ ರಾಜ್ಯಭಾರವನ್ನು ನಡೆಸಿದನು. ಅವನು ತನ್ನ ಪ್ರಜೆಗಳ ಕ್ಷೇಮಚಿಂತನೆಯನ್ನು ಚೆನ್ನಾಗಿ ನೋಡಿಕೊಂಡನು ಮತ್ತು ಹಲವಾರು ಸಂಸ್ಥೆ

ಗಳಿಗೂ ಉದ್ಯಮಗಳಿಗೂ ಧಾರಾಳವಾದ ಸಹಾಯವನ್ನು ಒದಗಿಸಿದನು. ಅವನು ತನ್ನ ರಾಜಧಾನಿಯಲ್ಲಿ ಹೊಸ ಅರಮನೆಯನ್ನು ಕಟ್ಟಿಸಿದನೆಂದು ಹೇಳುತ್ತಾರೆ.

ಈ ಸಂಕ್ಷಿಪ್ತ ರೂಪ ರೇಖೆಯಿಂದ ಬಸವಪ್ಪನಾಯಕ (ಕ್ರಿ.ಶ. 1739–1755) ಮತ್ತು ಚನ್ನಬಸವ ನಾಯಕ (ಕ್ರಿ.ಶ. 1755–1757)—ಇವರಿಬ್ಬರು ಮಲಬಾರಿನ ಕೋಲತ್ತಿರಿ, ಕಣ್ಣಾನೂರಿನ ರಾಜರಿಗೆ ಮತ್ತು ನೀಲೇಶ್ವರದ ರಾಜರಿಗೆ ಮತ್ತು ಚಿತ್ರದುರ್ಗದ ಪಾಳೆಯಗಾರರಿಗೆ ಎದುರಾಗಿ ಮಾಡಿದ ಯುದ್ಧಗಳನ್ನು ಬಿಟ್ಟರೆ, ಇವರಿಬ್ಬರ ಮಹತ್ವಪೂರ್ಣ ಘಟನೆಗಳು ಬೇರೆ ಕಂಡುಬರುವುದಿಲ್ಲ. ಮರಾಠ ಸೇನಾಪತಿಗಳು ಬಿದನೂರಿನ ಮೇಲೆ ದಾಳಿಮಾಡಿ, ಅಲ್ಲಿಂದ ಹೆಚ್ಚಿನ ದ್ರವ್ಯವನ್ನು ಸಂಗ್ರಹಿಸಿದ ಸಂಗತಿಯನ್ನು ಇಲ್ಲಿ ಹೇಳಬಹುದು. ಇದರಿಂದಾಗಿ ಎಲ್ಲಾ ಭೂಮಿಯ ಮೇಲೆ ಕಂದಾಯವು ಹೆಚ್ಚಾಯಿತು. ಪ್ರಜೆಗಳು ಈ ಕಂದಾಯದ ಏರಿಕೆಯಿಂದ ಬಹಳ ಅತೃಪ್ತಿಯನ್ನು ಪಡೆದರು. ನೆರೆ ರಾಜ್ಯಗಳ ಮೇಲೆ ಎಡೆಬಿಡದೆ ನಡಸಿದ ಯುದ್ಧಗಳಿಂದಾಗಿ ರಾಜ್ಯದ ಉತ್ಪನ್ನಗಳೂ ಶಕ್ತಿಯೂ ಕುಗ್ಗಿ ಹೋದವು.

ಚನ್ನಬಸವನಾಯಕನು ಕ್ರಿ.ಶ. 1757 ರಲ್ಲಿ ತೀರಿದನಂತರ[56], ಅವನ ದತ್ತು ತಾಯಿಯಾದ ವೀರಮ್ಮಾಜಿ ರಾಜ್ಯಾಧಿಕಾರವನ್ನು ವಹಿಸಿಕೊಂಡಳು. ಅವಳ ರಾಜ್ಯಭಾರದ ಪ್ರಾರಂಭದಿಂದಲೇ ಎಲ್ಲಾ ಕಡೆಗಳಿಂದಲೂ ಆಕೆ ಕಷ್ಟಗಳನ್ನು ಅನುಭವಿಸಬೇಕಾಯಿತು. ಆಕೆಯ ಪ್ರಜೆಗಳು ತೆರಿಗೆಯನ್ನು—3 ಮತ್ತು 229 ತಾರ್ ಪಗೋಡಗಳಾಗಿದ್ದುದನ್ನು[66]—599 ತಾರ್ ಪಗೋಡಗಳಾಗಿ ಏರಿಸಿದುದರಿಂದ ಅತ್ಯಂತ ಅತೃಪ್ತಿಯನ್ನು ತಾಳಿದ್ದರು[57].

ಚಿತ್ರದುರ್ಗದ ಮದಕರಿ ನಾಯಕನ ಸೂಚನೆಯಂತೆ ಬಿದನೂರು ಸಿಂಹಾಸನದ ಹಕ್ಕುದಾರನೆಂದು ನಟಿಸಿದವನೊಬ್ಬನ ಸಂದರ್ಭವನ್ನು ಬಳಸಿಕೊಂಡು ಹೈದರಾಲಿಯು ತನ್ನ ಸಾಮ್ರಾಜ್ಯವನ್ನು ಕರಾವಳಿಯಿಂದ ಕರಾವಳಿಗೆ ವಿಸ್ತರಿಸಿದನು. ಕ್ರಿ.ಶ. 1762ರಲ್ಲಿ ಅವನು ಬಿದನೂರಿಗೆ 10,000 ಕುದುರೆಗಳ ಮತ್ತು 20,000 ಸೈನಿಕರ ಒಂದು ದಂಡಯಾತ್ರೆಯನ್ನು ಕೈಗೊಂಡನು. ಹೈದರಾಲಿಯು ತನ್ನಲ್ಲಿ ಸಹಜವಾಗಿದ್ದ ಬುದ್ಧಿಚಾತುರ್ಯದಿಂದ ರಾಣಿಯ ಬಹುಮಂದಿ ಪ್ರಜೆಗಳನ್ನು ರಾಜ್ಯಾಭಿಯೋಗಿಯ ಪರವಾಗಿ ಸಹಾಯ ಪಡೆದು ಬಿದನೂರನ್ನೇ ಮುತ್ತಿದನು. ರಾಣಿಯು ಆಕ್ರಮಣಕಾರಿಯೊಡನೆ ಸಂಧಿಪ್ರಸ್ತಾವ ಮಾಡಿ ಶಾಂತಿಯನ್ನು ಕೋರಿದಳು. ಆದರೆ ಹೈದರನು ಆಕೆಯು ಪೂರ್ಣವಾಗಿ ಶರಣಾಗತಳಾಗಬೇಕೆಂದೂ ಆತ ಕೊಡುವ ಗೌರವಧನವನ್ನು ಒಪ್ಪಬೇಕೆಂದೂ ವಿಧಿಸಿದನು. ಆಗ ಆಕೆಯು ಈ ಸೂಚನೆಯನ್ನು ಗರ್ವದಿಂದ ತಿರಸ್ಕರಿಸಿ, ಪರಾಕ್ರಮದಿಂದ ಎದುರಿಸಿದಳು. ಆದರೆ ಆಕೆ ಮೈಸೂರಿನ ಮತ್ತು ಚಿತ್ರದುರ್ಗದ ಸೈನ್ಯಗಳಿಂದ ಶಕ್ತಿ ಕುಂದಿದವಳಾದಳು. ಕ್ರಿ.ಶ. 1763 ರಲ್ಲಿ ಆಕೆ ಸೆರೆಯಾದಳು. ಆಕೆಯನ್ನು ದತ್ತುಪುತ್ರನಾದ ಸೋಮಶೇಖರ ನಾಯಕನೊಡನೆ ಹೈದರಾಲಿಯ ಕಡೆಯವರು ಶ್ರೀರಂಗಪಟ್ಟಣಕ್ಕೆ ಕೊಂಡೊಯ್ದರು. ಸಮಕಾಲೀನ ವರದಿಗಳೆಲ್ಲವೂ ರಾಣಿ ವೀರಮ್ಮಾಜಿಯ ಪರಾಕ್ರಮ ಮತ್ತು ಗೌರವವನ್ನು ಮಿಗಿಲಾಗಿ ವರ್ಣಿಸುತ್ತವೆ.

ಆಕೆಯ ಸಮಗ್ರ ರಾಜ್ಯವನ್ನು ಆಗ ಮೈಸೂರಿಗೆ ಸೇರಿಸಿದರು. ಶತಮಾನಗಳಷ್ಟು ಹಳೆಯದಾದ ಈ ಎರಡು ಸಾಮ್ರಾಜ್ಯಗಳ ಒಳಗಿನ ಜಗಳವು ಬಿದನೂರು ಮೈಸೂರಿಗೆ ಸೇರುವುದರಲ್ಲಿ ಕೊನೆಗಂಡಿತು. ಕರ್ನಾಟಕ ಚರಿತ್ರೆಯಲ್ಲಿ ರಾಜ್ಯಾಕ್ರಮಣ ಮಾಡುವ ಘಟನೆಯೊಂದು ಹೀಗೆ ಮುಕ್ತಾಯವಾಯಿತು. ಅಲ್ಲದೆ ಮೈಸೂರು ಈ ಹಿರಿಯ ಕನ್ನಡ ರಾಜ ಮನೆತನದ ವೈಭವ ಮತ್ತು ಸಂಸ್ಕೃತಿಯ ಉತ್ತರಾಧಿಕಾರಿಯಾಯ್ತು.

ಈ ವಿಚಾರವನ್ನು ಕೊನೆಗೊಳಿಸುವುದರ ಮೊದಲು ರಾಜರುಗಳ ಧಾರ್ಮಿಕ, ಆರ್ಥಿಕ ಧೋರಣೆಗಳಿಗೆ ಮತ್ತು ಸಾಹಿತ್ಯಿಕ, ಸಾಂಸ್ಕೃತಿಕ ಸಾಧನೆಗಳ ಬಗೆಗೆ ಸಂಗ್ರಹವಾಗಿ ಪರಿಶೀಲನೆಯನ್ನು ಮಾಡಬಹುದು :

ಈ ನಾಯಕರು ವೀರಶೈವರಾಗಿದ್ದು ವೀರಶೈವ ಧರ್ಮ ಮತ್ತು ಸಾಹಿತ್ಯಗಳ ಅಭ್ಯಾಸಕ್ಕೆ ಪ್ರೋತ್ಸಾಹವನ್ನು ನೀಡಿದರು. ಅವರು ಸಕಲ ಧರ್ಮಗಳನ್ನು ಅತ್ಯಂತ ಸಹನೆಯಿಂದ ನೋಡುತ್ತಿದ್ದರು. ಎಲ್ಲಾ ಜಾತಿ-ಮತದವರಿಗೆ ಆಶ್ರಯದಾತರಾಗಿದ್ದರು. ಶೃಂಗೇರಿಯ ಅದ್ವೈತ ಮಠಕ್ಕೆ ಇವರು ವಿಶೇಷವಾದ ವೈಯಕ್ತಿಕ ರಕ್ಷಣೆ ಹಾಗೂ ಗಮನವನ್ನು ಸಲ್ಲಿಸಿದ್ದರು. ಉಡುಪಿಯ ದ್ವೈತ ಮಠಕ್ಕೆ ರಾಜಪೋಷಣೆಯನ್ನು ಇತ್ತರು. ಕ್ರೈಸ್ತರನ್ನೂ ಮುಸಲ್ಮಾನರನ್ನೂ ಉದಾರತೆಯಿಂದ ಈ ಮನೆತನದವರು ನೋಡಿಕೊಂಡರು[58]. ಕನ್ನಡ ಜಿಲ್ಲೆಯ ಕ್ರೈಸ್ತಮತದ ಚರಿತ್ರಕಾರನಾದ ಮಾನ್ಯ ಎಸ್. ಸಿಲ್ವ ಎಂಬವನು ಹೇಳುವುದೇನೆಂದರೆ—'ಕನ್ನಡ ಜಿಲ್ಲೆಯ ಕ್ರೈಸ್ತರು ತಮ್ಮ ಮತ ಸಂಬಂಧವಾದ ಕಾರ್ಯಗಳನ್ನು ನಿರ್ಭಯವಾಗಿ ಮುಂದುವರಿಸಿದರು. ಬಿದನೂರಿನ ರಾಜರುಗಳು ಅವರಿಗೆ ಹೆಚ್ಚು ಸಹಾಯ ಮಾಡಿದರು. ಫಲವತ್ತಾದ ಕೆಲವು ಪ್ರದೇಶಗಳು ಅವರ ವಶದಲ್ಲಿದ್ದವು'[59].

ಇಲ್ಲಿ ಉಲ್ಲೇಖಮಾಡಬಹುದಾದ ಮಹತ್ವಪೂರ್ಣವಾದ ಘಟನೆಯೆಂದರೆ ಶಿವಪ್ಪನಾಯಕನು ಪ್ರಜೆಗಳನ್ನು ಮತಾಂತರಗೊಳಿಸಲು ಅನುಮತಿ ಕೊಡುವುದರ ಜತೆಗೆ, ತನ್ನ ರಾಜ್ಯದಲ್ಲಿಯೇ ಕ್ರೈಸ್ತ ಪ್ರಜೆಗಳಿಗೆ ಸೇವೆ ಸಲ್ಲಿಸಲು ಒಬ್ಬ ಭಾರತೀಯ ಪಾದ್ರಿಯನ್ನು ನೇಮಿಸಲು ಸೂಚನೆಯಿತ್ತುದು, ಮತ್ತು ಈ ವಿಷಯದಲ್ಲಿ ಪೋರ್ಚುಗೀಸ್ ಪಾದ್ರಿಗಳೊಡನೆ ಪತ್ರ ವ್ಯವಹಾರವನ್ನು ನಡೆಸಿದುದು. ಗೋವೆಯ ನಾಗರಿಕ ಅಧಿಕಾರಿಗಳು ಈ ಸೂಚನೆಯನ್ನು ಒಪ್ಪಿದರು[60].

ಈ ರಾಜ್ಯದ ಸಂಪತ್ತಿನ ಪ್ರಮುಖ ಸಾಧನವೆಂದರೆ ಕೃಷಿ. ಇಲ್ಲಿನ ಅರಸರು ಬತ್ತ, ಕರಿಮೆಣಸು, ತೆಂಗಿನಕಾಯಿ ಮತ್ತು ಅಡಕೆ ಕೃಷಿಗಳಿಗೆ ಎಲ್ಲಾ ವಿಧವಾದ ಪ್ರೋತ್ಸಾಹವನ್ನು ಕೊಟ್ಟರು. ಭೂಸಂಬಂಧದ ಆಡಳಿತ, ತೆರಿಗೆಯ ಧೋರಣೆಗಳು—ಈ ಸಂಪತ್ತನ್ನು ಹೆಚ್ಚಿಸಲು ನೆರವಾಗುವುವೆಂದು ಎಣಿಸಿದರು.

ನಾಯಕರ ಶಿಲ್ಪ ಸಾಧನೆಗಳಿಗೆ ಉತ್ತಮ ನಿದರ್ಶವಾಗಿ ಇಕ್ಕೇರಿಯ ಅಘೋರೇಶ್ವರ ದೇವಾಲಯ ಇದೆ. ಈ ಕಾಲದ ಸಾಹಿತ್ಯ ಸೃಷ್ಟಿಯ ವಿಚಾರವಾಗಿ ಮೊದಲೇ ತಿಳಿಸಲಾಗಿದೆ.

## ಅಡಿಟಿಪ್ಪಣಿಗಳು

1. ವಿಜಯನಗರದ ಸೈನಿಕ ಉಂಬಳಿಯ ಆಡಳಿತದ ವಿಕೇಂದ್ರೀಕರಣವು ಸಾಮ್ರಾಜ್ಯದ ಸುತ್ತಲು ತಂಜಾವೂರು, ಜಿಂಜಿ, ಮಧುರಾ, ಕೆಳದಿ, ಬೆಳ್ಳೂರ್, ಮೈಸೂರು, ಉಳ್ಳಾಲ, ಇತ್ಯಾದಿ ಅನೇಕ ಸಂಸ್ಥಾನಗಳ ಉದಯಕ್ಕೆ ಸಹಾಯಕವಾಯಿತು, ಪ್ರೋತ್ಸಾಹಿತವಾದವು. ಈ ಕೆಲವು ರಾಜ್ಯಗಳ ಕಥೆಗಳು ವಿವರಣಾತ್ಮಕವಾಗಿ, ಕೆಲವು ಮುಖ್ಯ ವಿದ್ವಾಂಸರಿಂದ ರಚಿತವಾಗಿವೆ. ಈ ರಾಜ್ಯಗಳ ಬಗೆಗೆ ಈ ಕೆಳಗಿನ ಕೃತಿಗಳು ಉಲ್ಲೇಖನೀಯವಾಗಿವೆ. (i) ಆರ್. ಸತ್ಯನಾಥ ಅಯ್ಯರ್ : ಮಧುರೆಯ ನಾಯಕರು, ಮದ್ರಾಸ್ 1924. (ii) ವಿ. ವೃದ್ಧಗಿರೀಶನ್ : 'ತಂಜಾವೂರಿನ ನಾಯಕರು', ಅಣ್ಣಾಮಲೈನಗರ, 1942. (iii) ಸಿ. ಎಸ್. ಶ್ರೀನಿವಾಸಾಚಾರಿ : 'A History of Gingee and its rulers' ಅಣ್ಣಾಮಲೈನಗರ, 1943. (iv) ಕೆ. ಡಿ. ಸ್ವಾಮಿನಾಥನ್ : 'ಇಕ್ಕೇರಿಯ ನಾಯಕರು', ಮದ್ರಾಸ್, 1957. (v) ವಿಲ್ಕ್ಸ್ : 'ಮೈಸೂರು', 1930, (vi) ಎಲ್. ರೈಸ್: 'ಮೈಸೂರು ಗಜೆಟಿಯರ್', 1897.

2. ವಿಜಯನಗರದ ಅರವೀಡು ಮನೆತನ, ಫಾದರ್ ಹೆರಾಸ್, ಮದ್ರಾಸ್, 1927, ಪುಟ. 177.
3. ಕೆಳದಿ ಸಾಮ್ರಾಜ್ಯವು ಅದರ ಉಚ್ಛ್ರಾಯ ಕಾಲದಲ್ಲಿ ಉತ್ತರದಲ್ಲಿ ಗೋವೆಯ ವರೆಗೂ ದಕ್ಷಿಣದಲ್ಲಿ ಕಣ್ಣಾನೂರಿನ ವರೆಗೂ ವ್ಯಾಪಿಸಿದ್ದು, ಇಂದಿನ ಶಿವಮೊಗ್ಗ ಮತ್ತು ಹಾಸನ ಜಿಲ್ಲೆಗಳನ್ನು ಒಳಗೊಂಡಿತ್ತು.
4. ಇವುಗಳಲ್ಲಿ ಹೆಚ್ಚಿನ ಶಾಸನಗಳು ಮೈಸೂರು ಶಾಸನ ಇಲಾಖೆಯ ವರದಿಗಳಾದ ಎಪಿಗ್ರಾಫಿಯಾ ಇಂಡಿಕ, ಎಪಿಗ್ರಾಫಿಯಾ ಕರ್ನಾಟಿಕ ಮತ್ತು ದಕ್ಷಿಣ ಭಾರತದ ಶಾಸನಗಳು—ಎಂಬಿವುಗಳಲ್ಲಿ ದೊರೆಯುತ್ತವೆ.
5. ಪೋರ್ಚುಗೀಸರ ದಾಖಲೆಗಳಲ್ಲಿ ಹೆಚ್ಚು ಭಾಗ ಪ್ರಕಟವಾಗಿಲ್ಲ. ಅವು ಪಂಜಿಂ ಮತ್ತು ಲಿಸ್ಬನಿನ ಪ್ರಾಚೀನ ಭಂಡಾರಗಳಲ್ಲಿ ದೊರೆಯುತ್ತವೆ. ಅವುಗಳಲ್ಲಿ ಮುಖ್ಯವಾದ ಕೆಲವನ್ನು ಕೆ. ಡಿ. ಸ್ವಾಮಿನಾಥನ್ ಅವರು 'ಇಕ್ಕೇರಿಯ ನಾಯಕರು'—ಎಂಬ ತಮ್ಮ ಕೃತಿಯಲ್ಲಿ ಅನುವಾದ ಮಾಡಿದ್ದಾರೆ.
6. ಬಟವಿಯ ದಾಗ್ ರಿಜಿಸ್ಟರ್ (Batavia Dagh Register).
7. ಇಂಗ್ಲಿಷ್ ಕಾರಖಾನೆಗಳ ಕೆಲವೊಂದು ವರದಿಗಳು ಮತ್ತು ಪತ್ರವ್ಯವಹಾರಗಳು ಸರ್ ಸಿ. ಫಾವೆನ್, ಆಕ್ಸ್‌ಫರ್ಡ್—ಅವರ 'ಭಾರತದಲ್ಲಿ ಇಂಗ್ಲಿಷ್ ಕಾರಖಾನೆಗಳು' ಸಂ. 1—ಗ್ರಂಥದಲ್ಲಿ ಸಿಗುತ್ತವೆ.
8. ಆಸ್ಥಾನಕವಿ ಲಿಂಗಣ್ಣನ ಕನ್ನಡ ಕೃತಿ 'ಕೆಳದಿ ನೃಪವಿಜಯ'ದಲ್ಲಿ ಕೆಳದಿ ಸಾಮ್ರಾಜ್ಯದ ಅರಸರ ಸಮಗ್ರ ಚರಿತ್ರೆಯನ್ನೇ ನೀಡಿದೆ. ಅದರ ಆರಂಭದ ಅಧ್ಯಾಯಗಳಲ್ಲಿ ವಸ್ತು ಹಾಗೂ ಕಾಲಾನುಕ್ರಮಕ್ಕೆ ಸಂಬಂಧಿಸಿದ ತಪ್ಪುಗಳಿವೆ. ಈ ಕೃತಿ ಡಾ॥ ಆರ್. ಶಾಮಾಶಾಸ್ತ್ರಿಗಳವರಿಂದ ಮೈಸೂರು ವಿಶ್ವವಿದ್ಯಾನಿಲಯದ ಪರವಾಗಿ ಸಂಪಾದಿತವಾಗಿ ಪ್ರಕಾಶಿತವಾಗಿದೆ. ವರ್ಷ 1921.
9. ಕ್ರಿ.ಶ. 1712ರಲ್ಲಿ ಬಸವರಾಜ ನಾಯಕನಿಂದ ಬಹುಶಃ ರಚಿತವಾದುದು. ಇದು ಸಂಸ್ಕೃತದಲ್ಲಿ ಬರೆದ ವಿಶ್ವಕೋಶ. ಆಗಿನ ಕಾಲದ ಭಾವನೆ ಹಾಗೂ ಸಂಸ್ಕೃತಿಯ ಬಗ್ಗೆ ವಿಶೇಷ ಬೆಳಕನ್ನು ಚೆಲ್ಲುತ್ತದೆ. ಈ ಗ್ರಂಥವು ಬಿ. ರಾಮರಾವ್ ಮತ್ತು ವಿ. ಪಿ. ಸುಂದರ ಶಾಸ್ತ್ರಿಯಾರ್ ಅವರಿಂದ 1927ರಲ್ಲಿ ಸಂಪಾದಿತವಾಗಿದೆ.
10. ಇವುಗಳಲ್ಲಿ ಕೆಲವು ಕರ್ನಲ್ ಮೆಕೆನ್ಜಿ ಸಂಗ್ರಹದಲ್ಲಿ ದೊರೆಯುತ್ತವೆ.
11. ಈ ವಿಷಯದಲ್ಲಿ ಸಾಧನಶೀಲರಾದವರ ಕೃತಿಗಳನ್ನು ಸೂಚಿಸುವುದು ಸೂಕ್ತ :—ರಾಬರ್ಟ್ ಸಿವೆಲ್ಸ್ ಅವರ "ದಕ್ಷಿಣ ಹಿಂದೂಸ್ಥಾನದ ಅರಸುಮನೆತನಗಳ ನಕ್ಷೆ" (Sketch of the Dynasties of Southern India) 1884; ಎಂ. ಎಸ್. ಪುಟ್ಟಣ್ಣನವರ 'ಇಕ್ಕೇರಿಯ ಚರಿತೆ' 1931, ಎನ್. ಲಕ್ಷ್ಮೀನಾರಾಯಣರಾಯರ 'ಕೆಳದಿಯ ನಾಯಕರು, Vijayanagar Sex-centenary Volume, ಫಾದರ್ ಹೆರಾಸ್ ಅವರ 'ವಿಜಯನಗರದ ಅರವೀಡು ಮನೆತನ' 1927 ಮತ್ತು ಕೆ. ಡಿ. ಸ್ವಾಮಿನಾಥನ್ ಅವರ 'ಇಕ್ಕೇರಿಯ ನಾಯಕರು'—1957.
12. ಕೆಳದಿ ನೃಪವಿಜಯ, ಕಾಂಡ ಅಥವಾ ಅಶ್ವಾಸ, ಪದ್ಯ 82. ಪುಟ 21-22.
13. ಶಿವತತ್ತ್ವ ರತ್ನಾಕರ, ಕಲ್ಲೋಲ 5.
14. ಪ್ರಜೋತ್ಪತ್ತಿ ವರ್ಷ, ಮಾಘ 5, ಆ : 1, ಪದ್ಯ 105, ಪುಟ : 28.
15. ರೈಸ್: ಮೈಸೂರು ಮತ್ತು ಕೊಡಗು ಶಾಸನಗಳಿಂದ, P. 355.
16. ಚೌಡಪ್ಪನಾಯಕನ ರಾಜ್ಯಭಾರವು ನಿರ್ಣಾಯಕವಾಗಿ ಯಾವಾಗ ಎಂದು ಹೇಳಲು ಬರುವುದಿಲ್ಲ. 'ಕೆಳದಿ ನೃಪವಿಜಯ'ವು 1500-1514 ರ ವರೆಗೆ 13 ವರ್ಷಗಳಿಗಿಂತ ಸ್ವಲ್ಪ ಜಾಸ್ತಿ ಆಳಿದನೆಂದು ತಿಳಿಸುತ್ತದೆ. ಕೆ. ಡಿ. ಸ್ವಾಮಿನಾಥನ್ ಅವರ ಪ್ರಕಾರ ಕ್ರಿ.ಶ, 1535 ಅಥವಾ 1540ರ ವರೆಗೆ ಬಹುಶಃ ಆಳಿರಬೇಕು, (ಇಕ್ಕೇರಿಯ ನಾಯಕರು. ಪುಟ 19) ಆದರೆ ಈ ಕಡೆಯ ಅಭಿಪ್ರಾಯವನ್ನು ಇನ್ನು ಹೆಚ್ಚು ಸಾಕ್ಷಿಗಳ ಆಧಾರದ ಮೇಲೆ ಸ್ಥಿರಪಡಿಸಬೇಕಾಗಿದೆ.
17. ಕೆಳದಿ ನೃಪವಿಜಯ, ಆ. 2. ಪು : 29.
18. ಎನ್. ಲಕ್ಷ್ಮೀನಾರಾಯಣರಾವ್; ವಿಜಯನಗರದ ಶತಮಾನ ಸಂಪುಟ ಪು. 257.
19. ಶಿವತತ್ತ್ವರತ್ನಾಕರ, ಕಲ್ಲೋಲ, 5 ; ತರಂಗ 5.
20. ಎನ್. ಲಕ್ಷ್ಮೀನಾರಾಯಣರಾವ್, ವಿಜಯನಗರ ಷಟ್ ಶತಮಾನ ಸಂಪುಟ ಪು. 258.
21. ಫಾದರ್ ಹೆರಾಸ್ : ಅರವೀಡು ಮನೆತನ, ಪು : 179.

22. ಚೌಡಪ್ಪನಾಯಕನು ಇಕ್ಕೇರಿಯನ್ನು ತನ್ನ ಹೊಸ ರಾಜಧಾನಿಯನ್ನಾಗಿ ಮಾಡಿಕೊಂಡ ಸಂಗತಿಯನ್ನು ಕೆಳದಿ ನೃಪವಿಜಯ ತಿಳಿಸುತ್ತದೆ—ಅ : 1, ಪದ್ಯ 68, ಪು : 27
23. ಅಲ್ಲೇ. ಅ. 11. ಪು : 41.
24. ಎಪಿಗ್ರಾಫಿಯಾ ಇಂಡಿಕ, XX, 89-90.
25. ಸದಾಶಿವನಾಯಕನ ತರುವಾಯ ಅತನ ಮಗ ದೊಡ್ಡ ಸಂಕಣ್ಣನಾಯಕನು ಬಂದನೆಂದು 'ಕೆಳದಿ ನೃಪವಿಜಯ' ತಿಳಿಸುತ್ತದೆ. ಅ. 13, ಪುಟ : 43.
26. ಅಲ್ಲೇ ಅ. 3.
27. ಎಲ್. ಲಕ್ಷ್ಮೀನಾರಾಯಣ ರಾವ್, ವಿಜಯನಗರ ಷಟ್ ಶತಮಾನ ಸಂಪುಟ ಪು : 260.
28. ಫಾದರ್ ಹೆರಾಸ್ ಮತ್ತು ಎನ್. ಎಲ್. ರಾವ್ ಅವರು 'ಶಿವತತ್ತ್ವರತ್ನಾಕರ'ದ ಸೂಚನೆಯೊಂದರ ಆಧಾರದಿಂದ ದೊಡ್ಡ ಸಂಕಣ್ಣನು ರಾಮರಾಯನಿಂದ ಪದಚ್ಯುತನಾದನು ಎಂದು ಅಭಿಪ್ರಾಯಪಡುವರು. ಆದರೆ ಸಂಕಣ್ಣನು ಕ್ರಿ.ಶ. 1571 ರ ವರೆಗೆ ಆಳಿದುದರಿಂದ ಇದು ಅಷ್ಟು ವಿಶ್ವಾಸಾರ್ಹವಲ್ಲ.
29. ಕೆಳದಿ ನೃಪವಿಜಯ, ಅ. 4; ಪು. 66.
30. ಚಿಕ್ಕ ಸಂಕಣ್ಣನ ತರುವಾಯ ವೆಂಕಟಪ್ಪನು ಅಧಿಕಾರಕ್ಕೆ ಬಂದನೆಂದು 'ಶಿವತತ್ತ್ವ ರತ್ನಾಕರ' ತಿಳಿಸುತ್ತದೆ.
31. 'ಶಿವತತ್ತ್ವ ರತ್ನಾಕರ', ಕಲ್ಲೋಲ 6, ತರಂಗ 13.
32. ನೋಡಿ : 'ಭಾರತದಲ್ಲಿ ಯುರೋಪಿನ ಪ್ರವಾಸಿಗಳು', (European, Travellers in India) ಜೆ. ಟಿ. ವೀಲರ್ ಮತ್ತು ಎಂ. ಮ್ಯಾಕ್‌ಮಿಲನ್, 1956.
33. ಕೆ. ಡಿ. ಸ್ವಾಮಿನಾಥನ್: ಇಕ್ಕೇರಿಯ ನಾಯಕರು, ಪು. 45.
34. ರೈಸ್; ಮೈಸೂರು ಮತ್ತು ಕೊಡಗು—ಶಾಸನಗಳಿಂದ ಪು. 158.
35. ಎಪಿಗ್ರಾಫಿಯಾ ಕರ್ಣಾಟಿಕ, VIII, ಎನ್. ಜಿ. 79.
36. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್: ವಿಜಯನಗರ ಚರಿತ್ರೆಯ ಮೂಲಗಳು, ಸಂ. 1, ಪು. 345, ವೆಂಕಟಪ್ಪನಾಯಕನು ಸ್ವತಃ ಶಿವಗೀತೆಯ ಮೇಲೆ ಒಂದು ಸಂಸ್ಕೃತ ವ್ಯಾಖ್ಯಾನವನ್ನು ಬರೆದನು.
37. ಬಿಜಾಪುರ ದಂಡಯಾತ್ರೆಯ ಕಾಲ ಕ್ರಿ.ಶ. 1637, ಆಧಾರ : 'ಕೆಳದಿ ನೃಪವಿಜಯ'.
38. ಒಪ್ಪಂದದ ಕರಾರುಗಳ ಬಗೆಗೆ, ನೋಡಿ : ಕೆ. ಡಿ. ಸ್ವಾಮಿನಾಥನ್ ಅವರ 'ಇಕ್ಕೇರಿಯ ನಾಯಕರು' ಪು. 76.
39. ಎನ್.ಎಲ್. ರಾವ್ ಅವರು ಹಿಂದಿನ ಅರಮನೆ ನಾಶವಾದುದರಿಂದ ಅವನು ಬಿದನೂರಿಗೆ ಸ್ಥಳಾಂತರಿಸಿದನೆಂದು ಅಭಿಪ್ರಾಯಪಡುತ್ತಾರೆ. ಇದು ಅಷ್ಟೊಂದು ಸಕಾರಣವಾಗಿ ಮನಸ್ಸಿಗೆ ಹಿಡಿಸುವಂತಿಲ್ಲ.
40. 'ಇಕ್ಕೇರಿಯ ನಾಯಕರು'
41. 'ಚಿಕದೇವರಾಯ ವಂಶಾವಳಿ'ಯಲ್ಲಿ ಹೇಳುವುದೇನೆಂದರೆ ಶಿವಪ್ಪನು ವೀರಭದ್ರನಾಯಕನನ್ನು ಕೊಂದನೆಂದು. ಆದರೆ ಇದು ನಿಜವಾಗಿರಲಾರದು. ಏಕೆಂದರೆ ಶಿವಪ್ಪನು ವೀರಭದ್ರನಿಗೆ ಅವನ ರಾಜ್ಯದ ಸುವ್ಯವಸ್ಥೆಗೆ ಸಹಾಯ ಮಾಡಿದ್ದಲ್ಲದೆ, ಸ್ವತಃ ಶ್ರೇಷ್ಠ ಧಾರ್ಮಿಕನೂ ಆಗಿದ್ದನು.
42. ಕೃಷ್ಣಸ್ವಾಮಿ ಅಯ್ಯಂಗಾರ್: ವಿಜಯನಗರದ ಇತಿಹಾಸದ ಮೂಲಗಳು, ಸಂ. 1, ಪು. 346.
43. ಅಲ್ಲೇ. ಪು. 347.
44. ಕೆಳದಿ ನೃಪವಿಜಯ ಅ. 7.
45. ಶಿವತತ್ತ್ವ ರತ್ನಾಕರ, ಕಲ್ಲೋಲ 7, ತರಂಗ 14'.
46. ಕೆಳದಿ ನೃಪವಿಜಯ, ಅ. 7, ಪದ್ಯ 29, ಪು. 125.
47. ಅಲ್ಲೇ ಅ. 7, ಪ. 30, ಪು. 126-8.
48. ಅಲ್ಲೇ ಅ. 7. ಪ. 22, 126.
49. ವಿಲ್ಕ್ಸ್: ಮೈಸೂರು ಚರಿತ್ರೆ, ಸಂ. 1, ಪು. 58.
50. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್: ವಿಜಯನಗರದ ಇತಿಹಾಸದ ಮೂಲಗಳು. ಸಂ. 1, ಪು. 350.

51. ಈ ಒಪ್ಪಂದದ ಪ್ರಕಾರವಾಗಿ ಚರ್ಚುಗಳು, ಕಾರಖಾನೆಗಳನ್ನು ಮಿರಜನ್, ಚಂದಾವರ್, ಹೊನ್ನಾವರ, ಭಟ್ಕಳ ಮತ್ತು ಕಲ್ಯಾಣಪುರಗಳಲ್ಲಿ ಕಟ್ಟಲು ಅನುಮತಿ ನೀಡಲಾಯಿತು.
52. ಕೆಳದಿ ನೃಪವಿಜಯ, ಆ. 10, ಪ. 10, ಪು. 174.
53. ಅಲ್ಲೇ. ಆ. 10, ಪ. 15-17, ಪು. 175.
54. ಅಲ್ಲೇ. ಆ. 10, ಪ. 15-17, ಪು. 175.
55. ಅಲ್ಲೇ. ಆ. 10, ಪ. 72, ಪು. 189.
56. ಬಿದನೂರಿನ ಕಿರಿಯ ರಾಜನು 17ನೆ ಜುಲೈಯಂದು ತನ್ನ ತಾಯಿಯಿಂದ ಹತನಾದನೆಂದು, 1757ರ ಸಾರ್ವಜನಿಕ ವಿಭಾಗದ ದಿನವಹಿಯ ಆಧಾರದಿಂದ ಕೆ. ಡಿ. ಸ್ವಾಮಿನಾಥನ್ ಅವರು ತಿಳಿಸುತ್ತಾರೆ. ಚನ್ನಬಸವ ನಾಯಕನು ಕ್ರೂರವಾಗಿ ಹತನಾದನೇದು ಹೈದರ್‌ನಾಮೆ ಸಹ ತಿಳಿಸುತ್ತದೆ. ನೋಡಿ : 'ಇಕ್ಕೇರಿಯ ನಾಯಕರು'—ಪು. 151, ಅಡಿಟಿಪ್ಪಣಿ.
57. ಎಸ್. ಸಿಲ್ವ: 'ಕನ್ನಡ ಜಿಲ್ಲೆಯಲ್ಲಿ ಕ್ರೈಸ್ತ ಧರ್ಮದ ಇತಿಹಾಸ', ಪು. 75.
58. ಶಿವಪ್ಪನಾಯಕನು ಬಹಳ ಸಾಧು, ಕರುಣಾಳು, ಖಚಿತವಾಗಿ ನಮ್ಮ ಮತದ ಮೇಲೆ ಬಹಳ ಪ್ರೀತಿಯುಳ್ಳವನು—ಎಂದು ಎಸ್. ಜೆ. ಸ್ಪಿನೋಲ ತಿಳಿಸಿದ್ದಾನೆ.
59. ಇಕ್ಕೇರಿ ನಾಯಕರ ಧಾರ್ಮಿಕ ಧೋರಣೆಯ ಪರಿಣಾಮವಾಗಿ ಸಾಕಷ್ಟು ಸಂಖ್ಯೆಯಲ್ಲಿ ಕ್ರೈಸ್ತರು ಗೋವೆಯಿಂದ ಬಂದು ಅಲ್ಲಿ ನೆಲಸಿದರು. ಅವರ ರಾಜ್ಯದಲ್ಲಿ ಹತ್ತು ಸಾವಿರ ಮಂದಿ ಕ್ರೈಸ್ತರಿಗಿಂತ ಹೆಚ್ಚು ಇದ್ದರು. ನೋಡಿ : ಕನ್ನಡದಲ್ಲಿ ಕ್ರೈಸ್ತಧರ್ಮದ ಇತಿಹಾಸ' ಎಸ್. ಸಿಲ್ವ, 1958.
60. ಬಿದನೂರಿನ ಆಡಳಿತದ ವಿಷಯದಲ್ಲಿ ಬೆಳಕು ಚೆಲ್ಲಿರುವ ಎಸ್. ಸಿಲ್ವರಿಗೆ ಕರ್ಣಾಟಕ ಚರಿತ್ರೆಯ ವಿದ್ಯಾರ್ಥಿಗಳು ಋಣಿಗಳು.

ಮೂಲ ಲೇಖಕರು : ಶ್ರೀ ಎನ್. ರಾಜಗೋಪಾಲ ರಾವ್
ಅನುವಾದಕರು : ಶ್ರೀ ಚ. ಸುಂದರೇಶನ್

# ಪಾಳೆಯಗಾರರು

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಪಾಳೆಯಗಾರರು ಸಣ್ಣ ಸಣ್ಣ ನಾಯಕರಾಗಿ ಪ್ರವರ್ಧಮಾನಕ್ಕೆ ಬಂದರು. ಇವರು ಸಣ್ಣ ಪುಟ್ಟ ಪ್ರಾಂತಗಳಲ್ಲಿ ಸರ್ವತಂತ್ರ ಸ್ವತಂತ್ರರಾಗಿ ಪರಮಾಧಿಕಾರವನ್ನು ನಡೆಸುತ್ತಿದ್ದರು. ಈ ಪಾಳೆಯಗಾರರ ವಿದೇಶೀಯ ರಾಜನೀತಿಯು ಕೇಂದ್ರದ ಅಧಿಕಾರದೊಡನೆ ಎಷ್ಟರ ಮಟ್ಟಿಗೆ ಹೆಣೆದುಕೊಂಡಿತ್ತೆಂದರೆ ಈ ಸಾಮಂತರ ಕ್ರಿಯಾತ್ಮಕ ಸಹಾಯವಿಲ್ಲದೆ ವಿಜಯನಗರದ ಸಮ್ರಾಟರು ಹೊರ ಆಕ್ರಮಣವನ್ನು ಎದುರಿಸಿ ಶಾಂತಿ ಮತ್ತು ಕಾನೂನನ್ನು ಸ್ಥಾಪಿಸಿ ವಿಸ್ತಾರವಾದ ತಮ್ಮ ರಾಜ್ಯದಲ್ಲಿ ಕ್ಷೇಮಕರವಾದ ಆಡಳಿತವನ್ನು ಸ್ಥಾಪಿಸಲು ಸಾಧ್ಯವಾಗುತ್ತಿರಲಿಲ್ಲ.

ಬಹು ಮುಖ್ಯರಾದ ಪಾಳೆಯಗಾರರ ಇತಿಹಾಸವಿಲ್ಲದೆ ಗೋದಾವರಿಯ ದಕ್ಷಿಣದ—ದಕ್ಷಿಣನಾಡಿನ ಮಧ್ಯಯುಗದ ಇತಿಹಾಸವು ಪೂರ್ಣವಾಗಲಾರದು. ಪಾಳೆಯಗಾರನು ತನ್ನ ಆಳಿಕೆಯ ಪ್ರದೇಶದಲ್ಲಿ ಕಂದಾಯವನ್ನು ವಸೂಲುಮಾಡುತ್ತಿದ್ದನು. ಕಾನೂನು ಮತ್ತು ನಿಯಮಗಳನ್ನು ನೆಲೆಗೊಳಿಸಿದ್ದನು. ತನ್ನ ಪ್ರಜೆಗಳಿಂದ ರಾಜನಂತೆ ಗೌರವ ಪಡೆಯುತ್ತಿದ್ದನು. ಅಲ್ಲದೆ ಎಷ್ಟೋ ವೇಳೆ ದೊಡ್ಡದೊಡ್ಡ ಬಿರುದಾವಳಿಗಳನ್ನು ಧರಿಸುತ್ತಿದ್ದನು.

ವಿಜಯನಗರ ಸಮ್ರಾಟರ ಆಳಿಕೆಯ ಕಾಲದಲ್ಲಿ ಪ್ರಾಮುಖ್ಯಕ್ಕೆ ಬಂದ ಪಾಳೆಯಗಾರರು ಪ್ರಭುಗಳಿಗೆ ಕಪ್ಪಕಾಣಿಕೆಗಳನ್ನು ಕೊಡುತ್ತಿದ್ದರು. ಯುದ್ಧದ ಸಮಯದಲ್ಲಿ ತಮ್ಮ ಸೈನ್ಯವನ್ನು ಒಡೆಯರ ಸೇನಾಬಿಡಾರಕ್ಕೆ ಕಳುಹಿಸುತ್ತಿದ್ದರು. ಅವರು ಪ್ರಭುಗಳನ್ನು ಸಂದರ್ಶಿಸಲು ಹೋದಾಗಲೆಲ್ಲಾ ರಾಜಧಾನಿಯ ಹೊರಗಿನ 'ಪಾಳೆಯ' ಎಂಬ ಸೇನಾಬಿಡಾರದಲ್ಲಿ ಬೀಡುಬಿಡುತ್ತಿದ್ದರು. ಬಹುಶಃ ಈ ಕಾರಣದಿಂದಲೇ ಅವರನ್ನು ಪಾಳೆಯಗಾರರು ಎಂದು ಕರೆಯಲಾಗಿದೆ. ಅವರು ತಮ್ಮ ರಾಜಧಾನಿಗಳಿಗೆ ಕೋಟೆಗಳನ್ನು ಕಟ್ಟಿಕೊಂಡು ಒಳ್ಳೆಯ ಸುರಕ್ಷಿತವಾದ 'ಪಾಳೆಯಪಟ್ಟು' ಎಂದು ಕರೆಯುವ ಬೆಟ್ಟದ ಶಿಖರವನ್ನು ಆಶ್ರಯಿಸುತ್ತಿದ್ದರು. 'ಪಾಳೆಯಗಾರ' ಎಂಬ ಹೆಸರಿಗೆ ಇದೂ ಒಂದು ಕಾರಣವಿರಬಹುದು. ವಿಜಯನಗರ ಸಾಮ್ರಾಜ್ಯಸ್ಥಾಪನೆಗೆ ಪೂರ್ವಭಾವಿಯಾಗಿಯೇ ಕೆಲವು ಪಾಳೆಯಗಾರರಿದ್ದರು. ಆದರೆ ಅವರು ಪ್ರಾಮುಖ್ಯಕ್ಕೆ ಬಂದುದು ಅನಂತರ. ಉದಾಹರಣೆಗೆ ಗುಮ್ಮರೆಡ್ಡಿ ಪಾಳ್ಯಎಂಬ ಪಾಳೆಯಪಟ್ಟು ಕ್ರಿ.ಶ. 1243ರಲ್ಲಿ ನರಸಿಂಹನಾಯಕನಿಂದ ಸ್ಥಾಪಿತವಾಯಿತು.

ಬಹಮನಿ ಮತ್ತು ಶಾಹಿ ಸುಲ್ತಾನರ ಕಾಲದಲ್ಲಿ ವಿಸ್ತಾರವಾದ ಪ್ರದೇಶಗಳಿಗೆ ಸಂಪೂರ್ಣಾಧಿಕಾರವುಳ್ಳ ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಅಂತಹ ಅಧಿಕಾರಿಗಳು ಕಂದಾಯವನ್ನು ವಸೂಲು ಮಾಡುವ ಅಧಿಕಾರವನ್ನು ಹೊಂದಿದ್ದರು. ಅಲ್ಲದೆ ಸಾಮ್ರಾಜ್ಯದ ಪರವಾಗಿ ಹೋರಾಡಲು ಸೈನ್ಯವನ್ನು ಕಳುಹಿಸಬೇಕಾಗುತ್ತಿತ್ತು. ಅಂತಹರು ಕೂಡ ಪಾಳೆಯಗಾರರಾದರು. ದಕ್ಷಿಣ ಕನ್ನಡದಲ್ಲಿ ಹೆಗ್ಗಡೆಗಳು ಎಂದು ಕರೆಯಲ್ಪಡುವ ಅನೇಕ ಪಾಳೆಯಗಾರರಿದ್ದರು. ಅವರಲ್ಲಿ ಕೆಲವರು ಸ್ವತಂತ್ರರಾಗಿದ್ದರೆ ಮತ್ತೆ ಕೆಲವರು ಪೊಗದಿಯನ್ನೊಪ್ಪಿಸುವ ಅಧೀನ ರಾಜರಾದರು. ತಮ್ಮ ಪ್ರಾಂತದಲ್ಲಿ ಸ್ವತಂತ್ರವಾದ ಆಳಿಕೆ ನಡೆಸಲು ಅವರು ಸಮ್ರಾಟರಿಗೆ ಕಪ್ಪ ಕಾಣಿಕೆಗಳನ್ನು ಒಪ್ಪಿಸುತ್ತಿದ್ದರು. ಶಾಹಿಯ ದೊರೆಗಳು ಮತ್ತು ವಿಜಯನಗರದ ಅರಸರು ತಮ್ಮ ಅತ್ಯಂತ ವಿಸ್ತಾರವಾದ ರಾಜ್ಯದ ಆಳಿಕೆಯ ಸಂಪೂರ್ಣ

ಹೊರೆಯನ್ನು ಹೊರಲು ಅಸಮರ್ಥರಾದುದರಿಂದ ಪಾಳೆಯಗಾರರು ಮುಂದುವರಿಯಲು ಅವಕಾಶ ಕೊಟ್ಟರು.

ಒಂದು ರೀತಿಯಲ್ಲಿ ಮೈಸೂರಿನ ಮೊದಮೊದಲ ಒಡೆಯರುಗಳೂ ಸಹ ಪಾಳೆಯಗಾರರೆ. ಪ್ರಸಿದ್ಧ ದಳವಾಯಿಗಳಾದ ದೇವರಾಜ ಮತ್ತು ನಂಜರಾಜರು ಅನೇಕ ಪಾಳೆಯಗಾರರನ್ನು ನಾಶಗೊಳಿಸಿದರು. ಮೈಸೂರಿನ ಹೈದರಾಲಿಯು ಸಹ ಪಾಳೆಯಗಾರರನ್ನು ಒಬ್ಬೊಬ್ಬರನ್ನಾಗಿ ಅಳಿಸಿ ಹಾಕಿದನು.

ಬಂಗಾಳದ ಜಮೀನುದಾರರು, ಉತ್ತರ ಪ್ರದೇಶದ ತಾಲೂಕುದಾರರು, ಮೊಗಲ್ ರಾಜರ ಕೈಕೆಳಗಿನ ಜಹಗೀರುದಾರರು, ಮರಾಠ ರಾಜ್ಯದ ದೇಸಾಯಿ, ದೇಶಮುಖ್ ಮತ್ತು ದೇಶಪಾಂಡೆಗಳು— ಇವರುಗಳು ವಿಸ್ತಾರವಾದ ಪ್ರದೇಶದ ಮೇಲೆ ತಮ್ಮ ಸ್ವಾಮ್ಯದ ಹಕ್ಕುಗಳನ್ನು ಸಾಧಿಸಿ ಅನುಭವಿಸುತ್ತಾ ತಮ್ಮದೇ ಆದ ಸೈನ್ಯಕ್ಕೆ ಆಶ್ರಯವಿತ್ತು ಕೇಂದ್ರಾಡಳಿತಕ್ಕೆ ಕಪ್ಪ ಕಾಣಿಕೆಗಳನ್ನು ಒಪ್ಪಿಸುತ್ತಿದ್ದರು. ಇವರು ದಕ್ಷಿಣದ ಪಾಳೆಯಗಾರರನ್ನು ಹೋಲುತ್ತಾರೆ.

ಮೈಸೂರು ರಾಜ್ಯದ ವಿವಿಧ ಪ್ರದೇಶಗಳ ಪಾಳೆಯಗಾರರ ಆಳಿಕೆಯನ್ನು ಕುರಿತ ವಿಚಾರಗಳನ್ನು ಸಂಗ್ರಹಿಸುವ ಕಾರ್ಯದಲ್ಲಿ ಅಮೂಲ್ಯವಾದ ಪ್ರಥಮ ಪರಿಶೋಧಕ ಕಾರ್ಯವನ್ನು ಶ್ರೀ ಎ೦. ಎಸ್. ಪುಟ್ಟಣ್ಣನವರು ಮಾಡಿದ್ದಾರೆ. ಪಾಳೆಯಗಾರರಲ್ಲಿ ಬಹು ಮುಖ್ಯರಾದವರ ವಿಚಾರವನ್ನು ಈಗ ನಾವು ಪರಿಶೀಲಿಸಬಹುದು :

**ತರೀಕೆರೆಯ ನಾಯಕರು**

ಕ್ರಿ. ಶ. 1545ರಲ್ಲಿ ವಿಜಯನಗರದ ಸೇನೆಯು ಮಹಮ್ಮದೀಯರ ವಿರುದ್ಧ ಹೋರಾಡಿದಾಗ ಹನುಮಪ್ಪ ನಾಯಕನು ಸೇನಾಪತಿಯಾಗಿ ಪ್ರಾಮುಖ್ಯಕ್ಕೆ ಬಂದು ಪ್ರಭುತ್ವವನ್ನು ಪಡೆದನು. ಅವನು ಮೈಸೂರಿನ ಸಂತೆಬಿದನೂರಿನಲ್ಲಿ ದಳಗಳನ್ನುಳಿಸಿಕೊಳ್ಳುವ ಪದವಿಯನ್ನು ಪಡೆದನು. ಶಿವಮೊಗ್ಗೆಯನ್ನು ಕೇಂದ್ರವಾಗುಳ್ಳ ಒಂಬತ್ತು ಲಕ್ಷ 'ಹೊನ್ನು'ಗಳ ವಾರ್ಷಿಕ ಕಂದಾಯ ಬರುವ ವಿಸ್ತಾರವಾದ ಪ್ರದೇಶವನ್ನು ಆಕ್ರಮಿಸಿಕೊಂಡನು. ತರೀಕೆರೆಯ ಪಾಳೆಯಗಾರರು ಒಂದು ಶತಮಾನಕ್ಕೂ ಹೆಚ್ಚಿನ ಕಾಲ ನಿಜವಾಗಿಯೂ ಸ್ವತಂತ್ರಾಧಿಕಾರಿಗಳಂತೆ ಆಳಿದರು. ಕ್ರಿ. ಶ. 1733ರ ವೇಳೆಗೆ ಅವರ ಶಕ್ತಿ ಕ್ಷೀಣವಾಗುತ್ತಾ ಬಂದಿತು. ಅನಂತರ ಅವರು ಮರಾಠರಿಗೆ ಮತ್ತು ಹೈದರಾಲಿಗೆ ಪೊಗದಿ ಒಪ್ಪಿಸತೊಡಗಿದರು. ಈ ವಂಶದ ಕಡೆಯ ಮುಖ್ಯಸ್ಥನೆಂದರೆ ಸರ್ಜಾ ಹನುಮಪ್ಪನಾಯಕನು. ಈತನನ್ನು ಟಿಪ್ಪುವು ನೇಮಿಸಿದ್ದನು. ಈ ನಾಯಕನು 1797ರಲ್ಲಿ ಗತಿಸಿದ ಮೇಲೆ ಅವನ ಎರಡನೆಯ ಮಗ ಕೃಷ್ಣಪ್ಪ ನಾಯಕನಿಗೆ ಅವನ ಪದವಿ ದೊರಕಿತು. ಇತರ ಪಾಳೆಯಗಾರರು ಕೃಷ್ಣಪ್ಪ ನಾಯಕನನ್ನು ಟಿಪ್ಪುವಿನ ಪಕ್ಷದವನೆಂದು ಸಂಶಯಪಟ್ಟರು. ಪೂರ್ಣಯ್ಯನು ವಿಷವಿಕ್ಕಿ ಅವನನ್ನು ಕೊಂದನು. 1831ರಲ್ಲಿ ಸರ್ಜಪ್ಪನಾಯಕ, ನಂಜಪ್ಪ ನಾಯಕ ಮತ್ತು ಹನುಮಂತಪ್ಪನಾಯಕರು ದಂಗೆ ಎದ್ದರು. ಅವರನ್ನು ಸೋಲಿಸಿ ನಿವೃತ್ತಿ ವೇತನ ಮತ್ತು ಕೆಲಸಗಳನ್ನು ಕೊಟ್ಟು ಸಮಾಧಾನಪಡಿಸಲಾಯಿತು.

**ಗುಮ್ಮನಾಯಕ ಪಾಳಯ**

ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗೆ ಬಹು ಹಿಂದೆಯೇ ಈ ಪಾಳೆಯ ಪಟ್ಟು ಸ್ಥಾಪಿತವಾಗಿತ್ತು. ಇದು ಸಂಪೂರ್ಣವಾಗಿ ಬಾಗೇಪಲ್ಲಿ ತಾಲೂಕು ಮತ್ತು ಭಾಗಶಃ ಹಿಂದೂಪುರ ಮತ್ತು ಕಂದುಕುರ್

ತಾಲೂಕುಗಳನ್ನು ಒಳಗೊಂಡಿತ್ತು. 1243ರಲ್ಲಿ ನರಸಿಂಹನಾಯಕ ಮತ್ತು ಖಾದ್ರಿಪತಿನಾಯಕ ಎಂಬ ಸೋದರರಿಬ್ಬರು ಕಡಪ ಜಿಲ್ಲೆಯ ದೊಡ್ಡಪಾಳಯವೆಂಬ ತಮ್ಮ ಊರಿನಿಂದ ಹೊರಟು ಶಿಡ್ಲಘಟ್ಟ ತಾಲೂಕಿಗೆ ಬಂದು ಯಗುವ ಕೋಟೆಯಲ್ಲಿ ನೆಲಸಿದರು. ಸ್ವಲ್ಪ ಕಾಲಾನಂತರ ತಮ್ಮನು ಪಾಟಪಾಳೆಯ ಮತ್ತು ಭೈರವನ ಬೆಟ್ಟದಲ್ಲಿ ಸ್ವತಂತ್ರವಾದ ಪಾಳೆಯಪಟ್ಟನ್ನು ಸ್ಥಾಪಿಸಿದನು. ಅವನು ಕಾಡನ್ನು ನಿರ್ಮೂಲ ಮಾಡಿದನು. ಅವನು ತನ್ನ ಸತ್ಕಾರ್ಯಗಳಿಂದ ಪ್ರಜೆಗಳ ಪ್ರೀತಿ ಪಾತ್ರನಾದನು. ಗುಮ್ಮರೆಡ್ಡಿ ಮತ್ತು ಲಕ್ಕರೆಡ್ಡಿ ಎಂಬ ಇಬ್ಬರು ಶ್ರೀಮಂತ ಜಮೀನುದಾರರು ಪಾಟಪಾಳಯದಲ್ಲಿ ನೆಲಸುವಂತೆ ಖಾದ್ರಿಪತಿನಾಯಕನನ್ನು ಆಹ್ವಾನಿಸಿದರು.

ಖಾದ್ರಿಪತಿನಾಯಕನು ದೇವರ ಅವತಾರವೆಂದೂ, ಅವನ ಆಜ್ಞೆಯನ್ನು ತಾವು ಪಾಲಿಸಬೇಕೆಂದೂ ಅವರು ಒಂದು ಕನಸಿನಿಂದಾಗಿ ನಂಬಿದರು. ಅವನು ರಾಜ್ಯವನ್ನು ಸ್ಥಾಪಿಸಬೇಕೆಂಬುದು ದೇವರ ಅಪೇಕ್ಷೆಯೆಂದು ಬಗೆದು ತಮ್ಮ ಸಂಪತ್ತನ್ನೆಲ್ಲಾ ಖಾದ್ರಿಪತಿನಾಯಕನಿಗೆ ಒಪ್ಪಿಸಿದರು. ಖಾದ್ರಿಪತಿ ನಾಯಕನು ಬುರಾಮಕೊಂಡದಲ್ಲಿ ದೈವಕೃಪೆಯಿಂದ ಎರಡು ಕೊಪ್ಪರಿಗೆ ಚಿನ್ನವನ್ನು ಪಡೆದನೆಂದು ಹೇಳುತ್ತಾರೆ. ಆ ಜಾಗದಲ್ಲಿ ಒಂದು ದೇವಾಲಯವನ್ನು ಕಟ್ಟಿ ಅರಣ್ಯವನ್ನು ನಿರ್ಮೂಲಮಾಡಿ ದೇವರಾಜಪಳ್ಳಿ ಎಂಬ ಹೊಸ ಹಳ್ಳಿಯನ್ನು ಕಟ್ಟಿದನು. 1272ರಲ್ಲಿ ಆತನು ಮರಣಹೊಂದಿದನೆಂದು ತಿಳಿಯ ಬರುತ್ತದೆ. ಅನಂತರ ಅವನ ಮಗ ಚಿನ್ನಮ್ಮನಾಯಕನು (ಕ್ರಿ.ಶ. 1272–96) ಗುಮ್ಮ.ರೆಡ್ಡಿಯ ಗೌರವಾರ್ಥವಾಗಿ ಗುಮ್ಮ ನಾಯಕನ ಪಾಳಯ ಎಂಬುದನ್ನು ಸ್ಥಾಪಿಸಿದನು. ಅವನು ಅನೇಕ ಬೇಸಾಯಗಾರರು, ವ್ಯಾಪಾರಿಗಳು, ಶಿಲ್ಪಿಗಳು, ಕಟ್ಟಡ ನಿರ್ಮಾಪಕರು ಮತ್ತು ಇತರ ಕೈಗೆಲಸಗಾರರನ್ನು ಆಹ್ವಾನಿಸಿದನು. ಅವನು ಪಟೇಲರು, ತೋಟಿ, ತಳವಾರರನ್ನು ಹಳ್ಳಿಗಳಲ್ಲಿ ನೇಮಿಸಿದನು. ಇಬ್ಬರು ಪೂಜ್ಯ ಪುಣ್ಯಾತ್ಮರ ಆಶೀರ್ವಾದದಿಂದ ಅಪಾರವಾದ ಸುವರ್ಣವನ್ನು ಪಡೆದನೆಂದು ಹೇಳುತ್ತಾರೆ. ಕಲ್ಯಾಣದುರ್ಗ ಎಂಬ ಕೋಟೆಯನ್ನು ಕಟ್ಟಿಸಿದನು. ಗುಟ್ಟಪಾಳಯ, ಮಡ್ಡಿಪಳ್ಳಿ ಮತ್ತು ಅಕ್ಕಪಕ್ಕದ ಪ್ರದೇಶಗಳನ್ನು ಗೆದ್ದುಕೊಂಡನು.

ಚಿನ್ನಮ್ಮನಾಯಕನು ಅನೇಕ ನಿಯಮನಿಬಂಧನೆಗಳನ್ನು ನಿರ್ದಿಷ್ಟ ರೂಪದಲ್ಲಿ ಸೂತ್ರೀಕರಿಸಿ ಒಂದು ವರ್ಗದ ಜನಾಂಗ ಬೇರೆಯವರ ವ್ಯವಹಾರದಲ್ಲಿ ಪ್ರವೇಶಿಸಕೂಡದೆಂದೂ ಪ್ರತಿಯೊಂದು ವರ್ಗವೂ ತನ್ನದೇ ಆದ ವ್ಯಾಪಾರ ಮತ್ತು ಕಸಬನ್ನು ಅನುಸರಿಸಬೇಕೆಂದೂ ಆಜ್ಞೆಮಾಡಿದನು. ಆತನು 'ಮಹಾ ನಾಯಕ ಆಚಾರ್ಯ' ಎಂಬ ಬಿರುದನ್ನು ಧರಿಸಿದನು. ಖಾದ್ರಿತಿರುಮಲನು ಆತನ ಗುರುವಾಗಿದ್ದನು. ಚಂದ್ರಗಿರಿ ಮಲ್ಲಿಕಾರ್ಜುನಸ್ವಾಮಿಯು ಅವನ ಮನೆತನದ ಗುರುವಾಗಿದ್ದನು. ಚಿನ್ನಮ್ಮನಾಯಕನು ಇಪ್ಪತ್ತನಾಲ್ಕು ವರ್ಷಗಳ ಕಾಲ ಧರ್ಮ ಶ್ರದ್ಧೆಯುಳ್ಳ ದೈವಭೀತ ದೊರೆಯಾಗಿ ಆಳಿದನು. ಅವನು ಅನೇಕ ದೇವಾಲಯಗಳನ್ನು ಕಟ್ಟಿಸಿದನು. ತನ್ನ ಪ್ರಜೆಗಳ ಕ್ಷೇಮಾಭಿವೃದ್ಧಿಗಾಗಿ ಶ್ರಮಿಸಿದನು. ತನ್ನ ತಾಯಿಯ ಹೆಸರಿನಲ್ಲಿ ದೊಡ್ಡಮ್ಮನ ಕೆರೆ ಎಂಬ ಕೆರೆಯನ್ನು ಕಟ್ಟಿಸಿದನು. ಅವನನಂತರ ಮಗನಾದ ಗುಮ್ಮನಾಯಕನು (ಕ್ರಿ.ಶ. 1296–1314) ಅಧಿಕಾರಕ್ಕೆ ಬಂದನು.

ಗುಮ್ಮನಾಯಕನು ತಮ್ಮ ಮೇಲೆ ಆಕ್ರಮಣ ಮಾಡಲು ಬಂದ ಆನೆಗೊಂದಿಯ ದೊರೆ ತಿರುಮಲ ರಾಯನ ಸೈನ್ಯಕ್ಕೆ ಸಮಯೋಪಾಯದಿಂದ ಆಕ್ರಮಣದ ಖರ್ಚನ್ನು ಕೊಟ್ಟು ಸಾಮಂತತನವನ್ನು ಒಪ್ಪಿ ಕಳುಹಿಸಿದನೆಂದು ಹೇಳಲಾಗಿದೆ. ಅವನು ಪ್ರಧಾನ ಮಂತ್ರಿಯನ್ನು ನೇಮಿಸಿದನು. ಅಲ್ಲದೆ ತನ್ನ ಅಧಿಕಾರಿಗಳಿಗೆ ಜಹಗೀರುಗಳನ್ನು ಕೊಟ್ಟನು. ಅವನು ಪುಷ್ಪಗಿರಿ ಸ್ವಾಮಿಗೆ ಪೂಜೆಯನ್ನು ಸಲ್ಲಿಸುತ್ತಿದ್ದನೆಂದು ಹೇಳುತ್ತಾರೆ.

ಗುಮ್ಮನಾಯಕನ ಮಗ ಡಕ್ಕನಾಯಕನು (ಕ್ರಿ.ಶ. 1314–46) ಹೊಸ ಹೊಸ ಹಳ್ಳಿಗಳನ್ನು ಸ್ಥಾಪಿಸುವುದು ಮತ್ತು ವ್ಯವಸಾಯವನ್ನು ಉತ್ತಮ ಪಡಿಸುವುದು ಈ ಮೂಲಕ ಭೂಕಂದಾಯವನ್ನು ಹೆಚ್ಚಿಸಿ ರಾಜಾದಾಯವನ್ನು ಅಧಿಕಗೊಳಿಸಿದನು. ಅವನು ವಿಜಯನಗರದ ದೊರೆಗಳಿಗೆ ಸಾಮಂತ ನಾಗಿದ್ದನು,

ವಿಜಯನಗರದ ಅರಸರಿಗೆ ಆಂಧ್ರ ಜಿಲ್ಲೆಯ ಪಾಳೆಯಗಾರರನ್ನು ಅಡಗಿಸಿ ತಮ್ಮ ಸಾಮಂತರನ್ನಾಗಿ ಮಾಡಿಕೊಳ್ಳುವ ಕಾರ್ಯದಲ್ಲಿ ಸಹಾಯಮಾಡಿದ ಕದರಪ್ಪ ನಾಯಕನು (ಕ್ರಿ.ಶ. 1363–88) ಅನಂತರ ಬಂದ ಪಾಳೆಯಗಾರರಲ್ಲಿ ಪ್ರಮುಖನಾದವನು. ವಿಜಯನಗರದ ದೊರೆಯು ಕದರಪ್ಪನನ್ನು ನಾಯಕರ ಪ್ರಮುಖನನ್ನಾಗಿ ಮಾಡಿ ವಿಸ್ತಾರವಾದ ಪ್ರದೇಶಕ್ಕೆ ಒಡೆಯನನ್ನಾಗಿ ಮಾಡಿದನು.

ಸಿಂಗಪ್ಪನಾಯಕನ (ಕ್ರಿ.ಶ. 1388–1457) ವಿಚಾರವಾಗಿ ನಮಗೆ ಏನೂ ತಿಳಿಯಬರುವುದಿಲ್ಲ. ಮುಂದಿನ ಹಿರಿಯ ನಾಯಕನೆಂದರೆ ದೊಡ್ಡವಸಂತನಾಯಕ (1457-67). ಅವನು ಒಬ್ಬ ಸೇನಾ ನಾಯಕನಾಗಿದ್ದನು. ವಿಜಯನಗರದ ಮಲ್ಲಿಕಾರ್ಜುನನ ಕಾಲದಲ್ಲಿ (1446) ಕಲ್ಬುರ್ಗಿಯ ಸುಲ್ತಾನನು ವಿಜಯನಗರಕ್ಕೆ ಮುತ್ತಿಗೆ ಹಾಕಿದನು. ವಸಂತನಾಯಕನು ಕಲ್ಬುರ್ಗಿಯನ್ನು ಮುತ್ತಿ ದ್ವಂದ್ವಯುದ್ಧದಲ್ಲಿ ಸುಲ್ತಾನನನ್ನು ಸಂಹರಿಸಿದನು. ಈ ಸೇವೆಯ ಬಹುಮಾನಾರ್ಥವಾಗಿ ವಸಂತನಾಯಕನಿಗೆ ಆತನ ಪಾಳಯದ ಸುತ್ತಮುತ್ತಲ ಪ್ರದೇಶಗಳನ್ನು ಸೇರಿಸಿಕೊಳ್ಳಲು ಅವಕಾಶ ಕೊಡಲಾಯಿತು.

ಎರಡನೆ ಕದರಪ್ಪನಾಯಕನು (ಕ್ರಿ.ಶ. 1482–1508) ಸಾರ್ವಭೌಮರ ಪರವಾಗಿ ರಂಗರಾಜನ ದಂಗೆಯನ್ನು ಅಡಗಿಸಿದನು. ವಿಜಯನಗರದ ರಾಜ ಸಭೆಯಲ್ಲಿ ನವರಾತ್ರಿಯ ಸಮಯದಲ್ಲಿ ಇರಿದುಕೊಳ್ಳುವ ಹಟದ ಸ್ಪರ್ಧೆಯನ್ನು ಸ್ವೀಕರಿಸುವುದರ ಮೂಲಕವಾಗಿ ತನ್ನ ಸ್ವಾಮಿಭಕ್ತಿಯನ್ನು ಪ್ರದರ್ಶಿಸಿದನು. ನೆರೆ ರಾಜ್ಯವಾದ ಬಳ್ಳಾಪುರದ ಅರಸರೊಡನೆ ಶಾಂತಿಯನ್ನು ಸ್ಥಾಪಿಸಿದನು.

ಮೂರನೆಯ ವಸಂತನಾಯಕನು (ಕ್ರಿ.ಶ. 1584-1614) ಮೊಗಲರ ಸೇನಾಪತಿಯಾದ ಲವರಖಾನನ ಸೈನ್ಯವನ್ನು ಹೊಡೆದೋಡಿಸಿದನು. ಅವನು ಶ್ರೀರಂಗದಲ್ಲಿ ದೇವಾಲಯವನ್ನು ಕಟ್ಟಲು ಶ್ರೀರಂಗರಾಜನಿಗೆ ಸಹಾಯ ಮಾಡಿದನು. ನಾಲ್ಕನೆಯ ನರಸಿಂಹನಾಯಕನು (ಕ್ರಿ.ಶ. 1614-44) ವಿವಿಧ ಇಲಾಖೆಗಳನ್ನು ಸ್ಥಾಪಿಸುವುದರ ಮೂಲಕ ದಕ್ಷರಾಜ್ಯಾಡಳಿತವನ್ನು ಆರಂಭಿಸಿದನು. ವಿಜಯ ನಗರವು ಅವನತಿ ಹೊಂದುತ್ತಿದ್ದಾಗಲೂ ಈ ಪಾಳೆಯಗಾರನು ಅಲ್ಲಿನ ದೊರೆಗಳಲ್ಲಿ ನಿಷ್ಠಾವಂತನಾಗಿದ್ದನು.

ಮುಂದೆ ಆಳಿದ ಬಂಗಾರ ತಿಮ್ಮ ನಾಯಕ (ಕ್ರಿ.ಶ. 1680–1728) ಮತ್ತು ಮೂರನೆಯ ಕದರಪ್ಪ ನಾಯಕ (ಕ್ರಿ. ಶ. 1728–1740)—ಇವರು ಮೊಗಲರಿಗೂ ಮರಾಠಿಗರಿಗೂ ಕಪ್ಪ ಕಾಣಿಕೆಗಳನ್ನು ಅರ್ಪಿಸಿ ಶಾಂತಿಯನ್ನು ಕೊಂಡುಕೊಂಡರು. ಹೈದರ್ ಆಲಿಯು ಗುಮ್ಮನಾಯಕ ಪಾಳಯವನ್ನು ನಾಲ್ಕನೆ ನರಸಿಂಹನಾಯಕನಿಂದ ಸ್ವಾಧೀನಪಡಿಸಿಕೊಂಡನು. ಮೂರನೆ ಮೈಸೂರು ಯುದ್ಧದ ಸಮಯದಲ್ಲಿ ನರಸಿಂಹನಾಯಕನು ಬ್ರಿಟಿಷರ ಸಹಾಯವನ್ನು ಬೇಡಿದನು. ನಾಲ್ಕನೆ ಮೈಸೂರು ಯುದ್ಧದ ಸಮಯದಲ್ಲಿ ನರಸಿಂಹನಾಯಕನು ತನ್ನ ಪಾಳೆಯಪಟ್ಟನ್ನು ಹಿಂದಕ್ಕೆ ಪಡೆದನು. ಆದರೆ ಬ್ರಿಟಿಷರು ತಮ್ಮ ವಾಗ್ದಾನವನ್ನು ಮುರಿದುದರಿಂದ ನರಸಿಂಹನಾಯಕನು ವ್ಯಥೆಯಿಂದ ಮರಣ ಹೊಂದಿದನು.

**ಹರಪನ ಹಳ್ಳಿ**

ಹರಪನಹಳ್ಳಿ ಪಾಳೆಯಗಾರನು ಬೇಡ ಜನಾಂಗಕ್ಕೆ ಸೇರಿದ ಅತ್ಯಂತ ಪ್ರಬಲ ಆಡಳಿತಗಾರನಾಗಿದ್ದನು. ಅವನು ವಿಜಯನಗರದ ವಿರೋಧಿಗಳಾದ ಬಿಜಾಪುರದವರ ಪ್ರಮುಖ ಸ್ನೇಹಿತನಾಗಿದ್ದನು. 1792 ರಲ್ಲಿ ಅವನು ಹೈದರಾಲಿಯ ಅತ್ಯಂತ ನಂಬಿಕೆಯ ಒಡನಾಡಿಯಾಗಿ 1796 ರ ವರೆಗೂ ಹಾಗೆಯೇ ಇದ್ದನು. ಟಿಪ್ಪುವಿಗೆ ಯಾವ ಪಾಳೆಯಗಾರನ ಮೇಲೂ ವಿಶ್ವಾಸವಿರಲಿಲ್ಲ. ಅವನು ಮೋಸದಿಂದ ಹರಪನಹಳ್ಳಿಯ ಪಾಳೆಯಗಾರನನ್ನು ಹಿಡಿದು 1792ರಲ್ಲಿ ಅವನ ರಾಜ್ಯವನ್ನು ವಶಪಡಿಸಿಕೊಂಡನು. ಟಿಪ್ಪುವಿನ ಪತನಾನಂತರ ನಿಜಾಮನು ಈ ಪಾಳೆಯಗಾರನನ್ನು ಮಾನ್ಯ ಮಾಡಿದನು. ಆದರೆ ಬ್ರಿಟಿಷರು ಅವನನ್ನು ಕೊನೆಗಾಣಿಸಿದರು.

**ಹಾಗಲವಾಡಿ**

ಈಗಿನ ತುಮಕೂರು ಜಿಲ್ಲೆಯ ಹೆಚ್ಚು ಭಾಗವು ಈ ಪಾಳೆಯ ಪಟ್ಟಿಗೆ ಸೇರಿತ್ತು. ಈಗಿನ ಗುಬ್ಬಿ ತಾಲೂಕಿನ ಒಂದು ಹಳ್ಳಿಯಾದ ಹಾಗಲವಾಡಿಯಲ್ಲಿದ್ದುಕೊಂಡು ನಾಯಕರು ಈ ಪಾಳೆಯ ಪಟ್ಟನ್ನು ಆಳುತ್ತಿದ್ದರು. ಈ ಪಾಳೆಯಗಾರರು ವಿಜಯನಗರದ ಅಧೀನದಲ್ಲಿದ್ದರು. ಇದು ಪೂರ್ವದಲ್ಲಿ ಮಧುಗಿರಿಯ ಪಾಳೆಯ ಪಟ್ಟು ಮತ್ತು ಕೆಂಪೇಗೌಡನ ರಾಜ್ಯವನ್ನೂ ದಕ್ಷಿಣದಲ್ಲಿ ಚನ್ನಪಟ್ಟಣದ ಜಗದೇವರಾಯನ ಪಾಳೆಯ ಪಟ್ಟನ್ನೂ ಉತ್ತರದಲ್ಲಿ ಸಿರಾ ಮತ್ತು ಚಿತ್ರದುರ್ಗ ನಾಯಕರ ಪಾಳೆಯ ಪಟ್ಟನ್ನೂ ಮೇರೆಯಾಗಿ ಹೊಂದಿತ್ತು.

ಈ ಪಾಳೆಯ ಪಟ್ಟು ಕ್ರಿ. ಶ. 1478ರಲ್ಲಿ ಎರೆಕಟ್ಟೆಯಲ್ಲಿ ಎರಿಮದನಾಯಕನಿಂದ ಸ್ಥಾಪಿತ ವಾಯಿತು. ಅವನನಂತರ ಅವನ ಮಗ ಸಲಿನಾಯಕನು (ಕ್ರಿ.ಶ. 1508-44) ಈ ಪಾಳೆಯ ಪಟ್ಟನ್ನು ವಿಸ್ತರಿಸಿದನು. ಅವನು ಅತ್ಯಂತ ನಂಬಿಕೆಯವನಾಗಿ ವಿಜಯನಗರದ ಸಮ್ರಾಟರಿಗೆ ಸಹಾಯ ಮಾಡಿದುದರಿಂದ ಅವರು ಅವನಿಗೆ ತುಮಕೂರು, ಶೆಟ್ಟಿಕೆರೆ, ಹೊನ್ನವಳ್ಳಿ ಮತ್ತು ತುರುವೇಕೆರೆ— ಇವುಗಳನ್ನು ಅನುಗ್ರಹಿಸಿದರು. ಮೂರನೆಯ ಪಾಳೆಯಗಾರನಾದ ಭೈರವ ನಾಯಕನು (ಕ್ರಿ. ಶ. (1544-78) 1558ರಲ್ಲಿ ಹಾಗಲವಾಡಿಯಲ್ಲಿ ಪಟ್ಟಣ ಕಟ್ಟಲು ನಿವೇಶನವನ್ನು ಗೊತ್ತುಪಡಿಸಿದನು. ಅವನು ವೀರಶೈವನಾದನು. ಆಗಾಗ ಶಿವನು ವೃದ್ಧ ಜಂಗಮನ ವೇಷದಲ್ಲಿ ಅವನ ಬಳಿಗೆ ಆಗಮಿಸು ತ್ತಿದ್ದನೆಂದು ಕತೆಗಳನ್ನು ಹೇಳುತ್ತಾರೆ. ಅವನನಂತರದ ಪ್ರಭುವಾದ ಒಂದನೆ ಮುದಿಯಪ್ಪ ನಾಯಕನು (ಕ್ರಿ. ಶ. 1578-1618) ಅಕ್ಕ ಪಕ್ಕದವರನ್ನು ಅಡಗಿಸಿ ರಾಜ್ಯವನ್ನು ಮತ್ತೂ ವಿಸ್ತರಿಸಿದನು. ಎರಡನೆ ಭೈರಪ್ಪ ನಾಯಕನು (ಕ್ರಿ. ಶ. 1618–46) ರಣದುಲ್ಲಾಖಾನನ ಆಕ್ರಮಣವನ್ನು ಮೊದಲು ಎದುರಿಸಿದರೂ ಮುಂದೆ ತನ್ನ ರಾಜ್ಯದ ಒಂದು ಭಾಗವನ್ನು ಬಿಜಾಪುರಕ್ಕೆ ಒಪ್ಪಿಸಬೇಕಾಯಿತು, ಈ ಮನೆತನದಲ್ಲಿ ಅತ್ಯಂತ ಪ್ರಮುಖನಾದ ಪ್ರಭುವೆಂದರೆ ಎರಡನೆ ಮುದಿಯಪ್ಪ ನಾಯಕ (ಕ್ರಿ. ಶ. (1700-40). ಇವನು ವಿದ್ಯಾವಂತನೂ ನಿಷ್ಠಾವಂತನಾದ ವೀರಶೈವನೂ ಅತ್ಯಂತ ಸಹಿಷ್ಣುವೂ ಆಗಿದ್ದನು. ತನ್ನ ಪ್ರಜೆಗಳೆಲ್ಲರೂ ತಮ್ಮ ತಮ್ಮ ಧಾರ್ಮಿಕ ನಂಬಿಕೆಗಳನ್ನು ಅನುಸರಿಸಿ ಸುಖಿಗಳಾಗಿರ ಬೇಕೆಂಬುದೇ ಅವನ ಆಶೆಯಾಗಿತ್ತು. ಅವನು ಎಲ್ಲ ಧರ್ಮದ ವಿದ್ವಾಂಸರಿಗೂ ಉದಾರವಾಗಿ ಬಹುಮಾನ ಗಳನ್ನು ಕೊಟ್ಟನು. ಅವನು ಏಳುನೂರು ಧಾರ್ಮಿಕ ಸ್ತೋತ್ರಗಳನ್ನು ರಚಿಸಿರುವನೆಂದು ತಿಳಿದುಬಂದಿದೆ. ಅಲ್ಲದೆ ನಾಡಿನಲ್ಲೆಲ್ಲಾ ಸಂಚರಿಸಿ ಜನರಲ್ಲಿ ನೀತಿತತ್ವಗಳನ್ನು ಹರಡಲು ಅನೇಕ ವಿದ್ವಾಂಸರನ್ನು ನೇಮಿಸಿದನು. ತಾನು ನೇಮಿಸಿದ ಸಂಗೀತಗಾರರಿಂದ ಜನರು ಸಂಗೀತ ಕಲಿಯುವಂತೆ ಪ್ರೋತ್ಸಾಹಿಸಿದನು. ಅವನು ಅನೇಕ ತೋಪುಗಳನ್ನು ಬೆಳೆಸಿ ಬಾವಿಗಳನ್ನು ಕಟ್ಟಿಸಿದನು. ಕೈದಿಗಳನ್ನು ಸಹ ಉತ್ತಮ

ರೀತಿಯಲ್ಲಿ ನೋಡಿಕೊಂಡು ಒಳ್ಳೆಯ ಆಹಾರ ಮತ್ತು ಬಟ್ಟೆಗಳನ್ನು ಕೊಡುತ್ತಿದ್ದನು. ಕಡೆಗೆ ರಾಜ್ಯ ತ್ಯಾಗ ಮಾಡಿ ತನ್ನ ಬೋಧನೆಗಳನ್ನು ಸ್ವತಃ ಹರಡಿದನು. ನಿಜವಾಗಿಯೂ ಆತನು ಅಪೂರ್ವ ರಾಜರ್ಷಿಯಾಗಿದ್ದನು.

ಮುಂದಿನ ಪ್ರಭು ಮುದ್ದುವೀರಪ್ಪನಾಯಕನಿಗೆ (ಕ್ರಿ.ಶ. 1740–53) ಮೊಗಲರ ಸೇನಾಪತಿಯಾದ ದಿಲವರಖಾನನಿಂದ ಜಂಗ್ ಬಹದೂರ್ ಎಂಬ ಬಿರುದು ಕೊಡಲಾಗಿತ್ತು. ಚನ್ನಬಸಪ್ಪನಾಯಕನು (ಕ್ರಿ.ಶ. 1753–55) ಕಡೆಯ ಪ್ರಭುವಾಗಿದ್ದನು. ಈತನನ್ನು ಹೈದರ್ ಆಲಿಯು ಮೋಸದಿಂದ ಉರುಳಿಸಿ ಈ ಪಾಳೆಯ ಪಟ್ಟನ್ನು ಮೈಸೂರಿಗೆ ಸೇರಿಸಿಕೊಂಡನು.

## ಚಿತ್ರದುರ್ಗ

ಮತ್ತಿ ತಿಮ್ಮಣ್ಣನಾಯಕನು ತನ್ನ ಸ್ವಶಕ್ತಿಯಿಂದ ಒಂದು ಸಣ್ಣ ಪಾಳೆಯ ಪಟ್ಟನ್ನು ಚಿತ್ರದುರ್ಗದಲ್ಲಿ ಸ್ಥಾಪಿಸಿದನು. ವಿಜಯನಗರದ ಸಮ್ರಾಟರು ಈತನನ್ನು ಪ್ರಭುವೆಂದು ಪರಿಗಣಿಸಿದ್ದರು. ಈಗಿನ ಚಿತ್ರದುರ್ಗ ಜಿಲ್ಲೆ ಮತ್ತು ಅದರ ಸುತ್ತಮುತ್ತಲ ಪ್ರದೇಶವನ್ನು ಇನ್ನೂರ ಹನ್ನೊಂದು ವರ್ಷಗಳ ಕಾಲ ಮತ್ತಿ ಮತ್ತು ಬಿಳಿಚೋಡು—ಈ ಎರಡು ಮನೆತನದ ಅರಸರುಗಳು ಆಳುತ್ತಿದ್ದರು.

ಈ ಪಾಳೆಯ ಪಟ್ಟಿನ ಸ್ಥಾಪಕರು ವಾಲ್ಮೀಕಿ ಗೋತ್ರಕ್ಕೆ ಸೇರಿದ್ದು ದೆಹಲಿಯಿಂದ ಬಂದವರೆಂದು ಹೇಳುತ್ತಾರೆ. ವಿಜಯನಗರದ ದೊರೆ ಸಾಳ್ವನರಸಿಂಹನ ಆಜ್ಞೆಯಂತೆ ಕ್ರಿ.ಶ. 1435 ರಲ್ಲಿ ತಿಮ್ಮಣ್ಣನು ಹೊಳಲ್ಕೆರೆಯ ನಾಯಕನಾದನು. ಅವನು ಪ್ರಸಿದ್ಧವಾದ ಕೋಟೆಯನ್ನು ಕಟ್ಟಿದಾಗ ಕ್ರಿ.ಶ. 1495 ರಲ್ಲಿ ಚಿತ್ರದುರ್ಗದ ನಾಯಕನಾಗಿ ನೇಮಿಸಲ್ಪಟ್ಟನು. 1502 ರಲ್ಲಿ ಅವನು ವಿಜಯನಗರದ ಸಾಮಂತನೆಂದು ಪರಿಗಣಿತನಾದನು. ಆತನು ಕಲ್ಬುರ್ಗಿಯ ಕೋಟೆಯನ್ನು ತನ್ನ ಅಧಿರಾಜನಿಗಾಗಿ ವಶಪಡಿಸಿಕೊಂಡನು. ಆದರೆ ಆತನು ತನ್ನ ಅವಿಧೇಯತೆಯ ಕಾರಣದಿಂದ ವಿಜಯನಗರದ ಸೆರೆಮನೆಯಲ್ಲಿ ಕೊನೆಯುಸಿರನ್ನೆಳೆದನು.

ಅವನನಂತರ ಓಬಣ್ಣನಾಯಕನು (ಕ್ರಿ.ಶ. 1510–25) ಅಧಿಕಾರಕ್ಕೆ ಬಂದು 'ಮದಕರಿನಾಯಕ' ಎಂಬ ಬಿರುದನ್ನು ತಾಳಿದನು. ಅವನು ವಿಜಯನಗರದ ಅಧೀನತೆಯನ್ನು ತೊರೆದು ಸ್ವತಂತ್ರನಾದನೆಂದು ತಿಳಿದುಬರುತ್ತದೆ. ಮೂರನೆಯ ಪಾಳೆಯಗಾರನಾದ ಕಸ್ತೂರಿ ರಂಗಪ್ಪ ನಾಯಕನು (ಕ್ರಿ.ಶ. 1525-74) ತರೀಕೆರೆ ಮತ್ತು ಸಿರಾದ ಪಾಳೆಯಗಾರರನ್ನು ಸೋಲಿಸಿದನು. ಇವನನಂತರ ಎರಡನೆ ಮದಕರಿ ನಾಯಕನು ಮತ್ತು ಓಬಣ್ಣನಾಯಕನೂ ಅಧಿಕಾರಕ್ಕೆ ಬಂದರು. ಕ್ರಿ.ಶ. 1596 ರಲ್ಲಿ ಓಬಣ್ಣ ನಾಯಕನು ಕೊಲೆಯಾದನು. ಸೈನ್ಯದಲ್ಲಿ ದಂಗೆಯುಂಟಾಗಿ ಎಲ್ಲೆಲ್ಲೂ ಗೊಂದಲ ಮತ್ತು ರಕ್ತಪಾತಗಳು ಮನೆಮಾಡಿದ್ದುವು. ಈ ಮಧ್ಯೆ ಇಕ್ಕೇರಿ ಮತ್ತು ಹರಪನ ಹಳ್ಳಿಯವರ ಆಕ್ರಮಣವನ್ನು ಎದುರಿಸ ಬೇಕಾಯಿತು. ಈ ಸಂದರ್ಭದಲ್ಲಿ ಮದಕರಿನಾಯಕನ ಮನೆಯವರು ವೀರಶೈವಧರ್ಮವನ್ನು ಸ್ವೀಕರಿಸಿ ಅತಿ ಶೀಘ್ರದಲ್ಲಿಯೇ ಅದನ್ನು ತ್ಯಜಿಸಿದರು. ಅವರು ರಣದುಲ್ಲಾಖಾನನ ಆಕ್ರಮಣವನ್ನು ಸಹ ಎದುರಿಸಿದರು. ಮುಂದೆ ಬಂದ ಮೂರನೆಯ ಮದಕರಿನಾಯಕನು ತನ್ನ ಸೇನಾಧಿಕಾರಿಗಳೊಡನೆಯೇ ಹೋರಾಡಬೇಕಾಯಿತು. ಅವನ ಆಳುವಿಕೆಯಲ್ಲಿ (ಕ್ರಿ.ಶ. 1680–1721) ಎಲ್ಲೆಲ್ಲೂ ಅಂತಃಕಲಹ ಮತ್ತು ಗೊಂದಲಗಳು ವ್ಯಾಪಿಸಿದ್ದುವು.

ಭರಮಪ್ಪನಾಯಕನು ಹಿರಿಯ ಪಾಳೆಯಗಾರನಾಗಿದ್ದನು. ಆತನು ಹರಪನಹಳ್ಳಿಯ ಪಾಳೆಯಗಾರ ನಿಂದ ಅಣಜಿಕೋಟೆಯನ್ನು ಮತ್ತೆ ಪಡೆದುಕೊಂಡನು. ಸಿರಾದ ನವಾಬರ ಮತ್ತು ಮರಾಠರ

ವಿರುದ್ಧವಾಗಿ ಪಾಳೆಯಗಾರರ ಸಂಯೋಜಿತ ಒಳಸಂಚನ್ನು ಹೂಡಿದನು. ಮೊಗಲರಿಗೆ ಸಹಾಯಮಾಡಿ ಬಿಜಾಪುರದ ಸೇನೆಯನ್ನು ಹಿಂದಕ್ಕೆ ಓಡಿಸಿದನು. ಭರಮಪ್ಪನಾಯಕನು ಈ ಮನೆತನದ ಅತ್ಯಂತ ಪ್ರಮುಖ ಪಾಳೆಯಗಾರನಾಗಿದ್ದನು. ವಿರೋಧಿ ಪಾಳೆಯಗಾರರಿಂದ ಕಳುಹಲ್ಪಟ್ಟ ಮೊಗಲ್ ಮತ್ತು ಬಿಜಾಪುರದ ಸೇನೆಗಳನ್ನು ಸೋಲಿಸಿದನು. ಇವನು ಮೂವತ್ತು ದೇವಾಲಯಗಳನ್ನೂ ನಾಲ್ಕು ಅರಮನೆಗಳನ್ನೂ ಭರಮಸಾಗರ ಭೀಮಸಮುದ್ರಗಳಲ್ಲಿ ದೊಡ್ಡ ಕೆರೆಗಳನ್ನೂ ಕಟ್ಟಿಸಿದನು. ಆದರೆ ಇವನ ಕಾಲದಲ್ಲಿ ಪ್ರಜೆಗಳು ಪ್ಲೇಗಿನಿಂದ ಅತಿಯಾಗಿ ನೊಂದರು.

ಅನಂತರದ ಪ್ರಮುಖನಾಯಕನೆಂದರೆ ಮೊದಲನೆಯ ಮದಕರಿನಾಯಕ. ಶ್ರೀರಂಗಪಟ್ಟಣದ ಅರಸನು ಮದಕರಿನಾಯಕನನ್ನು ಸ್ನೇಹಸಂಬಂಧಿಯೆಂದು ಪರಿಗಣಿಸಿದ್ದನು. ಇವನು ರಾಮದುರ್ಗದ ಸೇನೆಯನ್ನು ಎದುರಿಸಿ ರಾಮಗಿರಿಯನ್ನು ವಶಪಡಿಸಿಕೊಂಡನು. ಹರಪನಹಳ್ಳಿಯ ಸೇನೆಯೊಡನೆ ಮಾಯಕೊಂಡದ ಕದನದಲ್ಲಿ ಹೋರಾಡುತ್ತಾ ವಿಧಿವಶನಾದನು.

ಎರಡನೆ ಕಸ್ತೂರಿ ರಂಗಪ್ಪನಾಯಕನು ಮುಂದೆ ಆಳಿದನು. ಅವನು ಮರಾಠರ ಮತ್ತು ಹರಪನ ಹಳ್ಳಿಯ ಸೇನೆಗಳನ್ನು ಹಿಂದಕ್ಕೆ ಹೋಡೆದೋಡಿಸಿದನು.

ಕಡೆಯ ಮದಕರಿನಾಯಕನು (ಕ್ರಿ.ಶ. 1755–62) ಬಿಳಿಚೋಡು ಮನೆತನಕ್ಕೆ ಸೇರಿದ್ದರೂ ಪ್ರಮುಖರು ಅವನನ್ನು ಪ್ರಭುವಾಗಿ ಆಯ್ಕೆ ಮಾಡಿದರು. ಅವನು ಓಬಲಮ್ಮನಗಟಿಯ ರಾಜಪ್ರತಿನಿಧಿಯ ಕೈಕೆಳಗಿದ್ದನು. ಚಿತ್ರದುರ್ಗದ ಸೇನೆಯು ರಾಯದುರ್ಗವನ್ನು ಹಿಡಿಯಿತು. ಹರಪನಹಳ್ಳಿಯ ಪಾಳೆಯಗಾರರು ಚಿತ್ರದುರ್ಗದ ಸೇನೆಯನ್ನು ಸೋಲಿಸಿದರು. ಹೈದರ್ ಆಲಿಯು ಚಿತ್ರದುರ್ಗವನ್ನು ಮುತ್ತಿದನು. ಮದಕರಿನಾಯಕನು ಅಧಿಕಪ್ರಮಾಣದಲ್ಲಿ ಕಪ್ಪಕಾಣಿಕೆಗಳನ್ನು ಕೊಟ್ಟು ತಲೆ ಉಳಿಸಿಕೊಂಡನು. ಬಂಕಾಪುರದ ಕೋಟೆಯನ್ನು ಹಿಡಿಯುವಾಗ ಚಿತ್ರದುರ್ಗದ ಸೈನ್ಯವು ಹೈದರನಿಗೆ ಸಹಾಯ ಮಾಡಿತು. ಮುಂದೆ ಮರಾಠರು, ನಿಜಗಲ್ಲಿನವರು ಮತ್ತು ಗುತ್ತಿಯ ಮುರಾರಿರಾಯ ಇವರ ವಿರುದ್ಧ ಹೋರಾಡಿದಾಗ ಹೈದರನಿಗೆ ಸಹಾಯ ಮಾಡಲಾಯಿತು. ಅನಂತರ ಮದಕರಿನಾಯಕನು ಪೇಶ್ವೆಮಾಧವರಾಯನ ಜೊತೆಗೂಡಿ ಹೈದರ್ ಆಲಿಯೊಡನೆ ಹೋರಾಡಿದಾಗ ಹೈದರ್ ಆಲಿಯು ಆನವಟ್ಟಿ ಕದನದಲ್ಲಿ ಸೋಲಲು ಮದಕರಿನಾಯಕನು ಮುಖ್ಯ ಕಾರಣನಾದನು. ಹೈದರ್ ಆಲಿಯು ಮದಕರಿನಾಯಕನನ್ನು ನಾಶಪಡಿಸಲು ಸಂಕಲ್ಪಿಸಿದನು. ಅವನು ಚಿತ್ರದುರ್ಗದ ಕೋಟೆಗೆ ಲಗ್ಗೆಯಿಟ್ಟನು. ಆದರೆ ಕೋಟೆಯು ಅಭೇದ್ಯವಾದ್ದರಿಂದ ಹೈದರನು ಸೋತನು. ಈ ಮುತ್ತಿಗೆಯ ಸಂದರ್ಭದಲ್ಲೇ ನಾವು ಪ್ರಸಿದ್ಧಳಾದ ಓಬವ್ವನ ಹೆಸರನ್ನು ಕೇಳುತ್ತೇವೆ. ಹೈದರನ ಸೈನಿಕರು ಕೋಟೆಯ ನೆಲಮಾಳಿಗೆ ಬಾಗಿಲಿನಿಂದ ಗುಪ್ತವಾಗಿ ಪ್ರವೇಶಿಸಲು ಪ್ರಯತ್ನಿಸಿದಾಗ ಓಬವ್ವನು ಹೈದರನ ಕಡೆಯ ಅನೇಕ ಸೈನಿಕರನ್ನು ಕೊಂದಳು. ಮದಕರಿನಾಯಕನ ಸೇನೆಯಲ್ಲಿದ್ದ ಅನೇಕ ಮಹಮ್ಮದೀಯ ಸಿಪಾಯಿ ಗಳಿಗೆ ಹೈದರನು ಲಂಚ ತಿನ್ನಿಸಿದನು. ಇವರು ಕೋಟೆಯ ಗುಟ್ಟನ್ನು ರಟ್ಟು ಮಾಡಿದರು. ಮದಕರಿ ನಾಯಕನು ಸೆರೆ ಸಿಕ್ಕಿ ಸತ್ತನೆಂದು ತಿಳಿದುಬರುತ್ತದೆ. ಚಿತ್ರದುರ್ಗವು ಮೈಸೂರಿಗೆ ಸೇರಿತು.

### ನಿಡುಗಲ್

ನಿಡುಗಲ್ಲಿನ ನಾಯಕರು ತಿಪ್ಪನಾಯಕನ (ಕ್ರಿ. ಶ. 1487) ವಂಶಕ್ಕೆ ಸೇರಿದವರು. ಅವನನ್ನು ಕಠಾರಿರಾಯ ಎಂದು ಕರೆಯುತ್ತಾರೆ. ಅವನು ದೇವಾಲಯಗಳನ್ನೂ ಒಂದು ಕೆರೆಯನ್ನೂ ತನ್ನ ಹೆಂಡತಿ ಲಕ್ಷ್ಮೀದೇವಿಯ ಹೆಸರಿನಲ್ಲಿ ಕಟ್ಟಿಸಿದನು. ಆತನು ತನ್ನ ಮರಣಾತ್ ಪೂರ್ವ ಬಿಜಾಪುರ

ಸೇನೆಯಿಂದ ಓಡಿಸಲ್ಪಟ್ಟ ಏಳು ಜನ ಮಕ್ಕಳಿಗೆ ರಾಜ್ಯವನ್ನು ಹಂಚಿದನು. ಅವರಲ್ಲಿ ಒಬ್ಬನಾದ ತಿಮ್ಮಣ್ಣನಾಯಕನು ನಿಡುಗಲ್ಲನ್ನು ಆಶ್ರಯಿಸಿ ಒಂದು ಕೋಟೆಯನ್ನು ಕಟ್ಟಿದನು. ಅವನ ವಂಶದವರು ಸಿರಾದ ನವಾಬನ ಅಧೀನಕ್ಕೆ ಒಳಪಟ್ಟರು. ಕ್ರಿ. ಶ. 1761ರಲ್ಲಿ ಹೈದರನು ಈ ಕೋಟೆಯನ್ನು ಮುತ್ತಿದನು. ಟಿಪ್ಪುವು ಅದನ್ನು ಮೈಸೂರಿಗೆ ಸೇರಿಸಿಕೊಂಡನು.

### ಕಳಲೆ

ಕಳಲೆಯ ಅರಸರು ಮೈಸೂರಿನ ಇತಿಹಾಸದಲ್ಲಿ ಅತ್ಯಂತ ಪ್ರಮುಖವಾದ ಪಾತ್ರವಹಿಸಿದ್ದಾರೆ. ಕಳಲೆಯ ಅರಸರಿಗೂ ಉಮ್ಮತ್ತೂರಿನ ಅರಸರಿಗೂ ಬದ್ಧ ದ್ವೇಷವಿತ್ತು. ಒಂದು ಸಂದರ್ಭದಲ್ಲಿ ಉಮ್ಮತ್ತೂರಿನ ದೊರೆಯು ಕಳಲೆಯ ರಾಜವಂಶವನ್ನೇ ನಿರ್ನಾಮ ಮಾಡುವುದರಲ್ಲಿದ್ದನೆಂದು ತಿಳಿದು ಬರುತ್ತದೆ. ಎಡತೊರೆಯ ಐವತ್ತೆಂಟನೆಯ ಶಾಸನವು (ಕಿ. ಶ. 1748) ಆ ವಂಶದ ವಿಷಯವಾಗಿ ಕೆಳಕಂಡ ವಿವರಣೆಯನ್ನು ನೀಡುತ್ತದೆ :

ತಿಮ್ಮರಾಜನು ಸ್ಥಾಪಕ. ಅವನ ಮಗ ಶ್ರೀಕಂಠನು ನಂಜರಾಜ, ದೊಡ್ಡಯ್ಯ ಮತು ಮಲ್ಲರಾಜ ಎಂಬ ಮೂವರು ಮಕ್ಕಳನ್ನು ಹೊಂದಿದ್ದನು. ಅವನನಂತರ ಆಳಿದವರು – ದೊಡ್ಡಯ್ಯನ ಮಗನಾದ ಬಸವರಾಜ, ಆ ಮೇಲೆ ವೀರರಾಜ ಮತ್ತು ಆತನ ಮಕ್ಕಳಾದ ದೇವರಾಜ ಮತ್ತು ನಂಜರಾಜ (ಕ್ರಿ. ಶ. 1767).

ಮೈಸೂರು ಮತ್ತು ಕಳಲೆಗಳ ರಾಜ ಮನೆತನದವರು ಸಮಾನ ಅಂತಸ್ತಿನಿಂದ ಕೂಡಿ ಪರಸ್ಪರ ವಿವಾಹಗಳ ಮೂಲಕ ಒಂದಾಗಿದ್ದರು. ಈ ಹೇಳಿಕೆಗೆ 1758ರಲ್ಲಿ ಕೃಷ್ಣರಾಜ ಒಡೆಯರು ನೀಡಿದ್ದ ಪ್ರತಿಜ್ಞಾರೂಪಕವಾದ 'ಭಾಷಾಪತ್ರ' ವೂ, 'ನಂಬುಗೆಯ ನಿರೂಪ' ವೂ ಸಾಕ್ಷಿಗಳಾಗಿವೆ. ಅದೇ ವರ್ಷ ದೇವರಾಜನು ಕೃಷ್ಣರಾಜರ ಸೇನಾಪತಿಯಾಗಿ ಮಿಡಗೇಶಿ, ಸಾವನದುರ್ಗ ಮತ್ತು ಇನ್ನೂ ಅನೇಕ ಪ್ರದೇಶಗಳನ್ನೂ ಗೆದ್ದುಕೊಟ್ಟನು. ಅವನ ಸೋದರ ಸಂಬಂಧಿಯಾದ ನಂಜರಾಜನು ಸರ್ವಾಧಿಕಾರಿಯಾಗಿ ಕನ್ನಂಬಾಡಿಯಲ್ಲಿ ಒಂದು ಅಗ್ರಹಾರವನ್ನು ಸ್ಥಾಪಿಸಿದನು. ಕಿರಿಯ ನಂಜರಾಜನು ಇಷ್ಟವಿಲ್ಲದಿದ್ದರೂ ಹೈದರನ ಅತಿಕ್ರಮಣಕ್ಕೆ ದಾರಿ ಮಾಡಿಕೊಟ್ಟನು.

### ಉಮ್ಮತ್ತೂರು

ವಿಜಯನಗರದ ಅರಸರ ಅಧೀನದಲ್ಲಿದ್ದ ಪಾಳೆಯ ಪಟ್ಟುಗಳಲ್ಲಿ ಉಮ್ಮತ್ತೂರು ಪ್ರಮುಖವಾದುದು. ಈ ರಾಜರು ವಿಜಯನಗರದ ರಾಜಪ್ರತಿನಿಧಿಗಳಾಗಿ ಶ್ರೀರಂಗಪಟ್ಟಣದಲ್ಲಿದ್ದ ಶ್ರೀರಂಗರಾಯ ಮತ್ತು ತಿರುಮಲರಾಯರಿಗೆ ಸಂಬಂಧಿಗಳಾಗಿದ್ದರು. ಈ ರಾಜ ಪ್ರತಿನಿಧಿಗಳು ತಮ್ಮ ರಾಜಪ್ರತಿನಿಧಿತ್ವವನ್ನು ಉಮ್ಮತ್ತೂರಿನ ಪಾಳೆಯಗಾರರಿಗೆ ಹಸ್ತಾಂತರಿಸಲು ಅಪೇಕ್ಷಿಸಿದರು. ಆದರೆ ಮೈಸೂರಿನ ರಾಜ ಒಡೆಯರು ರಾಜಪ್ರತಿನಿಧಿಗಳಾದುದರಿಂದ ಉಮ್ಮತ್ತೂರಿನ ದೊರೆಗಳು ಮೈಸೂರಿನ ಅರಸುಮನೆತನವನ್ನು ದ್ವೇಷಿಸಿದರು. ಕಳಲೆಯ ಮನೆತನದವರು ಸಹ, ಉಮ್ಮತ್ತೂರಿನ ನಾಯಕರನ್ನು ದ್ವೇಷಿಸತೊಡಗಿದರು. ಕ್ರಿ. ಶ. 1613ರಲ್ಲಿ ರಾಜ ಒಡೆಯರು ಉಮ್ಮತ್ತೂರನ್ನು ಮೈಸೂರಿಗೆ ಸೇರಿಸಿಕೊಂಡರು.

ಈ ಮನೆತನವನ್ನು ಸ್ಥಾಪಿಸಿದವನು ಹನುಮಪ್ಪ ಒಡೆಯರ್. ಮಿಕ್ಕ ಅರಸರುಗಳು ದೇವರಾಜ (1478-84), ನಂಜರಾಜ (1484-94) ಮತ್ತು ಚೆನ್ನನಂಜ (1497–1504). ರಾಜಪ್ಪ ಒಡೆಯರೇ ಕೊನೆಯ ಅರಸು. ಈ ಅರಸರ ಮನೆದೇವತೆ ಸೋಮೇಶ್ವರ. ವಿಜಯನಗರದ ಸಮ್ರಾಟರ ಸಾರ್ವಭೌಮ ಬಿರುದಾವಳಿಗಳನ್ನೆಲ್ಲಾ ಇವರು ಧರಿಸಿದ್ದರು.

**ಮಧುಗಿರಿ**

ವೀರಪ್ಪಗೌಡನು ಹದಿಮೂರನೆ ಶತಮಾನದಲ್ಲಿ ಮಧುಗಿರಿ ಪಾಳೆಯ ಪಟ್ಟನ್ನು ಸ್ಥಾಪಿಸಿದನು. ಆತನು ಮಧುಗಿರಿ ಊರನ್ನೂ ಬೆಟ್ಟದ ಮೇಲೆ ಬಲವಾದ ಕೋಟೆಯನ್ನೂ ಕಟ್ಟಿದನು. ಅವನ ನಂತರ ಬಂದವರನ್ನು ಹಿರಿಗೌಡ ರಾಜರು ಎಂದು ಕರೆಯುತ್ತಾರೆ. ವೀರಪ್ಪಗೌಡನು ಅನೇಕ ಯುದ್ಧಗಳನ್ನು ಮಾಡಿದನು. ಕೋಟೆಯನ್ನು ಸರಿಪಡಿಸಿ ನ್ಯಾಯದಿಂದಲೂ ದಿಟ್ಟತನದಿಂದಲೂ ಆಳಿದನು. ಕಳೆ ಚಿಕ್ಕಪ್ಪಗೌಡನೆಂಬ ಅರಸನು ಶ್ರೀರಂಗರಾಯ ಮಹಾ ಪ್ರಭುವಿನ ಒಪ್ಪಿಗೆಯ ಮೇರೆ ಕೋಟೆಯನ್ನು ಉತ್ತಮಪಡಿಸಿದನು. ತನ್ನ ಆಧಿಪತ್ಯದಲ್ಲಿನ ಪ್ರತಿ ಹಳ್ಳಿಯ ಎಲ್ಲೆಕಟ್ಟನ್ನು ನಿರ್ಧರಿಸಿದನು. ಮೈಸೂರಿನ ದೇವರಾಜನು ಮಧುಗಿರಿಯನ್ನು ಮುತ್ತಿ ಸ್ವಾಧೀನಪಡಿಸಿಕೊಂಡನು. ನಾಯಕನು ಸೆರೆಸಿಕ್ಕಿದನು. ಅನಂತರ ಅವನನ್ನು ಬಿಡುಗಡೆ ಮಾಡಿ ಮಿಡಗೇಶಿಯ ಜಹಗೀರು ಕೊಡಲಾಯಿತು.

**ಹೊಸಕೋಟೆ**

ಯಲಹಂಕದ ಪ್ರಭುಗಳ ಜೊತೆಗೆ ಸುಗತೂರು ನಾಡಿನ ಪ್ರಭುಗಳನ್ನೂ ಕಾಣುತ್ತೇವೆ. ಈ ಮನೆತನದ ಪ್ರತಿಯೊಬ್ಬನೂ ತನ್ನನ್ನು ತಮ್ಮೇಗೌಡ (1595) ಎಂದು ಕರೆದು ಕೊಂಡಿದ್ದಾನೆ. ಪೆನುಕೊಂಡೆಯ ಆಕ್ರಮಣವನ್ನು ಎದುರಿಸಿದ ತಮ್ಮೇಗೌಡನು ಪೆನುಕೊಂಡೆಯ ರಾಜರಿಂದ 'ಚಿಕ್ಕರಾಯ' ಎಂಬ ಬಿರುವನ್ನು ಪಡೆದನು. ಇವನ ಮಗ 2ನೆ ತಮ್ಮಭೂಪಾಲನು ಭೀಮನ ದುರ್ಗವನ್ನು ಆಕ್ರಮಿಸಿ ಪೆನುಕೊಂಡೆಯ ರಾಜರಿಂದ 1632 ರಲ್ಲಿ ಚಿನ್ನದ ಬಸವ ಮತ್ತು ವೀರಭದ್ರರಿರುವ ಪತಾಕೆಯನ್ನು ಪಡೆದನು. ಅವನ ಮಗ ಮುಮ್ಮಡಿ ತಮ್ಮಭೂಪಾಲನು ಮಹಾಪಂಡಿತನಾಗಿದ್ದು 'ರಾಜೇಂದ್ರ ಚೋಳಚರಿತ' 'ಕುಮಾರಾರ್ಜುನೀಯ' ಮತ್ತು 'ಸುಂದರೇಶಚರಿತ' ಎಂಬ ಗ್ರಂಥಗಳನ್ನು ತೆಲುಗಿನಲ್ಲೂ 'ಶಂಕರ ಸಂಹಿತೆ' ಯನ್ನು ಕನ್ನಡದಲ್ಲೂ ರಚಿಸಿದನು. ಸಂಸ್ಕೃತದಲ್ಲಿ 'ಕರ್ಮದಿವ್ಯಾಖ್ಯಾನ ರಸಿಕ ಮನೋರಂಜನ' ಎಂಬುದನ್ನು ಬರೆದುದೇ ಅಲ್ಲದೆ 'ಶಿವದರ್ಪಣ'ವನ್ನು ವಿದ್ವಾಂಸರಾದ ಬ್ರಾಹ್ಮಣರಿಂದ ಸಂಕಲನ ಮಾಡಿಸಿದನು. ವಾಣಿಜ್ಯ ವ್ಯಾಪಾರಗಳನ್ನು ಅಭಿವೃದ್ಧಿಪಡಿಸಿ ಮಹಮ್ಮದೀಯರ ಕಿರುಕುಳಕ್ಕೆ ಒಳಗಾಗಿ ಆಶ್ರಯ ಬೇಡಿ ಬಂದ ನೂರಾರು ಹಿಂದೂ ನಿರಾಶ್ರಿತರಿಗೆ ಆಶ್ರಯ ನೀಡಿದನು. ಹೊಸಕೋಟೆಯಲ್ಲಿ ಅವಿಮುಕ್ತೇಶ್ವರ ದೇವಾಲಯವನ್ನು ಕಟ್ಟಿಸಿದನು. ಮೊದಲು ಹೊಸಕೋಟೆಯನ್ನು ಶಾಹಜಿಯೂ, ಅನಂತರ 1663 ರಲ್ಲಿ ಖಾಸಿಮ್‌ಖಾನನೂ ಆಕ್ರಮಿಸಿದ್ದರು. ಕ್ರಿ.ಶ. 1761 ರಲ್ಲಿ ಹೈದರನು ಹೊಸಕೋಟೆಯನ್ನು ಮೈಸೂರಿಗೆ ಸೇರಿಸಿಕೊಂಡನು.

**ಚೆನ್ನಪಟ್ಟಣ**

ಕ್ರಿ. ಶ. 1577ರಲ್ಲಿ ಪೆನುಕೊಂಡೆಯನ್ನು ಮುತ್ತಿದ ಮುಸ್ಲಿಮರನ್ನು ಜಗದೇವರಾಯನು ಎದುರಿಸಿ ಬಾರಾಮಹಲಿನಿಂದ ಪಶ್ಚಿಮ ಘಟ್ಟಗಳ ವರೆಗೆ ವ್ಯಾಪಿಸಿದ ಭೂಭಾಗಕ್ಕೆ ಅರಸಾದನು. ಅವನು 1580ರಲ್ಲಿ

ಚೆನ್ನಪಟ್ಟಣವನ್ನು ರಾಜಧಾನಿಯಾಗಿ ಗೊತ್ತುಮಾಡಿದನು. ಅವನ ರಾಜ್ಯವು ಮುಳುಬಾಗಿಲು, ಪಿರಿಯಾಪಟ್ಣ, ಕಾನಕಾನಹಳ್ಳಿ ಮತ್ತು ಬೂದೀಹಾಳ್–ಇವನ್ನು ಒಳಗೊಂಡಿತ್ತು ಅವನ ಮಗಳನ್ನು ವಿಜಯನಗರದ ಸಮ್ರಾಟನಿಗೆ ಮದುವೆಮಾಡಿ ಕೊಡಲಾಗಿತ್ತು. ಈ ಅರಸರುಗಳು ತೆಲುಗು ಬಣಜಿಗ ಮತಕ್ಕೆ ಸೇರಿದವರಾಗಿದ್ದರು. ಅವನನಂತರ ರಾಣೋಜಿರಾಯ, ಇಮ್ಮಡಿ ಜಗದೇವ, ಮುಮ್ಮಡಿ ಜಗದೇವ, ಕುಮಾರ ಜಗದೇವ ಮತ್ತು ಅಂಕುಶರಾಯ–ಇವರುಗಳು ಆಳಿದರು. 1630ರಲ್ಲಿ ಮೈಸೂರಿನ ಚಾಮರಾಜ ಒಡೆಯರು ಇದನ್ನು ಆಕ್ರಮಿಸಿಕೊಂಡರು.

* * * * *

ಪಾಳೆಯಗಾರರು ವೀರ ವರ್ಗಕ್ಕೆ ಸೇರಿದವರಾಗಿದ್ದು ಸದಾ ಸಿದ್ಧವಾದ ಸೇನೆಯನ್ನು ಇಟ್ಟಿದ್ದರು. ಪ್ರತಿಯೊಬ್ಬ ಪಾಳೆಯಗಾರನು ಗಣನೀಯವಾಗಿ ದೈಹಿಕ ಶಕ್ತಿಯನ್ನು ಹೊಂದಿದ್ದನು. ಅವರು ನಾಗರಿಕರನ್ನು ಪ್ರಜಾ ಸೈನ್ಯಕ್ಕೆ ಭರ್ತಿ ಮಾಡುವ ಕ್ರಮವನ್ನು ಜಾರಿಗೆ ತಂದರು. ಗತಿಸಿದ ಸೈನಿಕರ ಸಂಸಾರವನ್ನು ಪಾಳೆಯಗಾರರ ಖರ್ಚಿನಲ್ಲಿ ನಿರ್ವಹಿಸುತ್ತಿದ್ದರು. ಅವರು ಸೇನಾ ವ್ಯವಸ್ಥೆಯ ಪ್ರದೇಶಗಳಲ್ಲಿ ಅಭೇದ್ಯ ಕೋಟೆಗಳನ್ನು ಕಟ್ಟಿದ್ದರು. ಕೆಲವು ಪಾಳೆಯಗಾರರು ಫ್ರೆಂಚ್ ಮತ್ತು ಪೋರ್ಚುಗೀಸ್ ಅಧಿಕಾರಿಗಳ ಸಹಾಯದಿಂದ ತಮ್ಮ ಸೇನೆಗೆ ಯುರೋಪಿಯನ್ ಮಾದರಿಯಲ್ಲಿ ತರಬೇತು ಕೊಡಿಸಿದ್ದರು. ಇಕ್ಕೇರಿ ಮತ್ತು ಗೇರಸೊಪ್ಪೆಯ ಪಾಳೆಯಗಾರರು ಉತ್ತಮವಾದ ನೌಕಾದಳವನ್ನು ಇಟ್ಟಿದ್ದರು. ಶಿವಪ್ಪನಾಯಕನು, ಭೂಕಂದಾಯವನ್ನು ನಿರ್ಧರಿಸುವುದರಲ್ಲಿ ಆದರ್ಶ ಪದ್ಧತಿಯನ್ನನುಸರಿಸಿ ಪ್ರಸಿದ್ಧನಾದನು. ಪ್ರತಿಯೊಬ್ಬ ಪಾಳೆಯಗಾರನೂ ಯೋಗ್ಯ ಮಂತ್ರಿಮಂಡಲವನ್ನು ಹೊಂದಿದ್ದನು. ಪಾಳೆಯಗಾರನು ಸಾರ್ವಭೌಮಾಧಿಕಾರವನ್ನು ಹೊಂದಿದ್ದರೂ ಪ್ರಜಾಭಿಪ್ರಾಯಕ್ಕೆ ವಿರೋಧವಾಗಿ ಹೋಗುತ್ತಿರಲಿಲ್ಲ. ಗ್ರಾಮಾಡಳಿತವು ಬಾರಾಬಲೂತಿ ಪದ್ಧತಿಯಿಂದ ನಡೆಯುತ್ತಿತ್ತು. ಪಾಳೆಯಗಾರರು ಕೆರೆಗಳನ್ನೂ ದೇವಾಲಯಗಳನ್ನೂ ಕಟ್ಟಿಸಿ ತೋಪುಗಳನ್ನು ಸಂರಕ್ಷಿಸುತ್ತಿದ್ದರು. ಅವರು ಹಳ್ಳಿಗಳನ್ನೂ ಸತ್ರಗಳನ್ನೂ ಕಟ್ಟಿಸುವುದೇ ಅಲ್ಲದೆ ಜನೋಪಯೋಗಿಯಾದ ಇತರ ಕಾರ್ಯಗಳನ್ನು ಮಾಡುವುದೂ ತಮ್ಮ ಕರ್ತವ್ಯವೆಂದು ಭಾವಿಸಿದ್ದರು. ಅವರಲ್ಲಿ ಬಹುಪತ್ನೀತ್ವವಿತ್ತು. ಅವರುಗಳು 'ಸತಿ' ಪದ್ಧತಿಯನ್ನು ಅನುಸರಿಸುತ್ತಿದ್ದರು. ಸಾಮಾನ್ಯವಾಗಿ ಪಾಳೆಯಗಾರರು ಬೇಡರಾಗಿದ್ದು ನರಸಿಂಹನನ್ನು ಪೂಜಿಸುತ್ತಿದ್ದರು. ಮುಂದೆ ಅವರು ಲಿಂಗಾಯಿತರಾದರು. ಹಾಗಲವಾಡಿಯ ಮುದಿಯಪ್ಪನಾಯಕನಂತಹ ಹಲಕೆಲವು ಪಾಳೆಯಗಾರರು ವೇದಾಂತಿಗಳಾಗಿದ್ದರು. ಹೈದರ್ ಆಲಿಯು ಏಳಿಗೆಗೆ ಬರುವ ಮೊದಲು ಮೈಸೂರಿನಲ್ಲಿ ಅನೇಕ ಪಾಳೆಯಗಾರರಿದ್ದರು. ಹೈದರನು ಬಿರುಗಾಳಿಯಂತೆ ಪಾಳೆಯಗಾರರನ್ನೆಲ್ಲಾ ಗುಡಿಸಿಹಾಕಿದನು. ಅವನ ಮಗನು ತಂದೆಯಿಂದ ಆರಂಭವಾದ ಕಾರ್ಯವನ್ನು ಪೂರ್ಣಗೊಳಿಸಿದನು.

ಮೂಲ ಲೇಖಕರು : ಶ್ರೀ ಎಚ್.ಜಿ. ರಂಗಸ್ವಾಮಿ ಅಯ್ಯಂಗಾರ್
ಅನುವಾದಕರು : ಶ್ರೀ ಬಿ. ಎನ್. ಶಾಸ್ತ್ರಿ

# ಸಾಳುವರು

## 1 ಹಾಡುವಳ್ಳಿಯ ಸಾಳುವರು

ಮಹಾಭಾರತದಲ್ಲಿ ಉಲ್ಲಿಖಿತವಾಗಿರುವ ಪ್ರಾಚೀನ ರಾಜಮನೆತನವಾದ ಸಾಳುವರ ಜೊತೆ ಸಂಬಂಧ ಹೊಂದಿರಬಹುದಾದ ಸಾಳುವ, ಮನೆತನದ ಎರಡು ಪ್ರಮುಖ ಶಾಖೆಗಳು ಹಾಡುವಳ್ಳಿ ಮತ್ತು ಗೆರಸೊಪ್ಪೆಗಳಿಂದ ಆಳುತ್ತಿದ್ದುದು ಶಾಸನಗಳಿಂದಲೂ ಸಾಹಿತ್ಯ ಮೂಲಗಳಿಂದಲೂ ಪೋರ್ಚುಗೀಸ್ ದಾಖಲೆಗಳಿಂದಲೂ ತಿಳಿಯುತ್ತದೆ. ವಿಜಯನಗರವನ್ನು ಆಳಿದ ತುಳುವ ದೊರೆಗಳು ಈ ಶಾಖೆಗಳಿಗೇ ಸೇರಿದವರಾಗಿರಬೇಕು.

ಹಾಡುವಳ್ಳಿಯು ಉತ್ತರ ಕನ್ನಡ ಜಿಲ್ಲೆಯ ಭಟ್ಕಳದಿಂದ ಎಂಟು ಮೈಲು ದೂರದಲ್ಲಿರುವ ಒಂದು ಕುಗ್ರಾಮವಾಗಿ ಇಂದು ಕಂಡು ಬಂದರೂ ಹಿಂದೆ "ಸಂಗೀತಪುರ"ವೆಂದು ಖ್ಯಾತವಾದ ಪ್ರಸಿದ್ಧ ರಾಜಧಾನಿಯಾಗಿತ್ತು. ಕ್ರಿ.ಶ. 1488ರ ಒಂದು ಶಾಸನದಂತೆ ಹಾಡುವಳ್ಳಿಯ ಜೈನ ದೊರೆಗಳು ಸೋಮವಂಶಕ್ಕೆ ಸೇರಿದವರು. ಅವರದು ಕಾಶ್ಯಪ ಗೋತ್ರ (E C., VIII Sa. 163).

ಹಾಡುವಳ್ಳಿಯ ದೊರೆಗಳ 1408ರ ಒಂದು ಶಾಸನದಂತೆ, ಆ ಮನೆತನದ ಮೊದಲ ಪರಿಚಿತ ದೊರೆ 14ನೆ ಶತಮಾನದ ಕೊನೆಗಾಲದಲ್ಲಿ ಆಳುತ್ತಿದ್ದ ಹೈವಭೂಪ. ಈತನಿಗೆ ಸಾಳುವೇಂದ್ರನೆಂಬ ಹೆಸರೂ ಇತ್ತು. ಆತನ ರಾಣಿ ಭೈರಾದೇವಿ. ಇವನ ಉತ್ತರಾಧಿಕಾರಿ ಇವನ ಮಗನಾದ ಮಲ್ಲಿರಾಯ. ಮಲ್ಲಿರಾಯನ ಅಕಾಲ ಮರಣದಿಂದಾಗಿ ಆತನ ಸೋದರ ಸಂಗಿರಾಯ ಪಟ್ಟಕ್ಕೆ ಬಂದ (K.I.I. 38 and 39 of 1939–40). ಸಂಗಿರಾಯನ ಮೊದಲ ಶಾಸನ 1408 ರದಿದ್ದು, ಇವನು 40 ವರ್ಷಕಾಲ ಆಳಿದ. ಪರಾಕ್ರಮಶಾಲಿಯಾದ ಈ ದೊರೆ ತನ್ನ ವರಿಷ್ಠರಾದ ವಿಜಯನಗರದ ಸಮ್ರಾಟರ ಅಧೀನತ್ವವನ್ನು ಧಿಕ್ಕರಿಸಲು ಯತ್ನಿಸಿ ಅನೇಕ ಯುದ್ಧಗಳನ್ನು ನಡೆಸಿದನೆಂಬುದು ಈ ಕಾಲದ ಅನೇಕ ವೀರಗಲ್ಲುಗಳಿಂದ ತಿಳಿಯುತ್ತದೆ. "ಜೀವಂಧರ ಷಟ ದಿ"ಯನ್ನು ಬರೆದ ಕನ್ನಡ ಕವಿ ಕೋಟೇಶ್ವರ ಇವನ ಆಸ್ಥಾನದಲ್ಲಿದ್ದ. ಸಂಗೀತಪುರದ ಹೈವಭೂಪನ ಮಗ ಸಂಗಮರಾಯನು ತನ್ನ ಆಶ್ರಯದಾತನೆಂದು ಈ ಕವಿ ಹೇಳಿದ್ದಾನೆ. ಈ ಕವಿಯ ಕಾಲ 1440.

ಸಂಗಿರಾಯನ ರಾಣಿ ಶಂಕರಾಂಬೆಯ ಹಿರಿಯ ಮಗ ಇಂದ್ರ ಅಥವಾ ಇದಂಗರಸ 1449ರ ಸುಮಾರಿಗೆ ಪಟ್ಟವೇರಿದ. ಈತನ ಸೋದರ ಇಮ್ಮಡಿ ಸಾಳುವೇಂದ್ರನು ಈ ವಿಶಾಲ ಪಾಳೆಯದ ಭಾಗವಾದ ಶಿವಮೊಗ್ಗ ಜಿಲ್ಲೆಯ ಪ್ರದೇಶದ ಬಿದಿರೂರು (ಸಾಗರ ತಾಲೂಕು) ಎಂಬಲ್ಲಿಂದ ಅಣ್ಣನಿಗೆ ಅಧೀನನಾಗಿ ಆಳುತ್ತಿದ್ದ (ARSIE, 537 of 1930, E.C., VIII, Sa. 163, 164). ಇದಂಗರಸನ ಮಂತ್ರಿಯಾದ ಪದ್ಮಣನು ಪದ್ಮಾಕರ ಪುರದಲ್ಲಿ (ಸಾಗರ ತಾಲೂಕು) ಒಂದು ಚೈತ್ಯಾಲಯವನ್ನು ಕಟ್ಟಿಸಿದ. ಕನ್ನಡ ಕವಿ ಪಾಯಣ್ಣನು "ಅಹಿಂಸಾಚರಿತೆ"ಯನ್ನು ಇದಂಗರಸನ ಆಸ್ಥಾನದಲ್ಲಿ ರಚಿಸಿದ.

ಇದಂಗರಸನ ಅನಂತರ ಅವನ ಮಲಸೋದರ ಗುರುರಾಯನು 1498ರ ಸುಮಾರಿಗೆ ಪಟ್ಟವೇರಿ

1532ರ ವರೆಗೆ ಆಳಿದ (K. I, III 71,80,85 etc. of 1939–40). ಇವನ ಸೋದರಳಿಯ (ಸೋದರಿ ಪದ್ಮಾಂಬಿಕೆಯ ಮಗ) ದೇವರಾಯನು 1533 ರಿಂದ 1540 ರ ವರೆಗೆ ಆಳಿರಬೇಕೆಂದು 1540ರ ಒಂದು ಶಾಸನದಿಂದ ಗೊತ್ತಾಗುತ್ತದೆ (85, above). ಈ ದೇವರಾಯನ ಸೋದರಿ ಭೈರಾಂಬೆಯ ಮಗಳೂ ಆತನ ಮಗನ ಸತಿಯೂ ಆದ ಚನ್ನಾದೇವಿಯು ದೇವರಾಯನ ಉತ್ತರಾಧಿಕಾರಿಣಿ (K.I., 75, 76 of 1939–40). ಹಾಡುವಳ್ಳಿಯು ಆಗ ತುಳುನಾಡಿನ (ತುಳುವ) ವ್ಯಾಪ್ತಿಗೆ ಒಳಪಟ್ಟಿದ್ದು ತುಳುನಾಡಿನಲ್ಲಿ ಜನಪ್ರಿಯವಾಗಿದ್ದ ಅಳಿಯ ಸಂತಾನ (ಸೋದರಿಯ ಮಕ್ಕಳಿಗೆ ಉತ್ತರಾಧಿಕಾರ) ಪದ್ಧತಿಯಂತೆ ಹಾಡುವಳ್ಳಿ ರಾಜ್ಯದಲ್ಲೂ ಉತ್ತರಾಧಿಕಾರ ಬರುವುದು 16 ನೆ ಶತಮಾನದಲ್ಲಿ ರೂಢವಾಯಿತೆಂಬುದು ಇಲ್ಲಿ ಸ್ಪಷ್ಟವಾಗುತ್ತದೆ.

ಚನ್ನಾದೇವಿಯ ಆಡಳಿತ 1540 ರಿಂದಲೇ ಆರಂಭವಾಗಿರಬೇಕು. 1542 ರ ಎರಡು ವೀರಗಲ್ಲುಗಳ ಜೊತೆ, 1540 ರ ಪೋರ್ಚುಗೀಸ್ ದಾಖಲೆಗಳಲ್ಲೂ ಈಕೆಯ ಆಡಳಿತದ ವಿಚಾರ ಕಾಣಿಸುತ್ತದೆ. ಅವಳ ಪತಿ ತೀರಿಕೊಂಡಿದ್ದ. ಅವಳ ಮನೆತನದವರು ಪೋರ್ಚುಗೀಸರಿಗೆ ಸಲ್ಲಿಸುತ್ತಿದ್ದ ಕಾಣಿಕೆಯನ್ನು ಈಕೆ ನಿಲ್ಲಿಸಿ ಬಿಟ್ಟಿದ್ದಳು—ಎಂದು ಗ್ಯಾಸ್ಪರ್ ಕೊರೆಯಾ ತಿಳಿಸಿದ್ದಾನೆ (Three Voyages of Gama, IV. 252). ಇದರಿಂದಾಗಿ ಗೋವೆಯ ಪೋರ್ಚುಗೀಸ್ ಮಂಡಲಾಧಿಕಾರಿ ಡಿಸೋಜ ಇವಳ ರಾಜ್ಯದ ಪ್ರಮುಖ ಬಂದರೂ ವ್ಯಾಪಾರ ಕೇಂದ್ರವೂ ಆದ ಭಟ್ಕಳವನ್ನು ಸುಟ್ಟು ಸೂರೆಮಾಡಿದನಂತೆ. ಭಟ್ಕಳ ನಗರದಲ್ಲಿ ರಕ್ತದ ಪ್ರವಾಹವೇ ಹರಿಯಿತಂತೆ! (Danvrs I, 460–61). ಮಿಕ್ಲರ್ ಎಂಬ ಪೋರ್ಚುಗೀಸ್ ಕವಿ "ಲುಸಿಯಾದ್" ಎಂಬ ತನ್ನ ಕಾವ್ಯದಲ್ಲೂ ಈ 'ಸಾಹಸ'ವನ್ನು ಬಣ್ಣಿಸಿದ್ದಾನೆ). ಈ ಯುದ್ಧದ ಅನಂತರ ರಾಣಿ ಮತ್ತೆ 'ಫರಂಗಿ'ಗಳಿಗೆ ಕಪ್ಪಕೊಡಬೇಕಾಯಿತು. ಈ ಯುದ್ಧ 1542ರಲ್ಲಿ ನಡೆಯಿತು. ಈ ವರ್ಷದ (ಮೇಲೆ ಹೇಳಿದ) ಎರಡು ವೀರಗಲ್ಲುಗಳೂ ಈ ಮಾತನ್ನು ಸಮರ್ಥಿಸುತ್ತವೆ. 1546ರ ಎರಡು ಶಾಸನಗಳೇ ಈ ರಾಣಿಯ ಕೊನೆಯ ದಾಖಲೆಗಳಾಗಿದ್ದು (K.I., III, 75. 76, of 1939-40) ಅವಳ ಅನಂತರ ಅವಳ ಸೋದರಿ ಚೆನ್ನಭೈರಾದೇವಿ ಪಟ್ಟಕ್ಕೆ ಬಂದಳು. ಇವಳ ಆರಂಭದ ದಿನಗಳಲ್ಲಿ ಇವಳ ಸೋದರಮಾವನಾದ (ದೇವರಾಯನ ಸೋದರ) ಕೃಷ್ಣದೇವರಸನು ಆಡಳಿತದ ಮೇಲ್ವಿಚಾರಣೆ ನೋಡಿಕೊಳ್ಳುತ್ತಿರಬೇಕೆಂದು ಶಾಸನಗಳು ಸೂಚಿಸುತ್ತವೆ. ಇವಳ ಪತಿ ಕೃಷ್ಣದೇವರಸನ ಮಗನಾದ ಭೈರವ ಭೂಪತಿ (K.I., III, 80 of 1939-40).

ಕೃಷ್ಣದೇವರಸನು ಕಾಯ್ಕಿಣಿ ಅರಮನೆಯಲ್ಲಿದ್ದನೆಂದು 1542 ರ ಶಾಸನ ಹೇಳುತ್ತದೆ (Ibid, 14 of 1939–40). 1549 ರ ಒಂದು ಶಾಸನವೂ ಈತನನ್ನು ಹಾಡುವಳ್ಳಿಯ ದೊರೆಯೆಂದು ಸೂಚಿಸುತ್ತದೆ (I.H.R.C., XVIII, 52). ಬಹುಶಃ ಪಟ್ಟಕ್ಕೆ ಬಂದಾಗ ಚೆನ್ನಭೈರಾದೇವಿ ತುಂಬಾ ಕಿರಿಯವಳಿದ್ದಿರಬೇಕು. ಚೆನ್ನ ಭೈರಾದೇವಿಯರ ಕಾಲದಲ್ಲಿ ಭಟ್ಕಳದಲ್ಲಿ ಅನೇಕ ಬಸದಿ ದೇವಾಲಯಗಳ ರಚನೆಯಾಯಿತು. 1542ರಲ್ಲಿ ಪೋರ್ಚುಗೀಸರು ನಡೆಸಿದ ವಿನಾಶ ಕೃತ್ಯಗಳ ಅನಂತರ ಬರಿದಾಗಿದ್ದ ಭಟ್ಕಳ ಮತ್ತೆ ಚೇತರಿಸಿತು. ಚೆನ್ನಭೈರಾದೇವಿಯ ಸೇನಾನಿಯಾದ ಜಟ್ಟಪ್ಪ ನಾಯಕನು ರತ್ನತ್ರಯ ಬಸದಿಯನ್ನು ರಚಿಸಿದನು (1556). ಕನ್ನಡ ಕರಾವಳಿಯ ದೇವಾಲಯಗಳಲ್ಲೇ ಶ್ರೇಷ್ಠವಾದ ಖೇತಪ್ಪಯ್ಯ ನಾರಾಯಣ ದೇವಾಲಯವು 1546 ರಲ್ಲಿ ರಚಿತವಾಗಿದ್ದು ರಾಮಾಯಣದಲ್ಲಿನ ಸುಂದರ ದೃಶ್ಯಗಳ ಕೆತ್ತನೆಯ ಅಪೂರ್ವ ಶಿಲ್ಪಗಳಿಂದ ಅದು ವಿರಾಜಿಸುತ್ತಿದೆ.

1560 ರಲ್ಲಿ ಬರೆದ ಬೈಂದೂರಿನ ಒಂದು ಶಾಸನದಿಂದ ಚೆನ್ನಭೈರಾದೇವಿಯು ವಿಜಯನಗರದ ದೊರೆಗಳ ಅಧಿರಾಜತ್ವವನ್ನು ಮಾನ್ಯ ಮಾಡಿದ್ದಳೆಂಬುದು ಸ್ಪಷ್ಟವಾಗುವುದರ ಜೊತೆಗೆ ದಕ್ಷಿಣ ಕನ್ನಡ

ಜಿಲ್ಲೆಯ ಉತ್ತರ ಭಾಗಗಳೂ ಇವಳ ರಾಜ್ಯಕ್ಕೆ ಸೇರಿದ್ದುವೆಂಬುದು ಗೊತ್ತಾಗುತ್ತದೆ (ARSIE, 540 of 1929).

" ಕೆಳದಿನೃಪ ವಿಜಯ "ದ ಹೇಳಿಕೆಗಳು ಮತ್ತು ಪೋರ್ಚುಗೀಸ್ ದಾಖಲೆಗಳನ್ನು ಅವಲೋಕಿಸಿದಾಗ ಈ ರಾಣಿಯು ಕೆಳದಿನಾಯಕರ ಜೊತೆ ಸತತವಾಗಿ ಹೋರಾಡಬೇಕಾಗಿ ಬಂತೆಂಬುದೂ ಆಕೆಯು ನಾಯಕರ ವಿರುದ್ಧ ಬಿಜಾಪುರದ ಅದಿಲಶಹನ ನೆರವನ್ನು ಪಡೆದಳೆಂಬುದೂ ಸ್ಪಷ್ಟವಾಗುತ್ತದೆ. ಕೊನೆಗೆ ಕೆಳದಿಯ ವೆಂಕಟಪ್ಪನಾಯಕನು ತನ್ನ ಸೇನಾನಿ ದಳವಾಯಿ ಲಿಂಗಣ್ಣನನ್ನು ಕಳುಹಿಸಿ ಭಟ್ಕಳ ರಾಜ್ಯವನ್ನು ನಾಶಮಾಡಿ ಚೆನ್ನಭೈರಾದೇವಿಯ ಆಳಿಕೆಯನ್ನು ಕೊನೆಗೊಳಿಸಿದನು (ಕೆಳದಿ ನೃಪವಿಜಯಂ V, 42). ಈ ರಾಣಿಯ ಕೊನೆಯ ಶಾಸನ 1599ರದು (K.I. III, 85 of 1939–40).

ಚೆನ್ನಭೈರಾದೇವಿಯ ಕಾಲದಲ್ಲಿ ಅವಳ ನೆರೆಯ ರಾಜ್ಯವಾದ ಗೆರಸೊಪ್ಪೆಯೂ ಅವಳ ವಶವಾಯಿತು. ನಾಲ್ಕು ದಶಕಗಳಿಗೂ ದೀರ್ಘಕಾಲ ಅವಳು ಗೆರಸೊಪ್ಪೆಯ ರಾಣಿಯೂ ಆಗಿ ಮೆರೆದಳು. ಪೋರ್ಚುಗೀಸರು " ಕರಿಮೆಣಸಿನ ರಾಣಿ " (" Queen of pepper ") ಎಂದು ಕರೆಯುತ್ತಿದ್ದುದು ಇವಳನ್ನೇ. ಈ ಎರಡು ರಾಜ್ಯಗಳು ಐಕ್ಯವಾದುದರ ವಿವರ ಗೆರಸೊಪ್ಪೆಯ ಸಾಳುವರ ಇತಿಹಾಸದಲ್ಲಿ ಚರ್ಚಿಸಲ್ಪಟ್ಟಿದೆ.

ಶಿಲ್ಪಿಗಳಿಗೂ ಕವಿಗಳಿಗೂ ವೀರರಿಗೂ ಆಶ್ರಯಸ್ಥಾನವಾಗಿದ್ದ ಹಾಡುವಳ್ಳಿ ರಾಜ್ಯವು ಭಟ್ಕಳ ಬಂದರಿನಿಂದಾಗಿ ಲೋಕಪ್ರಸಿದ್ಧವಾಗಿತ್ತು.

**ಹಾಡುವಳ್ಳಿಯ ಸಾಳುವರು**

1. ಸಾಳುವೇಂದ್ರ (ಹೈವರಸ) ಸು. ಕ್ರಿ.ಶ. 1375–1400.
(ಪತ್ನಿ–ಭೈರಾದೇವಿ)

2. ಮಲ್ಲಿರಾಯ ಕ್ರಿ.ಶ. 1401-08

3. ಸಂಗಿರಾಯ (ಸಂಗಮ) ಕ್ರಿ.ಶ. 1408-49
(ಪತ್ನಿ–ಶಂಕರಾಂಬೆ) (ಪತ್ನಿ–ಬಸವಾಂಬೆ)

4. ಇದಂಗರಸ (ಇಂದ್ರ) ಕ್ರಿ.ಶ. 1449–98

ಸಾಳುವೇಂದ್ರ

ವೀರಭೂಪತಿ—ಪದ್ಮಾಂಬಿಕಾ

5. ಗುರುರಾಯ ಕ್ರಿ.ಶ. 1498–1532

ಭೈರಾಂಬೆ

6. ದೇವರಾಯ ಕ್ರಿ.ಶ. 1533-40

ಕೃಷ್ಣದೇವರಸ

7. ಚೆನ್ನಾದೇವಿ—ಮಗ
1540–46

8. ಚೆನ್ನಭೈರಾದೇವಿ—ಮಗ ಕ್ರಿ.ಶ. 1546-99

## 2 ಗೇರಸೊಪ್ಪೆಯ ಸಾಳುವರು

ಹೊನ್ನಾವರ ತಾಲೂಕಿನಲ್ಲಿರುವ ಶರಾವತಿಯ ನದಿದಂಡೆಯ ಗೇರಸೊಪ್ಪೆಗ್ರಾಮ ಮತ್ತು ಆ ಗ್ರಾಮದ ವಿರುದ್ಧ ದಂಡೆಯಲ್ಲಿನ ಬಸ್ತಿಕೇರಿಗಳು ಹಿಂದೆ 'ನಗಿರೆ' 'ಕ್ಷೇಮಪುರ' 'ಭಲ್ಲಾತಕಿಪುರ' ಮುಂತಾದ ಹೆಸರುಗಳಿಂದ ಖ್ಯಾತವಾದ ರಾಜಧಾನಿಯ ನಿವೇಶನಗಳು. ಇಲ್ಲಿ ಆಳುತ್ತಿದ್ದ ಸಾಳುವರು ತಮ್ಮನ್ನು ಸೋಮವಂಶದವರೆಂದೂ ಕಾಶ್ಯಪ ಗೋತ್ರದವರೆಂದೂ ಕರೆದುಕೊಂಡಿರುವುದರಿಂದ (ARSIE, 37 of 1901) ಇವರು ಹಾಡುವಳ್ಳಿಯ ದೊರೆಗಳ ದಾಯಾದಿಗಳೆಂಬುದು ಸ್ಪಷ್ಟ. ಈ "ದಾಯಾದಿತನ"ವು ಈ ಎರಡು ಮನೆತನಗಳಲ್ಲಿ ನಡೆಯುತ್ತ ಬಂದ ಯುದ್ಧಗಳಿಂದಲೂ ಸಮರ್ಥಿಸಲ್ಪಟ್ಟಿದೆ.

ಮೂಡಬಿದಿರೆಯ ಒಂದು ಶಾಸನದಂತೆ ಈ ವಂಶದಲ್ಲಿ ನಾರಣಾಂಕ, ನಾಗಣಾಂಕ ಮೊದಲಾದ ದೊರೆಗಳು ಹಿಂದೆ ಆಳುತ್ತಿದ್ದರೆಂದೂ ಅವರ ಅನಂತರ ಕಾಮ, ಮಂಗರಸ, ಹೈವರಾಜ, ಇಮ್ಮಡಿ ಮಂಗರಾಜ, ಕೇಶವ, ಭೈರವೇಂದ್ರ ಮತ್ತು ಇಮ್ಮಡಿ ಭೈರವೇಂದ್ರ ಮೊದಲಾದ ದೊರೆಗಳು ಆಳಿದರೆಂದೂ ತಿಳಿಯುತ್ತದೆ (Ibid). ಇತರ ಶಾಸನಗಳ ಜೊತೆ ತಾಳೆನೋಡಿ ಇಲ್ಲಿನ ಕೆಲವು ಹೆಸರುಗಳನ್ನು ಬದಲಾಯಿಸಿದೆ. E.C., VIII, Sa. 55, MAR, 1928, 111, 112).

ಈ ಮನೆತನಗಳ ತಾರೀಕಿರುವ ಶಾಸನಗಳಂತೆ ಹೈವರಾಜನು 1392 ರ ವರೆಗೆ ಆಳಿದ (MAR, 1928, 109). ಇಮ್ಮಡಿ ಮಂಗನು 1401ರ ವರೆಗೂ (Ibid, 110), ಕೇಶವನು 1420 ರ ವರೆಗೂ ರಾಜ್ಯಭಾರ ನಡೆಸಿದರು (Ibid, 109). ಕಾಮನಿಗಿಂತ ಮೊದಲಿನ ರಾಜನ ಹೆಸರು ಹೊನ್ನ (Ibid, 111, 112). ಹೊನ್ನನ ಸೋದರಳಿಯನೂ ಅವನ ಮಗಳಾದ ಮಲ್ಲಿಯಬ್ಬೆಯ ಕೈವಿಡಿದವನೂ ಆದ ಕಾಮನ ಆಳಿಕೆಯ ಅನಂತರ ಮಂಗರಸನು ಪಟ್ಟವೇರಿದ. ಮಂಗರಸನ ಜಾಮಾತ (ಬಹುಶಃ ಸೋದರಳಿಯ) ಹೈವ. ಈತನ ಸತಿ ಹೊನ್ನಬ್ಬೆ.

ಹೈವರಾಜನ ಆಳಿಕೆಯು (ಮೇಲಿನ ತಾರೀಕಿನ ನೆರವಿನಿಂದ) 1377 ರಲ್ಲಿ ಆರಂಭವಾಯಿತೆಂದು ಊಹಿಸಿದರೆ, ಅವನ ಹಿಂದಣ ಮಂಗರಾಜ ಸುಮಾರು 1362 ರಿಂದ 1377 ರ ವರೆಗೆ ಆಳಿದ ; ಕಾಮನ ಆಳಿಕೆ 1347–62, ಹೊನ್ನನದು 1332–1347, ಎಂದೆಲ್ಲ ಲೆಕ್ಕಹಾಕಬಹುದು. ನಾರಣಾಂಕ, ನಾಗಣಾಂಕರು ಬಹುಶಃ 13ನೆಯ ಶತಮಾನದಲ್ಲಿ ಇದ್ದಿರಬೇಕು. (ಹೈವ, ಇಮ್ಮಡಿ ಮಂಗ, ಕೇಶವರ ಅಲ್ಪಕಾಲದ ಆಳಿಕೆಯನ್ನು ಗಮನಿಸಿ ಅವರ ಹಿಂದಿನ ದೊರೆಗಳಿಗೆ ಸರಾಸರಿ ಕೇವಲ 15 ವರ್ಷಗಳನ್ನು ಕೊಟ್ಟಿದೆ. ಹೊನ್ನನ ಸೊಸೆ—ಮಗನ ಹೆಂಡತಿಯೊಬ್ಬಳು ಸಲ್ಲೇಖನ ವ್ರತದಿಂದ 1405 ರಲ್ಲಿ ಅಸು ನೀಗಿದಳೆಂಬ ಒಂದು ಶಾಸನವೂ (MAR, 1928, 110) ಈ ಅಂದಾಜು ಲೆಕ್ಕವನ್ನು ಸಮರ್ಥಿಸುತ್ತದೆ.

ಹೈವರಸನ 1378ರ ಒಂದು ಶಾಸನದಂತೆ ಹೊನ್ನಾವರದ ಬಸವ ಕದಂಬನು ಆತನ ಮಾಂಡಳಿಕನೆಂದು ತಿಳಿಯುತ್ತದೆ (Ibid, 108). ವಿಜಯನಗರದ ಮಂಗಪ್ಪದಣ್ಣಾಯಕನ ವಿರುದ್ಧ ಹೈವರಸನು ಸೆಣಸಿದ ಪ್ರಸಂಗವು ಬಹುಧಾನ್ಯ ಸಂವತ್ಸರದ ಮೂರು ವೀರಗಲ್ಲುಗಳಿಂದ ತಿಳಿಯುತ್ತದೆ (K.I., 52, 53. 35 of 1939–40). ಈ ಯುದ್ಧವು 1390 ರಲ್ಲಿ ನಡೆದಿರಬೇಕು (ARSIE. 55 of 1901). ಕೇಶವನ (1401-1420) ಕಾಲದಲ್ಲೂ ಈ ಕಲಹ ಮುಂದುವರಿಯಿತು. ವಿಜಯನಗರದ ಅಧಿಕಾರಿಗಳಾದ

ಹೊನ್ನಾವರದ ನಾಗಣ್ಣ ಒಡೆಯ (K.I., 34 of 1939-40) ಮತ್ತು ಭಾನಪ್ಪ ಒಡೆಯರು (Ibid, 47) ಅವನ ವಿರುದ್ಧ ಯುದ್ಧ ಹೂಡಿದ್ದರು. ಕೇಶವನು ಹಾಡುವಳ್ಳಿಯ ಸಂಗಿರಾಯನ ವಿರುದ್ಧವೂ ಯುದ್ಧ ನಡೆಸಿದ್ದ. (Ibid 42).

ಕೇಶವನ ಅನಂತರದ ದೊರೆ ಅವನ ಸೋದರಳಿಯ ಸಂಗಮ ಅಥವಾ ಸಂಗಿರಾಯ (ಈತ ಹಾಡುವಳ್ಳಿಯ ದೊರೆಯಲ್ಲ), ಈತ ಆಳಿದ್ದು 1420 ರಿಂದ 1438 ರ ವರೆಗೆ (Ibid, 46). ಈತನ ಸೋದರಿ ಲಕ್ಷ್ಮೀದೇವಿಯ ಮಗನಾದ ಭೈರವ ಇವನ ಉತ್ತರಾಧಿಕಾರಿ (S.I.I., VII, 202, 207).

ಈ ಮೊದಲನೆ ಭೈರವ (1438-1462) ಪರಮ ಧಾರ್ಮಿಕನೂ ಉದಾರಿಯೂ ಆದ ದೊರೆ. ಬಹುಶಃ ಈತನಿಂದಲೇ ಮೂಡಬಿದರೆಯ ಬಸದಿಯಲ್ಲಿನ ("ತ್ರಿಭುವನ ತಿಲಕ ಚೂಡಾಮಣಿ" 'ಸಾವಿರ ಕಂಬದ') "ಭೈರಾದೇವಿ ಮಂಟಪ"ದ ರಚನೆಯಾಯಿತು. ಈತನ ರಾಣಿ ನಾಗಲೆ ಈ ಬಸದಿಯ ಮಾನಸ್ತಂಭವನ್ನು ಮಾಡಿಸಿದಳು. ಈ ಬಸದಿಯ ಮೂರನೆಯ ನೆಲೆಗೆ ಈ ದೊರೆ ತಾಮ್ರದ ಹೊದಿಕೆ ಹಾಕಿಸಿದ. ಗೆರಸೊಪ್ಪೆ, ಹೊನ್ನಾವರ, ಚಂದ್ರಗುತ್ತಿ ಬಸದಿಗಳಿಗೆ ಅಪಾರ ದಾನ ಧರ್ಮವನ್ನು ನೀಡಿದ. "ಆವಗಮನ್ನ ದಾನವನಖಂಡಿತ ಮಾಡಿಯೆ ಸರ್ವ ಜೀವಮಂ ಕಾವಭಯ ಪ್ರದಾನದೊಳೆ ರಕ್ಷಿಸಿ ರೋಗದೊಳೊಂದಿದರ್ಗ್ಗೆ ಸಂಜೀವನಮಪ್ಪ ಭೇಷಜಗಳಂ ಬಿಡದಿತ್ತು ಸಮಸ್ತ ಶಾಸ್ತ್ರ ನಾನಾವಿಧದಾನಮಂ ಮುದದಿ ಮಾಳ್ಪನು ಭೈರವ ಭೂವರೇಶ್ವರಂ",—ಎಂದು ಅವನ ಶಾಸನ ಹೇಳುತ್ತದೆ (S.I.I, VII. 202). ಈತನ ಕಾಲದ ಎರಡು ವೀರಗಲ್ಲುಗಳಂತೆ, ಈತನೂ ವಿಜಯನಗರದ ವಿರುದ್ಧ ಬಂಡಾಯ ಹೂಡಿದ್ದ (K.I, 56 of 1939-40). ಆದಿಯಪ್ಪನೆಂಬ ಕವಿ ಈತನ ಆಶ್ರಯದಲ್ಲಿ "ಧನ್ಯಕುಮಾರ ಚರಿತೆ" ಕನ್ನಡ ಕಾವ್ಯ ರಚಿಸಿದ. ಈ ಸಮರ್ಥ ದೊರೆಯ ಅನಂತರ ಗೆರಸೊಪ್ಪೆಯ ಸಿಂಹಾಸನಕ್ಕಾಗಿ ಅಂತಃಕಲಹ ನಡೆದು ರಾಜ್ಯವು ಒಡೆದು ಇಬ್ಭಾಗವಾಯಿತು.

ಭೈರವನ ಕಾಲದಲ್ಲಿ ಯುವರಾಜನಾಗಿದ್ದ ಅವನ ಸೋದರ ಇಮ್ಮಡಿ ಭೈರವ ಗೆರಸೊಪ್ಪೆಯಿಂದ ಆಳುತ್ತಿದ್ದನೆಂದು 1462 ರ ಒಂದು ಶಾಸನ ಹೇಳಿದೆ (Ibid, 60 of 1939–40). ಸಂಗಿರಾಯನ ಇನ್ನೊಬ್ಬ ಸೋದರಿ ಶಂಕರದೇವಿಯ ಮಗನಾದ ಜಿನದಾಸ ಸಾಳ್ವಮಲ್ಲ—ಅಥವಾ ಮಲ್ಲಿರಾಯನು ಹೊನ್ನಾವರ ("ಸುವರ್ಣಪುರಿ") ದಿಂದ ಆಳುತ್ತಿದ್ದ (S. I. I: VII, 207; K.I. 61 of 1939–40). ಈ ಎರಡು ಪ್ರತಿಸ್ಪರ್ಧಿಗಳಲ್ಲಿ 1471 ರಲ್ಲಿ ಒಂದು ಯುದ್ಧವೂ ನಡೆದು ಕೊನೆಗೆ ಮಲ್ಲಿರಾಯನದೇ ಮೇಲ್ಗೈಯಾಯಿತು. ಈ ಯುದ್ಧದಲ್ಲಿ ಹಾಡುವಳ್ಳಿಯ ದೊರೆ ಇದಂಗರಸನು ಮಲ್ಲಿರಾಯನಿಗೆ ನೆರವಾದ (K. I, 61 of 1939–40). ಈತನ ಆಸ್ಥಾನದಲ್ಲಿದ್ದ ಕನ್ನಡಕವಿ ಸಾಳ್ವೇಂದ್ರನು ರಚಿಸಿದ "ಸಾಳ್ವ ಭಾರತ"ದಲ್ಲಿ ಭೈರವ ಮತ್ತು ಅವನ ಉತ್ತರಾಧಿಕಾರಿಗಳ ವಿಚಾರ ವಿವರಗಳೂ ಇವೆ. ಇವನ ಸೋದರಿ ಮಲ್ಲಿದೇವಿಯ ಮಗ ಸಾಳ್ವದೇವ ಅಥವಾ ದೇವರಾಯನು ಈತನ ಕಾಲದಲ್ಲಿ ಯುವರಾಜನಾಗಿದ್ದು ಮುಂದೆ ಉತ್ತರಾಧಿಕಾರಿಯೂ ಆದ.

ಈ ದೇವರಾಯನು 1481 ರಲ್ಲಿ ಗೋವೆಯಲ್ಲಿದ್ದ ಅದಿಲ ಶಹನ ಸೇನಾನಿಯನ್ನು ಯುದ್ಧದಲ್ಲಿ ಸೋಲಿಸಿ, ಕರಾವಳಿಯಲ್ಲಿ ಸುಲ್ತಾನನ ರಾಜ್ಯ ದಕ್ಷಿಣಮುಖವಾಗಿ ಮುಂದೊತ್ತದಂತೆ ನೋಡಿಕೊಂಡ (K.I., 62 of 1939–40). ಈ ವಿಜಯದ ಅನಂತರ ಆತ "ರಾಜಾಧಿರಾಜ" "ರಾಜಪರಮೇಶ್ವರ" ಮುಂತಾದ ಬಿರುದುಗಳನ್ನು ತಳೆದ (Ibid, 67). 1492 ರಲ್ಲಿ ವಿಜಯನಗರದ ಸಮ್ರಾಟ ವಿರೂಪಾಕ್ಷರಾಯನ ಸೇನೆಯ ವಿರುದ್ಧ ಯುದ್ಧ ಹೂಡಿದ (Discriptive List, 1941–42, 62). ಆದರೆ ಈ ವರೆಗೆ ವಿಜಯನಗರದ ವಿರುದ್ಧ ಸದಾ ಹೋರಾಡಿದ ಈ ರಾಜಮನೆತನ, ತುಳುವ ವಂಶದ

ಆಳಿಕೆಯು ಆರಂಭವಾದಾಗ ಸಾಮ್ರಾಜ್ಯದ ಜೊತೆ ರಾಜಿ ಮಾಡಿಕೊಂಡಂತೆ ಕಾಣುತ್ತದೆ. ತುಳುವ ನರಸನಾಯಕನ ಪುಣ್ಯಾರ್ಥವಾಗಿ ದೇವರಾಯ ಧಾರೇಶ್ವರದ ದೇವಾಲಯಕ್ಕೆ 1502 ರಲ್ಲಿ ದತ್ತಿ ನೀಡಿದ ಶಾಸನವೇ ಈ ಮಾತಿಗೆ ಸಾಕ್ಷಿ (ARSIE, 1906, P. 67). ಗೆರಸೊಪ್ಪೆ ಮತ್ತು ವಿಜಯನಗರಗಳ ನಡುವಣ ಬದಲಾದ ರಾಜಕೀಯ ಸಂಬಂಧ ಮತ್ತು ಈ ಶಾಸನ ಇವೆರಡನ್ನೂ ಗಮನಿಸಿದಾಗ ತುಳುನಾಡಿನ ಈ ಸಾಳುವ ವಂಶ ಮತ್ತು ವಿಜಯನಗರದ ತುಳುವ ಸಾಳುವ ವಂಶಗಳು ಏಕ ಮೂಲದವುಗಳೆಂಬ ವಿಚಾರಕ್ಕೆ ಸಾಕಷ್ಟು ಚಾಲನೆ ದೊರೆಯುತ್ತದೆ.

ದೇವರಾಯನ ಅನಂತರ ಪಟ್ಟಕ್ಕೆ ಬಂದ ಇಮ್ಮಡಿ ದೇವರಾಯ ತನ್ನ ಹಿಂದಣ ದೊರೆಗೆ ಏನಾಗ ಬೇಕೆಂಬ ಸಂಬಂಧ ತಿಳಿಯಲು ಯಾವ ಶಾಸನವೂ ನೆರವಾಗದು. ಈತನ ಮೊದಲ ಶಾಸನ 1514ರ ದಾದರೂ (K.I. 62 of 1940-41) ಈತ 1511ರಲ್ಲಿ ಪಟ್ಟಕ್ಕೆ ಬಂದಿರಬಹುದೆಂದು ಪೋರ್ಚುಗೀಸ್ ದಾಖಲೆಗಳಿಂದ ತಿಳಿಯುತ್ತದೆ. 1510ರಲ್ಲಿ ಗೋವೆಯನ್ನು ವಶಪಡಿಸಿಕೊಂಡ ಪೋರ್ಚುಗೀಸರು ಪದಚ್ಯುತನಾದ 'ಓನೋರ್'ನ ದೊರೆ(ಹೊನ್ನಾವರ—ಗೆರಸೊಪ್ಪೆಯ ಪ್ರಮುಖ ಬಂದರು)''ಮೆಲ್ರಾವೊ'' ನಿಗೆ ಆಶ್ರಯ ನೀಡಿದರೆಂದೂ ಮುಂದೆ ವಿಜಯನಗರದ ಪ್ರಭುಗಳ ಅನುಮತಿಯಿಂದ ''ಮೆಲ್ರಾವೊ'' 1511ರಲ್ಲಿ ಪಟ್ಟವೇರಿದನೆಂದೂ ಡ್ಯಾನ್‌ವರ್ಸ್ ತಿಳಿಸುತ್ತಾನೆ (Portuguese in India, I, 215). ಈ ''ಮೆಲ್ರಾವೊ'' (''ಮಲ್ಲಿದೇವ''ನ ರೂಪವಿರಬಹುದು—ಇಮ್ಮಡಿ ದೇವರಾಯ) ಮುಂದೆ ಪೋರ್ಚುಗೀಸರ ವಿರುದ್ಧವೇ ಯುದ್ಧ ಹೂಡಿ ಮಡಗೋವೆಯ ವರೆಗೆ ದಂಡೆತ್ತಿ ನಡೆದ (K. T. 67 of 1939–40). ಮೊದಲ ಮತ್ತು ಎರಡನೆಯ ದೇವರಾಯರ ಆಡಳಿತದ ನಡುವೆ ಯಾರೋ ಒಬ್ಬ ವ್ಯಕ್ತಿ ಸಿಂಹಾಸನವನ್ನು ಕೆಲಕಾಲ ಆಕ್ರಮಿಸಿದ್ದನೆಂಬುದು ಸ್ಪಷ್ಟ.

ಮುಂದಿನ ದೊರೆ ಕೃಷ್ಣದೇವರಸ ಇಮ್ಮಡಿ ದೇವರಾಯನ ಸೋದರಳಿಯ. ಈತನ 1530 ಮತ್ತು 1548ರ ಶಾಸನಗಳಿವೆ (K.I. 71-72 of 1939-40; Annual Report of Kannada Research P-46). ಈತ ಹಾಡುವಳ್ಳಿಯ ದೊರೆಗಳನ್ನು ಯುದ್ಧದಲ್ಲಿ ಸೋಲಿಸಿದ ವಿಚಾರ 1530 ರ ಶಾಸನ ತಿಳಿಸುತ್ತದೆ. ''ಕಾವ್ಯಸಾರ'' ಕನ್ನಡ ಗ್ರಂಥದ ಸಂಗ್ರಾಹಕ ಹಾಗೂ ಘನ ಜೈನಪಂಡಿತ ವಾದಿ ವಿದ್ಯಾನಂದ ಈತನ ಆಸ್ಥಾನದಲ್ಲಿದ್ದವನು.

ಕೃಷ್ಣದೇವನ ಅನಂತರ ಚೆನ್ನಭೈರಾದೇವಿಯೂ ನಗಿರೆಯನ್ನು ಆಳುತ್ತಿದ್ದಳೆಂದು (Descriptive List, 67 of 1941-42) 1573ರ ಶಾಸನ ತಿಳಿಸುತ್ತದೆ. ಮುಂದೆ 1598ರ ಗೆರಸೊಪ್ಪೆಯಲ್ಲೇ ದೊರೆತ ಒಂದು ಶಾಸನದಲ್ಲೂ ಆಕೆಯೇ ರಾಣಿಯೆಂದು ಹೇಳಿದೆ (M A R, 1938, 112). ಈಕೆಯ ಮತ್ತು ಈಕೆಯ ಹಿಂದಿನ ಗೆರಸೊಪ್ಪೆಯ ದೊರೆ ಕೃಷ್ಣದೇವರಸನ ನಡುವಣ ಸಂಬಂಧವೇನೆಂದು ಶಾಸನಗಳಲ್ಲಿ ಯಾವ ವಿವರವೂ ಇರದಿರುವುದರಿಂದಲೂ ಹಾಡುವಳ್ಳಿಯಲ್ಲೂ 1546ರಿಂದ 1599ರ ವರೆಗೆ ಇದೇ ಹೆಸರಿನ ರಾಣಿಯು ಆಳುತ್ತಿದ್ದುದರಿಂದಲೂ ಹಾಡುವಳ್ಳಿಯ ರಾಣಿಯು ಗೆರಸೊಪ್ಪೆ ರಾಜ್ಯವನ್ನು ವಶಪಡಿಸಿಕೊಂಡಿರಬೇಕೆಂದು ಊಹಿಸಬಹುದು. ಈ ಎರಡು ರಾಜ್ಯಗಳ ನಡುವೆ ಪರಸ್ಪರ ಹೋರಾಟ ನಡೆಯುತ್ತಿದ್ದುದು 1530ರ ವರೆಗಿನ ಶಾಸನಗಳಿಂದ ಸ್ಪಷ್ಟವಾಗಿದೆ. ಈ ಕಲಹ ಚೆನ್ನಭೈರಾ ದೇವಿಯ ಕಾಲದಲ್ಲಿ ಉಭಯ ರಾಜ್ಯಗಳ ಐಕ್ಯದಿಂದ ಕೊನೆಗೊಂಡಿರಬೇಕು. 16ನೆಯ ಶತಮಾನದ ಉತ್ತರಾರ್ಧದ ಪೋರ್ಚುಗೀಸ್ ದಾಖಲೆಗಳು ಗೆರಸೊಪ್ಪೆಯ ರಾಣಿಯೊಬ್ಬಳನ್ನೆ ಉಲ್ಲೇಖಿಸುತ್ತವಲ್ಲದೆ ಉತ್ತರಕನ್ನಡ ಜಿಲ್ಲೆಯಲ್ಲಿ ಎರಡು ರಾಣಿಯರಿದ್ದ ವಿಚಾರ ತಿಳಿಸುವುದಿಲ್ಲ. 'ಕೆಳದಿನೃಪವಿಜಯಂ' ಕೂಡ ಒಬ್ಬ ಭೈರಾದೇವಿಯ ವಿಚಾರ ಮಾತ್ರ ತಿಳಿಸುತ್ತದೆ. ಈ ಭೈರಾದೇವಿಯನ್ನು

ಸೋಲಿಸಿ ಭಟ್ಕಳ, ಹಾಡುವಳ್ಳಿ, ಗೆರಸೊಪ್ಪೆಗಳನ್ನು ಕೆಳದಿಯ್ಯವಳವಾಯಿ ಲಿಂಗಣ್ಣ ವಶಪಡಿಸಿಕೊಂಡ ವಿಚಾರ ಈ ಮೊದಲೇ ನೋಡಿದೆ.

"ಕರಿಮೆಣಸಿನ ರಾಣಿ" ಯೆಂದು ಪೋರ್ಚುಗೀಸರಿಗೆ ಪರಿಚಿತಳಾದ ಈ ರಾಣಿ ಪೋರ್ಚುಗೀಸರ ಜೊತೆಗೂ ಕೆಳದಿಯ ಜೊತೆಗೂ ಸತತವಾಗಿ ಯುದ್ಧ ನಡೆಸಿದಳೆಂಬ ವಿಚಾರ ಹಲವು ಮೂಲಗಳಿಂದ ತಿಳಿಯುತ್ತದೆ. ಆಕೆ ಈ ಉಭಯ ವೈರಿಗಳ ವೈರಿಯಾದ ಆದಿಲಶಹನ ಜೊತೆ ಸ್ನೇಹ ಬೆಳೆಸಿದ್ದಳು. ಆದರೆ, ಮುಂದೆ ಪೋರ್ಚುಗೀಸರ ಜೊತೆ ಸಂಧಿ ಮಾಡಿಕೊಂಡಿದ್ದಳು.

1623 ರಲ್ಲಿ ಭಾರತಕ್ಕೆ ಬಂದ ಇಟಲಿಯ ಪ್ರವಾಸಿ ಪಿತ್ರೊಡಲ್ಲೆವಲ್ಲೆ ಈ ರಾಣಿಯ ಅವಸಾನದ ದುರಂತ ಕತೆಯನ್ನು ಈ ರೀತಿ ವರ್ಣಿಸಿದ್ದಾನೆ: ಈಕೆ ತನಗಿಂತಲೂ ಕೀಳಾದ ಕುಲದವನೊಬ್ಬನನ್ನು ಮೋಹಿಸಿದಳು. ಇವಳ ಆ ಪ್ರಿಯಕರ ಮುಂದೆ ತಾನೇ ದೊರೆಯಾಗುವ ಕನಸು ಕಂಡು ಕೆಳದಿಯ ದೊರೆಗಳ ನೆರವು ಪಡೆದ. ಕೆಳದಿಯ ದೊರೆಗಳು ಅವಳನ್ನೂ ಅವಳ ಪ್ರಿಯಕರನನ್ನೂ ಬಂಧಿಸಿ ರಾಜ್ಯವನ್ನು ವಶಪಡಿಸಿಕೊಂಡರು. ರಾಣಿ ಕೆಳದಿದೊರೆಗಳ ಬಂಧಿಖಾನೆಯಲ್ಲಿ ಹತಳಾದಳು (Della Valle, II, 218-20).

ಧರ್ಮ, ಶಿಲ್ಪ, ಸಾಹಿತ್ಯಗಳಿಗೆ ಈ ದೊರೆಗಳು ಅಪಾರ ಪ್ರೋತ್ಸಾಹ ನೀಡಿದರು. ಗೆರಸೊಪ್ಪೆಯಲ್ಲಿರುವ ಸುಂದರ ಚತುರ್ಮುಖ ಬಸದಿ ಇದೇ ರಾಜಮನೆತನದ ಸಾಧನೆಯೆಂಬ ಊಹೆಗೆ ಅವಕಾಶವಿದೆ.

## ಗೆರಸೊಪ್ಪೆಯ ಸಾಳುವರು

1. ನಾರಣಾಂಕ (ಕ್ರಿ.ಶ. 13 ನೆಯ ಶತಮಾನ)

2. ನಾಗಣಾಂಕ (ಕ್ರಿ.ಶ. 13 ನೆಯ ಶತಮಾನ)

3. ಹೊನ್ನ (ಕ್ರಿ.ಶ. ಸು. 1333-1347)

4. ಕಾಮ (ಹೊನ್ನನ ಸೋದರಿಯ ಮಗ ಹಾಗೂ ಜಾಮಾತ) ಸು. ಕ್ರಿ.ಶ. 1347-1362

5. ಮಂಗ I (ಕಾಮನ ಜೊತೆ ಈತನ ಸಂಬಂಧ ತಿಳಿದಿಲ್ಲ) ಸು. ಕ್ರಿ.ಶ. 1362-77)

6. ಹೈವ (ಮಂಗನ ಸೋದರಳಿಯ ಹಾಗೂ ಜಾಮಾತ) ಸು. 1377-1392

7. ಮಂಗ II (ಹೈವನ ಸೋದರಳಿಯ ಹಾಗೂ ಜಾಮಾತ) ಕ್ರಿ.ಶ. 1392-1401

8. ಕೇಶವ (ಇಮ್ಮಡಿ ಮಂಗನ ಸೋದರಳಿಯ, ಜಾಮಾತ) ಕ್ರಿ.ಶ. 1401-20

9. ಸಂಗಿರಾಯ (ಕೇಶವನ ಸೋದರಳಿಯ) ಕ್ರಿ.ಶ. 1420-1438

10. ಭೈರವ I (ಸಂಗಿರಾಯನ ಸೋದರಿ ಲಕ್ಷ್ಮೀದೇವಿಯ ಮಗ) ಕ್ರಿ.ಶ. 1438-62

11. ಭೈರವ II (ಲಕ್ಷ್ಮೀದೇವಿಯ ಇನ್ನೊಬ್ಬ ಮಗ) ಕ್ರಿ.ಶ. 1462-71

12. ಮಲ್ಲಿರಾಯ (ಸಾಳ್ವಮಲ್ಲ-ಸಂಗಿರಾಯನ ಸೋದರಿ ಶಂಕರದೇವಿಯ ಮಗ ಕ್ರಿ.ಶ. 1471 ರ ವರೆಗೆ ಹೊನ್ನಾವರದಿಂದ, ಅನಂತರ ಗೆರಸೊಪ್ಪೆಯಿಂದ) ಕ್ರಿ.ಶ. 1462-80)

13. ದೇವರಾಯ (ಮಲ್ಲಿರಾಯನ ಸೋದರಳಿಯ) ಕ್ರಿ.ಶ. 1481-1510

14. ಒಬ್ಬ ಅತಿಕ್ರಮಕಾರ ಕ್ರಿ.ಶ. 1510-1511)

15. ದೇವರಾಯ II (ಪೂರ್ವ ಸಂಬಂಧ ತಿಳಿದಿಲ್ಲ) ಕ್ರಿ.ಶ. 1511-1525

16. ಕೃಷ್ಣದೇವ (ದೇವರಾಯನ ಸೋದರಿ ಪದ್ಮಾಂಬಿಕೆಯ ಮಗ) ಕ್ರಿ.ಶ. 1525-48

17. ಚೆನ್ನ ಭೈರಾದೇವಿ ಕ್ರಿ.ಶ. 1548-99



## ಆಧಾರ ಗ್ರಂಥಗಳು

### (ಹಾಡುವಳ್ಳಿ ಮತ್ತು ಗೆರಸೊಪ್ಪೆ)


1. Annual Report on Kannada Research in Bombay Province for the year 1939-40, Ed., R.S. Panchamukhi, Dharwar, 1941.
2. Archaeological Survey of India, Annual Report, Southern Circle, (A.R.S.I.E.)
3. Epigraphia Carnatica (E.c.)
4. Karnatak Inscriptions (K.I.)
5. Mysore Archaeological Department, Annual Report (M.A.R.)
6. South Indian Inscriptions (S.I.I.)
7. The Descriptive List of Stone and Copper Plate Inscriptions Examined by the Kannada Research Institute (Descriptive List), Dharwar, 1961.
8. Correa, Gaspar : Three Voyages of Gama, 4 Volumes, London, 1869
9. Della Valle, Pietro : Travels in India, 2 Volumes, London, 1892.
10. Heras, H. : The Aravidu Dynasty, Madras, 1927.
11. Whiteway, R.S. : The Rise of Portuguese Power in India, Westminister, 1899.
12. Danvers, F.C. : The Portuguese in India, 2 Volumes, London, 1894.
13. Indian Historical Records Commission (I.H.R.C.) Proceedings.
14. ನರಸಿಂಹಾಚಾರ್, ಆರ್. : ಕರ್ಣಾಟಕ ಕವಿಚರಿತೆ, 3 ಸಂಪುಟಗಳು, 1919.
15. ಲಿಂಗಣ್ಣ : ಕೆಳದಿ ನೃಪ ವಿಜಯಂ.
16. Kamath, S.U. : 'Tuluva in Vijayanagar Times' to be published.


# ಸಾಂತರರು (ಭೈರರಸರು)

ಕ್ರಿ.ಶ. ಏಳನೆಯ ಶತಮಾನದಿಂದ ಹದಿನೇಳನೆಯ ಶತಮಾನದ ವರೆಗೆ ರಾಜ್ಯವಾಳಿದ ಸಾಂತರರು ಶಿವಮೊಗ್ಗ ಜಿಲ್ಲೆಯ ಹುಂಚದಿಂದ ಮೊದಲು ಆಳುತ್ತಿದ್ದರು. ಮುಂದೆ ಅವರು ರಾಜಧಾನಿಯನ್ನು ಚಿಕ್ಕಮಗಳೂರುಜಿಲ್ಲೆಯ ಕಳಸ, ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಕೆರವಾಸೆ, ಕಾರ್ಕಳಗಳಿಗೆ ಸ್ಥಳಾಂತರಿಸಿದರು.

ಬಾದಾಮಿಯ ಚಾಳುಕ್ಯರ ಕಾಲದಲ್ಲಿ ಬನವಾಸಿಯ ಕದಂಬರ ಬಲ ಕುಂದಿದಾಗ ಕದಂಬರ ರಾಜ್ಯದ ಕೆಲವು ಪ್ರದೇಶಗಳಲ್ಲಿ ಸಾಂತರರು ಪ್ರಾಬಲ್ಯಕ್ಕೆ ಬಂದರೆಂದು ರೈಸ್ ಅವರ ಅಭಿಪ್ರಾಯ.

ಕ್ರಿ.ಶ. 1077 ರ ಒಂದು ಶಾಸನದಂತೆ ಈ ವಂಶದ ಮೂಲದ ವಿವರಗಳು ಹೀಗಿವೆ : ಸಾಂತರರು ಉಗ್ರವಂಶಕ್ಕೆ ಸೇರಿದವರಾಗಿದ್ದು ಉತ್ತರ ಮಧುರೆ (ಮಥುರೆ) ಯವರು. ಈ ವಂಶದ ರಾಹ ಎನ್ನುವವನು ಕುರುಕ್ಷೇತ್ರ ಯುದ್ಧದಲ್ಲಿ ಭಾಗವಹಿಸಿದ್ದ. ಈ ವಂಶದಲ್ಲಿ ಸಹಕಾರನೆಂಬ ದೊರೆ ಕಾಣಿಸಿ ಕೊಂಡ. ಈತ ನರಭಕ್ಷಕನಾಗಿದ್ದ. ಆತನ ಮಗನಾದ ಜಿನದತ್ತನೆಂಬವನು ತಂದೆಯ ವರ್ತನೆಗೆ ಬೇಸತ್ತು

ದಕ್ಷಿಣಕ್ಕೆ ಬಂದ. ಈತ ಸೀಪರಟ್ಟ, ಅಂಧಕಾಸುರ, ಕನಕಾಸುರ ಮುಂತಾದವರನ್ನು ಕೊಂದು ಕನಕಪುರ (ಹುಂಚ, ಹೊಂಬುಚ್ಚ) ವನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡ. ಸಾಂತರರು ವಾನರಧ್ವಜರೆಂದೂ ಸಿಂಹಲಾಂಛನರೆಂದೂ ಶಾಸನಗಳು ಹೇಳಿವೆ (E. C. VII, No. 35 ; 48). ಇಲ್ಲಿ ಉಲ್ಲಿಖಿತ ನಾದ ಜಿನದತ್ತನು ಐತಿಹಾಸಿಕ ವ್ಯಕ್ತಿಯಾಗಿದ್ದು ಆತ ಏಳನೆಯ ಶತಮಾನದಲ್ಲಿ ಆಳಿರಬೇಕು. ಇದೇ ಮನೆತನದ ಸಾಂತರಸನೆಂಬ ದೊರೆಯ ಏಳನೆಯ ಶತಮಾನದ ಎರಡು ಶಾಸನಗಳಿವೆ (E. C. VII, K. P. 39 ; 40)

ಆ ಮೇಲೆ ಶಾಸನಗಳಲ್ಲಿ ಕಂಡುಬರುವ ಸಾಂತರ ದೊರೆ 830ರಲ್ಲಿ ಆಳುತ್ತಿದ್ದ ಜಗೇಸಿ (ಜಯಕೇಶಿ 81 "ಸಾನ್ತರಾಜ ಕುಲತಿಲಕ" ನಾದ ಈತ ಸಾಂತಳ್ಗೆ ಸಮಸ್ತ (ಸಾಂತಳಿಗೆ ಸಾಸಿರ—ತೀರ್ಥಹಳ್ಳಿ ತಾಲೂಕು ಹಾಗೂ ಸುತ್ತಲ ಪ್ರದೇಶ) ವನ್ನು ಆಳುತ್ತಿದ್ದ ರಾಷ್ಟ್ರಕೂಟ ನೃಪತುಂಗನ ಸಾಮಂತನಾಗಿದ್ದ (E.C. VII, St. 283). ನನ್ನಿ ಸಾಂತರನ 1077ರ ಶಾಸನದಂತೆ ಜಿನದತ್ತ ರಾಯನನಂತರ ಅನೇಕ ದೊರೆ ಗಳಾಗಿ ಶ್ರೀಕೇಶಿ ಹಾಗೂ ಅವನ ಸೋದರ ಜಯಕೇಶಿಗಳು ಆಳಿದರೆಂದೂ ಮುಂದೆ ಶ್ರೀಕೇಶಿಯ ಮಗ ರಣಕೇಶಿ ಆಳಿದನೆಂದೂ ತಿಳಿಯುತ್ತದೆ (E. C., VII, No. 35).

ಹುಂಚದ ಸಾಂತರರಲ್ಲಿ ಸೋದರರಾಗಿರುವವರೆಲ್ಲ ಸಹ (ಜಂಟಿ) ರಾಜರುಗಳಾಗಿ ಆಳುತ್ತ ಪ್ರತಿಯೊಬ್ಬ ಸೋದರನೂ ತನ್ನ ಹೆಸರಲ್ಲಿ ಶಾಸನಗಳನ್ನು ಪ್ರಕಟಿಸಿದ್ದರಿಂದ ನಿಜವಾಗಿ ಯಾರು ಸಾರ್ವಭೌಮ ದೊರೆಯಾಗಿದ್ದನೆಂದು ತಿಳಿಯುವುದು ಕಷ್ಟವಾಗುತ್ತದೆ. ಆದರೆ ಈ ಸೋದರರುಗಳು ಅಧಿಕಾರಕ್ಕಾಗಿ ಮೇಲಾಟ ನಡೆಸಿದ್ದರೆಂದಾಗಲೀ ರಾಜವಂಶದಲ್ಲಿ ಅಂತಃಕಲಹವಿತ್ತೆಂದಾಗಲೀ ಅರ್ಥಮಾಡಿಕೊಳ್ಳಲು ಯಾವ ಶಾಸನದ ಒಕ್ಕಣೆಯಿಂದಲೂ ಸಮರ್ಥನೆ ದೊರಕದು.

ಜಯಕೇಶಿಯು ತನ್ನ ಅಣ್ಣ ಶ್ರೀಕೇಶಿಯ ಜೊತೆ ಜಂಟಿ ಆಡಳಿತಗಾರನಾಗಿದ್ದು ಮುಂದೆ ಅಣ್ಣ ತೀರಿಕೊಂಡನಂತರ ಕೆಲಕಾಲ ತಾನೇ ರಾಜನಾಗಿದ್ದಿರಬಹುದು.

ಕ್ರಿ. ಶ. 897ರಲ್ಲಿ ಹಿರಣ್ಯಗರ್ಭ ಅಥವಾ ತುಲಾಪುರುಷ ವಿಕ್ರಮಾದಿತ್ಯ ಸಾಂತರನು ಆಳುತ್ತಿದ್ದು ಈತ ಬನವಾಸಿಯ ಕದಂಬ ಕಾಮದೇವನ ಕುಮಾರಿ ಲಕ್ಷ್ಮೀದೇವಿಯನ್ನು ವರಿಸಿದ್ದ. ಅವನು ಸಾಂತಳಿಗೆ ಸಾಸಿರವನ್ನು ಒಂದು ಪ್ರತ್ಯೇಕ ರಾಜ್ಯವನ್ನಾಗಿ ಮಾಡಿದನೆಂದು ಶಾಸನ ಹೇಳುತ್ತದೆ (E.C., VII, No. 60). ಮೇಲೆ ಹೇಳಿದ ನನ್ನಿಸಾಂತರನ ಶಾಸನವೂ ಈತನನ್ನು ಉಲ್ಲೇಖಿಸುತ್ತದೆ. ವಿಕ್ರಮ ಸಾಂತರನ 902ರ ಶಾಸನವೂ ಇದೆ (E.C., VII, St. 284). ಇದಾದ ಮೇಲೆ ''ಛಲದಂಕಮಲ್ಲ ರಾಮಸಾಂತರ''ನು ಆಳಿದನೆಂದು ಸೂಚಿಸುವ 904ರ ಎರಡು ಶಾಸನಗಳಿವೆ (ಮೇಲಿನದೇ Honnali 22 ; 23). ಇವು ವಿಕ್ರಮನ ಆಳಿಕೆಯನ್ನೇ ಸೂಚಿಸುತ್ತಿರಬಹುದು. ರೈಸ್ ಅವರು ಸುಮಾರು 950ರದೆಂದು ಸೂಚಿಸಿದ ಶಾಸನವೊಂದರಲ್ಲಿ ಜಿನದತ್ತರಾಯನೆಂಬ ದೊರೆಯ ಆಳಿಕೆ ನಡೆದ ಉಲ್ಲೇಖವಿದೆ (ಮೇ., VIII, 54, 114). ಕ್ರಿ.ಶ. 977ರ ಒಂದು ಶಾಸನದಲ್ಲಿ 'ಕುಲವ ಸಾಂತರ' ಎಂಬ ಹೆಸರಿದೆ. ಇದು ಒಬ್ಬ ದೊರೆಯ ಹೆಸರಿರಬಹುದೇ ಎಂಬುದು ಸ್ಪಷ್ಟವಾಗದು (ಮೇ, VII, Sa. 152). ಆದರೆ 1077ರ ನನ್ನಿ ಸಾಂತರನ ಶಾಸನದಂತೆ, ಚಾಗಿಸಾಂತರನೆಂಬ ದೊರೆ ಹಿರಣ್ಯಗರ್ಭನನಂತರ ಆಳಿದ್ದು ಅವನು ಆಳುಪ ದೊರೆ ರಣಂಜಯನ ಮಗಳು, ಎಂಜಲದೇವಿಯನ್ನು ವರಿಸಿದ್ದ. ಇವನು ಹತ್ತನೆಯ ಶತಮಾನದ ಪೂರ್ವಾರ್ಧದಲ್ಲೇ ಆಳಿರಬಹುದು. ನನ್ನಿ ಸಾಂತರನ ಶಾಸನದಲ್ಲಿ ಚಾಗಿಯು ಹಿರಣ್ಯಗರ್ಭ ವಿಕ್ರಮನ ಮಗನೆಂದು ಹೇಳಿದ್ದು, ಅದೇ ಶಾಸನವು ಉಲ್ಲೇಖಿಸುವ ಚಾಗಿಸಾಂತರನ ಮಗನಾದ ವೀರ ಸಾಂತರನೇ 950(?)ರ ಶಾಸನದ ಜಿನದತ್ತನಾಗಿರಬಹುದೇ ಎಂಬುದು ಗಮನಿಸಬೇಕಾದ ವಿಷಯ.



1077ರ ಶಾಸನದಂತೆ, ವೀರಸಾಂತರನ ಅನಂತರ ಅವನ ಮಕ್ಕಳು, ಕನ್ನರ ಸಾಂತರ ಮತ್ತು ಕಾಮದೇವರು ಜಂಟಿಯಾಗಿ ಆಳಿದರು. ಆ ಮೇಲೆ ಕಾಮದೇವನ ಮಗ ತ್ಯಾಗಿ, ಮುಂದೆ ತ್ಯಾಗಿಯ ಮಗ ನನ್ನಿ, ನನ್ನಿಯ ಅನಂತರ ಅವನ ಮಗ ರಾಯಸಾಂತರ, ಆ ಮೇಲೆ ರಾಯನ ಮಗ ಚಿಕ್ಕವೀರ, ಅವನ ಉತ್ತರಾಧಿಕಾರಿಯಾಗಿ ಅವನ ಪುತ್ರ ಅಮ್ಮಣದೇವ, ಮುಂದೆ ತೈಲಪದೇವ, ಇವರು ಆಳಿದರು. (ಮೇ. Nr. 35). ಈ ರೀತಿ ವಿಕ್ರಮ (ಹಿರಣ್ಯಗರ್ಭ)ನ ಅನಂತರ ಸುಮಾರು ಒಂದೂವರೆ ಶತಮಾನಗಳ ಕಾಲದಲ್ಲಿ ಹನ್ನೊಂದು ತಲೆಮಾರುಗಳು ಕಳೆದನಂತರ ತೈಲಪನ ಮಗ ಬೀರದೇವನ ಆಳಿಕೆ ನಡೆಯಿತು.

1077 ರ ಶಾಸನದಲ್ಲಿ ಹೇಳಿದ ಈ ದೊರೆಗಳ ಪಟ್ಟಿ ತಪ್ಪೆನ್ನಲು ಬಾರದು. ಆದರೆ ಇಲ್ಲಿ ಹೇಳಿದ ದೊರೆಗಳು ಸರಾಸರಿ 10 ರಿಂದ 15 ವರ್ಷ ಮಾತ್ರ ಆಳಿದರೆಂದು ಭಾವಿಸಬೇಕು. ಈ ನಡುವಿನ ಸಾಂತರ ಕುಲದ ಮಾರ ಎಂಬ ದೊರೆಯ ಎರಡು ಶಾಸನಗಳು ಬಾಳೆಹೊನ್ನೂರಲ್ಲಿ ದೊರೆತಿದ್ದು, ಇದರ ಕಾಲ 11 ನೆಯ ಶತಮಾನವೆಂದು ರೈಸ್ ಹೇಳಿದ್ದಾರೆ (ಮೇ., kp. 1 ; 2). ಮೇಲೆ ಹೇಳಿದ ದೊರೆಗಳಲ್ಲಿ ಯಾರಾದರೂ ಒಬ್ಬನಿಗೆ ಮಾರ ಎಂಬ ದ್ವಿತೀಯ ನಾಮಧೇಯವಿರುವ ಶಕ್ಯತೆ ಇದ್ದರೂ ಆತ ಯಾವ ದೊರೆಯೆಂದು ಹೇಳುವುದು ಕಷ್ಟ. 102 ರ ಒಂದು ಶಾಸನದಂತೆ ವಿಕ್ರಮಸಾಂತರ ಶ್ರೀವಲ್ಲಭದೇವ ಎಂಬವನು ಗೌಜ (ಗೌದ) ಅಗ್ರಹಾರಕ್ಕೆ ಒಂದು ದಾನವನ್ನಿತ್ತಿದ್ದಾನೆ (ಮೇ. SK. 47). 1027ರದೇ ನನ್ನಿ ಸಾಂತರ ಎಂಬವನ ಇನ್ನೊಂದು ಶಾಸನದಂತೆ ಆಗಿನ ದೊರೆ ಅನ್ನಲದೇವ (ಮೇ S.K. 53). ಈ ಅನ್ನಲದೇವ, ವಿಕ್ರಮ ಸಾಂತರ ಎಂದೆಲ್ಲ ವರ್ಣಿಸಲ್ಪಟ್ಟವನಾದ (1077ರ ಮೇಲಣ ಶಾಸನದೊಳಗಿನ) ಅಮ್ಮಣದೇವನೇ ಇರಬೇಕು.

ಬೀರ ಸಾಂತರ (ಬಿರಂಗ)ನ ಶಾಸನಗಳು 1060ರಿಂದ ಆರಂಭಿಸಿ (Na. 58) ಮುಂದೆ 1062 (Na. 71) 1068ರ ವರೆಗೆ ಇವೆ (SK. 46). ಇವನ ಕಾಲಕ್ಕೆ ಇವನ ಜ್ಯೇಷ್ಠಪುತ್ರ ಭುಜಬಲ ತ್ರೈಲೋಕ್ಯಮಲ್ಲನೂ ಜಂಟಿಯಾಗಿ ಆಳುತ್ತಿದ್ದಂತೆ ಕಾಣಿಸುತ್ತದೆ. 1063ರ ಶಾಸನದಲ್ಲಿನ ದೊರೆ ಬೀರ ಸಾಂತರನ ತಂದೆಯಾದ ತೈಲನೇ ಅಥವಾ ಜ್ಯೇಷ್ಠ ಪುತ್ರನಾದ ತೈಲನೇ ಎಂಬ ವಿಚಾರ ತಿಳಿಯದು. ಅಮ್ಮಣದೇವನ ಮಗನಾದ ತೈಲನ ಕಾಲದಲ್ಲಿ ಅವನ ಪುತ್ರ ಬಿರುಗನು ಜಂಟಿರಾಜನಾಗಿದ್ದನೆಂದೂ ಮುಂದೆ, ಬಿರುಗನ ಕಾಲದಲ್ಲಿ ಅವನ ಮಗ ತೈಲನು ಜಂಟಿರಾಜನಾಗಿದ್ದನೆಂದೂ ಊಹಿಸಬೇಕು. 1070 ರಲ್ಲಿ ಕಿರಿಯ ತೈಲನು ತೀರಿಕೊಂಡನೆಂಬುದು ತಿಳಿಯುತ್ತದೆ (SK. 62).

ಬೀರದೇವನು ವರಿಸಿದ್ದ ವೀರದೇವಿ ಗಂಗಕುಲದ ರಕ್ಕಸಗಂಗನ ಮೊಮ್ಮಗಳು. ಇವಳಿಗೆ ನಾಲ್ವರು ಪುತ್ರರು. ತೈಲ (ಭುಜಬಲ) ಗೋವಿಂದರ (ಗೊಜ್ಜಿಗ ಅಥವಾ ನನ್ನಿ) ಒಡ್ಡುಗ (ಒಡ್ಡವ ಅಥವಾ ವಿಕ್ರಮ) ಮತ್ತು ಬರ್ಮ (ಬಮ್ಮ) ಎಂಬವು ಅವರ ಹೆಸರುಗಳು. ಈ ಪೈಕಿ ನನ್ನಿ ಮತ್ತು ವಿಕ್ರಮನು ಜಂಟಿಯಾಗಿ ಆಳುತ್ತಿದ್ದರೆಂಬುದು ಆ ಕಾಲದ ಶಾಸನಗಳನ್ನು ಕಂಡಾಗ ಊಹಿಸಬಹುದಾದ ವಿಷಯ. ವೀರದೇವಿಯು ಬೇಗನೆ ತೀರಿಕೊಂಡಳು. ಅವಳ ಅಕ್ಕ ಚಟ್ಟಲದೇವಿಯೆಂಬವಳು ಪಲ್ಲವ ರಾಜಕುಮಾರನೊಬ್ಬನನ್ನು ವರಿಸಿದ್ದು, ಮುಂದೆ ವಿಧವೆಯಾದಳು, ಆಗ ಆಕೆ ತನ್ನ ಸೋದರಿಯ ಮಕ್ಕಳೊಡನೆ ಇರಲು ಹುಂಚಕ್ಕೆ ಬಂದು, ಹುಂಚದಲ್ಲಿ ''ಊರ್ವಿತಿಲಕ'' ಎಂಬ ಹೆಸರಿನ ಪಂಚಬಸದಿಗಳನ್ನು ಕಟ್ಟಿಸಿದಳು. ಈ ವಿಚಾರ ಹುಂಚದ ಎರಡು ಶಾಸನಗಳಿಂದ ತಿಳಿಯುತ್ತದೆ (ಮೇ. VII, No. 35; 36).

ನನ್ನಿ ಮತ್ತು ವಿಕ್ರಮರನಂತರ ವಿಕ್ರಮ (ಒಡ್ಡುಗ)ನ ಮಗ ತೈಲ(ತ್ರೈಲೋಕ್ಯಮಲ್ಲ, ಭುಜಬಲಿ, ತ್ರಿಭುವನಮಲ್ಲ) ನು ಆಳಿರಬೇಕೆಂದು ಒಂದು ಶಾಸನ ಸೂಚಿಸುತ್ತದೆ (Na. 37). ಕ್ರಿ. ಶ. 1149ರ

ಒಂದು ಶಾಸನದಂತೆ, ತೈಲನನಂತರ ಅವನ ಮಗ ಕಾಮ, ಕಾಮನನಂತರ ಜಗದೇವ ಇವರು ಆಳಿದ ವಿಚಾರ ತಿಳಿಯುತ್ತದೆ VII. Sk. 103). ಈ ರೀತಿ ತೈಲನು ಆಳಿದ್ದು 1070ರ ವರೆಗೆ. ಅನಂತರ ವಿಕ್ರಮನ ಆಡಳಿತದ ಶಾಸನ 1077ರದು. ಈತನ 1087ರ ಶಾಸನವೂ ಇದೆ (No. 40.). 1087 ರಿಂದ 1147 ರ ವರೆಗೆ ಆಳಿದವರು ತೈಲ II, ಕಾಮದೇವ ಮತ್ತು ಜಗದೇವ. ಜಗದೇವ 1149ರ ಒಂದು ಶಾಸನದಂತೆ ಆತನ ರಾಜಧಾನಿ ಸೇತು (ಇದು ಹುಂಚದ ವಿನಾ, ಇನ್ನೊಂದು ನೆಲೆವೀಡಾಗಿರಬಹುದು). ಈ ಊರು ಸಾಗರ ತಾಲೂಕಿನಲ್ಲಿದೆ (VII, Sk. 103). ಈತ 1175 ರ ವರೆಗೆ ಆಳಿದ (Sa. 66). ಆ ಮೇಲೆ ತ್ರಿಭುವನಮಲ್ಲ ಸಾಂತಿಯ (ಶಾಂತೆಯ) ದೇವರಸನು ಆಳಿದ (Sa. 36 ; 95). ಜೈನರಾದ ಈ ವಂಶಜರು ಕಲ್ಯಾಣದ ಚಾಲುಕ್ಯರ ಸಾಮಂತರು.

ಹನ್ನೆರಡನೆಯ ಶತಮಾನದಲ್ಲಿ ಸಾಂತರ ಮನೆತನವು ಒಡೆದು ಎರಡು ಭಾಗವಾಗಿ ಒಂದು ಶಾಖೆ ಕಳಸದಿಂದಲೂ ಇನ್ನೊಂದು ಹೊಸಗುಂದದಿಂದಲೂ ಆಳುವುದು ಕಾಣಿಸುತ್ತದೆ.

ಹೊಸಗುಂದ ಶಾಖೆಯಲ್ಲಿ ನಮಗೆ ಮೊದಲು ಕಾಣಿಸುವ ದೊರೆ ಬೀರದೇವರಸ. ಹೊಸಗುಂದದ ದೊರೆಗಳು ಜೈನರಲ್ಲ, ಶೈವರು. ಶಂಭುವಿನ ಸ್ತುತಿಯೊಂದಿಗೇ ಅವರ ಎಲ್ಲ ಶಾಸನಗಳು ಆರಂಭವಾಗುತ್ತವೆ. ಹುಂಚದ "ಬಿಲ್ಲೇಶ್ವರ ದೇವ ದಿವ್ಯ ಶ್ರೀಪಾದಪದ್ಮಾರಾಧಕ" ರೆಂದು ಅವರು ತಮ್ಮನ್ನು ಕರೆದು ಕೊಂಡಿದ್ದಾರೆ. 1248 ರ ಶಾಸನದಂತೆ ಬೀರದೇವ ಹುಂಚದ ಮೇಲೆ ದಂಡೆತ್ತಿ ನಡೆದು ಅಲ್ಲಿಯ ದೊರೆ ಬೊಮ್ಮರಸನನ್ನು ಸೋಲಿಸಿ ನಗರವನ್ನು ಸೂರೆ ಮಾಡಿದ (Sa. 127). ಈ ಬೊಮ್ಮರಸ ಮೂಲ ಶಾಖೆಯವನಿರಬೇಕು. ಬೀರದೇವನ 1255 ರ ಶಾಸನವು ಅವನ ಆಳಿಕೆಯ 47 ನೆ ವರ್ಷ ದ್ದೆಂದು ಹೇಳಿರುವುದರಿಂದ (Sa. 150), ಆತ 1208 ರಲ್ಲಿ ಪಟ್ಟವೇರಿರಬೇಕು. ಮುಂದೆ 1275 ರಲ್ಲಿ ಬೊಮ್ಮರಸನೆಂಬವನೂ (Sa. 134) 1282 ರಲ್ಲಿ ಕಮ್ಮರಸನೆಂಬವನೂ (Sa. 84 ; 85) ಆಳಿದ ವಿಚಾರ ತಿಳಿಯುತ್ತದೆ. ಈ ಕಾಲದಲ್ಲಿ ಈ ದೊರೆಗಳು ದೇವಗಿರಿಯ ಯಾದವರ ಜೊತೆ ಸತತವಾಗಿ ಹೋರಾಡುತ್ತಿದ್ದರು. 1287 ರ ಕಮ್ಮರಸನ ಶಾಸನದಲ್ಲಿ ಈ ವಂಶದ ವಿಚಾರ ಹೀಗಿದೆ: "ಚಾಳುಕ್ಯಾನ್ವಯ ಭೂಪಾಳಸಹಕಾರಾದಯಃ ಪುರಾ ತದ್ವಂಶೇ ಜಿನದತ್ತಾಖ್ಯೋ ವೀರಸಾಂತರಸಾದಯಃ" ಬೀರರಸನಿಗೂ ಹಿಂದೆ ಚೇಳುಮ ಎಂಬ ದೊರೆ ಆಳುತ್ತಿದ್ದನೆಂದೂ ಈ ಶಾಸನ ಹೇಳುತ್ತದೆ. ಸಾಂತರರ "ಪಟ್ಟಿ ಪೊಂಬುಚ್ಚಪುರವರಾಧೀಶ್ವರ" ಎಂಬ ಬಿರುದೂ ಅಲ್ಲಿ ಕಾಣಿಸುತ್ತದೆ. (S. 312). ಮುಂದೆ ಹೊಸಗುಂದ ಶಾಖೆಯ ವಿಚಾರ ಶಾಸನಗಳಲ್ಲಿ ಕಾಣಿಸದು.

ಕಳಸದಲ್ಲೇ 1154ರಲ್ಲೇ ಶಾಂತಮರುದೇವನ ಆಳಿಕೆ ಕಂಡುಬರುತ್ತದೆ. (E. C. VI, Mg. 37). ಈತ ಹುಂಚದ ಜಗದೇವರಸನ ಸಮಕಾಲೀನ. ಮುಂದೆ 1244 ಹಾಗೂ 1247ರಲ್ಲಿ ಜಾಕಲದೇವಿ (Mg. 66 ; 70), 1270ರಿಂದ 1281ರ ವರೆಗೆ ಕಳಲಮಹಾದೇವಿ (Mg. 71 ; 77 ; 73)—ಇವರು ರಾಜ್ಯಭಾರ ಮಾಡಿದರು. ಈ ಸಾಂತರ ದೊರೆಗಳು ಜೈನರಾದರೂ ಕಳಸನಾಥನ ಭಕ್ತರು. 1284ರಲ್ಲಿ ಬಾಲದೇವ (Mg, 74) ಹಾಗೂ 1297ರಲ್ಲಿ ವೀರಪಾಂಡ್ಯರು ಕಳಸದಿಂದ (Mg. 68) ಆಳುತ್ತಿದ್ದರು. ಕಳಸದಿಂದ ಆಳುತ್ತಿದ್ದ ದೊರೆಗಳಲ್ಲಿ ವೀರಪಾಂಡ್ಯನೇ ಕೊನೆಯವನು. ಹೊಯ್ಸಳರ ಪ್ರಾಬಲ್ಯದಿಂದಾಗಿ ಈ ದೊರೆಗಳು ಮೆಲ್ಲಮೆಲ್ಲನೆ ಘಟ್ಟದ ಕೆಳಗೆ ಇಳಿಯುವ ಪ್ರಸಂಗ ಬಂತು. ಅವರು ಕಾರ್ಕಳ ತಾಲೂಕಿನ ಕೆರವಾಸೆಯನ್ನು ತಮ್ಮ ರಾಜಧಾನಿಯಾಗಿ ಮಾಡಿಕೊಂಡರು.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ದೊರಕುವ ಸಾಂತರರ ಆಳಿಕೆಯನ್ನು ಸೂಚಿಸುವ ಶಾಸನ 1334ರದು. ಬೊಮ್ಮಿದೇವರಸನ ಮಗನಾಗಿರುವ ಲೋಕನಾಥರಸನ ಆಳಿಕೆಯನ್ನು ಈ ಶಾಸನ ಸೂಚಿಸುತ್ತದೆ

(Annual Report of South Indian Epigraphy, 71 of 1901 ; South Indian Inscriptions, VII, 247). ''ಉತ್ತರ ಮಧುರಾಧೀಶ್ವರ'' "ಉಗ್ರವಂಶಲಲಾಮ" "ಪದ್ಮಾವತೀ ಲಬ್ಧವರಪ್ರಸಾದ '' "ಪೊಟ್ಟಿಪೊಂಬುಚ್ಚ ಪುರವರಾಧೀಶ್ವರ'' ಎಂಬವು ಅವನ ಬಿರುದುಗಳು. ಮುಂದೆ 1408ರ ವರೆಗೆ ಈ ಮನೆತನದ ಯಾವ ಶಾಸನವೂ ಕಾಣಿಸದು. 1408ರಲ್ಲಿ ವೀರಭೈರವ ಕ್ಷೇಮ ಪಾಲನು ಆಳುತ್ತಿರುವ ವಿಚಾರ ತಿಳಿಯುತ್ತದೆ (ARSIE 530 of 1929). ಈತನ ರಾಜಧಾನಿ ಕೆರವಾಸೆ. ಈ ವೀರಭೈರವನ ಮಗನಾದ ವೀರಪಾಂಡ್ಯರಾಜನು ತನ್ನ ಗುರು ಲಲಿತಕೀರ್ತಿಯ ಆಜ್ಞೆ ಯಂತೆ ಕಾರ್ಕಳದ ಗೋಮಟನನ್ನು ಪ್ರತಿಷ್ಠಾಪಿಸಿದನು (Epigraphia Indica, VII, P 109). ಈ ರಾಜನ 1457ರ ಶಾಸನದಲ್ಲಿ ಈತ ''ಅರಿರಾಯಗಂಡರ ದಾವಣಿ'' ಎಂಬ ಬಿರುದನ್ನು ತಳೆದುದು ಕಂಡುಬರುತ್ತದೆ (S.I.I, VII, 246). ''ಜ್ಞಾನ ಚಂದ್ರಾಭ್ಯುದಯ,'' "ಕಾಮನ ಕಥೆ'' ಮುಂತಾದ ಕನ್ನಡ ಕಾವ್ಯಗಳ ಕವಿ ಕಲ್ಯಾಣಕೀರ್ತಿಯು ಈ ವೀರಪಾಂಡ್ಯನಿಂದ ಗೌರವಿತನಾದ ಜೈನಮುನಿ. ಇನ್ನೊಬ್ಬ ಸಮಕಾಲೀನ ಕನ್ನಡಕವಿ, ಕಲ್ಯಾಣ ಕೀರ್ತಿಯ ಶಿಷ್ಯನಾದ ಬಾಹುಬಲಿ. ಈತ ''ನಾಗಕುಮಾರ ಚರಿತೆ'' ಯನ್ನು ಕಾರ್ಕಳದಲ್ಲೇ ಬರೆದಿದ್ದು ಅವನ ಮಗ ವರ್ಧಮಾನ ಎಂಬಾತ ಈ ಕಾವ್ಯವನ್ನು ಪೂರ್ತಿಗೊಳಿಸಿದ. ವಿಳಂಬಿ ಸಂವತ್ಸರದ (ಕ್ರಿ. ಶ. 1478) ಒಂದು ಶಾಸನದಂತೆ ಮೇಲಣ ಇಮ್ಮಡಿ ವೀರಪಾಂಡ್ಯನನಂತರ ಅವನ ಸೋದರ (''ಹಿರಿಯ'' ಭೈರರಸನ ಮಗ) ಇಮ್ಮಡಿ ಭೈರರಸನು ಆಳುತ್ತಿದ್ದ (S.I.I., VII, 245). ಈತನ ಅನಂತರ ಅವನ ಸೋದರಳಿಯನಾದ ''ಇಮ್ಮಡಿ'' ವೀರಭೈರವನು ಆಳಿದ. ಈತನನ್ನು ಶಾಸನಗಳು ''ಇಮ್ಮಡಿ'' ಎಂದು ಕರೆದರೂ ಈತ ಮೂರನೆಯ ಭೈರರಸನೆಂದು ಎಣಿಸಲ್ಪಡ ಬೇಕಾದವನು. ತುಳುನಾಡಿನಲ್ಲಿ ಪ್ರಚಲಿತವಾದ ಅಳಿಯಸಂತಾನಪದ್ಧತಿ ಜೈನರಾದ ಸಾಂತರರಲ್ಲಿ ಈ ಕಾಲದಲ್ಲಿ ರೂಢಿಗೆ ಬಂದುದು ಕಾಣಿಸುತ್ತದೆ.

ಆರಂಭದಲ್ಲಿ ವಿಜಯನಗರದ ಸಾಮಂತರಾಗಿದ್ದ ಈ ಕಾರ್ಕಳದ ದೊರೆಗಳು ಈ ಕಾಲದಲ್ಲಿ ಸ್ವಾತಂತ್ರ್ಯ ಘೋಷಿಸಿಕೊಂಡಿರಬೇಕೆಂದು 1501ರ ಈ ರಾಜನ ಶಾಸನವನ್ನು ಸಂಪಾದಿಸಿದ (E.I.,VIII, P. 127) ಎಚ್. ಕೃಷ್ಣಶಾಸ್ತ್ರಿಗಳು ಹೇಳಿದ್ದಾರೆ. ವಿಜಯನಗರದ ಸೇನೆ ಭೈರರಸನ ವಿರುದ್ಧ ದಂಡೆತ್ತಿ ಬಂದುದರಿಂದ ಭೈರರಸನು ಕಾರ್ಕಳ ರಾಜಧಾನಿಯನ್ನು ಬಿಟ್ಟು ಓಡಿಹೋದನೆಂದೂ ಬಂದಂಥ ಪೀಡೆ ಪರಿಹಾರವಾದಾಗ ಕಳಸದ ಕಳಸನಾಥನ ಜೀರ್ಣೋದ್ಧಾರ ಮಾಡಿದನೆಂದೂ 1516ರ ಒಂದು ಶಾಸನದಿಂದ ಗೊತ್ತಾಗುತ್ತದೆ (E.C.VI, Mg. 41). 1530ರ ವರೆಗೆ ಆಳಿರಬಹುದಾದ ಈ ದೊರೆಯ ಐದಾರು ಶಾಸನಗಳಿವೆ. ಇವನ ಉತ್ತರಾಧಿಕಾರಿ ಮೂರನೆಯ ವೀರಪಾಂಡ್ಯನು ಕಾರ್ಕಳದ 'ಪಾಂಡ್ಯನಗರಿ'ಯಲ್ಲಿ ಚತುರ್ಮುಖ ಬಸದಿಯನ್ನು ಕಟ್ಟಿಸಿದನೆಂದು 1545ರ ಶಾಸನ ಹೇಳುತ್ತದೆ. (S.I.I. VII, 248). ಈ ಬಸದಿ ಈಗ ಇಲ್ಲ. ವರ್ಧಮಾನ ಕವಿ ಉಲ್ಲೇಖಿಸಿರುವ 'ಪಾಂಡ್ಯನೃಪ' ಈತನೇ. ಈತನ ಕೊನೆಯ ಶಾಸನ 1557ರದು (ARSIE, 70 of 1901).

1573ರಲ್ಲಿ ಕಾಣಿಸುವ ಈ ವಂಶದ ದೊರೆ ನಾಲ್ಕನೆಯ ಭೈರರಸ (Mysore Arch. Report, 1932, P. 203) ಕಾರ್ಕಳ, ಕಳಸಗಳ ಜೊತೆ ಚಿತ್ರದುರ್ಗ ಜಿಲ್ಲೆಯ ಹರಿಹರದ ವರೆಗೂ ಸ್ವಾಮ್ಯವನ್ನು ಹೊಂದಿದ್ದ. ಈಗ ಕಾರ್ಕಳದಲ್ಲಿರುವ ಸುಂದರ ಚತುರ್ಮುಖ ಬಸದಿಯನ್ನು ಈತ 1586ರಲ್ಲಿ ಕಟ್ಟಿಸಿದ (E.I., VII, P. 122—38). ಕಾರ್ಕಳದಲ್ಲಿನ ಸ್ಥಾನೀಯ ಐತಿಹ್ಯಗಳಂತೆ ಅಲ್ಲಿನ ಅನಂತ ಶಯನ ದೇವಾಲಯವನ್ನು ಈತನೇ ಕಟ್ಟಿಸಿದವನು.

ಕನ್ನಡ ಕವಿ ಚಂದ್ರಮ "ಗೋಮಟೇಶ್ವರ ಚರಿತ್ರೆ''ಯಲ್ಲಿ ಹೇಳಿರುವಂತೆ, ನಾಲ್ಕನೆಯ ಭೈರರಸನ ಅನಂತರ ಅವನ ಹಿರಿಯ ಮಗ ವೀರಪಾಂಡ್ಯ (ನಾಲ್ಕನೆಯ) ಹಾಗೂ ಕಿರಿಮಗ 'ಇಮ್ಮಡಿ' ಭೈರವ

(ಐದನೆಯ) ರು ಅನುಕ್ರಮವಾಗಿ ಆಳಿದರು (ಹದಿನಾರನೆಯ ಸಂಧಿ, 5-21). ವೀರಪಾಂಡ್ಯನ 1592ರ ಹಿರಿಯಂಗಡಿ ಶಾಸನ S.I.I., VII, 244) ಮತ್ತು ಐದನೆಯ ಭೈರವನ 1610ರ ಶಾಸನಗಳು (E.C, VI, Mg. 63 ; E.I. VIII, P. 127) ಚಂದ್ರಾಮನ ಮಾತನ್ನು ಸಮರ್ಥಿಸುತ್ತವೆ.

ವಿಜಯನಗರದ ಪತನಾನಂತರ ಈ ದೊರೆಗಳು ಸ್ವತಂತ್ರರಾಗಲು ಯತ್ನಿಸಿ ಆಗಾಗ ಕೆಳದಿ ದೊರೆಗಳಿಂದ ಸೋಲನ್ನನುಭವಿಸಿದರೆಂಬ ವಿಚಾರ "ಕೆಳದಿ ನೃಪ ವಿಜಯ" ದಿಂದ ತಿಳಿಯುತ್ತದೆ. ಐದನೆಯ ಭೈರರಸನೇ ಈ ವಂಶದ ಕೊನೆಯ ದೊರೆ. ಚಂದ್ರಾಮ ಕವಿ ಇವನ ಆಸ್ಥಾನದಲ್ಲಿದ್ದ (1646). ಮುಂದೆ 1650ರ ಹೊತ್ತಿಗೆ ಕೆಳದಿಯ ದೊರೆಗಳು ಈ ರಾಜರನ್ನು ಪೂರ್ತಿಯಾಗಿ ಸೋಲಿಸಿ, ಅವರ ಆಳಿಕೆಯನ್ನು ಪೂರ್ತಿಯಾಗಿ ಕೊನೆಗೊಳಿಸಿದರು.

ಹುಂಚದ ಪದ್ಮಾವತಿಯ ಆರಾಧಕರಾದ ಕಾರ್ಕಳದ ಈ ಜೈನ ದೊರೆಗಳು ಕಳಸದ ಕಳಸನಾಥ (ಶಿವ) ನನ್ನು ತಮ್ಮ ಕುಲದೈವವೆಂದು ಭಾವಿಸಿದ್ದರು. ಕಾರ್ಕಳವು ಈ ದೊರೆಗಳ ಆಳಿಕೆಯ ಕೊನೆಗಾಲದಲ್ಲಿ ಭಾರಿ ವೈಭವದ ರಾಜಧಾನಿಯಾಗಿತ್ತೆಂಬ ವಿಚಾರ ಚಂದ್ರಾಮನ ವರ್ಣನೆಗಳಿಂದ ತಿಳಿಯುತ್ತದೆ. ಧರ್ಮ, ಶಿಲ್ಪ, ಕಾವ್ಯ, ನಾಟಕಗಳಿಗೆ ಇವರು ಉದಾರಾಶ್ರಯ ನೀಡಿದ್ದರು.

ರಾಷ್ಟ್ರಕೂಟರ, ಕಲ್ಯಾಣದ ಚಾಳುಕ್ಯರ, ಹೊಯ್ಸಳರ, ವಿಜಯನಗರದ ದೊರೆಗಳ ಹಾಗೂ ಕೆಳದಿ ನಾಯಕರ ಸಾಮಂತರಾಗಿ, ದೀರ್ಘಕಾಲ ಆಳಿ, ಕರ್ನಾಟಕದ ಇತಿಹಾಸದಲ್ಲಿ ಸಾಂತರರು ಒಂದು ವಿಶಿಷ್ಟ ಸ್ಥಾನವನ್ನು ಪಡೆದಿದ್ದಾರೆ.

## ಬಂಗರು

ಹೊಯ್ಸಳ ವಿಷ್ಣುವರ್ಧನನು ಜೈನಪಂಥವನ್ನು ತ್ಯಜಿಸಿ ವೈಷ್ಣವನಾದಾಗ ಅವನ ಪಾಳೆಯಗಾರರಾಗಿದ್ದ ಅನೇಕ ಜೈನ ನಾಯಕರು ಅವನ ರಾಜ್ಯವನ್ನು ತ್ಯಜಿಸಿ ಪಶ್ಚಿಮ ಕರಾವಳಿಗೆ ವಲಸೆ ಹೋದರು. ಹೀಗೆ ವಲಸೆ ಬಂದ ರಾಜಮನೆತನಗಳ ಪೈಕಿ ಬೆಳ್ತಂಗಡಿ ತಾಲೂಕಿನ ಬಂಗಾಡಿ (ಬಂಗವಾಡಿ) ಯಿಂದ ಆಳುತ್ತಿದ್ದ ಬಂಗರ ಮನೆತನವೂ ಒಂದು. "ಮ್ಯಾಕೆನ್ಜಿ ಕಲೆಕ್ಷನ್" ನಲ್ಲಿರುವ 'ಬಂಗ ಚರಿತೆ' ಮತ್ತು 'ಬಂಗರ ಕೈಫಿಯತ್ತು' ಗಳನ್ನು ಆಧರಿಸಿ ಬಂಗರ ಇತಿಹಾಸ ಬರೆದ ಶ್ರೀ ಗಣಪತಿರಾವ್ ಐಗಳ್ ಅವರು ಬಂಗರು ಗಂಗವಾಡಿಯಿಂದ ಬಂದವರೆಂದು ಹೇಳಿದ್ದಾರೆ (ಐಗಳ್ : ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, 263-4). ಬಹುಶಃ ಬಂಗರು ಮೂಡುಗೆರೆ ತಾಲೂಕಿನ ಮೇಲ್ ಬಂಗಾಡಿಯವರಿದ್ದರೂ ಇರಬಹುದು.

ಹೀಗೆ ವಲಸೆ ಬಂದ ದೊರೆ ಚಂದ್ರಶೇಖರ ಬಂಗ. ಅವನು ತೀರಿಕೊಂಡು ಅವನ ಮಗು ಅನಾಥ ಸ್ಥಿತಿಯಲ್ಲಿದ್ದಾಗ ಹೊಯ್ಸಳ ದೊರೆ ಒಂದನೆಯ ವೀರನರಸಿಂಹನು ಆ ಬಾಲಕನಿಗೆ ತನ್ನ ಮಾಂಡಲಿಕತ್ವವನ್ನು ನೀಡಿ ಆತನಿಗೆ "ವೀರನರಸಿಂಹ" ಎಂಬ ತನ್ನ ಹೆಸರನ್ನೇ ನೀಡಿದನಂತೆ. ಈ ಘಟನೆ ಶಕ ವರ್ಷ 1075 ರಲ್ಲಿ (ಕ್ರಿ.ಶ. 1153) ನಡೆಯಿತೆಂದು ಮೇಲೆ ಹೇಳಿದ ಪಾರಂಪರಿತ ಕಥನಗಳು ತಿಳಿಸುತ್ತವೆ. ಅನಂತರದ ಒಬ್ಬ ಚಂದ್ರಶೇಖರ ಬಂಗನು ಕ್ರಿ.ಶ. 1222 ರಲ್ಲಿ ಮಂಗಳೂರಲ್ಲಿ ಒಂದು ಅರಮನೆಯನ್ನು ಕಟ್ಟಿಸಿದನೆಂದೂ ಹಾವಳಿ ಬಂಗರಾಜನು ಬೆಳ್ತಂಗಡಿಯ ಸೋಮನಾಥ ದೇವಾಲಯ ಹಾಗೂ ಕೋಟೆಗಳನ್ನು ಮಾಡಿಸಿದನೆಂದೂ ಇದೇ ಮೂಲಗಳಿಂದ ತಿಳಿಯುತ್ತದೆ.

ಆದರೆ ಶಾಸನಗಳಲ್ಲಿ ಕಂಡುಬರುವ ಮೊದಲ ಬಂಗ ದೊರೆ 1410 ರಲ್ಲಿ ಆಳುತ್ತಿದ್ದ ಪಾಂಡ್ಯಪ್ಪರಸ (S.I.I., VII, 259). ಅನಂತರ 1417 ರಲ್ಲಿ ವಿಠಲದೇವಿಯೆಂಬಾಕೆ ಆಳುತ್ತಿದ್ದಳು. (ಮೇಲಿನದೇ, 261). ಮುಂದೆ ಅವಳ ಮಗ ಎರಡನೆಯ ಪಾಂಡ್ಯಪ್ಪರಸನು ಆಳುತ್ತಿದ್ದಂತೆ 1431 ಮತ್ತು 1437 ರ ಎರಡು ಶಾಸನಗಳು ತಿಳಿಸುತ್ತವೆ (ಮೇಲಿನದೇ, 265, ARSIE, 344–1931). ಆ ಮೇಲಿನ ದೊರೆ ಬಸವಣ್ಣರಸ ಬಂಗನು ಉಡುಪಿ ತಾಲೂಕಿನ ಪೆರಡೂರು ದೇವಾಲಯಕ್ಕೆ ಕೆಲವೊಂದು ದಾನಗಳನ್ನು ಮಾಡಿದ (ಅದೇ 502–1929). ಮುಂದೆ ಆಳಿದ ದೊರೆ ಕಾಮಿರಾಯನ 1461, 1469 ಹಾಗೂ 1472 ರ ಮೂರು ಶಾಸನಗಳಿವೆ (ಅದೇ, 482 ;—1929 ; 478:—1929). 1469 ರ ಶಾಸನದಂತೆ ವಿಜಯನಗರದ ಮಂಡಲಾಧಿಕಾರಿ ವಿಠರಸ ಒಡೆಯನು ಬಂಗರಾಜನ ರಾಜ್ಯದ ಮೇಲೆ ದಾಳಿ ಮಾಡಿ ಅವನಿಗೆ ಸೇರಿದ್ದ ಕೊಡೆಯಾಲ (ಮಂಗಳೂರು ?), ನೀರುಮಾರ್ಗ ಗ್ರಾಮಗಳನ್ನು ಹಾಳುಗೆಡ ವಿದ್ದನೆಂದೂ ಮುಂದೆ ವಿಠರಸನು ಈ ಹಾನಿಯನ್ನು ತುಂಬಿ ಕೊಡಲು ಉಜಿರೆ ಗ್ರಾಮವನ್ನು ಆತನಿಗೆ ಬಿಟ್ಟುಕೊಟ್ಟನೆಂದೂ ತಿಳಿಯುತ್ತದೆ. 1461 ರ ಶಾಸನದಂತೆ ಈತನೂ ಕಾರ್ಕಳದ ಸಾಂತರಸ ವಂಶದ ಪಾಂಡ್ಯಪ್ಪನೂ ಸೇನಾಮೈತ್ರಿ ಮಾಡಿಕೊಂಡುದು ತಿಳಿಯುತ್ತದೆ (ARSIE 627 :—1962).

ಕಾಮಿರಾಯನನಂತರ ಆಳಿದ ಇಮ್ಮಡಿ ನರಸಿಂಹ ಲಕ್ಷ್ಮಪ್ಪರಸನ 1484 ಹಾಗೂ 1497ರ ಎರಡು ಶಾಸನಗಳು ದೊರೆತಿದ್ದು, ಎರಡನೆಯ ಶಾಸನದಂತೆ ಆತ ಬೆಳ್ತಂಗಡಿ ತಾಲೂಕಿನ ಸುರಿಯೆ ಗ್ರಾಮದ ನಂದಿಕೇಶ್ವರನಿಗೆ ಕೆಲವು ದಾನಗಳನ್ನು ಮಾಡಿದ್ದು ತಿಳಿಯುತ್ತದೆ (ARSIE, 481, 483; 1929).

1528ರ ಸುಜೇರು ಶಾಸನದಂತೆ ವೀರನರಸಿಂಹ ಬಂಗನು ಆಗಿನ ಬಂಗವಾಡಿಯ ದೊರೆ (ಅದೇ 336 : 1931). ಈತ ಮೇಲೆ ಉಲ್ಲೇಖಿಸಿದ ಇಮ್ಮಡಿ ನರಸಿಂಹನೇ ಅಥವಾ ಬೇರೆ ದೊರೆಯೇ ಎಂಬುದನ್ನು ತಿಳಿಯುವುದು ಕಷ್ಟ. ನಾಲ್ವತ್ತು ವರ್ಷಕ್ಕೂ ದೀರ್ಘಕಾಲ ಆಳಿದ ದೊರೆಗಳು ಇಲ್ಲದೆ ಇಲ್ಲ. ಈತ ಚೌಟ ದೊರೆಗಳ ಜೊತೆ ಸೇನಾಮೈತ್ರಿ ಮಾಡಿಕೊಂಡ ವಿಚಾರ ಶಾಸನದಲ್ಲಿದೆ. ಈ ವಂಶಕ್ಕೂ ಕಾರ್ಕಳದ ಸಾಂತರಸರಿಗೂ ಈ ಕಾಲದಲ್ಲಿ ರಕ್ತಸಂಬಂಧವೂ ಬೆಳೆದಂತಿದೆ. 1586ರ ಕಾರ್ಕಳದ ದೊರೆ ಭೈರರಸನ ಶಾಸನದಂತೆ, ಆತ ತಾನು ಭೈರರಸ ವಂಶದ ಗುಮಟಾಂಬಿಕೆ ಹಾಗೂ ವೀರನರಸಿಂಹ ಬಂಗ ಇವರುಗಳ ಪುತ್ರನೆಂದು ಹೇಳಿಕೊಂಡಿದ್ದಾನೆ E.I. VII, 122-138). ಈ ಎಲ್ಲ ರಾಜವಂಶಗಳಲ್ಲಿ ಉತ್ತರಾಧಿಕಾರ ಅಳಿಯ ಸಂತಾನ ನಿಯಮ (ಸೋದರಿಯ ಮಗನಿಗೆ ಉತ್ತರಾಧಿಕಾರ) ದಂತೆ ನಡೆಯುತ್ತಿತ್ತೆಂದು ಇಲ್ಲಿ ಗಮನಿಸಬೇಕು. ಈ ವೀರನರಸಿಂಹನು 1484–97ರ ನಡುವೆ ಆಳುತ್ತಿದ್ದ ವೀರ ನರಸಿಂಹನೆ ? ಅಥವಾ 1528ರ ವೀರನರಸಿಂಹನೆ ? ಈ ಮೂರು ಹೆಸರುಗಳು ಒಬ್ಬ ವ್ಯಕ್ತಿಯನ್ನೇ ಸೂಚಿಸುತ್ತವೆಯೆ ? ಈ ಬಗ್ಗೆ ನಿರ್ದಿಷ್ಟವಾಗಿ ಏನನ್ನೂ ಹೇಳುವುದು ಕಷ್ಟ. ಬೇರೆ ಶಾಸನಗಳು ಸೂಚಿಸಿದಂತೆ, ಕಾರ್ಕಳದ ಭೈರರಸನು 1573ರಲ್ಲಿ ಪಟ್ಟಕ್ಕೆ ಬಂದಿದ್ದು ಆತನ ತಂದೆ ಅವನಿಗಿಂತ 25ವರ್ಷ ಹಿರಿಯನೆಂದು ಭಾವಿಸಿದರೆ, ಈ ಲಕ್ಷ್ಮಪ್ಪರಸನು 1550ರ ಸುಮಾರಿಗೆ ಆಳುತ್ತಿದ್ದನೆಂದು ಊಹಿಸಲು ಅವಕಾಶವಿದೆ. ಒಟ್ಟಿನಲ್ಲಿ 1484 ರಿಂದ 1528 ರ ವರೆಗೆ ಆಳಿದಾತನು ಇಮ್ಮಡಿ ನರಸಿಂಹನೆಂದೂ ಅನಂತರ 16ನೆ ಶತಮಾನದ ಮಧ್ಯಭಾಗದಲ್ಲಿ ಆಳಿದಾತನು ಮೂರನೆಯ ನರಸಿಂಹನೆಂದೂ ಹೆಸರಿಸ ಬಹುದು.

ಮುಂದೆ 1595ರಲ್ಲಿ ಕಾಮರಾಯ ಬಂಗನೆಂಬವನು ಆಳುತ್ತಿದ್ದ ವಿಚಾರ ಬಂಗಾಡಿಯ ಶಾಂತಿನಾಥ ಬಸದಿಯ ಎರಡು ದಾನ ತಾಮ್ರ ಶಾಸನಗಳಿಂದ ತಿಳಿಯುತ್ತದೆ (Sewell List, II, P. 271). ಪೋರ್ಚುಗೀಸ್ ಮೂಲಗಳೂ ಇಟಲಿಯ ಪ್ರವಾಸಿ ಪಿತ್ರೊವ್ರೂ ತಿಳಿಸಿದ್ದಂತೆ, ಈತ ಉಳ್ಳಾಲದ ರಾಣಿ ಹಿರಿಯ ಅಬ್ಬಕ್ಕಳನ್ನು ವರಿಸಿದ್ದಿರಬೇಕು.

ಬಂಗಾಡಿಯಿಂದ ಕೆಲವೇ ಮೈಲು ದೂರದಲ್ಲಿರುವ ಜೈಲಂಗಡಿಯ ಮೂಲವಂಶದ ರಾಣಿ ಶಂಕರ ದೇವಿಯೆಂಬವಳ ಜೊತೆಯಾಗಿ ವೀರನರಸಿಂಹ ಲಕ್ಷ್ಮಪ್ಪರಸ ಬಂಗನೆಂಬ ದೊರೆ 1611 ರಲ್ಲಿ ಮಾಡಿದ ಜಂಟಿದಾನವೊಂದು ಶಾಸನ ಒಂದರಲ್ಲಿ ವರ್ಣಿತವಾಗಿದೆ. (Sewell, Ibid). ಈ ದೊರೆಯು ನಾಲ್ಕನೆಯ ವೀರನರಸಿಂಹ ಲಕ್ಷ್ಮಪ್ಪರಸ. ಈತ ಉಳ್ಳಾಲದ ಕಿರಿಯ ಅಬ್ಬಕ್ಕಳನ್ನು ವರಿಸಿದ್ದನೆಂದೂ ಮುಂದೆ ಈ ದಂಪತಿಗಳಲ್ಲಿ ವಿರಸವಾಯಿತೆಂದೂ ಪಿತ್ರೊ ಹೇಳಿದ್ದಾನೆ. ಈ ಇಬ್ಬರ ವೈಮನಸ್ಯದಿಂದಾಗಿ ಉಂಟಾದ ಯುದ್ಧದಲ್ಲಿ ಬಂಗನು ಪೋರ್ಚುಗೀಸರ ನೆರವು ಪಡೆದರೆ ಅಬ್ಬಕ್ಕ ಕೆಳದಿಯ ನೆರವು ಪಡೆದಳೆಂದೂ ಕೊನೆಗೆ ಕೆಳದಿಯ ವೆಂಕಟಪ್ಪನಾಯಕ ಬಂಗನನ್ನು ಬಗ್ಗಿಸಿದನೆಂದೂ ಈ ಪ್ರವಾಸಿ ತಿಳಿಸಿದ್ದಾನೆ. (Della Valle II, 315–16). ಇದರ ಪರಿಣಾಮವಾಗಿ ಬಂಗನು ಕೆಳದಿಗೆ ಕಪ್ಪ ಕೊಡಬೇಕಾಯಿತು. ನಾಲ್ಕನೆಯ ಲಕ್ಷ್ಮಪ್ಪರಸನ ಮೇಲಣ 1611 ರ ಶಾಸನವನ್ನು ಅವಲೋಕಿಸಿದಾಗ ಆತ ಮೂಲರಾಣಿ ಶಂಕರದೇವಿಯನ್ನು ವರಿಸಿದ್ದಿರಬೇಕೆಂದೂ ಊಹಿಸಬಹುದು. ಬಹುಶಃ ಈ ದ್ವಿತೀಯ ವಿವಾಹವೇ ಕಿರಿಯ ಅಬ್ಬಕ್ಕ ಮತ್ತು ಬಂಗರಸನ ನಡುವಿನ ವಿರಸಕ್ಕೆ ಕಾರಣವಿರಬಹುದು.

ಪೋರ್ಚುಗೀಸ್ ಮೂಲಗಳ ಪ್ರಕಾರ 1635 ರಲ್ಲಿ ಬಂಗರಾಜ್ಯವನ್ನು ಒಬ್ಬ ರಾಣಿ ಆಳುತ್ತಿದ್ದಳು. (Moraes: Mangalore, p. 33). 1644ರ ಶಾಸನವೊಂದರಂತೆ, ಈ ರಾಣಿಯ ಹೆಸರು ಶಂಕರದೇವಿ (Sewell, II, P.104). ಈಕೆ ವೀರನರಸಿಂಹನ ಸೋದರಿ. ಈಕೆಯನಂತರ ಪಟ್ಟಕ್ಕೆ ಬಂದವನು ಬಹುಶಃ ಈಕೆಯ ಮಗನಾದ (ಮೂರನೆಯ) ಕಾಮರಾಯ. ಈತ 1653 ರಲ್ಲ ಇಂದಬೆಟ್ಟು ವೀರಭದ್ರ ದೇವರಿಗೆ ಕಾಣಿಕೆಗಳನ್ನು ನೀಡಿದ್ದ (Sewell, II, p.104). ಉಡುಪಿಯ ಅದಮಾರು ಮಠವಲ್ಲಿರುವ 1690ರ ಒಂದು ಕಾಗದದ ದಾಖಲೆಯಂತೆ (ಐದನೆಯ) ವೀರನರಸಿಂಹ ಲಕ್ಷ್ಮಪ್ಪರಸ ಆಗಿನ ಬಂಗ ದೊರೆ. ಇನ್ನೊಂದು ದಾಖಲೆಯಂತೆ, ಈತ 1709 ರ ವರೆಗೂ ಆಳುತ್ತಿದ್ದ. ಇವೆರಡೂ ಅದಮಾರು ಮಠಕ್ಕೆ ನೀಡಿದ ದಾನದ ದಾಖಲೆಗಳು.

ಕೆಳದಿಯ ನಾಯಕರ ವಿರುದ್ಧ ಪೋರ್ಚುಗೀಸರ ನೆರವು ಪಡೆಯುತ್ತಲಿದ್ದ ಬಂಗರು ಕೆಳದಿ ವೆಂಕಟಪ್ಪ ನಾಯಕ, ಮುಂದೆ ಶಿವಪ್ಪನಾಯಕ, ಇವರಿಬ್ಬರ ಕಾಲದಲ್ಲೂ ದುರ್ಬಲರಾದರು. ಹೈದರ್ ಟಿಪ್ಪು ಸುಲ್ತಾನರು ಈ ವಂಶವನ್ನು ಪೂರ್ತಿಯಾಗಿ ಹತಪ್ರಭವನ್ನಾಗಿ ಮಾಡಿದರು. ಪಶ್ಚಿಮ ಘಟ್ಟದ ಬುಡದ ಬಂಗಾಡಿಯಿಂದ ಮಂಗಳೂರಿನ ವರೆಗಿನ ಪ್ರದೇಶದ ರಾಜರಾಗಿದ್ದ ಬಂಗರು ದಕ್ಷಿಣಕನ್ನಡ ಜಿಲ್ಲೆಯ ತುಂಡರಸರುಗಳ ಪೈಕಿ ಅತ್ಯಂತ ಪ್ರತಿಷ್ಠಿತರಾಗಿದ್ದವರು.

**ಅಜಿಲರು**

ಗೆರಸೊಪ್ಪೆ ಮತ್ತು ಹಾಡುವಳ್ಳಿ ಮನೆತನಗಳಂತೆ ಅಜಿಲರು ತಮ್ಮನ್ನು ಚಂದ್ರವಂಶದವರೆಂದೂ ಸಾಳ್ವರೆಂದೂ ಕರೆದುಕೊಂಡಿದ್ದಾರೆ (E.I, VII, p.114, S.I.I, VII 256). ವೇಣೂರು (ಈಗಿನ ವೇಣೂರು) ರಾಜಧಾನಿಯಾಗಿ ಉಳ್ಳ ಅವರು ಆ ಊರಲ್ಲಿನ ಮಹಾಲಿಂಗೇಶ್ವರ ದೇವರ ಆರಾಧಕರು. ಆದರೆ ಅವರು ಜೈನ ಸಂಪ್ರದಾಯಸ್ಥರು. 1604 ರ ಒಂದು ಶಾಸನದಲ್ಲಿ ತಾವು "ಚಾಮುಂಡಾನ್ವಯ" ದವರೆಂದು ಅಜಿಲರು ಹೇಳಿಕೊಂಡಿರುವರು.

ಕ್ರಿ.ಶ. 1118 ರ ಒಂದು ಶಾಸನದಲ್ಲಿನ ಸೇವ್ಯಗೆಲ್ಲರಸನು ಈ ವಂಶದ ದೊರೆಯಿರಬೇಕು (S.I.I. VII, 258). ಆ ಮೇಲೆ ಈ ವಂಶದಲ್ಲಿ ಕಂಡು ಬರುವ ಶಾಸನೋಲ್ಲಿಖಿತ ದೊರೆ 1489 ರಲ್ಲಿ ಆಳುತ್ತಿದ್ದ

ಕಾಮಾದೇವಿಯ ಮಗ ಸೋಮನಾಥ (Ibid, 257). ಸೋಮನಾಥನಿಗೂ ಮೊದಲು ಕಾಮಾದೇವಿ ಆಳುತ್ತಿದ್ದಿರಬೇಕು. ಮುಂದೆ 1537 ರಲ್ಲಿ ಸಾಳ್ವ ಪಾಂಡ್ಯಪ್ಪರಸನು ಆಳುತ್ತಿದ್ದು, ಇವನ ಅನಂತರ ಈತನ ಸೋದರಳಿಯನಾಗಿರಬಹುದಾದ ಸೋಮನಾಥನು ಆಳಿರಬೇಕು (I bid, 256). 1604 ರ ತಿಮ್ಮಣ್ಣಾಜಿಲನ ಶಾಸನದಂತೆ, ಆತ ಅವನ ಹಿಂದಣ ದೊರೆ ರಾಯಕುವರನ ಸೋದರಳಿಯ ಹಾಗೂ ಜಾಮಾತ (Ibid, 250, 251). ತಿಮ್ಮಣ್ಣಾಜಿಲನಿಗೆ ಮೊದಲು ಅವನ ಅಣ್ಣನಾದ ಪಾಂಡ್ಯಪ್ಪರಸ ನೆಂಬಾತ ಆಳಿರಬೇಕೆಂದು ಇದೇ ಶಾಸನ ಸೂಚಿಸುತ್ತದೆ. ಶ್ರೀ ಚಾರುಕೀರ್ತಿ ದೇವರುಗಳ ಪ್ರಿಯಶಿಷ್ಯನೂ "ದಾನ ರಾಧೇಯನೂ ಆದ ತಿಮ್ಮಣ್ಣಾಜಿಲನು 1604 ರಲ್ಲಿ ವೇಣೂರಿನಲ್ಲಿನ ಗೋಮಟೇಶ್ವರನ ಪ್ರತಿಮೆ ಯನ್ನು ಪ್ರತಿಷ್ಠಾಪಿಸಿದನು.

ಈತನ ಅನಂತರ ಮಧುರಕ್ಕದೇವಿ ಎಂಬ ರಾಣಿಯು ವೇಣೂರಿನ ಶಾಂತಿನಾಥ ಬಸದಿಗೆ ದಾನಮಾಡಿದ ಒಂದು 1621 ರ ಶಾಸನವೂ ಇದೆ (S.I.I., VII, 255). ಪೋರ್ಚುಗೀಸ್ ದಾಖಲೆಗಳಂತೆ, 1629 ರಲ್ಲಿ ಕೆಳದಿ ದೊರೆಗಳ ವಿರುದ್ಧ ಬಂಡೆದ್ದ ತುಳುನಾಡಿನ ರಾಜರಲ್ಲಿ ಅಜಿಲ ದೊರೆಯೊಬ್ಬನೂ ಇದ್ದನೆಂದು ಗೊತ್ತಾಗುತ್ತದೆ (IHRC, XI, p.113). 1621 ರನಂತರ ಅಜಿಲರ ಕುರಿತು ಶಾಸನಗಳಾವುವೂ ಇಲ್ಲ. ಕೆಳದಿ ನಾಯಕರು ಈ ಮನೆತನವನ್ನು ಹತ್ತಿಕ್ಕಿದರೆಂಬುದು ಖಚಿತ. ತಮ್ಮ ಕೊನೆಗಾಲದಲ್ಲಿ ಈ ಮನೆತನದ ದೊರೆಗಳು ಅಳದಂಗಡಿಯಿಂದ ಆಳುತ್ತಿದ್ದರು. ಸು. 1774ರಲ್ಲಿ ಹೈದರ್ ಅಲಿ ಈ ರಾಜ ವಂಶದ ಆಳಿಕೆಯನ್ನು ಕೊನೆಗೊಳಿಸಿದ.

ಅಜಿಲರ ರಾಜ್ಯವನ್ನು "ಪೂಂಜಳ್ಕೆ" ಎಂದು ಕರೆಯುತ್ತಿದ್ದರು. ಅವರ ರಾಜಧಾನಿ ಏಣೂರಲ್ಲಿ ಸ್ಥಳೀಯ ವ್ಯವಹಾರಗಳನ್ನು ನೋಡಿಕೊಳ್ಳಲು 16 ಸೆಟ್ಟಿಕಾರರು ಮತ್ತು ಸುಮಾರು ಮೂನ್ನೂರಕ್ಕೂ ಹೆಚ್ಚು ಯೆಳಮೆಗಳು (ಬಹುಶಃ ಬ್ರಾಹ್ಮಣ ಮಹಾಜನಗಳು—ಜೈನ ಪುರೋಹಿತರೂ ಇರಬಹುದು) ಇದ್ದು ದಾಗಿ ಮೂರು ಶಾಸನಗಳು ತಿಳಿಸುತ್ತವೆ (S.I.I., VII, 256 ; 227 ; 255).

ವಿಜಯನಗರದ ಕಾಲದಲ್ಲಿ ಮಂಗಳೂರು ರಾಜ್ಯವನ್ನು ಆಳುತ್ತಿದ್ದ ವಿಜಯನಗರದ ಮಂಡಲಾಧಿ ಕಾರಿಯ ಸಲಹೆಗಾಗಿ ಬಂಗರು, ಚೌಟರು ಮತ್ತು ಅಜಿಲರಿಂದೊಡಗೂಡಿದ ಒಂದು ಸಮುದಾಯವಿತ್ತೆಂದು 1419ರ ಒಂದು ಶಾಸನ ಹೇಳುತ್ತದೆ (S.I.I., VII, 182). ಈ ಮೂರು ರಾಜಮನೆತನಗಳು ವಿಜಯನಗರದ ದೊರೆಗಳಿಗೆ ಅಧೀನವಾಗಿದ್ದವೆಂಬುದು ಇದರಿಂದ ಗೊತ್ತಾಗುತ್ತದೆ.

ಜೈನರಾಗಿದ್ದ ತುಳುನಾಡಿನ ಈ ರಾಜವಂಶಗಳು ತಮ್ಮ ಕುಲದೇವರಾಗಿ ಶಿವನನ್ನೂ ಆರಾಧಿಸುತ್ತಿದ್ದ ರೆಂಬ ವಿಚಾರ ಗಮನಿಸಬೇಕು.

**ಚೌಟರು**

ಚೌಟರು ಮೂಲತ : ಚುಟುವಂಶಕ್ಕೆ ಸಂಬಂಧಿಸಿದವರೇ ಅಥವಾ ಗುಜರಾತಿನಲ್ಲಿ ಆಳುತ್ತಿದ್ದ ರಜಪೂತ ಚಾವುಡ ಮನೆತನದವರೇ ಎಂಬುದು ಪರಿಶೀಲನೀಯವಾದ ವಿಷಯ. ಮೂಡಬಿದರೆಯ ಬಳಿಯ ಪುತ್ತಿಗೆಯ ಸೋಮನಾಥನ ಆರಾಧಕರಾದ ಈ ಜೈನ ರಾಜವಂಶದ ಬಗ್ಗೆ ದೊರಕುವ ಮೊದಲ ಶಾಸನಾಧಾರ 1390ರದು. ಇವರ ರಾಜಧಾನಿ ಪುತ್ತಿಗೆ. ಅವರ ರಾಜ್ಯವನ್ನು ''ಶಾಲಿಕೆನಾಡು'' ಎನ್ನಲಾಗುತ್ತಿತ್ತು.

ಮೂಡಬಿದಿರೆ ಶಾಸನದಲ್ಲಿ ವಿಜಯನಗರದ ಮಂಡಲಾಧಿಕಾರಿ ಮಂಗಪ್ಪದಣ್ಣಾಯಕನು ವಿಕ್ರ ಚೌಟರನ್ನು 1390ರಲ್ಲಿ ಸೋಲಿಸಿದ ವಿಚಾರ ಗೊತ್ತಾಗುತ್ತದೆ (S.I.I. VII, 229). ಉತ್ತರ ಕನ್ನಡ ಜಿಲ್ಲೆಯ 1398ರ ಒಂದು ಶಾಸನದಂತೆ, ಮಂಗಪ್ಪರಸನು ಚೌಟರನ್ನು ಯುದ್ಧದಲ್ಲಿ ಕೊಂದುದಾಗಿ ತಿಳಿಯುತ್ತದೆ (''ಚೌಟರ ಕೆಡಹಿ'' K.I. 35 of 1939-40). ಆದರೆ ಇದು 1390ರ ಯುದ್ಧ ವನ್ನು ಕುರಿತೇ ಹೇಳಿದ ಮಾತಾಗಿರಬೇಕು. ಮೂಡಬಿದಿರೆಯ 'ಸಾವಿರ ಕಂಬದ ಬಸದಿ' ಎಂದು ಪರಿಚಿತವಾದ ''ತ್ರಿಭುವನ ತಿಲಕ ಚೂಡಾಮಣಿ''ಯ ರಚನೆಗೆ ಸಂಬಂಧಿಸಿದ 1429ರ ಶಾಸನದಲ್ಲಿ ''ಶಾಲಿಕೆ ನಾಡು'' ಚಲುಟರು ಹಾಗೂ ಪ್ರಮುಖ ಆರುವರು ಬಲ್ಲಾಳರ ಉಲ್ಲೇಖವಿದೆ (S.I.I., VII, 196). ಆದರೆ ಇಲ್ಲಿ ಚೌಟದೊರೆಯ ಹೆಸರಿಲ್ಲ. ಆದರೆ 1431ರ ಒಂದು ಶಾಸನದಲ್ಲಿ ಚೌಟದೊರೆ ಸಾಂತಯ ಎಂಬಾತನು ಬಂಗರಸ ಪಾಂಡ್ಯಪ್ಪನ ಜೊತೆ ಹೆಸರಿಸಲ್ಪಟ್ಟಿದ್ದಾನೆ (ARSIE, 344 of 1931). ಈತನೇ ವಿಕ್ರಚೌಟನ ಉತ್ತರಾಧಿಕಾರಿ ಇರಬಹುದು.

ಇದಾದ ಮೇಲೆ 1434ರ ಶಾಸನ ಒಂದರಲ್ಲಿ ಜೋಗಿ ಒಡೆಯ ಚೌಟನು ನಾಥ ಪಂಥದವನಿರ ಬಹುದಾದ ಸಂನ್ಯಾಸಿಯೊಬ್ಬನಿಗೆ ದಾನನೀಡಿದ ಪ್ರಸ್ತಾಪವಿದೆ (Ibid, 476 of 1929). ಅಲ್ಲಪ್ಪ ಶೇಖನೆಂಬ ಪುತ್ತಿಗೆಯ ದೊರೆ ಪೊಳಲಿ ದೇವಿಗೆ ಮಾಡಿದ ದಾನಶಾಸನವೊಂದು 1465ರಲ್ಲಿ ಕಾಣಸಿಗುತ್ತದೆ (S.I.I., IX, pt II 460). 1507ರಲ್ಲಿ ತಿರುಮಲರಾಯನೆಂಬ ದೊರೆ ಅದೇ ಪೊಳಲಿಯ ದುರ್ಗೆಗೆ ಮಾಡಿದ ದಾನಶಾಸನವಿದೆ (ARSIE, 372 of 1928). ಈ ತಿರುಮಲ ರಾಯನಿಗೂ ಕಾರ್ಕಳದ ಭೈರರಸರಿಗೂ ದ್ವೇಷವಿದ್ದಂತೆ ತೋರುತ್ತದೆ. ಯೆಲ್ಲೂರು ಮತ್ತು ಯೆರುಮಾಳಿನ ಹೆಗ್ಗಡೆಗಳು ಕಾರ್ಕಳದ ದೊರೆಗಳ ವಿರುದ್ಧ ಚೌಟರಸನಿಗೆ ನೆರವಾಗಲು ಒಪ್ಪಿದ 1512ರ ತಾಮ್ರಶಾಸನವೊಂದು ಪುತ್ತಿಗೆ ದೇವಾಲಯದಲ್ಲಿದೆ (S.I.I. VII, 228). ಅನಂತರ ತುಳುವರಸ ಚೌಟನೆಂಬಾತನು ಪಟ್ಟಕ್ಕೆ ಬಂದನೆಂದು 1528ರ ಇಂಥದೇ ಒಂದು ಸೇನಾಮೈತ್ರಿ ಶಾಸನ ತಿಳಿಸುತ್ತದೆ (ARSIE 336 of 1931). ಮುಂದೆ 1843ರಲ್ಲಿ ಎರಡನೆ ತಿರುಮಲರಾಯನೆಂಬ ದೊರೆಯ ಕಾಲದಲ್ಲಿ ಚೌಟ ಮತ್ತು ಸಾಂತರಸರ ನಡುವೆ ಇದ್ದ ದ್ವೇಷ ಕೊನೆಗೊಂಡು ಸ್ನೇಹ ನೆಲೆಗೊಂಡುದನ್ನು ಎರಡು ಶಾಸನಗಳು ತಿಳಿಸುತ್ತವೆ (Ibid A 4 : 5, of 1922). 1571ರಲ್ಲಿ ಲೋಕದೇವಿ ಎಂಬ ರಾಣಿ ಆಳುತ್ತಿದ್ದಳು (S.I.I. VII, 210). ಅವಳನಂತರ ಚಿಕ್ಕರಾಯನ ಆಳಿಕೆ ನಡೆಯಿತು (S.I.I., VII, 226 ; 227). ಈತನ ಶಾಸನಗಳು 1578ರವು.

ಇದೇ ಕಾಲದಲ್ಲಿ ಚೌಟರಲ್ಲಿ ಎರಡು ಶಾಖೆಗಳಾಗಿ ಉಳ್ಳಾಲದಿಂದ ಒಂದು ಶಾಖೆ ಆಳುತ್ತಿತ್ತು. ಈ ಮನೆತನದ ಇಬ್ಬರು ರಾಣಿಯರು ಹೆಸರುವಾಸಿಯಾದವರು. ಪುತ್ತಿಗೆಯ ಶಾಖೆ ಹಾಗೆಯೇ ಮುಂದು ವರಿಯಿತು. 17ನೆ ಶತಮಾನದ ಮಧ್ಯಭಾಗದಲ್ಲಿ ಈ ಶಾಖೆಯ ದೊರೆಗಳು ಮೂಡಬಿದರೆಯಲ್ಲಿ ಒಂದು ಅರಮನೆಯನ್ನು ಕಟ್ಟಿಸಿದರು. 'ನವನಾರೀ ಕುಂಜರ', 'ಸಪ್ತನಾರೀ ತುರಗ' ಎಂದು ಪ್ರಸಿದ್ಧವಾದ ಸುಂದರ ಮರದ ಕೆತ್ತನೆಯುಳ್ಳ ಕಂಬಗಳು ಈ ಸಾಮಾನ್ಯ ಕಟ್ಟಡದಲ್ಲಿನ ಅಸಾಮಾನ್ಯ ಅಂಶಗಳು. ಶಾಸನ ಗಳಲ್ಲಿ ಚನ್ನಮ್ಮದೇವಿ ಎಂಬ ರಾಣಿಯ ಉಲ್ಲೇಖ ಕಾಣಬರುತ್ತದೆ. ಈಕೆಯ ತಾರೀಖು ಗೊತ್ತು ಮಾಡುವುದು ಕಷ್ಟ (Sewell List, No. 88). ಇದೇ ರೀತಿ ಅದಮಾರು ಮಠದ ಕಾಗದ ಪತ್ರಗಳಲ್ಲಿ ಅಂಬಿಕಾದೇವಿ ಎಂಬ ಚೌಟ ರಾಣಿಯೊಬ್ಬಳ ದಾನಪತ್ರ ಒಂದಿದೆ. ಈಕೆಯ ಕಾಲ ತಿಳಿಯು ವುದೂ ಕಷ್ಟ. ಕೆಳದಿಯ ಆಡಳಿತದ ಕಾಲದಲ್ಲಿ ಈ ವಂಶ ದುರ್ಬಲವಾಯಿತೆಂಬುದು ಕೆಳದಿಯ ಇತಿಹಾಸಕ್ಕೆ ಸಂಬಂಧಿಸಿದ ಮೂಲಾಧಾರಗಳಲ್ಲಿ ಸ್ಪಷ್ಟವಾಗುತ್ತದೆ.

ಉಳ್ಳಾಲದಲ್ಲಿ 1556ರ ಹೊತ್ತಿಗೇ ಒಬ್ಬ ರಾಣಿಯಿದ್ದುದು ಪೋರ್ಚುಗೀಸ್ ದಾಖಲೆಗಳಿಂದ

ತಿಳಿಯುತ್ತದೆ (Faria Y Sousa, Asia Portuguesa II, P. 435-8). ಪೋರ್ಚುಗೀಸರು ಅವಳಿಂದ ಕಪ್ಪ ಸಂಗ್ರಹಿಸಿದರೆಂದೂ 'ಬುಕಾದೇವಿ ಚೌಂಟರ್' ಎಂದು ಆಕೆಯ ಹೆಸರೆಂದೂ ಈ ಮೂಲ ತಿಳಿಸುತ್ತದೆ. 1567ರಲ್ಲಿ ಆಕೆ ಪೋರ್ಚುಗೀಸರಿಗೆ ಕಪ್ಪಕೊಡುವುದನ್ನು ನಿಲ್ಲಿಸಿದಳೆಂದೂ ಪೋರ್ಚುಗೀಸರನ್ನು ಯುದ್ಧವೊಂದರಲ್ಲಿ ಸೋಲಿಸಿದಳೆಂದೂ ಮುಂದೆ ಪೋರ್ಚುಗೀಸರು ಆಕೆಯನ್ನು ಸೋಲಿಸಿ ಮಂಗಳೂರಲ್ಲಿ ಒಂದು ಕೋಟೆ ಮತ್ತು ಇಗರ್ಜಿಯನ್ನು ಕಟ್ಟಿದರೆಂದೂ ಇದೇ ದಾಖಲೆಗಳು ಹೇಳುತ್ತವೆ. ಇದಾದ ಮೇಲೆ ಪೋರ್ಚುಗೀಸರಿಗೂ ಅವಳಿಗೂ ಒಪ್ಪಂದವಾಯಿತು. ಈಕೆಗೂ ಬಂಗರಾಜನಿಗೂ ಇದ್ದ ಕಲಹದಿಂದಾಗಿ ಪೋರ್ಚುಗೀಸರ ಮಂಗಳೂರಿನ ವ್ಯಾಪಾರ ಕೆಡುವಂತಾಗಲು ಪೋರ್ಚುಗೀಸರ ಗೋವೆಯ ಅಧಿಕಾರಿ ಅತ್ಯೆದೆ ಎಂಬಾತ ಇವರಲ್ಲಿ ರಾಜಿಮಾಡಿ, ಈ ಇಬ್ಬರ ನಡುವೆ ವಿವಾಹ ನಡೆಯುವಂತೆ ಏರ್ಪಡಿಸಿದನು (ಸು. 1569). ಆದರೆ ಈಕೆ ಮುಂದೆ ಪೋರ್ಚುಗೀಸರ ಜೊತೆ ಸ್ನೇಹವನ್ನು ಉಳಿಸಿಕೊಳ್ಳಲಿಲ್ಲ, ಇವಳನ್ನು ವರಿಸಿದ ದೊರೆ ಕಾಮರಾಯನಿರಬೇಕೆಂದು ಮೊದಲೇ ಊಹಿಸಿದೆ.

1623ರಲ್ಲಿ ಮಂಗಳೂರಿಗೆ ಬಂದಿದ್ದ ಇಟಾಲಿಯನ್ ಪ್ರವಾಸಿ ಪಿತ್ರೊ ಇದೇ ಉಳ್ಳಾಲದ ರಾಣಿಯ ವಿಚಾರ ಹೇಳುತ್ತಾನೆ. ತಾನು ಈ ರಾಣಿಯನ್ನು ಭೇಟಿಯಾದಾಗ ಅವಳ ವಯಸ್ಸು 40 ವರ್ಷ ಎಂದು ಅವನು ಹೇಳುತ್ತಾನೆ—ಎಂದಾಗ ಈಕೆ, 1556ರಿಂದ ಇದ್ದ ಅಬ್ಬಕ್ಕಳಲ್ಲ. ಈಕೆ ಹಿಂದಿದ್ದ ಅಬ್ಬಕ್ಕಳ ಮಗಳಾಗಿರಬೇಕು.ಇವಳನ್ನು ಕಿರಿಯ ಅಬ್ಬಕ್ಕ ಎನ್ನಬಹುದು. ಈಕೆಯೂ ಬಂಗರಾಜನನ್ನು ವರಿಸಿದ್ದಳೆಂದು ಆತ ಹೇಳಿದ್ದಾನೆ. ಹೀಗಾಗಿ ಈಕೆ ವರಿಸಿದ್ದ ಬಂಗ ದೊರೆ ಕಾಮರಾಯನ ಸೋದರಳಿಯನಾಗಿದ್ದಿರಬಹುದಾದ ವೀರನರಸಿಂಹ ಲಕ್ಷ್ಮಪ್ಪರಸನೆಂಬಾತ. ಕಾಮರಾಯ ಮತ್ತು ಹಿರಿಯ ಅಬ್ಬಕ್ಕಳ ಮಗಳಾದ ಈ ಕಿರಿಯ ಅಬ್ಬಕ್ಕ ಕಾಮರಾಯನ ಸೋದರಳಿಯನನ್ನು ವರಿಸಿದ್ದಳೆಂಬ ಊಹೆ ಸಮರ್ಥನೀಯವಾದುದೇ. ಮುಂದೆ ಕಿರಿಯ ಅಬ್ಬಕ್ಕಳಿಗೂ ಬಂಗರಾಜನಿಗೂ ವೈಮನಸ್ಯವಾಗಿ ಆಕೆ ಕೆಳದಿ ವೆಂಕಟಪ್ಪನ, ಮತ್ತು ಬಂಗನು ಪೋರ್ಚುಗೀಸರ ನೆರವು ಕೇಳಿದರು. ತನ್ನ ತಾಯಿ ಹಿಂದೆ ಪೋರ್ಚುಗೀಸರನ್ನು ಸೋಲಿಸಿದ್ದಂತೆ, ಈಕೆಯು ಅವರನ್ನು ಸೋಲಿಸಿದ್ದಾಗಿ ಪಿತ್ರೊ ಹೇಳಿದ್ದಾನೆ. ಈ ರೀತಿ ಈಕೆ ಪೋರ್ಚುಗೀಸರನ್ನು ಸೋಲಿಸಿದ್ದು 1618ರಲ್ಲೆಂದು ಡ್ಯಾನವರ್ಸ್ ಕೂಡಾ ಹೇಳಿದ್ದಾರೆ (Danvers : The Portuguese in India II, 199 ; Dalle Valle, Pietro, II, 307–19). ಈ ಅಸಾಧಾರಣ ಧೈರ್ಯಶಾಲಿನಿಯಾದ ರಾಣಿ ಕರ್ಣಾಟಕದ ವೀರ ಮಹಿಳೆಯರ ಸಾಲಿಗೆ ಸೇರಲು ಯೋಗ್ಯಳಾದವಳು. ಪಿತ್ರೊ ಮನಃಪೂರ್ವಕವಾಗಿ ಆಕೆಯನ್ನು ಹೊಗಳಿದ್ದಾನೆ.

ಉಳ್ಳಾಲದ ಈ ಶಾಖೆಯ ವಿಚಾರ, ಇನ್ನಾವ ವಿವರಗಳೂ ಮುಂದೆ ತಿಳಿಯವು.

**ಬೀಳಗಿಯ ಒಡೆಯರು,**

ಸಿರಸಿ ತಾಲೂಕಿನ ಬೀಳಗಿಯಲ್ಲಿ ಒಂದು ರಾಜಮನೆತನವು ಆಳುತ್ತಿತ್ತು. ''ಬೀಳಗಿಯ ಅರಸುಗಳ ವಂಶಾವಳಿ" ಎಂಬ ಅನಾಮಧೇಯ ವ್ಯಕ್ತಿಯೊಬ್ಬನು ಬರೆದ ಒಂದು ಚಂಪೂಕಾವ್ಯ (ಸಂ. ಬಿ. ರಾಮರಾವ್, ಮದ್ರಾಸ್, 1933) ಹಾಗೂ ಹಲವಾರು ಶಾಸನಗಳ ಆಧಾರದಿಂದ ಈ ವಂಶದ ಇತಿಹಾಸವನ್ನು ರೂಪಿಸುವುದು ಸಾಧ್ಯವಾಗಿದೆ.

ಈ ವಂಶದ ದೊರೆಗಳು ಮೂಲತಃ ಐಸೂರಿನವರು (ಬೀಳಗಿಯಿಂದ ನಾಲ್ಕು ಮೈಲು ದೂರದ ಹೊಸೂರು). ಮೇಲಣ ಕಾವ್ಯದಲ್ಲಿ ತಿಳಿಸುವಂತೆ ಈ ವಂಶದ ಮೊದಲ ಪರಿಚಿತ ದೊರೆ ಆಂಡಣ. ಮುಂದೆ ಅವನ ಮಗ ಪಾರ್ಶ್ವ, ಅನಂತರ ನರಸಿಂಹ ಆಳಿದರು (ವಂಶಾವಳಿ, ಪು 1). ಈ ನರಸಿಂಹ

ವಿಜಯನಗರದ ಕೃಷ್ಣದೇವನ ಮಾಂಡಳಿಕ. ಈತ ಬೀಳಗಿಯಿಂದ ಆಳಲು ಆರಂಭಿಸಿದ (ವಾದಿ ವಿದ್ಯಾನಂದನ ಶಾಸನ, (E.C., VIII, Nr 46). ವಂಶಾವಳಿಯಲ್ಲಿ ಹೇಳಿರುವಂತೆ ನರಸಿಂಹನಿಗೆ ಘಂಟೆ ಮತ್ತು ಮುಂಡಣ ಎಂಬ ಮಕ್ಕಳು. ಇವರು ಜತೆಗೂಡಿ ಆಳುತ್ತ ಬೀಳಗಿಯಲ್ಲಿ ಕೋಟೆಯನ್ನು ಕಟ್ಟಿದರಲ್ಲದೆ ಬೇಡಕಣಿ. ಕುಣುಚಿ, ಕೊಂಡಲಿ, ಮುಂಗದೂರುಗಳಲ್ಲಿನ ಕೋಟೆಗಳನ್ನು ಗೆದ್ದುಕೊಂಡರು (ಪು. 2).

ಇಲ್ಲಿಂದ ಮುಂದೆ ವಂಶಾವಳಿಯಲ್ಲಿನ ಕಥನಕ್ಕೂ ಶಾಸನಗಳಲ್ಲಿನ ಆಧಾರಕ್ಕೂ ಕೊಂಚ ವ್ಯತ್ಯಾಸವಿದೆ. ವಂಶಾವಳಿಯಲ್ಲಿ ಹೇಳಿರುವಂತೆ ಘಂಟೆ ಒಡೆಯನಿಗೆ ತಿಮ್ಮಣ, ನರಸ ಎಂಬ ಪುತ್ರರು. ನರಸನಿಗೆ ವೀರಪ್ಪ ಎಂಬ ಮಗ, ವೀರಪ್ಪನ ಮಗ ರಂಗರಾಜ. ರಂಗರಾಜನ ಪುತ್ರ ಇಮ್ಮಡಿ ಘಂಟೆ ಒಡೆಯ (ವಂಶಾವಳಿ, ಪು. 2-3). ಶಾಸನಗಳಲ್ಲಿ ಮೇಲಣ ನರಸಿಂಹನನಂತರ ಉಲ್ಲಿಖಿತನಾಗಿರುವ ಮೊದಲ ದೊರೆ, 1570ರಲ್ಲಿ ಆಳುತ್ತಿದ್ದ ವೀರಪ್ಪ ಒಡೆಯ ಮತ್ತು ವೀರಾಂಬೆಯ ಮಗನಾದ ನರಸಿಂಹ (ಮೇಲೆ ಹೇಳಿದ ಕೃಷ್ಣದೇವರಾಯನ ಸಮಕಾಲೀನ ನರಸಿಂಹ ಮುಂಡಣನ ಮಗ; ಈತ ಬೇರೆ ದೊರೆ). 1570ರ ಈ ಶಾಸನದಂತೆ ವೀರಾಂಬಿಕೆಯು ತನ್ನ ಪತಿಯ ಪುಣ್ಯಾರ್ಥವಾಗಿ ಬೀಳಗಿಯಲ್ಲಿ ವಿರೂಪಾಕ್ಷ ಮಂದಿರವನ್ನು ಸ್ಥಾಪಿಸಿದಳು (K.R.I. Annual Report 87 of 1939-40). ಗೆರಸೊಪ್ಪೆಯ ಭೈರಾದೇವಿಯ 1573ರ ಒಂದು ಶಾಸನವೂ ಈ ನರಸಿಂಹನನ್ನು ಹೆಸರಿಸಿದೆ (K.R.I. Disc. List, 67 of 1941–42).

ಆದರೆ ಇಮ್ಮಡಿ ಘಂಟೆ ಒಡೆಯನ ಹಿಂದಣ ದೊರೆಗಳ ವಿಚಾರ ಶಾಸನಗಳು ಒದಗಿಸುವ ವರ್ತಮಾನವು ವಂಶಾವಳಿಗಿಂತ ಬೇರೆಯಾದದ್ದು. ಎರಡು ಶಾಸನಗಳು ಈ ಇಮ್ಮಡಿ ಘಂಟೆ ಒಡೆಯನನ್ನು ರಂಗರಾಜನ ಮಗನೆಂದು ಹೇಳಿವೆ. ರಂಗರಾಜನು ಬೀಳಗಿಯ ರತ್ನತ್ರಯ ಚೈತ್ಯಾಲಯವನ್ನು ಕಟ್ಟಿಸಿದ್ದನೆಂದು ಒಂದು ಶಾಸನ ಹೇಳಿದರೆ (K. R. I. Annual Report, 88 of 1939–40), 1591ರ ಒಂದು ಶಾಸನವು ಇದೇ ವಿಚಾರ ತಿಳಿಸುವುದರ ಜೊತೆಗೆ ಘಂಟೇಂದ್ರನು ಭಟ್ಟಾಕಳಂಕ ('ಶಬ್ದಾನುಶಾಸನಂ' ಸಂಸ್ಕೃತ ಗ್ರಂಥದ ಕರ್ತೃ—ಇದು ಕನ್ನಡ ವ್ಯಾಕರಣದ ಕುರಿತಾಗಿರುವ ಗ್ರಂಥ) ಎಂಬ ಜೈನಮುನಿಯನ್ನು ಆದರಿಸಿದನೆಂದು ಹೇಳುತ್ತದೆ. (Ibid 89 of 1939–40). ಒಟ್ಟಿನಲ್ಲಿ ವೀರಪ್ಪೊಡೆಯನಿಗೆ ರಂಗರಾಜ ಮತ್ತು ನರಸಿಂಹ (ನರಸಪ್ಪ ಒಡೆಯ) ಎಂಬ ಇಬ್ಬರು ಪುತ್ರರಿದ್ದರೆಂದು ಭಾವಿಸಬಹುದು. ಇಲ್ಲವೇ ರಂಗರಾಜನಿಗೇ ನರಸ ಒಡೆಯನೆಂಬ ಹೆಸರಿತ್ತೆಂದೂ ಊಹಿಸಲು ಅವಕಾಶವಿದೆ.

ಮೇಲೆ ಹೇಳಿದ ಇಮ್ಮಡಿ ಘಂಟೆ ಒಡೆಯನು ವೆಂಕಟಪತಿರಾಯ (ವಿಜಯನಗರದ ಇಮ್ಮಡಿ ವೆಂಕಟ 1586-1614)ನ ಮಾಂಡಳಿಕನೆಂದು ಶಾಸನಗಳು ತಿಳಿಸುತ್ತವೆ. ಸೋದೆಯ (ಇಮ್ಮಡಿ) ಅರಸಪ್ಪ ನಾಯಕನ ಪುತ್ರಿ ವೀರಾಂಬೆಯನ್ನು ಈತ ವರಿಸಿದ್ದ (ವಂ., ಪು. 22). ಇವರಿಗೆ ತಮ್ಮರಸನೆಂಬ ಮಗನು ಹುಟ್ಟಿದನೆಂದೂ ತಮ್ಮರಸನಿಗೆ ಮುಮ್ಮಡಿ ಘಂಟೇಂದ್ರನೆಂಬ ಮಗನಾದನೆಂದೂ ವಂಶಾವಳಿ ಹೇಳುತ್ತದೆ. (ವಂ., ಪು. 22).

ಆದರೆ ಶಾಸನಗಳು ತಿಳಿಸುವಂತೆ ಮುಮ್ಮಡಿ ಘಂಟೇಂದ್ರ ಮತ್ತು ಅವನ ಮಗ ನಾಲ್ಕನೆಯ 'ಮೌನ' ಘಂಟೇಂದ್ರ ಇವರ ವಂಶಾವಳಿ ಹೀಗಿದೆ : 1651 ರಲ್ಲಿ ಕಟ್ಟಲಾದ ಸಿದ್ಧಾಪುರದ ಸಿದ್ಧಿವಿನಾಯಕ ದೇವಾಲಯದ ರಚಯಿತೆ ಜಯಾಂಬೆ 1651 ರಲ್ಲಿ ಆಳುತ್ತಿದ್ದ ಮೌನ ಘಂಟೇಂದ್ರನ ತಾಯಿ. ಈಕೆಯ ಪತಿ ಮುಮ್ಮಡಿ ಘಂಟೇಂದ್ರ. ಈ ಮುಮ್ಮಡಿ ಘಂಟೇಂದ್ರನ ತಂದೆ ತಮ್ಮಯ. ತಮ್ಮಯನು ದೇವರಾಜನ ಮಗ, ದೇವರಾಜನ ತಂದೆ ತಿಮ್ಮಭೂಪ (Karnatak Inscriptions V. 73).

1666 ರ ಒಂದು ಶಾಸನದಲ್ಲಿ ಕೂಡ ದೇವಪ್ಪ, ತಮ್ಮಪ್ಪ ಹಾಗೂ (ಮೂರನೆಯ) ಘಂಟೆ ಒಡೆಯರಲ್ಲಿ ಮೇಲೆ ಸೂಚಿಸಿದ ಸಂಬಂಧವನ್ನೇ ಹೇಳಿದೆ (M.A.R. 1943, p. 122). 1643 ರ ಇನ್ನೊಂದು ಶಾಸನದಲ್ಲಿ ಕೂಡ ನಾಲ್ಕನೆಯ ಘಂಟೆ ಒಡೆಯನನ್ನು "ತಮ್ಮಪ್ಪ ವಡೇರ ಪೌತ್ರ" ಹಾಗೂ ಘಂಟೆವಡೇರ ಪುತ್ರ" ಎಂದು ಹೇಳಿದೆ (M.A.R., 1923, p. 104). ಈ ನಾಲ್ಕನೆಯ ಘಂಟೆ ಒಡೆಯನ ಸೋದರಿ ಘಂಟೆಮ್ಮನನ್ನು ಇಕ್ಕೇರಿ ವಂಶದ ಭದ್ರಯ್ಯ ಎಂಬವನಿಗೆ ಮದುವೆಮಾಡಿ ಕೊಡಲಾಗಿತ್ತು.

ಇಮ್ಮಡಿ ಘಂಟೇಂದ್ರನ ಅನಂತರ ಅವನ ಮಕ್ಕಳು ಪಟ್ಟವೇರಲಿಲ್ಲವೆಂದೂ ಅವನ ಮುತ್ತಜ್ಜ ನರಸಪ್ಪಒಡೆಯನ ಹಿರಿಯ ಸೋದರ ತಿಮ್ಮಣ್ಣನ ವಂಶಸ್ಥರಿಗೆ ಪಟ್ಟಪಾಯಿತೆಂದೂ ಇಲ್ಲಿ ತಿಳಿದುಕೊಳ್ಳಬೇಕು ಈ ತಿಮ್ಮಣ್ಣ ಮೊದಲನೆ ನರಸಿಂಹನ ಮೊಮ್ಮಗ; ಮೊದಲನೆ ಘಂಟೆ ಒಡೆಯನ ಮಗ. (ತಿಮ್ಮಣ್ಣನ ಮಗ ದೇವಪ್ಪ. ಮೊಮ್ಮಗ ತಮ್ಮಣ್ಣ ರಾಜ್ಯವಾಳಿರಲಿಕ್ಕಿಲ್ಲ. ಇಮ್ಮಡಿಯ ಘಂಟೆಯ ಅನಂತರ ತಮ್ಮಣ್ಣನ ಮಗ ಮುಮ್ಮಡಿ ಘಂಟೆಗೆ ಪಟ್ಟವಾಯಿತು).

1651 ರ ಮೇಲೆ ಹೇಳಿದ ಶಾಸನದಲ್ಲಿ ನಾಲ್ಕನೆಯ ಘಂಟೇಂದ್ರನನ್ನು (ಶಾಸನವು ಇವನನ್ನು "ಇಮ್ಮಡಿ ಘಂಟೇಂದ್ರ" ಎಂದಿದೆ; ತನ್ನ ತಂದೆಗೂ ಹಿಂದೆ ಆಳಿದ್ದ ರಂಗರಾಜನ ಮಗ ಇಮ್ಮಡಿ ಘಂಟೇಂದ್ರನನ್ನು ಈತ ಎಣಿಕೆಗೆ ತೆಗೆದುಕೊಂಡಿಲ್ಲ.) "ಮಲೆಯ ಹುಲಿ" "ಗಡಿಯಂಕ ಸಿಂಹ" ಮುಂತಾದ ಬಿರುದುಗಳಿಂದ ಕರೆದಿದೆ.

ಇವನನಂತರ ಶಿವಪ್ಪನೆಂಬ ದೊರೆ ಪಟ್ಟಕ್ಕೆ ಬಂದ. 1665 ರ ಶಾಸನದಲ್ಲಿ ಈತನು ಘಂಟೆವಡೇರ ಪೌತ್ರನೆಂದೂ ಘಂಟೆವಡೇರ ಪುತ್ರನೆಂದೂ ಹೇಳಿದೆ (M.A.R., 1923, p. 101-2). 1667 ರ ಇವನ ಇನ್ನೊಂದು ಶಾಸನವೂ ಇದೆ (M.A.R., 1929, P.173). "ವಂಶಾವಳಿ" ಹೇಳುವಂತೆ, ನಾಲ್ಕನೆಯ ಘಂಟೆ ಒಡೆಯನು ಮಕ್ಕಳಿಲ್ಲದೆ ತೀರಿಕೊಳ್ಳಲು, ರಾಜ್ಯವು ಅವನ ಸೋದರಿ ಘಂಟೆಮ್ಮನಿಗೆ ಸಲ್ಲಬೇಕೆಂದು ಕೆಳದಿಯವರು ಒತ್ತಾಯಮಾಡಿದರು. ಆಗ ಬೀಳಗಿಯ ಮನ್ನೆಯರು "ಕ್ಯಾದಗೆ" ಮನೆತನದ ಕುಮಾರನೊಬ್ಬನನ್ನು ತಂದು ಶಿವಪ್ಪನಾಯಕನೆಂಬ ಹೆಸರಿನಲ್ಲಿ ದತ್ತಸ್ವೀಕಾರಗೈಸಿದರು (ವಂ., ಪು. 25–26). ಈ ಶಿವಪ್ಪನು ಮಕ್ಕಳಿಲ್ಲದೆ ತೀರಿಕೊಳ್ಳಲು ಜಂಬೂರ ಮನೆತನದ ಶಿವಪ್ಪ ಎಂಬವನಿಗೆ ಇಮ್ಮಡಿ ಶಿವಪ್ಪ ಎಂಬ ಹೆಸರಿನಿಂದ ಪಟ್ಟವಾಯಿತು (ವಂ., ಪು. 26). ಈತನೂ ಮಕ್ಕಳಿಲ್ಲದೆ ತೀರಿ ಕೊಳ್ಳಲು ಜಂಬೂರ ಮನೆತನದವನೇ ಆದ ಸೋಮಶೇಖರ ಎಂಬವನನ್ನು ಮತ್ತೆ ದತ್ತ ಸ್ವೀಕಾರಮಾಡಿ ಪಟ್ಟಕಟ್ಟಿದರು (ವಂ. ಪು. 27). ಈತನ 1678 ರ ಒಂದು ಶಾಸನವಿದ್ದು ಅಲ್ಲಿ ಅವನನ್ನು ಘಂಟೆ ಒಡೆಯನ ಮೊಮ್ಮಗ ಹಾಗೂ ಶಿವಪ್ಪನಾಯಕನ ಮಗ, ಎಂದು ಕರೆದಿದೆ (M.A.R., 1923, p. 98–9).

ಈ ಸೋಮಶೇಖರನ ಅನಂತರ ಅವನ ಮಗ ಇಮ್ಮಡಿ ಸೋಮಶೇಖರ (ವಂ. ಪು. 29), ಮುಂದೆ ಈತನ ಮಗ ವೀರಭದ್ರ (ಭದ್ರಪ್ಪ) ಇವರು ಆಳಿದರು. ಭದ್ರಪ್ಪನು ಐಸೂರಿನ ವೀರೇಶ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದ (ಪು. 72). ತಾನು ಜೀವಂತನಾಗಿರುವಾಗಲೇ ತನ್ನಪುತ್ರ ಬಸವೇಂದ್ರನಿಗೆ ಆತ ಆಂಗೀರಸ (1692-93) ಸಂವತ್ಸರದಲ್ಲಿ ಪಟ್ಟಕಟ್ಟಿದ (ಪು. 73). ಬಸವನ ಕಾಲದಲ್ಲಿ ತುರುಕರ ದಾಳಿಯಾಯಿತೆಂದೂ ಅವರನ್ನು ಆತನು ಸೋಲಿಸಿದನೆಂದೂ ಕಾವ್ಯವು ತಿಳಿಸುತ್ತದೆ (ಪು. 77; 80). ಬಹುಶಃ ಮೊಗಲರು ಬೀಳಗಿಯ ಮೇಲೆ ದಂಡೆತ್ತಿ ಬಂದಿರಬೇಕು. ಹದಿನೇಳನೆಯ ಶತಮಾನದ ಕೊನೆಗೆ ಬೀಳಗಿ ಸಂಸ್ಥಾನ ನಾಶವಾಗಿರಬೇಕು. 'ವಂಶಾವಳಿ' ಕಾವ್ಯವು ಬಸವೇಂದ್ರನ ಪರಾಕ್ರಮದ ವರ್ಣನೆ ಮಾಡಿ ಅವನನ್ನು "ತುರುಕರ ಸೈನ್ಯ ವೈಭಡಕ" ಎಂದು ವರ್ಣಿಸುತ್ತ ಕೊನೆಗೊಂಡಿದೆ.

ಆರಂಭದಲ್ಲಿ ಜೈನರಾಗಿದ್ದ ಬೀಳಗಿಯ ದೊರೆಗಳು ಬಹುಶಃ ಮೊದಲನೆಯ ಶಿವಪ್ಪನಾಯಕನ ಅನಂತರ ವೀರಶೈವ ಧರ್ಮ ಸ್ವೀಕರಿಸಿರಬೇಕೆಂದು ತೋರುತ್ತದೆ. ಇವರದು ಕೌಶಿಕ ಗೋತ್ರವಾಗಿತ್ತು (ವಂ. ಪು. 20).

## ಸೋದೆಯ ನಾಯಕರು

ಸುಮಾರು ಹದಿನಾರನೆಯ ಶತಮಾನದ ಆದಿ ಭಾಗದಿಂದ 18ನೆಯ ಶತಮಾನದ ತನಕ ಸಿರಸಿ ತಾಲೂಕಿನ ಸೋದೆ (ಸ್ವಾದಿ, ಸೋಂದಾ) ಯಿಂದ ಆಳಿದ ಸೋದೆ ನಾಯಕರು ಮೂಲತಃ ವಿಜಯನಗರದ ಮಾಂಡಳಿಕರು. ಕೆಲವು ಶಾಸನಗಳು, ಮರಾಠಿಯಲ್ಲಿರುವ ಈ ಮನೆತನದ ಎರಡು ಬಖೈರುಗಳು ಹಾಗೂ ಕೆಲವು ಪತ್ರಗಳು (ಶಿವಚರಿತ್ರಸಾಹಿತ್ಯ, ಖಂಡ III, ಭಾರತ ಇತಿಹಾಸ ಸಂಶೋಧನ ಮಂಡಳ, ಪುಣೆ) ಇವುಗಳ ಆಧಾರದಿಂದ ಅವರ ಇತಿಹಾಸವನ್ನು ರೂಪಿಸುವುದು ಸಾಧ್ಯವಾಗಿದೆ.

ಮರಾಠಿ ಬಖೈರಿನಂತೆ ಸೋದೆಯ ಮೊದಲ ದೊರೆ ವೆಂಕಟಪತಿ ನಾಯಕ. ಈತ ಮೂಲತಃ ಬಂಕಾ ಪುರದಲ್ಲಿ ಇದ್ದಿರಬೇಕು. ಈ ವಂಶದಲ್ಲಿ ಮುಂದೆ ರಾಮಚಂದ್ರ, ವಜ್ರವಡೇರ ಹಾಗೂ ದೇವರಾಜ ಎಂಬ ದೊರೆಗಳು ಅನುಕ್ರಮವಾಗಿ ಆಳಿದರು (ಶಿ.ಚ.ಸಾ., III, ಪು. 100; 104). ದೇವರಾಜನ ಮಕ್ಕಳು ಅರಸಪ್ಪ ನಾಯಕ ಮತ್ತು ಅರಸಾದೇವಿ. ಅರಸಾದೇವಿಯನ್ನು ವಿಜಯನಗರದ ದೊರೆಯೊಬ್ಬನ (ಆಗ ಚಂದ್ರಗಿರಿಯಲ್ಲಿ ಆಳುತ್ತಿದ್ದ ವೆಂಕಟಪತಿ II) ಯ ವಂಶಸ್ಥರಿಗೆ ಮದುವೆಮಾಡಿ ಕೊಡಲಾಯಿತೆಂದು ಮರಾಠಿ ಮೂಲ ತಿಳಿಸುತ್ತದೆ (ವೋ., 100).

1676ರಲ್ಲಿ ಪಶ್ಚಿಮ ಕರಾವಳಿಗೆ ಭೇಟಿನೀಡಿದ ವಿದೇಶೀಯ ಪ್ರವಾಸಿ ಫ್ರಯರ್‌ನ ಹೇಳಿಕೆಯಂತೆ[23] ಸೋದೆಯು ಮೂವತ್ತು ಲಕ್ಷ ವರಹ ('ಪೆಗೋಡ') ಉತ್ಪನ್ನವುಳ್ಳ ಒಂದು ಸಮರ್ಥ ಪಾಳಯ.

ಮೇಲೆ ಹೇಳಿದ ಅರಸಪ್ಪನಾಯಕನ ಮೂರು ಶಾಸನಗಳಿವೆ. 1591ರಲ್ಲಿ ಆತ ತನ್ನತಾಯಿ ಚಂಗಮ್ಮನ ಪುಣ್ಯಾರ್ಥವಾಗಿ ಕೋಡಿಕೊಪ್ಪ (ಶಿವಮೊಗ್ಗ ಜಿಲ್ಲೆ) ಅಗ್ರಹಾರಕ್ಕೆ ಒಂದು ದಾನವನ್ನಿತ್ತ (E.C.VIII, sg. 447). ಇಲ್ಲಿ ಅವನನ್ನು ಇಮ್ಮಡಿ ಅರಸಪ್ಪ ಎಂದು ಕರೆದಿದೆ. 1595ರಲ್ಲಿ ಅಬ್ಬೂರು ಮಠಕ್ಕೆ ಈತನು ನೀಡಿದ ದಾನಶಾಸನದಲ್ಲಿ ವಿಜಯನಗರದ ವೆಂಕಟಪತಿಯನ್ನು ತನ್ನ ಸ್ವಾಮಿಯೆಂದು ಈತ ಕರೆದುಕೊಂಡಿದ್ದಾನೆ (M.A.R. 1925, P 21–2). 1593ರ ಸೋದೆ ತ್ರಿವಿಕ್ರಮ ದೇವರಿಗೆ ಈತ ಒಂದು ಕಾಣಿಕೆ ನೀಡಿದ (K.R.I. Disc. List, P. 31).

ಸೋದೆ ಅರಸಪ್ಪನಾಯಕನು ಮಾಧ್ವ ಸನ್ಯಾಸಿಗಳಾದ ವಾದಿರಾಜ ಸ್ವಾಮಿ (1480–1600)ಗಳ ಶಿಷ್ಯತ್ವ ಸ್ವೀಕರಿಸಿದ್ದನೆಂಬುದನ್ನು ಇಲ್ಲಿ ಹೇಳಬೇಕು. ವಾದಿರಾಜರು ಸೋದೆಯಲ್ಲಿ ಅನೇಕ ಕಾಲವಿದ್ದು ತ್ರಿವಿಕ್ರಮನನ್ನು ಪೂಜಿಸುತ್ತಿದ್ದರು. 1591ರ ಶಾಸನದಲ್ಲಿ ರಾಜನನ್ನು ಇಮ್ಮಡಿ ಅರಸಪ್ಪನೆಂದು ಕರೆದಿದ್ದರೂ ಅವನಿಗಿಂತ ಹಿಂದೆ ಅದೇ ಹೆಸರಿನ ದೊರೆ ಆಳುತ್ತಿದ್ದುದು ಬಖೈರುಗಳಲ್ಲಿ ಕಾಣಿಸದು. ಬಖೈರುಗಳ ಆ ಹೆಸರಿನ ಇಬ್ಬರು ದೊರೆಗಳನ್ನು ಒಬ್ಬನೇ ಎಂದು ಭಾವಿಸಿ ಬರೆದಿರಬಹುದು ಅಥವಾ ಆತನಿಗೂ ಮೊದಲು ಆಳಿದ್ದ ಮೇಲೆ ಹೇಳಿರುವ ದೊರೆಗಳ ಪೈಕಿ ಯಾರಾದರೂ ಒಬ್ಬರಿಗೆ ಅರಸಪ್ಪ ಎಂಬ ಎಗಡನೆ ನಾಮವಿರುವ ಶಕ್ಯತೆ ಇದೆ. 'ಹಿರಿಯ' ಅರಸಪ್ಪನು ವಿಜಾಪುರದೊಡನೆ ಸೇರಿ ಕೆಳದಿಯ ಮೇಲೆ (ಚಿಕ್ಕ ಸಂತಣ್ಣನ ಕಾಲದಲ್ಲಿ ಸು. 1570-80) ದಂಡೆತ್ತಿ ಬಂದನೆಂದು "ಕೆಳದಿನೃಪವಿಜಯಂ"

(IV, 6) ತಿಳಿಸುತ್ತದೆ. 1579ರ ಒಂದು ಶಾಸನವೂ ಆ ವರ್ಷ ಈ ದೊರೆ ಆಳುತ್ತಿದ್ದ ಮತ್ತು ಈ ಯುದ್ಧ ನಡೆದ ವಿಚಾರ ತಿಳಿಸುತ್ತದೆ (E.C. VIII. 56. 301).

ಇಮ್ಮಡಿ ಅರಸಪ್ಪನನಂತರ ಎರಡನೆಯ ರಾಮಚಂದ್ರನಾಯಕ (ಶಿ.ಚ.ಸಾ., ಪು. 100) ಹಾಗೂ ಅವನನಂತರ ಅವನ ಮಗ ರಘುನಾಥನಾಯಕ ಇವರು ಆಳಿದರು. ರಘುನಾಥನಾಯಕನು ತನ್ನ ಹಿರಿಯರ ವೈಷ್ಣವ ಸಂಪ್ರದಾಯವನ್ನು ತ್ಯಜಿಸಿ ವೀರಶೈವ ಪಂಥವನ್ನು ಸ್ವೀಕರಿಸಿದನು (ಮೋ., ಪು. 104). ಈತನು ಬನವಾಸಿಯ ಮಧುಕೇಶ್ವರನ ಪರಮ ಭಕ್ತನಾಗಿದ್ದು ತನ್ನ ಪುತ್ರನಿಗೆ ಮಧುಲಿಂಗ ಎಂದು ನಾಮಕರಣಮಾಡಿದನು. ರಘುನಾಥನ 1611ರ ಶಾಸನದಲ್ಲಿ ಆತನು ಬನವಾಸಿ 12,000ವನ್ನು ವಿಜಯನಗರದ ಮಾಂಡಳಿಕನಾಗಿ ಆಳುತ್ತಿದ್ದನೆಂದು ಹೇಳಿದೆ (K.R.I. Disc. List, 71 of 1940-41). ಈತನು 1629ರಲ್ಲೂ ಆಳುತ್ತಿದ್ದು ತನ್ನಿಂದ ಕಪ್ಪ ಸಂಗ್ರಹಿಸುತ್ತಿದ್ದ ಕೆಳದಿದೊರೆಗಳ ವಿರುದ್ಧ ಬಂಡೆದ್ದನೆಂದೂ ಬೀಳಗಿಯ ದೊರೆಗಳ ನೆರವು ಪಡೆದನೆಂದೂ ಪೋರ್ಚುಗೀಸ್ ದಾಖಲೆಗಳು ತಿಳಿಸುತ್ತವೆ (Moncoes do Reino, No. 12, 1629, folios 444-49; 481-82; Indian Historical Records Commission, XI, P. 108-113).

ಮಧುಲಿಂಗ ನಾಯಕನ ಕಾಲದಲ್ಲಿ ವಿಜಾಪುರದವರು ದಂಡೆತ್ತಿ ಬಂದು ಸೋದೆಯಿಂದ ಕಪ್ಪಸಂಗ್ರಹಿಸಿದರು(ಶಿ.ಚಾ.ಸಾ.ಪು. 105). ಅವನನಂತರ ಸದಾಶಿವನಾಯಕನು ಆಳಿದನು. ಇವನನ್ನು ಉಲ್ಲೇಖಿಸುವ 1694ರ ಒಂದು ಮರಾಠಿ ಪತ್ರವಿದೆ. ಈ ದೊರೆಯು ಶಿವಾಜಿಯ ಮಗ ರಾಜಾರಾಮನಿಗೆ ನೀಡಿದ್ದ ಸಾಲದ ವಿಚಾರ ಈ ಪತ್ರ ತಿಳಿಸುತ್ತದೆ (ಶಿ. ಚಾ. ಸಾ., ಪು. 83). ಅವನನಂತರ ಅವನ ಮಗ ಇಮ್ಮಡಿ ಸದಾಶಿವನಾಯಕನ ಆಳಿಕೆಯನ್ನು ಸೂಚಿಸುವ 1696 ಮತ್ತು 1702ರ ನಡುವಿನ ಪತ್ರಗಳಿವೆ. ಈ ಕಾಲದಲ್ಲಿ ಈ ದೊರೆ ಅಂಕೋಲಾ, ಕಾರವಾರ (ಕಡವಾಡ) ಮುಂತಾದ ಪ್ರದೇಶಗಳನ್ನೊಳಗೊಂಡ 'ಪಂಚಮಹಾಲ್' ಎಂಬ ಪ್ರದೇಶವನ್ನು ರಾಜಾರಾಮನಿಂದ ಪಡೆದು ಅವನಿಗೆ ಪ್ರತಿಯಾಗಿ ಕಪ್ಪವನ್ನು ಕೊಡಲೊಪ್ಪಿದ ವಿಚಾರ ತಿಳಿಯುತ್ತದೆ (ಮೋ., ಪು. 85). ವಿಜಾಪುರದ ಪತನಾನಂತರ ಈತ ಮೊಗಲ್ ಸಮ್ರಾಟ ಔರಂಗಜೇಬನನ್ನು ಭೇಟಿಯಾಗಿದ್ದನೆಂದು ತಿಳಿಯುತ್ತದೆ (ಮೋ., ಪು. 105).

ಇಮ್ಮಡಿ ಸದಾಶಿವನ ಉತ್ತರಾಧಿಕಾರಿ ಬಸವಲಿಂಗಪ್ಪ ನಾಯಕ. ಈತ ಮೊಗಲರ ವಶವಿದ್ದ ಪೊಂಡ (ಈಗ ಗೋವೆಯಲ್ಲಿರುವ ಪೋಂಡಾ) ಕೋಟೆಯನ್ನು ವಶಪಡಿಸಿಕೊಂಡ (ಮೋ. ಪು. 106). ಇವನನಂತರ ಆಳಿದ ಇಮ್ಮಡಿ ಬಸವಲಿಂಗನಾಯಕನ ವಿರುದ್ಧ ಶಾಹು ಛತ್ರಪತಿಯು ದಂಡು ಕಳುಹಿಸಲು ಈತ ಮತ್ತೆ ಮರಾಠರ ಆಶ್ರಿತ ರಾಜನಾದ. ಈತನ 1705 ಮತ್ತು 1732ರ ನಡುವಣ ದಾಖಲೆಗಳಿವೆ. (ಮೋ. ಪು. 89-97).

ಅವನ ಅನಂತರ ಪಟ್ಟಕ್ಕೆ ಬಂದ ಮೂರನೆಯ ಸದಾಶಿವನ (ಈತನ 1750ರ ದಾಖಲೆ ಇದೆ) ಕಾಲದಲ್ಲಿ ಸೋದೆ ಸಂಸ್ಥಾನದ ಪತನವಾಯಿತು. 1764ರಲ್ಲಿ ಹೈದರ್ (ಕೆಳದಿಯ ನಂತರ) ಸೋದೆಯ ಮೇಲೆ ದಂಡು ಕಳುಹಿಸಲು, ಸದಾಶಿವನಾಯಕನು ಪೋರ್ಚುಗೀಸರ ಆಶ್ರಯ ಬೇಡಿ ಗೋವೆಯತ್ತ ತೆರಳಿದ. ಸೋದೆಯ ಸುತ್ತಲ ಪ್ರದೇಶಗಳನ್ನು ಹೈದರ್ ವಶಪಡಿಸಿಕೊಂಡ. ಘಟ್ಟದ ಕೆಳಗಣ ಕೆಲವು ಮಹಲುಗಳನ್ನು ಪೋರ್ಚುಗೀಸರಿಗೆ ಬಿಟ್ಟು ಕೊಟ್ಟ ನಾಯಕ ಪೋಂಡಾದಲ್ಲಿ ನೆಲಸಿದ. ಪೋರ್ಚುಗೀಸರು ಅವನಿಗೆ ನಿರ್ದಿಷ್ಟ ವರ್ಷಾಶನವನ್ನು ಗೊತ್ತುಮಾಡಿದರು. ಸೋದೆಯ ರಾಜ್ಯ ಈ ರೀತಿ ಕೊನೆಗೊಂಡಿತು.

ಧರ್ಮ, ಶಿಲ್ಪ, ಸಾಹಿತ್ಯಗಳಿಗೆ ಸೋದೆನಾಯಕರು ತಮ್ಮ ಸಾಮರ್ಥ್ಯಕ್ಕನುಗುಣವಾಗಿ ಪ್ರೋತ್ಸಾಹ ನೀಡಿದರು. ಬನವಾಸಿಯ ದೇವಾಲಯದಲ್ಲಿನ ಕೆಲವು ಸುಂದರ ಕೆತ್ತನೆಯ ಕುಸುರಿನ ಕೆಲಸಗಳು ಇವರದೇ ಸಾಧನೆ.

ಲೇಖಕರು : ಡಾ॥ ಸೂರ್ಯನಾಥ ಕಾಮತ್

# ಮೈಸೂರಿನ ಒಡೆಯರು

ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಕರ್ಣಾಟಕದಲ್ಲಿ ಬೆಳಗಿದ ಅನೇಕ ರಾಜ್ಯಗಳನ್ನು ಹಿಂದಿನ ಅಧ್ಯಾಯದಲ್ಲಿ ಪರಿಶೀಲಿಸಿದ್ದೇವೆ. ತಾಳಿಕೋಟೆ ಅಥವಾ ರಕ್ಕಸತಂಗಡಿ ಯುದ್ಧದ ಅನಂತರ ಕರ್ಣಾಟಕದಲ್ಲಿ ಬಹು ಪ್ರಮುಖ ಪಾತ್ರ ವಹಿಸಿದ, ಒಂದು ದೃಷ್ಟಿಯಿಂದ ವಿಜಯನಗರ ಚಕ್ರಾಧಿಪತ್ಯದ ಸಂಪ್ರದಾಯವನ್ನು ಮುಂದುವರಿಸಿ ನಡೆಸಿಕೊಂಡು ಬಂದ ಮೈಸೂರಿನ ಒಡೆಯರ ಚರಿತ್ರೆಯನ್ನು ಈಗ ಪರಿಶೀಲನೆಗೆ ತೆಗೆದುಕೊಳ್ಳೋಣ. 15ನೆಯ ಶತಮಾನದ ಪ್ರಾರಂಭದಲ್ಲಿ ಅವರ ಪೂರ್ವಿಕರು ದಕ್ಷಿಣ ಮೈಸೂರಿನಲ್ಲಿ ಒಂದು ಪಾಳಯಪಟ್ಟನ್ನು ಸ್ಥಾಪಿಸಿದರು. ರಕ್ಕಸತಂಗಡಿ ಯುದ್ಧದ ತರುವಾಯದ ಎರಡು ಶತಮಾನಗಳಲ್ಲಿ ಅವರು ಪ್ರಸಿದ್ಧಿಗೆ ಬಂದರು. ಬ್ರಿಟಿಷರು ಭಾರತದಲ್ಲಿ ತಮ್ಮ ಆಳಿಕೆಯನ್ನು ಸ್ಥಾಪಿಸಿದ ತರುವಾಯವೂ ಒಡೆಯರು ದೊಡ್ಡ ಪ್ರದೇಶವನ್ನು ಬ್ರಿಟಿಷರ ಚಕ್ರಾಧಿಪತ್ಯದ ಅಧೀನದಲ್ಲಿ ಆಳಿ, ಭರತಖಂಡದ ಮತ್ತು ಕರ್ಣಾಟಕದ ಸಂಸ್ಕೃತಿಯ ಪ್ರಮುಖಾಂಶಗಳನ್ನು ಕಾಪಾಡಲು ತುಂಬ ಸಹಾಯ ಮಾಡಿದರು.

ಕ್ರಿ. ಶ. 1399ರಲ್ಲಿ ಮೈಸೂರಿನ ಗಡಿಪ್ರದೇಶದೊಳಕ್ಕೆ ಬಂದ ಯಾದವ ವಂಶದ ಯದುರಾಯ ಅಥವಾ ವಿಜಯ ಮತ್ತು ಕೃಷ್ಣರಾಯ ಎಂಬ ಸಹೋದರರು ಮೈಸೂರಿನ ಒಡೆಯರ ಮೂಲಪುರುಷರು ಎಂದು ಗುರುತಿಸಲಾಗಿದೆ. ಇವರು ಬಹುಬೇಗ ಪ್ರಮುಖರಾದರು. ಒಡೆಯರ ಪುಟ್ಟ ಪಾಳೆಯಪಟ್ಟು ಆ ದಿನಗಳಲ್ಲಿ ತುಂಬ ಸಂಕಷ್ಟ ಪರಿಸ್ಥಿತಿಯಲ್ಲಿದ್ದಿತು. ಹದಿನಾಡಿನ ಪಾಳೆಯಗಾರರಾಗಿದ್ದ ಚಾಮರಾಜರು ಗತಿಸಿಹೋಗಿದ್ದು, ಅವರ ಸತಿಸುತೆಯರು ಮಾರನಾಯಕನೆಂಬವನ ಆಕ್ರಮಣಕ್ಕೆ ಒಳಗಾಗಿ ಅವನ ಹಂಗಿನಲ್ಲಿರುವ ಪ್ರಸಂಗ ಒದಗಿದ್ದಿತು. ದುಃಖ ಸಂತಪ್ತರಾಗಿದ್ದ ಈ ರಾಜಕುಟುಂಬದ ನಿಯೋಗಿಗಳು ಈ ಯಾದವ ಸೋದರರ ಸಂಪರ್ಕವನ್ನು ಹೊಂದಿ, ಮೈಸೂರಿನ ಬಳಿ ಇರುವ ಕಾರುಗಹಳ್ಳಿ ಎಂಬ ಗ್ರಾಮದ ಮಾರನಾಯಕನ ಪತನವನ್ನು ಯೋಜಿಸಿದರು.

ಆ ಸೋದರರು ಸಂತೋಷದಿಂದ ಈ ಸೂಚನೆಗೆ ಸಮ್ಮತಿಸಿದರು. ಆಯ್ದ ಹಲವು ಅನುಯಾಯಿಗಳೊಂದಿಗೆ ಆಕ್ರಮಣಕಾರನಾದ ಮಾರನಾಯಕನ ಮೇಲೆ ಬಿದ್ದು ಅವನನ್ನು ಸಂಹಾರ ಮಾಡಿದರು. ವಾರಸುದಾರ ರಾಜಕುಮಾರಿಯನ್ನು ಯದುರಾಯರಿಗೆ ಕೊಟ್ಟು ಮದುವೆಮಾಡಿ, ಆಕೆಯ ತಂದೆಯ ರಾಜ್ಯಕ್ಕೆ ಅಳಿಯನನ್ನು ಅಧಿಪತಿಯನ್ನಾಗಿ ಮಾಡಲಾಯಿತು.

ಇದು ನಡೆದುದು ಕ್ರಿ. ಶ. 1399ರಲ್ಲಿ. ಯದುರಾಯರು ಈ ಪಾಳೆಯಪಟ್ಟನ್ನು ಇಪ್ಪತ್ತನಾಲ್ಕು ವರುಷ ಕಾಲ ಆಳಿದರು. ಮೇಲುಕೋಟೆಯ ದೇವತಾಮೂರ್ತಿಯಲ್ಲಿ ತಮಗಿದ್ದ ಕೃತಜ್ಞತೆಯ ಕುರುಹಾಗಿ ಆ ಮೂರ್ತಿಯ ಅನುಗ್ರಹವೇ ತಮಗೆ ರಾಜ್ಯವೊಂದನ್ನು ತಂದುಕೊಟ್ಟಿತು ಎಂಬ ಯೋಚನೆಯಿಂದ ಮೇಲುಕೋಟೆ ಬೆಟ್ಟದ ಮೇಲೆ ನಾಲ್ಕು ಬಾಗಿಲುಗಳ ಕೋಟೆಯನ್ನು ಕಟ್ಟಿ ಅದಕ್ಕೆ "ಮೇಲು ಕೋಟೆ" ಎಂದು ಹೆಸರಿಟ್ಟರು. ಮೈಸೂರಿನಲ್ಲಿ ಬೆಟ್ಟದ ಮೇಲಿರುವ ಶ್ರೀ ಚಾಮುಂಡೇಶ್ವರಿ ದೇವಿಗೂ ಅವರು ತಮ್ಮ ಕೃತಜ್ಞತೆಯ ಭಕ್ತಿ ಗೌರವಗಳನ್ನು ತೋರಿದರು. ಸುಮಾರು ಆ ಸಮಯದಲ್ಲಿ ವೀರಶೈವ ಪಂಥಕ್ಕೆ ಸೇರಿದ ಒಬ್ಬ ಜಂಗಮಸ್ವಾಮಿಯ ಭೇಟಿಯಾಗಿ ಯದುರಾಯರು ಆತನ ಶಿಷ್ಯರಾದರೆಂದು ಹೇಳುತ್ತಾರೆ.

ಹೀಗೆ ಪ್ರಾಚೀನದಿಂದಲೂ ಮೈಸೂರಿನ ರಾಜಕುಟುಂಬದವರು ಹಿಂದೂ ಧರ್ಮದ ವಿವಿಧ ಶಾಖೆಗಳ ವಿಚಾರದಲ್ಲಿ ತುಂಬ ಉದಾರದೃಷ್ಟಿಯನ್ನು ಬೆಳೆಸಿಕೊಂಡು ಬಂದರು. ಯದುರಾಯರ ತರುವಾಯ, ಅವರ ಇಬ್ಬರು ಗಂಡು ಮಕ್ಕಳಲ್ಲಿ ಹಿರಿಯರಾದ ಹಿರಿಯ ಬೆಟ್ಟದ ಚಾಮರಾಜ ಒಡೆಯರು ರಾಜರಾದರು.

ಸಿಂಹಾಸನ ಏರಿದಾಗ ಈ ತರುಣ ರಾಜನಿಗೆ ಕೇವಲ ಹದಿನೈದು ವರ್ಷ ವಯಸು. ಆತ ಮೂವತ್ತಾರು ವರ್ಷಕಾಲ ರಾಜ್ಯಭಾರ ಮಾಡಿದನು. ಇವನ ತರುವಾಯ ಕ್ರಿ.ಶ. 1458ರಿಂದ 1478 ರ ವರೆಗೆ ಆಳಿದ ತಿಮ್ಮರಾಜ ಒಡೆಯರು ಸಿಂಹಾಸನಕ್ಕೆ ಬಂದರು. ಅವರ ಮರಣಾನಂತರ ಎರಡನೆಯ ಚಾಮರಾಜ ಒಡೆಯರು ಕ್ರಿ. ಶ. 1478ರಿಂದ 1513ರ ವರೆಗೆ ಆಳಿದರು. ಅನಂತರ ಆತನ ಮಗ ಮೂರನೆಯ ಚಾಮರಾಜಒಡೆಯರು ಕ್ರಿ. ಶ. 1513ರಿಂದ 1553ರ ವರೆಗೆ ನಲವತ್ತು ವರ್ಷಗಳ ಕಾಲ ಆಳಿದರು. ಚಾಮುಂಡಿ ಬೆಟ್ಟದ ಮೇಲಿನ ಗುಡಿಯ ಹಿಂಭಾಗದ ದೊಡ್ಡ ಕೆರೆಯನ್ನು ಇವರು ನಿರ್ಮಿಸಿದರು,

ಹೀಗೆ 154 ವರ್ಷಗಳ ವರೆಗೆ ಈ ಮೈಸೂರು ರಾಜ್ಯದ ಕೇಂದ್ರವಾದ ಪುಟ್ಟ ಪಾಳಯಪಟ್ಟು ತಡೆಯಿಲ್ಲದ ನಿರಂತರವಾದ ಶಾಂತಿಯ ಜೀವನ ನಡೆಸುವ ಯೋಗವನ್ನು ಪಡೆಯಿತು.

ಮೂರನೆಯ ಚಾಮರಾಜ ಒಡೆಯರ ಪುತ್ರರಾದ ತಿಮ್ಮರಾಜ ಒಡೆಯರು ತಂದೆಯ ತರುವಾಯ ಕ್ರಿ. ಶ. 1553ರಲ್ಲಿ ರಾಜರಾಗಿ, ನೆರೆಯ ಸ್ಪರ್ಧಿ ಪಾಳೆಯಗಾರರಲ್ಲೆಲ್ಲಾ ವೀರರೆನಿಸಿ " ಬಿರುವಂತೆಂಬರ ಗಂಡ " (ಬಿರುದುಳ್ಳವರಿಗೆಲ್ಲಾ ಪ್ರಭು) ಎಂಬ ಬಿರುದನ್ನು ಧರಿಸಿದರು.

ತಿಮ್ಮರಾಜ ಒಡೆಯರ ಕೊನೆಯ ತಮ್ಮ ಬೋಳ ಚಾಮರಾಜ ಒಡೆಯರು, ಅಣ್ಣನ ತರುವಾಯ ಕ್ರಿ.ಶ. 1572 ರಲ್ಲಿ ಪಟ್ಟಕ್ಕೆ ಬಂದರು. ಒಮ್ಮೆ ಇವರು ಚಾಮುಂಡೇಶ್ವರಿ ಬೆಟ್ಟಕ್ಕೆ ಹೋಗುತ್ತಿದ್ದಾಗ ಇವರ ಸನಿಹದಲ್ಲೇ ಸಿಡಿಲೊಂದು ಹೊಡೆದು ಇವರ ದೇಹಕ್ಕೆ ಯಾವ ಬಾಧೆಯೂ ಆಗದಿದ್ದರೂ ತಲೆಯ ಕೂದಲೆಲ್ಲಾ ಉದುರಿ ಬೋಳುತಲೆಯಾಯಿತಂತೆ. ಆದ್ದರಿಂದಲೇ ಅವರಿಗೆ 'ಬೋಳುತಲೆ' ಎಂಬ ಅಡ್ಡ ಹೆಸರು ಬಂದಿತು. ಇವರ ಆಳಿಕೆ ನಾಲ್ಕು ವರ್ಷ ಮಾತ್ರ ನಡೆಯಿತು.

ಬೋಳುತಲೆ ಚಾಮರಾಜ ಒಡೆಯರ ಪುತ್ರರಾದ ಬೆಟ್ಟದ ಚಾಮರಾಜ ಒಡೆಯರು ಎರಡು ವರ್ಷಕ್ಕೂ ಕಡಮೆ ಕಾಲ ಆಳಿದರು. ಅವರ ಅಸಾಮರ್ಥ್ಯದಿಂದಾಗಿ ಅವರಿಗೆ ವಿಶ್ರಾಂತಿ ಕೊಡಲಾಯಿತು. ಇವರ ಸಹೋದರ ರಾಜ ಒಡೆಯರನ್ನು ಕ್ರಿ. ಶ. 1578 ರಲ್ಲಿ ಆಳುವ ಪ್ರಭುಗಳನ್ನಾಗಿ ಹಿರಿಯರು ಅಂಗೀಕರಿಸಿದರು.

ಮೈಸೂರಿನಲ್ಲಿ ಯಾದವ ವಂಶವನ್ನು ಸ್ಥಾಪಿಸಿದ ಗೌರವವನ್ನು ಯದುರಾಯರಿಗೆ ನಾವು ಕೊಡುವಂತೆ ಒಂದು ಸಣ್ಣ ಪಾಳೆಯಪಟ್ಟಾಗಿದ್ದ ಮೈಸೂರನ್ನು ಸಾಕಷ್ಟು ದೊಡ್ಡ ರಾಜ್ಯವಾಗಿ ಮಾಡಿ ಅದರ ರಾಜನಿಗೆ ಹೆಮ್ಮೆಯ ಐತಿಹಾಸಿಕ ಸಿಂಹಾಸನವನ್ನು ಗಳಿಸಿ ಕೊಟ್ಟ ಗೌರವಸ್ಥಾನವನ್ನು ರಾಜ ಒಡೆಯರಿಗೆ ಕೊಡಬೇಕಾಗಿದೆ.

ಕ್ರಿ. ಶ. 1565–1610ರ ಅವಧಿಯಲ್ಲಿ ಮೈಸೂರು ಶ್ರೀರಂಗಪಟ್ಟಣದಲ್ಲಿದ್ದ ಆ ಸಾಮ್ರಾಜ್ಯದ ಮಹಾಮಂಡಲೇಶ್ವರನ ಮೂಲಕ ವಿಜಯನಗರ ಸಾಮ್ರಾಜ್ಯಕ್ಕೆ ಅಧೀನವಾಗಿ ಸಣ್ಣ ಪಾಳೆಯಪಟ್ಟಾಗಿದ್ದಿತು. ಮೈಸೂರು ಹಲವು ಹಳ್ಳಿಗಳು ಸೇರಿದ ಒಂದು ಸೀಮೆ ಅಥವಾ ಘಟಕ ಎಂಬುದಾಗಿ ಪರಿಗಣಿಸಲಾಗಿದ್ದಿತು.

ಯುದ್ಧದ ದಿನಗಳಲ್ಲಿ ತಮ್ಮ ಪಾಲಿನ ಸೇನಾ ತುಕಡಿಗಳನ್ನು ಒದಗಿಸಿ ವಾರ್ಷಿಕ ಪೊಗದಿ ಕಪ್ಪವನ್ನು ಸಲ್ಲಿಸಿ, ಶ್ರೀರಂಗಪಟ್ಟಣದಲ್ಲಿದ್ದ ಮಂಡಲೇಶ್ವರನಿಗೆ ಇತರ ಎಲ್ಲ ಸ್ಥಳೀಯ ಪಾಳೆಯಗಾರರಂತೆಯೇ ಮೈಸೂರಿನ ಅರಸರು ಕೂಡ ನಿಷ್ಠೆಯನ್ನು ತೋರಬೇಕಾಗಿತ್ತು. ಮೈಸೂರಿನ ಅರಸರು ಈ ಕಪ್ಪವನ್ನು ಕೊಡದೆ ತಪ್ಪಿಸಿ ತಮ್ಮ ಸ್ವಾತಂತ್ರ್ಯವನ್ನು ಸ್ಥಾಪಿಸಲು ಪ್ರಯತ್ನಪಡುತ್ತಿದ್ದರು. ಕ್ರಮಕ್ರಮವಾಗಿ ಅವರು ನೆರೆಯ ಪ್ರದೇಶಗಳನ್ನು ಒತ್ತರಿಸಿ ವಶಪಡಿಸಿಕೊಂಡು ಕೋಟೆಗಳನ್ನು ಕಟ್ಟಿ ಪ್ರಬಲರಾಗುತ್ತಿದ್ದರು. ಈ ಪ್ರಕಾರ ನಡೆದು ಕ್ರಿ. ಶ. 1608ರ ಹೊತ್ತಿಗೆ ರಾಜ ಒಡೆಯರು 25,000 ವರಹ ವರಮಾನವುಳ್ಳ ಮೂವತ್ತಮೂರು ಗ್ರಾಮಗಳನ್ನೊಳಗೊಂಡ ಒಂದು ಪಾಳಯಪಟ್ಟಿಗೆ ಪ್ರಭುವಾದರು. ವಿಜಯನಗರದ ರಾಜಪ್ರತಿನಿಧಿಯಿಂದ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡುವರಿಂದ ಮೈಸೂರಿನ ಚರಿತ್ರೆಯಲ್ಲಿ ಒಂದು ಹೊಸ ಅಧ್ಯಾಯ ಪ್ರಾರಂಭವಾಯಿತು.

ಕ್ರಿ. ಶ. 1578ರಲ್ಲಿ ಆಳಿಕೆಯನ್ನು ಆರಂಭಿಸಿದ ರಾಜ ಒಡೆಯರು ನಲವತ್ತು ವರ್ಷಗಳ ಕಾಲ ಆಳಿದರು. ಸೈನಿಕಸಾಮರ್ಥ್ಯ ಮತ್ತು ರಾಜಕೀಯ ತೀಕ್ಷ್ಣಬುದ್ಧಿ ಎರಡೂ ವರವಾಗಿ ಹೊಂದಿದ್ದ ಇವರು, 33 ಗ್ರಾಮಗಳ ಒಡೆತನ ಮತ್ತು 300 ಸಿಪಾಯಿಗಳ ಸೇನೆಯನ್ನು ಹೊಂದಿದ್ದವರು, ಪ್ರಬಲ ಸೇನಾ ಶಕ್ತಿಯನ್ನು ಪಡೆದಿದ್ದ ವಿಜಯನಗರದ ಅರಸರನ್ನು ಎದುರಿಸುವ ಶಕ್ತಿಯನ್ನು ಪಡೆಯುವ ಸ್ಥಿತಿಗೇರಿದರು.

ವಿಜಯನಗರದ ಚಕ್ರವರ್ತಿ ಎರಡನೆಯ ವೆಂಕಟರಾಯನ ಆಳಿಕೆಯಲ್ಲಿ, ಆತನ ಸೋದರ ಪುತ್ರ ತಿರುಮಲನು ಶ್ರೀರಂಗಪಟ್ಟಣದಲ್ಲಿ ರಾಜಪ್ರತಿನಿಧಿಯಾಗಿದ್ದನು. ಚಕ್ರವರ್ತಿಗೂ ರಾಜಪ್ರತಿನಿಧಿಗೂ ಸೌಹಾರ್ದವಿರಲಿಲ್ಲ. ಈ ವಿರೋಧ ಪರಿಸ್ಥಿತಿಯನ್ನು ರಾಜ ಒಡೆಯರು ಚೆನ್ನಾಗಿ ಉಪಯೋಗಿಸಿಕೊಂಡರು. ಕ್ರಿ.ಶ. 1610ರಲ್ಲಿ ಈ ರಾಜ ಪ್ರತಿನಿಧಿಯನ್ನು ಶ್ರೀರಂಗಪಟ್ಟಣದಿಂದ ಹೊರಹಾಕಲು ಉಪಯೋಗಿಸಿಕೊಂಡರು. ಶ್ರೀರಂಗಪಟ್ಟಣವ ಮಂಡಲವನ್ನು ಆಳಲು ತಮಗೇ ಅನುಮತಿ ಬೇಕೆಂದು ಸಮ್ರಾಟ್ ವೆಂಕಟ ಪತಿಯನ್ನು ಬೇಡಿ, ಅವನಿಂದ ಆ ಹಕ್ಕನ್ನು ಒಂದು ಸನ್ನದು ಮೂಲಕ ಪಡೆದರು.

ಶ್ರೀರಂಗಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ ಒಡೆಯರು ರತ್ನ ಖಚಿತವಾದ ರಾಜಪ್ರತಿನಿಧಿಯ ಸಿಂಹಾಸನವನ್ನು ಏರಿದರು. ಅಧಿಕವಾದ ಸೈನಿಕ ಮತ್ತು ಪ್ರಜಾ ಸಂಬಂಧವಾದ ಹೊಣೆಗಳನ್ನು ನಿರ್ವಹಿಸುವುದಕ್ಕಾಗಿ ದಳವಾಯಿ ಮತ್ತು ಸರ್ವಾಧಿಕಾರಿ ಎಂಬ ಆಡಳಿತದ ಮುಖ್ಯಾಧಿಕಾರಿಯೊಬ್ಬನನ್ನು ನೇಮಕ ಮಾಡುವುದು ಅಗತ್ಯವೆಂದು ಭಾವಿಸಿದರು. ಈ ಸಂಯುಕ್ತ ಪದಾಧಿಕಾರಕ್ಕೆ ಅವರ ಸೋದರ ಪುತ್ರ ಬೆಟ್ಟದ ಅರಸು ಎಂಬವರನ್ನು ನೇಮಕ ಮಾಡಲಾಯಿತು. ಪ್ರತಿ ಗ್ರಾಮದಲ್ಲಿಯೂ ಮೇಲ್ವಿಚಾರಣೆ, ರಕ್ಷಣೆ ಮತ್ತು ಕಂದಾಯ ವಸೂಲಿಗಳಿಗಾಗಿ ಅಧಿಕಾರಿಗಳನ್ನು ನೇಮಿಸಲಾಯಿತು.

ರಾಜ ಒಡೆಯರು ಒಳ್ಳೆಯ ಯೋಧ ಮತ್ತು ಸಮರ್ಥ ಆಡಳಿತಗಾರರಾಗಿದ್ದುದಲ್ಲದೆ ಶುದ್ಧ ಹೃದಯರೂ ದೈವಭಕ್ತರೂ ಸಾಹಿತ್ಯ ಸಂಸ್ಕೃತಿ ಶೀಲರೂ ಆಗಿದ್ದರು. ಅವರು ಶ್ರೀರಂಗಪಟ್ಟಣ, ಮೈಸೂರು, ಮೇಲುಕೋಟೆಗಳ ದೇವಾಲಯಗಳನ್ನು ಸುಧಾರಿಸಿದುದಲ್ಲದೆ ಅವುಗಳ ನಿರ್ವಹಣೆಗಾಗಿ ದತ್ತಿಗಳನ್ನು ಸ್ಥಾಪಿಸಿದರು.

ಕ್ರಿ. ಶ. 1610ರಲ್ಲಿ ಧಾರ್ಮಿಕವಾಗಿಯೂ ಅತ್ಯಂತ ಪ್ರೇಕ್ಷಣೀಯವಾಗಿಯೂ ಇರುವಂತೆ ನವರಾತ್ರಿ

ಉತ್ಸವದ ಆಚರಣೆಯನ್ನು ವಿಜೃಂಭಣೆಯಿಂದ ಪ್ರಾರಂಭಿಸಿದರು ; ಇದು ರಾಜತ್ವದ ಪ್ರಭೆಯನ್ನು ಅಧಿಕಗೊಳಿಸಿತು.

ಕ್ರಿ. ಶ. 1617ರಲ್ಲಿ ರಾಜ ಒಡೆಯರು ವಿಧಿವಶರಾದರು. ಅವರ ಗಂಡು ಮಕ್ಕಳಿಲ್ಲಾ ಆಗಲೇ ಗತಿಸಿ ಹೋಗಿದ್ದುದರಿಂದ, ಅವರ ಮೊಮ್ಮಗ ಚಾಮರಾಜ ಒಡೆಯರು ಅವರ ತರುವಾಯ ಸಿಂಹಾಸನವನ್ನೇರಿ ತಾತ ಆರಂಭಿಸಿದ್ದ ರಾಜ್ಯವಿಸ್ತಾರದ ನೀತಿಯನ್ನು ಅನುಸರಿಸುತ್ತ, ಆಡಳಿತ ದಕ್ಷತೆ ಮುರಿಯದಂತೆ ನಡೆಸಿಕೊಂಡು ಬಂದರು. ಗಾದಿಗೆ ಬರುವಾಗ ಈ ರಾಜರಿಗೆ ಹದಿನಾಲ್ಕು ವರ್ಷ ಮಾತ್ರ ವಯಸ್ಸಾಗಿದ್ದುದರಿಂದ, ಆಡಳಿತ ಸೂತ್ರಗಳು ದಳವಾಯಿ ಬೆಟ್ಟದ ಅರಸು ಅವರ ಕೈಗೆ ಬಂದುವು. ಮೈಸೂರಿನ ಒಡೆಯರು ವಿಜಯನಗರ ಸಮ್ರಾಟರ ಸಾರ್ವಭೌಮತ್ವವನ್ನು ಒಪ್ಪಿಕೊಂಡಿದ್ದರು. ಆದರೆ ಆ ಸಾಮ್ರಾಜ್ಯ ಮಾತ್ರ ದುರ್ಬಲವಾಗುತ್ತಿತ್ತು. ದಳವಾಯಿ ಸುತ್ತ ಮುತ್ತಲ ಪಾಳೆಯಪಟ್ಟುಗಳ ಮೇಲೆ ಕ್ರಮವಾಗಿ ದಾಳಿ ನಡೆಸುತ್ತಾ ಬಂದು, ಮೈಸೂರು ರಾಜ್ಯ ಎಲ್ಲ ಕಡೆಗಳಲ್ಲೂ ವಿಸ್ತಾರವಾಗುತ್ತಿತ್ತು.

ಕ್ರಿ. ಶ. 1637ರ ವರೆಗೆ ಎಂದರೆ ಇಪ್ಪತ್ತು ವರ್ಷಗಳ ಕಾಲ ಚಾಮರಾಜ ಒಡೆಯರು ಆಳಿದರು. ಈ ಕಾಲದಲ್ಲಿ ರಾಜ್ಯ ಹೀಗೆ ವಿಸ್ತೃತವಾಗಿತ್ತು : ಉತ್ತರದಲ್ಲಿ ಚೆನ್ನಪಟ್ಟಣ ಮತ್ತು ನಾಗಮಂಗಲ, ಪೂರ್ವ ಮತ್ತು ಆಗ್ನೇಯ ದಿಕ್ಕುಗಳಲ್ಲಿ ಮಳವಳ್ಳಿ ಮತ್ತು ದಣ್ಣಾಯಕನ ಕೋಟೆ ; ಪಶ್ಚಿಮ ಮತ್ತು ವಾಯವ್ಯ ದಿಕ್ಕುಗಳಲ್ಲಿ ಪಿರಿಯಾಪಟ್ಟಣ ಮತ್ತು ಚೆನ್ನರಾಯಪಟ್ಟಣಗಳ ವರೆಗೆ ಹಬ್ಬಿತ್ತು. ಈ ವಿಸ್ತೃತ ಪ್ರದೇಶಗಳ ಒಳಾಡಳಿತ ನಡೆಸಲು ಕಾರ್ಯಕರ್ತರನ್ನು ನೇಮಿಸಲಾಯಿತು. ಸೈನ್ಯವೆಂಬುದು ರಾಜ್ಯದ ಎರಡನೆಯ ಮುಖ್ಯ ನೆಲೆಯಾಯಿತು. ಸೈನ್ಯದ ಬೆನ್ನೆಲುಬಾಗಿ ಗಜದಳವನ್ನು ಬಲಪಡಿಸುವುದಕ್ಕೆ ಆನೆಗಳ ವಾರ್ಷಿಕ ಸರಬರಾಜಿಗೆ ತಕ್ಕ ಏರ್ಪಾಟು ಮಾಡಲಾಯಿತು. ಸೆರೆಸಿಕ್ಕಿದವರಿಂದ ಸಂಗ್ರಹವಾದ ಆಯುಧಗಳನ್ನಿಡಲು ಮತ್ತು ಹೆಚ್ಚು ಸಮರ್ಥವಾದ ಹೊಸ ಹೊಸ ಆಯುಧಗಳನ್ನು ನಿರ್ಮಾಣ ಮಾಡಲು ಒಂದು ಆಯುಧಾಗಾರವನ್ನು ಕ್ರಿ.ಶ. 1635 ರಲ್ಲಿ ನಿರ್ಮಿಸಲಾಯಿತು.

ಚಾಮರಾಜ ಒಡೆಯರು ಆಗ ರಾಜ್ಯದಲ್ಲಿ ಪ್ರಚಲಿತವಾಗಿದ್ದ ಶೈವ, ವೈಷ್ಣವ ಮತ್ತು ಜೈನ ಎಂಬ ಮೂರು ಧರ್ಮಗಳನ್ನೂ ಸಂರಕ್ಷಿಸಿದರು. ಕಾವೇರಿ ನಾಲೆಗಳನ್ನು ಜೀರ್ಣೋದ್ಧಾರ ಮಾಡಿದುದಲ್ಲದೆ ಮೇಲುಕೋಟೆಯಲ್ಲಿ ಸ್ನಾನ ಘಟ್ಟವನ್ನು ಮತ್ತು ಕೆರೆಯನ್ನು ನಿರ್ಮಾಣ ಮಾಡಿದರು. ಅವರು ಮಲ್ಲರು, ಒಳ್ಳೆಯ ಕುದುರೆ ಸವಾರರು, ಸಂಗೀತಪಟು ಮತ್ತು ಸಾಹಿತ್ಯಪ್ರಿಯರೂ ಆಗಿದ್ದರು. **ಅಶ್ವಶಾಸ್ತ್ರ, ಹಯಸಾರ ಸಮುಚ್ಚಯ** ಮತ್ತು **ಬ್ರಹ್ಮೋತ್ತರ ಖಂಡ** ಎಂಬ ಕನ್ನಡ ಗ್ರಂಥಗಳು ಇವರ ಕಾಲದಲ್ಲಿ ರಚಿತವಾದವು. **ವಾಲ್ಮೀಕಿ ರಾಮಾಯಣದ** ಕನ್ನಡ ರೂಪವಾದ **ಚಾಮರಾಜೋಕ್ತಿ ವಿಲಾಸವನ್ನು** ಅವರೇ ಸ್ವತಃ ರಚಿಸಿದರು.

ಕ್ರಿ. ಶ. 1637 ರಲ್ಲಿ ಇವರು ಕಾಲವಾದ ಮೇಲೆ ಇವರ ಚಿಕ್ಕಪ್ಪ, ರಾಜಒಡೆಯರ ಮರಣೋತ್ತರ ಕುಮಾರ ಇಪ್ಪತ್ತೇಳು ವರ್ಷದ ಎರಡನೆಯ ರಾಜ ಒಡೆಯರು ಸಿಂಹಾಸನವನ್ನೇರಿದರು. ಆಗ ದಳವಾಯಿ ಯಾಗಿದ್ದ ವಿಕ್ರಮರಾಯನಿಗೂ ಇವರಿಗೂ ಸರಿಹೊಂದಲಿಲ್ಲ. ಅಲ್ಪಕಾಲದ ಆಳಿಕೆಯ ಅನಂತರ ಕ್ರಿ.ಶ. 1638ರಲ್ಲಿ ರಾಜರು ನಿಧನಹೊಂದಿದರು.

ಎರಡನೆಯ ರಾಜ ಒಡೆಯರ ಉತ್ತರಾಧಿಕಾರಿಗಳಾದವರು ಬೆಟ್ಟದ ಚಾಮರಾಜ ಒಡೆಯರ ವಂಶಜರಾದ, ಸುಪ್ರಸಿದ್ಧ ರಣಧೀರ ಕಂಠೀರವ ನರಸರಾಜ ಒಡೆಯರು. ಇವರ ಕತ್ತಿವರಸೆ ಮತ್ತು ದೈಹಿಕ ಬಲ ಶೌರ್ಯಗಳು ಜನಪ್ರಿಯ ಕಥೆಗಳಾಗಿವೆ. ತಿರುಚಿನಾಪಳ್ಳಿಯ ಆಸ್ಥಾನ ಮಲ್ಲನೊಬ್ಬನು ತಾನು

ಬಹುಶಕ್ತಿವಂತನೆಂದೂ ತನ್ನ ದೊಡ್ಡಸ್ತಿಕೆಯನ್ನು ಒಪ್ಪುವ ಸಲುವಾಗಿ ಎಲ್ಲರೂ ಅದರ ಕೆಳಗೆ ನಡೆಯ ಬೇಕೆಂದು ಅದನ್ನು ಊರ ಮುಂದಿನ ಬಾಗಿಲ ಮೇಲೆ ಕಟ್ಟಿಸಿದ್ದನೆಂದೂ ಯಾತ್ರಿಕರಿಂದ ತಿಳಿದ ಕಂಠೀರವ ನರಸರಾಜ ಒಡೆಯರು ವೇಷಾಂತರದಿಂದ ಅಲ್ಲಿಗೆ ಹೋಗಿ ಊರ ಮುಂದಿನ ಬಾಗಿಲಲ್ಲಿ ಕಟ್ಟಿದ್ದ ಜಟ್ಟಿಯ ಕಾಲವನ್ನು ತೆಗೆದು ಹರಿದು ಬಿಸಾಡಿ, ಮಲ್ಲನನ್ನು ಎದುರಿಸಿ ಜಟ್ಟಿಕಾಳಗದಲ್ಲಿ ಅವನನ್ನು ಸೋಲಿಸಿದರು.

ಕಂಠೀರವ ನರಸರಾಜ ಒಡೆಯರ ಆಳಿಕೆಯ ಕಾಲವು ಆ ಕಾಲದಲ್ಲಿದ್ದ ಸಾಮಾನ್ಯ ಸ್ಥಿತಿಗಿಂತ ಹೆಚ್ಚು ದುರ್ದಮ್ಯವಾಗಿತ್ತು—ಗೊಂದಲಮಯವಾಗಿದ್ದಿತು. ದಕ್ಷಿಣ ಭಾರತ ನಿಧಾನವಾಗಿ ಕುದಿಯುತ್ತಿರುವ ಕಡಾಯಿಯಂತಿತ್ತು. ವಿಜಯನಗರ ಸಾಮ್ರಾಜ್ಯ ಭರತಖಂಡದ ರೋಗಿಯೋ ಎಂಬಂತಿತ್ತು. ಸಾಯು ತ್ತಿರುವ ಸಿಂಹವನ್ನು ಸಮಯ ನೋಡಿ ಸೀಳುವ ಸಲುವಾಗಿ ಎರಡೂ ಕಡೆಯಿಂದ ನುಗ್ಗಿ ಬರುವುದಕ್ಕೆ ಕಾದು ನಿಂತ ತೋಳಗಳಂತೆ, ಬಿಜಾಪುರ ಮತ್ತು ಗೋಲ್ಕೊಂಡಗಳ ಸುಲ್ತಾನರು ಉಭಯ ಪಾರ್ಶ್ವ ಗಳಲ್ಲಿಯೂ ಕಾದಿದ್ದರು. ಮೊಗಲ ಸಾಮ್ರಾಜ್ಯ ಕೂಡ ದಕ್ಷಿಣವಲ್ಲೂ ತನ್ನ ಪ್ರಭುತ್ವವನ್ನು ಪಸರಿಸಿ ಮಹಮ್ಮದೀಯ ಮತ್ತು ಹಿಂದೂ ರಾಜರಿಬ್ಬರನ್ನೂ ತನ್ನ ಅಂಕೆಯಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಿತ್ತು. ಮಧುರೆಯ ನಾಯಕನೂ ಸಣ್ಣ ಪುಟ್ಟ ಪ್ರದೇಶಗಳಿಗಾಗಿ ತನ್ನ ತೋಳನ್ನು ಚಾಚುತ್ತಿದ್ದನು. ಇಕ್ಕೇರಿಯ ಶಿವಪ್ಪ, ನಾಗಮಂಗಲದ ಚನ್ನಯ್ಯ, ಪಿರಿಯಾಪಟ್ಟಣದ ನಂಜುಂಡ ಮುದಲಿಯಾರ್ ಮತ್ತು ಇತರ ಪುಟ್ಟ ಪಾಳೆಯಗಾರರು—ಇವರೆಲ್ಲ ಸಣ್ಣದೋ ದೊಡ್ಡದೋ ಆದ ರೀತಿಯಲ್ಲಿ ಎದುರಿಸತಕ್ಕವರಾಗಿದ್ದರು. ಈ ಸಮಯದಲ್ಲಿದ್ದ ಮೈಸೂರು ದೊರೆ ಯುದ್ಧಪ್ರಿಯನಾಗಿ ವಿಜಯಗಳನ್ನು ಪಡೆಯುವುದರಲ್ಲಿ ಆಸಕ್ತ ನಾಗಿದ್ದನು.

ಹೇಗೇ ಆದರೂ, ಆಳುವ ಪ್ರಭುವಿಗೆ ಅದು ಕಷ್ಟ ಕಾಲವೇ ಆಗಿದ್ದಿತು. ಸದಾ ಜಾಗೃತವಾಗಿಯೇ ಇದ್ದು, ಶತ್ರುಗಳನ್ನು ಎದುರಿಸಿ ಓಡಿಸಲು ಮತ್ತು ಯಾವ ಕಠಿನ ಪರಿಸ್ಥಿತಿಗೂ ಸಿದ್ಧವಾಗಿರಬೇಕಾಗಿತ್ತು. ಕಂಠೀರವ ನರಸರಾಜ ಒಡೆಯರ ಸುಕೃತ ವಿಶೇಷದಿಂದ ಕೊನೆಯ ವರೆಗೂ ಆತನಲ್ಲಿದ್ದ ಒಳ್ಳೆಯ ಅದೃಷ್ಟ ಬಲದಿಂದಾಗಿ, ಆತನ ಆಳಿಕೆಯ ಕೊನೆಯ ಹೊತ್ತಿಗೆ ಸುವ್ಯವಸ್ಥಿತ ಆಡಳಿತ, ಒಳ್ಳೆಯ ಸುಸಜ್ಜಿತ ಸೈನ್ಯ ಮತ್ತು ಸಾಕಷ್ಟು ವಿಸ್ತೃತವಾದ ರಾಜ್ಯ—ಇವುಗಳನ್ನು ಅವರು ಸಾಧಿಸಿದರು. ಮೈಸೂರಿನ ಉತ್ತರದ ಗಡಿ ಚೆನ್ನಪಟ್ಟಣ ಮತ್ತು ತುರುವೇಕೆರೆಗಳ ವರೆಗೆ ವಿಸ್ತಾರವಾಯಿತು. ಪೂರ್ವದಲ್ಲಿ ಬಿಜಾಪುರದ ರಾಜ್ಯದ ವರೆಗೂ ಹಬ್ಬಿತು. ದಕ್ಷಿಣದಲ್ಲಿ ಸತ್ಯಮಂಗಲದ ವರೆಗೂ ಚಾಚಿ, ಪಶ್ಚಿಮದಲ್ಲಿ ಕೊಡಗಿನ ವರೆಗೂ ಹರಡಿತು. ಕಂಠೀರವ ಒಡೆಯರು ವಿಜಯನಗರ ಸಮ್ರಾಟ ಶ್ರೀರಂಗನಿಗೆ ತನ್ನ ಶಕ್ತಿಯಿದ್ದಷ್ಟು ಬೆಂಬಲವಿತ್ತರು. ಸಾಯುತ್ತಿರುವ ಸಾಮ್ರಾಜ್ಯದ ಪಕ್ಷವನ್ನು ಹಿಡಿಯುವುದು ಇನ್ನು ಉಪಯೋಗವಿಲ್ಲ ಎಂಬ ಸ್ಥಿತಿಗೆ ಬಂದಾಗ, ಕಂಠೀರವ ರಾಜರು ತಾವು ಸ್ವತಂತ್ರರೆಂದು ಘೋಷಿಸಿದರು.

ಇವರು ಸಮಯೋಪಾಯ ಚತುರರೂ ದೂರದೃಷ್ಟಿಯುಳ್ಳ ಆಡಳಿತಗಾರರೂ ಆಗಿದ್ದುದಲ್ಲದೆ ಸಮರ್ಥ ಯೋಧರೂ ಆಗಿದ್ದರು. ದಳವಾಯಿಗಳು ತಮ್ಮ ಅಂಕೆಯಲ್ಲೇ ಸೇನೆಯನ್ನಿರಿಸಿಕೊಂಡು, ಪ್ರಜಾಡಳಿತದಲ್ಲೂ ತಮ್ಮ ಕೈವಾಡವನ್ನಿಟ್ಟುಕೊಂಡು ತಾವೇ ವಸ್ತುತಃ ದೊರೆಗಳೆಂಬಂತೆ ಆಗಿದ್ದು, ಆ ಸ್ಥಾನದಲ್ಲಿ ಅವರನ್ನು ಹಾಗೆಯೆ ಬಹುಕಾಲ ಇರಗೊಟ್ಟರೆ, ರಾಜನಿಗೆ ಅಪಾಯವೆಂಬ ಸ್ಥಿತಿಯಲ್ಲಿದ್ದರು. ಆದ್ದರಿಂದ ಯಾವ ದಳವಾಯಿಯನ್ನೂ ಹೆಚ್ಚು ಕಾಲ ಅಧಿಕಾರದಲ್ಲಿ ಮುಂದುವರಿಸಲಿಲ್ಲ. ಇವರ ಇಪ್ಪತ್ತು ವರ್ಷಗಳ ಆಡಳಿತ ಕಾಲದಲ್ಲಿ ಹತ್ತುಜನ ದಳವಾಯಿಗಳಾಗಿಹೋದರು !

ಕಂಠೀರವ ಒಡೆಯರು ತಮ್ಮ ವಿಸ್ತೃತವಾದ ರಾಜ್ಯದಲ್ಲಿ ತಮ್ಮ ಪೂರ್ವಜರಾದ ರಾಜ ಒಡೆಯರ ಪೌರಾಡಳಿತ ವ್ಯವಸ್ಥೆಯನ್ನು ಬೆಳೆಸಿದರು. ತುಂಟ ಧನಿಕರಿಂದ ಹಣವನ್ನು ಹಿಂಡಿದರು. ಟಂಕಸಾಲೆ

ಯನ್ನು ಸ್ಥಾಪಿಸಿ ತಮ್ಮ ಹೆಸರಿನ ನಾಣ್ಯಗಳನ್ನು ಜಾರಿಗೆ ತಂದರು. ಧರ್ಮದಲ್ಲಿ ತುಂಬ ಶ್ರದ್ಧಾಳು ವಾಗಿದ್ದುದೇ ಅಲ್ಲದೆ, ಕಲೆ ಸಾಹಿತ್ಯಗಳ ಉದಾರ ಪೋಷಕರೂ ಆಗಿದ್ದರು.

ಈ ಆಳಿಕೆಯಲ್ಲಿ ರಚಿತವಾದ ಪ್ರಮುಖ ಗ್ರಂಥಗಳೆಂದರೆ–ಚಕ್ರಬಡ್ಡಿ, ಚದರ ಅಳತೆ ಸರಪಣಿ ಅಳತೆ ಮತ್ತು ನಾಣ್ಯ ಗಣಿತಗಳನ್ನು ವಿವರಿಸುವ ಭಾಸ್ಕರನ **ಬೇಹಾರ ಗಣಿತ**; ತಿಮ್ಮರಸನ **ಮಾರ್ಕಾಂಡೇಯ ರಾಮಾಯಣ**; ಗೋವಿಂದ ವೈದ್ಯನ **ಕಂಠೀರವ ನರಸರಾಜ ವಿಜಯಂ**. ಕಂಠೀರವ ನರಸರಾಜ ಒಡೆಯರು ತಮ್ಮ 45 ನೆಯ ವಯಸ್ಸಿನಲ್ಲಿ ಕ್ರಿ.ಶ. 1659 ರಲ್ಲಿ ಸ್ವರ್ಗಸ್ಥರಾದರು.

ಅವರ ದಾಯಾದಿ ದೇವರಾಜ ಒಡೆಯರು ಇವರ ಉತ್ತರಾಧಿಕಾರಿಗಳಾದರು; ಆದರೆ ಪ್ರಾರಂಭ ದಲ್ಲೇ ಅವರು ಅನೇಕ ತೊಂದರೆಗಳನ್ನು ಎದುರಿಸಬೇಕಾಯಿತು. ಪ್ರಬಲರಾಜನ ಮರಣವೆಂಬುದು ನೆರೆಯವರು ಕೆಳಗಿಟ್ಟಿದ್ದ ತಮ್ಮ ಆಯುಧಗಳನ್ನೆತ್ತಿಕೊಳ್ಳಲು ಸೂಚನೆ ಎಂಬಂತಾಯಿತು. ಬಿದನೂರಿನ ಇಕ್ಕೇರಿ ಶಿವಪ್ಪನಾಯಕನು ರಾಜ್ಯದ ಮೇಲೆ ದಾಳಿಮಾಡಿ ರಾಜಧಾನಿಗೆ ಮುತ್ತಿಗೆ ಹಾಕಿದನು. ದೇವರಾಜ ಒಡೆಯರು ಈತನನ್ನು ತಡೆದು ಓಡಿಸಿದುದೆ ಅಲ್ಲದೆ, ಅವನ ಪ್ರದೇಶದ ಮೇಲೂ ದಾಳಿಮಾಡಲು ಸಮರ್ಥ ರಾದರು. ಮಧುರೆಯ ನಾಯಕ ದಕ್ಷಿಣದ ಕಡೆಯಿಂದ ಮುತ್ತಿಗೆ ಹಾಕಿದನು. ನೂತನ ಮಹಾರಾಜರು ಅವನನ್ನು ಹಿಂದಕ್ಕೆ ಓಡಿಸಿ ಈರೋಡು, ಧಾರಾಪುರಗಳನ್ನು ಅವನಿಂದ ಕಿತ್ತುಕೊಂಡರು. ತಾವು ಸಾಧಿಸಿದ ಈ ಗೆಲವುಗಳ ಸ್ಮಾರಕವಾಗಿ, ಸೋತ ಶತ್ರುಗಳಲ್ಲಿ ತಮಗಿದ್ದ ತಿರಸ್ಕಾರದ ಸೂಚನೆಯಾಗಿ–ಈ ಯುದ್ಧಗಳಲ್ಲಿ ಅವರಿಂದ ಕಿತ್ತುಕೊಂಡ ಅಪಾರ ಆಭರಣರಾಶಿಯಿಂದ ರತ್ನಖಚಿತವಾದ ಪಾದರಕ್ಷೆಗಳನ್ನು ಮಾಡಿಸಿ, ವಿಶೇಷ ಸಂದರ್ಭಗಳಲ್ಲಿ ಹಾಕಿಕೊಳ್ಳುತ್ತಿದ್ದರು. ಉಳಿದ ಕನಕರಾಶಿಯನ್ನು ಯೋಧರಿಗೆ ಬಹು ಮಾನವಾಗಿಯೂ ದೇವಾಲಯ, ತಟಾಕ ಮತ್ತು ಧರ್ಮಸತ್ರಗಳ ನಿರ್ಮಾಣಕ್ಕಾಗಿಯೂ ವಿತರಣೆ ಮಾಡಿದರು. ಇದಲ್ಲದೆ ಈ ರಾಜರು ಮೈಸೂರಿನಲ್ಲಿರುವ ಶ್ರೀಚಾಮುಂಡೇಶ್ವರಿ ಬೆಟ್ಟಕ್ಕೆ ಸಾವಿರ ಸೋಪಾನ ಗಳನ್ನು ಮಾಡಿಸಿದುದಲ್ಲದೆ, ಅರ್ಧದಾರಿಯಲ್ಲಿರುವ ಸುಂದರವಾದ ವೃಷಭದ ಶಿಲಾಮೂರ್ತಿಯನ್ನು ನಿರ್ಮಾಣ ಮಾಡಿಸಿದರು.

ದೇವರಾಜ ಒಡೆಯರ ಆಳಿಕೆಯ ಕಾಲ ಮೈಸೂರಿನೊಂದಿಗೆ ಐರೋಪ್ಯಸಂಪರ್ಕವನ್ನು ಪ್ರಾರಂಭಿ ಸಿತು. ಕ್ರಿ.ಶ. 1671 ರಲ್ಲಿ ಫ್ರೆಂಚರ ನಿಯೋಗಿ ಫ್ಲೇಕನ್ ಎಂಬಾತ ಒಂದು ವ್ಯಾಪಾರದ ಕೌಲಿಗಾಗಿ ತಲಚೇರಿಯಿಂದ ಮೈಸೂರಿಗೆ ಬಂದಿದ್ದನೆಂದು ಚರಿತ್ರಕಾರ ಆರ್ಮೆ ಎಂಬಾತ ಹೇಳುತ್ತಾನೆ. ಹದಿಮೂರೂ ವರೆ ವರ್ಷ ಆಳಿದ ದೇವರಾಜ ಒಡೆಯರು ಕ್ರಿ.ಶ. 1673 ರಲ್ಲಿ ಸ್ವರ್ಗಸ್ಥರಾದರು.

ಕಂಠೀರವ ನರಸರಾಜ ಒಡೆಯರು ವಿಧ್ಯುಕ್ತವಾಗಿ ವಿಜಯನಗರ ಸಾಮ್ರಾಜ್ಯಕ್ಕೆ ನಿಷ್ಠಾವಂತ ರಾಗಿದ್ದುಕೊಂಡು ವಸ್ತುತಃ ಮೈಸೂರು ರಾಜ್ಯದ ಸ್ವಾತಂತ್ರ್ಯವನ್ನು ಕಾಪಾಡಿಕೊಂಡು ಬಂದರೆ, ದೇವರಾಜ ಒಡೆಯರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ವಿಜಯನಗರಸಾಮ್ರಾಜ್ಯದ ರಾಜಕೀಯ ವಾರಸು ಮೈಸೂರಿಗೇ ಬರಬೇಕು ಎಂಬ ಹಕ್ಕನ್ನು ಸ್ಥಾಪಿಸಿದರು. ತಮ್ಮ ಕಲ್ಯಾಣಕಾರಕ ಕಾರ್ಯಗಳಿಂದಾಗಿ ಪ್ರಜಾಸ್ತೋಮದ ಪ್ರಶಂಸೆಗೌರವಾದರಗಳೊಂದಿಗೆ ಇಹಜೀವನವನ್ನು ಮುಗಿಸಿದವರಾದರು.ಇವರ ಸೋದರ ಪುತ್ರ ಚಿಕ್ಕದೇವರಾಜ ಒಡೆಯರು ಇವರ ಉತ್ತರಾಧಿಕಾರಿಗಳಾದರು. ಒಡೆಯರ ವಂಶದಲ್ಲೇ ಅತ್ಯಂತ ವಿಶಿಷ್ಟ ರಾಜರೆಂದು ಇವರ ಹೆಸರು ಪ್ರಜೆಗಳ ಹೃದಯಮಂದಿರದಲ್ಲಿ ಮುದ್ರಿತವಾಗಿದೆ. ಚಿಕ್ಕದೇವರಾಜರು 'ಕರ್ನಾಟಕ ಚಕ್ರವರ್ತಿ', 'ಅಪ್ರತಿಮವೀರ' ಮತ್ತು 'ತೆಂಕಣರಾಜ' ಎಂಬ ಬಿರುದುಗಳನ್ನು ಧರಿಸಿದರು.

ಕ್ರಿ.ಶ. 1645 ರಲ್ಲಿ ಜನ್ಮವೆತ್ತಿದ ಇವರು ಕ್ರಿ.ಶ. 1673 ರಲ್ಲಿ ತಮ್ಮ 28 ನೆಯ ವಯಸ್ಸಿನಲ್ಲಿ

ಸಿಂಹಾಸನಾರೋಹಣ ಮಾಡಿದರು. ಸಿಂಹಾಸನವೇರಿದ ಐದು ದಿನಗಳೊಳಗೇ ಇವರು ಮಧುರೆಯ ಚೊಕ್ಕನಾಥನ ದಾಳಿಯನ್ನು ಎದುರಿಸಲು ತಮ್ಮ ಸೈನ್ಯವನ್ನು ನಡೆಸಬೇಕಾಯಿತು. ಪೂರ್ಣವಿಜಯ ಪ್ರಾಪ್ತಿಯಾಗಿ ರಾಜಧಾನಿಗೆ ಹಿಂದಿರುಗಿದರು. ಅನಂತರ ಇಕ್ಕೇರಿಯೊಂದಿಗೆ ಯುದ್ಧ ; ಆ ಮೇಲೆ ಬಿಜಾಪುರ ದೊಡನೆ; ಅನಂತರ ಕ್ರಿ.ಶ. 1677 ರಲ್ಲಿ ಪ್ರಬಲ ಅಜೇಯನೆನಿಸಿದ ಶಿವಾಜಿಯ ದಾಳಿಯನ್ನು ಎದುರಿಸ ಬೇಕಾಯಿತು. ಇವರನ್ನೆಲ್ಲಾ ಚಿಕ್ಕದೇವರಾಜ ಒಡೆಯರು ಎದುರಿಸಿ ಹಿಂದಕ್ಕಟ್ಟಿದರು. ಅನಂತರ ಮಾಗಡಿ, ಮಧುಗಿರಿ, ಕೊರಟಗೆರೆ ಮತ್ತಿತರ ಪ್ರಾಂತಗಳನ್ನು ಅವರಾಗಿಯೇ ಹೋಗಿ ಗೆದ್ದರು. ಕ್ರಿ.ಶ. 1682 ರಲ್ಲಿ ಸಾಂಬಾಜಿಯ ನೇತೃತ್ವದಲ್ಲಿ ಅವನ ಸೇನಾನಾಯಕರಾಗಿದ್ದ ದಾದಾಜಿ, ಜಾತಾಜಿ ಮತ್ತು ನಿಂಬಾಜಿ ಅವರುಗಳೊಂದಿಗೆ ಬಂದು ದಾಳಿಮಾಡಿದ ಮಾರಾಟಸೇನೆಯ ಎರಡನೆಯ ದಾಳಿ ನಡೆಯಿತು. ಈ ಯುದ್ಧದಲ್ಲಿಯೂ ಚಿಕ್ಕದೇವರಾಜ ಒಡೆಯರಿಗೇ ಗೆಲವು ದೊರೆಯಿತು. ಮರಾಟರಿಗೆ ಸಂಪೂರ್ಣ ಸೋಲಾಗಿ ಮೂವರು ಮರಾಟ ಸೇನಾನಾಯಕರೂ ಸಂಹಾರವಾದರು. ರಾಜರಿಗೆ ಅಧಿಕ ಸಂಪತ್ತು ದೊರೆಯಿತು.

ಕ್ರಿ.ಶ. 1686 ರಲ್ಲಿ ಚಿಕ್ಕದೇವರಾಜ ಒಡೆಯರು ಮೈಸೂರಿನ ಸಾರ್ವಭೌಮ ಪ್ರಭು ಎಂದು ಸ್ಥಿರ ಪಟ್ಟ ಪಡೆದುದಲ್ಲದೆ, ದಕ್ಷಿಣ ಭಾರತದಲ್ಲೇ ಅವರ ಸಾರ್ವಭೌಮಾಧಿಕಾರ ಸ್ಥಾಪಿಸಿದಂತಾಯಿತು. ಕ್ರಿ.ಶ. 1687 ರಲ್ಲಿ ಮೊಗಲರ ಪ್ರಧಾನ ಸೇನಾನಿ ಖಾಸಿಮ್ ಖಾನನಿಂದ ಮೂರುಲಕ್ಷ ರೂಪಾಯಿಗಳಿಗೆ ಬೆಂಗಳೂರನ್ನು ಕ್ರಯದಲ್ಲಿ ಪಡೆದು ಸಂಪಾದಿಸಿದರು. ಅವರ ಆಳಿಕೆಯ ಅಂತ್ಯ ದಿನಗಳಲ್ಲಿ ನಡೆದ ಪ್ರಮುಖ ಘಟನೆಯೆಂದರೆ, ಮೊಗಲ್‌ಚಕ್ರವರ್ತಿ ಔರಂಗಜೇಬನೊಂದಿಗೆ ನಡೆಸಿದ ರಾಯಭಾರ. ಮರಾಟರ ಪ್ರಗತಿಯನ್ನು ಸ್ಥಗಿತಗೊಳಿಸಿ ಮುಂದುವರಿಯುತ್ತಿದ್ದ ಮೈಸೂರು ರಾಜರು ಔರಂಗಜೇಬನ ದೃಷ್ಟಿಯಲ್ಲಿ ದೊಡ್ಡವರಾಗಿದ್ದರು. ಮರಾಟರ ಮುತ್ತಿಗೆಗಳಿಂದ ತಮ್ಮ ರಾಜ್ಯವನ್ನು ಕ್ಷೇಮವಾಗಿರಿಸಿಕೊಳ್ಳುವ ಸಲುವಾಗಿ ಚಿಕ್ಕದೇವರಾಜರು ಮೊಗಲ್ ಚಕ್ರವರ್ತಿಯ ನಿರಂತರ ಸ್ನೇಹ ಸಂಪಾದನೆಯನ್ನು ಆಶಿಸಿದರು. ಕರಣಿಕ ಲಿಂಗಪ್ಪಯ್ಯನ ನೇತೃತ್ವದಲ್ಲಿ ಈ ರಾಯಭಾರ ನಡೆಯಿತು.

ಈ ರಾಯಭಾರದ ಏರ್ಪಾಟಿನಲ್ಲಿ ಇನ್ನೊಂದು ಮುಖ್ಯ ಉದ್ದೇಶವೂ ಅಡಗಿತ್ತು ; ಚಿಕ್ಕದೇವರಾಜ ರೊಂದಿಗೆ ಮೈತ್ರಿಯಿಂದಿದ್ದ ಖಾಸಿಮ್‌ಖಾನನ ಮರಣಾನಂತರ ಕ್ರಿ.ಶ. 1698 ರಲ್ಲಿ ಸಂಭವಿಸಬಹುದಾಗಿದ್ದ ಮೊಗಲರ ದಂಡಯಾತ್ರೆಯಿಂದ ಮೈಸೂರನ್ನು ರಕ್ಷಿಸುವುದೇ ಆ ಉದ್ದೇಶವೆನ್ನಬಹುದು. ಮೈಸೂರಿನ ಈ ರಾಯಭಾರ ಚಕ್ರವರ್ತಿಯ ಮೇಲೆ ಅಂತಹ ಘನವಾದ ಪ್ರಭಾವವನ್ನೇನೂ ಉಂಟುಮಾಡದಿದ್ದರೂ ಅದು ಪ್ರೇಕ್ಷಣೀಯ ಪ್ರಭಾವವನ್ನುಂಟುಮಾಡಿತು. ಮೈಸೂರಿನ ಘನತೆ ಸ್ಥಳೀಯವಾಗಿ ತುಂಬ ಅಧಿಕವಾಯಿತು. ಮೈಸೂರಿನ ರಾಜರು ಮೊಗಲ ಸಮ್ರಾಟರೊಂದಿಗೆ ಮೈತ್ರಿ ಬೆಳೆಸಿರುವ ಒಂದು ಶಕ್ತಿಯೆಂದೂ ಒಳ ಹೊರ ಕಿರುಕುಳಗಳಿಲ್ಲದವರೆಂದೂ ಪರಿಗಣಿತರಾದರು.

ಚಿಕ್ಕದೇವರಾಜರ ಸ್ಥಳೀಯ ರಾಜನೀತಿಯೂ ಕಡಮೆ ಗಮನಾರ್ಹವಾದುದೇನಾಗಿರಲಿಲ್ಲ. ವಿಶಾಲಾಕ್ಷ ಪಂಡಿತ, ತಿರುಮಲ ಅಯ್ಯಂಗಾರ್, ಷಡಕ್ಷರಯ್ಯ, ಚಿಕುಪಾಧ್ಯಾಯ ಮತ್ತು ಲಿಂಗಣ್ಣಯ್ಯ ಎಂಬ ಮಂತ್ರಿಗಳನ್ನೊಳಗೊಂಡ ಒಂದು ಸಚಿವ ಸಂಪುಟವನ್ನು ನೇಮಕಮಾಡಿದ್ದರು. ಕ್ರಿ.ಶ. 1673ರಿಂದ, 1686ರಲ್ಲಿ ಕೊಲೆಯಾಗುವ ವರೆಗೆ ವಿಶಾಲಾಕ್ಷ ಪಂಡಿತನು ಪ್ರಧಾನ ಮಂತ್ರಿಯಾಗಿದ್ದನು, ಇವನ ತರುವಾಯ ಆ ಪದವಿಗೆ ತಿರುಮಲ ಅಯ್ಯಂಗಾರ್ ಬಂದು ಕ್ರಿ.ಶ, 1704ರ ವರೆಗೆ ಅಧಿಕಾರದಲ್ಲಿದ್ದನು. ರಾಜ್ಯಕ್ಕೆಲ್ಲಾ ಅನ್ವಯವಾಗುವಂತಹ ಅಂಚೆವ್ಯವಸ್ಥೆಯನ್ನು ಸ್ಥಾಪಿಸಿದರು. ಭೂ ಮತ್ತು ಇತರ ಕಂದಾಯಗಳ ಕಾನೂನುಗಳನ್ನು ಕ್ರೋಡೀಕರಿಸಿ, ಯಾವೊಬ್ಬ ಪ್ರಜೆಯೂ ಈರ್ಷ್ಯಾಸ್ಪದ ರೀತಿಯಲ್ಲಿ ಐಶ್ವರ್ಯವಂತನಾಗದಂತೆ ಮಾಡಲಾಯಿತು. ಕೇಂದ್ರಾಡಳಿತವನ್ನು ಹದಿನೆಂಟು ಇಲಾಖೆಗಳನ್ನಾಗಿ ವಿಭಾಗಿಸಿ

ಗ್ರಾಮಕಲ್ಯಾಣವನ್ನು ವ್ಯವಸ್ಥೆ ಮಾಡಲಾಯಿತು. ಅಧಿಕಾರಿಗಳಿಗೆ ಕೊಡಬೇಕಾದ ಸಂಬಳವನ್ನು, ಅರ್ಧದಷ್ಟು ನಗದು ಹಣರೂಪದಲ್ಲೂ ಉಳಿದ ಅರ್ಧವನ್ನು ಆಹಾರಧಾನ್ಯರೂಪದಲ್ಲೂ ಪಾವತಿ ಮಾಡಲಾಗುತ್ತಿದ್ದು, ಯಾವೊಬ್ಬ ನೌಕರನೂ ತನಗೆ ಬರುವ ಆದಾಯಕ್ಕಿಂತ ಅಧಿಕವಾಗಿ ವೆಚ್ಚ ಮಾಡಕೂಡದೆಂಬ ನಿಯಮವನ್ನು ವಿಧಿಸಲಾಯಿತು. ರಾಜ್ಯದ ವಾರ್ಷಿಕ ಆದಾಯ, ಏಳು ಲಕ್ಷದ ಇಪ್ಪತ್ತು ಸಾವಿರ ಪಗೋಡಗಳಾಗಿದ್ದು, ಅರ್ಥಸಚಿವರು ಪ್ರತಿದಿನ ಮಧ್ಯಾಹ್ನದ ಹೊತ್ತಿಗೆ ರಾಜ್ಯದ ಬೊಕ್ಕಸಕ್ಕೆ ಎರಡು ಸಾವಿರ ಪಗೋಡಗಳನ್ನು ಸಲ್ಲಿಸಬೇಕಾಗಿದ್ದಿತು. ಅದು ಸಲ್ಲುವ ವರೆಗೂ ಮಹಾರಾಜರು ಆರೋಗಣೆಗೆ ಏಳುತ್ತಿರಲಿಲ್ಲ. ಈ ಬಗೆಯ ಎಚ್ಚರಿಕೆಯ ಆರ್ಥಿಕ ನಿರ್ವಹಣೆಯಿಂದ ಮಹಾರಾಜರು ತಮ್ಮ ಭಂಡಾರದಲ್ಲಿ ಒಂಬತ್ತು ಕೋಟಿ ಪಗೋಡಗಳಷ್ಟು ಅಪಾರ ಧನ ಸಂಗ್ರಹ ಮಾಡಿದ್ದು, ಪ್ರಜೆಗಳಿಂದ 'ನವಕೋಟಿ ನಾರಾಯಣ' ಎಂಬ ಪ್ರಶಂಸೆಗೆ ಪಾತ್ರರಾಗಿದ್ದರು.

ಆಡಳಿತ ಸುವ್ಯವಸ್ಥೆಯನ್ನು ತಂದುದೇ ಅಲ್ಲದೆ, ತೂಕ ಮತ್ತು ಅಳತೆಗಳನ್ನು ನಿರ್ದಿಷ್ಟಗೊಳಿಸಿ, ನಿಯಂತ್ರದ ಮಾರುಕಟ್ಟೆಗಳನ್ನು ಸ್ಥಾಪಿಸಿ, ಮೌಲ್ಯಪ್ರಮಾಣಗಳನ್ನು ನಿಷ್ಕರ್ಷಿಸಿ, ಪ್ರಜೆಗಳ ವ್ಯಾಪಾರ ವಹಿವಾಟುಗಳನ್ನು ಕೂಡ ತಮ್ಮ ಅಂಕೆಯಲ್ಲಿರಿಸಿಕೊಂಡಿದ್ದರು. ಬೆಂಗಳೂರಿನಲ್ಲಿ ಹನ್ನೆರಡು ಸಾವಿರ ನೆಯ್ಗೆಯವರನ್ನು ತಂದು ಸ್ಥಾಪಿಸಿ, ಅವರು ತಯಾರಿಸಿದ ವಸ್ತುಗಳನ್ನು ನಿರ್ಯಾತ ಮಾಡುವುದಕ್ಕೂ ಏರ್ಪಾಟು ಮಾಡಿದರು. ಶ್ರೀರಂಗಪಟ್ಟಣದಲ್ಲಿ ಫಿರಂಗಿ ಮತ್ತು ಮದ್ದು ಇತ್ಯಾದಿ ಸೇನೋಪಕರಣಗಳನ್ನು ತಯಾರಿಸುವ ಕೇಂದ್ರವನ್ನು ವಿಸ್ತರಿಸಿದರು. ಕಾವೇರಿನದಿಗೆ ಅಣೆಕಟ್ಟನ್ನು ಕಟ್ಟಿ ಅಧಿಕ ಪ್ರದೇಶಗಳನ್ನು ನೀರಾವರಿಗೆ ತರುವ ಚಿಕ್ಕ ದೇವರಾಜ ನಾಲೆ ಮತ್ತು ದೇವರಾಜನಾಲೆ ಎಂಬ ಎರಡು ಕಾಲುವೆಗಳನ್ನು ನಿರ್ಮಾಣಮಾಡಿದರು.

"ನನ್ನ ರಾಜ್ಯದಲ್ಲಿ ಸುಪ್ರಸಿದ್ಧವಾದ ಹಲವು ದೇವಸ್ಥಾನಗಳಿವೆ ; ಮೈಸೂರಿನಲ್ಲಿ ಮೇಲುಕೋಟೆ ದೇವಾಲಯ ಬಿಟ್ಟರೆ ಮತ್ತೇನಿದೆ?" ಎಂದು ತಂಜಾವೂರಿನ ಮರಾಟರ ಅರಸು ಮೂದಲಿಸಿ ನುಡಿದುದನ್ನು ಕೇಳಿದ ಚಿಕ್ಕದೇವರಾಜರು ಮೈಸೂರಿನಲ್ಲಿ ಶ್ವೇತವರಾಹ, ಹರದನಹಳ್ಳಿಯಲ್ಲಿ ಗೋಪಾಲಕೃಷ್ಣ, ವರ್ಕೋಡಿಯಲ್ಲಿ ವರದರಾಜರ ದೇವಾಲಯಗಳನ್ನು ನಿರ್ಮಾಣ ಮಾಡಿ, ಅವುಗಳ ನಿರ್ವಹಣೆಗಾಗಿ ದತ್ತಿಗಳನ್ನು ಸ್ಥಾಪಿಸಿದರು.

ಚಿಕ್ಕದೇವರಾಜರ ಮೂವತ್ತೆರಡು ವರ್ಷಗಳ ಆಳಿಕೆ ಕ್ರಿ.ಶ. 1704 ರಲ್ಲಿ ಕೊನೆಗೊಂಡಿತು. ಚಿಕ್ಕದೇವರಾಜ ಒಡೆಯರ ಉತ್ತರಾಧಿಕಾರಿಗಳ ಕ್ರಿ.ಶ. 1761 ರ ವರೆಗಿನ ಆಳಿಕೆಯ ಕಾಲಾವಧಿಯನ್ನು "ದಳವಾಯಿಗಳ ಆಡಳಿತ"ವೆಂದು ಸುಲಭವಾಗಿ ಹೇಳಬಹುದು. ಮಹಾರಾಜರು ಸಮರ್ಥರಾಗಿದ್ದು, ರಾಜ್ಯಾಡಳಿತವನ್ನು ನಡೆಸಿಕೊಂಡು ಹೋಗುತ್ತಿರುವ ವರೆಗೂ, ದಳವಾಯಿ ದೇಶದ ರಾಜಕೀಯದಲ್ಲಿ ಗೌಣಾಧಿಕಾರಿಯಾಗಿದ್ದನು. ಕೆಲವು ಅಪವಾದಗಳನ್ನು ಬಿಟ್ಟರೆ, ಸಾಮಾನ್ಯವಾಗಿ ನಾಡಿಗೆ ದಳವಾಯಿಗಳ ಸೇವೆ ಎಂಬುದು ಪ್ರಶಂಸನೀಯವಾಗಿಯೇ ಇದ್ದಿತು. ಕ್ರಿ.ಶ. 1758 ರಲ್ಲಿ ಇಮ್ಮಡಿ ಕೃಷ್ಣರಾಜ ಒಡೆಯರು ಕಳಲೆ ನಂಜರಾಜಯ್ಯನ ಪರವಾಗಿ ಬಿಡುಗಡೆ ಮಾಡಿದ '**ಭಾಷಾ ಪತ್ರ**' ಮತ್ತು '**ನಂಬುಗೆ ನಿರೂಪ**' ಗಳೆಂಬ ಪ್ರಮುಖ ರಾಜಕೀಯ ಪತ್ರಗಳಿಂದ ಈ ಸೇನಾಪತಿಗಳಿಗೆ (ದಳವಾಯಿ) ಪ್ರಾಪ್ತವಾದ ಅತಿ ಅಧಿಕಾರವನ್ನು ಹೈದರ್ ಆಲಿ 1761 ರಲ್ಲಿ ಚೆನ್ನಾಗಿ ಉಪಯೋಗಿಸಿಕೊಂಡನು.

ಚಿಕ್ಕದೇವರಾಜರ ಪುತ್ರ ಎರಡನೆಯ ಕಂಠೀರವ ನರಸರಾಜ ಒಡೆಯರು ತಂದೆಯ ತರುವಾಯ ಪಟ್ಟಕ್ಕೆ ಬಂದು ಹತ್ತು ವರ್ಷ ಆಳಿದ ಮೇಲೆ ಕ್ರಿ.ಶ. 1714 ರಲ್ಲಿ, ಅವರ ಮಗ ದೊಡ್ಡ ಕೃಷ್ಣರಾಜ ಒಡೆಯರು ಪಟ್ಟಕ್ಕೆ ಬಂದರು. ಕ್ರಿ.ಶ. 1724 ರಲ್ಲಿ ಹೈದರಾಬಾದಿನ ನೈಜಾಮ್, ಆರ್ಕಾಟ್ ಸಿರಾ

ಕಡಪ ಕರ್ನೂಲು ಮತ್ತು ಸವಣೂರುಗಳ ನವಾಬರು, ಇಕ್ಕೇರಿಯ ಲಿಂಗಪ್ಪ, ಗುತ್ತಿಯ ಗೋರ್ಪಡೆ ಎಲ್ಲಾ ಒಟ್ಟಿಗೆ ಸೇರಿಕೊಂಡು, ಮೈಸೂರು ರಾಜ್ಯದ ಮೇಲೆ ಸಂಯುಕ್ತ ಮುತ್ತಿಗೆ ಹಾಕಿದಾಗ, ಅದನ್ನು ಹಣ ಕೊಟ್ಟು ನಿವಾರಿಸಿಕೊಳ್ಳಬೇಕಾಯಿತು. ಅದರ ಮುಂದಿನ ವರ್ಷ ಪೇಶ್ವೆ ಮೊದಲನೆಯ ಬಾಜೀರಾಯ ದಾಳಿ ಮಾಡಿದನು. ಆದರೆ ಆಗ ಮೈಸೂರು ಸಮರ್ಥವಾಗಿ ಅದನ್ನು ಎದುರಿಸಿ ತನ್ನನ್ನು ತಾನು ರಕ್ಷಿಸಿಕೊಳ್ಳಲು ಸಮರ್ಥವಾಯಿತು ; ಬಾಜೀರಾಯನು "ಅದು ಶ್ರೀರಂಗಪಟ್ಟಣವಲ್ಲ, ಫಿರಂಗಿಪಟ್ಟಣ" ಎಂಬ ಉದ್ಗಾರದೊಂದಿಗೆ ಹಿಂದಿರುಗಬೇಕಾಯಿತು.

ಅನಂತರ ಮೈಸೂರಿನ ಸೇನೆ ಸಾವನದುರ್ಗ ಮತ್ತು ಮಾಗಡಿಗಳ ಮೇಲೆ ದಾಳಿ ಮಾಡಿ, ಸೇಲಂ ಮತ್ತು ರತ್ನಗಿರಿಗಳ ವರೆಗೂ ಮುಂದುವರಿದು ಅಪಾರ ಐಶ್ವರ್ಯವನ್ನು ಸೂರೆ ಮಾಡಿತು. ಕ್ರಿ.ಶ. 1732ರಲ್ಲಿ ಮೂವತ್ತನೆಯ ವಯಸ್ಸಿನಲ್ಲಿಯೇ ದೊಡ್ಡ ಕೃಷ್ಣರಾಜರು ದಿವಂಗತರಾದರು. ಇವರ ಕಾಲದಲ್ಲಿ **ಸಕಲ ವೈದ್ಯಸಂಹಿತಾ ಸಾರಾರ್ಣವ** ವೆಂಬ ಒಳ್ಳೆಯ ವೈದ್ಯ ಗ್ರಂಥವೊಂದು ರಚಿತವಾಯಿತು.

ರಾಜರಿಗೆ ಮಕ್ಕಳಿಲ್ಲದಿದ್ದ ಪ್ರಯುಕ್ತ, ಅವರ ಪತ್ನಿ ತಮ್ಮ ಅನುಬಂಧಿ ಅಂಕನಹಳ್ಳಿ ಚಾಮರಾಜ ಒಡೆಯರೆಂಬವರನ್ನು ದತ್ತು ತೆಗೆದುಕೊಂಡರು. ದಳವಾಯಿ ದೇವರಾಜಯ್ಯನಿಗೂ ರಾಜಕುಮಾರನಿಗೂ ಘರ್ಷಣೆಯುಂಟಾಗಿ, ಕ್ರಿ.ಶ. 1734 ರ ಜೂನ್ ತಿಂಗಳಲ್ಲಿ ದಳವಾಯಿ, ಮಹಾರಾಜರನ್ನು ಸೆರೆಹಿಡಿದು ಪತ್ನೀ ಸಮೇತ ಕಬ್ಬಾಳದುರ್ಗದಲ್ಲಿ ಬಂಧನದಲ್ಲಿಟ್ಟನು.

ವಿಧವೆ ರಾಣಿ ದೇವಾಜಮ್ಮಣ್ಣಿಯವರು ಅನಂತರ ಮತ್ತೊಬ್ಬ ಬಾಲಕನನ್ನು ದತ್ತು ತೆಗೆದುಕೊಂಡು, ಇಮ್ಮಡಿ ಕೃಷ್ಣರಾಜ ಒಡೆಯರೆಂಬ ಹೆಸರಿನಿಂದ ಪಟ್ಟಕಟ್ಟಿದರು. ಈ ಮಹಾರಾಜ ಕಿರಿಯವನಾದುದರಿಂದ, ರಾಜ್ಯದ ಅಧಿಕಾರ ಸೂತ್ರಗಳೆಲ್ಲ ದಳವಾಯಿ ದೇವರಾಜಯ್ಯ ಮತ್ತು ಆತನ ಸೋದರ ಸರ್ವಾಧಿಕಾರಿ ನಂಜರಾಜಯ್ಯ ಇವರ ಕೈಯಲ್ಲಿ ಇದ್ದಿತು. ಭರತ ಖಂಡದಲ್ಲಿ ಆಗ ಪರಿಸ್ಥಿತಿ ಸರಿಯಿರಲಿಲ್ಲ. ಮೊಗಲ ಸಾಮ್ರಾಜ್ಯ ಕುಸಿಯುತ್ತಿತ್ತು ಮತ್ತು ನೈಜಾಮ್ ಪೇಶ್ವೆಗಳು, ದಖಿನ್ ನವಾಬರು--ಎಲ್ಲ ಯುದ್ಧದಲ್ಲಿ ಆಸಕ್ತರಾಗಿದ್ದರು. ಯಾವ ರಾಜ್ಯಕ್ಕೂ ಕ್ಷೇಮವಿರಲಿಲ್ಲ. ಸಾಮಾನ್ಯ ಜನರು ತುಂಬ ತೊಂದರೆಗೆ ಈಡಾದರು.

ಕ್ರಿ.ಶ. 1746 ರಲ್ಲಿ ಮೈಸೂರು ಸೈನ್ಯ ಒಬ್ಬ ಪಾಳೆಯಗಾರನ ವಶದಲ್ಲಿದ್ದ ದೇವನಹಳ್ಳಿಗೆ ಮುತ್ತಿಗೆ ಹಾಕಿತು. ಈ ಮುತ್ತಿಗೆ ಒಂಬತ್ತು ತಿಂಗಳ ಕಾಲ ನಡೆದು, ಮುಂದೆ ಮೈಸೂರಿನ ವ್ಯವಹಾರಗಳಲ್ಲಿ ಪ್ರಮುಖ ಪಾತ್ರ ವಹಿಸುವ ಅದೃಷ್ಟ ಪಡೆದಿದ್ದ ಹೈದರ್ ಆಲಿ ಎಂಬ ತರುಣ ಯೋಧನ ಚಾಕಚಕ್ಯತೆಯಿಂದ, ಅದು ಯಶಸ್ವಿಯಾಯಿತು.

ಈ ಹೊತ್ತಿಗೆ ಡೂಪ್ಲೆಯ ನೇತೃತ್ವದಲ್ಲಿ ಫ್ರೆಂಚರೂ ಕ್ಲೈವನ ನೇತೃತ್ವದಲ್ಲಿ ಇಂಗ್ಲಿಷರೂ ತಮ್ಮ ತಮ್ಮ ಬಲಾಬಲಗಳನ್ನು ಅಳೆದುಕೊಳ್ಳುತ್ತಾ ವಿವಿಧ ಪಕ್ಷಗಳನ್ನು ವಹಿಸುತ್ತ, ದಕ್ಷಿಣ ಭಾರತದ ವ್ಯವಹಾರ ರಂಗವನ್ನು ಹೊಕ್ಕರು. ಮೈಸೂರಿನಲ್ಲಿ ಮಹಾರಾಜರೆಂಬವರು ಕೇವಲ ಹೆಸರಿಗಿದ್ದರು ; ಅಧಿಕಾರವೆಲ್ಲ ದೇವರಾಜಯ್ಯ ಮತ್ತು ನಂಜರಾಜಯ್ಯ ಅವರಲ್ಲಿ ಕೇಂದ್ರೀಕೃತವಾಗಿದ್ದಿತು. 1756 ರಲ್ಲಿ ಇವರನ್ನು ಕಿತ್ತುಹಾಕುವ ಪಿತೂರಿ ನಡೆಯಿತು. ಆದರೆ ಇದು ಯಶಸ್ವಿಯಾಗಲಿಲ್ಲ. ನಂಜರಾಜಯ್ಯ ಅರಮನೆಯಲ್ಲಿ ಕೋಲಾಹಲ ಮಾಡಿ, ಮಹಾರಾಜರ ಎದುರಿಗೇ ಪಿತೂರಿಗಾರರ ಮೂಗು ಕಿವಿಗಳನ್ನು ಕತ್ತರಿಸಿ ಹಾಕಿದನು. ಸೈನ್ಯದಲ್ಲೂ ದಂಗೆ ಎದ್ದು, ನಂಜರಾಜಯ್ಯ ಅದನ್ನು ಹತ್ತಿಕ್ಕಲು ಹೈದರಾಲಿಯನ್ನು ನೇಮಿಸಿದನು. ಹೈದರಾಲಿ ಆ ದಂಗೆಯನ್ನು ದಮನ ಮಾಡಲು ಶಕ್ತನಾದುದೇ ಅಲ್ಲದೆ 1757 ರಲ್ಲಿ

ಮರಾಟರು ದಂಡೆತ್ತಿ ಬಂದಾಗ, ಅವರನ್ನು ತಡೆದು ಹಿಂದಕ್ಕೆ ಅಟ್ಟಿದನು. ಈ ವಿಜಯದ ವರದಿಯನ್ನು ಮಹಾರಾಜರಿಗೆ ಒಪ್ಪಿಸಲು ಬಂದಾಗ ಹೈದರಾಲಿ "ಫತ್ತೆ ಹೈದರ್ ಬಹದ್ದೂರ್" ಎಂದು ರಾಜಸಭೆಯಲ್ಲಿ ಸನ್ಮಾನಿತನಾದನು. ಈ ಸನ್ಮಾನ ಸನ್ನಿವೇಶ ನಂಜರಾಜಯ್ಯನ ಅಧಿಕಾರದ ಮುಕ್ತಾಯವನ್ನೂ, ಹೈದರ್ ಆಲಿಯ ಏಳಿಗೆಯ ಪ್ರಾರಂಭವನ್ನು ಸೂಚಿಸುವಂತಾಯಿತು.

ಕ್ರಿ.ಶ. 1760 ರಲ್ಲಿ ಮದ್ರಾಸಿನಲ್ಲಿದ್ದ ಇಂಗ್ಲಿಷರು ಫ್ರೆಂಚರ ವಿರುದ್ಧವಾಗಿ, ತಮ್ಮೊಂದಿಗೆ ಮೈತ್ರಿ ಬೆಳೆಸಬೇಕೆಂದು ಮೈಸೂರಿನ ಮಹಾರಾಜರನ್ನು ಕೇಳಿದರು. ಆದರೆ ಫ್ರೆಂಚರು ಹೈದರಾಲಿಯನ್ನು ತಮ್ಮ ಕಡೆಗೆ ಒಲಿಸಿಕೊಂಡು ಬಿಟ್ಟಾಗ, ಮೈಸೂರು ಅರಸರು ಅದನ್ನು ತಿರುಗಿಸಲು ಶಕ್ತರಾಗಲಿಲ್ಲ.

ಹೀಗೆ ಬ್ರಿಟಿಷರಿಗೂ ನವಾಬ್ ಹೈದರಾಲಿಗೂ ಘರ್ಷಣೆ ಪ್ರಾರಂಭವಾಯಿತು. ಇದು ಸುಮಾರು ನಲವತ್ತು ವರ್ಷಗಳ ವರೆಗೂ ಆ ಶತಮಾನದ ಕೊನೆಯ ವರೆಗೂ ಮಧ್ಯೆ ಮಧ್ಯೆ ಆ ಕಡೆ ಈ ಕಡೆ ಅದೃಷ್ಟ ತೂನೆದಾಡುತ್ತಾ ನಡೆಯುತ್ತಲೇ ಇದ್ದಿತು.

ಹೈದರ್ ಆಲಿ ಮತ್ತು ಟಿಪ್ಪು ಇವರ ಜೀವನವನ್ನು ಕುರಿತು ಮುಂದಿನ ಅಧ್ಯಾಯದಲ್ಲಿ ಹೇಳಿದೆ. ಇಲ್ಲಿ ಒಡೆಯರ ವಂಶದ ಮುಂದಿನ ವಿವರಗಳನ್ನು ನೋಡೋಣ.

ಕ್ರಿ.ಶ. 1759 ರಲ್ಲಿ ವಿಧವೆ ಮಹಾರಾಣಿ, ಮಹಾರಾಜರ ಮದುವೆಗೆ ಏರ್ಪಾಟುಮಾಡಿದರು. ಮುಂದೆ ಯಾದವ ವಂಶದ ರಕ್ಷಾಮಣಿಯೆನಿಸಿದ, ಕತ್ತಿಗೋಪಾಲರಾಜ ಅರಸ್ ಅವರ ಕುಮಾರಿ ಲಕ್ಷ್ಮಿ ಅಮ್ಮಣ್ಣಿಯವರನ್ನು ಮಹಾರಾಜರಿಗೆ ಕನ್ಯೆ ಎಂದು ಆರಿಸಲಾಯಿತು. ಈ ಮದುವೆ ನಡೆದ ಕೂಡಲೆ ವಿಧವೆ ಮಹಾರಾಣಿ ದೇವಾಜಮ್ಮಣ್ಣಿಯವರು ತೀರಿಕೊಂಡರು. ಮಹಾರಾಜ ಇಮ್ಮಡಿ ಕೃಷ್ಣರಾಜ ಒಡೆಯರು ಕೂಡ, ಮಹಾರಾಣಿ ಲಕ್ಷ್ಮೀ ಅಮ್ಮಣ್ಣಿಯವರನ್ನು 24ನೆಯ ವಯಸ್ಸಿನಲ್ಲಿಯೇ ವಿಧವೆಯನ್ನಾಗಿ ಮಾಡಿ, ತೀರಿಕೊಂಡರು. ಕೃಷ್ಣರಾಜ ಒಡೆಯರಿಗೆ ಇಬ್ಬರು ಗಂಡುಮಕ್ಕಳು. ಹೈದರಾಲಿ ಇವರ ಪೈಕಿ ಹಿರಿಯರ ಹಕ್ಕನ್ನು ಕಡೆಗಣಿಸಿ, ಕಿರಿಯರನ್ನು ಸಿಂಹಾಸನದಲ್ಲಿ ಕೂಡಿಸಿದನು. ಆತನಿಗೆ ಆಗ ನಾಲ್ಕೇ ವರ್ಷ ವಯಸ್ಸಾಗಿದ್ದು, ಆತನೂ ಕ್ರಿ.ಶ. 1770 ರಲ್ಲಿ ತನ್ನ ಎಂಟನೆಯ ವಯಸ್ಸಿನಲ್ಲಿಯೇ ತೀರಿಕೊಂಡನು.

ಮಹಾರಾಣಿ ಲಕ್ಷ್ಮೀ ಅಮ್ಮಣ್ಣಿಯವರು, ಹಿಂದೆ ಹಕ್ಕನ್ನು ಕಳೆದುಕೊಂಡಿದ್ದ ಹಿರಿಯ ಮಗ ಬೆಟ್ಟದ ಚಾಮರಾಜ ಒಡೆಯರನ್ನು ಸಿಂಹಾಸನದಲ್ಲಿ ಕೂರಿಸುವಂತೆ, ಪ್ರಧಾನಿ ತಿರಮಲ ಅಯ್ಯಂಗಾರ್ ಅವರ ಮೂಲಕ, ಹೈದರಾಲಿಗೆ ಸೂಚಿಸಿದರು. ಆದರೆ ಆತನೂ ಬಹು ಬೇಗ ನಿಧನ ಹೊಂದಿ ಮತ್ತೆ ಕ್ರಿ.ಶ. 1776 ರಲ್ಲಿ ಮೈಸೂರಿನ ಸಿಂಹಾಸನ ತೆರವಾಯಿತು. ನವಾಬ್ ಹೈದರಾಲಿ, ರಾಜರ ಅನುಬಂಧಿ ಕುಟುಂಬವೊಂದರ ಒಬ್ಬ ಹುಡುಗನನ್ನು ಆರಿಸಿ ಆತನನ್ನು ದತ್ತು ತೆಗೆದುಕೊಳ್ಳಬೇಕೆಂದೂ ಆತನೇ ಪಟ್ಟಕ್ಕೆ ಬರಬೇಕೆಂದೂ ನೇಮಿಸಿದನು; ಮಹಾರಾಣಿ ಲಕ್ಷ್ಮೀ ಅಮ್ಮಣ್ಣಿಯವರಿಗೆ ಪಾಲನಾಧಿಕಾರವನ್ನು ನಿಷೇಧಿಸಲಾಯಿತು.

ಈ ಘಟನೆ ಹೈದರ್ ಆಲಿಯ ಸರ್ವಾಧಿಕಾರಿತ್ವವನ್ನೂ ರಾಜಕುಟುಂಬದ ಶಕ್ತಿಹೀನತೆಯನ್ನೂ ಸ್ಪಷ್ಟವಾಗಿ ಸೂಚಿಸಿತು. ಆದರೆ ಮಹಾರಾಣಿ ಲಕ್ಷ್ಮೀ ಅಮ್ಮಣ್ಣಿ ಇದನ್ನೆಲ್ಲಾ ಶಾಂತವಾಗಿ ಸಹಿಸಿಕೊಂಡು ಅದಕ್ಕೆ ಬಲಿಯಾಗುವ ಸ್ವಭಾವದ ವ್ಯಕ್ತಿಯಾಗಿರಲಿಲ್ಲ. ರಾಜನಿಷ್ಠ ಬೆಂಬಲಿಗರ ಸಲಹೆಗಳನ್ನು ಗೋಪ್ಯವಾಗಿ ಪಡೆದು, ಹೈದರಾಲಿಯ ವಿರುದ್ಧವಾಗಿ ಮರಾಟರ ಬಳಿಗೆ ನಿಯೋಗಗಳನ್ನು ಕಳಿಸಿದರು. ಆದರೆ ಅವರು ಈ ಕಾರ್ಯದಲ್ಲಿ ಯಶಸ್ವಿಯಾಗಲಿಲ್ಲ. ಅನಂತರ ಆಕೆ ಮದ್ರಾಸಿನ ಗೌರ್ನರ್ ಆಗಿದ್ದ ಲಾರ್ಡ್ ಪಿಗ್ಗಾಟ್ ಬಳಿ ಗುಪ್ತದೂತರನ್ನು ಕಳಿಸಿಕೊಟ್ಟರು. ಪಿಗ್ಗಾಟನ ಉತ್ತರಾಧಿಕಾರಿ ಲಾರ್ಡ್ ಮೆಕಾರ್ಟ್ನೆ

ಕ್ರಿ.ಶ. 1782 ರಲ್ಲಿ ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿಯವರೊಂದಿಗೆ, ಹೈದರಾಲಿಯ ದಮನವನ್ನೂ ಆಳುವ ರಾಜವಂಶದ ಪರಂಪರೆಯ ಆಧಿಪತ್ಯದ ಪುನಃ ಸ್ಥಾಪನೆಯನ್ನೂ ಒಳಗೊಂಡ ಒಂದು ಒಪ್ಪಂದವನ್ನು ಮಾಡಿಕೊಂಡನು.

ಈ ಕೌಲು ನಡೆದ ಹತ್ತೇ ದಿನಗಳ ತರುವಾಯ, ಹೈದರಾಲಿ ಕಾಲವಶನಾಗಿ, ಆತನ ಮಗ ಟಿಪ್ಪು ಸುಲ್ತಾನ್ ಅವನ ಸ್ಥಾನಕ್ಕೆ ಬಂದನು. ಬ್ರಿಟಿಷರೊಂದಿಗೆ ಅರಮನೆಯವರು ಸಂಪರ್ಕ ಬೆಳೆಸುತ್ತಿದ್ದಾರೆಂಬ ಗುಮಾನಿ ಬಂದು, ಮಹಾರಾಣಿಯ ಪರವಾಗಿ ಕಾರ್ಯ ನಿರ್ವಹಿಸುತ್ತಿದ್ದವರ ಮೇಲೆ ಸೇಡು ತೀರಿಸಿ ಕೊಂಡನು. ಬ್ರಿಟಿಷರು ಮಾಡಿದ ದಾಳಿಯೂ ಅರ್ಧಂಬರ್ಧ ಮನಸ್ಸಿನದೂ ಸಂಘಟನಾ ಭಾವದ್ದೂ ಆದ್ದರಿಂದ ಮೆಕಾರ್ಟ್ನಿ ಟಿಪ್ಪುವಿನೊಂದಿಗೆ ರಾಜಿ ಮಾಡಿಕೊಂಡನು.

ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿಯವರ ಎಡೆಬಿಡದ ಪ್ರಯತ್ನಗಳಿಂದ. ಮದ್ರಾಸಿನ ಜನರಲ್ ಮೆಡೋಸ್ ತುಂಬ ಜಾಗರೂಕತೆಯ ಸಿದ್ಧತೆಗಳನ್ನು ಮಾಡಿಕೊಂಡು ಮೈಸೂರಿನ ಮೇಲೆ ದಂಡೆತ್ತಿ ಬಂದನು. ಗೌರ್ನರ್ ಜನರಲ್ ಲಾರ್ಡ್ ಕಾರ್ನ್ ವಾಲಿಸ್ ಈ ಯುದ್ಧದ ಮೇಲ್ವಿಚಾರಣೆಗಾಗಿ ಸ್ವತಃ ತಾನೇ ಬಂದನು.

ಈ ದಾಳಿಯೇನೋ ಬ್ರಿಟಿಷರಿಗೆ ಸಂಪೂರ್ಣ ವಿಜಯವನ್ನು ತಂದು ಕೊಟ್ಟಿತಾದರೂ, ಟಿಪ್ಪು ಅವಮಾನಕರವಾದ ಒಪ್ಪಂದಕ್ಕೂ ಒಪ್ಪಿ ಮೊರೆಯಿಟ್ಟುದರಿಂದ, ಬ್ರಿಟಿಷರು ಸಂತೃಪ್ತರಾಗಿ ಹಿಂದಿರುಗಿ ಬಿಟ್ಟರು. ಇದರಿಂದ ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿ ಮತ್ತು ಜನರಲ್ ಮೆಡೋಸ್ ಇಬ್ಬರಿಗೂ ನಿರಾಶೆ ಯುಂಟಾಯಿತು. ಮೆಡೋಸನಂತೂ ತನ್ನನ್ನು ತಾನೇ ಬಂದೂಕಿನಿಂದ ಹೊಡೆದುಕೊಳ್ಳುವ ಪ್ರಯತ್ನವನ್ನು ಮಾಡಿದನಾದರೂ ಉಳಿದುಕೊಂಡನು. ಅನಂತರ ಇಂಗ್ಲೆಂಡಿನಲ್ಲೇ ಮೈಸೂರಿಗಾಗಿ ಪ್ರಯತ್ನ ಮಾಡುವೆ ನೆಂದು ಮಾತು ಕೊಟ್ಟು ತೆರಳಿದನು.

ಚಾಮರಾಜ ಒಡೆಯರು ಮುಂದೆ ಮುಮ್ಮಡಿ ಕೃಷ್ಣರಾಜ ಒಡೆಯರು ಎಂದು ಪ್ರಸಿದ್ಧರಾದ ತಮ್ಮ ಎರಡು ವರ್ಷದ ಮಗನನ್ನು ಬಿಟ್ಟು 1796 ರಲ್ಲಿ ತೀರಿಕೊಂಡರು.

ಒಡೆಯರ ರಾಜಕುಟುಂಬದ ಮುಂದಿನ ಇತಿಹಾಸ ಆಧುನಿಕ ಕಾಲಕ್ಕೆ ಸಂಬಂಧಿಸಿದ್ದು, ಅದನ್ನು ಮುಂದಿನ ಅಧ್ಯಾಯದಲ್ಲಿ ನಿರೂಪಿಸಲಾಗುವುದು.

ಮೂಲಲೇಖಕರು : ಶ್ರೀ. ಜಿ.ಆರ್. ಜೋಶ್ಯರ್
ಅನುವಾದಕರು : ಡಾ॥ ಕೆ.ಎಂ. ಕೃಷ್ಣರಾವ್.

# ಹೈದರ್ ಆಲಿ

ಹಿಂದಿನ ಅಧ್ಯಾಯದಲ್ಲಿ ಮೈಸೂರು ಒಡೆಯರ ಇತಿಹಾಸವನ್ನು ಪರಿಶೀಲಿಸಿದಾಗ ಮೈಸೂರು ರಾಜ್ಯದ ಯೋಗ್ಯ ಒಡೆತನವನ್ನು ಕ್ರಿ.ಶ. 1761 ರಲ್ಲಿ ಹೈದರನು ಹೇಗೆ ಪಡೆದುಕೊಂಡನೆಂಬುದನ್ನು ನೋಡಿದೆವು. ಅವನು ಮೈಸೂರು ರಾಜ್ಯವನ್ನು ಒಟ್ಟುಗೂಡಿಸಿ ಬಲಪಡಿಸಲು ಬಯಸಿದ್ದೇ ಅಲ್ಲದೆ ಈ ಉದ್ದೇಶ ಸಾಧನೆಗೋಸ್ಕರವಾಗಿ ಸಣ್ಣ ಸಣ್ಣ ಪ್ರಾಂತಗಳಲ್ಲಿ ಪ್ರಭುತ್ವ ನಡೆಸುತ್ತಿದ್ದು, ಸರ್ವತಂತ್ರ ಸ್ವತಂತ್ರವಾದ ಪರಮಾಧಿಕಾರವನ್ನು ಬಯಸಿದ್ಧ ಪಾಳೆಯಗಾರರನ್ನೆಲ್ಲಾ ಅಳಿಸಿ ಹಾಕಿದನು. ಅನಕ್ಷರಸ್ಥನಾದರೂ ಹೈದರನು ರಾಜತಂತ್ರಜ್ಞನೂ ಯುದ್ಧ ಕುಶಲಿಯೂ ಆಗಿದ್ದನು. ಪರರಾಷ್ಟ್ರೀಯರಾದ ಮತ್ತು ದಕ್ಷಿಣ ಭಾರತದ ಪೂರ್ವತೀರದ ಪರ್ಯಾಯ ದ್ವೀಪದಲ್ಲಿ ಬೀಡುಬಿಟ್ಟಿದ್ದ ಇಂಗ್ಲಿಷರೂ ಫ್ರೆಂಚರೂ ಅಧಿಕಾರಕ್ಕಾಗಿ ನಡೆಸಿದ ಹೋರಾಟವನ್ನು ಹೈದರನು ಕಣ್ಣಾರೆ ಕಂಡಿದ್ದನು. ನಾಡಿನಲ್ಲಿ ಈ ಪರಕೀಯರು ತಮ್ಮ ಅಧಿಕಾರವನ್ನೂ ರಾಜಕೀಯ ಶಕ್ತಿಯನ್ನೂ ಸ್ಥಾಪಿಸುವುದು ಹೈದರನಿಗೆ ಇಷ್ಟವಿರಲಿಲ್ಲ. ಹೈದರನ ಆಳಿಕೆಯಲ್ಲಿ ಮೈಸೂರು ರಾಜ್ಯವು ದಕ್ಷಿಣಭಾರತದಲ್ಲೆಲ್ಲಾ ಅತಿ ಪ್ರಬಲವೂ ವಿಸ್ತಾರವೂ ಆದ ರಾಜ್ಯವಾಯಿತು. ಹದಿನೆಂಟನೆಯ ಶತಮಾನದ ಉತ್ತರಾರ್ಧದ ದಕ್ಷಿಣ ಭಾರತದ ಚರಿತ್ರೆಯಲ್ಲಿ ಪ್ರಭಾವಶಾಲಿಗಳೂ ಕಾಂತಿಯುಕ್ತರೂ ವೀರೋಚಿತ ವ್ಯಕ್ತಿತ್ವದಿಂದ ಪ್ರಸಿದ್ಧರಾದವರೂ ಎಂದರೆ ಹೈದರ್ ಮತ್ತು ಟಿಪ್ಪು–ಇವರಿಬ್ಬರೇ. ಆದ್ದರಿಂದ ಇತಿಹಾಸದಲ್ಲಿ ಪ್ರತ್ಯೇಕ ಸ್ಥಾನಮಾನವನ್ನು ಹೊಂದಲು ಇವರು ಅರ್ಹರಾಗಿದ್ದಾರೆ.

ಅತ್ಯಂತ ಸಾಧಾರಣ ಸ್ಥಿತಿಯಲ್ಲಿದ್ದು ತನ್ನ ಜಾಣ್ಮೆ, ಯುದ್ಧಕೌಶಲ, ಯೋಗ್ಯತೆಗಳಿಂದ ಉನ್ನತ ಸ್ಥಿತಿಗೇರಿದ ಕಾರ್ಯಶೀಲನಾದ ಹೈದರನು ಕರ್ಣಾಟಕದ ಇತಿಹಾಸದಲ್ಲಿ ಎಲ್ಲರ ಗಮನವನ್ನೂ ಸೆಳೆಯುವ ವಿಶಿಷ್ಟ ವ್ಯಕ್ತಿಯಾಗಿದ್ದಾನೆ.

ಹೈದರನ ಪೂರ್ವಜರ ವಿಷಯಗಳು ಅಸ್ಪಷ್ಟವಾಗಿವೆ. ಅವನ ತಂದೆ ಫತೇ ಮಹಮದನು ಅದೃಷ್ಟವಂತ ಸೈನಿಕನಾಗಿ ದಳವಾಯಿಗಳ ಬಳಿ ಸೇವಿಸುತ್ತಾ ಸಿರಾದ ದರ್ಗಾ ಖ್ವಾಲೀಖಾನನ ಕೈ ಕೆಳಗೆ ನಾಲ್ಕು ನೂರು ಕಾಲಾಳು, ನೂರು ರಾವುತರ ನಾಯಕತ್ವವನ್ನು ಪಡೆದು ಔನ್ನತ್ಯಕ್ಕೇರಿದನು. ನವಾಬನ ಮರಣಾನಂತರ ಅವನ ಮಗ ದೊಡ್ಡಬಳ್ಳಾಪುರದ ಜಹಗೀರುದಾರನಾದ ಅಬ್ದುಲ್ ರಸೂಲಾಖಾನನ ಬಳಿ ಸೇರಿಕೊಂಡನು.

ಫತೇ ಮಹಮದನಿಗೆ ಕಿರಿಯ ಹೆಂಡತಿಯಲ್ಲಿ ಇಬ್ಬರು ಮಕ್ಕಳು—ಷಹಬಾಜ್ ಮತ್ತು ಹೈದರ್. ಕಿರಿಯ ಮಗನಾದ ಹೈದರನು ಕ್ರಿ.ಶ. 1721ರಲ್ಲಿ ಕೋಲಾರದ ಬಳಿ ಇರುವ ಬೂದಿಕೋಟೆ ಎಂಬ ಸ್ಥಳದಲ್ಲಿ ಹುಟ್ಟಿದನು. ಅವನ ಬಾಲ್ಯವೆಲ್ಲಾ ಕ್ಲೇಶಕಷ್ಟ ಪರೀಕ್ಷೆಗಳಿಂದ ತುಂಬಿತ್ತು. ಅವನಿನ್ನೂ ಏಳು ವರ್ಷದವನಿದ್ದಾಗಲೇ ಸಿರಾದ ಸುಬೇದಾರನಾದ ತಹೀರ್‌ಖಾನನಿಗೂ ಅಬ್ದುಲ್ ರಸೂಲಾಖಾನನಿಗೂ ನಡೆದ ಯುದ್ಧದಲ್ಲಿ ತಂದೆಯನ್ನು ಕಳೆದುಕೊಳ್ಳಬೇಕಾಯಿತು. ಫತೇ ಮಹಮದನು ಸಾಲ ಸೋಲಗಳನ್ನುಳಿಸಿದ್ದರಿಂದ ದೊಡ್ಡಬಳ್ಳಾಪುರದಲ್ಲಿದ್ದ ಅವನ ಸಂಸಾರವನ್ನು ಅಬ್ದುಲ್ ರಸೂಲಾಖಾನನ ಮಗ ಅಬ್ಬಾಸ್‌ಖ್ವಾಲಿಖಾನನು ಬಹಳವಾಗಿ ಹಿಂಸಿಸಿ ಹೊಡೆದು ಹೈದರ್ ಮತ್ತು ಅವನ ಸೋದರನನ್ನು

ಸೆರೆಹಿಡಿದುದೇ ಅಲ್ಲದೆ, ಅವರಿಗೆ ಸೇರಿದ ಆಸ್ತಿ ಪಾಸ್ತಿಯೆಲ್ಲವನ್ನೂ ಸಾಲಕ್ಕಾಗಿ ಲೂಟಿ ಮಾಡಿದನು. ಇದರಿಂದ ಎಚ್ಚತ್ತ ಹೈದರನ ತಾಯಿಯು ಮೈಸೂರು ಪಡೆಯಲ್ಲಿ ಅಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದ ತನ್ನ ಗಂಡನ ಸೋದರಳಿಯನಾದ ಹೈದರ್ ಸಾಹೇಬನಿಗೆ ಈ ಸುದ್ದಿಯನ್ನು ಮುಟ್ಟಿಸಿದಳು. ಹೈದರ್ ಸಾಹೇಬನು ದಳವಾಯಿ ದೇವರಾಜನಿಗೆ ಈ ವಿಷಯವನ್ನೆಲ್ಲಾ ಮನವಿಮಾಡಿ ಸಾಲ ತೀರಿಸಲು ಅವಶ್ಯವಾದಷ್ಟು ಹಣವನ್ನು ಅವನಿಂದ ಸಾಲವಾಗಿ ಪಡೆದು ಅವರನ್ನು ಬಿಡುಗಡೆಮಾಡಿಸಿದನು. ಅನಂತರ ಹೈದರ್ ಸಾಹೇಬನು ಆ ಇಬ್ಬರು ಸೋದರರಾದ ಷಹಬಾಜ್ ಮತ್ತು ಹೈದರರನ್ನು ತನ್ನ ಮಕ್ಕಳಂತೆ ಬೆಳಸಿ, ಆಯುಧಗಳ ಉಪಯೋಗವನ್ನೂ ಕುದುರೆ ಸವಾರಿಯನ್ನೂ ಕಲಿಸಿದನು. ಹೈದರ್ ಸಾಹೇಬನ ಮರಣಾನಂತರ ಷಹಬಾಜನು ಅವನ ಅಧಿಕಾರ ಸ್ಥಾನವನ್ನು ಪಡೆದನು. ಹೈದರನು ಒಬ್ಬ ಸಾಮಾನ್ಯ ಸೈನಿಕನಾಗಿ ಅಣ್ಣನನ್ನೇ ಅವಲಂಬಿಸಿದನು. ದುರದೃಷ್ಟವು ಬಾಲ್ಯದ ವಿದ್ಯಾಭ್ಯಾಸದ ಪ್ರಯೋಜನಗಳು ಇಲ್ಲದಂತೆ ಮಾಡಿದ್ದರಿಂದ ಜೀವಮಾನ ಪರಿಯಂತ ಅವನು ಅವಿದ್ಯಾವಂತನಾಗಿಯೇ ಉಳಿಯಬೇಕಾಯಿತು.

ಕ್ರಿ.ಶ. 1749ರಲ್ಲಿ ಮೈಸೂರು ಸೈನ್ಯವು ಗಡಿ ಕಾವಲು ಪ್ರದೇಶವಾದ ದೇವನಹಳ್ಳಿಗೆ ಮುತ್ತಿಗೆ ಹಾಕಿತು. ಹೈದರನು ಸ್ವಯಂಸೇವಕ ರಾವುತನಾಗಿ ಅಣ್ಣನ ಜೊತೆಗೆ ಬಂದಿದ್ದನು. ಈ ಮುತ್ತಿಗೆಯಲ್ಲಿಯೇ ಪ್ರಪ್ರಥಮವಾಗಿ ಹೈದರನ ಯುದ್ಧ ಕೌಶಲ, ನಿಪುಣತೆಗಳು ಬೆಳಕಿಗೆ ಬಂದವು. ಈ ಯುವ ಸೈನಿಕನು ತೋರಿದ ಎದೆಗಾರಿಕೆ, ಸಾಮರ್ಥ್ಯಗಳು ದಳವಾಯಿ ನಂಜರಾಜನ ಮನಸ್ಸನ್ನು ಆಕರ್ಷಿಸಿದವು. ಕೂಡಲೇ ಅವನು ಹೈದರನಿಗೆ ಐವತ್ತು ರಾವುತರು ಇನ್ನೂರು ಕಾಲಾಳುಗಳ ನಾಯಕತ್ವದ ಅಧಿಕಾರವನ್ನು ವಹಿಸಿ ಕೊಟ್ಟನು. ಅವನ ಉಜ್ವಲವಾದ ಜೀವನಕ್ಕೆ ಇದೆ ನಾಂದಿಯಾಗಿದ್ದಲ್ಲದೆ, ದಕ್ಷಿಣ ಭಾರತದ ಬಹು ದೊಡ್ಡ ಭಾಗಕ್ಕೆ ವಾಸ್ತವಿಕ ದೊರೆಯನ್ನಾಗಿ ಮಾಡುವುದರಲ್ಲಿ ಕೊನೆಗೊಂಡಿತು.

ಕ್ರಿ.ಶ. 1750ರಲ್ಲಿ ಮುಜಾಫರ್ ಜಂಗನಿಗೂ ನಾಸಿರ್ ಜಂಗನಿಗೂ ನಡೆದ ಹೋರಾಟದಲ್ಲಿ ನಾಸಿರ್ ಜಂಗನ ಸಹಾಯಕ್ಕೆಂದು ನಂಜರಾಜನಿಂದ ಬರ್ಕಿ ವೆಂಕಟರಾಯನ ನಾಯಕತ್ವದಲ್ಲಿ ಕಳುಹಿಸಲ್ಪಟ್ಟ ಮೈಸೂರು ಸೈನ್ಯದ ಜೊತೆಯಲ್ಲಿ ಹೈದರನೂ ಹೋಗಿದ್ದನು. ಆ ಯುದ್ಧದಲ್ಲಿ ನಾಸಿರ್ ಜಂಗನು ಕಡಪಾದ (Cuddapah) ನವಾಬನಿಂದ ವಂಚನೆಯ ಸಾವಿಗೆ ಈಡಾದನು. ಈ ಕೊಲೆಯನಂತರದ ಗೊಂದಲದಲ್ಲಿ ಹೈದರನು ಬೇಡರ ಪಡೆಯ ಸಹಾಯದಿಂದ ನಾಸಿರ್‌ಜಂಗನ ಖಜಾನೆಯನ್ನು ಲೂಟಿಮಾಡಿ ಎರಡು ಒಂಟೆಗಳ ಮೇಲೆ ಚಿನ್ನದ ನಾಣ್ಯಗಳನ್ನು ತುಂಬಿಕೊಂಡು ಶ್ರೀರಂಗಪಟ್ಟಣಕ್ಕೆ ಹಿಂದಿರುಗಿದನು. ಅಷ್ಟೇ ಅಲ್ಲದೆ ಯುದ್ಧ ಭೂಮಿಯಿಂದ ಮುನ್ನೂರ ಐವತ್ತು ಕುದುರೆಗಳನ್ನೂ ಐನೂರು ಬಂದೂಕುಗಳನ್ನೂ ಸಂಗ್ರಹಿಸಿದ್ದನು. ರಾಜಧಾನಿಗೆ ಹಿಂದಿರುಗುವುದಕ್ಕೆ ಮುಂಚೆ ಪಾಂಡಿಚೇರಿಗೆ ಹೋಗಿ ಫ್ರೆಂಚ್ ದಳದ ಶಿಸ್ತನ್ನು ನೋಡಿ ಮೆಚ್ಚಿದನು. ರಾಜಧಾನಿಗೆ ಹಿಂದಿರುಗಿದನಂತರ ಅವನು ಗಳಿಸಿದ ಸಂಪತ್ತಿನಿಂದ ಸೇನಾ ಬಲವನ್ನು ಹೆಚ್ಚಿಸಿಕೊಂಡು ವ್ಯವಸ್ಥೆಗೊಳಿಸಿದ್ದಲ್ಲದೆ ಫ್ರೆಂಚ್ ಪಡೆಯನ್ನು ಬಿಟ್ಟು ಬಂದಿದ್ದವರ ಸಹಾಯ ದಿಂದ ಶಿಕ್ಷಣ ಕೊಡಿಸಿದನು.

ಕ್ರಿ.ಶ. 1751 ರಲ್ಲಿ ತಿರುಚಿನಾಪಳ್ಳಿಯ ಮುತ್ತಿಗೆಗೆ ನಂಜರಾಜನ ಜೊತೆಯಲ್ಲಿ ಹೈದರನೂ ಬಂದಿದ್ದನು. ಈ ಮುತ್ತಿಗೆಯು ನಂಜರಾಜನಿಗೆ ಅಪಮಾನ ಆಪತ್ತುಗಳಿಂದ ಕೊನೆಗೊಂಡರೂ ಇದು ಹೈದರನಿಗೆ ಶಿಕ್ಷಣ ಕ್ಷೇತ್ರ ಎಂಬುದನ್ನು ಸಮರ್ಥಿಸಿತು ; ಅಲ್ಲದೆ ಯೂರೋಪಿಯನ್ನರ ಯುದ್ಧ ವಿಧಾನದ ಪ್ರಪ್ರಥಮ ಪರಿಚಯವನ್ನು ನೀಡಿತು. ಕ್ಲೈವನ ಧೈರ್ಯ, ಬುದ್ಧಿವಂತಿಕೆಯನ್ನೂ ಲಾರೆನ್ಸನ ಶಕ್ತಿ ಸಾಮರ್ಥ್ಯಗಳನ್ನೂ ಕಣ್ಣಾರೆ ಕಾಣುವಂತಾಯಿತು. ಈ ಯುದ್ಧದಲ್ಲಿ ಹೈದರನು ತೋರಿದ ಸಾಧನೆ ಸಾಮರ್ಥ್ಯಗಳು ಅವನ ಯಜಮಾನನ ಮೆಚ್ಚುಗೆಯನ್ನು ಗಳಿಸಿದ್ದೇ ಅಲ್ಲದೆ ಅವನ ಮುಂದಿನ ಏಳಿಗೆಗೆ

ದಾರಿಮಾಡಿಕೊಟ್ಟಿತು. ತಿರುಚಿನಾಪಳ್ಳಿಯಿಂದ ಮೈಸೂರಿಗೆ ಹಿಂದಿರುಗಿದ ಕೂಡಲೇ ನಂಜರಾಜನು 1755 ರಲ್ಲಿ ಹೈದರನನ್ನು ಫೌಜುದಾರನನ್ನಾಗಿ ನೇಮಕ ಮಾಡಿ ಉದ್ಧಟರೂ ಹಟಮಾರಿಗಳೂ ಆದ ದಿಂಡಿಗಲ್ಲಿನ ಪಾಳೆಯಗಾರರನ್ನು ಅಡಗಿಸಿ ರಾಜ್ಯದ ಆ ಭಾಗದಲ್ಲಿ ಶಾಂತಿ ನೆಲಸುವಂತೆ ಮಾಡುವುದಕ್ಕಾಗಿ ಕಳುಹಿಸಿದನು. ಹೈದರನು ಈ ಕಾರ್ಯಕ್ಕೆ ಸಮರ್ಥನೇ ಆಗಿದ್ದನು. ದಿಂಡಿಗಲ್ಲಿನಲ್ಲಿ ಅವನು ತನ್ನ ಸೈನ್ಯವನ್ನು ಹೆಚ್ಚಿಸಿ ಸಂಪತ್ತನ್ನು ಕೂಡಿಸಿಕೊಂಡನು.

ಇದೇ ಸಮಯದಲ್ಲಿ ರಾಜಧಾನಿಯ ಸ್ಥಿತಿಗತಿಗಳು ಬೀಳಾಗಿದ್ದವು. ದಳವಾಯಿಗಳಿಗೂ ಪ್ರಭುತ್ವ ನಡೆಸುತ್ತಿದ್ದ ರಾಜರಿಗೂ ಇದ್ದ ಸಂಬಂಧವು ಸರಿಯಾಗಿರಲಿಲ್ಲ. ರಾಜ್ಯದ ನೀತಿನಿಯಮಗಳಿಗೆ ಸಂಬಂಧಿಸಿದ ವಿಷಯಗಳಲ್ಲಿ ದಳವಾಯಿ ಸಹೋದರರಲ್ಲಿ ತೀವ್ರವಾದ ಭಿನ್ನಾಭಿಪ್ರಾಯವಿತ್ತು. ನಿರರ್ಥಕವಾದ ತಿರುಚಿನಾಪಳ್ಳಿಯ ಮುತ್ತಿಗೆ ಮತ್ತು ಮತ್ತೆ ಮತ್ತೆ ದಾಳಿಮಾಡಿ ಅಪಾರವಾದ ಹಣವನ್ನು ದೋಚಿ ಕೊಂಡು ಹೋದ ನಿಜಾಮು ಮತ್ತು ಮರಾಠರ ಹಾವಳಿ—ಇವುಗಳು ರಾಜ್ಯದ ಸಂಪತ್ತನ್ನು ಅಧಿಕವಾಗಿ ಹಾಳುಮಾಡಿ ದಿವಾಳಿಯ ಸ್ಥಿತಿಗೆ ತಂದುವು. ಇದರ ಫಲವಾಗಿ ಸೈನಿಕರ ಸಂಬಳ ಬಾಕಿ ಉಳಿಯಿತು. ಸೈನಿಕರು ದಂಗೆಯೇಳುವ ಸ್ಥಿತಿಯಲ್ಲಿದ್ದರು.

ರಾಜಧಾನಿಯ ಸ್ಥಿತಿಗತಿಗಳನ್ನು ಕೇಳಿದ ಮೇಲೆ ಹೈದರನು ದಿಂಡಿಗಲ್ಲಿನಿಂದ ಅಲ್ಲಿಗೆ ಹೊರಟನು. ಪರಿಸ್ಥಿತಿಯನ್ನು ಎದುರಿಸಿ ಹತೋಟಿಗೆ ತರಲು ಹೈದರನೊಬ್ಬನೇ ಸಮರ್ಥನೆಂದು ಪರಿಗಣಿಸಲಾಗಿತ್ತು. ಕೂಡಲೇ ಅವನು ಸಂಬಳದ ಬಾಕಿಯನ್ನು ತೀರಿಸಿ ಸೈನಿಕರನ್ನು ಸಮಾಧಾನಪಡಿಸಿದನು. 1758 ರಲ್ಲಿ ರಾಜಧಾನಿಯನ್ನು ಮುತ್ತುವ ಹೆದರಿಕೆಯನ್ನು ಒಡ್ಡಿದ್ದ ಮರಾಠರಿಂದ ಸಂರಕ್ಷಿಸಿದನು. ನಂಜರಾಜನನ್ನು ರಾಜಕೀಯದಿಂದ ಬಲಾತ್ಕಾರವಾಗಿ ನಿವೃತ್ತಿಗೊಳಿಸಿದನು. ಹೀಗೆ ಮಾಡಿದುದರಿಂದ ದಳವಾಯಿ ಆಳಿಕೆಯು ನಿಜವಾಗಿಯೂ ಕೊನೆಗೊಂಡಿತು. ಕಡೆಯದಾಗಿ ತನ್ನ ವ್ಯವಹಾರ ಕುಶಲತೆ, ದೃಢ ನಿರ್ಧಾರ, ಮತ್ತು ಧೈರ್ಯದಿಂದ ತನ್ನ ಸ್ವಂತ ದಿವಾನನಾದ ಖಂಡೇರಾಯನ ಪಿತೂರಿಯನ್ನು ಗೆದ್ದನು. ಅತಿ ಶೀಘ್ರದಲ್ಲಿಯೇ ಔನ್ನತ್ಯಕ್ಕೇರಿ ಪ್ರಾಮುಖ್ಯಗಳಿಸಿ ಅಧಿಕಾರವನ್ನು ಸಂಪಾದಿಸಿದ ಹೈದರನನ್ನು ಖಂಡೇ ರಾಯನು ದೊರೆ ಮತ್ತು ಸಭಾಸದರೊಡನೆ ಕೂಡಿ ಅಧಿಕಾರದಿಂದ ಕೆಳಗುರುಳಿಸಲು ಪ್ರಯತ್ನಿಸಿದನು. ಶತ್ರುಗಳನ್ನು ಪರಾಭವಗೊಳಿಸಿದನಂತರ ಹೈದರನು ಸರ್ಕಾರದ ಪ್ರಮುಖವಾದ ರಾಜ್ಯ ಸೂತ್ರಗಳನ್ನು ಹಿಡಿದು, 1761ರಲ್ಲಿ ತಾನೇ ಸರ್ವಾಧಿಕಾರಿಯಾದನು.

ಅತಿಕ್ರಮಣವು ಪೂರ್ಣವಾಯಿತು. ಯಾವುದಕ್ಕೂ ಹೆಚ್ಚು ಗಮನಕೊಡದ ವಿವಿಕ್ತನಾದ ರಾಜನ ದೌರ್ಬಲ್ಯ, ವಂಶ ಪಾರಂಪರ್ಯವಾಗಿ ಬಂದ ಮಂತ್ರಿಯ ದುರ್ಗುಣ, ಅಸಾಮರ್ಥ್ಯ—ಇವುಗಳಿಂದ ಉಂಟಾದ ರಾಜಕೀಯ ದುಸ್ಥಿತಿಯು ಶೀಘ್ರವಾದ ಈ ರಾಜ್ಯ ಕ್ರಾಂತಿಗೆ ಕಾರಣವಾಯಿತು. ನಾಡಿನ ಒಳ ಮತ್ತು ಹೊರ ಕ್ಷೋಭೆಯಿಂದ ಮೈಸೂರು ರಾಜ್ಯವನ್ನು ಉಳಿಸಿ ಅದರ ಸ್ವಾತಂತ್ರ್ಯವನ್ನೂ ಏಕತೆಯನ್ನೂ ಕಾಪಾಡಲು ಹೈದರನ ಶಕ್ತಿ ಮತ್ತು ಉತ್ಸಾಹಪೂರ್ಣವಾದ ಆಳಿಕೆಯು ಹೊರತು ಬೇರಾವುದೂ ಇರಲಿಲ್ಲ.

ಹೈದರನು ನೆಪಮಾತ್ರಕ್ಕೆ ರಾಜನನ್ನು ಗೌರವಿಸಿದನು. ಪ್ರತಿ ವರ್ಷವೂ ನಡೆಯುತ್ತಿದ್ದ ದಸರ ಹಬ್ಬವನ್ನು ಮುಂದುವರಿಸಿದ್ದೇ ಅಲ್ಲದೆ ತಾನೇ ಸ್ವತಃ ಅದರಲ್ಲಿ ಭಾಗವಹಿಸಿದನು. ಅವನು ಬಹಿರಂಗವಾಗಿ ಯಾವ ವಿಧವಾದ ರಾಜ ಚಿಹ್ನೆಗಳನ್ನೂ ಧರಿಸಿದವನಲ್ಲ. ಅವನು ಸಿಂಹಾಸನವನ್ನು ಎಂದಾದರೂ ಬಯಸಿದ ನೆಂಬುದನ್ನು ತೋರಲು ಯಾವ ಆಧಾರವೂ ಇಲ್ಲ. 'ತನ್ನನ್ನು ತಾನು ರಾಜನ ಪ್ರಧಾನ ಮಂತ್ರಿ ಮತ್ತು ಸೇನಾಪತಿ' ಎಂದು ಕರೆದುಕೊಳ್ಳುವುದರಿಂದ ತಾನು ಅತ್ಯಂತ ವಿನಯಶಾಲಿ ಎಂದು ಭಾವಿಸಿದನು.

ಆ ಕಾಲದ ಶಾಸನಗಳಲ್ಲಿ ಅವನನ್ನು ಸಾಮಾನ್ಯವಾಗಿ 'ರಾಜ್ಯದಕಾರ್ಯಕರ್ತ' ಎಂದು ಕರೆಯಲಾಗಿದೆ-ಅಂದರೆ ರಾಜ ಪ್ರತಿನಿಧಿ (Mysore Archaeological Report, 1924· pp 56–58. Ins. No· 61 dated 5th No· 1764). ಟಿಪ್ಪುವಿನ ಮನೋಭಾವವು ಹೈದರನ ಭಾವನೆಗೆ ವಿರುದ್ಧವಾಗಿತ್ತು. ಮೈಸೂರು ರಾಜ್ಯವು ದೈವದತ್ತವಾದುದು. 'ಖುದಾದಾದ್ ಸರ್ಕಾರ್' ಎಂಬುದು ಟಿಪ್ಪುವಿನ ಅಭಿಪ್ರಾಯವಾಗಿತ್ತು. ಅವನು ತಾನೇ ಬಾದಶಹನೆಂದು ಬಹಿರಂಗ ಪಡಿಸಿದ್ದಲ್ಲದೆ ಸಿಂಹಾಸನವನ್ನೂ ಆಕ್ರಮಿಸಿಕೊಂಡನು.

ಹೈದರನು ಮೈಸೂರಿನ ಅಧಿಕಾರವನ್ನು ವಹಿಸಿಕೊಂಡ ಕಾಲ ಭಾರತೀಯ ಇತಿಹಾಸದಲ್ಲಿ ವಿಷಮ ಪರಿಸ್ಥಿತಿಯ ಕಾಲವಾಗಿತ್ತು. ರಾಜಕೀಯವಾಗಿ, ಮೊಗಲರು ಅವನತಿ ಹೊಂದುತ್ತಿದ್ದರು. ಮರಾಠರು ಉಚ್ಛ್ರಾಯಸ್ಥಿತಿಗೇರುತ್ತಿದ್ದರು. ಅಲ್ಲದೆ ಯೂರೋಪಿಯನ್ನರು ವ್ಯಾಪಾರೋದ್ಯಮದಿಂದ ರಾಜಕೀಯಕ್ಕೆ ಅದೇ ತಾನೇ ಇಳಿಯುತ್ತಾ ಪ್ರದೇಶಗಳ ಸ್ವಾಧೀನದಲ್ಲಿ ತೊಡಗಿದ್ದರು. ದಕ್ಷಿಣದಲ್ಲಿ ಪ್ರಭುತ್ವವನ್ನು ಸ್ಥಾಪಿಸಿದ್ದ ನಿಜಾಮನು ಮೊಗಲರ ತರುವಾಯ ತಾನೇ ದಕ್ಷಿಣ ರಾಜ್ಯಕ್ಕೆ ಸಾರ್ವಭೌಮನೆಂದು ಭಾವಿಸಿ ಆಗಾಗ ದಕ್ಷಿಣದ ಪ್ರದೇಶಗಳಿಗೆ ಮುತ್ತಿಗೆ ಹಾಕಿ ಕಪ್ಪಕಾಣಿಕೆಗಳನ್ನು ಕೊಡುವಂತೆ ಒತ್ತಾಯಪಡಿಸಿದನು. ಅವನು ಅತ್ಯಂತ ಸ್ವಾರ್ಥಿಯೂ ನಂಬಿಕೆಗೆ ಅನರ್ಹನೂ ಆಗಿದ್ದನು. ಅಲ್ಲದೆ ಆಗಾಗ್ಗೆ ರಾಜನಿಷ್ಠೆಯನ್ನು ಬದಲಾಯಿಸುತ್ತಿದ್ದನು. 1761 ರಲ್ಲಿ ನಡೆದ ಮಾರಕವಾದ ಪಾಣಿಪತ್ ಕದನದಲ್ಲಿ ಮರಾಠರಿಗೆ ಸೋಲುಂಟಾಗಲು ಅವರು ತಮ್ಮ ಬಲವೆಲ್ಲವನ್ನೂ ದಕ್ಷಿಣಕ್ಕೆ ತಿರುಗಿಸಿ ನಿಜಾಮನನ್ನೂ ಇತರ ರಾಜರನ್ನೂ ಬೆದರಿಸಿ ರಾಜ್ಯವಿಸ್ತರಿಸಲು ಪ್ರಯತ್ನಿಸಿದರು. ಕಡೆಯದಾಗಿ, ಫ್ರೆಂಚರು ಮತ್ತು ಇಂಗ್ಲೀಷರು ಭಾರತದಲ್ಲಿದ್ದ ಪರಸ್ಪರ ಅಂತಃಕಲಹ, ಅನೈಕ್ಯತೆಗಳನ್ನು ತಮ್ಮ ಸ್ವಂತ ರಾಜ್ಯಲಾಭಕ್ಕಾಗಿ ಉಪಯೋಗಿಸಿಕೊಳ್ಳಲು ಪ್ರಯತ್ನಿಸಿದರು. ಅವರು ಹೀಗೆ—ಇಂಥವರು ಎಂದು ಹೇಳಲಾಗುತ್ತಿರಲಿಲ್ಲ. ಕಡೆಗೆ ಭಾರತದ ಸ್ವಾತಂತ್ರ್ಯಕ್ಕೆ ನಿಜವಾಗಿಯೂ ಅಪಾಯವು ಬ್ರಿಟಿಷರಿಂದ ಸಂಭವಿಸಿತು.

ನಿರ್ಬಾಧಿತವಾದ ಅಧಿಕಾರವನ್ನು ಗಳಿಸಿದನಂತರ ಹೈದರನು ರಾಜ್ಯ ವಿಸ್ತರಣಾ ಕಾರ್ಯದಲ್ಲಿ ತೊಡಗಿದನು. ಮರಾಠರು ಒಂದೇ ಸಮನಾಗಿ ಮೂರು ಬಾರಿ ಮೈಸೂರಿನ ಮೇಲೆ ಆಕ್ರಮಣ ನಡೆಸಿದರು. ಇದರಿಂದಾಗಿ ಮೊದಮೊದಲು ರಾಜ್ಯ ವಿಸ್ತರಣಾ ಕಾರ್ಯದಲ್ಲಿ ಹೈದರನು ಹಿಮ್ಮೆಟ್ಟಬೇಕಾಗಿ ಬಂದರೂ ಕಡೆಗೆ 1778ರಲ್ಲಿ ಮೈಸೂರಿನ ಗಡಿಯನ್ನು ಎಲ್ಲ ದಿಕ್ಕಿನಲ್ಲಿಯೂ ವಿಸ್ತರಿಸಿ ಜಯಶೀಲನಾದನು. ಇದರ ಪರಿಣಾಮವಾಗಿ ಮೈಸೂರು ದಕ್ಷಿಣ ಇಂಡಿಯಾದಲ್ಲೆಲ್ಲಾ ಬಹು ಪ್ರಮುಖವೂ ಶಕ್ತಿಯುತವೂ ಆದ ರಾಜ್ಯವಾಗಿ ಪರಿಣಮಿಸಿತು. ಬ್ರಿಟಿಷರ ಈಸ್ಟ್ ಇಂಡಿಯಾ ಕಂಪೆನಿಯ ಮದರಾಸ್ ಸರ್ಕಾರವು ಹೈದರನ ದುರ್ದಮ್ಯ ಶತ್ರುವಾಗಿತ್ತು. ಗಡಿವಿವಾದ, 'ತಿರುಚಿನಾಪಳ್ಳಿಯ ವಂಚನೆ' ಮತ್ತು ಇನ್ನಿತರ ಪ್ರಚೋದನೆಗಳಿದ್ದರೂ ಹೈದರನು ಮನಃ ಪೂರ್ವಕವಾಗಿ ಅವರೊಡನೆ ಶಾಂತಿ, ಸ್ನೇಹ ಮತ್ತು ಸೌಹಾರ್ದಗಳನ್ನು ಬಯಸಿದನು. ಆದರೆ ಆರ್ಕಾಟಿನ ನವಾಬನಾದ ಮಹಮದಾಲಿಯ ಒಳಸಂಚು, ದೂರದೃಷ್ಟಿಯಿಲ್ಲದ ತಪ್ಪು ತಪ್ಪಾದ ಮದರಾಸು ಸರ್ಕಾರದ ಅನಿಶ್ಚಿತ ರಾಜನೀತಿಗಳು ಶಾಂತಿಗೆ ಅವಕಾಶವನ್ನೇ ಕೊಡಲಿಲ್ಲ. ಇಂಗ್ಲೀಷರಿಗೂ ಮೈಸೂರಿಗೂ ನಡೆದ ಮೊದಲನೆಯ ಯುದ್ಧದಲ್ಲಿ (1767–69) ನಿಜಾಮನು ಮತ್ತು ಮರಾಠರು ಇಂಗ್ಲೀಷರ ಜೊತೆ ಸೇರಿದ್ದರು. ಆದರೆ ಹೈದರನು ಚಾಕಚಕ್ಯತೆಯಿಂದ ಈ ಸ್ನೇಹವನ್ನು ಒಡೆದು ಬ್ರಿಟಿಷರನ್ನು ಪ್ರತ್ಯೇಕಿಸಿದನು.

ಶಾಂತಿಯಾಚನೆಯಿಂದ ಯುದ್ಧವು ಕೊನೆಗೊಂಡಿತು. ಹೈದರನು ಮದರಾಸಿನ ಹೆಬ್ಬಾಗಿಲಿನಲ್ಲೇ ಶಾಂತಿ ಕರಾರನ್ನು ಹಾಕಿದನು. ಈ ಶಾಂತಿ ಕರಾರು ಇಬ್ಬರಿಗೂ ಸಮಾಧಾನಕರವಾಗಿತ್ತು. ಅಲ್ಲದೆ, ವಿಚಿತ್ರವೆಂದರೆ, ಮರಾಠರು ಹೈದರನ ಮೇಲೆ ಬಿದ್ದಾಗ ಬ್ರಿಟಿಷರು ಸಹಾಯ ಮಾಡಬೇಕೆಂದುದು.

1769ನೆ ನವೆಂಬರಿನಲ್ಲಿ ಮರಾಠರು ಮೈಸೂರನ್ನು ಮುತ್ತಿದಾಗ ಹೈದರನು ಬ್ರಿಟಿಷರ ನೆರವನ್ನು ಕೋರಿದನು. ಆದರೆ ಬ್ರಿಟಿಷರು ತಮ್ಮ ವಾಗ್ದಾನವನ್ನು ಉಳಿಸಿಕೊಳ್ಳಲಿಲ್ಲ. ಇದರಿಂದ ಇಂಗ್ಲೀಷರು ನಂಬಿಕೆಗೆ ಅರ್ಹರಲ್ಲವೆಂಬುದು ಹೈದರನಿಗೆ ಮನವರಿಕೆಯಾಯಿತು. 1769ರ ವಿಷಮತೆಯನ್ನು ದಾಟಿದ ಮೇಲೆ ಸ್ನೇಹ ಹಸ್ತವನ್ನು ನೀಡಿ ತನ್ನಲ್ಲಿಗೆ ಬಂದ ಇಂಗ್ಲೀಷರ ಪ್ರತಿನಿಧಿಯಾದ ಮಿ॥ ಗ್ರೇಯನ್ನು ಕುರಿತು ಹೈದರನು ಸತ್ಯ ಮತ್ತು ನಾಚಿಕೆಯಿಲ್ಲದ ಅವಿವೇಕಿಗಳ ಜೊತೆಯಲ್ಲಿ ಸ್ನೇಹ ಬೆಳಸುವುದಿಲ್ಲವೆಂದು ತಿಳಿಸಿದನು (Calendar of Persian Correspondence, Vol. I, P. 443).

ಭಾರತದಲ್ಲಿ ಯೂರೋಪಿಯನ್ನರ ಶಕ್ತಿ ಪ್ರಭಾವದ ವಿಷಯದಲ್ಲಿ ಹೈದರನ ಸಾಮಾನ್ಯ ಮನೋಭಾವವೇನು ? ಚತುರರೂ ಯುಕ್ತಿವಂತರೂ ಆದ ವಿದೇಶೀ ವ್ಯಾಪಾರಿಗಳ ವಿಷಯದಲ್ಲಿ ಹೈದರನು ತುಂಬಾ ಸೌಹಾರ್ದವನ್ನೇ ತೋರಿದನು. ಯೂರೋಪಿಯನ್ ರಾಷ್ಟ್ರಗಳು ಭಾರತದಲ್ಲಿ ಕೇವಲ ವ್ಯಾಪಾರಿಗಳು. ಅವರು ತಮ್ಮ ವ್ಯಾಪಾರ ಉದ್ದಿಮೆಗಳಿಗೆ ಗಮನ ಕೊಡಬೇಕು. ಅಲ್ಲದೆ ತಮಗೆ ರಕ್ಷಣೆ ನೀಡಿರುವ ಸರ್ಕಾರಕ್ಕೆ ಒಳ್ಳೆಯದನ್ನೇ ಹಾರೈಸಬೇಕು ಎಂಬುದು ಹೈದರನ ಇಚ್ಛೆ (Forrest, Bombay Diaries, Vol. II, P. 157). ಇಂಗ್ಲೀಷರಾಗಲಿ ಫ್ರೆಂಚರಾಗಲಿ ಅಥವಾ ಇನ್ನಾವುದೇ ವಿದೇಶಿ ರಾಷ್ಟ್ರವಾಗಲಿ ಭಾರತದಲ್ಲಿ ನೆಲೆಯಾಗಿ ನಿಲ್ಲಬಾರದು ಎಂಬುದೆ ಅವನ ಅಪೇಕ್ಷೆಯಾಗಿತ್ತು. (Memoirs of Tipu Sultan with a pıeliminary Sketch of the life of Hydar Ali Cawn, by an officer East India Service, PP. 27-8).

ಇಂಗ್ಲೀಷರು ಹೈದರನಿಗೆ ಕೊಟ್ಟ ತೊಂದರೆಗಳ ಪರಂಪರೆಯಿಂದ ಅವನಿಗೂ ಇಂಗ್ಲೀಷರಿಗೂ ಇದ್ದ ಸಂಬಂಧ 1780ರಲ್ಲಿ ಹದಗೆಟ್ಟು ವಿಷಮಸ್ಥಿತಿಯನ್ನು ಮುಟ್ಟಿತು. ಭಾರತದಲ್ಲಿ ಬೇರೂರಿದ್ದ ಬ್ರಿಟಿಷ್ ಅಧಿಕಾರವನ್ನು ಮೂಲೋತ್ಪಾಟನಗೊಳಿಸುವುದಕ್ಕಾಗಿ 1780ರಲ್ಲಿ ಭಾರತವು ವ್ಯವಸ್ಥೆಗೊಳಿಸಿದ ಕೂಟಕ್ಕೆ ಹೈದರನು ಸೇರಿಕೊಂಡನು. ಭಾರತದ ಶಕ್ತಿಗಳೆಲ್ಲವೂ ತಮ್ಮ ಭಿನ್ನಾಭಿಪ್ರಾಯ, ಅಂತಃ ಕಲಹಗಳನ್ನು ಕೆಲಕಾಲ ಮರೆತು ಉದ್ದೇಶ ಸಾಧನೆಗಾಗಿ ಒಟ್ಟುಗೂಡುವಂತೆ ಈ ಕೂಟವನ್ನು ಆರಂಭಿಸಿ ಪ್ರೋತ್ಸಾಹಿಸಿದವರು ಯಾರು ಎಂಬುದರ ಬಗ್ಗೆ ಐತಿಹಾಸಿಕ ಅಂಶಗಳು ಹೆಚ್ಚು ಬೆಳಕನ್ನು ಬೀರಿಲ್ಲ. ಈ ಕೂಟಕ್ಕೆ ನಾನಾ ಫಡ್ನವೀಸನೇ ಮೂಲ ಕರ್ತೃವೆಂದು ಜಿ. ಎಸ್. ಸರ್‌ದೇಸಾಯಿ ಅವರು ಊಹಿಸುತ್ತಾರೆ: (G. S. Sar Desai : New History of the Marathas Vol, III, pp 94–5). ಪ್ರೊ. ಎನ್. ಕೆ. ಸಿನ್ಹರ ಪ್ರಕಾರ ಹೈದರನ ಪ್ರೋತ್ಸಾಹದಿಂದ ಈ ಕೂಟವನ್ನು ನಾನಾ ಸ್ಥಾಪಿಸಿದನು (N. K. Sinha : Haidar Ali, pp. 178–80). ನಿಜಾಮನು ತಾನೇ ಅದಕ್ಕೆ ಕರ್ತೃವೆಂದು ಸಾರಿದನು (Calendar of the Persian Correspondence, Vol, VI P–64. Also see P 214). 1779ರ ಜೂನಿನಲ್ಲಿ ರಘುನಾಥರಾಯನು ತಪ್ಪಿಸಿಕೊಂಡನಂತರ ಸಿಂಧ್ಯನು ಸ್ವತಃ ಈ ವಿಷಯದಲ್ಲಿ ಆಸಕ್ತಿವಹಿಸಿ ಅವನೊಬ್ಬನೇ ಈ ಕೂಟವನ್ನು ಸ್ಥಾಪಿಸಿದನೆಂಬ ಅಭಿಪ್ರಾಯವೂ ಇದೆ. (Dr. B. Sheik Ali : English Relations with Haidar Ali, P. 456). ಪ್ರಾಯಶಃ ನಾನಾ ಫಡ್ನವೀಸನಿಂದ ಈ ಕೂಟ ರೂಪುಗೊಂಡಿತು. ಇಂಗ್ಲೀಷರ ಕಿರುಕುಳದಿಂದ ಬೇಸತ್ತ ನಿಜಾಮ, ಸಿಂಧ್ಯ, ಮಾಧೋಜಿ ಭೋನ್ಸ್ಲೆ ಮತ್ತು ಹೈದರ್--ಇವರೆಲ್ಲರೂ ಇಂಗ್ಲೀಷರ ವಿರುದ್ಧ ಈ ಕೂಟವನ್ನು ಸೇರಿರಬೇಕು. ಕೂಟದವರೆಲ್ಲರೂ ಸೇರಿ ಒಂದು ಯುದ್ಧ–ಯೋಜನೆಯನ್ನು ತಯಾರಿಸಿದರು. ಅದರ ಪ್ರಕಾರ ಭಾರತದಲ್ಲಿ ಬ್ರಿಟಿಷರ ವಶದಲ್ಲಿರುವ ಪ್ರದೇಶಗಳೆಲ್ಲವನ್ನೂ ಇವರೆಲ್ಲರು ಒಂದೇ ಕಾಲದಲ್ಲಿ ಮುತ್ತಿ ಭಾರತದಿಂದ ಅವರನ್ನು ಓಡಿಸಬೇಕು ಎಂಬುದು. ಪೂನಾ ಸರ್ಕಾರವು ಬೊಂಬಾಯಿ ಮತ್ತು ಅದಕ್ಕೆ ಸೇರಿದ ಪ್ರದೇಶಗಳಿಗೆ ಮುತ್ತಿಗೆ ಹಾಕುವುದು ; ಪ್ರಮುಖರಾದ

ಸಿಂಧ್ಯ ಮತ್ತು ಭೋನ್ಸ್ಲೆ ಬಂಗಾಳವನ್ನು ಮುತ್ತುವುದು; ನಿಜಾಮನು ಉತ್ತರ ಸರ್ಕಾರವನ್ನು ಸೋಲಿಸುವುದು ಮತ್ತು ಹೈದರಾಲಿಯು ತನ್ನ ಶಕ್ತಿಯೆಲ್ಲವನ್ನೂ ದಕ್ಷಿಣದ ಕಡೆಗೂ ಮದರಾಸಿಗೂ ಕರೆದೊಯ್ಯುವುದು ಎಂದು ಒಪ್ಪಿಗೆಯಾಯಿತು. ಯುದ್ಧದ ಯೋಜನೆಯ ಮೇರೆಗೆ ಹೈದರನು ಕರ್ಣಾಟಕದ ಮೇಲೆ 'ತುಂಬು ಪ್ರವಾಹ ರಭಸ'ದಿಂದ ನುಗ್ಗುವಂತೆ ನುಗ್ಗಿ ದಕ್ಷಿಣದಲ್ಲಿ ಇಂಗ್ಲೀಷರ ವಹಿವಾಟುಗಳನ್ನು ಸಂದಿಗ್ಧ ಪರಿಸ್ಥಿತಿಗೆ ತಂದನು. ಆದರೆ ಕೂಟದ ಉಳಿದ ಸದಸ್ಯರುಗಳು ಯೋಜನೆಗೆ ತಕ್ಕಂತೆ ನಡೆದುಕೊಳ್ಳಲಿಲ್ಲ. ವಾರನ್ ಹೇಸ್ಟಿಂಗ್ಸನ ಚಾತುರ್ಯ ಮತ್ತು ವ್ಯವಹಾರ ಕುಶಲತೆ, ಭಾರತೀಯರ ಮಿತ್ರದ್ರೋಹ—ಇವು ಕೂಟದ ಯೋಜನೆಯನ್ನು ವಿಫಲಗೊಳಿಸಿದವು. ಸಾಲ್ಬಾಯ್ ಒಪ್ಪಂದವನ್ನು ತಿರಸ್ಕರಿಸಿ ಕೊನೆಯ ವರೆಗೂ ಇಂಗ್ಲೀಷರೊಡನೆ ಯುದ್ಧ ಮಾಡಿದನು. ಇದಕ್ಕೆ ಪ್ರತಿಯಾಗಿ ಕರ್ನಲ್ ಮಾರ್ಕ್ ವಿಲ್ಕಸ್ ಎಂಬವನು ಟಿಪ್ಪುವಿನ ಪತನದ ಬಹುವರ್ಷಗಳ ಅನಂತರ ಪೂರ್ಣಯ್ಯನ ಹೇಳಿಕೆ ಎಂದು ಅಭಿಪ್ರಾಯ ಪಡುವ ಮಾತುಗಳು ಹೈದರನಿಗೆ ಅನ್ವಯಿಸುತ್ತವೆ: 'ನಾನು ಬಹು ದೊಡ್ಡ ತಪ್ಪು ಮಾಡಿದೆ. ನನ್ನ ದುರಹಂಕಾರಕ್ಕೆ ತಕ್ಕುದನ್ನೇ ಅನುಭವಿಸುತ್ತೇನೆ. ಅನೇಕ ಬೈಲಿ (Baillie) ಮತ್ತು ಬ್ರೆತ್‌ವೈಟರನ್ನು ಸೋಲಿಸಬಲ್ಲೆ. ಆದರೆ ಅವರನ್ನು ನಾಶಗೊಳಿಸಲಾರೆ. ಭೂಮಿಯ ಮೇಲಿನ ಇಂಗ್ಲೀಷರ ಸಾಧನ ಸಂಪತ್ತುಗಳನ್ನು ಹಾಳುಮಾಡಬಲ್ಲೆ. ಆದರೆ ಸಮುದ್ರವನ್ನು ಬತ್ತಿಸಲಾರೆ. ಏನೂ ಪ್ರಯೋಜನವಿಲ್ಲದ ಯುದ್ಧದಿಂದ ನಾನು ಬೇಸರಗೊಳ್ಳಬೇಕು' (Col. Mark Wilks : Historical Sketches of the South, Vol. II, PP. 373-4). ಬ್ರಿಟಿಷರೊಡನೆ ಯುದ್ಧ ಮಾಡಿದ್ದಕ್ಕಾಗಿ ಪಶ್ಚಾತ್ತಾಪಗೊಂಡಿದ್ದನು ಮತ್ತು ಅವನ ಪರಾಭವದ ಮನೋಭಾವವನ್ನು ಈ ಹೇಳಿಕೆಯು ಚಿತ್ರಿಸುತ್ತದೆ. ಇದು ನಂಬಲಾಗದ್ದು. ಬ್ರಿಟಿಷರ ಸೇನೆಯನ್ನು ಮತ್ತು ತಂತ್ರವನ್ನು ಅತಿಶಯಗೊಳಿಸಲು ಮಾಡಿದ ಅನಂತರದ ಅನ್ವೇಷಣೆ ಎಂದು ತೋರುತ್ತದೆ. ಇಂಗ್ಲೀಷರ ಬಗೆಗೆ ಹೈದರನ ವಿರೋಧ ಅಚಲ ಮತ್ತು ಅವರ ಬಗೆಗೆ ಅವನಲ್ಲಿದ್ದ ಸೌಹಾರ್ದ ಮನೋಭಾವವನ್ನು ಅವನ ಮಗ ಟಿಪ್ಪುವಿನಲ್ಲೂ ಕಾಣಬಹುದು.

ಚಿತ್ತೂರಿನ ಬಳಿಯಿರುವ ನರಸಿಂಗರಾಯನ ಪೇಟೆ ಎಂಬಲ್ಲಿ ನಡೆದ ಯುದ್ಧ ಒಂದರಲ್ಲಿ ತನ್ನ ಅರುವತ್ತನೆಯ ವಯಸ್ಸಿನಲ್ಲಿ 7ನೆ ಡಿಸೆಂಬರ್ 1782 ರಂದು ಹೈದರನು ಮರಣವನ್ನಪ್ಪಿದನು. ಮೊದಲು ಕೋಲಾರದಲ್ಲಿ ಫತೇ ಮುಹಮದನ ಗೋರಿಯ ಬಳಿಯೇ ಅವನ ಕಳೇಬರವನ್ನು ಹೂಳಲಾಯಿತು. ಅನಂತರ ಅದನ್ನು ಅಲ್ಲಿಂದ ತೆಗೆದು ಶ್ರೀರಂಗಪಟ್ಟಣದಲ್ಲಿ ಟಿಪ್ಪುವು ನಿರ್ಮಿಸಿದ್ದ ಬೃಹತ್ ಗೋರಿಯಲ್ಲಿ ಹೂಳಲಾಯಿತು.

ಮೈಸೂರಿನ ಚರಿತ್ರೆಯಲ್ಲಿ ಹೈದರನಿಗೆ ವಿಶಿಷ್ಟ ಸ್ಥಾನವಿದೆ. ಅಕ್ಕಪಕ್ಕದ ರಾಜ್ಯಗಳು ಪದೇ ಪದೇ ಮುತ್ತಿಗೆ ಹಾಕುವುದು ಮತ್ತು ನಾಡಿನಲ್ಲಿ ಅರಾಜಕತೆ—ಇವುಗಳಿಂದ ವಿಷಮ ಸ್ಥಿತಿಯ ಭೀತಿಗೊಳಗಾಗಿದ್ದ ನಾಡನ್ನು ಕಂಡನು. ಆದರೆ ಅವನು ಸತ್ತಾಗ, ಮೈಸೂರನ್ನು ಮುತ್ತಿ ಹೆದರಿಸುವ ಸೈನ್ಯವಿರಲಿಲ್ಲ; ಮೈಸೂರು ರಾಜ್ಯ ವಿಸ್ತಾರವಾಗಿದ್ದು ಅದರ ಎಲ್ಲೆಕಟ್ಟು ಸುಭದ್ರವಾಗಿತ್ತು; ಅದರ ಸ್ವಾತಂತ್ರ್ಯ ಮತ್ತು ಸಮಗ್ರತೆಗಳು ಸುರಕ್ಷಿತವಾಗಿದ್ದವು; ಅಲ್ಲದೆ ಮೈಸೂರು ಭಾರತದಲ್ಲೆಲ್ಲಾ ಉನ್ನತ ಸ್ಥಾನವನ್ನು ಪಡೆದ ಪ್ರಮುಖ ರಾಜ್ಯಗಳಲ್ಲಿ ಒಂದಾಗಿತ್ತು. ಮೈಸೂರು ರಾಜ್ಯವು ತುಂಗಭದ್ರಾ ಮತ್ತು ಕೃಷ್ಣಾನದಿಯ ವರೆಗೂ ಹರಡಿ ಮಲಬಾರ್, ಕೊಡಗು, ಕೆನರ, ಹೊನ್ನಾವರ ಮತ್ತು ಮಂಗಳೂರು ಪ್ರದೇಶಗಳನ್ನೊಳಗೊಂಡಿತ್ತು. ದಕ್ಷಿಣದಲ್ಲಿ ಘಟ್ಟದ ಕೆಳಗಿನ ವರೆಗೂ ಹರಡಿತ್ತು. ಅವನ ಹಿಂದಿನವರ ಆಳಿಕೆಯಲ್ಲಿ ಭೂಕಂದಾಯವು ಕೇವಲ 40 ಲಕ್ಷವಿದ್ದುದು ಇವನ ಕಾಲದಲ್ಲಿ ಒಂದು ಕೋಟಿ ಹತ್ತು ಲಕ್ಷಕ್ಕೇರಿತು.

ಹೈದರನು ಉತ್ತಮ ಯೋಧ, ಆಕ್ರಮಣಕಾರಿ, ರಾಜತಂತ್ರಜ್ಞ, ಉತ್ತಮ ಆಡಳಿತಗಾರ. ಅವನು

ಮರಾಠರೊಡನೆಯಾಗಲಿ ಇಂಗ್ಲಿಷರೊಡನೆಯಾಗಲಿ ನಡೆದ ತೀರ್ಮಾನಕರ ಯುದ್ಧದಲ್ಲಿ ಅಪರೂಪವಾಗಿ ಜಯಶಾಲಿಯಾಗಿದ್ದಾನೆ ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಸಾಮಾನ್ಯವಾಗಿ ಹೈದರನು ಛಲಯುದ್ಧವನ್ನು ನಿವಾರಿಸಿ ಯುಕ್ತಿಯಿಂದ ಜಯಗಳಿಸುವುದನ್ನೇ ಅವಲಂಬಿಸಿ ಎದುರಾಳಿಗಳಿಗೆ ಹಿಂಸೆ ಕೊಡುವುದು, ಬಲ ಕುಗ್ಗಿಸುವುದು-ಇವುಗಳ ಮೂಲಕ ಶತ್ರುಗಳನ್ನು ಗೆಲ್ಲುತ್ತಿದ್ದನು. ವೀರಯೋಧನಾಗಿ ಧೈರ್ಯ ಸಾಮರ್ಥ್ಯಗಳಿಗೂ ಸೇನಾಪತಿಯಾಗಿ ತಂತ್ರೋಪಾಯಗಳಿಗೂ ಪ್ರಸಿದ್ಧನಾಗಿದ್ದನು. ಯೂರೋಪಿಯನ್ ಮಾದರಿಯಲ್ಲಿ ತರಬೇತಾದ ಶಕ್ತಿಯುತವಾದ ಕಾಲಾಳು, ರಾವುತರು, ಫಿರಂಗಿದಳ–ಇವು ಸದಾ ಸಿದ್ಧವಾಗಿ ದ್ದುವು. ನೌಕಾದಳದ ಪ್ರಾಮುಖ್ಯವನ್ನು ಅರಿತು ದಡರಕ್ಷಣೆಗಾಗಿ ನೌಕಾಪಡೆಗೆ ತಳಪಾಯ ಹಾಕಿದನು. ಸ್ವತಃ ಶಕ್ತ ಆಡಳಿತಗಾರನಾಗಿ ರಾಜ್ಯಕ್ಕೆ ಬಲಯುತವಾದ ಸರ್ಕಾರವನ್ನು ಒದಗಿಸಿದ್ದೇ ಅಲ್ಲದೆ, ಪ್ರಜೆಗಳ ಜೀವನ ಮಟ್ಟವನ್ನೂ ಉತ್ತಮಗೊಳಿಸಿದನು. ಆ ವರೆಗೂ ಊಹಿಸಲಾಗದಿದ್ದ ರೀತಿಯ ಉತ್ಸಾಹದ ಆಡಳಿತವನ್ನು ಹೈದರನ ಆಳಿಕೆಯಲ್ಲಿ ಮೈಸೂರು ಪಡೆದಿತ್ತೆಂಬುದನ್ನು ಪಾಶ್ಚಾತ್ಯರು ಗಮನಿಸಿದರು. ಆಡಳಿತ ಕ್ರಮದಲ್ಲಿ ಹಿಂದಿನಿಂದ ಬೇರೂರಿದ್ದ ಆಚರಣೆಗಳನ್ನೂ ಸ್ಥಳೀಯ ಪದ್ಧತಿಗಳನ್ನೂ ಹೈದರನು ಗೌರವಿಸುತ್ತಿದ್ದನು. ಆಡಳಿತ ಕ್ರಮದಲ್ಲಿ ಹೊಸತನ್ನು ಪ್ರಮುಖವಾಗಿ ಆಚರಣೆಗೆ ತರುವುದನ್ನು ಅವನು ವಿರೋಧಿಸುತ್ತಿದ್ದನು. ಮತೀಯ ಸೂಕ್ಷ್ಮಾಂಶಗಳಿಗೆ ಹೆಚ್ಚು ಗಮನ ಕೊಡದೆ ಮತ ಸಹಿಷ್ಣುವಾಗಿದ್ದನು. 'ಹೈದರ್‌ನಾಮ'ದ ಕರ್ತೃ ಹೈದರನನ್ನು 'ದೈವ ಬ್ರಹ್ಮ ದ್ವೇಷರಹಿತ' ಅಂದರೆ ದೇವ ಬ್ರಾಹ್ಮಣರಲ್ಲಿ ದ್ವೇಷವಿಲ್ಲದಿರುವವನು, ಎಂದು ಕರೆಯುತ್ತಾನೆ (Haidar Nama, MSS. P. 187). ರಾಜಕೀಯ ದಿಂದ ಜಾತೀಯತೆಯನ್ನು ಪ್ರತ್ಯೇಕಿಸಿದ್ದಲ್ಲದೆ ತನ್ನ ರಾಜ್ಯವನ್ನು ಜಾತ್ಯತೀತವನ್ನಾಗಿ ಮಾಡಿದನು. ಅವನಲ್ಲಿ ಕೆಲವು ಅವಗುಣಗಳೂ ಲೋಪದೋಷಗಳೂ ಇದ್ದುವು. ಒಮ್ಮೊಮ್ಮೆ ಅವನು ಅತ್ಯಂತ ಕ್ರೂರಿಯೂ ಉದಾಸೀನನೂ ಮದ್ಯಪೇಯಿಯೂ ವಿಷಯಾಸಕ್ತನೂ ಆಗಿದ್ದನು.

ಅವನ ತಪ್ಪುಗಳನ್ನೂ ಲೋಪದೋಷಗಳನ್ನೂ ಕಡೆಗಣಿಸಿದರೆ ಹೈದರ್ ಆಲಿಯು ತನ್ನ ಶೌರ್ಯ ಮತ್ತು ರಾಜತಂತ್ರ ನೈಪುಣ್ಯದಿಂದ ಮೈಸೂರು ಹಾಗೂ ಭಾರತದ, ಹದಿನೆಂಟನೆ ಶತಮಾನದ ಇತಿಹಾಸದಲ್ಲಿ, ಅಚ್ಚಳಿಯದ ಪ್ರಭಾವವನ್ನು ಬೀರಿದ್ದಾನೆ.

ಮೂಲಲೇಖಕರು : ಶ್ರೀ ಡಿ.ಎಸ್. ಅಚ್ಯುತರಾವ್
ಅನುವಾದಕರು : ಶ್ರೀಮತಿ ಟಿ.ವಿ. ರತ್ನಮ್ಮ

# ಟಿಪ್ಪು ಸುಲ್ತಾನ್

1753ನೆ ನವೆಂಬರ್ 20ನೆ ಶುಕ್ರವಾರ ದೇವನಹಳ್ಳಿಯಲ್ಲಿ ಟಿಪ್ಪು ಸುಲ್ತಾನನು ಜನ್ಮ ತಾಳಿದನು. ಹೈದರನು ಅನಕ್ಷರಸ್ಥನಾದರೂ ಟಿಪ್ಪುವಿಗೆ ಯೋಗ್ಯ ಶಿಕ್ಷಣವನ್ನು ಕೊಡಿಸಿ ಕುದುರೆ ಸವಾರಿಯನ್ನೂ ಅಸ್ತ್ರಗಳ ಉಪಯೋಗವನ್ನೂ ಕಲಿಸಿದ್ದನು. ಟಿಪ್ಪುವು ಹದಿನೈದು ವರ್ಷದವನಾಗಿದ್ದಾಗಲೇ ತಂದೆ ಯೊಡನೆ ಯುದ್ಧಗಳಲ್ಲಿ ಭಾಗವಹಿಸುತ್ತಿದ್ದನು. ಮೊದಲನೆಯ ಇಂಗ್ಲಿಷ್-ಮೈಸೂರು ಯುದ್ಧ (1767-69), ಮರಾಠ-ಮೈಸೂರು ಯುದ್ಧ (1769-72) ಗಳಲ್ಲಿ ಮೊದಲ ಬಾರಿಗೆ ಟಿಪ್ಪುವು ಸಾಮರ್ಥ್ಯ ತೋರಿ ಪ್ರಸಿದ್ಧನಾದನು. ಎರಡನೆಯ ಇಂಗ್ಲಿಷ್–ಮೈಸೂರು ಯುದ್ಧ 1780ರ ಜುಲೈಯಲ್ಲಿ ಪ್ರಾರಂಭ ವಾದಾಗ ಟಿಪ್ಪುವು ಬೇಲಿಯ ದಂಗೆಯನ್ನು ಅಡಗಿಸಲು ಹೈದರನಿಗೆ ಸಹಾಯ ಮಾಡಿದನು. ಅನಂತರ ಅವನು ಆರ್ಕಾಟ್, ಸತಗೂರ್, ಅಂಬೂರ್ ಮತ್ತು ತಯಾಗರ್‌ಗಳನ್ನು ಮುತ್ತಿದನು ; ಅಲ್ಲದೆ ವಾಂಡಿವಾಷ್ ಎಂಬ ಪ್ರದೇಶವನ್ನು ಸ್ವಾಧೀನಪಡಿಸಿಕೊಳ್ಳುವ ಪ್ರಯತ್ನದಲ್ಲಿ ವಿಫಲನಾದನು. ಆದರೂ 1782 ನೆ ಫೆಬ್ರುವರಿ 18ರಂದು ತಂಜಾವೂರಿನಲ್ಲಿ ಬ್ರೈತ್ ವೈಟನ ಮೇಲೆ ದಾಳಿ ಮಾಡಿ ಸೋಲಿಸಿದನು. ಅನಂತರ ಇಂಗ್ಲಿಷರ ಸ್ವಾಧೀನದಲ್ಲಿದ್ದ ಮಲಬಾರನ್ನು ಮುತ್ತುವಂತೆ ಟಿಪ್ಪುವಿಗೆ ಆಜ್ಞೆಯಾಯಿತು. ಆದರೆ ಅಲ್ಲಿ ಕಾರ್ಯೋನ್ಮುಖನಾಗಿದ್ದಾಗ–7ನೆ ಡಿಸೆಂಬರ್ 1782ರಲ್ಲಿ ತಂದೆಯ ಮರಣವಾರ್ತೆಯನ್ನು ಕೇಳಿದನು. ಅವನು ಕೂಡಲೇ ಮುಖ್ಯಸೇನೆ ಬೀಡುಬಿಟ್ಟಿದ್ದ ಪೆನ್ನಾರ್ ನದಿಯ ದಡದ ಚಿಕ್ಕಮಾಲೂರಿಗೆ ಹೋದನು.

ಸೈನ್ಯವನ್ನು ಸೇರಿ ಒಂದು ತಿಂಗಳನಂತರ ಜನರಲ್ ಸ್ಟುವರ್ಟನ ಮುನ್ನುಗ್ಗುವಿಕೆಯನ್ನು ಕೇಳಿದನು. ಕೂಡಲೇ ಅಲ್ಲಿಂದ ಹೊರಟು ವಾಂಡಿವಾಷ್ ಬಳಿ ಅವನನ್ನು ಸೋಲಿಸಿದನು. ಅವನು ಈ ವಿಜಯವನ್ನು ಮುಂದುವರಿಸಲು ಸಾಧ್ಯವಾಗಲಿಲ್ಲ. ಕಾರಣ, ಇಂಗ್ಲಿಷರಿಂದ ಆಕ್ರಮಿತವಾಗಿದ್ದ ಪಶ್ಚಿಮ ಘಟ್ಟಗಳ ಬಳಿಯ ಬಿದನೂರಿಗೆ ಮತ್ತು ಮುಖ್ಯ ಬಂದರಾದ ಮಂಗಳೂರಿಗೆ ಹೋಗಬೇಕಾಯಿತು. ಒಂದಾದ ಮೇಲೊಂದ ರಂತೆ ಅನೇಕ ಸ್ಥಳಗಳನ್ನು ಟಿಪ್ಪುವು ವಶಪಡಿಸಿಕೊಂಡು ಮಂಗಳೂರನ್ನು ಮುತ್ತಿದನು. ಇದೇ ಸಂದರ್ಭ ದಲ್ಲಿ ಸಂಧಾನ ನಡೆದು 11ನೆ ಮಾರ್ಚಿ 1784ರಲ್ಲಿ ಮಂಗಳೂರಿನಲ್ಲಿ ಶಾಂತಿ ಒಪ್ಪಂದಕ್ಕೆ ಸಹಿ ಬಿದ್ದು ದರಿಂದ ಯುದ್ಧ ಕಾಲದಲ್ಲಿ ಟಿಪ್ಪು ಮತ್ತು ಇಂಗ್ಲಿಷರು ಆಕ್ರಮಿಸಿಕೊಂಡ ಪ್ರದೇಶಗಳು ಅವರವರಿಗೇ ಮತ್ತೆ ದೊರೆಯುವಂತಾದುವು.

ಟಿಪ್ಪುವಿಗೆ ಇಂಗ್ಲೀಷರೊಡನೆ ಉಂಟಾದ ಘರ್ಷಣೆಯ ಪ್ರಯೋಜನ ಪಡೆದು ಅನೇಕ ನಾಯಕರು ಮೈಸೂರು ರಾಜ್ಯದಿಂದ ಪ್ರತ್ಯೇಕಗೊಂಡು ತಾವು ಸ್ವತಂತ್ರರೆಂದು ಘೋಷಿಸಿದರು. ಆದ್ದರಿಂದ ಟಿಪ್ಪುವು ಅವರನ್ನು ದಂಡಿಸಲು ನಿರ್ಧರಿಸಿದನು. ಮೊದಲು ಮಂಜರಾಬಾದಿನ ಬಳಿಯಿರುವ ಬಲಮ್ ರಾಜನನ್ನು ಮುತ್ತಿ ಸೋಲಿಸಿದನು. ಅನಂತರ ಕೊಡಗನ್ನು ಮುತ್ತಿ ದಂಗೆಕೋರರನ್ನು ತುಳಿದನು. ಮರಾಠರ ಸಹಾಯವನ್ನು ನೆಚ್ಚಿ ಅನೇಕ ವರ್ಷಗಳಿಂದ ಕಪ್ಪಕಾಣಿಕೆಯನ್ನು ಸಲ್ಲಿಸದಿದ್ದ ನರಗುಂದದ ದೇಸಾಯಿಯ ವಿರುದ್ಧ ಸೈನ್ಯವನ್ನು ಕಳುಹಿಸಿದನು. ಆದರೆ ಹೀಗೆ ಮಾಡಿದುದರಿಂದ ಟಿಪ್ಪುವು ತಾನೇ ತಾನಾಗಿ ಮರಾಠರೊಡನೆ ಘರ್ಷಣೆಯನ್ನು ತಂದುಕೊಂಡನು.

1774-78 ರ ಅವಧಿಯಲ್ಲಿ ಕೃಷ್ಣಾ ನದಿಯ ದಕ್ಷಿಣಕ್ಕಿರುವ ಮರಾಠ ರಾಜ್ಯದ ಭಾಗಗಳನ್ನು

ಹೈದರನು ವಶಪಡಿಸಿಕೊಂಡಿರುವ ವಿಷಯ ನಾನಾ ಫಡ್ನವೀಸನ ಗಮನಕ್ಕೆ ಬಂದಿತು. ಸಾಲ್‌ಭಾಯ್ ಒಪ್ಪಂದದನಂತರ ಈ ಪ್ರದೇಶಗಳನ್ನು ಮತ್ತೆ ಪಡೆಯಬೇಕೆಂದು ಹೈದರನನ್ನು ಕೇಳಿ ತಾನು ನಿರಾಕರಿಸಲ್ಪಟ್ಟಿದ್ದನು. ಟಿಪ್ಪುವೂ ಸಹ ಅವನ ಬೇಡಿಕೆಗೆ ಅದೇ ಉತ್ತರವನ್ನು ಕೊಟ್ಟನು. ಆದ್ದರಿಂದ ನಾನಾ ಟಿಪ್ಪುವನ್ನು ಹೊಡೆದೋಡಿಸಲು ನಿರ್ಧರಿಸಿ ಇದಕ್ಕಾಗಿ ನಿಜಾಮನ ಸ್ನೇಹವನ್ನು ಬೇಡಿದನು. ನಿಜಾಮನು ಸಹ, ಟಿಪ್ಪುವಿನ ಪ್ರಾಬಲ್ಯವನ್ನು ಕಂಡು ಅಸೂಯೆಪಡುತ್ತಿದ್ದುದಲ್ಲದೆ ಹೆದರುತ್ತಲೂ ಇದ್ದನು. ಆದ್ದರಿಂದ ನಾನಾವಿನ ಬೇಡಿಕೆ ಸುಲಭವಾಗಿ ಈಡೇರಿತು. ಅದೂ ಅಲ್ಲದೆ ಹೈದರನು ನಿಜಾಮನಿಗೆ ಸೇರಿದ್ದ ಕಡಪಾ, ಕರ್ನೂಲ್, ಮತ್ತಿತರ ಪ್ರದೇಶಗಳನ್ನು ಸ್ವಾಧೀನಪಡಿಸಿಕೊಂಡಿದ್ದನು. ನಿಜಾಮನು ಅವುಗಳನ್ನು ಮತ್ತೆ ಪಡೆಯಲು ಆತುರನಾಗಿದ್ದನು. 1785 ರ ಡಿಸೆಂಬರಿನಲ್ಲಿ ನಾನಾ ಮತ್ತು ನಿಜಾಮರು ಯಾದವಗಿರಿಯಲ್ಲಿ ಸಂಧಿಸಿ ಟಿಪ್ಪುವಿನ ಪ್ರಾಬಲ್ಯವನ್ನು ನಾಶಪಡಿಸಲು ನಿರ್ಧರಿಸಿದರು. ಟಿಪ್ಪುವಿನ ನರಗುಂದದ ಆಕ್ರಮಣವು ನಾನಾವಿಗೆ ಟಿಪ್ಪುವಿನ ಮೇಲೆ ಯುದ್ಧಹೂಡಲು ಕಾರಣವನ್ನು ಒದಗಿಸಿತು.

ನಾನಾ ಮತ್ತು ನಿಜಾಮರ ಜೊತೆಗೂಡಿದ ಸೇನೆಯು 1786ನೇ ಮೇ 1 ರಂದು ಬಾದಾಮಿ ಮತ್ತು ಇತರ ಗಡಿನಾಡು ಪ್ರದೇಶಗಳನ್ನು ಆಕ್ರಮಣ ಮಾಡಿದ ಸುದ್ದಿಯು ಟಿಪ್ಪುವಿಗೆ ಮುಟ್ಟಿದ ಕೂಡಲೇ ಅವನು ಅಪಾರ ಸೇನೆಯೊಡನೆ ಹೊರಟನು. ಅವನು ಮೊದಲು ಆದವಾನಿಯನ್ನು ಆಕ್ರಮಿಸಿ ಸ್ವಾಧೀನ ಪಡಿಸಿಕೊಂಡನು. ಅನಂತರ ತುಂಗಭದ್ರಾನದಿಯನ್ನು ದಾಟಿ ಸುಮಾರು ಒಂಬತ್ತು ತಿಂಗಳ ಕಾಲ ನಾನಾ ಮತ್ತು ನಿಜಾಮರ ಜೊತೆಗೂಡಿದ ಸೈನ್ಯದೊಡನೆ ಜಯಪ್ರದವಾಗಿ ಹೋರಾಡಿದನು. ಯಾವ ಪ್ರದೇಶಗಳ ರಕ್ಷಣೆಗೆ ಟಿಪ್ಪುವು ಕತ್ತಿ ಹಿರಿದಿದ್ದನೋ ಆ ಪ್ರದೇಶಗಳಾದ ನರಗುಂದ, ಕಿತ್ತೂರು ಮತ್ತು ಬಾದಾಮಿ ಗಳನ್ನು ಒಪ್ಪಿಸಿ 1787 ನೆ ಏಪ್ರಿಲ್‌ನಲ್ಲಿ ಶಾಂತಿ ಒಪ್ಪಂದವನ್ನು ಮಾಡಿಕೊಂಡನು. ಈ ತ್ಯಾಗಕ್ಕೆ ಕಾರಣ ತನ್ನ ಮೇಲೆ ಒಳಸಂಚು ಹೂಡಿದ್ದ ಕಾರನ್‌ವಾಲೀಸನ ವಿರುದ್ಧ ನಿಜಾಮನ ಮತ್ತು ಮರಾಠರ ಮನಸ್ಸನ್ನು ಒಲಿಸಿಕೊಳ್ಳುವುದೇ ಆಗಿತ್ತು.

'ಅಪಮಾನಕರವಾದ ಶಾಂತಿ' ಎಂದು ಭಾವಿಸಿದ್ದರಿಂದ ಮಂಗಳೂರು ಒಪ್ಪಂದವು ತೃಪ್ತಿಯನ್ನುಂಟು ಮಾಡಲಿಲ್ಲ. ಎಲ್ಲಕ್ಕಿಂತಲೂ ಮಿಗಿಲಾಗಿ ಮೈಸೂರು ಭಾರತದ ರಾಜ್ಯಗಳಲ್ಲೆಲ್ಲಾ ಹೆಚ್ಚು ಬಲಯುತವೂ ಉತ್ತಮವೂ ಆದ ಆಳಿಕೆಯಿಂದ ಕೂಡಿ ಏಳಿಗೆಯನ್ನು ಪಡೆದಿತ್ತು. ಇದರಿಂದ ಇಂಗ್ಲೀಷರ ರಾಜ್ಯ ವಿಸ್ತರಣಾ ಯೋಜನೆಗೆ ಅಡ್ಡಿಯಾಗಿತ್ತು. ಆದ್ದರಿಂದ ಕಾರನ್‌ವಾಲೀಸನು ಗೌರ್ನರ್‌ಜನರಲ್ ಆಗಿ ಬಂದಾಗ ಟಿಪ್ಪುವಿನ ಶಕ್ತಿಯನ್ನು ಕುಗ್ಗಿಸಲು ನಿರ್ಧರಿಸಿದನು. ಇಂಗ್ಲಿಷ್ ಕಂಪೆನಿಯ ಸ್ನೇಹಿತನಾದ ತಿರುವಾಂಕೂರು ರಾಜನ ಮೇಲೆ ಟಿಪ್ಪುವು ಮಾಡಿದ ಮುತ್ತಿಗೆ ಕಾರನ್‌ವಾಲೀಸನಿಗೆ ಯುದ್ಧಹೂಡಲು ಒಂದು ನೆಪವಾಯಿತು. ಅವನು ಟಿಪ್ಪುವನ್ನು ಸದೆಬಡಿಯಲು ಒಂದು ವಿರೋಧಿ ಕೂಟವನ್ನೇ ವ್ಯವಸ್ಥೆ ಗೊಳಿಸಿದನು. ಟಿಪ್ಪುವು ತಮ್ಮ ಅತ್ಯಂತ ಅಪಾಯಕಾರಿಯಾದ ಶತ್ರು, ಆದ್ದರಿಂದ ಅವನನ್ನು ಸೋಲಿಸಿ ತಮ್ಮಿಂದ ಹೈದರನು ವಶಪಡಿಸಿಕೊಂಡಿದ್ದ ಪ್ರದೇಶಗಳನ್ನು ಮತ್ತೆ ಪಡೆಯಬೇಕೆಂಬ ಅಭಿಪ್ರಾಯವನ್ನು ನಿಜಾಮನ ಮತ್ತು ಮರಾಠರ ಮನಸ್ಸಿಗೆ ನಾಟುವಂತೆ ಮಾಡುವ ಪ್ರಯತ್ನದಲ್ಲಿ ಕಾರನ್‌ವಾಲೀಸನು ಸಫಲ ನಾದನು. ಹೈದರಾಬಾದ್ ಮತ್ತು ಪೂನಾಗಳಲ್ಲಿ ಇಂಗ್ಲೀಷರ ಪಿತೂರಿಯನ್ನು ವಿರುದ್ಧಕ್ರಿಯೆಯಿಂದ ವಿಫಲಗೊಳಿಸಲು ಟಿಪ್ಪುವು ತನ್ನ ನಿಯೋಗಿಗಳ ಮೂಲಕ ಮಾಡಿದ ಪ್ರಯತ್ನವು ನಿಷ್ಫಲವಾಯಿತು. ಇಂಗ್ಲಿಷ್ ನಿಯೋಗಿಗಳ ಬುದ್ಧಿವಂತಿಕೆಯ ಮುಂದೆ ಟಿಪ್ಪುವಿನ ಗುಪ್ತನಿಯೋಗಿಗಳು ಸೋಲಬೇಕಾಯಿತು.

ಇಂಗ್ಲೀಷರೊಬ್ಬರೇ ಟಿಪ್ಪುವಿನೊಡನೆ ಹೋರಾಡಿದಾಗ ಟಿಪ್ಪುವು ಅವರನ್ನು ಸೋಲಿಸಿದ್ದೆ ಅಲ್ಲದೆ ಕರ್ಣಾಟಕವನ್ನೂ ಮುತ್ತಿದನು. ಆದರೆ ನಿಜಾಮನೂ ಮರಾಠರೂ ಅವರ ಜೊತೆಗೂಡಿದ ಮೇಲೆ

ಅವನ ಸಾಮರ್ಥ್ಯವು ಇಳಿಮುಖವಾಗಲಾರಂಭಿಸಿತು. ಕೊನೆಗೆ ಅವನ ರಾಜಧಾನಿಯಾದ ಶ್ರೀರಂಗಪಟ್ಟಣವನ್ನು ಮುತ್ತಿ ಅಪಮಾನಕರವಾದ ಶಾಂತಿ ಒಪ್ಪಂದಕ್ಕೆ ಸಹಿಹಾಕುವಂತೆ ಒತ್ತಾಯಪಡಿಸಿದರು. ಇದರಿಂದ ಟಿಪ್ಪುವು ತನ್ನ ರಾಜ್ಯದಲ್ಲಿ ಅರ್ಧವನ್ನೂ 330 ಲಕ್ಷ ರೂಪಾಯಿಗಳನ್ನೂ ಪರಿಹಾರವಾಗಿ ಕೊಡಬೇಕಾಯಿತು (22ನೇ ಮಾರ್ಚಿ 1792).

ಶ್ರೀರಂಗಪಟ್ಟಣದ ಒಪ್ಪಂದದಿಂದ ಆರ್ಥಿಕ ಮತ್ತು ಸೈನಿಕ ಶಕ್ತಿ ಕುಗ್ಗಿದರೂ ಕೆಲವೇ ವರ್ಷಗಳಲ್ಲಿ ಟಿಪ್ಪುವು ತನ್ನ ರಾಜ್ಯವನ್ನು ಬಲಯುತವಾಗಿ ಮಾಡಿ ಅಭಿವೃದ್ಧಿಗೊಳಿಸುವುದರಲ್ಲಿ ಜಯಶಾಲಿಯಾದನು. ಭಾರತಕ್ಕೆ ಗೌರ್ನರ್ ಜನರಲ್ ಆಗಿ ಬಂದ ವೆಲ್ಲೆಸ್ಲಿಯು ಸ್ವಪ್ರತಿಷ್ಠೆಯಿಂದ ಉಚ್ಛ್ರಾಯ ಸ್ಥಿತಿಯಲ್ಲಿರುವ ಯಾವ ರಾಜ್ಯದ ಏಳಿಗೆಯನ್ನೂ ಸಹಿಸದೆ ಟಿಪ್ಪುವನ್ನು ಅಧಿಕಾರದಿಂದ ಉರುಳಿಸಲು ನಿರ್ಧರಿಸಿದನು. ಮಾರಿಷಿಯಸ್‌ನಿಂದ ಸೈನ್ಯ ಪಡೆಯಲು ರಾಯಭಾರಿಯನ್ನು ಕಳುಹಿಸಿ, ಅಲ್ಲಿನ ಫ್ರೆಂಚರ ಜೊತೆ ಸೇರಿ ತಮ್ಮ ಮೇಲೆ ಆಕ್ರಮಣ ಮಾಡಬೇಕೆಂದು ಆಶಿಸಿ ಅವರ ರಕ್ಷಣೆಗೆ ಮರೆ ಹೋದನೆಂಬ ನೆಪ ಹೂಡಿ ಟಿಪ್ಪುವಿನ ಮೇಲೆ ಯುದ್ಧವನ್ನು ಘೋಷಿಸಿದನು. ಅಲ್ಲದೆ ಶರಣಾಗತನಾಗಿ ಸಾಮಂತತ್ವವನ್ನು ಹೊರತು ಉಳಿದ ಯಾವ ವಿಧವಾದ ಸಂಧಾನಕ್ಕೂ ಒಪ್ಪಲಿಲ್ಲ. ಟಿಪ್ಪುವು ಕಂಪೆನಿಯ ಸಾಮಂತನಾಗಿರಲು ಒಪ್ಪದಿರಲು ವೆಲ್ಲೆಸ್ಲಿಯು ಮುಖ್ಯ ಸೇನಾಪತಿಯಾದ ಜನರಲ್ ಹ್ಯಾರಿಸನಿಗೆ ಮೈಸೂರನ್ನು ಮುತ್ತುವಂತೆ ಆಜ್ಞೆಯಿತ್ತನು. ಸಿದ್ಧೇಶ್ವರ ಮತ್ತು ಮಳವಳ್ಳಿಯಲ್ಲಿ ನಡೆದ ಹೋರಾಟದಲ್ಲಿ ಟಿಪ್ಪುವು ಸೋಲಬೇಕಾಯಿತು, ಆದರೂ ರಾಜಧಾನಿಯಾದ ಶ್ರೀರಂಗ ಪಟ್ಟಣದ ರಕ್ಷಣೆಗಾಗಿ ಅತ್ಯಂತ ಪರಾಕ್ರಮದಿಂದ ಹೋರಾಡಿ 1799ನೇ ಮೇ 4ರಂದು ಯುದ್ಧದಲ್ಲೇ ಮಡಿದನು.

ಅನೇಕ ಇಂಗ್ಲಿಷ್ ಬರಹಗಾರರು ಟಿಪ್ಪುವನ್ನು ಮತಾಂಧ ಮತ್ತು ಕ್ರೂರಿಯಾದ ದಬ್ಬಾಳಿಕೆಯ ದೊರೆ ಎಂದು ಚಿತ್ರಿಸಿದ್ದಾರೆ. ಆದರೆ ಟಿಪ್ಪುವಿನ ಜೀವನವನ್ನು ಸೂಕ್ಷ್ಮವಾಗಿ ಅಭ್ಯಸಿಸಿದಾಗ ಇಂಗ್ಲಿಷ್ ಬರಹಗಾರರ ಅಭಿಪ್ರಾಯವು ಸುಳ್ಳೆಂಬುದು ವ್ಯಕ್ತವಾಗುತ್ತದೆ. ಪ್ರತಿಯಾಗಿ ಟಿಪ್ಪುವು ತಿಳುವಳಿಕೆಯುಳ್ಳ ಪ್ರಭುವಾದ್ದರಿಂದ ಮುಸ್ಲಿಮೇತರರನ್ನು ಬಹಳ ಔದಾರ್ಯದಿಂದಲೇ ನಡೆಸಿಕೊಂಡನು. ಅವರಿಗೆ ಒಳ್ಳೆಯ ಅಧಿಕಾರ, ಸ್ಥಾನಮಾನಗಳನ್ನು ಕೊಟ್ಟು ತಮ್ಮ ಇಚ್ಛೆಬಂದ ದೈವವನ್ನು ಪೂಜಿಸುವ ಸಂಪೂರ್ಣ ಸ್ವಾತಂತ್ರ್ಯವನ್ನೂ ಕೊಟ್ಟನು. ದೇವಸ್ಥಾನಗಳಿಗೂ, ಬ್ರಾಹ್ಮಣರಿಗೂ ದತ್ತಿ ಬಿಟ್ಟನು. ವಿಗ್ರಹಗಳ ಪುನಃ ಪ್ರತಿಷ್ಠಾಪನೆಗೆ ಹೇರಳ ಹಣ ನೀಡಿ ದೇವಾಲಯಗಳಿಗೆ ಬೆಳ್ಳಿಯ ಹಾಗು ಚಿನ್ನದ ಪದಾರ್ಥಗಳನ್ನು ಕಾಣಿಕೆಯಾಗಿ ಕೊಟ್ಟನು. ಇಷ್ಟೇ ಅಲ್ಲದೆ, ದೇವಾಲಯದ ನಿರ್ಮಾಣಕ್ಕೆ ಒಮ್ಮೆ ಆಜ್ಞಾಪಿಸಿದನು. ಮಲಬಾರಿನ ಮುಸ್ಲಿಮೇತರರನ್ನು ಬಹಳ ನಿರ್ದಯದಿಂದ ನಡೆಸಿಕೊಂಡನೆಂಬ ಅಂಶವನ್ನು ಅಲ್ಲಗಳೆಯುವಂತಿಲ್ಲ. ಆದರೆ ಹಾಗೆ ನಡೆದುಕೊಂಡುದು ಮತೀಯ ಕಾರಣದಿಂದಲ್ಲ; ಅವರ ಉದ್ಧಟತನಕ್ಕಾಗಿ. ಮುಸ್ಲಿಮರೂ ದುಷ್ಕೃತ್ಯಗಳನ್ನೆಸಗಿದಾಗ ನಿಷ್ಠುರನಾಗಿ ಅವರನ್ನೂ ದಂಡಿಸುತ್ತಿದ್ದನು.

ಟಿಪ್ಪುವು ಆಹಾರ ವ್ಯವಹಾರಗಳಲ್ಲಿ ಸರಳ ರೀತಿಯ ಜೀವನವನ್ನು ನಡೆಸಿ ಇತರರಿಗೂ ಮಾದರಿಯಾದನು. ಗಂಭೀರವಾದ ವ್ಯಕ್ತಿತ್ವದಿಂದ ಎಲ್ಲರ ಮೇಲೂ ಪ್ರಭಾವ ಬೀರಿದ್ದನು. ವಿಜ್ಞಾನ ಮತ್ತು ವಿದ್ಯೆಯಲ್ಲಿ ಅವನಿಗೆ ಅಪಾರ ಆಸಕ್ತಿಯಿತ್ತು. ಸಂಗೀತ ನೃತ್ಯಗಳಿಗೂ ಆಶ್ರಯಕೊಟ್ಟು ಪ್ರೋತ್ಸಾಹಿಸುತ್ತಿದ್ದನು. ಕಾರ್ಯಾಸಕ್ತಿ, ಮುಂದಾಳುತನ, ಪ್ರತಿಭೆಗಳಿಂದ ಕೂಡಿದ ಶ್ರೇಷ್ಠ ಆಡಳಿತಗಾರನಾದುದರಿಂದಲೇ ಭಾರತದಲ್ಲೆಲ್ಲಾ. ಮೈಸೂರು ರಾಜ್ಯವನ್ನು ಅಭಿವೃದ್ಧಿಗೊಳಿಸುವ ಕಾರ್ಯದಲ್ಲಿ ಸಫಲನಾದನು. ರಾಜ್ಯದ ಎಲ್ಲ ಕಡೆಯೂ ಉತ್ತಮವಾದ ರಸ್ತೆಗಳನ್ನು ಮಾಡಿಸಿದನು. ನೀರಾವರಿ ಕೆಲಸಗಳಿಗಾಗಿ ಕೆರೆಕಟ್ಟೆಗಳನ್ನು ಕಟ್ಟಿಸಿದನು. ಯೂರೋಪಿಯನ್ ಮಾದರಿಯ ಸೈನ್ಯವನ್ನು ರೂಪಿಸಿ ಆಡಳಿತದಲ್ಲೂ ಅವರ ರೀತಿನೀತಿಯನ್ನು ಅಳವಡಿಸಿಕೊಂಡನು. ಅಲ್ಲದೆ ಅವರ ಪ್ರಭಾವದಿಂದ

ಸ್ಫೂರ್ತಿಗೊಂಡು ರಾಜ್ಯದಲ್ಲಿ ಹೊಸ ಕೈಗಾರಿಕೆಗಳನ್ನು ಸ್ಥಾಪಿಸಿದನು. ವಾಣಿಜ್ಯ ಮತ್ತು ವ್ಯಾಪಾರಗಳನ್ನು ಅಭಿವೃದ್ಧಿಪಡಿಸಿದನು. ಕಚ್, ಮಾಸ್ಕ ಮತ್ತು ಜೆಡ್ಡಗಳಲ್ಲಿ ಕಾರ್ಖಾನೆಗಳನ್ನು ಸ್ಥಾಪಿಸಿ ಒಮನ್, ಪರ್ಷಿಯಾ, ತುರ್ಕಿ ಅಧಿಕಾರಿಗಳ ಬಳಿಗೆ ವ್ಯಾಪಾರ ನಿಯೋಗಿಗಳನ್ನು ಕಳುಹಿಸಿದನು. ಆಪತ್ತಿನಲ್ಲಿ ಟಿಪ್ಪುವು ಎಂದೂ ಧೈರ್ಯಗೆಡುತ್ತಿರಲಿಲ್ಲ. ಯುದ್ಧತಂತ್ರ ನಿಪುಣ ; ಆದರೆ ಸಾಕಷ್ಟು ವ್ಯವಹಾರ ಕೌಶಲವಿಲ್ಲದ್ದರಿಂದ ಯಾವಾಗಲೂ ಶತ್ರುಗಳ ಚಾತುರ್ಯದ ಎದುರಿನಲ್ಲಿ ಸೋಲುತ್ತಿದ್ದನು. ನ್ಯಾಯ ಪಕ್ಷಪಾತಿಯಾದರೂ ನಿಷ್ಠುರನಾದ್ದರಿಂದ ತನ್ನ ಕೆಲವು ಅಧಿಕಾರಿಗಳನ್ನು ತೆಗೆದುಹಾಕಿದನು. ಇಂಗ್ಲೀಷರು ಅಂತಹ ಅಧಿಕಾರಿಗಳನ್ನು ಸುಲಭವಾಗಿ ತಮ್ಮ ಕಡೆಗೆ ಒಲಿಸಿಕೊಂಡರು. ದುಡುಕು ಮತ್ತು ಒರಟು ಸ್ವಭಾವದವನಾದ್ದರಿಂದ ಅವನಿಗೆ ಪ್ರತಿಸ್ಪರ್ಧಿ ಶಕ್ತಿಗಳೊಡನೆ ಸಂಧಾನಕ್ಕೆ ಬರಲು ಸಾಧ್ಯವಾಗುತ್ತಿರಲಿಲ್ಲ. ಸ್ವತಂತ್ರ ಮನೋಭಾವ, ಸ್ವಪ್ರತಿಷ್ಠೆ ಮತ್ತು ಹಟಮಾರಿತನವು ಅವನಲ್ಲಿ ಮನೆಮಾಡಿದ್ದರಿಂದ ತನ್ನ ಎದುರಾಳಿಗಳೊಡನೆ ಎಂದೂ ಶಾಂತಿ ಸೌಹಾರ್ದದಿಂದ ನಡೆದುಕೊಳ್ಳಲು ಸಾಧ್ಯವಾಗಲಿಲ್ಲ. ಅಧಃಪತನವೇ ಇದರ ಫಲವಾಯಿತು.

ಮೂಲಲೇಖಕರು : ಶ್ರೀ ಮೋಹ್‌ಬಿಲ್-ಉಲ್-ಹುಸೇನ್
ಅನುವಾದಕರು : ಶ್ರೀಮತಿ ಟಿ. ವಿ. ರತ್ನಮ್ಮ

# ಟಿಪ್ಪುವಿನ ಸ್ವಭಾವ ಮತ್ತು ಆಡಳಿತ ನೈಪುಣ್ಯ

ಟಿಪ್ಪು ಎಂದರೆ 'ಹುಲಿ'. ಟಿಪ್ಪುವು ಹುಲಿಯನ್ನು ತನ್ನ ಲಾಂಛನವಾಗಿ ಸ್ವೀಕರಿಸಿದ್ದನು. ಅವನ ಸಿಂಹಾಸನವು ಹುಲಿಯ ಆಕಾರದಲ್ಲಿತ್ತು, ಅದರ ಮೇಲೆ ಜೀವಂತ ಹುಲಿಯ ತಲೆಯ ಗಾತ್ರದ ತಲೆಯು ಚಿನ್ನದಲ್ಲಿ ಮಾಡಲಾಗಿತ್ತು. ಸಿಂಹಾಸನದ ಮೇಲ್‌ಚಪ್ಪರಕ್ಕೆ ಆಶ್ರಯ ಕೊಟ್ಟಿದ್ದ ಎಂಟು ಮುಖ್ಯ ಕಂಬಗಳಲ್ಲಿಯೂ ಹುಲಿಯ ತಲೆಗಳಿದ್ದುವು. ಟಿಪ್ಪುವಿನ ಮತ್ತು ಅವನ ಸೈನಿಕರ ಸಮವಸ್ತ್ರಗಳು ಹುಲಿಯ ಪಟ್ಟೆಗಳಿಂದ ಕೂಡಿದ್ದವು. ಅವನ ಬಂದೂಕ ಮತ್ತು ಇತರ ವಸ್ತುಗಳ ಮೇಲೂ ಇವು ಕೆತ್ತಲಾಗಿದ್ದುವು. ಎರಡು ಶತಮಾನಗಳು ಕುರಿಯಾಗಿ ಬಾಳುವುದಕ್ಕಿಂತ ಎರಡು ದಿನ ಹುಲಿಯಾಗಿ ಬಾಳಲು ತಾನು ಬಯಸುವುದಾಗಿ ಟಿಪ್ಪುವು ಹೇಳುತ್ತಿದ್ದನೆಂದು ತಿಳಿದುಬರುತ್ತದೆ.

ಬ್ರಿಟಿಷರನ್ನು ಹಿಂದೂದೇಶದಿಂದ ಹೊಡೆದೋಡಿಸುವ ತನ್ನ ಸಂಕಲ್ಪಕ್ಕೆ ಅವನು ಫ್ರೆಂಚರ ಸಹಾಯವನ್ನು ಪಡೆಯಲು ಪ್ರಯತ್ನಿಸಿದನು. ಅಲ್ಲದೆ ತುರ್ಕಿ, ಕಾಬೂಲು, ಪೇಶ್ವೆಗಳು, ನಿಜಾಮು ಮತ್ತು ಮೊಗಲ್ ಚಕ್ರವರ್ತಿಗಳನ್ನೂ ಬೇಡಿಕೊಂಡನು.

ಹಗಲಿನಿಂದ ನಡುರಾತ್ರಿಯ ವರೆಗೂ ಟಿಪ್ಪುವು ಸಾರ್ವಜನಿಕ ವ್ಯವಹಾರಗಳಿಗಾಗಿ ಸಮಯವನ್ನು ವಿನಿಯೋಗಿಸುತ್ತಿದ್ದನು. ರಾಜ್ಯಾಡಳಿತ ವಿಚಾರದ ಸರ್ಕಾರೀ ಪತ್ರಗಳ ಕರಡುಪ್ರತಿಗಳನ್ನು ತನ್ನ ಸ್ವಹಸ್ತದಿಂದಲೇ ಬರೆಯುತ್ತಿದ್ದನು.

ಟಿಪ್ಪುವು ತನ್ನ ಕೈ ಕೆಳಗಿನ ಅಧಿಕಾರಿಗಳಿಗೆ ಬರೆಯುತ್ತಿದ್ದ ಪತ್ರಗಳಿಂದ ಅವನ ದಿನನಿತ್ಯದ ಆಡಳಿತದ ವಿಷಯದಲ್ಲಿ ನಾವು ಕೆಲವು ಅಭಿಪ್ರಾಯಗಳನ್ನು ತಾಳಬಹುದು.

31ನೆ ಆಗಸ್ಟ್ 1785ರಲ್ಲಿ ಟಿಪ್ಪುವು ಮೊಹಿಯುದ್ದೀನ್ ಅಲಿಖಾನನಿಗೆ ಬರೆದ ಪತ್ರದಲ್ಲಿ ಕಚೇರಿಗೆ ಕ್ರಮವಾಗಿ ಹಾಜರಾಗುವಂತೆ ಆತನಿಗೆ ಉಪದೇಶಿಸಿದ್ದಾನೆ:

"ಕಚೇರಿಗೇ ಬರದೆ ಮನೆಯಲ್ಲಿಯೇ ಸತತವಾಗಿ ನೀನು ಇದ್ದುಬಿಡುತ್ತೀಯೆ ಎಂಬುದು ನಮಗೆ ವರದಿಯಾಗಿದೆ. ಇದು ಒಳ್ಳೆಯದಲ್ಲ. ದಿನದ ಯೋಗ್ಯ ಕಾಲವನ್ನು ನೀನು ಕಚೇರಿಯಲ್ಲಿ ಕಳೆಯಬೇಕು. ಅನಂತರ ಗೃಹಕೃತ್ಯದಲ್ಲಿ ಸಂತೋಷದಿಂದ ತೊಡಗಬಹುದು. ಹೀಗೆ ಮಾಡುವುದರಿಂದ ಸಾರ್ವಜನಿಕ ವ್ಯವಹಾರಕ್ಕಾಗಿ ನಿನ್ನನ್ನು ಕಾಣಲು ನಿನ್ನ ಮನೆಗೇ ಬರುವ ತೊಂದರೆ ಯಾರೊಬ್ಬರಿಗೂ ಇಲ್ಲದಂತಾಗುತ್ತದೆ"
ಟಿಪ್ಪುವು 11ನೆ ಡಿಸೆಂಬರ್ 1798ರಲ್ಲಿ ಮಾನ್‌ಸ್ಯೂಯರ್ ರ್‍ಯಾಲಿ ಎಂಬಾತನಿಗೆ ಹೀಗೆ ನಿರ್ದೇಶಿಸಿದ್ದಾನೆ:

"ನಿನ್ನ ಬಿಡಾರದಲ್ಲಿ ಮದ್ಯಸಾರ ಪಾನೀಯಗಳನ್ನು ಮಾರಾಟ ಮಾಡುವ ಒಂದಕ್ಕಿಂತ ಹೆಚ್ಚಿನ ಅಂಗಡಿಗಳು ತೆರೆದಿರಲು ಅವಕಾಶ ಕೊಡಕೂಡದು. ಅದೂ ಅಲ್ಲದೆ, ನಿನ್ನ ಕಡೆಯ ಯೂರೋಪಿಯನ್ನರಿಗಲ್ಲದೆ ಬೇರಾರಿಗೂ ಮದ್ಯವನ್ನು ಮಾರಾಟ ಮಾಡದಂತೆ ತಡೆಯಲು ನಿಗಾ ಇಡಬೇಕು. ಈ ರೀತಿಯ ಅಂಗಡಿಯನ್ನು ಸ್ಥಾಪಿಸಲು ಅಪ್ಪಣೆಯಿಲ್ಲ ಎಂಬುದು ನಮ್ಮ ವಿಜಯೀ ಸೇನೆಯ ನಿಯಮವಾಗಿದೆ"

29ನೆ ಡಿಸೆಂಬರ್ 1786ರಂದು ಟಿಪ್ಪುವು ಮಾನ್‌ಸ್ಯೂಯರ್ ಕಾಸ್ನಿ ಎಂಬವನಿಗೆ ಬರೆಯುತ್ತಾ, "ಯೂರೋಪಿನಿಂದ ಬರುವ ಪುಸ್ತಕವೊಂದು ಶಾಖಮಾಪಕವನ್ನು ಕುರಿತ ವಿಷಯದ್ದಾಗಿದೆ........ ಅದನ್ನು ಪರ್ಷಿಯನ್ ಭಾಷೆಗೆ ಭಾಷಾಂತರಿಸಿ ನನ್ನ ಸಮ್ಮುಖಕ್ಕೆ ಕಳುಹಿಸು."

2ನೆ ಫೆಬ್ರುವರಿ 1787ರಂದು ಟಿಪ್ಪುವು ಕಲ್ಲಿಕೋಟೆಯ ಫೌಜುದಾರನಿಗೆ ಇಂಗ್ಲಿಷ್ ವರ್ತಕರನ್ನು ಬಹಿಷ್ಕರಿಸುವಂತೆ ಆಜ್ಞಾಪಿಸಿದನು :

"ನೀನು ಅಲ್ಲಿನ ವ್ಯಾಪಾರಿಗಳಿಗೂ ಇತರ ನಿವಾಸಿಗಳಿಗೂ ಅಲ್ಲಿಗೆ ಬಂದಿರುವ ಇಂಗ್ಲಿಷ್ ವರ್ತಕರಿಂದ ಕೊಳ್ಳುವುದಾಗಲಿ ಧಾನ್ಯಗಳು ಇಲ್ಲವೆ ಇತರ ಪದಾರ್ಥಗಳನ್ನು ಮಾರುವುದಾಗಲೀ ಕೂಡದೆಂದು ಅತ್ಯಂತ ಕಟ್ಟುನಿಟ್ಟಾಗಿ ಆಜ್ಞೆಮಾಡಬೇಕು. ಈ ಸ್ಥಿತಿಯಲ್ಲಿ ಇಂಗ್ಲಿಷ್ ವ್ಯಾಪಾರಿಗಳು ಎಷ್ಟು ಕಾಲ ತಾನೇ ಉಳಿಯಬಲ್ಲರು ? ಕಡೆಗೆ ಮಾರಾಟ ಮಾಡುವ ಅಥವಾ ಕೊಳ್ಳುವ ವ್ಯವಹಾರವೇ ಇಲ್ಲದೆ ಹತಾಶರಾಗಿ ಅಲ್ಲಿಂದ ಅವರು ಕಾಲ್ತೆಗೆಯಲೇ ಬೇಕಾಗುತ್ತದೆ".

ಹೈದರ್ ಅಲಿಯ ರಾಜನೀತಿಯ ಸಲಹೆಗಳಿಂದ ಟಿಪ್ಪುವಿನ ವಿದೇಶೀ ರಾಜನೀತಿಯನ್ನು ನಾವು ಅರಿಯಬಹುದು : "ಮಗನೇ, ನಾನು ನನ್ನ ಪೂರ್ವಿಕರಿಂದ ಪಡೆಯದ ಒಂದ ಸಾಮ್ರಾಜ್ಯವನ್ನು ನಿನಗೆ ಬಿಡುತ್ತಿದ್ದೇನೆ. ಹಿಂಸೆಯಿಂದ ಗಳಿಸಿದ ರಾಜದಂಡವು ಯಾವಾಗಲೂ ನಶ್ವರವಾದುದು.........ನೀನು ನಿನ್ನ ರಾಜ್ಯದ ಆಂತರಿಕ ವ್ಯವಹಾರದಲ್ಲಿ ಎಳ್ಳಷ್ಟೂ ಹೆದರಬೇಕಾಗಿಲ್ಲ; ಆದರೆ ನಿನ್ನ ದೃಷ್ಟಿಯನ್ನು ಬಹುದೂರದ ವರೆಗೆ ಒಯ್ಯುವುದು ಅತ್ಯಾವಶ್ಯಕ. ಔರಂಗಜೇಬನ ಮರಣದಿಂದ ಭಾರತವು ಏಷ್ಯದ ಸಾಮ್ರಾಜ್ಯಗಳಲ್ಲಿ ತನ್ನ ಸ್ಥಾನಮಾನವನ್ನು ಕಳೆದುಕೊಂಡಿದೆ. ಈ ಸುಂದರ ನಾಡು ಅಂತಃಕಲಹದಿಂದ ಹರಿದು ಹಂಚಾಗಿದೆ. ಜನರು ನಾನಾಮತಗಳಿಗೆ ಹಂಚಿಹೋಗಿದ್ದಾರೆ. ಹೀಗಾಗಿ ದೇಶಪ್ರೇಮವನ್ನು ಕಳೆದುಕೊಂಡಿದ್ದಾರೆ. ಹಿಂದುಗಳು ಶಾಸ್ತ್ರಾನುಭವದಿಂದ ಪಡೆದ ಶಾಂತಿಸೂತ್ರದಿಂದ ಮೃದುವಾಗಿ, ತಮ್ಮ ನಾಡನ್ನು ರಕ್ಷಿಸಿಕೊಳ್ಳಲು ಅಸಮರ್ಥರಾಗಿದ್ದಾರೆ. ಆದ್ದರಿಂದ ನಾಡು ಪರಕೀಯರಿಗೆ ತುತ್ತಾಗಿದೆ. ದುರ್ಬಲ ಹಿಂದೂಗಳಿಗಿಂತ ಮಹಮ್ಮದೀಯರು ಹೆಚ್ಚು ಒಗ್ಗಟ್ಟಾಗಿ ಸಾಹಸಿಗಳೂ ಉದ್ಯಮಶೀಲರೂ ಆಗಿದ್ದಾರೆ. ಆದ್ದರಿಂದ ಅವರಿಗೆ ಹಿಂದೂದೇಶದ ರಕ್ಷಣೆಯ ಕೀರ್ತಿ ಸಲ್ಲಬೇಕಾಗಿದೆ. ಮಗನೇ, ನಿನ್ನ ಪ್ರಯತ್ನಗಳನ್ನೆಲ್ಲಾ ಒಟ್ಟುಗೂಡಿಸಿ ಕುರಾನನ್ನು ವಿಜಯಗೊಳಿಸು. ಯೂರೋಪಿಯನ್ನರ ಅಸೂಯೆ ಎಂಬ ದೊಡ್ಡ ಅಡಚಣೆಯನ್ನು ನೀನು ಗೆಲ್ಲಬೇಕಾಗಿದೆ. ಇಂಗ್ಲೀಷರಾದರೊ ಈಗ ಭಾರತದಲ್ಲಿ ಸರ್ವ ಶಕ್ತರಾಗಿದ್ದಾರೆ. ಅವರನ್ನು ಯುದ್ಧದ ಮೂಲಕ ದುರ್ಬಲಗೊಳಿಸುವುದು ಅತ್ಯಾವಶ್ಯಕ. ಅವರು ಸ್ವಾಧೀನಪಡಿಸಿಕೊಂಡಿರುವ ಭೂಭಾಗದಿಂದ ಅವರ ಕಾಲ್ತೆಗೆಸಲು ಹಿಂದೂಸ್ಥಾನದ ಸಾಧನಸಂಪತ್ತು ಸಾಲದು. ಯುರೋಪ್ ರಾಷ್ಟ್ರಗಳು ಒಂದರ ಮೇಲೊಂದು ಬೀಳುವಂತೆ ಮಾಡು. ಭಾರತೀಯ ಸೈನ್ಯಕ್ಕಿಂತಲೂ ಉತ್ತಮ ತರಬೇತಿಯಿಂದ ಕೂಡಿದ ಬ್ರಿಟಿಷ್ ಸೈನ್ಯವನ್ನು ಫ್ರೆಂಚರ ಸಹಾಯದಿಂದ ಮಾತ್ರ ಗೆಲ್ಲಬಲ್ಲೆ. ಯೂರೋಪಿಯನ್ನರಿಗೆ ನಿಖರವಾದ ಚಾತುರ್ಯವಿದೆ. ಅವರ ಮೇಲೆ ಯಾವಾಗಲೂ ಅವರ ಅಸ್ತ್ರವನ್ನೇ ಪ್ರಯೋಗಿಸು .........ಪರಾಕ್ರಮವು ನಮ್ಮನ್ನು ಸಿಂಹಾಸನಕ್ಕೆ ಏರಿಸಬಲ್ಲುದು. ಆದರೆ ಚಕ್ರಾಧಿಪತ್ಯವನ್ನು ಕಾದುಕೊಳ್ಳಲು ಅದು ಸಾಲದು ಎಂಬುದನ್ನು ಎಲ್ಲಕ್ಕಿಂತಲೂ ಮುಖ್ಯವಾಗಿ ನೆನಪಿಡು. ಜನರ ಪುಕ್ಕಲುತನದಿಂದ ನಾವು ಸಿಂಹಾಸನವನ್ನು ಗೆಲ್ಲಬಹುದು, ಆದರೆ ಶೀಘ್ರವಾಗಿ ಅದನ್ನು ಅವರ ಪ್ರೀತಿಗೆ ಒಪ್ಪಿಸದೆ ಹೋದಲ್ಲಿ ಆ ರಾಜ್ಯವು ನಮ್ಮ ಕೈಬಿಟ್ಟು ಹೋಗಬಹುದು."

ನಿಶ್ಚಯವಾಗಿಯೂ ಇದು ಸ್ಮರಣ ಯೋಗ್ಯವಾದ ಪತ್ರ.

ತಂದೆಯ ಈ ಸಲಹೆಗಳು ಮತ್ತು ಸೂತ್ರಗಳು ಟಿಪ್ಪುವಿನ ರಾಜನೀತಿಯ ಮಾರ್ಗದರ್ಶಕ ತತ್ವಗಳಾದುವು. ಅವನು ಇಸ್ಲಾಂಧರ್ಮಕ್ಕಾಗಿ ಹೋರಾಡುವವನಾದನು. ಜೊತೆಗೆ ಬ್ರಿಟಿಷರ ಪರಮ ಶತ್ರುವೂ ಆದನು. ವಾರ್‌ಸೇಲ್ಸಿಗೆ ಹದಿನಾಲ್ಕನೆಯ ಲೂಯಿಯ ಆಸ್ಥಾನಕ್ಕೆ ಒಬ್ಬ ರಾಯಭಾರಿಯನ್ನು ಕಳುಹಿಸುವುದರ ಮೂಲಕ ಫ್ರೆಂಚ್ ದೇಶೀಯ ಸರ್ಕಾರದ ಬೆಂಬಲವನ್ನು ಪಡೆಯಲು ಯತ್ನಿಸಿದನು. ಅವನು ಸೈನಿಕ ಸಹಾಯವನ್ನು ಅಪೇಕ್ಷಿಸಿದುದೇ ಅಲ್ಲದೆ, ಅನೇಕ ಕುಶಲಕಲಾ ತಂತ್ರಜ್ಞರನ್ನೂ ಹಡಗು ನಿರ್ಮಾಪಕರನ್ನೂ ಗಾಜು ಮತ್ತು ಕನ್ನಡಿಗಳನ್ನು ತಯಾರಿಸುವವರನ್ನೂ ಶಿಲ್ಪಿಗಳನ್ನೂ ಕರೆಸಿಕೊಂಡು ಮೈಸೂರಿನ ಕಲಾ ಕೌಶಲವನ್ನು ಅಭಿವೃದ್ಧಿಗೊಳಿಸಲು ಆಶಿಸಿದನು. ಬ್ರಿಟಿಷರ ವಿರುದ್ಧವಾಗಿ ಫ್ರೆಂಚರೊಡನೆ ರಕ್ಷಣ–ಆಕ್ರಮಣಗಳ ಒಪ್ಪಂದವನ್ನು ಮಾಡಿಕೊಂಡನು.

ಪಾಂಡಿಚೆರಿಯಿಂದ ಅಟ್ಟಲ್ಪಟ್ಟ ಬಹುಸಂಖ್ಯಾಕ ಫ್ರೆಂಚರಿಗೆ ಆಶ್ರಯ ನೀಡಿದನು. ಫ್ರೆಂಚರ ಕ್ರಾಂತಿಕಾರಿ ನಿಯೋಗಿಗಳಿಗೆ ತನ್ನ ಆಸ್ಥಾನದಲ್ಲಿ ಅವಕಾಶ ನೀಡಿದನು. ಅವರು ಮೈಸೂರಿನಲ್ಲಿ ಬಹಿರಂಗವಾಗಿ ಫ್ರೆಂಚ್ ಕ್ರಾಂತಿಕಾರಿ ತತ್ವಗಳನ್ನು ಉಪದೇಶಿಸಿದರು. ತೀವ್ರ ಉಗ್ರ ಪಕ್ಷದ ಸಂಘವೊಂದು ಶ್ರೀರಂಗಪಟ್ಟಣದಲ್ಲಿ ಸ್ಥಾಪಿತವಾಯಿತು. ಅದರ ಮೇಲೆ ಫ್ರೆಂಚ್ ತ್ರಿವರ್ಣಧ್ವಜವು ಹಾರತೊಡಗಿತು. 1798 ರಲ್ಲಿ ಟಿಪ್ಪುವು ಮತ್ತೊಬ್ಬ ರಾಯಭಾರಿಯನ್ನು ಫ್ರೆಂಚ್ ದ್ವೀಪಕ್ಕೆ (Mauritius ಮಾರಿಷಸ್) ಕಳುಹಿಸಿಕೊಟ್ಟನು. ಯಾವ ಫಲವನ್ನು ಕೊಡದಿದ್ದರೂ ಈ ರಾಯಭಾರವು ನಾಲ್ಕನೆಯ ಮೈಸೂರು ಯುದ್ಧಕ್ಕೆ ನೆಪವನ್ನು ಒಡ್ಡಿತು.

ಜನರಲ್ ಮ್ಯಾಥ್ಯೂಸ್ ಮತ್ತು ಕರ್ನಲ್ ಕ್ಯಾಂಬೆಲ್ ಇವರು ಬಿದನೂರಿನ ಗೌರ್ನರನಾದ ಷೇಕ್ ಅಯಾಜನು ಅಪಾರ ಸಂಪತ್ತಿನೊಡನೆ ಓಡಿಹೋಗಲು ಮುಖ್ಯ ಕಾರಣರಾದರು. ಆದ್ದರಿಂದ ಇಂಗ್ಲಿಷರ ಮೇಲಿನ ಟಿಪ್ಪುವಿನ ವರ್ತನೆಯು ಮತ್ತಷ್ಟು ಕ್ರೂರವಾಯಿತು.

ಟಿಪ್ಪುವು ಇಂಗ್ಲಿಷ್ ಯುದ್ಧ ಖೈದಿಗಳನ್ನು ಹೀನವಾಗಿ ಕಾಣುತ್ತಿದ್ದನೆಂಬ ಕಥೆಗಳಿಗೆ ಸರಿಯಾದ ಆಧಾರಗಳಿಲ್ಲ. ಟಿಪ್ಪುವು ಖೈದಿಗಳನ್ನು ಹೇಗೆ ಕಾಣುತ್ತಿದ್ದನೆಂಬ ಒಗಗೆ ಇರುವ ಪ್ರಾಚೀನ ಉಲ್ಲೇಖವೆಂದರೆ 1786 ರಲ್ಲಿದ್ದ ಇಂಗ್ಲಿಷ್ ಮುಖಂಡ ರಾಬ್‌ಸನ್ನನ ಬರೆವಣಿಗೆ.

"ಟಿಪ್ಪುಸಾಹೇಬನು ಕರ್ನಲ್ ಬ್ರೈತ್‌ವೈಟ್ ಮತ್ತು ಇತರ ಖೈದಿಗಳನ್ನು ತನ್ನ ಬಳಿ ಕರೆತರುವಂತೆ ಆಜ್ಞಾಪಿಸಿ ಅವರುಗಳನ್ನು ಪರೀಕ್ಷಿಸಿ ಗಾಯಾಳುಗಳಿಗೆ ಔಷಧೋಪಚಾರ ಮಾಡಲು ಫ್ರೆಂಚ್ ಶಸ್ತ್ರವೈದ್ಯರೊಡನೆ ಹಳ್ಳಿಗಳಿಗೆ ಕಳುಹಿಸಿಕೊಟ್ಟನು.......ಟಿಪ್ಪುವು ಅವರ ಉಡುಪಿಗಾಗಿ ನವಿರಾದ ಬೆಳ್ಳನೆಯ ಹತ್ತಿ ಬಟ್ಟೆಗಳನ್ನೂ ಗಾಯಗಳಿಗೆ ಪಟ್ಟಿ ಕಟ್ಟಲು ಒರಟು ಬಟ್ಟೆಗಳನ್ನು ಮತ್ತು ಮೂವತ್ತು ಪಗೋಡ ನಾಣ್ಯಗಳನ್ನೂ ಕಳುಹಿಸಿಕೊಟ್ಟನು" ದಂಡನಾಯಕ ಬೆಯರ್ಡನನ್ನು ಬಂದೀಖಾನೆಯಲ್ಲಿಟ್ಟನೇ ಹೊರತು ನೆಲಮಾಳಿಗೆಯ ಕತ್ತಲ ಕೋಣೆಯಲ್ಲಲ್ಲ.

ಟಿಪ್ಪುವು ಹಿಂದುಗಳನ್ನು ಹೇಗೆ ಕಾಣುತ್ತಿದ್ದನೆಂಬ ಬಗ್ಗೆ 1794ರಲ್ಲಿ ರೊಡರಿಕ್ ಮೆಕೆನ್ಜಿಯು ಬರೆದ ಬರವಣಿಗೆಯು ಸಾಕ್ಷೀಭೂತವಾಗಿದೆ : "ಕೊರಾನಿನ ತತ್ವಗಳ ಬಗ್ಗೆ ಎಷ್ಟೇ ಅಂಧಾಭಿಮಾನವಿದ್ದರೂ ಅವನ ಸಾಮ್ರಾಜ್ಯದಲ್ಲೆಲ್ಲಾ ಆಗ ತಾನೇ ಅಲಂಕೃತವಾದ ಅನೇಕ ಹಿಂದೂ ದೇವಾಲಯಗಳು ಆತನ ಉತ್ಸಾಹದ ಆಶೆಗೆ ಅವಕಾಶವನ್ನು ಕಲ್ಪಿಸಿಕೊಟ್ಟವು ಎಂಬುದು ಸ್ಥಾಪಿತವಾಗುತ್ತದೆ. ಅಲ್ಲದೆ ಮಹಮ್ಮದೀಯ ಮತವನ್ನು ಪ್ರಚಾರ ಮಾಡಬೇಕೆಂಬ ಉತ್ಸಾಹವು ಅಮಾನುಷ ಕ್ರೌರ್ಯಕ್ಕಾಗಲಿ, ಆಕ್ರಮಣದಲ್ಲಿ ಹೆಚ್ಚಿನ ಕೋಪೋದ್ರೇಕಕ್ಕಾಗಲಿ, ಸಹಜವಾದ ಕ್ರೌರ್ಯಕ್ಕಾಗಲಿ ಪ್ರತೀಕಾರ

ಮನೋಭಾವಕ್ಕಾಗಲಿ ಅವಕಾಶ ಮಾಡಿ ಕೊಡಲಿಲ್ಲ. ಟಿಪ್ಪುವು ಅತಿಕೃಪಣನಾದರೂ ಯುದ್ಧದಲ್ಲಿ ಸೆರೆ ಸಿಕ್ಕಿದ ಅನೇಕ ಹಿಂದೂ ಆಪ್ತಸೇವಕರು ಆತನ ಔದಾರ್ಯವನ್ನೂ ಸಹನಾಶೀಲತೆಯನ್ನೂ ಅಂಗೀಕರಿಸಿದ್ದಾರೆ."

ಶೃಂಗೇರಿಯ ಸ್ವಾಮಿಗಳ ಸನ್ನಿಧಿಗೆ ಟಿಪ್ಪುವು ಬರೆದ ಪತ್ರವು ಹಿಂದೂಗಳ ಬಗೆಗೆ ಆತನಿಗಿದ್ದ ಮನೋಭಾವವನ್ನು ತೋರಿಸುತ್ತದೆ (M.A.R., 1916). ಅವರನ್ನು ಅತ್ಯಂತ ಗೌರವಯುತವಾದ ಭಾಷೆಯಿಂದ ಸಂಬೋಧಿಸಿದ್ದಾನೆ. ಟಿಪ್ಪುವು ಸ್ವಾಮಿಗಳ ಬಗ್ಗೆ ತನಗಿದ್ದ ಅತ್ಯಧಿಕವಾದ ಪೂಜ್ಯ ಭಾವನೆಯನ್ನು ವ್ಯಕ್ತಪಡಿಸುತ್ತಾ ತನ್ನ ಮತ್ತು ತನ್ನ ರಾಜ್ಯದ ಒಳಿತಿಗಾಗಿ ಪ್ರಾರ್ಥಿಸಿ ಆಶೀರ್ವಾದವನ್ನು ಕಳುಹಬೇಕೆಂದು ಬೇಡಿದ್ದಾನೆ: '........... ನಗುತ್ತಾ ಮಾಡಿದ ಪಾಪದ ಫಲವನ್ನು ಜನರು ಅಳುತ್ತಾ ಅನುಭವಿಸುತ್ತಾರೆ' ಎಂಬ ಉಕ್ತಿಯಂತೆ ಶೃಂಗೇರಿಯಂತಹ ಪವಿತ್ರ ಕ್ಷೇತ್ರದ ಬಗ್ಗೆ ಪಾಪವನ್ನೆಸಗಿದ ಜನರು ತಮ್ಮ ಅಕೃತ್ಯಕ್ಕೆ ಕಲಿಯುಗದಲ್ಲಿ ಶೀಘ್ರವಾಗಿಯೇ ತಕ್ಕ ಫಲವನ್ನು ಅನುಭವಿಸುತ್ತಾರೆ. ಗುರುದ್ರೋಹವು ನಿಜವಾಗಿಯೂ ಅಧಃಪತನದ ಮೂಲಕ ಸರ್ವನಾಶದಲ್ಲಿ ಪರ್ಯವಸಾನಗೊಳ್ಳುತ್ತದೆ. ನಗರದ ಅಸಫ್‌ನಿಗೆ ಆಜ್ಞಾಪಿಸಿರುವಂತೆ ಆತನು ಒಪ್ಪಿಸುವ ಇನ್ನೂರು ರಹತಿ ನಗದನ್ನೂ ಇನ್ನೂರು ರಹತಿ ಬೆಲೆಯ ಧಾನ್ಯವನ್ನೂ ಶಾರದಾ ದೇವಿಗೆ ಅರ್ಪಿಸಿ ನಮ್ಮ ದಿಗ್ವಿಜಯಕ್ಕೂ ಶತ್ರುಗಳ ವಿನಾಶಕ್ಕೂ ಪ್ರಾರ್ಥಿಸುವುದು"

1793ರಲ್ಲಿ ಟಿಪ್ಪುವು ಹೀಗೆ ಬರೆದನು : "ನೀವು ಜಗದ್ಗುರುಗಳು. ಲೋಕೋದ್ಧಾರಕ್ಕೂ ಮಾನವ ಕಲ್ಯಾಣಕ್ಕೂ ನೀವು ಯಾವಾಗಲೂ ತಪಸ್ಸನ್ನು ಆಚರಿಸುತ್ತಿದ್ದೀರಿ. ನಮ್ಮ ಏಳಿಗೆ ಮತ್ತು ಅಭಿವೃದ್ಧಿಗಾಗಿ ಪ್ರಾರ್ಥಿಸಿ. ನಿಮ್ಮಂತಹ ಪವಿತ್ರ ಜೀವಿಗಳು ಯಾವ ನಾಡಿನಲ್ಲೇ ವಾಸಿಸುತ್ತಿರಲಿ, ಆ ನಾಡು ಒಳ್ಳೆಯ ಮಳೆಬೆಳೆಗಳಿಂದ ವರ್ಧಿಸುತ್ತದೆ".

ಟಿಪ್ಪುವು ಕಳಲೆ, ಮೇಲುಕೋಟೆ, ಶ್ರೀರಂಗಪಟ್ಟಣ ಮತ್ತು ನಂಜನಗೂಡು ದೇವಾಲಯಗಳಿಗೆ ಬೆಳ್ಳಿಯ ಪಾತ್ರೆಗಳನ್ನು ಕಾಣಿಕೆಯಾಗಿ ಅರ್ಪಿಸಿದನು (M.A.R. 1917).

ಮೂಲ ಲೇಖಕರು : ಶ್ರೀ ಎಚ್. ಜಿ. ರಂಗಸ್ವಾಮಿ ಅಯ್ಯಂಗಾರ್
ಅನುವಾದಕರು : ಶ್ರೀಮತಿ ಟಿ. ವಿ. ರತ್ನಮ್ಮ

# ಕರ್ಣಾಟಕ ಮತ್ತು ಮರಾಠರು

ಕರ್ಣಾಟಕದ ರಾಜಕೀಯ ಇತಿಹಾಸವು ಕ್ರಿ.ಶ. 17 ನೆಯ ಮತ್ತು 18 ನೆಯ ಶತಕಗಳ ಮಧ್ಯದಲ್ಲಿ, ಒಂದು ಕಡೆ ಮರಾಠರೊಂದಿಗೂ ಇನ್ನೊಂದು ಕಡೆ ಬ್ರಿಟಿಷರೊಂದಿಗೂ ಬಹಳ ಸಂಬಂಧ ಹೊಂದಿದಂತಹದು. ಚಿಕ್ಕದೇವರಾಜ ಒಡೆಯರ, ಹೈದರ ಮತ್ತು ಟಿಪ್ಪು ಇವರ ಚರಿತ್ರೆಯನ್ನು ಹೇಳುವಾಗ, ಈಗಾಗಲೇ ನಾವು ಆನುಷಂಗಿಕವಾಗಿ, ಮರಾಠರ ಮುತ್ತಿಗೆಗಳ ಮತ್ತು ದಾಳಿಗಳ ಉಲ್ಲೇಖಮಾಡಿದ್ದೇವೆ. ಆದರೂ ಮರಾಠರು ಹೇಗೆ ಕರ್ಣಾಟಕದಲ್ಲಿ ಕಾಲು ಚಾಚಿದರು ಎಂಬುದರ ಸ್ಪಷ್ಟ ಚಿತ್ರ ಬೋಧಪ್ರದವಾಗುವುದು. ಈ ದೃಷ್ಟಿಯಿಂದ ಇಲ್ಲಿ ಈ ವಿಷಯವನ್ನು ನಿರೂಪಿಸಲಾಗುವುದು.

ಕರ್ಣಾಟಕವು ಮರಾಠರೊಂದಿಗೆ ಹೊಂದಿದ ಸಂಬಂಧವು ಕ್ರಿ.ಶ. 17 ನೆಯ ಶತಕದಿಂದ 19 ನೆಯ ಶತಕದ ವರೆಗೆ, ಮುಖ್ಯವಾಗಿ ಇಬ್ಬಗೆಯ ಬದಲಾವಣೆಗೆ ಗುರಿಯಾಯಿತು. ಮೊದಲನೆಯದು, ಕ್ರಿ.ಶ. 1637 ರಿಂದ 1758 ರ ವರೆಗೆ, ಸಹನಶೀಲ ಸಮ್ಮತಿಯ ಮನೋಭಾವ ; ಎರಡನೆಯದು, ಕ್ರಿ.ಶ. 1758 ರಿಂದ 1792 ರ ವರೆಗೆ, ಕ್ರಿಯಾಶೀಲ ಪ್ರತಿಭಟನೆಯ ಧೋರಣೆ. ಇವೆರಡೂ ಸಂದರ್ಭಗಳಲ್ಲಿ ಅಂತರ್ಗತವಾದ ಮೂಲ ಚಾಲಕ ಶಕ್ತಿ ಒಂದೇ ಆಗಿತ್ತು. ಅದೆಂದರೆ, ಪ್ರಾದೇಶಿಕ ಏಕತೆಯ ಮೂಲಕ ರಾಜಕೀಯ– ಸಾಂಸ್ಕೃತಿಕ ಘಟಕ ರಚಿಸುವ ಆಸಕ್ತಿ. ಇದೇನು ಬೇಕೆಂದೇ ಬುದ್ಧಿಪೂರ್ವಕ ಹೂಡಿದ, ಯೋಜನಾಬದ್ಧವಾದ ಆಂದೋಲನ ಎಂದು ಹೇಳಲು ಬರುವಂತಿಲ್ಲ. ಅದು ತಾನಾಗಿ ತಲೆದೋರಿದ ಐತಿಹಾಸಿಕ ಘಟನಾ ವಿಧಾನ, ಅಷ್ಟೆ.

ಮೊದಲನೆಯ ಹಂತದಲ್ಲಿ, ಪ್ರಾದೇಶಿಕ ಏಕತೆಯು ಪರಕೀಯ ಮರಾಠಾ ಪ್ರಭುತ್ವದ ಛಾಯೆಯಲ್ಲಿ ಸಂಭವಿಸಿತು ; ಈ ಪರಕೀಯ ಆಗಂತುಕರ ವಿರುದ್ಧ ಯಾವ ಪ್ರತಿರೋಧವೂ ವ್ಯಕ್ತವಾಗಲಿಲ್ಲ. 'ನಗರ ರಾಜ್ಯಗಳು' ಎನ್ನಿಸಿಕೊಂಡ ಬೆಂಗಳೂರು, ಹೊಸಕೋಟೆ, ಕೋಲಾರ, ದೊಡ್ಡಬಳ್ಳಾಪುರ, ಮತ್ತು ಸಿರಾ ಇವೇ ಮೊದಲಾದವುಗಳು, ಇನ್ನುಳಿದವುಗಳ ಹಾಗೆ, ಸ್ಥಾನಿಕ ಸ್ವಾತಂತ್ರ್ಯದ ಕಾಲದಲ್ಲಿ ಅಸ್ತಿತ್ವದಲ್ಲಿ ಬಂದಿದ್ದವು. 1565 ರಲ್ಲಿ, ವಿಜಯನಗರದ ಪತನಾನಂತರ ತಲೆದೋರಿದ ಪ್ರಾದೇಶಿಕ ಅರಾಜಕತೆಯ ಪರಿಣಾಮವಾಗಿ, 1637–1644 ಮಧ್ಯದಲ್ಲಿ ಅವು ಮೊದಲ ಸಲ ಶಹಜಿಯ ನೇತೃತ್ವದಲ್ಲಿ ಒಂದುಗೂಡಿದವು. ಶಹಜಿಯು ಬಿಜಾಪುರ ಸುಲ್ತಾನನ ಅಧೀನದಲ್ಲಿ ಒಬ್ಬ ಜಹಗೀರುದಾರನಾಗಿದ್ದನು. 1688 ರಲ್ಲಿ ಬಿಜಾಪುರ ಪತನ ಹೊಂದಿದ ಮೇಲೆ, ಅವು ಸಿರಾ ಸುಭದ ಭಾಗವಾಗಿ ಮೊಗಲರ ಆಧಿಪತ್ಯಕ್ಕೆ ಒಳಪಟ್ಟವು, ಅಥವಾ ಮೈಸೂರಿನ ಸ್ವಾಮಿತ್ವಕ್ಕೆ ಹೋದವು. ಮೊಗಲರ ದಾಳಿಯಿಂದಾಗಿ ಬಿಜಾಪುರ ಮತ್ತು ಗೋಲ್ಕೊಂಡಗಳ ಸುಲ್ತಾನರು ಉತ್ತರದ ತಮ್ಮ ಪ್ರಾಂತಗಳಿಗೆ ಎರವಾದರು. ಈ ಹಾನಿಯನ್ನು ತುಂಬಿಕೊಳ್ಳಲು ಈ ಸುಲ್ತಾನರು ಪ್ರಯತ್ನಿಸುತ್ತಿದ್ದ ಕಾಲದಲ್ಲಿ ಮರಾಠರು ಮೊದಲ ಬಾರಿಗೆ ಕರ್ಣಾಟಕದಲ್ಲಿ ಕಾಣಿಸಿಕೊಂಡರು. ಧರ್ಮಾಂಧನಾದ ಮಹಮ್ಮದ ಅದಿಲ್ ಶಹನು, ಇಸ್ಲಾಮ್ ಧರ್ಮದ ವೈಭವವನ್ನು ಹೆಚ್ಚಿಸಲೆಂದು, ರಣದುಲ್ಲಾ ಖಾನನ ಸೈನ್ಯಾಧಿಪತ್ಯದ ಕೆಳಗೆ, ಶಿವಾಜಿಯ ತಂದೆ ಶಹಜಿಯನ್ನು ಕಳುಹಿಸಿಕೊಟ್ಟನು. ಶಹಜಿಯು 1637 ರ ಮತ್ತು 1640ರ ಎರಡು ದಂಡಯಾತ್ರೆಗಳಲ್ಲಿ ಭಾಗಿಯಾಗಿದ್ದನು. 1637ರ ಮೊದಲ ದಂಡಯಾತ್ರೆಯಲ್ಲಿ ಬಿದನೂರು ರಾಜ್ಯವನ್ನು ಸ್ವಾಧೀನಪಡಿಸಿಕೊಳ್ಳಲಾಯಿತು.

ಶಹಜಿಯು 1639 ರಲ್ಲಿ ಕೆಂಪೇಗೌಡನಿಂದ ಬೆಂಗಳೂರನ್ನು ತೆಗೆದುಕೊಂಡು, ಅದನ್ನು ತನ್ನ ಮುಖ್ಯ ಠಾಣ್ಯವನ್ನಾಗಿ ಮಾಡಿಕೊಂಡನು. ಆಗ ಆತನನ್ನು ಒಂದು ಆಸ್ಥಾನ ಸಹಿತವಾಗಿ ರಾಜ್ಯಪಾಲ ನನ್ನಾಗಿ (ಗವರ್ನರ್) ನಿಯಮಿಸಲಾಗಿತ್ತು. ಶಹಜಿಯು ಶ್ರೀರಂಗಪಟ್ಟಣದ ಕಂಠೀರವ ನರಸರಾಜರನ್ನು ಪರಾಜಯಗೊಳಿಸಿದನು.

ಶಹಜಿಯು ರಾಜವೈಭವ ವಹಿಸಿ, ಕೋಲಾರ ಮತ್ತು ಬಳ್ಳಾಪುರಗಳಲ್ಲಿ ಒಡ್ಡೋಲಗ ನಡೆಸುತ್ತಿದ್ದನು. ಆತನು ಮಹಾರಾಷ್ಟ್ರದಿಂದ ಅನೇಕ ಕುಟುಂಬಗಳನ್ನು ತಂದು, ಸೈನ್ಯಾಧಿಕಾರದಲ್ಲಿಯೂ ಆಡಳಿತಾಧಿಕಾರದಲ್ಲಿಯೂ ನಿಯೋಜಿಸಿದನು. ಮರಾಠಿ ಭಾಷೆಯನ್ನು ಒಳಹೊಗಿಸಿದನಲ್ಲದೆ, ಕಂದಾಯ ಮತ್ತು ಲೆಕ್ಕಪತ್ರಗಳಲ್ಲಿ ಅವನು ಮರಾಠಾ ಪದ್ಧತಿಯನ್ನು ಬಳಕೆಗೆ ತಂದನು. ಶಹಜಿಯು ಕರ್ಣಾಟಕದಲ್ಲಿ ಒಂದು ಕಿರಿಯ ಮಹಾರಾಷ್ಟ್ರವನ್ನೇ ನೆಲೆಗೊಳಿಸಿದನು. ದಕ್ಷಿಣ ಪ್ರಾಂತಗಳ ಜನತೆಗೆ, ಶಹಜಿಯ ರಾಜ್ಯಭಾರವು, ಹಳೆಯ ವಿಜಯನಗರದ ಆಳಿಕೆಯ ತರುವಾಯ ದೇವಪ್ರೇಷಿತವೆಂದೇ ತೋರಿತು. ಏಕೆಂದರೆ, ಶಹಜಿಯ ರಾಜ್ಯಭಾರ, ಒಬ್ಬ ಹಿಂದುವಿನ ಮುಂದಾಳ್ತನದಲ್ಲಿ, ಮೂಲತಃ ವಿಜಯನಗರದ ಪರಂಪರೆಯೇ ಮುಂದುವರಿದಂತೆ ಇತ್ತು. ಶಿವಾಜಿಯು 1640ರಲ್ಲಿ ಕೆಲಕಾಲ ಬೆಂಗಳೂರಲ್ಲಿ ವಾಸವಾಗಿದ್ದುದುಂಟು. ಶಹಜಿಯು ಶಿವಮೊಗ್ಗ ಜಿಲ್ಲೆಯ ಚೆನ್ನಗಿರಿಯಲ್ಲಿ ಕಾಲವಾದನು. ಅಲ್ಲಿ ಈಗಲೂ ಶಹಜಿಯ ಸಮಾಧಿ ಇದೆ. ಶಹಜಿಯು ಕರ್ಣಾಟಕದ ಮೇಲೂ ದಕ್ಷಿಣ ದೇಶದ ಮೇಲೂ ಎರಗಿ ಬಂದು ಹಿಂದೂ ರಾಜ್ಯಭಾರವನ್ನು ಪುನರುಜ್ಜೀವನಗೊಳಿಸಲು ಪ್ರಯತ್ನಿಸಿದನು ; ತನ್ಮೂಲಕ, ಕಣ್ಮರೆಯಾಗಿದ್ದ ವಿಜಯನಗರದ ಪರಂಪರೆಯು ಮತ್ತೆ ಪ್ರಾಣಸ್ಪಂದನ ಹೊಂದು ವಂತಾಯಿತು. ಈ ದಿಶೆಯಲ್ಲಿ, ಹೆಸರಿಗೆ ಮಾತ್ರ ಸಮ್ರಾಟನಾಗಿದ್ದ ಆರನೆಯ ಶ್ರೀರಂಗನು ಪ್ರಯತ್ನ ಪಟ್ಟು ಮಧುರೆಯ ನಾಯಕರಿಂದಾಗಿ, ವಿಫಲನಾಗಿದ್ದನು.

ಮರಾಠರು ಕ್ರಿ.ಶ. 1719 ರಲ್ಲಿ ಮೊಗಲ ಚಕ್ರವರ್ತಿಯಿಂದ, ಮೊಗಲ ಸುಭಾಗಳು ಮತ್ತು ದಕ್ಷಿಣದ ಅಧೀನ ಪ್ರದೇಶಗಳು ಕೊಡಬೇಕಾದ "ಚೌಥಾಯಿ" ಮತ್ತು "ಸಂದೇಶಮುಖಿ" ಶುಲ್ಕವನ್ನು ಅವುಗಳಿಂದ ಈಸಿಕೊಳ್ಳುವ ಅಧಿಕಾರ ಪಡೆದುಕೊಂಡರು ; ಮತ್ತು ಈ ಅಧಿಕಾರವನ್ನು ನಡೆಯಿಸುವ ಸಲುವಾಗಿ ಅನೇಕ ಸಲ 'ಮುಲ್ಕಗಿರಿ' ದಂಡಯಾತ್ರೆಗಳನ್ನು ಪ್ರಾರಂಭಿಸಿದರು. ಈ ದಂಡಯಾತ್ರೆಗಳು 18ನೆಯ ಶತಕದ ಕೊನೆಯ ತನಕ ನಡೆದವು. ಕರ್ಣಾಟಕ ಮತ್ತು ಮೈಸೂರುಗಳ ವಿರುದ್ಧ ಪೇಶ್ವೆ ಬಾಜೀರಾವ್ ಎರಡು ದಂಡಯಾತ್ರೆಗಳನ್ನು (1725 ಮತ್ತು 1727) ನಡೆಸಿ, ಬಾಳಾಜಿರಾವ್ ನಾಲ್ಕು (1753-1757) ದಂಡಯಾತ್ರೆಗಳನ್ನು ನಡೆಸಿ, ಆಗ ಹೆಚ್ಚು ಪ್ರತಿಭಟನೆಯನ್ನು ಎದುರಿಸದೆ 'ಖಂಡಣಿ'ಯನ್ನು ಶೇಖರಿಸಿದರು.

ಕ್ರಿ. ಶ. 1758ರ ತರುವಾಯ ಪ್ರತ್ಯಕ್ಷ ಪ್ರತಿಭಟನೆಯ ಕಾಲ ಪ್ರಾರಂಭವಾಯಿತು. ಇದೇ ವರ್ಷ, ಗೋಪಾಲರಾವ್ ಪಟವರ್ಧನ ದಾಳಿ ಇಟ್ಟಾಗ ಆತನನ್ನು ಗಾಸಿಗೊಳಿಸಲಾಯಿತು ; ಮತ್ತು ಮರುವರ್ಷ ಬೆಂಗಳೂರ ಮುತ್ತಿಗೆಯನ್ನು ನಿಲ್ಲಿಸಲು ಆತನನ್ನು ಬಲಾತ್ಕಾರಗೊಳಿಸಿದ್ದೇ ಅಲ್ಲದೆ, ಆತನು ಆಕ್ರಮಿಸಿದ್ದ ಪ್ರದೇಶವನ್ನು ಬಿಟ್ಟು ಹೋಗುವಂತೆ ಮಾಡಲಾಯ್ತು. ಈ ಸಂದರ್ಭದಲ್ಲಿ, ತನಗೆ ಸಲ್ಲಬೇಕಾದ ಹಣದಲ್ಲಿ ಸ್ವಲ್ಪಾಂಶವನ್ನು ಮಾತ್ರ ಪಡೆದು ಆತನು ಸುಮ್ಮನಿರಬೇಕಾಯಿತು. ಈ ಪ್ರತಿಭಟನೆಯನ್ನು ಸಜ್ಜುಗೊಳಿಸಿದ ಹೈದರನು ಮೊದಲ ಬಾರಿಗೆ ಪ್ರತಿಷ್ಠೆಗೂ ಪ್ರಾಮುಖ್ಯಕ್ಕೂ ಪಾತ್ರನಾದನು. ಕೂಡಲೇ ಅವನು ರಭಸದಿಂದ ಸಿದ್ಧತೆ ಮಾಡಿಕೊಂಡು ಮುಂದೆ ಮೂರು ವರ್ಷಗಳ ತರುವಾಯ ಹೈದರನು ಬಲಾತ್ಕಾರದಿಂದ ಅಧಿಕಾರ ಕಿತ್ತುಕೊಂಡನು. ಕ್ರಿ. ಶ. 1760–61ರಲ್ಲಿ, ವಿಸಾಜಿ ಕೃಷ್ಣ ಬಿನಿವಲೆ ಎಂಬಾತನ ನೇತೃತ್ವದಲ್ಲಿ ನಡೆದ ಮರಾಠರ ಮತ್ತೊಂದು ದಾಳಿಯು, ಹೈದರನಿಗೆ ಈ ಸುಸಂಧಿ ಒದಗಿಸಿತು. ವಿಸಾಜಿ ಕೃಷ್ಣನು,

ಖಂಡೇರಾವ್ ಮತ್ತು ಮೈಸೂರು ರಾಜರೊಂದಿಗೆ ಒಂದು ಗುಪ್ತವಾದ ಒಪ್ಪಂದ ಮಾಡಿಕೊಂಡು, ಹೈದರನನ್ನು ಶ್ರೀರಂಗಪಟ್ಟಣ ಜಿಲ್ಲೆಯಲ್ಲಿ ಬಂಧನಕ್ಕೆ ಒಳಗಾಗುವಂತೆ ಮಾಡಿದನು. ಆದರೆ ಹೈದರ ಪಾರಾಗಿ ಆನೆಕಲ್ಲಿಗೂ ಅಲ್ಲಿಂದ ಬೆಂಗಳೂರಿಗೂ ಬಂದನು. ಮರಾಠರು ಬೆಂಗಳೂರಿಂದ ಹೈದರನನ್ನು ಒಕ್ಕಲೋಡಿಸಲು ಪ್ರಯತ್ನಿಸಿ ವಿಫಲರಾದರು, ಮತ್ತು ಕೊನೆಗೆ ಮೂರು ಲಕ್ಷ ರೂಪಾಯಿಗಳಷ್ಟು ಅಲ್ಪ ಧನಕ್ಕೆ ಬೆಂಗಳೂರನ್ನು ಹೈದರನಿಗೆ ಬಿಟ್ಟು ಕೊಡಬೇಕಾಯಿತು.

ಇದಾದ ಅಲ್ಪಾವಧಿಯಲ್ಲಿಯೇ ಹೈದರನು ರಾಜ್ಯದ ಸಮಸ್ತ ಅಧಿಕಾರವನ್ನೂ ಸ್ವಾಧೀನಪಡಿಸಿ ಕೊಂಡು ಮರಾಠರ ವಿರುದ್ಧ ದಂಡೆತ್ತಿ ಹೋಗಲು ಪ್ರಾರಂಭಿಸಿದನು. 1761 ಮತ್ತು 1763 ರ ಮಧ್ಯಕಾಲದಲ್ಲಿ ಅವನು ಸಮಗ್ರ ಕರ್ಣಾಟಕವನ್ನೂ ಜಯಿಸಿದನು. ಆಗ ಕರ್ಣಾಟಕವು ಮರಾಠರ ಸ್ವಾಮಿತ್ವಕ್ಕೆ ಒಳಪಟ್ಟೋ ಇಲ್ಲವೆ ಅವರನ್ನೇ ಅವಲಂಬಿಸಿಯೋ ಇತ್ತು. ಹೈದರನು ಗೆದ್ದುಕೊಂಡ ಈ ಹೊಸ ಪ್ರದೇಶವು, ಅವನ ಮೊದಲಿನ ರಾಜ್ಯಕ್ಕಿಂತ ದೊಡ್ಡದು. ಸಿರಾ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ಹೊಸಕೋಟೆ, ಗೂಟಿಯ ಕೆಲಭಾಗ, ಬಂಕಾಪುರ, ಮತ್ತು ಉತ್ತರ ಕರ್ಣಾಟಕದ ಧಾರವಾಡ, ಹುಬ್ಬಳ್ಳಿ, ಸೊಂಡ–ಇವೇ ಮೊದಲಾದವುಗಳನ್ನು ಒಳಗೊಂಡ ಉತ್ತರ ಕರ್ಣಾಟಕದ ಎಲ್ಲ ಭಾಗಗಳೂ ಹೈದರನ ಹೊಸ ಸೀಮೆಯ ವ್ಯಾಪ್ತಿಯಲ್ಲಿ ಬಂದವು. ಚಿತ್ರದುರ್ಗ, ರಾಯದುರ್ಗ, ಹರಪನಹಳ್ಳಿ,—ಇವುಗಳ ಪಾಳೆಯಗಾರರು ಹೈದರನಿಗೆ ಗೌರವ ನೀಡಲು ಸಮ್ಮತಿಸಿದರು.

ಇದರಿಂದ, ಮರಾಠರು ಅನಿವಾರ್ಯವಾಗಿ ಮತ್ತೊಂದು ದಾಳಿಯನ್ನು ನಡೆಸಲೇ ಬೇಕಾಯಿತು, ಈ ಸಲದ ದಾಳಿಗೆ (1764) ಪೇಶ್ವೆ ಮಾಧವರಾವ್ ದಂಡನಾಯಕನಾದನು. ಪೇಶ್ವೆಯ ಸೈನ್ಯವು ಉತ್ತರ ಕರ್ಣಾಟಕವನ್ನು ಕವಿದು ಕೊಳ್ಳೆ ಹೊಡೆದು, ಹೈದರನನ್ನು ರಟ್ಟೀಹಳ್ಳಿಯಲ್ಲಿ, ಆ ಮೇಲೆ ಅನವಟ್ಟಿಯಲ್ಲಿ ಎದುರಿಸಿತು. 1765 ರ ಮಾರ್ಚಿ ತಿಂಗಳಲ್ಲಿ ಒಪ್ಪಂದಕ್ಕೆ ಬರಲಾಯಿತು. ಈ ಒಪ್ಪಂದದ ಪ್ರಕಾರ ಹೈದರನು, ಮರಾಠರಿಗೆ ಉತ್ತರ ಕರ್ಣಾಟಕವನ್ನು ಮರಳಿ ಕೊಡುವುದಾಗಿ, ಮತ್ತು ಕೊಡದೆ ಉಳಿದಿದ್ದ 'ಖಂಡಣಿ' ಹಣವನ್ನೂ ಒಪ್ಪಿಸುವದಾಗಿ ಸಮ್ಮತಿಸಿದನು. ಎರಡು ವರ್ಷಗಳಾದ ಮೇಲೆ ಪೇಶ್ವೆಯು ಮತ್ತೆ ದಾಳಿಯಿಟ್ಟು. ಸಿರಾ, ದೊಡ್ಡಬಳ್ಳಾಪುರ, ಹೊಸಕೋಟೆ ಪ್ರದೇಶಗಳನ್ನು ಪುನಃ ವಶಪಡಿಸಿಕೊಂಡನು. 1769 ರಲ್ಲಿ ಅವನು ಮೂರನೆಯ ದಾಳಿ ಹೂಡಿದನು; ಆದರೆ ಮರುವರ್ಷ ತಾನು ನಿವೃತ್ತನಾಗಿ ಕಾದಾಟ ಮುಂದುವರಿಸಲು ತ್ರಿಯಂಬಕ ಹರಿಗೆ ಹೇಳಿದನು. ತ್ರಿಯಂಬಕ ಹರಿಯು, ಹೈದರನನ್ನು ಚಿನಕುರಳಿ (ಮೋತಿ ತಲಾವ) ಕಾಳಗದಲ್ಲಿ ಸೋಲಿಸಿ, ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದನು. ಆದರೆ ಅದನ್ನು ವಶಪಡಿಸಿಕೊಳ್ಳಲು ಅವನಿಗೆ ಆಗಲಿಲ್ಲ. 1771ರ ಮೇ ತಿಂಗಳಿನಲ್ಲಿ, 'ಖಂಡಣಿ'ಯನ್ನು ಪಡೆದುಕೊಂಡು ಮುತ್ತಿಗೆ ಹಿಂದೆಗೆದುಕೊಂಡನು.

ಹೈದರನಿಂದಾದ ಮೈಸೂರಿನ ಬಲಾತ್ಕಾರದ ಆಕ್ರಮಣವನ್ನು ಕೊನೆಗೊಳಿಸಬೇಕೆಂದು ಪೇಶ್ವೆ ಮಾಧವರಾಯನ ದೃಢ ನಿರ್ಧಾರವಾಗಿತ್ತು. ಅದರಂತೆ ಅವನು ವ್ಯವಸ್ಥಿತ ದಂಡಯಾತ್ರೆ ಕೈಕೊಂಡದ್ದೇ ಅಲ್ಲದೆ, ಮೈಸೂರು ಪ್ರದೇಶಗಳನ್ನು ಸ್ವಾಧೀನಪಡಿಸಿಕೊಳ್ಳಲು ರಕ್ಷಕ ಸೈನ್ಯದಳವನ್ನೂ ಸಜ್ಜುಗೊಳಿಸಿದ್ದನು. ಅವನು ಬಿದನೂರಿನ ರಾಣಿಯನ್ನೂ ಅವಳ ಮಗನನ್ನೂ ಮುಕ್ತಗೊಳಿಸಿ, ಅವರನ್ನು ಪುಣೆಯಲ್ಲಿಟ್ಟು, ಅವರ ಸಂರಕ್ಷಣೆಯ ಹೊಣೆ ತಾನೇ ಹೊತ್ತನು. 1770 ರಲ್ಲಿ ನಡೆದ ಅವನ ಎರಡನೆಯ ದಂಡಯಾತ್ರೆಯಲ್ಲಿ ಪೇಶ್ವೆಯು ತನ್ನ ಉದ್ದೇಶವನ್ನು ಬಹುಮಟ್ಟಿಗೆ ಸಾಧಿಸಿಕೊಂಡಿದ್ದನು. ಆದರೆ, ದುರ್ದೈವದಿಂದ ಮಾಧವರಾವ್ ಪೇಶ್ವೆಯು ಮರಣಾಂತಿಕ ವ್ಯಾಧಿಗ್ರಸ್ತನಾಗಿ ಪುಣೆಗೆ ಮರಳಲೇಬೇಕಾಯಿತು. ಹೈದರಾಲಿಯ ಅವಾಸ್ತವ ಪ್ರಾಬಲ್ಯವನ್ನು ತಾನು ಕೊನೆಗೊಳಿಸಲಿಲ್ಲವಲ್ಲಾ ಎಂಬ ಚಿಂತೆಯು ಆತನ ಮರಣಾಪನ್ನ

ಹೃದಯವನ್ನು ಕೊರೆಯುತ್ತಿತ್ತು. ಆತನ ಜೀವಿತಕಾಲವು ಅಲ್ಪಾವಧಿಯದಾದರೂ, ಅದು ಅನೇಕ ಮಹತ್ವದ ಘಟನೆಗಳಿಂದ ಕೂಡಿದಂತಹದು.

ಮಾಧವರಾವ ಪೇಶ್ವೆಯು 1772ರಲ್ಲಿ ಕಾಲವಾದ ಮೇಲೆ, ಹೈದರನು ಪೇಶ್ವೆಯ ಉಪಕ್ರಮಗಳನ್ನೆಲ್ಲ ವಿಪರ್ಯಾಸಗೊಳಿಸಿ, ಕಲ್ಯಾಣದುರ್ಗದಲ್ಲಿ ರಘುನಾಥರಾವ್ ಎಂಬಾತನೊಡನೆ ಅವನು ಒಂದು ಗುಟ್ಟಿನ ಒಪ್ಪಂದ ಮಾಡಿಕೊಂಡನು. ಈ ಒಪ್ಪಂದದ ಪ್ರಕಾರ, ಕೃಷ್ಣಾನದಿಯ ದಕ್ಷಿಣಕ್ಕಿರುವ ಸಮಗ್ರ ಕರ್ನಾಟಕ ಪ್ರದೇಶವನ್ನೂ ಹೈದರನಿಗೆ ವಹಿಸಿಕೊಡಬೇಕೆಂದೂ ಇದಕ್ಕೆ ಪ್ರತಿಯಾಗಿ ಹೈದರನು ರಘುನಾಥರಾಯನಿಗೆ ಪುಣೆಯ ಪೇಶ್ವೆಪರ ಮಂತ್ರಿಪಕ್ಷದ ವಿರುದ್ಧ ಸಹಾಯ ಸಲ್ಲಿಸಬೇಕೆಂದೂ ಗೊತ್ತಾಗಿತ್ತು. ತನಗೆ ಹಸ್ತಾಂತರ ಮಾಡಿದ ಪ್ರದೇಶವನ್ನು ಹೈದರನು ಕೂಡಲೆ ಆಕ್ರಮಿಸಿಕೊಂಡನು, ಮತ್ತು ಜನವರಿ 1777 ರಲ್ಲಿ ಪಾಂಡುರಂಗರಾವ್ ಎಂಬಾತನ ಮುಂದಾಳ್ತನದಲ್ಲಿ ಬಂದ ಮರಾಠಾ ಸೈನ್ಯವನ್ನು ಸಂಪೂರ್ಣವಾಗಿ ಸೋಲಿಸಿದನು. ಆ ಮೇಲೆ, ಪರಶುರಾಮ ಭಾವು ಮತ್ತು ಹರಿಪಂತ ಫಡಕೆ ಇವರ ನೇತೃತ್ವದಲ್ಲಿ ನಿಜಾಮನ ದಂಡಿನ ಸಹಾಯವನ್ನೂ ಪಡೆದು, ಇನ್ನೂ ಹೆಚ್ಚಿನ ಸೈನ್ಯಬಲದೊಂದಿಗೆ 1777-78 ರಲ್ಲಿ, ಮರಾಠರು ದಂಡಯಾತ್ರೆ ಕೈಕೊಂಡರು. ಆದರೆ, ಮರಾಠಾ ಸೈನ್ಯದಲ್ಲಿ ಉಂಟಾದ ಸ್ವಾಮಿದ್ರೋಹ ದಿಂದಾಗಿ, ಮತ್ತು ರಾಜಧಾನಿಯಲ್ಲಿ ನಡೆದ ಒಳಸಂಚುಗಳಿಂದಾಗಿ ಈ ದಂಡಯಾತ್ರೆ ನಿಷ್ಫಲವಾಯಿತು, ಹಾಗು ಸೈನ್ಯವನ್ನು ಪುಣೆಗೆ ಮರಳಿ ಕರೆಯಿಸಿಕೊಳ್ಳಲಾಯಿತು.

ಈ ಹೊತ್ತಿಗೆ ಹೈದರನ ಸ್ಥಾನಮಾನ, ಸ್ಥಿತಿಗತಿ ಸಾಕಷ್ಟು ಭದ್ರವಾಗಿತ್ತು; ಮತ್ತು ಮರಾಠರ ಸ್ಥಿತಿಗತಿಯು 1780 ರ ಹೊತ್ತಿಗೆ ತೀರ ಕೆಟ್ಟು ಅಪಾಯಕರ ಮಟ್ಟ ಮುಟ್ಟಿತ್ತು. ಹೀಗಾಗಿ ಮರಾಠರು ನಿರುಪಾಯರಾಗಿ ಕರ್ನಾಟಕದ ಪ್ರದೇಶಗಳ ಮೇಲಿನ ತಮ್ಮ ಪ್ರಭುತ್ವವನ್ನು ಕಳೆದುಕೊಳ್ಳುವ ಪ್ರಸಂಗ ಬಂದಿತು. ಇಷ್ಟೇ ಅಲ್ಲ, ಇಂಗ್ಲೀಷರ ವಿರುದ್ಧ ಒಟ್ಟುಗೂಡಲು ಮರಾಠರು ನಿಜಾಮನೊಂದಿಗೂ ನಾಗಪುರದ ಮಾಧೋಜಿ ಭೋಂಸಲೆಯೊಂದಿಗೂ ಒಪ್ಪಂದಕ್ಕೆ ಬರಬೇಕಾಯಿತು. ಆದರೆ, ಬ್ರಿಟಿಷರ ರಾಜತಂತ್ರ ಕೌಶಲವು ಇವರ ಈ ಒಗ್ಗಟ್ಟನ್ನು ಮುರಿಯುವಲ್ಲಿ ಯಶಸ್ವಿಯಾಯಿತು. ಇದು ಘಟಿಸಿದ್ದು ಮೇ 1782 ರಲ್ಲಿ. ಇಂಗ್ಲೀಷರು ಮರಾಠರೊಂದಿಗೆ ಮಾಡಿಕೊಂಡ ಸಾಲ್‌ಭಾಯಿ (Salbhai) ಒಪ್ಪಂದ ಮೂಲಕವಾಗಿ 1790 ರ ಜುಲೈ ತಿಂಗಳಲ್ಲಿ ಮರಾಠರು, ನಿಜಾಮನ ಜೊತೆಗೆ ಇಂಗ್ಲೀಷರನ್ನು ಕೂಡಿಕೊಂಡರು. ಹೀಗೆ ಇವರು ಒಟ್ಟಾಗಿ ಮೈಸೂರಿಗೆ ಮುತ್ತಿಗೆಹಾಕಿ 1792 ರ ಕಾಳಗದಲ್ಲಿ ಗೆಲುವನ್ನೂ ಪಡೆದು, ಮರಾಠರು ತುಂಗಭದ್ರಾನದಿಯ ಉತ್ತರದ ಎಲ್ಲ ಪ್ರದೇಶವನ್ನೂ ಪುನಃ ಸಂಪಾದಿಸಿಕೊಂಡರು.

1792ರ ತರುವಾಯ, ಮೈಸೂರಿನ ದಂಡು, 1803 ರ ಮತ್ತು 1817–18ರ ಮರಾಠ ಕಾಳಗ ಗಳಲ್ಲಿ, ಇಂಗ್ಲೀಷರ ಪರವಾಗಿ ಕಾದಾಡಿದರೂ ಮೈಸೂರು ಮತ್ತು ಮರಾಠರ ನಡುವಿನ ನೇರ ರಾಜಕೀಯ ಸಂಬಂಧಗಳು ವ್ಯಾವಹಾರಿಕ ದೃಷ್ಟಿಯಿಂದ ಕಡಿದು ಹೋಗಿದ್ದವು. ಪ್ರಾದೇಶಿಕ ಸ್ವಾಮಿತ್ವದ ಸ್ಥಾನಮಾನ 1792 ರಲ್ಲಿ ನಿರ್ಣಯಿಸಿದಂತೆಯೇ ಉಳಿದುಕೊಂಡವು. ಕರ್ನಾಟಕವು ಮುಂದಿನ ನೂರೈವತ್ತು ವರ್ಷ ತುಂಡು ತುಂಡಾಗಿಯೇ ಇರುವಂತಾಯಿತು. ಇವುಗಳಲ್ಲಿ ಒಂದು ಅರ್ಧಭಾಗ ಮಹಾರಾಷ್ಟ್ರದ ಸಂಪರ್ಕದಲ್ಲಿಯೇ ಉಳಿಯಿತು. ಆದರೆ, ಅಖಂಡ ಕರ್ನಾಟಕದ ಕಲ್ಪನೆಯು ಜನಮನದಲ್ಲಿ ಬೇರೂರಿ ನಿಂತು, ಕಾಲಾಂತರದಲ್ಲಿ ಅದು ಸಾಧಿಸಿಯೇ ಸಾಧಿಸುವುದೆಂದು ದಾರಿಕಾಯುತ್ತಲಿತ್ತು.

ಮೂಲ ಲೇಖಕರು : ಶ್ರೀ ಜಿ. ನಾರಾಯಣರಾವ್.
ಅನುವಾದಕರು : ಶ್ರೀ ನಾರಾಯಣ ಸಂಗನು.

# ಧರ್ಮ ಮತ್ತು ಸಂಸ್ಕೃತಿ

ಹದಿನೆಂಟನೆಯ ಶತಮಾನದ ಉತ್ತರಾರ್ಧ, ದಕ್ಷಿಣ ಭಾರತವೂ ಸೇರಿ ಭರತಖಂಡದ ಅನೇಕ ಭಾಗಗಳಲ್ಲಿ ಅರಾಜಕತೆ ಎಂಬಷ್ಟು ರಾಜಕೀಯ ಅಸ್ಥಿರತೆಯಿಂದ ಕೂಡಿದ ಕಾಲವಾಗಿತ್ತು. ಮೊಗಲ ಸಾಮ್ರಾಜ್ಯ ಒಡೆದುಹೋಗಿತ್ತು. ಮರಾಠಾಧಿಪತಿಗಳು ಒಳಜಗಳದಲ್ಲಿ ಮಗ್ನರಾಗಿದ್ದರು. ಮಹತ್ವಾಕಾಂಕ್ಷಿಗಳಾದ ಅತಿಸಾಹಸಿಗಳು ಕೆಲವರು ಅಲ್ಲಲ್ಲೇ ತಮ್ಮದೇ ಆದ ಆಡಳಿತಗಳನ್ನು ಸ್ಥಾಪಿಸಿಕೊಳ್ಳುವ ಪ್ರಯತ್ನಗಳು ಹಿಂದೆ ಆಳಿದ ಧರ್ಮಶೀಲ ಸಮ್ರಾಟರು ಸ್ಥಾಪಿಸಿದ್ದ ಪ್ರಜಾರಕ್ಷಣೆಯ ನೆರಳಿನಲ್ಲಿ ಅನೇಕ ಶತಮಾನಗಳ ಕಾಲ ಒಳದೇಶದ ಜನರು ನಡೆಸುತ್ತಿದ್ದ ಶಾಂತ ಜೀವನಕ್ಕೆ ಧಕ್ಕೆಯನ್ನುಂಟುಮಾಡುವುದಾಗಿದ್ದಿತು. `ದೇಶದ ನಾನಾ ಭಾಗಗಳಲ್ಲಿ ಜನರಿಗೆ ಪೀಡೆಯನ್ನುಂಟುಮಾಡುವಂತಹ, ಯಾರ ಸ್ವಾಗತಕ್ಕೂ ಅರ್ಹವಾಗದ ಸೇನಾತುಕಡಿಗಳು ಮಾಡುತ್ತಿದ್ದ ದಾಳಿಗಳ, ಅತ್ಯಾಚಾರಗಳ ನಿರಂತರ ಭಯದಿಂದ ಜನರು ಜೀವಿಸಬೇಕಾಗಿ ಬಂದಿತ್ತು. ಪ್ರಜೆಗಳ ಜೀವ-ಆಸ್ತಿಪಾಸ್ತಿಗಳೆರಡಕ್ಕೂ ಕ್ಷೇಮವಿರಲಿಲ್ಲ. ಇಂತಹ ಸನ್ನಿವೇಶದಲ್ಲಿ ಸಾರ್ವಭೌಮಾಧಿಕಾರ ಸ್ಥಾಪನೆಯ ಯೋಜನೆಗಳನ್ನು ಬೆಳೆಸಿಕೊಂಡಿದ್ದ ಬ್ರಿಟಿಷರು ಮುಂದುವರಿಯಲು ಅನುಕೂಲವಾಯಿತು. ಇವರು ಒಬ್ಬರ ಮೇಲೊಬ್ಬರನ್ನು ಎತ್ತಿಕಟ್ಟುತ್ತಾ, ತಮ್ಮ ಸೇನಾ ಸುವ್ಯವಸ್ಥೆ ಮತ್ತು ಆಧುನಿಕ ಪ್ರಜಾಡಳಿತ ತತ್ವಗಳ ಬೆಂಬಲದಿಂದ ಒಂದಾದ ಮೇಲೊಂದು ಪ್ರದೇಶದಲ್ಲಿ ತಮ್ಮ ಅಧಿಕಾರವನ್ನು ಸ್ಥಾಪಿಸುತ್ತಾ ಬಂದರು. ಶಾಂತಿ ಮತ್ತು ಸುವ್ಯವಸ್ಥೆಯ ಭರವಸೆಗಳನ್ನು ಕೊಟ್ಟ ಈ ಬ್ರಿಟಿಷ್ ಆಡಳಿತಗಾರರನ್ನು ಸಾಮಾನ್ಯಜನತೆ ಸ್ವಾಗತಿಸಿದುದು ಆಶ್ಚರ್ಯವಲ್ಲ.

ಅಂತಹ ಗೊಂದಲಮಯ ವಾತಾವರಣದಲ್ಲಿ ಧರ್ಮ ಮತ್ತು ಸಂಸ್ಕೃತಿಗಳ ತೀವ್ರಪ್ರಗತಿಯನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ಆದರೂ ಧಾರ್ಮಿಕ ಶ್ರದ್ಧೆ ಭಾರತೀಯರಲ್ಲಿ ಎಷ್ಟು ರೂಢಮೂಲವಾಗಿದೆ, ಭಾರತದ ಜನಜೀವನದಲ್ಲಿ ಅದು ಎಂತಹ ಪ್ರಮುಖ ಪಾತ್ರ ವಹಿಸಿದೆಯೆಂದರೆ, ಎಂತಹ ಸನ್ನಿವೇಶದಲ್ಲೂ ಸಂಚಾರೀ ಸಂತ ಗಾಯಕರು ಮತ್ತು ಅನುಭಾವಿಗಳು ತಮ್ಮ ಮನೆಯ ಬಾಗಿಲಿಗೆ ತಂದು ಬೋಧಿಸಿದ ಸಂದೇಶವನ್ನು ಮನಸಾರೆ ಮೆಚ್ಚಿ ಅದರಿಂದ ಸಮಾಧಾನವನ್ನು ಹೊಂದಿದರು. ಕರ್ಣಾಟಕ ಸಂಗೀತಕ್ಕೆ ಅಚ್ಚಳಿಯದ ಕಾಣಿಕೆಯಿತ್ತ, ತಮಿಳು ನಾಡಿನಲ್ಲಿ ಜನಿಸಿದ ವಾಗ್ಗೇಯಕಾರ ತ್ರಿಮೂರ್ತಿಗಳ ಕಾಲವದು ಎಂಬಂಶವನ್ನು ಗಮನದಲ್ಲಿಡಬೇಕು. ಬತ್ತದ ಚಿಲುಮೆಯ ಹೊನಲಿನಂತೆ ಹರಿಯುವ ಧಾರ್ಮಿಕ ಅನುಭಾವವೆಂಬುದು, ಕೆಲವೇ ಅಪೂರ್ವ ಆತ್ಮಗಳಲ್ಲಿ ಅಭಿವ್ಯಕ್ತವಾಗಿ ನಾಡಿನಲ್ಲೆಲ್ಲಾ ಹರಡಿತು. ಸಾಮಾನ್ಯ ಜನತೆಗೆ ಸಂಬಂಧಿಸಿದಂತೆ, ಜೀವನದಉದಾತ್ತ ತತ್ವಗಳನ್ನು ಜೀವಂತಗೊಳಿಸಿ, ಅವರು ಸುತ್ತುಮುತ್ತಲಿನ ಅಂಧಕಾರವನ್ನು ತೊಡೆಯುವ ಪ್ರಕಾಶವನ್ನು ಬೀರಿದರು.

ಆ ಕಾಲದ ಕರ್ಣಾಟಕದ ಕೆಲವು ಅಂತಹ ಧಾರ್ಮಿಕ ಪಂಥಗಳನ್ನು ಸಂಕ್ಷೇಪವಾಗಿ ಗಮನಿಸೋಣ.

**ಕರ್ಣಾಟಕದ ಹರಿದಾಸರು**

ದೈವಭಕ್ತಿ ಬೋಧಕರಾದ ಕರ್ಣಾಟಕದ ಹರಿದಾಸರು ಕರ್ಣಾಟಕದ ಧಾರ್ಮಿಕ ಜೀವನಕ್ಕೆ ವಿಶಿಷ್ಟವಾದ ಕಾಣಿಕೆಯನ್ನಿತ್ತರು. ಸಾಮಾನ್ಯಜನತೆಗೆ ಸುಲಭವಾಗಿ ತಿಳಿಯುವಂತೆ ಶುದ್ಧ, ಸ್ಪಷ್ಟ,

ಸರಳಶೈಲಿಯಲ್ಲಿ ಉದಾತ್ತವೂ ಪವಿತ್ರವೂ ಆದ ಸತ್ಯಭೂತ ತತ್ವಗಳನ್ನು ಕನ್ನಡ ಭಾಷೆಯಲ್ಲಿ ಅವರು ಹಾಡಿದರು.

ಹದಿಮೂರನೆಯ ಶತಮಾನದ ಹೊತ್ತಿಗೇ, ಪರಮೇಶ್ವರ ಭಕ್ತರಾದ ಶಿವಶರಣರು ಬಸವೇಶ್ವರ ಮತ್ತು ಇತರ ಅನುಭಾವಿಗಳಿಂದ ಸ್ಫೂರ್ತಿಪಡೆದು ಶಿವಭಕ್ತಿಯನ್ನು—ಉದಾತ್ತ ನೀತಿಬೋಧನೆಯನ್ನು, ಸಾಮಾನ್ಯಜನತೆಗೆ ನೀಡುವ ಸರಳ ಶುದ್ಧ ಕನ್ನಡದಲ್ಲಿ ವಚನಗಳನ್ನು ರಚಿಸಲು ಪ್ರಾರಂಭಿಸಿದ್ದರು.

ಮಹಾತ್ಮರಾದ ಮಧ್ವಾಚಾರ್ಯರ ಅನುಯಾಯಿಗಳು ಪರಮಾತ್ಮನಲ್ಲಿ ಜ್ಞಾನಪೂರ್ವಕವಾದ ಭಕ್ತಿ ಎಂಬ ಅವರ ತತ್ತ್ವವನ್ನು ಸುಶ್ರಾವ್ಯವಾದ ದೇವರನಾಮಗಳೆಂದು ಪ್ರಸಿದ್ಧವಾದ ಕೀರ್ತನೆಗಳ ಮೂಲಕ ಬೋಧಿಸಿದರು. ಆರ್. ಡಿ. ರಾನಡೆ ಅವರು ತಮ್ಮ "ಕನ್ನಡ ಸಾಹಿತ್ಯದಲ್ಲಿ ಪರಮಾತ್ಮ ಪಥ"ವೆಂಬ ಗ್ರಂಥದಲ್ಲಿ ಹೇಳಿರುವಂತೆ "ಪ್ರಪಂಚದ ಅನುಭಾವಿಗಳಲ್ಲಿ ಕರ್ಣಾಟಕದ ಭಕ್ತಶ್ರೇಷ್ಠರು ಹಿರಿಯ ಸ್ಥಾನವನ್ನು ಹೊಂದಿದ್ದಾರೆ. ವಿವರಪೂರ್ಣವಾಗಿ ಸಚಿತ್ರವಾಗಿ ಬಣ್ಣಿಸಿರುವ ಅಪರೋಕ್ಷಾನುಭವ ಸಾಧನೆಯಲ್ಲಿ ಕರ್ಣಾಟಕದ ಸಂತರನ್ನು ಮೀರಿಸಿದವರಾರೂ ಇಲ್ಲ (ಪುಟ 11).

ಶ್ರೀಮನ್ ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀ ನರಹರಿತೀರ್ಥರು (ಕ್ರಿ. ಶ. 1300), ಅವರು ರಚಿಸಿದುವು ಎನ್ನಲಾದ ಕೃತಿಗಳು ಕೆಲವೇ ದೊರೆತಿದ್ದರೂ, ಹರಿದಾಸಪಂಥದ ಜನಕರೆಂದು ಭಾವಿಸಬಹುದು.

ಬೆಂಗಳೂರಿಗೆ 60 ಮೈಲಿಯಲ್ಲಿರುವ (ಕೋಲಾರ ಜಿಲ್ಲೆಯ) ಮುಳುಬಾಗಿಲಿನಲ್ಲಿ ವಾಸವಾಗಿದ್ದ ಮಾಧ್ವಮಠದ ಪೀಠಾಧಿಪತಿಗಳಾದ ಶ್ರೀ ಶ್ರೀಪಾದರಾಜರು (ಕ್ರಿ. ಶ. 1450), ಈ ಬಗೆಯ ದೇವರ ನಾಮಗಳನ್ನು ಬಹು ಸಂಖ್ಯೆಯಲ್ಲಿ ರಚಿಸಿ ಅವು ಜನಪ್ರಿಯವಾಗುವಂತೆಯೂ ಮಾಡಿದವರಲ್ಲಿ ಮೊದಲಿಗರು.

ತಮಿಳು ನಾಡಿನ ಸಾಮಾನ್ಯ ಜನತೆಯಲ್ಲಿ ಬಹುವಾಗಿ ಪ್ರಚಾರದಲ್ಲಿರುವ ತಮಿಳುನಾಡಿನ ಸಂತರು ತಮಿಳು ಭಾಷೆಯಲ್ಲಿ ರಚಿಸಿರುವ ಶೈವ–ವೈಷ್ಣವ ಹಾಡಂಗಳು, ತಮಿಳು ದೇಶದಲ್ಲಿ ಕೆಲವು ಕಾಲ ವಾಸವಾಗಿದ್ದ ಇವರ ಮೇಲೆ ಪ್ರಭಾವ ಬೀರಿರಬಹುದು.

"ಹರಿದಾಸ" ಎಂದರೆ ಭಗವಂತನಾದ ಶ್ರೀಹರಿಯ (ವಿಷ್ಣುವಿನ) ಭಕ್ತ ಎಂದರ್ಥ. ತಮ್ಮ ಪ್ರಭುವನ್ನು ಬಗೆಬಗೆಯಾಗಿ ಕನ್ನಡ ನುಡಿಯಲ್ಲಿ ಹಾಡಿರುವ ಹರಿಭಕ್ತರಾದ ಸಂತ ಕವಿಗಳಿಗೆ ಈ ಶಬ್ದ ಇಲ್ಲಿ ಮುಖ್ಯವಾಗಿ ಅನ್ವಯಿಸುತ್ತದೆ. "ಹರಿದಾಸ ಪಿತಾಮಹ" ಎಂದು ಶ್ರೀ ಪಾದರಾಜರು ಸುಪ್ರಸಿದ್ಧರು. ಶ್ರೀಮಧ್ವರ ಕಠಿನವೂ ಪ್ರೌಢವೂ ಆದ ತಾತ್ವಿಕ ಬೋಧೆಯನ್ನು ಸರಳವಾದ ಶುದ್ಧವಾದ ಕನ್ನಡ ಭಾಷೆಯಲ್ಲಿ ಹೇಳುವ ಕನ್ನಡ ದೇವರನಾಮಗಳನ್ನು ರಚಿಸುವ ಧೈರ್ಯವನ್ನು ಇವರು ತೋರಿದರು.

ಇವರ ಈ ಕಾರ್ಯಧೈರ್ಯ ಏಕಾಯಿತೆಂದರೆ, ಅದೊಂದು ಹೊಸ ಹಾದಿಯನ್ನು ಹಾಕಿಕೊಟ್ಟಿತು. ಆ ಕಾಲಕ್ಕೆ ಪ್ರಾಕೃತ ಭಾಷೆ (ಜನಸಾಮಾನ್ಯರ ಆಡುನುಡಿ) ಯೊಂದರಲ್ಲಿ ಪವಿತ್ರವಾದ ತತ್ವಗಳನ್ನು ಹೇಳಬಾರದು–ಹೇಳಲು ಸಾಧ್ಯವೂ ಆಗದು ಎಂಬ ನಂಬಿಕೆ ಜನರಲ್ಲಿ ಆಗ ಮೂಡಿದ್ದಿತು. ಆದರೆ ಪ್ರಮುಖ ಧಾರ್ಮಿಕ ಪೀಠವೊಂದರ ಮುಖ್ಯಸ್ಥರಾದ ಶ್ರೀ ಪಾದರಾಜರು ಹರಿದಾಸ ಪಂಥಕ್ಕೆ ಬೆಂಬಲ ಕೊಟ್ಟುದೇ ಅಲ್ಲದೆ ಅಧಿಕಾರ ಮುದ್ರೆಯನ್ನು ಒತ್ತಿದರು. ಇದರಿಂದ ಕನ್ನಡ ಭಾಷೆ ಚಿರಸ್ಥಾಯಿಯಾದ ಬೆಲೆಯುಳ್ಳ ಹರಿದಾಸರ ಹಾಡುಗಳೆಂಬ ಸಂಪತ್ತನ್ನು ಹೊಂದುವಂತಾಯಿತು.

ಶ್ರೀಪಾದರಾಜರು ಅನೇಕ ಹಾಡುಗಳನ್ನು ಕಟ್ಟಿದುದಲ್ಲದೆ, ತಮ್ಮ ಘನವಾದ ಮುಂದಾಲೋಚನೆಯಿಂದ ಅನೇಕ ಶಿಷ್ಯರನ್ನು ತಯಾರುಮಾಡಿ ಹರಿದಾಸ ಪರಂಪರೆಯನ್ನೇ ಪ್ರಾರಂಭಿಸಿದರು. ಅವರ ಪ್ರಮುಖ ಶಿಷ್ಯರೆಂದರೆ ಕ್ರಿ. ಶ. 1449–1537 ರಲ್ಲಿದ್ದ ವಿಜಯನಗರದ ಏಳು ಚಕ್ರವರ್ತಿಗಳ ಗೌರವಾದರಗಳಿಗೆ ಪಾತ್ರರಾಗಿದ್ದ ಶ್ರೀ ವ್ಯಾಸರಾಜರು.

ಶ್ರೀ ವ್ಯಾಸರಾಜರು ಕನ್ನಡದಲ್ಲಿ ದೇವರನಾಮಗಳನ್ನು "ಕೃಷ್ಣ" ಅಥವಾ "ಶ್ರೀಕೃಷ್ಣ" ಎಂಬ ಅಂಕಿತದಿಂದ ರಚಿಸಿ, ಹರಿದಾಸ ಪಂಥದ ವಿಶೇಷ ಚಾಲಕ ಶಕ್ತಿಯಾದರು. ಹರಿದಾಸರಲ್ಲಿ ಪ್ರಮುಖರಾದ ಶ್ರೀ ಪುರಂದರದಾಸರು ಮತ್ತು ಕನಕದಾಸರು ಅವರ ಶಿಷ್ಯರು. ಮಾಧ್ವ ಲೋಕದಲ್ಲಿ ಪ್ರಖ್ಯಾತ ನಾಮರೆನಿಸಿದ ಶ್ರೀ ವಾದಿರಾಜರು ಮತ್ತು ವಿಜಯೀಂದ್ರರು ಅವರ ಪ್ರಮುಖ ಶಿಷ್ಯ ವೃಂದದಲ್ಲಿ ಸೇರಿದವರು.

ಹರಿದಾಸರ ಆದರ್ಶಗಳನ್ನು ವಿವರಿಸಿ ಶ್ರೀ ವ್ಯಾಸರಾಜರು ರಚಿಸಿರುವ ಕೃತಿಯೊಂದರಲ್ಲಿ ಪುರಂದರ ದಾಸರನ್ನು ಆದರ್ಶ ಹರಿದಾಸರೆಂದು ಅಂಗೀಕರಿಸಲಾಗಿದೆ. ಪುರಂದರದಾಸರು ಗೃಹಸ್ಥ ಜೀವನವನ್ನು ಪರಿತ್ಯಾಗಮಾಡಿರಲಿಲ್ಲ. ಸತಿಸುತರಿಂದೊಡಗೂಡಿಯೇ ಜೀವಿಸುತ್ತಿದ್ದ ಪುರಂದರದಾಸರು ತಮಗಿದ್ದ ಅಪಾರ ಐಶ್ವರ್ಯವನ್ನು ತ್ಯಜಿಸಿಬಿಟ್ಟರು. ಅವರಲ್ಲಿ ವಿದ್ವತ್ತು ಮತ್ತು ದೈವಭಕ್ತಿ ಅತ್ಯಧಿಕವಾಗಿದ್ದುವು; ಅವರ ತ್ಯಾಗವಂತೂ ಅಸದೃಶವಾದುದು.

ಪುರಂದರದಾಸರು ಬಹು ಸಂಖ್ಯೆಯಲ್ಲಿ ಕೃತಿಗಳನ್ನು ರಚನೆಮಾಡಿ, ಜನರು ಅವರ ಬಾಳನ್ನು ಉಪಯುಕ್ತವಾಗುವಂತೆ ಮಾಡಿಕೊಳ್ಳಬೇಕೆಂದು ಕರೆಯಿತ್ತರು. "ಈಸಬೇಕು, ಇದ್ದು ಜಯಿಸಬೇಕು" ಎಂದು ಅಪೇಕ್ಷಿಸಿದರು. ಮಾನವನ ಬದುಕೆಂಬುದು ಮಾಯೆ–ಮಿಥ್ಯೆ ಎಂದುಕೊಂಡು ಬಿಸುಟು ಬಿಡಬಹುದಾದುದಲ್ಲ, ಅದೊಂದು ಅನರ್ಘ್ಯ ವರ ಎಂದರು. ಅವರ ಕೃತಿಗಳು ಬದುಕಿನಲ್ಲಿ ಉತ್ಸಾಹವನ್ನು ತುಂಬುವಂತಹವು.

ಶ್ರೀ ವ್ಯಾಸತೀರ್ಥರ ಸಮಕಾಲೀನರಾದ ಸುಪ್ರಸಿದ್ಧ ಶ್ರೀ ವಾದಿರಾಜರು ಬಹು ಸಂಖ್ಯೆಯ ಕೃತಿಗಳ ಲೇಖಕರು, ಮತ್ತು ಗೀತೆಗಳ ರಚನೆಕಾರರು. ವ್ಯಾಸಕೂಟ ಮತ್ತು ದಾಸಕೂಟಗಳೆರಡಕ್ಕೂ ಅವರು ಹಿರಿಯ ನಾಯಕರು. ಸಂಸ್ಕೃತ ಭಾಷೆಯಲ್ಲಿ ಟೀಕೆ ಟಿಪ್ಪಣಿಗಳನ್ನು ರಚಿಸಿ ಸಿದ್ಧಾಂತಗಳ ಖಂಡನ ಮಂಡನಗಳನ್ನು ಮಾಡುವ ವಿದ್ವಾಂಸರೆನಿಸಿದ ಪಂಡಿತರಿಂದ ಕೂಡಿದ್ದು 'ವ್ಯಾಸಕೂಟ.' ದೈವಭಕ್ತಿ, ಭಗವಂತನ ಲೀಲೆಗಳನ್ನೂ ಮಹಿಮೆಗಳನ್ನೂ ಜ್ಞಾನ ವೈರಾಗ್ಯಗಳನ್ನೂ ಕನ್ನಡನುಡಿಯ ಮೂಲಕ ಬೋಧಿಸುವ ಕನ್ನಡ ಕೃತಿಗಳನ್ನು ರಚಿಸಿ ಮನೆಮನೆಗೆ ಆ ಸಂದೇಶವನ್ನು ಬೀರುವ ಕೀರ್ತನಕಾರರಿಂದ ತುಂಬಿದ್ದು 'ದಾಸಕೂಟ'. ವಾದಿರಾಜರ ಅನೇಕ ಕನ್ನಡ ಕೃತಿಗಳಲ್ಲಿ "ಹಯವದನ" ಎಂಬ ಅಂಕಿತವುಳ್ಳ ವೈಕುಂಠವರ್ಣನೆ, ಲಕ್ಷ್ಮೀಶೋಭಾನೆ, ಸ್ವಪ್ನಪದ, ಕೀಚಕವಧ, ಮತ್ತು ಗುಂಡಕ್ರಿಯೆಗಳು ಕೆಲವು. ಹಲವಾರು ಹರಿದಾಸರಿಗೆ ಸ್ಫೂರ್ತಿದಾತರಾದ ಮಂತ್ರಾಲಯದ ರಾಘವೇಂದ್ರ ತೀರ್ಥರ ಹೆಸರನ್ನು ಇಲ್ಲಿ ಸ್ಮರಿಸಬೇಕು. ಅವರು ಘನ ವಿದ್ವಾಂಸರೂ ಸಂಗೀತಗಾರರೂ ಆಗಿದ್ದು ದ್ವೈತಸಿದ್ಧಾಂತದ ಮೇಲೆ ಗ್ರಂಥಗಳನ್ನು ರಚಿಸಿದ್ದಾರೆ. ಅವರ ಒಂದೇ ಒಂದು ಹಾಡು ನಮಗೆ ಉಳಿದುಬಂದಿದೆ. ಮತ್ತು ಅದು ಜನಪ್ರಿಯವೂ ಆಗಿದೆ. ಹಂಪೆ ಮತ್ತು ಅದರ ಸುತ್ತಮುತ್ತಲ ಪ್ರದೇಶ ಹದಿನೈದು ಮತ್ತು ಹದಿನಾರನೆಯ ಶತಮಾನಗಳಲ್ಲಿ ಹರಿದಾಸರ ಕೇಂದ್ರವಾಗಿದ್ದಿತು. ಶ್ರೀ ಪುರಂದರದಾಸರು ಮತ್ತು ಕನಕದಾಸರು ಪ್ರಮುಖ ಹರಿದಾಸರಾಗಿದ್ದರು.

ಹದಿನೇಳು ಮತ್ತು ಹದಿನೆಂಟನೆಯ ಶತಮಾನಗಳಲ್ಲಿ ಹರಿದಾಸರ ಮತ್ತೊಂದು ಕೇಂದ್ರವನ್ನು ರಾಯಚೂರು ಮತ್ತು ಸುತ್ತಮುತ್ತಲಿನ ಪ್ರದೇಶದಲ್ಲಿ ಕಾಣಬಹುದು—ಮಾನವಿ, ವೇಣೀಸೋಮಪುರ, ಉತ್ತನೂರು, ಲಿಂಗಸುಗೂರು, ಬಾಗಲಕೋಟೆ, ಬಾದಾಮಿ ಇತ್ಯಾದಿ. ಈ ಕಾಲದ ಪ್ರಸಿದ್ಧ ಹರಿದಾಸರ ಹೆಸರುಗಳೆಂದರೆ—ಶ್ರೀ ವಿಜಯದಾಸರು, ಶ್ರೀ ಗೋಪಾಲದಾಸರು, ಶ್ರೀಪ್ರಸನ್ನ ವೆಂಕಟದಾಸರು, ಶ್ರೀ ಪ್ರಾಣೇಶದಾಸರು ಮತ್ತು ಶ್ರೀ ಮೋಹನದಾಸರು ಇತ್ಯಾದಿ.

ಹರಿದಾಸರನೇಕರು ದೇವರನಾಮ ಎಂಬ ಹೆಸರುಳ್ಳ ಸಣ್ಣ ದೊಡ್ಡ ಹಾಡುಗಳನ್ನು ರಚಿಸಿದ್ದಾರೆ. ಗಮನಾರ್ಹವಾದ ಕೆಲವು ಕಾವ್ಯ ಮತ್ತು ಸಿದ್ಧಾಂತ ಗ್ರಂಥಗಳು ಕೂಡ ಶ್ರೀ ಕನಕದಾಸರು ಮತ್ತು ಜಗನ್ನಾಥದಾಸರ ಹೆಸರುಗಳಲ್ಲಿ ಪ್ರಖ್ಯಾತವಾಗಿವೆ. ಈ ಸಂದರ್ಭದಲ್ಲಿ ಶ್ರೀ ಕನಕದಾಸರ ಮೋಹನ ತರಂಗಿಣಿ, ನಳ ಚರಿತ್ರೆ ಮತ್ತು ಹರಿಭಕ್ತಿಸಾರಗಳನ್ನೂ ಕನ್ನಡದಲ್ಲಿ ಸರಳ ಸೊಬಗಿನ ಶೈಲಿಯಲ್ಲಿ ರಚಿಸಲಾದ ಮಾಧ ರ ಹರಿಸರ್ವೋತ್ತಮ ದರ್ಶನ ಪ್ರತಿಪಾದಕವಾದ ಸುಪ್ರಸಿದ್ಧ-ಶ್ರೇಷ್ಠ ಗ್ರಂಥ ವೆನಿಸಿದ ಹರಿಕಥಾಮೃತಸಾರವನ್ನೂ ಹೇಳಬೇಕು. ಹರಿಕಥಾಮೃತಸಾರ ಸಂಗೀತಬದ್ಧವೂ ಕಾವ್ಯ ಗುಣ ಸೌಂದರ್ಯಗಳುಳ್ಳದೂ ಸಿದ್ಧಾಂತ ಪ್ರತಿಪಾದಕವೂ ಆದ ನಾಯಕ ಕೃತಿ. ನೂರಾರು ಸಾವಿರಾರು ದೇವರನಾಮಗಳನ್ನು ರಚಿಸಿರುವ ಅನೇಕ ಹರಿದಾಸರಿರುವಂತೆಯೇ, ಯಾವ ಸಾಹಿತ್ಯವನ್ನೂ ಸೃಷ್ಟಿ ಮಾಡ ದಿದ್ದರೂ ಹರಿದಾಸ ಪಂಥಕ್ಕೆ ಸೇರಿದವರಾಗಿ, ಆಧ್ಯಾತ್ಮಿಕ ಸಾಧನೆಯನ್ನೂ ಆ ಮೂಲಕವಾಗಿ ಮಾಡಿ ಕೊಂಡ ಮತ್ತೆಷ್ಟೋ ಮಂದಿ ಹರಿದಾಸರೂ ಇದ್ದಾರೆ. ಸದ್ಯದ ಸಂಶೋಧನೆಗೆ ಈ ಬಗೆಯ ಪವಿತ್ರ, ಭಕ್ತ್ಯುದ್ಬೋಧಕ ಅನುಭಾವೀ ಸಾಹಿತ್ಯ ಪ್ರವಾಹವನ್ನು ಹರಿಸಿದ ಸುಮಾರು ಇನ್ನೂರು ಮಂದಿ ಹರಿದಾಸರು ಸಿಕ್ಕಿದ್ದಾರೆ.

ಪುರಂದರದಾಸರು ಮತ್ತು ವಿಜಯದಾಸರಿಬ್ಬರೂ ಸಮೃದ್ಧ ಕೃತಿರಚನಕಾರರು. ತಮ್ಮ ಒಂದು ಕೃತಿಯಲ್ಲಿ ಪುರಂದರದಾಸರು ತಾವು ನಾಲ್ಕು ಲಕ್ಷದ ಎಪ್ಪತ್ತೈದು ಸಾವಿರ ಹಾಡುಗಳನ್ನು ರಚಿಸಿದೆನೆಂದು ಹೇಳಿದ್ದಾರೆ. ಈ ಸಂಖ್ಯೆಯನ್ನು ಪೂರ್ತಿ ಮಾಡುವ ಸಲುವಾಗಿ ವಿಜಯದಾಸರು ಉಳಿದ 25,000 ಕೃತಿ ಗಳನ್ನು ರಚಿಸಿದರೆಂದು ಹೇಳಲಾಗಿದೆ. ಲಿಂಗಸುಗೂರಿನ ಶ್ರೀ ವರದೇಂದ್ರ ಹರಿದಾಸ ಸಾಹಿತ್ಯಮಾಲೆ ಅನೇಕ ಭಾಗಗಳಲ್ಲಿ ಶ್ರೀ ವಿಜಯದಾಸರ ಬಹುಮಟ್ಟಿಗೆ ದೊರೆತಿರುವ ಎಲ್ಲ ಕೃತಿಗಳನ್ನೂ ಪ್ರಕಟಿಸಿದೆ.

ಈ ಹಾಡುಗಳಲ್ಲಿ ಬಹುಸಂಖ್ಯೆಯವು ಕೃತಿಕಾರರು ಕುಳಿತು ಬರೆದಿಟ್ಟವಲ್ಲ; ಆಯಾ ಸನ್ನಿವೇಶಗಳಲ್ಲಿ ಸ್ಫೂರ್ತಿವೆತ್ತಾಗ ಆಶುಕವಿತೆಯ ರೂಪದ ಸ್ರೋತೋವಾಹಿನಿ. ಅನೇಕ ಹಾಡುಗಳ ರಚನೆಗೆ ವಿಶಿಷ್ಟವಾದ ಘಟನೆಗಳ ಹಿನ್ನೆಲೆಯೂ ಉಂಟು. ಇದರ ಪರಿಣಾಮವಾಗಿಯೋ ಏನೋ, ಈ ಸಾಹಿತ್ಯದ ಬಹುಭಾಗ ನಷ್ಟವಾಗಿದೆ. ಈ ವಲಯದಲ್ಲಿ ಸಂಶೋಧನೆಗೆ ಸಾಕಷ್ಟು ಅವಕಾಶವಿದೆ.

ಹರಿದಾಸ ಪಂಥ ಕನ್ನಡ ಭಾಷೆ ಮತ್ತು ಸಾಹಿತ್ಯಗಳಿಗೆ ಬೆಲೆಯುಳ್ಳ ಅಪಾರ ಕಾಣಿಕೆಯನ್ನರ್ಪಿಸಿದೆ. ಇನಿದಾದ ಹಾಡುಗಳ ಮೂಲಕ ತುಂಬ ಸರಳ ಮತ್ತು ಶುದ್ಧವಾದ ಕನ್ನಡಶೈಲಿಯಲ್ಲಿ ಅದು ದ್ವೈತ ಸಿದ್ಧಾಂತದ ತತ್ವಗಳನ್ನು ಪೂರ್ಣವಾಗಿ (ಸುಪ್ರಸಿದ್ಧ ಮಹಾತ್ಮ ಮಧ್ವಾಚಾರ್ಯರ ತತ್ವವಾದವನ್ನು) ಬೋಧಿಸಿದೆ. ಆದ್ದರಿಂದಲೇ ಹರಿದಾಸರ ಈ ಹಾಡುಗಳು ಸಾಮಾನ್ಯ ಜನತೆಯ ಹೃದಯವನ್ನು ಹೊಕ್ಕು ಸಂತೃಪ್ತಿ ಸಮಾಧಾನಗಳನ್ನಿತ್ತು ನೇರವಾಗಿ ಪ್ರಭಾವವನ್ನು ಬೀರುತ್ತವೆ. ಹರಿದಾಸ ಸಾಹಿತ್ಯದ ಈ ಸದ್ಗುಣ-ಲಕ್ಷಣವೇ ಅದನ್ನು ಹಿರಿದಾಗಿಯೂ ಸದಾ ಹಸಿರಾಗಿಯೂ ಚಿರಸ್ಮರಣೀಯವಾಗಿಯೂ ಇರುವಂತೆ ಮಾಡಿದೆ.

ಫಾದರ್ ಹೆರಾಸ್ ಅವರು "ಕರ್ಣಾಟಕದ ಹರಿದಾಸರ ನುಡಿಮುತ್ತುಗಳು ನಿಜವಾಗಿ ಉಪನಿಷತ್ ತತ್ತ್ವಗಳಂತೆಯೇ ಇವೆ" ಎಂದು ಅಭಿಪ್ರಾಯಪಟ್ಟಿದ್ದಾರೆ.

"ಭಗವಂತ ಸರ್ವತಂತ್ರ ಸ್ವತಂತ್ರ, ಮಾನವನಿಂದ ಭಿನ್ನ ಮತ್ತು ಅವನಿಗಿಂತ ಬಹುಪಾಲು ಉತ್ತಮ–ಶ್ರೇಷ್ಠ. ಈ ಪ್ರಪಂಚದ ಸೃಷ್ಟಿಗೆ ಕಾರಣನಾದವನು ಅವನೆ, ಮತ್ತು ಪ್ರತಿಯೊಂದೂ ಅವನ ಚಾಲನೆಯಿಂದಲೇ ನಡೆಯುತಕ್ಕುದು. ಅವನು ಪ್ರತಿಯೊಂದು ಪದಾರ್ಥದಲ್ಲಿಯೂ ಇದ್ದಾನೆ. ಆ ಪ್ರತಿಯೊಂದು ಪದಾರ್ಥವೂ ಯಾವುದೇ ಕಾರ್ಯ ಮಾಡಬೇಕಾಗಿದ್ದರೂ ಒಳಗೆ ನಿಂತು ಅವನು ಮಾಡಿಸಿದರೇ ಸಾಧ್ಯವಾಗುವುದು. ಭಗವಂತನ ಸರ್ವ ಕಾರ್ಯವೂ ಕೊಳಲನ್ನು ನುಡಿಸಿದಂತೆ, ಎಂದು ಸುಂದರವಾಗಿ ಹೋಲಿಸಿ ಹೇಳಲಾಗಿದೆ. ಭಗವಂತನಲ್ಲಿ ಸರ್ವವೂ ಇದೆ. ಆದ್ದರಿಂದ ಅವನ ಕಿಂಕರರು (ಹರಿದಾಸರು) ತಮ್ಮ ಹೃದಯದಲ್ಲಿ ಯಾವ ಹೆದರಿಕೆಗೂ ಅವಕಾಶ ಕೊಡಬೇಕಾದುದಿಲ್ಲ. ಅವನ ಪವಿತ್ರ ನಾಮಸ್ಮರಣೆ ಎಂಬುದು ಮಾನವನ ಅಧ್ಯಾತ್ಮ ಜೀವನದಲ್ಲಿ ಆಶ್ಚರ್ಯಕರವಾದ ಪ್ರಭಾವವನ್ನು ಬೀರುತ್ತದೆ."

ಜನತೆಯ ಮುಂದೆ ನೀತಿ ಧರ್ಮಗಳಿಗೆ ಸಂಬಂಧಿಸಿದಂತೆ ಸದಾಚಾರದ ನಿಯಮಾವಳಿಯನ್ನಿಡಲು ಹರಿದಾಸರು ಪ್ರಯತ್ನಿಸಿದರು. ಬಾಹ್ಯಾಡಂಬರ, ಮತಾಚರಣೆಯ ಅತಿ ನಿಷ್ಠೆ ಮತ್ತು ಪ್ರಾಪಂಚಿಕ ಸುಖದ ಅತಿಯಾದ ಚಿಂತೆಗಳನ್ನು ಅವರು ತಿರಸ್ಕರಿಸಿದರು. ಅದಕ್ಕೆ ಬದಲಾಗಿ ಭಗವದ್ಭಕ್ತಿ, ಆಧ್ಯಾತ್ಮಿಕ ಮೌಲ್ಯಗಳಿಗೆ ಹೆಚ್ಚಿನ ಮಾನ್ಯತೆ–ಇವುಗಳನ್ನು ಬೋಧಿಸಿದರು. ಉದಾತ್ತ ಜೀವನವೆಂಬುದು ಕೇವಲ ಕೆಲವರಿಗಷ್ಟೆ ಅಲ್ಲ, ಅದು ಎಲ್ಲರಿಗೂ ಸಾಧ್ಯ ಎಂದೂ ಅದನ್ನು ಎಲ್ಲರೂ ಪ್ರಯತ್ನಪಟ್ಟು ಸಾಧಿಸಬೇಕೆಂದೂ ಅವರು ಬೋಧಿಸಿದರು.

ಉತ್ಸಾಹಶೂನ್ಯವಾದ ಮರಳುಗಾಡಿನ ಪ್ರಯಾಣದಂತಿರುವ ಸಂಸಾರದ (ಈ ಲೋಕ ಜೀವನ ವೆಂಬ ವಿಷ ಚಕ್ರದ) ಮೂಲಕ ಮೋಕ್ಷ ಪಥದಲ್ಲಿ ಅಡಿಯಿಡುತ್ತಿರುವಾಗ ತಮಗಾದ ವೈಯಕ್ತಿಕ ಅನುಭವಗಳನ್ನು ಹರಿದಾಸರ ಹಾಡುಗಳು ಸಚಿತ್ರವಾಗಿ ಬಣ್ಣಿಸುತ್ತವೆ. ಒಬ್ಬರ ಅನುಭವಕ್ಕೆ ಬರುವ ಸಂತೋಷ ದುಃಖ ಅಥವಾ ಸೋಲುಗಳು ಮತ್ತು ಅನಿಶ್ಚಯತೆಗಳಿಗೂ ಬೇರೊಬ್ಬರ ಅನುಭವಕ್ಕೂ ತುಂಬ ವ್ಯತ್ಯಾಸವಿರುವುದರಿಂದ ಅನುಭವಗಳು ವಿವಿಧವಾಗಿರುತ್ತವೆ.

ಹರಿದಾಸರು ನಿರಾಶಾವಾದಿಗಳಲ್ಲ. ಅವರ ಅಧ್ಯಾತ್ಮಸಾಧನೆಯ ಹಾದಿಯಲ್ಲಿ ಪ್ರಾಪಂಚಿಕ ಜೀವನವ ದುಃಖ ದುರಂತಮಯ ವಿಚಾರಗಳು ಅಡಚಣೆಯಾದಂತೆ ತೋರುವುದಿಲ್ಲ.

ಕರ್ಮ ಮತ್ತು ಜ್ಞಾನಗಳು ಅಗತ್ಯವೆಂದು ಅಂಗೀಕರಿಸಿ ಹರಿದಾಸರು ಭಕ್ತಿಗೆ ಅತ್ಯಂತ ಪ್ರಾಮುಖ್ಯ ವನ್ನು ನೀಡುತ್ತಾರೆ. ನಿಜವಾಗಿ ಈ ಮೂರೂ ಒಂದನ್ನೊಂದು ಅನುಸರಿಸುತ್ತವೆ. ಸಮಚಿತ್ತ, ನಿರ್ಲಿಪ್ತ, ಮಾನವ ಪ್ರೇಮಿಗಳೆನಿಸಿದ ಹರಿದಾಸರು ಈ ನಿರುತ್ಸಾಹಕರ ಸಂಸಾರವೆಂಬ ಕಗ್ಗತ್ತಲೆಯ ಹಾದಿಯಲ್ಲಿ ಒದ್ದಾಡುವ ಪ್ರಾಪಂಚಿಕರಿಗೆ ದೀಪಧಾರಿಗಳಂತಿದ್ದಾರೆ. ಅವರ ಅನುಭವದಿಂದ ತುಂಬಿದ ಸ್ಪಷ್ಟವಾಣಿಯೆಂಬುದು ಅನೇಕರಿಗೆ ಶಾಂತಿಸಮಾಧಾನಗಳನ್ನು ತಂದು ಕೊಡುತ್ತದೆ. ಸಂಸಾರಪಥಿಕ ಅಲ್ಲಿ ತಂಗಿದ್ದು ಅವರ ಉದಾತ್ತವೂ ಅಮರವೂ ಆದ ಹಾಡುಗಳೆಂಬ ಗಂಗೋದಕವನ್ನೀಂಟಿ ತೃಪ್ತಿಯನ್ನು ಪಡೆಯಬಹುದು.

ಹರಿದಾಸರು ಈ ಪ್ರಪಂಚವನ್ನು ಮಾನವ ವಿನಾಶಕ್ಕೆ ಯೋಜಿತವಾಗಿರುವ ವಿಷದ ಮಡುವೆಂದು

ವ್ಯಾಖ್ಯಾನ ಮಾಡುವುದಿಲ್ಲ. ಸ್ವರೂಪಾನಂದ ಸುಖವೆಂಬ ಉನ್ನತ ಧ್ಯೇಯ ಸಾಧನೆಗೆ, ಜೀವರಿಗೆ ನೆರವಾಗುವ ಬಲವಾದ ವಿಕಾಸಕ ಸೋಪಾನ ಪಂಕ್ತಿ ಎಂಬುದಾಗಿ ವರ್ಣಿಸುತ್ತಾರೆ. ಸಾತ್ವಿಕ, ರಾಸಜ ಮತ್ತು ತಾಮಸ ಎಂಬ ವಿಭಾಗಕ್ಕೊಳಪಟ್ಟ ವಿವಿಧ ಜೀವರಲ್ಲಿ ಅವರವರ ಮೂಲ ಯೋಗ್ಯತೆ ಗನುಗುಣವಾಗಿ ಅಡಗಿರುವ ಸುಪ್ತ ಸಹಜ ಶಕ್ತಿಯು ಪೂರ್ಣವಿಕಾಸಕ್ಕೆ ಅಗತ್ಯವಾದ ಎಲ್ಲ ಅವಕಾಶಗಳನ್ನು ನೀಡಲೋಸುಗವೇ, ಭಗವಂತ ಈ ಲೋಕವನ್ನು ಸೃಷ್ಟಿಸಿದ್ದಾನೆ. ತನ್ನ ದಯೆಯಿಂದ ದತ್ತವಾದ ಮೂಲ ಸಾಮಗ್ರಿಗಳನ್ನು ತಮಗೆ ಅತ್ಯಂತ ಲಾಭದಾಯಕವಾಗುವ ರೀತಿಯಲ್ಲಿ ಉಪಯೋಗ ಮಾಡಿಕೊಳ್ಳುವ ಸದವಕಾಶವನ್ನು ಪರಮಾತ್ಮ ಅತ್ಯಂತ ಕರುಣೆಯಿಂದ ಜೀವರಿಗೆ ಕೊಟ್ಟಿದ್ದಾನೆ. ಅವರು ಮಾನವರಿಗೆ ಭಗವಂತನ ವಿಶ್ವಾಸ ನಿಧಿಯಂತಿದ್ದಾರೆ. ಸರ್ವ ತಂತ್ರ ಸ್ವತಂತ್ರನೂ ಸರ್ವ ಶಕ್ತನೂ ಆದ ಭಗವಂತನ ಅಪಾರ ಕರುಣೆಯೆಂಬ ಸಹಜ ಸದ್ಗುಣದಲ್ಲಿ—ಅವನ ಅನಿಮಿತ್ತ ಬಾಂಧವ್ಯದಲ್ಲಿ, ಪೂರ್ಣ ಭರವಸೆಯನ್ನು ಹೊಂದಿ ಪ್ರಪಂಚದ ವಿಷಯದಲ್ಲಿ ನಿರ್ಲಿಪ್ತ ಬುದ್ಧಿಯನ್ನು ಬೆಳೆಸಿಕೊಳ್ಳುವುದೇ ಆ ಗುರಿ ಸಾಧನೆಯ ಏಕೈಕ ಮಾರ್ಗವಾಗಿದೆ.

ಪ್ರಾಪಂಚಿಕ ಕೋಟಲೆಗಳಿಂದ ತಪ್ಪಿಸಿಕೊಳ್ಳುವ ಸಲುವಾಗಿ ಅದಕ್ಕೆ ಭಯ ಪಟ್ಟು ಓಡಿಹೋಗುವುದು, ಸಂಸಾರ ಬಂಧನದ ಬಿಡುಗಡೆಯ ಮಾರ್ಗವಲ್ಲವೆಂದು ಹರಿದಾಸರು ಘೋಷಿಸಿದ್ದಾರೆ. ಸರ್ವೋತ್ತಮನಾದ ಶ್ರೀಹರಿಯಲ್ಲಿ ದೃಢಭಕುತಿಯನ್ನು ಬೆಳೆಸಿಕೊಂಡು ವೀರರಂತೆ ಬಾಳಿ, ಅಜ್ಞಾನವನ್ನು ಧೈರ್ಯವಾಗಿ ಎದುರಿಸಿ ಹೊಡೆದಾಡಿ, ಅಂತ್ಯದಲ್ಲಿ ದುಃಖವನ್ನೇ ತರುವ ಲೌಕಿಕ ವಿಷಯಸುಖ–ಸ್ವಾರ್ಥದಿಂದ ನಿರ್ಲಿಪ್ತರಾಗಿರಬೇಕೆಂದು ಅವರು ಅಪೇಕ್ಷಿಸುತ್ತಾರೆ.

ಹರಿದಾಸರು ತಮ್ಮ ಕೃತಿಗಳ ಮೂಲಕ ಮಾನವನಲ್ಲಿರುವ ಸಾತ್ವಿಕಾಂಶವನ್ನು ಪ್ರಚೋದಿಸುತ್ತಾರೆ. ಅವರ ಬೋಧೆಯಲ್ಲಿ ವೇದೋಪನಿಷತ್ತುಗಳ ಸಾರ ಅಡಕವಾಗಿದೆ. ಪೌರಾಣಿಕ ಕಥಾ ಸನ್ನಿವೇಶಗಳ ದೃಷ್ಟಾಂತಗಳನ್ನೊಳಗೊಂಡ ತಾತ್ವಿಕ ಸತ್ಯವನ್ನು ಅವರ ಸದ್ಬೋಧೆಯಲ್ಲಿ ನಾವು ಕಾಣಬಹುದು. ನಮ್ಮ ಅಂತರಂಗದಲ್ಲಿಯೇ ಸ್ಥಿತನಾಗಿರುವ ಪರಮಾತ್ಮನ ಅರಿವನ್ನು ಪಡೆದು ಆತ್ಮ ಪರೀಕ್ಷೆಯನ್ನು ಮಾಡಿಕೊಂಡು ಅಂತಿಮವಾಗಿ ಅಪರೋಕ್ಷಜ್ಞಾನವನ್ನು ಮತ್ತು ಮೋಕ್ಷವನ್ನು ಪಡೆಯಬೇಕು ಎಂಬ ಬೋಧೆಯೇ ಅವರ ಪ್ರಮುಖ ಉದ್ದೇಶ.

" ಏನು ಮಾಡುವುದೆಲ್ಲ ಶ್ರೀ ಹರಿಸೇವೆ ಎಂದು ಭಾವಿಸು ; ಅವನಿಲ್ಲದ ಸ್ಥಳ ಯಾವುದೂ ಇಲ್ಲ " " ತಲ್ಲಣಿಸದಿರು ಕಂಡ್ಯ ತಾಳು ಮನವೇ (ಮನುಜ) ; ಅವನು ಸಕಲರನ್ನೂ ಸಂರಕ್ಷಿಸುವನೆಂಬುದರಲ್ಲಿ ಸಂಶಯ ಬೇಡ." ಇಂತಹ ಹರಿದಾಸರ ಭರವಸೆಯ ನುಡಿಗಳು ನಿರಾಶೆ ಮತ್ತು ಅಂಜಿಕೆಗಳನ್ನು ಪರಿಹರಿಸಲು ನೆರವಾಗುತ್ತವೆ. ಕನ್ನಡನಾಡಿನ ವಿವಿಧ ವರ್ಗಗಳ ವಿವಿಧ ನಂಬಿಕೆಗಳುಳ್ಳ ಸಾಮಾನ್ಯ ಜನರಿಗೂ ಲಭ್ಯವಾಗುವಂತೆ, ಸಮಾಜದ ಪ್ರತಿಯೊಬ್ಬ ವ್ಯಕ್ತಿಯಲ್ಲೂ ಅವನವನ ಯೋಗ್ಯತಾನುಗುಣವಾಗಿ ಆಧ್ಯಾತ್ಮಿಕ ಪ್ರಚೋದನೆಯನ್ನುಂಟುಮಾಡಿರುವುದೇ ಹರಿದಾಸರು ನೀಡಿರುವ ಹಿರಿಯ ಲಾಭ.

ಅನೇಕ ಹರಿದಾಸರು ಹಿರಿಯ ಅನುಭಾವಿಗಳು. ಆದ್ದರಿಂದಲೇ ಅವರು ತಮ್ಮ ಆಧ್ಯಾತ್ಮಿಕ ಅನುಭವದ ಎಲ್ಲ ರೀತಿಗಳನ್ನೂ ವಿವಿಧ ದೃಷ್ಟಿಕೋನಗಳಿಂದ ವಿಶ್ಲೇಷಿಸಿ, ತಮ್ಮ ಅನರ್ಘ್ಯ ಅನುಭವ ಗಳನ್ನು ಅತ್ಯಂತ ಶ್ರಾವ್ಯ-ಸುಂದರ ಸಂಕೀರ್ತನೆಗಳ ರೂಪದಲ್ಲಿ ಹಾಡಿದ್ದಾರೆ.

ಹರಿದಾಸರ ಕೃತಿಗಳಲ್ಲಿ ಕಾವ್ಯ–ಸಂಗೀತಗಳ ಸುಮಧುರವಾದ ಮಿಲನವಿದೆ. ಪದ, ಸುಳಾದಿ, ಉಗಾಭೋಗ, ತತ್ತ್ವಸುವಾಲಿ, ಶ್ಲೋಕ, ಕಂದ, ವಚನ, ವೃತ್ತನಾಮ, ದ್ವಿಪದಿ, ತ್ರಿಪದಿ, ಚೌಪದಿ, ಷಟ್ಪದಿ,

ಅಷ್ಟಪದಿ, ರಗಳೆ ಮತ್ತು ಯಾಲಪದ ಎಂದು ಅವುಗಳಲ್ಲಿ ವಿವಿಧ ಛಂದಃ ಪ್ರಕಾರಗಳಿವೆ. ವಿಷಯ ವೈವಿಧ್ಯವೂ ಉಂಟು. ಜೀವನ ಚರಿತ್ರೆ, ಧರ್ಮ, ಸಿದ್ಧಾಂತ, ಸಾಮಾಜಿಕ, ನೈತಿಕ, ಸಾಂಪ್ರದಾಯಿಕ, ಧ್ಯಾನ ಇತ್ಯಾದಿ ಬಗೆಗಳಿಗೆ ಸಂಬಂಧಿಸಿದ ಕೃತಿಗಳನ್ನು ಕಾಣಬಹುದು. ಕರ್ಣಾಟಕ ಸಂಗೀತ ಪಾಠಕ್ಕೆ ಇಂದಿಗೂ ತಳಹದಿಯೆನ್ನಿಸಿದ ಪ್ರಸಿದ್ಧ ಪಿಳ್ಳಾರಿ ಗೀತಗಳೆಂಬುದನ್ನು ರಚಿಸಿಕೊಟ್ಟವರು ಒಬ್ಬ ಹರಿದಾಸರೇ (ಶ್ರೀ ಪುರಂದರದಾಸರು).

ಒಬ್ಬರು ಲೇಖಕರು ಹೇಳುವಂತೆ :

"ಜೀವನದ ಅನೇಕ ಎಡರು-ತೊಡರುಗಳನ್ನು ಸಹಿಸಿಕೊಂಡು, ವಿಶ್ರಾಂತಿ-ಉಲ್ಲಾಸಗಳನ್ನು ಬದಿಗೊತ್ತಿ, ಸತ್ಯ-ನಿಷ್ಠೆ-ಶೀಲ ಮತ್ತು ದೈವಭಕ್ತಿಯ ಮಾರ್ಗದಲ್ಲಿ ನಡೆಯಿರೆಂದು ಸುಶ್ರಾವ್ಯವಾದ ಸ್ಫೂರ್ತಿದಾಯಕವಾದ ಸಂಕೀರ್ತನೆಯ ಮೂಲಕ ಜನರಿಗೆ ಕರೆನೀಡುತ್ತ, ತಂಬೂರಿಯ ಶ್ರುತಿಸಮೇತ ಹಾಡುತ್ತ, ಬರಿಗಾಲಿನಲ್ಲಿ ಮನೆಯಿಂದ ಮನೆಗೆ, ಊರಿಂದ ಊರಿಗೆ, ಸಂಚಾರ ಮಾಡುತ್ತಲಿದ್ದ ಹರಿದಾಸರ ಚಿತ್ರ ಬಹುಶಃ ಮಾನವ ಚಕ್ಷುವಿಗೆ ಬೆಳಗಬಹುದಾದ ಅತ್ಯಂತ ಸ್ಫೂರ್ತಿದಾಯಕವಾದ ದೃಶ್ಯವೆಂದು ಪರಿಗಣಿಸಬಹುದಾಗಿದೆ. ಉದಾತ್ತ ಭಾವನೆಗಳಿಗೆ ಮನಸೋಲುವ ಯಾವ ಹೃದಯವೂ ಬೇಡವೆಂದು ಹೇಳಲಾರದಂತಹದು ; ಹರಿದಾಸರ ಸಭ್ಯ-ಸಾತ್ವಿಕ ಸಂದೇಶ ಹೃದಯದ ಮೇಲೆ ನೇರವಾಗಿ ಪ್ರಭಾವ ಬೀರುವಂತಹದೂ ಆಗಿದೆ."

ಮೂಲಲೇಖಕರು ಮತ್ತು ಅನುವಾದಕರು ಡಾ॥ ಕೆ. ಎಂ. ಕೃಷ್ಣರಾವ್

# ವೀರಶೈವ ಧರ್ಮ–ವಿಜಯನಗರೋತ್ತರ ಕಾಲ

ವಿಜಯ ನಗರ ಪೂರ್ವಕಾಲದಲ್ಲಿ ಸಂತರು ಮತ್ತು ವಿದ್ವಾಂಸರಿಂದ ಸ್ಥಾಪಿತವಾಗಿದ್ದ ವೀರಶೈವ ಧರ್ಮದ ಉದ್ದಾಮ ಪರಂಪರೆಯು ಅನಂತರ ಕೆಳದಿ, ಮೈಸೂರು, ಕೊಡಗು, ಸ್ವಾದಿ, ಬಿಳಗಿ, (ಶಿವಮೊಗ್ಗ ಜಿಲ್ಲೆ) ಮತ್ತಿತರ ರಾಜಕೀಯವಾಗಿ ಪ್ರಮುಖವಾಗಿದ್ದ ಕೇಂದ್ರಗಳಲ್ಲಿ ಹಂಚಿ ಹೋಯಿತು. ಪಾಳೆಯಗಾರರ ನೆಲೆಗಳಾಗಿದ್ದ ಈ ಕೇಂದ್ರಗಳು ಮೊದಲಿಗೆ ವಿಜಯನಗರಕ್ಕೆ ಅಧೀನವಾಗಿದ್ದುವು. ವಿಜಯನಗರ ಸಾಮ್ರಾಜ್ಯದ ಪತನಾನಂತರ ಸ್ವತಂತ್ರವಾದುವು; ಆದರೆ ಅದೇ ಸಾಂಸ್ಕೃತಿಕ ಮತ್ತು ರಾಜಕೀಯ ಪರಂಪರೆಗಳನ್ನು ಮುಂದುವರಿಸಿದುವು. ಮೇಲೆ ಹೇಳಿದ ಕೇಂದ್ರಗಳು ವೀರಶೈವರಿಗೆ ಸಹಾಯ ಮಾಡಿದುವು; ಅವರು ಅದಕ್ಕೆ ಪ್ರತಿಯಾಗಿ ಈ ಶಕ್ತಿಗಳ ಬಲವರ್ಧನೆಗೆ ಸಹಾಯ ಮಾಡಿದರು. ಕಲೆ, ಸಾಹಿತ್ಯ, ಸಂಗೀತ ಮೊದಲಾದುವುಗಳು ಕೂಡ ತತ್ವದರ್ಶನದೊಂದಿಗೆ ಅಭಿವೃದ್ಧಿ ಹೊಂದಿದವು.

ವೀರಶೈವ ಧರ್ಮದ ಧಾರ್ಮಿಕ ಆಚರಣೆಗಳು ಸಂಪ್ರದಾಯ ಹಾಗೂ ರಾಜಕೀಯ ಶಕ್ತಿಗಳಿಂದ ಪ್ರಭಾವಿತವಾದುವು. ಇಲ್ಲಿ ಎರಡು ವಿಭಿನ್ನ ಶಾಖೆಗಳನ್ನು ಗುರುತಿಸಬಹುದಾಗಿದೆ. ಇವುಗಳಲ್ಲಿ ಒಂದು, ವೈದಿಕ ಪಂಥದ ಧಾರ್ಮಿಕಾಚರಣೆಗಳು ಮತ್ತು ಶಾಸ್ತ್ರ ವಿಧಿಗಳನ್ನು ವಿರೋಧಿಸುತ್ತಿತ್ತು; ಮತ್ತೊಂದು, ವಚನಗಳ ಅರ್ಥದ ಸತ್ಯದಿಂದ ಕೂಡಿದುದಾಗಿತ್ತು. ಎರಡನೆಯ ಪಂಥವು ವೈದಿಕ ಧರ್ಮದ ಕೆಲವು ಮೂಲಭೂತ ನಂಬಿಕೆಗಳಿಗೆ ವಿರುದ್ಧವಾಗಿ, ದೌರ್ಭಾಗ್ಯವಶಾತ್, ಅದಕ್ಕೆ ಪ್ರತಿಸ್ಪರ್ಧಿಯೆಂಬಂತೆ ತೋರಿತು.

ಲಿಂಗಾಯತ ಧರ್ಮವು ಮೈಸೂರಿನ ಒಡೆಯರ ಹಾಗೂ ಉಮ್ಮತ್ತೂರಿನ ದೊರೆಗಳ ಕಾಲದಲ್ಲಿ ಕ್ರಿ.ಶ. 1399 ರಿಂದ 1640ರ ವರೆಗೆ ಮತ್ತು ಕ್ರಿ.ಶ. 1550 ರಿಂದ 1763ರ ವರೆಗೆ ಕೆಳದಿಯ ನಾಯಕರ ಕಾಲದಲ್ಲಿ ರಾಜ್ಯ-ಧರ್ಮವಾಗಿತ್ತು. ಮೈಸೂರು ದೇಶದ ಚಿತ್ರದುರ್ಗದಲ್ಲಿ ಅವರ ಪ್ರಮುಖ ಮಠವಿದೆ ಎಂದು ಇ.ಪಿ. ರೈಸ್ ಅವರು ತಮ್ಮ ಕನ್ನಡ ಸಾಹಿತ್ಯಚರಿತ್ರೆಯಲ್ಲಿ (ಪು. 51ರಲ್ಲಿ) ಹೇಳುತ್ತಾರೆ. ಶ್ರೀ ಕೆ. ಡಿ. ಸ್ವಾಮಿನಾಥನ್ ಹೇಳುತ್ತಾರೆ: "ವೀರಶೈವರು ರಾಜ್ಯದ ಪ್ರಭಾವಶಾಲಿ ವರ್ಗದವರು. ಮಧ್ಯಕಾಲದಲ್ಲಿ, ಆಡಳಿತಗಳು ಒಮ್ಮೊಮ್ಮೆ ನಾಗರಿಕರ ವೈಯಕ್ತಿಕ ಜೀವನದಲ್ಲಿ ಅತಿಯಾಗಿ ಪ್ರವೇಶ ಮಾಡುತ್ತಿದ್ದುವು. ಇಕ್ಕೇರಿಯ ದೊರೆಗಳು ಮಠಗಳನ್ನು ಹಿಡಿತದಲ್ಲಿಟ್ಟುಕೊಂಡು ಪೋಷಿಸುತ್ತಿದ್ದುದು ರಾಜ್ಯದಲ್ಲಿ ಸಾಮಾಜಿಕ ಭದ್ರತೆಯನ್ನು ನೆಲೆಗೊಳಿಸುವುದಕ್ಕಾಗಿಯೇ ಹೊರತು ತಮ್ಮ ಧಾರ್ಮಿಕ ಯಾಜಮಾನ್ಯವನ್ನು ತೋರುವುದಕ್ಕಲ್ಲ" (ಇಕ್ಕೇರಿಯ ನಾಯಕರು, ಪು. 165).

ಇವೆಲ್ಲವೂ ಇಕ್ಕೇರಿಯ ನಾಯಕರು ವೀರಶೈವ ಧರ್ಮದಲ್ಲಿ ವೀರನಿಷ್ಠೆಯುಳ್ಳವರೆಂಬುದನ್ನು ತೋರುತ್ತವೆ.

ಮೈಸೂರಿನ ಒಡೆಯರ ವಿಷಯದಲ್ಲಿ, ಕೆಲವೊಮ್ಮೆ ವೀರಶೈವರೆಂದೇ ಹೇಳಲ್ಪಡುವ ಚಿಕ್ಕದೇವ

ರಾಜ ಒಡೆಯರನ್ನಿಲ್ಲಿ ಹೆಸರಿಸಬಹುದು. ಮೈಸೂರಿನ ಅರಸು ಮನೆತನದವರು ಇಂದಿನ ವರೆಗೂ ವೀರಶೈವ ಧರ್ಮದ ನಿಷ್ಠೆಯುಳ್ಳವರು ಅಥವಾ ಪೋಷಕರು ಎಂದೇ ಹೆಸರಾಂತಿದ್ದಾರೆ.

20ನೆಯ ಶತಮಾನಕ್ಕೆ ಮೊದಲು ಸಂಸ್ಕೃತ ಅಥವಾ ಕನ್ನಡದ ಎಲ್ಲ ಧಾರ್ಮಿಕ ಬರೆವಣಿಗೆಗಳೂ ವಿಶೇಷವಾಗಿ ಪದ್ಯರೂಪದಲ್ಲೆ ಇದ್ದವು. ಸರ್ವಜ್ಞ, ಷಡಕ್ಷರಿ, ಸಪ್ಪಣ್ಣ ಮತ್ತು ಸಂಪಾದನಕಾರರು (ಅನುಭಾವದ ಒಲವಿನ ಬರೆಹಗಾರರು) ಇವರ ಹೆಸರುಗಳನ್ನಿಲ್ಲಿ ಹೇಳಬಹುದು. 20ನೆಯ ಶತಮಾನ ಉದಯವಾದ ಮೇಲೆ ವೀರಶೈವ ಧರ್ಮದ ಮೇಲೆ ಗಾತ್ರದಲ್ಲಿ ವಿಪುಲವಾದ ಗದ್ಯಸಾಹಿತ್ಯವು ದಕ್ಷಿಣ ಭಾರತದ ಭಾಷೆಗಳಲ್ಲಿ ರಚಿತವಾಯಿತು. ತನ್ನ ಸರಳವಾದ ಆದರೆ ಶಕ್ತಿಯುತವಾದ ತ್ರಿಪದಿಗಳ ಮೂಲಕ ಉಂಟುಮಾಡಿದ ಸತ್ವಯುತವಾದ ಸುಧಾರಣೆಗಳಿಂದ ಮತ್ತು ರಾಷ್ಟ್ರದಲ್ಲಿ ತಂದ ಎಚ್ಚರದಿಂದ ಸರ್ವಜ್ಞನು ತನ್ನ ಹೆಸರನ್ನು ತಾನೆ ಸಮರ್ಥಿಸಿಕೊಂಡನು. ಸರ್ವಜ್ಞ, ಮೊಗ್ಗೆಯ ಮಾಯಿದೇವ, ನಿಜಗುಣ, ಮತ್ತಿತರರು, ಮುಪ್ಪಿನ ಷಡಕ್ಷರಿ— ಈ ಸಂತ ಗಾಯಕರು ತೆಲುಗಿನ ವೇಮನ, ಮರಾಠಿ ಭಾಷೆಯ ನಾಮದೇವ ಮತ್ತು ತುಕಾರಾಮ್ ಮತ್ತು ತಮಿಳಿನ ನಾಯನ್ಮಾರುಗಳನ್ನು ನೆನಪಿಗೆ ತರುತ್ತಾರೆ.

16 ಮತ್ತು 20 ನೆ ಶತಮಾನಗಳ ಮಧ್ಯಕಾಲದಲ್ಲಿ ಸೃಷ್ಟಿಯಾದ ವಿಪುಲವಾದ ವೀರಶೈವ ಸಾಹಿತ್ಯವು ಪುರಾಣ, ಚಂಪೂಕೃತಿ, ವಚನ, ಷಟ್ಪದಿ–ಇತ್ಯಾದಿ ಕಾವ್ಯ, ಶತಕ, ರಗಳೆ, ಟೀಕೆ, ಹಾಡು, ಸ್ತೋತ್ರ ಮತ್ತು ಚರಿತೆ ಮೊದಲಾದವುಗಳನ್ನೊಳಗೊಂಡಿದೆ. ಹೆಚ್ಚು ಪುನರುಕ್ತಿಗಳಿಂದ ಕೂಡಿದ್ದರೂ ಅವುಗಳೆಲ್ಲ ವೀರಶೈವ ಧರ್ಮದ ಭವ್ಯವಾದ ನೈತಿಕ ಹಾಗೂ ಧಾರ್ಮಿಕ ಮೌಲ್ಯಗಳನ್ನು ರೂಪಿಸುವ ಮತ್ತು ಪಾಲನೆ ಮಾಡುವ ಕಾರ್ಯ ಮಾಡುತ್ತವೆ.

ವಿಜಯನಗರದ ಆಳಿಕೆಯ ತರುವಾಯ ಪೂರ್ವದಲ್ಲಿದ್ದಂತಹ ಯುಗಪ್ರವರ್ತಕವಾದ ಅಥವಾ ಅದ್ಭುತಕರವಾದ ಲಕ್ಷಣಗಳನ್ನು ಕಾಣಲಾಗದಿದ್ದರೂ ಅದು ಜ್ಞಾನ ಮತ್ತು ಸಂಸ್ಕೃತಿಯ ಬೆಳಕನ್ನು ಇನ್ನೂ ಹೊಳಪಾಗಿ ಪ್ರಜ್ವಲಿಸುವಂತೆ ಉಳಿಸಿಕೊಂಡಿತು. ಅಲ್ಲದೆ ಈ ಗುರಿಯ ಸಾಧನೆಯಲ್ಲಿ ಕವಿ ಹಾಗೂ ತತ್ವಜ್ಞಾನಿಗಳ ತಂಡ, ಮಠ ಮತ್ತು ಇತರ ಸಂಸ್ಥೆಗಳು ಅಮೂಲ್ಯ ಕಾಣಿಕೆಯನ್ನು ನೀಡಿವೆ.

ಮೂಲಲೇಖಕರು : ಡಾ॥ ಜಿ. ಮರುಳಸಿದ್ದಯ್ಯ
ಅನುವಾದಕರು : ಶ್ರೀ ಜಿ. ಎಸ್. ಸಿದ್ದಲಿಂಗಯ್ಯ

# ಜೈನ ಸಂಸ್ಕೃತಿ—ವಿಜಯನಗರೋತ್ತರ ಕಾಲ

ಗಂಗರು, ಚಾಳುಕ್ಯರು, ಚೋಳರು, ಮತ್ತು ರಾಷ್ಟ್ರಕೂಟರಂಥ ಕೆಲವಾರು ದಕ್ಷಿಣ ಭಾರತದ ಅರಸು ಮನೆತನಗಳ ಪೋಷಣೆಯಲ್ಲಿ ಜೈನ ಧರ್ಮವು ಕ್ರಿ.ಶ. 16 ನೆ ಶತಮಾನದ ವರೆಗೂ ಕರ್ಣಾಟಕದಲ್ಲಿ ಬಾಳಿತು. ಆದರೆ ಹಿಂದೂ ಧರ್ಮದ ಪುನರುಜ್ಜೀವನದ ಕಾರಣವಾಗಿ ಇದು ರಾಜರಿಂದ ಪೋಷಿತವಾದ ಧರ್ಮವೆಂಬ ಹೆಮ್ಮೆಯನ್ನು ಕ್ರಮಕ್ರಮವಾಗಿ ಕಳೆದುಕೊಂಡಿತು. ದಕ್ಷಿಣ ಪ್ರಸ್ಥಭೂಮಿಯಲ್ಲಿ ಕಳಚುರ್ಯರು ಜೈನ ಧರ್ಮದ ಅಂತಿಮ ರಾಜಪೋಷಕರಾಗಿದ್ದರು. ಅವರಾದ ಮೇಲೆ ಅದು ರಾಜಪೋಷಣೆಯನ್ನು ಕಳೆದು ಕೊಂಡಿತು. ಮುಂದೆ ಕೆಲವು ಜೈನರು ಮತಾಂತರ ಹೊಂದಿದ್ದೇ ಅಲ್ಲದೆ, ಅವರ ದೇವಾಲಯಗಳು ಪರಿವರ್ತಿಸಲ್ಪಟ್ಟವು ಮತ್ತು ದೇವಾಲಯದ ಮೂರ್ತಿಗಳು ಬದಲಾದವು. ಕೆಲವು ಸಂದರ್ಭದಲ್ಲಿ ಮುಸಲ್ಮಾನರು ಕೂಡ ಈ ಕಾರ್ಯಕ್ರಮದಲ್ಲಿ ಪಾತ್ರವಹಿಸಿದರು.

ಜೈನಧರ್ಮವು ಮೂಲತಃ ಯಾವ ಕಡೆಯಿಂದ ಕರ್ಣಾಟಕದಲ್ಲೆಲ್ಲಾ ವ್ಯಾಪಿಸಿಕೊಂಡಿತ್ತೊ ಅದೇ (ಹಳೆಯ) ಮೈಸೂರು ರಾಜ್ಯಕ್ಕೆ ಹಿಮ್ಮೆಟ್ಟಿತು.

ವಿಜಯನಗರದ ಆಳಿಕೆಯ ಕಾಲದಲ್ಲಿ ಆಳುವವರು ಹಿಂದುಗಳಾಗಿದ್ದರೂ ಜೈನಧರ್ಮ ಮತ್ತು ಸಂಸ್ಕೃತಿಗಳು ಬೆಳೆದವು. ಒಂದನೆಯ ಬುಕ್ಕ, ಎರಡನೆಯ ಬುಕ್ಕ, ಹರಿಹರ, ದೇವರಾಯ, ವಿರೂಪಾಕ್ಷ ಮತ್ತು ಕೃಷ್ಣದೇವರಾಯ—ಇವರೆಲ್ಲರೂ ಜೈನಧರ್ಮದ ಮಹಾ ಪೋಷಕರಾಗಿದ್ದರು. ಉದಾಹರಣೆಗೆ ಕೃಷ್ಣದೇವರಾಯನ (1509–1529) ಈಗ ಮದ್ರಾಸ್ ರಾಜ್ಯದಲ್ಲಿರುವ ಚೆಂಗ್ಲೆಪುಟ್ (ಚಿಂಗಲ್ ಪೇಟ್) ಜಿಲ್ಲೆಯ ತ್ರೈಲೋಕ್ಯನಾಥ ಜಿನಾಲಯಕ್ಕೆ ದತ್ತಿಯ ರೂಪದಲ್ಲಿ ದಾನಗಳನ್ನು ಕೊಟ್ಟನು.

ರಕ್ಕಸ ತಂಗಡಿಯ ಕಾಳಗದಲ್ಲಿ ವಿಜಯನಗರದ ಪತನವಾದ ಮೇಲೆ ಇಕ್ಕೇರಿ ಮತ್ತು ಬಿದನೂರಿನ ನಾಯಕರು ಜೈನಧರ್ಮದ ಮೇಲೆ ವಿದ್ವೇಷ ಮನೋವೃತ್ತಿಯನ್ನು ತಾಳಿದರು. ನಾಯಕರ ದೊರೆಗಳು ಬಾರಕೂರು ಮತ್ತು ಭಟ್ಕಳಗಳ ಜೈನ ದೊರೆಗಳನ್ನು ಸೋಲಿಸಿದರು. ಬಾರಕೂರನ್ನು ಹಾಳುಗೆಡವ ಲಾಯಿತು. ಅಲ್ಲದೆ ಅಮೂಲ್ಯ ಜೈನ ಸ್ಮಾರಕಗಳನ್ನು ನಾಶಪಡಿಸಲಾಯಿತು. ಇಕ್ಕೇರಿ ಮತ್ತು ಬಿದನೂರಿನ ನಾಯಕರ ಪೆಟ್ಟುಗಳ ಪರಿಣಾಮವಾಗಿ ಕಾರ್ಕಳದ ಭೈರರಸರ ರಾಜವಂಶವು ಮರೆಯಾಯಿತು. ಇಷ್ಟಾದರೂ ಜೈನಧರ್ಮವು ಮೈಸೂರಿನ ದೊರೆಗಳಿಂದ ಪೋಷಣೆಯನ್ನು ಪಡೆಯುತ್ತಲೇ ಹೋಯಿತು.

ಹದಿನಾರನೆ ಶತಮಾನದಲ್ಲಿ ಕನ್ನಡ ಸಾಹಿತ್ಯಕ್ಕೆ ಜೈನರ ಕೊಡುಗೆಯೇನೂ ಕಡಮೆಯಾವದ್ದಲ್ಲ. ಕೆಲಮಟ್ಟಿಗೆ ಈ ಅವಧಿಯಲ್ಲಿ ಜೈನ ಕಲೆ ಮತ್ತು ಶಿಲ್ಪಗಳು ಕೂಡ ಮುಂದುವರಿದುವು. ಗಂಗವಂಶದ ಚಾವುಂಡರಾಯನ ಪೀಳಿಗೆಯವನಾದ ತಿಮ್ಮರಾಜನಿಂದ ವೇಣೂರಿನಲ್ಲಿ ಗೋಮಟ ವಿಗ್ರಹವು ನಿಲ್ಲಿಸಲ್ಪಟ್ಟದ್ದು ಕ್ರಿ. ಶ. 1604ರಲ್ಲಿ. ಆದರೆ ಜೈನಕಲೆಯು ಹಿಂದಿನಂತೆಯೆ ಧಾರ್ಮಿಕೋದ್ದೇಶಗಳಿಂದ ಪ್ರಭಾವಿತವಾಗಿದ್ದು ತನ್ನ ಧರ್ಮದ ಸಂತರ ಜೀವನವನ್ನು ಚಿತ್ರಿಸಿತೇ ಹೊರತು, ತನ್ನ ಧರ್ಮದ ಇತರ ವೀರರ ಜೀವನವನ್ನಲ್ಲ. ಆ ಕಾಲದ ಜೈನ ರಾಜರುಗಳಲ್ಲಿ ಶೌರ್ಯಕ್ಕೇನೂ ಕೊರತೆಯಿರಲಿಲ್ಲ. ಮಂಗಳೂರಿನ

ಸಮೀಪದ ಮಂಡಲವನ್ನಾಳುತ್ತಿದ್ದ ಮಹಿಳೆ ಅಬ್ಬಕ್ಕನು ಪಾಶ್ಚಾತ್ಯರ ದಾಳಿಯನ್ನು ನಿರೋಧಿಸಿದ ಭಾರತದ ಅರಸುಗಳಲ್ಲಿ ಮೊದಲಿನವಳಾಗಿದ್ದಾಳೆ. 16ನೆಯ ಶತಮಾನದಲ್ಲಿ ಕಡೆಯ ಪಕ್ಷ ಎರಡು ಸಲ ಆಕೆಯು ದಕ್ಷಿಣ ಕನ್ನಡದ ಮೇಲಿನ ಪೋರ್ಚುಗೀಸರ ದಾಳಿಯನ್ನು ಹಿಮ್ಮೆಟ್ಟಿಸಿದಳು.

ಬ್ರಿಟಿಷರ ಆಳಿಕೆಯ ಅವಧಿಯಲ್ಲಿ, ಕ್ರಿ.ಶ. 1857ರ ವರೆಗೆ ಜೈನರ ಪ್ರಭಾವವು ಇಳಿಮುಖ ವಾಯಿತು. ಜೈನ ದೊರೆಗಳು ಸಣ್ಣ ಮೊತ್ತದ ಜೀವನಾಂಶಗಳನ್ನು ಪಡೆದು ತಮ್ಮ ಮಂಡಲಗಳ ಮೇಲಿನ ಒಡೆತನವನ್ನು ಕಳೆದುಕೊಂಡರು. ಶಿಲ್ಪ ಮತ್ತು ಕಲೆಯ ಕೃತಿಗಳಿಗಾಗಿ ಹಿಂದಿನಂತೆ ವೆಚ್ಚ ಮಾಡುವ ಶಕ್ತಿ ಜೈನರಿಗಿಲ್ಲವಾಯಿತು. ಹತ್ತೊಂಬತ್ತನೆಯ ಶತಮಾನದಲ್ಲಿ ಜೈನ ಬರಹಗಾರರ ಸೃಷ್ಟ್ಯಾತ್ಮಕ ಶಕ್ತಿಯು ತೀರ ಕೆಳಮಟ್ಟಕ್ಕೆ ಇಳಿದಂತೆ ಕಾಣುತ್ತದೆ.

ಮೂಲಲೇಖಕರು : ಶ್ರೀ ನೇಮಿರಾಜ ಮಲ್ಲ
ಅನುವಾದಕರು : ಶ್ರೀ ಜಿ. ಎಸ್. ಸಿದ್ದಲಿಂಗಯ್ಯ



# ಕರ್ಣಾಟಕದಲ್ಲಿ ಇಸ್ಲಾಮ್ ಧರ್ಮದ ಪಾತ್ರ

14 ನೆಯ ಶತಮಾನದ ಮಧ್ಯಭಾಗದಿಂದಲೆ ಉತ್ತರ ಕರ್ಣಾಟಕದ ಬಹುಭಾಗವು ಬಹಮನಿ ಸುಲ್ತಾನರು, ಬಿಜಾಪುರದ ಸುಲ್ತಾನರು ಮತ್ತು ಅನಂತರದಲ್ಲಿ ಮೊಗಲರು ಅಥವಾ ಗೋಲ್ಕೊಂಡದ ಅವರ ಪ್ರತಿನಿಧಿಗಳ ಮೂಲಕ ನೇರವಾಗಿ ಮುಸಲ್ಮಾನ ಆಳಿಕೆಗೆ ಒಳಪಟ್ಟದ್ದನ್ನು ನಾವಾಗಲೇ ನೋಡಿದ್ದೇವೆ. 18 ನೆ ಶತಮಾನದಲ್ಲಿ ಹೈದರ್ ಮತ್ತು ಟಿಪ್ಪುಗಳು ಅಭ್ಯುದಯಕ್ಕೆ ಬಂದ ಮೇಲೆ ದಕ್ಷಿಣ ಕರ್ಣಾಟಕವು ಹಳೆಯ .ಮೈಸೂರು ರಾಜ್ಯವು ಸೇರಿ, ಸುಮಾರು ನಾಲ್ಕು ದಶಕಗಳ ವರೆಗೂ ಮುಸಲ್ಮಾನರ ಆಳಿಕೆ ಯಲ್ಲಿತ್ತು. ಹೀಗೆ ಮುಸಲ್ಮಾನರು ಕರ್ಣಾಟಕದಲ್ಲಿ ಅಲ್ಪಸಂಖ್ಯಾತರೇ ಆಗಿದ್ದರೂ ಕರ್ಣಾಟಕದ ಬಹಳ ಪ್ರದೇಶಗಳ ಮೇಲೆ ಮಧ್ಯಂತರ ಕಾಲದಲ್ಲಿ ವಿಶೇಷವಾದ ರಾಜಕೀಯ ಅಧಿಕಾರವನ್ನು ಪಡೆದಿದ್ದರು. ಕರ್ಣಾಟಕದ ಇತಿಹಾಸವನ್ನು ಪುನರಾಲೋಕನ ಮಾಡುವ ಉದ್ದೇಶದಿಂದ ನೋಡಿದರೆ, ಇದು, ಬ್ರಿಟಿಷ ರಿಂದ ಶ್ರೀರಂಗಪಟ್ಟಣದ ವಿಜಯ ಹಾಗೂ ಟಿಪ್ಪುವಿನ ಮರಣವಾದ ಮೇಲೆ—18 ನೆಯ ಶತಮಾನದ ಕೊನೆಗಾಲಕ್ಕೆ, ಮುಗಿದು ಹೋಯಿತೆಂದು ಭಾವಿಸಬಹುದು.

ಕರ್ಣಾಟಕದಲ್ಲಿ ಇಸ್ಲಾಮ್ ಧರ್ಮ ವಹಿಸಿದ ಪಾತ್ರವನ್ನೂ ಜನರ ಭಾಷೆ ಹಾಗು ಸಂಸ್ಕೃತಿಗಳ ಮೇಲೆ ಅದು ಬೀರಿದ ಪ್ರಭಾವವನ್ನೂ ಈಗ ನಾವು ಈ ವಿಭಾಗದಲ್ಲಿ ಗಮನಿಸೋಣ.

ದಕ್ಷಿಣ ಭಾರತದೊಡನೆ ಇಸ್ಲಾಮಿನ ಸಂಪರ್ಕವು 8 ನೆಯ ಶತಮಾನದಲ್ಲಿ ರಾಷ್ಟ್ರಕೂಟರ ಕಾಲದಲ್ಲಿ ಪ್ರಾರಂಭವಾಯಿತು. ಅದೊಂದು ತಾತ್ಕಾಲಿಕ ಘಟ್ಟವೇ ಆಗಿದ್ದರೂ ಕರ್ಣಾಟಕದ ಅನೇಕ ಭಾಗಗಳು ದೆಹಲಿ ಸುಲ್ತಾನರುಗಳ ಕಾಲದಲ್ಲಿ ಮುಸಲ್ಮಾನರ ಸೈನಿಕ ಆಕ್ರಮಣಕ್ಕೆ ಒಳಪಟ್ಟವು. 1347 ರಲ್ಲಿ ಗುಲ್ಬರ್ಗವು ರಾಜಧಾನಿಯಾಗಿ ಬಹಮನಿ ರಾಜ್ಯವು ಉದಯಿಸಿದ ಅನಂತರವೇ ನಿರಂತರವಾದ ಹಾಗೂ ಪರಿಣಾಮ ಕಾರಿಯಾದ ರೀತಿಯಲ್ಲಿ ಇಸ್ಲಾಮ್ ಧರ್ಮದ ಸಂಪರ್ಕವು ಕರ್ಣಾಟಕದೊಂದಿಗಾಯಿತು.

ಸುಮಾರು 200 ವರ್ಷಗಳ ಬಹಮನಿ ರಾಜರ ಆಳಿಕೆಯಲ್ಲಿ ಉತ್ತರ ಭಾರತದವರಾದ ಮುಸ್ಲಿಮರು ಮತ್ತು ಪಶ್ಚಿಮ ಭಾಗದ ಹಿಂದಿಯನ್ನಾಡುವ ಹಿಂದುಗಳು, ಪರ್ಶಿಯನರು, ಟರ್ಕಿಗಳು, ಸಾಕಷ್ಟು ಪ್ರಮಾಣದಲ್ಲಿಯೇ ಕರ್ಣಾಟಕಕ್ಕೆ ಬಂದು ನೆಲೆಯೂರಿದರು. ಕಾಲಕ್ರಮೇಣ ಉತ್ತರ ಭಾರತದವರು, ಆಫ್ರಿಕಾದ ಸಿದ್ದಿಗಳು ಮತ್ತು ಸ್ಥಳದಲ್ಲೇ ಮತಾಂತರ ಹೊಂದಿದವರು ಒಟ್ಟಿಗೆ ಸೇರಿ ಪ್ರತ್ಯೇಕವಾದ ರಾಜಕೀಯ ಮತ್ತು ಸಾಂಸ್ಕೃತಿಕ ವರ್ಗವನ್ನು ರೂಪಿಸಿಕೊಂಡರು. ಅವರನ್ನೆಲ್ಲ ವಿದೇಶಿಯರಾದ ಪರ್ಶಿಯನರು, ಟರ್ಕಿಗಳು ಮತ್ತು ಅರಬರಿಂದ ಭಿನ್ನರಾದ ದಖ್ಖನಿಗಳೆಂದು ಕರೆಯುತ್ತಾರೆ. ಅವರ ಭಾಷೆ ದಖ್ಖನಿ—ಪಾರ್ಸಿ, ಅರಬಿ, ಗುಜರಾತಿ ಮತ್ತು ಮರಾಠಿ ಭಾಷೆಗಳ ಪ್ರಭಾವದಿಂದ ರಚಿತವಾದ ರೂಪವೊಂದನ್ನು ಪಡೆದು ಪ್ರಾದೇಶಿಕ ಕನ್ನಡ ಪದಗಳನ್ನು ಹೀರಿಕೊಳ್ಳುತ್ತಿದ್ದ ಪಶ್ಚಿಮ ಹಿಂದಿ ಅದಾಗಿತ್ತು. ಉತ್ತರ ಭಾರತದ ಉರ್ದುಭಾಷೆ ಮತ್ತು ಸಾಹಿತ್ಯಗಳು ಅನಂತರದಲ್ಲಿ ಬೆಳೆದುವು. ಬಹಮನಿ ರಾಜ್ಯದ ಉತ್ತರಾಧಿಕಾರಿಗಳು, ಬಿಜಾಪುರದ (ಕ್ರಿ.ಶ. 1490-1686) ಆದಿಲ್‌ಶಾಹಿಗಳು ಮತ್ತು ಗೊಲ್ಕೊಂಡದ ಕುತುಬ್‌ಶಹಗಳು (1518–1687)—ಇವರ ಪೋಷಕತ್ವದಲ್ಲಿ ದಖ್ಖನಿ ಭಾಷೆ ಮತ್ತು ಸಾಹಿತ್ಯಗಳು ಅಭಿವೃದ್ಧಿಯಾದವು, ಉನ್ನತ ಸ್ಥಾನವನ್ನು ಗಳಿಸಿದವು. ಮಾಲಿಕ್ ಖುಷ್‌ನುದ್, ರುಸ್ತುಮಿ, ನುಸ್ರಾತಿ,

ಶಿವ, ಬಿಜಾಪುರದ ಮಿರಾನ್ ಹಾಕ್ಷಿಮಿಝಿ ಮತ್ತು ಮಹಮ್ಮದ್ ಕುಲಿ ಕುತುಬ್ ಶಹ, ವಝಿ, ಗವ್ವಾಸಿ ಮತ್ತು ಗೊಲ್ಕೊಂಡದ ಇಬ್ನ್-ಇ-ನಿಶಾತಿ ಇವರಂಥ ಮಹೋನ್ನತ ದಖ್ಖನಿ ಲೇಖಕರು ಆದಿಲ್‌ಶಾಹಿ ಮತ್ತು ಕುತುಬ್‌ಶಾಹಿ ರಾಜವಂಶಗಳ ಪೋಷಣೆಯಲ್ಲಿ ಬಾಳಿದರು. ಔರಂಗಜೇಬನು 1686 ಮತ್ತು 1687 ರಲ್ಲಿ ಈ ಸುಲ್ತಾನೀ ಆಡಳಿತಗಳನ್ನು ನಾಶಮಾಡಿ, ಹೈದರಾಬಾದ್ ಸಂಸ್ಥಾನವನ್ನು ರೂಪಿಸಿದ ಮೇಲೆ ಈ ದಖ್ಖನಿ ಸಾಹಿತ್ಯವು ತನ್ನ ಪೋಷಣೆಯನ್ನು ಕಳೆದುಕೊಂಡಿತು. ದಖ್ಖನಿ ಭಾಷೆಯು ಈಗಿರುವಂತೆಯೇ ಕರ್ನಾಟಕದ ಸಾಮಾನ್ಯ ಆಡುಮಾತಾಗಿ ಮುಂದುವರಿದರೂ ಸ್ವಲ್ಪ ಕಾಲಾನಂತರದಲ್ಲಿ ಉರ್ದು, ಸಾಹಿತ್ಯ ಭಾಷೆಯಾಗಿ ಅದರ ಸ್ಥಾನವನ್ನು ಆಕ್ರಮಿಸಿತು.

ಕರ್ನಾಟಕ ಪ್ರದೇಶಕ್ಕೆ ಪರ್ಶಿಯಾ ಮತ್ತು ತುರ್ಕಿಸ್ಥಾನಗಳಿಂದ ವಲಸೆ ಬಂದವರನ್ನು ಬಹಮನಿ ಸುಲ್ತಾನರೂ ಆದಿಲ್ ಶಾಹಿ ಸುಲ್ತಾನರುಗಳೂ ತೆರೆದ ತೋಳುಗಳಿಂದ ಸ್ವಾಗತಿಸಿದರು. ಬಹಮನಿಗಳ ಕಲೆಯು ತನ್ನ ಸ್ಫೂರ್ತಿಗೆ ಸಮಕಾಲೀನ ಪರ್ಶಿಯದ ಕಡೆಗೆ ಎಷ್ಟು ತಿರುಗಿತೆಂದರೆ, ಅದನ್ನು ಪರ್ಶಿಯನ್ ಕಲೆಯ ಅವಿಭಾಜ್ಯ ವಸಾಹತು ಶಾಖೆ ಎಂದು ಭಾವಿಸಬಹುದಾಗಿದೆ. ಬಹಮನಿಗಳ ವಾಸ್ತುಶಿಲ್ಪ (Architecture) ಹೆಚ್ಚು ಕಡಮೆ ಪೂರ್ಣವಾಗಿ ಪರ್ಶಿಯನ್ ಶೈಲಿಯದಾಗಿದೆ. ಈ ರಾಜವಂಶದ ಸ್ಥಾಪಕನಾದ ಹಸನ್ ಜಫರ್ ಖಾನನ ಸಣ್ಣಗೋರಿಯೊಂದು ಮಾತ್ರ ಇಂದಿಗೂ ತೊಗಲಖ್ ಸಂಪ್ರದಾಯಕ್ಕೆ ಸೇರಿದ್ದಾಗಿದೆ. ತರುವಾಯದ ಬೀದರಿನ ಸಮೀಪದ ಗುಲ್ಬರ್ಗ ಮತ್ತು ಅಶ್ತೂರಿನ ಎಲ್ಲ ರಾಜವಂಶದವರ ಹಾಗೂ ಶ್ರೀಮಂತ ವರ್ಗದವರ ಗೋರಿಗಳೂ 14ನೆ ಶತಮಾನದ ಉತ್ತರ ಭಾಗದ ಪರ್ಶಿಯನ್ ಮಾದರಿಯಲ್ಲಿವೆ. ಗುಲ್ಬರ್ಗದ ಜಮಿ ಮಸೀದಿಯು (ಕ್ರಿ. ಶ. 1367) ಇಸ್ಫಹಾನಿನ ಮಸ್‌ಜಿದ್-ಇ-ಜಮಿಯ ಕಾಲದಷ್ಟು ಹಿಂದಕ್ಕೆ ಹೋಗುತ್ತದೆ; ಮತ್ತು ತಿಮುರಿಡನ ಕಾಲದ ಮದ್‌ರಸಾ ಅಥವಾ ಕಾಲೇಜ್ ಬೀದರಿನಲ್ಲಿರುವ ಮಹಮೂದ್ ಗವಾನನ (ಕ್ರಿ.ಶ. 1471) ಕಾಲದವುಗಳಿಂದ ಪ್ರತಿನಿಧಿಸಲ್ಪಟ್ಟಿವೆ. ಬೀದರಿನಲ್ಲಿರುವ ಪಾಳು ಬಿದ್ದ ಅರಮನೆಗಳಲ್ಲಿ ತಮ್ಮ ವಿಸ್ತಾರವಾದ ಓಲಗ ಶಾಲೆ (ದರ್ಬಾರ್ ಹಾಲು) ಗಳಿಂದ ಕೂಡಿದ ಪರ್ಶಿಯನ್ ಅರಮನೆಗಳ ಶಿಲ್ಪ ಉಳಿದುಕೊಂಡಿದೆ. 16ನೆ ಶತಮಾನದ ಪೂರ್ವಭಾಗದಲ್ಲಿ ರಚಿತವಾದ ವಿಜಯನಗರದ ಉದ್ಯಾನದರ ಮನೆಯಾದ ಕಮಲ ಮಹಲಿನಲ್ಲಿರುವಂತೆ ಪರ್ಶಿಯನ್ ವಾಸ್ತು ಶಿಲ್ಪವು ವಿಜಯನಗರದ ಜಾತ್ಯತೀತ ವಾಸ್ತು ಶಿಲ್ಪದ ಮೇಲೆ ಪ್ರಭಾವ ಬೀರಿದೆ ಮತ್ತು ಈ ಅರಮನೆಯು ಪರ್ಶಿಯನ್ ಮಾದರಿಯ ಕೋನಗಳು ಮತ್ತು ಪರ್ಣಾವೃತ ಕಮಾನುಗಳನ್ನು ಒಳಗೊಂಡಿದೆ. ಚಂದ್ರಗಿರಿ (ಕ್ರಿ.ಶ. 17ನೆ ಶತಮಾನ) ಯಲ್ಲಿರುವ ಕೋಟೆಯೊಳಗಿನ ದೊಡ್ಡ ಅರಮನೆಯು ಇವೇ ಲಕ್ಷಣಗಳನ್ನೊಳಗೊಂಡಿದೆ.

ಬಹಮನಿಗಳ ಪತನಾನಂತರ, ಆದಿಲ್‌ಶಾಹಿಗಳು ಹೆಚ್ಚು ಪರ್ಶಿಯನ್ ವಲಸೆಗಾರರನ್ನು, ವಿಶೇಷವಾಗಿ ಶಿರಾಜ್ ಮತ್ತು ಇಸ್ಫಹಾನ್‌ಗಳಿಂದ, 16ನೆ ಶತಮಾನದ ಪೂರ್ವಭಾಗದಲ್ಲಿ, ಆಕರ್ಷಿಸಿದರು. ಇದೇ ಶತಮಾನದಲ್ಲಿ ರಕ್ಕಸತಂಗಡಿಯ ಕಾಳಗವಾದ ಮೇಲೆ (1565) ವಿಜಯನಗರ ಸಾಮ್ರಾಜ್ಯವೆಲ್ಲ ಕೇವಲ ವಿನಾಶಗೊಳಿಸಲ್ಪಟ್ಟಿತು. ಇದಾದ ಮೇಲೆ ಕಲಾಶೈಲಿಯಲ್ಲಿ ಒಂದು ಕ್ರಾಂತಿಯೇ ಆರಂಭವಾಯಿತು. ವಿಜಯನಗರದ ನಿರುದ್ಯೋಗಿ ಕಲಾವಿದರು, ಗಾರೆಯವರು, ಗಾಯಕರು ಮತ್ತು ನರ್ತಕರು ಉತ್ತರದ ಕಡೆಗೆ ಸಾಮೂಹಿಕವಾಗಿ ದೇಶಾಂತರ ಮಾಡಿದರು. ಬಿಜಾಪುರದಲ್ಲಿ ಪರ್ಶಿಯನ್ ಮತ್ತು ತುರ್ಕಿಯ ಮಾದರಿಗಳಿಗೆ ಒಂದು ನೂತನ ವ್ಯಾಖ್ಯಾನವನ್ನೆ ರೂಪಿಸಿದರು. ಉದಾಹರಣೆಗೆ ಪರ್ಶಿಯನ್ ಗೋಪುರವು ಮಹತ್ತರವಾದ ಬದಲಾವಣೆಗೆ ಗುರಿಯಾಯಿತು. ಒಂದು ಬಗೆಯಲ್ಲಿ ಅರ್ಧ ಗೋಲಾಕಾರವೂ ಒಂದು ಸ್ವಲ್ಪ ಚೂಪಾದುದೂ ಆಗಿರುವ ಬದಲು ಬಿಜಾಪುರದ ಗೋಲಗುಮ್ಮಟದ ಮಹಾ ಗೋಪುರದಲ್ಲಿರುವಂತೆ ಅದು ಕಮಲದ ಎಸಳುಗಳ

ಮಾಲೆಯಿಂದ ಹಿಗ್ಗುತ್ತ ಹೋಗುವ ಒಂದು ಮಹತ್ತಾದ ಗುಳ್ಳೆಯಾಯಿತು ಮತ್ತು ಬೋರಲು ಹಾಕಿದ ಕಮಲದ ಹೂವಿನಿಂದ ಕಿರೀಟಿತವಾಯಿತು.

ವರ್ಣಶಿಲ್ಪದಲ್ಲಿ ಬಿಜಾಪುರವು ಷಾ ಅಬ್ಬಾಸ್ ಮಹಾಶಯನ ಪೋಷಣೆಯಲ್ಲಿ ಪರ್ಶಿಯದಲ್ಲಿ ಆಗ ಬೆಳೆಯುತ್ತಿದ್ದ, ಪರ್ಶಿಯನ್ ಪಂಥವನ್ನೇ ಅನುಸರಿಸಿತು. ತನಗಾಗಿಯೇ ಪ್ರಸಿದ್ಧನಾದ ಎರಡನೆಯ ಮಹಮ್ಮದ್ ಖಲೀಲನಿಂದ, ಸಿದ್ಧಪಡಿಸಲ್ಪಟ್ಟ ಎರಡನೆಯ ಇಬ್ರಾಹಿಮ್ ಆದಿಲ್‌ಶಾಹಿಯ ಕಾವ್ಯರೂಪ ದಲ್ಲಿರುವ ಹಿಂದೀ ಕೃತಿ ನೌರಸ್‌ನಾಮಾ ಪ್ರತಿಯು ಆ ಕಾಲದ ಕೆಲವು ಕಲಾತ್ಮಕ ವೈಚಿತ್ರ್ಯಗಳನ್ನೊಳ ಗೊಂಡಿದೆ. ಪ್ರತಿಪುಟದ ಹಿನ್ನೆಲೆಗೂ ಉಯ್ಯಾಲೆಯಾಡುತ್ತಿರುವ ಕೊಂಬೆಗಳಿಂದ ಕೂಡಿರುವ ಕೋಮಲ ವಾದ ಹೂಬಿಟ್ಟ ಮರಗಳ ಬಂಗಾರದ ಚಿತ್ರ ಬಿಡಿಸಲಾಗಿದೆ ಮತ್ತು ಇವುಗಳ ಮಧ್ಯೆ ವೇಗವಾಗಿ ಹಗುರವಾಗಿ ಮತ್ತು ಕೋಮಲವಾಗಿ ಹಾರುತ್ತಿರುವ ಎರಡು ಹಕ್ಕಿಗಳಿವೆ.

ಪರ್ಶಿಯನ್ ವಲಸೆಗಾರರು ಡಮಾಸ್ಕನಿಂಗ್, ದಂತಪ್ರತಿಬಂಧ ಮತ್ತು ಬಣ್ಣಹಾಕುವ ಕೆಲಸಗಳ ಔದ್ಯೋಗಿಕ ಕಲೆಗಳನ್ನು ಕರ್ಣಾಟಕ ಪ್ರದೇಶದಲ್ಲಿ ಬಳಕೆಗೆ ತಂದರು. ಬಹಮನಿಗಳ ಆಳಿಕೆಯ ಕೊನೆಯ ದಿನಗಳಲ್ಲಿ ಬಳಕೆಗೆ ಬಂದ 'ಡಮಾಸ್ಕನಿಂಗ್' ಎಂಬುದು ಒಂದು ಲೋಹದ ಮೇಲೆ ಮತ್ತೊಂದು ಲೋಹವನ್ನು ತಂತಿಯ ರೂಪದಲ್ಲಿ ಹತ್ತಿಸಿ ಬೇಕಾದ ರೀತಿಯಲ್ಲಿ ಒಳಗೇ ಕತ್ತರಿಸುತ್ತ ಮತ್ತು ಸುತ್ತಿಗೆ ಯಿಂದ ಬಡಿಯುತ್ತ ಅಲಂಕಾರಗೊಳಿಸಬೇಕೆಂದಿರುವ ಲೋಹದಲ್ಲಿ ಪೂರ್ಣವಾಗಿ ಸಂಯೋಜಿಸುವ ಕಲೆ. ಈ ಕಲೆಯು ಕಬ್ಬಿಣ, ಉಕ್ಕು ಅಥವಾ ಹಿತ್ತಾಳೆಯ ಮೇಲ್ಮೈಮೇಲೆ ಬಂಗಾರ ಮತ್ತು ಕೆಲವು ವೇಳೆ ಬೆಳ್ಳಿಯ ತಂತಿಗಳನ್ನು ಬಿಗಿಯುವುದಕ್ಕೆ ಮಾತ್ರ ಸೀಮಿತವಾಗಿದೆ. ಈ ಅಲಂಕರಣ ವಿಧಾನವು ಡಮಸ್ಕಸ್ ಎಂಬುದರಿಂದ ತನ್ನ ಹೆಸರನ್ನು (ಡಮಾಸ್ಕನಿಂಗ್ ಎಂದು) ಪಡೆದಿದೆ. ಬೆಳ್ಳಿಯಲ್ಲಿ ಡಮಾಸ್ಕನಿಂಗ್ ಮಾಡುವುದನ್ನು ಬಿದ್ರಿ ಎಂದು ಬೀದರ್ ದೆಸೆಯಿಂದ ಕರೆಯುತ್ತಾರೆ. ಅಲ್ಲಿ ಮುಖ್ಯ ವಾಗಿ ಇಂದಿಗೂ ಈ ವಿಧಾನವು ರೂಢಿಯಲ್ಲಿದೆ.

ಶ್ರೀಗಂಧದ ಮತ್ತು ರೋಸ್‌ವುಡ್ ಮರಗಳೊಳಗೆ ದಂತವನ್ನು ಕೂಡಿಸಿ ಅಲಂಕರಣಮಾಡುವ ವಿಧಾನವನ್ನು ಆದಿಲ್‌ಶಾಹಿಗಳ ಯುಗದ ಪರ್ಶಿಯನ್ ಮುಸಲ್ಮಾನರು ಅಭಿವೃದ್ಧಿಗೊಳಿಸಿದರು. ಅದು ಇಂದಿಗೂ ಮೈಸೂರಿನಲ್ಲಿ ಬಳಕೆಯಲ್ಲಿದೆ. ಬಹಳವಾಗಿ ಪರ್ಶಿಯನ್ ಮೂಲದ ಮುಸಲ್ಮಾನರು ಇದರ ಕಸಬುದಾರರು. ಶ್ರೀರಂಗಪಟ್ಟಣದ ಮತ್ತು ಲಾಲ್‌ಬಾಗಿನ ಹೈದರಾಲಿಯ ಗೋರಿಯ ಬಾಗಿಲುಗಳು ಈ ಕಸಬಿನ ಕಲಾತ್ಮಕತೆಗೆ ಇಂದಿಗೂ ಉದಾಹರಣೆಗಳಾಗಿವೆ. ಬಿದ್ರಿ ವಿಧಾನದ ಪಾತ್ರೆಗಳಲ್ಲಿರುವಂತೆ, ಪರ್ಶಿಯನ್ ಮೂಲದ ಪುಷ್ಪಿತ ವಿಧಾನಗಳನ್ನು ಬಹುತೇಕವಾಗಿ ಬಳಸುತ್ತಾರೆ.

ಪರ್ಶಿಯದ ವಾರ್ನಿಷ್ ಕಾಗದ (ಬಣ್ಣದ ಕಾಗದ) ತಯಾರಿಕೆಯ ವಸ್ತುಗಳು ಬಹಳ ಪ್ರಸಿದ್ಧ ವಾಗಿವೆ ಮತ್ತು ಕಾಶ್ಮೀರದ ಮುಸಲ್ಮಾನರು ಅವನ್ನು ಬಹು ಚೆನ್ನಾಗಿ ಅನುಕರಣೆ ಮಾಡಬಲ್ಲವ ರಾಗಿದ್ದಾರೆ. ಆದರೆ ಬಣ್ಣಹಾಕುವ ರಾಟಿ ಹಾಗೂ ಮರದ ಆಟಿಗೆ (ಆಟದ ಸಾಮಾನು) ಗಳನ್ನು ಮಾಡುವ ಕಲೆಯು ಆದಿಲ್‌ಶಾಹಿಗಳ ಕಾಲದಲ್ಲಿ ಮುಸಲ್ಮಾನರಿಂದ ಕರ್ಣಾಟಕದೊಳಗೆ ರೂಢಿಗೆ ಬಂದಿತು ; ಚನ್ನಪಟ್ಟಣವು ಇಂದಿಗೂ ಇದಕ್ಕೆ ಪ್ರಸಿದ್ಧವಾಗಿದೆ,

ಅರೇಬಿಯ ಮತ್ತು ಪರ್ಶಿಯಾದ ಅನೇಕ ಸಸ್ಯಗಳನ್ನು ಇಲ್ಲಿಗೆ ತಂದು ಮುಸಲ್ಮಾನರು ಬೆಳೆಸಿದರು. ಕಾಫಿ ಗಿಡವು ಹಾಗೆ ಚಿಕ್ಕಮಗಳೂರು ಜಿಲ್ಲೆಯ ಬುಡನ್‌ಗಿರಿ ಬೆಟ್ಟಗಳಲ್ಲಿ, ಸೂಫಿ ಸಂತನಾದ

ಬಾಬಾಬುಡನ್ ಎಂಬ ಸೂಫಿ ಸಂತನಿಂದ, ಪ್ರಾಯಶಃ ಹನ್ನೆರಡನೆಯ ಶತಮಾನದಲ್ಲಿ ದಕ್ಷಿಣ ಅರೇಬಿಯಾದಿಂದ ತರಲ್ಪಟ್ಟು ಬೆಳೆಸಿದ್ದಾಗಿದೆ. ಕಾಫಿ ಉದ್ಯಮವು ಈಗ ಕನ್ನಡನಾಡಿನ ಅತ್ಯುತ್ತಮ ಕೈಗಾರಿಕೆಗಳಲ್ಲೊಂದಾಗಿದೆ.

ಅಲೋಸ್‌ಮರ ಅಥವಾ ಲುಬಾನ್ ಎಂಬುದು ಬಹಮನಿಗಳ ಕಾಲದಲ್ಲಿ ಅರೇಬಿಯದಿಂದ ಆಮದಾಗಲು ಆರಂಭವಾಯಿತು ಮತ್ತು ಪ್ರಸಿದ್ಧವಾದ ಮೈಸೂರಿನ ಊದುಬತ್ತಿ ಅಥವಾ ಅಗರುಬತ್ತಿ ಕೈಗಾರಿಕೆಯು ಇದರ ಪರಿಣಾಮಗಳಲ್ಲೊಂದಾಗಿದೆ.

ರೇಷ್ಮೆಗೆ ಪ್ರಸಿದ್ಧವಾಗಿರುವ ಮೈಸೂರಿನ ರೇಷ್ಮೆಯು ಟಿಪ್ಪುಸುಲ್ತಾನನ ಕಾಲದಲ್ಲಿ ಆರಂಭಿಸಲ್ಪಟ್ಟಿತು. ರಾಮನಗರ ಮತ್ತು ಚನ್ನಪಟ್ಟಣಗಳು ಇಂದಿಗೂ ಅತ್ಯಂತ ಪರಿಚಿತವಾದ ರೇಷ್ಮೆ ಉತ್ಪಾದನಾ ಕೇಂದ್ರಗಳಾಗಿವೆ. ಕರ್ನಾಟಕದಲ್ಲಿ ಪರ್ಶಿಯನ್ ಮಾದರಿಗಳ ಆಧಾರದ ಮೇಲೆ ನಿರ್ಮಿತವಾದ ಕಲೆಗಳು ಮತ್ತು ಕಸಬುಗಳನ್ನು ಬಳಕೆಗೆ ತಂದು ಇಸ್ಲಾಮ್ ಧರ್ಮವು ಒಂದು ಪ್ರಮುಖ ಪಾತ್ರವನ್ನು ವಹಿಸುತ್ತಿದ್ದಂತೆ ಮತ್ತು ಒಂದು ಹೊಸ ಸಾಹಿತ್ಯವನ್ನೆ ಅಸ್ತಿತ್ವಕ್ಕೆ ತರುತ್ತಿದ್ದಂತೆ, ಕನ್ನಡ ಭಾಷೆಯೂ ಕೂಡ ಪರ್ಶಿಯನ್ ಪ್ರಭಾವಗಳಿಂದ ದೂರ ಉಳಿಯಲಿಲ್ಲ. ಸಾರ್ವಜನಿಕ ಆಡಳಿತಕ್ಕೆ ಸಂಬಂಧಿಸಿದ ಸನದು, ಜಾಗಿರ್, ಇನಾಮ್, ತರಫ್, ದಿವಾನ್, ಫೌಜ್‌ದಾರ್, ಕಿಲೇದಾರ್, ಬಕ್ಷಿ, ಜಮೇದಾರ್, ತಹಸಿಲ್‌ದಾರ್, ಅಮಿಲ್, ಶಿಖ್‌ದಾರ್, ಶಿರಸ್ತೇಹಾರ್, ತರಿ, ಖುಷ್ಕಿ, ಜಮಾಬಂದಿ ಮೊದಲಾದ ಬಹಳ ಸಂಖ್ಯೆಯ ಪರ್ಶಿಯನ್ ಪದಗಳು ಕನ್ನಡವನ್ನು ಪ್ರವೇಶಿಸಿದುವು. ಇದರಂತೆಯೇ ವ್ಯವಹಾರ ಹಾಗೂ ಕಾನೂನಿನ ,ವ್ಯವಹಾರಗಳಲ್ಲಿ ಅದರಲ್ಲೂ ನ್ಯಾಯಾಲಯಗಳಲ್ಲಿ–ಅದಾಲತ್, ಮುನ್‌ಸಿಫ್, ಜಮೀನ್, ಕಾನೂನ್, ದಾವಾ, ವಕೀಲ್, ನಾಜಿರ್, ಅರ್ಜಿ, ಗಿರವಿ, ಮುಹಜರ್, ಉಮೇದುವಾರ್, ವಜಾ, ಬಿಕ್ಕಲಂ, ದಸ್ತಾವೇಜು, ಮೊದಲಾದ ಪರ್ಶಿಯನ್ ಮೂಲದ ಪದಗಳು ಕನ್ನಡದಲ್ಲಿ ಸಮೃದ್ಧವಾಗಿವೆ. ದರ್‌ಬಾರ್, ಹುಜಾರ್, ನಜರ್, ಖಿಲತ್, ಭೊದ್‌ಬಾರ್, ಅಮರಿ ಮೊದಲಾದ ಪರ್ಶಿಯನ್ ಪದಗಳಿಂದ ರಾಜಸಭೆಗಳಿಗೆ ಸಂಬಂಧಿಸಿದ ಶಬ್ದಕೋಶವು ಕೂಡ ಶ್ರೀಮಂತವಾಯಿತು. ಅದರಂತೆಯೇ ವೇಷ ಭೂಷಣಗಳಿಗೆ ಸಂಬಂಧಿಸಿದ ರುಮಾಲು, ಇಜಾರ, ಕಮರ್‌ಬಂದ್, ಕಮೀಜ್, ಶೇರ್‌ವಾನಿ ಮೊದಲಾದ ಶಬ್ದಗಳು ಮತ್ತು ವಿವಿಧ ಆಹಾರವಸ್ತುಗಳನ್ನು ನಮೂದಿಸುವ ಪಲಾವ್, ಬಿರಿಯಾನಿ, ಕಬಾಬ್, ಕುರ್ಮಾ, ಹಲ್ವ, ಬರ್ಫಿ ಮೊದಲಾದ ಪದಗಳು ಪರ್ಶಿಯನ್ ಭಾಷೆಯಿಂದ ಕನ್ನಡವನ್ನು ಪ್ರವೇಶಿಸಿದುವು. ಇದರಂತೆಯೇ ಜನಾನ, ಬಜಾರ್, ಕಿಸ್ಮತ್, ಶೌಕ್, ಜಬರ್‌ದಸ್ತಿ, ಬಿಲ್‌ಕುಲ್, ಕೀಮತ್, ಫಸಲ್, ರುಬ್ರೂಬು, ಪಜೀತಿ, ನಮೂನೆ, ಜರೂರಿ, ರಜಾ, ಜಿದ್, ದೌತಿ, ಶಾಯಿ, ಲಾಯಕ್, ಬೇವಾರ್ಸಿ. ಕಾರ್ಖಾನೆ, ತರ್ಜುಮೆ, ತ್ರಾಸು, ಫಕೀರ್, ಸವಾರಿ ಮೊದಲಾದ ಅನೇಕ ಶಬ್ದಗಳನ್ನು ಕನ್ನಡವು ಹೀರಿಕೊಂಡುಬಿಟ್ಟಿದೆ. ಇವುಗಳಲ್ಲಿ ಬಹಳ ಪದಗಳು ಕರ್ನಾಟಕವಲ್ಲಾದ ಇಸ್ಲಾಮಿನ ಸಾಂಸ್ಕೃತಿಕ ಪ್ರಭಾವವನ್ನು ತೋರುತ್ತವೆ.

ಧರ್ಮದ ಕ್ಷೇತ್ರದಲ್ಲಿ, ಇಸ್ಲಾಮಿನ ಪ್ರಭಾವಗಳು ಸೂಫಿ ಸಂತರುಗಳ ಹಾಗೂ ಕ್ರಿ.ಶ. ಎಂಟನೆಯ ಶತಮಾನದಷ್ಟು ಮೊದಲೇ ದಖನ್ ಪ್ರಸ್ಥಭೂಮಿಯ ಪಶ್ಚಿಮ ತೀರದಲ್ಲಿ ನೆಲಸಿದ್ದಂಥ ಧರ್ಮನಿಷ್ಠ ಮುಸಲ್ಮಾನರ ಬೋಧನೆಗಳ ಮೂಲಕವಾಗಿ ಕರ್ನಾಟಕವನ್ನು ಪ್ರವೇಶಿಸಿದುವು. ಹನ್ನೆರಡು ಮತ್ತು ಹದಿಮೂರನೆ ಶತಮಾನಗಳಲ್ಲಿ ಅವರಲ್ಲನೇಕರು ಸ್ಥಳೀಯ ದೊರೆಗಳಲ್ಲಿ ಉದ್ಯೋಗಸ್ಥರಾಗಿದ್ದರು.

ಮೂಲಲೇಖಕರು : ಖಿಜರ್ ಅಲಿಖಾನ್
ಅನುವಾದಕರು : ಶ್ರೀ ಜಿ.ಎಸ್. ಸಿದ್ದಲಿಂಗಯ್ಯ

# ಕರ್ನಾಟಕದಲ್ಲಿ ಕ್ರೈಸ್ತ ಧರ್ಮ

ಯೂರೋಪಿನ ಶಕ್ತಿಗಳು ಈ ನಾಡಿನಲ್ಲಿ ಅಡಿಯಿಡುವುದಕ್ಕೆ ಮೊದಲೇ ಕರ್ನಾಟಕಕ್ಕಲ್ಲವಾದರೂ ಭಾರತ ದೇಶಕ್ಕೆ ಕ್ರೈಸ್ತ ಧರ್ಮವು ಪ್ರವೇಶಿಸಿತು, ಮತ್ತು ಅದನ್ನು ಭಾರತದಲ್ಲಿ ಹೊರಗಿನಿಂದ ಬಂದು ಮನೆ ಮಾಡಿದ ಅನೇಕ ಪ್ರಾಚೀನ ಧರ್ಮಗಳಲ್ಲೊಂದೆಂದು ಗಣನೆ ಮಾಡಬಹುದಾಗಿದೆ. ಆದರೆ ಪಶ್ಚಿಮ ಕರಾವಳಿಯ ಮೇಲೆ ಪೋರ್ಚುಗೀಸರ ವಿಜಯ ಯಾತ್ರೆಯಾದ ಮೇಲೆ ಮತ್ತು ಬ್ರಿಟಿಷರ ಸಾಹಸೋದ್ಯಮದ ಅನಂತರ ಡಚ್ಚರು, ಫ್ರೆಂಚರು ಮತ್ತು ಡೇನಿಷ್ ಜನರು ಪೂರ್ವಕರಾವಳಿಯಲ್ಲಿ ತಮ್ಮ ವ್ಯಾಪಾರ ಕೇಂದ್ರಗಳನ್ನು ಸ್ಥಾಪಿಸಲು ಯತ್ನಿಸಿದ ಮೇಲೆ ಕ್ರೈಸ್ತ ಧರ್ಮದ ಪ್ರಸಾರಕರು 17ನೆ ಶತಮಾನದಿಂದ ಹಿಂದುಸ್ಥಾನದ ಕಡೆಗೆ ತಮ್ಮ ಗಮನವನ್ನು ಹರಿಸ ತೊಡಗಿದರು. ವಾಣಿಜ್ಯವನ್ನು ಧ್ವಜ ಹಿಂಬಾಲಿಸಿತು. ಆ ಧ್ವಜದೊಡನೆ ಚರ್ಚು ಬಂದಿತು. ಅಂತಿಮವಾಗಿ ಬ್ರಿಟಿಷರು ಅತಿ ಪ್ರಬಲರಾದರು. ಮತ್ತು ಅವರ ಆಡಳಿತ ನಿಯಮವು ವಿಧಿಬದ್ಧವಾಗಿ ಜಾತ್ಯತೀತವೇ ಆದುದಾಗಿದ್ದರೂ ಶೈಕ್ಷಣಿಕ ಮತ್ತು ವೈದ್ಯಕೀಯ ಮೊದಲಾದ ಅನೇಕ ಚಟುವಟಿಕೆಗಳ ಮೂಲಕವಾಗಿ ಕ್ರೈಸ್ತಧರ್ಮ ಪ್ರಭಾವವು ಭಾರತೀಯ ಸಮಾಜದ ಒಂದು ಪ್ರಮುಖ ಭಾಗವೆಂಬಂತೆ ಬೆಳೆಯಿತು. ಮತಾಂತರ ಮಾತ್ರ ಯಾವುದೇ ಕಾರಣದಿಂದಲೂ ಅಪರೂಪವಾಗಿರಲಿಲ್ಲ.

ಕರ್ನಾಟಕದೊಳಕ್ಕೆ ಕ್ರೈಸ್ತ ಧರ್ಮವು ಪ್ರವೇಶಿಸಿದ ಕಥೆಯು ಸ್ವಾರಸ್ಯಕರವಾದುದು. ಈಗ ನಮ್ಮ ಗಮನವನ್ನು ಅದರತ್ತ ಹರಿಸೋಣ.

ವಿದೇಶಿ ಯಾತ್ರಿಕರು ಗಮನಿಸಿ ಬರೆದಿಟ್ಟಿರುವ ಪ್ರಕಾರ ಕ್ರಿ.ಶ. 1336 ರಲ್ಲಿ ಜಾಗತಿಕ ಅರ್ಥದಲ್ಲಿ ಧರ್ಮವನ್ನು ರಕ್ಷಿಸಬೇಕೆಂಬ ಪ್ರತಿಜ್ಞಾ ಪೂರ್ವಕ ಉದ್ದೇಶದಿಂದ ಸ್ಥಾಪಿತವಾದ ವಿಸ್ತಾರವಾದ ವಿಜಯನಗರ ಸಾಮ್ರಾಜ್ಯದಲ್ಲಿ ಯೆಹೂದಿಗಳು, ಕ್ರೈಸ್ತರು, ಮುಸ್ಲಿಮರು ಮತ್ತು ಎಲ್ಲಾ ಕೋಮುಗಳು ಮತ್ತು ಮತಗಳವರು ಸಮಾನವಾದ ಧಾರ್ಮಿಕ ಸ್ವಾತಂತ್ರ್ಯವನ್ನು ಅನುಭವಿಸುತ್ತಿದ್ದುದು ಚರಿತ್ರಾರ್ಹವಾದ ಸಂಗತಿ. ಆದ್ದರಿಂದಲೇ ವಿಜಯನಗರದ ಪತನಾನಂತರ ಪ್ರಸಿದ್ಧಿಗೆ ಬಂದ ಶಿವಪ್ಪನಾಯಕನ ಕೆಳದಿಯಂಥ ಪುಟ್ಟ ಮಂಡಲದಲ್ಲೂ 30,000 ಕ್ರೈಸ್ತರಿದ್ದುದು ಆಶ್ಚರ್ಯಕರವಲ್ಲ. ಆದ್ದರಿಂದ ಭಾರತದಲ್ಲಿ ಕ್ರೈಸ್ತ ಧರ್ಮದ ಉಗಮ ಮತ್ತು ಬೆಳವಣಿಗೆಗಳ ಬಗ್ಗೆ ತಿಳಿದುಕೊಳ್ಳಲು ಈ ಸಂಗತಿ ಯೋಗ್ಯವಾಗಿದೆ.

ಯೇಸುವಿನ ಶಿಲುಬೆಯ ಆರೋಹಣ, ಪುನರುತ್ಥಾನ ಮತ್ತು ಅಧಿರೋಹಣಗಳು ಆದ ಮೇಲೆ ಆತನ ಶಿಷ್ಯರು ಯೇಸುವಿನ ಮೂಲಕವಾಗಿ ದೇವರು ಮಾನವನಿಗೆ ತೋರಿದ ಮೋಕ್ಷಕಾರಕ ಪ್ರೀತಿಯ ಶುಭವಾರ್ತೆಗಳಾದ 'ಸುವಾರ್ತೆ'ಯಲ್ಲಿರುವ ತಮ್ಮ ಅನುಭವವನ್ನು ಪಾಲುಗೊಳ್ಳಲು ಭಿನ್ನ ಭಿನ್ನ ಪ್ರದೇಶಗಳು ಮತ್ತು ದಿಕ್ಕುಗಳಿಗೆ ಆತನ ಅಪ್ಪಣೆಯಂತೆ ಹೋದರು.

ಬಹಳ ಪ್ರಾಚೀನ ಕಾಲದಿಂದಲೂ ಪ್ಯಾಲೆಸ್ಟೈನ್ ಮತ್ತು ಭಾರತಗಳ ಮಧ್ಯೆ ವಾಣಿಜ್ಯ ಸಂಬಂಧಗಳಿದ್ದ ಬಗ್ಗೆ ಆಧಾರವಿದೆ. ಕ್ರೈಸ್ತರ ಒಂದು ಸಂಪ್ರದಾಯದಂತೆ ಯೇಸುವಿನ ಹನ್ನೆರಡು ಜನ ಶಿಷ್ಯರಲ್ಲಿ ಒಬ್ಬನಾದ ಸಂತ ಥಾಮಸನು ಕ್ರಿ.ಶ. 52 ರಲ್ಲಿ ಭಾರತಕ್ಕೆ ಬಂದು ತಾನು ಕ್ರಿ.ಶ. 72 ರಲ್ಲಿ

ಹುತಾತ್ಮನಾಗುವುದಕ್ಕೆ ಮೊದಲೆ, ಮಲಬಾರು ಮತ್ತು ಇತರ ಕಡೆಗಳಲ್ಲಿ ಚರ್ಚುಗಳನ್ನು ಸ್ಥಾಪಿಸಿದನು. ದಕ್ಷಿಣ ಭಾರತದ ಚರ್ಚುಗಳ ಪ್ರಾರ್ಥನೆಯ ಮೇರೆಗೆ ಈ ಚರ್ಚುಗಳ ಮೇಲ್ವಿಚಾರಣೆ ಮಾಡಲು ಕ್ರಿ. ಶ. 189ರಲ್ಲಿ ಅಲೆಕ್ಸಾಂಡ್ರಿಯಾದಿಂದ ಪಾಂಟೇನಿಯಾಸನು ಬಂದನು. ಭಾರತದ ಚರ್ಚುಗಳ ಪ್ರತಿನಿಧಿಯಾಗಿ ಬಿಷಪ್ ಜೊಹಾನ್ನಸನನ್ನುಳ್ಳ ಚರ್ಚುಗಳ ಒಂದು ಸಭೆಯನ್ನು ಕ್ರಿ. ಶ. 325ರಲ್ಲಿ ನೀಸ್‌ನಲ್ಲಿ ನಡೆಸಲಾಯಿತು. 'ಕೆನ'ದ ಥಾಮಸ್ ಎಂಬ ಸಿರಿಯನ್ ವ್ಯಾಪಾರಿಯು ಕ್ರಿ.ಶ. 345ರಲ್ಲಿ ಜೆರೂಸಲೇಮಿನಿಂದ ಬಿಷಪ್ ಆದ ಯೋಸುಫ್ ಮತ್ತು ಇತರ ಪಾದ್ರಿಗಳನ್ನು ಹಾಗೂ ನಾಲ್ಕು ನೂರು ಜನ ಕ್ರೈಸ್ತರನ್ನು ಕ್ರ್ಯಾಂಗನೂರಿ (ಮಹಾದೇವ ಪಟ್ಟಂ) ಗೆ ಕರೆತಂದಾಗ ಮತ್ತೊಂದು ಶಾಖೆಯು ಸೇರಿಕೊಂಡಿತು. ಆರನೆಯ ಶತಮಾನದಲ್ಲಿ ನೆಸ್ಟೋರಿಯನರು ಬಿಷಪ್ಪರೊಂದಿಗೆ ಪರ್ಷಿಯದಿಂದ ಬಂದಾಗ ಇನ್ನು ಒಂದು ಕ್ರೈಸ್ತಧರ್ಮೀಯರ ಪ್ರವಾಹ ಒಳನುಗ್ಗಿತು. ತರುವಾಯ ಕ್ರಿ. ಶ. 1330ರಲ್ಲಿ ಬಿಷಪ್ ಜೋರ್ಡನಸ್ ಪಾಪಲ್ (ಬುಲ್) ಹೊಂದಿ ಬಂದಾಗ, ಈ ಎಲ್ಲಾ ಚರ್ಚುಗಳನ್ನು ತನ್ನ ಪರಮಾಧಿಕಾರದ ಅಂಕೆಯೊಳಗೆ ತರುವ ಪ್ರಯತ್ನವೊಂದು ನಡೆಯಿತು. ಡೊಮಿನಿಕರು ಪ್ರಥಮವಾಗಿ ಸುವಾರ್ತೆಗಳನ್ನು ಮೈಸೂರು ರಾಜ್ಯದೊಳಗೆ ಕ್ರಿ.ಶ. 1335ರಲ್ಲಿ ಪ್ರಚಾರ ಮಾಡಿದರೂ ಬೆಂಗಳೂರು ಜಿಲ್ಲೆಯ ಆನೆಕಲ್ಲಿನ ಒಂದು ಸಮಾಧಿಶಿಲೆ ಅಲ್ಲಿ ಕ್ರಿ.ಶ. 1400ರಲ್ಲಿ ಕ್ರೈಸ್ತರಿದ್ದುದಕ್ಕೆ ಸಾಕ್ಷಿಯಾಗಿದೆ.

ಕ್ರಿ.ಶ. 1492 ರಲ್ಲಿ ಕೊಚ್ಚಿಗೆ ವಾಸ್ಕೊಡಿಗಾಮನ ಆಗಮನದಿಂದ ಪೋರ್ಚುಗೀಸರು ಪೂರ್ವ ತೀರದಲ್ಲಿ ಬಲವನ್ನು ಗಳಿಸಿಕೊಂಡ ಮೇಲೆ ಮತ್ತು ಕ್ರಿ.ಶ. 1542 ರಲ್ಲಿ ಸಂತ ಫ್ರಾನ್ಸಿಸ್ ಕ್ಸೇವಿಯರನ ಆಗಮನವಾದ ಮೇಲೆ ಪೋಪನ ಅಧಿಕಾರ ಬಲ ಹೆಚ್ಚಿತು. ಕ್ರೈಸ್ತಧರ್ಮದ ರೋಮನ್ ಕ್ಯಾಥೊಲಿಕ್ ವರ್ಗ ವೇಗವಾಗಿ ಹರಡಿತು. ಆದರೆ ಅಸ್ತಿತ್ವದಲ್ಲಿದ್ದ ಚರ್ಚುಗಳ ಒಳಹೊರಗೆ ಪೌರಾಡಳಿತಾಧಿಕಾರಿಗಳು ಮತ್ತು ಚರ್ಚಿನ ಶಿಷ್ಟ ಜನರು ಬಳಸುತ್ತಿದ್ದ ವಿಧಾನಗಳು, ದುರ್ದೈವದಿಂದ ನಿಸ್ಸಂಶಯವಾಗಿ ಕಾಣುವುದಿಲ್ಲ. ಅನಂತರ ಬಂದ ಪ್ರಾಟೆಸ್ಟೆಂಟ್ ಮಿಷನ್ನುಗಳು ಕೂಡ ಆಕ್ಷೇಪಾರ್ಹವಾದ ವಿಧಾನಗಳನ್ನು ಬಳಸಿದುವೆಂಬ ಟೀಕೆಗಳಿಂದ ಪೂರ್ಣವಾಗಿ ತಪ್ಪಿಸಿಕೊಳ್ಳುವಂತೆ ತೋರುವುದಿಲ್ಲ. ತತ್ಫಲವಾಗಿ ಶಂಕೆ ಮತ್ತು ಕಹಿಭಾವನೆಗಳು ಇಂದಿನ ವರೆಗೂ ಉಳಿದುಕೊಂಡಿವೆ. ಹೀಗೆ ಭಿನ್ನ ತೀರಗಳ ಹಾಗೂ ವಿವಿಧ ರೂಪಗಳ ಕ್ರೈಸ್ತಧರ್ಮ 16 ನೆಯ ಶತಮಾನದ ಮಧ್ಯ ಭಾಗದಲ್ಲಿ ಭಾರತದೊಳಕ್ಕೆ ಪ್ರವೇಶಿಸಿತು.

ಹದಿನಾರು ಮತ್ತು ಹದಿನೇಳನೆ ಶತಮಾನಗಳಲ್ಲಿ ಬೇರೆ ಬೇರೆ ಚರ್ಚುಗಳ ಮಧ್ಯೆಯೇ ಒಂದು ರೀತಿಯ ಅಂತರ್ಯುದ್ಧ ಅಥವಾ ಆಂತರಿಕ ಘರ್ಷಣೆಯಿದ್ದಿತು. ಪೋಪ್‌ಗುರುವಿನ ಶಾಸನ ಮತ್ತು ಆಜ್ಞೆಗಳೊಂದಿಗೆ ಹಾಗೂ ಪೋರ್ಚುಗೀಸ್ ವೈಸರಾಯಿಯ ಬೆಂಬಲದಿಂದ ಆರ್ಚ್‌ಬಿಷಪ್ ಮೆನೆಜಿಸನು ಗೋವೆಗೆ ಬಂದನು. ಆರ್ಚ್‌ಬಿಷಪನು ಚರ್ಚುಗಳನ್ನು ಸಂದರ್ಶಿಸಿದನು ; ಕೊಚ್ಚಿಯ ರಾಜನ ಬೆಂಬಲವನ್ನು ಪಡೆದು ಕ್ರಿ.ಶ. 1599 ರಲ್ಲಿ ಉದಯಂಪೆರೂರಿನಲ್ಲಿ ಚರ್ಚುಗಳ ಪ್ರತಿನಿಧಿಗಳ ಪರಿಷತ್ತನ್ನು ಕರೆದನು. ಚರ್ಚುಗಳ ಚಟುವಟಿಕೆಗಳನ್ನೆಲ್ಲ ಪೋಪ್‌ಗುರುವಿನ ಧರ್ಮಾಧಿಕಾರದ ಅಂಕೆಯೊಳಗೆ ತರುವುದರಲ್ಲಿ ಯಶಸ್ವಿಯಾದನು. ಆದರೆ ಪೋರ್ಚುಗೀಸ ಶಕ್ತಿಯ ಅವನತಿಯ ತರುವಾಯ ಕೆಲವು ಚರ್ಚುಗಳು ದಂಗೆಯೆದ್ದು ತಮ್ಮ ಸ್ವಾತಂತ್ರವನ್ನು ಮತ್ತೆ ಗಳಿಸಿಕೊಂಡವು.

ಕ್ರೈಸ್ತಧರ್ಮ ಪ್ರಚಾರದ ಬಗ್ಗೆ ಹೇಳುವುದಾದರೆ ಬಿಜಾಪುರದ ಸುಲ್ತಾನನ ಆಹ್ವಾನದ ಮೇಲೆ ಗೋವದ ಆರ್ಚ್ ಬಿಷಪರು ಅವನಲ್ಲಿಗೆ ವಿದ್ವಾಂಸರಾದ ಹಲವರು ಯೆಹೂದಿಗಳನ್ನು ಕಳುಹಿಸಿದುದನ್ನು ಗಮನಿಸಬಹುದು. ಕ್ರಿ. ಶ. 1587ರಲ್ಲಿ ಫ್ರಾನ್ಸಿಸ್ಕನರು ಮೈಸೂರು ರಾಜ್ಯದಲ್ಲಿ ಸುವಾರ್ತೆಗಳನ್ನು ಪ್ರಚಾರ ಮಾಡಿದರು. ಇಟಾಲಿಯನ್ ಕುಲೀನನಾದ ರಾಬರ್ಟ್-ಡಿ-ನೊಬಿಲಿಯು ಕ್ರಿ. ಶ. 1605ರಲ್ಲಿ

ಭಾರತಕ್ಕೆ ಬಂದನು. ಆತನು ಬಹು ಬೇಗನೆ ತೆಲುಗು, ತಮಿಳು, ಮತ್ತು ಸಂಸ್ಕೃತ ಭಾಷೆಗಳ ಪ್ರಭುತ್ವವನ್ನು ಗಳಿಸಿಕೊಂಡನು. ಆತನು ಹಿಂದುಗಳ ಧರ್ಮಗ್ರಂಥಗಳನ್ನು ಓದಿದನು. ಭಾರತೀಯ ಜೀವನ ವಿಧಾನಕ್ಕೆ ಅಳವಟ್ಟು ಅವರ ಉಡುಪನ್ನೆ ಧರಿಸಿ ಹೊಂದಿಕೊಂಡನು. ಸಸ್ಯಾಹಾರವನ್ನು ಸೇವಿಸಿದನು. ತೆಳುಹಳದಿಯ ಉಡುಪನ್ನು ಧರಿಸಿ ಆತನು ಉಪದೇಶಿಸಲು ಹೋಗುತ್ತಿದ್ದನು.

ಕೆಳಜಾತಿಯಿಂದ ಮತಾಂತರ ಹೊಂದಿದವರು ಮತ್ತು ಮೇಲು ಜಾತಿಯಿಂದ ಮತಾಂತರ ಹೊಂದಿದವರು ಎಂಬ ಜಾತಿಭೇದಗಳನ್ನು ಗುರುತಿಸುವ ಮತ್ತು ಕೆಲವು ಕ್ರೈಸ್ತವಲ್ಲದ ಸಂಪ್ರದಾಯ ಮತ್ತು ಆಚರಣೆಗಳನ್ನು ಚರ್ಚುಗಳಲ್ಲಿ ರೂಢಿಗೆ ತಂದವನೆಂಬ ಟೀಕೆಗೆ ಅವನ ಕಾರ್ಯವು ಗುರಿಯಾಗಿದ್ದರೂ ಮಧುರೆ, ವೆಲ್ಲೂರು ಮತ್ತು ಗೋಲ್ಕೊಂಡಗಳಲ್ಲಿ ಅವನು ಮಾಡಿದ ಆಸಕ್ತಿ ಪೂರ್ಣವಾದ ಕಾರ್ಯಗಳಿಗೆ ಗಮನಾರ್ಹ ಪ್ರಮಾಣದಲ್ಲಿ ಯಶಸ್ಸು ದೊರಕಿತು. ಕ್ರಿ. ಶ. 1637ರಲ್ಲಿ ಮಾಥ್ಯೂ-ಡಿ-ಕಾಸ್ಟ್ರೊ ಎಂದು ಪ್ರಸಿದ್ಧನಾದ, ಗೋವೆಯ ಒಬ್ಬ ಬ್ರಾಹ್ಮಣ ವಾಗ್ಮಿ. ಭಾರತೀಯರಲ್ಲಿ ಪ್ರಥಮನಾಗಿ ಅಭಿಷಿಕ್ತನಾದ ಬಿಷಪನು. ಅವನು ಬಿಜಾಪುರ ಮತ್ತು ಗೊಲ್ಕೊಂಡಗಳಲ್ಲಿ ದೇವರ ಪ್ರತಿನಿಧಿಯಾಗಿ (ವಿಕಾರ್ ಅಪಾಸ್ಟೊಲಿಕ್) ಸೇವೆ ಸಲ್ಲಿಸಿದನು.

ಥಿಯೆಟಿನಿಸನು ಕ್ರಿ. ಶ. 1640ರಲ್ಲಿ ಭಾರತಕ್ಕೆ ಬಂದನು. ಕಾಲಕ್ರಮದಲ್ಲಿ ಆತನು ಬಿಜಾಪುರ ಮತ್ತು ಗೋಲ್ಕೊಂಡಗಳಿಗೆ ಹೋಗಿ ಅನೇಕ ಚರ್ಚುಗಳನ್ನು ಸ್ಥಾಪಿಸಿದನು. ಕ್ಯಾಥೊಲಿಕರ ಮೇಲ್ವಿಚಾರಣೆ ಯನ್ನು ನೋಡಿಕೊಳ್ಳುವ ಮತ್ತು ಸಮೀಪ ಪ್ರದೇಶಗಳಲ್ಲಿ ಚರ್ಚುಗಳನ್ನು ತೆರೆಯುವ ಸೂಚನೆಗಳೊಂದಿಗೆ ಆರಂಭಕಾಲದಲ್ಲಿ ಪೋಪನು ಭಾರತದಲ್ಲಿ ಮೂವರು ದೇವರ ಪ್ರತಿನಿಧಿಗಳನ್ನು ಬಿಜಾಪುರದಲ್ಲಿ ಕ್ರಿ.ಶ.1637 ರಲ್ಲಿಯೂ ಮಲಬಾರಿನಲ್ಲಿ ಕ್ರಿ.ಶ. 1657ರಲ್ಲಿಯೂ ಮತ್ತು ಕನ್ನಡ ಜಿಲ್ಲೆಯಲ್ಲಿ ಕ್ರಿ.ಶ. 1671ರಲ್ಲಿಯೂ ನೇಮಕ ಮಾಡಿದನು. ಧಾರವಾಡ ಜಿಲ್ಲೆಯಲ್ಲಿರುವ ತುಮರಿಕೊಪ್ಪ ಎಂಬ ಹಳ್ಳಿಯಲ್ಲಿ ಮಾಡಿದ ಕ್ರೈಸ್ತ ಧರ್ಮದ ಕಾರ್ಯವನ್ನು ವಿಶೇಷವಾಗಿ ಉಲ್ಲೇಖವನ್ನು ಇಲ್ಲಿ ಮಾಡಬಹುದು. ಸುಮಾರು ಕ್ರಿ. ಶ. 1750ರಿಂದ ಈ ಹಳ್ಳಿಯು ಭಾಗಶಃ ಕ್ರೈಸ್ತರದಾಯಿತು ಮತ್ತು ಗೋವೆಯ ಲೇಡಿ ಮೌಂಟ್ ಕಾರ್ಮೆಲ್ ಶ್ರೇಣಿಯ ಮೂರನೆಯ ದರ್ಜೆ ಕ್ರೈಸ್ತ ಭಿಕ್ಷುಗಳು ಅವರಿಗೆ ಧರ್ಮ ಬೋಧನೆಯನ್ನು ಮಾಡಿದರು. ಸಂತ ಮೇರಿಯ ಜೀವನ ಕಥೆಯನ್ನೊಳಗೊಂಡ ಹಳೆಯ ತಾಳೆಯ ಗರಿಗಳ ಕೃತಿಗಳನ್ನು ಕೆಲವರ ಮನೆಗಳಲ್ಲಿ ಕಾಣುವುದು ಅಪರೂಪವೇನಲ್ಲ. ಆಧುನಿಕ ಮಿಷನ್ನುಗಳ ಇತಿಹಾಸವು ಸಾಮಾನ್ಯವಾಗಿ ಬ್ಯಾಪ್ಟಿಸ್ಟ್ ಮಿಷನ್ನಿನ ಕೆರೀ ಎಂಬಾತನಿಂದ 19ನೆ ಶತಮಾನದ ಆದಿಯಲ್ಲಿ ಆರಂಭವಾಯಿತೆಂದು ಗಣಿಸಲ್ಪಟ್ಟಿದೆ. ಆದರೆ ನಿಜವಾದ ಇತಿಹಾಸವು ಒಂದು ಶತಮಾನಕ್ಕೆ ಮುಂಚೆಯೇ ಆರಂಭವಾಗಬೇಕು. ಕ್ರಿ. ಶ. 1705 ರಲ್ಲಿ ಡೇನಿಷ್ ದೊರೆಯಾದ ನಾಲ್ಕನೆ ಫ್ರೆಡರಿಕನು ಜೀನೆ ಬರ್ಗ್ ಮತ್ತು ಪ್ಲುಟ್ಷೊ ಎಂಬಿಬ್ಬರು ಜರ್ಮನ್ ಮಿಷನರಿಗಳನ್ನು ಕಳುಹಿಸಿದನು. ಅದೇ ವಿಶ್ವವಿದ್ಯಾನಿಲಯದಲ್ಲಿದ್ದ ರೆ॥ ಕ್ರಿಶ್ಚಿಯನ್ ಫ್ರೆಡರಿಕ್ ಷ್ವಾರ್ಟ್ಜನು ಕ್ರಿ.ಶ. 1750ರಲ್ಲಿ ಟ್ರಾಂಕ್ವಿಬಾರ್‌ನಲ್ಲಿರುವ ಡೇನಿಷ್ ಮಿಷನನ್ನು ಸೇರಿಕೊಂಡನು. ಮಿಷನ್ನಿನ ಕಾರ್ಯವು ಅವನ ಕೈಕೆಳಗೆ ಹೆಚ್ಚು ಗಣನೀಯ ಪ್ರಮಾಣದಲ್ಲಾಯಿತು. ಮೈಸೂರಿನಲ್ಲಿ ಸುವಾರ್ತಿಕ (evangelistic) ಧರ್ಮ ಕಾರ್ಯವನ್ನು ಮಾಡಿದ ಪ್ರಥಮ ಪ್ರಾಟೆಸ್ಟೆಂಟ್ ಮಿಷನರಿ ಅವನಾಗಿದ್ದನು. ಆಗಿನ ದಿನಗಳಲ್ಲಿ ದಕ್ಷಿಣ ಭಾರತದಲ್ಲಿ ಹೆಚ್ಚಾಗಿ ರಾಜಕೀಯ ಕೋಲಾಹಲವಿದ್ದಿತು. ಆದರೂ ಶತ್ರುಗಳು ಮತ್ತು ಮಿತ್ರರು, ಸ್ಥಳಿಕರು ಮತ್ತು ಪರಕೀಯರು ಎಲ್ಲರೂ ಪರಸ್ಪರರನ್ನು ತಿಳಿದುಕೊಳ್ಳುವ ಮತ್ತು ಹೊಂದಾಣಿಕೆ ಒಪ್ಪಂದಗಳನ್ನು ಮಾಡಿಕೊಳ್ಳುವ ಕಷ್ಟಕರವೂ ಸೂಕ್ಷ್ಮವೂ ಆದ ವಿಚಾರಗಳಲ್ಲಿ ಪೂರ್ಣ ವಾಗಿ ಅವನನ್ನು ನಂಬಿದ್ದರು. ಆತನ ಅಂತಸ್ಸತ್ವ, ಋಜುತನ ಮತ್ತು ಕರುಣಾಮಯ ಸ್ವಭಾವಗಳಿಂದ ಹೈದರ್ ಅಲಿಯು ವಿಶೇಷ ಪ್ರಭಾವಿತನಾಗಿದ್ದನು. ಆದ್ದರಿಂದಲೇ ತನ್ನ ಅಧಿಕಾರಿಗಳಿಗೆ ಆತನು ಹೀಗೆಂದು ಅಧಿಕೃತ ಆಜ್ಞೆಯನ್ನು ಹೊರಡಿಸಿದ್ದನು : "ಈ ಪೂಜ್ಯ ಪಾದ್ರಿಯು ಯಾವ ಅಡ್ಡಿಯೂ ಇಲ್ಲದಂತೆ

ಎಲ್ಲೆಡೆಗೂ ಹೋಗಲಿ; ಏಕೆಂದರೆ ಇವನೊಬ್ಬ ದೇವಮಾನವ''. ಉಚ್ಚನೀಚ ಭೇದವಿಲ್ಲದೆ ಎಲ್ಲರೂ ಅವನನ್ನು ಪ್ರೀತಿಸುತ್ತಿದ್ದರು ಮತ್ತು ಗೌರವಿಸುತ್ತಿದ್ದರು. ತಂಜಾವೂರಿನ ರಾಜನು ಹುಡುಗನೊಬ್ಬನನ್ನು ದತ್ತು ತೆಗೆದುಕೊಂಡು ತನ್ನ ಅವಸಾನಕಾಲದಲ್ಲಿ ಆ ಚಿಕ್ಕ ರಾಜಕುಮಾರನನ್ನು ಈ ಸುವಾರ್ತಾ ಪ್ರಸಾರಕನ ಹತ್ತಿರ ಬಿಟ್ಟಿದ್ದನು. ಷ್ವಾರ್ಟ್ಜನು ಗತಿಸಿದಾಗ ಆತನ ಸಮಾಧಿಯ ಮೇಲೆ ರಾಜಕುಮಾರನು ತನ್ನ ಕೃತಜ್ಞತೆಯನ್ನು ಸ್ಮರಣೀಯವಾದ ಮಾತುಗಳಲ್ಲಿ ಶಾಸನವಾಗಿ ಕೆತ್ತಿಸಿದನು.

'' ದೃಢಚಿತ್ತದಿಂದಿರ್ದೆ ನೀಂ ವಿನಮ್ರವಿವೇಕಿ  
ಸತ್ಯನಂ ಶುದ್ಧನಂ ಕಪಟವೇಷವ ನೂಕಿ  
ತಂದೆ ವಿಗತಿಕರ್ಗೆ, ವಿಧವೆಯರ ಆಧಾರಿ  
ಹಿತಕಾರಿ ನೀಂ ಸರ್ವಸಂತಾಪಪರಿಹಾರಿ  
ಕತ್ತಲಲಿ ನರಳ್ವರ್ಗೆ ಬೆಳಕ ಬೀರಿದ ಬೆಜ್ಜ  
ಸತ್ತೆನಿಪ ನೇರ್ಪನಾಚರಿಸಿ ತೋರ್ದಾ ಕಜ್ಜ  
ವರಮುಖಿಂ ನೃಪಸಂತರ್ಗೆ ಜನರ್ಗೆ ಮತ್ತೆನಗೆ  
ಎನ್ನಪ್ಪ ನಿನಗೆ ತಕ್ಕವನೆನಿಪ ಬೇಳ್ಪ ಬಗೆ  
ನಿನ್ನ ವಂದಿಸಿ ಭಜಿಸಿದಪ ನಿನ್ನ ಸರಬೋಜಿ."

ಹೀಗೆ ಷ್ವಾರ್ಟ್ಜನು ಯೇಸುವಿನ ನಿಜವಾದ ಚೇತನ ತನ್ನಲ್ಲಿಯೇ ಸಾಕಾರವಾದಂತಿದ್ದನು.

ಡೇನಿಷ್ ಶಕ್ತಿಯ ಅವನತಿ ಹಾಗೂ ಭಾರತದಲ್ಲಿನ ತನ್ನ ಪ್ರತಿಸ್ಪರ್ಧಿಗಳೆದುರು ಅಭ್ಯುದಯ ಹೊಂದುತ್ತಾ ನಡೆದ ಬ್ರಿಟಿಷರ ಪರಮಾಧಿಕಾರಗಳ ಕಾಲವೂ ಕೆಳಗೆ ಕಾಣಿಸಿದಂತೆ ಬೇರೆ ಬೇರೆ ವರ್ಷಗಳಲ್ಲಿ ಆದ ಆಧುನಿಕ ಮಿಷನ್ನುಗಳ ಪ್ರಾರಂಭದ ಕಾಲವೂ ಒಂದೇ ಆಯಿತು.

(1) ಲಂಡನ್ನಿನ ಮಿಷನರಿ ಸಂಘ ... ಕ್ರಿ. ಶ. 1809  
(2) ವೆಸ್ಲಿಯನ್ ಮಿಷನ್ ... ಕ್ರಿ. ಶ. 1818  
(3) ಬಾಸೆಲ್ ಮಿಷನ್ ... ಕ್ರಿ. ಶ. 1833  
(4) ಅಮೆರಿಕದ ಇವಲೆಂಜಿಕಲ್ ಲಾಥರನ್ ಮಿಷನ್ ... ಕ್ರಿ. ಶ. 1842  
(5) ಎಸ್. ಪಿ. ಜಿ. ಮಿಷನ್ ... ಕ್ರಿ. ಶ. 1842

'ದಿ ಗಾಸ್ಪೆಲ್ ಸೊಸೈಟಿ' (ಸುವಾರ್ತಾ ಸಮಾಜ) ಮತ್ತು ಲೀಫ್ಜಿಗ್ ಸೊಸೈಟಿಗಳಂತಹ ಇತರ ಕೆಲವು ಮಿಷನ್ನುಗಳು ಕೂಡ ತಮ್ಮ ಚಟುವಟಿಕೆಗಳನ್ನು ನಡೆಸಿದುದಾಗಿ ವರದಿಯಾಗಿದೆ.

ಈ ಆಧುನಿಕ ಮಿಷನ್ನುಗಳ ಒಂದು ಉಲ್ಲೇಖಾರ್ಹ ಲಕ್ಷಣವೆಂದರೆ ಅವುಗಳಾವುವೂ ತಮ್ಮ ದೇಶಗಳ ಸರ್ಕಾರಗಳಿಂದ ಅಧಿಕೃತ ಬೆಂಬಲ ಪಡೆದಿಲ್ಲದಿರುವುದು. ಆದರೆ ಅವೆಲ್ಲ ತಮ್ಮ ತಮ್ಮ ದೇಶಗಳ ಜನಗಳ ಬೆಂಬಲವನ್ನೇ ಅವಲಂಬಿಸಿಕೊಂಡಿದ್ದು ತಾವಾಗಿಯೇ ಮುಂದೆ ಬಂದ ಸಂಸ್ಥೆಗಳಾಗಿದ್ದವು. ಈ ಮಿಷನರಿ ಘಟಕಗಳು ಐದು ಮುಖ್ಯವಾದ ವಿರೋಧಗಳನ್ನು ಎದುರಿಸಿದವು ;

1. ಗ್ರೇಟ್ ಬ್ರಿಟನ್ನಿನ ಕೆಲವು ಚರ್ಚುಗಳ ಶಿಷ್ಟಜನರಿಂದ
2. ಇಂಗ್ಲೆಂಡಿನ ಈಸ್ಟ್ ಇಂಡಿಯಾ ಕಂಪನಿಯ ಡೈರೆಕ್ಟರುಗಳಿಂದ.

3. ಭಾರತದ ಕಂಪನಿಯ ಅಧಿಕಾರಿಗಳಿಂದ
4. ಕಂಪನಿಯ ಸೇವೆಯಲ್ಲಿರುವ ಅಧೀನವರ್ಗದ ನೌಕರರಿಂದ
5. ಭಾರತದಲ್ಲಿ ವಸತಿ ಮಾಡಿದ ವಿದೇಶೀಯರಿಂದ

ವಿರೋಧವೆಂಬುದು ಭಿನ್ನ ಭಿನ್ನ ಉದ್ದೇಶಗಳಿಂದ ಪ್ರೇರಿತವಾಗಿದ್ದಿತು. ಉದಾಹರಣೆಗೆ, ಈಸ್ಟ್ ಇಂಡಿಯ ಕಂಪನಿಯ ನೀತಿಯು ವಾಣಿಜ್ಯಕ ಆಸಕ್ತಿಗಳಿಂದ ರೂಪಿತವಾಗಿದ್ದು ಭಾರತೀಯರನ್ನು ತಮ್ಮಷ್ಟಕ್ಕೆ ತಾವೇ ಅವರವರ ಶಿಷ್ಟಾಚಾರ ಮತ್ತು ಧಾರ್ಮಿಕ ಶ್ರದ್ಧೆಗಳೊಂದಿಗೆ ಸ್ವತಂತ್ರವಾಗಿ ಬದುಕಲು ಬಿಡುವುದು ಆವಶ್ಯಕವಾಗಿತ್ತು, ಆದರೆ ಪಾರ್ಲಿಮೆಂಟ್ ಕ್ರಿ. ಶ. 1813ರಲ್ಲಿ ಕಂಪನಿಯ ಶಾಸನ ಪತ್ರವನ್ನು ನವೀಕರಿಸುವಾಗ ಭಾರತಕ್ಕೆ ಕ್ರೈಸ್ತಗುರುಗಳನ್ನು ಮತ್ತು ಉಪದೇಶಕರನ್ನು ಕಳುಹಿಸಲು ಕಂಪನಿಯ ಅನುಮತಿಯನ್ನು ಕೇಳಿತು. ಅದರಂತೆ ಕ್ರೈಸ್ತಗುರುಗಳಿಗೂ ಬೋಧಕರಿಗೂ ಭಾರತಕ್ಕೆ ಹೋಗಲು ಅನುಮತಿಯನ್ನು ನೀಡಲಾಯಿತು ; ಆದರೆ ಅವರಿಗೆ ದೊರೆಯ ಅಥವಾ ಸರ್ಕಾರದ ಯಾವ ಆಶ್ರಯವಿರಲಿಲ್ಲ.

ಯೇಸು ಕ್ರಿಸ್ತನ ಬೋಧನೆಯ ಮಾದರಿಯಲ್ಲಿಯೇ ಈ ಮಿಷನರಿಗಳ ಸಾಹಸೋದ್ಯಮವು ಪ್ರಮುಖವಾಗಿ—ಉಪದೇಶ, ವಿದ್ಯಾಭ್ಯಾಸ ಮತ್ತು ರೋಗ ಚಿಕಿತ್ಸೆ ಎಂಬ ಮುಮ್ಮುಖ ಚಟುವಟಿಕೆ ಗಳಿಂದ ಕೂಡಿದುದಾಗಿತ್ತು. ಪ್ರಜೆಗಳ ಆವಶ್ಯಕತೆಗಳೊಂದಿಗೆ ಸಂಪರ್ಕವೇರ್ಪಡಿಸುವ ಕೊಂಡಿಗಳು ಅವಾಗಿದ್ದವು. ಸಾಮಾನ್ಯವಾಗಿ ಭಾರತದ, ವಿಶಿಷ್ಟವಾಗಿ ಕರ್ಣಾಟಕದ, ಜನತೆಯ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ, ಮತ್ತು ಔದ್ಯೋಗಿಕ ಸುಕ್ಷೇಮಗಳನ್ನು ಅಭಿವೃದ್ಧಿಗೊಳಿಸಲು ಮಾಡಿದ ಪರೋಪಕಾರಕ ಚಟುವಟಿಕೆಗಳ ಪ್ರವರ್ತಕರು ಅವರೆಂಬುದರಲ್ಲಿ ಆಶ್ಚರ್ಯವಿಲ್ಲ. ಕರ್ಣಾಟಕದ ಬೇರೆ ಬೇರೆ ಕಡೆಗಳಲ್ಲಿ ಆಗಿರುವ ಕಾರ್ಯವನ್ನಿಲ್ಲಿ ನಾವು ಗಮನಿಸಬಹುದು.

### ಬಳ್ಳಾರಿ

ಕನ್ನಡ ಪ್ರದೇಶದಲ್ಲಿ ಆದ ಲಂಡನ್ ಮಿಷನ್ನಿನ ಪ್ರಪ್ರಥಮವಾದ ಮಿಷನ್ ನೆಲೆ ಇದು. ಕ್ರಿ. ಶ. 1810ರಲ್ಲಿ ರೆ॥ ಜಾನ್ ಹ್ಯಾಂಡ್ಸಸ್ ಇದನ್ನು ಆರಂಭಿಸಿದನು. ಭಾರತದಲ್ಲಿಯೇ ಪ್ರಥಮವಾದ ಧಾರ್ಮಿಕ ಗ್ರಂಥ ಸಮಾಜವು ಕ್ರಿ.ಶ. 1817ರಲ್ಲಿ ಹ್ಯಾಂಡ್ಸನಿಂದ ಬಳ್ಳಾರಿಯಲ್ಲಿ ಸ್ಥಾಪಿಸಲ್ಪಟ್ಟಿತು. ಆತನು ಹೆಚ್ಚು ಕಡಮೆ ಇಡೀ ಬೈಬಲನ್ನು ಕನ್ನಡಕ್ಕೆ ಅನುವಾದಿಸಿದನು. ಅಲ್ಲದೆ ಕನ್ನಡದಲ್ಲಿ ಅಚ್ಚಿನ ಮೊಳೆಗಳನ್ನು ಎರಕ ಹೊಯ್ಯಿಸಿದನು. ಹಾಗೆಯೇ ಮುದ್ರಣಯಂತ್ರ ಶಾಲೆಯನ್ನು ತೆರೆದನು. ರೆ॥ ರೀವ್ಸನು ಪ್ರಥಮವಾದ ಇಂಗ್ಲಿಷ್-ಕನ್ನಡ ನಿಘಂಟನ್ನು ರಚಿಸಿದನು. 1846ರಲ್ಲಿ ಒಂದು ಇಂಗ್ಲಿಷ್ ಶಾಲೆಯನ್ನು ಆರಂಭಿಸಲಾಯಿತು. ಮುಂದೆ ಅದೇ ವಾರ್ಡ್ಲಾ ಕಾಲೇಜಾಗಿ ಬೆಳೆಯಿತು.

### ಬೆಳಗಾಂ

ಲಂಡನ್ ಮಿಷನ್ ಇಲ್ಲಿ ತನ್ನ ಕಾರ್ಯಕ್ಷೇತ್ರವನ್ನು ಕ್ರಿ.ಶ. 1820ರಲ್ಲಿ ಸ್ಥಾಪಿಸಿತು. ಎಂಟು ವರ್ಷಗಳ ತರುವಾಯ ರೆ॥ ಡಬ್ಲ್ಯು. ಬೆಯ್‌ನಾನ್ ಅವನನ್ನು ಬಳ್ಳಾರಿಯಿಂದ ಇಲ್ಲಿಗೆ ವರ್ಗಮಾಡಲಾಯಿತು. ಪ್ರಾಥಮಿಕ ಮತ್ತು ಇಂಗ್ಲಿಷ್ ಕಲಿಸುವ ಶಾಲೆಗಳು ಅವನಿಂದ ಸ್ಥಾಪಿಸಲ್ಪಟ್ಟವು. ಬೆಳಗಾವಿಗೆ ಪ್ರಥಮ ವಾದ ಈ ಇಂಗ್ಲಿಷ್ ಶಾಲೆಯನ್ನು ಮುಂದೆ ಇಂದಿಗೂ ಚೆನ್ನಾಗಿ ಪರಿಚಿತವಾಗಿರುವಂತೆ ಬೆಯ್‌ನಾನ್

ಸ್ಮಿತ್ ಪ್ರೌಢಶಾಲೆಯಾಗಿ ಅಭಿವೃದ್ಧಿಗೊಳಿಸಲಾಯಿತು. ಕಾಲಕ್ರಮದಲ್ಲಿ ಲಂಡನ್ ಮಿಷನ್ನಿನವರು ಬೆಳಗಾಂ ಪ್ರದೇಶದಲ್ಲಿನ ತಮ್ಮ ಕಾರ್ಯಗಳನ್ನು ಮೆತಾಡಿಸ್ಟ್ ಮಿಷನ್ನಿನವರಿಗೆ ವಹಿಸಿಕೊಟ್ಟರು.

**ಬೆಂಗಳೂರು**

ಬೆಂಗಳೂರಿನಲ್ಲಿ ತಮಿಳರ ಮಧ್ಯೆ ಕ್ರಿ.ಶ. 1820ರಲ್ಲಿ ಲಂಡನ್ ಮಿಷನ್ ತನ್ನ ಕಾರ್ಯವನ್ನು ಆರಂಭಿಸಿತು. ರೆ॥ ಡಬ್ಲ್ಯು. ಕ್ಯಾಂಬೆಲ್ಲನು ಕನ್ನಡ ಮಾತಾಡುವವರ ಮಧ್ಯೆ 1827 ರಿಂದ ದುಡಿದನು; ಒಂದು ಅಶನಸೌಕರ್ಯವಿರುವ ಶಾಲೆ ಮತ್ತು ಒಂದು ಆಧ್ಯಾತ್ಮಿಕ ವಿದ್ಯಾಮಂದಿರ ಕೂಡ ಸ್ಥಾಪಿಸಲ್ಪಟ್ಟವು. ರೆ॥ ಬಿ. ರೈಸನು ಮಿಷನರಿ ಚಟುವಟಿಕೆಗಳ ಎಲ್ಲಾ ಶಾಖೆಗಳಲ್ಲೂ ಶ್ರಮಿಸಿದನು. ತಾಳೆಯುಗರಿಯ ಗ್ರಂಥಗಳನ್ನು ಮತ್ತು ಶಾಸನಗಳನ್ನು ಪರಿಷ್ಕರಿಸುವ ಅಮೂಲ್ಯ ಕಾಣಿಕೆಯ ಜೊತೆಗೆ ಬೆಂಗಳೂರಿನ ಬೈಬಲ್‌ಗ್ರಂಥ ಸಮಾಜದ ಕಾರ್ಯದರ್ಶಿಯಾಗಿಯೂ ಕೆಲಸ ಮಾಡಿ, ಒಂದು ಇಂಗ್ಲಿಷ್ ಶಾಲೆಯನ್ನು ತೆರೆದನು ಮತ್ತು ಕನ್ನಡ ಬೈಬಲನ್ನು ಪರಿಷ್ಕರಿಸಿದನು. ಶ್ರೀಮತಿ ಸಿವೆಲ್ ಕ್ರಿ. ಶ. 1840 ರಲ್ಲಿ ಹೆಣ್ಣು ಮಕ್ಕಳಿಗಾಗಿ ಮೊದಲನೆಯ ಕನ್ನಡ ಹಗಲಿನ ಶಾಲೆಯನ್ನು ಸ್ಥಾಪಿಸಿದಳು.

**ಮೈಸೂರು**

ಬೆಂಗಳೂರಿನಲ್ಲಿ ತನ್ನ ಕೇಂದ್ರವಿದ್ದ ವೆಸ್ಲಿಯನ್ ಮಿಷನ್ ಸಂಸ್ಥೆಯು 1820ರಲ್ಲಿ ತನ್ನ ಕಾರ್ಯವನ್ನು ಮೈಸೂರಿನಲ್ಲಾರಂಭಿಸಿತು. ರೆ॥ ಟಿ. ಹಡ್ಸನನು ಕನ್ನಡವನ್ನಾಡುವ ಜನರ ಮಧ್ಯೆ ದುಡಿದು ಇಂದಿಗೂ ನಡೆಯುತ್ತಿರುವ ಇಂಗ್ಲಿಷ್ ಕಲಿಸುವ ಶಾಲೆಯೊಂದನ್ನು 1835 ರಲ್ಲಿ ಕಟ್ಟಿಸಿದನು. ಆತನು ಗುಬ್ಬಿ, ಕುಣಿಗಲ್, ತುಮಕೂರು, ಹಾಸನ ಮತ್ತು ಶಿವಮೊಗ್ಗಗಳಲ್ಲಿ ಬೇಗನೆಯೆ ಹೊಸ ಕೇಂದ್ರಗಳನ್ನು ತೆರೆದನು. ನಾಲ್ಕು ಬಗೆಯ ಶ್ರೇಷ್ಠ ಮಟ್ಟದ ಅಚ್ಚಿನ ಮೊಳೆಗಳು ಕೂಡ ತಯಾರಿಸಲ್ಪಟ್ಟವು.

**ಮಂಗಳೂರು, ಧಾರವಾಡ, ಮಲಬಾರ್, ಕೊಡಗು ಮತ್ತಿತರ ಪ್ರದೇಶಗಳು**

ಈ ಪ್ರದೇಶದಲ್ಲಿ ಬಾಸೆಲ್ ಮಿಷನ್ ಬಹಳಮಟ್ಟಿಗೆ ಶ್ರಮಿಸಿತು. ಅದರ ಮೊದಲ ಮೂವರು ಸುವಾರ್ತಾ ಪ್ರಸಾರಕರಾದ ಹೆಬಿಕ್ ಮತ್ತು ಇತರರು, 1834 ರಲ್ಲಿ ಮಂಗಳೂರಿಗೆ ಬಂದು ಅದನ್ನು ತಮ್ಮ ಕೇಂದ್ರ ಸ್ಥಳವಾಗಿ ಮಾಡಿಕೊಂಡರು. ಅವರು ತಮ್ಮ ಮಿಷನ್ನಿನ ನೆಲೆಗಳನ್ನು 1837 ರಲ್ಲಿ ಧಾರವಾಡದ ಜಿಲ್ಲೆಯಲ್ಲಿ ಆರಂಭಿಸಿದರು, ಮತ್ತು ಕಾಲಕ್ರಮದಲ್ಲಿ ಉನಕಲ್ ಮತ್ತು ಶಾಗೋಟಿ ಮೊದಲಾದಂಥ ಪುಟ್ಟ ಹೊರ ನೆಲೆಗಳಲ್ಲಲ್ಲದೆ ಹುಬ್ಬಳ್ಳಿ, ಬೆಟಗೇರಿ, ಯಲಸಮುದ್ರ, ಗುಳೇದಗುಡ್ಡ, ಮತ್ತು ಬಿಜಾಪುರಗಳಲ್ಲಿಯೂ ಕೇಂದ್ರಗಳನ್ನು ಸ್ಥಾಪಿಸಿದರು.

ಅವರು ಉತ್ತರ ಕರ್ನಾಟಕದಲ್ಲಿ ದುಡಿದು ಒಂದು ಇಂಗ್ಲಿಷ್ ಶಾಲೆಯನ್ನು ಮತ್ತು ಚರ್ಚುಗಳನ್ನು ಕಟ್ಟಿಸಿದರು. ಅವರ ಕಾರ್ಯವು ನೀಲಗಿರಿ, ಕೊಡಗು ಮತ್ತು ಮಲಬಾರಿನ ವರೆಗೂ ವಿಸ್ತೃತವಾಯಿತು. ಅವರು ಚರ್ಚುಗಳನ್ನು ಕಟ್ಟಿದರು; ಪ್ರಾಥಮಿಕ ಶಾಲೆಗಳಿಂದ ಪ್ರೌಢ ಶಾಲೆಗಳ ವರೆಗೆ ವಿದ್ಯಾಸಂಸ್ಥೆಗಳನ್ನು ಕಟ್ಟಿದರು. ನೇಯುವುದು, ಪುಸ್ತಕಗಳಿಗೆ ಬೈಂಡ್ ಮಾಡುವುದು ಮೊದಲಾದ ಔದ್ಯೋಗಿಕ ಹಾಗೂ ವಾಣಿಜ್ಯ ಸಾಹಸೋದ್ಯಮಗಳನ್ನು ಆರಂಭಿಸಿದರು.

ಮೂಲಲೇಖಕರು : ಶ್ರೀ. ಸಿ.ಎಸ್. ದೇವಧರ್

ಅನುವಾದಕರು : ಡಾ॥ ಜಿ.ಎಸ್. ಸಿದ್ಧಲಿಂಗಯ್ಯ

# ಕನ್ನಡ ಸಾಹಿತ್ಯ—ಕ್ರಿ.ಶ. 1565-1760

ಕ್ರಿ.ಶ. 1565 ರಿಂದ 1760 ರ ವರೆಗಿನ ಎರಡು ಶತಮಾನಗಳ ಕಾಲದ ಕನ್ನಡ ಸಾಹಿತ್ಯದ ಚರಿತ್ರೆ ಎಂದರೆ ಬಹುಮಟ್ಟಿಗೆ ಆ ಕಾಲವ ಕವಿಗಳಲ್ಲಿ ಒಬ್ಬೊಬ್ಬನೂ ಪ್ರತ್ಯೇಕವಾಗಿ ಏನು ಸಾಧಿಸಿದ ಎಂಬುದನ್ನು ತಿಳಿಸುವುದು, ಅಷ್ಟೆ; ಅದು ಆ ಕಾಲದ ಸಾಹಿತ್ಯದ ಸಾಮೂಹಿಕ ಚಟುವಟಿಕೆಯ ನಿರೂಪಣೆಯಾಗದು. ಏಕೆಂದರೆ, ಆ ಕಾಲದ ಕರ್ಣಾಟಕದ ಇತಿಹಾಸದ ಸ್ವರೂಪವೆ ಹಾಗಿದೆ: ಒಂದು ಕಡೆ, ವಿಜಯನಗರ ಸಾಮ್ರಾಜ್ಯವು ಒಡೆದುಹೋಗಿ ನಾಶಹೊಂದಿದ ದುಃಖಕರವಾದ ಚಿತ್ರ ಕಂಡುಬರುತ್ತದೆ; ಇನ್ನೊಂದು ಕಡೆ, ಯದುರಾಯ ಮತ್ತು ಕೃಷ್ಣರಾಯರೆಂಬವರು ಕ್ರಿ.ಶ. 1339 ರಲ್ಲಿ ಸ್ಥಾಪಿಸಿ, ಹೊಸತಾಗಿ ಉದಯ ವಾಗುತ್ತಿದ್ದ ಮೈಸೂರು ರಾಜ್ಯದ ಆಶಾದಾಯಕವಾದ ಚಿತ ಕಂಡುಬರುತ್ತದೆ. ವಿಜಯನಗರ ಸಾಮ್ರಾಜ್ಯವು ಕ್ರಿ.ಶ. 1565 ರಲ್ಲಿ ಪತನಹೊಂದಿದ್ದರ ಪರಿಣಾಮವಾಗಿ, ಕನ್ನಡ ಸಾಹಿತ್ಯಕ್ಕೆ ರಾಜಾಶ್ರಯ ತಪ್ಪಿತು; ಅದರ ಬೆಳವಣಿಗೆಗೆ ಬಹುಮಟ್ಟಿಗೆ ಅಡೆತಡೆಯುಂಟಾಯಿತು. ಕ್ರಿ.ಶ. 1669–70ರ ಸುಮಾರಿನಲ್ಲಿ ಮೈಸೂರಿನ ದೊರೆಯಾದ ದೊಡ್ಡ ದೇವರಾಜ ಒಡೆಯರು ವಿಜಯನಗರದ ಅರಸುಮನೆತನದಲ್ಲಿ ಕಟ್ಟಕಡೆಯವನಾದ, ಶ್ರೀರಂಗಪಟ್ಟಣದಲ್ಲಿ ಆಳುತ್ತಿದ್ದ ಶ್ರೀರಂಗನಾಯಕನಿಗೆ ಅಂಟಿಕೊಂಡಿದ್ದ ಸಾರ್ವಭೌಮತ್ವದ ಹೊರ ಗುರುತನ್ನು ಅಳಿಸಿಬಿಟ್ಟರು. ಅಲ್ಲಿಗೆ, ವಿಜಯನಗರ ಸಾಮ್ರಾಜ್ಯದ ಅವಶೇಷವು ಸಂಪೂರ್ಣವಾಗಿ ಕಣ್ಮರೆಯಾಯಿತು. ಇದರಿಂದಾಗಿ ಮುಂದೆ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಮೈಸೂರು ರಾಜ್ಯವನ್ನು ರೂಢಿಸಿಕೊಳ್ಳುವುದಕ್ಕೆ ಅನುಕೂಲವಾಯಿತು. ಚಿಕ್ಕದೇವರಾಜ ಒಡೆಯರು ಸ್ವತಃ ಕವಿಯೆನಿಸಿಕೊಂಡು, ಕವಿಗಳಿಗೆ ದೊಡ್ಡ ಆಶ್ರಯದಾತರಾಗಿದ್ದುದಕ್ಕೆ ಈ ಅನುಕೂಲ ಸನ್ನಿವೇಶವೂ ಒಂದು ಕಾರಣ.

ಈ ಸಂದರ್ಭದಲ್ಲಿ, ಕನ್ನಡ ಸಾಹಿತ್ಯಕ್ಕೆ ಸಣ್ಣಪುಟ್ಟ ದೊರೆಗಳಿಂದಲೂ ಪಾಳೆಯಗಾರರಿಂದಲೂ ದೊರೆತ ಪ್ರೋತ್ಸಾಹವನ್ನೂ ಆಶ್ರಯವನ್ನೂ ಸಂಕ್ಷೇಪವಾಗಿ ನಿರೂಪಿಸುವುದು ಅನುಚಿತವಾಗದು. ಏಕೆಂದರೆ, ಮುಂದೆ ಚಿಕ್ಕದೇವರಾಜ ಒಡೆಯರೂ ಅವರ ತರುವಾಯ ಆಳಿದ ಅರಸರೂ ಸಾಹಿತ್ಯ ಪೋಷಣೆಯ ವಿಚಾರದಲ್ಲಿ ರಾಜರು ಮಾಡಬೇಕಾದ ಕರ್ತವ್ಯವನ್ನು ವಹಿಸಿಕೊಳ್ಳುವ ವರೆಗೆ, ಆ ಆಶ್ರಯ ಪ್ರೋತ್ಸಾಹಗಳಿಂದ ಕನ್ನಡ ನಾಡಿನ ಸಾಹಿತ್ಯದ ಕೃಷಿ ತಕ್ಕಮಟ್ಟಿಗೆ ಜೀವಂತವಾಗಿ ಉಳಿದುಕೊಂಡು ಬರಲು ಸಾಧ್ಯವಾಯಿತು.

**ತುಳುವ ದೇಶದ ಅರಸರು**

ಕೆಲವನೆ ಸಿಂಹಾಸನದ 'ಅರಿರಾಯರ ಗಂಡರ ದಾವಣಿ' ಭೈರವೇಂದ್ರನ ಆದೇಶದಂತೆ ಬಾಹುಬಲಿ ಎಂಬ ಜೈನ ಕವಿ (ಸು. 1560) 'ನಾಗಕುಮಾರ ಚರಿತೆ'ಯನ್ನು ಸಾಂಗತ್ಯದಲ್ಲಿ ಬರೆದನು. ಈತನ ಜನ್ಮಸ್ಥಳ ಶೃಂಗೇರಿ. ಈ ಕೃತಿ 3,600 ಪದ್ಯಗಳನ್ನುಳ್ಳ ಒಂದು ದೀರ್ಘ ಕಾವ್ಯ. ಲೌಕಿಕ ಸಂಪತ್ತನ್ನು ತೃಣವೆಂದು ಬಗೆದು ಮೋಕ್ಷ ಸಂಪತ್ತನ್ನು ಪಡೆದ ಪುರಾಣಪುರುಷ ನಾಗಕುಮಾರನ ಮಹಿಮೆಯನ್ನು ವರ್ಣಿಸುತ್ತದೆ ಈ ಕಾವ್ಯ. ಚಂದ್ರಮನು (ಸು. 1646) ತನ್ನ ಪೋಷಕನಾದ ಇಮ್ಮಡಿ ಭೈರವರಾಯನ ಇಷ್ಟಾನುಸಾರ 'ಕಾರ್ಕಳದ ಗೊಮ್ಮಟೇಶ್ವರ ಚರಿತೆ'ಯನ್ನು ರಚಿಸಿದನು. ಇದರಲ್ಲಿ ಗೊಮ್ಮಟೇಶ್ವರನ ಚರಿತ್ರವೂ

ಕಾರ್ಕಳದಲ್ಲಿ ಗೊಮ್ಮಟನ ಭವ್ಯ ಶಿಲಾಪ್ರತಿಮೆ ಪ್ರತಿಷ್ಠಿತವಾದ ಸಂಗತಿಯೂ ವರ್ಣಿತವಾಗಿವೆ. ಈ ಕಾವ್ಯವೂ ಸಾಂಗತ್ಯದಲ್ಲಿದೆ. ಸಾಂಗತ್ಯ ಛಂದಸ್ಸಿನಲ್ಲಿಯೇ ರಚಿತವಾದ ಇನ್ನೊಂದು ದೊಡ್ಡ ಪ್ರಮಾಣದ ಕೃತಿ ಎಂದರೆ 'ರಾಮಚಂದ್ರ ಚರಿತ್ರ'; 2,191 ಪದ್ಯಗಳುಳ್ಳ ಈ ಗ್ರಂಥವನ್ನು ಬರೆದವನು ತುಳುನಾಡಿನ ಲಕ್ಷ್ಮಣ ಬಂಗರಾಜನ ಆಸ್ಥಾನಕವಿ (ಸು. 1,700). ಚಂದ್ರಶೇಖರನು ಗ್ರಂಥದ ಪೂರ್ವಭಾಗವನ್ನು ಮಾತ್ರ ಬರೆದಿದ್ದನು. ಬರೆಯದೆ ಬಿಟ್ಟಿದ್ದ ಉತ್ತರ ಭಾಗವನ್ನು ಪದ್ಮನಾಭನೆಂಬವನು (ಸು. 1750) ತನ್ನ ಆಶ್ರಯದಾತನಾದ, ತೌಳವ ದೇಶದ ಮೂಲಿಕೆ*ಯ ರಾಜ ಚೆನ್ನರಾಯ ಸಾವಂತನ ಇಚ್ಛೆಯಂತೆ ರಚಿಸಿ, ಗ್ರಂಥವನ್ನು ಪೂರ್ತಿಗೊಳಿಸಿದನು. ಪೂರ್ತಿಯಾದ ಗ್ರಂಥದಲ್ಲಿ ಒಟ್ಟು 5,208 ಪದ್ಯಗಳಿದ್ದು, ಜೈನ ಸಂಪ್ರದಾಯದ ರಾಮಾಯಣ ಕಥೆಯನ್ನು ಹೇಳಿದೆ. 12 ನೆಯ ಶತಮಾನದಲ್ಲಿದ್ದ ನಾಗಚಂದ್ರಕವಿ ರಚಿಸಿದ 'ರಾಮಚಂದ್ರ ಚರಿತ ಪುರಾಣ' ಅಥವಾ 'ಪಂಪ ರಾಮಾಯಣ'ದ ಮೂಲಕ ಈ ಕಥೆ ಸುಪ್ರಸಿದ್ಧವಾಗಿದೆ. ಇದೇ ತುಳುವ ದೇಶಕ್ಕೆ ಸೇರಿದ ಜೈನ ಕವಿಗಳು ವಿರಚಿಸಿದ ಇತರ ಎರಡು ಮೂರು ಕೃತಿಗಳೂ ಸಾಂಗತ್ಯದ ಧಾಟಿಯಲ್ಲಿಯೇ ಇವೆ. ಈ ಎಲ್ಲ ಜೈನ ಕವಿಗಳೂ ತಮ್ಮ ಕೃತಿ ರಚನೆಗೆ, ಸರಾಗವಾಗಿ ಓದುವ ಇಂಪಾದ ಸಾಂಗತ್ಯದ ಧಾಟಿಯನ್ನೇ ಬಳಸಿಕೊಂಡಿರುವ ಸಂಗತಿ ಗಮನಿಸತಕ್ಕದ್ದಾಗಿದೆ. ಇದರಿಂದ ಆ ಕಾಲದಲ್ಲಿ ಸಾಂಗತ್ಯ ಶೈಲಿ ತುಂಬ ಜನಪ್ರಿಯವಾಗಿತ್ತು ಎಂದು ತೋರಿಬರುವುದಲ್ಲದೆ, ರತ್ನಾಕರವರ್ಣಿಯ (1557) ಮಹಾ ಕೃತಿಯಾದ 'ಭರತೇಶ ವೈಭವ'ವು ಆ ಕಾಲದ ಸಾಹಿತ್ಯ ಶೈಲಿಯ ಮೇಲೆ ಅಪಾರ ಪ್ರಭಾವವನ್ನು ಬೀರಿದ್ದಿರಬೇಕು ಎಂಬ ಅಂಶವೂ ಹೊರಪಡುತ್ತದೆ.

ತುಳುವ ಅರಸರಂತೆ, ಚೌಟರೂ ಸಾಹಿತ್ಯವನ್ನು ಪೋಷಿಸಿದರು. ಚೆನ್ನಮ್ಮಾಂಬೆಯ ಆಳಿಕೆಯಲ್ಲಿ ತಿರುಮಲ ಸಾಮಂತನ ಕೋಶಾಧಿಕಾರಿಯಾದ ಪದ್ಮನಾಭನು 'ಪದ್ಮಾವತೀ ಚರಿತೆ'ಯನ್ನು ರಚಿಸಿದನು; ಇದು ಸಾಂಗತ್ಯ ಛಂದಸ್ಸಿನಲ್ಲಿದೆ. ಅಬ್ಬಕ್ಕ ದೇವಿಯ ಆಳಿಕೆಯಲ್ಲಿ ಪಟ್ಟಾಭಿರಾಮನು 'ರತ್ನಶೇಖರ ಚರಿತೆ'ಯನ್ನೂ ಚಂದ್ರಶೇಖರ ಚಿಕ್ಕರಾಯನ ರಾಣಿವಾಸದ ಚೆನ್ನಮ್ಮಾದೇವಿಯ ಅಪ್ಪಣೆಯಂತೆ ಸುರಾಲನು (1761) 'ಪದ್ಮಾವತೀ ಚರಿತೆ'ಯನ್ನೂ ಬರೆದಿರುವುದಾಗಿ ತಿಳಿದುಬರುತ್ತದೆ.

### ಪಾಳೆಯಗಾರರ ಕಾಲ

ಪಾಳೆಯಗಾರರು ಪಾಳೆಯಪಟ್ಟುಗಳನ್ನು ಅಥವಾ ಬಹು ಸಣ್ಣ ರಾಜ್ಯಗಳನ್ನು ಆಳುತ್ತಿದ್ದ ಸಣ್ಣಪುಟ್ಟ ದೊರೆಗಳು. ಪಾಳೆಯ ಪಟ್ಟಿನ ವಿಸ್ತೀರ್ಣ ಒಂದು ಸಣ್ಣ ಊರು, ಅಥವಾ ಕೆಲವು ಹಳ್ಳಿಗಳು ಬಳಸಿರುವ ಸಣ್ಣ ಊರು. ಕೆಲವು ಪಾಳೆಯಗಾರರು ಸ್ವತಃ ಗ್ರಂಥಕರ್ತರಾಗಿದ್ದುದು ಗಮನಾರ್ಹ. ರಸಾವಳಿಯ ಪ್ರಭು ಬೊಮ್ಮರಸನಾಯಕನ ಮಗನಾದ ಶೃಂಗಾರ ಕವಿ (ಸು. 1600) 'ಕರ್ಣಾಟಕ ಸಂಜೀವನ' ಎಂಬ ನಿಘಂಟುವನ್ನು ರಚಿಸಿದ್ದಾನೆ; ಇದು ವಾರ್ಧಕ ಷಟ್ಪದಿಯಲ್ಲಿದೆ. ಶಾಲ್ಯದ ಕೃಷ್ಣರಾಜನು 'ವಿವೇಕಾಭರಣ' ಮುಂತಾದ ಕೃತಿಗಳ ಕರ್ತೃ. ಇಕ್ಕೇರಿಯ ಬಸವಪ್ಪನಾಯಕನು (ಕ್ರಿ.ಶ. 1697–1714) 'ಸೂಕ್ತಿ ಸುಧಾಕರ' ಎಂಬ ವಸ್ತುಕ ಕಾವ್ಯವನ್ನು ಬರೆದಿರುವನೆಂದು 'ಕೆಳದಿ ನೃಪವಿಜಯ' (ಸು. 1750)ದಲ್ಲಿ ಹೇಳಿದೆ. ಈ ಕಾಲದ ಅನೇಕ ಮಂದಿ ಪಾಳೆಯಗಾರರು ಗ್ರಂಥ ರಚನೆಗೆ ಪ್ರೋತ್ಸಾಹ ಕೊಟ್ಟರು. 'ಕವಿಕಂಠಹಾರ' ಎಂಬ ನಿಘಂಟುವನ್ನು ರಚಿಸಿದ ಸೂರ್ಯಕವಿಗೆ ಬೇಲೂರಿನ ವೆಂಕಟಾದ್ರಿ ನಾಯಕನು (ಕ್ರಿ.ಶ. 1626–1643) ಆಶ್ರಯದಾತನಾಗಿದ್ದನು. ಚಿಕ್ಕನಾಯಕನಹಳ್ಳಿಯ ಮುದಿಯಪ್ಪನಾಯಕನ (ಸು. 1623) ಆದೇಶದಂತೆ ಸೋಸಲೆಯ ರೇವಣಾಚಾರ್ಯನು ಕೆಲವು ಸಂಸ್ಕೃತ ಗ್ರಂಥಗಳಿಗೆ ಟೀಕುಗಳನ್ನು

---

*ದಕ್ಷಿಣ ಕನ್ನಡ ಜಿಲ್ಲೆಯ ಈಗಿನ ಮೂಲ್ಕಿ ಇರಬಹುದು.

ಬರೆದನು. ಶಂಕರ ಕವಿಕೃತ ಸಂಸ್ಕೃತದ ' ಬಸವ ಪುರಾಣ 'ಕ್ಕೂ ಗುರುರಾಜಕೃತ ಸಂಸ್ಕೃತ 'ಪಂಡಿತಾರಾಧ್ಯ ಚಾರಿತ್ರ 'ಕ್ಕೂ ಕನ್ನಡದಲ್ಲಿ ವ್ಯಾಖ್ಯಾನಗಳನ್ನು ಬರೆದಿರುವ ಮಲ್ಲಿಕಾರ್ಜುನ ಕವಿಗೆ ಬಿಜ್ಜವರ ಪುರಾಧೀಶ್ವರ ಇಮ್ಮಡಿ ಚಿಕ್ಕ ಭೂಪಾಲನು ಪೋಷಕನಾಗಿದ್ದನು (ಸು. 1593). ಕೆಳದಿಯ ದೊರೆಯಾದ ವೆಂಕಟಪ್ಪ ನಾಯಕನ (ಕ್ರಿ. ಶ. 1582-1629) ಆಜ್ಞಾನುಸಾರ ತಿರುಮಲ ಭಟ್ಟನು ಪದ್ಮಪುರಾಣದಲ್ಲಿನ ' ಶಿವಗೀತೆ 'ಯನ್ನು ಕನ್ನಡದಲ್ಲಿ ವಾರ್ಧಕಷಟ್ಪದಿಯಲ್ಲಿ ಬರೆದನು. ಕಳಲೆಯ ವೀರರಾಜನ ಆದೇಶದಂತೆ ಚೆನ್ನಯ್ಯನು ' ಪದ್ಮಿನೀ ಪರಿಣಯ'ವನ್ನು ರಚಿಸಿದನು ; ಕಳಲೆ ವೀರರಾಜನು (ಸು. 1720) ಸ್ವತಃ ಕವಿಯಾಗಿದ್ದು, ' ವೈದ್ಯ ಸಂಹಿತ ಸಾರಾರ್ಣವ ' ಎಂಬ ಆಯುರ್ವೇದ ಶಾಸ್ತ್ರ ಗ್ರಂಥವನ್ನು ಪದ್ಯ ರೂಪದಲ್ಲಿ ಬರೆದನು. ಈ ವೀರರಾಜನ ಮಗನಾದ ದೇವರಾಜನು 'ತುಲಾಕಾವೇರಿ ಮಾಹಾತ್ಮ್ಯ'ದ ಕರ್ತೃ ವಾದ ರಂಗಯ್ಯನಿಗೆ ಪೋಷಕನಾಗಿದ್ದನು. ದೇವರಾಜನ ಕಿರಿಯ ತಮ್ಮನಾದ ನಂಜರಾಜನು ಸ್ವತಃ ಅನೇಕ ಗ್ರಂಥಗಳ ಕರ್ತೃವಾಗಿದ್ದುದಲ್ಲದೆ, ನೂರೊಂದ ಮತ್ತು ವೆಂಕಟೇಶ ಎಂಬ ಕವಿಗಳಿಗೆ ಆಶ್ರಯ ದಾತ ನಾಗಿದ್ದನು. ನೂರೊಂದನು 'ಸೌಂದರ ಕಾವ್ಯ 'ದ ಕರ್ತೃ; ಹರಿಹರಕವಿ ವಿರಚಿತ 'ನಂಬಿಯಣ್ಣನ ರಗಳೆ'ಯ ಕಥಾನಾಯಕನಾದ ಸೌಂದರನನ್ನು ಕುರಿತದ್ದು ಈ ಕಾವ್ಯ. ಇದು ಸಾಂಗತ್ಯದಲ್ಲಿದೆ. ವೆಂಕಟೇಶನು ' ಹಾಲಾಸ್ಯ ಮಾಹಾತ್ಮ್ಯ' ಎಂಬ ಚಂಪೂ ಕಾವ್ಯವನ್ನು ಬರೆದನು.

ಈ ಕಾಲಾವಧಿಯಲ್ಲಿ, ಮೇಲೆ ಹೇಳಿದ ಕೃತಿಗಳಲ್ಲದೆ, ವಿವಿಧ ವಿಷಯಗಳನ್ನು ಕುರಿತು ಬೇರೆ ಬೇರೆ ಪ್ರಕಾರಗಳಲ್ಲಿ ನೂರಕ್ಕೂ ಹೆಚ್ಚಿನ ಸಂಖ್ಯೆಯ ಕೃತಿಗಳು ನಿರ್ಮಾಣವಾಗಿವೆ ; ಅವುಗಳ ಕರ್ತೃಗಳು ಯಾರೋ ತಿಳಿಯದು. ಈ ಕೃತಿಗಳ ವಿಷಯವ್ಯಾಪ್ತಿಯನ್ನು ಸ್ಥೂಲವಾಗಿ ಪರಿಚಯ ಮಾಡಿಕೊಳ್ಳುವ ದೃಷ್ಟಿಯಿಂದ ಕೆಲವು ವಿಚಾರಗಳನ್ನು ಇಲ್ಲಿ ಪ್ರಸ್ತಾವಿಸಬಹುದು :

' ಕಾವ್ಯಸಾರ ' (ಸು. 1700)—ಇದು 225 ವೃತ್ತ ಕಂದಪದ್ಯಗಳ ಸಂಕಲನ[1]. ' ಬಿಳಿಗಿಯರಸರ ವಂಶಾವಳಿ ' (ಸು. 1700)—ಐಸೂರು ಪಟ್ಟಣವನ್ನು ಆಳಿದ ಕೆಲವು ದೊರೆಗಳ ವಿಷಯವಾಗಿ ಚಂಪೂಶೈಲಿಯಲ್ಲಿ ಬರೆದ ಗ್ರಂಥ. ' ಹರಿಶ್ಚಂದ್ರ ಸಾಂಗತ್ಯ ' (ಸು. 1700) ; 2500 ಪದ್ಯಗಳನ್ನುಳ್ಳ 'ಕೃಷ್ಣಕಥೆ' ; 'ಗಂಗಾ ಗೌರೀ ಸಂವಾದ' ; ' ಕುಶಲವೋಪಾಖ್ಯಾನ ' ಗದ್ಯಕೃತಿ ; 'ಶಂಕರರಾಮಾಯಣ'— ಭಾಮಿನೀಷಟ್ಪದಿಯಲ್ಲಿರುವ ಈ ಕಾವ್ಯದಲ್ಲಿ 3,300 ಪದ್ಯಗಳಿದ್ದು, ಈಶ್ವರನು ಪಾರ್ವತಿಗೆ ರಾಮಾಯಣದ ಕಥೆಗಳನ್ನು ಹೇಳಿದಂತೆ ನಿರೂಪಿಸಿದೆ ; ' ಕೆಳದಿ ನೃಪವಿಜಯ ' (ಸು. 1750)—ಹನ್ನೊಂದು ಆಶ್ವಾಸಗಳ ಚಂಪೂಕಾವ್ಯ ; ಶಂಕರಸಂಹಿತೆ ' ; ' ಮಹಾನವಮಿಯ ಪದ '—ಸುಮಾರು ಐವತ್ತು ವರ್ಷಗಳ ಹಿಂದೆ ಮೈಸೂರು ಪ್ರಾಂತದ ಸಾಮಾನ್ಯ ಜನರ ನಾಲಗೆಯ ಮೇಲೆ ನಲಿಯುತ್ತಿದ್ದ ಈ ಕೃತಿ, ನವರಾತ್ರಿಯ ಮಹಾನವಮಿಯ ಹಬ್ಬದ ವೈಭವವನ್ನೂ ವಿಶೇಷಗಳನ್ನೂ ಸರಳ ಸುಂದರ ಶೈಲಿಯ ಚೌಪದಿಗಳಲ್ಲಿ ವರ್ಣಿಸುತ್ತದೆ ; ' ಕುಶಲವ ಕಾಳಗ ' ಇದೊಂದು ಯಕ್ಷಗಾನ. ಮೇಲೆ ಹೇಳಿದವುಗಳಲ್ಲಿ ಕೆಳದಿ ಸಂಸ್ಥಾನದ ದೊರೆಯ ವಿಜಯಗಳನ್ನು ವರ್ಣಿಸುವ ' ಕೆಳದಿನೃಪವಿಜಯ 'ವು ಒಂದು ಗಮನಾರ್ಹ ಕೃತಿ. ಇದು ' ಕಂಠೀರವ ನರಸರಾಜ ವಿಜಯ ' ಹಾಗೂ ' ಚಿಕ್ಕದೇವರಾಜ ವಂಶಾವಳಿ 'ಗಳಂತೆ ಐತಿಹಾಸಿಕ ಪ್ರಾಮುಖ್ಯವುಳ್ಳದ್ದು.

ಕನ್ನಡ ಸಾಹಿತ್ಯದ (ಕ್ರಿ.ಶ. 1565 ರಿಂದ 1760ರ ವರೆಗಿನ) ಎರಡು ಶತಮಾನಗಳ ಕಾಲಾವಧಿಯನ್ನು ಪರಿಶೀಲನೆಯ ಸೌಕರ್ಯಕ್ಕಾಗಿ ಮೂರು ಸ್ಥೂಲ ವಿಭಾಗಗಳನ್ನಾಗಿ ಇಟ್ಟುಕೊಳ್ಳಬಹುದು. ಹಾಗೆ

---

1. ಮಲ್ಲಿಕಾರ್ಜುನನ (1245) ' ಸೂಕ್ತಿಸುಧಾರ್ಣವ ' ಎಂಬ ಸಂಕಲನ ಗ್ರಂಥಕ್ಕೂ ಕಾವ್ಯಸಾರ ಎಂಬ ನಾಮಾಂತರವಿದೆ. ಅಭಿನವವಾದಿ ವಿದ್ಯಾನಂದನ 'ಕಾವ್ಯಸಾರ' (ಸು. 1553) ಸೂಕ್ತಿಸುಧಾರ್ಣವವನ್ನು ಹೋಲುವ ಇನ್ನೊಂದು ಗ್ರಂಥ.

ಇಟ್ಟುಕೊಂಡರೆ, ಚಿಕ್ಕದೇವರಾಜ ಒಡೆಯರ ಆಳಿಕೆಯ ಕಾಲ ಮಧ್ಯಭಾಗಕ್ಕೆ ಬೀಳುತ್ತದೆ. ಈ ಕಾಲಾವಧಿಯಲ್ಲಿ ಹೊಸ ಧಾರ್ಮಿಕ ಪ್ರಭಾವಗಳು ಯಾವವೂ ಇರಲಿಲ್ಲ; ಆದ್ದರಿಂದ, ಸಾಹಿತ್ಯ ಪ್ರಪಂಚದಲ್ಲಿಯೂ ಹೊಸ ಚಳವಳಿಗಳಾಗಲಿ ಹೊಸ ಸಾಹಿತ್ಯ ಪ್ರಕಾರಗಳಾಗಲಿ ರೂಪಗೊಳ್ಳಲಿಲ್ಲ. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ರೂಪಗೊಂಡ ಸಾಹಿತ್ಯ ಸಂಪ್ರದಾಯಗಳೇ ಈ ಕಾಲದಲ್ಲಿಯೂ ನೆಲೆನಿಂತು, ಮುಂದುವರಿದವು. ಅಂದಿನ ಸಾಹಿತ್ಯದ ಮೇಲೆ ಜೈನಧರ್ಮದ ಪ್ರಭಾವವು ಇಳಿಮುಖ ವಾಗುತ್ತಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ. ವೀರಶೈವ ಕವಿಗಳ ಸಂಖ್ಯೆಗೇನೂ ಕಡಮೆ ಯಿಲ್ಲದಿದ್ದರೂ ವೀರಶೈವದ ಪ್ರಭಾವವು ಕುಗ್ಗುತ್ತ ಬಂದಿದೆ. ಬ್ರಾಹ್ಮಣ ಕವಿಗಳ ಬರಹ ಕ್ರಮ ಕ್ರಮವಾಗಿಯೇ ಆದರೂ ಗಮನಾರ್ಹವಾಗಿ ಏರುಮುಖವಾಗಿದೆ. ಶೈಲಿಯ ದೃಷ್ಟಿಯಿಂದ ಪರಿಶೀಲಿಸಿದರೆ ವಿಶೇಷವಾಗಿ ಹಿಂದಿನ ಜೈನಕವಿಗಳಿಗೆ ಪ್ರಿಯವಾಗಿದ್ದ ‘ಮಾರ್ಗ’ ಅಥವಾ ಚಂಪೂಶೈಲಿ ಹಿಂದಕ್ಕೆ ಸರಿದು, ‘ದೇಸಿ’ ಶೈಲಿಯ ಜನಪ್ರಿಯ ಛಂದಸ್ಸುಗಳಾದ ಷಟ್ಪದಿ, ಸಾಂಗತ್ಯ, ತ್ರಿಪದಿ, ರಗಳೆ ಬಹುಮಟ್ಟಿಗೆ ಎಲ್ಲ ಕವಿಗಳಿಗೂ ಮೆಚ್ಚಿಗೆಯಾಗಿರುವುದು ಕಂಡುಬರುತ್ತದೆ. ಹದಿಮೂರನೆಯ ಶತಮಾನದಲ್ಲಿ ಶಿವಶರಣರು ಪ್ರಚಾರಕ್ಕೆ ತಂದ ವಚನಸಾಹಿತ್ಯವಾಗಲಿ, ಹದಿನಾರನೆಯ ಶತಮಾನದಲ್ಲಿ ಹರಿದಾಸರು ಹಾಡಿ ಹಬ್ಬಿಸಿದ ‘ಪದ’ ಅಥವಾ ಕೀರ್ತನಸಾಹಿತ್ಯವಾಗಲಿ, ಈ ಕಾಲದಲ್ಲಿ ವ್ಯಾಪಕವಾಗಿ ಸೃಷ್ಟಿಯಾಗಲಿಲ್ಲ. ಈ ಕಾಲದ ಬರಹಗಾರರು ‘ಯಕ್ಷಗಾನ’ವನ್ನು ಒಂದು ಕಾವ್ಯಪ್ರಕಾರವಾಗಿಯೇ ಸ್ವೀಕರಿಸಿದಂತೆ ಕಾಣುತ್ತದೆ. ಯಕ್ಷಗಾನವು ಬಹುಶಃ ಕನ್ನಡನಾಡಿನ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ಹೆಸರಿನಿಂದ ಬಹು ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದ್ದ ದೇಸಿ ಗೇಯನಾಟಕ ಕಲೆ. ಇನ್ನು ವಿಷಯ ದೃಷ್ಟಿಯಿಂದ ನೋಡುವುದಾದರೆ ಶೈವ ಮತ್ತು ಭಾಗವತ ಪುರಾಣಗಳ ಕಥೆಗಳು ರಾಮಾಯಣ ಮಹಾಭಾರತಗಳ ಕಥಾಸನ್ನಿವೇಶಗಳು ಇವುಗಳಿಂದಲೆ ಸಾಮಾನ್ಯವಾಗಿ ಕವಿಗಳು ತಮ್ಮ ‘ವರ್ಣಕ’ (ಅಥವಾ ಕಥನ) ಕಾವ್ಯಗಳಿಗೆ ವಸ್ತುವನ್ನು ಆಯ್ದುಕೊಳ್ಳುತ್ತಿದ್ದರು; ಕವಿಗಳು ಜೈನಮತೀಯರಾಗಿದ್ದರೆ, ಜೈನ ಪುರಾಣಗಳಿಂದ ಆಯ್ದು ಕೊಳ್ಳುತ್ತಿದ್ದರು. ಅನೇಕ ಶತಕಗಳಲ್ಲಿಯೂ ಸ್ತೋತ್ರರೂಪದ ಕೃತಿಗಳಲ್ಲಿಯೂ ದೈವಭಕ್ತಿ ಕಾವ್ಯಾಭಿ ವ್ಯಕ್ತಿಯನ್ನು ಪಡೆಯಿತು. ಆಳರಸರ ವಿಜಯಗಳನ್ನೂ ಸಾಧನೆಗಳನ್ನೂ ಹಾಡಿ ಹೊಗಳುವ ಪ್ರಶಂಸಾತ್ಮಕ ಕೃತಿಗಳಾದ ‘ಕಂಠೀರವ ನರಸರಾಜ ವಿಜಯ’ ಮತ್ತು ‘ಚಿಕ್ಕದೇವರಾಯ ವಂಶಾವಳಿ’ ಯಂಥ ಬರಹಗಳಲ್ಲಿ ಜೀವನ ಚರಿತ್ರೆಯ ಲಕ್ಷಣವೂ ಐತಿಹಾಸಿಕ ಗುಣವೂ ಸರಿಬೆರಕೆಯಾಗಿ, ಹೊಸತೊಂದು ಸಾಹಿತ್ಯಸ್ವರೂಪವನ್ನು ಮೆರೆದುವು. ಜ್ಯೋತಿಷ, ವೈದ್ಯ. ಗಣಿತ ಮೊದಲಾದ ಶಾಸ್ತ್ರ ವಿಷಯಗಳನ್ನು ಕುರಿತು ಪದ್ಯದಲ್ಲಿ ರಚಿತವಾದ ಗ್ರಂಥಗಳು ಆ ಕಾಲದ ವಾಙ್ಮಯಕ್ಕೆ ವೈವಿಧ್ಯವನ್ನು ತಂದುಕೊಟ್ಟವು. ಕನ್ನಡ ಸಾಹಿತ್ಯ ವಾಹಿನಿ ಅವಿಚ್ಛಿನ್ನವಾಗಿ ಹರಿಯುತ್ತಲೇ ಇದ್ದಿತು. ಅದರ ಪ್ರಮಾಣ ಕುಗ್ಗಲಿಲ್ಲ, ಪಾತ್ರವಿಸ್ತಾರ ಹೆಚ್ಚು ಅಗಲವಾಗಿತ್ತು; ಆದರೆ ಅದರ ಹಿಂದಿನ ಆಳವೂ ರಭಸವೂ ಸ್ವಲ್ಪಮಟ್ಟಿಗೆ ನಷ್ಟವಾಗಿದ್ದುವು. ಈ ಅವಧಿಯಲ್ಲಿ ಸುಮಾರು 250 ಜನ ಕವಿಗಳು ಪ್ರವರ್ಧಮಾನಕ್ಕೆ ಬಂದರು ಎಂಬ ಸಂಗತಿ ಗಮನಾರ್ಹ. ಇದರ ಜೊತೆಗೆ, ದಿವಂಗತ ಆರ್. ನರಸಿಂಹಾಚಾರ್ಯರು ತಮ್ಮ ‘ಕವಿ ಚರಿತೆ’ಯಲ್ಲಿ (ಸಂಪುಟ 3, ಪುಟಗಳು 282–320) ಸುಮಾರು 120 ಮಂದಿ ಅಜ್ಞಾತ ಕವಿಗಳ ಕೃತಿಗಳ ವಿಷಯವಾಗಿ ಉಲ್ಲೇಖಿಸಿರುವುದನ್ನೂ ಗಮನಿಸಬೇಕು.

ಈ ಹಿಂದೆಯೇ ಗಮನಿಸಿರುವಂತೆ, ಷಟ್ಪದಿ ಛಂದಸ್ಸಿನಲ್ಲಿ ರಚಿತವಾದ ಕೃತಿಗಳು ಪ್ರಮುಖ ಸ್ಥಾನವನ್ನು ಆಕ್ರಮಿಸಿಕೊಂಡಿವೆ. ಬಹುಶಃ ರತ್ನಾಕರನ ‘ಭರತೇಶವೈಭವ’ದ ಪ್ರಭಾವದಿಂದಾಗಿ ಸಾಂಗತ್ಯದ ಧಾಟಿ ಆ ಕಾಲಕ್ಕೆ ಜನಪ್ರಿಯವಾಗಿದ್ದಿರಬೇಕು. ಆದ್ದರಿಂದ, ಷಟ್ಪದಿಯನ್ನು ಬಿಟ್ಟರೆ, ಸಾಂಗತ್ಯದ ಕೃತಿಗಳು ಪ್ರಮುಖವಾಗಿ ಕಂಡುಬರುತ್ತವೆ. ಕಥಾ ನಿರೂಪಣೆಗೂ ಗಮಕರೀತಿಯಲ್ಲಿ ಹಾಡುವುದಕ್ಕೂ ಈ ಎರಡು ಛಂದಃ ಪ್ರಕಾರಗಳೂ ಅನುಕೂಲಿಸುವ ಪ್ರಯುಕ್ತ, ಇವುಗಳಲ್ಲಿ ಕೃತಿ ರಚನೆ

ಹೆಚ್ಚಾಗಿ ನಡೆದಿರುವಂತೆ ತೋರುತ್ತದೆ. ಈ ಕಾಲದಲ್ಲಿ ರಚಿತವಾದ ಷಟ್ಪದಿ ಕಾವ್ಯಗಳಾದ ' ಚೆನ್ನಬಸವ ಪುರಾಣ ' ಮತ್ತು 'ಜೈಮಿನಿ ಭಾರತ'ಗಳು ' ಕುಮಾರವ್ಯಾಸ ಭಾರತ 'ದಂತೆಯೆ ಜನಪ್ರಿಯವಾಗಿರುವುದಕ್ಕೆ ಇದೂ ಒಂದು ಕಾರಣ. ಚಂಪೂಕಾವ್ಯ ರಚನೆಗೆ ಕನ್ನಡ ಮತ್ತು ಸಂಸ್ಕೃತಭಾಷೆಗಳಲ್ಲಿ ಉನ್ನತ ಮಟ್ಟದ ಪಾಂಡಿತ್ಯ ಬೇಕು; ಆದ್ದರಿಂದ, ಚಿಕ್ಕದೇವರಾಜ ಒಡೆಯರು ಕಾವ್ಯಕಲೆಯೊಂದಿಗೆ ಪಾಂಡಿತ್ಯಕ್ಕೂ ಕೊಟ್ಟ ಉತ್ತೇಜನದ ಪರಿಣಾಮವಾಗಿ, ಅವರ ಕಾಲದಲ್ಲಿ ಚಂಪೂಕಾವ್ಯ ರಚನೆ ಪುನರುಜ್ಜೀವನಗೊಂಡದ್ದು ಸಹಜವಾಗಿಯೆ ಇದೆ.

### ಚಿಕ್ಕದೇವರಾಜ ಒಡೆಯರ ಹಿಂದಿನ ಕಾಲ

ಈ ಕಾಲದಲ್ಲಿ ರಚಿತವಾದ ಸುಮಾರು 20 ಷಟ್ಪದಿ ಕಾವ್ಯಗಳ ಪೈಕಿ ಎರಡು ತಮ್ಮ ಕಾವ್ಯಗುಣದ ಮೇಲ್ಮೆಯಿಂದ ಉಳಿದವನ್ನು ಹಿಂದಿಕ್ಕಿ ನಿಲ್ಲುತ್ತವೆ. ಒಂದು, ಲಕ್ಷ್ಮೀಶ ಕವಿಯ ' ಜೈಮಿನಿ ಭಾರತ '; ಇನ್ನೊಂದು, ವಿರೂಪಾಕ್ಷ ಪಂಡಿತನ ' ಚೆನ್ನಬಸವ ಪುರಾಣ '. ಇವೆರಡೂ ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿವೆ. ' ಚೆನ್ನಬಸವ ಪುರಾಣ 'ದ ರಚನೆಯ ಕಾಲ ಕ್ರಿ.ಶ. 1584 ಎಂದು ಖಚಿತವಾಗಿ ತಿಳಿದು ಬಂದಿದೆ; ' ಜೈಮಿನಿ ಭಾರತ 'ದ ರಚನಾಕಾಲ ಮಾತ್ರ ಇನ್ನೂ ಅನಿಶ್ಚಿತವಾಗಿಯೆ ಉಳಿದಿದೆ. ಹೀಗಿದ್ದರೂ ಲಕ್ಷ್ಮೀಶನು ಕ್ರಿ.ಶ. 1500 ರಿಂದ 1600 ವರೆಗಿನ ನಡುವಣ ಕಾಲದಲ್ಲಿ ಇದ್ದನೆಂದು ಹೇಳಲಡ್ಡಿಯಿಲ್ಲ.

ಲಕ್ಷ್ಮೀಶನ ಜನ್ಮಸ್ಥಳ ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲೂಕಿಗೆ ಸೇರಿದ ದೇವನೂರು ಎಂದು ಸಾಮಾನ್ಯವಾಗಿ ಎಲ್ಲರ ನಂಬಿಕೆ. ದೇವನೂರಿನ ಅಧಿದೈವವಾದ ಶ್ರೀ ಲಕ್ಷ್ಮೀರಮಣ ಸ್ವಾಮಿಯ ಭಕ್ತ ಅವನು. ತನ್ನ ಇಷ್ಟದೈವವಾದ ಲಕ್ಷ್ಮೀರಮಣನ ಅಂಕಿತದಲ್ಲಿಯೆ ಅವನು ಕಾವ್ಯರಚನೆ ಮಾಡಿದ್ದಾನೆ. ಅವನ ಕಾವ್ಯವು ಸಂಸ್ಕೃತದಲ್ಲಿರುವ ಜೈಮಿನಿ ಭಾರತದ ಕನ್ನಡ ಅನುವಾದ. ಶ್ರೀಕೃಷ್ಣನ ಸಹಾಯದಿಂದ ಯುಧಿಷ್ಠಿರನು ನೆರವೇರಿಸಿದ ಅಶ್ವಮೇಧ ಯಾಗದ ಕಥೆಯನ್ನು ನಿರೂಪಿಸುತ್ತದೆ ಈ ಕಾವ್ಯ. ಕನ್ನಡ ಜೈಮಿನಿ ಭಾರತವು ಸಂಸ್ಕೃತ ಮೂಲಕೃತಿಯ ಭಾಷಾಂತರ ಮಾತ್ರವಲ್ಲ; ಆದರೂ ಅವನು ಮೂಲವನ್ನು ನೇರವಾಗಿ ಅನುಸರಿಸಿದ್ದಾನೆ. ಅವನು ಮೂಲದ ಕೆಲವು ಭಾಗಗಳನ್ನು ಬಿಟ್ಟುಬಿಟ್ಟಿರುವುದು ಒಪ್ಪಿಕೊಳ್ಳುವಂತೆಯೇ ಇದೆ. ಮೂಲದ ಸರಣಿಯನ್ನು ಬಿಟ್ಟು ಸರಿದಿರುವ ಸಂದರ್ಭಗಳು ಬಹಳ ಕಡಮೆ ಎಂದೇ ಹೇಳಬೇಕು. ವರ್ಣನೆಗಳಲ್ಲಿಯೂ ಪಾತ್ರ ನಿರೂಪಣದಲ್ಲಿಯೂ ಅವನು ತನ್ನತನವನ್ನು ಮೆರೆದಿದ್ದಾನೆ, ಕಲ್ಪನಾಶಕ್ತಿಯನ್ನು ತೋರಿಸಿಕೊಂಡಿದ್ದಾನೆ. ಲವಕುಶರ ಕಾಳಗದ ಪ್ರಕರಣದಲ್ಲಿ ಸೀತೆಯ ಪಾತ್ರ ಅವನ ಪಾತ್ರ ನಿರ್ಮಾಣ ಕೌಶಲಕ್ಕೆ ಒಂದು ನಿದರ್ಶನ. ಮೂಲಕೃತಿಯಲ್ಲಿಯೆ ಕಂಡುಬರುವ ಕೃಷ್ಣ ಭಕ್ತಿಗೆ ಲಕ್ಷ್ಮೀಶನು ಹೆಚ್ಚಿನ ಹೊಳಪನ್ನು ಕೊಟ್ಟು, ಅದರ ಪ್ರತಿಪಾದನೆಯನ್ನು ಕಾವ್ಯದ ಮುಖ್ಯಾಶಯವಾಗಿ ಕಾಣುವಂತೆ ನಿರ್ವಹಿಸಿದ್ದಾನೆ. ಇದರ ಪರಿಣಾಮವಾಗಿ ಕಲಾದೃಷ್ಟಿಯಿಂದ ಕಾವ್ಯಕ್ಕೆ ಒಂದು ಅಖಂಡ ಸ್ವರೂಪ ಲಭಿಸಿದೆ. ಹೀಗಿಲ್ಲದೆ ಹೋಗಿದ್ದರೆ, ಪರಸ್ಪರ ಸಂಬಂಧವಿಲ್ಲದ ಕಥೆಗಳ ಒಂದು ಗೊಂಚಲಾಗಿ ಬಿಡುತ್ತಿದ್ದಿತು ಕೃತಿ. ಆದ್ದರಿಂದ, ಪರಿಣಾಮವಾಗಿ, ಈ ಕಥೆಗಳಲ್ಲಿ ಬರುವ ಯೌವನಾಶ್ವ, ಸುಧನ್ವ, ಬಭ್ರುವಾಹನ, ಚಂದ್ರಹಾಸ–ಮುಂತಾದ ವೀರರೆಲ್ಲರೂ ಪರಮ ವೈಷ್ಣವರೆನಿಸಿದ್ದಾರೆ. ಜೈಮಿನಿ ಭಾರತ ಇಂದಿಗೂ ತನ್ನ ಅಪಾರ ಜನಪ್ರಿಯತೆಯನ್ನು ಉಳಿಸಿಕೊಂಡಿದೆ. ವಿಮರ್ಶಕರು ಲಕ್ಷ್ಮೀಶನಿಗೆ ಕೊಟ್ಟಿರುವ ' ಉಪಮಾಲೋಲ ' ಮತ್ತು ' ನಾದಲೋಲ ' ಎಂಬ ವಿಶೇಷಣಗಳಿಗೆ ಅವನು ಸಂಪೂರ್ಣವಾಗಿ ಅರ್ಹನಾಗಿದ್ದಾನೆ. ಪದ್ಯದ ಮೂಲಕ ಕಥೆ ಹೇಳುವ ಉತ್ತಮ ಮಟ್ಟದ ಕಲೆ ಅವನಿಗೆ ಸಿದ್ಧಿಸಿದೆ.

ವೀರಶೈವ ಕವಿಗಳಿಂದ ರಚಿತವಾದ ವೀರಶೈವ ಪುರಾಣಗಳಲ್ಲಿ ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣವೂ ಒಂದು. ಬಸವೇಶ್ವರರ ಸೋದರಳಿಯನಾದ ಚೆನ್ನಬಸವನ ಜೀವನವೂ ಅವನ ಸಾಧನೆ

ಸಿದ್ದಿಗಳೂ ಈ ಕೃತಿಯಲ್ಲಿ ಮೊತ್ತಮೊದಲಿಗೆ ಆಕರ್ಷಕವಾದ ಕಾವ್ಯರೂಪವನ್ನು ಪಡೆದಿವೆ. ಚೆನ್ನಬಸವನ ಸುತ್ತ ಒಂದು ಪೌರಾಣಿಕ ಪ್ರಭೆ ಹರಡಿಕೊಂಡಿದ್ದು, ಆತ ಒಬ್ಬ ಅವತಾರ ಪುರುಷನಂತೆ ಕಂಗೊಳಿಸುತ್ತಾನೆ. ಇ. ಪಿ. ರೈಸ್ ಅವರ ಮಾತಿನಲ್ಲಿ ಹೇಳುವುದಾದರೆ, "ಚೆನ್ನಬಸವನನ್ನು ಶಿವನ ಅವತಾರವೆಂದೇ ಪರಿಗಣಿಸಲಾಗಿದೆ. ಅವನು ಕಲ್ಯಾಣದಲ್ಲಿ ಜನ್ಮವೆತ್ತಿ ಮಹಿಮಾವಂತನಾದುದನ್ನು ಕೃತಿ ನಿರೂಪಿಸುತ್ತದೆ; ಆದರೂ, ಕೃತಿಯಲ್ಲಿ ಹೆಚ್ಚಾಗಿ ಕಂಡುಬರುವ ವಿಷಯಗಳೆಂದರೆ ವೀರಶೈವ ಸಿದ್ಧಾಂತ ಸಮಸ್ತವನ್ನೂ ಕುರಿತು ಅವನು ಸೊನ್ನಲಿಗೆಯ ಸಿದ್ಧರಾಮನಿಗೆ ಮಾಡಿದ ಉಪದೇಶ, ಸೃಷ್ಟಿ ವಿಚಾರ, ಶಿವನು ಮೆರೆದ ಅದ್ಭುತ ಲೀಲೆಗಳು, ಶಿವಾಚಾರದ ಅದ್ಭುತ ಮಹಿಮೆ, ಶಿವಶರಣರ ಕಥೆಗಳು—ಇವೇ ಆಗಿವೆ. ಈ ಕಾರಣದಿಂದಾಗಿ, ಅದು ಲಿಂಗಾಯತ ಮತಸ್ಥರಾದ ಓದುಗರಿಗೆ ವಿಶೇಷ ಪ್ರಿಯವಾಗಿದೆ. ಅಲ್ಲದೆ, ಕನ್ನಡ ಸಾಹಿತ್ಯದ ಇತಿಹಾಸಕಾರನಿಗೆ ಅದು ಬಹು ಉಪಯುಕ್ತವಾಗಿದೆ. ಏಕೆಂದರೆ, ಮುಂಚಿನ ವೀರಶೈವ ಸಂತರ ಮತ್ತು ಕವಿಗಳ ಅಂದಾಜು ಕಾಲಗಳನ್ನು ನಿರ್ಣಯಿಸುವುದಕ್ಕೆ ಅದು ಬಹುಮಟ್ಟಿಗೆ ನೆರವಾಗುತ್ತದೆ" (History of Kanarese Literature, p. 68).

ಬ್ರಾಹ್ಮಣ ಕವಿಗಳಾದ ಕುಮಾರವ್ಯಾಸ ಮತ್ತು ಲಕ್ಷ್ಮೀಶ ಇವರು ನಿರ್ಮಿಸಿದ ಸಂಪ್ರದಾಯದಲ್ಲಿ ಇನ್ನು ಕೆಲವು ಪೌರಾಣಿಕ ಗ್ರಂಥಗಳು ಗಮನಾರ್ಹವಾಗಿವೆ. 'ಚಿತ್ರಭಾರತ' ಎಂಬ ವಾರ್ಧಕ ಷಟ್ಪದಿಯ ಕಾವ್ಯವನ್ನು ಗೋಪಕವಿ ಕ್ರಿ.ಶ. 1581ರಲ್ಲಿ ಬರೆದನು; ಸ್ವಲ್ಪಕಾಲವಾದ ಮೇಲೆ 'ನಂದಿಮಾಹಾತ್ಮ್ಯ' ವನ್ನು ಕುಸುಮಷಟ್ಪದಿಯಲ್ಲಿ ರಚಿಸಿದನು. ಮಹಾಭಾರತದ ಕಥೆಯನ್ನು ನಿರೂಪಿಸುವ ಚಿತ್ರಭಾರತ ಶಬ್ದಾಲಂಕಾರ ಭೂಯಿಷ್ಠವಾದ ಚಿತ್ರಕವಿತ್ವ ಪ್ರಧಾನವಾದದ್ದರಿಂದ ಆ ವಿಶಿಷ್ಟವಾದ ಹೆಸರನ್ನು ಹೊಂದಿದೆ. ನಂದಿಮಾಹಾತ್ಮ್ಯದ ಕಥಾವಸ್ತು ಆಕರ್ಷಕವಾದುದಲ್ಲ; ಆದರೆ ಇದರ ಕಾವ್ಯಶೈಲಿ ಹೆಚ್ಚು ಪರಿಪಕ್ವವಾಗಿದೆ. ನಾಗರಸನು (ಸು.ಕ್ರಿ.ಶ. 1650) ಮಾಡಿರುವ ಭಗವದ್ಗೀತೆಯ ಅನುವಾದ ಮೂಲವನ್ನು ಚೆನ್ನಾಗಿ ಪ್ರತಿಬಿಂಬಿಸುತ್ತದೆ. ಸೋಮನಾಥ ಕವಿಯ 'ಅಕ್ರೂರ ಚರಿತೆ'ಯೂ (ಕ್ರಿ.ಶ.ಸು. 1600) ನರಹರಿಯ 'ಪ್ರಹ್ಲಾದ ಚರಿತ್ರೆ'ಯೂ ಸುಪ್ರಸಿದ್ಧ ಕಥೆಗಳ ಮೂಲಕ ವಿಷ್ಣುಭಕ್ತಿಯ ಪ್ರಾಶಸ್ತ್ಯವನ್ನು ನಿರೂಪಿಸುತ್ತವೆ. ತಿಮ್ಮರಸನು (ಕ್ರಿ.ಶ.ಸು. 1650) ವಾರ್ಧಕ ಷಟ್ಪದಿಯಲ್ಲಿ ರಚಿಸಿರುವ 'ರಾಮಾಯಣ' ದಲ್ಲಿ ಮಾರ್ಕಂಡೇಯ ಮುನಿ ಯುಧಿಷ್ಠಿರನಿಗೆ ಕಥೆ ಹೇಳಿದಂತೆ ನಿರೂಪಣೆಯಿದೆ. ರಾಮಾಶ್ವಮೇಧದ ಕಥೆಯನ್ನು ಒಳಗೊಂಡ ವಾಲ್ಮೀಕಿರಾಮಾಯಣದ ಉತ್ತರ ಕಾಂಡವನ್ನು ತಿರುಮಲೆ ವೈದ್ಯ (ಕ್ರಿ.ಶ.ಸು. 1650) ಹಾಗೂ ಯೋಗೀಂದ್ರ ಕನ್ನಡಕ್ಕೆ ಅನುವಾದ ಮಾಡಿದ್ದಾರೆ.

ವೀರಶೈವ ಪುರಾಣಗಳಲ್ಲಿ ಕೆಲವನ್ನು ನೆನೆಯಬಹುದು: ಅಣ್ಣಾಜಿ ಎಂಬ ಕವಿ (ಕ್ರಿ.ಶ. 1600) ವಾರ್ಧಕ ಷಟ್ಪದಿಯಲ್ಲಿ ರಚಿಸಿರುವ 'ಸೌಂದರ ವಿಲಾಸ' ಪುರಾತನ ಶಿವ ಭಕ್ತನಾದ ಸೌಂದರೇಶ ಅಥವಾ ನಂಬಿಯಣ್ಣನ ಕಥೆಯನ್ನು ನಿರೂಪಿಸುತ್ತದೆ. ಬಸವಲಿಂಗನು (ಸು. 1611) ರಚಿಸಿರುವ 'ಶಿವಾಧಿಕ್ಯ ಪುರಾಣ'ದಲ್ಲಿ ಕಾಲ್ಪನಿಕ ಕಥೆಯ ಮೂಲಕ ಹರಿಭಕ್ತಿಗಿಂತ ಶಿವಭಕ್ತಿಯೆ ಅಧಿಕ ಎಂದು ಪ್ರತಿಪಾದಿಸುವುದೆ ಕೃತಿಯ ಮುಖ್ಯೋದ್ದೇಶ. ಸಿದ್ಧನಂಜೇಶ (ಸು. 1650) ರಚಿಸಿರುವ 'ರಾಘವಾಂಕ ಚರಿತ್ರೆ' ಹಾಗೂ ಗುರುರಾಜ ಚರಿತ್ರೆ—ಇವು ವಾರ್ಧಕ ಷಟ್ಪದಿಯಲ್ಲಿವೆ. ಷಟ್ಪದಿಯ ನಿರ್ಮಾಪಕ ಎಂದು ಪ್ರಖ್ಯಾತನಾಗಿರುವ ಸುಪ್ರಸಿದ್ಧ ಕವಿ ರಾಘವಾಂಕನ ಜೀವನ ಕಥೆಯೆ ಮೊದಲನೆಯ ಕೃತಿಯ ವಸ್ತು. ಎರಡನೆಯ ಕೃತಿ,—ನೂತನ ಶಿವಭಕ್ತರು, ಕೆಲವು ವೀರಶೈವ ಆಚಾರ್ಯ ಪುರುಷರು ಹಾಗೂ ಕವಿಗಳು—ಇವರ ಸಂಕ್ಷಿಪ್ತ ಜೀವನ ಚರಿತ್ರೆಗಳನ್ನು ಒಳಗೊಂಡಿದೆ. ವಿಜಯನಗರದ ದೊರೆಯಾದ ಪ್ರೌಢದೇವರಾಯನ (ಕ್ರಿ.ಶ. 1419–1446) ಕಾಲದಲ್ಲಿದ್ದ ಅದೃಶ್ಯಕವಿ ವಾರ್ಧಕ ಷಟ್ಪದಿಯಲ್ಲಿ ಬರೆದಿರುವ 'ಪ್ರೌಢ ದೇವರಾಯನ ಕಾವ್ಯ' ದಲ್ಲಿಯೂ ಶಿವಶರಣರ ಕಥೆಗಳನ್ನು ಹೇಳಿದೆ. ದೊರೆ ವೈದಿಕ ಧರ್ಮದ ಮಹಾಭಾರತದ ಕಥಾಶ್ರವಣ ಮಾಡುವುದನ್ನು ತಪ್ಪಿಸಿ, ವೀರಶೈವ ಧರ್ಮದ ಮೇಲ್ಮೆಯನ್ನು ಅವನಿಗೆ ಮನದಟ್ಟು ಮಾಡುವುದಕ್ಕಾಗಿ

ಅವನ ಮಂತ್ರಿ ಜಕ್ಕಣಾಚಾರ್ಯನು ಶಿವಶರಣರ ಕಥೆಗಳನ್ನು ಹೇಳಿದಂತೆ ಕಥಾನಿರೂಪಣಾಕ್ರಮ ಸಾಗಿದೆ. ಈ ಕೃತಿಯು ಐತಿಹಾಸಿಕ ದೃಷ್ಟಿಯಿಂದಲೂ ಗಮನಾರ್ಹ.

**ಸಾಂಗತ್ಯದ ಕೃತಿಗಳು**

ಬ್ರಾಹ್ಮಣ ವೀರಶೈವ ಕವಿಗಳು ಕಾವ್ಯರಚನೆಗೆ ಷಟ್ಪದಿಯಲ್ಲಿ ಸ್ವಾಮ್ಯವನ್ನು ಪಡೆದುಕೊಂಡಿದ್ದಂತೆ ಕಂಡುಬಂದರೆ, ಜೈನ ಕವಿಗಳು ಕೃತಿರಚನೆಗೆ ಸಾಂಗತ್ಯವನ್ನು ಆಶ್ರಯಿಸಿದಂತೆ ತೋರುತ್ತದೆ. ಹೀಗಿದ್ದರೂ ಬ್ರಾಹ್ಮಣ ವೀರಶೈವ ಕವಿಗಳು ಸಹ ಸಾಂಗತ್ಯದಲ್ಲಿ ಕೃತಿರಚನೆ ಮಾಡದೆ ಇಲ್ಲ. ಅವರು ರಚಿಸಿರುವ ಸಾಂಗತ್ಯ ಕೃತಿಗಳಲ್ಲಿ ಮುಖ್ಯವಾದವು ಇವು: (1) ಪ್ರಧಾನಿ ತಿರುಮಲಾರ್ಯನ (ಕ್ರಿ.ಶ.ಸು. 1600) 'ಕರ್ಣ ವೃತ್ತಾಂತ ಕಥೆ' (2) ಗೋವಿಂದ ವೈದ್ಯನು (ಇವನಿಗೆ ಭಾರತಿ ನಂಜನೆಂಬ ಹೆಸರೂ ಇದೆ, ಕಾಲ ಸು. 1648) ರಚಿಸಿದ 'ಕಂಠೀರವ ನರಸರಾಜ ವಿಜಯ' (ಇದರಲ್ಲಿ ಸುಮಾರು 3000 ಪದ್ಯಗಳಿವೆ); (3) ಶಾಂತವೀರದೇಶಿಕನ (ಸು. 1650) 'ಶಿವಗಣ ಚಾರಿತ್ರ', ಇದೂ ಒಂದು ದೊಡ್ಡ ಗ್ರಂಥವೆ; (4) ಹಲಗನ 'ಹರಿಶ್ಚಂದ್ರ ಸಾಂಗತ್ಯ' (ಸು. 1650); ಪಾಂಚಾಳ ಗಂಗನ 'ಕುಮಾರರಾಮನ ಕಥೆ'; ನಂಜುಂಡ ಕವಿಯ (ಸು. 1525) 'ಕುಮಾರರಾಮನ ಕಥೆ' ಹಲ ಕೆಲವು ವ್ಯತ್ಯಾಸಗಳೊಡನೆ ಇದರಲ್ಲಿ ನಿರೂಪಿತವಾಗಿದೆ.

**ಕಲವು ಜೈನ ಕವಿಗಳು**

ಕಥೆಗಳ ಮೂಲಕವಾಗಿಯೂ ಬೇರೆಯ ರೀತಿಯಲ್ಲಿಯೂ ಜೈನ ಧರ್ಮತತ್ತ್ವಗಳನ್ನು ಬೋಧಿಸುವ ಉದ್ದೇಶದಿಂದ ಕಾವ್ಯರಚನೆ ಮಾಡಿದ ಜೈನಕವಿಗಳಲ್ಲಿ ಗಮನಾರ್ಹರಾದ ಕೆಲವರ ವಿಚಾರ ಉಲ್ಲೇಖಿಸ ಬಹುದು: ಜೈನಕವಿಯಾದ ಪದ್ಮರಸನು (ಸು. 1599) ಮಾತ್ರ ಅಪವಾದರೂಪವಾಗಿ ನಿಲ್ಲುತ್ತಾನೆ–ಇವನು ರಚಿಸಿರುವುದು 'ಶೃಂಗಾರಕಥೆ'; ಹೆಸರೇ ಸೂಚಿಸುವಂತೆ, ಶೃಂಗಾರ ರಸಪ್ರಧಾನವಾದದ್ದು; ಕಥೆ ಕಾಲ್ಪನಿಕ. ಆಶ್ಚರ್ಯಕರವಾದ ಸಂಗತಿಯೆಂದರೆ, ಕವಿ ಕಾವ್ಯಾರಂಭದಲ್ಲಿ ಶಿವಸ್ತುತಿ ಮಾಡಿರುವುದು. (1) ಪಾಯಣ್ಣ ವ್ರತಿ (ಸು. 1600) 'ಸಮ್ಯಕ್ತ್ವ ಕೌಮುದಿ'ಯ ಕರ್ತೃ. ಮುಕ್ತಿಪಥ ಸಾಧಕಗಳಾದ ಕೆಲವು ಜೈನ ಧರ್ಮಾಚರಣೆಗಳನ್ನು ಆಚರಿಸಿ ಮುಕ್ತಿಪಡೆದವರ ಕಥೆಗಳ ಸಂಕಲನ ಈ ಕೃತಿ. ಇದು ಸಾಂಗತ್ಯದಲ್ಲಿದೆ. (2) 'ಭುಜಬಲಿ ಚರಿತೆ' ಎಂಬ ಇನ್ನೊಂದು ಸಾಂಗತ್ಯ ಕೃತಿಯ ಕವಿ ಪಂಚಬಾಣ (ಸು. 1614). ಪ್ರಥಮ ತೀರ್ಥಂಕರನಾದ ವೃಷಭದೇವನ ಕಿರಿಯ ಮಗನೂ ಹಿರಿಯ ಮಗ ಭರತನ ತಮ್ಮನೂ ಆದ ಭುಜಬಲಿಯ ಕಥೆ ಕಾವ್ಯದ ವಿಷಯ. ಇದರಲ್ಲಿ ಕವಿ ತನ್ನ ಕಾಲದಲ್ಲಿ (ಕ್ರಿ.ಶ. 1612ರಲ್ಲಿ) ಶ್ರವಣಬೆಳಗೊಳದಲ್ಲಿ ಗೊಮ್ಮಟೇಶ್ವರ ಎಂಬ ನಾಮಾಂತರವನ್ನು ಹೊಂದಿದ ಭುಜಬಲಿಗೆ ಮಾಡಿದ ಮಸ್ತಕಾಭಿಷೇಕವನ್ನು ವರ್ಣಿಸಿದ್ದಾನೆ. (3) ಧರಣಿ ಪಂಡಿತನು ರಚಿಸಿದ 'ಬಿಜ್ಜಳರಾಯ ಚರಿತೆ' (ಸು. 1650) ತಕ್ಕಮಟ್ಟಿನ ಐತಿಹಾಸಿಕ ಪ್ರಾಮುಖ್ಯವುಳ್ಳ ಗ್ರಂಥ. ಇದೂ ಸಹ ಸಾಂಗತ್ಯದಲ್ಲಿದೆ. ಇದರಲ್ಲಿ ಕಲ್ಯಾಣದಲ್ಲಿ ಆಳುತ್ತಿದ್ದ ಕಳಚೂರ್ಯ ಬಿಜ್ಜಳ ದೊರೆಯ (ಕ್ರಿ.ಶ. 1156–1167) ಕಥೆಯನ್ನು ನಿರೂಪಿಸಿದೆ; ಅವನ ಪ್ರಧಾನಿಯಾಗಿದ್ದ ಬಸವೇಶ್ವರನ ಜೀವನಕ್ಕೆ ಸಂಬಂಧಪಟ್ಟಂತೆ ಕೆಲವು ಸಂಗತಿಗಳೂ ನಿರೂಪಿತವಾಗಿವೆ. ಈ ಕೃತಿಯಲ್ಲಿ ಬರುವ ಬಸವನ ವೃತ್ತಾಂತವು ಜೈನರಲ್ಲಿ ಪ್ರಚಲಿತವಾಗಿದ್ದಿರಬಹುದಾದ ಕಥಾಸಂಪ್ರದಾಯಕ್ಕೆ ಅನುಗುಣವಾಗಿರುವುದರಿಂದ, ಸ್ವಲ್ಪಮಟ್ಟಿಗೆ ಬಣ್ಣಕಟ್ಟಿದ ಕಲ್ಪನೆಯಿಂದ ಕೂಡಿರುವ ಸಂಭವವಿದೆ.

## ವ್ಯಾಕರಣ, ಛಂದಸ್ಸು ಮತ್ತು ಅಲಂಕಾರಶಾಸ್ತ್ರ

ಜೈನರ ಪಾಂಡಿತ್ಯದ ಫಲವಾಗಿ ಕನ್ನಡ ವ್ಯಾಕರಣ, ಛಂದಸ್ಸು ಮತ್ತು ಅಲಂಕಾರ ಶಾಸ್ತ್ರಗಳ ವಿಷಯವಾಗಿ ಕೆಲವು ಉದ್ದಾಮ ಕೃತಿಗಳು ನಮಗೆ ಲಭ್ಯವಾಗಿವೆ. ಅನೇಕ ಶತಮಾನಗಳ ಕಾಲ ಇವು ಕನ್ನಡ ಭಾಷಾ ಸಾಹಿತ್ಯಗಳ ಮಟ್ಟವನ್ನು ಕಾಪಾಡಿಕೊಂಡು ಬರುವುದರಲ್ಲಿ ನೆರವಾಗಿವೆ. ಉಭಯ ಭಾಷಾ ವಿಶಾರದನೂ ಮಹಾ ವಿದ್ವಾಂಸನೂ ಆಗಿದ್ದ ಭಟ್ಟಾಕಳಂಕದೇವನ 'ಶಬ್ದಾನುಶಾಸನ'ವು (ಕ್ರಿ.ಶ. 1604) ಕನ್ನಡ ಭಾಷೆಯನ್ನು ಕುರಿತ ವಿಸ್ತಾರವಾದ ವ್ಯಾಕರಣ ಗ್ರಂಥ. ಇದರ ಸೂತ್ರಗಳು, ವೃತ್ತಿ, ವ್ಯಾಖ್ಯಾನ ಎಲ್ಲವೂ ಸಂಸ್ಕೃತ ಭಾಷೆಯಲ್ಲಿವೆ. ಇದಕ್ಕೆ ಅದರದ್ದೇ ಆದ ಮಹತ್ವವುಂಟು. ಕೇಶಿರಾಜನ ಶಬ್ದಮಣಿ ದರ್ಪಣವನ್ನು ಬಿಟ್ಟರೆ. ಇದೇ ಅತ್ಯಂತ ಪ್ರಮುಖವೂ ಪ್ರಮಾಣಭೂತವೂ ಆದ ವ್ಯಾಕರಣಗ್ರಂಥ. ಇದು ಸಂಸ್ಕೃತ ಭಾಷೆಯಲ್ಲಿರುವುದು ಒಂದು ಕೊರತೆ ಎಂದು ಕಂಡುಬರುವುದು ಸಹಜ. ಇದನ್ನು ಭಟ್ಟಾಕಳಂಕನು ಸಂಸ್ಕೃತದಲ್ಲಿ—ಅಂದಿನ ಸರ್ವ ಸಾಮಾನ್ಯ ಭಾಷೆಯಲ್ಲಿ—ರಚಿಸಿರುವುದರ ಔಚಿತ್ಯವನ್ನು ಟೀಕಿಸುವ ಮುನ್ನ ಒಂದು ಸಂಗತಿಯನ್ನು ನಾವು ನೆನಪಿನಲ್ಲಿಡಬೇಕು : ಕನ್ನಡದ ವಿದ್ವತ್ ಕ್ಷೇತ್ರದಲ್ಲಿಯೂ ವ್ಯಾಕರಣ ಪ್ರಪಂಚದಲ್ಲಿಯೂ ನಡೆಯುತ್ತಿರುವ ಉಚ್ಚಮಟ್ಟದ ವ್ಯಾಸಂಗದ ಫಲರೂಪವಾದ ಬರೆವಣಿಗೆ ಯೆಲ್ಲವೂ ಇಂಗ್ಲೀಷಿನ ಮೂಲಕ ವಿಶಾಲ ಲೋಕಕ್ಕೆ ಈಗ ಪ್ರಸಾರಗೊಳ್ಳುತ್ತಿದೆ; ಕನ್ನಡದ ವಿಚಾರವನ್ನು ವಿಶಾಲ ಜಗತ್ತಿಗೆ ತಿಳಿಯಪಡಿಸುವುದೇ ಇಂಗ್ಲೀಷಿನಲ್ಲಿ ಬರೆಯುವುದರ ಉದ್ದೇಶ. ಕನ್ನಡ ಭಾಷೆ ಸಂಸ್ಕೃತದೊಂದಿಗೆ ಹೆಗಲೆಣೆಯಾಗಿ ನಿಂತು, ಅದರಂತೆಯೆ ಎಲ್ಲರ ಶ್ರದ್ಧಾಪೂರ್ವಕವಾದ ಗಮನಕ್ಕೂ ವ್ಯಾಸಂಗಕ್ಕೂ ಅರ್ಹವಾದುದು ಎಂಬುದನ್ನು ತೋರಿಸುವುದೇ ಭಟ್ಟಾಕಳಂಕನ ಮುಖ್ಯೋದ್ದೇಶವಾಗಿತ್ತು —ತನ್ನ ಕೃತಿಯನ್ನು ಸಂಸ್ಕೃತದಲ್ಲಿ ರಚಿಸುವುದಕ್ಕೆ. ಭಟ್ಟಾಕಳಂಕನ ವ್ಯಾಕರಣಗ್ರಂಥ ಕೇಶಿರಾಜನದಕ್ಕಿಂತ ಹೆಚ್ಚು ಶಾಸ್ತ್ರೀಯವಾಗಿರುವಂತೆ ಕಂಡುಬರುತ್ತದೆ; ವಿದ್ವಾಂಸರಿಂದ ಈಗಿಗಿಂತ ಹೆಚ್ಚಿನ ಮನ್ನಣೆ ಪಡೆಯಲು ಯೋಗ್ಯವಾಗಿದೆ.

ಗುಣಚಂದ್ರನ 'ಛಂದಸ್ಸಾರ' (ಸು. ಕ್ರಿ. ಶ. 1650) ಸಂಸ್ಕೃತದಲ್ಲಿ ಪ್ರಸಿದ್ಧವಾದ 'ವೃತ್ತ ರತ್ನಾಕರ'ವನ್ನು ಬಹುಮಟ್ಟಿಗೆ ಅನುಸರಿಸಿರುವಂತೆ ಕಂಡುಬರುತ್ತದೆ. ತಿಮ್ಮನ 'ನವರಸಾಲಂಕಾರ' (ಸು.ಕ್ರಿ.ಶ. 1600) ಕಾವ್ಯ ಮೀಮಾಂಸೆಯ ಮೇಲೆ ಚಂಪೂಶೈಲಿಯಲ್ಲಿ ಬರೆದ ಗ್ರಂಥ. ಹೆಸರೇ ಸೂಚಿಸುವಂತೆ, ಶೃಂಗಾರ ವೀರ ಕರುಣಾದಿ ನವರಸಗಳ ಪ್ರತಿಪಾದನೆಗೆ ಇದರಲ್ಲಿ ಪ್ರಾಧಾನ್ಯ. ತಿಮ್ಮನು ತನ್ನ ಕೃತಿಯಲ್ಲಿ ಪೂರ್ವಲಾಕ್ಷಣಿಕರಾದ ನಾಗವರ್ಮ, ಸಾಳ್ವ, ಮುಂತಾದ ಕವಿಗಳನ್ನು ತಾನು ಅನುಸರಿಸಿರುವುದನ್ನು ಒಪ್ಪಿಕೊಂಡಿದ್ದಾನೆ. ಈ ಅವಧಿಯಲ್ಲಿ ಕೆಲವು ಶಬ್ದಕೋಶಗಳೂ ರಚಿತವಾಗಿವೆ. ಒಂದೆರಡನ್ನು ಇಲ್ಲಿ ಹೆಸರಿಸಬಹುದು : ದೇವೋತ್ತಮನ (ಸು. 1600) 'ನಾನಾರ್ಥ ರತ್ನಾಕರ' ಎಂಬ ನಿಘಂಟುವಿನಲ್ಲಿ ಮುಖ್ಯ ಸಂಸ್ಕೃತ ಶಬ್ದಗಳ ನಾನಾರ್ಥಗಳನ್ನು ಕೊಟ್ಟಿದೆ. ಶೃಂಗಾರ ಕವಿಯ 'ಕರ್ಣಾಟಕ ಸಂಜೀವನ' (ಸು. 1600) ಎಂಬುದು ಒಂದು ಕನ್ನಡ-ಕನ್ನಡ ನಿಘಂಟು; ಇದರಲ್ಲಿನ 35 ವಾರ್ಧಕ ಷಟ್ಪದಿಗಳಲ್ಲಿ ರಳಕುಳಕ್ಷಳಗಳನ್ನುಳ್ಳ ಕನ್ನಡ ಮಾತುಗಳಿಗೆ ಅರ್ಥವನ್ನು ಹೇಳಿದೆ.

## ಚಂಪೂ ಮತ್ತು ಗದ್ಯಕೃತಿಗಳು

ಈ ಅವಧಿಯಲ್ಲಿ ಚಂಪೂಶೈಲಿಯಲ್ಲಿ ರಚಿತವಾದ ಕೃತಿಗಳು ವಿರಳವೆಂದೇ ಹೇಳಬೇಕು. ಇದಕ್ಕೆ ಕಾರಣವೇನೆಂಬುದು ಸುಲಭ ಗೋಚರ. ಪಾಂಡಿತ್ಯ ಪೂರ್ಣವಾದ ಚಂಪೂಶೈಲಿ ಪ್ರೌಢ; ಆದ್ದರಿಂದ ಸುಲಭವೂ ಸುಲಲಿತವೂ ಆದ ಭಾಷಾಶೈಲಿಗಳಲ್ಲಿ ರಚಿತವಾದ ಷಟ್ಪದಿ ಮತ್ತು ಸಾಂಗತ್ಯಕೃತಿಗಳು ಜನಪ್ರಿಯತೆ ಯನ್ನು ಗಳಿಸುವುದರಲ್ಲಿ ಚಂಪೂಕೃತಿಗಳನ್ನು ಹಿಂದಕ್ಕೆ ಹಾಕಿದುವು. ಕೆಲವು ವೀರಶೈವ ಕವಿಗಳು ಚಂಪೂ

ಶೈಲಿಯ ಕಾವ್ಯರಚನೆಯನ್ನು ಪುನರುಜ್ಜೀವನಗೊಳಿಸಲು ಪ್ರಯತ್ನಪಟ್ಟಂತೆ ಕಾಣುತ್ತದೆ. ಆದರೆ ಅವರ ಪ್ರಯತ್ನಗಳು ಯಶಸ್ವಿಯಾಗಲಿಲ್ಲ. ಮನ್ನಣೆಯನ್ನು ಕಳೆದುಕೊಂಡಿದ್ದ ಈ ಚಂಪೂ ಮಾಧ್ಯಮದಲ್ಲಿ ಯಶಸ್ಸನ್ನು ಸಾಧಿಸಲು ಷಡಕ್ಷರದೇವನಂತಹ ಸಮರ್ಥನಾದ ವಿದ್ವತ್ಕವಿ ಹುಟ್ಟಬೇಕಾಯಿತು. 12ನೆಯ ಮತ್ತು 13ನೆಯ ಶತಮಾನಗಳಲ್ಲಿ ಹೆಮ್ಮೆಯ ಸ್ಥಾನವನ್ನು ಪಡೆದಿದ್ದ ಚಂಪೂ ಶೈಲಿಗೆ ಅದರ ಪೂರ್ವ ಗೌರವವನ್ನು ದೊರಕಿಸಿಕೊಡಲು ಷಡಕ್ಷರಿ ಸರ್ವಥಾ ಸಮರ್ಥನಾಗಿದ್ದನು. ಸಹಜವಾಗಿಯೆ ಪ್ರತಿಭಾ ಶಾಲಿಯಾಗಿದ್ದ ಅವನು ಯಳಂದೂರು ತಾಲೂಕಿನ ದನುಗೂರು ಗ್ರಾಮದ ವೀರಶೈವ ಮಠದ ಪೀಠಾಧಿಪತಿಯಾಗಿದ್ದನು. ಈ ಕಾರಣ, ಕನ್ನಡ ಸಂಸ್ಕೃತಗಳಲ್ಲಿ ಆಳವಾದ ಪಾಂಡಿತ್ಯವನ್ನು ಪಡೆಯಲು ಆತನಿಗೆ ಅವಕಾಶವಾಯಿತು. ಉಭಯ ಭಾಷೆಗಳಲ್ಲಿಯೂ ಆತನು ಉದ್ದಾಮ ಕೃತಿಗಳನ್ನು ರಚಿಸಿದನು. ಅವನು ಕನ್ನಡದಲ್ಲಿ ರಚಿಸಿರುವ ಚಂಪೂ ಕಾವ್ಯಗಳು ಇವು: 'ರಾಜಶೇಖರ ವಿಲಾಸ' (1657). 'ವೃಷಭೇಂದ್ರ ವಿಜಯ' (1675) ಮತ್ತು 'ಶಬರ ಶಂಕರ ವಿಲಾಸ'. ಶಬರ ಶಂಕರ ವಿಲಾಸದಲ್ಲಿ ಶಿವನ ಹದಿನೈದನೆಯ ಲೀಲೆಯನ್ನು—ಎಂದರೆ, ಮಹಾಭಾರತದ ಕಿರಾತಾರ್ಜುನೀಯ ಪ್ರಕರಣವನ್ನು— ನಿರೂಪಿಸಿದೆ. 'ವೃಷಭೇಂದ್ರ ವಿಜಯ' ಬಸವೇಶ್ವರನ ಕಥೆಯನ್ನು ನಿರೂಪಿಸಿರುವ ಕೃತಿ. ಕನ್ನಡ ಸಾಹಿತ್ಯದ ಹಾಗೂ ಕನ್ನಡ ಪಾಂಡಿತ್ಯದ ಬೆಳವಣಿಗೆಯ ಇತಿಹಾಸದಲ್ಲಿ ಷಡಕ್ಷರಿಯ ಹೆಸರನ್ನು ಅಜರಾಮರವಾಗಿ ಮಾಡಿರುವ ಕೃತಿ ಎಂದರೆ ಅವನ ಪ್ರಪ್ರಥಮ ಕೃತಿಯಾದ 'ರಾಜಶೇಖರ ವಿಲಾಸ'. ಕನ್ನಡ ಪ್ರಾಚೀನ ಕಾವ್ಯಗಳಲ್ಲಿ ಅತ್ಯಂತ ಜನಪ್ರಿಯ ಎಂಬ ಅಪೂರ್ವವಾದ ಮನ್ನಣೆ ಪಡೆದಿರುವ 'ಜೈಮಿನಿ ಭಾರತ'ಕ್ಕೆ ಹೊಯ್‌ಕೈಯಾಗಿ ಅದೇ ತೆರನ ಮನ್ನಣೆ ಪಡೆದ ಕೃತಿ 'ರಾಜಶೇಖರ ವಿಲಾಸ'. ತಮಿಳಿನಲ್ಲಿ ಪಿಳ್ಳೈ ನಾಯನಾರ್ ಎಂಬಾತನು ಹೇಳಿದ್ದ ಕಥೆಯನ್ನು ಆಧರಿಸಿ ಗುಬ್ಬಿ ಮಲ್ಲಣಾರ್ಯನು 'ಭಾವಚಿಂತಾರತ್ನ' ಎಂಬ ವರ್ಣಕ ಕಾವ್ಯವನ್ನು ರಚಿಸಿದ್ದನು (ಸು. 1513); ಆ ತಮಿಳು ಕಥೆಯ ಕನ್ನಡ ಅವತರಣಿಕೆ ಹಲಕೆಲವು ವ್ಯತ್ಯಾಸಗಳೊಂದಿಗೆ ವಿಸ್ತಾರವಾಗಿ 'ರಾಜಶೇಖರ ವಿಲಾಸ'ದಲ್ಲಿ ನಿರೂಪಿತವಾಗಿದೆ. ಈ ಕಥೆ 'ಮನುಚೋಳ ಕಥೆ' ಎಂದೂ ಪ್ರಸಿದ್ಧವಾಗಿದೆ. ಪಂಚಾಕ್ಷರಿ ಮಂತ್ರದ ಮಹಿಮೆಯನ್ನು ನಿದರ್ಶನಗೊಳಿಸುವುದೆ ಕಥೆಯ ಮುಖ್ಯೋದ್ದೇಶ. ಆದರೂ, ಕಥೆಯ ಹಾಸು ಹೊಕ್ಕಾಗಿರುವ ಪವಾಡದ ಘಟನೆಗಳೆಲ್ಲವೂ ಕಥಾನಾಯಕ ರಾಜಶೇಖರನ ತಂದೆಯಾದ ಸತ್ಯೇಂದ್ರಚೋಳನ ನ್ಯಾಯ ವಿತರಣೆಯ ಉಚ್ಚ ಆದರ್ಶ ಭಾವನೆಯನ್ನು ಅವಲಂಬಿಸಿವೆ. ಕಥೆಯಲ್ಲಿ ಕೆಲವು ಚಮತ್ಕಾರದ ವ್ಯತ್ಯಾಸಗಳನ್ನು ಮಾಡಿಕೊಂಡು, ಷಡಕ್ಷರಕವಿ ದೊರೆಯ ಮಗನಾದ ರಾಜಶೇಖರನಿಗೆ ಪ್ರಾಧಾನ್ಯವನ್ನು ಕಲ್ಪಿಸಿ, ಅವನನ್ನೆ ಕಥಾನಾಯಕನನ್ನಾಗಿ ಮಾಡಿದ್ದಾನೆ; ಇದರಿಂದ ಕಥೆಯ ಮುಖ್ಯೋದ್ದೇಶಕ್ಕೆ ಚ್ಯುತಿ ಬಾರದಂತೆ ಎಚ್ಚರಿಕೆ ವಹಿಸಿದ್ದಾನೆ. ಪ್ರೌಢವಾದರೂ ಬಂಧುರವಾದ ಶೈಲಿಯಿಂದ ಕಾವ್ಯಕ್ಕೆ ಬೆಲೆ ಬಂದಿದೆ.

'ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ'ವು (ಕಿ. ಶ. 1672) ಈ ಕಾಲದ ಒಂದು ಮುಖ್ಯವಾದ ಗದ್ಯಕೃತಿ. ಇದರ ಕರ್ತೃವಾದ ಶಾಂತಲಿಂಗದೇಶಿಕನು ಕಿಕ್ಕೇರಿಯ ನಂಜುಂಡನ (ಸು. 1550) ಭೈರವೇಶ್ವರ ಕಾವ್ಯದಲ್ಲಿ 'ಸೂಚನೆಯಾಗಿರ್ದ ಕಥೆಗಳನ್ನು ವಿಶಾಲವಾಗಿ' ಬರೆದು ನಿರೂಪಿಸುವುದು ತನ್ನ ಉದ್ದೇಶವೆಂದು ಹೇಳಿಕೊಂಡಿದ್ದಾನೆ. ಆದರೆ ವಾಸ್ತವವಾಗಿ ಈತನು ಬೇರೆ ಬೇರೆ ಆಕರಗಳಿಂದಲೂ ಕಥೆಗಳನ್ನು ತೆಗೆದು ಸೇರಿಸಿಕೊಂಡು, ತನ್ನ ಕೃತಿಯ ವ್ಯಾಪ್ತಿಯನ್ನು ವಿಸ್ತಾರ ಗೊಳಿಸಿದ್ದಾನೆ. ಅಂತೂ ಒಟ್ಟಿನಲ್ಲಿ 81 ಕಥೆಗಳೂ 618 'ವಾಕ್ಯ'ಗಳೂ ಗ್ರಂಥದಲ್ಲಿ ಅಡಕವಾಗಿವೆ. ಅನೇಕ ವೀರಶೈವ ಕವಿಗಳ ಮತ್ತು ಅವರ ಗ್ರಂಥಗಳ ವಿಚಾರವನ್ನು ಈ ಸಂಕಲನ ಒಳಗೊಂಡಿರು ವುದರಿಂದ, 'ಭೈರವೇಶ್ವರ ಕಥಾ ಸೂತ್ರರತ್ನಾಕರ'ಕ್ಕೆ ಒಂದು ಐತಿಹಾಸಿಕ ಪ್ರಾಮುಖ್ಯ ಲಭ್ಯವಾಗಿದೆ.

### ಭಕ್ತಿಪರ ಕೀರ್ತನೆಗಳು

ಕನಕದಾಸರ ತರುವಾಯ ಹರಿದಾಸರು ಕೀರ್ತನೆಗಳ ಮೂಲಕ ವಿಷ್ಣು ಭಕ್ತಿಯನ್ನು ಪ್ರಸಾರ ಮಾಡುವ ಸಂಪ್ರದಾಯವು ನಿಂತುಹೋದಂತೆ ಕಂಡುಬರುತ್ತದೆ. (ಉತ್ತರಕಾಲೀನ ಹರಿದಾಸರು ಸಾಹಿತ್ಯಕ್ಕೆ ಸಲ್ಲಿಸಿರುವ ಕಾಣಿಕೆಯನ್ನು ಕುರಿತು ಇದೇ ಸಂಪುಟದಲ್ಲಿ ಬೇರೆ ಕಡೆ ಪ್ರಸ್ತಾವಿಸಲಾಗಿದೆ). ಗಮನಾರ್ಹರಾದ ಒಬ್ಬ ಹರಿದಾಸರೆಂದರೆ ವಾದಿರಾಜರು (ಕ್ರಿ.ಶ. 1480-1600); ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿ ಕೃಷ್ಣದೇವರಾಯನ ವಿಶೇಷ ಗೌರವಕ್ಕೆ ಪಾತ್ರರಾಗಿದ್ದ ವ್ಯಾಸರಾಯ ಸ್ವಾಮಿಗಳ ಸಮಕಾಲೀನರಾಗಿದ್ದುದಲ್ಲದೆ, ಅವರ ಬಳಿ ವಿದ್ಯಾಭ್ಯಾಸಂಗ ಮಾಡಿದರು ವಾದಿರಾಜರು. ಇವರು ಶಿರಸಿಯ ಸಮೀಪದ ಸೋದೆ ಮಠದ ಸ್ವಾಮಿಯಾಗಿದ್ದರು; ಸಂಸ್ಕೃತದಲ್ಲಿ ವಿದ್ವಾಂಸರು; ಸಂಸ್ಕೃತದಲ್ಲಿ ಸುಮಾರು 16 ಕೃತಿಗಳನ್ನು, ರಚಿಸಿದ್ದಾರೆ. ಇವರ ಕನ್ನಡ ಕೃತಿಗಳು ಇವು:— (1) ವೈಕುಂಠ ವರ್ಣನೆ: ಮಾಧ್ವಮತದ ತತ್ತ್ವಸಾರದ ಸೊಬಗನ್ನು ಸಾಂಗತ್ಯ ಪದ್ಯಗಳ ಹಾಗೂ ಹಾಡುಗಳ ಮೂಲಕ ಇದರಲ್ಲಿ ವಿವರಿಸಿದೆ. (2) 'ಸ್ವಪ್ನಗದ್ಯ': ಗದ್ಯ ಎಂದು ಹೆಸರಿದ್ದರೂ 45 ಭಾಮಿನೀಷಟ್ಪದಿಯ ಪದ್ಯಗಳನ್ನುಳ್ಳ ಕೃತಿ ಇದು; ಸ್ವಪ್ನದಲ್ಲಿ ಬೋಧೆಯಾದ ಪಾರಮಾರ್ಥಿಕ ವಿಚಾರಗಳನ್ನು ಇದರಲ್ಲಿ ನಿರೂಪಿಸಿದೆ. (3) 'ಲಕ್ಷ್ಮಿಯ ಶೋಭಾನೆ: ಲಕ್ಷ್ಮೀದೇವಿಯ ಸ್ತೋತ್ರರೂಪದ 112 ಪದಗಳ ಸಂಗ್ರಹ ಇದು. (4) 'ಭಾರತ ತಾತ್ಪರ್ಯ ನಿರ್ಣಯ ಟೀಕೆ' : ಮಧ್ವಾಚಾರ್ಯರು ಸಂಸ್ಕೃತದಲ್ಲಿ ರಚಿಸಿರುವ 'ಭಾರತ ತಾತ್ಪರ್ಯನಿರ್ಣಯ'ದ ಕನ್ನಡ ವ್ಯಾಖ್ಯಾನ. (5) 'ಕೀರ್ತನೆಗಳು' : ವಿಷ್ಣುಸ್ತುತಿ ರೂಪವಾಗಿಯೂ ಬೋಧಪ್ರದವಾಗಿಯೂ ಇರುವ ಹಾಡುಗಳು. 'ಹಯವದನ' ಎಂಬುದು ಹಾಡುಗಳಲ್ಲಿರುವ ಕವಿಯ 'ಅಂಕಿತ', ಅಥವಾ ಕೃತಿನಾಮ.

### ಇತರ ಕೃತಿಗಳು

ಈ ಅವಧಿಯಲ್ಲಿ ಕೆಲವು ಶತಕಗಳೂ ನಮ್ಮ ಗೋಚರಕ್ಕೆ ಬರುತ್ತವೆ. ಇವುಗಳಲ್ಲಿ ಅತ್ಯಂತ ಮುಖ್ಯವಾದುದು 'ರತ್ನಾಕರಾಧೀಶ್ವರ ಶತಕ'. ಇದನ್ನು ಸು. ಕ್ರಿ. ಶ. 1614ರಲ್ಲಿ ಶೃಂಗಾರ ಕವಿ ಹಂಸರಾಜನೆಂಬ ಜೈನಕವಿ ಬರೆದಿರಬಹುದೆಂದು ಗ್ರಂಥದಿಂದ ತೋರಿಬರುತ್ತದೆ; ಸು. 1560ರಲ್ಲಿ ಇದ್ದಿರಬಹುದಾದ (ಭರತೇಶವೈಭವದ ಕರ್ತೃ) ರತ್ನಾಕರ ವರ್ಣಿ ಇದರ ಕರ್ತೃವಾಗಿರಬಹುದು ಎಂಬ ಅಭಿಪ್ರಾಯವೂ ಇದೆ. 'ರತ್ನಾಕರಾಧೀಶ್ವರಾ' ಎಂದು ಕೊನೆಗೊಳ್ಳುವ 125 ವೃತ್ತಗಳನ್ನುಳ್ಳ ಈ ಗ್ರಂಥವಲ್ಲಿ ವೈರಾಗ್ಯ ನೀತಿ ಆತ್ಮವಿಚಾರಗಳ ಮಹಿಮೆಯನ್ನು ಕೊಂಡಾಡಿವೆ.

ಈ ಕಾಲದಲ್ಲಿ ರಚಿತವಾದ ಕಾವ್ಯೇತರ ಗ್ರಂಥಗಳ ಪೈಕಿ ಚೆನ್ನರಾಜನ (ಸು. ಕ್ರಿ. ಶ. 1570) 'ವೈದ್ಯಸಾರಸಂಗ್ರಹ'ವನ್ನೂ ಭಾಸ್ಕರನ (ಸು. ಕ್ರಿ.ಶ. 1650) 'ಬೇಹಾರಗಣಿತ'ವನ್ನೂ ಪ್ರಾತಿನಿಧಿಕವಾಗಿ ಹೆಸರಿಸಬಹುದು.

### ಚಿಕ್ಕದೇವರಾಜ ಒಡೆಯರು (ಕ್ರಿ.ಶ. 1672-1704) ಮತ್ತು ಅವರ ಆಸ್ಥಾನ ಕವಿಗಳು

ಮೈಸೂರು ರಾಜ್ಯದ ಅತ್ಯಂತ ಪ್ರಖ್ಯಾತ ದೊರೆಗಳಲ್ಲಿ ಒಬ್ಬರಾದ ಚಿಕ್ಕದೇವರಾಜ ಒಡೆಯರು ಮೊಗಲ್ ಚಕ್ರವರ್ತಿ ಔರಂಗಜೇಬನ ಸಮಕಾಲೀನರು. ಅವರು ದೊಡ್ಡ ದೇವರಾಜರ ತರುವಾಯ 1672ರಲ್ಲಿ ಪಟ್ಟಕ್ಕೆ ಬಂದಾಗ, ವಿಸ್ತಾರಗೊಂಡ ರಾಜ್ಯವು ಒಂದು ಸುಭದ್ರಸ್ಥಿತಿಯನ್ನು ಮುಟ್ಟಿತ್ತು.

ಹೊಸತಾಗಿ ತಲೆಯೆತ್ತುತ್ತಿದ್ದ ಮರಾಠ ರಾಜ್ಯವನ್ನೂ ದಖನ್ನಿನ ಸುಲ್ತಾನರನ್ನೂ ದಮನ ಮಾಡುವ ವಿಚಾರದಲ್ಲಿ ಔರಂಗಜೇಬನು ಮಗ್ನನಾಗಿದ್ದನು. ಹೀಗೆ, ನೆರೆಯ ರಾಜ್ಯವಾದ ಬಿಜಾಪುರದ ಸುಲ್ತಾನನಿಂದ ಆಗುತ್ತಿದ್ದ ಅಲ್ಪಸ್ವಲ್ಪ ಕಿರುಕುಳದ ಹೊರತಾಗಿ, ಚಿಕ್ಕದೇವರಾಜ ಒಡೆಯರು ಬಹುಮಟ್ಟಿಗೆ ನೆಮ್ಮದಿಯಾಗಿಯೆ ರಾಜ್ಯಭಾರಮಾಡುತ್ತಿದ್ದರು. ಈ ಕಾರಣದಿಂದಾಗಿ ಆಡಳಿತ ಸುಧಾರಣೆ, ಆರ್ಥಿಕವ್ಯವಸ್ಥೆಯ ಮೇಲ್ಪಾಡು, ಸಾಹಿತ್ಯ ಸಂವರ್ಧನ ಮುಂತಾದ ಶಾಂತಿಕಾಲದ ಕಾರ್ಯ ಕಲಾಪಗಳಿಗೆ ತಮ್ಮ ವೇಳೆಯೆಲ್ಲವನ್ನೂ ವಿನಿಯೋಗಿಸಲು ಅವರಿಗೆ ಸಾಧ್ಯವಾಯಿತು. ಚಿಕ್ಕದೇವರಾಜರು ತಮ್ಮ ಬಾಲ್ಯದ ಸಹಪಾಠಿಯೂ ಆಸ್ಥಾನ ಕವಿಯೂ ಸಚಿವನೂ ಆದ ತಿರುಮಲಾರ್ಯನಿಂದ ತುಂಬ ಪ್ರಭಾವಿತರಾಗಿದ್ದಂತೆ ಕಂಡುಬರುತ್ತದೆ. ಈ ಕಾರಣದಿಂದ ಇರಬಹುದು, ಚಿಕ್ಕದೇವರಾಜರ ಆಶ್ರಯ ಪಡೆದ ಕವಿಗಳಲ್ಲಿ ಅನೇಕಮಂದಿ ಶ್ರೀವೈಷ್ಣವ ಮತಸ್ಥರಾಗಿದ್ದರು. ಈ ಪ್ರಭಾವವು ಸಹಜವಾಗಿಯೇ ಸುತ್ತಮುತ್ತಲೂ ಚಿಕ್ಕದೇವರಾಜ ಒಡೆಯರ ಆಳಿಕೆ ಮುಗಿದ ಮೇಲೂ ವ್ಯಾಪಿಸಿಕೊಂಡಿದ್ದು, 17ನೆಯ ಶತಮಾನದ ಉತ್ತರಭಾಗ ಹಾಗೂ 18ನೆಯ ಶತಮಾನ ಪೂರ್ವ ಭಾಗಗಳಲ್ಲಿ ಮುಂದುವರಿಯುತ್ತಿತ್ತು.

ಚಿಕ್ಕದೇವರಾಜ ಒಡೆಯರು ಸ್ವತಃ ಕವಿಗಳಾಗಿದ್ದು, ಅನೇಕ ಕೃತಿಗಳನ್ನು ರಚಿಸಿರುತ್ತಾರೆ. ಅವುಗಳಲ್ಲಿ ಅತ್ಯಂತ ಪ್ರಸಿದ್ಧವಾದವು, 'ಗೀತಗೋಪಾಲ' ಮತ್ತು 'ಚಿಕ್ಕದೇವರಾಯ ಬಿನ್ನಪ' ; ಅವರ ಸಾಹಿತ್ಯರಚನೆಯ ಕಾರ್ಯದಲ್ಲಿ ತಿರುಮಲಾರ್ಯನು ಸಹಾಯಕನಾಗಿದ್ದಿರಬಹುದು. ಈ ಎರಡು ಗ್ರಂಥಗಳನ್ನು ಉದಾರಿಯೂ ತನ್ನ ಪೋಷಕನೂ ಆದ ಅರಸನ ಹೆಸರಿನಲ್ಲಿ ತಿರುಮಲಾರ್ಯನೇ ರಚಿಸಿರ ಬಹುದೆಂದು ಊಹಿಸಲು ಅವಕಾಶವಿದೆ. ಇದು ಹೇಗಾದರೂ ಇರಲಿ. ಈ ಎರಡು ಕೃತಿಗಳೂ ಭಕ್ತಿ ಭಾವ ಪೂರ್ಣವಾಗಿದ್ದು, ಕಾವ್ಯ ಸೌಂದರ್ಯವನ್ನು ಹೊಂದಿವೆ ; ಪರಿಶುದ್ಧವಾದ ಹಳಗನ್ನಡದಲ್ಲಿ ವಿಶಿಷ್ಟಾದ್ವೈತಮತದ ಸಾರವನ್ನು ತಿಳಿಸುವುದರ ಜೊತೆಗೆ, ರಾಜನ ದಿಗ್ವಿಜಯ ಪರಾಕ್ರಮ ಸೂಚಕಗಳಾದ, ಉಲ್ಲೇಖಗಳಿವೆ. 'ಗೀತಗೋಪಾಲ' ಕೀರ್ತನೆಗಳ ಸಂಗ್ರಹ ; ಸಂಸ್ಕೃತ ಭಾಷೆಯಲ್ಲಿ ಪ್ರಸಿದ್ಧವಾಗಿರುವ ಜಯದೇವ ಕೃತ 'ಗೀತಗೋವಿಂದ'ವನ್ನು ನೆನಪಿಗೆ ತರುತ್ತದೆ ಈ ಕೃತಿ. ಏಳೇಳು ಹಾಡುಗಳಿಗೆ 'ಸಪ್ತಪದಿ' ಎಂಬ ವಿಭಾಗವಿದ್ದು, ಪ್ರತಿ ಸಪ್ತಪದಿಯ ಮೊದಲಿನಲ್ಲೂ ಅದರ ವಿಷಯದ ಸಾರಾಂಶವನ್ನು ಗದ್ಯದಲ್ಲಿ ನಿರೂಪಿಸಿದೆ. 'ಚಿಕ್ಕದೇವರಾಜ ಬಿನ್ನಪ' ಪೂರ್ತಿ ಗದ್ಯವಲ್ಲಿದೆ. ಇದರಲ್ಲಿ, ಯದುಗಿರಿಯ (ಮೇಲುಕೋಟೆಯ) ನಾರಾಯಣಸ್ವಾಮಿಯಲ್ಲಿ ಕವಿ ಬಿನ್ನವಿಸಿಕೊಂಡಿರುವ 30 'ಬಿನ್ನಪ'ಗಳು ಇವೆ. ಇವು ವಿಶಿಷ್ಟಾದ್ವೈತ ಮತದ ಸಾರವನ್ನು ಪ್ರತಿಪಾದಿಸುತ್ತವೆ; ಮತಧರ್ಮದ ವಿಷಯ 'ಗೀತಗೋಪಾಲ'ದಲ್ಲಿ ಇರುವುದಕ್ಕಿಂತ ಇದರಲ್ಲಿ ವಿಶೇಷ ಪ್ರಧಾನವಾಗಿದೆ.

### ತಿರುಮಲಾರ್ಯ (ಕ್ರಿ.ಶ. 1646–1706)

ತಿರುಮಲಾರ್ಯನು ಶ್ರೀ ವೈಷ್ಣವ ಮತಕ್ಕೆ ಸೇರಿದವನು ; ಮೊದಲು ಚಿಕ್ಕದೇವರಾಜ ಒಡೆಯರ ಆಸ್ಥಾನದಲ್ಲಿ ಕವಿಯಾಗಿದ್ದು, ಬಳಿಕ ದೊರೆಯ ಮಂತ್ರಿಯಾದನು. ಈತನು ' ಚಿಕದೇವರಾಜ ವಿಜಯ ' ಮತ್ತು ' ಚಿಕದೇವರಾಯ ವಂಶಾವಳಿ ' ಎಂಬ ಎರಡು ಐತಿಹಾಸಿಕ ಗ್ರಂಥಗಳನ್ನು ರಚಿಸಿರುವನು. ' ಚಿಕದೇವರಾಯ ಶತಕ ' ಎಂಬ ಗ್ರಂಥವನ್ನೂ ಬರೆದಂತೆ ತಿಳಿದು ಬರುತ್ತದೆ ; ಆದರೆ ಇದು ದೊರಕಿಲ್ಲ. ' ಚಿಕದೇವರಾಜ ವಿಜಯ ' ಒಂದು ಚಂಪೂಕೃತಿ ; ಚಂಪೂ ಮಾರ್ಗದ ಉತ್ತಮ ಶೈಲಿಯಲ್ಲಿ ಇದು ರಚಿತವಾಗಿದೆ. ದುರ್ದೈವದಿಂದ, ಈಗ ಬೆಳಕಿಗೆ ಬಂದಿರುವ ಕೃತಿ ಅಸಮಗ್ರ. ಚಿಕ್ಕದೇವರಾಜ ಒಡೆಯರು ಪಟ್ಟಕ್ಕೆ ಬರುವ ವರೆಗೆ ಮೈಸೂರು ದೊರೆಗಳ ಚರಿತ್ರೆಯನ್ನು ಬಿತ್ತರಿಸುವ ಆರು ಆಶ್ವಾಸಗಳು ಮಾತ್ರ

ಇವೆ. 'ಚಿಕದೇವರಾಯ ವಂಶಾವಳಿ'ಯೂ ಸ್ವಲ್ಪಮಟ್ಟಿಗೆ ಅಸಮಗ್ರ. ಮೈಸೂರು ರಾಜ್ಯದ ಬೆಳವಣಿಗೆಯನ್ನು ಪ್ರಾರಂಭಕಾಲದಿಂದಲೂ ನಿರೂಪಿಸುವ ಈ ಗ್ರಂಥವು ಐತಿಹಾಸಿಕ ದೃಷ್ಟಿಯಿಂದ ತುಂಬ ಬೆಲೆಯುಳ್ಳದ್ದಾಗಿದೆ; ಅಲ್ಲದೆ, ಕನ್ನಡ ಗದ್ಯದ ಬೆಳವಣಿಗೆಯಲ್ಲಿ ಒಂದು ಮೈಲಿಗಲ್ಲಿನಂತಿರುವುದರಿಂದ, ಗದ್ಯಗ್ರಂಥ ಪರಂಪರೆಯಲ್ಲಿ ಇದಕ್ಕೊಂದು ಗೌರವದ ಸ್ಥಾನವಿದೆ. 'ಅಪ್ರತಿಮವೀರಚರಿತ'ವು ತಿರುಮಲಾರ್ಯನ ಮೂರನೆಯ ಕೃತಿ; ಅಲಂಕಾರ ಶಾಸ್ತ್ರ ವಿಷಯವಾಗಿ ಸಂಸ್ಕೃತದಲ್ಲಿ ಪ್ರಸಿದ್ಧವಾಗಿರುವ ಲಕ್ಷಣ ಗ್ರಂಥಗಳ ಆಧಾರದ ಮೇಲೆ ರಚಿತವಾಗಿರುವ ಅಲಂಕಾರ ಶಾಸ್ತ್ರಗ್ರಂಥ ಇದು. ಉದಾಹರಣ ಪದ್ಯಗಳೆಲ್ಲವೂ ಚಿಕ್ಕದೇವರಾಯನ ಪರಾಕ್ರಮವನ್ನೂ ಸದ್ಗುಣಗಳನ್ನೂ ಪ್ರಶಂಸಿಸುತ್ತವೆ. ಇದೇ ಗ್ರಂಥದ ವೈಶಿಷ್ಟ್ಯ. ಇದರಲ್ಲಿಯೂ ಚಾರಿತ್ರಿಕ ಅಂಶಗಳು ಅಡಕವಾಗಿವೆ.

## ಚಿಕುಪಾಧ್ಯಾಯ (1672)

ಚಿಕುಪಾಧ್ಯಾಯನು ದೊರೆಯ ಇನ್ನೊಬ್ಬ ಮಂತ್ರಿ. ಈತನು ಚಂಪೂ, ಸಾಂಗತ್ಯ ಮತ್ತು ಗದ್ಯ ಪ್ರಕಾರಗಳಲ್ಲಿ ಸುಮಾರು 30 ಗ್ರಂಥಗಳನ್ನು ಬರೆದಿದ್ದಾನೆ. ಅನೇಕ ಗ್ರಂಥಗಳ ಆದಿಭಾಗದಲ್ಲಿ ಚಿಕ್ಕದೇವರಾಜರ ವಂಶಾವಳಿಯನ್ನೂ ವಿಜಯಗಳನ್ನೂ ವರ್ಣಿಸುವುದು ಈತನ ಪದ್ಧತಿ. ಬಹುಮಟ್ಟಿಗೆ ತನ್ನ ಎಲ್ಲ ಗ್ರಂಥಗಳಲ್ಲಿಯೂ ಒಂದಲ್ಲ ಒಂದು ವಿಧಾನದಲ್ಲಿ ಶ್ರೀ ವೈಷ್ಣವ ಮತತತ್ತ್ವಗಳನ್ನು ಇವನು ಪ್ರತಿಪಾದಿಸುತ್ತಾನೆ. ಇವುಗಳಲ್ಲಿ ಹಲವು ಸಂಸ್ಕೃತಗ್ರಂಥಗಳ ಅನುವಾದವಾಗಿವೆ. ಈ ಪೈಕಿ ಕೆಲವನ್ನು ಮಾತ್ರ ಇಲ್ಲಿ ಹೆಸರಿಸಬಹುದು : 'ವಿಷ್ಣುಪುರಾಣ'ವು ಚಂಪೂ ಶೈಲಿಯಲ್ಲಿ ಮಾತ್ರವಲ್ಲದೆ ಗದ್ಯದಲ್ಲಿಯೂ ರಚಿತವಾಗಿದೆ. ಇವನ ಚಂಪೂಕೃತಿಗಳಲ್ಲಿ 'ದಿವ್ಯಸೂರಿ ಚರಿತೆ' ಅತ್ಯುತ್ತಮವಾದುದೆಂದು ಪರಿಗಣಿತವಾಗಿದೆ. ಇದು, ರಾಮಾನುಜಾಚಾರ್ಯರೂ ಸೇರಿ 12 ಜನ ಆಳ್ವಾರುಗಳ ಚರಿತ್ರೆಯನ್ನು ನಿರೂಪಿಸುತ್ತದೆ. ಈ ಕೃತಿಯೂ 'ಅರ್ಥಪಂಚಕ' ಮತ್ತು 'ತಿರುವಾಯ್‌ಮೊಳಿ' ಎಂಬ ಇನ್ನೆರಡು ಕೃತಿಗಳೂ ತಮಿಳು ಮೂಲಗಳಿಂದ ಅನುವಾದವಾದವು. ಇನ್ನುಳಿದ ಕೃತಿಗಳಲ್ಲಿ ಹಲವು 'ಮಾಹಾತ್ಮ್ಯ'ಗಳು : ಇವು ಶ್ರೀರಂಗ, ಶ್ರೀರಂಗಪಟ್ಟಣ, ಕಂಚಿ, ಮೇಲುಕೋಟೆ, ತಿರುಪತಿ, ಮುಂತಾದ ವೈಷ್ಣವತೀರ್ಥ ಕ್ಷೇತ್ರಗಳ ಮಹಿಮೆಯನ್ನು ವರ್ಣಿಸುತ್ತವೆ.

## ಸಿಂಗರಾರ್ಯ (ಸು. 1680)

ಈತ ತಿರುಮಲಾರ್ಯನ ಸಹೋದರ. ಕನ್ನಡದಲ್ಲಿ ಈ ವರೆಗೆ ದೊರಕಿರುವ ನಾಟಕಗಳಲ್ಲಿ ಮೊತ್ತ ಮೊದಲನೆಯದಾದ 'ಮಿತ್ರವಿಂದಾ ಗೋವಿಂದ' ಎಂಬುದರ ಲೇಖಕನೆನಿಸಿರುವ ಕಾರಣ, ಈತನ ಹೆಸರು ನೆನೆಯುತಕ್ಕದ್ದು. ಶ್ರೀಹರ್ಷನು ಸಂಸ್ಕೃತದಲ್ಲಿ ರಚಿಸಿರುವ 'ರತ್ನಾವಳಿ' ನಾಟಿಕೆಯ ರೂಪಾಂತರ ಈ ಕೃತಿ. ಮೂಲಕೃತಿಯಲ್ಲಿನ ಕಾಲ್ಪನಿಕ ಪಾತ್ರಗಳಾದ ಉದಯನ ಮತ್ತು ರತ್ನಾವಳಿ ಇವರ ಸ್ಥಾನಗಳಲ್ಲಿ ಪೌರಾಣಿಕ ಪಾತ್ರಗಳಾದ ಕೃಷ್ಣ ಮತ್ತು ಮಿತ್ರವಿಂದಾ ಇವರನ್ನು ತಂದು ನಿಲ್ಲಿಸಿ, ಮೂಲದ ಪ್ರಣಯ ಕಥೆಗೆ ಒಂದು ವೈಷ್ಣವ ಛಾಯೆಯನ್ನು ಸಂಘಟಿಸಲು ಗ್ರಂಥಕರ್ತನು ಈ ನಾಟಕದಲ್ಲಿ ಪ್ರಯತ್ನಿಸಿದ್ದಾನೆ; ಇತರ ಪಾತ್ರಗಳೂ ಯಥೋಚಿತವಾಗಿ ಮಾರ್ಪಾಟು ಹೊಂದಿವೆ.

## ಹೊನ್ನಮ್ಮ (ಸು. 1680)

ಕನ್ನಡ ಸಾಹಿತ್ಯದ ಆಧುನಿಕ ಯುಗದ ಪೂರ್ವದಲ್ಲಿ ಗಮನಾರ್ಹರಾದ ಕೇವಲ ಕೆಲವು ಮಂದಿ ಸ್ತ್ರೀಲೇಖಕರಲ್ಲಿ ಈಕೆ ಒಬ್ಬಳು. ಇವಳು ಚಿಕ್ಕದೇವರಾಜ ಒಡೆಯರ ಬಳಿ ತಾಂಬೂಲದ ಸಂಚಿಯನ್ನು

ಒಯ್ಯುವ ಊಳಿಗದಲ್ಲಿದ್ದುದರಿಂದ ' ಸಂಚಿಯ ಹೊನ್ನಮ್ಮ 'ನೆಂದೇ ಇವಳ ರೂಢಿಯ ಹೆಸರು. ಮೊದಲು ಓದುಬರಹ ಬಾರದ ಸಾಮಾನ್ಯ ಊಳಿಗದ ಹೆಣ್ಣಾದರೂ ತನ್ನ ಸಹಜ ಕವಿತಾಶಕ್ತಿಯಿಂದ ಇವಳು ಪ್ರಭುವಿನ ಗಮನವನ್ನು ಸೆಳೆದಳು. ಆತನ ಸೂಚನೆಯ ಮೇರೆಗೆ, ಮಂತ್ರಿ ತಿರುಮಲಾರ್ಯನ ತಮ್ಮನೂ ' ಮಿತ್ರವಿಂದಾ ಗೋವಿಂದ 'ದ ಕರ್ತೃವೂ ಆದ ಸಿಂಗರಾರ್ಯನ ಬಳಿ ಇವಳಿಗೆ ಸಾಹಿತ್ಯದಲ್ಲಿ ಶಿಕ್ಷಣವೂ ದೊರೆಯಿತು. ಅರಸ ಮತ್ತು ಅರಸಿ ದೇವಾಜಮ್ಮಣ್ಣಿ ಇವರ ಅಪ್ಪಣೆಯಂತೆ ಹೊನ್ನಮ್ಮ ಸಾಂಗತ್ಯದಲ್ಲಿ ' ಹದಿಬದೆಯ ಧರ್ಮ 'ವನ್ನು ರಚಿಸಿದಳು. ಉಚಿತ ದೃಷ್ಟಾಂತಗಳೊಂದಿಗೆ ಹದಿಬದೆಯ ಅಥವಾ ಪತಿವ್ರತಾ ಧರ್ಮವನ್ನು ಅನುಸರಿಸುವ ಆದರ್ಶ ಪತ್ನಿಯ ಕರ್ತವ್ಯಗಳನ್ನು ಉಪದೇಶಿಸುವುದೇ ಈ ಚಿಕ್ಕ ಗ್ರಂಥದ ಮುಖ್ಯೋದ್ದೇಶ. ರಾಮಾಯಣ, ಮಹಾಭಾರತ, ಮನುಸ್ಮೃತಿ ಮುಂತಾದ ಕಾವ್ಯಗಳಿಂದಲೂ ಧರ್ಮಶಾಸ್ತ್ರ ಗ್ರಂಥಗಳಿಂದಲೂ ಆಯ್ದು ಪವಣಿಸಿದ ಸಂಗತಿಗಳಿಂದಲೂ ಸೂಕ್ತಿಗಳಿಂದಲೂ ಗ್ರಂಥಕ್ಕೆ ಸ್ವಾರಸ್ಯವೂ ಪುಷ್ಟಿಯೂ ದೊರೆಕೊಂಡಿವೆ. ವಿಷಯ ನಿರೂಪಣೆಯ ನಡುನಡುವೆ ಅಲ್ಲಲ್ಲಿ ಮೂಡಿ ನಿಲ್ಲುವ ಪತಿವ್ರತೆಯಾದ ಗೃಹಿಣಿಯ ಚಿತ್ರಗಳು ಆಕರ್ಷಕವಾಗಿರುವುವಲ್ಲದೆ, ಒಟ್ಟು ಕೃತಿಗೆ ಅಸ್ಫುಟ ಸುಂದರವಾದ ಒಂದು ಕಾವ್ಯ ಶೋಭೆಯನ್ನು ಒದಗಿಸಿವೆ. ಹೆಣ್ಣಿನ ಹೃದಯದ ಕೋಮಲ ಭಾವನೆಗಳು ಸಾಂಗತ್ಯದ ಧಾಟಿಯಲ್ಲಿ, ಲಲಿತ ಶೈಲಿಯಲ್ಲಿ ಸುಂದರ ಅಭಿವ್ಯಕ್ತಿ ಪಡೆದಿವೆ ಈ ಕೃತಿಯಲ್ಲಿ. ಈ ಕಾರಣಗಳಿಂದಾಗಿ, ಇದು ಚಿರಸ್ಮರಣೀಯ ಕೃತಿ. ಶೃಂಗಾರಮ್ಮ (ಸು. 1685) ಎಂಬಾಕೆಗೂ ಕಾವ್ಯರಚನೆಗೆ ಚಿಕ್ಕದೇವರಾಜ ಒಡೆಯರಿಂದಲೇ ಪ್ರೋತ್ಸಾಹ ದೊರೆತಂತೆ ಕಂಡುಬರುತ್ತದೆ. ಈಕೆ ಸಾಂಗತ್ಯದಲ್ಲಿ 'ಪದ್ಮಿನಿ ಕಲ್ಯಾಣ'ವನ್ನು ಬರೆದಿದ್ದಾಳೆ. ಇದರಲ್ಲಿ ತಿರುಪತಿಯ ಶ್ರೀನಿವಾಸ ದೇವರಿಗೂ ಪದ್ಮಾವತಿಗೂ ನಡೆದ ವಿವಾಹವನ್ನು ವರ್ಣಿಸಿದೆ.

**ಹೆಳವನಕಟ್ಟೆ ಗಿರಿಯಮ್ಮ (ಸು. 1750)**

ಈಕೆ ಇನ್ನೂ ಮುಂದಿನ ಕಾಲಕ್ಕೆ ಸೇರಿದವಳಾದರೂ ಇವಳ ವಿಷಯವನ್ನು ಇಲ್ಲಿಯೆ ಪ್ರಸ್ತಾವಿಸುವುದು ಉಚಿತ. ಇವಳು ಬ್ರಾಹ್ಮಣಮತಕ್ಕೆ ಸೇರಿದ ಬರಹಗಾರ್ತಿ; ' ಚಂದ್ರಹಾಸನ ಕಥೆ ' ಮತ್ತು ' ಉದ್ದಾಳಿಕನ ಕಥೆ 'ಗಳನ್ನು ಸಾಂಗತ್ಯದಲ್ಲಿಯೂ ' ಸೀತಾಕಲ್ಯಾಣ 'ವನ್ನು ಹಾಡುಗಳ ರೂಪದಲ್ಲಿಯೂ ಬರೆದಿದ್ದಾಳೆ. " ಚಂದ್ರಹಾಸನ ಕಥೆ " ಲಕ್ಷ್ಮೀಶನ ಜೈಮಿನಿ ಭಾರತದಲ್ಲಿನ ಚಂದ್ರಹಾಸನ ಪ್ರಕರಣವನ್ನೇ ಬಹುಮಟ್ಟಿಗೆ ಅನುಸರಿಸಿದೆ. ಮೊನ್ನೆ ಮೊನ್ನೆಯ ವರೆಗೂ ಈ ಕಥೆಯನ್ನು ಹೆಂಗಸರು ಮನೆಗಳಲ್ಲಿ ಹಾಡಿಕೊಳ್ಳುವುದು ರೂಢಿಯಲ್ಲಿದ್ದಿತು.

**ಇತರ ಲೇಖಕರು**

ರಂಗನಾಥನು—ಮಹಲಿಂಗ ರಂಗ ಎಂದೂ ಈತ ಪ್ರಸಿದ್ಧ—' ಅನುಭವಾಮೃತ 'ವನ್ನು ಭಾಮಿನೀ ಷಟ್ಪದಿಯಲ್ಲಿ (ಸು. 1675) ಬರೆದನು. ನಮಗೆ ತಿಳಿದಮಟ್ಟಿಗೆ, ಆದಿಶಂಕರಾಚಾರ್ಯರು ಪ್ರತಿಪಾದಿಸಿದ ವೇದಾಂತ ಅಥವಾ ಅದ್ವೈತ ಸಿದ್ಧಾಂತವನ್ನು ಕನ್ನಡದಲ್ಲಿ ಕಾವ್ಯಭಾಷೆಯಲ್ಲಿ ವಿವರಿಸಿರುವ ಮೊದಲ ಕೃತಿ ಇದು. ಕನ್ನಡ ಭಾಷೆಯ ಮೇಲೆ ತನಗಿರುವ ಪ್ರೇಮವನ್ನು ಇವನು ಪ್ರಕಟಪಡಿಸಿರುವ ರೀತಿ ಯಾವ ಕನ್ನಡಿಗನಿಗಾದರೂ ಅಭಿಮಾನವನ್ನು ಹುಟ್ಟಿಸದೆ ಇರದು. ಇದು ಹರಿಹರ, ನಯಸೇನ ಮತ್ತು ಆಂಡಯ್ಯ ಇವರ ಕನ್ನಡ ಭಾಷಾಪ್ರೇಮ ಪ್ರಕಟಿಸಿದ ಘೋಷಣೆಗಳನ್ನು ನೆನಪಿಗೆ ತರುತ್ತದೆ. ' ಅನುಭವಾಮೃತ'ದ ಭಾಷೆ ಸರಳ, ಶೈಲಿ ಲಲಿತ; ಗಹನವಾದ ತತ್ತ್ವ ವಿಚಾರಗಳನ್ನು ತಿಳಿಸುವ ನಿರೂಪಣಾ ವಿಧಾನ ನೇರ ಹಾಗೂ ಆಕರ್ಷಕ. ಆದ್ದರಿಂದ, ಸಂಸ್ಕೃತ ತಿಳಿಯದವರಿಗೆ ಇದು ವೇದಾಂತ ವಿಚಾರದಲ್ಲಿ ಒಂದು

ಪ್ರಮಾಣಗ್ರಂಥವಾಗಿ ಪರಿಣಮಿಸಿರುವುದರಲ್ಲಿ ಆಶ್ಚರ್ಯವಿಲ್ಲ. ಚಿದಾನಂದಾವಧೂತ (ಸು. 175 ) ಎಂಬವನು ಬಹುಮಟ್ಟಿಗೆ ಮಹಾಲಿಂಗನನ್ನೇ ಅನುಸರಿಸಿರುವ ಇನ್ನೊಬ್ಬ ತಾತ್ತ್ವಿಕ ಕವಿ; ಈತನ 'ಜ್ಞಾನಸಿಂಧು' ಶಂಕರ ಸಿದ್ಧಾಂತವನ್ನು ಹೆಚ್ಚು ಕಮೆ ಅದೇ ಶೈಲಿಯಲ್ಲಿ ಇನ್ನೂ ವಿಸ್ತಾರವಾಗಿ ವಿವರಿಸುತ್ತದೆ.

## ಸರ್ವಜ್ಞ

ಈ ಸಂತ ಕವಿಯ ವಿಚಾರವಾಗಿ ನಮಗೆ ತಿಳಿದುಬಂದಿರುವುದು ಅತ್ಯಲ್ಪ. ಅವನ ಕಾಲವಿಚಾರ ಇನ್ನೂ ಊಹಾ ಪ್ರಪಂಚಕ್ಕೇ ಸೇರಿದ ವಿಷಯವಾಗಿದೆ. ಅವನ ಮತ ಧರ್ಮದ ವಿಚಾರವೂ ಅಷ್ಟೆ; ವೀರಶೈವನಂತೆ ಕಂಡುಬಂದರೂ ಅವನ ಧರ್ಮ ಯಾವುದು ಎಂದು ಗುರುತಿಸುವುದು ಕಷ್ಟ. ಅವನನ್ನು ಕವಿ ಎಂದು ಕರೆಯಬಹುದಾದರೆ—ಏಕೆಂದರೆ, ಸಾಂಪ್ರದಾಯಿಕವಾದ ಅರ್ಥದಲ್ಲಿ ಆತ ಕವಿಯಲ್ಲ—ಅವನು ಈ ಕಾಲಾವಧಿಯ ಅತ್ಯಂತ ಪ್ರಮುಖ ಕವಿಗಳಲ್ಲಿ ಒಬ್ಬನೆನಿಸುವನು. ಎಲ್ಲ ವಿಚಾರಗಳಲ್ಲಿಯೂ ಅವನು ಸಂಪ್ರದಾಯ ಮಾರ್ಗದಿಂದ ದೂರವಾದವನು. ಅವನು ಸ್ವಂತ ಇಚ್ಛೆಯಿಂದ ಬಾಲ್ಯದಲ್ಲಿಯೇ ಮನೆಯನ್ನು ಬಿಟ್ಟು, ಭಿಕ್ಷಾವೃತ್ತಿಯನ್ನು ಅಂಗೀಕರಿಸಿ 'ಊರೆಲ್ಲ ನಂಟರು ಕೇರಿಯೆಲ್ಲವು ಬಳಗ' ಎನ್ನುವಂತಹ ಪರಿಸ್ಥಿತಿಯಲ್ಲಿ ಇದ್ದಂತೆ ಕಾಣುತ್ತದೆ. ಚಾರಣ ಗಾಯಕನಂತೆ ತಾನು ಕಟ್ಟಿದ ಪದಗಳನ್ನು ಹಾಡಿಕೊಳ್ಳುತ್ತ ಕೇರಿ ಕೇರಿ ತಿರುಗುತ್ತ, ಕೇವಲ ಸಾಮಾನ್ಯ ಜನಕ್ಕೆ ಅನುಭವಾಮೃತವನ್ನು ಉಣಿಸುತ್ತ, ಅವರ ಆಧ್ಯಾತ್ಮಿಕ ಉನ್ನತಿಗೆ ಕಾರಣನಾಗಿದ್ದನೆಂಬುದರಲ್ಲಿ ಸಂಶಯವಿಲ್ಲ. "ಸರ್ವಜ್ಞ" ಎಂಬ ಅಂಕಿತದಲ್ಲಿ ಪ್ರಸಿದ್ಧವಾಗಿರುವ ಸುಮಾರು ಎರಡು ಸಾವಿರ "ತ್ರಿಪದಿ"ಗಳಲ್ಲಿ ಯಾವ ಕಥೆಯೂ ನಿರೂಪಿತವಾಗಿಲ್ಲ; ಅವು ಯಾವ ಒಂದು ನಿರ್ದಿಷ್ಟ ಮತ ಪಂಥದ ಸಿದ್ಧಾಂತವನ್ನಾಗಲಿ ದರ್ಶನವನ್ನಾಗಲಿ ಪ್ರತಿಪಾದಿಸುವುದಿಲ್ಲ. ಆತನ ಪದ್ಯಗಳಲ್ಲಿ ಯಾವುದಾದರೂ ಒಂದು ತತ್ತ್ವದರ್ಶನವನ್ನು ಕಾಣಬಹುದಾದರೆ, ಅದು ಸಾಮಾನ್ಯಮಾನವನಿಗೆ ಅಗತ್ಯವಾದ ಮಾನವೀಯತೆಯ ಜೀವನತತ್ತ್ವ. ಅವುಗಳಲ್ಲಿ ಯಾವುದಾದರೂ ಒಂದು ಮತಧರ್ಮದ ವಿಶ್ವಾಸವನ್ನು ಅವನು ಪ್ರಕಟಪಡಿಸಿದ್ದಾನೆ ಎನ್ನುವುದಾದರೆ, ಯಾವ ಐಹಿಕ ಹಂಗಿಗೂ ಒಳಪಡದ ಆತ್ಮ ಸಂಬಂಧಿಯಾದ ವಿಶ್ವವಿಶಾಲ ಧರ್ಮ. ಜನರ ಮೂಢವಿಶ್ವಾಸಗಳನ್ನು ಕಂಡು ಅವನು ಅವರನ್ನು ಹಾಸ್ಯ ಮಾಡುತ್ತಾನೆ. ಅವರ ಲೋಪದೋಷಗಳ ಬಗೆಗೆ ಕನಿಕರದ ಮುಗುಳುನಗೆ ಬೀರುತ್ತಾನೆ; ಬೂಟಾಟಿಕೆಯನ್ನು ಕಂಡು ಛೀಮಾರಿ ಹಾಕುತ್ತಾನೆ, ಮತಾಂಧತೆಯನ್ನು ಲೇವಡಿಮಾಡುತ್ತಾನೆ. ಅನೇಕವೇಳೆ ಅವನು ಚಿಂತನಶೀಲ; ಕೆಲವೊಮ್ಮೆ ಅಂತರ್ಮುಖಿ. ಸರಳ ಜೀವನದ ಸುಖಸಂತೋಷಗಳಿಗೆ ಅವನು ವಿರೋಧಿಯಲ್ಲ; ಅವುಗಳ ಸವಿಗೆ ಅವನಲ್ಲಿ ಎಡೆಯುಂಟು. ಒಟ್ಟಿನ ಮೇಲೆ, ಸರ್ವಜ್ಞನದು ಅವನದೇ ಆದ ಧೀರವೃತ್ತಿಯ ತತ್ತ್ವ. ಅವನ ಪದ್ಯಗಳು ಉದ್ದಕ್ಕೂ ನೀತಿಬೋಧಕ, ಇದರಲ್ಲಿ ಸಂದೇಹವಿಲ್ಲ. ಆದರೆ, ಸಾರತಃ ಅಭಿವ್ಯಕ್ತಿ ಕಾವ್ಯಜಾತಿಯದು. ದೇವರು, ವಿಧಿ, ಮತಧರ್ಮ, ನೀತಿವಿಚಾರ, ಸಮಾಜಧರ್ಮ ಮುಂತಾಗಿ ವಿಷಯಾನುಗುಣವಾಗಿ ಸರ್ವಜ್ಞನ ಬಿಡಿ ಪದ್ಯಗಳನ್ನೆಲ್ಲಾ ಗುಂಪು ಗುಂಪಾಗಿ ವಿಂಗಡಿಸಬಹುದಾದರೂ ಈ ಬಿಡಿ ಪದ್ಯಗಳನ್ನೆಲ್ಲಾ ಬಂಧಿಸುವ ಏಕಸೂತ್ರವೆಂದರೆ ಸರ್ವಜ್ಞನ ಅಪೂರ್ವ ವ್ಯಕ್ತಿತ್ವವೊಂದೇ. ಅವನು ಹೇಳಿದ ಪ್ರತಿ ಪದ್ಯದಲ್ಲಿಯೂ ಅವನ ವ್ಯಕ್ತಿತ್ವದ ಮುದ್ರೆ ಸ್ಪಷ್ಟವಾಗಿ ಕಂಡುಬರುತ್ತದೆ. ಅವನನ್ನು ತೆಲುಗು ಸಾಹಿತ್ಯದ ತಿರುವಳ್ಳುವಾರಿಗೂ ಹೋಲಿಸಬಹುದು.

ಈ ವಿಭಾಗವನ್ನು ಸಮಾಪ್ತಿಗೊಳಿಸುವ ಮುನ್ನ ಪ್ರಧಾನವಲ್ಲದ ಕೆಲವು ಕವಿಗಳ ವಿಷಯವಾಗಿ ಪ್ರಸ್ತಾವಿಸಬಹುದು: (1) ವೇಣುಗೋಪಾಲವರ ಪ್ರಸಾದನು (ಸು. 1680) 'ಚಿಕ್ಕದೇವರಾಜ ವಂಶಾವಳಿ'ಯನ್ನು ಬರೆದಿದ್ದಾನೆ; ಇದೊಂದು ಚಂಪೂಕೃತಿ; ಇದರಲ್ಲಿ ಮೈಸೂರು ಅರಸರ

ವಂಶಾವಳಿಯನ್ನು ಸಂಗ್ರಹವಾಗಿ ವರ್ಣಿಸಿದೆ. (2) ಚಿದಾನಂದ ಕವಿ (ಸು. 1680) 'ಮುನಿ ವಂಶಾಭ್ಯುದಯ' ಎಂಬ ಸಾಂಗತ್ಯ ಕೃತಿಯ ಕರ್ತೃ; ಇದರಲ್ಲಿ ಕೊಂಡಕುಂದಾನ್ವಯದ ಜೈನಮುನಿಗಳ ಪರಂಪರೆಯನ್ನು ವಿವರಿಸಿದೆ. (3) ಮಲ್ಲರಸ (ಸು. 1680): ಚಂಪೂ ಶೈಲಿಯಲ್ಲಿರುವ 'ದಶಾವತಾರ ಚರಿತೆ'ಯ ಲೇಖಕ ಈತ. (4) ಪಂಡಿತ ಮಲ್ಲಿಕಾರ್ಜುನ (ಸು. 1687): ಈತನು 'ಶಂಕರ ದಾಸಿಮಯ್ಯನ ಚರಿತ್ರೆ'ಯನ್ನು ಬರೆದಿದ್ದಾನೆ; ಭಾಮಿನೀ ಷಟ್ಪದಿಯಲ್ಲಿರುವ ಈ ಕೃತಿಯಲ್ಲಿ ಆ ಹೆಸರಿನ ಶಿವಭಕ್ತನೊಬ್ಬನ ಚರಿತೆಯನ್ನು ನಿರೂಪಿಸಿದೆ. (5) ವೆಂಕಟಾರ್ಯ ಶಿಷ್ಯ (ಸು. 1700): ಈತನು 'ಕೃಷ್ಣಗೋಪೀ ವಿಲಾಸ'ದ ಕರ್ತೃ; ಇದು ಸಾಂಗತ್ಯದಲ್ಲಿದೆ. (6) ತಿಮ್ಮರಸ (ಸು. 1700): ಇವನ ಗ್ರಂಥ 'ಕ್ಷೇತ್ರ ಗಣಿತ'; ಜ್ಯಾಮಿತಿಗೆ ಸಂಬಂಧಪಟ್ಟ ವಿಷಯಗಳನ್ನು ಕಂದಪದ್ಯಗಳಲ್ಲಿ ವಿವರಿಸುವ ಸಣ್ಣದೊಂದು ಶಾಸ್ತ್ರಗ್ರಂಥ. (7) ಸಪ್ಪಣ್ಣ (ಸು. 1700): ಸರ್ಪಭೂಷಣ ಎಂಬ ನಾಮಾಂತರವನ್ನೂ ಹೊಂದಿರುವ ಈ ವೀರಶೈವ ಕವಿ 'ಕೈವಲ್ಯಕಲ್ಪವಲ್ಲರಿ' ಎಂಬ ಕೀರ್ತನೆಗಳ ಸಂಕಲನವನ್ನು ರಚಿಸಿದ್ದಾನೆ; ಈ ಕೀರ್ತನೆಗಳು ಹರಿದಾಸರ ಕೀರ್ತನೆಗಳ ಸಂಪ್ರದಾಯದಲ್ಲಿ ರಚಿತವಾದವು; ವೀರಶೈವ ಸಿದ್ಧಾಂತಕ್ಕೆ ಅನುಗುಣವಾಗಿ 'ಅಧ್ಯಾತ್ಮಸುಖ'ವನ್ನು ಬೋಧಿಸುವುದೇ ಇವುಗಳ ಗುರಿ.

### ಚಿಕ್ಕದೇವರಾಜ ಒಡೆಯರ ತರುವಾಯದ ಕಾಲ

ಚಿಕ್ಕದೇವರಾಜ ಒಡೆಯರ ಮರಣಾನಂತರ, ಎಂದರೆ, 18ನೆಯ ಶತಮಾನದ ಪೂರ್ವಾರ್ಧದಲ್ಲಿ, ಅವರ ಉತ್ತರಾಧಿಕಾರಿಗಳಾದ ಅರಸರ ಕಾಲದಲ್ಲಿ ರಾಜಾಶ್ರಯದ ಕೊರತೆಯಿಂದಾಗಿ ಸಾಹಿತ್ಯ ನಿರ್ಮಾಣ ಕಾರ್ಯ ಇಳಿಮುಖವಾಗತೊಡಗಿತು; 18ನೆಯ ಶತಮಾನದ ಉತ್ತರಾರ್ಧವಂತೂ ಗ್ರಂಥರಚನೆಗೆ ಸ್ವಲ್ಪವೂ ಅನುಕೂಲವಾಗಿರಲಿಲ್ಲ; ಏಕೆಂದರೆ, ಆಗ ಕನ್ನಡನಾಡು ಶತ್ರುಸೈನ್ಯಗಳ ದಾಳಿಗೆ ಪದೇ ಪದೇ ಒಳಗಾಗುತ್ತಿದ್ದಿತು. ಮುಹಮ್ಮದೀಯರಾದ ಹೈದರ್ ಆಲಿ ಮತ್ತು ಟಿಪ್ಪುಸುಲ್ತಾನರು ಮೈಸೂರು ರಾಜ್ಯಾಧಿಕಾರವನ್ನು ಸ್ವಾಧೀನಪಡಿಸಿಕೊಂಡು ಆಳತೊಡಗಿದ ಮೇಲೆ ಸಾಹಿತ್ಯನಿರ್ಮಾಣ ಬಹುಮಟ್ಟಿಗೆ ನಿಂತೇ ಹೋಯಿತು. ಮುಮ್ಮಡಿ ಕೃಷ್ಣರಾಜ ಒಡೆಯರ ಕೈಗೆ ಆಡಳಿತ ಬರುವ ವರೆಗೂ ಸಾಹಿತ್ಯ ನಿರ್ಮಾಣ ಕಾರ್ಯಕಲಾಪಗಳ ಪುನರುಜ್ಜೀವನ ಪ್ರಯತ್ನ ಕಾದಿರಬೇಕಾಯಿತು.

(ಈ ಕಾಲದ ಹರಿದಾಸರು ಸೃಷ್ಟಿ ಮಾಡಿರುವ ದಾಸಸಾಹಿತ್ಯದ ವಿಚಾರವನ್ನು ಪ್ರತ್ಯೇಕ ಪ್ರಕರಣದಲ್ಲಿ ನಿರೂಪಿಸಿದೆ).

### ಇತರ ಲೇಖಕರು

ಈ ಕಾಲದ ಉಳಿದ ಲೇಖಕರು—ಅವರು ಬ್ರಾಹ್ಮಣರಾಗಿದ್ದರೆ ರಾಮಾಯಣ, ಭಾರತ ಮತ್ತು ಪುರಾಣಕಥೆಗಳನ್ನೂ ವೀರಶೈವರಾಗಿದ್ದಲ್ಲಿ ಶಿವಭಕ್ತರ ಕಥೆಗಳನ್ನೂ ಚರ್ವಿತಚರ್ವಣವಾಗಿ ಹೇಳುವುದರಲ್ಲಿಯೇ ತೃಪ್ತರಾಗಿದ್ದರು. ಹೀಗಿದ್ದರೂ ಕೆಲವರು ಗಮನಾರ್ಹರಾಗಿದ್ದಾರೆ: (1) ಮಹಾಭಾರತದ ಕಥೆಯನ್ನೂ 'ರುಕ್ಮಾಂಗದ ಚರಿತ್ರೆ'ಯನ್ನೂ ಬರೆದ ಲಕ್ಷ್ಮಕವಿ (ಸು. 1723). (2) ಬಬ್ಬೂರು ರಂಗ (ಸು. 1750): ಇವನು 'ಅಂಬಿಕಾ ವಿಜಯ' ಮತ್ತು 'ಪರಶುರಾಮ ರಾಮಾಯಣ' ಎಂಬ ಕಾವ್ಯಗಳ ಕರ್ತೃ. ಅಂಬಿಕೆ (ಪಾರ್ವತಿ) ರಕ್ತಬೀಜಾಸುರನನ್ನು ಸಂಹಾರ ಮಾಡಿದ ಕಥೆಯನ್ನು 'ಅಂಬಿಕಾ ವಿಜಯ'ದಲ್ಲಿ ನಿರೂಪಿಸಿದೆ; ಇದು ಭಾಮಿನಿಷಟ್ಪದಿಯಲ್ಲಿದೆ. ವಾರ್ಧಕ ಷಟ್ಪದಿಯಲ್ಲಿರುವ 'ಪರಶುರಾಮ ರಾಮಾಯಣ'ದಲ್ಲಿ ವಿಷ್ಣುವಿನ ಆರನೆಯ ಅವತಾರವಾದ ಪರಶುರಾಮನ ಕಥೆಯನ್ನು ಹೇಳಿದೆ. (3) ಕೋನಯ್ಯ (ಸು. 1750): ಈತನ ಕೃತಿ

'ಕೃಷ್ಣಾರ್ಜುನರ' ಸಂಗರ; ಇದು ಭಾಮಿನಿ ಷಟ್ಪದಿಯಲ್ಲಿದೆ. (4) ತಿಮ್ಮಾಮಾತ್ಯ (ಸು. 1750) ಇವನು 'ರಾಮಾಭ್ಯುದಯ ಕಥಾಕುಸುಮಮಂಜರಿ' ಎಂಬ ಕಾವ್ಯವನ್ನು ಬರೆದಿದ್ದಾನೆ. ಭಾಮಿನಿಷಟ್ಪದಿಯಲ್ಲಿರುವ ಈ ಕೃತಿಗೆ 'ಆನಂದ ರಾಮಾಯಣ' ಎಂಬ ನಾಮಾಂತರವೂ ಇದೆ. ಇದು ರಾಮಾಯಣದ ಕಥೆಯನ್ನು ಒಳಗೊಂಡಿರುವುದಲ್ಲದೆ, ವರಾಹ ನೃಸಿಂಹಾವತಾರಗಳ ಹಾಗೂ ರಾವಣ ದಿಗ್ವಿಜಯದ ವೃತ್ತಾಂತಗಳನ್ನೂ ಒಳಗೊಂಡಿದೆ.

## ವ್ಯಾಖ್ಯಾನಗಳು,

ವೀರಶೈವನಾದ ನಿಟ್ಟೂರು ನಂಜಯ್ಯನು (ಸು. 1725) ಕೇಶಿರಾಜನ ಸುಪ್ರಸಿದ್ಧ ವ್ಯಾಕರಣ ಗ್ರಂಥ 'ಶಬ್ದಮಣಿದರ್ಪಣ'ದ ಟೀಕೆಯನ್ನು ಬರೆದಾತನೆಂದು ಕನ್ನಡ ವಿದ್ವತ್ ಪ್ರಪಂಚದಲ್ಲಿ ಇಂದಿಗೂ ಸುಪರಿಚಿತನಾಗಿದ್ದಾನೆ. ಅಚ್ಚಾಗಿರುವ ಈ ವ್ಯಾಕರಣದ ಎಲ್ಲ ಮುದ್ರಣಗಳಲ್ಲಿಯೂ ಈ ಟೀಕೆ ಸಾಧಾರಣವಾಗಿ ಸೇರಿಯೇ ಇರುತ್ತದೆ. ಶಂಕರಾಚಾರ್ಯರು ರಚಿಸಿರುವರೆಂದು ಪ್ರತೀತಿಯಿರುವ 'ಸೌಂದರ್ಯಲಹರಿ'ಗೆ ಜಕ್ಕಣಾಮಾತ್ಯನು (ಸು. 1750) ವ್ಯಾಖ್ಯಾನ ಬರೆದಿದ್ದಾನೆ. ಮೈಸೂರಿನ ಪ್ರಾಚ್ಯ ಸಂಶೋಧನ ಸಂಸ್ಥೆಯಿಂದ ಈ ವ್ಯಾಖ್ಯಾನವುಳ್ಳ ಗ್ರಂಥ ಈಚೆಗೆ ಪ್ರಕಟಗೊಂಡಿದೆ.

ಲೌಕಿಕ ಶಾಸ್ತ್ರ ಗ್ರಂಥಗಳಲ್ಲಿ, ಬಾಲವೈದ್ಯದ ಚೆಲುವನ (ಸು. 1715) 'ಕನ್ನಡ ಲೀಲಾವತಿ' (ಗಣಿತ ಶಾಸ್ತ್ರ) ಮತ್ತು 'ರತ್ನಶಾಸ್ತ್ರ' (ನವರತ್ನಗಳ ಲಕ್ಷಣಗಳನ್ನು ವಿವರಿಸುವ ಗ್ರಂಥ), ವೀರರಾಜನ (ಸು. 1720) 'ವೈದ್ಯಸಂಹಿತ ಸಾರಾರ್ಣವ' (ಆಯುರ್ವೇದ ವೈದ್ಯದ ಗ್ರಂಥ)—ಇವು ಗಮನಾರ್ಹವಾಗಿವೆ.

ಒಟ್ಟಿನ ಮೇಲೆ ಹೇಳುವುದಾದರೆ, ಈ ಪ್ರಕರಣದ ವ್ಯಾಪ್ತಿಗೆ ಒಳಪಟ್ಟ ಎರಡು ಶತಮಾನಗಳ ಕಾಲಾವಧಿಯಲ್ಲಿ ನಿರ್ಮಿತವಾದ ಕನ್ನಡ ಸಾಹಿತ್ಯವು ಒಂದೇ ಸಮನಾದ ತೃಪ್ತಿಕರವಾದ ಪ್ರಗತಿಯನ್ನು ಸಾಧಿಸಿರುವುದಲ್ಲದೆ, ಆಗೊಮ್ಮೆ ಈಗೊಮ್ಮೆ ಪ್ರಶಂಸಾರ್ಹವಾದ ಉನ್ನತಿಯನ್ನೂ ಮುಟ್ಟಿದೆ.

ಮೂಲ ಲೇಖಕರು ಮತ್ತು ಅನುವಾದಕರು : ಶ್ರೀ ಎಂ. ವಿ. ಸೀತಾರಾಮಯ್ಯ

# ಸಂಸ್ಕೃತ

## (ಕ್ರಿ.ಶ. 17 ಮತ್ತು 18 ನೆಯ ಶತಮಾನಗಳು)

ವಿಜಯನಗರ ಸಾಮ್ರಾಜ್ಯ ಶಿಥಿಲವಾಗಿ ನಶಿಸಿದ ಮೇಲೆ ಸಂಸ್ಕೃತ ಸಾಹಿತ್ಯ ಚಟುವಟಿಕೆಯ ಕೇಂದ್ರ ಪಲ್ಲಟವಾಗಿ ಬೇರೆ ಕಡೆಗೆ, ಮುಖ್ಯವಾಗಿ ಕೆಳದಿ ಮತ್ತು ಮೈಸೂರುಗಳಿಗೆ ಹೋಯಿತು. ಪಾಳೆಯಗಾರರು, ಸುರಪುರದ ನಾಯಕರು, ಗಾದ್ವಾಲ ಆನೆಗೊಂದಿ ಮತ್ತು ಸ್ವಲ್ಪ ಕಾಲಾನಂತರ 'ದಕ್ಷಿಣ ಮರಾಠಾ' ಸಂಸ್ಥಾನಗಳ ರಾಜರುಗಳು—ಇವರು ಸಂಸ್ಕೃತ ಸಾಹಿತ್ಯಕ್ಕೆ ಪೋಷಕರಾದರು.

ರಾಜಪೋಷಣೆಯಲ್ಲದೆ, ಮತ ಸಂಸ್ಥೆಗಳೂ ಸಂಸ್ಕೃತ ಪಾಂಡಿತ್ಯಕ್ಕೆ ಕೇಂದ್ರಸ್ಥಾನಗಳಾಗಿದ್ದವು. ಮೂರು ವೈಷ್ಣವ ಮಠಗಳು, ಉಡುಪಿಯ ಅಷ್ಟಮಠಗಳು, ಶೃಂಗೇರಿ, ಕೂಡಲಿ, ಸಂಕೇಶ್ವರ ಮತ್ತು ಕಂಚಿಯ ಅದ್ವೈತ ಪೀಠಗಳು—ಸಂಸ್ಕೃತಾಭ್ಯಾಸಕ್ಕೆ ಆಶ್ರಯ ಕೊಟ್ಟು ತಮ್ಮ ತಮ್ಮ ವೇದಾಂತ ಶಾಖೆಗಳಲ್ಲಿ ಗ್ರಂಥ ರಚನೆಗೆ ವಿಶೇಷ ಪ್ರೋತ್ಸಾಹ ನೀಡಿದವು.

ಸಂಸ್ಕೃತ ಗ್ರಂಥಕಾರರನ್ನು ಪ್ರಾಂತ ಭೇದಕ್ಕನುಸಾರವಾಗಿ ವಿಂಗಡಿಸುವುದು ಕಷ್ಟ. ಏಕೆಂದರೆ, ವಿದ್ವಾಂಸರು ತಮಗೆ ರಾಜಾಶ್ರಯ ದೊರೆತಂತೆಲ್ಲ ದೇಶದ ಬೇರೆ ಬೇರೆ ಪ್ರದೇಶಗಳಿಗೆ ಹೋಗಿ ನೆಲಸುತ್ತಿದ್ದರು ; ಅಲ್ಲದೆ, ಬೇರೆ ಬೇರೆ ಮಠಾಚಾರ್ಯರ ಬಳಿ ವಿದ್ಯಾಭ್ಯಾಸಂಗ ಮಾಡುತ್ತಿದ್ದರು. ಇದರ ಜೊತೆಗೆ, ದೇಶದ ಒಂದು ಪ್ರದೇಶದಲ್ಲಿ ರಚಿತವಾದ ಗ್ರಂಥ ಮತ್ತೊಂದು ಪ್ರದೇಶದಲ್ಲಿ ಅದರ ವಿಮರ್ಶಗ್ರಂಥ ರಚನೆಯಾಗುವುದಕ್ಕೆ ಸ್ಫೂರ್ತಿಕೊಡುತ್ತಿತ್ತು ; ಮತ್ತು ಅದೇ ರೀತಿಯ ಮತ್ತೊಂದು ಗ್ರಂಥ ಅಲ್ಲಿ ರಚನೆಯಾಗುವುದಕ್ಕೆ ಮಾದರಿಯಾಗುತ್ತಿತ್ತು. ಈ ಮಾತು ಮುಖ್ಯವಾಗಿ ವೇದಾಂತ ಗ್ರಂಥಗಳಿಗೆ ಅನ್ವಯಿಸುತ್ತದೆ. ಆದ್ದರಿಂದ, ಈ ಕಾಲಾವಧಿಯಲ್ಲಿ ನಡೆದ ಸಾಹಿತ್ಯಾಭಿವೃದ್ಧಿಯ ಸ್ವರೂಪವನ್ನು ಚೆನ್ನಾಗಿ ಅರಿತುಕೊಳ್ಳುವುದಕ್ಕೆ ಆ ಗ್ರಂಥಗಳಿಗೆ ಸಂಬಂಧಪಟ್ಟ ಇತರ ಗ್ರಂಥಗಳನ್ನು ಸೂಚಿಸುವುದು ಅವಶ್ಯ. ಈ ಕಾರಣದಿಂದ, ಕರ್ಣಾಟಕದ ಗ್ರಂಥಕಾರರಿಗೆ ಪ್ರಚೋದನೆ ಕೊಟ್ಟ ಅಥವಾ ಅವರಿಂದ ಪ್ರಚೋದನೆ ಹೊಂದಿದ ಕೆಲವು ಗ್ರಂಥಗಳ ವಿಷಯವನ್ನು ಈ ಕೆಳಗೆ ಕೊಡುವ ಸಂಕ್ಷೇಪಾವಲೋಕನದಲ್ಲಿ ಹೆಸರಿಸಲಾಗಿದೆ.

### ವೈದಿಕ ವಿದ್ಯಾಕ್ಷೇತ್ರದಲ್ಲಿ

ಶ್ರೀರಂಗದಲ್ಲಿ ರಚಿತವಾದ ದೇವರಾಜನ 'ನಿಘಂಟುವ್ಯಾಖ್ಯಾ' ಯಾಸ್ಕನ 'ನಿರುಕ್ತ'ದ ಮೇಲೆ ಬರೆದ ವಿದ್ವತ್ಪೂರ್ಣವಾದ ಒಂದು ವ್ಯಾಖ್ಯಾನ. ಸರಹರಿಯ **ಕ್ರಮದೀಪಿಕಾ** 'ಕ್ರಮಪಾಠ'ದಲ್ಲಿನ ಧ್ವನಿವೈಶಿಷ್ಟ್ಯಗಳನ್ನು ವಿವರಿಸುತ್ತದೆ. **ಪರಿಭಾಷಛಂದೋದರ್ಪಣಂ** ವೈದಿಕ ಛಂದಸ್ಸುಗಳ ವಿಷಯದ ಗ್ರಂಥ. ಶ್ರೀಮಧ್ವಾಚಾರ್ಯರ ಋಗ್ಭಾಷ್ಯದ ಮೇಲೆ ಮತ್ತೆ ಕೆಲವು ಉಪವ್ಯಾಖ್ಯಾನಗಳು ಈ ಕಾಲದಲ್ಲಿ ರಚಿತವಾದವು. ಅವುಗಳಲ್ಲಿ ಮುಖ್ಯವಾದವು ಇವು: ಶ್ರೀರಾಘವೇಂದ್ರನ 'ಮಂಜರಿ', ಶ್ರೀನಿವಾಸನ

‘ ಋಗರ್ಥೋದ್ಧಾರ ’ ಸತ್ಯನಾಥಯತಿಯ ‘ಪ್ರಕಾಶ’ ‘ಆರೋಗ್ಯ’ಹರಿಯ ‘ಟಿಪ್ಪಣಿ’ ಕೇಶವ ಭಟ್ಟಾರಕನ ‘ ವಿವೃತ್ತಿ ’ ಮತ್ತು ಚಲರಿಯ ‘ ಟಿಪ್ಪಣಿ ’.

## ಸ್ಮೃತಿ ಮತ್ತು ನಿಬಂಧ ಸಾಹಿತ್ಯ

ಕಮಲಾಕರನ ಪ್ರಸಿದ್ಧವಾದ ‘ ನಿರ್ಣಯ ಸಿಂಧು ’ವಿನಿಂದ ಸ್ಮೃತಿ ಮತ್ತು ನಿಬಂಧ ಸಾಹಿತ್ಯ ಬಹು ಮಟ್ಟಿಗೆ ಸಮೃದ್ಧಿ ಹೊಂದಿತು. ನಾರಾಯಣನು ‘ ಧರ್ಮಪ್ರವೃತಿ ’ಯನ್ನು ರಚಿಸಿದ್ದನು ; ಇದರಲ್ಲಿ ಶ್ರೌತ ಸ್ಮಾರ್ತಕರ್ಮಗಳನ್ನು ವಿಸ್ತಾರವಾಗಿ ವಿವರಿಸಿದ್ದಾನೆ. ವಿಶ್ವನಾಥನ ‘ ವಿಶ್ವಪ್ರಕಾಶಪದ್ಧತಿ ’ಯೂ ಅದೇ ವಿಷಯವನ್ನು ಕುರಿತದ್ದು. ಈ ಕಾಲಾವಧಿಯಲ್ಲಿ ಕರ್ಣಾಟಕ ಹಾಗೂ ಮಹಾರಾಷ್ಟ್ರ ಪ್ರದೇಶಗಳಲ್ಲಿಯೂ ತಂಜಾವೂರಿನ ನಾಯಕರ ಆಸ್ಥಾನದಲ್ಲಿಯೂ ಈ ರೀತಿಯ ಅನೇಕ ಪ್ರಬಂಧಗಳು ರಚಿತವಾದವು. ಸಾಮಾನ್ಯವಾಗಿ ಧರ್ಮಶಾಸ್ತ್ರ ವಿಷಯಗಳಿಗೆ ಸಂಬಂಧಿಸಿದ ಈ ಗ್ರಂಥಗಳಲ್ಲದೆ ವಿಶೇಷವಾಗಿ ಶ್ರೀವೈಷ್ಣವರಿಗೂ ವೈಷ್ಣವರಿಗೂ ಉಪಯುಕ್ತವಾದ ನಿಬಂಧಗಳೂ ರಚಿತವಾದವು. ಹರಿತ ವೆಂಕಟಾಚಾರ್ಯ ವಿರಚಿತವಾದ ‘ಸ್ಮೃತಿರತ್ನಾಕರ’ವು ಶ್ರೀವೈಷ್ಣವ ಮತೀಯರಿಗೆ ಸಂಬಂಧಿಸಿದ ಇಂಥದೊಂದು ಧರ್ಮಗ್ರಂಥ. ಶ್ರೀನಿವಾಸನ ‘ ಆಹ್ನಿಕಕೌಸ್ತುಭ ’, ಚಲರಿಯ ‘ ಆಹ್ನಿಕಪದ್ಧತಿ ’ ಮತ್ತು ತಿರುಮಲಾರ್ಯನ ‘ ನಿಬಂಧ ಚೂಡಾಮಣಿ ’ ಇವೂ ಶ್ರೀವೈಷ್ಣವ ಧರ್ಮಶಾಸ್ತ್ರ ಗ್ರಂಥಗಳು.

## ಪೂರ್ವಮೀಮಾಂಸಾ

ಕಮಲಾಕರ ಭಟ್ಟನ ಕುಟುಂಬದವರು ಪೂರ್ವಮೀಮಾಂಸಾ ಸಾಹಿತ್ಯಕ್ಕೂ ಅಪಾರ ಸೇವೆ ಸಲ್ಲಿಸಿದ್ದಾರೆ. ಕಮಲಾಕರನೇ ‘ ತಂತ್ರವಾರ್ತಿಕ ’ಕ್ಕೂ ‘ ಶಾಸ್ತ್ರ ದೀಪಿಕೆ ’ಗೂ ವ್ಯಾಖ್ಯಾನ ಬರೆದಿದ್ದಾನೆ. ಅವನ ಸೋದರ ದಿನಕರಭಟ್ಟನು ‘ ಶಾಸ್ತ್ರದೀಪಿಕಾ ’ ಮಾದರಿಯ ಮೇಲೆ ‘ ಶಾಸ್ತ್ರಮಾಲಾ ’ ಬರೆದನು ; ಅದರ ಮೇಲೆ ಅನಂತ ಭಟ್ಟನು ವೃತ್ತಿಯನ್ನು ರಚಿಸಿದನು. ವಿಜಯೀಂದ್ರನು ‘ ಉಪಸಂಹಾರ ವಿಜಯ ’ ಮತ್ತು ‘ಪಿಷ್ಟಪಶು ಮೀಮಾಂಸಾ’ಗಳನ್ನು ರಚಿಸಿದನು.

ರಾಘವೇಂದ್ರಯತಿಯ ‘ಭಟ್ಟಸಂಗ್ರಹ’ವು ‘ಜೈಮಿನಿಸೂತ್ರ’ಗಳ ಮೇಲಿನ ವಿಸ್ತಾರವಾದ ವ್ಯಾಖ್ಯಾನ. ಅನಂತಾಚಾರ್ಯನ ‘ ವಿಧಿಸುಧಾಕರ ’ವು ವಿಧಿಯ ವ್ಯಾಪ್ತಿಯನ್ನು ಕುರಿತು ಚರ್ಚಿಸುತ್ತದೆ. ಲಕ್ಷ್ಮಣ ಪಂಡಿತನ ‘ ತಂತ್ರ ವಿಲಾಸ ’ವು ಕೆಲವು ಅಧಿಕರಣಗಳಲ್ಲಿನ ಸಾಂಪ್ರದಾಯಿಕ ‘ ಸಿದ್ಧಾಂತ ’ಗಳನ್ನು ಖಂಡಿಸುತ್ತದೆ. ರಾಘವಾನಂದ ಸರಸ್ವತಿಯ ‘ ಮೀಮಾಂಸ ಸೂತ್ರದೀಧಿತಿ ’ಯು ಸೂತ್ರಗಳ ಮೇಲಿನ ಒಂದು ವ್ಯಾಖ್ಯಾನ. ವೆಂಕಟಸೂರಿಯ ‘ ಅಧಿಕರಣಮಾಲಾ ’ ಕೆಲವು ಅಧಿಕರಣಗಳ ತಾತ್ಪರ್ಯ ಸಂಗ್ರಹ. ಹೀಗೆ ಜೈಮಿನಿಯ ಸೂತ್ರಗಳ ಸಾಂಪ್ರದಾಯಿಕ ವಿವರಣೆಯೂ ಮೀಮಾಂಸ ಸಿದ್ಧಾಂತಗಳ ವೈಷ್ಣವ ಸಂಪ್ರದಾಯದ ವಿವರಣೆಯೂ ಈ ಕಾಲಾವಧಿಯಲ್ಲಿ ಅವ್ಯಾಹತವಾಗಿ ಮುಂದುವರಿದವು.

ವೇದಾಂತದ ಮೇಲಿನ ವ್ಯಾಖ್ಯಾನ ಸಾಹಿತ್ಯವಂತೂ ಈ ಕಾಲದಲ್ಲಿ ಬಹು ಸಮೃದ್ಧಿಯಾಗಿ ಬೆಳೆಯಿತು. ದ್ವೈತಕ್ಷೇತ್ರದಲ್ಲಿ, ಬೆಳಗಾಂ ಜಿಲ್ಲೆಯ ಯೆಕ್ಕುಂಡಿಯ ಯಾದವಾರ್ಯನು ‘ಅಣು ವ್ಯಾಖ್ಯಾನ’ಕ್ಕೆ ಜಯತೀರ್ಥರು ಬರೆದ ಪ್ರಖ್ಯಾತ ನ್ಯಾಯಸುಧಾ ವ್ಯಾಖ್ಯಾನಕ್ಕೆ ಟಿಪ್ಪಣಿ ಬರೆದನು. ಈ ಗ್ರಂಥದಲ್ಲಿ ಅವನು ಅಪ್ಪಯ್ಯ ದೀಕ್ಷಿತನನ್ನು ಟೀಕಿಸಿದ್ದಾನೆ. ಇದರ ಜೊತೆಗೆ ಅವನು ‘ತತ್ತ್ವ ಸಂಖ್ಯಾನ’ ಮತ್ತು ‘ತತ್ತ್ವೋದ್ಯೋತ’ ಗಳಿಗೂ ಟಿಪ್ಪಣಿ ಬರೆದಿದ್ದಾನೆ. ಕಂಭಾಲೂರು ರಾಮಚಂದ್ರ ತೀರ್ಥನು ‘ತತ್ತ್ವವಿವೇಕ’ ‘ಐತರೇಯ ಭಾಷ್ಯ’ ಮತ್ತು ‘ಸುಧಾ’ಗಳಿಗೆ ವ್ಯಾಖ್ಯಾನ ಬರೆದಿದ್ದಾನೆ.

ಇಮ್ಮಡಿ ಕೆಂಪೇಗೌಡನಿಂದ ಅವನು ತಾಮ್ರಶಾಸನದ ದತ್ತಿ ಪಡೆದನು. ಬಹುಶಃ ಬಿಜಾಪುರ ಜಿಲ್ಲೆಯವನಾದ ನಾರಾಯಣಾಚಾರ್ಯನು 'ಅದ್ವೈತಕಾಲಾನಲ'ವನ್ನು ರಚಿಸಿದನು. ಇದು ಅಪ್ಪಯ್ಯ ದೀಕ್ಷಿತನ 'ಮಧ್ವತಂತ್ರ ಮುಖ ಮರ್ದನ' ಗ್ರಂಥದ ವಿಮರ್ಶೆ. 'ಶಿವತತ್ತ್ವವಿವೇಕ'ದ ಖಂಡನೆಯಾದ 'ವಿಷ್ಣುತ್ತತ್ತ್ವ ವಿವೇಕ'ವನ್ನು ಇವನು ರಚಿಸಿದ್ದಾನೆ. ಸುಧೀಂದ್ರತೀರ್ಥನು ಕವಿಯೂ ಹೌದು. ಅವನ 'ಸದ್ಯುಕ್ತಿರತ್ನಾಕರ'ವು 'ತರ್ಕತಾಂಡವ'ದ ಮೇಲೆ ಬರೆದ ವ್ಯಾಖ್ಯಾನ. ವಿದ್ಯಾಧೀಶ ತೀರ್ಥನು ರಘೂತ್ತಮನ ಅನಂತರ ಕಾಲದಲ್ಲಿ ಉತ್ತರಾದಿಮಠದ ಪೀಠಾಧಿಪತಿಗಳಾದವರಲ್ಲೆಲ್ಲಾ ಅತ್ಯಂತ ಪ್ರಸಿದ್ಧನಾದವನು. ಇವನು 'ನ್ಯಾಯ ಸುಧಾ'ದ ಮೊದಲ ಐದು ಅಧಿಕರಣಗಳ ಮೇಲೆ ಟಿಪ್ಪಣಿ ಬರೆದಿದ್ದಾನೆ. 'ವಾಕ್ಯಾರ್ಥಚಂದ್ರಿಕಾ' ಎಂಬ ಈ ಗ್ರಂಥ ಇವನ ತಮ್ಮ ಪಾಂಡುರಂಗಿ ಕೇಶವಭಟ್ಟಾರಕನಿಂದ ಪೂರ್ತಿಗೊಳಿಸಲಾಯಿತು. ವಿದ್ಯಾಧೀಶನು ರಂಗೋಜಿಭಟ್ಟನ ಸಮಕಾಲಿಕ; ಕೆಳದಿಯ ವೆಂಕಟಪ್ಪನಾಯಕನ ಆಸ್ಥಾನದಲ್ಲಿ ಅವನೊಡನೆ ವೇದಾಂತ ವಿಷಯವಾಗಿ ವಾದ ಮಾಡಿದವನು. ಅವನು ಕೆಲವು ಪ್ರಕರಣ ಮೇಲೂ ವ್ಯಾಖ್ಯಾನ ಬರೆದಿದ್ದಾನೆ. 'ನ್ಯಾಯಾಮೃತ ಕಂಟಕೋದ್ಧಾರ'ವು ಅವನ ತಂದೆ ಆನಂದ ಭಟ್ಟಾರಕನು 'ಅದ್ವೈತ ಸಿದ್ಧಿ'ಯನ್ನು ಖಂಡಿಸಿ ಬರೆದಿರುವ ಗ್ರಂಥ. ಕೇಶವ ಭಟ್ಟಾರಕನು ಎಲ್ಲಾ ಹತ್ತು ಪ್ರಕರಣಗಳಿಗೂ 'ನ್ಯಾಯಸುಧಾ' ಮತ್ತು 'ಚಂದ್ರಿಕಾ'ಗಳಿಗೂ ವ್ಯಾಖ್ಯಾನ ಬರೆದಿದ್ದಾನೆ. ಪೇಜಾವರ ಮಠದ ವಿಶ್ವೇಶ್ವರತೀರ್ಥನು 'ಐತರೇಯ ಭಾಷ್ಯ'ದ ಮೇಲೆ ಟಿಪ್ಪಣಿ ಬರೆದಿದ್ದಾನೆ. ಈ ಕಾಲದ ವ್ಯಾಖ್ಯಾನಕಾರರಲ್ಲೆಲ್ಲಾ ಅತ್ಯಂತ ಪ್ರಸಿದ್ಧನಾದವನೆಂದರೆ ರಾಘವೇಂದ್ರ ತೀರ್ಥ. ಆತ ನಲವತ್ತಕ್ಕಿಂತಲೂ ಹೆಚ್ಚು ಗ್ರಂಥಗಳನ್ನು ಬರೆದಿದ್ದಾನೆ. ಅವನ ಗ್ರಂಥಗಳಲ್ಲೆಲ್ಲಾ 'ಸುಧಾ' ವ್ಯಾಖ್ಯಾನವಾದ 'ಪರಿಮಳ' ಸರ್ವಶ್ರೇಷ್ಠವಾದದ್ದು. 'ತರ್ಕತಾಂಡವ' ಪ್ರಕರಣಗಳು, ಮತ್ತು 'ಉಪನಿಷತ್ತು'ಗಳ ಮೇಲಿನ ಅವನ ವ್ಯಾಖ್ಯಾನಗಳು ದ್ವೈತಸಾಹಿತ್ಯಕ್ಕೆ ಅಮೂಲ್ಯವಾದ ಕೊಡುಗೆಗಳು. ಸತ್ಯನಾಥಯತಿಯು ಮತ್ತೊಬ್ಬ ಸಮರ್ಥ ಬರಹಗಾರ. ಸುಮಾರು ಹನ್ನೆರಡು ಗ್ರಂಥಗಳು ಅವನವು. ಅವುಗಳಲ್ಲಿ 'ಅಭಿನವಚಂದ್ರಿಕಾ' ,ಅಭಿನವತಾಂಡವ', 'ಅಭಿನವಗದಾ' ಈ ಮೂರು ಅತ್ಯಂತ ಪ್ರಮುಖವಾದವು. ಶಿವಮೊಗ್ಗ ಜಿಲ್ಲೆಯ ಹೊನ್ನಾಳಿಯ ಬಿದರಹಳ್ಳಿ ಶ್ರೀನಿವಾಸತೀರ್ಥನು ಬಹು ಸಮರ್ಥ ವ್ಯಾಖ್ಯಾನಕಾರ. ಮಧ್ವಾಚಾರ್ಯರ ಮೂವತ್ತೇಳು ಗ್ರಂಥಗಳಲ್ಲಿ ಇಪ್ಪತ್ತ ನಾಲ್ಕಕ್ಕೆ ಆತ ಲಘು ವ್ಯಾಖ್ಯಾನಗಳನ್ನು ಬರೆದಿದ್ದಾನೆ. ಬೃಂದಾವನದ ಸಮೀಪದ ತ್ರಿಯುಗಪುರದ ವನಮಾಲಿಮಿಶ್ರನು ದ್ವೈತಮತದ ಬಹು ಶ್ರದ್ಧಾವಂತ ಪ್ರತಿಪಾದಕ. ಅವನ 'ಚಂಡಮಾರುತ'ವು ಅದ್ವೈತ ಸಿದ್ಧಾಂತಗಳನ್ನು ಸಂಪೂರ್ಣವಾಗಿ ಖಂಡಿಸುವ ತೀವ್ರ ಖಂಡನ ಗ್ರಂಥ. 'ನ್ಯಾಯಾಮೃತ ಸೌರಭ' ಮತ್ತು 'ಸೌಗಂಧ್ಯ' ಇವೆರಡೂ ಗೌಡ ಬ್ರಹ್ಮಾನಂದನಿಗೆ ಉತ್ತರಗಳು. ಇನ್ನೂ ಕೆಲವು ಗ್ರಂಥಗಳು ಆತನವೆಂದು ಹೇಳುತ್ತಾರೆ. ಚಲರಿ ಕುಟುಂಬದ ಮೂವರು ದ್ವೈತ ಗ್ರಂಥಗಳ ಮೇಲೆ ಅನೇಕ ಟೀಕೆಟಿಪ್ಪಣಿಗಳನ್ನೂ ಸಂಗ್ರಹಗಳನ್ನೂ ರಚಿಸಿದ್ದಾರೆ. ಸುಮತೀಂದ್ರತೀರ್ಥನ 'ಭಾವರತ್ನಕೋಶ'ವು 'ಗೀತಾಭಾಷ್ಯಟೀಕಾ'ದ ಮೇಲಿನ ಟಿಪ್ಪಣಿ. ಸತ್ಯಪ್ರಿಯತೀರ್ಥ, ಸತ್ಯಧರ್ಮತೀರ್ಥ, ಮೈಸೂರಿನ ಕಾಶೀ ತಿಮ್ಮಣ್ಣಾಚಾರ್ಯ, ಧಾರ್ವಾಡಜಿಲ್ಲೆಯ ಮಾಸೂರಿನ ಪಾಂಡುರಂಗಿ ನರಸಿಂಹಾಚಾರ್ಯ—ಇವರೂ ದ್ವೈತವಾದ ಸಾಹಿತ್ಯಕ್ಕೆ ವಿಶೇಷ ಕೊಡುಗೆ ನೀಡಿದ್ದಾರೆ.

ಈ ಕಾಲದಲ್ಲಿ ವಿಶಿಷ್ಟಾದ್ವೈತ ವೇದಾಂತವನ್ನು ವಿವರಿಸುವವರು ಕೂಡ ವಿಶಿಷ್ಟಾದ್ವೈತ ಸಿದ್ಧಾಂತಗಳನ್ನು ಕುರಿತು ಅನೇಕ ವ್ಯಾಖ್ಯಾನ ಸಂಗ್ರಹ, ಮತ್ತು ವಿವರಣ ಗ್ರಂಥಗಳನ್ನು ರಚಿಸಿದ್ದಾರೆ. ಪರಕಾಲಯತಿಯು 'ಮಿತಾಕ್ಷರ' ಎಂಬ ಹೆಸರಿಟ್ಟು 'ಶ್ರೀ ಭಾಷ್ಯ'ಕ್ಕೆ ಟೀಕೆ ಬರೆದಿದ್ದಾನೆ. ಆತನು ಬರೆದ 'ವಿಜಯೀಂದ್ರ ಪರಾಜಯ'ವು ವಿಜಯೀಂದ್ರನ 'ಪರತತ್ತ್ವ ಪ್ರಕಾಶಿಕಾ' ಗ್ರಂಥದ ವಿಮರ್ಶೆ. ಪರಕಾಲಯತಿಯ ಶಿಷ್ಯ ರಂಗರಾಮಾನುಜನು ಅನೇಕ ಗ್ರಂಥಗಳನ್ನು ರಚಿಸಿದ್ದಾನೆ. 'ಮೂಲಾಭಾವ ಪ್ರಕಾಶಿಕಾ' 'ಶಾರೀರಕಶಾಸ್ತ್ರ ದೀಪಿಕಾ' 'ನ್ಯಾಯಸಿದ್ಧಾಂಜನ ವ್ಯಾಖ್ಯಾ' 'ವಿಷಯವಾಕ್ಯದೀಪಿಕಾ'

ಮತ್ತು 'ರಾಮಾನುಜ ಸಿದ್ಧಾಂತಸಾರ' ಇವು ಅವುಗಳಲ್ಲೆಲ್ಲಾ ಬಹು ಮುಖ್ಯವಾದವು. ಶ್ರೀನಿವಾಸನ 'ಬ್ರಹ್ಮವಿದ್ಯಾ ಕೌಮುದಿ'ಯು 'ಶ್ರೀ ಭಾಷ್ಯ'ದ ಮೇಲಿನ ಒಂದು ಟಿಪ್ಪಣಿ. ಶುದ್ಧಸತ್ವಲಕ್ಷ್ಮಣಾರ್ಯನ 'ಗುರುಭಾವ ಪ್ರಕಾಶಿಕಾ' 'ಶ್ರೀ ಭಾಷ್ಯ'ದ ಮೇಲಿನ ಒಂದು ಉಪವ್ಯಾಖ್ಯಾನ. ಶ್ರೀಶೈಲ ಶ್ರೀನಿವಾಸನ 'ತತ್ತ್ವ ಮಾರ್ತಾಂಡ'ವು ಶ್ರೀಭಾಷ್ಯದ ಸಂಕ್ಷಿಪ್ತಸಂಗ್ರಹ. ಅವನ ಇತರ ಗ್ರಂಥಗಳು : 'ಭೇದದರ್ಪಣ', 'ಸಿದ್ಧಾಂತ ಚಿಂತಾಮಣಿ' 'ಸಾರದರ್ಪಣ', 'ವಿರೋಧ ನಿರೋಧ, 'ಜಿಜ್ಞಾಸಿದರ್ಪಣ', 'ನಯದ್ಯುಮಣಿ ದೀಪಿಕಾ,' ಮತ್ತು 'ಸಂಗ್ರಹ'. ದೇಶಿಕಾಚಾರ್ಯನ ಪ್ರಯೋಗ ರತ್ನಮಾಲಾ' ಪುರುಷೋತ್ತಮನ 'ಸುಬೋಧಿನೀ', ಶಠಗೋಪನ 'ಭಾಷ್ಯವ್ಯಾಖ್ಯಾ'–ಇವು ಸರಳವಾದ ವಿವರಣಾತ್ಮಕ ವ್ಯಾಖ್ಯಾನಗಳು. ಶಠಮರ್ಷಣಗೋತ್ರದ ಶ್ರೀನಿವಾಸನು ತನ್ನ 'ಆನಂದ ತಾರತಮ್ಯ ಖಂಡನ'ದಲ್ಲಿ ಆನಂದತಾರತಮ್ಯ ವಾದವನ್ನು ಖಂಡಿಸಿದ್ದಾನೆ. ಶ್ರೀನಿವಾಸ ಸುಧಿಯು 'ಬ್ರಹ್ಮಜ್ಞಾನ ನಿರಾಸ'ದಲ್ಲಿ ತ್ರ್ಯಂಬಕಪಂಡಿತನೊಡನೆ ತಾನು ನಡೆಸಿದ ವಾದವನ್ನು ವಿವರಿಸಿದ್ದಾನೆ. ನರಸಿಂಹ ದೇವನು 'ಭೇದಧಿಕ್ಕಾರ ನ್ಯಕ್ಕಾರ', 'ನಮಿಸರ ಧಿಕ್ಕಾರ' ಮತ್ತು 'ಸಿದ್ಧಾಂತ ನಿರ್ಣಯ'ಗಳನ್ನು ರಚಿಸಿದ್ದಾನೆ. ನರಸಿಂಹ ಸೂರಿಯ 'ಶರೀರಭಾವಾಧಿಕರಣ ವಿಚಾರ' ಮತ್ತು 'ತತ್ಕ್ರತು ನ್ಯಾಯವಿಚಾರ' ರಂಗನಾಥಾಚಾರ್ಯನ 'ಅಷ್ಟಾದಶ ಭೇದವಿಚಾರ', ಮತ್ತು 'ಪುರುಷಾರ್ಥರತ್ನಾಕರ,' ವೇದಾಂತರಾಮಾನುಜನ 'ಸಾರದರ್ಶನ ಶಿರೋಮಣಿ' ಮತ್ತು 'ದಿವ್ಯಸೂರಿ ಪ್ರಭಾವದೀಪಿಕಾ', ಅಯ್ಯಣ್ಣನ 'ವ್ಯಾಸತಾತ್ಪರ್ಯ ನಿರ್ಣಯ,' ಗೋಪಾಲಾಚಾರ್ಯನ 'ಶತಕೋಟಿ ದೂಷಣ ಪರಿಹಾರ'—ಇವೆಲ್ಲ ಈ ಕಾಲಕ್ಕೆ ಸೇರಿದವು. ಶ್ರೀಶೈಲ ಶ್ರೀನಿವಾಸನ ಸೋದರ ಅಣ್ಣಯ್ಯಾರ್ಯನು 'ಸಪ್ತತಿರತ್ನ ಮಾಲಿಕಾ', 'ವ್ಯಾವಹಾರಿಕತ್ವ ಖಂಡನಸಾರ', ಮತ್ತು 'ಮಿಥ್ಯಾತ್ವ ಖಂಡನ'ಗಳನ್ನು ರಚಿಸಿದನು. ಅನಂತಾರ್ಯನ 'ನ್ಯಾಯಭಾಸ್ಕರ'ವು ಗೌಡ ಬ್ರಹ್ಮಾನಂದಿಯ ವಾದವನ್ನು ಖಂಡಿಸುವ ಗ್ರಂಥ.

ಈ ಕಾಲಾವಧಿಯಲ್ಲಿ ಅದ್ವೈತ ವೇದಾಂತವನ್ನು ವಿವರಿಸುತ್ತಲೂ ಅದಕ್ಕೆ ವಿರೋಧವಾಗಿ ಎತ್ತಿದ ಆಕ್ಷೇಪಗಳಿಗೆ ಸಮಾಧಾನ ಹೇಳಿ ಸಮರ್ಥಿಸುತ್ತಲೂ ಅನೇಕ ಮಂದಿ ಸಮರ್ಥ ವಿದ್ವಾಂಸರು ಗ್ರಂಥಗಳನ್ನು ರಚಿಸಿದರು. ಇವರಲ್ಲೆಲ್ಲ ಅಗ್ರಗಣ್ಯನೆಂದರೆ ಅಪ್ಪಯ್ಯ ದೀಕ್ಷಿತ. ಆತ ನೂರಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿರುವುದಾಗಿ ತಿಳಿದುಬರುತ್ತದೆ. 'ಆತನ ವೇದಾಂತಕಲ್ಪತರು ಪರಿಮಳ'ವು 'ಭಾಮತಿ'ಯ ಮೇಲಿನ ಒಂದು ಉಪವ್ಯಾಖ್ಯಾನ. 'ಸಿದ್ಧಾಂತಲೇಶ ಸಂಗ್ರಹ'ವು ಅದ್ವೈತ ವೇದಾಂತದ ಬೇರೆ ಬೇರೆ ಶಾಖೆಗಳ ವಿಚಾರಗಳನ್ನು ಕ್ರೋಡೀಕರಿಸಿರುವ ಸಂಗ್ರಹ ಗ್ರಂಥ. 'ಮಧ್ವತಂತ್ರ ಮುಖಮರ್ದನ'ವು ದ್ವೈತ ಸಿದ್ಧಾಂತಗಳ ಮೇಲಿನ ಟೀಕಾ ಗ್ರಂಥ. ಮಧುಸೂದನ ಸರಸ್ವತಿಯ 'ಅದ್ವೈತಸಿದ್ಧಿ'ಯನ್ನು ಕುರಿತ ತರಂಗಿಣಿ ರಾಮಾಚಾರ್ಯನ ಖಂಡನೆಗೆ ಪ್ರತಿಯಾಗಿ ವಾದಿಸಿ ಗೌಡಬ್ರಹ್ಮಾನಂದನು ಅದನ್ನು (ಅದ್ವೈತಸಿದ್ಧಿಯನ್ನು) ಸಮರ್ಥಿಸಿದನು. ಮಧುಸೂದನ ಮತ್ತು ಗೌಡಬ್ರಹ್ಮಾನಂದ ಇಬ್ಬರೂ ಉತ್ತರ ಭಾರತದವರಾದರೂ ಕರ್ಣಾಟಕದ ಸಮರ್ಥ ಲೇಖಕರು ವಾದಗ್ರಂಥಗಳ ರಚನೆಯಲ್ಲಿ ತೊಡಗುವಂತೆ ಅವರ ಗ್ರಂಥಗಳು ಪ್ರೇರಿಸಿದವು. ಸ್ವಯಂಪ್ರಕಾಶನು 'ಅದ್ವೈತ ಮಕರಂದ'ಕ್ಕೆ ವ್ಯಾಖ್ಯಾನ ಬರೆದನು. ಅವನ ಶಿಷ್ಯರಾದ ಮಹಾದೇವಸರಸ್ವತಿ ಮತ್ತು ಅರ್ಹಾನಂದ ಯತಿಗಳು ಅನುಕ್ರಮವಾಗಿ 'ತತ್ತ್ವಾನುಸಂಧಾನ' ಮತ್ತು 'ಋಜುಪ್ರಕಾಶಿಕಾ'ಗಳನ್ನು ಬರೆದರು. ಅರ್ಹಾನಂದಯತಿಯು ಇಮ್ಮಡಿ ಜಗದೇಕರಾಯನ ಕೋರಿಕೆಯ ಮೇಲೆ ಗ್ರಂಥ ರಚನೆ ಮಾಡಿದನು. ಅವನ ಶಿಷ್ಯ ಕಾಲಹಸ್ತ್ಯಾಧ್ವರಿಯು 'ರತ್ನಕೋಶ ಪ್ರಕಾಶಿಕಾ' ಕರ್ತೃ. ಕೃಷ್ಣಾನಂದ ಸರಸ್ವತಿಯು 'ಸಿದ್ಧಾಂತ ಸಿದ್ಧಾಂಜನ'ವನ್ನು ರಚಿಸಿದನು. ಭಟ್ಟೋಜಿ ದೀಕ್ಷಿತನ 'ದ್ವೈತಕೌಸ್ತುಭ' ಖಂಡನವು ದ್ವೈತ ವೇದಾಂತದ ಮೇಲಿನ ಖಂಡನೆ. ಸುಬ್ರಹ್ಮಣ್ಯನ 'ಭಾಷ್ಯಾರ್ಥ ನ್ಯಾಯಮಾಲಾ', ಗೋವಿಂದಾನಂದನ 'ರತ್ನಪ್ರಭಾ', ಹರಿದೀಕ್ಷಿತನ 'ವೇದಾಂತ ಸೂತ್ರ ವೃತ್ತಿ,' ದೇವರಾಮಭಟ್ಟನ 'ಅಧಿಕರಣಮಾಲಾ' –ಇವು ಈ ಕಾಲದಲ್ಲಿ ಸೂತ್ರಭಾಷ್ಯಕ್ಕೆ ರಚಿಸಿದ ವ್ಯಾಖ್ಯಾನಗಳು. ರಾಘವಾನಂದ, ವಿಶ್ವದೇವ

ಮತ್ತು ರಾಮತೀರ್ಥ—ಇವರು 'ಸಂಕ್ಷೇಪ ಶಾರೀರಕಕ್ಕೆ' ವ್ಯಾಖ್ಯಾನ ಬರೆದಿದ್ದಾರೆ. ಕೊಂಡಭಟ್ಟನ ಮಗ ಲಕ್ಷ್ಮೀನರಸಿಂಹನು 'ದೃಗ್ದೃಶ್ಯ ವಿವೇಕಕ್ಕೆ' 'ಆಭೋಗ'ವೆಂಬ ಒಂದು ವ್ಯಾಖ್ಯಾನವನ್ನು ರಚಿಸಿದನು. ನಾರಾಯಣಶರ್ಮನು 'ಭೇದಾಧಿಕಾರದ' ಮೇಲೆ ರಚಿಸಿದ ವ್ಯಾಖ್ಯಾನ, ಧರ್ಮರಾಜಾಧ್ವರಿಯ 'ವೇದಾಂತ ಪರಿಭಾಷಾ' ಮತ್ತು 'ಸಿದ್ಧಾಂತ ಬಿಂದು' ವಿನ ಮೇಲಿನ ಕೆಲವು ವ್ಯಾಖ್ಯಾನಗಳು ಇವು ಈ ಕಾಲದಲ್ಲಿ ಅದ್ವೈತ ಸಾಹಿತ್ಯಕ್ಕೆ ಹೊಸತಾಗಿ ಸೇರಿದ ಕೆಲವು ಮುಖ್ಯ ಗ್ರಂಥಗಳು.

ಕರ್ಣಾಟಕದಲ್ಲಿ ನ್ಯಾಯಶಾಸ್ತ್ರದ ಅಧ್ಯಯನ ಬಹು ಉತ್ಸಾಹದಿಂದ ನಡೆದಿದ್ದಿತಾದರೂ ನ್ಯಾಯ ವಿಷಯದಲ್ಲಿ ಗ್ರಂಥರಚನೆಯಾದದ್ದು ವಿರಳ; ಕೆಲವು ಮಾತ್ರ. 'ಪಂಚವಾದ'ಗಳ ಮೇಲೆ ಕೃಷ್ಣ ಭಟ್ಟನು ಬರೆದ ವ್ಯಾಖ್ಯಾನಗಳು ವಿಶೇಷ ಉಲ್ಲೇಖಕ್ಕೆ ಅರ್ಹವಾಗಿವೆ. ಆರಂಭದಶೆಯ ವಿದ್ಯಾರ್ಥಿಗಳ ಸಹಾಯಕ್ಕಾಗಿ ಅಣ್ಣಂಭಟ್ಟನ 'ತರ್ಕಸಂಗ್ರಹ' ಮತ್ತು 'ತರ್ಕಾಭ್ಯಾಸ'ಗಳಿಗೆ ಕೆಲವು ವ್ಯಾಖ್ಯಾನಗಳನ್ನು ಬರೆಯಲಾಯಿತು. ಅವು ಯಾವುವೆಂದರೆ: 'ಪದಾರ್ಥಸಾಗರ', 'ತರ್ಕಚಂದ್ರಿಕಾ', 'ತರ್ಕಕೌಮುದೀ', 'ತರ್ಕರತ್ನಾಂಭೋದಧಿ' ಮೊದಲಾದವು. ಅನೇಕ ಕ್ರೋಡ ಪತ್ರಗಳು ಎಂದರೆ, ಉನ್ನತ ಪರಿಷ್ಕಾರಗಳು ಹಸ್ತ ಪ್ರತಿಯಲ್ಲೇ ಉಳಿದಿವೆ.

ಶುದ್ಧ ಸಾಹಿತ್ಯ ಕ್ಷೇತ್ರದಲ್ಲಿ ನೋಡಿದರೆ ಈ ಕಾಲದಲ್ಲಿ ಸ್ವಯಂಕಲ್ಪಕತೆಯಾಗಲಿ ಸೂಕ್ಷ್ಮಸಂವೇದನೆಯ ಕವಿತೆಯಾಗಲಿ ಅಷ್ಟೇನೂ ಕಾಣಬರುವುದಿಲ್ಲ; ಮೊದಲೇ ಇದ್ದ ಪರಂಪರಾಗತವಾದ ಸಾಂಪ್ರದಾಯಿಕ ಕವಿತಾರಾಶಿಗೆ ಅದೇ ರೀತಿಯ ಮತ್ತಷ್ಟನ್ನು ಸೇರಿಸಿ ವೃದ್ಧಿಪಡಿಸಿದ್ದೇನೋ ನಿಜ. ಹಾಗಿದ್ದರೂ ಕೆಲವರು ಮತಗುರುಗಳ ಜೀವನ ಚರಿತ್ರೆಯನ್ನು ಕುರಿತ ಕಾವ್ಯಗಳೂ ಭಕ್ತಿ ಭಾವದ ಸ್ತೋತ್ರಗಳೂ ಈ ಕಾಲಕ್ಕೆ ವಿಶಿಷ್ಟವಾದ ರಚನೆ.

ಮೈಸೂರಿನ ಅನಂತಾಚಾರ್ಯನು 'ಯಾದವ-ರಾಘವ-ಪಾಂಡವೀಯ' ಎಂಬ ಒಂದು ಸ್ವಾರಸ್ಯಕರವಾದ ಕಾವ್ಯವನ್ನು ರಚಿಸಿದನು. ಈ ಕಾವ್ಯವು 'ರಾಮಾಯಣ', 'ಮಹಾಭಾರತ,' ಮತ್ತು 'ಭಾಗವತ' ಈ ಮೂರು ಕಥೆಗಳನ್ನು ಏಕಕಾಲದಲ್ಲಿ ನಿರೂಪಿಸುತ್ತದೆ. ಇದು ಆ ಹಿಂದೆ ಚಿದಂಬರನು ರಚಿಸಿದ್ದ ಅದೇ ಹೆಸರಿನ ಗ್ರಂಥದ ಮಾದರಿಯಲ್ಲಿ ಬರೆದದ್ದು. ಚಿದಂಬರನಿಗೆ ಅವನಿಗಿಂತಲೂ ಹಿಂದಿನವರಾದ ಧನಂಜಯ ಮತ್ತು ಕವಿರಾಜರೇ ಮಾದರಿ. ಷಡಕ್ಷರದೇವನ 'ಕವಿಕರ್ಣರಸಾಯನ'ವು ಒಂದು ಮನೋಹರವಾದ ಕಾವ್ಯ; ಇದರಲ್ಲಿ 10 ಆಶ್ವಾಸಗಳಿವೆ. ಗ್ರಂಥ ಚೂರುಪಾರು ಅಪೂರ್ಣವಾಗಿ ದೊರೆಯುತ್ತದೆ. ಅವನು ಕನ್ನಡ ಸಂಸ್ಕೃತಗಳೆರಡರಲ್ಲೂ ಪರಿಣತನಾದವನು. ಅವನ ಕನ್ನಡ ಗ್ರಂಥಗಳು 'ರಾಜಶೇಖರವಿಲಾಸ' ಮತ್ತು 'ಶಬರಶಂಕರವಿಲಾಸ'—ವಿಶೇಷ ಜನಾದರಣೆಗೆ ಪಾತ್ರವಾಗಿವೆ. ಅವನು ಸಂಸ್ಕೃತದಲ್ಲಿ ಕೆಲವು ಸ್ತೋತ್ರಗಳನ್ನು ರಚಿಸಿದ್ದಾನೆ. ಏಕಾಂಬರಶಾಸ್ತ್ರಿ ರಚಿಸಿರುವ 'ವೀರಭದ್ರ ವಿಜಯ ಚಂಪು' ಕೆಂಪೇಗೌಡ ವಂಶದ ಪಾಳೆಯಗಾರರ ಚರಿತ್ರೆಯನ್ನು ನಿರೂಪಿಸುತ್ತದೆ. ಅವನು ಮುಮ್ಮಡಿ ಕೆಂಪೇಗೌಡನ ಆಸ್ಥಾನದಲ್ಲಿದ್ದನು. ಸುರಪುರದ ವೆಂಕಟಾಚಾರ್ಯ ಮತ್ತು ಅವನ ಮಗ ಅಣ್ಣಯ್ಯಾಚಾರ್ಯ ಇಬ್ಬರೂ ಸುರಪುರದ ಆಸ್ಥಾನಕವಿಗಳು. ವೆಂಕಟಾಚಾರ್ಯನವು ಮೂರು ಗ್ರಂಥಗಳು: 'ಬಾಣಾಸುರವಿಜಯ,' 'ಶೃಂಗಾರತರಂಗಿಣೀ' ಮತ್ತು 'ಅಭಿನವ ಶೃಂಗಾರರಸಮಂಜರೀ'. ಅಣ್ಣಯ್ಯಾಚಾರ್ಯನು 'ರಸೋದರ' ವನ್ನು ಬರೆದಿದ್ದಾನೆ. ಪಾಂಡುರಂಗನ 'ವಿಜಯ ಪುರಾಣಕಥಾ' ಬಿಜಾಪುರ ಮತ್ತು ಅದರ ಮುಸಲ್ಮಾನ ದೊರೆಗಳ ಚರಿತ್ರೆಯನ್ನು ವಿವರಿಸುತ್ತದೆ. ಮೈಸೂರಿನ ಪ್ರಧಾನಿ ವೆಂಕಟ ಭೂಪತಿಯು ಹಲವು ಕಿರುನಾಟಕಗಳನ್ನು ರಚಿಸಿದ್ದಾನೆ: 'ರುಕ್ಮಿಣೀ ಸ್ವಯಂವರ' 'ಕುಕ್ಷಿಂಭರಿಭೈಕ್ಷ,' 'ಕಾಮಕಲಾವಿಲಾಸ,' 'ವಿಬುಧದಾನವ' ಇವು ಅವನ ರಚನೆಗಳಲ್ಲಿ ಕೆಲವು.

ಸುಧೀಂದ್ರಯೋಗಿಯ 'ಸುಭದ್ರಾ ಧನಂಜಯ'ವು ತ್ರುಟಿತವಾಗಿ ಚೂರುಪಾರು ಸಿಕ್ಕಿದೆ. 'ಸುಮತೀಂದ್ರ ಜಯ ಘೋಷಣೆ', 'ಸುಭದ್ರಾಪರಿಣಯ', ಮತ್ತು 'ಉಷಾಹರಣ'ದ ಮೇಲಿನ ಒಂದು ವ್ಯಾಖ್ಯಾನ ಇವು ಸುಮತೀಂದ್ರತೀರ್ಥನ ರಚನೆಗಳು. ಈ ಕಾಲದಲ್ಲಿ ಮಧ್ವಸಂತರ ಜೀವನಚರಿತ್ರರೂಪವಾದ ಒಂದು ಕಾವ್ಯ ಪರಂಪರೆ ಬರೆದು ಬಂತು: ಸಂಕರ್ಷಣ ರಚಿತವಾದ 'ಜಯತೀರ್ಥವಿಜಯ', ಕೃಷ್ಣನು ರಚಿಸಿದ 'ಜಯತೀರ್ಥ ವಿಜಯಾಬ್ಧಿ', ಶ್ರೀನಿವಾಸನಿಂದ ರಚಿತವಾದ 'ಜಯೀಂದ್ರೋದಯ' ಸೋಮನಾಥನ 'ವ್ಯಾಸಯೋಗಿ ಚರಿತ', ರತ್ನಾಕರನ 'ವ್ಯಾಸವಿಜಯ', ಜನಾರ್ದನನು ಬರೆದ 'ವಿದ್ಯಾಧೀಶ ವಿಜಯ', ನಾರಾಯಣನು ರಚಿಸಿದ 'ರಾಘವೇಂದ್ರ ವಿಜಯ', ಸಂಕರ್ಷಣ ವಿರಚಿತವಾದ 'ಸತ್ಯನಾಥಾಭ್ಯುದಯ' ಕಾಂಚಿಕೃಷ್ಣಾಚಾರ್ಯನು ರಚಿಸಿದ 'ಸತ್ಯಬೋಧ ವಿಜಯ' 'ಸತ್ಯಸಂಧ ವಿಜಯ', 'ಸತ್ಯಸಂಧಾಲಂಕಾರ', ಮತ್ತು 'ಗುರುಚಂದ್ರಕಾಲೋದಯ'—ಇವೂ ಈ ಜಾತಿಯ ಕಾವ್ಯಗಳು. ಬಿಜಾಪುರದ ಭೀಮದೈವಜ್ಞನು 'ಗುರುವಂಶಕಥಾಕಲ್ಪತರು' ವನ್ನು ರಚಿಸಿದ್ದಾನೆ. ಇದರಲ್ಲಿ ಸತ್ಯಸಂಧನ ವರೆಗೂ ಆಗಿಹೋದ ಎಲ್ಲಾ ಮಾಧ್ವಗುರುಗಳ ಜೀವನಚರಿತ್ರವನ್ನು ನಿರೂಪಿಸ ಲಾಗಿದೆ. 'ಗುರುವಂಶಕಥಾವಲೀ' ಕೂಡ ಇದೇ ಜಾತಿಯ ಗ್ರಂಥ; ಇದು ಅಪೂರ್ಣವಾಗಿ ಚೂರುಪಾರು ಮಾತ್ರ ಸಿಕ್ಕಿದೆ. ರಾಮಾಚಾರ್ಯ ರಚಿತವಾದ 'ಕೊಂಕಣಾಭ್ಯುದಯ'ವು ಸಾರಸ್ವತ ವೈಷ್ಣವ ಮಠಗಳ ಚರಿತ್ರೆಯನ್ನು ನಿರೂಪಿಸುತ್ತದೆ. ಅಣ್ಣಯ್ಯಾಚಾರ್ಯನ 'ತತ್ತ್ವಗುಣಾದರ್ಶ'ವು ವೆಂಕಟಾಧ್ವರಿಯ 'ವಿಶ್ವಗುಣಾದರ್ಶ'ದ ಮಾದರಿಯ ಮೇಲೆ ಬರೆದಿರುವುದು. ಈ ಗ್ರಂಥವು ಜಯ ಮತ್ತು ವಿಜಯರ ಸಂವಾದ ರೂಪದಲ್ಲಿ ಶೈವ ಮತ್ತು ವೈಷ್ಣವ ಮತತತ್ತ್ವಗಳನ್ನು ಪರಸ್ಪರ ಹೋಲಿಸಿ ತುಲನಾತ್ಮಕವಾಗಿ ಅವುಗಳ ಮಹತ್ತ್ವವನ್ನು ನಿರ್ಧರಿಸುತ್ತದೆ. ಮಲ್ಲಾರಿ ಆರಾಧ್ಯನ 'ಶಿವಲಿಂಗ ಸೂರ್ಯೋದಯ ನಾಟಕ'ವು ವೀರಶೈವ ಮತತತ್ತ್ವಗಳ ಮಹಿಮೆಯನ್ನು ಎತ್ತಿಹಿಡಿಯುತ್ತದೆ. ಪರಕಾಲಯತಿ ವಿರಚಿತ ವಾದ 'ಹಂಸ ಸಂದೇಶ', ಕೃಷ್ಣಮೂರ್ತಿ ಬರೆದ 'ಯಶೋಲ್ಲಾಸ,' ರಂಗಾಚಾರ್ಯನು ರಚಿಸಿದ 'ಶುಕಸಂದೇಶ', ರಾಮಶಾಸ್ತ್ರಿ ವಿರಚಿತವಾದ 'ಮೇಘ ಪ್ರತಿಸಂದೇಶ', ಚಂದ್ರಶೇಖರ ಸರಸ್ವತಿಯ 'ಗೀತಗಂಗಾಧರ', ರಾಮಕವಿಯ 'ಗೀತರಾಘವ'—ಇವು ಈ ಕಾಲದ ಭಾವಗೀತಗಳಲ್ಲಿ ಕೆಲವು. ಸುಬ್ರಹ್ಮಣ್ಯನು ರಚಿಸಿದ 'ಶಾಂತಿವಿಲಾಸ', ವೆಂಕಟರಾಯ ರಚಿತವಾದ 'ನೀತಿಶತಕ', ಶ್ರೀನಿವಾಸಾ ಚಾರ್ಯನು ಬರೆದ 'ಪಂಚತಂತ್ರ' ಸಂಗ್ರಹ—ಈ ಕೆಲವು ಈ ಕಾಲದಲ್ಲಿ ರಚಿತವಾದ ನೀತಿಗ್ರಂಥಗಳು. ತಿರುಮಲಾರ್ಯನಿಂದ 'ವೆಂಕಟೇಶ ಚೂರ್ಣಿಕಾ', ನರಸಿಂಹನಿಂದ 'ಶಿವದಯ ಸಾಹಸ್ರ', ವೆಂಕಟಪ್ಪ ನಾಯಕನಿಂದ 'ಶಿವಾಷ್ಟಪದಿ', ಷಡಕ್ಷರ ದೇವನಿಂದ 'ಶಿವಾಧಿಕ್ಯರತ್ನಾವಳಿ' ಮತ್ತು 'ಭಕ್ತಾಧಿಕ್ಯ ಕಥಾವಳಿ'—ಇವೂ 'ಶ್ರೀನಿವಾಸದಯಾವಿಲಾಸ' ಮತ್ತು ಇಂಥ ಹಲವು ಭಕ್ತಿಸ್ತೋತ್ರಗಳೂ ಈ ಕಾಲದಲ್ಲಿ ರಚಿತವಾದವು. ಅಲಂಕಾರ ಗ್ರಂಥಗಳಲ್ಲಿ ಅಪ್ಪಯ್ಯ ದೀಕ್ಷಿತನ ಪ್ರಖ್ಯಾತ ಗ್ರಂಥಗಳಲ್ಲದೆ ಸುಧೀಂದ್ರಯೋಗಿಯ 'ಅಲಂಕಾರ ಮಂಜರೀ,' 'ಅಲಂಕಾರ ನಿಕಷ ಮತ್ತು 'ಸಾಹಿತ್ಯ ಸಾಮ್ರಾಜ್ಯ', ಸುಮತೀಂದ್ರ ತೀರ್ಥನ 'ಮಧುಧಾರಾ' ಕೃಷ್ಣಬ್ರಹ್ಮ ಪರಕಾಲಯತಿಯ 'ಅಲಂಕಾರ ಮಣಿಹಾರ' ಮತ್ತು 'ಲೋಚನೋಲ್ಲಾಸ', ವೆಂಕಪ್ಪ ಪ್ರಧಾನ ವಿರಚಿತ 'ಅಲಂಕಾರ ಮಣಿದರ್ಪಣ' ನರಸಿಂಹನು ರಚಿಸಿದ 'ಅಲಂಕಾರಶೂರ', ವರದಾಚಾರ್ಯನ 'ಉತ್ಪ್ರೇಕ್ಷಾ ಮಂಜರಿ' ಶ್ರೀಕಂಠನ 'ರಸಕೌಮುದೀ' ಇಪ್ಪಾ 'ಅಲಂಕಾರಕೌಮುದೀ' 'ಕವಿಸಮಯೋಲ್ಲಾಸ' ಮತ್ತು 'ನಾಟಕ ಪರಿಭಾಷಾ' ಇವು ಈ ಕಾಲದಲ್ಲಿ ರಚಿತವಾದ ಹೊಸ ಅಲಂಕಾರ ಗ್ರಂಥಗಳು. ನರಸಿಂಹಕವಿ ರಚಿಸಿದ 'ನಂಜರಾಜ ಯಶೋಭೂಷಣವು' ಪ್ರತಾಪರುದ್ರ ಯಶೋಭೂಷಣ'ದ ಮಾದರಿಯಲ್ಲಿ ಬರೆದ ಅಲಂಕಾರ ಗ್ರಂಥ. ಇದರಲ್ಲಿ ನಾಟಕವನ್ನು ವಿವರಿಸುವ ಅಧ್ಯಾಯದಲ್ಲಿ ಉದಾಹರಣೆಗಾಗಿ 'ಚಂದ್ರಕಲಾಕಲ್ಯಾಣ' ಎಂಬ ಒಂದು ನಾಟಕವನ್ನೇ ಬರೆದು ಸೇರಿಸಿದೆ.

ನಿಘಂಟು, ವ್ಯಾಕರಣ ಮೊದಲಾದ ಪಾರಿಭಾಷಿಕ ಶಾಸ್ತ್ರ ವಿಷಯವಾಗಿ ಕೂಡ ಈ ಕಾಲದಲ್ಲಿ

ಕೆಲವು ಗ್ರಂಥಗಳು ಹುಟ್ಟಿದವು. ಲಿಂಗಭಟ್ಟನ ‘ಅಮರಕೋಶ ವಿವೃತಿ’ಯು ‘ಅಮರಕೋಶ’ದ ಮೇಲೆ ಕನ್ನಡ ಸಂಸ್ಕೃತಗಳೆರಡರಲ್ಲಿಯೂ ಬರೆದಿರುವ ವ್ಯಾಖ್ಯಾನ. ಪತಂಜಲಿಯ ‘ಮಹಾಭಾಷ್ಯ’ದ ಮೇಲೆ ಸತ್ಯಪ್ರಿಯತೀರ್ಥನು ರಚಿಸಿರುವ ವ್ಯಾಖ್ಯಾನವು ಖಂಡಶಃ ದೊರೆತಿದೆ. ಚಲರಿಶೇಷನ ‘ಕೃದಂತಪ್ರದೀಪ’ ಮತ್ತು ‘ತದ್ಧಿತ ಪ್ರದೀಪ’ಗಳು ಅವನ ‘ಸುಶಬ್ದಪ್ರದೀಪ’ದ ಭಾಗಗಳು. ಅವನ ‘ಶಾಬ್ದಿಕ ಕಂಠಾಭರಣ’ದ ಬಗ್ಗೆ ಉಲ್ಲೇಖ ಮಾತ್ರ ಕಂಡುಬರುತ್ತದೆ. ಗಜೇಂದ್ರಗಡಕರ ರಾಘವೇಂದ್ರಾಚಾರ್ಯನ ‘ಪ್ರಭಾ’ ‘ಕೌಸ್ತುಭ’ದ ಮೇಲಿನ ಒಂದು ವ್ಯಾಖ್ಯಾನ. ‘ತ್ರಿಪಥಗಾ’ ಆತನು ‘ಪರಿಭಾಷೇಂದು ಶೇಖರ’ಕ್ಕೆ ಬರೆದಿರುವ ವ್ಯಾಖ್ಯಾನ.

ಪುರಾಣಗಳ ಅದರಲ್ಲೂ ವಿಶೇಷವಾಗಿ ಭಾಗವತದ ಮೇಲೆ ಅನೇಕ ವ್ಯಾಖ್ಯಾನಗಳು ರಚಿತವಾದವು. ಇವುಗಳಲ್ಲಿ ಯಾದವಾರ್ಯ, ಶ್ರೀನಿವಾಸತೀರ್ಥ, ಸತ್ಯಾಭಿನವ, ನರಹರಿ ಮತ್ತು ಸತ್ಯಧರ್ಮ—ಇವರ ವ್ಯಾಖ್ಯಾಗಳು ಉಲ್ಲೇಖಾರ್ಹವಾಗಿವೆ. ವಿಷ್ಣುತೀರ್ಥನ ಭಾಗವತಸಾರೋದ್ಧಾರವು ಭಾಗವತದ ಸಂಕ್ಷೇಪ ನಿರೂಪಣೆ. ‘ಮಹಾಭಾರತ’ದ ವಿರಾಟ ಮತ್ತು ಉದ್ಯೋಗ ಪರ್ವಗಳಿಗೆ ನವರತ್ನ ನರಹರಿ ಮತ್ತು ಸತ್ಯಧರ್ಮರು ವ್ಯಾಖ್ಯಾನ ಬರೆದಿದ್ದಾರೆ. ವೈದ್ಯನಾಥ ದೀಕ್ಷಿತನ ‘ರಾಮಾಯಣ ದೀಪಿಕಾ’ ಮತ್ತು ಸತ್ಯಧರ್ಮತೀರ್ಥನ ‘ರಾಮಾಯಣ ಟಿಪ್ಪಣಿ’— ಇವು ರಾಮಾಯಣದ ಮೇಲಿನ ಟೀಕಾ ಗ್ರಂಥಗಳು.

ಈ ಮೇಲೆ ಕೊಟ್ಟಿರುವುದು ಹದಿನೇಳು ಹದಿನೆಂಟನೆಯ ಶತಮಾನಗಳಲ್ಲಿ ರಚಿತವಾದ ಸಂಸ್ಕೃತ ಸಾಹಿತ್ಯದ ಸಂಕ್ಷೇಪ ನಿರೂಪಣೆ. ವಿಜಯನಗರ ಸಾಮ್ರಾಜ್ಯವು ಶಿಥಿಲವಾಗಿ ಹರಿದು ಹಂಚಿ ಹೋದ ಮೇಲೆ ರಾಜಾಶ್ರಯ ಬಹುಮಟ್ಟಿಗೆ ಕಡಮೆಯಾಗಿ ವಿದ್ವಾಂಸರು ಆಶ್ರಯರಹಿತರಾಗಿ ಹಲವು ಕಡೆ ಚೆದರಿ ಹೋಗುವಂತಾದರೂ ಮಠಾಧಿಪತಿಗಳ ಮತ್ತು ಆ ಕಾಲದ ಅಧಿಕಾರಾರೂಢ ಪ್ರತಿಷ್ಠಿತ ಪುರುಷರ ಸಹಾಯ ಪ್ರೋತ್ಸಾಹಗಳಿಂದ ಸಂಸ್ಕೃತ ಸಾಹಿತ್ಯಾಭಿವೃದ್ಧಿ ಕುಂಠಿತವಾಗದೆ ಮುನ್ನಡೆಯುತ್ತಲೇ ಬಂತೆಂಬುದು ಈ ವಿವರಣೆಯಿಂದ ಸ್ಪಷ್ಟವಾಗುತ್ತದೆ. ಭಾರತೀಯ ಜನವರ್ಗಕ್ಕೆ ಅಂತರ್ಗತವಾಗಿರುವ ಸಹಜವಾದ ಜ್ಞಾನಾಭಿಲಾಷೆಯೂ ಈ ಅಭಿವೃದ್ಧಿಗೆ ಕಾರಣವಾಯಿತು; ಇದರ ಪರಿಣಾಮವಾಗಿ ಸಂಸ್ಕೃತದ ಅಧ್ಯಯನ ಮೊದಲಿನಂತೆ ಮುಂದುವರಿಯಿತು. ಪಾಂಡಿತ್ಯಪೂರ್ಣವಾದ ಮತ್ತು ವಿವರಣಾತ್ಮಕವಾದ ಸಾಹಿತ್ಯ ತಕ್ಕಮಟ್ಟಿಗೆ ಬೆಳೆಯಿತು.

ಮೂಲಲೇಖಕರು : ಶ್ರೀ ಕೆ. ಟಿ. ಪಾಂಡುರಂಗಿ
ಅನುವಾದಕರು : ಶ್ರೀ ಎಲ್. ಗುಂಡಪ್ಪ

# ಅಧ್ಯಾಯ 3

## ರಾಜಕೀಯ ಇತಿಹಾಸ—ಆಧುನಿಕ ಕಾಲ

### ಬ್ರಿಟಿಷರ ಪ್ರಾಬಲ್ಯ

ಕರ್ಣಾಟಕದ ಇತಿಹಾಸದ ಆಧುನಿಕ ಕಾಲವು ಬ್ರಿಟಿಷರು ತಮ್ಮ ಎದುರಾಳಿಯಾದ ಟಿಪ್ಪುವನ್ನು ಮುರಿದು ಮೈಸೂರನ್ನು ಗೆದ್ದ ಗಳಿಗೆಯಿಂದ ಮೊದಲಾಗುತ್ತದೆ—ಎನ್ನಬಹುದು.

ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ಹೈದರಾಲಿಯೂ ಟಿಪ್ಪುಸುಲ್ತಾನನೂ ದಕ್ಷಿಣ ಭಾರತದಲ್ಲಿ ಬ್ರಿಟಿಷರ ಪ್ರಭಾವವನ್ನು ತಡೆಯಲು ಪ್ರಬಲವಾಗಿ ಪ್ರತಿಭಟನೆ ತೋರಿದ ಕನ್ನಡದ ಅರಸರಾದ ಇಬ್ಬರು ಗಂಡುಗಲಿಗಳು. ಆದರೆ ಬ್ರಿಟಿಷರು ಯುದ್ಧತಂತ್ರದಲ್ಲಿ ಅಜೇಯರಾಗಿ ಇದ್ದುದರಿಂದ ಹೈದರನನ್ನು ಅವರು ಕಾಳಗದಲ್ಲಿ ಸೋಲಿಸಿ ಅವನ ವಿರೋಧವನ್ನು ಅಣಗಿಸಿದರು. ಹೈದರನ ಮಗ ಟಿಪ್ಪು ಪಿತ್ರಾರ್ಜಿತವಾಗಿ ಕೆಚ್ಚೆದೆಯನ್ನು ಪಡೆದಿದ್ದ ವೀರಕುಮಾರ. ಅವನು ಅತಿಶಯ ಸ್ವಾತಂತ್ರ್ಯ ಪ್ರೇಮಿ. ಆದರೂ, ತಂದೆ ವಿಫಲನಾದ ಕಡೆ ಮಗನು ಯಶಸ್ಸನ್ನು ಕಾಣಲಾರದೆ ಹೋದನು. ರಾಯಭಾರ ತಂತ್ರವಲ್ಲಿ ಪರಿಣತನಾಗದೆ ಇದ್ದದ್ದು ಟಿಪ್ಪುವಿನ ಸೋಲಿಗೆ ಮುಖ್ಯ ಕಾರಣವಾಯಿತು.

ಕರ್ಣಾಟಕದ ಈ ಕಾಲದ ಚರಿತ್ರೆಗೆ ಸಂಬಂಧಿಸಿದಂತೆ ನಡೆದ ರಾಜಕೀಯ ಘಟನೆಗಳು ಮೈತ್ರಿ ಮತ್ತು ಅಪಮೈತ್ರಿಗಳ ಗೋಜುಗೊಂದಲಗಳಿಂದ ತುಂಬಿಹೋಗಿದ್ದವು. ಸ್ಥಳೀಯವಾಗಿ ಅಲ್ಲಲ್ಲಿ ಪ್ರಭಾವಶಾಲಿಗಳಾಗಿ ತಲೆಯೆತ್ತಿಕೊಂಡಿದ್ದ ಪಾಳೆಯಗಾರರು ತಂತಮ್ಮ ಉಳಿವಿಗೂ ಸ್ವಪ್ರತಿಷ್ಠೆಯ ತೃಪ್ತಿಗೂ ವಿವೇಚನೆಯಿಲ್ಲದೆ ಇಂತಹ ಅಪಕ್ವದ ಮಿತ್ರ ಸಂಬಂಧಗಳನ್ನು ಆತುರದಿಂದ ಮಾಡಿಕೊಳ್ಳುತ್ತಿದ್ದರು. ಆದುದರಿಂದ ಸಂಧಿಕಾಲವಾದ ಆಗಿನ ದೇಶಚರಿತ್ರೆಯು ಸ್ಪಷ್ಟವೂ ಸಮಗ್ರವೂ ಆದ ಚಿತ್ರವನ್ನು ಕೊಡುವುದು ಕಷ್ಟವಾಗಿದೆ ಆದರೂ ಕನ್ನಡನಾಡಿಗೆ ಸಂಬಂಧಪಟ್ಟಂತೆ, ಎರಡು ಮೂರು ಮುಖ್ಯವಾದ ರಾಜಕೀಯ ಪ್ರವೃತ್ತಿಗಳನ್ನು ಸ್ಥೂಲವಾಗಿ ಇಲ್ಲಿ ವಿವರಿಸುವುದು ಸಾಧ್ಯವಾಗಿದೆ.

ಮೊತ್ತಮೊದಲನೆಯದಾಗಿ, 18 ನೆಯ ಶತಮಾನವು ಉರುಳುವ ಹೊತ್ತಿಗೆ, ವ್ಯಾಪಾರ ಸಂಸ್ಥೆಯಾಗಿ ಬಂದ ಬ್ರಿಟಿಷರು ಭಾರತದಲ್ಲಿ ತಮ್ಮ ವ್ಯಾಪಾರ ವೃತ್ತಿಯನ್ನು ಬದಿಗೊತ್ತಿ, ದೇಶವಿಜಯಿಗಳೆಂಬ ಹಮ್ಮನ್ನು ಬಹಿರಂಗವಾಗಿ ತೋರಿಸುತ್ತ ಬಂದರು. ಎರಡನೆಯದಾಗಿ, 18ನೆಯ ಶತಮಾನದ ಹೊತ್ತಿಗೆ ಮರಾಠರ ಆಕ್ರಮಣ ಮನೋವೃತ್ತಿ ದಕ್ಷಿಣಭಾರತದ ಕಡೆ ತಿರುಗಿತ್ತು. 1720 ರಿಂದ, ಹಿಂದಿನ ಅಧ್ಯಾಯದಲ್ಲಿ ಸೂಚಿಸಿರುವಂತೆ, ಮರಾಠರ ಪ್ರಭಾವ ಉತ್ತರ ಕರ್ಣಾಟಕದಲ್ಲಿ ಭದ್ರವಾಗಿ ನೆಲೆಗೊಂಡಿತ್ತು. ತತ್ಫಲವಾಗಿ ಉತ್ತರ ಕರ್ಣಾಟಕವು ಈಚಿನ ಕಾಲದ ವರೆಗೂ ದಕ್ಷಿಣಮಹಾರಾಷ್ಟ್ರ ಪ್ರದೇಶವೆಂಬ ಅಭಿಧಾನಕ್ಕೆ ಪಾತ್ರವಾಗಿ ಹೋಗಿತ್ತು.

ಹೈದರಾಬಾದಿನ ನಿಜಾಮನು ಉತ್ತರ ಕರ್ಣಾಟಕದ ಮೇಲೆ ಆಗಾಗ ದಂಡೆತ್ತಿ ಬಂದು, ಅಷ್ಟಿಷ್ಟು ಕನ್ನಡದ ನೆಲವನ್ನು ಕಸಿಯುತ್ತಿದ್ದನು. ಈ ನೆಲವನ್ನು ಬಹಮನಿ ಮುಸ್ಲಿಮ ರಾಜವಂಶದವರು ಆಳುತ್ತಿದ್ದರೆಂದು ನಿಜಾಮನಿಗೆ ಅದರ ಮೇಲೆ ಮೋಹ. ಆದರೆ ಮರಾಠರು ಉತ್ತರ ದಿಕ್ಕಿನಿಂದಲೋ ಪೂರ್ವ ದಕ್ಷಿಣಗಳಿಂದಲೋ ಪದೇ ಪದೇ ಮುಸ್ಲಿಮರು ನಡಸುತ್ತಿದ್ದ ದುರಾಕ್ರಮಣವನ್ನು ಎದುರಿಸುತ್ತಿದ್ದರು. ನಿಜಾಮನು ಬ್ರಿಟಿಷರ ಪ್ರಭಾವ ಬೆಳೆಯುತ್ತಿದ್ದುದಕ್ಕಾಗಿ ಗಾಬರಿಗೊಂಡನು ; ಆದರೆ, ಅದಕ್ಕಿಂತ ಹೆಚ್ಚಾಗಿ ಟಿಪ್ಪುವಿನ ರಾಜ್ಯವಿಸ್ತಾರ ಸನ್ನಾಹಗಳಿಗೆ ಅಂಜಿದನು. ಬ್ರಿಟಿಷರಾದರೋ ನಿಜಾಮನ ಈ ಅಂಜಿಕೆಯನ್ನು ಸ್ವಂತಕ್ಕೆ ಅನುಕೂಲವಾಗುವಂತೆ ಬಳಸಿಕೊಂಡರು.

ಹೀಗೆ, ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ ಕರ್ಣಾಟಕದ ಚರಿತ್ರೆ ಆಧುನಿಕ ಯುಗದ ಹೊಸ್ತಿಲಲ್ಲಿದ್ದಾಗ, ಉತ್ತರದಲ್ಲಿ ಮರಾಠರ ಆಳಿಕೆಯಿತ್ತು ; ಈಶಾನ್ಯದಲ್ಲಿ ನಿಜಾಮನ ಆಳಿಕೆಯಿತ್ತು ; ದಕ್ಷಿಣದಲ್ಲಿ ಬ್ರಿಟಿಷರ ಪ್ರಭಾವ ಪ್ರಬಲವಾಗಿತ್ತು. ಮರಾಠರೂ ನಿಜಾಮನೂ ಅಂದಿನ ಸಂದರ್ಭ ಸನ್ನಿವೇಶಗಳಲ್ಲಿ ಸ್ವತಂತ್ರರಾಗಿ ಮುಂಬರಿಯಲು ಅವಕಾಶವಿರಲಿಲ್ಲ. ಮೂರನೆಯವರಾದ ಬ್ರಿಟಿಷರು ಪ್ರವೇಶಿಸಿ, ಅವರಿಬ್ಬರಿಗೂ ಸೇರಿದ ನೆಲದಲ್ಲಿ ಮುಖ್ಯವಾದ ಭಾಗಗಳನ್ನು ಆಕ್ರಮಿಸಿ ಸ್ವಾಧೀನಕ್ಕೆ ತೆಗೆದುಕೊಂಡರು ; ತಮ್ಮ ಪ್ರಭಾವ ಬಲವನ್ನು ಹರಡಲು ಅವಕಾಶ ಮಾಡಿಕೊಂಡರು.

**ಉತ್ತರ ಕರ್ಣಾಟಕ**

ಉತ್ತರ ಕರ್ಣಾಟಕವು—ಎಂದರೆ ತುಂಗಭದ್ರಾನದಿಯ ಉತ್ತರಕ್ಕೆ ಇರುವ ಕನ್ನಡ ಪ್ರದೇಶವು—ಎಂಥ ರಾಜಕೀಯ ಪರಿವರ್ತನಗಳ ಮೂಲಕ ಹಾದು ಬರಬೇಕಾಯಿತೆಂಬುದನ್ನು ಇಲ್ಲಿ ಸಂಗ್ರಹವಾಗಿ ವಿವರಿಸಬಹುದು. ಯಾದವ ವಂಶವು ಗದ್ದುಗೆಯಿಂದ ಇಳಿದು ನಾಮಾವಶೇಷವಾದಂದನಿಂದ, ಬಹಮನಿ ರಾಜ್ಯವು 14ನೆಯ ಶತಮಾನದ ಮಧ್ಯಭಾಗದಲ್ಲಿ ಸ್ಥಾಪನೆಯಾದ ಮೇಲೆ, ತುಂಗಭದ್ರೆಗೆ ಬಡಗಲಲ್ಲಿರುವ ಕನ್ನಡನಾಡು—ಸ್ಥೂಲವಾಗಿ ಬಿಜಾಪುರ ಜಿಲ್ಲೆಯೂ ಹೈದರಾಬಾದು ಕರ್ಣಾಟಕವೂ—ಮುಸ್ಲಿಮರ ಆಳಿಕೆಗೆ ವಶವಾಯಿತು. ಮೊದಲು ಬಹಮನಿ ಸುಲ್ತಾನರು ಸುಮಾರು 150 ವರ್ಷಕಾಲ ದೌಲತ್ತು ನಡಸಿದರು. ಆ ಮೇಲೆ ಬಿಜಾಪುರದ ಆದಿಲ್‌ಶಾಹಿವಂಶವೂ ಆ ಬಳಿಕ 16ನೆಯ ಶತಮಾನ ಪ್ರಾರಂಭದಿಂದ ಗೋಲ್ಕೊಂಡ ಮತ್ತು ಬಿದರೆಯ ಸುಲ್ತಾನರೂ ಆಳಿದರು. ತುಂಗಭದ್ರೆಯ ತೆಂಕಣಕ್ಕೆ ವಿಜಯನಗರ ಸಾಮ್ರಾಜ್ಯವು ತಲೆಯೆತ್ತಿದ್ದರೂ ಮುಸ್ಲಿಮರ ದೌಲತ್ತಿನಲ್ಲೇ ಇದ್ದ ಕರ್ಣಾಟಕ ಪ್ರದೇಶಗಳು ಅನುಕೂಲಕಾಲಕ್ಕೆ ಇನ್ನೂ ಕಾದಿರಬೇಕಾಗಿತ್ತು. ಆದರೆ ಧಾರವಾಡದ ಕೆಲವು ಭಾಗಗಳಿಗೆ ಪರಾಧೀನತೆ ತಪ್ಪಿ ಅವು ವಿಜಯನಗರದ ಸಾಮಂತರ ಆಳಿಕೆಗೆ ಬಂದವು. ಆದರೂ ಈ ಕರ್ಣಾಟಕ ಪ್ರದೇಶವು ಪೂರ್ವದಿಕ್ಕಿನಿಂದ ಮುಸ್ಲಿಮರ ದಾಳಿ ಎಂದು ಆಗುತ್ತದೆ, ಎಂಬ ನಿತ್ಯಚಿಂತೆಯಲ್ಲೇ ಇತ್ತು. ಕೃಷ್ಣಾ ತುಂಗಭದ್ರಾನದಿಗಳ ನಡುವಣ ಪ್ರದೇಶವು ವಿವಾದಭೂಮಿಯಾಗಿ, ಅದರ ಮೇಲೆ ಮುಸ್ಲಿಮರು ದಾಳಿ ಮಾಡುತ್ತಲೇ ಇದ್ದರು. ಹದಿನೇಳನೆಯ ಶತಮಾನದ ಮಧ್ಯದಲ್ಲಿ ಶಿವಾಜಿಯ ಪ್ರಭಾವವು ಉದಯವಾದ ಮೇಲೆ ಮುಂಬಯಿ ಪ್ರಾಂತಕ್ಕೆ ಸೇರಿದ ಕರ್ಣಾಟಕದ ಜಿಲ್ಲೆಗಳಲ್ಲಿ ಮರಾಠರ ಅಭ್ಯುದಯಕ್ಕೆ ಅವಕಾಶವಾಯಿತು. ಆದರೆ 1680ರಲ್ಲಿ ಶಿವಾಜಿಯು ಕಾಲಾಧೀನನಾದ ಮೇಲೆ ಮೊಗಲರು ಮತ್ತೆ ಈ ಕರ್ಣಾಟಕ ಭಾಗವನ್ನು ಮುತ್ತಿದರು. 1786ರಲ್ಲಿ ಬಿಜಾಪುರವು ಮೊಗಲರದಾಯಿತು. ಮರಾಠರಿಗೂ ಮೊಗಲರಿಗೂ ವಿರೋಧ ಬಹುವರ್ಷಗಳ ಕಾಲ ನಡೆದು, 1707ರಲ್ಲಿ ಔರಂಗಜೇಬನು ಸತ್ತಾಗ, ಪರಿಸ್ಥಿತಿ ಬದಲಾಗಿ ಮರಾಠರಿಗೆ ಅನುಕೂಲ ಸನ್ನಿವೇಶವುಂಟಾಯಿತು.

ಪೇಶ್ವೆ ಬಾಜೀರಾಯನು 1726ರಲ್ಲಿ ದಂಡೆತ್ತಿ ಕರ್ಣಾಟಕವನ್ನು ಹಾದು, ಶ್ರೀರಂಗಪಟ್ಟಣದ ವರೆಗೆ

ದಾಳಿ ಮಾಡಿದನು. ಸವಣೂರು ನವಾಬನು ನಿಜಾಮನ ಸಾಮಂತ; ಮರಾಠರನ್ನು ಎದುರಿಸಿದವನು. ಇದರ ಫಲ 1747ರಲ್ಲಿ ಆದ ಸವಣೂರು ಕೌಲು. ಕದನ ನಿಂತು ಒಪ್ಪಂದವಾಗಿ ಹುಬ್ಬಳ್ಳಿ, ಬಂಕಾಪುರ, ಹಾನಗಲ್ಲು ಸವಣೂರು ಇವೂ ಧಾರವಾಡ, ನವಲುಗುಂದ, ಗದಗು ಮತ್ತು ರಾಣಿಬೆನ್ನೂರಿನ ಭಾಗಗಳೂ ಪೇಶ್ವೆಯ ವಶಕ್ಕೆ ಬಂದವು. ಸವಣೂರು ನವಾಬನು ಈಗ ಸಾಮಂತಿಕೆಯನ್ನು ಒದರಿ ಸ್ವತಂತ್ರ ನಾಗುವ ಉಕ್ಕು ತೋರಿಸಿದನು. ಆಗ ನಿಜಾಮನೂ ಮರಾಠರೂ ಏಕೀಭವಿಸಿ ಅವನನ್ನು ಅಂಕೆಯ ಲ್ಲಿರಿಸಿದರು. ಈ ಪ್ರದೇಶಕ್ಕೆ 1764–65ರಲ್ಲಿ ಹೈದರನ ದಾಳಿ ನಡೆದಾಗ, ಸವಣೂರಿನ ನವಾಬನನ್ನು ಒಲಿಸಲು ಹೈದರನು ಪ್ರಯತ್ನಿಸಿದನಾದರೂ ನವಾಬನು ಜಗ್ಗಲಿಲ್ಲ. ಆದರೆ 1776ರಲ್ಲಿ ಹೈದರನು ಮರಾಠರನ್ನು ಸೋಲಿಸಿದಾಗ ಸವಣೂರು ನವಾಬನು ಬಾಗಿ, ಹೈದರನ ಮಗಳನ್ನು ತನ್ನ ಮಗನಿಗೆ ಮದುವೆ ಮಾಡಿ ಸಖ್ಯವನ್ನು ಬೆಳಸಿದನು. 1782ರಲ್ಲಿ ಹೈದರನು ಕಾಲವಾದನು. ಟಿಪ್ಪುಸುಲ್ತಾನನು ತಂದೆಯ ಮೇಲುಪಂಕ್ತಿಯನ್ನು ಅನುಸರಿಸಿ ಉತ್ತರ ಕರ್ಣಾಟಕದ ಮೇಲೆ ದಾಳಿ ನಡೆಸಿ, ಕಿತ್ತೂರು ನರಗುಂದ ಪ್ರದೇಶಗಳನ್ನು ಆಕ್ರಮಿಸಿದನು. ಇದು ನಿಜಾಮನಿಗೂ ಮರಾಠರಿಗೂ 1786ರಲ್ಲಿ ಟಿಪ್ಪುವಿಗೆ ವಿರೋಧವಾಗಿ ಸಖ್ಯವೇರ್ಪಡಲು ದಾರಿಮಾಡಿತು.

ಬ್ರಿಟಿಷರು ಮರಾಠರ ಮತ್ತು ನಿಜಾಮನ ಕೆಳೆಯಿಂದ ಟಿಪ್ಪುವನ್ನು 1792ರಲ್ಲಿ ಸೋಲಿಸಿದಾಗ, ಅವನ ರಾಜ್ಯದಲ್ಲಿ ಅರ್ಧಭಾಗವನ್ನು ಕಿತ್ತುಕೊಂಡರು. ಅದು ಈ ಮೂವರಲ್ಲಿ ಹರಿದು ಹಂಚಿಹೋಯಿತು. ಹಳೆಯ ಮೈಸೂರಿನ ಪಶ್ಚಿಮ ದಕ್ಷಿಣ ಪೂರ್ವ ದಿಕ್ಕುಗಳಿಗಿದ್ದ ಭಾಗವನ್ನು ಬ್ರಿಟಿಷರು ತಮ್ಮ ಪಾಲಿಗಿಟ್ಟು ಕೊಂಡರು. ಮರಾಠರು ತುಂಗಭದ್ರೆಯ ದಕ್ಷಿಣದ ಗಡಿಯಾದ ಉತ್ತರ ಕರ್ಣಾಟಕದ ಸೀಮೆಯನ್ನು ಸ್ವಾಧೀನಪಡಿಸಿಕೊಂಡರು. ನೈಜಾಮನ ಪಾಲಿಗೆ ಹಳೆಯ ಮೈಸೂರಿನ ಈಶಾನ್ಯಭಾಗವೂ ಹೈದರಾಬಾದು ಸಂಸ್ಥಾನದಲ್ಲಿ ಐಕ್ಯವಾದ ಕನ್ನಡ ಜಿಲ್ಲೆಗಳೂ ಸೇರಿದುವು. ಸೋತ ಟಿಪ್ಪು ಹೀಗೆ ತನ್ನ ರಾಜ್ಯದಲ್ಲಿ ಅರ್ಧಭಾಗದಷ್ಟು ಪರಾಧೀನವಾಗುವುದಕ್ಕೆ ಒಪ್ಪಿಕೊಳ್ಳಬೇಕಾಯಿತು. ಬ್ರಿಟಿಷರು ಅವನ ಇಬ್ಬರು ಮಕ್ಕಳನ್ನು ಒತ್ತೆಯಾಳುಗಳನ್ನಾಗಿ ಕಾವಲಲ್ಲಿರಿಸಿಕೊಂಡರು. ಹೀಗೆ ಮಕ್ಕಳು ಬಂದಿಗಳಾಗಿ ತನಗೆ ಬಂದ ಸೋಲಿನ ತೇಜೋವಧೆಯ ನೋವಿನ ಜೊತೆಗೆ ಟಿಪ್ಪು ಹೃದಯಯಾತನೆ ಯನ್ನು ಅನುಭವಿಸಬೇಕಾಯಿತು.

ಆ ಮೇಲೆ, ಏಳು ವರ್ಷಗಳು ಕಳೆದ ತರುವಾಯ, ಬ್ರಿಟಿಷರೂ ಅವರ ಮಿತ್ರರೂ ಸೇರಿಕೊಂಡು ಟಿಪ್ಪುವಿನ ದರ್ಪವನ್ನು ಪೂರ್ತಿಯಾಗಿ ಅಣಗಿಸಿದರು.

ಟಿಪ್ಪುವಿನ ಸೋಲಿನಿಂದ ಹೊರಟ ಫಲಶ್ರುತಿಯೆಂದರೆ—ದಕ್ಷಿಣ ಭಾರತದಲ್ಲಿ ಬ್ರಿಟಿಷರ ಆಳಿಕೆಗೆ ಬಲಬಂದದ್ದು ಮತ್ತು ಕರ್ಣಾಟಕವು ಬೇರೆ ಬೇರೆ ಆಡಳಿತಗಳಲ್ಲಿ ವಿಭಜನೆಯಾಗಿ ಶಿಥಿಲಿಸಿಹೋದದ್ದು.

### ಕರ್ಣಾಟಕದ ವಿಭಜನೆ

ವಿಜಯಶಾಲಿಗಳು 'ವಿಜಯದ ಅಧಿಕಾರ'ದಿಂದ ಸ್ವಾಧೀನಪಡಿಸಿಕೊಂಡ ರಾಜ್ಯವನ್ನು ಹಂಚಿ ಕೊಳ್ಳಲು ಒಂದು ಒಪ್ಪಂದ ಮಾಡಿಕೊಂಡರು.

ನಿಜಾಮನ ಭಾಗಕ್ಕೆ ಈಗಣ ಬಳ್ಳಾರಿ, ಅನಂತಪುರ, ಕಡಪ ಮತ್ತು ಕರ್ನೂಲು ಜಿಲ್ಲೆಗಳು ಹೋದುವು. ಆದರೆ ಬ್ರಿಟಿಷರು ಜಾರಿಗೆ ತಂದ ರಕ್ಷಣನೀತಿಯಂತೆ 1800ರಲ್ಲಿ ನಿಜಾಮನು ತನ್ನ ರಾಜ್ಯದಲ್ಲಿ ಬ್ರಿಟಿಷ್ ಸೈನ್ಯದ ಠಾಣ್ಯಕ್ಕೆ ಒಪ್ಪಿಕೊಂಡು ತನ್ನ ರಾಜ್ಯಕ್ಕೆ ಸೇರಿದ ಈ ಜಿಲ್ಲೆಗಳ ಮೇಲಣ ಹಕ್ಕನ್ನು

ಬ್ರಿಟಿಷರಿಗೆ ಬಿಟ್ಟುಕೊಟ್ಟನು. ಈ ಜಿಲ್ಲೆಗಳು ಮುಂದೆ ವರ್ಗಪಟ್ಟ ರಾಜ್ಯಪ್ರದೇಶ—ಸೀಡೆಡ್ ಡಿಸ್ಟ್ರಿಕ್ಟ್ಸ್ ಎಂಬ ವ್ಯವಹಾರನಾಮವನ್ನು ಪಡೆದವು.

ಟಿಪ್ಪುವಿನ ಪತನಕ್ಕೆ ಕಾರಣವಾದ ವಿಜಯಸೈನ್ಯದಲ್ಲಿ ಭಾಗವಹಿಸಿದ್ದ ಮರಾಠರ ಭಾಗಕ್ಕೆ ಮುಂಬಯಿ ಕರ್ಣಾಟಕವೆಂದು ಕರೆಯಲಾದ ತುಂಗೆಯ ಉತ್ತರದಿಕ್ಕಿನ ಪ್ರದೇಶವು ಹೋಯಿತು. ಆದರೆ ಉತ್ತರ ಕನ್ನಡ ಜಿಲ್ಲೆಯನ್ನು, ಅದು ಸಮುದ್ರತೀರದ ನೆಲವಾದುದರಿಂದ-ಬ್ರಿಟಿಷರು ತಮ್ಮ ಭಾಗಕ್ಕೆ ಉಳಿಸಿಕೊಂಡರು. ದಕ್ಷಿಣ ಕನ್ನಡ ಜಿಲ್ಲೆಯನ್ನು — ಹಳೆಯ ಮೈಸೂರಿನ ಪಶ್ಚಿಮದ ದಕ್ಷಿಣಪೂರ್ವದಿಕ್ಕಿನ ಪ್ರದೇಶಗಳನ್ನು ಬ್ರಿಟಿಷರೇ ಆಕ್ರಮಿಸಿಕೊಂಡರು. 1862ರ ವರೆಗೆ ಕಡಲತೀರದ ಕನ್ನಡ ಪ್ರದೇಶವೆಲ್ಲ ಒಂದೇ ಭಾಗವಾಗಿತ್ತು. ಕುಂದಾಪುರಕ್ಕೆ ಉತ್ತರಕ್ಕಿರುವ ಕನ್ನಡದ ನೆಲವನ್ನು ಉತ್ತರ ಕನ್ನಡವೆಂದು ವಿಭಜಿಸಿ ಆ ಮೇಲೆ ಅದನ್ನು ಮುಂಬಯಿ ಪ್ರದೇಶಕ್ಕೆ ಸೇರಿಸಿದವರು ಬ್ರಿಟಿಷರು. ಸಮುದ್ರತೀರದಲ್ಲಿರುವ ದೇಶಭಾಗವೆಲ್ಲ ತಮ್ಮ ಸ್ವಾಧೀನದಲ್ಲಿರುವುದು ಅನುಕೂಲವೆಂಬುದು ಬ್ರಿಟಿಷರು ಕೈಕೊಂಡ ತೀರ್ಮಾನ. ತೀರಪ್ರದೇಶವಾವುದೂ ತಮ್ಮ ಭಾರತೀಯ ಮಿತ್ರರ ಅಧೀನದಲ್ಲಿರದಂತೆ ತುಂಬ ಎಚ್ಚರ ವಹಿಸಿದರು. ಟಿಪ್ಪುವಿನಂತೆ ಈ ಮಿತ್ರರು ಫ್ರೆಂಚರಂಥ ಸಮುದ್ರಸಂಚಾರಿ ಶಕ್ತಿಗಳೊಡನೆ ಸಂಧಾನ ಮಾಡಿಕೊಂಡು ತಮಗೆ ಎದುರು ಬಿದ್ದಾರೆಂಬ ಪ್ರತಿಕೂಲ ಸಂದರ್ಭವನ್ನು ತಪ್ಪಿಸಲು, ಬ್ರಿಟಿಷರು ಸರ್ವದಾ ಜಾಗರೂಕರಾಗಿದ್ದರು. ಹೀಗೆ ಮಿತ್ರತ್ರಯದಲ್ಲಿ ರಾಜ್ಯವನ್ನು ಹರಿದು ಹಂಚಿದ್ದಾದ ಮೇಲೆ ಉಳಿದ ಹಳೆಯ ಮೈಸೂರು ರಾಜ್ಯ ಭಾಗವನ್ನು ಬ್ರಿಟಿಷರು ಅದರ ಪ್ರಾಚೀನ ರಾಜವಂಶೀಯರಿಗೆ ಪುನಃಸ್ವಾಧೀನ ಮಾಡಿಕೊಡಲು ನಿರ್ಧರಿಸಿದರು. ನಲವತ್ತು ವರ್ಷಗಳ ಹಿಂದೆ ಹೈದರನು ಅವನೂ ಅನಂತರ ಟಿಪ್ಪುವೂ ರಾಜವಂಶವನ್ನು ಗದ್ದುಗೆಯಿಂದಿಳಿಸಿ ರಾಜ್ಯವನ್ನು ಸ್ವಾಧೀನಪಡಿಸಿಕೊಂಡಿದ್ದರು.

ಈ ವಿಭಜನೆಯ ಹಿಂದೆ ಯಾವ ಮನೋಭಾವವಿದ್ದಿತೆಂಬುದು ಆಗ ಗವರ್ನರ್ ಜನರಲ್ ಆಗಿದ್ದ ಮಾರ್ಕ್ವಿಸ್ ಆಫ್ ವೆಲ್ಲೆಸ್ಲಿ ತಾ॥ 7-6-1799ರಂದು ಇಂಗ್ಲೆಂಡಿಗೆ ಬರೆದ ಪತ್ರದ ಒಕ್ಕಣೆಯಿಂದ ವಿಶದಪಡುತ್ತದೆ:

"ಒಂದು ವೇಳೆ ಟಿಪ್ಪುವಿನಿಂದ ಕದಲಿಸಿದ ದೇಶವನ್ನೆಲ್ಲ—ಒಂದು ಕಡೆ ಈಸ್ಟ್ ಇಂಡಿಯ ಕಂಪನಿ, ಇನ್ನೊಂದು ಕಡೆ ನಿಜಾಮು—ಇವರಿಬ್ಬರಲ್ಲಿ ಸಮನಾಗಿ ಹಂಚಿದ್ದ ಪಕ್ಷದಲ್ಲಿ ಮರಾಠರಲ್ಲಿ ಕರುಬನ್ನು ಕೆರಳಿಸುವುದಾಗುತ್ತಿತ್ತು; ಮತ್ತು ನಿಜಾಮನ ಪ್ರಾಬಲ್ಯವು ವಿವೇಚನೆಯ ಹದ್ದು ಮೀರುವುದಕ್ಕೆ ಆಸ್ಪದವಾಗುತ್ತಿತ್ತು; ಮತ್ತು ನಮ್ಮ ಸ್ವಾಧೀನಕ್ಕೆ ಬಂದ ಪ್ರದೇಶವು ಆಡಳಿತ ನಿರ್ವಾಹಕ್ಕೆ ವೃಥಾ ಕ್ಲೇಶಪಡಬೇಕಾಗುವಷ್ಟು ವಿಶಾಲವಾಗುತ್ತಿತ್ತು. ಇಷ್ಟೊಂದು ವಿಶಾಲ ಪ್ರದೇಶಗಳನ್ನು ಸಮರ್ಪಕವಾಗಿ ಆಳುವಷ್ಟು ಉಪಪತ್ತಿ ಸದ್ಯದಲ್ಲಿ ಮದರಾಸು ಪ್ರಾಂತಕ್ಕಿಲ್ಲ. ಈ ರೀತಿಯ ವಿಭಜನೆಯನ್ನು ಬಿಟ್ಟು ದೇಶವನ್ನು ಮೂರುಪಾಲಾಗಿ ವಿಂಗಡಿಸಿದ್ದರೆ, ಯುದ್ಧಕ್ಕೆ ತಗಲಿದ ವೆಚ್ಚದಲ್ಲಿ ತನ್ನ ಪಾಲನ್ನಾಗಲಿ ಶ್ರಮವನ್ನಾಗಲಿ ವಹಿಸದೆ ಇದ್ದ ಮರಾಠರಿಗೆ ಶಾಂತಿಯಿಂದ ಮಾಡಿದ ಅತ್ಯನುಕೂಲ ಲಾಭವಾಗಿ, ಯುದ್ಧದಲ್ಲಿ ತಕ್ಕಷ್ಟು ಸಹಾಯ ಪೋಷಣೆ ಕೊಟ್ಟ ನಿಜಾಮನಿಗೆ ನ್ಯಾಯಸಲ್ಲುತ್ತಿರಲಿಲ್ಲ; ಮತ್ತು, ಮಿತ್ರಮಂಡಲಿಯಲ್ಲೊಬ್ಬರಾದ ಮರಾಠರ ಸಾಮ್ರಾಜ್ಯದಾಹಕ್ಕೆ ಉತ್ತೇಜನ ಕೊಡುವ ಅವಿವೇಕವಾಗುತ್ತಿತ್ತು. ಈಗ ಮರಾಠರಿಗೆ ಸ್ವಾಧೀನಪಡಿಸಿದ್ದಕ್ಕಿಂತ ಹೆಚ್ಚು ನೆಲವನ್ನವರಿಗೆ ಕೊಡದೆ ಮಧ್ಯವರ್ತಿ ಶಕ್ತಿಯೊಂದಿಲ್ಲದಂತೆ-ಉಳಿದದ್ದನ್ನೆಲ್ಲಾ ನಿಜಾಮನೂ ಕಂಪನಿಯೂ ಸಮನಾಗಿ ಹಂಚಿಕೊಂಡಿದ್ದರೆ, ಸಂಧಿಯ ಷರತ್ತುಗಳನ್ನು ಪಾಲಿಸುವ ವಿಷಯದಲ್ಲಿ ಮರಾಠರು ಉತ್ಸಾಹ ತೋರುತ್ತಿರಲಿಲ್ಲ. ಆದದ್ದರಿಂದ ಮೈಸೂರು ರಾಜ್ಯದ ಪ್ರಾಚೀನ ರಾಜವಂಶದ ಹಕ್ಕನ್ನು ರಾಜ್ಯದ ವಿಭಜನ ಕಾಲದಲ್ಲಿ ಪರಿಗಣನೆಗೆತ್ತಿಕೊಂಡು ಅವರಿಗೆ ರಾಜ್ಯವನ್ನು

ಪುನಸ್ಸ್ವಾಧೀನ ಪಡಿಸಿದ್ದು ಕದನದಲ್ಲಿ ಪಾತ್ರವಹಿಸಿದ ಮೂವರು ಮಿತ್ರರ ಹಕ್ಕು ಬಾಧ್ಯತೆಗಳನ್ನೂ ಇತ್ಯರ್ಥ ಪಡಿಸಿ ನ್ಯಾಯ ಸಲ್ಲಿಸಲು ಅವಕಾಶ ಕೊಟ್ಟಿತು.

ಮಿತ್ರಮಂಡಲ 'ಗೆದ್ದ' ನೆಲದಲ್ಲಿ ಟಿಪ್ಪುವಿನ ಮಕ್ಕಳಿಗೋಸ್ಕರ ಕೇಳಿದ ಯಾವುದೇ ಬಗೆಯ ಹಕ್ಕನ್ನೂ ತಿರಸ್ಕರಿಸಿ, ವೆಲ್ಲೆಸ್ಲಿಯು ಪತ್ರ ಹೀಗೆ ಮುಂಬರಿಯುತ್ತದೆ:

"ನಾನು ನೀತಿ ಧರ್ಮ ಪ್ರಶ್ನೆಯೊಂದನ್ನೇ ಪರಿಗಣಿಸಿದ್ದರೂ ನ್ಯಾಯಸಂಧತೆ ಮತ್ತು ಮಾನವ ದಯೆ ಹಾಗೂ ರಾಜ್ಯದ ಪ್ರಜೆಗಳ ಕಲ್ಯಾಣವೆಂಬೀ ಮೂರು ದೃಷ್ಟಿಗಳ ಸಮನ್ವಯದಿಂದಲೂ ಮೈಸೂರಿನ ಪ್ರಾಚೀನ ರಾಜಸಂತತಿಗೆ ಒಂದಷ್ಟು ರಾಜ್ಯವನ್ನು ಪುನಸ್ಸ್ವಾಧೀನ ಪಡಿಸುವುದರಿಂದ ಹೈದರಾಲಿಯು ರಾಜ್ಯವನ್ನು ಈ ಹಕ್ಕುದಾರರ ಪೂರ್ವಿಕರಿಂದ ಸೆಳದುಕೊಂಡು ಮಾಡಿದ್ದ ಅನ್ಯಾಯದ ತಿದ್ದಿಕೆಗೂ ರಾಜವಂಶದ ಗೌರವ ಘನತೆಗಳ ಪುನಃಸ್ಥಾಪನೆಗೂ ಪೋಷಕವಾಗುತ್ತದೆಯೆಂದು ಮೈಸೂರುರಾಜ್ಯದ ರಾಜ ಸಂತತಿಯನ್ನು ವಿಭಜನಕಾಲದಲ್ಲಿ ಪಾಲುದಾರರೆಂದು ಎಣಿಸಿ ತೀರ್ಮಾನಿಸಿದೆವು"

## ರಾಣಿ ಲಕ್ಷ್ಮಿಯಮ್ಮಣ್ಣಿ

ಮೇಲೆ ಪ್ರಸ್ತಾವಿಸಿದ ನೀತಿಧರ್ಮ ದೃಷ್ಟಿಯ ಜೊತೆಗೆ ಪರ್ಯಾಲೋಚನೆಗೆ ಬಂದ ಇನ್ನೊಂದು ಸಂಗತಿಯೂ ಇತ್ತು. ರಾಜ್ಯಭ್ರಷ್ಟರಾಗಿದ್ದ ಮೈಸೂರು ರಾಜವಂಶದವರು ಹೈದರನ ದುರಾಕ್ರಮಣವನ್ನು ತಮ್ಮ ದುರ್ವಿಧಿಯೆಂದು ಒಪ್ಪಿಕೊಂಡು ಸುಮ್ಮನಿದ್ದವರಲ್ಲ. ಯಾವ ಕೆಳಮಟ್ಟದ ನೆಲೆಯಿಂದ ಮೇಲೇರಿ ಹೈದರನು ಪ್ರಭಾವಶಾಲಿಯಾದನೋ ಅಲ್ಲಿಗೆ ಅವನನ್ನು ದಬ್ಬಲು ಈ ರಾಜಸಂತತಿಯವರೂ ಅವರ ಪಕ್ಷಪಾತಿಗಳೂ ತಮ್ಮ ಪ್ರಯತ್ನಗಳನ್ನು ಎಡೆಬಿಡದೆ ನಡೆಸುತ್ತಿದ್ದರು. ಸೇನಾಪತಿ ಸ್ಥಾನವಷ್ಟರಿಂದ ಅವನು ತೃಪ್ತನಾಗಿ, ಅರಸರು ಅವರ ರಾಜಪದವಿಯಲ್ಲಿ ಸ್ಥಾನಮಾನಗಳನ್ನು ಪಡೆದು ಪೂರ್ವದ ಸ್ಥಿತಿಗಡರಬೇಕೆಂದು ಪುನಃ ಪುನಃ ಉದ್ಯಮಿಸಿದರು; ಆದರೆ ಹೈದರನು ಉಪಾಯಜ್ಞನೂ ಆಢ್ಯನೂ ಆಗಿ ರಾಜವಂಶದವರ ಪ್ರಯತ್ನಗಳನ್ನು ಮುರಿದನು. ಆದರೆ 1735 ರಿಂದ 1766ರ ವರೆಗೆ ರಾಜ್ಯವಾಳಿದ ಚಿಕ್ಕ ಕೃಷ್ಣರಾಜ ಒಡೆಯರು ಮರಣ ಹೊದುವುದಕ್ಕೆ ಕೆಲವು ತಿಂಗಳು ಮೊಲಿನಿಂದಲೂ ಪಟ್ಟ ಮಹಿಷಿಯಾದ ರಾಣಿ ಲಕ್ಷ್ಮಿಯಮ್ಮಣ್ಣಿ ಧೀರಪ್ರಯತ್ನವನ್ನು ಕೈಕೊಂಡದ್ದರಿಂದ, ಚಿಕ್ಕ ಕೃಷ್ಣರಾಜ ಒಡಯರ ಇಬ್ಬರು ಮಕ್ಕಳು ಗೆದ್ದುಗೆಯೇರಿದರು. ನಂಜರಾಜ ಒಡೆಯರು 1766 ರಿಂದ 1770ರ ವರೆಗೂ ಚಾಮರಾಜ ಒಡೆಯರು 1770 ರಿಂದ 1776ರ ವರೆಗೂ ರಾಜ್ಯವಾಳಿದರು ಇಬ್ಬರೂ ಹೆಸರಿಗೆ ಮಾತ್ರ ಕೆಲವು ಕಾಲ ರಾಜ ಪದವಿಯನ್ನನುಭವಿಸಿದರು ರಾಜವಂಶದವರ ಈ ಅಲ್ಪಕಾಲಾವಧಿಯ ಆಳಿಕೆ ಮುಗಿದ ಮೇಲೆ ಹೈದರನು 1776 ರಲ್ಲಿ ರಾಜವಂಶಕ್ಕೆ ಸೇರಿದ ದೂರದ ಅನುಬಂಧಿಯಾದ ಬಾಲಕನೊಬ್ಬನನ್ನು ಪಟ್ಟಕ್ಕೆ ತಂದು ರಾಜ್ಯಾಧಿಕಾರಗಳನ್ನೆಲ್ಲ ತನ್ನ ಕೈಯಲ್ಲಿರಿಸಿಕೊಂಡು ದೌಲತ್ತು ನಡೆಸಿದನು. ಈ ಬಾಲಕನ ಹೆಸರು ಖಾಸಾ ಚಾಮರಾಜ ಒಡೆಯರ್. ಈತನು 1776 ರಿಂದ 1797 ರ ವರೆಗೆ ರಾಜ್ಯವಾಳಿದನು. ರಾಣಿ ಲಕ್ಷ್ಮಿಯಮ್ಮಣ್ಣಿ ಈ ಕ್ರಾಂತಿ ದರ್ಪಗಳ ಸಂವತ್ಸರಗಳ ಉದ್ದಕ್ಕೂ ಬದುಕಿದ್ದು, ಹೈದರನ ಅನ್ಯಾಯದ ವಿರುದ್ಧ ದಿಟ್ಟತನದಿಂದ ಹೋರಾಡಿದಳು. ಬ್ರಿಟಿಷರ ಸಹಾಯವನ್ನು ಪಡೆದು ರಾಜವಂಶದ ನ್ಯಾಯವಾದ ಹಕ್ಕುದಾರರಿಗೆ ಸಿಂಹಾಸನವನ್ನು ಮರಳಿ ಗೆದ್ದು ಕೊಳ್ಳಲು ಪ್ರಯತ್ನಿಸಿದಳು. ಮದರಾಸು ಪ್ರಭುತ್ವಕ್ಕೆ ರಾಯಭಾರಿಗಳನ್ನು ಕಳುಹಿಸಿದಳು. 1782ರಲ್ಲಿ ಈಕೆ ಬ್ರಿಟಿಷರೊಡನೆ ಒಂದು ಒಪ್ಪಂದ ಮಾಡಿಕೊಂಡಳು. ಈ ಒಡಂಬಡಿಕೆಯಂತೆ ಬ್ರಿಟಿಷರು ಮೈಸೂರು ರಾಜ್ಯಕ್ಕೆ ಮುತ್ತಿಗೆ ಹಾಕಿ ಹೈದರನನ್ನು ಮುರಿದು ಸಿಂಹಾಸನವನ್ನು ಪೂರ್ವದ ಹಿಂದೂ ವಂಶಸ್ಥರಿಗೆ ಕೊಡಿಸುವುದಾಗಿ ವಾಗ್ದಾನ ಮಾಡಿದರು. ಯುದ್ಧದ ವೆಚ್ಚಕ್ಕೋಸ್ಕರ ಹತ್ತು ಲಕ್ಷ ಕಂಠೀರಾಯ

ವರಹಗಳನ್ನು ರಾಣಿ ಲಕ್ಷ್ಮಿಯಮ್ಮಣ್ಣಿ ಕೊಡಲೊಪ್ಪಿದಳು. ಯುದ್ಧದ ಒಂದೊಂದು ಮಜಲಿನಲ್ಲೂ ಕಂತು ಕಂತಾಗಿ ಹಣವನ್ನು ಒದಗಿಸಬೇಕೆಂದು ಒಡಂಬಡಿಕೆಯಾಯಿತು.

ಮೈಸೂರು ರಾಜ್ಯವನ್ನು ಅದರ ಹಳೆಯ ರಾಜವಂಶಕ್ಕೆ ಪುನಸ್ಸ್ವಾಧೀನಪಡಿಸಿದ್ದರಲ್ಲಿ ಬ್ರಿಟಿಷ್ ಪ್ರಭುತ್ವವನ್ನು ಭಾರತದಲ್ಲಿ ನೆಲೆಗೊಳಿಸುವ ರಾಜನೀತಿಯ ಉದ್ದೇಶವೂ-ಜೊತೆಗೆ ಬ್ರಿಟಿಷರ ವಿಜಯದ ದಂಡಯಾತ್ರೆಯಲ್ಲಿ ನೆರವಾದ ಮಿತ್ರಮಂಡಲಿಯ ಬಲ ಪ್ರಭಾವಗಳನ್ನು ಒಂದು ಮಿತಿಯಲ್ಲಿರಿಸುವ ಉದ್ದೇಶವೂ ಪ್ರಧಾನ ಕಾರಣವಾಗಿದ್ದಿತೇ ಹೊರತು, ರಾಣಿ ಲಕ್ಷ್ಮಿಯಮ್ಮಣ್ಣಿಯವರೊಂದಿಗೆ ಮಾಡಿ ಕೊಂಡ ಒಪ್ಪಂದಕ್ಕೆ ನಿಯಮಾನುಸರಣೆಯಿಂದ ಗೌರವ ತೋರತಕ್ಕದ್ದು ಮುಖ್ಯವಾಗಿರಲಿಲ್ಲ. ಬ್ರಿಟಿಷರು ಮೈಸೂರು ರಾಜಮನೆತನಕ್ಕೆ ನ್ಯಾಯ ಸಲ್ಲಿಸಿದವರೆಂಬುದನ್ನು ಆಪಾತದೃಷ್ಟಿಗೆ ತೋರಿಸಿಕೊಂಡರೂ ಆ ಮನೆತನದ ಪರವಾಗಿ ಗಣ್ಯರಾದ ರಾಣಿಯೊಬ್ಬಳು ಒಪ್ಪಂದಕ್ಕೆ ಸಹಿಮಾಡಿದ್ದರೂ ಈ ದೊಡ್ಡ ಘಟನೆ ಅಂದಿನ ರಾಜತಾಂತ್ರಿಕ ವ್ಯವಹಾರದಲ್ಲಿ ಪಡೆಯಬೇಕಾಗಿದ್ದ ಗಣ್ಯಸ್ಥಾನವನ್ನು ಪಡೆಯದೆ ಅದು ಕೇವಲ ಪ್ರಾಸಂಗಿಕ ಘಟನೆಯೊಂದು ನಡೆಯಿತೆಂಬಂತೆ ಗೌಣವೆನಿಸಿ ಮೂಲೆಗೆ ಸೇರಿತು.

ಈ ಒಪ್ಪಂದದ ಪ್ರಕಾರ, ರಾಜಮಾತೆಯಾದ ಮಹಾರಾಣಿ ಲಕ್ಷ್ಮಿಯಮ್ಮಣ್ಣಿಯವರ ಇಷ್ಟದಂತೆ, ಅವರ ಮಗ ಮುಮ್ಮಡಿ ಕೃಷ್ಣರಾಜ ಒಡೆಯರು ಗದ್ದುಗೆಯನ್ನೇರಿದರು. ಆಗ ದೊರೆಗೆ ಕೇವಲ ಮೂರು ವರ್ಷ ವಯಸ್ಸು. ಹೀಗೆ ಮೈಸೂರಿಗೆ ನ್ಯಾಯವನ್ನು ಗೆದ್ದುಕೊಂಡ ರಾಜಮಾತೆ ಮಹಾರಾಣಿಲಕ್ಷ್ಮಿಯಮ್ಮಣ್ಣಿ ಯವರು 1810ರಲ್ಲಿ ಕಾಲವಾದರು. ಮರುವರ್ಷ ದಿವಾನ್ ಪೂರ್ಣಯ್ಯನವರೂ ಕಾಲವಾದರು. ರಾಜವಂಶಕ್ಕೆ ದೇಶವು ಪುನಸ್ಸ್ವಾಧೀನವಾದ ತರುವಾಯ ಪೂರ್ಣಯ್ಯನವರು ಹತ್ತುವರ್ಷಕ್ಕಿಂತ ಹೆಚ್ಚುಕಾಲ ರಾಜ್ಯದ ಆಡಳಿತವನ್ನು ದಕ್ಷತೆಯಿಂದ ನಡಸಿದರು. ತರುಣ ಕೃಷ್ಣರಾಜ ಒಡೆಯರು ನೇರವಾಗಿ ಆಡಳಿತ ನಡಸಲು ಪ್ರಾಪ್ತವಯಸ್ಕರಾಗುವ ಹೊತ್ತಿಗೆ ಪ್ರಭುಗಳಿಗೆ ಯೋಗ್ಯ ಮಾರ್ಗದರ್ಶನ ಪರಾಮರ್ಶೆಗಳನ್ನು ನೀಡಬಲ್ಲ ಹಿತಚಿಂತಕರಾದ ಈ ಇಬ್ಬರು ಹಿರಿಯರು ವಿಧಿಯೆಣಿಕೆಯಂತೆ ಕಣ್ಮರೆಯಾಗಿದ್ದರು.

ಪೂರ್ಣಯ್ಯನವರ ದಿವಾನ್‌ಗಿರಿಯ ಕಾಲದಲ್ಲಿ ಸರ್ ಬ್ಯಾರಿ ಕ್ಲೋಸ್ ಎಂಬಾತನು ಬ್ರಿಟಿಷ್ ರೆಸಿಡೆಂಟ್ ಆಗಿದ್ದನು. ಶ್ರೀರಂಗಪಟ್ಟಣದ ಕೋಟೆಯಲ್ಲಿ ಬೀಡು ಬಿಟ್ಟ ಬ್ರಿಟಿಷ್ ಸೈನ್ಯಕ್ಕೆ ಆರ್ಥರ್ ವೆಲ್ಲೆಸ್ಲಿ ನಾಯಕನಾಗಿದ್ದನು. ಈತನೇ ಮುಂದೆ ಡ್ಯೂಕ್ ಆಫ್ ವೆಲ್ಲಿಂಗ್ಟನ್ ಎಂದು ಪ್ರಸಿದ್ಧಿಗೇರಿದವನು. ಸ್ವತಃ ಮೇಧಾವಿಗಳಾಗಿದ್ದ ಪೂರ್ಣಯ್ಯನವರು ಈ ಇಬ್ಬರು ಅಧಿಕಾರಿಗಳು ಕೊಟ್ಟ ಪರಾಮರ್ಶೆಯಿಂದ ಪ್ರಯೋಜನ ಪಡೆದು, ಮೈಸೂರಿನಲ್ಲಿ ಶಾಂತಿಯನ್ನೂ ಸುವ್ಯವಸ್ಥೆಯನ್ನೂ ನೆಲೆಗೊಳಿಸಿದರು. ಆಡಳಿತದಲ್ಲಿ ಪ್ರಗತಿಪರವಾದ ಪರಿಷ್ಕಾರಗಳನ್ನು ತಂದರು. ಪೂರ್ಣಯ್ಯನವರು ಬ್ರಿಟಿಷ್ ಸೇನೆಯ ನೆರವು ಪಡೆದು ರಾಜ್ಯಸೈನ್ಯಗಳನ್ನು ಮೈಸೂರಿನ ಗಡಿಗಳಿಗೆ ಕಳಿಸಿ, ಅಲ್ಲಲ್ಲಿ ಎದ್ದ ಬಿಡಿದಂಗೆಗಳನ್ನು ಅಣಗಿಸಿದರು. ರಾಜ್ಯದ ಗಡಿಯಾಚೆ ನಡೆದ ಕೆಲವು ಪುಂಡಾಟಗಳನ್ನು ಬ್ರಿಟಿಷರು ಮೈಸೂರು ಸೈನ್ಯದ ನೆರವಿನಿಂದ ಅಡಗಿಸಿದರು. ಕೆಲವು ನಿದರ್ಶನಗಳು ಇವು: 1799–1800 ರಲ್ಲಿ ಧೂಂಡಿಯಾ ವಾಘನೆಂಬವನು ನಡೆಸಿದ ಪುಂಡಾಟ; ಮಂಜರಾಬಾದಿನ ಬಲ್ಲಂ ಸೀಮೆಯ ಪಾಳೆಯಗಾರ ಕೃಷ್ಣಪ್ಪನಾಯಕನ 1800 ರ ಪುಂಡಾಟ; 1803 ರ ಮರಾಠಾ ಯುದ್ಧ; 1804–05 ರ ಚಿತ್ತೂರು ಗಲಭೆ; ಮತ್ತು 1806 ರ ವೆಲ್ಲೂರು ದಂಗೆ.

ತರುಣರಾದ ಮುಮ್ಮಡಿ ಕೃಷ್ಣರಾಜ ಒಡೆಯರ ಆಳಿಕೆಯ ಮೊದಲ ಭಾಗದಲ್ಲಿ—1811 ರಲ್ಲಿ ಪೂರ್ಣಯ್ಯನವರು ದಿವಾನ್‌ಗಿರಿಯಿಂದ ನಿವೃತ್ತರಾದರು. ರಾಜ್ಯಕ್ಕೆ ಅವರಿಂದ ಅತಿಶಯವಾದ ಸೇವೆ ಸಂದದ್ದಕ್ಕೋಸ್ಕರ ಅವರಿಗೆ ಪ್ರಭುಗಳು ಎಳಂದೂರು ಜಹಗೀರಿಯನ್ನು ಕೊಟ್ಟರು. ಪೂರ್ಣಯ್ಯನವರು

ಅಸಾಮಾನ್ಯವಾದ ಮೇಧಾಶಕ್ತಿಯನ್ನು ಪಡೆದಿದ್ದವರು. ರಾಜ್ಯಕ್ಕೆ ಬಹುಮುಖವಾದ ಸೇವೆ ಸಲ್ಲಿಸಬಲ್ಲ ರಾಜನೀತಿ ನೈಪುಣ್ಯ ಅವರಲ್ಲಿತ್ತು. ಶಾಂತಿಕಾಲವಾಗಲಿ ಯುದ್ಧಕಾಲವಾಗಲಿ-ಉಭಯಸಂದರ್ಭಗಳಲ್ಲೂ ದೇಶದ ಸಮಸ್ಯೆಗಳಿಗೆ ಯುಕ್ತವಾದ ಪರಿಹಾರವನ್ನು ಕಂಡುಕೊಳ್ಳಬಲ್ಲ ನಿತ್ಯಜಾಗರೂಕವಾದ ಬುದ್ಧಿ ಸಾಮರ್ಥ್ಯ ಅವರದು. ಐರೋಪ್ಯ ಸಿವಿಲ್ ಮತ್ತು ಮಿಲಿಟರಿ ಅಧಿಕಾರಿಗಳು ಪೂರ್ಣಯ್ಯನವರ ಬುದ್ಧಿ ಶಕ್ತಿಯನ್ನು ಮೆಚ್ಚಿಕೊಂಡಿದ್ದರು. ದೇಶೀಯ ಸಂಸ್ಥಾನವೊಂದರಲ್ಲಿ ಪ್ರಗತಿಪರವಾದ ಆಡಳಿತ ನಡೆಯಲು ತಳಪಾಯ ಹಾಕಿದ ಮೇಧಾವಿಯೆಂದು ಅವರನ್ನು ಕೊಂಡಾಡಿದರು. ಮೈಸೂರು ರಾಜ್ಯವು ದೂರ ದೃಷ್ಟಿಯುಳ್ಳ ಒಳ್ಳೆಯ ರಾಜಕಾರಣಿಯೊಬ್ಬನನ್ನು ಪಡೆದಿರುವ ಸಂಸ್ಥಾನವೆಂಬ ಕೀರ್ತಿ ಬ್ರಿಟಿಷರ ದಾಖಲೆಗಳಲ್ಲಿ ಸೇರಿಕೊಂಡಿತು.

1816ರಲ್ಲಿ ರಾಜ್ಯದ ಉತ್ತರ ಗಡಿಗಳಲ್ಲೂ ಇತರ ಕಡೆಗಳಲ್ಲೂ ನಡೆದ ಪಿಂಡಾರಿಗಳ ಗಲಭೆಯನ್ನು ಬ್ರಿಟಿಷರು ಅಣಗಿಸಬೇಕಾಗಿ ಬಂದಾಗ ಮೈಸೂರು ಸೈನ್ಯವು—ಅದರಲ್ಲೂ ಮೈಸೂರು ಅಶ್ವದಳವು ಬ್ರಿಟಿಷರಿಗೆ ತುಂಬಾ ಸಹಾಯಮಾಡಿತು. ಹಾಗೆಯೇ 1824ರಲ್ಲಿ ಕಿತ್ತೂರಿನಲ್ಲಿ ನಡೆದ ಹಗರಣದಲ್ಲಿ ಮೈಸೂರಿನ ಸೇನೆಯ ಪಾತ್ರ ಗಣನೀಯವಾಗಿತ್ತು. ಈ ಹಗರಣದಲ್ಲೇ ಬ್ರಿಟಿಷರ ವಿರುದ್ಧ ರಾಣಿ ಚೆನ್ನಮ್ಮನ ವೀರ್ಯವತ್ತಾದ ಪ್ರತಿಭಟನೆ ಪ್ರಕಟವಾದದ್ದು.

### ಮತ್ತೆ ಬ್ರಿಟಿಷರ ಆಡಳಿತ

1830ರಲ್ಲಿ ಮೈಸೂರು ರಾಜ್ಯದ ವಾಯುವ್ಯ ಪ್ರಾಂತದ ನಗರ ಸೀಮೆಯಲ್ಲಿ ಗಲಾಟೆ ನಡೆಯಿತು. ಈ ಭಾಗದಲ್ಲಿ ಕೆಳದಿಯ ನಾಯಕರು ಆಳುತ್ತಿದ್ದರು. ಈ ನಾಯಕರು ಮೈಸೂರು ರಾಜವಂಶಕ್ಕೆ ನಿಷ್ಠರಲ್ಲ. ಬೂದಿ ಬಸವಯ್ಯನೆಂಬವನು ನಾಯಕ ಪಟ್ಟಕ್ಕೆ ಹಕ್ಕುದಾರನೆಂದು ನಟಿಸಿ ಹೇಳಿಕೊಳ್ಳುತ್ತ ಹಾವಳಿಯೆಬ್ಬಿಸಿದನು. ರೈತರನ್ನು ಕೆರಳಿಸಿ ದಂಗೆಯ ಮುಂದಾಳಾದನು. ಗಲಭೆಯ ಪ್ರದೇಶಕ್ಕೆ ಮೈಸೂರು ಸೈನ್ಯವೂ ಅದಕ್ಕೆ ನೆರವಾಗಿ ಸಹಾಯಕ ಸೈನ್ಯವೂ ಹೋಗಿ ದಂಗೆಯನ್ನಡಗಿಸಿದವು. ಈ ದಂಗೆಗೆ ಇದ್ದ ಕಾರಣ ಸಂದರ್ಭಗಳೇನೆಂಬುದನ್ನು ಶೋಧಿಸಲು ಒಂದು ವಿಚಾರಣಾ ಸಮಿತಿ ನೇಮಕವಾಯಿತು. ಈ ಸಮಿತಿಯು ಇತ್ಯರ್ಥವೇನೆಂಬ ವರದಿ ಹೊರಬೀಳುವುದರೊಳಗಾಗಿ ಗವರ್ನರ್ ಜನರಲ್ ಲಾರ್ಡ್ ವಿಲಿಯಂ ಬೆಂಟಿಂಕ್ ಮೈಸೂರು ರಾಜ್ಯವನ್ನು ಬ್ರಿಟಿಷರ ನೇರವಾದ ಆಡಳಿತಕ್ಕೋಸ್ಕರ ಸ್ವಾಧೀನಪಡಿಸಿ ಕೊಳ್ಳಬೇಕೆಂದು ನಿರ್ಧರಿಸಿದನು. ಹೀಗೆ 1831ರಲ್ಲಿ ರಾಜ್ಯವು ಮುಮ್ಮಡಿ ಕೃಷ್ಣರಾಜ ಒಡೆಯರ ಕೈತಪ್ಪಿ ಹೋಯಿತು. ಪ್ರಭುಗಳು ನವರಾತ್ರಿಯ ಉತ್ಸವ ಸಂಭ್ರಮದಲ್ಲಿದ್ದಾಗ ರಾಜ್ಯವನ್ನು ಬ್ರಿಟಿಷರ ಆಡಳಿತಕ್ಕೆ ಒಪ್ಪಿಸಬೇಕೆಂಬ ಕಠೋರವಾದ ಆಜ್ಞೆಯ ಪತ್ರ ಪ್ರಭುಗಳ ಕೈಗೆ ಬಂದಿತು. ಮಹಾರಾಜರು ಬ್ರಿಟಿಷರ ತೀರ್ಮಾನಕ್ಕೆ ಗಾಂಭೀರ್ಯದಿಂದ ಒಡಂಬಟ್ಟು ವಿಧಿಗೆ ತಲೆಬಾಗಿದರು. 1831 ರಿಂದ 1881ರ ವರೆಗೆ ಮೈಸೂರನ್ನು ಬ್ರಿಟಿಷ್ ಕಮಿಷನರುಗಳು ಆಳಿದರು.

ರಾಜ್ಯವು ಕೈತಪ್ಪಿ ಹೋದರೂ ಮುಮ್ಮಡಿ ಕೃಷ್ಣರಾಜ ಒಡೆಯರನ್ನು ಪ್ರಜೆಗಳು ಬಹು ಪ್ರೀತಿಯಿಂದ ರಾಜಮರ್ಯಾದೆಯಿಂದಲೇ ನಡೆಸಿಕೊಂಡರು; ಮತ್ತು ಅವರು ಮತ್ತೆ ರಾಜ್ಯಾಧಿಕಾರಕ್ಕೆ ಬರುವ ಸುದಿನವನ್ನು ಎದುರು ನೋಡುತ್ತಿದ್ದರು. ಹೀಗೆ ಅರಸರ ವೈಯುಕ್ತಿಕ ಗುಣ ಪ್ರಭಾವಗಳಿಂದ ಪ್ರಜಾವತ್ಸಲರಾಗಿದ್ದ ಅವರು ಪ್ರಜೆಗಳಿಂದ ಮರ್ಯಾದೆಗೆ ಅರ್ಹರಾಗಿದ್ದರು. ಪ್ರಭುಗಳು ಪಾಂಡಿತ್ಯಕ್ಕೂ ಕಲೆಗಳಿಗೂ ಮಹಾಪೋಷಕರಾಗಿದ್ದರು. ಸ್ವತಃ ಅವರು ಕನ್ನಡ, ಸಂಸ್ಕೃತ, ಮರಾಠಿ, ಪರ್ಷಿಯನ್ ಭಾಷೆಗಳಲ್ಲಿ ಒಳ್ಳೆಯ ಪಾಂಡಿತ್ಯವನ್ನು ಸಂಪಾದಿಸಿಕೊಂಡಿದ್ದರು. ಅವರಿಗೆ ಸಂತತಿಯಿಲ್ಲದ್ದರಿಂದ, ಒಂದು ವೇಳೆ ಮುಂದೆ ರಾಜ್ಯವನ್ನು ಬ್ರಿಟಿಷರು ಹಿಂದಕ್ಕೆ ಕೊಡುವವರಾದಾಗ, ಉತ್ತರಾಧಿಕಾರಿಯ

ಪ್ರಶ್ನೆಯಿರಬಾರದು ಎಂಬ ಉದ್ದೇಶದಿಂದ ಯೋಗ್ಯರಾದವರನ್ನು ದತ್ತು ತೆಗೆದುಕೊಳ್ಳಲೂ ತಮಗಿದ್ದ ಹಕ್ಕನ್ನು ರೂಢಿಸಿಕೊಳ್ಳಲೂ ರಾಜ್ಯಾಡಳಿತವನ್ನು ತಮ್ಮ ವಂಶಕ್ಕೆ ಮತ್ತೆ ವಹಿಸಿಕೊಡಬೇಕೆಂದು ಕೆಚ್ಚಿನಿಂದ ಹೋರಾಡಿದರು. ಅವರ ಸಂತತ ಪ್ರಯತ್ನದ ಫಲವಾಗಿ ದತ್ತು ಸ್ವೀಕಾರದ ಪ್ರಶ್ನೆ 1867ರಲ್ಲಿ ಅವರ ಮಟ್ಟಿಗೆ ಇತ್ಯರ್ಥವಾಯಿತು. ನೇಮದಂತೆ ಅವರು ಚಾಮರಾಜ ಒಡೆಯರನ್ನು ದತ್ತು ಪುತ್ರರನ್ನಾಗಿ ಆಯ್ದುಕೊಂಡರು. ಆದರೆ ಮಾರನೆಯ ವರ್ಷ 1868ರಲ್ಲಿ ಮುಮ್ಮಡಿ ಕೃಷ್ಣರಾಜ ಪ್ರಭುಗಳು ಪದಚ್ಯುತಿಯ ವೇದನೆಯಲ್ಲೇ ಕಾಲಾಧೀನರಾದರು. ಚಾಮರಾಜ ಒಡೆಯರು 1881ರಲ್ಲಿ ಪ್ರಾಪ್ತವಯಸ್ಕರಾದಾಗ ಬ್ರಿಟಿಷರು ಅವರನ್ನು ಮೈಸೂರು ರಾಜವಂಶದ ನ್ಯಾಯವಾದ ಉತ್ತರಾಧಿಕಾರಿಯೆಂದು ಅಂಗೀಕರಿಸಿ ರಾಜ್ಯವನ್ನು ಅವರಿಗೆ ಮರಳಿ ಒಪ್ಪಿಸಿದರು,

1831 ರಿಂದ 1881ರ ವರೆಗೆ ಮೈಸೂರು ರಾಜ್ಯವನ್ನಾಳಿದ ಬ್ರಿಟಿಷ್ ಕಮೀಷನರುಗಳ ಪ್ರಭುತ್ವ ವಿವರಗಳನ್ನು ಮುಂದೆ ಪ್ರಸ್ತಾವಿಸಿದೆ.

**ಸರ್ ಥಾಮಸ್ ಮನ್ರೋ**

1800ರಲ್ಲಿ ಸರ್ ಥಾಮಸ್ ಮನ್ರೋ ಎಂಬಾತ ಬಳ್ಳಾರಿ ಜಿಲ್ಲೆಯ ಕಲೆಕ್ಟರ್ (ಜಿಲ್ಲಾಧಿಕಾರಿ) ಆಗಿ ನೇಮಿಸಲ್ಪಟ್ಟನು. ಈತನು ಗಲಭೆಯ ವಾತಾವರಣವನ್ನಡಗಿಸಿ ಶಾಂತಿ ವ್ಯವಸ್ಥೆಯನ್ನು ತರುವುದರಲ್ಲಿ ಮಾತ್ರವಲ್ಲದೆ, ಒಳ್ಳೆಯ ಆಡಳಿತವನ್ನು ಒದಗಿಸುವುದರಲ್ಲೂ ತುಂಬ ಪರಿಶ್ರಮ ಮಾಡಬೇಕಾಯಿತು. ಹರಪನಹಳ್ಳಿ, ರಾಯದುರ್ಗ ಮತ್ತು ಇತರ ಪ್ರದೇಶಗಳಲ್ಲಿ ಹೆಚ್ಚಿಕೊಂಡಿದ್ದ ಪಾಳೆಯಗಾರರನ್ನು ಈತ ಅಣಗಿಸಬೇಕಾಯಿತು. ಮನೋದಾರ್ಢ್ಯದಿಂದ ವರ್ತಿಸಿ ಈ ಕಾರ್ಯದಲ್ಲಿ ಯಶಸ್ವಿಯಾದನು. ಆ ಮೇಲೆ ಈತನು ಉತ್ತರ ಕರ್ನಾಟಕಕ್ಕೆ ತಿರುಗಿ ಅದನ್ನು ಬ್ರಿಟಿಷರಿಗೋಸ್ಕರ ಗೆದ್ದು ಕೊಟ್ಟನು. ಮಹಾರಾಷ್ಟ್ರದ ಅಧಿಕಾರಿಗಳ ದಬ್ಬಾಳಿಕೆಯಿಂದ ಬಿಡುಗಡೆ ಬಂತಲ್ಲಾ ಎಂದು ಸ್ಥಳೀಯ ಪ್ರಜೆಗಳು ಈತನ ದಂಡಯಾತ್ರೆಯನ್ನು ಸ್ವಾಗತಿಸಿದರು. ಈ ಯುದ್ಧದ ಫಲವಾಗಿ ಪುಣೆ ಒಡಂಬಡಿಕೆಯಾಯಿತು. ಅದರ ಕರಾರಿನಂತೆ–ಧಾರವಾಡ ಮತ್ತು ಕುಸುಗಲ್ ಸೀಮೆಯನ್ನು ಪೇಶ್ವೆಯು ಬ್ರಿಟಿಷರಿಗೆ ಬಿಟ್ಟುಕೊಟ್ಟನು. ಹೀಗೆ ರಾಜ್ಯವನ್ನು ಕಳೆದುಕೊಳ್ಳುವುದು ಪೇಶ್ವೆಗೆ ಅನಿವಾರ್ಯವಾಯಿತು. ಏಕೆಂದರೆ, ಬೇಡದ ಕನ್ನಡ ಜನದ ಮೇಲೆ ದಬ್ಬಾಳಿಕೆ ನಡೆಸಲು ತ್ರಿಯಂಬಕ ಡೇಂಗ್ಲೆಯನ್ನು ಪೇಶ್ವೆಗಳು ಛೂಬಿಟ್ಟಿದ್ದರು. ಡೇಂಗ್ಲೆಯ ದಬ್ಬಾಳಿಕೆಗೆ ಕನ್ನಡ ಜನ ರೋಸಿ ಹೋಗಿದ್ದರು. ದಂಗೆಯೆದ್ದ ಇವರನ್ನು ಅಡಗಿಸಲು ಪೇಶ್ವೆ ಪಟ್ಟ ಪ್ರಯತ್ನ ವಿಫಲವಾಯಿತು. 1818ರ ಹೊತ್ತಿಗೆ ಈ ಪ್ರದೇಶದಲ್ಲಿ ಮರಾಠರ ಪ್ರಭಾವ ಪೂರ್ತಿಯಾಗಿ ತೊಲಗಿಹೋಗಿತ್ತು. ಬ್ರಿಟಿಷರು ಅದನ್ನು ಆಕ್ರಮಿಸಿಕೊಂಡು, ಅಲ್ಲಿ ಪೌರಾಡಳಿತವನ್ನೂ ಸೈನ್ಯಾಡಳಿತವನ್ನೂ ಭದ್ರವಾಗಿ ನೆಲೆಗೊಳಿಸಿದರು.

ಸರ್ ಥಾಮಸ್ ಮನ್ರೋ ಯುದ್ಧಭೂಮಿಯಲ್ಲಿ ಪರಾಕ್ರಮ ತೋರಿಸಿದಂತೆಯೇ ಮಂತ್ರಾಲೋಚನ ಸಭೆಯಲ್ಲೂ ಪ್ರಾಜ್ಞನಾಗಿ ನಡೆದುಕೊಂಡನು. ಆತನ ಆಡಳಿತದಲ್ಲಿ ದಕ್ಷತೆ ಎದ್ದುಕಾಣುತ್ತಿತ್ತು. ಭೂಕಂದಾಯ ವ್ಯವಸ್ಥೆಯಲ್ಲಿ ಈತನು ತುಂಬ ಶ್ರದ್ಧೆ ತೋರಿಸಿ ಪ್ರಜೆಗಳಿಗೆ ಉಪಕಾರಕವಾಗುವ ಸುಧಾರಣೆಗಳನ್ನು ಆಗಮಾಡಿಸಿದನು. ಆಡಳಿತ ವಿಚಕ್ಷಣೆಗೆ ಹೆಸರುವಾಸಿಯಾದ ರಾಜಕಾರಣಿಗಳಲ್ಲೊಬ್ಬನೆಂದು ಈತನನ್ನು ಜನ ಕೊಂಡಾಡುವಂತೆ ಈತನ ಆಳಿಕೆ ನಡೆಯಿತು. ಇಂದು ಸಾಧ್ಯವಾದ ಕನ್ನಡ ರಾಜ್ಯೋದಯಕ್ಕೆ ಸಂಬಂಧಿಸಿದ ಪ್ರಾರಂಭಾಲೋಚನೆ 1826 ರಷ್ಟು ಹಿಂದೆಯೇ ಸರ್ ಥಾಮಸ್ ಮನ್ರೋ ಮಹಾಶಯನ ಹೃದಯದಲ್ಲಿ ಅಲೆಯಿತೆಂಬ ಸಂಗತಿ ಕನ್ನಡಿಗರಿಗೆಲ್ಲ ಸ್ವಾರಸ್ಯಕರವಾದದ್ದು. ಕನ್ನಡ ಜಿಲ್ಲೆಗಳ ಆಡಳಿತ ಹೇಗೆಂಬ ವಿಷಯ ಪರ್ಯಾಲೋಚನೆಗೆ ಬಂದಾಗ–ಮುಂಬಯಿ ಕರ್ನಾಟಕ ಜಿಲ್ಲೆಗಳೆಂದು

ಆ ಮೇಲೆ ಬಳಕೆಗೆ ಬಾರದ ಈ ಪ್ರದೇಶಗಳನ್ನು ಮದರಾಸು ಪ್ರಾಂತದ ಆಡಳಿತಕ್ಕೆ ವಶಪಡಿಸಬೇಕೆಂಬ ಸಲಹೆಯನ್ನು ಸರ್ ಥಾಮಸ್ ಮನ್ರೋ ಮುಂದಿಟ್ಟನು. ಈ ಆಲೋಚನೆ ನ್ಯಾಯವಾದದ್ದೆಂಬುದಕ್ಕೆ ಆತ ಕೊಟ್ಟ ಕಾರಣಗಳಿವು :

"ಈ ಪ್ರದೇಶಗಳನ್ನು ಮದರಾಸು ಆಡಳಿತಕ್ಕೆ ವರ್ಗಾಯಿಸುವುದರಿಂದ ಅಲ್ಲಿ ಹಳೆಯ ಮರಾಠರ ಆಳಿಕೆಯ ನೆನಪು ಉಳಿಯದಂತೆ ಮಾಡಲು ಸಾಧ್ಯವಾಗುತ್ತದೆ. ಈ ಪ್ರದೇಶಗಳಲ್ಲಿ ಪ್ರಭಾವಶಾಲಿಗಳಾದವರು ಕೊಂಕಣದ ಜನ; ಬಹುಸಂಖ್ಯಾಕ ಕನ್ನಡಿಗರ ಆಶೋತ್ತರಗಳನ್ನು ಗಮನಕ್ಕೆ ತಂದುಕೊಳ್ಳಲಾರದೆ ಅಲ್ಪ ಸಂಖ್ಯಾಕರಾದ ಆಗಂತುಕರು; ಕೃಷ್ಣಾನದಿಯನ್ನು ದಾಟಿ ಬಂದು ನೆಲಸಿ, ಜಹಗೀರುದಾರರಾಗಿ ಜಬ್ರು ಮಾಡಿದವರು. ಈಗ ಹೇಗೂ ಈ ಪ್ರದೇಶ ಮದರಾಸಿನ ದಂಡಿನ ವಶದಲ್ಲಿದೆ. ಪೌರಾಧಿಕಾರವೂ ಮದರಾಸು ಸರಕಾರದ ವಶಕ್ಕೆ ಬಂದರೆ ಆಡಳಿತವು ಸುಗಮವಾಗುತ್ತದೆ. ಧಾರವಾಡ ಜಿಲ್ಲೆಯ ಪೂರ್ವಕ್ಕೂ ಪಶ್ಚಿಮಕ್ಕೂ ಮದರಾಸಿನ ಜಿಲ್ಲೆಗಳು ಹೊಂದಿಕೊಂಡಿವೆ. ಆದದ್ದರಿಂದ ಆಡಳಿತ ಸೌಕರ್ಯಕ್ಕೋಸ್ಕರ ಈ ವರ್ಗಾವಣೆ ವಿಹಿತವಾದದ್ದು. ಮರಾಠರು ದಾಳಿಯಿಟ್ಟು ಬಂದು ಪ್ರಬಲರಾಗಿದ್ದರೂ ಧಾರವಾಡವು ಮರಾಠಾ ಸೀಮೆಯಲ್ಲ. ಈಗಾಗಲೆ ಮದರಾಸಿನ ವಶದಲ್ಲಿರುವ ಕನ್ನಡದ ಪ್ರದೇಶಗಳೊಂದಿಗೆ ಪ್ರತಿನಿತ್ಯದ ಸಂಬಂಧವುಳ್ಳದ್ದು ಈ ಧಾರವಾಡ ಸೀಮೆ; ಮತ್ತು ಮದರಾಸಿನ ವಶದಲ್ಲಿರುವ ಕನ್ನಡ ಪ್ರದೇಶಗಳಿಗೂ ಬಳ್ಳಾರಿ, ಸೊಂಡ (ಸೊಂಡೂರು) ಮತ್ತು ಮೈಸೂರು ಸೀಮೆಗಳಿಗೂ ಯಾವ ದೃಷ್ಟಿಯಿಂದಲೂ ವ್ಯತ್ಯಾಸವಿಲ್ಲ. ಆಡುವ ಭಾಷೆ ಕನ್ನಡ. ಸ್ವಾಭಾವಿಕವಾಗಿ ಒಂದೇ ಆಗಿರುವ ಸೀಮೆಗೆ ಸೇರಬೇಕಾದವರನ್ನು ಆ ಸೀಮೆಗೆ ಸೇರಿಸುವುದರಿಂದ ಜನ ಸಂತೋಷಪಡುತ್ತಾರೆ. ಹೀಗೆ ಮಾಡದೆ ಮರಾಠರ ಪ್ರಭಾವ ಬೆಳೆಯುವುದಕ್ಕೆ ಆಸ್ಪದ ಕೊಡುವ, —ಮತ್ತು ಸ್ವಾಭಾವಿಕವಾದ ನಂಟುಇಲ್ಲದ ಮುಂಬಯಿ ಪ್ರಾಂತಕ್ಕೆ ಧಾರವಾಡ ಸೀಮೆಯನ್ನು ಸೇರಿಸುವುದು ಯುಕ್ತವಲ್ಲ. ಈ ಒಂದು ಶಾಶ್ವತವಾದ ಏಕೀಕರಣವನ್ನು ಸಾಧಿಸುವುದರಲ್ಲಿ ಒಟ್ಟು ಕನ್ನಡ ಜನದ ಹಿತದೃಷ್ಟಿ ಎದ್ದು ಕಾಣುತ್ತದೆ. ತಮ್ಮ ಯೋಗಕ್ಷೇಮಕ್ಕೋಸ್ಕರ ಪುಣೆ, ಮುಂಬಯಿ ನಗರಗಳ ಕಡೆ ನೋಡುವ ಮರಾಠಾ ಸರದಾರರ ಹಿತರಕ್ಷಣೆಗಿಂತ ಈ ಒಟ್ಟು ಜನಹಿತದ ದೃಷ್ಟಿ ಮೇಲ್ಪಟ್ಟದ್ದು"

[ಸರ್ ಥಾಮಸ್ ಮನ್ರೋ ತಾ॥ 5-5-1826, 27-6-1826 ಮತ್ತು 26-8-1826 ಈ ಮೂರು ತಾರೀಖುಗಳಲ್ಲಿ ಸಾರ್ವಭೌಮಸರಕಾರಕ್ಕೆ ಸಲ್ಲಿಸಿದ ಜ್ಞಾಪಕಪತ್ರಗಳ ಒಕ್ಕಣೆ, ಸರ್. ಎ. ಎನ್. ಆರ್ಬತ್ನಾಟ್ ಎಂಬವನು ಮನ್ರೋ ಮಹಾಶಯನನ್ನು ಕುರಿತು ಬರೆದಿರುವ ಜೀವನ ಚರಿತ್ರೆ (Life of Munro ಸಂಪುಟ II ಪುಟಗಳು 89-99) ಈ ವಿವರಗಳನ್ನು ಧಾರವಾಡಜಿಲ್ಲೆಯ ಗೆಜೆಟ್ಟಿನಲ್ಲಿ ಉದ್ಧರಿಸಿ ಪ್ರಕಟಪಡಿಸಿದೆ.]

ಆದರೆ ಕಂಪನಿಸರಕಾರದ ಕೇಂದ್ರ ಆಡಳಿತಮಂಡಲಿ ಈ ಸಲಹೆಗೆ ಪುರಸ್ಕಾರ ಕೊಡದೆ, 1830ರಲ್ಲಿ ಈ ಕರ್ಣಾಟಕ ಜಿಲ್ಲೆಗಳನ್ನು ಮುಂಬಯಿ ಪ್ರಾಂತಕ್ಕೆ ಸೇರಿಸಿಬಿಟ್ಟರು. ಹೀಗೆ ಮಾಡದೆ, 1826 ರಲ್ಲಿ ಮನ್ರೋ ಮಹಾಶಯನ ಅಭಿಪ್ರಾಯಗಳಿಗೆ ಮನ್ನಣೆ ದೊರೆತಿದ್ದರೆ ಇಂದಿನ ಕರ್ಣಾಟಕ ಏಕೀಕರಣಕ್ಕೆ ಮುಂಚಿತವಾಗಿ ಪ್ರಕಟವಾದ ತೊಡಕುಗಳು ಇಲ್ಲದೆ, ಕನ್ನಡಿಗರ ಆಶೋತ್ತರಗಳು ವಿಳಂಬವಿಲ್ಲದೆ ಫಲಿಸಿ ಅವರ ಜೀವನಗತಿಯಲ್ಲಿ ಪೂರ್ಣತೆಯಿರುತ್ತಿತ್ತೆಂಬ ಊಹಾಪೋಹಗಳು ಈಗ ವ್ಯರ್ಥವೆನ್ನಿಸುತ್ತವೆ.

ಧಾರವಾಡವು ಕನ್ನಡ ಜಿಲ್ಲೆಗಳ ಮುಖ್ಯ ಜಿಲ್ಲಾಧಿಕಾರಿಯ ಕೇಂದ್ರ ಕಾರ್ಯಾಲಯವಾಯಿತು. 1836ರಲ್ಲಿ ಬೆಳಗಾವಿಯನ್ನು ಪ್ರತ್ಯೇಕ ಜಿಲ್ಲೆಯಾಗಿ ವಿಭಾಗಿಸಲಾಯಿತು. ಉತ್ತರ ಕನ್ನಡ ಜಿಲ್ಲೆಯನ್ನು

ಹಿಂದೆಯೇ ಸೂಚಿಸಿರುವಂತೆ–ದಕ್ಷಿಣ ಕನ್ನಡ ಜಿಲ್ಲೆಯಿಂದ ಪ್ರತ್ಯೇಕಿಸಿ 1862ರಲ್ಲಿ ಮುಂಬಯಿ ಪ್ರಾಂತಕ್ಕೆ ಸೇರಿಸಲಾಯಿತು.

## 1857ರ ಸಿಪಾಯಿ ದಂಗೆ

1857-58ರ ಸಿಪಾಯಿದಂಗೆಯಾಗುವ ಪೂರ್ವ ಸೂಚನೆಗಳ ಪರಿಚಯ ಕರ್ನಾಟಕದ ಮಿಕ್ಕ ಯಾವುದೇ ಭಾಗಕ್ಕಿಂತ ಹೆಚ್ಚಾಗಿ ಉತ್ತರ ಕರ್ನಾಟಕಕ್ಕೆ ಆಗಿತ್ತು. 16ನೆಯ ಶತಮಾನದ ಮಧ್ಯಭಾಗದಿಂದ ಪ್ರಸಿದ್ಧಿಗೆ ಬಂದಿದ್ದ ಜಹಗೀರುದಾರರ ಕುಟುಂಬಕ್ಕೆ ಸೇರಿದ ನರಗುಂದದ ಭಾಸ್ಕರರಾಯ ಅಥವಾ ಬಾಬಾ ಸಾಹೇಬನು ತನಗಿರುವ ದತ್ತು ಪುತ್ರ ಸ್ವೀಕಾರದ ಹಕ್ಕನ್ನು ಆಳರಸರು ನಿರಾಕರಿಸಿದ್ದರಿಂದ ದಂಗೆಯೆದ್ದನು. ಈತನಿಗೆ ನೆರವಾಗಿ ಮುಂಡರಗಿಯ ಭೀಮರಾಯನು ಸೇರಿಕೊಂಡನು. ಭೀಮರಾಯನು ಮೊದಲು ಬ್ರಿಟಿಷರ ಸೇವೆಯಲ್ಲಿದ್ದವನು ಸ್ವತಂತ್ರ ಮನೋಧರ್ಮದಿಂದ ಸೇವೆಯನ್ನು ತ್ಯಜಿಸಿದ್ದನು. ಭಾಸ್ಕರನು ಧಾರವಾಡವನ್ನು ಹಿಡಿಯಬೇಕೆಂದು ಆ ಭೀಮರಾಯನು ಕೊಪ್ಪಳ ಸೀಮೆಯನ್ನಾಕ್ರಮಿಸಿಕೊಳ್ಳಬೇಕೆಂದು ಇಬ್ಬರೂ ಒಪ್ಪಂದ ಮಾಡಿಕೊಂಡರು. ಇವರಿಬ್ಬರಿಗೂ ರಾಮದುರ್ಗ ಆನೆಗೊಂದಿ ಪಾಳೆಯಗಾರರು ಸಹಾಯಕ್ಕೆ ಬರತಕ್ಕವರೆಂದೂ ಯೋಜನೆಯಾಯಿತು, ಇವರಲ್ಲದೆ ಶಿರಹಟ್ಟಿಯ ಕೆಂಚನಗೌಡನೂ ಸೊರಟೂರಿನ ದೇಸಾಯಿಯೂ ಕೂಡಿಕೊಂಡು ದಂಗೆಯನ್ನು ವಿಸ್ತರಿಸಲು ಒಡಂಬಟ್ಟರು. ದಂಗೆಯೆದ್ದವರು ಹೀಗೆ ಕೆಚ್ಚಿನಿಂದ ಪ್ರಯತ್ನಿಸಿದರೂ ಬ್ರಿಟಿಷ್ ಸರಕಾರದ ಸುವ್ಯವಸ್ಥೆಯಲ್ಲಿದ್ದ ಸೇನಾಬಲಕ್ಕೆ ಯಶಸ್ಸು ಲಭಿಸಿತು. ಭೀಮರಾಯನು ಕಾಳಗದಲ್ಲಿ ಮಡಿದನು. ಬಾಬಾಸಾಹೇಬನು ಸೆರೆ ಸಿಕ್ಕಿದನು. ಈತನನ್ನು ಗಲ್ಲಿಗೇರಿಸಲಾಯಿತು. ನರಗುಂದದಲ್ಲೂ ಕೊಪ್ಪಳದಲ್ಲೂ ಇನ್ನೂರು ಜನ ಸತ್ತರು. ಸುಮಾರು ನಲವತ್ತು ಜನರು ಗಲ್ಲಿಗೇರಿದರು. ಸುಮಾರು ನೂರು ಜನ ಕಾರಾಗೃಹ ಸೇರಿದರು. ಸೈನಿಕ ನ್ಯಾಯಾಸ್ಥಾನದ ತೀರ್ಪಿನಂತೆ ಸುಮಾರು ನೂರು ಜನರನ್ನು ಗುಂಡಿಟ್ಟು ಕೊಲ್ಲಲಾಯಿತು. ನರಗುಂದ ಜಹಗೀರಿನಲ್ಲಿ ಇದ್ದದ್ದು 43 ಗ್ರಾಮಗಳು, ಇವನ್ನು ಧಾರವಾಡ ಜಿಲ್ಲೆಗೆ ಸೇರಿಸಲಾಯಿತು.

ಮೂಲಲೇಖಕರು : ಶ್ರೀ ಕೆ. ಸಂಪದ್ಗಿರಿ ರಾವ್
ಅನುವಾದಕರು : ಶ್ರೀ ಎಸ್. ವೆಂಕಟಾಚಲಪತಿ

# ಕೊಡಗಿನ ಚರಿತ್ರೆ

ಬ್ರಿಟಿಷ್ ಕಮಿಷನರು (ಹಳೆಯ) ಮೈಸೂರು ರಾಜ್ಯದ ಮೇಲೆ ಅರ್ಧ ಶತಮಾನಕಾಲ (1831ರಿಂದ 1881ರ ವರೆಗೆ) ರಾಜ್ಯಭಾರ ಮಾಡಿದ್ದರ ಚರಿತ್ರೆಯನ್ನು ವಿವರಿಸುವ ಮೊದಲು ಕೊಡಗು ಮತ್ತು ಅದರ ಆಧುನಿಕ ಚರಿತ್ರೆಯ ಕಡೆಗೆ ಗಮನ ಹರಿಸುವುದು ಸೂಕ್ತ. ಆಡಳಿತ ನಡಸುವಲ್ಲಿ ಕೊಡಗು ಮೈಸೂರಿಗೆ ಸೇರಿಕೊಂಡ ಒಂದು ಭಾಗವೆಂದೂ ಕಾಫೀ ಮತ್ತು ಕಿತ್ತಳೆ ಬೆಳಸುವ ತೋಟದ ಯಜಮಾನರಿಗೆ ಬೇಟೆಯಾಡಲು ಅನುಕೂಲವಾದ ಒಂದು ಪ್ರದೇಶವೆಂದೂ ಬ್ರಿಟಿಷರು ಭಾವಿಸಿದ್ದರು. ಕೊಡಗು ಮೈಸೂರ್ರು ಪ್ರಸ್ಥಭೂಮಿಗೂ ಪಶ್ಚಿಮಘಟ್ಟಗಳಿಗೂ ನಡುವೆ ಸಿಕ್ಕಿಕೊಂಡು ದೊಡ್ಡ ದೊಡ್ಡ ಅಡವಿಗಳಿಂದ ತುಂಬಿ, ಏರಿ ಇಳಿಯುವ ಭೂವಿನ್ಯಾಸದಿಂದ ಕೂಡಿದ ಸುಂದರ ಪ್ರದೇಶ. ವೀರ್ಯೌದಾರ್ಯಗಳಿಗೆ ಹೆಸರಾದ ಕೊಡಗರು ತಮಗೇ ವಿಶಿಷ್ಟವಾದ ಜೀವನ ಕ್ರಮವನ್ನು ರೂಪಿಸಿಕೊಂಡಿದ್ದಾರೆ. ಇವರನ್ನು "ಕರ್ಣಾಟಕದ ಪರ್ವತೀಯರು" (High Landers) ಎಂದು ಕರೆಯಬಹುದು. ಈಗ್ಗೆ ಒಂದು ಶತಮಾನಕ್ಕಿಂತ ಹೆಚ್ಚು ಕಾಲದಿಂದಲೂ ಹೊರಗಿನಿಂದ ಕೊಡಗಿಗೆ ವಲಸೆ ಬಂದು ನೆಲಸಿರುವವರು ಸ್ಥಳೀಯ ನಿವಾಸಿಗಳಾದ ಕೊಡಗಿನವರಿಗಿಂತಲೂ ಬಹುಸಂಖ್ಯಾತರಾಗಿರುವರಾದರೂ ಕೊಡಗಿನ ಸಂಪ್ರದಾಯಗಳು ಅಚ್ಚಳಿಯದೆ ಉಳಿದಿವೆ; ಸ್ಥಳೀಯವಾದ ನೃತ್ಯಗಳು, ಹಬ್ಬಗಳು, ಆ ಪ್ರದೇಶದಲ್ಲಿ ಹುಟ್ಟುವ ಕಾವೇರೀ ನದಿಯ ಪೂಜೆ ಮತ್ತು ಅಲ್ಲಿನ ಸ್ತ್ರೀಯರ ಸ್ವಾತಂತ್ರ್ಯ—ಈ ಮೊದಲಾದ ರೀತಿಯಲ್ಲಿ ಕೊಡಗಿನ ವೈಶಿಷ್ಟ್ಯ ಉಳಿದುಬಂದಿದೆ.

ಇನ್ನು ಕೊಡಗಿನ ಚರಿತ್ರೆಯನ್ನು ಸಂಕ್ಷೇಪವಾಗಿ ಸಮೀಕ್ಷಿಸೋಣ.

ರಾಜಕೀಯವಾಗಿ ಪ್ರತ್ಯೇಕ ಅಸ್ತಿತ್ವ ಹೊಂದಿದ ಆಧುನಿಕ ಕೊಡಗಿನ ಚರಿತ್ರೆ 1633ರಲ್ಲಿ ವೀರರಾಜ ನೆಂಬ ಬಿದನೂರಿನ ರಾಜಪುತ್ರನು ಮಡಿಕೇರಿಗೆ ಸುಮಾರು ಏಳು ಮೈಲಿ ದೂರದಲ್ಲಿರುವ ಹಾಲೇರಿಯಲ್ಲಿ (ಈಗ ಇದು ಒಂದು ಸಣ್ಣ ಹಳ್ಳಿ) ಒಂದು ರಾಜವಂಶವನ್ನು ಸ್ಥಾಪಿಸಿದಂದಿನಿಂದ ಪ್ರಾರಂಭವಾಗುತ್ತದೆ. ಕೊಡಗಿನ ರಾಜ್ಯಭಾರವನ್ನು 1834ರಲ್ಲಿ ಬ್ರಿಟಿಷರು ವಹಿಸಿಕೊಳ್ಳುವ ವರೆಗೂ ಈ ವಂಶದ ರಾಜರು ಕೊಡಗನ್ನು ಆಳುತ್ತಿದ್ದರು. ಇವರು ವೀರಶೈವರು. ಮೊದಲ ಇಬ್ಬರು ರಾಜರು ವೀರರಾಜ ಮತ್ತು ಅಪ್ಪಾಜಿರಾಜರ ಆಳಿಕೆಯಲ್ಲಿ ಸ್ಥಳೀಯ ಪಾಳೆಯಗಾರರನ್ನು ಅಡಗಿಸಿ ಅಧೀನ ಪಡಿಸಿಕೊಳ್ಳಲಾಯಿತು. ರಾಜರ ಅಧಿಕಾರ ಕೊಡಗಿನಲ್ಲೆಲ್ಲ ಸಮಗ್ರವಾಗಿ ವ್ಯಾಪಿಸಿತು. ಮುಂದಿನ ದೊರೆ ಮುದ್ದು ರಾಜನು (1633-1687) ಮಡಿಕೇರಿಯಲ್ಲಿ ಅರಮನೆಯನ್ನೂ ಅದರ ಸುತ್ತ ಕೋಟೆಯನ್ನೂ ಕಟ್ಟಿ ಅದನ್ನು ರಾಜಧಾನಿಯಾಗಿ ಮಾಡಿಕೊಂಡನು. ಅವನ ಮರಣಾನಂತರ ಅವನ ಹಿರಿಯ ಮಗ ಸಿರಿಬಾಯ ದೊಡ್ಡವೀರಪ್ಪ ಪಟ್ಟಕ್ಕೆ ಬಂದನು. ಉಳಿದಿಬ್ಬರು ಮಕ್ಕಳು ಅಪ್ಪಾಜಿರಾಜ ಮತ್ತು ನಂದರಾಜರಿಗೆ ಹಾಲೇರಿ ಮತ್ತು ಹೊರಮಲೆ ಜಹಗೀರಿಗಳು ದೊರೆತವು.

ದೊಡ್ಡವೀರಪ್ಪನ ಆಳಿಕೆಯಲ್ಲಿ (1687–1736) ಕೊಡಗುರಾಜ್ಯದಲ್ಲಿ ಬಹುವೇಗದಿಂದ ಅಭಿವೃದ್ಧಿ ಕಾರ್ಯಗಳು ನಡೆದವು. ಅವನು ನಂಜರಾಜಪಟ್ಟಣವನ್ನು ಸ್ಥಾಪಿಸಿದನು. ಚಿಕ್ಕದೇವರಾಜ ಒಡೆಯರ ಕೈಕೆಳಗಿನ ಮೈಸೂರು ಸೈನ್ಯ ಪೆರಿಯಾಪಟ್ಟಣವನ್ನು ಆಕ್ರಮಿಸಿಕೊಂಡ ಮೇಲೆ, ಅಲ್ಲಿಂದ

ಗಡಿಪಾರಾಗಿ ಹೋದ ದೊರೆ ನಂಜರಾಜನಿಗೆ ಆಶ್ರಯ ಕೊಡುವುದಕ್ಕಾಗಿ ಅದು ಸ್ಥಾಪಿತವಾಯಿತು. ಕೋಟಂಗಡಿಯ ವೀರವರ್ಮನ ನಾಯರ್ ಸೈನ್ಯವನ್ನೆದುರಿಸಿ ಕೊಡಗು ರಾಜ್ಯವನ್ನು ಸಮರ್ಥವಾಗಿ ರಕ್ಷಿಸಿಕೊಂಡನು. ನೆರೆಯ ಪ್ರದೇಶ ಏಳುಸಾವಿರ ಸೀಮೆಯನ್ನು ಅವನು ಆಕ್ರಮಿಸಿ ತನ್ನ ರಾಜ್ಯಕ್ಕೆ ಸೇರಿಸಿಕೊಂಡನು. ಇದು ಕೊಡಗಿನ ಉತ್ತರದಲ್ಲಿ ಮೈಸೂರು ರಾಜ್ಯಕ್ಕೆ ಸೇರಿದ್ದ ಪ್ರದೇಶ. ಹೀಗೆ ಸೇರಿಸಿಕೊಂಡ ಮೇಲೆ ಮೈಸೂರು ರಾಜ್ಯಭಂಡಾರಕ್ಕೆ ಆ ಪ್ರದೇಶದ ಉತ್ಪತ್ತಿಯಲ್ಲಿ ಅರ್ಧವನ್ನು ಕೊಡುವುದಾಗಿ ಒಪ್ಪಿಕೊಂಡನು. ಬಿದನೂರಿನ ಸೋಮಶೇಖರ ನಾಯಕನಿಗೂ ಮಲಬಾರಿನಲ್ಲಿರುವ ಚಿರಕ್ಕಲ್ಲಿನ ವೀರವರ್ಮ ರಾಜನಿಗೂ ನಡೆದ ಯುದ್ಧದಲ್ಲಿ ದೊಡ್ಡವೀರಪ್ಪನು ಮಧ್ಯಸ್ಥನಾಗಿ ವರ್ತಿಸಿದನು. ಆಗ ನಡೆದ ಒಪ್ಪಂದದ ಪ್ರಕಾರ 18 ಲಕ್ಷ ರೂಪಾಯಿಗಳನ್ನು ನಾಯಕನಿಗೆ ರಾಜನು ಕೊಡಬೇಕಾಗಿ ಬಂದಾಗ ದೊಡ್ಡವೀರಪ್ಪನು ರಾಜನಿಗೆ ಹೊಣೆಯಾಗಿ ನಿಂತನು. ಈ ಹಣದಲ್ಲಿ ಅರ್ಧ ಭಾಗ ಆ ಕೂಡಲೇ ಸಂದಾಯವಾಯಿತು. ಆದರೆ ಬಿದನೂರಿನ ಸೈನ್ಯ ಹಿಂದಿರುಗಿ ಹೋದ ಮೇಲೆ ಉಳಿದರ್ಧವನ್ನು ಕೊಡಲೇ ಇಲ್ಲ. ಆದರೆ ದೊಡ್ಡವೀರಪ್ಪನು ತಾನು ಹೊಣೆ ಹೊತ್ತ ಪ್ರಕಾರ ತನ್ನ ಸ್ವಂತ ಭಂಡಾರದಿಂದ ಆ ಮೊತ್ತವನ್ನು ಕಳಿಸಿಕೊಟ್ಟನು. ಇದರಿಂದ ನಾಯಕನಿಗೆ ಪರಮ ಸಂತೋಷವಾಯಿತು; ತುಳುನಾಡಿನ ಕೆಲವು ಹಳ್ಳಿಗಳನ್ನು ಅವನಿಗೆ ಜಹಗೀರು ಕೊಟ್ಟನು; ಅದಕ್ಕೆ 'ಅಮರ ಜಹಗೀರು' ಎಂದು ಹೆಸರು. ಅಮರದ ಪಕ್ಕದ ಕೆಲವು ಹಳ್ಳಿಗಳನ್ನು ದೊಡ್ಡವೀರಪ್ಪನು ನಾಯಕನಿಂದ ಕೊಂಡುಕೊಂಡನು. ತಲಕಾವೇರಿಯಲ್ಲಿ ಕಾವೇರೀದೇವಿಯ ಅಭಿಷೇಕಕ್ಕಾಗಿ ನಿರಂತರವಾಗಿ ತೆಂಗಿನಕಾಯಿ ಒದಗಿಸುವುದಕ್ಕೋಸ್ಕರ ಈ ವ್ಯಾಪಾರ. ಅಮರ ಮತ್ತು ಸುಳ್ಯ—ಈ ಎರಡು ತಾಲೂಕುಗಳೂ 1834ರ ವರೆಗೂ ಕೊಡಗಿನಲ್ಲೇ ಉಳಿದಿದ್ದವು.

ದೊಡ್ಡವೀರಪ್ಪನು 49 ವರ್ಷ ಕಾಲ ಬಹು ಸಮರ್ಥವಾಗಿ ಮತ್ತು ಘಟನಾವಳಿಗಳಿಂದ ತುಂಬಿದಂತೆ ರಾಜ್ಯಭಾರಮಾಡಿ ತನ್ನ 78ನೆ ವಯಸ್ಸಿನಲ್ಲಿ ಮರಣ ಹೊಂದಿದನು. ಆತ ಅತ್ಯಂತ ಪ್ರಾಮಾಣಿಕ, ಶೂರ ಮತ್ತು ಸರ್ವವ್ಯವಹಾರಗಳಲ್ಲಿಯೂ ನೇರ ನಡೆವಳಿಯುಳ್ಳವನು. ಆದರೆ, ಅವಿಧೇಯತೆ ತೋರಿದ ತಪ್ಪಿತಸ್ಥರ ವಿಷಯದಲ್ಲಿ ತುಂಬ ನಿಷ್ಠುರನಾಗಿರುತ್ತಿದ್ದನು; ನಿರ್ದಾಕ್ಷಿಣ್ಯವಾಗಿ ನಡೆದುಕೊಳ್ಳುತ್ತಿದ್ದನು. ತನ್ನ ಹೆಂಡತಿಯನ್ನು ಹಿಂಸೆಮಾಡಿ ಕ್ರೂರವಾಗಿ ನಡಸಿಕೊಂಡನೆಂದು ಸ್ವಂತ ಮಗ ಅಪ್ಪಾಜಿರಾಜನನ್ನೇ ಸೆರೆಗೆ ನೂಕಲು ಅವನು ಹಿಂಜರಿಯಲಿಲ್ಲ.

ದೊಡ್ಡವೀರಪ್ಪನ ಮೊಮ್ಮಗ ಚಿಕ್ಕವೀರಪ್ಪನು (1736—1766) ತನ್ನ ಚಿಕ್ಕಂದಿನ ದಿನಗಳನ್ನು ಸೆರೆಮನೆಯಲ್ಲಿ ಕಳೆದಿದ್ದನು. ಅದರಿಂದ ದೈಹಿಕವಾಗಿ ರೋಗಿಷ್ಠನೂ ಮಾನಸಿಕವಾಗಿ ದುರ್ಬಲನೂ ಆಗಿದ್ದನು. ಅವನ ಆಳಿಕೆ ಸೋಲಿನಲ್ಲಿ ಪರ್ಯವಸಾನವಾಯಿತು. ಈ ಸಮಯದಲ್ಲೆ ಹೈದರ್ ಅಲಿ ಸುತ್ತಮುತ್ತಣ ಪ್ರದೇಶಗಳ ಮೇಲೆ ಕಣ್ಣು ಹಾಕತೊಡಗಿದನು. 1763ರಲ್ಲಿ ಬಿದನೂರನ್ನು ಗೆದ್ದು ವಶಪಡಿಸಿಕೊಂಡ ಮೇಲೆ, ಹೈದರನು ಕೊಡಗಿನ ಮೇಲೂ ತನ್ನ ಅಧಿಕಾರ ವ್ಯಾಪ್ತಿಯುಂಟೆಂದು ಹೇಳತೊಡಗಿದನು. ಏಳುಸಾವಿರ ಸೀಮೆಯ 'ಬೆಟ್ಟತ್ತಿ' ಮಲ್ಲಿಪಟ್ಟಣ ಮತ್ತು ಹೊಸೂರು ಹೋಬಳಿಗಳನ್ನು ತನಗೆ ಒಪ್ಪಿಸಿಕೊಡಬೇಕೆಂದು ಅವನು ಚಿಕ್ಕವೀರಪ್ಪನಿಗೆ ಹೇಳಿಕಳಿಸಿದನು. ಕೊಡಗಿನ ಆ ದುರ್ಬಲ ದೊರೆ ಆ ಕೂಡಲೆ ಅದರಂತೆ ಒಪ್ಪಿಸಿಬಿಟ್ಟನು. ಇಷ್ಟಕ್ಕೆ ತೃಪ್ತನಾಗದೆ ಹೈದರ್ 1765ರಲ್ಲಿ ಫಸುಲ್ಲಾಖಾನನ ನಾಯಕತ್ವದಲ್ಲಿ ಕೊಡಗಿನ ಮೇಲೆ ದಾಳಿಮಾಡಲು ಒಂದು ಸೈನ್ಯವನ್ನು ಕಳಿಸಿದನು. ಆದರೆ ಈ ಸೈನ್ಯ ಸೋತು ಹೋಯಿತು. ಈ ನಡುವೆ ಚಿಕ್ಕವೀರಪ್ಪನು ಮಡಿದು, ಅವನಿಗೆ ಮಕ್ಕಳಿಲ್ಲದ್ದರಿಂದ ಅವನ ಚಿಕ್ಕಪ್ಪನ ಮಗ ಪಟ್ಟಕ್ಕೆ ಬಂದನು.

ಹಾಲೇರಿಯ ಮುದ್ದುರಾಜ ಮತ್ತು ಹೊರಮಲೆಯ ಮುದ್ದೈಯ ರಾಜ—ಈ ಇಬ್ಬರು ದೊರೆಗಳೂ

ದಾಯಾದಿಗಳಾದರೂ ಪರಸ್ಪರ ವಿಶ್ವಾಸಿಗಳಾಗಿದ್ದು ಹಿತವಾಗಿ ರಾಜ್ಯಭಾರ ಮಾಡಿದರು (1766-1770). ಹೈದರನನ್ನು ಎದುರಿಸುವುದಕ್ಕೆ ಅವರು ಪರಿಣಾಮಕಾರಿ ಕ್ರಮಗಳನ್ನು ಕೈಕೊಂಡರು. ಫರ್ಸುಲ್ಲಾಖಾನನ ಕೈಕೆಳಗೆ ಏಳುಸಾವಿರ ಸೀಮೆಯಲ್ಲಿ ಬಂದು ನೆಲಸಿದ್ದ ಮೈಸೂರು ದಂಡನ್ನು ಹೊಡೆದಟ್ಟುವುದಕ್ಕಾಗಿ ಮುದ್ದುರಾಜನು ತನ್ನ ತಮ್ಮ ಲಿಂಗರಾಜನನ್ನು ಕಳಿಸಿದನು. ಮೈಸೂರು ಸೈನ್ಯವನ್ನು ಚೆನ್ನಾಗಿ ಹಣ್ಣು ಮಾಡಲಾಯಿತು. ಆಗ ಹೈದರನು ತಡಮಾಡದೆ ಕೊಡಗಿನ ರಾಜನೊಡನೆ ಸಂಧಿ ಮಾಡಿಕೊಂಡು ಪಂಜೆ–ಬೆಳ್ಳಾರೆಸೀಮೆಯನ್ನು ಅವರಿಗೆ ಬಿಟ್ಟುಕೊಟ್ಟನು. 1770ರ ಹೊತ್ತಿಗೆ ದುರದೃಷ್ಟವಶದಿಂದ ಈ ಇಬ್ಬರು ರಾಜರೂ ಒಬ್ಬರಾದ ಮೇಲೊಬ್ಬರಂತೆ ಬಹು ಬೇಗ ಮರಣಹೊಂದಿದರು. ಆ ಮೇಲೆ ಒಂದು ಖಿನ್ನತೆಯ ಕಾಲ ಪ್ರಾರಂಭವಾಯಿತು; ಹಾಲೇರಿ ಮತ್ತು ಹೊರಮಲೆ ವಂಶಗಳವರಲ್ಲಿ ಕಲಹಗಳು ಮೊದಲಾದವು. ಮೊದಲು, ಹೊರಮಲೆಯ ಮುದ್ದೈಯರಾಜನ ಮೊಮ್ಮಗ ದೇವಪ್ಪರಾಜನು ದೊರೆಯಾದನು. ಅವನು ನಾಲ್ಕು ವರ್ಷ ರಾಜ್ಯವಾಳಿದನು. ಹಾಲೇರಿಯ ಲಿಂಗರಾಜ, ಅವನ ಮಗ ವೀರರಾಜ, ಮತ್ತು ಅವನ ಸೋದರನ ಮಕ್ಕಳು—ಎಲ್ಲರೂ ಕೊಡಗಿನ ಸಿಂಹಾಸನವನ್ನು ಮತ್ತೆ ಪಡೆದುಕೊಳ್ಳುವುದರಲ್ಲಿ ಹೈದರನ ಸಹಾಯವನ್ನು ಬಯಸಿ ಐಗೂರಿಗೆ ಹೋದರು. ಕೊಡಗಿನ ಮೇಲೆ ದಾಳಿಮಾಡುವುದಕ್ಕೆ ಹೈದರ ಕೂಡಲೆ ಒಪ್ಪಿಕೊಂಡನು; 1773 ರಲ್ಲಿ ಕಷ್ಟಪಟ್ಟು ಕೊಡಗಿನ ಸೈನ್ಯವನ್ನು ಸೋಲಿಸಿದನು. ಸೋಲಿಸಿದ ಮೇಲೆ ಮುದ್ದರಾಜನ ಮಗ ಅಪ್ಪಾಜಿರಾಜನು ಕೊಡಗಿನ ದೊರೆಯಾದನು. ಅಪ್ಪಾಜಿರಾಜನು ಹೈದರನಿಗೆ ವರ್ಷಕ್ಕೆ 24,000 ರೂಪಾಯಿಯಂತೆ ಪೊಗದಿ ಕೊಡುತ್ತಿರಬೇಕೆಂದು ಒಪ್ಪಂದವಾಯಿತು. ಆಗ ಕೋಟೆಗಡಿಯ ರಾಜನ ಅಧೀನದಲ್ಲಿದ್ದ ವೈನಾಡನ್ನು ಮತ್ತೆ ಗೆದ್ದುಕೊಳ್ಳುವುದರಲ್ಲಿ ಲಿಂಗರಾಜನಿಗೆ ಹೈದರನ ಸಹಾಯ ದೊರೆಯಿತು. ಲಿಂಗರಾಜನು ಕಳಿಸಿದ ಸೇನೆಗೆ ಸೋಲಾಯಿತು; ಅದರ ಮುಂದಾಳು ಗಳಾಗಿ ಹೋಗಿದ್ದ ರಾಜಪುತ್ರರಿಬ್ಬರೂ ರಣದಲ್ಲಿ ಮಡಿದರು.

1776ರಲ್ಲಿ ಅಪ್ಪಾಜಿರಾಜನು ಮರಣಹೊಂದಿದ ಮೇಲೆ, ಲಿಂಗರಾಜನು ಕೊಡಗಿನ ದೊರೆಯಾದನು. ಹೈದರನು ಏಳುಸಾವಿರ ಸೀಮೆಯ ಅಮರ, ಸುಳ್ಯ, ಪಂಜೆ, ಮತ್ತು ಬೆಳ್ಳಾರೆ ಹೋಬಳಿಗಳನ್ನು ವಶಪಡಿಸಿಕೊಂಡನು. ದುರದೃಷ್ಟವಶದಿಂದ ಲಿಂಗರಾಜನು 1780ರಲ್ಲಿ ಮಹಾದೇವಪುರದಲ್ಲಿ ಸತ್ತು ಹೋದನು. ಅವನಿಗೆ ಇಬ್ಬರು ಗಂಡುಮಕ್ಕಳು; ಅಲ್ಪ ವಯಸ್ಸಿನವರು. ಅವರು ಪ್ರಾಪ್ತವಯಸ್ಕರಾಗುವ ವರೆಗೂ ಕೊಡಗು ರಾಜ್ಯದ ವ್ಯವಹಾರಗಳನ್ನೆಲ್ಲಾ ತಾನೇ ನಡಸುತ್ತಿದ್ದು ಅವರು ವಯಸ್ಸಿಗೆ ಬಂದ ಮೇಲೆ ಅವರಿಗೆ ಮತ್ತೆ ವಹಿಸಿಕೊಡುವುದಾಗಿ ಹೇಳಿ ಹೈದರನು ಅವರ ರಕ್ಷಕನಾಗಿ ರಾಜ್ಯಾಧಿಕಾರವನ್ನು ವಹಿಸಿಕೊಂಡನು. ಹಿಂದಿನ ಕೊಡಗು ರಾಜರ ನಂಬಿಕೆಯ ಕರಣಿಕ ಸುಬ್ಬರಸಯ್ಯನೆಂಬ ಬ್ರಾಹ್ಮಣನು ರಾಜ್ಯಾಡಳಿತವನ್ನು ನೋಡಿಕೊಳ್ಳುವಂತೆ ನೇಮಿಸಿದನು.

ಜನರು ಅಸಮಾಧಾನಗೊಂಡು 1782 ನೆಯ ಜೂನ್ ತಿಂಗಳಲ್ಲಿ ದಂಗೆಯೆದ್ದರು. ಆಗ ಹೈದರನು ಆರ್ಕಾಟ್‌ಸಮೀಪದಲ್ಲಿ ಬ್ರಿಟಿಷರೊಡನೆ ಯುದ್ಧದಲ್ಲಿ ತೊಡಗಿದ್ದನು. ದಂಗೆಕೋರರಿಗೆ ಒಗ್ಗೂಡುವುದಕ್ಕೆ ಅನುಕೂಲವಾದ ಆಶ್ರಯಸ್ಥಾನ ದೊರೆಯದಿರಲೆಂಬ ಉದ್ದೇಶದಿಂದ ಕೊಡಗಿನ ರಾಜಪುತ್ರರನ್ನು ಹಾಸನ ಜಿಲ್ಲೆಯ ಅರಕಲಗೂಡು ತಾಲೂಕಿನ ಗೋರೂರಿಗೆ ಸಾಗಿಸಬೇಕೆಂದು ಅಪ್ಪಣೆ ಕಳಿಸಿದನು.

ಹೈದರನ ಅನಂತರ 1782ರಲ್ಲಿ ಟಿಪ್ಪು ಸುಲ್ತಾನನು ಅಧಿಕಾರಕ್ಕೆ ಬಂದನು. ಅವನು ಕೊಡಗಿನ ದಂಗೆಯನ್ನು ಅಡಗಿಸುವುದಕ್ಕಾಗಿ ಹೈದರಾಲಿ ಬೇಗ್ ಎಂಬವನನ್ನು ದಂಡಿನೊಡನೆ ಕಳಿಸಿದನು. ಆದರೆ, ಮೈಸೂರು ದಂಡನ್ನು ಸೋಲಿಸಲಾಯಿತು.

ಆ ಮೇಲೆ ಟಿಪ್ಪು ಸ್ವತಃ ಕೊಡಗಿನ ಮೇಲೆ ದಂಡೆತ್ತಿಬಂದು ದಂಗೆಯನ್ನಡಗಿಸಿದನು. ಆದರೆ,

ಟಿಪ್ಪು ಕೊಡಗಿನಿಂದ ಬೆನ್ನು ತಿರುಗಿಸುವುದೇ ತಡ, ಮತ್ತೆ ಕೊಡಗರು ದಂಗೆಯೆದ್ದರು. 1785 ನೆಯ ಅಕ್ಟೋಬರಿನಲ್ಲಿ ಟಿಪ್ಪು ಸ್ವತಃ ಕೊಡಗಿನ ಮೇಲೆ ದಾಳಿಮಾಡಿ, ಮಡಿಕೇರಿಗೆ ಬಂದು ನಿಂತನು. ಅಲ್ಲಿಂದ ಕೊಡಗರನ್ನು ಅಡಗಿಸುವುದಕ್ಕಾಗಿ ಎಲ್ಲ ಕಡೆಗೂ ದಂಡಿನ ತುಕಡಿಗಳನ್ನು ಕಳಿಸಿದನು. ಕೊಡಗರು ಅಪರಿಮಿತ ಧೈರ್ಯ ಸಾಹಸಗಳಿಂದ ಹೋರಾಡಿದರು; ಆದರೆ ಕಡೆಯಲ್ಲಿ ಅವರು ಸೋತುಹೋದರು. ಬಹು ಜನ ಸೆರೆಸಿಕ್ಕಿದರು. ಬಳ್ಳಾರಿ ಜಿಲ್ಲೆಯ ಆದವಾನಿಯಿಂದ ಹೊಸ ಜನರನ್ನು ಕರೆತಂದು ಅವರಿಗೆ ವ್ಯವಸಾಯಕ್ಕೆ ಉಚಿತವಾಗಿ ಭೂಮಿಯನ್ನು ಕೊಟ್ಟು ಅವರನ್ನು ಕೊಡಗಿನಲ್ಲಿ ನೆಲಸಲು ಅವಕಾಶ ಮಾಡಿಕೊಡಲಾಯಿತು. ಬೆಪ್ಪುನಾಡು ಮತ್ತು ಭಾಗಮಂಡಲಗಳ ಮಡಿಕೇರಿ, ಕುಶಾಲನಗರ ಮತ್ತು ಅರಮೇರಿಗಳಲ್ಲಿ ಹೊಸತಾಗಿ ಸೈನಿಕ ಕೋಟೆಗಳನ್ನು ಕಟ್ಟಿಸಿ ಅಲ್ಲಿ ಬಲವಾದ ಸೈನ್ಯವನ್ನಿಡಲಾಯಿತು

1789ರ ಆದಿಭಾಗದಲ್ಲಿ ಕೊಡಗರು ಮೈಸೂರು ಸರ್ಕಾರದ ವಿರುದ್ಧ ಮತ್ತೊಮ್ಮೆ ದಂಗೆಯೆದ್ದರು. ಲಿಂಗರಾಜನ ಹಿರಿಯ ಮಗ ವೀರರಾಜನು ಪೆರಿಯ ಪಟ್ಟಣದ ಸೆರೆಯಲ್ಲಿದ್ದವನು 1789ರ ಡಿಸೆಂಬರ್ ಮಧ್ಯಭಾಗದಲ್ಲಿ ಒಂದು ದಿನ ಮಧ್ಯರಾತ್ರಿ ಸಮಯದಲ್ಲಿ ಕುಟುಂಬಸಮೇತ ಸೆರೆಯಿಂದ ತಪ್ಪಿಸಿಕೊಂಡು ಹೋಗಿ ಕಿಗ್ಗಟ್ಟನಾಡಿನ ಕುರ್ಚಿಯಲ್ಲಿ ಆಶ್ರಯಪಡೆದನು. ತಮ್ಮ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದ ಜನ ಒಗ್ಗೂಡುವುದಕ್ಕೆ ಅವನು ಕೇಂದ್ರಸ್ಥಾನವಾದನು ; ಅವರ ನಾಯಕನಾದನು. ಕಾಲಹರಣ ಮಾಡದೆ ಅವನೊಂದು ಸೈನ್ಯವನ್ನು ಕೂಡಿಸಿದನು. ಆದರೆ, ಕೋಟಂಗಡಿಯ ರಾಜನು ಶೀಘ್ರದಲ್ಲೇ ವೀರರಾಜನನ್ನು ಸೆರೆಹಿಡಿದನು. ಆಗ ವೀರರಾಜನು ಕಿಗ್ಗಟ್ಟನಾಡು, ಅಮ್ಮತ್ತಿನಾಡು, ಎಡೆನಾಲ್ಕುನಾಡು—ಈ ಮೂರು ಅಮೂಲ್ಯವಾದ ಜಿಲ್ಲೆಗಳನ್ನು ಒಪ್ಪಿಸಿಕೊಟ್ಟಿರುವುದಾಗಿ ಪತ್ರಬರೆದುಕೊಟ್ಟು ಅವನಿಂದ ಬಿಡುಗಡೆ ಪಡೆದುಕೊಳ್ಳಬೇಕಾಯಿತು. ಇದರ ಜೊತೆಗೆ ವೈನಾಡಿನ ಮೇಲೆ ತನಗಿದ್ದ ವಿಶಿಷ್ಟಹಕ್ಕುಗಳನ್ನು ತೊರೆದಿರುವುದಾಗಿ ಬರೆದು ಕೊಟ್ಟು ಒಪ್ಪಂದಮಾಡಿಕೊಳ್ಳಬೇಕಾಯಿತು.

ಇದಾದ ಮೇಲೆ, ವೀರರಾಜನು ಮೈಸೂರು ಸೈನ್ಯವನ್ನೂ ಹೊಸತಾಗಿ ಬಂದು ನೆಲಸಿದ್ದ ವಲಸಿಗರನ್ನೂ ಹೊರದೂಡುವುದಕ್ಕೆ ಗಮನಹರಿಸಿದನು ; ಸಿದ್ದೇಶ್ವರದಲ್ಲಿ ತನ್ನ ಮುಖ್ಯ ನೆಲೆಯನ್ನು ಸ್ಥಾಪಿಸಿಕೊಂಡು ಅಲ್ಲಿಂದ ಮೈಸೂರು ಪ್ರದೇಶದೊಳಕ್ಕೆ ನುಗ್ಗಿ ದಾಳಿಮಾಡತೊಡಗಿದನು. ವೀರರಾಜನನ್ನು ನಾಶಮಾಡುವುದಕ್ಕಾಗಿ ಟಿಪ್ಪು ದೊಡ್ಡ ಸೈನ್ಯ ಕಳಿಸಿದನು. ಮೈಸೂರಿಗರ ಸಹಾಯಕ್ಕೆ ಕೋಟಂಗಡಿಯಿಂದ ನಾಯರ್ ಸೈನ್ಯದ ಒಂದು ತುಕಡಿಯೂ ಬಂತು. ನಿಲುಗಡೆಯಿಲ್ಲದೆ ಒಂದೇ ಸಮನೆ ಬಿರುಸಾದ ಕಾಳಗ ನಡೆದು ಕಡೆಗೆ ಕೊಡಗಿನ ಸೇನೆ ಸೋತುಹೋಯಿತು. ಆಗ ಮಲಬಾರಿನಲ್ಲಿ ಒಂದು ದಂಗೆಯೆದ್ದಿತ್ತು. ಅದನ್ನು ಅಡಗಿಸುವುದಕ್ಕಾಗಿ ಮೈಸೂರು ಸೈನ್ಯ ಅತ್ತಕಡೆ ಸಾಗಿತು. ಆದರೆ, ಕೊಡಂತುರ ಕಣಿವೆಯಲ್ಲಿ ವೀರರಾಜನು ತಡೆದು ಎದುರಿಸಿದ್ದರಿಂದ ನಷ್ಟವನ್ನನುಭವಿಸಬೇಕಾಯಿತು. ಟಿಪ್ಪು ಇನ್ನಷ್ಟು ಸೈನ್ಯವನ್ನು ನೆರವಿಗಾಗಿ ಕಳಿಸಿಕೊಟ್ಟನು. ಹೆಗ್ಗಳ ಘಾಟಿಗೆ ಪ್ರವೇಶಿಸುವ ಪ್ರದೇಶದಲ್ಲಿ ಘೋರ ಯುದ್ಧವಾಗಿ ಅದರಲ್ಲಿ ಆ ನೆರವು ಸೈನ್ಯ ನಾಶವಾಯಿತು.

ಆ ಮೇಲೆ, ಮೊದಲಿಗಿಂತ ಹೆಚ್ಚು ಬಲವಾದ ಎರಡನೆಯ ಸೈನ್ಯವೊಂದನ್ನು ಕಳಿಸಲಾಯಿತು. 1789 ನೆಯ ಸಪ್ಟೆಂಬರಿನಲ್ಲಿ ಟಿಪ್ಪುವೇ ರಾಜಧಾನಿಯಿಂದ ಹೊರಟು ಕೊಡಗಿಗೆ ಪ್ರಯಾಣಮಾಡಿದನು. ಅವನ ಸೈನ್ಯಕ್ಕೆ ಮತ್ತೆ ಸೋಲಾಯಿತು. ಕುಶಾಲನಗರ, ಬೆಪ್ಪುನಾಡು, ಭಾಗಮಂಡಲ—ಈ ಮೂರು ಕೋಟೆಗಳು ವೀರರಾಜನ ಕೈವಶವಾದವು. ಆದರೆ ಟಿಪ್ಪುವಿಗೆ ಕೊಡಗಿನ ಮೇಲೆ ದಾಳಿ ನಡಸಲಾಗಲಿಲ್ಲ. ಏಕೆಂದರೆ, ಆಗ ಮಲಬಾರಿನಲ್ಲಿ ದಂಗೆಯ ಉರಿ ಹತ್ತಿ ಬೇಯುತ್ತಿದ್ದದ್ದರಿಂದ ಅಲ್ಲಿ ಟಿಪ್ಪುವಿರಬೇಕಾದ್ದು ಅತ್ಯಾವಶ್ಯಕವಾಗಿತ್ತು. ಮಲಬಾರಿನ ದಂಗೆಯನ್ನಡಗಿಸಿದನೋ ಇಲ್ಲವೋ, ಅಷ್ಟರಲ್ಲೇ ಇಂಗ್ಲಿಷರೊಡನೆ

ಯುದ್ಧ ಶುರುವಾಯಿತು. ಟಿಪ್ಪುವಿನ ಗಮನ ಬೇರೆ ಕಡೆ ತಿರುಗಿತು ; ಹೀಗೆ ಕೊಡಗು ಸೋಲದೆ ಸ್ವತಂತ್ರವಾಗಿಯೇ ಉಳಿಯಿತು.

ಆ ತರುವಾಯ ವೀರರಾಜನು ಅಮರ ಮತ್ತು ಸುಳ್ಯ ಜಾಗೀರುಗಳನ್ನು ಮತ್ತೆ ಗೆದ್ದುಕೊಳ್ಳಲೆಂದು ಹೊರಟನು. ಸುಲಭವಾಗಿ ಗೆದ್ದುಕೊಂಡನು. ಇನ್ನೊಂದು ಸೈನ್ಯವನ್ನು ಸಕಲೇಶಪುರ ಮತ್ತು ಕೊಣನೂರು ತಾಲೂಕುಗಳ ಒಳನುಗ್ಗಿ ಹಾವಳಿ ಮಾಡುವುದಕ್ಕೆಂದು ಕಳಿಸಿಕೊಟ್ಟನು. ಕೊಡಗಿನಲ್ಲಿದ್ದ ಮೈಸೂರು ಸೈನ್ಯಕ್ಕೆ ಆಹಾರ ಸಾಮಗ್ರಿ ಮೊದಲಾದ ಆವಶ್ಯಕ ವಸ್ತುಗಳ ಸರಬರಾಜಾಗಲಿ ನೆರವು ಸೈನ್ಯವಾಗಲಿ ಬರುವುದಕ್ಕೆ ಅವಕಾಶವಿಲ್ಲದಂತೆ ಸಂಪರ್ಕ ಸೌಲಭ್ಯಗಳನ್ನು ಕಡಿದು ಹಾಕುವುದಕ್ಕೆ ತಕ್ಕ ಏರ್ಪಾಡು ಮಾಡಿದನು.

ವೀರರಾಜನು ಮೈಸೂರು ಸೈನ್ಯದೊಡನೆ ಕಾಳಗದಲ್ಲಿ ತೊಡಗಿದ್ದ ಸಂದರ್ಭವನ್ನು ಉಪಯೋಗ ಪಡಿಸಿಕೊಂಡು ಅವನ ಕುಲ ವೈರಿಯಾದ ಕೋಟಂಗಡಿಯ ರಾಜನು, ಕುರ್ಚಿಯಲ್ಲಿದ್ದ ವೀರರಾಜನ ಪಕ್ಷದವರನ್ನೆಲ್ಲಾ ಕೊಂದು ಬರುವಂತೆ ಹೇಳಿ, ಸುಮಾರು 200 ಮಂದಿ ನಾಯರುಗಳನ್ನೂ ಮುಳ್ಳುಕುರುಬರನ್ನೂ ಗುಟ್ಟಿನಲ್ಲಿ ಕಳಿಸಿದನು. ವೀರರಾಜನ ಇಬ್ಬರು ರಾಣಿಯರು, ಅವನ ಮಲ ಸೋದರನ ಒಬ್ಬ ಮಗ, ಸುಮಾರು ಇಪ್ಪತ್ತು ಮಂದಿ ಪರಿವಾರದವರು–ಇಷ್ಟು ಮಂದಿಯೂ ಕಗ್ಗೊಲೆಗೆ ತುತ್ತಾದರು. ಬಹು ಬೆಲೆಯ ಅಪಾರ ಆಭರಣಗಳು ಲೂಟಿಯಾದವು.

1790ರಲ್ಲಿ ಮೂರನೆಯ ಆಂಗ್ಲೋ-ಮೈಸೂರು ಯುದ್ಧ ಪ್ರಾರಂಭವಾದಾಗ, ತಲಚೇರಿಯಲ್ಲಿದ್ದ ಇಂಗ್ಲಿಷ್ ಮುಖಂಡ ರಾಬರ್ಟ್ ಟೇಯ್ಲರನು ಕೊಡಗಿನ ರಾಜನೊಡನೆ ಸಂಧಾನ ಪ್ರಾರಂಭಿಸಿದನು. ಟಿಪ್ಪು ಮತ್ತು ಅವನ ಮಿತ್ರರನ್ನು ಶತ್ರುಗಳೆಂದು ಗಣಿಸುವುದು, ಇಂಗ್ಲಿಷರಿಗೆ ಆವಶ್ಯಕ ಸಾಮಗ್ರಿ ಒದಗಿಸುವುದು, ತನ್ನ ರಾಜ್ಯದಲ್ಲಿ ಅವರಿಗೆ ವ್ಯಾಪಾರ ಸೌಕರ್ಯಗಳನ್ನು ಕೊಡುವುದು, ಇಂಗ್ಲಿಷರು ಹೊರತು ಬೇರೆ ಯಾವ ಯೂರೋಪಿಯನ್ ಜನರೊಡನೆಯೂ ಸಂಪರ್ಕ ಇಟ್ಟುಕೊಳ್ಳದೆ ಇರುವುದು– ಈ ಕರಾರುಗಳಿಗೆ ರಾಜನು ಒಪ್ಪಿಕೊಂಡನು. ಇದಕ್ಕೆ ಬದಲಾಗಿ ಕಂಪನಿಯು ಕೊಡಗಿನ ಸ್ವಾತಂತ್ರ್ಯವನ್ನು ರಕ್ಷಿಸುವುದಾಗಿ ಖಾತರಿ ಕೊಡುವುದಕ್ಕೆ ಒಪ್ಪಿಕೊಂಡಿತು.

ಕೊಡಗಿನ ಮೂಲಕ ಇಂಗ್ಲಿಷ್ ಸೈನ್ಯ ಮುಂದುವರಿದು ಬರುತ್ತಿರುವ ಸುದ್ದಿ ತಲಪಿದಾಗ ಟಿಪ್ಪು ಆ ಸೈನ್ಯದ ಮುನ್ನಡೆಯನ್ನು ಪೆರಿಯಪಟ್ಟಣದ ಬಳಿ ತಡೆಯುವುದಕ್ಕಾಗಿ ಒಂದು ಸೈನ್ಯವನ್ನು ಕಳಿಸಿದನು. ಆದರೆ ಮುನ್ನುಗ್ಗಿ ಬರುತ್ತಿದ್ದ ಬ್ರಿಟಿಷ್ ಸೈನ್ಯದ ದಾಳಿಯಲ್ಲಿ ಪೆರಿಯಪಟ್ಟಣ ಸುಲಭವಾಗಿ ಬಿದ್ದುಹೋಯಿತು. ಕದನ ವಿರಾಮಗೊಂಡದ್ದರಿಂದಲೂ ಮುಂಗಾರು ಮಳೆ ಪ್ರಾರಂಭವಾದ್ದರಿಂದಲೂ ಇಂಗ್ಲಿಷರು ತಲಚೇರಿಗೆ ಹಿಂದಿರುಗಿ ಹೋದರು. ಈ ವಿರಾಮ ಕಾಲದಲ್ಲಿ ಇಂಗ್ಲಿಷರ ಸಹವಾಸವನ್ನು ಬಿಟ್ಟುಬಿಡುವಂತೆ ರಾಜನ ಮನವೊಲಿಸಲು ಟಿಪ್ಪು ಪ್ರಯತ್ನ ಮಾಡಿದನು. ಕಾದಿರ್ ಖಾನ್ ಖೈಸ್ಗಿ ಎಂಬ ರಾಜನ ಸ್ನೇಹಿತನನ್ನು ಅವನ ಬಳಿ ಕಳಿಸಿದನು. ಇಂಗ್ಲಿಷರನ್ನು ಸೋಲಿಸುವುದಕ್ಕೆ ನೆರವಾದರೆ, ರಾಜನಿಗೆ ಹೆಗ್ಗಡದೇವನಕೋಟೆ, ಪೆರಿಯಪಟ್ಟಣ, ಕೊಣನೂರು, ಮತ್ತು ಅರಕಲಗೂಡು ತಾಲೂಕುಗಳನ್ನು ವಹಿಸಿಕೊಡುವುದಾಗಿ ಮಾತುಕೊಟ್ಟು, ಆ ಬಗ್ಗೆ ತಾನೂ ಪೂರ್ಣಯ್ಯನವರೂ ಪತ್ರಗಳನ್ನು ಬರೆದು ಕೊಟ್ಟು ಅವನ ಸಂಗಡ ಕಳಿಸಿದನು. ಆದರೆ ವೀರರಾಜನು ಅದಕ್ಕೆ ತಕ್ಕ ಪ್ರತಿಕ್ರಿಯೆ ತೋರಿಸಲಿಲ್ಲ.

ಇಂಗ್ಲಿಷ್ ಸೈನ್ಯ ಮಿತ್ರರಾಜ್ಯವಾದ ಕೊಡಗಿನ ಮೂಲಕ ಪ್ರಯಾಣಮಾಡುತ್ತ 1791ರ ನವೆಂಬರಿನಲ್ಲಿ ಸಿದ್ಧೇಶ್ವರದ ಬಳಿ ಬಂದು ಬೀಡುಬಿಟ್ಟಿತು. ಎಡೆನಾಲ್ಕುನಾಡಿನ ಬೆಟೋಳಿಯಲ್ಲಿ

ವೀರರಾಜನು ಬಂದು ಅಬರ್‌ಕ್ರೋಂಬಿಯನ್ನು ಕೂಡಿಕೊಂಡನು. ಆ ಭೇಟಿಯ ನೆನಪಿಗಾಗಿ ಆ ಸ್ಥಳದಲ್ಲಿ 1792ರಲ್ಲಿ ಒಂದು ಪಟ್ಟಣವನ್ನು ಕಟ್ಟಿಸಿ ಅದಕ್ಕೆ ವೀರರಾಜಪೇಟೆ ಎಂದು ಹೆಸರಿಟ್ಟನು. ಶ್ರೀರಂಗಪಟ್ಟಣದ ಹತ್ತಿರ ಸೆರೆಯಲ್ಲಿದ್ದ 12,000 ಕೊಡಗರು ಸೆರೆಯಿಂದ ಪಾರಾಗಿ ಕೊಡಗಿಗೆ ಹಿಂದಿರುಗಿ ಬಂದರು. ವೀರರಾಜನು ಅವರನ್ನು ಆದರದಿಂದ ಸ್ವಾಗತಿಸಿದನು. ಆಹಾರಧಾನ್ಯಗಳನ್ನು ನೀಡಿ, ಅವರಿಗೆ ಮನೆಗಳನ್ನು ಕಟ್ಟಿಸಿಕೊಟ್ಟನು.

ಮಿತ್ರ ಸೈನ್ಯಗಳು ಎಲ್ಲ ದಿಕ್ಕುಗಳಿಂದಲೂ ಶ್ರೀರಂಗಪಟ್ಟಣದ ಕಡೆ ನುಗ್ಗಿ ಬಂದವು. ರಾಜಧಾನಿಯ ಪತನ ಸನ್ನಿಹಿತವೆಂದು ಕಾಣತೊಡಗಿತು. ಆಗ, ಟಿಪ್ಪು ಯುದ್ಧವನ್ನು ಕೊನೆಗೊಳಿಸುವುದಕ್ಕಾಗಿ ಇಂಗ್ಲಿಷರೊಡನೆ ಸಂಧಾನಕ್ಕೆ ಹೇಳಿ ಕಳಿಸಿದನು.

ಸರ್ ರಾಬರ್ಟ್ ಅಬರ್‌ಕ್ರೋಂಬಿ 1793ರಲ್ಲಿ ಕಣ್ಣಾನೂರಿಗೆ ಬಂದನು. ರಾಜನಿಗೂ ಇಂಗ್ಲಿಷರಿಗೂ 1793ನೆಯ ಮಾರ್ಚಿ 31ರಂದು ಎರಡನೆಯ ಸ್ನೇಹದ ಒಪ್ಪಂದ ನಡೆಯಿತು. ವೀರರಾಜನು ತನ್ನ ಸ್ವಯಂಪ್ರೇರಣೆಯಿಂದಲೇ ವರ್ಷವೊಂದಕ್ಕೆ 24,000 ರೂಪಾಯಿಗಳಂತೆ ಇಂಗ್ಲಿಷರಿಗೆ ಕಪ್ಪ ಕೊಡುತ್ತ ಬರುವುದಾಗಿ ಒಪ್ಪಿಕೊಂಡನು. ಈಗ ವೀರರಾಜನಿಗೆ ಯಾವ ತೊಂದರೆಯೂ ಇರಲಿಲ್ಲ. ಎಡೆನಾಲ್ಕು ನಾಡಿನ ಸ್ವಂತ ಅರಮನೆಯಲ್ಲಿಯೇ ತನ್ನ ಪಟ್ಟಾಭಿಷೇಕ ಮಹೋತ್ಸವಕ್ಕೆ ಏರ್ಪಾಡು ಮಾಡಿದನು. ಅವನ ಮೊದಲನೆಯ ರಾಣಿಗೆ ಗಂಡುಮಕ್ಕಳಿರಲಿಲ್ಲವಾದ್ದರಿಂದ 1796ನೆಯ ಫೆಬ್ರುವರಿಯಲ್ಲಿ ಅವನು ಮಹಾದೇವಮ್ಮಾಜಿಯನ್ನು ಮದುವೆ ಮಾಡಿಕೊಂಡನು.

1799ರ ಫೆಬ್ರುವರಿಯಲ್ಲಿ ಟಿಪ್ಪುವಿನ ಮೇಲೆ ಯುದ್ಧ ಘೋಷಿಸಲಾಯಿತು. ಜನರಲ್ ಸ್ಟ್ಯೂಯರ್ಟ್ ಮತ್ತು ಜನರಲ್ ಹಾರ್ಟ್ಲಿ ಎಂಬ ಸೇನಾಪತಿಗಳ ನೇತೃತ್ವದಲ್ಲಿ ಬ್ರಿಟಿಷ್ ಸೈನ್ಯ ಹೆಗ್ಗಲ ಘಾಟಿನ ಮಾರ್ಗವಾಗಿ ಕೊಡಗಿಗೆ ಪ್ರವೇಶಮಾಡಿತು. ಸೈನ್ಯ ವೀರರಾಜಪೇಟೆಯ ಬಳಿ ಬೀಡು ಬಿಟ್ಟಿತು. ರಾಜನು ಅಲ್ಲಿ ಶೇಖರಿಸಿಟ್ಟಿದ್ದ 40,000 ಭಟ್ಟಿ ಅಕ್ಕಿಯನ್ನೂ ಇತರ ಅಗತ್ಯ ಪದಾರ್ಥಗಳನ್ನೂ ವೀರರಾಜನು ಇಂಗ್ಲಿಷರಿಗೆ ಕೊಟ್ಟನು, ಅಷ್ಟೇಅಲ್ಲ, ಭಾರವಾದ ಯಂತ್ರಗಳನ್ನೂ ಯುದ್ಧಸಾಮಗ್ರಿಯನ್ನೂ ಘಟ್ಟದ ಕೆಳಗಿನ ಕಲ್ಲುಹೊಳೆಯಿಂದ ಎತ್ತಿ ತರುವುದಕ್ಕಾಗಿ ಜನರನ್ನೂ ಎತ್ತುಗಳನ್ನೂ ಆನೆಗಳನ್ನೂ ಒದಗಿಸಿದನು.

ಇಂಗ್ಲಿಷ್ ಸೈನ್ಯ ಮೈಸೂರು ರಸ್ತೆಯಲ್ಲಿನ ಕರ್ಬದಿಗೋಡಿನ ಬಳಿಗೆ ನುಗ್ಗಿಬಂತು. ಅಲ್ಲಿ ಎರಡು ಪಕ್ಷದ ಸೇನೆಗಳಿಗೂ ದಿನವೆಲ್ಲಾ ಘೋರ ಕಾಳಗ ನಡೆಯಿತು. ಮೈಸೂರು ಸೈನ್ಯಕ್ಕೆ ಭಾರಿ ನಷ್ಟವಾಯಿತು (ತಾ॥ 6ನೆ ಮಾರ್ಚಿ). ಅಳಿದುಳಿದ ಸೈನ್ಯದೊಡನೆ ಟಿಪ್ಪು ಶ್ರೀರಂಗಪಟ್ಟಣದ ಕಡೆಗೆ ಹಿಮ್ಮೆಟ್ಟಿದನು.

ಈ ಕದನ ಮುಗಿದ ಮೇಲೆ ವೀರರಾಜನು ಜನರಲ್ ಸ್ಟ್ಯೂಯರ್ಟನ ಸಲಹೆಯಂತೆ ಟಿಪ್ಪುವಿನ ಮೇಲೆ ಯುದ್ಧ ಘೋಷಿಸಿ ಮಂಗಳೂರು ಪ್ರದೇಶವನ್ನು ಲೂಟಿಮಾಡುವುದಕ್ಕೆ ತನ್ನ ದಂಡಿನ ಒಂದು ಭಾಗವನ್ನೂ ಹೆಗ್ಗಡದೇವನ ಕೋಟೆ ಪ್ರದೇಶವನ್ನು ಲೂಟಿಮಾಡುವುದಕ್ಕೆ ಮತ್ತೊಂದು ಭಾಗವನ್ನೂ ಕಳಿಸಿದನು. ತಾನು ಮಾತ್ರ ನಾಲ್ಕು ನಾಡಿನ ಅರಮನೆಗೆ ಹೋಗಿ ತಂಗಿದನು. ಆಗ ಕೊಡಗಿನ ಸೇನೆ ಬೆಳ್ಳಾರೆಯ ಬಲವಾದ ಕೋಟೆಯನ್ನು ಸ್ವಾಧೀನ ಮಾಡಿಕೊಂಡಿತು. ಹೀಗೆ ಮಂಗಳೂರು ಪ್ರದೇಶದಲ್ಲಿ ಟಿಪ್ಪುವಿನ ಆಳಿಕೆ ಕೊನೆಗೊಂಡಿತು.

1799ರ ಮೇ 4ರಂದು ಟಿಪ್ಪು ರಣರಂಗದಲ್ಲಿ ಮಡಿದನು; ಯುದ್ಧ ಮುಕ್ತಾಯವಾಯಿತು. ಈ ವಿಜಯವಾರ್ತೆಯನ್ನು ವೀರರಾಜನಿಗೆ ತಿಳಿಸಲಾಯಿತು. ಅವನ ಸೈನ್ಯಗಳನ್ನು ಮೈಸೂರು ಪ್ರದೇಶ

ದಿಂದ ಹಿಂದೆಗದುಕೊಳ್ಳುವಂತೆ ಹೇಳಲಾಯಿತು. ಟಿಪ್ಪುವಿನ ಯುದ್ಧಾಶ್ವ, ಪಾಲಕಿ ಮತ್ತು ಅಂಬಾರಿಗಳನ್ನು ವೀರರಾಜನಿಗೆ ಬಹುಮಾನವಾಗಿ ಜನರಲ್ ಹ್ಯಾರಿಸ್ ಕಳಿಸಿಕೊಟ್ಟನು. ಜನರಲ್ ಹಾರ್ಟ್ಲಿಯು ಒಂದು ಸೊಗಸಾದ ಕುದುರೆಯನ್ನು ಕೊಟ್ಟನು.

ಟಿಪ್ಪುವಿನ ರಾಜ್ಯಪ್ರದೇಶಗಳನ್ನು ಮಿತ್ರವರ್ಗದವರು ಹಂಚಿಕೊಂಡ ಮೇಲೆ ಮೈಸೂರು ಮತ್ತು ಕೊಡಗುಗಳ ಗಡಿಯನ್ನು ಸ್ಪಷ್ಟವಾಗಿ ಗುರುತಿಸಲಾಯಿತು.

ವೀರರಾಜನ ಕಡೆಯ ದಿನಗಳು ಅಷ್ಟೇನೂ ಸುಖವಾಗಿರಲಿಲ್ಲ. 1807ರಲ್ಲಿ ಅವನ ಮೆಚ್ಚಿನ ರಾಣಿ ಮಹಾದೇವಮ್ಮಾಜಿ ಮರಣಹೊಂದಿದಳು, ರಾಜ ದುಃಖದಲ್ಲಿ ಮುಳುಗಿ ಮನಸ್ಸ್ವಾಸ್ಥ್ಯವನ್ನು ಕಳೆದುಕೊಂಡನು. 1809ನೆಯ ವರ್ಷದ ಜೂನ್ 9ನೆಯ ತಾರೀಖು ಅವನು ಕೊನೆಯುಸಿರೆಳೆದನು. ಸಾಯುವ ಮುಂಚೆ, ತನಗೆ ಗಂಡುಸಂತಾನವಿಲ್ಲವಾದ್ದರಿಂದ ಮಗಳು ದೇವಮ್ಮಾಜಿಗೆ ರಾಜಚಿಹ್ನೆಗಳನ್ನು ಕೊಟ್ಟನು. ವೀರರಾಜನ ಆಳಿಕೆಯ ಕಡೆಯ ಭಾಗದಲ್ಲಿ ಅವನ ದಿವಾನನಾಗಿದ್ದ ಸೋದೆಯ ಬಸವಲಿಂಗರಾಜನು ಈ ಹೊಸ ಆಳಿಕೆಯಲ್ಲೂ ಅದೇ ಅಧಿಕಾರದಲ್ಲಿ ಮುಂದುವರಿದು ಕಾರ್ಯನಿರ್ವಾಹ ಮಾಡುತ್ತಿದ್ದನು. ಆದರೆ, ವೀರರಾಜನ ತಮ್ಮ ಮಹತ್ವಾಕಾಂಕ್ಷಿಯಾದ ಲಿಂಗರಾಜನು ಮುಖ್ಯ ಅಧಿಕಾರಿಗಳನ್ನೂ ಜನನಾಯಕರನ್ನೂ ತನ್ನಕಡೆಗೆ ಒಲಿಸಿಕೊಳ್ಳುವ ಪ್ರಯತ್ನ ಮಾಡಿದನು. ಅವನ ಸ್ನೇಹಿತರು ಬಸವಲಿಂಗರಾಜನ ಸ್ಥಾನದಲ್ಲಿ ಲಿಂಗರಾಜನನ್ನೇ ದಿವಾನನಾಗಿ ಮಾಡಬೇಕೆಂದು ಸಲಹೆ ಮಾಡಿದರು. ಆದರೆ ಕೊಡಗು ಮುಖಂಡರ ಸರ್ವಸಭೆಯಲ್ಲಿ ಆ ಸಲಹೆ ತಿರಸ್ಕೃತವಾಯಿತು. ಇದರಿಂದ ಲಿಂಗರಾಜನಿಗೆ ಬಹಳ ವ್ಯಾಕುಲವಾಗಿ, ಅವನು ಹಾಲೇರಿಗೆ ಹೊರಟುಹೋದನು, ಬಸವಲಿಂಗರಾಜನು ಸದ್ದಿಲ್ಲದೆ ಕೊಡಗನ್ನು ಬಿಟ್ಟು ಪೂರ್ವಪರಂಪರೆಯ ತನ್ನ ಸ್ವಂತ ಸ್ಥಾನಕ್ಕೆ ಹೋಗಿಬಿಟ್ಟನು.

ಆ ಬಳಿಕ ಲಿಂಗರಾಜನು ಸರ್ಕಾರದ ಅಧಿಕಾರವನ್ನು ತನ್ನ ವಶಕ್ಕೆ ತೆಗೆದುಕೊಂಡನು; ಮತ್ತು 1811ರಲ್ಲಿ ತಾನೇ ಕೊಡಗಿನ ರಾಜನೆಂದು ಘೋಷಿಸಿಕೊಂಡನು. ಇಂಗ್ಲಿಷ್ ಅಧಿಕಾರಿಗಳು ಈ ಘೋಷಣೆಗೆ ಒಳಗೊಳಗೆ ಅಸಮ್ಮತಿ ತೋರುತ್ತಿದ್ದರೂ ಬಹಿರಂಗವಾಗಿ ವಿರೋಧಿಸಲಿಲ್ಲ. ಲಿಂಗರಾಜನು ಅಪ್ಪಣ್ಣನನ್ನು ತನ್ನ ದಿವಾನನನ್ನಾಗಿ ನೇಮಿಸಿಕೊಂಡು ರಾಜ್ಯವನ್ನು ಚೆನ್ನಾಗಿಯೇ ಆಳಲು ಮೊದಲು ಮಾಡಿದನು. ಆದರೆ, ಜನರು ತನಗೆ ವಿರೋಧವಾಗಿ ಪಿತೂರಿ ನಡೆಸಿಯಾರೆಂಬ ಭಯವಿದ್ದದ್ದರಿಂದ ಅವನು ಅನೇಕ ಮಂದಿ ಗೂಢಚಾರರನ್ನೂ ಗುಪ್ತ ವರದಿಗಾರರನ್ನೂ ನೇಮಿಸಿಕೊಂಡನು. ತನ್ನ ವಿಚಾರದಲ್ಲಿ ಅಸಮಾಧಾನ ಪಟ್ಟವರನ್ನು ಕ್ರೂರ ಶಿಕ್ಷೆಗೆ ಗುರಿಪಡಿಸುತ್ತಿದ್ದನು. ಮಡಿಕೇರಿಯಲ್ಲಿ ಈಗ ಇರುವ ಅರಮನೆಯನ್ನು 1812–1814ರ ಮಧ್ಯಕಾಲದಲ್ಲಿ ಅವನು ಕಟ್ಟಿಸಿದನು. ವೀರರಾಜ ಮತ್ತು ಅವನ ರಾಣಿಯರ ಸಮಾಧಿಯನ್ನು ಪೂರ್ಣಗೊಳಿಸಿದನು. ಮಡಿಕೇರಿಯಲ್ಲಿರುವ ದೊಡ್ಡ ಓಂಕಾರೇಶ್ವರ ದೇವಸ್ಥಾನದ ನಿರ್ಮಾಣ 1620ರಲ್ಲಿ ಮುಗಿಯಿತು.

ಲಿಂಗರಾಜನ ಮಗ ಚಿಕ್ಕವೀರರಾಜನು (1820–1834) ಹಾಲೇರಿವಂಶದ ಕೊನೆಯ ದೊರೆ; ಅವನು ಕೊಡಗಿನ ದೊರೆಗಳಲ್ಲೂ ಕೊನೆಯವನಾದನು. ಅವನು ಪಟ್ಟಕ್ಕೆ ಬಂದಾಗ ಕೇವಲ ಇಪ್ಪತ್ತು ವರ್ಷದ ತರುಣ; ಅನೇಕ ಮಂದಿ ಮುಖಸ್ತುತಿನಿಪುಣರಾದ ದುಷ್ಟರನ್ನು ತನ್ನ ಸುತ್ತಮುತ್ತ ಸೇರಿಸಿಕೊಂಡನು. ರಾಜನನ್ನು ವಿರೋಧಿಸುವ ಅಥವಾ ರಾಜನ ಆಳಿಕೆಯನ್ನು ಟೀಕಿಸುವ ಸಾಹಸ ತೋರಿದವರೆಲ್ಲರನ್ನೂ ರಾಜನೂ ಅವನ ಸ್ನೇಹಿತರೂ ಹುಡುಕಿ ಹುಡುಕಿ, ಕೊಲ್ಲಿಸುವ ನೀತಿಯನ್ನು ಅನುಸರಿಸತೊಡಗಿದರು.

ಅನೇಕ ಮಂದಿಯನ್ನು ಕೊಲೆಗೀಡು ಮಾಡಿದ ಸುದ್ದಿ ಕೋಲನಿಗೆ ತಲಪಿತು. ಆ ಬಗ್ಗೆ ವಿವರಗಳನ್ನು ತಿಳಿಸುವಂತೆ ಆತ ವೀರರಾಜನಿಗೆ ಬರೆದನು. ಈ ರೀತಿ ತನ್ನ ವಿಚಾರದಲ್ಲಿ ಕೈಹಾಕುವುದು ಸರಿಯಲ್ಲವೆಂದು ವೀರರಾಜ ಪ್ರತಿಭಟಿಸಿದನು. ಅವನ ಸೋದರಿ ದೇವಮ್ಮಾಜಿಯೂ ಅವಳ ಗಂಡ ಚನ್ನಬಸಪ್ಪನೂ 1831ರ ಸಪ್ಟೆಂಬರಿನಲ್ಲಿ ಮೈಸೂರಿಗೆ ಓಡಿಹೋದರು; ಹೋಗಿ ದೊರೆಯ ವಿರುದ್ಧವಾಗಿ ಅನೇಕ ದೂರು ಹೇಳಿದರು. ವೀರರಾಜನು ಬೆಂಟಿಂಕನಿಗೂ ಮದರಾಸಿನ ರಾಜ್ಯಪಾಲನಿಗೂ ಅವಮಾನಕರವಾದ ಕಾಗದಗಳನ್ನು ಬರೆದನು; ಇದಲ್ಲದೆ, ಇಂಗ್ಲಿಷರೊಡನೆ ಯುದ್ಧಹೂಡುವುದಕ್ಕೆ ಸಿದ್ಧಮಾಡಿಕೊಳ್ಳಲು ಪ್ರಾರಂಭಿಸಿದನು.

ಕೊಡಗಿನ ಹಿತಕರವಾದ ಉಲ್ಲಾಸದ ಹವೆ ಮತ್ತು ಬೇಟೆಗೆ ಅಲ್ಲಿರುವ ಅಪರಿಮಿತ ಸೌಕರ್ಯ–ಇವುಗಳಿಗಾಗಿ ಬಯಸಿ ಬಯಸಿ ಇಂಗ್ಲಿಷರು ಆ ದೇಶದ ಮೇಲೆ ಕಣ್ಣಿಟ್ಟೇ ಇದ್ದರು. ಹೀಗಿರುವಲ್ಲಿ ಕೊಡಗನ್ನು ತಮ್ಮ ರಾಜ್ಯಕ್ಕೆ ಸೇರಿಸಿಕೊಳ್ಳಲು ಈಗ ಸಕಾಲವೊದಗಿಬಂತೆಂದು ಅವರು ಭಾವಿಸಿದರು. ಗವರ್ನರ್ ಜನರಲ್ ಬೆಂಟಿಂಕನು ಕೊಡಗನ್ನು ಕೈವಶಮಾಡಿಕೊಳ್ಳುವುದಕ್ಕೆ ಆಜ್ಞೆ ಹೊರಡಿಸಿದನು. ಕರ್ನಲ್ ಲಿಂಡ್ಸೆಯ ಕೈಕೆಳಗೆ ಇಂಗ್ಲಿಷ್ ಸೈನ್ಯ ಮಡಿಕೇರಿಯ ಮೇಲೆ ದಾಳಿಯಿಟ್ಟು 1834ರ ಏಪ್ರಿಲ್ 10ನೆಯ ತಾರೀಖು ಅದನ್ನು ಗೆದ್ದು ವಶಪಡಿಸಿಕೊಂಡಿತು.

ವೀರರಾಜನನ್ನೂ ಅವನ ಕುಟುಂಬವರ್ಗವನ್ನೂ ವಾರಣಾಸಿಗೆ ಕಳಿಸಿದರು. ಅವನ ಜೊತೆ ಸುಮಾರು 250 ಮಂದಿ ನಂಟರೂ ಸ್ನೇಹಿತರೂ ಇದ್ದರು. 1852ರಲ್ಲಿ ವೀರರಾಜ ಮತ್ತು ಅವನ ಮಗಳು ಗೌರಮ್ಮ ಇಂಗ್ಲೆಂಡಿಗೆ ಹೋದರು. ಅಲ್ಲಿ ಗೌರಮ್ಮ ಕ್ರೈಸ್ತಮತ ಅವಲಂಬಿಸಿದಳು. ವಿಕ್ಟೋರಿಯಾ ರಾಣಿ ಅವಳಿಗೆ 'ದೇವಮಾತೆ' (Godmother) ಆದಳು. ವಿಕ್ಟೋರಿಯಾ ಗೌರಮ್ಮ ಒಬ್ಬ ಇಂಗ್ಲಿಷ್ ಅಧಿಕಾರಿಯನ್ನು ಮದುವೆ ಮಾಡಿಕೊಂಡಳು. ಆದರೆ, ಮದುವೆಯಾದ ಸ್ವಲ್ಪಕಾಲದಲ್ಲೇ ಅವಳು ಮೃತಿಹೊಂದಿದಳು. ವೀರರಾಜನು 1860ರಲ್ಲಿ ಲಂಡನ್ನಿನಲ್ಲಿ ಮೃತನಾದನು. ಅವನ ದೇಹವನ್ನು ವಾರಣಾಸಿಗೆ ತಂದು ಅಲ್ಲಿ ತಕ್ಕ ರಾಜಮರ್ಯಾದೆಗಳೊಡನೆ ಸಮಾಧಿ ಮಾಡಲಾಯಿತು.

1857–58 ರಲ್ಲಿ ಉತ್ತರ ಭಾರತದಲ್ಲೆಲ್ಲಾ ದಂಗೆ ಹಬ್ಬಿ ಹರಡುತ್ತಿದ್ದಾಗ, ಮೈಸೂರಿನ ಇಂಗ್ಲಿಷ್ ಅಧಿಕಾರಿಗಳು ಮೈಸೂರು ಸೈನ್ಯವೂ ಪ್ರತಿಭಟಿಸಿ ದಂಗೆಯೆದ್ದೀತೆಂದು ಹೆದರಿದರು. ಮೈಸೂರಿನ ಕಮಿಷನರ್ ಆಗಿದ್ದ ಮಾರ್ಕ್ ಕಬ್ಬನ್ ಕೊಡಗು ಸಿಪಾಯಿಗಳ ಬಲವಾದ ಒಂದು ಕಾವಲು ದಳವನ್ನು ಪೆರಿಯಪಟ್ಟಣದಲ್ಲಿ ಸ್ಥಾಪಿಸಿದನು. ಈ ಸಿಪಾಯಿಗಳ ನಿಷ್ಠೆಗೆ ಬಹುವಾಗಿ ಮೆಚ್ಚಿಕೊಂಡ ಕಬ್ಬನ್, 'ಎಲ್ಲಾ ಕೊಡಗರಿಗೂ ಆಯುಧ ಕಾನೂನಿನ (Arms Act) ನಿಯಮಗಳಿಂದ ವಿನಾಯಿತಿ ಕೊಡತಕ್ಕದ್ದು' ಎಂದು 1861ರಲ್ಲಿ ಆಜ್ಞೆ ಮಾಡಿದನು. 1881ರಲ್ಲಿ ಮೈಸೂರು ರಾಜ್ಯವನ್ನು ಪೂರ್ವದ ರಾಜಮನೆತನಕ್ಕೆ ಒಪ್ಪಿಸಿಕೊಟ್ಟಮೇಲೆ, ಕಾಫೀ ತೋಟಗಳ ಮಾಲಿಕರು—ಕೊಡಗು, ವೈನಾಡು ಮತ್ತು ನೀಲಗಿರಿ ಪ್ರದೇಶಗಳನ್ನೊಳಗೊಂಡ "ದಕ್ಷಿಣ ಭಾರತ ಕಾಫೀ ಜಿಲ್ಲೆ"ಯೊಂದನ್ನು (South Indian Coffee District) ರಚಿಸಬೇಕೆಂದು ಸಲಹೆ ಮಾಡಿದರು. ಕೊಡಗರು ಅದನ್ನು ವಿರೋಧಿಸಿದರು. 1867ರಿಂದೀಚೆಗೆ 'ಸೂಪರಿಂಟೆಂಡೆಂಟ'ನ್ನು 'ಕೊಡಗಿನ ಚೀಫ್ ಕಮಿಷನರ್' ಎಂದು ಕರೆಯಲು ಮೊದಲುಮಾಡಿದರು. ಆದರೆ, 1943ರಲ್ಲಿ 'ರೆಸಿಡೆಂಟನ' ಸ್ಥಾನವನ್ನು ರದ್ದುಗೊಳಿಸಿವಾಗ ಕೊಡಗು ಮಡಿಕೇರಿಯಲ್ಲಿ ನೆಲಸಿದ ಒಬ್ಬ 'ಚೀಫ್ ಕಮಿಷನರ' ಅಧಿಕಾರಕ್ಕೊಳಗಾಯಿತು; ಮದರಾಸು ಸರ್ಕಾರ ಕೊಡಗಿನ ವ್ಯವಹಾರಗಳನ್ನು ನೋಡಿಕೊಳ್ಳುವಂತಾಯಿತು.

1956ರಲ್ಲಿ ನಡೆದ ರಾಜ್ಯ ಪುನರ್ವಿಂಗಡಣೆಯ ಪರಿಣಾಮವಾಗಿ ಕೊಡಗು ಒಂದು ಜಿಲ್ಲೆಯಾಗಿ ರಚನೆಯಾಯಿತು ; ಅದು ವಿಶಾಲ ವೈಸೂರಿನ ಭಾಗವಾಯಿತು.

ಮೂಲಲೇಖಕರು : ಶ್ರೀ. ಕೆ.ವಿ. ಸುಬ್ಬರಾಯು
ಅನುವಾದಕರು : ಶ್ರೀ ಎಲ್. ಗುಂಡಪ್ಪ

# ಮೈಸೂರಿನಲ್ಲಿ ಕಮಿಷನರುಗಳ ಆಡಳಿತ

## (ಕ್ರಿ. ಶ. 1831—1881)

ಕ್ರಿ. ಶ. 1831–1881ರ ವರೆಗೆ 50 ವರ್ಷಗಳ ಕಾಲ ನೆಲಸಿದ ಬ್ರಿಟಿಷ್ ಕಮಿಷನರುಗಳ ಆಡಳಿತ ಮಾದರಿ ಮೈಸೂರಿನ ಬೆಳವಣಿಗೆಯಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಪಡೆದಿದೆ. ರಾಜ್ಯಾಡಳಿತದ ಎಲ್ಲ ಮುಖ್ಯ ವಿಷಯಗಳಲ್ಲಿ ಆಗ ಬಳಕೆಯಲ್ಲಿದ್ದ ಹಿಂದೂ ಪದ್ಧತಿಯು ಕ್ರಮೇಣ ಬ್ರಿಟಿಷ್ ಪದ್ಧತಿಗೆ ಮೂಲತಃ ಬದಲಾಗುತ್ತ ಬಂದಿತು. ಗಣ್ಯವಾದ ಮತ್ತು ಉಳಿಸಿಕೊಳ್ಳಲು ಯೋಗ್ಯವಾದ ಎಲ್ಲ ಹಳೆಯ ಸಂಪ್ರದಾಯ ಮತ್ತು ಪದ್ಧತಿಗಳು ಯಾವ ಅಡ್ಡಿಯೂ ಇಲ್ಲದೆ ಮುಂದುವರಿಯಲವಕಾಶ ಪಡೆದುವು ಮತ್ತು ಅತಿ ಲಾಭದಾಯಕವಾದ ಸುಧಾರಣೆಗಳು ಆದ್ಯಂತವಾಗಿ, ಕ್ರಮ ಬದ್ಧವಾಗಿ ಜಾರಿಗೆಬಂದವು. ಇದರಿಂದ 1881ರಲ್ಲಿ ಬ್ರಿಟಿಷ್ ಆಡಳಿತ ಕೊನೆಗೊಳ್ಳುವ ವೇಳೆಗೆ ಮೈಸೂರು ಸುವ್ಯವಸ್ಥಿತ, ಶಾಂತಿ ಯುತ ಮತ್ತು ಅತ್ಯುತ್ತಮ ಆಡಳಿತವನ್ನುಳ್ಳ ರಾಜ್ಯವಾಗಿ ರೂಪುಗೊಂಡಿತು.

1831ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ ಆಡಳಿತವು ಪೂರ್ಣವಾಗಿ ಅವಿವೇಕದ ಕಾರು ಬಾರೆಂದೂ ಅವ್ಯವಸ್ಥಿತವೆಂದೂ ಕಲ್ಪಿಸಿಕೊಂಡು, ಆ ವಿಶೇಷ ಪರಿಸ್ಥಿತಿಯಲ್ಲಿ ಗೌರ್ನರ್ ಜನರಲ್ ಲಾರ್ಡ ವಿಲಿಯಂ ಬೆಂಟಿಂಕನು 1799ರ ಒಪ್ಪಂದದ ನಾಲ್ಕನೆಯ ವಿಭಾಗದ ಪ್ರಕಾರ, ಮೈಸೂರು ದೇಶದ ರಾಜ್ಯಾಡಳಿತವನ್ನು ಪರಿಸ್ಥಿತಿಗೆ ಕಟ್ಟುಬಿದ್ದು ತಾತ್ಕಾಲಿಕವಾಗಿ ತನ್ನ ವಶಕ್ಕೆ ತೆಗೆದುಕೊಂಡನು.

ಕೆಲವು ವರ್ಷಗಳಿಂದ ಕ್ರಮವಾಗಿ ಸಂಬಳ ದೊರೆಯದೆ ಇದ್ದುದರಿಂದ ಸರ್ಕಾರಿ ಮತ್ತು ಸೈನ್ಯದ ಉದ್ಯೋಗಸ್ಥರಲ್ಲಿ ಬಹು ಅತೃಪ್ತಿ ಮೂಡಿದ್ದುದು ನಿಜ. ಇದು ಮಾತ್ರವಲ್ಲದೆ ಮೈಸೂರಿನ ಕ್ಷುಬ್ಧ ಪರಿಸ್ಥಿತಿಗೆ ಈ ಕಾರಣಗಳೂ ಸೇರಿದುವು; (1) ಜನಜನಿತವಾಗಿದ್ದ ರಾಜರ ದುಂದುವೆಚ್ಚದಿಂದುಂಟಾದ ಅತ್ಯಧಿಕ ಖರ್ಚು ಮತ್ತು ಅದರ ಪರಿಣಾಮವಾಗಿ ಅಗಾಧವಾದ ಸಾಲಗಳು ; (2) ಸರ್ಕಾರಿ ಅಧಿಕಾರಿ ಗಳ ವೇತನ ಪಟ್ಟಿಯನ್ನು ರಾಜಧನದಿಂದ ಬೇರ್ಪಡಿಸದೇ ಇದ್ದುದು ; (3) ಪ್ರತಿಕೂಲ ವಾಣಿಜ್ಯ ಮತ್ತು ಋತುಗಳ ಪರಿಸ್ಥಿತಿಯಿಂದ ದೇಶದ ಆದಾಯ ಇಳಿಮುಖವಾದುದು ; (4) 'ಷರತ್ತು' ಅಥವಾ ಗುತ್ತಿಗೆ ಪದ್ಧತಿಯ ದುರುಪಯೋಗದಿಂದ ನಗರ ಪ್ರದೇಶದಲ್ಲಿ ರೈತರಲ್ಲಿ ಬೆಳೆಯುತ್ತಿದ್ದ ಅಸಮಾಧಾನ. ಇದರ ಪರಿಣಾಮವಾಗಿ ರಾಜದ್ವೇಷಿಗಳಾದ ಹಳೆಯ ಪಾಳೆಯಗಾರರ ಕುಟುಂಬದವರ ಚಿತಾವಣೆಯಿಂದ ಈ ಭಾಗಗಳಲ್ಲಿ ದಂಗೆಯುಂಟಾಯಿತು. ಮೈಸೂರಿನ ಬ್ರಿಟಿಷ್ ರೆಸಿಡೆಂಟರು (ಶ್ರೀ. ಎ.ಹೆಚ್. ಕೋಲ್) ಮೈಸೂರಿನ ಕೆಡುತ್ತಿದ್ದ ಆರ್ಥಿಕ ಪರಿಸ್ಥಿತಿಯ ವಿಷಯವಾಗಿ ಸಕಾಲದಲ್ಲಿ ಮುನ್ನೆಚ್ಚರಿಕೆ ಪತ್ರಗಳನ್ನು ಕಳುಹಿಸಿದ್ದರೂ, ಹಿಂದಿನ ಗೌರ್ನರ್ ಜನರಲ್ ಲಾರ್ಡ್ ವೆಲ್ಲೆಸ್ಲಿಯ ವ್ಯವಸ್ಥೆಯಂತೆ ಈಸ್ಟ್ ಇಂಡಿಯಾ ಕಂಪೆನಿಯ ಪರವಾಗಿ ಮೈಸೂರು ದೇಶದ ಆಡಳಿತ ನಿಯಂತ್ರಣಾಧಿಕಾರವನ್ನು ಹೊಂದಿದ್ದ ಮದ್ರಾಸ್ ಸರ್ಕಾರ ಅದನ್ನು ಉಪೇಕ್ಷೆ ಮಾಡಿದ್ದು ಕೂಡ, ಮೈಸೂರಿನ ಪರಿಸ್ಥಿತಿ ಹದಗೆಡಲು ಕಾರಣವಾಯಿತೆಂದು ಹೇಳಬಹುದು,

ರಾಜರು ದಂಗೆಗಳನ್ನಡಗಿಸುವುದರಲ್ಲಿ ಅತ್ಯಾಸಕ್ತಿ ತೋರಿದ್ದು ನಿಜವಾದರೂ ಅವರ ಪ್ರಯತ್ನಗಳು

ವಿಫಲವಾದುವು. ಅವರ ಕೈಕೆಳಗೆ ತಕ್ಕಷ್ಟು ಸೈನ್ಯಬಲ ಇಲ್ಲದೆ ಇದ್ದದ್ದು ಇದಕ್ಕೆ ಕಾರಣವೆಂದು ಹೇಳಬಹುದು. 1831 ನೆ ಮೇ ತಿಂಗಳಿನಲ್ಲಿ ಮದ್ರಾಸಿನ ಗೌರ್ನರ್ ಎಸ್.ಆರ್. ಲಷಿಂಗ್ಟನ್ ಮೈಸೂರಿಗೆ ಭೇಟಿಯಿತ್ತು ದೇಶದ ಪರಿಸ್ಥಿತಿಯನ್ನು ಮುಖತಃ ವಿಚಾರಿಸಿ, ಅಶಾಂತ ಪ್ರದೇಶಗಳಲ್ಲಿ ಶಾಂತಪರಿಸ್ಥಿತಿಯನ್ನುಂಟು ಮಾಡಲು ಹೆಚ್ಚಿನ ಸಹಾಯಕ ಸೈನ್ಯ ಕೂಡಲೇ ಆವಶ್ಯಕವೆಂಬುದನ್ನು ಒಪ್ಪಿಕೊಂಡನು. ಅವನು ಮೈಸೂರು ಬಿಟ್ಟನಂತರ ಈ ಸಲಹೆ ಕಾರ್ಯಗತವಾಯಿತು. ಇದಲ್ಲದೆ ದಂಗೆಯ ಹುಟ್ಟು, ಬೆಳವಣಿಗೆ ಮತ್ತು ಅಡಗಿಸುವ ವಿಷಯವನ್ನು ಪರಿಶೀಲಿಸಿ ವರದಿಯನ್ನು ಸಿದ್ಧಪಡಿಸಲು ಒಂದು ವಿಚಾರಣಾ ಆಯೋಗವು ನೇಮಕವಾಯಿತು. ಈ ವರದಿ ರೂಪಿತವಾಗುವ ವರೆಗೆ ರಾಜರ ಆಡಳಿತಕ್ಕೆ ಬದಲಾಗಿ ತಾತ್ಕಾಲಿಕವಾಗಿ ಬ್ರಿಟಿಷ್ ಕಮಿಷನರುಗಳ ಆಡಳಿತವಿರಲೆಂಬ ಮುಖ್ಯ ತೀರ್ಮಾನವನ್ನು ಗೌರ್ನರ್‌ಜನರಲ್ ಕೈಕೊಂಡನು. ಒಬ್ಬ ಸೀನಿಯರ್ ಮತ್ತು ಒಬ್ಬ ಜೂನಿಯರ್ ಬ್ರಿಟಿಷ್ ಕಮಿಷನರುಗಳನ್ನೊಳಗೊಂಡ ಮಂಡಲಿಯೊಂದರ ಮೂಲಕ ಮೈಸೂರುದೇಶದ ಆಡಳಿತವನ್ನು ವಹಿಸಿಕೊಂಡು ರಾಜ್ಯಭಾರ ನಡೆಸುವಂತೆ ಮದ್ರಾಸಿನ ಗೌರ್ನರಿಗೆ ಅಪ್ಪಣೆಮಾಡಲಾಯಿತು. ಈ ಹೊಸ ಸರ್ಕಾರ ಮದ್ರಾಸ್ ಸರ್ಕಾರದ ಅಧೀನದಲ್ಲಿರ ಬೇಕಾಗಿತ್ತು. ಗೌರ್ನರ್ ಜನರಲ್ಲನು ಕರ್ನಲ್ ಬ್ರಿಗ್ಸ್‌ನನ್ನು ಸೀನಿಯರ್ ಕಮಿಷನರಾಗಿ ನಾಮಕರಣ ಮಾಡಿದನು ಮತ್ತು ಮದ್ರಾಸ್ ಸರ್ಕಾರ ಸಿ. ಎಂ. ಲಷಿಂಗ್ಟನ್ನನನ್ನು ಜೂನಿಯರ್ ಕಮಿಷನರಾಗಿ ನಿಯಮಿಸಿತು. ವರಿಷ್ಠಸರ್ಕಾರದ (Supreme Government) ಈ ನಿರ್ಧಾರವನ್ನು ತಿಳಿಸುವ ಪತ್ರವನ್ನು ದೇಶವೆಲ್ಲಾ ಸಂಭ್ರಮದಿಂದ ಆಚರಿಸುತ್ತಿದ್ದ ನಾಡಹಬ್ಬವಾದ ದಸರಾದ ಪ್ರಾರಂಭದ ಶುಭ ದಿನದಂದು (1831ನೆ ಅಕ್ಟೋಬರ್ 19) ರಾಜರ ಕೈಯಲ್ಲಿಡಲಾಯಿತು. ರಾಜರು ತಮ್ಮದೇ ಆದ ಶಾಂತತೆಯಿಂದ ಈ ಆಜ್ಞೆಯಂತೆ ವರ್ತಿಸಿದರು. ಹೀಗೆ ಮೈಸೂರು ಪ್ರಾಂತದ ಆಡಳಿತವನ್ನು ಸ್ವಾಧೀನಕ್ಕೆ ತೆಗೆದುಕೊಂಡದ್ದು ಒಂದು ಅವಸರದ ಪ್ರಮಾದದಿಂದ ಉದ್ಭವಿಸಿತೆಂದು ಹೇಳಬಹುದು. ಇದರ ಹೊಣೆಗಾರನಾದ ಲಾರ್ಡ್ ವಿಲಿಯಂ ಬೆಂಟಿಂಕನೇ ಮುಂದೆ ಇದಕ್ಕಾಗಿ ವಿಷಾದ ವ್ಯಕ್ತಪಡಿಸಿದನು.

ಸಿ. ಎಂ. ಲಷಿಂಗ್ಟನ್ ತನ್ನ ಸೀನಿಯರ್ ಸಹೋದ್ಯೋಗಿಗಿಂತ ಮೂರು ತಿಂಗಳು ಮೊದಲೇ ತನ್ನ ಕಾರ್ಯಭಾರವನ್ನು ವಹಿಸಿಕೊಂಡನು. ಈ ಅವಧಿಯಲ್ಲಿ ಅವನು ಕೆಲವು ಬದಲಾವಣೆಗಳನ್ನು ಮಾಡಲು ಪ್ರಯತ್ನಿಸಿದನು. ದುರದೃಷ್ಟವಶಾತ್, ಇವುಗಳಿಂದ ರಾಜ್ಯದ ಆಡಳಿತದಲ್ಲಿ ಹೆಚ್ಚು ಗೊಂದಲವುಂಟಾಯಿತು. ಕರ್ನಲ್ ಬ್ರಿಗ್ಸ್ ಅಧಿಕಾರ ವಹಿಸಿಕೊಂಡ ಕೂಡಲೇ ಮೊದಲನೆ ಕೆಲಸವಾಗಿ ತನ್ನ ಜೂನಿಯರ್ ಸಹೋದ್ಯೋಗಿ ಮಾಡಿದ್ದ ಸುಧಾರಣೆಗಳನ್ನು ತಳ್ಳಿಹಾಕಿದನು. ಅವನು ತನ್ನ ನೇರ ಆಡಳಿತದಲ್ಲಿದ್ದ ಸರ್ಕಾರಿ ಕಛೇರಿಗಳನ್ನು ಕ್ರಮಪಡಿಸಲು ಆಡಳಿತ ಶಾಖೆಯಲ್ಲಿ ತನ್ನದೇ ಆದ ಹಲವು ಸುಧಾರಣೆಗಳನ್ನು ಮಾಡಿದನು. ಆದರೆ ಮದ್ರಾಸ್ ಸರ್ಕಾರ ಇವನ ಈ ಸುಧಾರಣೆಗಳನ್ನು ಒಪ್ಪಲಿಲ್ಲ. ಕೆಲವೇ ತಿಂಗಳಲ್ಲಿ ಸಿ. ಎಂ. ಲಷಿಂಗ್ಟನ್ ಮೈಸೂರನ್ನು ಬಿಟ್ಟನಂತರ ಜೆ. ಎಂ. ಡ್ರೂರಿ ಇವನ ಜಾಗಕ್ಕೆ ಬಂದನು. ಅತ್ಯಲ್ಪ ಕಾಲದಲ್ಲೆ ಜೆ. ಎಂ. ಮ್ಯಾಕ್‌ಲಾಯ್ಡ್ ಇವನ ಸ್ಥಾನವನ್ನು ಪಡೆದನು. ಈ ಮಧ್ಯೆ ಕರ್ನಲ್ ಬ್ರಿಗ್ಸ್ ತನ್ನ ಕೈಕೆಳಗಿನ ಸಹೋದ್ಯೋಗಿಗಳೊಡನೆಯೂ ಮೈಸೂರಿನ ದಿವಾನರೊಡನೆಯೂ ತೀವ್ರ ಭಿನ್ನಾಭಿಪ್ರಾಯ ಹೊಂದಿದ್ದರಿಂದ ಅವನು ಸೀನಿಯರ್ ಕಮಿಷನರಾಗಿ ಕೆಲಸಮಾಡುವುದು ಅಸಾಧ್ಯ ವಾಯಿತು, ಇದರ ಫಲವಾಗಿ 1832 ನೆ ನವೆಂಬರಿನಲ್ಲಿ ಅವನು ರಾಜೀನಾಮೆಯಿತ್ತನು. ಮೈಸೂರನ್ನು ಬಿಡುವ ಮೊದಲು ಅವನು ದೇಶದಲ್ಲಿ ಇಬ್ಬರು ಕಮಿಷನರುಗಳಿಗೆ ಬದಲಾಗಿ ಒಬ್ಬರೇ ಕಮಿಷನರ್ ಇರಬೇಕೆಂಬ ಅಭಿಪ್ರಾಯವನ್ನು ಸಮರ್ಥಿಸಿ ಮಂಡಿಸಿದನು. ಈ ಸೂಚನೆ 1834ರಲ್ಲಿ ಕಾರ್ಯಗತವಾಯಿತು. ಒಟ್ಟಿನಲ್ಲಿ ಕರ್ನಲ್ ಬ್ರಿಗ್ಸ್‌ನನ್ನು ಅಸಾಧಾರಣ ಕಾರ್ಯೋತ್ಸಾಹಿ, ಕಾರ್ಯಶೀಲ, ದೃಢನಿಶ್ಚಿತ ಮತ್ತು ದೃಢಮನಸ್ಕ ವ್ಯಕ್ತಿಯೆಂದು ಹೇಳಬಹುದು. ನಗರ ಪ್ರದೇಶದಲ್ಲಿ ಶಾಂತಿಯನ್ನು ನೆಲೆನಿಲ್ಲಿಸಲು ಅವನು ಮಾಡಿದ ಸಫಲ ಪ್ರಯತ್ನಗಳು ಬಹು ಪ್ರಶಂಸಾರ್ಹವಾದುವು.

ಈ ಮಧ್ಯೆ ದಂಗೆಗಳ ವಿಚಾರಣಾ ಸಮಿತಿಯು ತನ್ನ ತನಿಖೆಯನ್ನು ಮುಗಿಸಿ ವರದಿಯನ್ನು ಗೌರ್ನರ್ ಜನರಲ್ಲನಿಗೆ ಕಳುಹಿಸಿತ್ತು. ರಾಜರನ್ನು ದುರಾಡಳಿತದ ದೋಷಾರೋಪದಿಂದ ಪೂರ್ಣವಾಗಿ ಮುಕ್ತರನ್ನಾಗಿ ಮಾಡಿದ್ದು ಈ ವರದಿಯಲ್ಲಿ ಕಂಡ ಬಹುಮುಖ್ಯ ಅಂಶ. 1834 ನೆ ಏಪ್ರಿಲ್‌ನಲ್ಲಿ ಲಾರ್ಡ್ ವಿಲಿಯಂ ಬೆಂಟಿಂಕನು ಮೈಸೂರಿಗೆ ಭೇಟಿಯಿತ್ತಾಗ, ರಾಜರಿಂದ ಅವನ ಅಧಿಕಾರವನ್ನು ಕಸಿದುಕೊಂಡಿದ್ದು ನೈತಿಕವಾಗಿಯೂ ಕಾನೂನು ರೀತಿಯಾಗಿಯೂ ಸರಿಯೇ ಎಂದು ಅವನೇ ಸಂದೇಹ ಪಡುವಂತಾಯಿತು. ಪೊಗದಿಯನ್ನು ನಿಯತ ಕಾಲದಲ್ಲಿ ಕೊಡುತ್ತಿರಲಿಲ್ಲವೆಂಬ ಆರೋಪ ಸುಳ್ಳೆಂಬುದು ಕಂಡುಬಂದಿತು. ರಾಜರ ಮನೋಧರ್ಮವನ್ನು ಕುರಿತು ವಿವರಿಸುತ್ತಾ "ಅವರ ಸ್ವಭಾವ ಕ್ರೂರ ಅಥವಾ ಪ್ರಜಾಪೀಡಕ, ಧರ್ಮಕ್ಕೆ ವಿರುದ್ಧವಾದುದೆಂದು" ಹೇಳಿದನು; ಮತ್ತು ಮುಂದೆ ರಾಜರಾಗುವ ಅವರು ದಕ್ಷ ಆಡಳಿತಗಾರರೆಂಬುದರಲ್ಲಿ ನಂಬಿಕೆಯನ್ನು ವ್ಯಕ್ತಪಡಿಸಿದನು. ಅಷ್ಟೇ ಅಲ್ಲದೆ ರಾಜ್ಯದ ಮುಕ್ಕಾಲು ಭಾಗವನ್ನು ತತ್ಕ್ಷಣ ರಾಜರಿಗೆ ವಹಿಸಿಕೊಡಬೇಕೆಂದೂ ಮಿಕ್ಕ ಕಾಲುಭಾಗವನ್ನು ಪೊಗದಿಯ ಕ್ರಮವಾದ ಸಂದಾಯಕ್ಕೆ ಆಧಾರವಾಗಿಟ್ಟುಕೊಳ್ಳಬೇಕೆಂದೂ ಲಂಡನ್ನಿನ ಡೈರೆಕ್ಟರುಗಳ ಮಂಡಲಿಗೆ ಶಿಫಾರಸು ಮಾಡಿದನು. ಆದರೆ ಬ್ರಿಟಿಷ್ ಸರ್ಕಾರದ ಒಳಾಡಳಿತ ಶಾಖೆ ಈ ಸಲಹೆಯನ್ನು ತಿರಸ್ಕರಿಸಿದುದು ಗೌರ್ನರ್ ಜನರಲ್ಲರಿಗೂ ರಾಜರಿಗೂ ತೀವ್ರ ನಿರಾಶೆಯನ್ನುಂಟುಮಾಡಿತು. 1834ರಲ್ಲಿ ಅವನು ಮೈಸೂರಿನ ಆಡಳಿತವನ್ನು ಸುಧಾರಿಸಲು ಕೆಲವು ಅಮೂಲ್ಯವಾದ ಮತ್ತು ರಚನಾತ್ಮಕ ಸಲಹೆಗಳನ್ನು ಕೊಟ್ಟನು. ಆ ಸಲಹೆಗಳಂತೆ ಇಡೀ ದೇಶವನ್ನು ನಾಲ್ಕು ಪ್ರಾದೇಶಿಕ ವಿಭಾಗಗಳಾಗಿ ವಿಂಗಡಿಸಿ, ಪ್ರತಿಯೊಂದು ವಿಭಾಗವೂ ಅಲ್ಲಿಯವರೆಗಿದ್ದ ಫೌಜುದಾರನಿಗೆ ಬದಲಾಗಿ ಒಬ್ಬ ಯೂರೋಪಿಯನ್ ಸೂಪರಿಂಟೆಂಡೆಂಟನ ಕೈಕೆಳಗಿರಬೇಕು. ಈ ಸೂಪರಿಂಟೆಂಡೆಂಟರುಗಳು ಕಮಿಷನರ ಅಧಿಕಾರವ್ಯಾಪ್ತಿಗೆ ಒಳಪಟ್ಟಿದ್ದು ಅವರ ಒಪ್ಪಿಗೆ ಪಡೆದು ಕಂದಾಯ, ದಂಡನೆ, ನಿರ್ದಿಷ್ಟವಾದ ಕೆಲವು ನ್ಯಾಯತೀರ್ಮಾನಗಳಿಗೆ ಸಂಬಂಧಿಸಿದ ಕಾರ್ಯಗಳನ್ನೂ ನಡೆಸುವುದರ ಜೊತೆಗೆ ಸಿವಿಲ್ ಸರ್ಕಾರದ ಪ್ರತಿಯೊಂದು ಶಾಖೆಯ ಮೇಲ್ವಿಚಾರಣೆಯನ್ನೂ ನೋಡಿಕೊಳ್ಳಬೇಕು. ತಾಲೂಕಿನ ಅಮಲ್ದಾರರು ಈ ಅಧಿಕಾರ ಚಲಾವಣೆಯಲ್ಲಿ ತಮ್ಮ ಕಂದಾಯ ಸಂಬಂಧೀ ಕಾರ್ಯದೊಡನೆ ಮೊದಲಿನಂತೆಯೇ ಪೋಲೀಸು ಶಾಖೆಯನ್ನು—ಕೆಲವು ನಿಬಂಧಗಳಿಗೆ ಒಳಪಟ್ಟು—ನೋಡಿಕೊಳ್ಳಬೇಕು. 1817 ನೆ ಬಂಗಾಳದ XX ನೆಯ ಶಾಸನದ ನಿಯಮಗಳಲ್ಲಿ ಸದೃಶವಾದುವುಗಳನ್ನು ಇಲ್ಲಿಗೆ ಅನ್ವಯಿಸಬೇಕು. ಅವನು ಅಧಿಕಾರಿಗಳ ವೇತನವನ್ನು ಹೆಚ್ಚಿಸುವ ಮತ್ತು ಪ್ರಮುಖ ಸ್ಥಾನಗಳಿಗೆ ಅತ್ಯುತ್ತಮ ವ್ಯಕ್ತಿಗಳನ್ನು ಆರಿಸುವ ಆವಶ್ಯಕತೆಯನ್ನು ಒತ್ತಿ ಹೇಳಿದನು. ಭೂವ್ಯವಹಾರದಲ್ಲಿ ಅಂದು ಜಾರಿಯಲ್ಲಿದ್ದ ಪದ್ಧತಿಗಳನ್ನು ರೈತರ ಒಪ್ಪಿಗೆ ಪಡೆದು ಪರಿಷ್ಕರಿಸಬೇಕೆಂಬುದು ಅವನ ಇನ್ನೊಂದು ಅಮೂಲ್ಯ ಸಲಹೆ. ನ್ಯಾಯಾಂಗ ವಿಚಾರದಲ್ಲಿ ಕಮಿಷನರು ಮೂವರು ನ್ಯಾಯಾಧಿಪತಿಗಳಿಂದ ಕೂಡಿದ ಹುಜೂರ್ ಅದಾಲತ್ ನ್ಯಾಯಾಲಯ, ಒಬ್ಬ ಪಂಡಿತ ಮತ್ತು ಒಬ್ಬ ಮುನ್ಸೀಫರ ಸಹಾಯ ಪಡೆಯಬೇಕೆಂಬುದು ಅವನ ಮತ್ತೊಂದು ಸಲಹೆ. ಆದರೆ ಆ ಕಾಲದಲ್ಲಿ ಕ್ರಮಬದ್ಧವಾಗಿ ಸಂಗ್ರಹಿಸಿದ ಯಾವ ನ್ಯಾಯಸೂತ್ರಗಳೂ ಜಾರಿಯಲ್ಲಿರಲಿಲ್ಲ.

1834 ರ ಫೆಬ್ರುವರಿಯಲ್ಲಿ ಜೂನಿಯರ್ ಕಮಿಷನರ್ ಮೈಸೂರನ್ನು ಬಿಟ್ಟಾಗ ಕರ್ನಲ್ ಕಬ್ಬನ್ ಅವನ ಸ್ಥಾನ ಪಡೆದನು. 1834 ರ ಜೂನ್‌ನಲ್ಲಿ ಕರ್ನಲ್ ಬ್ರಿಗ್ಸ್‌ನ ಉತ್ತರಾಧಿಕಾರಿಯಾದ ಲೆಫ್ಟಿನೆಂಟ್ ಕರ್ನಲ್ ಡಬ್ಲ್ಯೂ ಮಾರಿಸನ್ ಸುಪ್ರೀಂಕೌನ್ಸಿಲಿನ ಸದಸ್ಯನಾಗಿ ನೇಮಕಗೊಂಡಾಗ ಕಬ್ಬನ್ ಸೀನಿಯರ್ ಕಮಿಷನರಾದನು.

ಮೈಸೂರಿನ ಏಕಮಾತ್ರ ಕಮಿಷನರಾಗಿ ನೇಮಕಗೊಂಡಾಗ ಕರ್ನಲ್ ಮಾರ್ಕ್ ಕಬ್ಬನ್ನನಿಗೆ 49 ವರ್ಷ ವಯಸ್ಸಾಗಿತ್ತು. ಈ ಘನಪದವಿಗೇರುವ ಮೊದಲು ಅವನು ದೀರ್ಘಕಾಲ ಮೈಸೂರಿನ

ಆಡಳಿತದೊಡನೆ ಸಂಬಂಧ ಹೊಂದಿದ್ದನು. ಇದು ಅವನು ದೇಶದ ಅತ್ಯುನ್ನತ ಅಧಿಕಾರಿಯಾದಾಗ ಅವನಿಗೆ ಸಹಾಯಕವಾಯಿತು.

ಸಾಮಾನ್ಯವಾಗಿ ಹೇಳುವುದಾದರೆ ಕಮಿಷನರ ಆಡಳಿತದ ಸಮಗ್ರಕಾಲದಲ್ಲಿ, ಎರಡು ವಿರುದ್ಧ ಉದ್ದೇಶಗಳು ಜಾರಿಯಲ್ಲಿದ್ದುದರ ಫಲವಾಗಿ, ಬ್ರಿಟಿಷರ ಕಾರ್ಯನೀತಿಯಲ್ಲಿ ಎರಡು ಪ್ರತ್ಯೇಕ ಅವಸ್ಥೆಗಳನ್ನು ಕಾಣಬಹುದು. ಸರ್ಕಾರದ ಹಲವಾರು ಇಲಾಖೆಗಳಲ್ಲಿ ಮೇಲುಗೈಯಾಗಿದ್ದ ಕುತ್ಸಿತ ಅನ್ಯಾಯಗಳನ್ನು ಸುಧಾರಿಸುವುದು, ಶಾಂತಿ ಮತ್ತು ನೆಮ್ಮದಿಗಳನ್ನುಂಟುಮಾಡುವುದು, ದೇಶದ ಮೂಲಸಂಪತ್ತನ್ನು ಅಭಿವೃದ್ಧಿಗೊಳಿಸುವುದು, ವ್ಯವಸಾಯಗಾರರನ್ನು ದಬ್ಬಾಳಿಕೆ ಮತ್ತು ಸುಲಿಗೆಗಳಿಂದ ಮುಕ್ತರನ್ನಾಗಿ ಸುವುದು. ಮತ್ತು ದೇಶೀಯ ನ್ಯಾಯಾಂಗ ಪದ್ಧತಿಯನ್ನು ಹಸನುಗೊಳಿಸುವುದು—ಇವು ಆಡಳಿತದ ಮೊದಲ 30 ವರ್ಷಗಳ ಮುಖ್ಯಗುರಿಯಾಗಿದ್ದಿತೇ ಹೊರತು ಹೊಸ ಪದ್ಧತಿಯ ಸರ್ಕಾರವನ್ನು ಪ್ರಾರಂಭಿಸುವುದಾಗಿರಲಿಲ್ಲ. ಬ್ರಿಟಿಷರ ಆಡಳಿತವು ತಾತ್ಕಾಲಿಕವೆಂಬುದನ್ನು ಲಕ್ಷ್ಯದಲ್ಲಿಟ್ಟುಕೊಂಡು ಆಡಳಿತದಲ್ಲಿ ಸಾಧ್ಯವಾದ ಮಟ್ಟಿಗೂ ದೇಶೀಯ ಸಿಬ್ಬಂದಿಗಳನ್ನೇ ಇಟ್ಟುಕೊಳ್ಳಲು ಮತ್ತು ದೇಶೀಯ ಪದ್ಧತಿಗಳನ್ನು ಉಳಿಸಿ ಮುಂದುವರಿಸಲು ಉದ್ದೇಶಿಸಲಾಯಿತು. ಆದ್ದರಿಂದ 1831 ರಿಂದ 1855ರ ವರೆಗಿನ ಮೊದಲ ಅವಧಿಯನ್ನು, ಆಡಳಿತವು ಬಹುಮಟ್ಟಿಗೆ ಪಿತೃಪ್ರಾಯ ನಿರಂಕುಶ ಪ್ರಭುತ್ವದ ಮೇಲೆ ಆಧಾರಿತವಾಗಿದ್ದುದರಿಂದ, ಅನಿಯಂತ್ರಿತ ಅಥವಾ ಕುಟುಂಬ ಪಾಲಕ ಪದ್ಧತಿಯ ಕಾಲವೆಂದು ವರ್ಣಿಸಲಾಗಿದೆ. 1856-62ರ ಅವಧಿಯನ್ನು 'ಪರಿವರ್ತನ ಕಾಲ' ವೆಂದೂ, 1863-81ರ ಮಧ್ಯದ ವರ್ಷಗಳನ್ನು 'ನಿಯಂತ್ರಿತ ಪದ್ಧತಿಯ ಕಾಲ' ವೆಂದೂ ಕರೆಯಲಾಗಿದೆ.

ಆಡಳಿತವನ್ನು ಫಲಪ್ರದವನ್ನಾಗಿ, ಸತ್ವಯುಕ್ತವನ್ನಾಗಿ, ಕ್ರಮಬದ್ಧವನ್ನಾಗಿ ಮಾಡಲು ಕರ್ನಲ್ ಕಬ್ಬನ್ನನು ಅಳವಡಿಸಿದ ಸೂಕ್ತಕಾರ್ಯಗಳ ಸ್ಥೂಲ ಪರಿಚಯಮಾಡಿಕೊಳ್ಳುವುದು ಆವಶ್ಯಕ. ಮೇಲಿನ ಗುರಿಯನ್ನು ಗಮನದಲ್ಲಿಟ್ಟುಕೊಂಡು ಅವನು ದೇಶಾಡಳಿತವನ್ನು ಪುನರ್ವ್ಯವಸ್ಥೆಗೊಳಿಸಿ ದೇಶವನ್ನು ಬೆಂಗಳೂರು, ಚಿತ್ರದುರ್ಗ, ಅಷ್ಟಗ್ರಾಮ ಮತ್ತು ನಗರಗಳೆಂದು ನಾಲ್ಕು ಮುಖ್ಯ ವಿಭಾಗಗಳನ್ನಾಗಿ ಮಾಡಿ, ಪ್ರತಿಯೊಂದು ವಿಭಾಗವೂ ಒಬ್ಬ ಯುರೋಪಿಯನ್ ಸೂಪರಿಂಟೆಂಡೆಂಟನ ಆಳಿಕೆಯಲ್ಲಿರುವಂತೆ ನಿಯಮಿಸಿದನು. ಪ್ರತಿವಿಭಾಗವೂ ಬೇಕಾದಷ್ಟು ತಾಲೂಕುಗಳಿಂದ ಕೂಡಿದ್ದಿತು. ಈ ತಾಲೂಕುಗಳ ಒಟ್ಟು ಸಂಖ್ಯೆ 120. ಅನಂತರ ಸಣ್ಣ ತಾಲೂಕುಗಳನ್ನು ದೊಡ್ಡದರಲ್ಲಿ ವಿಲೀನಗೊಳಿಸುವುದರ ಮೂಲಕ ಈ ಸಂಖ್ಯೆಯನ್ನು ಕಡಮೆ ಮಾಡಲಾಯಿತು. ಪ್ರತಿಯೊಂದು ತಾಲೂಕು ಒಬ್ಬೊಬ್ಬ ಅಮಲ್ದಾರನ ಆಡಳಿತದಲ್ಲಿತ್ತು. ತಾಲೂಕುಗಳನ್ನು ಹೋಬಳಿಗಳನ್ನಾಗಿ ವಿಭಜಿಸಲಾಯಿತು. ಪ್ರತಿಯೊಂದು ಹೋಬಳಿಯೂ ಹಳ್ಳಿಗಳ ಸಮುದಾಯದಿಂದ ಕೂಡಿತ್ತು. ಶೇಕದಾರ ಅಥವಾ ಹೋಬಳಿದಾರನು ಹೋಬಳಿಯ ಮುಖ್ಯಾಧಿಕಾರಿಯಾಗಿದ್ದನು. ವಿಭಾಗದ ಸೂಪರಿಂಟೆಂಡೆಂಟರ ಅಧಿಕಾರ ವ್ಯಾಪ್ತಿಯು ಅನೇಕ ವಿಧದಲ್ಲಿ ವಿಸ್ತೃತಗೊಂಡಿತು. ಆದರೂ ತಾಲೂಕಿನ ಅಮಲ್ದಾರರು ಕಮಿಷನರೊಡನೆ ನೇರವಾಗಿ ವ್ಯವಹರಿಸಲು ಅವಕಾಶವಿತ್ತು. ಕಮಿಷನರ ಸೆಕ್ರೆಟೇರಿಯಟ್‌ನಲ್ಲಿ ಇದ್ದವರೆಂದರೆ—ಅವರ ಆಪ್ತಕಾರ್ಯದರ್ಶಿಯಾಗಿದ್ದು ಎಲ್ಲ ಶಾಖೆಗಳಲ್ಲೂ ಕಾರ್ಯದರ್ಶಿಯ ಕಾರ್ಯವನ್ನು ನೆರವೇರಿಸುತ್ತಿದ್ದ ಪ್ರಥಮ ಸಹಾಯ ಅಧಿಕಾರಿ (First Assistant); ತನ್ನ ಕಾರ್ಯದ ಜೊತೆಗೆ ಸ್ಥಳೀಯ ಸೈನ್ಯದ ಪರಿಶೀಲನೆ ಮತ್ತು ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದ ಸೈನ್ಯಸಹಾಯಕಾಧಿಕಾರಿ (Military Assistant); ಬೇರೆ ಬೇರೆ ಶಾಖೆಗಳನ್ನು ನೋಡಿಕೊಳ್ಳುತ್ತಿದ್ದ ಮೂವರು ಜೂನಿಯರ್ ಸಹಾಯಕಾಧಿಕಾರಿಗಳು(Junior Assistant);1843ರಲ್ಲಿ ರೆಸಿಡೆನ್ಸಿಯನ್ನು ರದ್ದುಗೊಳಿಸಿದಾಗಿನಿಂದಲೂ ರೆಸಿಡೆಂಟರ ಲಘುಕಾರ್ಯಗಳನ್ನು ಮಾಡುತ್ತಿದ್ದ, ನಿರ್ದಿಷ್ಟ ಕಾರ್ಯಭಾರವಿಲ್ಲದ ಮತ್ತೊಬ್ಬ ಜೂನಿಯರ್ ಸಹಾಯಕಾಧಿಕಾರಿ.

ಕೇಂದ್ರ ಕಾರ್ಯಾಲಯವು—ಕಂದಾಯ, ಅಂಚೆ, ಪೋಲೀಸು, ಸವಾರ್, ಬಾರ್, ಮರಾಮತ್ತು, ವೈದ್ಯಕೀಯ, ಅಮೃತಮಹಲ್, ನ್ಯಾಯಾಂಗ ಮತ್ತು ವಿದ್ಯಾಭ್ಯಾಸ—ಎಂಬ ಒಂಬತ್ತು ಶಾಖೆಗಳಿಂದ ಕೂಡಿದ್ದಿತು. ಈ ಪ್ರತಿಯೊಂದು ಶಾಖೆಯೂ ಒಬ್ಬೊಬ್ಬ ಮುಖ್ಯಾಧಿಕಾರಿಯ ಅಧೀನದಲ್ಲಿತ್ತು. ಕಂದಾಯಶಾಖೆಯ ಮುಖ್ಯಾಧಿಕಾರಿಗೆ ಪ್ರಮುಖ ಶಿರಸ್ತೇದಾರ ಎಂಬ ಹೆಸರಿತ್ತು. ಇವನ ಕಾರ್ಯಗಳು ದಿವಾನನ ಕಾರ್ಯಕ್ಕೆ ಸಮಾನವಾಗಿದ್ದುವು.

ಸರ್ಕಾರದ ಕಾರ್ಯಕಲಾಪಗಳನ್ನು ತಿಳಿವಳಿಕೆ ಪತ್ರ, ಸುತ್ತೋಲೆಗಳು ಮತ್ತು ಘೋಷಣೆಗಳ ಮೂಲಕ ಜನರಿಗೆ ತಿಳಿಸಲಾಗುತ್ತಿತ್ತು. ಕಾನೂನು ಕಟ್ಟಳೆಗಳು ಪ್ರಮುಖ ಸ್ಥಳಗಳಲ್ಲಿ ಕನ್ನಡದಲ್ಲಿ ಬಹಿರಂಗವಾಗಿ ಪ್ರಕಟವಾಗುತ್ತಿದ್ದುವು. ದ್ವಿ-ದಫ್ತರ ಪದ್ಧತಿಯು ಅಳಿದು, ಮರಾಠಿ ಅಥವಾ ಕನ್ನಡವು ಸರ್ಕಾರದ ಆಡಳಿತ ಭಾಷೆಯಾಗಿ ಅಂಗೀಕೃತವಾಯಿತು. ಕಮಿಷನರ ಕಚೇರಿಗೆ ಒಪ್ಪಿಸುತ್ತಿದ್ದ ಎಲ್ಲ ಲೆಕ್ಕ ಪತ್ರಗಳು ಮತ್ತು ವರದಿಗಳಲ್ಲೂ ಮರಾಠಿ ಬಳಕೆಯಲ್ಲಿತ್ತು. ಸಾರ್ವಜನಿಕವಾದ ಮುಖ್ಯ ವಿಷಯಗಳನ್ನು ಸೂಪರಿಂಟೆಂಡೆಂಟರು ಮತ್ತು ಅಮಲ್ದಾರರುಗಳಿಗೆ ಸುತ್ತೋಲೆಗಳ ಮೂಲಕ ಕಳುಹಿಸುತ್ತಿದ್ದರು; ಆದರೆ ಘೋಷಣೆಗಳು ಮಹತ್ವದ ಉದ್ದೇಶಗಳಿಗೆ ಮೀಸಲಾಗಿದ್ದುವು. ತಮ್ಮ ಕಷ್ಟ ನಿಷ್ಠುರಗಳಿಂದ ಪರಿಹಾರ ಪಡೆಯುವ ಸಲುವಾಗಿ ಮೇಲಧಿಕಾರಿಗಳಿಗೆ ಪ್ರಾರ್ಥನಾ ಪತ್ರಗಳನ್ನು ಕಳುಹಿಸಲು ಜನರಿಗೆ ಅವಕಾಶಮಾಡಿ ಕೊಡಲಾಯಿತು. ಅನಪೇಕ್ಷಿತ ಮತ್ತು ದ್ವೇಷಪೂರಿತ ಜನರು ತಮ್ಮ ಕ್ಷುದ್ರ ಮತ್ತು ದುರುದ್ದೇಶಪೂರಿತ ಅರ್ಜಿಗಳಿಂದ ಅಧಿಕಾರಿಗಳಿಗೆ ಕಿರುಕುಳ ಕೊಡುವುದನ್ನು ತಡೆಗಟ್ಟಲೂ ಸೂಕ್ತ ಕ್ರಮ ಕೈಗೊಳ್ಳಲಾಯಿತು.

ನ್ಯಾಯಾಂಗ ಪದ್ಧತಿಯಲ್ಲಿ ವ್ಯಾಪಕವಾದ ಪುನರ್ವ್ಯವಸ್ಥೆಯಾಯಿತು. ಅದು 85 ತಾಲೂಕು ಕೋರ್ಟುಗಳು, 8 ಮುಖ್ಯ ಸಾದರ್ ಮುನ್ಸೀಫ್‌ಕೋರ್ಟುಗಳು, 4 ಸೂಪರಿಂಟೆಂಡೆಂಟರ ಕೋರ್ಟುಗಳು, ಮೂವರು ನ್ಯಾಯಾಧಿಪತಿಗಳಿಂದ ಕೂಡಿದ ಒಂದು ಹುಜೂರ್ ಅದಾಲತ್ ಕೋರ್ಟು, ಒಂದು ಕಮಿಷನರ ಕೋರ್ಟು—ಇವುಗಳಿಂದ ಕೂಡಿದ್ದಿತು. ಮೇಲಿನ ಕೊನೆಯ ಎರಡು ಕೋರ್ಟುಗಳು ಮೇಲ್ಮನವಿಯ ನ್ಯಾಯಾಸ್ಥಾನ (Courts of appeal)ಗಳಾಗಿದ್ದುವು. 1855–56 ರಲ್ಲಿ ಗೌರ್ನರ್ ಜನರಲ್ ಲಾರ್ಡ್ ಡಾಲ್‌ಹೌಸಿಯ ಭೇಟಿಯ ಫಲವಾಗಿ, ಕೆಲವು ನ್ಯಾಯಾಂಗ ಕಾರ್ಯಗಳಲ್ಲಿ ಕಮಿಷನರ ಹೊರೆಯನ್ನು ಹಗುರಗೊಳಿಸಲು ಒಬ್ಬ ಜುಡಿಷಿಯಲ್ ಕಮಿಷನರ ನೇಮಕವಾಯಿತು. ಸಿವಿಲ್ ಮತ್ತು ಕ್ರಿಮಿನಲ್ ವಿಚಾರಣೆಗಳಲ್ಲಿ ಪಂಚಾಯತರುಗಳನ್ನು ಬಳಸಿಕೊಂಡಿದ್ದು ನ್ಯಾಯವಿನಿಯೋಗದ ಮುಖ್ಯ ವೈಶಿಷ್ಟ್ಯ. ಕ್ರಿಮಿನಲ್ ಕೇಸುಗಳ ವಿಚಾರಣೆಯಲ್ಲಿ ಪಂಚಾಯತರು ಅನಿವಾರ್ಯವಾದ ಅಂಗವಾಗಿದ್ದರು; ಆದರೆ ಸಿವಿಲ್ ಕೇಸುಗಳಲ್ಲಿ ಅವರ ಸಹಾಯ ಐಚ್ಛಿಕವಾಗಿತ್ತು. ಸಂಬಂಧಿಸಿದವರಿಗೆ ಸಮಗ್ರ ನ್ಯಾಯದ ಪೂರ್ಣ ಪ್ರಯೋಜನ ದೊರೆಯಲೆಂಬ ಉದ್ದೇಶದಿಂದ ಎಲ್ಲ ಕೋರ್ಟುಗಳ ನ್ಯಾಯಾಧಿಕಾರ ಮತ್ತು ಆಡಳಿತ ವ್ಯಾಪ್ತಿಗಳು ನಿರ್ದಿಷ್ಟವಾಗಿ ನಿರ್ಣಯಗೊಂಡಿದ್ದುವು. ಕಮಿಷನ್ನಿನ ಆಡಳಿತದಲ್ಲಿ ನ್ಯಾಯ ವಿತರಣೆಯು ಮೊದಲಿಗಿಂತ ಉತ್ತಮಗೊಂಡಿದ್ದರೂ ನ್ಯಾಯವಿನಿಯೋಗದಲ್ಲಿ ಅನಿವಾರ್ಯ ಸಾವಕಾಶ ವಾಗುತ್ತಿತ್ತೆಂಬುದು ನಿಜ. ಇದರಿಂದ ಸಂಬಂಧಿಸಿದವರಿಗೆ ಅನನುಕೂಲತೆ ಮತ್ತು ಸಂದಿಗ್ಧತೆ ಉಂಟಾಗುತ್ತಿತ್ತು.

ಪೋಲೀಸು ಇಲಾಖೆಯು ಅಮಲ್ದಾರರುಗಳು ಮತ್ತು ಅವರ ಸಹಾಯಕರಾದ ಕಿಲ್ಲೇದಾರರು, ಹೋಬಳಿದಾರರು, ಶೇಕದಾರರು, ದಫೇದಾರರು ಮತ್ತು ಕಂದಾಚಾರ ಪೇದೆಗಳಿಂದ ಕೂಡಿದ್ದಿತು. ಲಂಬಾಣಿಗಳ ನಾಯಕ, ಕೊರಮ ಮತ್ತು ಒಡ್ಡರ ಗುಂಪಿನ ಮುಖ್ಯಸ್ಥರು ಕಳ್ಳ ಕಸಬಿನ ಪಂಗಡದವರೆಂದು ಪರಿಗಣಿತರಾಗಿದ್ದರಿಂದ ಅವರು ತಮ್ಮ ಸದ್ವರ್ತನೆಯ ಬಗ್ಗೆ ಜಾಮೀನು ಕೊಡಬೇಕಾಗಿತ್ತು. ಗ್ರಾಮಸ್ಥರಿಗೆ

ಆತ್ಮರಕ್ಷಣೆಗಾಗಿ ಆಯುಧ ಬಳಸುವ ಅಧಿಕಾರವಿತ್ತು. ಪುನಾರಚಿತ ಯೋಜನೆಯ ಪ್ರಕಾರ ಮೈಸೂರು, ತುಮಕೂರು, ಶಿವಮೊಗ್ಗ ಮತ್ತು ಬೆಂಗಳೂರು ನಗರಗಳಲ್ಲಿ ಮೊದಲಿಗಿಂತ ಹೆಚ್ಚಿಗೆ ಸಿಬ್ಬಂದಿಯ ಸ್ಥಾಪನೆಯಾಯಿತು. ಕಾರಾಗೃಹದ ಖೈದಿಗಳ ಜೀವನಪರಿಸ್ಥಿತಿಯನ್ನು ಉತ್ತಮಗೊಳಿಸುವ ಕಾರ್ಯ ನಡೆಯಿತು. 1856 ಮತ್ತು 1862 ರ ಮಧ್ಯಾವಧಿಯಲ್ಲಿ ಮರಾಮತ್ ಮತ್ತು ಕಾಮಗಾರಿ, ವಿದ್ಯಾಭ್ಯಾಸ, ಲೆಕ್ಕಾಚಾರ ಮತ್ತು ಲೆಕ್ಕ ಪರಿಶೋಧನೆ, ಅರಣ್ಯ-ಇತ್ಯಾದಿ ಅತಿಮುಖ್ಯ ಇಲಾಖೆಗಳನ್ನು ಪ್ರತ್ಯೇಕವಾಗಿ ರೂಪಿಸುವ ಕಾರ್ಯ ನಡೆಯಿತು.

ಕೇಂದ್ರ ಕಾರ್ಯಸ್ಥಾನದಲ್ಲಿ ಕೆಲಸಮಾಡುತ್ತಿದ್ದ ಸೂಪರಿಂಟೆಂಡೆಂಟರುಗಳ ಅಧೀನದಲ್ಲಿ ಸಣ್ಣ ಸಿಬ್ಬಂದಿಯಿಂದ ಕೂಡಿದ್ದ ಅಂದಿನ ಮರಾಮತ್ ಇಲಾಖೆ, ಇಂದು ಒಬ್ಬ ಚೀಫ್ ಇಂಜಿನಿಯರ್, 11 ಜನ ಮೇಲುದರ್ಜೆ ಮತ್ತು 19 ಜನ ಕೆಳದರ್ಜೆಯ ಅಧೀನಾಧಿಕಾರಿಗಳಿಂದ ಕೂಡಿ ವಿಸ್ತೃತವಾಯಿತು. ರಸ್ತೆ ನಿರ್ಮಾಣಕಾರ್ಯದಲ್ಲಿ ಕಬ್ಬನ್ನನಿಗಿದ್ದ ವಿಶೇಷ ಆಸಕ್ತಿಯ ಫಲವಾಗಿ ಅದಕ್ಕಾಗಿಯೇ ಒಬ್ಬ ಪ್ರತ್ಯೇಕ ಸೂಪರಿಂಟೆಂಡೆಂಟನ ನೇಮಕವಾಯಿತು. ಇದರ ಪರಿಣಾಮವಾಗಿ 1856 ರ ವೇಳೆಗೆ ಎಲ್ಲ ಪ್ರಮುಖ ಪಟ್ಟಣಗಳನ್ನೂ ಬೆಂಗಳೂರಿಗೆ ಕೂಡಿಸುವ ಸುಮಾರು 1600 ಮೈಲಿಗಳ ರಸ್ತೆಯ ನಿರ್ಮಾಣವಾಯಿತು. ಮದ್ದೂರು, ಹೊಸಕೋಟೆ, ಬೆಂಕಿಪುರ (ಭದ್ರಾವತಿ), ಶಿವಮೊಗ್ಗ ಮತ್ತು ಹಿರಿಯೂರುಗಳಲ್ಲಿ ನಿರ್ಮಿಸಿದ ಐದು ಪ್ರಧಾನ ಸೇತುವೆಗಳು ಕಬ್ಬನ್ನನ ಮತ್ತೊಂದು ಮಹತ್ಸಾಧನೆ. ಕೆರೆ ಮತ್ತು ಕಾಲುವೆಗಳ ಜೀರ್ಣೋದ್ಧಾರ ಮತ್ತು ಸರಕಾರೀ ಅಧಿಕಾರಿಗಳ ವಸತಿ ನಿರ್ಮಾಣಗಳ ಕಡೆಗೂ ಸಾಕಷ್ಟು ಗಮನ ಕೊಡಲಾಯಿತು. ಇವುಗಳೆಲ್ಲದರ ಜೊತೆಗೆ 336 ಮೈಲಿ ತಂತಿಸಂಪರ್ಕ ಏರ್ಪಡಿಸಿದ್ದು ಮತ್ತು 1859ರಲ್ಲಿ ಜಾಲಾರ್‌ಪೇಟೆ ಮತ್ತು ಬೆಂಗಳೂರುಗಳ ಮಧ್ಯೆ ಮೊದಲನೆಯ ರೈಲುಹಾದಿ ನಿರ್ಮಿಸಿದ್ದು—ಇವನಿಗೆ ಕೀರ್ತಿತಂದ ಇತರ ಅಂಶಗಳು. ಹೀಗೆ ಇಲ್ಲಿಂದ ಮುಂದೆ ಮರಾಮತ್ ಮತ್ತು ಕಾಮಗಾರಿ ಇಲಾಖೆ ಹೊಸ ಪ್ರಾಮುಖ್ಯ ಪಡೆಯಿತು.

ಪೂರ್ಣರೂಪದಲ್ಲಿ ಅಭಿವೃದ್ಧಿ ಹೊಂದಿಲ್ಲದ, ದೇಶದ ವಿಶಾಲವಾದ ಕಾಡುಗಳಲ್ಲಿದ್ದ ಅಪಾರವಾದ ನಿಸರ್ಗ ಸಂಪತ್ತನ್ನು ಮನಗಂಡು ಅವನು ಒಬ್ಬ ಅರಣ್ಯಪಾಲನಾಧಿಕಾರಿ ಮತ್ತು ಅವನಿಗೆ ಸಹಾಯಕರಾದ ಶಿಕ್ಷಿತ ಅಧೀನಾಧಿಕಾರಿಗಳಿಂದ ಕೂಡಿದ ಒಂದು ಪ್ರತ್ಯೇಕ ಇಲಾಖೆಯನ್ನು ಸ್ಥಾಪಿಸಿದನು.

ರೋಗಪೀಡಿತರಾದ ಜನರಿಗೆ ಹೆಚ್ಚು ವೈದ್ಯಕೀಯ ಸೌಲಭ್ಯವನ್ನು ದೊರಕಿಸುವ ಸಲುವಾಗಿ ಸಾರ್ವಜನಿಕ ಆರೋಗ್ಯ ಇಲಾಖೆಯನ್ನು ವಿಸ್ತಾರಗೊಳಿಸುವ ಕಾರ್ಯ ಕೈಗೊಳ್ಳಲಾಯಿತು. ಶಿವಮೊಗ್ಗೆಯಲ್ಲಿ ಒಬ್ಬ ಎರಡನೆ ದರ್ಜೆಯ ಶಸ್ತ್ರವೈದ್ಯನ ನೇಮಕವಾಯಿತು. ಔಷಧಾಲಯಗಳನ್ನು ವೈದ್ಯರ ಅಧಿಕಾರಕ್ಕೆ ವಹಿಸಲಾಯಿತು. ಆದರೂ ಒಟ್ಟಿನಲ್ಲಿ ಜನಸಾಮಾನ್ಯರೆಲ್ಲರಿಗೂ ಸಾಲುವಷ್ಟು ವೈದ್ಯಕೀಯ ಸೌಲಭ್ಯ ಒದಗಿಸಲಾಗಲಿಲ್ಲವೆಂಬುದನ್ನು ಒಪ್ಪಿಕೊಳ್ಳಲೇಬೇಕು.

ಈ ಅವಧಿಯಲ್ಲಿನ ದೇಶದ ಆರ್ಥಿಕ ಪರಿಸ್ಥಿತಿ ಗಮನಾರ್ಹವಾದುದು. ಭೂಕಂದಾಯ, ಸುಂಕದ ತೆರಿಗೆ, ಏಕಸ್ವಾಮ್ಯ ವ್ಯಾಪಾರದ ಮೇಲಿನ ತೆರಿಗೆ—ಗಂಧದ ಮರ, ಛಾಪಾ ಕಾಗದ, ಜುಲ್ಮಾನೆ ಮತ್ತು ಮುಟ್ಟುಗೋಲು, ಅಂಚೆ—ಇವು ಆದಾಯದ ಮುಖ್ಯ ಆಕರಗಳಾಗಿದ್ದುವು. ಮೊದಲ ವರ್ಷ 68 ಲಕ್ಷ ರೂಪಾಯಿ ಇದ್ದ ಒಟ್ಟು ಆದಾಯ 1855-56ರಲ್ಲಿ 84 ಲಕ್ಷಕ್ಕೇರಿತು. ಪಂಚಬಾಬು ಮತ್ತು ಸಾಯರ್ (ಸುಂಕ) ದಂತಹ ಇತರ ಮೂಲಗಳ ಆದಾಯಗಳೂ ಸಾಕಷ್ಟು ಹೆಚ್ಚಿದವು. 1834-35ರಲ್ಲಿ 65ಲಕ್ಷ ರೂಪಾಯಿ ವಾರ್ಷಿಕ ಖರ್ಚು ಇದ್ದದ್ದು 1860-61ರಲ್ಲಿ ಆಡಳಿತದಲ್ಲಿ ದಕ್ಷತೆಯನ್ನು

ಹೆಚ್ಚಿಸಿದುದರ ಫಲವಾಗಿ 85 ಲಕ್ಷಕ್ಕೇರಿತು. ಸರ್ಕಾರ ಮಾಡಿದ ಬಹು ದೊಡ್ಡ ಮೊತ್ತದ ಸಾಲಗಳನ್ನು ತೀರಿಸಿದ್ದು ಕಬ್ಬನ್ ನಿರ್ವಹಿಸಿದ ಮುಖ್ಯಕಾರ್ಯಗಳಲ್ಲೊಂದು. ಇದರಲ್ಲಿ ದೇಶದ ಆಡಳಿತವನ್ನು ಕೈಗೊಂಡಾಗ ಸರ್ಕಾರೀ ಮತ್ತು ಸೈನಿಕ ಅಧಿಕಾರಿಗಳ ಬಾಕಿ ಉಳಿದಿದ್ದ ವೇತನಗಳನ್ನು ಪಾವತಿ ಮಾಡಲು ಮದ್ರಾಸ್ ಸರ್ಕಾರ ಕೊಟ್ಟ 10 ಲಕ್ಷ ರೂಪಾಯಿಗಳ ಸಾಲವೇ ಪ್ರಮುಖವಾದುದಾಗಿತ್ತು. ಮಿಕ್ಕ ಸಾಲ ಕೊಟ್ಟವರೆಂದರೆ ಸ್ಥಳೀಯ ಬ್ಯಾಂಕಿನವರು ಮತ್ತು ಧನಿಕ ವರ್ತಕರು. 1857ರ ವೇಳೆಗೆ ಎಲ್ಲಾ ಸಾಲವನ್ನೂ ತೀರಿಸಿದ ಕೀರ್ತಿ ನಿಸ್ಸಂದೇಹವಾಗಿ ಕಬ್ಬನ್‌ಗೆ ಸೇರಿದ್ದು. ಇಷ್ಟೇ ಅಲ್ಲದೆ ಅವನ ಆಡಳಿತದ ಅವಧಿ ಪೂರಾ, ಕ್ರಮವಾಗಿ 24½ ಲಕ್ಷ ರೂಪಾಯಿಗಳ ಪೊಗದಿಯನ್ನು ತಪ್ಪದೇ ಸಲ್ಲಿಸುತ್ತಿದ್ದನು. ಹಲವು ಸರಕುಗಳ ಮೇಲಿನ ರಾಜ್ಯದ ಒಳಗಿನ ಮತ್ತು ಹೊರಗಿನ ಸಾಗಾಣಿಕೆಯ ಸುಂಕವನ್ನು ವಜಾ ಮಾಡಿದ್ದು ವ್ಯಾಪಾರಾಭಿವೃದ್ಧಿಗೆ ಪ್ರೋತ್ಸಾಹಕೊಟ್ಟಿತು. 1842–43ರಲ್ಲಿ ಮೈಸೂರು ತಾಲೂಕಿನ ಸಾಯರ್ ಮತ್ತು ಪಂಚಬಾಬುಗಳನ್ನು ಸರ್ಕಾರದ ಆಡಳಿತಕ್ಕೆ ಪ್ರಾಯೋಗಿಕವಾಗಿ ವಹಿಸಿಕೊಂಡದ್ದು ಮುಂದೆ ಫಲಪ್ರದವಾಯಿತು. ಆದ್ದರಿಂದ ಇದನ್ನು ಬೇರೆ ತಾಲೂಕುಗಳಿಗೂ ಅನ್ವಯಿಸಲಾಯಿತು. ಸಾಯರ್ ಪದ್ಧತಿಯಲ್ಲಿ ಮಾಡಿದ ಮಾರ್ಪಾಡುಗಳಿಂದ ಸರಕು ಸಾಗಾಣಿಕೆ ಸುಲಭಸಾಧ್ಯವಾಯಿತು.

ಭೂಕಂದಾಯದ ಆಡಳಿತವನ್ನು ಡಿವಿಜನಲ್ ಸೂಪರಿಂಟೆಂಡೆಂಟರುಗಳ ಮತ್ತು ಅಮಲ್ದಾರರುಗಳ ವಶಕ್ಕೆ ಒಪ್ಪಿಸಲಾಯಿತು. ಅಮಲ್ದಾರರುಗಳು ಕಂದಾಯವನ್ನು ವಸೂಲುಮಾಡಲು ಶೇಕದಾರರುಗಳ ಸಹಾಯವನ್ನು ಪಡೆಯುತ್ತಿದ್ದರು. ಪ್ರತಿಹಳ್ಳಿಗೂ ಹೋಗಿ ಕೆರೆಕಟ್ಟೆ ಮತ್ತು ವ್ಯವಸಾಯದ ಸ್ಥಿತಿಗತಿಗಳನ್ನು ಪರಿಶೀಲಿಸುವುದೂ ಗ್ರಾಮಾಧಿಕಾರಿಯ ತೀರ್ಮಾನಿಸಲಾಗದಂತಹ ವ್ಯಾಜ್ಯಗಳನ್ನು ಬಗೆಹರಿಸುವುದೂ ಶೇಕದಾರರ ಕರ್ತವ್ಯವಾಗಿತ್ತು. ಶೇಕದಾರರು ಹಳ್ಳಿಯ ಗೌಡರಿಂದ ಕಂದಾಯ ವಸೂಲಿಮಾಡಿ ಅಮಲ್ದಾರರಿಗೆ ತಲಪಿಸುತ್ತಿದ್ದರು. ಭೂಕಂದಾಯ ಆದಾಯದ ಮುಖ್ಯ ಆಕರವಾಗಿತ್ತು. ಪ್ರಮುಖವಾಗಿ ರೈತವಾರಿ ಮತ್ತು ಬಟಾಯಿ (ಸರ್ಕಾರ ಮತ್ತು ರೈತ ಫಸಲನ್ನು ಹಂಚಿಕೊಳ್ಳುವುದು ಮತ್ತು ಕಂದಾಯವನ್ನು ಧಾನ್ಯರೂಪದಲ್ಲಿ ಸಲ್ಲಿಸುವುದು) ಎಂಬ ಎರಡು ಪದ್ಧತಿಗಳ ಪ್ರಕಾರ ಜಮೀನು ಹಿಡುವಳಿ ನಡೆಯುತ್ತಿತ್ತು. ಕಬ್ಬನ್ನನು ರೈತರ ಅಭಿವೃದ್ಧಿಯಲ್ಲಿ ಸಹಾನುಭೂತಿಯುಳ್ಳವನಾಗಿದ್ದರಿಂದ, ಸರ್ಕಾರಕ್ಕೆ ಕೊಡಬೇಕಾದ ಹಣವು ಎಲ್ಲೆಲ್ಲಿ ಹೆಚ್ಚಾಗಿ, ಅವರ ಪಾಲಿಗೆ ಹೊರೆಯಾಗಿದ್ದಿತೋ ಅಲ್ಲೆಲ್ಲಾ ಅದನ್ನು ಕಡಮೆ ಮಾಡಿದನು. ಕಂದಾಯ ವಸೂಲಿಕ್ರಮದಲ್ಲಿ ಸರ್ವವಿಧದಲ್ಲೂ ಔದಾರ್ಯ ತೋರಲಾಯಿತು ಮತ್ತು ಮೇಲ್ವಿಚಾರಣೆ ಎಚ್ಚರಿಕೆಯಿಂದ ನಡೆಯುತ್ತಿತ್ತು. ಬಟಾಯಿಯನ್ನು ಧಾನ್ಯರೂಪದಿಂದ ಧನರೂಪಕ್ಕೆ ಬದಲಾಯಿಸಲು ಮತ್ತು ರೈತರಿಗೆ ಉಪದ್ರವಕಾರಿಯಾದ ಕಾರ್ಯಗಳು ನಡೆಯುತ್ತಿದ್ದಲ್ಲೆಲ್ಲಾ ಅವುಗಳನ್ನು ತೊಡೆದು ಹಾಕಲು ಸರ್ವವಿಧವಾದ ಪ್ರಯತ್ನಗಳೂ ನಡೆದುವು. 1885ರಲ್ಲಿ 769ಕ್ಕೆ ಕಡಮೆಯಿಲ್ಲದ ರೀತಿಯ ತೆರಿಗೆಗಳನ್ನು ತೆಗೆದುಹಾಕಲಾಗಿದೆಯೆಂದು ವರದಿಮಾಡಿದನು. ಹೊಸ ಕೈಗಾರಿಕೆಗಳ ಸ್ಥಾಪನೆ ಮತ್ತು ದೇಶದಲ್ಲಿ ಉತ್ಪನ್ನವಾಗುತ್ತಿದ್ದ ಹತ್ತಿ, ಉಣ್ಣೆ, ರೇಷ್ಮೆ ಮೊದಲಾದ ವಸ್ತುಗಳ ದರ್ಜೆಯನ್ನು ಉತ್ತಮಪಡಿಸಲು ಕೈಗೊಂಡ ಕ್ರಮಗಳು ದೇಶದ ಜನರ ಆರ್ಥಿಕ ಪರಿಸ್ಥಿತಿ ಉತ್ತಮಗೊಳ್ಳಲು ಸಹಕಾರಿಯಾದುವು. ಸರ್ಕಾರದ ಪ್ರೋತ್ಸಾಹ ಪಡೆದ ಖಾಸಗಿ ಉದ್ಯಮಗಾರರಿಂದ ಕಾಫಿಬೆಳೆ 1,59,165 ಎಕರೆಗಳಲ್ಲಿ ದೊಡ್ಡಪ್ರಮಾಣದಲ್ಲಿ ಬೆಳೆಸಲಾಯಿತು.

ಆಂಗ್ಲ-ದೇಶೀಯ ಪಾಠಶಾಲೆಗಳ ಮುಖಾಂತರ ವಿದ್ಯಾಪ್ರಸಾರ ಕಾರ್ಯ ಪ್ರಾರಂಭಿಸಿದ ವೆಸ್ಲಿಯನ್ ಮಿಷನ್ನಿನವರು, ಈ ಅವಧಿಯಲ್ಲಿ ಅದರ ಪ್ರಗತಿ ನಿಧಾನವಾಗಿದ್ದರೂ ಆ ಕಾರ್ಯವನ್ನು ನಡೆಸಿಕೊಂಡು ಬಂದರು. ಮಿಷನರಿ ಮತ್ತು ಶಿಕ್ಷಣವೇತ್ತನಾದ ರೆವರೆಂಡ್ ಜೆ. ಗ್ಯಾರೆಟ್ ಒಬ್ಬ ಹೆಸರಾಂತ ಮತ್ತು ವಿದ್ಯಾರಂಗದಲ್ಲಿ ಮೊದಲಿಗನಾದ ವ್ಯಕ್ತಿಯಾಗಿದ್ದನು. ಈ ದೇಶಕ್ಕೆ ಅವನು ಉದಾರಸೇವೆ ಸಲ್ಲಿಸಿದನು.



ಇಷ್ಟಾದರೂ ಸರ್ಕಾರವು ವಿದ್ಯಾಭ್ಯಾಸಕ್ಕೆ ಸಾಕಷ್ಟು ಗಮನ ಕೊಡಲಿಲ್ಲವೆಂಬುದೂ ಅದಕ್ಕಾಗಿ ಮಾಡಿದ ಖರ್ಚು ಅತ್ಯಲ್ಪವೆಂಬುದೂ ವಿಷಾದನೀಯ.

ಘನತೆ ಮತ್ತು ವೈಶಿಷ್ಟ್ಯಗಳಿಂದ ಕೂಡಿದ ಕಮಿಷನರಾಗಿದ್ದ ಸರ್ ಮಾರ್ಕ್ ಕಬ್ಬನ್ನನ ಕಾಲದಲ್ಲಿ ಮೈಸೂರು ದೇಶವು ಗಮನಾರ್ಹ ಏಳಿಗೆಯನ್ನು ಪಡೆಯಿತು. ದೇಶದ ಸಾಧನಸಂಪತ್ತನ್ನು ಆದಷ್ಟೂ ಪ್ರಜೆಗಳ ಪರವಾನುಕೂಲ್ಯಕ್ಕಾಗಿ ಬಳಸಿದ್ದಷ್ಟೇ ಅಲ್ಲದೆ ಆಡಳಿತಗಾರರ ಬಗ್ಗೆ ಜನರ ಆದರ ವಿಶ್ವಾಸಗಳು ಪುನಶ್ಚೈತನ್ಯಗೊಂಡವು. ಜನರ ಏಳಿಗೆ ಮತ್ತು ಅಭ್ಯುದಯಕ್ಕಾಗಿ ದೃಢವಾದ ಮತ್ತು ಸುಲಭವಾದ ತಳಹದಿ ಹಾಕಲಾಯಿತು. ಕಬ್ಬನ್ ಒಬ್ಬ ಶ್ರೇಷ್ಠ ರಾಜನೀತಿಜ್ಞನಾಗಿದ್ದನು. ಅವನನ್ನು ಕುರಿತು ಒಬ್ಬ ವಿಶಿಷ್ಟ ಸಂಪ್ರದಾಯಪಾಲಕರಾದ ಮತ್ತು ಮುಂಜಾಗ್ರತೆಯುಳ್ಳ ಆಡಳಿತಗಾರನೆಂದು ವಿವರಿಸ ಲಾಗಿದೆ. ಜನರ ಸದ್ಯದ ಆವಶ್ಯಕತೆ ಮತ್ತು ಅಗತ್ಯಗಳನ್ನು ಪೂರೈಸುವ ಉದ್ದೇಶದಿಂದ ಆಡಳಿತವನ್ನು ಕ್ರಿಯಾತ್ಮಕ ನಿಯಮಗಳ ಆಧಾರದ ಮೇಲೆ ನಡೆಸಲಾಗುತ್ತಿತ್ತು. ಅವನ ನ್ಯಾಯಪರತೆ, ಮಾನವೀಯತೆ, ಅನುಕಂಪ ಮತ್ತು ಔಚಿತ್ಯಜ್ಞಾನ ಅವನಿಗೆ ಒಂದು ಶ್ರೇಷ್ಠಸ್ಥಾನವನ್ನು ಗಳಿಸಿಕೊಟ್ಟಿದ್ದವು. ೧೮೬೧ರಲ್ಲಿ ತನ್ನ ಅನಾರೋಗ್ಯದಿಂದ ಚೇತರಿಸಿಕೊಳ್ಳಲು ಅವನು ಕೆಲಸಕ್ಕೆ ರಾಜೀನಾಮೆಯಿತ್ತು ಭಾರತವನ್ನು ಬಿಟ್ಟು ತೆರಳಿದನು. ದುರದೃಷ್ಟವಶಾತ್, ತಾಯ್ನಾಡಾದ ಇಂಗ್ಲೆಂಡನ್ನು ತಲಪದೆ ಮಾರ್ಗಮಧ್ಯದಲ್ಲಿ, ಸೂಯೆಜಿನಲ್ಲಿ ಮರಣ ಹೊಂದಿದನು.

1862ರಲ್ಲಿ ಲೂಯಿ ಬೆನ್ಥಾಮ್ ಬೌರಿಂಗನು ಸರ್ ಮಾರ್ಕ್ ಕಬ್ಬನ್ನನ ಸ್ಥಾನಕ್ಕೆ ಬಂದನು. ಇವನು ಸುಮಾರು 10 ವರ್ಷಗಳ ಕಾಲ ಅಧಿಕಾರದಲ್ಲಿದ್ದನು, ಇವನು ಸಹ ಶ್ರೇಷ್ಠ ಆಡಳಿತ ಸಾಮರ್ಥ್ಯವುಳ್ಳವನೂ ಭಾರತೀಯ ವ್ಯವಹಾರಗಳಲ್ಲಿ ಹೆಚ್ಚು ಅನುಭವವುಳ್ಳವನೂ ಆಗಿದ್ದನು. ಇವನ ಆಗದುನವು ಸತತಶ್ರದ್ಧೆಯ ಮತ್ತು ವ್ಯಾಪಕವಾದ ಆಡಳಿತಸುಧಾರಣೆಗಳ ಕಾಲದ ಸಂಕೇತವಾಗಿತ್ತು. 1863 ರಿಂದ ಮುಂದೆ ಮೈಸೂರು ಒಂದು 'ಕ್ರಮಬದ್ಧವಾದ ಪ್ರಾಂತ' (Regulation Province) ವಾಯಿತು; ಮತ್ತು ದಕ್ಷತೆಯನ್ನೇ ಮುಖ್ಯಧ್ಯೇಯವನ್ನಾಗುಳ್ಳ ಒಂದು ಪುನರ್ವ್ಯವಸ್ಥೆಯ ಸಾಮಾನ್ಯಯೋಜನೆಯು 1862-63 ರಿಂದ ಪ್ರಾರಂಭವಾಯಿತು. ಹೊಸ ಯೋಜನೆಯ ಪ್ರಕಾರ ಪ್ರಾಂತವು ನಂದೀದುರ್ಗ, ಅಷ್ಟಗ್ರಾಮ ಮತ್ತು ನಗರಗಳೆಂಬ ಮೂರು ವಿಭಾಗವಾಯಿತು. ಮತ್ತೆ ಇವನ್ನು ೮ ಜಿಲ್ಲೆಗಳಾಗಿ ವಿಂಗಡಿಸಲಾಯಿತು. ಪ್ರತಿಯೊಂದು ವಿಭಾಗವೂ 1869ರ ವರೆಗೆ ಒಬ್ಬ ಯುರೋಪಿಯನ್ ಸೂಪರಿಂಟೆಂಡೆಂಟನ ಅಧಿಕಾರದಲ್ಲಿತ್ತು. ಅನಂತರ ಅವರ ಸ್ಥಾನದಲ್ಲಿ ಒಬ್ಬೊಬ್ಬ ಕಮಿಷನರ ನೇಮಕವಾಯಿತು. ಅಸಿಸ್ಟೆಂಟ್ ಸೂಪರಿಂಟೆಂಡೆಂಟರುಗಳ ಸಹಾಯ ಪಡೆದ ಡೆಪ್ಯುಟಿ ಸೂಪರಿಂಟೆಂಡೆಂಟರುಗಳಿಗೆ ಜಿಲ್ಲೆಗಳ ಆಡಳಿತವನ್ನು ವಹಿಸಲಾಯಿತು. ಐದು ಬೇರೆ ಬೇರೆ ದರ್ಜೆಗೆ ಸೇರಿದ ಆನೇಕ ತಾಲೂಕುಗಳು ಒಂದು ಜಿಲ್ಲೆಯಲ್ಲಿದ್ದುವು. ಮೈಸೂರಿನಲ್ಲಿದ್ದ ಬ್ರಿಟಿಷ್ ಪ್ರತಿನಿಧಿಗೆ ಮಹಾರಾಜರ ಆಳಿಕೆಯ ದೇಶದ ಸರ್ಕಾರದ ಕಮಿಷನರ್ ಎಂಬುದಕ್ಕೆ ಬದಲಾಗಿ 'ಚೀಫ್‌ಕಮಿಷನರ್' ಎಂದು ನಾಮಕರಣ ಮಾಡಲಾಯಿತು. ಮುಂದೆ ವಿಭಾಗ ಕಮಿಷನರ ಕಚೇರಿಯನ್ನು ತೆಗೆದು ಹಾಕಿದಾಗ, ಕಂದಾಯದ ಬಾಬಿನಲ್ಲಿ ಡೆಪ್ಯುಟಿ ಕಮಿಷನರ್, ಅವನ ಅಸಿಸ್ಟೆಂಟ್ ಕಮಿಷನರುಗಳು ಮತ್ತು ಅಮಲ್ದಾರರು ಚೀಫ್ ಕಮಿಷನರ ಕೈಕೆಳಗೆ ಕೆಲಸ ಮಾಡುತ್ತಾ ಬಂದರು. 1869ರಲ್ಲಿ ಅಸಿಸ್ಟೆಂಟ್ ಸೂಪರಿಂಟೆಂಡೆಂಟರುಗಳು ಸಾಮಾನ್ಯವಾಗಿ ಸಿವಿಲ್ ಕಾರ್ಯ ದಿಂದ ಮುಕ್ತರಾದರು ಮತ್ತು ನಿರ್ದಿಷ್ಟ ಕಾರ್ಯವನ್ನು ನೆರವೇರಿಸಲು ಪ್ರತಿಯೊಂದು ಜಿಲ್ಲೆಗೂ ಒಬ್ಬೊಬ್ಬ ನ್ಯಾಯಾಂಗ ಸಹಾಯಕನ (Judicial Assistant) ನೇಮಕವಾಯಿತು. ಡೆಪ್ಯುಟಿ ಕಮಿಷನರುಗಳ ಸಿವಿಲ್ ಅಧಿಕಾರವನ್ನು ಕ್ರಮೇಣ ಕಡಮೆ ಮಾಡಲಾಯಿತು ಮತ್ತು 1879 ರಲ್ಲಿ ಸಿವಿಲ್ ಮತ್ತು ಕ್ರಿಮಿನಲ್ ಕಾರ್ಯಗಳ ಬೇರ್ಪಡೆ ಕಾರ್ಯಗತವಾಯಿತು, ಅಮಲ್ದಾರರುಗಳನ್ನು ಸಿವಿಲ್ ನ್ಯಾಯನಿರ್ವಾಹ ಕಾರ್ಯಗಳಿಂದ

ಬಿಡುಗಡೆಮಾಡಿ, ಅವರು ತಮ್ಮ ಕಂದಾಯಕಾರ್ಯಗಳಿಗೆ ಹೆಚ್ಚು ಗಮನ ಕೊಡುವಂತೆ ಮಾಡುವ ಸಲುವಾಗಿ 1874-75 ರಲ್ಲಿ ಮುನ್ಸೀಫ್ ಕೋರ್ಟುಗಳ ಸ್ಥಾಪನೆಯಾಯಿತು. ಜಿಲ್ಲೆಯ ಭೂಕಂದಾಯದ ಅಂದಾಜು ಮತ್ತು ವಸೂಲಿಯ ಹೊಣೆಯನ್ನು, ಜಿಲ್ಲೆಯ ಆಡಳಿತದ ಪೂರ್ಣನಿಯಂತ್ರಣಾಧಿಕಾರವನ್ನು ಡೆಪ್ಯುಟಿ ಕಮಿಷನರನಿಗೆ ಒಪ್ಪಿಸಲಾಯಿತು. ಪ್ರತಿಯೊಂದು ಇಲಾಖೆಯಲ್ಲೂ ಕಾರ್ಯವು ಅಪರಿಮಿತವಾಗಿ ಬೆಳೆದಿದ್ದುದರಿಂದ ವಿಭಾಗದ ಸೂಪರಿಂಟೆಂಡೆಂಟರುಗಳಿಗೆ ಹೆಚ್ಚು ಅಧಿಕಾರ ಸ್ವಾತಂತ್ರ್ಯವನ್ನು ಕೊಡಲಾಯಿತು. ಜಿಲ್ಲೆಯ ವ್ಯವಹಾರಗಳಲ್ಲಿ ಮೇಲಿನ ಅಧಿಕಾರಿಗಳು ಸಾಮಾನ್ಯವಾಗಿ ಕೈಹಾಕುತ್ತಿರಲಿಲ್ಲ.

ಭೂಮಿಯ ಅಳತೆ ಮತ್ತು ಭೂಕಂದಾಯದ ತೀರ್ಮಾನದಲ್ಲಿ ಪ್ರಬಲ ನ್ಯೂನತೆಗಳಿರುವುದನ್ನು ಮನಗಂಡು ಚೀಫ್ ಕಮಿಷನರನು ರೆವಿನ್ಯೂ ಸರ್ವೆ ಮತ್ತು ಸೆಟಲ್‌ಮೆಂಟ್ ಇಲಾಖೆಯ ಪುನರ್ವ್ಯವಸ್ಥೆಯನ್ನು ತಾನೇ ಕೈಗೊಂಡನು. ಭೂಮಿಯ ಅಳತೆ ಮತ್ತು ಅಂದಾಜಿನ ವಿಷಯದಲ್ಲಿ ಕ್ರಮಬದ್ಧತೆಯನ್ನೂ ನಿಷ್ಕೃಷ್ಟತೆಯನ್ನೂ ಆಚರಣೆಗೆ ತಂದನು. ಅವನು ಇನಾಮ್‌ಕಮಿಷನ್ನನ್ನು ಸ್ಥಾಪಿಸಿದನು ; ಅದು 1863 ರಲ್ಲಿ ತನ್ನ ಕಾರ್ಯ ಪ್ರಾರಂಭಿಸಿತು. ಆವಶ್ಯಕವಾದ ಹೊಸ ಮಾರ್ಪಾಟುಗಳನ್ನು ಕಾರ್ಯಗತ ಮಾಡಲು ಸರ್ವೆ ಸೆಟಲ್‌ಮೆಂಟ್ ಕಮಿಷನರ ಅಧೀನದಲ್ಲಿ ಒಂದು ಹೊಸ ಇಲಾಖೆ ರೂಪುಗೊಂಡಿತು. ಕಂದಾಯಕ್ಕೆ ಸಂಬಂಧಿಸಿದ ಮೊಕದ್ದಮೆಗಳನ್ನು ಮತ್ತು ದಾಖಲೆಗಳನ್ನು ಕ್ರಮಬದ್ಧಗೊಳಿಸಲು 1864 ರಲ್ಲಿ ಒಂದು ವ್ಯಾಪಕವಾದ ಕಂದಾಯ ಸುತ್ತೋಲೆಯನ್ನು ಹೊರಡಿಸಲಾಯಿತು. ಸರ್ವೆಪದ್ಧತಿ ಮತ್ತು ನೀರಾವರಿ ವಿಷಯಗಳಿಗೆ ಸಂಬಂಧಿಸಿದ ಮುಖ್ಯಾಂಶಗಳಿಗೆ ಗಮನಕೊಡಲು ಸಮಿತಿಗಳನ್ನು ರಚಿಸಲಾಯಿತು. ಬೊಂಬಾಯಿಯ 1865ರ Iನೆ ಶಾಸನ ಮತ್ತು 1868ರ IVನೆ ಶಾಸನಗಳು ಜಾರಿಗೆ ಬಂದು ಅವುಗಳ ಆಧಾರದ ಮೇಲೆ ಸರ್ವೆ ಮತ್ತು ಸೆಟಲ್‌ಮೆಂಟ್ ನಿಯಮಗಳು ರಚಿತವಾದುವು. 1863 ರಲ್ಲಿ ಏಕರೀತಿಯ ಅಧಿಕಾರಪೂರ್ವಕ ವರದಿಗಳನ್ನು ಮತ್ತು ದಾಖಲೆಗಳನ್ನು ರೂಪಿಸಲಾಯಿತು.

1862–63ರನಂತರ ಕಾರ್ಯರೂಪಕ್ಕೆ ಬಂದ ಪುನರ್ವ್ಯವಸ್ಥಿತ ಯೋಜನೆಯ ಪ್ರಕಾರ, ನ್ಯಾಯಾಂಗದ ಅಧಿಕಾರಿಗಳೆಂದರೆ—ಇಡೀ ಪ್ರಾಂತದಲ್ಲಿ ಸಿವಿಲ್ ಮತ್ತು ಕ್ರಿಮಿನಲ್ ನ್ಯಾಯನಿರ್ವಾಹ ಮಾಡುವುದರ ಜೊತೆಗೆ ಮುಖ್ಯನ್ಯಾಯಸ್ಥಾನದಲ್ಲೂ ಅಧಿಕಾರವ್ಯಾಪ್ತಿ ಹೊಂದಿದ್ದ ನ್ಯಾಯಾಂಗ ಕಮಿಷನರು, ಸೆಷನ್ಸ್ ಜಡ್ಜಿಗಳು, ಜಿಲ್ಲೆಗಳ ಡೆಪ್ಯುಟಿ ಸೂಪರಿಂಟೆಂಡೆಂಟರುಗಳು, ಅಸಿಸ್ಟೆಂಟ್ ಸೂಪರಿಂಟೆಂಡೆಂಟರುಗಳು ಮತ್ತು ಅಮಲ್ದಾರರುಗಳು—ಇವರ ನ್ಯಾಯಾಂಗ ಅಧಿಕಾರವನ್ನು ವಹಿಸಿಕೊಂಡ ವಿಭಾಗದ ಸೂಪರಿಂಟೆಂಡೆಂಟರುಗಳು. ನ್ಯಾಯಾಂಗ ಕಮಿಷನರ ಕಾರ್ಯಗಳು ನ್ಯಾಯಾಂಗ, ಪೋಲೀಸು ಮತ್ತು ಸೆರೆಮನೆಯ ಆಡಳಿತಕ್ಕೆ ಸೀಮಿತವಾಗಿದ್ದವು. ಆದರೆ ಇತರರ ಕಾರ್ಯಗಳು ಸಿವಿಲ್, ಕ್ರಿಮಿನಲ್ ಮತ್ತು ಕಂದಾಯ ನಿರ್ವಾಹಕಾರ್ಯಗಳಿಗೆ ಮಿತಿಗೊಂಡಿದ್ದವು. ಹುಜೂರ್ ಅದಾಲತ್ ಮತ್ತು ಸಾದರ್ ಮುನ್ಸೀಫ್ ಕೋರ್ಟುಗಳನ್ನು ತೆಗೆದು ಹಾಕಿದ್ದು ; ಇಂಡಿಯನ್ ಪೀನಲ್ ಕೋಡನ್ನೂ ಕ್ರಿಮಿನಲ್ ಪ್ರೊಸೀಜರ್ ಕೋಡನ್ನೂ ಅಪರಾಧದ ನಿರ್ಧಾರ ಮತ್ತು ಅದಕ್ಕೆ ನಿರ್ದಿಷ್ಟವಾದ ದಂಡನಾಕ್ರಮವನ್ನು ಹೇಳುವ 1872ರ Xನೆ ಶಾಸನವನ್ನೂ ಆಚರಣೆಗೆ ತಂದುದು ; ಶುಲ್ಕ ಪದ್ಧತಿಯನ್ನು ತೊಡೆದು ಅದರ ಸ್ಥಾನದಲ್ಲಿ ಛಾಪಾ ನಿಯಮಗಳು ಮತ್ತು ಛಾಪಾಕಾಗದಗಳನ್ನು ಬಳಕೆಗೆ ತಂದುದು—ಇವು ಕಾರ್ಯಗತವಾದ ಇತರ ಮಾರ್ಪಾಡುಗಳು. ಸರ್ಕಾರದ ಕಾರ್ಯಶಾಖೆಯ ಕಾರ್ಯಗಳನ್ನು ನ್ಯಾಯಾಂಗ ಕಾರ್ಯಗಳಿಂದ ಬೇರ್ಪಡಿಸುವುದರಿಂದುಂಟಾಗುವ ಅನುಕೂಲತೆಗಳ ಯೋಗ್ಯಕಲ್ಪನೆ ಬೌರಿಂಗನಿಗೆ ಇತ್ತು. ಹೀಗಾಗಿ ಇವನು ನ್ಯಾಯಾಂಗ ಶಾಖೆಯ ವಿಸ್ತಾರವಾದ ಕಾರ್ಯಾಚರಣೆಯಲ್ಲಿ ಸುಧಾರಣೆಗಳನ್ನು ಮಾಡಿದನು. 1864ರ XIVನೆ ರಿಜಿಸ್ಟ್ರೇಷನ್ ಶಾಸನದ ಪ್ರಕಾರ ಮುಖ್ಯದಾಖಲೆಗಳನ್ನು ರಿಜಿಸ್ಟರ್ ಮಾಡಿಸಲೂ ನ್ಯಾಯಸ್ಥಾನದ ಕಾರ್ಯಗಳನ್ನು ನೆರವೇರಿಸುವುದರಲ್ಲಿ ಹೆಚ್ಚು ಕಾಲನಿಷ್ಠೆ ಮತ್ತು ಕ್ರಮಬದ್ಧತೆ ಹೊಂದಿಸಲೂ

ಒತ್ತಾಯ ಮಾಡಿದನು. 1873ರಲ್ಲಿ ನಂದಿದುರ್ಗ ವಿಭಾಗದಲ್ಲಿ ಮುನ್ಸೀಫ್ ಕೋರ್ಟುಗಳನ್ನು ಸ್ಥಾಪಿಸುವುದರ ಜೊತೆಗೆ ಸಿವಿಲ್ ಮತ್ತು ಕ್ರಿಮಿನಲ್ ಕಾರ್ಯಗಳನ್ನು ಬೇರ್ಪಡಿಸುವ ಪ್ರಯತ್ನ ನಡೆಯಿತು, ಪರಿಷ್ಕರಿಸಿದ ಈ ಪದ್ಧತಿಯ ಪ್ರಕಾರ ನ್ಯಾಯಸ್ಥಾನಗಳ ಸಂಖ್ಯೆ 103 ರಿಂದ 125ಕ್ಕೆ ಏರಿತು.

ಮದ್ರಾಸು ಪದ್ಧತಿಯಂತೆ ಒಂದು ಹೊಸ ಪೋಲೀಸು ಇಲಾಖೆಯು ರಚಿತವಾಗಿ, ಅದು ಬೆಂಗಳೂರು ಪಟ್ಟಣ ಮತ್ತು ಜಿಲ್ಲೆಯಲ್ಲಿ ಯೂರೋಪಿಯನ್ನರ ಮೇಲ್ವಿಚಾರಣೆಯಲ್ಲಿ ಸ್ಥಾಪಿತವಾಯಿತು. ಹಳೆಯ ಕಂದಾಚಾರ ಸೈನ್ಯವನ್ನು ತೊಡೆದು ಹಾಕಲಾಯಿತು ; ಮತ್ತು 1872ರಲ್ಲಿ ಹೊಸ ಪೋಲೀಸು ನಿಯಮಗಳು ರೂಢಿಗೆ ಬಂದವು. ಪೋಲೀಸರು ಇಲ್ಲಿಂದ ಮುಂದೆ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರುಗಳ ನೇರ ನಿಯಂತ್ರಣಕ್ಕೆ ಒಳಪಡಲಿಲ್ಲ. ಇಲಾಖೆಯು ಪೋಲೀಸು ಇನ್ಸ್‌ಪೆಕ್ಟರ್ ಜನರಲ್, ಅವರ ಸಹಾಯಕರಾದ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ಲುಗಳು ಮತ್ತು ಡಿಸ್ಟ್ರಿಕ್ಟ್ ಪೋಲೀಸು ಸೂಪರಿಂಟೆಂಡೆಂಟರುಗಳಿಂದ ಕೂಡಿದ್ದಿತು.

ಮುಖ್ಯ ಪಟ್ಟಣಗಳಲ್ಲಿ ಸೆರೆಮನೆ ಮತ್ತು ಆಸ್ಪತ್ರೆಗಳಲ್ಲಿ ಅಧಿಕ ಸಂಖ್ಯೆಯ ವೈದ್ಯಕೀಯ ಸಿಬ್ಬಂದಿಯ ನೇಮಕವಾಯಿತು. ವಿದ್ಯಾಭಿವೃದ್ಧಿಗಾಗಿ ಒಂದು ಶಿಕ್ಷಣ ನಿಯೋಗದ ಸ್ಥಾಪನೆಯಾಯಿತು ; ಮತ್ತು ಇವನ ಕಾಲದಲ್ಲಿ :ಈ ದಿಶೆಯಲ್ಲಿ ಹೆಚ್ಚು ಪ್ರಗತಿ ಸಾಧಿಸಲಾಯಿತು. ಇಂಜಿನಿಯರಿಂಗ್ ಇಲಾಖೆಯನ್ನೂ ತೋಟಗಾರಿಕೆಯ ಉದ್ಯಾನಗಳನ್ನೂ ವಿಸ್ತೃತಗೊಳಿಸುವುದರ ಕಡೆಗೆ ವಿಶೇಷ ಗಮನ ಕೊಡಲಾಯಿತು ಮತ್ತು ವಿವಿಧ ವಸ್ತು ಸಂಗ್ರಹಶಾಲೆ ಮತ್ತು ಸರ್ಕಾರೀ ಮುದ್ರಣಾಲಯಗಳನ್ನು ಒಂದು ಕಿರಿಯ ನಿಯೋಗವು ನೋಡಿಕೊಳ್ಳುತ್ತಿತ್ತು. ಹೀಗೆ ಹೊಸ ಆವಶ್ಯಕತೆ ಕಂಡಲ್ಲೆಲ್ಲಾ ತಕ್ಷಣ ಒಂದು ಹೊಸ ಇಲಾಖೆ ಮಾಡುತ್ತಿತ್ತು. ಅವನ ಕಾಲಾವಧಿ ಪೂರಾ ಯಾವ ನಿರ್ಬಂಧವೂ ಇಲ್ಲದೆ ಇಲಾಖೆಗಳನ್ನು ವಿಸ್ತೃತಗೊಳಿಸುವ ಕಾರ್ಯ ನಡೆಯಿತು. ಇದರಿಂದ ದೇಶದಲ್ಲಿ ಯೂರೋಪಿಯನ್ ಅಧಿಕಾರಿಗಳು ಅಧಿಕವಾಗಲು ಅವಕಾಶವಾಯಿತು.

ದೇಶಕ್ಕೆ ಅಮೂಲ್ಯ ಸೇವೆ ಸಲ್ಲಿಸಿದನಂತರ ಬೌರಿಂಗನು 1870ರಲ್ಲಿ ತನ್ನ ಕೆಲಸಕ್ಕೆ ರಾಜೀನಾಮೆಯಿತ್ತನು. ಇವನ ರಾಜೀನಾಮೆಯ ಮತ್ತು 1881ರಲ್ಲಿ ಚಾಮರಾಜ ಒಡೆಯರ ಅಧಿಕಾರ ಸ್ವೀಕಾರದ ಮಧ್ಯಾವಧಿಯಲ್ಲಿ, 1875ರ ವರೆಗೆ ಕರ್ನಲ್ ರಿಚರ್ಡ್ ಮೀಡ್, ಅನಂತರ ಎರಡು ವರ್ಷಗಳ ವರೆಗೆ ಸಿ.ಬಿ. ಸ್ಯಾಂಡರ್ಸ್, ಅನಂತರ 1878ರ ಏಪ್ರಿಲ್‌ನಿಂದ ಜೆ.ಡಿ. ಗೋರ್ಡನ್—ಈ ಮೂವರು ಚೀಫ್ ಕಮಿಷನರುಗಳು ಕಾರ್ಯತಃ ಅಪ್ರಾಪ್ತವಯಸ್ಕರಾದ ರಾಜಕುಮಾರರ ನ್ಯಾಸಾಧಿಕಾರಿಗಳಾಗಿ ರಾಜ್ಯಾಡಳಿತ ನಡೆಸಿದರು. ಬ್ರಿಟಿಷ್ ಕಮಿಷನರನು ಮಹಾರಾಜರಿಗೆ ಹಲವಾರು ಪೂರ್ವಾರ್ಜಿತ ಆಸ್ತಿಗಳನ್ನು ಬಿಟ್ಟು ಕೊಟ್ಟನು. 1881ರಲ್ಲಿ ಮಹಾರಾಜರು ರಾಜ್ಯಭಾರ ವಹಿಸಿಕೊಂಡದ್ದು, ಅಭಿವೃದ್ಧಿ ಮತ್ತು ಅಭ್ಯುದಯದ ಹೊಸ ಶಕೆಯನ್ನೇ ಪ್ರಾರಂಭಿಸಿತು. ಹಿಂದೂ ರಾಜರಿಗೆ ರಾಜ್ಯ ಪುನಸ್ಸ್ವಾಧೀನಪಡಿಸುವುದು ಮತ್ತು ಮುಮ್ಮಡಿ ಕೃಷ್ಣರಾಜ ಒಡೆಯರು ರಾಜಕುಮಾರ ಚಾಮರಾಜ ಒಡೆಯರನ್ನು ದತ್ತು ತೆಗೆದು ಕೊಂಡದ್ದನ್ನು ಒಪ್ಪುವುದು—ಈ ವಿಷಯಗಳಲ್ಲಿ ದೀರ್ಘವಾದ ವ್ಯಾಜ್ಯ ನಡೆಯುತ್ತಿತ್ತು. ಆದರೂ ಈ ಅವಧಿಯಲ್ಲಿ ಬ್ರಿಟಿಷ್ ಆಡಳಿತಗಾರರಿಗೂ ಮುಮ್ಮಡಿ ಕೃಷ್ಣರಾಜ ಒಡೆಯರಿಗೂ ಅವರನಂತರ ಚಾಮರಾಜ ಒಡೆಯರಿಗೂ ಮಧ್ಯೆ ಅನ್ಯೋನ್ಯ ಸ್ನೇಹ, ಪರಸ್ಪರ ಗೌರವ ಮತ್ತು ಮನ್ನಣೆಗಳು ಉಳಿದುಕೊಂಡು ಬಂದಿದ್ದವು. ಮುಮ್ಮಡಿ ಕೃಷ್ಣರಾಜ ಒಡೆಯರು ಬ್ರಿಟಿಷರ ಸ್ವಭಾವಸಿದ್ಧವಾದ ಒಳ್ಳೆಯತನದಲ್ಲಿ ವಿಶ್ವಾಸ ಮತ್ತು ಭರವಸೆಗಳನ್ನಿಟ್ಟು ಅತಿ ತಾಳ್ಮೆ , ಸಹನೆ, ಸ್ಥೈರಣೆಗಳನ್ನು ತೋರಿದರು.

ಮೂಲ ಲೇಖಕರು : ಶ್ರೀಮತಿ. ಎಂ. ಜಯಲಕ್ಷ್ಮಮ್ಮಣ್ಣಿ
ಅನುವಾದಕರು : ಶ್ರೀಮತಿ. ಎಂ. ಎ. ಸಿಂಗಮ್ಮ

# ರಾಜರ ವಶಕ್ಕೆ ಒಪ್ಪಿಸಿದನಂತರದ ಮೈಸೂರು

**ರಾಜರ ವಶಕ್ಕೆ ಒಪ್ಪಿಸಿದುದು**

ಮುಮ್ಮಡಿ ಕೃಷ್ಣರಾಜ ಒಡೆಯರು, ಮೈಸೂರು ರಾಜ್ಯದ ಆಡಳಿತವನ್ನು ನಡೆಸುತ್ತಿದ್ದ ಬ್ರಿಟಿಷ್ ಕಮಿಷನರುಗಳೊಂದಿಗೆ ಅತ್ಯಂತ ಹಿತವಾದ ಸಂಬಂಧವನ್ನಿಟ್ಟುಕೊಂಡಿದ್ದುದಲ್ಲದೆ, ಅವರನ್ನು ರಾಜ್ಯದ ಧರ್ಮದರ್ಶಿಗಳೆಂದು ಭಾವಿಸಿ, ಅನುಕೂಲಕರ ಪರಿಸ್ಥಿತಿ ಒದಗಿದೊಡನೆಯೇ ಅವರು ರಾಜ್ಯಾಡಳಿತವನ್ನು ತಮಗೂ ತಮ್ಮ ಉತ್ತರಾಧಿಕಾರಿಗಳಿಗೂ ಹಿಂದಕ್ಕೆ ಕೊಡುವರೆಂದು ನಂಬಿದ್ದರು. ಭಾರತದ ಮತ್ತು ಇಂಗ್ಲೆಂಡಿನ ಬ್ರಿಟಿಷ್ ಆಳರಸರು ಇಂತಹ ಬದಲಾವಣೆ ಮಾಡುವ ಬಗೆಗೆ ತೀವ್ರಾಸಕ್ತಿ ಹೊಂದಿರಲಿಲ್ಲ. ಕೆಲವರಂತೂ ಇದಕ್ಕೆ ಬದಲಾಗಿ, ಮೈಸೂರನ್ನು ಬ್ರಿಟಿಷ್ ಭಾರತದೊಡನೆ ಸೇರಿಸಿಬಿಡಬೇಕೆಂಬ ಅಭಿಪ್ರಾಯವನ್ನು ಹೊಂದಿದ್ದರು. ಹಿತವಾದ ವಾತಾವರಣ, ಸುಂದರ ಪ್ರಾಕೃತಿಕ ದೃಶ್ಯಗಳು, ಯಥೇಚ್ಛ ಸಂಪನ್ಮೂಲಗಳು–ಇವುಗಳಿಂದ ಕೂಡಿದ ಮೈಸೂರು ರಾಜ್ಯವು, ಎಲ್ಲ ದೃಷ್ಟಿಗಳಿಂದಲೂ ಬಯಸುವ ಪ್ರದೇಶವಾಗಿತ್ತು. ಆದರೆ, ಮಹಾರಾಜರು ಎಂದಿಗೂ ಬೇಸರಪಡದೆ, ಭಾರತೀಯ ಮತ್ತು ಬ್ರಿಟಿಷ್ ಗೆಳೆಯರ ನೆರವನ್ನು ಗಳಿಸಿಕೊಂಡು, ತಮ್ಮಿಂದ ಅನ್ಯಾಯವಾಗಿ ಕಸಿದುಕೊಂಡಿದ್ದ ರಾಜ್ಯವನ್ನು ವಾಪಸು ಪಡೆದುಕೊಳ್ಳುವುದಕ್ಕೆ ಒತ್ತಾಯಪಡಿಸುತ್ತಿದ್ದರು. ಅವರು ಸರ್ ಮಾರ್ಕ್ ಕಬ್ಬನ್ ಹೇಳಿದಂತೆ, "1857ರ ಕಷ್ಟಕಾಲದಲ್ಲಿಯೂ ಬ್ರಿಟಿಷ್ ರಾಜಭಕ್ತಿಗೆ ಅವಿಶ್ವಾಸವೆನಿಸುವ ಯಾವುದನ್ನೂ ಸಹಿಸದೆ, ಇಂಗ್ಲಿಷರ ರಾಜ್ಯಾಡಳಿತ ಸುಭದ್ರತೆಯ ವಿಷಯದಲ್ಲಿ ತಮ್ಮ ಪೂರ್ಣ ವಿಶ್ವಾಸವನ್ನು ಘೋಷಿಸುವ ಎಲ್ಲ ಅವಕಾಶಗಳನ್ನೂ ಉಪಯೋಗಿಸಿಕೊಳ್ಳುತ್ತಾ ವಿಧೇಯತೆಯಿಂದ ಇದ್ದರು". ಇದರ ತರುವಾಯ, ವಿಕ್ಟೋರಿಯಾ ರಾಣಿ ಈಸ್ಟ್ ಇಂಡಿಯಾ ಕಂಪೆನಿಯಿಂದ ಭಾರತೀಯ ಪ್ರದೇಶಗಳ ನೇರ ಆಡಳಿತವನ್ನು ವಹಿಸಿಕೊಂಡಾಗ ಮಹಾರಾಜರು ಸಂತಸದಿಂದ ಸ್ವಾಗತಿಸಿದರು. ಅವರು ಸಿಂಹಾಸನಾರೂಢರಾಗಿ, ಅರುವತ್ತನೆಯ ವಾರ್ಷಿಕೋತ್ಸವವನ್ನು 1859ರಲ್ಲಿ ಆಚರಿಸಿದ ಸಂದರ್ಭದಲ್ಲಿ, ಹೊಸ ರಾಜ್ಯಭಾರದ ಕಾಲದಲ್ಲಾದರೂ ತಮಗೆ ದೊರಕಬಹುದೆಂದು ಆಶಿಸಿದರು. 1860ರಲ್ಲಿ, ಗವರ್ನರ್-ಜನರಲರವರ ಆಡಳಿತದಲ್ಲಿದ್ದ ಮೈಸೂರನ್ನು ಮದರಾಸ್ ಗವರ್ನರ್ ಆಡಳಿತಕ್ಕೆ ವಹಿಸಬೇಕೆಂಬ ಪ್ರಯತ್ನ ನಡೆದಾಗ, ಅವರು ಆ ಬದಲಾವಣೆಯ ಬಗೆಗೆ ತಮ್ಮ ವಿನಮ್ರ ಪ್ರತಿಭಟನೆಯನ್ನು ಸಲ್ಲಿಸಿ, ಅದರಿಂದ ತಮ್ಮ ಸ್ಥಾನಮಾನಕ್ಕೆ ಚ್ಯುತಿ ಬರುವುದೆಂದೂ ತಮ್ಮ ರಾಜ್ಯವನ್ನು ಪೂರ್ಣವಾಗಿ ವಶಪಡಿಸಿಕೊಳ್ಳಲು ಅದೇ ಪ್ರಥಮ ಹೆಜ್ಜೆಯಾದೀತೆಂದೂ ಸೂಚಿಸಿದರು. ಈ ವಿಷಯದಲ್ಲಿ ಸರ್ ಮಾರ್ಕ್ ಕಬ್ಬನ್ ಅವರೇ ಸ್ವತಃ ಅಧಿಕಾರಕ್ಕೆ ರಾಜಿನಾಮೆ ಸಲ್ಲಿಸುವುದಾಗಿ ಬೆದರಿಕೆ ಹಾಕಿದುದರ ಪರಿಣಾಮವಾಗಿ, ಬದಲಾವಣೆಯ ಸಲಹೆ ನಿಂತಿತು.

ವೈಸ್‌ರಾಯ್ ಲಾರ್ಡ್ ಕ್ಯಾನಿಂಗ್, ಬ್ರಿಟಿಷ್ ಸಿಂಹಾಸನದ ಬಗೆಗೆ ಮೈಸೂರು ಅರಸರ ರಾಜಭಕ್ತಿಯನ್ನು ಶ್ಲಾಘಿಸಿದ ಸಂದರ್ಭದಲ್ಲಿ, ಅವನಿಂದ ಅನುಕೂಲಕರವಾದ ಉತ್ತರ ಬರುತ್ತದೆಂದು ಆಶಿಸಿದ ಕೃಷ್ಣರಾಜ ಒಡೆಯರು, 1861ರಲ್ಲಿ ಆತನಿಗೆ ಒಂದು ಮನವಿಯನ್ನು ಸಲ್ಲಿಸಿ, ರಾಜ್ಯದ ಆಡಳಿತಾಧಿಕಾರವನ್ನು ತಮಗೆ ಹಿಂದಕ್ಕೆ ಕೊಡಬೇಕೆಂದು ಕೇಳಿಕೊಂಡರು. ಆದರೆ, ಇದಕ್ಕೆ ಬಂದ ಉತ್ತರ ಕೇವಲ ನಿರಾಕರಣೆ. ಅವರು ಇದರಿಂದ ಅಧೀರರಾಗದೆ, ತಮ್ಮ ಹೋರಾಟವನ್ನು ಮುಂದುವರಿಸಿ, ಮುಂದಿನ

ವೈಸರಾಯ್‌ಗಳಾದ ಲಾರ್ಡ್ ಎಲ್ಗಿನ್ ಮತ್ತು ಲಾರ್ಡ್ ಲಾರೆನ್ಸ್ ಇವರುಗಳೊಡನೆ ವಿಚಾರವನ್ನು ಚರ್ಚಿಸಿದರು. ಆದರೆ ಪ್ರಭಾವ ಬೀರಲು ವಿಫಲರಾದರು. ಲಾರ್ಡ್ ಲಾರೆನ್ಸ್ ಮೈಸೂರನ್ನು ವಶಪಡಿಸಿಕೊಂಡ ವಿಷಯವನ್ನೇ ಮುಕ್ತಾಯ ಮಾಡಿಬಿಡಲು ಯೋಚಿಸಿದ್ದನು. ಅವನು 'ಡಾಕ್ಟ್ರಿನ್ ಆಫ್ ಲ್ಯಾಪ್ಸ್' ರದ್ದತಿಯ ಸಿದ್ಧಾಂತಕ್ಕೆ ಹೆಸರು ಪಡೆದು, ಅದರ ಪ್ರಕಾರ ಎಂಟು ವರ್ಷಗಳಲ್ಲಿ 20 ರಾಜ್ಯಗಳನ್ನು ಬ್ರಿಟಿಷ್ ಆಡಳಿತಕ್ಕೆ ಸೇರಿಸಿದ್ದ ಲಾರ್ಡ್ ಡಾಲ್‌ಹೌಸಿಯ ಶಿಷ್ಯನಾಗಿದ್ದನು. ಇದರ ಜೊತೆಗೆ, ಭಾರತ ರಾಜ್ಯದ ಕಾರ್ಯದರ್ಶಿ ಮತ್ತು ಗೃಹ ಇಲಾಖೆಯವರು ಸಹಾನುಭೂತಿಯನ್ನಾಗಲೀ ನೆರವು ನೀಡುವಂತಾಗಲೀ ಇರಲಿಲ್ಲ.

ಮಹಾರಾಜರಿಗೆ 70 ವರ್ಷ ವಯಸ್ಸಾಯಿತು. ಅವರು 1864 ರಲ್ಲಿ ದತ್ತು ಸ್ವೀಕಾರ ಮಾಡಲು ನಿರ್ಧಾರ ಮಾಡಿದರು. 1865 ನೆಯ ಜೂನ್ ತಿಂಗಳಲ್ಲಿ ಆ ಸಮಾರಂಭ ಧಾರ್ಮಿಕ ರೀತಿಗನುಗುಣವಾಗಿ ನೆರವೇರಿತು. ದತ್ತು ಮಗ ಚಾಮರಾಜ ಒಡೆಯರಿಗೆ ಆಗ 2 ವರ್ಷ ವಯಸ್ಸಾಗಿತ್ತು. ಅವರು ರಾಣಿ ಲಕ್ಷ್ಮಮ್ಮಣ್ಣಿಯವರು ಸೇರಿದ್ದ ಬೆಟ್ಟದ ಕೋಟೆ ವಂಶದಲ್ಲಿ ಜನಿಸಿದವರು. ಇದರಿಂದ ದತ್ತು ಸ್ವೀಕಾರವೇ ಇಲ್ಲವೆ ರಾಜ್ಯವನ್ನು ವಶಪಡಿಸಿಕೊಳ್ಳಬೇಕೇ ಎಂಬ ಪ್ರಶ್ನೆ ಪ್ರಧಾನವಾಗಿ ಮುಂದೆ ಬಂದಿತು. ಇದು ಮೈಸೂರಿನ ರಾಜಕೀಯ ಭವಿಷ್ಯದ ಬಗೆಗೆ ಇತರ ದೇಶೀಯ ಅರಸರಲ್ಲಲ್ಲದೆ, ಭಾರತದ ಬಗೆಗೆ ಆಸಕ್ತಿ ವಹಿಸುತ್ತಿದ್ದ ಇಂಗ್ಲೆಂಡಿನ ಪ್ರಖ್ಯಾತ ವೃತ್ತಪತ್ರಿಕಾ ಲೇಖಕರ ಆಸಕ್ತಿಯನ್ನೂ ಕೆರಳಿಸಿತು. 1886 ರಲ್ಲಿ ಸಾಮಾನ್ಯರ ಸಭೆಯಲ್ಲಿ ಒಂದು ಮನವಿಯನ್ನು ಸಲ್ಲಿಸಲಾಯಿತು. ಅದಕ್ಕೆ ಸಹಿಮಾಡಿದವರಲ್ಲಿ ಮುಖ್ಯರಾದ ಜಾನ್ ಸ್ಟ್ಯೂಯರ್ಟ್ ಮಿಲ್, ಸರ್ ಹೆನ್ರಿ ರಾಲಿನ್‌ಸನ್, ಗ್ರ್ಯಾಂಟ್ ಢೆಫ್, ಕರ್ನಲ್ ಸೈಕ್ಸ್, ಈವನ್ಸ್ ಬೆಲ್, ಜಾನ್ ಡಿಕಿನ್‌ಸನ್ ಮೊದಲಾದವರೆಲ್ಲ, "ಆಶ್ರಿತ ಸಂಸ್ಥಾನವಾದ ಮೈಸೂರಿನಲ್ಲಿ ಸ್ವಲ್ಪವೂ ವಿಳಂಬ ಮಾಡದೆ, ದೇಶೀಯ ಅರಸರ ಆಳಿಕೆಯನ್ನು ಪುನಃ ಸ್ಥಾಪಿಸುವ ಬಗೆಗೆ ಭರವಸೆಯನ್ನು" ಕೇಳಿದ್ದರು. ಜಾನ್ ಮಾರ್ಲೆಯವರು ಈ ವಿಷಯವಾಗಿ, 'ಫಾರ್ಟ್ನೈಟ್ಲಿ ರಿವ್ಯೂ' ಎಂಬ ಪಾಕ್ಷಿಕ ಪತ್ರಿಕೆಯ 1866 ರ ಸೆಪ್ಟಂಬರ್ 19 ರ ಸಂಚಿಕೆಯಲ್ಲಿ ಒಂದು ದೀರ್ಘವೂ ತರ್ಕಬದ್ಧವೂ ಆದ ಲೇಖನವನ್ನು ಬರೆದು, ಮೈಸೂರಿನ ರಾಜಮನೆತನಕ್ಕೆ ರಾಜ್ಯಭಾರವನ್ನು ಹಿಂದಕ್ಕೆ ಕೊಡಬೇಕೆಂದು ವಾದಿಸಿದರು. ಇನ್ನೂ ಹಲವಾರು ಇಂಗ್ಲಿಷ್ ನಿಯತಕಾಲಿಕ ಪತ್ರಿಕೆಗಳು ಈ ಪ್ರಶ್ನೆಯ ವಿಷಯವಾಗಿ ಬರೆದವು. ಮೈಸೂರಿನ ಅರಮನೆ ವೈದ್ಯರಾಗಿದ್ದ ಡಾ. ಕ್ಯಾಂಬೆಲ್ ಅವರು ಇಂಗ್ಲೆಂಡಿಗೇ ಹೋಗಿ, ಈ ವಿಚಾರವಾಗಿ ತುಂಬ ಶ್ರಮಿಸಿದರು. ಸಾಮಾನ್ಯರ ಸಭೆಯು ಈ ವಿಷಯವನ್ನು 1867 ರ ಜುಲೈ 22 ರಂದು ಚರ್ಚಿಸಿ, ಮೈಸೂರಿನ ಪರವಾಗಿ ತೀರ್ಮಾನ ಮಾಡಿತು. ದತ್ತು ಸ್ವೀಕಾರವು ಅಂಗೀಕೃತವಾಯಿತು. ಮಹಾರಾಜರ ಜೀವಿತ ಕಾಲದಲ್ಲಿ ಅವರು ರಾಜ್ಯಭಾರ ಮಾಡುವ ಹಕ್ಕು ಅಂಗೀಕೃತವಾಗದಿದ್ದರೂ ದತ್ತು ರಾಜಕುಮಾರ ಪ್ರಾಪ್ತವಯಸ್ಕನಾದ ಕೂಡಲೆ ಮೈಸೂರಿನ ಅರಸನಾಗಬಹುದೆಂದು ಭರವಸೆಯನ್ನು ನೀಡಲಾಯಿತು. ಕೃಷ್ಣರಾಜ ಒಡೆಯರು ತಮ್ಮ 74 ನೆಯ ವಯಸ್ಸಿನಲ್ಲಿ ಕಾಲವಾದಾಗ, ರಾಜ್ಯದ ಆಡಳಿತವನ್ನು ತಮ್ಮ ಮನೆತನದವರಿಗೆ ಕೊಡಿಸಬೇಕೆಂದು ಮಾಡಿದ ಅಗಾಧ ಪ್ರಯತ್ನದಲ್ಲಿ ಯಶಸ್ಸನ್ನು ಕಂಡ ತೃಪ್ತಿಯನ್ನು ಹೊಂದಿದ್ದರು.

ಕೃಷ್ಣರಾಜ ಒಡೆಯರು ಅನೇಕ ಪ್ರತಿಕೂಲ ಪರಿಸ್ಥಿತಿಗಳಿಂದ ಕೂಡಿದ್ದರೂ ಔದಾರ್ಯ ಭಾವಕ್ಕೂ ವಿದ್ವಾಂಸರು, ಸಂಗೀತಗಾರರು, ಕಲೆಗಾರರು ಇವರಿಗೆಲ್ಲ ನೀಡಿದ ಪ್ರೋತ್ಸಾಹಕ್ಕೂ ಪ್ರಸಿದ್ಧರಾಗಿದ್ದುದಲ್ಲದೆ ತಮ್ಮ ಪ್ರಜೆಗಳ ಸಾರ್ವತ್ರಿಕ ಪ್ರೇಮಕ್ಕೂ ಪಾತ್ರರಾಗಿದ್ದರು.

**ಹತ್ತನೆಯ ಚಾಮರಾಜ ಒಡೆಯರು**

ರಾಜಕುಮಾರನ ವಿದ್ಯಾಭ್ಯಾಸಕ್ಕೆ ತಕ್ಕ ಏರ್ಪಾಡುಗಳಾದವು. ಚಾಮರಾಜ ಒಡೆಯರು ಚೀಫ್ ಕಮಿಷನರ್ ಜೆ.ಡಿ. ಗೋರ್ಡನ್ ಮತ್ತು ಸಿ. ರಂಗಾಚಾರ್ಲು (ಆಗ ಅವರು ರೆವಿನ್ಯೂ ಕಾರ್ಯದರ್ಶಿಯಾಗಿದ್ದು ಅನಂತರ ದಿವಾನರಾದರು) ಮತ್ತು ಇತರರೊಡಗೂಡಿ 1789ರಲ್ಲಿ ಮತ್ತು 1790 ರಲ್ಲಿಯೂ ರಾಜ್ಯದಲ್ಲಿ ಸಂಚಾರ ಮಾಡಿ, ಸ್ವತಃ ಆಡಳಿತವನ್ನೂ ಪ್ರಜಾ ಮುಖಂಡರನ್ನೂ ಪರಿಚಯ ಮಾಡಿಕೊಂಡರು. ಅವರು ಹೋದೆಡೆಯಲ್ಲೆಲ್ಲಾ ಅಸಂಖ್ಯ ಪ್ರಜೆಗಳು ಅವರಿಗೆ ಭಕ್ತ್ಯಾದರಗಳನ್ನು ತೋರಿಸಿ ಸ್ವಾಗತಿಸಿದರು. ಅವರ ಪ್ರವಾಸವನ್ನು ಒಂದು ದೀರ್ಘ ಮೆರವಣಿಗೆ ಎಂದು ವರ್ಣಿಸಲಾಗಿತ್ತು. ಚೀಫ್ ಕಮಿಷನರ್ ಅವರು ಭಾರತ ಸರಕಾರದೊಡನೆ ಪತ್ರವ್ಯವಹಾರ ನಡೆಸಿ, ಮೈಸೂರಿನ ಮುಂದಿನ ರಾಜಕೀಯ ಹಾಗೂ ಆಡಳಿತ ವ್ಯವಸ್ಥೆಯ ವಿವರ ಹೇಗಿರಬೇಕೆಂಬ ನಿರ್ಧಾರ ಮಾಡಿದುದಲ್ಲದೆ, ಬ್ರಿಟಿಷ್ ಕಮಿಷನರುಗಳಿಂದ ಆಚರಣೆಗೆ ಬಂದಿದ್ದ ಪ್ರಧಾನ ಅಂಶಗಳು ಮುಂದುವರಿಯಬೇಕೆಂದೂ ತೀರ್ಮಾನವಾಯಿತು.

ಹತ್ತನೆಯ ಚಾಮರಾಜ ಒಡೆಯರಿಗೆ 1881ನೆಯ ಮಾರ್ಚಿ ತಿಂಗಳಿಗೆ 18 ವರ್ಷ ತುಂಬಿದಾಗ ಅತ್ಯಂತ ಸಂತಸ ಸಡಗರಗಳಿಂದ ಅವರನ್ನು ಸಿಂಹಾಸನಾರೂಢರನ್ನಾಗಿ ಮಾಡಲಾಯಿತು. ರಾಜ್ಯಾಧಿಕಾರ ವರ್ಗಾವಣೆಯ ಪತ್ರದ ಷರತ್ತುಗಳಿಗನುಗುಣವಾಗಿ ರಾಜರಿಗೆ ಆಡಳಿತದ ಅಧಿಕಾರವನ್ನು ಕೊಡಲಾಯಿತು. ಅದರ ಪ್ರಕಾರ ಬ್ರಿಟಿಷರ ಪರಮಾಧಿಕಾರವು ಶ್ರುತವಾಗಿತ್ತು. ಸೈನ್ಯವನ್ನು ಹೆಚ್ಚಿಸಿಕೊಳ್ಳುವುದು, ರೈಲ್ವೆ, ಟೆಲಿಗ್ರಾಫ್, ನಾಣ್ಯ, ದಂಡಿನ ಪ್ರದೇಶ (ಬೆಂಗಳೂರಿನ 13 ಚ. ಮೈ. ಪ್ರದೇಶ—ಕಂಟೋನ್‌ಮೆಂಟ್, ಆಗಲೇ ಬ್ರಿಟಿಷರ ಸ್ವಾಧೀನದಲ್ಲಿದ್ದುದು) ಇವುಗಳ ಮೇಲೆ ಮಹಾರಾಜರಿಗೆ ಯಾವ ಅಧಿಕಾರವೂ ಇರಲಿಲ್ಲ. ಅವರು ರಾಜ್ಯದೊಳಕ್ಕೆ ಶಸ್ತ್ರಾಸ್ತ್ರಗಳನ್ನು ಆಮದು ಮಾಡಿಕೊಳ್ಳುವುದಕ್ಕಾಗಲಿ ಅವುಗಳನ್ನು ಉತ್ಪನ್ನ ಮಾಡುವುದಕ್ಕಾಗಲೀ ಇತರ ರಾಜ್ಯಗಳೊಡನೆ ಪತ್ರವ್ಯವಹಾರ ನಡೆಸುವುದಕ್ಕಾಗಲೀ ಭಾರತೀಯರಲ್ಲದವರನ್ನು ಅಧಿಕಾರಿಗಳನ್ನಾಗಿ ನೇಮಕ ಮಾಡಿಕೊಳ್ಳುವುದಕ್ಕಾಗಲೀ ವೈಸರಾಯರ ಅನುಮತಿಯಿಲ್ಲದೆ ಆಡಳಿತಕ್ರಮವನ್ನು ಬದಲಾಯಿಸುವುದಕ್ಕಾಗಲೀ ಅವಕಾಶವಿರಲಿಲ್ಲ. ಸಿಂಹಾಸನದ ಉತ್ತರಾಧಿಕಾರತ್ವದ ಬಗೆಗೆ ವೈಸರಾಯಿಯೇ ಅನುಮತಿ ಕೊಡಬೇಕಾಗಿತ್ತು. ಉಪ್ಪು ಮತ್ತು ಅಫೀಮು ಬ್ರಿಟಿಷ್ ಸರಕಾರದ ಗುತ್ತಿಗೆಯ ಸೊತ್ತುಗಳಾಗಿ ಮುಂದುವರಿದವು. ವಾರ್ಷಿಕ ಪೊಗದಿಯು 24½ ಲಕ್ಷದಿಂದ 35 ಲಕ್ಷಕ್ಕೆ ಏರಿಸಲ್ಪಟ್ಟಿತು. ಇದು ರಾಜ್ಯದ ರಕ್ಷಣೆಗಾಗಿ ರಾಹುತರ ಬಲವನ್ನು ಒಂದು ಸಾವಿರ ಹೆಚ್ಚಿಸಿದ್ದುದರಿಂದ ಉಂಟಾದ ಅಧಿಕ ವೆಚ್ಚಕ್ಕೋಸ್ಕರವಾಗಿತ್ತು. ಮೈಸೂರಿನ ಚೀಫ್ ಕಮಿಷನರ್ ಮೈಸೂರಿನ 'ರೆಸಿಡೆಂಟ್' ರಾಜರ ಆಸ್ಥಾನದಲ್ಲಿ ಗವರ್ನರ್ ಜನರಲ್ಲನ ಪ್ರತಿನಿಧಿ ಮತ್ತು ಕೊಡಗಿನ ಚೀಫ್ ಕಮಿಷನರ್ ಎಂದು ನಾಮಕರಣ ಹೊಂದಿದನು. ಇಬ್ಬರು ಸಲಹೆಗಾರರಿಂದ ಕೂಡಿದ ದಿವಾನರು ರಾಜ್ಯದ ಆಡಳಿತಾಂಗದ ಮುಖ್ಯರಾಗಿ ಕೆಲಸಮಾಡಲು ಅವಕಾಶವಾಯಿತು. ಮದರಾಸ್ ಪ್ರಾಂತದಲ್ಲಿ ಡೆಪ್ಯುಟಿ ಕಲೆಕ್ಟರ್ ಆಗಿ ಸೇವೆ ಸಲ್ಲಿಸಿ,1868ರಲ್ಲಿ ರಾಜ್ಯದ ಸೇವೆಗೆ ಬಂದಿದ್ದ ಸಿ. ರಂಗಾಚಾರ್ಲು ಅವರು ದಿವಾನರಾಗಿ ನೇಮಿಸಲ್ಪಟ್ಟರು. ಅವರು ಹೊಂದಿದ್ದ ಹಣಕಾಸಿನ ವ್ಯವಹಾರ ಜ್ಞಾನ, ಆಡಳಿತ ಸಾಮರ್ಥ್ಯ, ಉದಾರದೃಷ್ಟಿ—ಇವುಗಳು ರಾಜ್ಯಕ್ಕೆ ಒಳ್ಳೆ ನಿಧಿಯಾದವು. ಅವರು ಇಡಿಯ ರಾಜ್ಯದಲ್ಲಿ ಜಿಲ್ಲಾಧಿಕಾರಿಗಳಿಂದ ಆರಿಸಲ್ಪಟ್ಟ ಭಾರೀ ಜಮೀನುದಾರರು ಮತ್ತು ವರ್ತಕರುಗಳಿಂದ ಕೂಡಿದ ಪ್ರಜಾಪ್ರತಿನಿಧಿ ಸಭೆಯೊಂದನ್ನು ಆಹ್ವಾನಿಸಲು ಯೋಚಿಸಿದರು. ಆ ಸಭೆಯ ಪ್ರಥಮ ಅಧಿವೇಶನ 1881ರಲ್ಲಿ ದಸರಾ ಮಹೋತ್ಸವದ ತರುವಾಯ ಮೈಸೂರು ನಗರದಲ್ಲಿ ಸಮಾವೇಶಗೊಂಡು, ಅದರಲ್ಲಿ 144 ಮಂದಿ ಆಹ್ವಾನಿತರಿದ್ದರು. ಸರಕಾರದ ಧ್ಯೇಯಧೋರಣೆಗಳು, ಅದಕ್ಕನುಗುಣವಾಗಿ ಕೈಗೊಂಡ ಕಾರ್ಯಕ್ರಮಗಳು, ಸಭೆಯ ಮುಂದೆ ಮಂಡಿಸಲ್ಪಟ್ಟವು. ಅದೊಂದು ಶಾಸನಬದ್ಧ ಸಂಸ್ಥೆಯಲ್ಲದಿದ್ದರೂ ಪ್ರತಿನಿಧಿ ಪ್ರಭುತ್ವದ ದಿಶೆಯಲ್ಲಿ ಪ್ರಥಮ

ಹೆಜ್ಜೆಯಾಗಿತ್ತು. ಅದು ಲಾರ್ಡ್ ರಿಪನ್ನನ ವೈಸರಾಯತ್ವದ ಕಾಲದಲ್ಲಿ, ಬ್ರಿಟಿಷ್ ಭಾರತದಲ್ಲಿ ಕೈಗೊಳ್ಳಲಾದ ಸ್ಥಾನೀಯ ಸ್ವಯಂ ಆಡಳಿತ ನಿಬಂಧನೆಗಳಿಗೆ ಮಾರ್ಗದರ್ಶಕವಾಯಿತೆಂದು ಹೇಳಲಾಗಿದೆ.

ಹಿಂದಿನ ವರ್ಷಗಳಲ್ಲಿ ವೀರಕ್ಷಾಮು ಮತ್ತು ಅನಾವೃಷ್ಟಿಯ ಪರಿಣಾಮವಾಗಿ ರಾಜ್ಯದಲ್ಲಿ ಅಸ್ತವ್ಯಸ್ತವಾಗಿದ್ದ ಆರ್ಥಿಕ ಪರಿಸ್ಥಿತಿಯನ್ನು ಚೇತನಗೊಳಿಸುವ ಸಮಸ್ಯೆಯೇ ದಿವಾನ ರಂಗಾಚಾರ್ಯರ ಮುಖ್ಯ ಸಮಸ್ಯೆಯಾಗಿತ್ತು. 1882 ರಲ್ಲಿ ಬೆಂಗಳೂರು-ಮೈಸೂರು ರೈಲುಮಾರ್ಗ ಆರಂಭವಾಗಿ ದೊಡ್ಡ ವರಪ್ರಸಾದವೆನಿಸಿತು. ಅದೇ ವರ್ಷ ದಿವಾನರು ಬೆಂಗಳೂರಿನಿಂದ ತಿಪಟೂರಿಗೆ ರೈಲು ಮಾರ್ಗವನ್ನು ಹಾಕುವ ಉದ್ದೇಶದಿಂದ ಸಾಲವನ್ನು ಎತ್ತಿದರು. ಆ ಸಾಲವನ್ನು ಪ್ರಜೆಗಳು ಸಂತೋಷದಿಂದ ಕೊಟ್ಟರು.

ರಾಜ್ಯದ ದುರದೃಷ್ಟವೋ ಎನ್ನುವಂತೆ, ಈ ಆಡಳಿತ ನಿಪುಣನ ದಿವಾನಗಿರಿ ಎರಡು ವರ್ಷಕ್ಕೂ ಕಡಮೆಕಾಲದಲ್ಲಿ ಕೊನೆಗೊಂಡಿತು. ಅವರು 1883ರ ಆದಿಭಾಗದಲ್ಲಿ ಕಾಲವಾದರು.

ಆಗ ಜಿಲ್ಲಾಧಿಕಾರಿಗಳಾಗಿದ್ದ ಕೆ.ಶೇಷಾದ್ರಿ ಅಯ್ಯರ್ ಅವರು ಮುಂದಿನ ದಿವಾನರಾಗಿ ನೇಮಿಸಲ್ಪಟ್ಟರು. ಅವರೂ 1868ರಲ್ಲೇ ಮೈಸೂರು ರಾಜ್ಯದ ಸೇವೆಗೆ ಸೇರಿದವರು. ರಾಜ್ಯದ ಹಣಕಾಸಿನ ಸ್ಥಿತಿಯನ್ನು ಉತ್ತಮಪಡಿಸುವುದೇ ಅವರಿಗೆ ಪ್ರಥಮ ಕರ್ತವ್ಯವಾಯಿತು. ಬೆಂಗಳೂರು ದಂಡಿನ ಪ್ರದೇಶದ ಅಧಿಕ ಆದಾಯವನ್ನು ಮೈಸೂರು ಸರಕಾರಕ್ಕೆ ಕೊಡಬೇಕೆಂದು ಅವರು ಒತ್ತಾಯ ಮಾಡಿದರು. 10 ಲಕ್ಷ 50 ಸಾವಿರ ಹೆಚ್ಚು ಮಾಡಲಾಗಿದ್ದ ಪೂಗದಿ ಹಣವನ್ನು 1886 ರ ವರೆಗೆ ಮನ್ನಾ ಮಾಡಿಸಿದರು. ಆದರೆ, ಅವರು 1896 ರ ವರೆಗೂ ಅದನ್ನು ಮನ್ನಾ ಮಾಡಬೇಕೆಂದೇ ವಾದಿಸಿದ್ದರು. ಬೆಂಗಳೂರಿನಿಂದ ಗುಬ್ಬಿಯ ವರೆಗೂ (1884) ಹರಿಹರ (1889) ಮತ್ತು ಹಿಂದೂಪುರದ (1893) ವರೆಗೂ ರೈಲು ಮಾರ್ಗವನ್ನು ವಿಸ್ತರಿಸಿದರು. 1891 ರಲ್ಲಿ ಮೈಸೂರು ನಂಜನಗೂಡು ರೈಲುಮಾರ್ಗವೂ 1893 ರಲ್ಲಿ ಕೋಲಾರ ಚಿನ್ನದ ಗಣಿ ರೈಲುಮಾರ್ಗವೂ ಆದವು. ಅರಣ್ಯದ ಆದಾಯವನ್ನು ಹೆಚ್ಚಿಸಲು ವಿಶಾಲವಾದ ಕಾಡುಗಳನ್ನು ಬೆಳೆಸಲಾಯಿತು. ಚಿನ್ನದ ಗಣಿ ಉದ್ಯಮದ ಮೇಲೆ ಹಾಕಿದ ಶೇ. 5 ರಷ್ಟು ರಾಜಾದಾಯಕ್ಕಾಗಿ, 1886–87 ರ ಸಾಲಿನಲ್ಲಿ ಪ್ರಥಮ ಬಾರಿಗೇ ರೂ. 47,000 ಸರಕಾರಕ್ಕೆ ಸಂದಾಯವಾಯಿತು. 1884 ರಿಂದ ಮೈಸೂರಿನ ಶ್ರೇಷ್ಠ ನ್ಯಾಯಾಲಯಕ್ಕೆ ಹೆಚ್ಚು ನ್ಯಾಯಾಧೀಶರು ನೇಮಕವಾದರು. ಅದೇ ವರ್ಷ ತಾಲೂಕು ಮಂಡಲಿಗಳೂ ಸ್ಥಾಪಿತವಾದವು. ಹಳೆಯ ಕಾಲದ ಅಂಚೆ ಪದ್ಧತಿಯನ್ನು 1889 ರಲ್ಲಿ ಬ್ರಿಟಿಷ್ ಅಂಚೆ ಪದ್ಧತಿಗೆ ಸೇರಿಸಲಾಯಿತು. ಆಡಳಿತ ಸೇವೆಯನ್ನು ಸಮರ್ಥವಾಗಿ ಸಲ್ಲಿಸಲು ಒಳ್ಳೆ ಪ್ರತಿಭಾವಂತ ಯುವಕರನ್ನು ಆಕರ್ಷಿಸುವುದಕ್ಕಾಗಿ 1891 ರಲ್ಲಿ ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆಯನ್ನು ಆರಂಭಿಸಲಾಯಿತು. ಅದು ಭಾರತದ ಎಲ್ಲ ಪ್ರಜೆಗಳಿಗೂ ಅನ್ವಯಿಸಿತ್ತು. ಆದರೆ ಇದು ಮೈಸೂರಿನ ಪ್ರಜಾಪ್ರತಿನಿಧಿ ಸಭೆಯಲ್ಲಿ ವಿರೋಧಕ್ಕೆ ಗುರಿಯಾಯಿತು. ಮೈಸೂರಿನ ಸಾರ್ವಜನಿಕ ಜೀವನದಲ್ಲಿಯೂ ವೃತ್ತಪತ್ರಿಕೋದ್ಯಮದಲ್ಲಿಯೂ ಪ್ರತಿಷ್ಠಿತರಾಗಿ, 'ಪಿತಾಮಹ' (ಜಿ.ಓ.ಎಂ) ಎಂದು ಹೆಸರಾಂತಿದ್ದ ಎಂ. ವೆಂಕಟಕೃಷ್ಣಯ್ಯನವರ ನೇತೃತ್ವದಲ್ಲಿ ಹಲವಾರು ಸದಸ್ಯರು ಇದನ್ನು ವಿರೋಧಿಸಿದರು. ಅವರ ವಾದವಾದರೂ ಸ್ಥಳೀಯ ಪ್ರತಿಭಾವಂತರಿಗೆ ರಕ್ಷಣೆ ನೀಡಬೇಕೆಂಬ ಉದ್ದೇಶದಿಂದ ಕೂಡಿತ್ತು. ಈ ದೃಷ್ಟಿಯಿಂದ ದಿವಾನರ ಅನೇಕ ಕಾರ್ಯಧೋರಣೆಗಳು ಟೀಕೆಗೆ ಗುರಿಯಾದವು. ಶೇಷಾದ್ರಿಅಯ್ಯರ್ ಅವರ ದಿವಾನಗಿರಿಯ ಕಾಲದ ಮೈಸೂರಿನ ರಾಜಕೀಯವನ್ನು ಮೈಸೂರಿನವರಿಗೂ ಮೈಸೂರಿಗೆ ಹೊರಗಿನಿಂದ ಬಂದವರಿಗೂ ನಡೆದ ಹೋರಾಟವೆನ್ನಬಹುದು. ಅದೇ ವರ್ಷ ಸರಕಾರಿ ನೌಕರರ ಅನುಕೂಲಕ್ಕಾಗಿ ಜೀವವಿಮಾ ಪದ್ಧತಿ ಆಚರಣೆಗೆ ಬಂದಿತು. ನೀರಾವರಿ ವ್ಯವಸಾಯಕ್ಕೆ ತೀವ್ರ ಗಮನ ನೀಡಲಾಯಿತು. ಮಾರೀಕಣಿವೆ ಯೋಜನೆ ಮಾಡಲಾಯಿತು. 1886ರಲ್ಲಿ, ಪ್ರಥಮ ಬಾರಿಗೆ,

ಮೈಸೂರು ನಗರದಲ್ಲಿ ಒಂದು ಕೈಗಾರಿಕೆಯ ಮತ್ತು ಕೃಷಿವಸ್ತುಗಳ ಪ್ರದರ್ಶನ ನಡೆಯಿತು. ಹೆಣ್ಣು ಮಕ್ಕಳ ವಿದ್ಯಾಭ್ಯಾಸಕ್ಕೆ ವಿಶೇಷ ಗಮನ ಕೊಡಲಾಯಿತು. ಆಗ ಆರಂಭವಾದ ಮಹಾರಾಣಿ ಬಾಲಿಕಾ ಪ್ರೌಢಶಾಲೆ, ಉತ್ತರೋತ್ತರ 1901ರಲ್ಲಿ ಮಹಾರಾಣಿ ಕಾಲೇಜ್ ಆಗಿ ಬೆಳೆಯಿತು. 1890ರಲ್ಲಿ ಬಿ.ಎಲ್. ರೈಸ್ ಅವರ ಮುಖಂಡತ್ವದಲ್ಲಿ ಆರಂಭವಾದ ಶಾಸನ ಇಲಾಖೆ—ರಾಜ್ಯದಲ್ಲಿ ದೊರಕಿದ ಶಿಲಾ ಶಾಸನಗಳನ್ನು ಶೇಖರಿಸಿ, ಪ್ರಕಟಿಸುವ ಬಗೆಗೆ ಒಂದು ಬಹು ಮುಖ್ಯ ಹೆಜ್ಜೆ ಎನ್ನಬಹುದು. ಅದೇ ವರ್ಷ ಮೈಸೂರಿನಲ್ಲಿ ಪ್ರಾಚ್ಯ ಪುಸ್ತಕಗಳ ಭಂಡಾರ ಆರಂಭವಾಗಿ, ಅಮೂಲ್ಯ ಹಸ್ತ ಪ್ರತಿಗಳ ಶೇಖರಣೆಯ ಕಾರ್ಯವೂ ಮುಂದುವರಿಯಿತು. ಮಹಾರಾಜರು ಕನ್ನಡ ಮತ್ತು ಸಂಸ್ಕೃತಗಳ ಪ್ರೇಮಿಯಾಗಿದ್ದರು. ಅವರು ವಿದ್ವಾಂಸರಿಗೆ ಉದಾರಾಶ್ರಯವನ್ನಿತ್ತರು.

ಚಾಮರಾಜ ಒಡೆಯರು ಕಂಠರೋಗಕ್ಕೆ ತುತ್ತಾಗಿ, 1894ರಲ್ಲಿ ತಮ್ಮ 32 ನೆಯ ವಯಸ್ಸಿನಲ್ಲಿಯೇ ಕಲ್ಕತ್ತಾಕ್ಕೆ ಭೇಟಿ ಇತ್ತಿದ್ದಾಗ, ಅಲ್ಲಿಯೇ ಕಾಲವಾದರು. ರಾಜ್ಯದ ಜನತೆಗೆ ಇದು ಪ್ರಚಂಡ ದುಃಖದ ವಾರ್ತೆಯಾಯಿತು. ರಾಜಕುಮಾರ ಕೃಷ್ಣರಾಜ ಒಡೆಯರಿಗೆ ಆಗ ಇನ್ನು ಹತ್ತು ವರ್ಷ ವಯಸ್ಸಾಗಿತ್ತು.

**ರಾಜಪ್ರತಿನಿಧಿಯ ಆಡಳಿತ**

ರಾಜಕುಮಾರರು ಪ್ರಾಪ್ತವಯಸ್ಸಿಗೆ ಬರುವ ವರೆಗೂ ಅವರ ತಾಯಿ ವಾಣೀವಿಲಾಸ ಸನ್ನಿಧಾನದ ಕೆಂಪರಾಜಮ್ಮಣ್ಣಿಯವರು ರಾಜ ಪ್ರತಿನಿಧಿಯಾಗಿ ದಿವಾನರು ಮತ್ತು ಅವರ ಸಲಹಾ ಸಮಿತಿ ಸದಸ್ಯರ ನೆರವಿನಿಂದಲೂ ವಿವೇಕ ಹಾಗೂ ಬುದ್ಧಿವಂತಿಕೆಗಳಿಂದಲೂ ರಾಜ್ಯಭಾರ ಮಾಡಿ, ತಮ್ಮ ಗುರುತರ ಹೊಣೆಗಾರಿಕೆಯನ್ನು ನಿರ್ವಹಿಸಿ, ಅಗಾಧ ಮೆಚ್ಚುಗೆಗೆ ಪಾತ್ರರಾದರು. ಅವರ ರಾಜಪ್ರತಿನಿಧಿತ್ವದ ಕಾಲದಲ್ಲಿ ಕೈಗೊಂಡ ಗಮನಾರ್ಹ ಕಾರ್ಯಗಳಲ್ಲಿ ಭೂಗರ್ಭ ಶೋಧನೆಯ ಇಲಾಖೆಯನ್ನು 1894ರಲ್ಲಿ ಸ್ಥಾಪಿಸಿದುದು ಮುಖ್ಯವಾದುದು. ಈ ಇಲಾಖೆ ರಾಜ್ಯದ ಖನಿಜ ಸಂಪನ್ಮೂಲಗಳನ್ನು ಹೊರತೆಗೆಯುವ ಸಾಧ್ಯತೆಗಳ ಬಗೆಗೆ ವ್ಯವಸ್ಥಿತವಾದ ಪರಿಶೀಲನೆ ನಡೆಸಿತು. ಹಾಗೆಯೇ ವ್ಯವಸಾಯದ ಇಲಾಖೆಯೂ ಆರಂಭವಾಯಿತು. ಲೋಕೋಪಯೋಗಿ ಕಾರ್ಯಗಳೂ ವಿಶೇಷ ಗಮನ ಪಡೆದವು, ಮಾರೀಕಣಿವೆ ಜಲಾಶಯ ಪೂರ್ಣವಾಯಿತು. 1899ರಲ್ಲಿ ಬೀರೂರು-ಶಿವಮೊಗ್ಗಾ ರೈಲು ಮಾರ್ಗ ಆರಂಭವಾಯಿತು. 1897–98ರಲ್ಲಿ ರಾಜ್ಯದಲ್ಲೆಲ್ಲಾ, ಪ್ರಧಾನವಾಗಿ ಬೆಂಗಳೂರು ನಗರದಲ್ಲಿ ಪ್ಲೇಗಿನ ಪೀಡೆಯಿಂದ ಅಗಾಧ ನಷ್ಟವಾಯಿತು. ಇದರಿಂದ ಮಲ್ಲೇಶ್ವರಂ ಮತ್ತು ಬಸವನಗುಡಿ ಬಡಾವಣೆಗಳಿಗೂ ಉತ್ತರೋತ್ತರ ಇತರ ಬಡಾವಣೆಗಳಿಗೂ ನಾಂದಿಯಾಯಿತು. ಆದರೆ, ಅತ್ಯಂತ ಮುಖ್ಯವಾದ ವಿಷಯವೆಂದರೆ, ಶಿವನಸಮುದ್ರದಲ್ಲಿ ಕಾವೇರಿ ಜಲಪಾತವನ್ನು ಉಪಯೋಗಿಸಿಕೊಂಡು, ಜಲ-ವಿದ್ಯುತ್ ಕೇಂದ್ರದಿಂದ ಕೋಲಾರ ಚಿನ್ನದ ಗಣಿಗೂ ಅನಂತರ 1905ರಲ್ಲಿ ಬೆಂಗಳೂರಿಗೂ ವಿದ್ಯುತ್ ಸರಬರಾಜು ಮಾಡುವ ಕಾರ್ಯ ಆರಂಭವಾದುದು. ಭಾರತದಲ್ಲಿ ವಿದ್ಯುತ್ ಪಡೆದ ನಗರಗಳಲ್ಲಿ ಬೆಂಗಳೂರೇ ಮೊದಲನೆಯದಾಯಿತು. ಇದು ಭಾರತದಲ್ಲೇ ಅತ್ಯಂತ ಉದ್ದವಾದ ಪ್ರಥಮ ವಿದ್ಯುದ್ವಾಹಕ ಸರಣಿಯಾಗಿತ್ತು.

ಪ್ರಜಾಪ್ರತಿನಿಧಿ ಸಭೆಯು ಹೆಚ್ಚು ಅಂಗಸೌಷ್ಠವಗೂಡಿಕೊಂಡು ಉಪಯುಕ್ತ ಪಾತ್ರವನ್ನು ವಹಿಸುತ್ತಿತ್ತು. ಆರಂಭದ ವರ್ಷಗಳಲ್ಲಿ ಅದು ಗೌರವಾನ್ವಿತ ಮನವಿದಾರರ ಕೂಟವಲ್ಲದೆ ಮತ್ತೇನೂ ಆಗಿರಲಿಲ್ಲ. 1897ರ ಹೊತ್ತಿಗೆ ಸದಸ್ಯರುಗಳ ಹೆಸರುಗಳು ಸರಕಾರಿ ದಾಖಲೆಗಳಲ್ಲಿ ಅಂಕಿತವಾಗಿ, ಅವರ ಸ್ಥಾನಮಾನಗಳು ಮನ್ನಣೆಗೆ ಪಾತ್ರವಾಗಿದ್ದವು. 1891ರಲ್ಲಿ ಚುನಾವಣೆಯ ಪದ್ಧತಿ ರೂಢಿಗೆ ಬಂದಿತು. ಸಾಕಷ್ಟು ಹೆಚ್ಚು ಆಸ್ತಿಯೇ ಮತದಾರರಿಗೆ ಅರ್ಹತೆಯಾಗಿತ್ತು. ಪದವೀಧರರೂ ಮತ

ನೀಡುವ ಹಕ್ಕನ್ನು ಹೊಂದಿದ್ದರು. ಇದು ಬ್ರಿಟಿಷ್ ಪ್ರಾಂತಗಳಲ್ಲಿ ನ್ಯಾಯವಿಧಾಯಕ ಸಭೆಗಳು ಸ್ಥಾಪನೆಯಾಗುವುದಕ್ಕೆ ಒಂದು ವರ್ಷ ಮುಂಚೆಯೇ ಆಗಿತ್ತು. 1894ರಲ್ಲಿ ಸದಸ್ಯತನದ ಅವಧಿ ಮೂರು ವರ್ಷಗಳೆಂದು ನಿರ್ಧಾರವಾಯಿತು. ಇದರಿಂದ ಪ್ರತಿನಿಧಿಗಳು ತಮ್ಮ ಕಾರ್ಯವನ್ನು ಹೆಚ್ಚು ಶ್ರದ್ಧೆಯಿಂದ ಪರಿಗಣಿಸಲು ಕಾರಣವಾಯಿತು.

1901 ರಲ್ಲಿ ದಿವಾನ್ ಸರ್ ಕೆ. ಶೇಷಾದ್ರಿಅಯ್ಯರ್ ಅವರ ಸ್ಮರಣೀಯ ದಿವಾನಗಿರಿ ಕೊನೆಗೊಂಡಿತು. ಅದು ಹದಿನೆಂಟು ವರ್ಷಗಳ ಅತ್ಯಂತ ದೀರ್ಘಕಾಲದ್ದಾಗಿದ್ದು (ಆಧುನಿಕ ಕಾಲದಲ್ಲಿ ಅತ್ಯಂತ ದೀರ್ಘಕಾಲ) ಆದರಿಂದ ಮೈಸೂರಿಗೆ ಪ್ರಗತಿಪರ ರಾಜ್ಯವೆಂಬ ಹೆಸರು ಬಂದಿತು.

ಇವರ ತರುವಾಯ ಮಹಾಮಂತ್ರಿ ಪೂರ್ಣಯ್ಯನವರ ವಂಶಸ್ಥರೂ ಬೆಂಗಳೂರು ಸೆಂಟ್ರಲ್ ಕಾಲೇಜಿನ ಮೊದಲಿಗ ಪದವೀಧರರಲ್ಲಿ ಒಬ್ಬರೂ ಆಗಿದ್ದ ಸರ್ ಪಿ. ಎನ್. ಕೃಷ್ಣಮೂರ್ತಿಯವರು ದಿವಾನರಾಗಿ ನೇಮಕವಾದರು.

### ನಾಲ್ಮಡಿ ಶ್ರೀ ಕೃಷ್ಣರಾಜ ಒಡೆಯರು

1902ರ ಆಗಸ್ಟ್ ತಿಂಗಳಲ್ಲಿ ಕೃಷ್ಣರಾಜ ಒಡೆಯರಿಗೆ ಹದಿನೆಂಟು ವರ್ಷ ತುಂಬಿದಾಗ ಅವರಿಗೆ ಅಧಿಕಾರ ವಹಿಸಲಾಯಿತು.

ತರುಣ ಮಹಾರಾಜರಿಗೆ ಸಾಕಷ್ಟು ತರಬೇತಿಯಾಗಿತ್ತು. ಅವರು ತಮ್ಮ ಕರ್ತವ್ಯಗಳನ್ನು ಅತ್ಯಂತ ಶ್ರದ್ಧೆಯಿಂದ ನಿರ್ವಹಿಸುತ್ತಾ ಅರಮನೆಯಲ್ಲಿಯೇ ಇದ್ದ ತಮ್ಮ ಕಾರ್ಯಾಲಯಕ್ಕೆ ದಿನವೂ ಇತರ ಸರಕಾರಿ ನೌಕರರಂತೆ ತಪ್ಪದೆ ಹೋಗುತ್ತಿದ್ದರು. ಅವರು ಶಿಕ್ಷಣದ ಸಾಕಷ್ಟು ಬೆಳವಣಿಗೆಗೆ ತುಂಬ ಗಮನವಿತ್ತರು. ಶ್ರೇಷ್ಠ ದಾನಿಯೆಂದು ಹೆಸರಾದ ಜೆ. ಎನ್. ತಾತಾ ಅವರು ವಿಜ್ಞಾನ ಸಂಶೋಧನೆಗೆ ಮುಡಿಪಾದ ಸಂಸ್ಥೆಯೊಂದಕ್ಕೆ ದತ್ತಿ ನೀಡಲು ಅಪೇಕ್ಷೆ ವ್ಯಕ್ತಪಡಿಸಿದರು. ಇದರ ಫಲವೆ, 1905 ರಲ್ಲಿ ಬೆಂಗಳೂರಿನಲ್ಲಿ 'ಭಾರತೀಯ ವಿಜ್ಞಾನ ಸಂಸ್ಥೆ' (Indian Institute of Science) ಆರಂಭವಾಗಲು ಕಾರಣವಾಯಿತು. ಇದಕ್ಕೆ ಮೈಸೂರು ಸರಕಾರವು ಪ್ರತಿವರ್ಷ ರೂ. 50,000 ಗಳ ಸಹಾಯ ದ್ರವ್ಯನೀಡಲು ಒಪ್ಪಿಗೆ ಕೊಟ್ಟಿತು. ಗ್ರಾಮ ಕೈಗಾರಿಕೆಗಳಾದ ಮರಗೆಲಸ, ನೆಯ್ಗೆ, ರೇಶ್ಮೆಹುಳು ಸಾಕಾಣಿಕೆ, ಕಬ್ಬಿಣದ ಕೆಲಸ, ಚಿತ್ರದ ಕೆಲಸ, ಚನ್ನಪಟ್ಟಣದಲ್ಲಿ ಸುಧಾರಿತ ವಿಧಾನದ ಲಾಕ್ಷಾ ಬಣ್ಣದ ಕೆಲಸ—ಇವುಗಳಲ್ಲೆಲ್ಲ ತರಬೇತಿಕೊಡಲು ಕೇಂದ್ರಗಳನ್ನು ಸ್ಥಾಪಿಸುವ ಕಾರ್ಯಕ್ರಮ ಕೈಗೊಳ್ಳಲಾಯಿತು. ಮದರಾಸು ಮತ್ತು ಬೊಂಬಾಯಿಗಳ ಕಲಾಶಾಲೆಗಳಲ್ಲಿ ವ್ಯಾಸಂಗ ಮಾಡಲು ಅಪೇಕ್ಷಿಸಿದ ವಿದ್ಯಾರ್ಥಿಗಳಿಗೆ ಶಿಷ್ಯವೃತ್ತಿಯನ್ನು ಕೊಡಲಾಯಿತು. ಸ್ಥಳೀಯ ಸ್ವಯಂ ಆಡಳಿತ ಸಂಸ್ಥೆಗಳು ಹೆಚ್ಚು ವಿಸ್ತೃತವಾದುವು. 8 ಜಿಲ್ಲಾ ಬೋರ್ಡುಗಳು, 22 ತಾಲೂಕು ಮಂಡಲಿಗಳು ಮತ್ತು 38 ಘಟಕಗಳು (unions) 1903ರ ಸಪ್ಟೆಂಬರಿನಲ್ಲಿ ಹೊರಡಿಸಿದ ಆಜ್ಞೆ ಪ್ರಕಾರ ರಚನೆಯಾದವು. ಅದೇ ವರ್ಷ ಮೈಸೂರು ನಗರಾಭಿವೃದ್ಧಿ ಮಂಡಲಿ ರಚಿತವಾಗಿ, ಅದರ ಕ್ರಿಯೆಯ ಫಲವಾಗಿ ಮೈಸೂರು ನಗರ ಭಾರತದಲ್ಲೆಲ್ಲ ಅತ್ಯಂತ ಸುಂದರ ನಗರವೆಂದು ಪ್ರಸಿದ್ಧಿ ಪಡೆಯುವಂತಾಯಿತು. 1901 ರಲ್ಲಿ ನಡೆದ ಜನಗಣತಿಯ ಪ್ರಕಾರ, ಸರಕಾರದ ಕಾರ್ಯದರ್ಶಿಗಳಾಗಿದ್ದ ಎಚ್. ವಿ. ನಂಜುಂಡಯ್ಯನವರ ನಾಯಕತ್ವದಲ್ಲಿ, ಬುಡಕಟ್ಟು ಜನಾಂಗಗಳ ಅಧ್ಯಯನ ಕಾರ್ಯ ನಡೆಯುವ ಪ್ರಯತ್ನಕ್ಕೆ ಆರಂಭವಾಯಿತು. ಬ್ರಿಟಿಷ್ ಭಾರತದಲ್ಲಿ 1904 ರಲ್ಲಿ ಆರಂಭವಾದ ಸಹಕಾರಿ ಚಳವಳಿ, 1905 ರಲ್ಲಿ ರಾಜ್ಯದಲ್ಲಿಯೂ ಆರಂಭವಾಗಿ ಸಹಕಾರ ಸಂಘಗಳು ಮತ್ತು ಬ್ಯಾಂಕುಗಳು ಸ್ಥಾಪಿತವಾಗಿ ಹರಡಿದವು.

1906ರ ಮಾರ್ಚ್ 30 ರಂದು ಸರ್ ಪಿ. ಎನ್. ಕೃಷ್ಣಮೂರ್ತಿಯವರು ವಿಶ್ರಾಂತಿ ಪಡೆದರು. ಅವರ ತರುವಾಯ ದಿವಾನರಾಗಿ ನೇಮಕಗೊಂಡ ವಿ. ಪಿ. ಮಾಧವರಾಯರು ಮೂರು ವರ್ಷಗಳ ಕಾಲ ಆಡಳಿತ ನಡೆಸಿದರು. ರಾಜ್ಯದ ದಿವಾನರಾಗಿ ನೇಮಕಗೊಳ್ಳುವ ಮುನ್ನ ಅವರು ತಿರುವಾಂಕೂರು ದಿವಾನರಾಗಿದ್ದರು. ಅವರು ಮೈಸೂರು ಸಂಸ್ಥಾನದ ಆಡಳಿತ ಸೇವೆಯಲ್ಲೇ ಇದ್ದು, ಕಾಲಕ್ರಮೇಣ ಪೋಲೀಸು ಮುಖ್ಯಾಧಿಕಾರಿಯಾಗಿಯೂ, ತರುವಾಯ ಸಲಹಾ ಸಮಿತಿಯ ಸದಸ್ಯರೂ ಆಗಿದ್ದು, ತಿರುವಾಂಕೂರು ರಾಜ್ಯದ ದಿವಾನರಾಗುವ ಸಲುವಾಗಿ, ಅದಕ್ಕೆ ರಾಜೀನಾಮೆಯಿತ್ತಿದ್ದರು. ಅವರ ಕಾಲದಲ್ಲಿ ಬೆಂಗಳೂರು–ಚಿಕ್ಕಮಗಳೂರು ಮೀಟರ್ ಗೇಜ್ ರೈಲುಮಾರ್ಗವು ಹಾಕಲ್ಪಟ್ಟಿತು. ಅದು ಸ್ಥಾನೀಯ ಖಾಸಗಿ ಕಂಪೆನಿಯೊಂದರ ಮೂಲಕ, ಆ ಕಾಲಕ್ಕೆ ಅಪೂರ್ವವೆನಿಸಿದ್ದ ಸಹಕಾರಿ ವಿಧಾನದಲ್ಲಿ (1905) ವ್ಯವಸ್ಥೆಯಾಗಿತ್ತು. ರಾಜ್ಯದಲ್ಲಿ ರೈಲ್ವೆ ಆಡಳಿತ ನಡೆಸುವುದಕ್ಕಾಗಿ ಎಂ. ಎಸ್. ಎಂ. ರೈಲ್ವೆ ಕಂಪೆನಿಯೊಂದಿಗೆ ಮೈಸೂರು ಸರಕಾರ ಹೊಸ ಒಪ್ಪಂದವನ್ನು ಮಾಡಿಕೊಂಡಿತು. ಅರಣ್ಯ ರಕ್ಷಣೆಗಾಗಿ ತಕ್ಕ ಗಮನ ನೀಡಲಾಯಿತು. ಇಬ್ಬರು ವಿದ್ಯಾರ್ಥಿಗಳು ಅರಣ್ಯ ಶಾಸ್ತ್ರ ಅಧ್ಯಯನ ಮಾಡಿ ಬರಲು, ಒಬ್ಬನನ್ನು ಡೆಹರಾಡೂನಿಗೂ ಇನ್ನೊಬ್ಬನನ್ನು ಆಕ್ಸಫರ್ಡಿಗೂ ಕಳಿಸಲಾಯಿತು. ಈ ಕಾಲದಲ್ಲಿಯೇ ಪಶುಪಾಲನೆ ಇಲಾಖೆಯು ಆರಂಭವಾಯಿತು. ರಾಜಕೀಯ ಸುಧಾರಣೆಯ ವಿಷಯದಲ್ಲಿಯೂ ಮುಖ್ಯವಾದ ಮುನ್ನಡೆಯಾಯಿತು. 1907ರಲ್ಲಿ ಮೈಸೂರು ನ್ಯಾಯ ವಿಧಾಯಕ ಸಭೆ ಸ್ಥಾಪನೆಯಾಯಿತು. 10ಕ್ಕೆ ಕಡಮೆಯಿಲ್ಲದಂತೆ, 15ಕ್ಕೆ ಮೀರದಂತೆ ⅖ಕ್ಕೆ ಕಡಮೆಯಿಲ್ಲದಂತೆ ಖಾಸಗಿ ಸದಸ್ಯರು ಸರಕಾರದಿಂದ ನಾಮಕರಣ ಹೊಂದುವಂತಾಯಿತು. ಪ್ರಜಾಪ್ರತಿನಿಧಿ ಸಭೆಯಿಂದ ಇಬ್ಬರು ಸದಸ್ಯರನ್ನು ನ್ಯಾಯ ವಿಧಾಯಕ ಸಭೆಗೆ ಚುನಾಯಿಸುವಂತಾಯಿತು. ಪ್ರಜಾಪ್ರತಿನಿಧಿ ಸಭೆಯಲ್ಲಿ ಪ್ರಥಮ ಬಾರಿಗೆ, ವಿಧೇಯಕಗಳ ಬಗೆಗೆ ಮತ ನೀಡುವ ಪದ್ಧತಿಗೆ ಅನುಮತಿ ದೊರಕಿತು. ಆ ವರೆಗಿನ ಪದ್ಧತಿಯ ಪ್ರಕಾರ ಸಭೆಯ ಒಟ್ಟಾರೆ ಅಭಿಮತವನ್ನು ಮಾತ್ರ ಸೂಚಿಸಲಾಗುತ್ತಿತ್ತು. ವಂಗವಿಭಜನೆಯ ಕಾರಣದಿಂದ ದೇಶಾದ್ಯಂತ ನಡೆದ ರಾಷ್ಟ್ರೀಯ ಆಂದೋಳನದ ಪರಿಣಾಮವಾಗಿ ಉತ್ಪನ್ನವಾಗಿದ್ದ ಹೊಸ ಸತ್ವದಿಂದ ಈ ರಾಜಕೀಯ ಸುಧಾರಣೆಗಳು ಜನತೆಯ ಉತ್ಸಾಹವನ್ನು ಕೆರಳಿಸಲಿಲ್ಲ. ವಿ. ಪಿ. ಮಾಧವರಾಯರು ಪ್ರಚಂಡ ವ್ಯಕ್ತಿಯಾಗಿದ್ದರು. ಅವರು ತಮ್ಮ ಅಭಿಪ್ರಾಯದಲ್ಲಿ ಎಂದಿಗೂ ಮಣಿಯುತ್ತಿರಲಿಲ್ಲ. ಅವರು ಪ್ರಜಾಪ್ರತಿನಿಧಿ ಸಭೆಯಿಂದ ನ್ಯಾಯವಿಧಾಯಕ ಸಭೆಗೆ ಚುನಾಯಿತರಾಗಿದ್ದ ಎಂ. ವೆಂಕಟಕೃಷ್ಣಯ್ಯ ಮತ್ತು ಡಿ. ವೆಂಕಟರಾಮಯ್ಯ ಅವರ ಆಯ್ಕೆಯನ್ನು ರದ್ದು ಮಾಡಿ, ಬಹಳ ಅವಿಶ್ವಾಸಕ್ಕೆ ಗುರಿಯಾದರು. ಎಲ್ಲಕ್ಕಿಂತ ಹೆಚ್ಚಾಗಿ, ಅವರ ಆಡಳಿತವು ಜನಪ್ರಿಯತೆ ಕಳೆದುಕೊಳ್ಳಲು 1908ರ ಮೈಸೂರು ವೃತ್ತಪತ್ರಿಕಾ ನಿಬಂಧನೆಯೇ ಕಾರಣ. ಅದು ತುಂಬ ಟೀಕೆಗೆ ಗುರಿಯಾಯಿತು. ಆ ನಿಬಂಧನೆಗೆ ಪ್ರತಿಭಟನೆ ಸೂಚಿಸುವ ಸಲುವಾಗಿ ರಾಜ್ಯದ ವೃತ್ತಪತ್ರಿಕೆಗಳು ತಾತ್ಕಾಲಿಕವಾಗಿ ಪ್ರಕಟಣೆ ನಿಲ್ಲಿಸಿದ್ದವು.

ಈ ಕಾಲದ ಆಡಳಿತದಲ್ಲಿ ಉಲ್ಲೇಖಿಸಬಹುದಾದ ಹಿತಕರ ಅಂಶಗಳಲ್ಲಿ ಇವು ಕೆಲವು: ಭಾರತೀಯ ವಿಜ್ಞಾನ ಸಂಸ್ಥೆಯ ಕಟ್ಟಡ ರಚನೆ ಸಾಗುತ್ತಿತ್ತು. ಸರಕಾರ ಅದಕ್ಕಾಗಿ 5 ಲಕ್ಷ ರೂ. ಸಹಾಯ ದ್ರವ್ಯ ನೀಡಿತು. ಶಂಕರ ಮಠದ ಸುಂದರವಾದ ಕಟ್ಟಡ ಇದೇ ಕಾಲದಲ್ಲಿ ರಚಿತವಾಯಿತು. ಪ್ರಾಥಮಿಕ ಶಿಕ್ಷಣದ ಅಭಿವೃದ್ಧಿಗಾಗಿ ಎಲ್ಲ ಪ್ರಾಥಮಿಕ ಶಾಲೆಗಳಲ್ಲಿಯೂ ಶುಲ್ಕವನ್ನು ರದ್ದುಮಾಡಲಾಯಿತು. ಸಹಕಾರ ಸಂಘಗಳಿಗೆ ಹಣಕಾಸನ್ನು ಒದಗಿಸುವುದಕ್ಕೋಸ್ಕರ ಬೆಂಗಳೂರಿನಲ್ಲಿ ಒಂದು ಕೇಂದ್ರ ಸಹಕಾರ ಬ್ಯಾಂಕ್ ಆರಂಭವಾಯಿತು. ಇದಕ್ಕೆ ಪ್ರೋತ್ಸಾಹ ನೀಡುವ ದೃಷ್ಟಿಯಿಂದ ಮಹಾರಾಜರೇ ಸ್ವತಃ ಅಧಿಕ ಮೊತ್ತದ ಠೇವಣಿಯನ್ನು ಇಟ್ಟಿದ್ದರು.

ವಿ. ಪಿ. ಮಾಧವರಾಯರು 1909ರ ಆದಿಭಾಗದಲ್ಲಿ ವಿಶ್ರಾಂತಿ ಪಡೆದರು. ಅವರ ತರುವಾಯ, ಅಮಾತ್ಯ ಶ್ರೇಷ್ಠ ರಾಜಾ ಸರ್ ಟಿ. ಮಾಧವರಾಯರ ಮಗ ಟಿ. ಆನಂದರಾವ್ ದಿವಾನರಾದರು. ಅವರು

1873ರಲ್ಲಿಯೇ ಮೈಸೂರು ಸರಕಾರದ ಕೆಲಸಕ್ಕೆ ಸೇರಿ, ರೆವಿನ್ಯೂ ಕಮಿಷನರ್ ಹಾಗೂ ಸಲಹಾ ಸಮಿತಿ ಸದಸ್ಯರೂ ಆಗಿದ್ದರು. ಅವರು ಮೂರು ವರ್ಷಗಳ ಕಾಲ ದಿವಾನರಾಗಿದ್ದು ಸುಸಂಸ್ಕೃತ ಮನೋ ಭಾವಕ್ಕೂ ಪಾಂಡಿತ್ಯಕ್ಕೂ ಹೆಸರಾಂತಿದ್ದರು. 1897ರಲ್ಲಿ ಅಗ್ನಿಗೆ ಆಹುತಿಯಾಗಿ ಭಸ್ಮವಾಗಿದ್ದ ಮೈಸೂರು ಅರಮನೆಯ ಮರದ ಕಟ್ಟಡವು, 1910ರಲ್ಲಿ ಹೊಸತಾಗಿ ಕಟ್ಟಿ ಮುಗಿಯಿತು. ಅದು ಸ್ಥಳೀಯವಾಗಿ ದೊರಕುವ ಅಭ್ರಕ, ಅಗ್ನಿಶಿಲೆ ಮತ್ತು ಅಮೃತಶಿಲೆ ಮೊದಲಾದ ಸೊಗಸಾದ ಶಿಲೆಗಳಿಂದ ನಿರ್ಮಿತವಾಯಿತು. ಈ ನಿರ್ಮಾಣ ಕಾರ್ಯಕ್ಕೆ ಕುಶಲ ಕೆಲಸಗಾರರನ್ನು ದೂರ ದೇಶಗಳಿಂದ ಕರೆಸಿಕೊಳ್ಳ ಲಾಗಿತ್ತು. ತಿರುವಾಂಕೂರಿನ ಪ್ರಸಿದ್ಧ ಚಿತ್ರಕಲೆಗಾರ ರವಿವರ್ಮನನ್ನು ದರ್ಬಾರ್ ಹಾಲ್ ಶೃಂಗರಿಸಲು ಕರೆಸಲಾಗಿತ್ತು. ಆತನು ಕೆಲವು ಅಂದವಾದ ಚಿತ್ರಗಳನ್ನು ರಚಿಸಿದ್ದಾನೆ. ರಾಜ್ಯದ ಚೀಫ್ ಇಂಜಿನಿಯ ರಾಗಿದ್ದ ಎಂ. ವಿಶ್ವೇಶ್ವರಯ್ಯನವರ ಸಲಹೆಯಂತೆ ಕನ್ನಂಬಾಡಿ ಜಲಾಶಯದ ನಿರ್ಮಾಣಕಾರ್ಯ 1911 ರಲ್ಲಿ ಆರಂಭವಾಯಿತು. ಎಲ್ಲಕ್ಕಿಂತ ಬಹಳ ಮುಖ್ಯವಾದ ಕಾರ್ಯವೆಂದರೆ, ಎಂ. ವಿಶ್ವೇಶ್ವರಯ್ಯನವರ ಸಲಹೆಯಂತೆ ಅಭಿವೃದ್ಧಿ ಕೆಲಸಗಳಿಗೆ ಸಂಬಂಧಿಸಿದ, ಮೈಸೂರು ಆರ್ಥಿಕ ಸಮ್ಮೇಳನಗಳು ನಡೆದು, ರಾಜ್ಯದ ಶಿಕ್ಷಣ, ಕೈಗಾರಿಕೆ, ಮತ್ತು ಕೃಷಿ ಕೆಲಸಗಳ ಯೋಜನಾಬದ್ಧ ಬೆಳವಣಿಗೆಗೆ ಹೆಜ್ಜೆಯಿಟ್ಟಂತಾಯಿತು.

1912ರ ಕೊನೆಯ ಕಾಲಕ್ಕೆ, ಟಿ. ಆನಂದರಾಯರ ತರುವಾಯ ಎಂ. ವಿಶ್ವೇಶ್ವರಯ್ಯನವರು ದಿವಾನರಾದರು. ಇದರಿಂದ ಮಹಾರಾಜರು ತಾಂತ್ರಿಕ ಇಲಾಖೆಯ ಮುಖ್ಯಸ್ಥರೊಬ್ಬರನ್ನು ದಿವಾನ ಗಿರಿಗೆ ತಂದ ಹೊಸ ಸಂಪ್ರದಾಯವನ್ನು ಮೊದಲು ಮಾಡಿದಂತಾಯಿತು. ಸರ್ ಎಂ. ವಿಶ್ವೇಶ್ವರಯ್ಯ ನವರು ಮೈಸೂರಿನಲ್ಲಿ ಜನಿಸಿದರೂ, ಪದವೀಧರರಾದ ಕೂಡಲೇ ಮುಂಬೈ ಪ್ರಾಂತದಲ್ಲಿ ಕೆಲಸಕ್ಕೆ ಸೇರಿ ದರು. ಅಲ್ಲಿ ಅವರು ಶ್ರೇಷ್ಠ ಸೇವೆ ಸಲ್ಲಿಸಿ, ತಮ್ಮ 48ನೆಯ ವಯಸ್ಸಿನಲ್ಲಿಯೇ ವಿಶ್ರಾಂತರಾದರು. ಆ ಕಾಲದಲ್ಲಿ ಇಲಾಖೆಯ ಮುಖ್ಯಸ್ಥರಾಗುವುದು ಬ್ರಿಟಿಷ್ ಅಧಿಕಾರಿಗಳಿಗೆ ಮೀಸಲಾಗಿತ್ತೇ ವಿನಾ ಅದು ಭಾರತೀಯರಿಗೆ ದುರ್ಲಭವಾಗಿತ್ತು. ಇದು ವಿಶ್ವೇಶ್ವರಯ್ಯನವರಿಗೆ ಚೆನ್ನಾಗಿ ಅರಿವಾಗಿತ್ತು. ತರು ವಾಯ ಅವರು ಮಹಾರಾಜರ ಮತ್ತು ದಿವಾನರ ಕರೆಗೆ ಓಗೊಟ್ಟು ತಮ್ಮ ಸ್ವಂತ ಸಂಸ್ಥಾನಕ್ಕೆ ಸೇವೆ ಸಲ್ಲಿಸಲು ಸಂತೋಷದಿಂದ ಒಪ್ಪಿಕೊಂಡರು.

ಸರ್ ವಿಶ್ವೇಶ್ವರಯ್ಯನವರ ಕಾಲದಲ್ಲಿ ರಾಜ್ಯದ ಸರ್ವ ವಿಧದ ಬೆಳವಣಿಗೆಯ ಯುಗ ಆರಂಭವಾಯಿತು. ಕೈಗಾರಿಕೆಯ ಕ್ಷೇತ್ರ ವಿಶೇಷವಾಗಿ ಬೆಳೆಯಿತು. ಅವರು ಜನರಲ್ಲಿ ಯೋಜನಾ ಮನೋಧರ್ಮವನ್ನು ಮೂಡಿಸಿ, ಸ್ಪಷ್ಟವಾದ ಗುರಿಗಳನ್ನಿಟ್ಟುಕೊಂಡು, ಅವುಗಳ ಸಾಧನೆಗೆ ಅಧಿಕಾರಿಗಳೂ ಖಾಸಗಿ ಜನರೂ ಶ್ರಮಿಸುವಂತೆ ಮಾಡಿದರು. ಅವರ ಮಾರ್ಗದರ್ಶನದಿಂದಲೂ ಸ್ಫೂರ್ತಿ ಯಿಂದಲೂ ಸ್ಥಾಪಿತವಾದ ಕೇವಲ ಸಂಸ್ಥೆಗಳನ್ನೂ ಕೈಗಾರಿಕೆಗಳನ್ನೂ ಪಟ್ಟಿ ಮಾಡಿದರೆ, ಅದೇ ಒಂದು ಅಮೋಘ ಅಂಶವೆನಿಸೀತು. ಶಿಕ್ಷಣದ ವಿಷಯದಲ್ಲಿ ಕಡ್ಡಾಯ ಪದ್ಧತಿಯನ್ನು ಹಂತಹಂತವಾಗಿ ಜಾರಿಗೆ ತರಲು ಶಾಸನವನ್ನು ಮಾಡಿದರು. ಹೆಣ್ಣುಮಕ್ಕಳ ವಿದ್ಯಾಭ್ಯಾಸ ಹರಡಲು ತಕ್ಕ ಕಾರ್ಯಕ್ರಮ ಕೈಗೊಂಡರು. ಹಿಂದುಳಿದ ಪಂಗಡಗಳ ವಿದ್ಯಾರ್ಥಿಗಳಿಗಾಗಿ ಶಿಷ್ಯವೃತ್ತಿಯನ್ನು ಜಾರಿಗೆ ತಂದರು. ಮೆಕ್ಯಾನಿಕಲ್ ಇಂಜಿನಿಯರಿಂಗ್ ಶಾಲೆ, ವಾಣಿಜ್ಯ ಮತ್ತು ವ್ಯವಸಾಯ ಶಾಲೆಗಳು, ಮೈಸೂರಿನಲ್ಲಿ ಚಾಮರಾಜೇಂದ್ರ ಕುಶಲ ವಿದ್ಯೆಯ ಶಾಲೆ, ಜಿಲ್ಲಾ ಮುಖ್ಯಪಟ್ಟಣಗಳಲ್ಲಿ ಕೈಗಾರಿಕೆಯ ಶಾಲೆಗಳು. ಬೆಂಗಳೂರಿನ ಸರಕಾರಿ ಇಂಜಿನಿಯರಿಂಗ್ ಕಾಲೇಜ್—ಇವುಗಳನ್ನೆಲ್ಲಾ ಸ್ಥಾಪಿಸಿದರು. ವಿದೇಶ ವಿದ್ಯಾಭ್ಯಾಸಕ್ಕೆ ಹೋಗುವವರಿಗೆ ವಿದ್ಯಾರ್ಥಿವೇತನ ನೀಡುವ ಪದ್ಧತಿಯನ್ನು ಜಾರಿಗೆ ತಂದುದಲ್ಲದೆ, 1916ರಲ್ಲಿ ಮೈಸೂರು ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿದರು. ಆ ಕಾಲದಲ್ಲಿ ಕಾಶೀ ಹಿಂದೂ ವಿಶ್ವವಿದ್ಯಾ ನಿಲಯಕ್ಕೆ ಕುಲಪತಿಯಾಗಿದ್ದ ಮೈಸೂರು ಮಹಾರಾಜರು ಆ ಸಂಸ್ಥೆಗೆ 2 ಲಕ್ಷ ರೂ. ದಾನಮಾಡಿದುದಲ್ಲದೆ

ಪ್ರತಿ ವರ್ಷ 12,000 ರೂ. ಸಹಾಯ ದ್ರವ್ಯವನ್ನಿತ್ತರು. ವಿಶ್ವೇಶ್ವರಯ್ಯನವರ ಕಾಲದಲ್ಲಿ ಈ ಕೆಳಗೆ ಕಂಡ ಕೈಗಾರಿಕೆಗಳು ಸ್ಥಾಪಿತವಾದವು: ಮೈಸೂರಿನಲ್ಲಿ ಗಂಧದೆಣ್ಣೆ ಕಾರ್ಖಾನೆ ಮತ್ತು ಬೆಂಗಳೂರಿನಲ್ಲಿ ಸಾಬೂನು ಕಾರ್ಖಾನೆ, ಲೋಹಗಳ ಕಾರ್ಖಾನೆ, ಚರ್ಮ ಹದಮಾಡುವ ಕಾರ್ಖಾನೆ, ಸೆಂಟ್ರಲ್ ಇಂಡಸ್ಟ್ರಿಯಲ್ ವರ್ಕ್‌ಷಾಪ್, ಇವುಗಳೆಲ್ಲಾ ಸ್ಥಾಪನೆಯಾದವು. ಭದ್ರಾವತಿಯಲ್ಲಿ ಕಬ್ಬಿಣದ ಕಾರ್ಖಾನೆ ಮತ್ತು ಮರದ ಎಣ್ಣೆ ತೆಗೆಯುವ ಕಾರ್ಖಾನೆ ಸ್ಥಾಪನೆಯಾದವು. ಅವರು ಮೈಸೂರು ಬ್ಯಾಂಕ್, ಮೈಸೂರು ವಾಣಿಜ್ಯ ಸಂಸ್ಥೆ, ಕರ್ಣಾಟಕ ಸಾಹಿತ್ಯ ಪರಿಷತ್ತು, ಬೆಂಗಳೂರು ಮೈಸೂರುಗಳಲ್ಲಿ ಸಾರ್ವಜನಿಕ ಪುಸ್ತಕ ಭಂಡಾರಗಳು, ಬೆಂಗಳೂರಿನ ಸೆಂಚುರಿ ಕ್ಲಬ್ ಮತ್ತು ಮೈಸೂರಿನ ಕಾಸ್ಮೋಪಾಲಿಟನ್ ಕ್ಲಬ್ ಇವೆಲ್ಲವುಗಳ ಸ್ಥಾಪನೆಗೆ ನೆರವನ್ನು ಕೊಟ್ಟರು.

ವಿಶ್ವೇಶ್ವರಯ್ಯನವರ ಆಡಳಿತ ಕಾಲದಲ್ಲಿಯೇ ಹಾಸನದ ಮೂಲಕವಾಗಿ ಬೆಂಗಳೂರು—ಅರಸೀಕೆರೆ ರೈಲುಮಾರ್ಗ ಆರಂಭವಾಯಿತು. ಬಂಗಾರಪೇಟೆಯನ್ನು ಕೋಲಾರದ ಮೂಲಕ ಚಿಕ್ಕಬಳ್ಳಾಪುರಕ್ಕೆ ಸೇರಿಸುವ ರೈಲುಮಾರ್ಗವೂ ಆಯಿತು. ಮಲೆನಾಡಿನ ಅರಣ್ಯಗಳಿಂದ ನಾಟಾಗಳನ್ನು ಸಾಗಿಸಲನುವಾಗುವಂತೆ ತರೀಕೆರೆ ನರಸಿಂಹರಾಜಪುರಗಳ ನಡುವೆ ಟ್ರಾಂವೇ ಆರಂಭವಾಯಿತು. ಎಂ. ಎಸ್. ಎಂ. ರೈಲ್ವೆ ಕಂಪೆನಿಯಿಂದ 372 ಮೈಲಿಗಳ ರೈಲು ಮಾರ್ಗದ ಆಡಳಿತವು ಮೈಸೂರು ಸರ್ಕಾರಕ್ಕೆ ಕೊಡಲ್ಪಟ್ಟಿತು. 1799ರ ಒಪ್ಪಂದದ ಪ್ರಕಾರ ಮೈಸೂರು ರಾಜ್ಯಕ್ಕೆ ಸಮುದ್ರ ತೀರ ಪ್ರದೇಶದೊಡನೆ ಸಂಪರ್ಕವೇ ಇಲ್ಲದಂತಾಗಿತ್ತು. ಆದುದರಿಂದ ಮೈಸೂರಿನ ಗಡಿಯಾಚೆ ಹತ್ತು ಮೈಲಿಗಳ ದೂರದ ಭಟ್ಕಳ ರೈಲ್ವೆ ಸಂಪರ್ಕ ಹೊಂದಿದ ಬಂದರಾಗಿ ಬೆಳವಣಿಗೆಯಾಗುವಂತೆ ಅವಕಾಶ ಕೊಡಬೇಕೆಂದು ಸರ್. ಎಂ. ವಿಶ್ವೇಶ್ವರಯ್ಯನವರು ಭಾರತ ಸರಕಾರದೊಡನೆ ಪತ್ರವ್ಯವಹಾರ ನಡೆಸುತ್ತಿದ್ದರು.

ಸರ್. ಎಂ. ವಿಶ್ವೇಶ್ವರಯ್ಯನವರು ದಿವಾನರಾಗಿದ್ದ ಆರು ವರ್ಷಗಳ ಕಾಲದಲ್ಲಿ ನಾಲ್ಕು ವರ್ಷಗಳು (1914–18) ಪ್ರಪಂಚದ ಪ್ರಥಮ ಯುದ್ಧದ ಕಾಲವಾಗಿದ್ದು ಬಹಳ ಅನನುಕೂಲ ಸ್ಥಿತಿಗಳಿದ್ದರೂ ಇಷ್ಟೆಲ್ಲ ನಡೆದವೆಂಬುದು ಅಸಾಧಾರಣವೆನಿಸದಿರದು.

ಸರ್. ಎಂ. ವಿಶ್ವೇಶ್ವರಯ್ಯನವರು ಉದಾರಭಾವದ ರಾಜಕಾರಣ ಪಟುವಾಗಿದ್ದರು. ಅವರು ಪ್ರಜಾಪ್ರಭುತ್ವದಲ್ಲಿ ತುಂಬ ನಂಬಿಕೆ ಹೊಂದಿದ್ದರು. ಪ್ರಜಾಪ್ರತಿನಿಧಿಗಳಿಗೆ ದೇಶದ ಆಡಳಿತದಲ್ಲಿ ಹೆಚ್ಚು ಸಂಪರ್ಕವನ್ನು ಕಲ್ಪಿಸುವುದು ಅವರ ಉದ್ದೇಶವಾಗಿತ್ತು. ಖಾಸಗೀ ಜನರಿಂದ ಕೂಡಿದ ಮೈಸೂರು ಆರ್ಥಿಕ ಸಮ್ಮೇಳನಗಳೂ ಅದರ ಸಮಿತಿಗಳೂ ಈ ಭಾವದ ಬೆಳವಣಿಗೆಗೆ ನೆರವನ್ನು ನೀಡಿದವು. ಅವರು ಸ್ವಯಂ ಆಡಳಿತ ಹೊಂದಿದ ಜಿಲ್ಲಾ ಮತ್ತು ತಾಲೂಕು ಮಂಡಲಿಗಳು, ಪುರ ಸಭೆಗಳು ಮತ್ತು ಗ್ರಾಮ ಪಂಚಾಯತಿಗಳು—ಇವುಗಳ ಕರ್ತವ್ಯಗಳನ್ನು ಹೆಚ್ಚಿಸಲು ತೀವ್ರ ಆಸಕ್ತಿ ಹೊಂದಿದ್ದರು. ಈ ಸಂಸ್ಥೆಗಳನ್ನು ಅಧಿಕಾರಿಗಳಿಂದ ಆದಷ್ಟು ದೂರವಿಡಬೇಕೆಂಬುದು ಅವರ ಆಶಯವಾಗಿತ್ತು. 1918 ರಲ್ಲಿ ಅಂಗೀಕೃತವಾದ ಮೈಸೂರು ಸ್ಥಳೀಯ ಸಂಸ್ಥೆಗಳ ಮತ್ತು ಗ್ರಾಮ ಪಂಚಾಯತಿಗಳ ನಿಬಂಧನೆ ಪ್ರಕಾರ, ಜಿಲ್ಲಾ ಮತ್ತು ತಾಲೂಕು ಮಂಡಲಿಗಳಲ್ಲಿ ಚುನಾಯಿತ ಸದಸ್ಯರ ಬಹುಮತವಿರುವಂತೆಯೂ ಮೈನರ್ ಟೌನ್ ಮತ್ತು ನಗರ ಸಭೆಗಳಿಗೆ ಚುನಾಯಿತ ಉಪಾಧ್ಯಕ್ಷರಿರುವಂತೆಯೂ ಗ್ರಾಮ ಪಂಚಾಯತಿಗಳಿಗೆ ಕೆಲವು ಕ್ಲುಪ್ತ ಕರ್ತವ್ಯಗಳಿಂದ ಕೂಡಿದ ಚುನಾಯಿತ ಅಧ್ಯಕ್ಷರಿರುವಂತೆಯೂ ಆಯಿತು.

ಮೈಸೂರು ನ್ಯಾಯ ವಿಧಾಯಕ ಸಭೆಯೂ ಸುಧಾರಣೆ ಹೊಂದಿತು. ಅದರ ಸಂಖ್ಯೆ 18 ರಿಂದ 24ಕ್ಕೆ ಏರಿತು. ಅದರಲ್ಲಿ ಪ್ರಜಾಪ್ರತಿನಿಧಿ ಸಭೆಯಿಂದ ಚುನಾಯಿತರಾದ 4 ಮಂದಿ ಸದಸ್ಯರೂ ಜಿಲ್ಲಾ ಪ್ರಾದೇಶಿಕ ಪ್ರಾತಿನಿಧ್ಯವುಳ್ಳ 4 ಮಂದಿ ಸದಸ್ಯರೂ ಇರುವಂತಾಯಿತು. ನ್ಯಾಯವಿಧಾಯಕ ಸಭೆಗೆ

ಆಯ–ವ್ಯಯ ಅಂದಾಜಿನ ವಿಷಯದಲ್ಲಿ ಚರ್ಚೆ ನಡಸುವುದಕ್ಕೂ ಆಡಳಿತದ ವಿಷಯದಲ್ಲಿ ಪ್ರಶ್ನೆಗಳನ್ನು ಕೇಳುವುದಕ್ಕೂ ಅಧಿಕಾರವನ್ನು ನೀಡಲಾಯಿತು. 1917 ರಿಂದ ಆಯ–ವ್ಯಯ ಅಂದಾಜು ಅಧಿವೇಶನ ಎಂಬ ಹೆಸರಿನಿಂದ ಪ್ರಜಾಪ್ರತಿನಿಧಿಸಭೆಯ ಎರಡನೆಯ ಅಧಿವೇಶನ ನಡೆಸಲು ಅನುಮತಿ ನೀಡಲಾಯಿತು.

ಹಿಂದೆ ಹೇಳಿದಂತೆ, ಪ್ರಪಂಚದ ಪ್ರಥಮ ಯುದ್ಧ ನಡೆಯುತ್ತಿತ್ತು. ಮಹಾರಾಜರು ಯುದ್ಧ ಆರಂಭವಾದಾಗಲೇ ತಮ್ಮ ಸೈನ್ಯವನ್ನೆಲ್ಲಾ ಬ್ರಿಟಿಷ್ ಸರಕಾರದ ವಶಕ್ಕೆ ಕೊಟ್ಟದ್ದಲ್ಲದೆ, ಯುದ್ಧನಿಧಿಗೆ 50 ಲಕ್ಷ ರೂಪಾಯಿಗಳ ಉದಾರ ಕಾಣಿಕೆಯನ್ನೂ 2 ಲಕ್ಷ ರೂಪಾಯಿಗಳನ್ನು ಇಂಪೀರಿಯಲ್ ಇಂಡಿಯಾ ರಿಲೀಫ್ ಫಂಡಿಗೂ ನೀಡಿದರು. ಯುದ್ಧ ಕೊನೆಗೊಳ್ಳುವ ವೇಳೆಗೆ ರಾಜ್ಯದ ಪ್ರಜೆಗಳು 36 ಲಕ್ಷವನ್ನೂ ಮಹಾರಾಜರು ಇನ್ನೊಮ್ಮೆ 20 ಲಕ್ಷವನ್ನೂ ಕಾಣಿಕೆಯಾಗಿ ಸಲ್ಲಿಸಿದರು. ಮೈಸೂರಿನ ಸೈನಿಕರು ಈಜಿಪ್ಟ್, ಮೆಸೊಪೊಟೇಮಿಯಾ ಮತ್ತು ಪ್ಯಾಲೆಸ್ಟೈನ್‌ಗಳಲ್ಲಿ ವೀರತನದಿಂದ ಹೋರಾಡಿ ಹೆಸರನ್ನು ಗಳಿಸಿಕೊಂಡರು.

ಯುದ್ಧವು 1918ರ ನವೆಂಬರ್‌ನಲ್ಲಿ ಕೊನೆಗೊಳ್ಳುವ ಕಾಲಕ್ಕೆ ಆಹಾರ ಧಾನ್ಯದ ಕೊರತೆಯ ಜತೆಗೆ ಇನ್‌ಫ್ಲುಯೆಂಜಾ ಉಪದ್ರವವು ದೇಶದಲ್ಲೆಲ್ಲ ಹರಡಿತು. ವಿಳಂಬವಿಲ್ಲದೆ ಸೂಕ್ತ ಪರಿಹಾರ ಕ್ರಮವನ್ನು ಕೈಗೊಳ್ಳಬೇಕಾಗಿತ್ತು. ಸರ್ ಎಂ. ವಿಶ್ವೇಶ್ವರಯ್ಯನವರು ತಮ್ಮ ಎಂದಿನ ಕಾರ್ಯವಿಚಕ್ಷಣೆಗನು ಗುಣವಾಗಿ ಸೂಕ್ತ ಪರಿಹಾರ ಕ್ರಮಗಳನ್ನು ಕೈಗೊಂಡರು. ಆಹಾರ ನಿಯಂತ್ರಣಾಧಿಕಾರಿಯೊಬ್ಬರು ನೇಮಕಗೊಂಡರು. ಆಹಾರ ಧಾನ್ಯಗಳ ರಫ್ತನ್ನು ತಪ್ಪಿಸಲಾಯಿತು. ಪರಮಾವಧಿ ಚಿಲ್ಲರೆ ಮಾರಾಟದ ಬೆಲೆಯನ್ನು ಗೊತ್ತುಮಾಡಿ ನ್ಯಾಯ–ಬೆಲೆ ಅಂಗಡಿಗಳನ್ನು ತೆರೆಯಲಾಯಿತು. ಆಗ ಬೆಂಗಳೂರಿನಲ್ಲಿ 'ಅತ್ಯಂತ ಹೆಚ್ಚಿನ ಬೆಲೆಯೆಂದರೆ, ಅಕ್ಕಿ ರೂಪಾಯಿಗೆ $3\frac{1}{4}$ ಸೇರಿನಂತೆಯೂ ರಾಗಿ ರೂಪಾಯಿಗೆ 8 ಸೇರಿನಂತೆಯೂ ಮಾರಾಟವಾಯಿತು.

ಸರ್ ಎಂ. ವಿಶ್ವೇಶ್ವರಯ್ಯನವರು 1918ರ ಕೊನೆಗೆ ವಿಶ್ರಾಂತರಾದರು. ಅವರು ಮೈಸೂರು ರಾಜ್ಯದ ಆಡಳಿತ ಸಂಬಂಧದಿಂದ ದೂರವಾದರೂ ರಾಜ್ಯದ ಅಭಿವೃದ್ಧಿ ಕಾರ್ಯಗಳಲ್ಲಿ ಕ್ರಿಯಾತ್ಮಕ ಆಸಕ್ತಿಯನ್ನು ಹೊಂದಿದ್ದರು. 1923ರಲ್ಲಿ ಭದ್ರಾವತಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯ ಆಡಳಿತ ಮಂಡಲಿ ಅಧ್ಯಕ್ಷರಾಗಿ ಆಹ್ವಾನಿತರಾದರು. ಆ ಅಧಿಕಾರದಲ್ಲಿ 6 ವರ್ಷಗಳ ಕಾಲ ಇದ್ದರು. ಅದಕ್ಕಾಗಿ ಅವರಿಗೆ ಕೊಡಲಾಗಿದ್ದ ಗೌರವ ಸಂಭಾವನೆಯ ಮೊಬಲಗು 2 ಲಕ್ಷ ರೂಪಾಯಿಗಳನ್ನು ಅವರು ತೆಗೆದುಕೊಳ್ಳದೆ, ಜಯಚಾಮರಾಜೇಂದ್ರ ಔದ್ಯೋಗಿಕ ಸಂಸ್ಥೆಯನ್ನು ಸ್ಥಾಪಿಸಲು ಕೊಟ್ಟು, ಅಲ್ಲಿ ಬೋಧನ ವಿಷಯಗಳನ್ನೂ ಅವರೇ ರಚಿಸಿಕೊಟ್ಟರು. ಈ ಸಂಸ್ಥೆ ದೇಶದ ವಿವಿಧ ಸ್ಥಳಗಳಲ್ಲಿ ಸ್ಥಾಪಿಸಲಾಗಿರುವ 'ಪಾಲಿಟೆಕ್ನಿಕ್'ಗಳಿಗೆ ಮಾದರಿಯಾಯಿತು. ಅವರು ಕಾವೇರಿ ನಾಲೆಯ ಸಮಿತಿ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಆ ಸಮಿತಿ ಕೃಷ್ಣರಾಜಸಾಗರದಿಂದ ನೀರನ್ನು ಎತ್ತರವಾದ ನಾಲೆಯ ಮೂಲಕ ಉಪಯೋಗಿಸಿಕೊಳ್ಳಲು ಅನುಕೂಲವಾಗುವಂತೆ ಯೋಜನೆಯನ್ನು ರಚಿಸಿತು. ಅವರ ನಿಪುಣ ಮಾರ್ಗದರ್ಶನದಲ್ಲೇ ಬೆಂಗಳೂರಿಗೆ ತಿಪ್ಪಗೊಂಡನಹಳ್ಳಿಯಿಂದ ನೀರು ಸರಬರಾಜು ಮಾಡುವ ಹೊಸ ಯೋಜನೆಯೂ ಕಾರ್ಯಗತವಾಯಿತು. 1940ರಲ್ಲಿ ಬೆಂಗಳೂರಿನಲ್ಲಿ ಸ್ಥಾಪಿತವಾದ ಹಿಂದೂಸ್ಥಾನ ವಿಮಾನ ಕಾರ್ಖಾನೆಗೂ ಅವರೇ ಕಾರಣಕರ್ತರು. 1949ರಲ್ಲಿ ಅವರಿಗೆ 90 ವರ್ಷ ವಯಸ್ಸಾಗಿದ್ದರೂ ಗ್ರಾಮಾಂತರ ಕೈಗಾರಿಕೆಯ ಯೋಜನೆಯನ್ನು ಆರಂಭಿಸಿ, ಅದಕ್ಕೆ ಒಂದು ಹಣಕಾಸಿನ ಸಂಸ್ಥೆ ದ್ರವ್ಯ ಒದಗಿಸಲು ಪ್ರಯತ್ನಿಸಿದರು.

ವಿಶ್ವೇಶ್ವರಯ್ಯನವರ ತರುವಾಯ, 1913 ರಿಂದಲೂ ಸಲಹಾ ಸಮಿತಿ ಸದಸ್ಯರಾಗಿದ್ದ ಮತ್ತು ದೊವಗೆರ್ (Dowager) ಮಹಾರಾಣಿಯ ಸೋದರರೂ ಆಗಿದ್ದ ಸರ್ದಾರ್ ಎಂ. ಕಾಂತರಾಜ ಅರಸ್

ಅವರು, 1919ರಲ್ಲಿ ದಿವಾನರಾದರು. ಅವರು ಯುದ್ಧದ ಪರಿಣಾಮವಾಗಿ ಉತ್ಪನ್ನವಾಗಿದ್ದ ಕ್ಲಿಷ್ಟವಾದ ಆರ್ಥಿಕ ಪರಿಸ್ಥಿತಿಯೊಂದಿಗೆ ಹೋರಾಡಬೇಕಾಯಿತು. ಅವರ ಆಡಳಿತ ಕಾಲದಲ್ಲಿಯೇ ಭದ್ರಾವತಿ ಕಬ್ಬಿಣದ ಕಾರ್ಖಾನೆ ಕಾರ್ಯಾರಂಭ ಮಾಡಿತು. ಸರಕಾರಿ ನೌಕರಿಯಲ್ಲಿ ಹಿಂದುಳಿದ ಪಂಗಡದವರಿಗೆ ಸಾಕಷ್ಟು ಪ್ರಾತಿನಿಧ್ಯ ನೀಡಬೇಕೆಂಬ ಆಜ್ಞೆಯೇ ಅವರ ಕಾಲದ ಮುಖ್ಯ ಕಾರ್ಯ. ಮಾಧ್ಯಮಿಕ ಶಾಲೆಗಳಲ್ಲಿ ಶುಲ್ಕವನ್ನು ರದ್ದು ಮಾಡಿದುದು ಇನ್ನೊಂದು ಮುಖ್ಯ ಕಾರ್ಯ. 1921ರಲ್ಲಿ ಚಿಕ್ಕಜಾಜೂರಿನಿಂದ ಚಿತ್ರದುರ್ಗದ ವರೆಗೆ 21 ಮೈಲಿಗಳ ರೈಲುಮಾರ್ಗವೂ ಆರಂಭವಾಯಿತು. ಆರೋಗ್ಯ ಕೆಡುತ್ತ ಬಂದುದರಿಂದ ಕಾಂತರಾಜ ಅರಸರವರು 1922ರಲ್ಲಿ ಅಧಿಕಾರದಿಂದ ವಿಶ್ರಾಂತಿ ಹೊಂದಿದರು.

ವಿಶ್ರಾಂತ ಐ.ಸಿ.ಎಸ್. ಅಧಿಕಾರಿಯಾಗಿದ್ದ ಮತ್ತು ಸಲಹಾಸಮಿತಿಯ ಸದಸ್ಯರಾಗಿದ್ದ ಸರ್ ಆಲ್ಬಿಯನ್ ಬ್ಯಾನರ್ಜಿಯವರು 1822ರಲ್ಲಿ ದಿವಾನರಾಗಿ ನೇಮಕವಾದರು. ಅವರ ಆಡಳಿತ ಕಾಲದಲ್ಲಿ 1923ರಲ್ಲಿ, ಸ್ಥಳೀಯ ಸ್ವಯಂ–ಆಡಳಿತ ಸಂಸ್ಥೆಗಳ ಸಮ್ಮೇಳನವೊಂದು ನಡೆಯಿತು. ಆ ಸಮ್ಮೇಳನ ಮಾಡಿದ ಸಲಹೆಗಳಲ್ಲಿ ತಾಲೂಕು ಮಂಡಲಿಗಳನ್ನು ರದ್ದುಪಡಿಸುವುದು, ಗ್ರಾಮ ಪಂಚಾಯತಿಗಳನ್ನು ಶಾಸನಬದ್ಧ ಸಂಸ್ಥೆಗಳನ್ನಾಗಿ ಮಾರ್ಪಡಿಸಿ ಸ್ಥಳೀಯ ತೆರಿಗೆಗಳನ್ನು ವಿಧಿಸುವುದು, ನೈರ್ಮಲ್ಯಕ್ಕೆ ಸಂಬಂಧಿಸಿದಂತೆ ಕರ್ತವ್ಯಗಳನ್ನು ವಿಧಿಸುವುದಕ್ಕೆ ಸ್ಪಷ್ಟವಾದ ಅಧಿಕಾರ ನೀಡುವುದು, ನಗರ (City) ಮತ್ತು ಟೌನ್ ಪುರಸಭೆಗಳಿಗೆ ಅಧ್ಯಕ್ಷರನ್ನು ಚುನಾಯಿಸುವ ಅಧಿಕಾರ ನೀಡುವುದು, ಸ್ತ್ರೀಯರಿಗೆ ಮತದಾನದ ಹಕ್ಕನ್ನು ವಿಸ್ತರಿಸುವುದು––ಇತ್ಯಾದಿ ಆಗಿದ್ದವು. ಅಪೆಕ್ಸ್ ಬ್ಯಾಂಕ್ ಸ್ಥಾಪಿತವಾಯಿತು. 1924ರಲ್ಲಿ ಹಿಂದೆ ಎಂದೂ ಬರದಿದ್ದಂತಹ ಪ್ರವಾಹದ ಹಾವಳಿಯಿಂದ ಅಪಾರ ನಷ್ಟವಾಯಿತು. ಇದಕ್ಕೆ ಸಂಬಂಧಿಸಿದಂತೆ ಪರಿಹಾರ ಕಾರ್ಯಗಳನ್ನು ಕೈಗೊಳ್ಳಲಾಯಿತು. ಆದರೆ ಅವರ ಆಡಳಿತ ಕಾಲದಲ್ಲಿ ನಡೆದ ಎಲ್ಲಕ್ಕಿಂತ ಮುಖ್ಯವಾದ ಕಾರ್ಯ––ರಾಜ್ಯದ ಭವಿಷ್ಯ ರಾಜಕೀಯ ಸುಧಾರಣೆಗಳನ್ನು ಕುರಿತು ಪರಿಶೀಲಿಸಿ, ಸಲಹೆ ಮಾಡಲು ಮಹಾ ವಿದ್ವಾಂಸರೂ ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳೂ ಆಗಿದ್ದ ಸರ್ ಬ್ರಜೇಂದ್ರನಾಥ ಸೀಲ್ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ರಚನೆಯಾದುದು.

ಸೀಲ್ ಸಮಿತಿ, 1923ರ ಮಾರ್ಚಿ 23ರಂದು, ತನ್ನ ವರದಿಯನ್ನು ಸರಕಾರಕ್ಕೆ ಒಪ್ಪಿಸಿತು. ಅದರ ಬಗೆಗೆ ಸಾರ್ವಜನಿಕ ಅಭಿಪ್ರಾಯವನ್ನು ತಿಳಿದುಕೊಂಡು, 1923ರ ಅಕ್ಟೋಬರ್ 17ರಂದು ಒಂದು ರಾಜಘೋಷಣೆ ಪ್ರಕಟವಾಯಿತು. ಪ್ರಜಾಪ್ರತಿನಿಧಿ ಸಭೆಯು ಪ್ರಥಮ ಬಾರಿಗೆ ಶಾಸನಬದ್ಧ ಸಂಸ್ಥೆಯಾಯಿತು. ಎಲ್ಲ ರೀತಿಯ ಹೊಸ ತೆರಿಗೆಗಳನ್ನು ವಿಧಿಸುವ ಸಲಹೆಗಳನ್ನು ಅದರೊಡನೆ ಸಮಾಲೋಚಿಸಬೇಕಾಯಿತು. ನ್ಯಾಯವಿಧಾಯಕ ಸಭೆಯು ಎಲ್ಲ ಮಸೂದೆಗಳ ಸಾಮಾನ್ಯ ನೀತಿಯನ್ನು ಚರ್ಚಿಸುವ ಅಧಿಕಾರ ಪಡೆಯಿತು. ಪ್ರಜಾಪ್ರತಿನಿಧಿ ಸಭೆಯು ಸಾರ್ವಜನಿಕ ಆಡಳಿತದ ಎಲ್ಲ ವಿಷಯಗಳ ಬಗೆಗೂ ನಿರ್ಣಯಮಾಡುವ ಮತ್ತು ಆಯವ್ಯಯ ನೀತಿಧೋರಣೆಗಳನ್ನು ಕುರಿತು ಚರ್ಚಿಸುವ ಅಧಿಕಾರವನ್ನು ಪಡೆಯಿತು. ಅದರ ಸದಸ್ಯರ ಸಂಖ್ಯೆ 250–275 ಎಂದು ನಿರ್ಧಾರವಾಯಿತು. ಮತದಾನದ ಅಧಿಕಾರವೂ ಬಹಳವಾಗಿ ವಿಸ್ತೃತವಾಯಿತು. 25 ರೂ. ಭೂಕಂದಾಯ ನೀಡುವವರಿಗೂ ಪೌರ ಸಭೆಗಳಿಗೆ 5 ರೂ. ತೆರಿಗೆ ಕೊಡುವವರಿಗೂ ಸ್ತ್ರೀಯರಿಗೂ ಅದು ದೊರಕಿತು. ಸರಕಾರಕ್ಕೆ ಸಲಹೆ ನೀಡಲು ಪ್ರಜಾಪ್ರತಿನಿಧಿಸಭೆಯ ಮತ್ತು ನ್ಯಾಯವಿಧಾಯಕ ಸಭೆಯ ಸದಸ್ಯರನ್ನುಳ್ಳ ಸ್ಥಾಯೀ ಸಮಿತಿಗಳು ರೂಪುಗೊಂಡವು. ಉಭಯ ಸಭೆಗಳಲ್ಲೂ ಕಾರ್ಮಿಕ ವರ್ಗಕ್ಕೆ ಒಂದೊಂದು ಸ್ಥಾನವೂ ಶಿಕ್ಷಣ, ಯೋಜನೆ, ಗಣಿಗಳು, ವಾಣಿಜ್ಯ ಮತ್ತು ವ್ಯಾಪಾರಗಳಿಗೆ ವಿಶೇಷ ಪ್ರಾತಿನಿಧ್ಯವನ್ನೂ ನೀಡಲಾಯಿತು. ಅಲ್ಪಸಂಖ್ಯಾತ ವರ್ಗಗಳಾದ ಮುಸ್ಲಿಮರು, ಭಾರತೀಯ ಕ್ರೈಸ್ತರು ಮತ್ತು ಹಿಂದುಳಿದ ವರ್ಗಗಳಿಗೆ 35 ಸ್ಥಾನಗಳು ಮೀಸಲಾದವು. ಕಡೆಯ ಪಕ್ಷ 150 ಮಂದಿ ಸದಸ್ಯರು ಗ್ರಾಮಾಂತರ ಪ್ರದೇಶಗಳಿಂದ ಚುನಾಯಿತರಾಗಬೇಕಾಯಿತು.

ನ್ಯಾಯ ವಿಧಾಯಕ ಸಭೆಯ ಸದಸ್ಯತ್ವವು (ಕಾರ್ಯನಿಮಿತ್ತದ ಸದಸ್ಯರನ್ನುಳಿದು) 50ಕ್ಕೆ ಏರಿಸಲಾಯಿತು. ಅದಕ್ಕೆ ಶೇಕಡ 60ಕ್ಕೆ ಕಡಮೆಯಿಲ್ಲದಂತೆ ಖಾಸಗಿಯವರೂ $\frac{1}{3}$ ಭಾಗಕ್ಕೆ ಮೀರದಂತೆ ನಾಮಕರಣಹೊಂದಿದ ಸದಸ್ಯರೂ ಇರಬೇಕಾಯಿತು. ಪ್ರಜಾಪ್ರತಿನಿಧಿಸಭೆಯಿಂದ 8 ಮಂದಿಯೂ ಜಿಲ್ಲೆಗಳಿಂದ 8 ಮಂದಿಯೂ ಬೆಂಗಳೂರು ಮತ್ತು ಮೈಸೂರು ಪುರಸಭಾಪ್ರದೇಶಗಳಿಂದ ತಲಾ ಒಂದು ಮತ್ತು ವಿಶೇಷ ಉದ್ದೇಶಗಳನ್ನು ಪ್ರತಿನಿಧಿಸಲು 4 ಸ್ಥಾನಗಳು ಎಂದೂ ನಿಷ್ಕರ್ಷೆಯಾಯಿತು. ಕಡೆಯ ಪಕ್ಷ 2 ಮುಸ್ಲಿಮ್ ಸದಸ್ಯರೂ ಒಬ್ಬ ಕ್ರೈಸ್ತನೂ ಒಬ್ಬ ನಿಮ್ನವರ್ಗದ ಪ್ರತಿನಿಧಿಯೂ ಇರುವಂತಾಯಿತು.

ಈ ರೀತಿ ಸುಧಾರಿತವಾದ ಪ್ರಜಾಪ್ರತಿನಿಧಿಸಭೆ ಮತ್ತು ನ್ಯಾಯವಿಧಾಯಕ ಸಭೆಗಳ ಸಂಯುಕ್ತ ಅಧಿವೇಶನವನ್ನು 1424ರ ಮಾರ್ಚಿ 17ರಂದು ಮಹಾರಾಜರು ವಿಧ್ಯುಕ್ತವಾಗಿ ಉದ್ಘಾಟನೆ ಮಾಡಿದರು. ಹೊಸ ಚುನಾಯಿತ ಪ್ರಜಾಪ್ರತಿನಿಧಿ ಸಭೆಯಲ್ಲಿ ಧುರೀಣರೆನಿಸಿದ ಎಂ. ವೆಂಕಟಕೃಷ್ಣಯ್ಯ, ಸಿ. ಶ್ರೀನಿವಾಸ ರಾವ್, ಕರಣಿಕ ಕೃಷ್ಣಮೂರ್ತಿ ಮತ್ತು ಬಿ. ನರಸಿಂಗರಾವ್ ಇವರುಗಳು ಇವರಿಗೆ ನೆರವಾಗಿ ಹೊಸಕೊಪ್ಪ ಕೃಷ್ಣರಾವ್, ಜಿ. ಪರಮಶಿವಯ್ಯ ಮತ್ತು ಡಿ. ಎಸ್. ಮಲ್ಲಪ್ಪ ಮೊದಲಾದ ಯುವಕರೂ ಇದ್ದರು. ನ್ಯಾಯವಿಧಾಯಕ ಸಭೆಯಲ್ಲಿ ಜನಪ್ರಿಯ ವೃತ್ತಪತ್ರಿಕಾ ಲೇಖಕರಾದ ಸರ್ ಕೆ. ಪಿ, ಪುಟ್ಟಣ್ಣಚೆಟ್ಟಿ, ಬಿ. ಕೆ. ಗರುಡಾಚಾರ್, ಡಿ. ವೆಂಕಟರಾಮಯ್ಯ, ರಾವ್ ಬಹದೂರ್ ಎನ್. ಎಸ್. ನಂಜುಂಡಯ್ಯ ಮತ್ತು ಎಸ್. ವೆಂಕಟೇಶಯ್ಯ ಇವರುಗಳು ಇದ್ದರು. ಈ ಹೊಸ ಸುಧಾರಣೆಗಳು ರಾಜ್ಯದ ಜಾಗೃತ ಸಾರ್ವಜನಿಕಾಭಿಪ್ರಾಯವನ್ನು ತೃಪ್ತಿಗೊಳಿಸಲು ವಿಫಲವಾದವು. ಬ್ರಿಟಿಷ್ ಭಾರತದ ರಾಜಕೀಯ ಆಂದೋಲನ ಈ ಭಾವನೆಗಳಿಗೆ ಪ್ರಚೋದಕವಾಗಿದ್ದಿತು. ಜವಾಬುದಾರಿ ಸರಕಾರದ ದಿಶೆಯಲ್ಲಿ ಹೆಚ್ಚು ಉದಾರವಾದ ಸುಧಾರಣೆಗಳ ಬೇಡಿಕೆ ಮುಂದುವರಿಯಿತು.

1626ರಲ್ಲಿ ಸರ್ ಆಲ್ಬಿಯನ್ ಬ್ಯಾನರ್ಜಿಯವರು ವಿಶ್ರಾಂತರಾದ ಮೇಲೆ. ಸರ್ ಮಿರ್ಜಾ ಇಸ್ಮಾಯಿಲ್ ದಿವಾನರಾದರು ಅವರು ಮಹಾರಾಜರಿಗೆ ಪ್ರಥಮ ಭಾರತೀಯ ಆಪ್ತ ಕಾರ್ಯದರ್ಶಿಯಾಗಿದ್ದರು ; ಮಹಾರಾಜರ ಪೂರ್ಣವಿಶ್ವಾಸಕ್ಕೆ ಪಾತ್ರರಾಗಿದ್ದರು. 15 ವರ್ಷಗಳು ಅವರು ದಿವಾನರಾಗಿದ್ದ ಕಾಲ ಮಹತ್ವದ ಘಟನೆಗಳಿಂದ ಕೂಡಿದ್ದಿತು. ಅವರು ಸರ್ ಎಂ. ವಿಶ್ವೇಶ್ವರಯ್ಯನವರು ಹಾಕಿದ್ದ ತಳಹದಿಯ ಮೇಲೆ ರಾಜ್ಯದ ಸರ್ವತೋಮುಖ ಬೆಳವಣಿಗೆಯನ್ನು ಸಾಧಿಸಲು ಯತ್ನಿಸಿದರು. ಖಾಸಗಿ ಮತ್ತು ಸರಕಾರಿ ಎರಡು ಕ್ಷೇತ್ರಗಳಲ್ಲಿಯೂ ಕೈಗಾರಿಕಾಭಿವೃದ್ಧಿಗೆ ಅವರು ಬಹುವಾಗಿ ಶ್ರಮಿಸಿದರು. ಭದ್ರಾವತಿಯಲ್ಲಿ ಉಕ್ಕಿನ ಕಾರ್ಖಾನೆ, ಕಾಗದ ಕಾರ್ಖಾನೆ ಮತ್ತು ಸಿಮೆಂಟ್ ಕಾರ್ಖಾನೆಗಳನ್ನೂ ಬೆಂಗಳೂರಿನಲ್ಲಿ ಪಿಂಗಾಣಿ ಮತ್ತು ಗಾಜಿನ ಕಾರ್ಖಾನೆಗಳನ್ನೂ ಮಂಡ್ಯದಲ್ಲಿ ಸಕ್ಕರೆ ಕಾರ್ಖಾನೆಯನ್ನೂ ಬೆಳಗೊಳದಲ್ಲಿ ರಾಸಾಯನಿಕ ಮತ್ತು ಗೊಬ್ಬರದ ಕಾರ್ಖಾನೆಗಳನ್ನೂ ಶಿವಮೊಗ್ಗದಲ್ಲಿ ಬೆಂಕಿಪೆಟ್ಟಿಗೆ ಕಾರ್ಖಾನೆಯನ್ನೂ ಬೆಂಗಳೂರಿನಲ್ಲಿ ಹಿಂದೂಸ್ಥಾನ ವಿಮಾನ ಕಾರ್ಖಾನೆಯನ್ನೂ ಸ್ಥಾಪಿಸಿದರು. ಗ್ರಾಮ ಕೈಗಾರಿಕೆಗಳನ್ನೂ ಉತ್ತೇಜಿಸಪಡಿಸಲು ಅವರು ಶ್ರಮಿಸಿದರು. ಬದನವಾಳದಲ್ಲಿ ಒಂದು ಖಾದೀ ಉತ್ಪನ್ನ ಕೇಂದ್ರವನ್ನು ಸ್ಥಾಪಿಸಲು ಸಹಾಯ ಮಾಡಿದರು. ಸರಕಾರವೊಂದು ಇಂಥದನ್ನು ನಡೆಸಿದುದು ಇದೇ ಪ್ರಥಮವಾಗಿತ್ತು. ರೇಷ್ಮೆ ಕೈಗಾರಿಕೆಗೂ ಅವರು ಗಮನವಿತ್ತರು. ಮೈಸೂರಿನ ಉತ್ಪನ್ನಗಳಿಗೆ ವಿದೇಶಗಳಲ್ಲಿ ಮಾರುಕಟ್ಟೆ ಪಡೆಯುವ ಸಲುವಾಗಿ, ಲಂಡನ್ನಿನಲ್ಲಿ ಒಬ್ಬ ಟ್ರೇಡ್ ಕಮಿಷನರನ್ನು ನೇಮಿಸಿದರು. ವ್ಯವಸಾಯ ಉತ್ಪನ್ನವನ್ನು ಹೆಚ್ಚಿಸಲು ಕಾರ್ಯಕ್ರಮ ಕೈಗೊಂಡುದಲ್ಲದೆ, ಒಣ ಪ್ರದೇಶಗಳಾಗಿದ್ದ ಮಂಡ್ಯ, ಮಳವಳ್ಳಿ ಮತ್ತು ಟೀ. ನರಸೀಪುರ ತಾಲೂಕುಗಳಲ್ಲಿ ನೀರಾವರಿ ಸೌಲಭ್ಯವನ್ನು ಒದಗಿಸಲು 9183 ಅಡಿ ಉದ್ದದ ಸುರಂಗವುಳ್ಳ ಹೈಲೆವೆಲ್ ಕಾಲುವೆ ನಿರ್ಮಾಣವಾಯಿತು. ಅವರ ಆಡಳಿತ ಕಾಲದಲ್ಲಿ 1,20,000 ಎಕರೆ ಭೂಮಿ ನೀರಾವರಿ ವ್ಯವಸಾಯಕ್ಕೆ ಬಂದಿತು.

ಮಹಾರಾಜರಿಗೆ ಕಾರ್ಯದರ್ಶಿಯಾಗಿದ್ದಾಗ ಮೈಸೂರಿನಲ್ಲೇ ವಾಸವಾಗಿದ್ದುದರಿಂದ ಮಿರ್ಜಾ ರವರು ಮೈಸೂರು ನಗರವನ್ನು ಉಪವನಗಳು, ಸಾಲುಮರಗಳಿಂದ ಕೂಡಿದ ವಿಶಾಲ ಬೀದಿಗಳು, ವಿಹಾರ ಪಥಗಳು, ದೀಪರಂಜಿತ ಚೌಕಗಳು–ಇವುಗಳಿಂದ ಕಂಗೊಳಿಸುವಂತೆ ಉಪವನಗಳ ನಗರವನ್ನಾಗಿ ಮಾಡಿದರು. ನಗರ ನಿರ್ಮಾಣ, ಸೌಂದರ್ಯಾಭಿರುಚಿ, ಇವುಗಳು ಅವರಲ್ಲಿ ಇದ್ದುದರಿಂದ ಅವರ ಆಡಳಿತ ಕಾಲದಲ್ಲಿ ಬೆಂಗಳೂರು ನಗರವೂ ಇತರ ಅನೇಕ ಪಟ್ಟಣಗಳೂ ಗ್ರಾಮಗಳೂ ಉತ್ತಮವಾದ ರಸ್ತೆಗಳು, ದೀಪರಂಜಿತ ಚೌಕಗಳು, ನೈರ್ಮಲ್ಯ ಸೌಲಭ್ಯಗಳು–ಇತ್ಯಾದಿಗಳನ್ನೆಲ್ಲ ಹೊಂದಿದವು. ಅವರು ಪದೇ ಪದೇ ರಾಜ್ಯದಲ್ಲಿ ಪ್ರವಾಸ ಕೈಗೊಂಡು ಜನ ಮುಖಂಡರ ವೈಯಕ್ತಿಕ ಸಂಬಂಧವನ್ನು ಗಳಿಸಿಕೊಂಡುದಲ್ಲದೆ, ಆಸ್ಪತ್ರೆಗಳು, ಪ್ರಸೂತಿಕಾಲಯಗಳು, ಶಾಲಾಕಟ್ಟಡಗಳು ಇವುಗಳಿಗೆಲ್ಲ ಉದಾರದಾನ ದೊರೆಯುವಂತೆ ಮಾಡಿದರು. ರಾಜ್ಯದಲ್ಲಿ ಪ್ರವಾಸಿಗರಿಗೆ ಅತ್ಯಂತ ಆಕರ್ಷಣೆಯ ಕೇಂದ್ರವಾದ ಜಗತ್ಪ್ರಸಿದ್ಧ ಬೃಂದಾವನ ಉಪವನವನ್ನು ಕೃಷ್ಣರಾಜಸಾಗರ ಜಲಾಶಯದ ಹಿಂಬದಿಯಲ್ಲಿ ನಿರ್ಮಿಸಲು ಅವರೇ ಕಾರಣಕರ್ತರು. ಪ್ರಾಚೀನ ಕಾಲದ ಪ್ರಭುಶಕ್ತಿ, ಮತ್ತು ಉದಾರಭಾವನೆಗಳಿಂದ ಕೂಡಿದ ಅಮಾತ್ಯರ ಮನೋಧರ್ಮ ಅವರಲ್ಲಿತ್ತು. ಗಾಂಧಿಜೀಯವರ ಬಗೆಗೆ ಅವರಿಗೆ ಅಗಾಧ ಗೌರವ ಮತ್ತು ವಿಶ್ವಾಸಗಳಿದ್ದವು. 1927ರಲ್ಲಿ ಅವರನ್ನು ಆಹ್ವಾನಿಸಿ, ಕೆಲವು ಕಾಲ ಆರೋಗ್ಯ ಸುಧಾರಣೆಯ ಸಲುವಾಗಿ ನಂದಿ ಬೆಟ್ಟದಲ್ಲಿ ತಂಗುವಂತೆ ಮಾಡಿದ್ದರು.

ವೈಸರಾಯ್ ಲಾರ್ಡ್ ಇರ್ವಿನ್ 1927ರಲ್ಲಿ ರಾಜ್ಯಕ್ಕೆ ಭೇಟಿಕೊಟ್ಟು, 1896ರಿಂದ ಸಲ್ಲಿಸುತ್ತಾ ಬಂದಿದ್ದ 35 ಲಕ್ಷ ರೂ. ಪೊಗದಿಯಲ್ಲಿ $10\frac{1}{2}$ ಲಕ್ಷವನ್ನು ಕಡಮೆಮಾಡಿದನು. ಮುಂದಿನ ವರ್ಷ ಕೃಷ್ಣ ರಾಜ ಒಡೆಯರ ರಜತ ಮಹೋತ್ಸವ ಸಮಾರಂಭವು ರಾಜ್ಯಾದ್ಯಂತ ಅತ್ಯಂತ ಉತ್ಸಾಹದಿಂದ ನಡೆದು, ಅದರ ಜ್ಞಾಪಕಾರ್ಥವಾಗಿ ಅನೇಕ ಕಡೆ ಆಸ್ಪತ್ರೆಗಳು, ಮಂದಿರಗಳು, ವಾಚನಾಲಯಗಳು ನಿರ್ಮಾಣ ವಾದವು.

ಸರ್ ಮಿರ್ಜಾ ಇಸ್ಮಾಯಿಲ್ ಅವರು ಲಂಡನ್ನಿನಲ್ಲಿ (1930–32) ರಲ್ಲಿ ನಡೆದ ದುಂಡುಮೇಜಿನ ಪರಿಷತ್ತಿಗೆ ದಕ್ಷಿಣ ಭಾರತದ ದೇಶೀ ರಾಜ್ಯಗಳ ಪ್ರತಿನಿಧಿಯಾಗಿ ನಾಮಕರಣ ಹೊಂದಿದರು. ಭಾರತದ ಭಾವೀ ರಾಜ್ಯಘಟನೆಯಲ್ಲಿ ದೇಶೀರಾಜ್ಯಗಳ ಮತ್ತು ಬ್ರಿಟಿಷ್ ಭಾರತ ಪ್ರಾಂತಗಳ ಸಂಯುಕ್ತ ವ್ಯವಸ್ಥೆಯ ಅಭಿಪ್ರಾಯವನ್ನು ಸ್ಪಷ್ಟೀಕರಿಸಿದರು.

ದುರದೃಷ್ಟವಶಾತ್ ದಿವಾನ್ ಸರ್ ಮಿರ್ಜಾರವರೂ ಅವರ ಸರಕಾರವೂ ಆಡಳಿತದ ಆರಂಭದಿಂದಲೇ ಜನಗಳ ಅಸಂತುಷ್ಟಿಯನ್ನೂ ಟೀಕೆಗಳನ್ನೂ ಎದುರಿಸಬೇಕಾಯಿತು. ಬ್ರಿಟಿಷ್ ಭಾರತದಲ್ಲಿ ನಡೆದ ಸೈಮನ್ ನಿಯೋಗ ಬಹಿಷ್ಕಾರ (1927), ಲಾಹೋರ್ ಕಾಂಗ್ರೆಸ್ಸಿನ ಸಂಪೂರ್ಣ ಸ್ವಾತಂತ್ರ್ಯನಿರ್ಧಾರ (1929), ಉಪ್ಪಿನ ಸತ್ಯಾಗ್ರಹ (1930)—ಇತ್ಯಾದಿ ಘಟನೆಗಳಿಂದಲೂ 1935ರ ಭಾರತ ಸರಕಾರದ ನಿಬಂಧನೆಯ ಪ್ರಕಾರ ಪ್ರಾಂತೀಯ ಸ್ವಾಯತ್ತತೆ ದೊರೆತುದರಿಂದಲೂ ಭಾರತದ ದೇಶೀರಾಜ್ಯಗಳ ಸಂಸ್ಥೆಯ ಸ್ಥಾಪನೆ ಇತ್ಯಾದಿಗಳಿಂದಲೂ ಮೈಸೂರಿನಲ್ಲಿ ಸಾರ್ವಜನಿಕ ಅಭಿಪ್ರಾಯ ಹೆಚ್ಚು ಸ್ಫುಟವಾಗಿ ಉಚ್ಚಾರವಾಗು ವಂತಾಯಿತು. ಬ್ರಿಟಿಷ್ ಭಾರತದಲ್ಲಿ ವೇಗಗತಿಯಿಂದ ಸಾಗುತ್ತಿದ್ದ ಸಂಭವಗಳು ಮೈಸೂರಿನಲ್ಲಿಯೂ ಪ್ರತಿಕ್ರಿಯೆ ಮಾಡಿಸದೆ ಇರಲಿಲ್ಲ. ಇಲ್ಲಿಯ ವರೆಗೆ ಪ್ರಜಾಪ್ರತಿನಿಧಿ ಸಭೆ ಮತ್ತು ನ್ಯಾಯವಿಧಾಯಕ ಸಭೆಗಳಲ್ಲಿ ನಡೆಯುತ್ತಿದ್ದ ಚಳವಳಿಗಳೆಲ್ಲ ಹಿಂದುಳಿದ ಜನಾಂಗಗಳಿಗೆ ಸರಕಾರಿ ಕೆಲಸ ನೀಡುವ ಬಗೆಗೆ ನ್ಯಾಯವನ್ನು ದೊರಕಿಸಿಕೊಳ್ಳಬೇಕೆಂಬುದೇ ಆಗಿದ್ದಿತು. ಆದರೆ ಮೈಸೂರಿನ ವೃತ್ತಪತ್ರಿಕಾ ಲೇಖಕರು ಬೇಗನೆ ರಾಜ್ಯಘಟನೆಯ ದೊಡ್ಡ ಸಮಸ್ಯೆಗಳ ಕಡೆಗೆ ತಮ್ಮ ಗಮನವನ್ನು ತಿರುಗಿಸಿದರು. 1928ರಲ್ಲಿ, ಬೆಂಗಳೂರು ನಗರದ ಮಧ್ಯಭಾಗದಲ್ಲಿರುವ ಮಾಧ್ಯಮಿಕ ಶಾಲೆಯ ಆವರಣವೊಂದರಲ್ಲಿದ್ದ ಗಣಪತಿ

ವಿಗ್ರಹವನ್ನು ಕೆಲವರು ಸ್ಥಳೀಯ ಮುಸ್ಲಿಮರ ಕೋರಿಕೆಯ ಪ್ರಕಾರ ಸರಕಾರಿ ಅಧಿಕಾರಿಗಳು ತೆಗೆದು ಹಾಕಿದರೆಂಬ ಆಪಾದನೆಯ ಕಾರಣದ ಮೇಲೆ, 'ಗಣಪತಿ ಗಲಭೆ'ಎಂಬ ದುರಂತ ಘಟನೆ ನಡೆಯಿತು. ಇದು ದೊಡ್ಡ ಚಳವಳಿಯ ಕಿಚ್ಚನ್ನು ಹಬ್ಬಿಸಿತು. ಶಾಂತವಾಗಿದ್ದ ನಗರದ ಸ್ಥಿತಿ ಅಲ್ಲೋಲ ಕಲ್ಲೋಲವಾಯಿತು. ಇದುವರೆಗೆ ಬ್ರಾಹ್ಮಣೇತರ ಮುಖಂಡರು, ಸಾಮಾನ್ಯವಾಗಿ ಸರಕಾರದ ವಿಷಯದಲ್ಲಿ ವಿಧೇಯತೆಯಿಂದಲೂ, ಸೌಮ್ಯದಿಂದಲೂ ನಡೆದುಕೊಳ್ಳುತ್ತಿದ್ದರು. ಆದರೆ 1927ರ ಚುನಾವಣೆಗಳಲ್ಲಿ ಪ್ರಜಾಪ್ರತಿನಿಧಿಸಭೆಗೆ ಆರಿಸಿ ಬಂದಿದ್ದ ಯುವಕ ಮುಖಂಡರಾದ ಟಿ. ಸಿದ್ಧಲಿಂಗಯ್ಯ, ಎಚ್.ಸಿ. ದಾಸಪ್ಪ, ಕೆ.ಸಿ. ರೆಡ್ಡಿ ಮತ್ತು ಡಿ.ಎಚ್. ಚಂದ್ರಶೇಖರಯ್ಯ ಮೊದಲಾದವರು ಪ್ರಭಾವಯುತ ರೀತಿಯಲ್ಲಿ ಸರಕಾರವನ್ನು ಟೀಕೆಗೆ ಗುರಿಮಾಡಿದರು. ಗಣಪತಿ ಗಲಭೆಗಳ ಸಂದರ್ಭದಲ್ಲಿ, ಹಿಂದೆ ಎಂದೂ ಆಗದಿದ್ದ ರೀತಿಯಲ್ಲಿ, ರಾಜದ್ರೋಹ ಆಪಾದನೆಯ ಮೇಲೆ ಕೆಲವರ ಬಂಧನಗಳೂ ಆದವು. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸು 1929 ರಲ್ಲಿ ಪೂರ್ಣ ಸ್ವಾತಂತ್ರ್ಯದ ಘೋಷಣೆಮಾಡಿ, ಧ್ವಜಾರೋಹಣ ಸಮಾರಂಭಗಳನ್ನು ನಡೆಸಿದಂತೆ, ರಾಜ್ಯದಲ್ಲಿಯೂ ನಡೆದವು. ಆದರೆ ಸರಕಾರ ಇದಕ್ಕೆ ಅನುಮತಿ ನೀಡುತ್ತಿರಲಿಲ್ಲ. ಇದೆಲ್ಲದರ ಪರಿಣಾಮವಾಗಿ, ಸರಕಾರಕ್ಕೂ ಪ್ರಜೆಗಳಿಗೂ ನಡುವೆ ಉದ್ವೇಗದ ಬಿಕ್ಕಟ್ಟು ಪ್ರಾರಂಭವಾಯಿತು.

1928 ರಲ್ಲಿ ಸರಕಾರ, ಸಲಹಾಸಮಿತಿಯ ವಿಶ್ರಾಂತ ಸದಸ್ಯರಾಗಿದ್ದ ಕೆ.ಆರ್. ಶ್ರೀನಿವಾಸ ಅಯ್ಯಂಗಾರ್ಯರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ನೇಮಕಮಾಡಿ, ರಾಜಕೀಯ ಸುಧಾರಣೆಗಳನ್ನು ಸಲಹೆ ಮಾಡಲು ಆಜ್ಞಾಪಿಸಿತು. ಆ ವೇಳೆಗಾಗಲೇ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನಿಂದ ನೇರ ಸಂಪರ್ಕವಿಲ್ಲದೆ, ಸ್ವತಂತ್ರವಾಗಿ ಕೆಲಸಮಾಡುತ್ತಿದ್ದ ಮೈಸೂರು ರಾಜ್ಯ ಕಾಂಗ್ರೆಸ್ ಸದಸ್ಯರು ಈ ಸಮಿತಿಗೆ ನಿರ್ಲಕ್ಷ್ಯ ಭಾವವನ್ನೇ ತೋರಿಸಿದ್ದಲ್ಲದೆ, ಸತ್ಯಾಗ್ರಹವನ್ನೂ ಆಚರಿಸಿ, ಬಂಧಿತರಾದರು. ಸಮಿತಿಯ ಶಿಫಾರಸುಗಳು ಕಾಂಗ್ರೆಸ್ಸಿನ ನಿರೀಕ್ಷಿತ ಆಶೋತ್ತರಗಳನ್ನು ಈಡೇರಿಸುವಂತಿರಲಿಲ್ಲ.

ಕರ್ಣಾಟಕದಲ್ಲಿ ಕಾಂಗ್ರೆಸ್ ಆಂದೋಲನದ ಇತಿಹಾಸವನ್ನು ಇನ್ನೊಂದು ಅಧ್ಯಾಯದಲ್ಲಿ ವಿವರವಾಗಿ ಕೊಡಲಾಗಿದೆ.

ನಾಲ್ಮಡಿ ಕೃಷ್ಣರಾಜ ಒಡೆಯರು 1940 ರ ಆಗಸ್ಟ್ ತಿಂಗಳಲ್ಲಿ ವಿಧಿವಶರಾದರು. ಅವರ ಆಡಳಿತ ದೀರ್ಘಕಾಲದ್ದಾಗಿಯೂ ವೈಭವಯುತವಾಗಿಯೂ ಇದ್ದಿತು. ಅವರು ಧಾರ್ಮಿಕ ಸ್ವಭಾವದಿಂದ ಕೂಡಿದವ ರಾಗಿದ್ದು, ಉದಾರ ಹೃದಯಿಯಾಗಿದ್ದರು. ಅವರಲ್ಲಿ ಸಾಂಸ್ಕೃತಿಕ ಅಭಿರುಚಿ ಗಾಢವಾಗಿತ್ತು. ಅವರು ಪ್ರಾಚೀನಕಾಲದ ರಾಜ ಮಹಾರಾಜರುಗಳ ನೆನಪನ್ನು ತರುವಂತೆ, ಸಾರ್ವಜನಿಕ ಮಾನಸದಲ್ಲಿ ಚಿರಂತನ ಸ್ಥಾನ ಪಡೆದಿದ್ದಾರೆ.

### ಜಯಚಾಮರಾಜ ಒಡೆಯರು

ದಿವಂಗತ ಮಹಾರಾಜರ ತಮ್ಮನ ಮಗ ಜಯಚಾಮರಾಜ ಒಡೆಯರು ಸಿಂಹಾಸನಕ್ಕೆ ಬಂದರು. ಅವರು ತಮ್ಮ ಪೂರ್ವಿಕರಂತೆಯೇ ಅಧ್ಯಾಪಕರಿಂದ ಒಳ್ಳೆಯ ಶಿಕ್ಷಣ ಪಡೆದುದಲ್ಲದೆ, ಮೈಸೂರು ಮಹಾ ರಾಜಾ ಕಾಲೇಜಿನಿಂದ ಪ್ರತಿಭಾವಂತರಾಗಿ ತೇರ್ಗಡೆ ಹೊಂದಿದರು. ಅವರು ಸಿಂಹಾಸನದ ಉನ್ನತ ಪದವಿ ಏರಿದಾಗ, ಕೇವಲ 23 ವಯಸ್ಸಿನವರಾಗಿದ್ದರು.

ಸರ್ ಮಿರ್ಜಾರವರು 1941 ರ ಮೇ ತಿಂಗಳ ವರೆಗೂ ಅಧಿಕಾರದಲ್ಲಿದ್ದು ತರುವಾಯ ವಿಶ್ರಾಂತಿ

ಪಡೆದರು. ಅನಂತರ ಸಲಹಾ ಸಮಿತಿ ಸದಸ್ಯರಾಗಿದ್ದು ಅಗಾಧ ಆಡಳಿತ ಅನುಭವ ಪಡೆದಿದ್ದ ನ್ಯಾಪತಿ ಮಾಧವರಾಯರು ದಿವಾನರಾದರು.

ದ್ವಿತೀಯ ಪ್ರಪಂಚ ಯುದ್ಧವು (1939–45) ಆಗಲೇ ಮೊದಲಾಗಿತ್ತು. ಅದು ರಾಜ್ಯದ ಅರ್ಥವ್ಯವಸ್ಥೆಯನ್ನು ಬಹಳವಾಗಿ ಅಲ್ಲೋಲ ಕಲ್ಲೋಲ ಮಾಡಿತ್ತು. ಇತರ ಕಡೆಗಳಂತೆಯೇ ಮೈಸೂರಿನಲ್ಲಿಯೂ ಆಹಾರ ಅಭಾವ ತಲೆದೋರಿತ್ತು. ಹೊಸ ದಿವಾನರು ರಾಜ್ಯದ ಸಂಪನ್ಮೂಲಗಳನ್ನು ಬಹಳ ಎಚ್ಚರಿಕೆಯಿಂದಲೂ ದೃಢತೆಯಿಂದಲೂ ಸರಿ ತೂಗಿಸಿದರು. ಅವರು ಕೆ.ಆರ್. ಶ್ರೀನಿವಾಸ ಅಯ್ಯಂಗಾರ್ಯರ ಸಿಫಾರಸುಗಳನ್ನು ಕಾರ್ಯರೂಪಕ್ಕೆ ತಂದರು. ಅದರ ಮುಖ್ಯಾಂಶಗಳು ಹೀಗಿದ್ದವು : ಪ್ರಜಾಪ್ರತಿನಿಧಿ ಸಭೆಯ ಸಂಖ್ಯೆ 315 ಕ್ಕೆ ಏರಿತು ; ಅದರಲ್ಲಿ ಮುಸ್ಲಿಮರಿಗೆ 26 ಸ್ಥಾನಗಳು, ನಿಮ್ನವರ್ಗಗಳವರಿಗೆ 26 ಸ್ಥಾನಗಳು, ಭಾರತೀಯ ಕ್ರೈಸ್ತರಿಗೆ 5 ಸ್ಥಾನಗಳು, ಐರೋಪ್ಯರಿಗೆ 1, ವಿಶೇಷ ಹಿತ ಪ್ರಾತಿನಿಧ್ಯಕ್ಕೆ 28, ಸ್ತ್ರೀಯರಿಗೆ 11 (ಸ್ತ್ರೀಯರ ಮತದಾನದಿಂದಲೇ ಚುನಾಯಿತರಾಗಬೇಕು); ಸರಕಾರದಿಂದ ನಾಮಕರಣ ಹೊಂದಿದ ಸದಸ್ಯರು 10 ; ದಿವಾನರೇ ಪ್ರಜಾಪ್ರತಿನಿಧಿಸಭೆಯ ಅಧಿವೇಶನದ ಅಧ್ಯಕ್ಷರಾಗಿ ಮುಂದುವರಿದರು. ನ್ಯಾಯವಿಧಾಯಕ ಸಭೆಯ ಸದಸ್ಯರ ಸಂಖ್ಯೆ 68ಕ್ಕೆ ಏರಿತು ; ಮುಸ್ಲಿಮರಿಗೆ 4 ಸ್ಥಾನಗಳು, ನಿಮ್ನವರ್ಗಗಳಿಗೆ 4 ಸ್ಥಾನಗಳು, ಭಾರತೀಯ ಕ್ರೈಸ್ತರಿಗೆ 1, ಐರೋಪ್ಯರಿಗೆ 1, ವಿಶೇಷ ಹಿತಗಳ ಪ್ರಾತಿನಿಧ್ಯ 10 ; 16 ಅಧಿಕಾರಿಗಳನ್ನೊಳಗೊಂಡಂತೆ 24 ನಾಮಕರಣ ಸದಸ್ಯರು. ಮೊದಲನೆಯ ಕಾಲಾವಧಿಗೆ ಅಧ್ಯಕ್ಷರು ಮಹಾರಾಜರಿಂದಲೇ ನೇಮಕವಾಗಬೇಕು ; ತರುವಾಯ ಸಭೆಯ ಖಾಸಗಿ ಸದಸ್ಯರಿಂದ ಚುನಾಯಿತರಾಗಬೇಕು. ದಿವಾನರನ್ನು ಬಿಟ್ಟು 3 ಮಂದಿ ಅಧಿಕಾರಿ ಸಲಹೆಗಾರರ ಜೊತೆಗೆ ಇಬ್ಬರಿಗೆ ಕಡಮೆಯಿಲ್ಲದಂತೆ ಖಾಸಗಿಯವರನ್ನು ಸದಸ್ಯರನ್ನಾಗಿ ನಾಮಕರಣ ಮಾಡುವ ಅವಕಾಶವಾಯಿತು. ಈ ಮಂತ್ರಿಗಳು ಪ್ರಜಾಪ್ರತಿನಿಧಿ ಸಭೆ ಮತ್ತು ನ್ಯಾಯವಿಧಾಯಕ ಸಭೆಗಳ ಚುನಾಯಿತ ಖಾಸಗಿ ಸದಸ್ಯರಾಗಿರಬೇಕು. ಈ ಖಾಸಗಿ ಸಲಹೆಗಾರರು ಅಥವಾ ಮಂತ್ರಿಗಳ ಮೇಲೆ ಅವಿಶ್ವಾಸ ನಿರ್ಣಯ ತರುವುದಕ್ಕೆ ಅವಕಾಶವಿರಲಿಲ್ಲ.

ಹೊಸ ರಾಜ್ಯಾಂಗಕ್ಕೆ ಅನುಗುಣವಾಗಿ, 1941ರಲ್ಲಿ ಚುನಾವಣೆಗಳು ನಡೆದವು. ಹಲವರು ರಾಜಕೀಯ ಮುಖಂಡರು ಕಾನೂನು ಬಾಹಿರ ಚಟುವಟಿಕೆಗಳಲ್ಲಿ ಭಾಗವಹಿಸಿ, ಸೆರೆಮನೆವಾಸ ಅನುಭವಿಸಿದ್ದರಿಂದ ಮತದ ಹಕ್ಕನ್ನು ಕಳೆದುಕೊಂಡಿದ್ದರು. ಅವರಿಗೆ ಚುನಾವಣೆಗಳಲ್ಲಿ ಭಾಗವಹಿಸಲಾಗಲಿಲ್ಲ.

ಈ ರಾಜ್ಯಾಂಗ 1919ರ ಭಾರತ ಸರಕಾರದ ನಿಬಂಧನೆ ಪ್ರಕಾರ, ಇಜ್ಜೋಡಿ ಅಧಿಕಾರದ ಪ್ರತಿರೂಪದಂತೆ ಭಾಸವಾದರೂ ದಿವಾನರು, ಇಬ್ಬರು ಅಧಿಕಾರೇತರ ಸದಸ್ಯರು ಮತ್ತು ಇಬ್ಬರು ಅಧಿಕಾರಿ ಸದಸ್ಯರು ದಿವಾನ್ ನ್ಯಾಪತಿ ಮಾಧವರಾಯರ ಚಾಣಾಕ್ಷತನದಿಂದ ಒಂದು ತಂಡದಂತೆ ಕೆಲಸ ನಿರ್ವಹಿಸಿ, ಪ್ರಪಂಚಯುದ್ಧದ ಪರಿಣಾಮವಾಗಿಯೂ ಭಾರತದ ರಾಜಕೀಯ ವಿಪ್ಲವದ ಪರಿಣಾಮವಾಗಿಯೂ ಮೈಸೂರಿನಲ್ಲಿಯೂ ಉಂಟಾಗಿದ್ದ ಕಷ್ಟಪರಿಸ್ಥಿತಿಯನ್ನು ಪರಿಹರಿಸಲು ಯತ್ನಿಸಿದರು. ಆಗಲೇ ಕಾರ್ಯಾರಂಭವಾಗಿದ್ದ ಶರಾವತಿಯೋಜನೆಯ ವಿದ್ಯುದುತ್ಪನ್ನ ಮೊದಲಾಯಿತು. ಇದೇ ಕಾಲದಲ್ಲಿ ಭದ್ರಾಯೋಜನೆ ಕಾರ್ಯಾರಂಭವಾಯಿತು.

1942ರಲ್ಲಿ 'ಕ್ವಿಟ್-ಇಂಡಿಯಾ' ಆಂದೋಲನದ ಪರಿಣಾಮವಾಗಿ, ಬ್ರಿಟಿಷ್ ಭಾರತದಲ್ಲಿ ಉಗ್ರ ದಬ್ಬಾಳಿಕೆಗೆ ಆರಂಭವಾಗಿ ಭಾರತದ ಎಲ್ಲ ಅಗ್ರನಾಯಕರೂ ಸೆರೆಮನೆಯಲ್ಲಿದ್ದರು. ಅದು 1945ರಲ್ಲಿ ಯುದ್ಧ ಮುಗಿಯುವ ವರೆಗೂ ಉತ್ತಮಕಾಲ ಬಂದೀತೆಂಬ ನೀರವ ನಿರೀಕ್ಷಣೆಯ ಕಾಲವಾಗಿತ್ತು.

ಪ್ರಜಾ ಪ್ರತಿನಿಧಿಸಭೆ ಮತ್ತು ನ್ಯಾಯ ವಿಧಾಯಕ ಸಭೆಯ ನಾಲ್ಕು ವರ್ಷಗಳ ಅವಧಿ 1945ರಲ್ಲಿ ಮುಗಿಯಿತು. ಆಗ ಹೊಸ ಚುನಾವಣೆಗಳು ನಡೆದವು. ಎರಡು ಸಭೆಗಳಲ್ಲಿಯೂ ಕಾಂಗ್ರೆಸ್ ಸದಸ್ಯರೇ ಬಹುಮತದಿಂದ ಆರಿಸಿ ಬಂದರು. ಕೆ. ಹನುಮಂತಯ್ಯನವರು ಪ್ರಜಾಪ್ರತಿನಿಧಿ ಸಭೆಯ ಕಾಂಗ್ರೆಸ್ ಪಕ್ಷದ ನಾಯಕರಾಗಿಯೂ ಕೆ.ಸಿ. ರೆಡ್ಡಿಯವರು ನ್ಯಾಯವಿಧಾಯಕ ಸಭೆಯ ಕಾಂಗ್ರೆಸ್ ಪಕ್ಷದ ನಾಯಕರಾಗಿಯೂ ಆಯ್ಕೆಯಾದರು.

40 ವರ್ಷಗಳ ಕಾಲ ರಾಜ್ಯಕ್ಕೆ ಬಹುವಿಧವಾಗಿ ಸೇವೆ ಸಲ್ಲಿಸಿದ ನ್ಯಾಪತಿ ಮಾಧವರಾಯರು 1945ರ ಆಗಸ್ಟ್ ತಿಂಗಳಲ್ಲಿ ದಿವಾನಗಿರಿಯಿಂದ ವಿಶ್ರಾಂತಿ ಪಡೆದರು. ವಿಶ್ರಾಂತರಾದ ಮೇಲೂ ಅವರು ರಾಜ್ಯಾಂಗ ನಿರ್ಮಾಣ ಸಮಿತಿಯ ಸದಸ್ಯರಾಗಿಯೂ ಅದರ ಕರಡು ರಚನಾ ಸಮಿತಿ ಸದಸ್ಯರಾಗಿಯೂ ಸೇವೆಸಲ್ಲಿಸಿದರು.

ಮೈಸೂರಿನ ರಾಜಕೀಯ ಅಸ್ತಿತ್ವದ ವಿಷಯ, ಎಂದರೆ, ಭಾರತದ ಸಂಯುಕ್ತ ರಾಜ್ಯಘಟನೆಯಲ್ಲಿ ಅದು ಒಂದು ಭಾಗವಾಗಿ ಉಳಿಯುವ ವಿಷಯ, ಹಾಗೂ ರಾಜ್ಯಕ್ಕೆ ಜವಾಬುದಾರಿ ಸರಕಾರದ ಸಮಸ್ಯೆ ಇವು ಎಲ್ಲ ಸಮಸ್ಯೆಗಳಿಗಿಂತಲೂ ಗಹನವಾಗಿ ಪರಿಣಮಿಸಿದವು. ನ್ಯಾಪತಿ ಮಾಧವರಾಯರ ತರುವಾಯ ಯಾರು ದಿವಾನರಾಗುವರೆಂಬ ಬಗೆಗೆ ಬಹಳ ಊಹಾಪೋಹಗಳು ಕಂಡುಬಂದವು.

ವೈಸ್‌ರಾಯರ ಕಾರ್ಯಕಾರಿ ಮಂಡಲಿಯ ಸದಸ್ಯರಾಗಿದ್ದ ಸರ್ ಆರ್ಕಾಟ್ ರಾಮಸ್ವಾಮಿ ಮೊದಲಿಯಾರರು 1946ರ ಆಗಸ್ಟ್ ತಿಂಗಳಲ್ಲಿ ದಿವಾನರಾಗಿ ನೇಮಕ ಹೊಂದಿದರು; ಬ್ರಿಟನ್ನಿನಲ್ಲಿ ಅಟ್ಲಿಯವರ ಮುಖಂಡತ್ವದಲ್ಲಿ ಹೊಸ ಕಾರ್ಮಿಕ ಸರಕಾರ ಅಧಿಕಾರ ಸ್ವೀಕಾರ ಮಾಡಿತ್ತು. ಬ್ರಿಟಿಷ್ ಮಂತ್ರಿಮಂಡಲ ನಿಯೋಗವೊಂದು ಭಾರತಕ್ಕೆ ಬಂದು ತನ್ನ ಸಲಹೆಗಳನ್ನು ಮುಂದಿಟ್ಟಿತು. 1948ರ ಏಪ್ರಿಲ್‌ನಲ್ಲಿ ಬ್ರಿಟಿಷ್ ಸರಕಾರ ಭಾರತದಿಂದ ನಿರ್ಗಮಿಸುವುದಾಗಿಯೂ, ದೇಶೀಯ ಸಂಸ್ಥಾನಗಳು ಮುಂದೆ ಬರುವ ಭಾರತ ಸರಕಾರದೊಡನೆ ತಮ್ಮ ಸ್ಥಾನಮಾನಗಳ ಬಗೆಗೆ ಚರ್ಚಿಸಿ, ತೀರ್ಮಾನಿಸಿ ಕೊಳ್ಳಬೇಕೆಂದೂ ಘೋಷಣೆಮಾಡಿತು. ಸರ್ ಆರ್ಕಾಟ್‌ರವರು ಮೈಸೂರು ಸಂಸ್ಥಾನದ ದಿವಾನರಾಗಿ ಅಧಿಕಾರ ವಹಿಸಿಕೊಳ್ಳುವ ವೇಳೆಗೆ, ಡಿಲ್ಲಿಯಲ್ಲಿ ಒಂದು ತಾತ್ಕಾಲಿಕ ಸರಕಾರವು ಪಂಡಿತ ಜವಾಹರಲಾಲ್ ನೆಹರೂ ಅವರ ಪ್ರಧಾನ ಮಂತ್ರಿತ್ವದಲ್ಲಿ ರಚಿತವಾಗಿತ್ತು.

ಮೈಸೂರಿನ ರಾಜಕೀಯ ಮುಖಂಡರು ತಕ್ಷಣ ಜವಾಬುದಾರಿ ಸರಕಾರ ಸ್ಥಾಪನೆಯ ಬಗೆಗೆ ತವಕಗೊಂಡರು. ಆದರೆ, ದಿವಾನರು ಮುಂದಿನ ಹೆಜ್ಜೆ ಏನೆಂದು ಸೂಚಿಸುವ ಬಗೆಗೆ ಆಸಕ್ತಿ ಹೊಂದಿರಲಿಲ್ಲ. ಕಾಂಗ್ರೆಸ್ ಸಮಿತಿಯು 1947ರ ಮೇ 1ರಂದು ಸತ್ಯಾಗ್ರಹ ಹೂಡುವುದಾಗಿ ನಿರ್ಧಾರಮಾಡಿತು. ಆದರೆ, ಜೂನ್ 3ರಂದು ದಿವಾನರೊಡನೆ ಮಾತುಕತೆ ನಡೆಸಿದ ಪರಿಣಾಮವಾಗಿ ಅದು ನಿಂತಿತು. ಲಾರ್ಡ್ ಮೌಂಟ್ ಬೇಟನ್ ಆಗಸ್ಟ್ 15ರಂದು ಭಾರತದ ಸ್ವಾತಂತ್ರ್ಯ, ಭಾರತದ ವಿಭಜನೆ ಮತ್ತು ರಾಜ್ಯಾಂಗ ನಿರ್ಮಾಣ ಸಭೆಯ ರಚನೆ, ಇವುಗಳ ಬಗೆಗೆ ಘೋಷಣೆ ಹೊರಡಿಸಿದರು. ಮೈಸೂರು ರಾಜ್ಯ ಭಾರತ ಒಕ್ಕೂಟಕ್ಕೆ ಸೇರಿದುದರಿಂದ, ಭಾರತದ ರಾಜ್ಯಾಂಗ ನಿರ್ಮಾಣ ಸಭೆಯಲ್ಲಿ ಮೈಸೂರಿನ 7 ಮಂದಿ ಪ್ರತಿನಿಧಿಗಳು ಭಾಗವಹಿಸುವುದೆಂದು ದಿವಾನರು ಘೋಷಿಸಿದುದಲ್ಲದೆ, ಆ ಏಳರಲ್ಲಿ ಇಬ್ಬರು ಪ್ರಜಾಪ್ರತಿನಿಧಿ ಸಭೆಯಿಂದಲೂ ಮತ್ತಿಬ್ಬರು ನ್ಯಾಯವಿಧಾಯಕ ಸಭೆಯಿಂದಲೂ ಚುನಾಯಿತರಾಗುವರೆಂದೂ ದಿವಾನರನ್ನೊಳಗೊಂಡ ಉಳಿದ 3 ಮಂದಿಯನ್ನು ಸರಕಾರ ನಾಮಕರಣ ಮಾಡುವುದೆಂದೂ ತಿಳಿಸಿದರು. ಈ ವಿಧಾನಕ್ಕೆ ಉಗ್ರ ಪ್ರತಿಭಟನೆ ವ್ಯಕ್ತವಾದುದಲ್ಲದೆ ಜುಲೈ 5ರಂದು ಪ್ರಜಾಪ್ರತಿನಿಧಿ ಸಭೆಯಲ್ಲಿ ಸದಸ್ಯರು ಸಭಾತ್ಯಾಗವನ್ನು ಮಾಡಿದರು. ಆದರೆ, ದಿವಾನರೇ ಇದನ್ನು ಲೆಕ್ಕಿಸದೆ ತಮ್ಮ ದಾರಿಯಲ್ಲೇ ನಡೆದರು.

ಭಾರತದಿಂದ ಬ್ರಿಟಿಷ್ ಆಡಳಿತದ ನಿರ್ಗಮನಕ್ಕೆ ಪೂರ್ವಭಾವೀ ಕ್ರಮವಾಗಿ, ದಂಡಿನ ಪ್ರದೇಶವು ಮಹಾರಾಜರಿಗೆ ಕೊಡಲ್ಪಟ್ಟಿತು; ಅಲ್ಲದೆ 1947ರ ಜುಲೈ 27ರಂದು ರಾಜ್ಯದಲ್ಲಿದ್ದ ಬ್ರಿಟಿಷ್ ಪ್ರತಿನಿಧಿಯ ಆಡಳಿತವೂ ಕೊನೆಗೊಂಡಿತು.

ಮೈಸೂರು ರಾಜ್ಯದಲ್ಲಿ ಜವಾಬುದಾರಿ ಸರಕಾರ ಸ್ಥಾಪನೆ ಮಾಡುವುದಕ್ಕೂ ರಾಜ್ಯಕ್ಕೆ ಪ್ರತ್ಯೇಕ ರಾಜ್ಯಾಂಗ ನಿರ್ಮಾಣ ಮಾಡುವುದಕ್ಕೂ ಮೈಸೂರು ರಾಜ್ಯಾಂಗ ನಿರ್ಮಾಣ ಸಭೆಯೊಂದನ್ನು ರಚನೆ ಮಾಡಬೇಕೆಂದು ಮೈಸೂರು ಕಾಂಗ್ರೆಸ್ ಒತ್ತಾಯ ಮಾಡಿತು. ಅದು ಸತ್ಯಾಗ್ರಹ (ಅರಮನೆ ಸತ್ಯಾಗ್ರಹ) ನಡೆಸಬೇಕೆಂದೂ 1947ರ ಸೆಪ್ಟೆಂಬರ್ 1 ರಿಂದ ಅರಮನೆಗೆ ಜಾಥಾಗಳನ್ನು ಕೊಂಡೊಯ್ಯಬೇಕೆಂದೂ ನಿರ್ಧಾರ ಮಾಡಿತು. ಪತ್ರಿಕೆಗಳಲ್ಲಿ ಈ ವರ್ತಮಾನಗಳನ್ನು ಪ್ರತಿಬಂಧಿಸುವುದಕ್ಕೂ ಸರಕಾರ ಸುಗ್ರೀವಾಜ್ಞೆ ಮಾಡಿತು. ಸೆಪ್ಟೆಂಬರ್ 1 ರಂದು ರಾಜ್ಯಾದ್ಯಂತ ಪ್ರಚಂಡ ಮೆರವಣಿಗೆಗಳು ನಡೆದು, 'ಆರ್‍ಮ್ಯಾಟ್ ಬಯ್ಕಾಟ್' 'ಮೈಸೂರ್ ಚಲೋ' ಇತ್ಯಾದಿ ಘೋಷಣೆಗಳು ಕೇಳಿಬಂದವು. ಸೆರೆಮನೆಗಳೆಲ್ಲ ಜನನಾಯಕರಿಂದಲೂ ತುಂಬಿಹೋದವು. ರಾಜ್ಯದ ಹೊರಗಿನವರೂ ಈ ಚಳವಳಿಯಲ್ಲಿ ಭಾಗವಹಿಸಲು ಬಂದಿದ್ದರು.

ಕಡೆಗೆ, ಮಹಾರಾಜರು ಸೆಪ್ಟೆಂಬರ್ 7 ರಂದು ಒಂದು ಸಂದೇಶ ಹೊರಡಿಸಿ, ರಾಜ್ಯದಲ್ಲಿ ಜವಾಬುದಾರಿ ಸರಕಾರವನ್ನು ಸ್ಥಾಪಿಸುವುದಾಗಿ ಘೋಷಿಸಿದರು. ಇದರ ತರುವಾಯ, ಸೆಪ್ಟೆಂಬರ್ 24 ರಂದು ಮುಂಬರುವ ರಾಜಕೀಯ ಸುಧಾರಣೆಗಳನ್ನು ವಿವರಿಸುವ ರಾಜನಿರೂಪ ಹೊರಟಿತು. ಜನ ನಾಯಕರು ಅಕ್ಟೋಬರ್ 7 ರಂದು ಬಂಧಮುಕ್ತರಾಗಿ, ಮಾತುಕತೆ ನಡೆಯಿತು. ಅಕ್ಟೋಬರ್ 11 ರಂದು ದಿವಾನರಿಗೂ ಮೈಸೂರು ಕಾಂಗ್ರೆಸ್ ಅಧ್ಯಕ್ಷ ಕೆ.ಸಿ. ರೆಡ್ಡಿಯವರಿಗೂ ಮುಂದಿನ ವ್ಯವಸ್ಥೆಯ ಬಗೆಗೆ ಒಪ್ಪಂದವಾಯಿತು. ಅಕ್ಟೋಬರ್ 24ರಂದು ಹೊರಟ ವಿಶೇಷ ನಿರೂಪದ ಪ್ರಕಾರ, ಹೊಸ ಸರಕಾರದ ಮಂತ್ರಿ ಸಂಪುಟದ ಸ್ವರೂಪ ಪ್ರಕಟವಾಯಿತು. ಅದರಲ್ಲಿ ದಿವಾನರನ್ನು ಬಿಟ್ಟು ಆರು ಮಂದಿ ಕಾಂಗ್ರೆಸ್ಸಿಗರು, ಮೂರು ಮಂದಿ ಕಾಂಗ್ರೆಸ್ಸೇತರರು ಇರುವಂತಾಯಿತು. ಮಂತ್ರಿ ಸಂಪುಟದಲ್ಲಿ ದಿವಾನರ ಮುಂದುವರಿಕೆ ಒಂದು ಅಕ್ರಮವೆಂದು ಭಾವಿಸಲ್ಪಟ್ಟು ಅದರ ರದ್ದತಿಗಾಗಿ ನಿಲುವಿಲ್ಲದ ಚಳವಳಿ ನಡೆಯಿತು. ಕೊನೆಗೆ, 1949 ನೆಯ ಆಗಸ್ಟ್ ತಿಂಗಳಲ್ಲಿ ದಿವಾನರ ಸ್ಥಾನ ರದ್ದಾಯಿತು.

ಈ ವೇಳೆಗೆ ಹಿಂದಿನ ನ್ಯಾಯವಿಧಾಯಕ ಸಭೆಯನ್ನು ಪ್ರಜಾಪ್ರತಿನಿಧಿ ಸಭೆಯ ನಾಲ್ಕು ವರ್ಷಗಳ ಕಾಲಾವಧಿ ಕೊನೆಗೊಂಡುದರಿಂದ, ಹಿಂದಿನ ಮತದಾನ ಪದ್ಧತಿಯಂತೆಯೇ ಚುನಾವಣೆ ನಡೆದು, ಮೈಸೂರಿನ ರಾಜ್ಯಾಂಗ ನಿರ್ಮಾಣ ಸಭೆಯೊಂದು ರೂಪುಗೊಂಡಿತು. ಆದರೆ, ಭಾರತ ರಾಜ್ಯಾಂಗ ನಿರ್ಮಾಣಸಭೆ ಆಗಲೇ ಕೆಲಸಮಾಡುತ್ತಿದ್ದುದರಿಂದ ಮೈಸೂರಿನ ಸಭೆಯು ಸ್ವಲ್ಪ ಕಾಲದಲ್ಲಿಯೇ ತನ್ನ ಕಾರ್ಯಕಲಾಪಗಳನ್ನು ನಿಲ್ಲಿಸಿತು.

ಮೈಸೂರು 'ಎ' ಗುಂಪಿನ ರಾಜ್ಯಗಳಲ್ಲಿ ಸೇರಿಸಲ್ಪಟ್ಟಿತು. 1950ನೆ ಜನವರಿ 26ರಂದು ಭಾರತದಲ್ಲೆಲ್ಲ ಆಚರಣೆಗೆ ಬಂದ ಭಾರತ ರಾಜ್ಯಘಟನೆಯು ಮೈಸೂರಿಗೂ ಅನ್ವಯಿಸಿತು. ಹಿಂದಿನ ತಾತ್ಕಾಲಿಕ ಸರಕಾರ ಮುಕ್ತಾಯವಾಗಿ, ಪೂರ್ಣ ಕಾಂಗ್ರೆಸ್ ಮಂತ್ರಿಮಂಡಲವು ಕೆ. ಸಿ. ರೆಡ್ಡಿಯವರ ಮುಖ್ಯಮಂತ್ರಿತ್ವದಲ್ಲಿ ರೂಪುಗೊಂಡಿತು. ಮಹಾರಾಜರು ಮೈಸೂರು ರಾಜ್ಯದ ರಾಜಪ್ರಮುಖರಾದರು.

ಸ್ವಾತಂತ್ರ್ಯ ಪ್ರಾಪ್ತವಾದ ತರುವಾಯ, ಮತ್ತು ಕರ್ಣಾಟಕ ಏಕೀಕರಣವಾದ ತರುವಾಯ, ರಾಜ್ಯದ ಬೆಳವಣಿಗೆಗಳನ್ನು ಮುಂದಿನ ಅಧ್ಯಾಯಗಳಲ್ಲಿ ನಿರೂಪಿಸಲಾಗಿದೆ.

ಮೂಲ ಲೇಖಕರು : ಶ್ರೀ ಕೆ. ಸಂಪದ್ಗಿರಿ ರಾವ್
ಅನುವಾದಕರು : ಶ್ರೀ ಜಿ. ನಾರಾಯಣ ಮೂರ್ತಿ

# ಧರ್ಮ, ಸಮಾಜ, ಮತ್ತು ಸಂಸ್ಕೃತಿ

## ಕರ್ನಾಟಕದ ಮೇಲೆ ಪಾಶ್ಚಾತ್ಯ ಪ್ರಭಾವ

ಆಧುನಿಕ ಕಾಲವನ್ನು, ಎಂದರೆ ಬ್ರಿಟಿಷರ ಆಳಿಕೆಗೆ ಭಾರತವು ಒಳಗಾದ ಕಾಲವನ್ನು, ಬ್ರಿಟಿಷ್ ಯುಗ ಎಂದು ಕರೆಯಬಹುದು. ಹತ್ತೊಂಬತ್ತನೆ ಶತಮಾನದ ಮೊದಲಿನಿಂದಲೂ, ಕರ್ನಾಟಕವು ಭಾರತದ ಇತರ ಭಾಗಗಳಂತೆ, ಪಾಶ್ಚಾತ್ಯದ ಅದರಲ್ಲೂ ವಿಶೇಷವಾಗಿ ಇಂಗ್ಲೆಂಡಿನ ವಿಚಾರ ಹಾಗೂ ಸಂಸ್ಕೃತಿಯ ನಿಕಟ ಸಂಪರ್ಕಕ್ಕೆ ಒಳಗಾಯಿತು. ಆಧುನಿಕ ಕಾಲದಲ್ಲಿ ಕರ್ನಾಟಕದ ಧರ್ಮ, ಸಮಾಜ ಮತ್ತು ಸಂಸ್ಕೃತಿಗಳ ವಿಷಯವನ್ನು ಕುರಿತು ಹೇಳುವ ಮೊದಲು, ಭಾರತದ, ಹಾಗೂ ಕರ್ನಾಟಕದ ಮೇಲೆ ಆದ ಯುರೋಪಿನ ಮತ್ತು ಬ್ರಿಟನ್ನಿನ ಸಂಸ್ಕೃತಿಯ ಸಾಮಾನ್ಯವಾದ ಪರಿಣಾಮಗಳನ್ನು ಕುರಿತು ಪರಿಶೀಲಿಸುವುದು ಒಳ್ಳೆಯದು.

ಇನ್ನು ಕರ್ನಾಟಕದ ಮೇಲೆ ಆದ ಪಾಶ್ಚಾತ್ಯದ ಸಂಘರ್ಷವನ್ನು ನೋಡೋಣ.

ಹದಿನೈದನೆಯ ಶತಮಾನದಿಂದ ಈಚೆಗೆ ಪಶ್ಚಿಮ ಯುರೋಪಿನ ಕಡಲತೀರದ ದೇಶಗಳ ಜನರು ಭಾರತಕ್ಕೆ ಬರತೊಡಗಿದ ಕಾರಣದಿಂದ, ಪಾಶ್ಚಾತ್ಯದ ಪ್ರಭಾವವು ಭಾರತದ ಮೇಲೆ ಗಮನಾರ್ಹವಾದ ರೀತಿಯಲ್ಲಿ ಆಗತೊಡಗಿತು. ಗುಡ್ ಹೋಪ್ ಭೂಶಿರದ ಮೂಲಕ ಹಿಂದುಸ್ತಾನಕ್ಕೆ ಬರುವ ಸಮುದ್ರ ಮಾರ್ಗದ ಅನ್ವೇಷಣೆಯು, ಭಾರತದ ಹಾಗೂ ಪಾಶ್ಚಾತ್ಯ ದೇಶಗಳ ಸಂಪರ್ಕವನ್ನು ಹೆಚ್ಚಿಸುವುದರಲ್ಲಿ ಒಂದು ಮಹತ್ವದ ಘಟನೆಯಾಯಿತು. ಯುರೋಪ್ ದೇಶಗಳವರು ಭಾರತಕ್ಕೆ ಬಂದದ್ದರ ಮೊದಲ ಉದ್ದೇಶ ವ್ಯಾಪಾರ, ಅನಂತರದ ಉದ್ದೇಶ ವಸಾಹತುಗಳ ನಿರ್ಮಾಣ ಮತ್ತು ಪ್ರಭುತ್ವ ಸ್ಥಾಪನೆ. ಈ ಕಾರ್ಯ ಸಾಧನೆಯಲ್ಲಿ ಅವರು ಅಂದು ಗೊಂದಲ ಹಾಗೂ ಅವ್ಯವಸ್ಥೆಯಿಂದ ಕೂಡಿದ ಭಾರತದ ರಾಜಕೀಯ ಪರಿಸ್ಥಿತಿಯನ್ನು, ತಮಗೆ ಅನುಕೂಲವಾಗುವಂಥ ರೀತಿಯಲ್ಲಿ ಉಪಯೋಗಪಡಿಸಿಕೊಳ್ಳಲು ಯತ್ನಿಸಿದರು. ಈ ಒಂದು ಕಾರ್ಯವನ್ನು ಅವರು ಯಾವರೀತಿಯ ನ್ಯಾಯಾನ್ಯಾಯದ ಅಳುಕೂ ಇಲ್ಲದ ನಿರ್ಭೀತಿಯಿಂದಲೆ ಮಾಡಿದರು. ಏಕೆಂದರೆ, ಭಾರತವು ಎಷ್ಟಾದರೂ ಅವರ ಪಾಲಿಗೆ ಒಂದು ವಿದೇಶವೇ ಆಗಿತ್ತು. ಹೀಗೆ, ಭಾರತ ಹಾಗೂ ಯುರೋಪಿನ ಶಕ್ತಿಗಳಿಗೆ ಹೊಂದಿಕೊಂಡು ಬಾಳುವಂಥ ಯಾವ ಸಮಾನವಾದ ಆಸಕ್ತಿಗಳೂ ಇಲ್ಲದೆ ಹೋದದ್ದೇ ಅನಂತರದ ಎಲ್ಲ ಕೇಡುಗಳಿಗೂ ಮೂಲವಾಯಿತು.

ಪಶ್ಚಿಮದ ಕಡಲ ತೀರಗಳಿಂದ ಭಾರತಕ್ಕೆ ಬಂದ ಮೊದಲ ಸಾಹಸಿಗಳು ಪೋರ್ಚುಗೀಸರು. ಮೊದಮೊದಲು ಅವರು ಬಂದದ್ದು ವ್ಯಾಪಾರಕ್ಕೆಂದು ಮಾತ್ರ. ಆದರೆ, ಅವರಿಗೆ ಬಹು ಬೇಗ ಅರ್ಥವಾಯಿತು--ತಾವು ಅರಬ ನೌಕಾ ಪ್ರಭಾವವನ್ನು ನಿಶ್ಶೇಷಗೊಳಿಸದ ಹೊರತು ಇಲ್ಲಿ ಬೇರೂರುವುದು ಸಾಧ್ಯವಿಲ್ಲವೆಂದು. ಆದ್ದರಿಂದ, ಈ ಕಾರ್ಯವನ್ನು ಮಾಡಬೇಕಾದರೆ, ಭಾರತದ ಅರಬಿಸಮುದ್ರ ತೀರದಲ್ಲಿ ತಾವು ಬಲವಾದ ಸೈನಿಕ ನೆಲೆಗಳನ್ನು ಸ್ಥಾಪಿಸಿ, ತಮ್ಮತಮ್ಮೊಳಗೇ ಕಿತ್ತಾಡುತ್ತಿದ್ದ ಭಾರತದ ಯಾವನಾದರೊಬ್ಬ ರಾಜನೊಂದಿಗೆ ಸ್ನೇಹ ಬೆಳಸುವುದೊಂದೇ ಅತ್ಯಂತ ಪರಿಣಾಮಕಾರಿಯಾದ ವಿಧಾನವೆಂಬುದನ್ನು ಅವರು ಕಂಡುಕೊಂಡರು. ಈ ರೀತಿಯಲ್ಲಿ ಪೋರ್ಚುಗೀಸರು ಭಾರತದಲ್ಲಿ

ನೆಲೆಯೂರಿ ನಿಲ್ಲಲು ಹವಣಿಸುತ್ತಿದ್ದಂತೆಯೇ, ಕ್ರಮಕ್ರಮವಾಗಿ ಇದನ್ನು ಗೆಲ್ಲಲೂ ಹವಣಿಸುತ್ತಿದ್ದರು. ಏಕೆಂದರೆ ಇಂಥ ಸಾಹಸಕ್ಕೆ ದಕ್ಷಿಣಭಾರತದ ರಾಜಕೀಯ ಪರಿಸ್ಥಿತಿಯೂ ತುಂಬಾ ಅನುಕೂಲಕರವಾಗಿತ್ತು. ಪೋರ್ಚುಗೀಸರು, ತಾವು ಸಣ್ಣ ರಾಜ್ಯದವರಾದುದರಿಂದ, ತಮ್ಮಲ್ಲಿ ಆಳ್‌ಬಲ ಕಡಮೆಯಿದ್ದುದರಿಂದ ತಮ್ಮ ಸೈನ್ಯಕ್ಕೆ ಭಾರತೀಯರನ್ನು ಸೇರಿಸಿಕೊಳ್ಳತೊಡಗಿದರು. ಆದರೆ ಪೋರ್ಚುಗೀಸರ ಪ್ರಭಾವವು ವಿಶೇಷವಾಗಿ ಪ್ರಕಟವಾದದ್ದು ಅವರು ಕ್ರಿಶ್ಚಿಯನ್ ಧರ್ಮಕ್ಕೆ ನಮ್ಮವರನ್ನು ಮತಾಂತರಗೊಳಿಸುತ್ತಿದ್ದ ಪ್ರಯತ್ನಗಳಲ್ಲಿ. ಈ ಮತಾಂತರ ಕಾರ್ಯವನ್ನು ಅವರು ಬಹುಮಟ್ಟಿಗೆ ಬಲ ಪ್ರಯೋಗದಿಂದ, ಮತ್ತು ಅವರೇ ನಿಯಮಿಸಿದ ಧಾರ್ಮಿಕ ವಿಚಾರಣಾಧಿಕಾರಿಗಳ (Inquisition) ಸಹಾಯದಿಂದ ನಡೆಯಿಸಿದರು. ಇಡೀ ದಕ್ಷಿಣ ಭಾರತಕ್ಕೆ ಗೋವಾ ಇಂಥದೊಂದು ಧಾರ್ಮಿಕ ವಿಚಾರಣಾ ಕೇಂದ್ರವಾಗಿತ್ತು. ಪೋರ್ಚು ಗೀಸರನ್ನು ಭಾರತೀಯರು ತೀರಾ ಜುಗುಪ್ಸೆಯಿಂದ ಕಾಣಲು ಬಹುಶಃ ಇದೇ ಪ್ರಧಾನವಾದ ಕಾರಣ ವಾಗಿದ್ದಿರಬಹುದು.

ಹದಿನೈದನೆಯ ಶತಮಾನದ ಕೊನೆಯ ವೇಳೆಗೆ (ಕ್ರಿ.ಶ. 1580), ಸ್ಪೈಯಿನ್ ದೇಶದವರಿಂದ ಯುದ್ಧದಲ್ಲಿ ಪರಾಭವಹೊಂದಿ ಪೋರ್ಚುಗಲ್ ದೇಶವು ತಟಕ್ಕನೆ ದುರ್ದಶೆಗೆ ಬಂದಿತು. ಹೀಗಾಗಿ ಹದಿನೇಳನೆಯ ಶತಮಾನವು ಡಚ್ಚರ ಪ್ರಾಧಾನ್ಯ ಕಾಲವಾಯಿತು. ಆದರೆ ಡಚ್ಚರು, ತಮ್ಮ ಗಮನವನ್ನೆಲ್ಲಾ ಈಸ್ಟ್ ಇಂಡೀಸ್ ಕಡೆಗೆ ಹರಿಸಿದ್ದರಿಂದ, ಭಾರತದೊಂದಿಗೆ ವಾಣಿಜ್ಯ ಸಂಪರ್ಕವಿರಿಸಿಕೊಳ್ಳುವ ವಿಚಾರದಲ್ಲಿ ಅಂತಹ ಆಸಕ್ತಿಯನ್ನೇ ತೋರಲಿಲ್ಲ. ಕರ್ಣಾಟಕವು, ಮತ್ತು ಒಟ್ಟಾರೆ ಭಾರತವು ಡಚ್ಚರ ಪ್ರಭಾವಕ್ಕೆ ಒಳಗಾಗಲಿಲ್ಲವೆಂದೇ ಹೇಳಬೇಕು. ಆದರೆ ಭಾರತದಲ್ಲಿ ಹದಿನೇಳನೆ ಶತಮಾನದ ಕಡೆಯಲ್ಲಿ ತಮ್ಮ ವಾಣಿಜ್ಯ ಕೇಂದ್ರಗಳನ್ನು ಸ್ಥಾಪಿಸಿದ್ದ ಬ್ರಿಟಿಷ್ ಮತ್ತು ಫ್ರೆಂಚರಲ್ಲಿ, ಹದಿನೆಂಟನೆಯ ಶತಮಾನದ ಹೊತ್ತಿಗೆ ವ್ಯಾಪಾರದ ವಿಷಯದಲ್ಲಿ ಪೈಪೋಟಿ ಬೆಳೆದಿತ್ತು. ಹದಿನೆಂಟನೆಯ ಶತಮಾನದ ಕಡೆಯ ಹೊತ್ತಿಗೆ ಬ್ರಿಟಿಷರು ಫ್ರೆಂಚರನ್ನು ಹೊಡೆದೋಡಿಸಿ ಇಂಡಿಯಾದಲ್ಲಿ ತಮ್ಮ ಪ್ರಭುತ್ವವನ್ನು ಸ್ಥಾಪಿಸಿ ಕೊಂಡರು. ಟಿಪ್ಪು ಸುಲ್ತಾನನು ಬ್ರಿಟಿಷರ ವಿರುದ್ಧ ನಡೆಯಿಸಿದ ಹೋರಾಟಗಳಲ್ಲಿ, ಫ್ರೆಂಚರ ನೆರವನ್ನು ಗಳಿಸಿಕೊಳ್ಳಲು ಪ್ರಯಾಸಪಟ್ಟನು ; ಆದರೆ ಆ ಕಾಲಕ್ಕೆ ಫ್ರಾನ್ಸಿನಲ್ಲಿ ನಡೆದ ಫ್ರೆಂಚ್ ಮಹಾಕ್ರಾಂತಿಯ ಮತ್ತು ಅದರ ಪರಿಣಾಮಗಳಿಂದಾಗಿ ಟಿಪ್ಪುವಿಗೆ ಫ್ರಾನ್ಸಿನ ಸರ್ಕಾರವು ಪರಿಣಾಮಕಾರಿಯಾದ ಸಹಾಯವನ್ನು ನೀಡಲು ಅಸಾಧ್ಯವಾದ ಪರಿಸ್ಥಿತಿ ಪ್ರಾಪ್ತವಾಯಿತು. ಮೂರನೆಯ ಪಾಣಿಪತದ ಯುದ್ಧದನಂತರ ಪ್ರಾಪ್ತವಾದ ರಾಜಕೀಯ ಅವ್ಯವಸ್ಥೆಯ ಪರಿಸ್ಥಿತಿಯನ್ನು ಬ್ರಿಟಿಷರು ಉಪಯೋಗಿಸಿ ಕೊಂಡು, ಭಾರತದ ದೊಡ್ಡ ದೊಡ್ಡ ಪ್ರದೇಶಗಳನ್ನು ಒಂದೊಂದಾಗಿ ಗೆದ್ದು ತಮ್ಮ ಶಕ್ತಿಯನ್ನು ಒಗ್ಗೂಡಿಸಿ ಕೊಳ್ಳ ತೊಡಗಿದರು. ಹದಿನೆಂಟನೆಯ ಶತಮಾನದ ವೇಳೆಗಾಗಲೆ ಇಂಡಿಯಾದ ಮೇಲಿನ ಪ್ರಭುತ್ವವನ್ನು ಇನ್ನೇನು ಬ್ರಿಟಿಷರು ಗಳಿಸಿಕೊಂಡು ಬಿಡುತ್ತಾರೆ ಎಂಬುದು ಅತ್ಯಂತ ಸ್ಪಷ್ಟವಾಗತೊಡಗಿತು.

ಟಿಪ್ಪುಸುಲ್ತಾನನ ಪತನಾನಂತರ ಕರ್ಣಾಟಕದ ಮೇಲೆ ಬ್ರಿಟಿಷರ ಸಂಘಾತವು ಅತ್ಯಂತ ಸ್ಪಷ್ಟವಾಗಿ ಕಾಣತೊಡಗಿತ್ತು. ಹತ್ತೊಂಬತ್ತನೆಯ ಶತಮಾನದ ಪೂರ್ವಾರ್ಧದಲ್ಲಿ, ಉತ್ತರ ಕರ್ಣಾಟಕದ ಸಣ್ಣ ಸಣ್ಣ ರಾಜ್ಯಗಳನ್ನು ಮತ್ತು ಪಶ್ಚಿಮ ಕರಾವಳಿ ಪ್ರದೇಶಗಳನ್ನು ಬ್ರಿಟಿಷರು ಗೆದ್ದು ತಮ್ಮ ಆಧಿಪತ್ಯಕ್ಕೆ ಸೇರಿಸಿಕೊಂಡರು. ಇದರಿಂದಾಗಿ, ಒಂದೇ ಕಾಲಕ್ಕೆ ಕಾವೇರಿಯಿಂದ ಆ ಗೋದಾವರಿಯ ವರೆಗೂ ಚಾಚಿಕೊಂಡು, ತನ್ನದೇ ಆದ ಪರಂಪರೆ ಹಾಗೂ ಸಂಸ್ಕೃತಿಯನ್ನು ರೂಪಿಸಿಕೊಂಡಿದ್ದ ಅಖಂಡ ಕರ್ಣಾಟಕವು, ಈಗ ಹರಿದು ಹಂಚಿಹೋಗಲು ಆರಂಭವಾಯಿತು. ಇಂಡಿಯದ ಬೇರೆ ಯಾವೊಂದು ಭಾಷಾ ಪ್ರದೇಶವೂ ಇಷ್ಟುಮಟ್ಟಿಗೆ ಛಿದ್ರ ಛಿದ್ರವಾಗಿ ಹಂಚಿಹೋಗಲಿಲ್ಲ. ಬ್ರಿಟಿಷರ ಪ್ರಭಾವದಿಂದ, ಕರ್ಣಾಟಕದ ಜನತೆಗೆ ಆದ ಅತ್ಯಂತ ದಾರುಣವಾದ ಆಘಾತವೆಂದರೆ ಇದೇ.

ಕರ್ಣಾಟಕವು, ಭಾರತದ ಇತರ ಪ್ರದೇಶಗಳ ಹಾಗೆಯೇ ಪಾಶ್ಚಾತ್ಯ ಶಿಕ್ಷಣ ಕ್ರಮವನ್ನು ರೂಢಿಸಿಕೊಂಡಿತು. ಇಲ್ಲಿನ ವಿದ್ಯಾವಂತರು ಪಾಶ್ಚಾತ್ಯ ಕವಿಗಳ, ದಾರ್ಶನಿಕರ, ರಾಜಕೀಯ ವೇತ್ತರ, ಮಹದಾಲೋಚನೆಗಳ ಸೆಳೆತಕ್ಕೆ ಒಳಗಾದರು. ತತ್ಪರಿಣಾಮವಾಗಿ, ಅವರಿಗೆ ತಾವು ಎಂಥ ಪಾರತಂತ್ರ್ಯಕ್ಕೆ ಸಿಕ್ಕಿದ್ದೇವೆ ಎಂಬುದೂ ಬ್ರಿಟಿಷ್ ಆಡಳಿತವು ತಮ್ಮ ದೇಶದ ಆರ್ಥಿಕ ಸಂಪತ್ತನ್ನು ಹೇಗೆ ಹಿಂಡಿಹಿಪ್ಪೆ ಮಾಡುತ್ತಿದೆ ಎಂಬುದೂ ಏಕಕಾಲದಲ್ಲಿ ಅರಿವಿಗೆ ಬಂದಿತು.

ಹತ್ತೊಂಬತ್ತನೆಯ ಶತಮಾನದ ಕಡೆಯ ಭಾಗದಲ್ಲಿ, ಮತ್ತು ಇಪ್ಪತ್ತನೆಯ ಶತಮಾನದ ಆರಂಭ ಕಾಲದಲ್ಲಿ ಪಾಶ್ಚಾತ್ಯ ಧಾರ್ಮಿಕ ಮತ್ತು ಲೌಕಿಕ ಭಾವನೆಗಳನ್ನು ಪ್ರತಿಭಟಿಸಲೆಂಬಂತೆ, ಸಾಮಾಜಿಕ ಹಾಗೂ ಧಾರ್ಮಿಕ ಪುನರುಜ್ಜೀವನ ಚಳವಳಿಗಳು ಭಾರತದಲ್ಲಿ ನಡೆದವು. ಈ ಚಳವಳಿಗಳು ಇತರ ಪ್ರದೇಶಗಳ ವಿದ್ಯಾವಂತರ ಮೇಲೆ ಹೇಗೋ ಹಾಗೆ ಕರ್ಣಾಟಕದ ಸುಶಿಕ್ಷಿತ ಜನತೆಯ ಮನಸ್ಸಿನ ಮೇಲೆಯೂ ತಕ್ಕಷ್ಟು ಪರಿಣಾಮ ಬೀರಿದವು. ಹತ್ತೊಂಬತ್ತನೆಯ ಶತಮಾನದ ಪೂರ್ವಾರ್ಧದಲ್ಲಿಯೇ ಬಂಗಾಳದಲ್ಲಿ ರಾಜಾರಾಮಮೋಹನರಾಯನಿಂದ ಹಿಂದೂಧರ್ಮವನ್ನು ತನ್ನ ಮೊದಲಿನ ಶುದ್ಧಸ್ಥಿತಿಗೆ ತರುವ ಪುನುರುಜ್ಜೀವನ ಚಳವಳಿ ಆರಂಭವಾಯಿತು. ದಯಾನಂದ ಸರಸ್ವತಿಯು ವೈದಿಕಯುಗದ ಅತ್ಯುತ್ಕೃಷ್ಟ ಭಾವ-ಭಾವನೆಗಳೇನಿವೆಯೋ ಅವೆಲ್ಲವನ್ನೂ ಈ ಕಾಲದಲ್ಲಿ ಪುನುರುಜ್ಜೀವನಗೊಳಿಸುವ ಪ್ರಯತ್ನಮಾಡಿ, ಕ್ರೈಸ್ತ ಹಾಗೂ ಇಸ್ಲಾಮ್ ಧರ್ಮಗಳ ಆಕ್ರಮಣ ಪ್ರವೃತ್ತಿಯನ್ನು ಎದುರಿಸಲು ಸಮರ್ಥನಾದ ಸತ್ವವೊಂದನ್ನು ರೂಪಿಸಿದನು. ಇತರ ಸುಧಾರಕರು ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಉದಿಸಿ ಬಂದರು. ಈ ಕಾಲದ ಸುಧಾರಕರಲ್ಲಿ, ಅತ್ಯಂತ ಪ್ರಮುಖರೂ ಭಾರತದಲ್ಲಿ ಮಾತ್ರವಲ್ಲದೆ ಪಾಶ್ಚಾತ್ಯ ರಾಷ್ಟ್ರಗಳ ಮೇಲೂ ತಮ್ಮ ಪ್ರಭಾವವನ್ನು ಬೀರಿದವರೂ ಎಂದರೆ—ಶ್ರೀರಾಮಕೃಷ್ಣ ಪರಮಹಂಸರು ಮತ್ತು ಶ್ರೀ ಸ್ವಾಮಿ ವಿವೇಕಾನಂದರು. ಉಳಿದವರೆಲ್ಲರಿಗಿಂತ ಇವರ ಸಂದೇಶ ಭಾರತದ ಎಲ್ಲಾ ಭಾಗಗಳ ಮೇಲೆ ಹೇಗೋ ಹಾಗೆ, ಕರ್ಣಾಟಕವನ್ನೂ ವ್ಯಾಪಿಸಿತು. ಈ ಮಹಾ ವ್ಯಕ್ತಿಗಳು ಭಾರತೀಯ ಸಮಾಜವನ್ನು ಸಮೂಲವಾಗಿ ಅಲ್ಲಾಡಿಸಿ, ನಿರ್ವಿಣ್ಣರಾಗಿ ನಿರುತ್ಸಾಹದಿಂದಿದ್ದ ಭಾರತೀಯ ಜನತೆಯಲ್ಲಿ ತಮ್ಮ ಪರಂಪರೆಯ ಬಗ್ಗೆ ಹೆಮ್ಮೆಯನ್ನೂ ಭವಿಷ್ಯದ ಬಗ್ಗೆ ಉತ್ಸಾಹಪೂರ್ಣ ಭರವಸೆಯನ್ನೂ ಪ್ರಚೋದಿಸಿದರು.

ಇದುವರೆಗೂ, ಭಾರತೀಯ ಸಮಾಜದ ಮೇಲೆ ಪಾಶ್ಚಾತ್ಯ ಪ್ರಭಾವದ ಪರೋಕ್ಷವಾದ ಮತ್ತು ಪ್ರತಿಕೂಲವಾದ ಪರಿಣಾಮಗಳನ್ನು ಕುರಿತು ವಿವೇಚಿಸಿದೆವು. ಆದರೆ ಬೇರೊಂದು ದಿಕ್ಕಿನಲ್ಲಿ ಇದರಿಂದ ಅನುಕೂಲವೂ ಲಾಭದಾಯಕವೂ ಆದ ಪರಿಣಾಮವೂ ಆಯಿತು : ಯೂರೋಪಿನಲ್ಲಿ ಹತ್ತೊಂಬತ್ತನೆಯ ಶತಮಾನದ ಚಾರಿತ್ರಿಕ ವಿದ್ವತ್ತು, ಸಂಗತಿಗಳನ್ನು ತಪ್ಪಿಲ್ಲದೆ ಮತ್ತು ಖಚಿತವಾಗಿ ತಿಳಿಯಪಡಿಸಬೇಕೆನ್ನುವ ಪ್ರಾಮಾಣಿಕವಾದ ಹೇಬಲದಿಂದ ಕೂಡಿತ್ತು. ಈ ಒಂದು ಕ್ರಮವನ್ನು ಭಾರತೀಯ ಇತಿಹಾಸ ಹಾಗೂ ಭಾರತೀಯ ವಿಚಾರಗಳ ಅಧ್ಯಯನಕ್ಕೂ ಅನ್ವಯಿಸಿ ನೋಡಬೇಕೆನ್ನುವ ಪ್ರವೃತ್ತಿಯು ಶ್ರದ್ಧಾವಂತರಾದ ಪಾಶ್ಚಾತ್ಯ ವಿದ್ವಾಂಸರಿಗೂ ವಿಚಾರವಂತರಿಗೂ ಉಂಟಾಯಿತು. ದೆಹಲಿಯಲ್ಲಿ ಸುಲ್ತಾನೀ ರಾಜ್ಯ ಸ್ಥಾಪನೆಯಾದಂದಿಗಿಂತ ಹಿಂದಿನ ಭಾರತೀಯ ಐತಿಹಾಸಿಕ ಸಂಗತಿಗಳೇನೆಂಬುದರ ಬಗೆಗೆ ಚರಿತ್ರಕಾರರಿಗೆ ಹೆಚ್ಚೇನೂ ತಿಳಿದಿರಲಿಲ್ಲ. ಏಕೆಂದರೆ, ಅದಕ್ಕೂ ಸಂಬಂಧಿಸಿದ ಶಾಸನಸ್ಥ ಹಾಗೂ ಇತರ ಮೂಲ ದಾಖಲೆಗಳನ್ನು ಸಂಶೋಧಿಸಿ ಅಧ್ಯಯನ ನಡೆದಿರಲಿಲ್ಲ. 1837ರಲ್ಲಿ ಮೊತ್ತಮೊದಲಿಗೆ ಜೇಮ್ಸ್ ಪ್ರಿನ್ಸೆಸ್ ಎಂಬ ವಿದ್ವಾಂಸನ ವಿಶೇಷ ತಾಳ್ಮೆಯ ಹಾಗೂ ಶ್ರಮದ ಪರಿಣಾಮವಾಗಿ ಅಶೋಕನ ಶಾಸನಗಳ ಲಿಪಿಯನ್ನೋದುವ ರಹಸ್ಯವನ್ನು ಕಂಡುಹಿಡಿಯುವ ಪ್ರಯತ್ನವು ಫಲಪ್ರದವಾದಾಗ, ಜಗತ್ತಿನ ಇತಿಹಾಸದಲ್ಲಿ ಆತನಂತೆ ಶ್ರೇಷ್ಠ ಹಾಗೂ ಪ್ರಖ್ಯಾತ ಚಕ್ರವರ್ತಿಯೊಬ್ಬನ ಜೀವನ ಮತ್ತು ಕೃತಿಗಳ ಸಂಗತಿ ಬೆಳಕಿಗೆ ಬರುವಂತಾಯಿತು. ಧಾನವಾಗಿ ಆದರೆ ದೃಢವಾಗಿ, ವಂದನೀಯರಾದ ಪಾಶ್ಚಾತ್ಯ ವಿದ್ವಾಂಸರ ಸಹಾಯದಿಂದ ಭಾರತದ

ಪೂರ್ವ ಚರಿತ್ರೆಯು ರಚಿತವಾಯಿತು. ಇದರಿಂದ ಭಾರತೀಯರು ಮೊತ್ತಮೊದಲಿಗೆ ತಮ್ಮ ಪೂರ್ವೇತಿಹಾಸದ ಮಹತ್ವವನ್ನು ಅರಿತರು; ಮತ್ತು ಬೌದ್ಧಿಕ ಹಾಗೂ ಆಧ್ಯಾತ್ಮಿಕ ಕ್ಷೇತ್ರಗಳಲ್ಲಿ ತಮ್ಮ ಹಿರಿಮೆಯನ್ನು ತಾವೇ ಅರಿತು ರೋಮಾಂಚ ಹೊಂದಿದರು. ಈ ಹತ್ತೊಂಬತ್ತನೆಯ ಶತಮಾನದ ಕಡೆಯಲ್ಲಿ ಮತ್ತು ಇಪ್ಪತ್ತನೆಯ ಆದಿಭಾಗದಲ್ಲಿ ನಡೆದ ಭಾರತೀಯ ವಿದ್ವತ್ತಿನ ಪುನರುಜ್ಜೀವನಕ್ಕಾಗಿ ಈ ತಿಳಿವಿಗೆ ನಾವು ತುಂಬ ಋಣಿಗಳಾಗಿದ್ದೇವೆ. ಈ ಬಗೆಯ ಮಾರ್ಗದರ್ಶಕ ಕಾರ್ಯವನ್ನು ಕೈಕೊಂಡ ಪಾಶ್ಚಾತ್ಯ ವಿದ್ವಾಂಸರಿಗೆ ಭಾರತೀಯರಾದ ನಾವು ಎಷ್ಟು ಕೃತಜ್ಞರಾದರೂ ಸಾಲದು. ಮೆಕೆನ್ಜಿ, ಫ್ಲೀಟ್, ವಿಲ್ಕ್ಸ್, ಸೀಗ್ಲರ್, ಸ್ಟೋಕ್ಸ್, ಮತ್ತು ರೈಸ್—ಇತ್ಯಾದಿ ಪಾಶ್ಚಾತ್ಯ ವಿದ್ವಾಂಸರು, ಚಾರಿತ್ರಿಕ ಅಧ್ಯಯನಕ್ಕೆ ಮಾತ್ರವಲ್ಲದೆ ಕರ್ಣಾಟಕದ ಸಾಹಿತ್ಯ ಹಾಗೂ ಭಾಷೆಗಳಿಗೂ ಅಮೂಲ್ಯವಾದ ಕೊಡುಗೆಗಳನ್ನು ನೀಡಿದ್ದಾರೆ.

ಬ್ರಿಟಿಷ್ ಆಡಳಿತವು ಭಾರತದಲ್ಲಿ ನೆಲೆಗೊಂಡದ್ದರಿಂದ, ಆದ ಪರಿಣಾಮಗಳಲ್ಲಿ, ಬಹುಶಃ ಅತ್ಯಂತ ಗಮನಾರ್ಹವಾದುದೆಂದರೆ, ಇಡೀ ಭಾರತವೇ ರಾಜಕೀಯವಾಗಿ ಒಂದಾದದ್ದು. ಹತ್ತೊಂಬತ್ತನೆ ಶತಮಾನದ ಮಧ್ಯಭಾಗದ ವೇಳೆಗೆ ಬ್ರಿಟಿಷರು ಇಡೀ ಭಾರತಕ್ಕೆ ಆಡಳಿತದ ಒಂದು ಏಕರೂಪತೆಯನ್ನು ತಂದು, ಆ ಮೂಲಕವೂ ಇದನ್ನು ಒಂದುಗೂಡಿಸಿದರು. ರೈಲ್ವೆ, ಟೆಲಿಗ್ರಾಫ್, ಮತ್ತು ಇತರ ಸೌಲಭ್ಯಗಳು, ಅದುವರೆಗೂ ಬೇರೆ ಬೇರೆಯೆಂಬಂತಿದ್ದ ಈ ದೇಶದ ವಿವಿಧ ಭಾಗಗಳ ನಡುವಣ ಅಂತರವನ್ನು ಕಡಮೆ ಮಾಡಿದವು. ರಾಜಮಹಾರಾಜರುಗಳಿಂದ ಆಳಲ್ಪಡುತ್ತಿದ್ದ ಭಾಗಗಳನ್ನೂ ಒಳಗೊಂಡು, ಇಡೀ ಭಾರತಾದ್ಯಂತ ಇಂಗ್ಲಿಷ್ ಆಡಳಿತಭಾಷೆಯಾಗಿ ಈ ದೇಶವನ್ನು ಒಂದುಗೂಡಿಸುವ ಸಾಧನವಾಯಿತು. ಅದು ಈ ದೇಶದ ಬೇರೆ ಬೇರೆಯ ಭಾಗಗಳ ವಿದ್ಯಾವಂತರನ್ನು ಒಂದು ಸಮಾನವಾದ ವಿಚಾರವೇದಿಕೆಯ ಮೇಲೆ ತಂದು ಭಾರತದ ಸುಶಿಕ್ಷಿತರೆಲ್ಲರ ನಡುವೆ ಉತ್ತಮವಾದ ಸಾಮರಸ್ಯವನ್ನು ಸಾಧಿಸಿತು. ತಕ್ಕಮಟ್ಟಿನ ಸಂಖ್ಯೆಯಲ್ಲಿ, ಭಾರತೀಯರೂ ಇಂಗ್ಲಿಷ್ ಭಾಷೆಯಲ್ಲಿ ಪ್ರವೀಣತೆಯನ್ನು ಪಡೆದುಕೊಂಡು, ಇಂಗ್ಲಿಷ್ ಸಾಹಿತ್ಯದಲ್ಲಿ ಮತ್ತು ಇಂಗ್ಲಿಷ್ ಅನುವಾದಗಳ ಮೂಲಕ ಬಂದ ಪಾಶ್ಚಾತ್ಯ ಸಾಹಿತ್ಯದಲ್ಲಿ, ಯಾವ ಯಾವುದು ಮಹತ್ತಾದುದೋ ಅದೆಲ್ಲವನ್ನೂ ಅರಿತು ಮೆಚ್ಚುವುದನ್ನು ಕಲಿತರು.

ಪಶ್ಚಿಮದ ತಿಳಿವಳಿಕೆಯನ್ನು ಮೈಗೂಡಿಸಿಕೊಂಡ ನಮ್ಮ ಜನ, ಬ್ರಿಟಿಷ್ ವಾಣಿಜ್ಯಾಸಕ್ತರಿಂದ ಸಾಕಷ್ಟು ತೊಂದರೆಗಳು ಬಂದರೂ, ವಿಸ್ತಾರವಾದ ಕೈಗಾರಿಕೋದ್ಯಮಗಳನ್ನು ಸ್ಥಾಪಿಸುವ ಸಾಹಸದಲ್ಲಿ ಪ್ರವೃತ್ತರಾದರು. ಇದರಿಂದಾಗಿ ಹಿಂದಿನಿಂದ ಬಂದ ಗ್ರಾಮ ಕೈಗಾರಿಕೆಗಳಿಗೆ ಧಕ್ಕೆಯುಂಟಾಯಿತು ; ಜನರು ಹೆಚ್ಚು ಹೆಚ್ಚಾಗಿ ನಗರವಾಸಿಗಳಾಗತೊಡಗಿದರು. ಗ್ರಾಮಗಳಲ್ಲಿ ಶತಮಾನಗಳಿಂದಲೂ ಸುಭದ್ರವಾಗಿದ್ದ ಸಾಂಪ್ರದಾಯಿಕವಾದ ಆರ್ಥಿಕ ವ್ಯವಸ್ಥೆಯು ಶಿಥಿಲವಾಗಿ, ಇಡೀ ಸಾಮಾಜಿಕ ಪದ್ಧತಿಯು ಬಿರುಕು ಬಿಟ್ಟು ಚೂರು ಚೂರಾಯಿತು. ನಾಗರಿಕತೆ ಮುಂದುವರಿದಂತೆ ಇದು ಇಂದಿಗೂ ನಡೆಯುತ್ತಲೇ ಇದೆ.

ವಿಸ್ತಾರವಾದ ಈ ಹಿನ್ನೆಲೆಯಿಂದ ನೋಡಿದರೆ, ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಪಾಶ್ಚಾತ್ಯ ಪ್ರಭಾವದಿಂದ ಕರ್ಣಾಟಕದಲ್ಲಿ ಮೊದಲಾದ ಈ ಬೌದ್ಧಿಕ ಹಾಗೂ ನೈತಿಕ ಕ್ಷೋಭೆಯು ಕನ್ನಡ ಜನತೆಯ ಜೀವನದಲ್ಲಿ ವಿಶೇಷವ್ಯಾಪಕವಾದ ಬದಲಾವಣೆಗಳನ್ನು ತಂದಿತೆಂದು ಹೇಳಬೇಕು. ಭಾರತದಲ್ಲಿ ಈಗ ಬೇರೂರುತ್ತಿರುವ, ನಮಗೆ ಪರಿಚಿತವಾಗಿರುವ ಈ ರೂಪದ ಪ್ರಜಾಪ್ರಭುತ್ವವು ನಿಸ್ಸಂದೇಹವಾಗಿಯೂ ನಾವು ಪರದೇಶದಿಂದ ಆಮದು ಮಾಡಿಕೊಂಡದ್ದೇ. ಆದರೆ ಅದನ್ನು ಆಧುನಿಕ ಆರ್ಥಿಕ ಹಾಗೂ ರಾಜಕೀಯ ಆವಶ್ಯಕತೆಗಳಿಗೆ ಅನುಸಾರವಾಗಿ, ಭಾರತೀಯ ಪರಿಸರದಲ್ಲಿ ಅಳವಡಿಸಿಕೊಳ್ಳುವ ಪ್ರಯತ್ನಗಳು ನಡೆಯುತ್ತಿವೆ. ಸಾಮಾಜಿಕ ಮತ್ತು ರಾಜಕೀಯ ಸಮಾನತೆಗಳು ಪ್ರಜಾಪ್ರಭುತ್ವದ ಅವಿಭಾಜ್ಯವಾದ ಅಂಗಗಳು. ಬಡವನಾಗಲಿ ಬಲ್ಲಿದನಾಗಲಿ, ರಾಜನಾಗಲಿ ರೈತನಾಗಲಿ, ಕಾನೂನಿನ ದೃಷ್ಟಿಯಲ್ಲಿ ಒಂದೇ

ಎಂಬ, ಒಬ್ಬನು ಇನ್ನೊಬ್ಬನ ಹಕ್ಕು ಬಾಧ್ಯತೆಗಳಿಗೆ ಧಕ್ಕೆ ತಾರದ ರೀತಿಯಲ್ಲಿ ನಡೆದುಕೊಳ್ಳುವ ವರೆಗೂ, ಪ್ರತಿಯೊಬ್ಬನೂ ತನಗೆ ತೋರಿದ ರೀತಿಯಲ್ಲಿ ಬದುಕುವುದು ಆತನ ಜನ್ಮಸಿದ್ಧ ಹಕ್ಕು ಎಂಬ, ರಾಷ್ಟ್ರದ ಅತ್ಯುನ್ನತ ಪದವಿಗೆ ಏರಲು ರಾಷ್ಟ್ರದ ಪ್ರತಿಯೊಬ್ಬ ಪ್ರಜೆಗೂ ಸಮಾನಾವಕಾಶಗಳು ತೆರೆದಿವೆ ಎಂಬ, ಇಂಥ ಭಾವ—ಭಾವನೆಗಳಲ್ಲವೂ—ಬ್ರಿಟಿಷರ ಆಡಳಿತ ಕಾಲದಲ್ಲಿ ಇವುಗಳ ಅನ್ವಯಕ್ಕೆ ಅವಕಾಶವಿಲ್ಲದೆ ಹೋಗಿದ್ದರೂ—ಭಾರತಕ್ಕೆ ಬಂದದ್ದು ಪಾಶ್ಚಾತ್ಯ ಸಂಪರ್ಕದ ಪ್ರಭಾವದಿಂದಲೇ. ಹಾಗೆ ನೋಡಿದರೆ, ಭಾರತೀಯರು ಒಪ್ಪಿ ಅಳವಡಿಸಿಕೊಂಡಿರುವ ಭಾರತದ ಗಣರಾಜ್ಯದ ಸಂವಿಧಾನದ ಲಕ್ಷಣವಿಶೇಷಗಳು, ಬಹು ಮಟ್ಟಿಗೆ ನಮ್ಮ ಭಾರತೀಯ ನಾಯಕರು ಪಾಶ್ಚಾತ್ಯರಿಂದ ಪಡೆದ ಆಲೋಚನೆ ಹಾಗೂ ವಿಧಾನಗಳ ಪರಿಣಾಮಗಳೆಂದು ಧಾರಾಳವಾಗಿ ಹೇಳಬಹುದು.

ಮೂಲ ಲೇಖಕರು : ಜಿ. ಎಸ್. ಹಾಲಪ್ಪ
ಅನುವಾದಕರು : ಜಿ. ಎಸ್. ಶಿವರುದ್ರಪ್ಪ

# ಮತಧರ್ಮ ಮತ್ತು ತಾತ್ತ್ವಿಕ ಚಳವಳಿಗಳು

ಕಳೆದ ಶತಮಾನಗಳಂತೆಯೇ ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನಗಳಲ್ಲಿ ಕರ್ಣಾಟಕವು ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಮತ್ತು ಶಕ್ತಿ ವಿಶಿಷ್ಟಾದ್ವೈತ ವೇದಾಂತಗಳ ನೆಲೆಯಾಗಿದ್ದಿತು. ಶಂಕರ ಪ್ರತಿಪಾದಿತ ಅದ್ವೈತ ವೇದಾಂತವನ್ನು ಪ್ರಚಾರಮಾಡಲು ಶೃಂಗೇರಿಯ ಮಠವು ಮುಖ್ಯ ಕೇಂದ್ರವಾಗಿದೆ. ಆ ಪೀಠಾಧಿಪತಿಗಳಲ್ಲಿ ಕೆಲವರು ತಾತ್ತ್ವಿಕ ಪರಂಪರೆಯಲ್ಲಿ ಗಾಢವಾದ ಶ್ರದ್ಧಾಸಕ್ತಿಯುಳ್ಳವರೂ ಸಾಧುಸ್ವಭಾವದವರೂ ಉದ್ದಾಮ ಪಂಡಿತರೂ ಆಗಿದ್ದವರು. ವಿಶೇಷ ಪೂಜಾಉತ್ಸವ ಸಂದರ್ಭಗಳಲ್ಲಿ ಮಾತ್ರವಲ್ಲದೆ ಪ್ರತಿದಿನವೂ ಇಂದಿಗೂ ಶೃಂಗೇರಿ ಭಾರತದ ನಾನಾ ಭಾಗಗಳಿಂದ ಸಾವಿರಾರು ಭಕ್ತರನ್ನು ಆಕರ್ಷಿಸುತ್ತಿದೆ.

ಬೆಂಗಳೂರಿನಲ್ಲಿರುವ ಶಂಕರಮಠ ಮತ್ತು ಶಂಕರಾಚಾರ್ಯರ ಹೆಸರಿನಿಂದ ಕೂಡಿದ ಶಿವಗಂಗೆ, ಆವಣಿ ಮತ್ತು ಕೂಡ್ಲಿ ಮಠಗಳು ಆಚಾರ್ಯರ ಉಪದೇಶಗಳ ಅಭ್ಯಾಸ ಹಾಗೂ ತತ್ತ್ವ ಪ್ರಚಾರ ಕಾರ್ಯದಲ್ಲಿ ನಿರತವಾದ ಕರ್ಣಾಟಕದ ಇತರ ಕೇಂದ್ರಗಳು.

ಮೇಲುಕೋಟೆಯಲ್ಲಿ ಯತಿರಾಜಮಠ ಮತ್ತು ಮೈಸೂರುನಗರದಲ್ಲಿ ಪರಕಾಲ ಮಠಗಳನ್ನು ತನ್ನ ಕೇಂದ್ರಗಳನ್ನಾಗಿ ಮಾಡಿಕೊಂಡು ಬೆಳಗುತ್ತಿರುವ ರಾಮಾನುಜಾಚಾರ್ಯರಿಂದ ಪ್ರತಿಪಾದಿತವಾದ ವಿಶಿಷ್ಟಾದ್ವೈತ ದರ್ಶನಕ್ಕೂ ಕರ್ಣಾಟಕವು ಬೀಡಾಗುತ್ತ ಬಂದಿದೆ. ಶ್ರೀ ವೈಷ್ಣವಮತದ ತೆಂಗಲೈ ಸಂಪ್ರದಾಯಕ್ಕೆ ಮೇಲುಕೋಟೆಯಲ್ಲಿರುವ ಯತಿರಾಜ ಮಠವೂ, ಮೈಸೂರಿನಲ್ಲಿ ರಾಜಗುರುವಾಗಿರುವ ಪರಕಾಲಸ್ವಾಮಿ ಮಠವು ವಡಗಲೈ ಸಂಪ್ರದಾಯ ಪ್ರತಿಪಾದನೆಗೂ ಹೆಸರುವಾಸಿಯಾಗಿವೆ. ಶಿಲ್ಪಕಲೆಯ ಬೀಡಾದ ಬೇಲೂರಿನ ಚೆನ್ನಕೇಶವಸ್ವಾಮಿಯ ದೇವಾಲಯವು ಹೊಯ್ಸಳ ವಿಷ್ಣುವರ್ಧನನ ಆಳಿಕೆಗಾಲದ ವೈಷ್ಣವಮತದ ಮಹೋನ್ನತ ದಿನಗಳನ್ನು ಯಾತ್ರಿಕನ ಮನಸ್ಸಿಗೆ ನೆನಪುಕೊಡುತ್ತದೆ. ಅಂತೆಯೇ ಆಚಾರ್ಯ ರಾಮಾನುಜರು ಕರ್ಣಾಟಕಕ್ಕೆ ಬಂದಾಗ ನೆಲಸಿದ್ದರೆಂದು ಪ್ರಸಿದ್ಧವಾದ ಸಾಲಿಗ್ರಾಮ ಮತ್ತು ತೊಂಡನೂರು ಗ್ರಾಮಗಳು ಇಂದಿಗೂ ಶ್ರೀ ವೈಷ್ಣವರಿಗೆ ಪವಿತ್ರ ಯಾತ್ರಾಸ್ಥಳಗಳಾಗಿವೆ.

ದ್ವೈತಿಗಳು ಅಥವಾ ವೈಷ್ಣವ ಮತಾವಲಂಬಿಗಳಿಗೆ ಪವಿತ್ರ ಯಾತ್ರಾಸ್ಥಳವೆನಿಸಿದ ಉಡುಪಿ ತನ್ನ ಅಷ್ಟ ಮಠಗಳಿಂದ ಶ್ರೀಮನ್ಮಧ್ವಾಚಾರ್ಯರ ತತ್ತ್ವ ಮತ್ತು ಧರ್ಮಗಳನ್ನು ಪ್ರತಿಪಾದಿಸುವ ಕೇಂದ್ರವಾಗಿದೆ. ಇತ್ತೀಚೆಗೆ ಹರಿದಾಸ ಪರಂಪರೆಯು ಒಂದು ಚೈತನ್ಯವನ್ನು ಪಡೆಯುತ್ತಿರುವುದಲ್ಲದೆ ಪುರಂದರದಾಸ, ಕನಕದಾಸ ಮತ್ತಿತರ ದಾಸರುಗಳ ಸಾಹಿತ್ಯವನ್ನು ಹೊಸದೃಷ್ಟಿಯಿಂದ ನೋಡಿ ಕರ್ಣಾಟಕ ಭಕ್ತಿ ಸಾಹಿತ್ಯದ ನವೋದಯವನ್ನು ಸಾರುತ್ತಿದೆ. ಹೊಳೆನರಸೀಪುರ ಮತ್ತು ಹೊಸಪೇಟೆಗಳ ಉತ್ತರಾದಿ ಮಠಗಳು, ಸೋಸಲೆಯ ವ್ಯಾಸರಾಯ ಮಠ, ಹದಿನೇಳನೆಯ ಶತಮಾನದ ಅತ್ಯಂತ ಶ್ರೇಷ್ಠ ದಾರ್ಶನಿಕರೂ ಪರಮಾಚಾರ್ಯರೂ ಆದ ರಾಘವೇಂದ್ರ ಸ್ವಾಮಿಗಳ ಸ್ಮಾರಕಗಳೆಂದು ದೇಶಾದ್ಯಂತ ಕಟ್ಟಲ್ಪಟ್ಟಿರುವ ಅಸಂಖ್ಯಾತ ಬೃಂದಾವನಗಳೂ ನಂಜನಗೂಡಿನಲ್ಲಿರುವ ರಾಘವೇಂದ್ರಸ್ವಾಮಿಯ ಮಠವೂ ಮುಳಬಾಗಿಲಿನಲ್ಲಿರುವ ಶ್ರೀಪಾದರಾಯಸ್ವಾಮಿಯ ಮಠವೂ ಮಾಧ್ವಸಂಪ್ರದಾಯದ ಧರ್ಮತತ್ತ್ವಪ್ರಚಾರದ ಕೆಲಸಕ್ಕೆ ಮುಖ್ಯ ಕೇಂದ್ರಗಳಾಗಿವೆ. ಉಡುಪಿಯಲ್ಲಿನ ಮಠಗಳು ಅವರಲ್ಲಿಯೂ ಶ್ರೀಪೇಜಾವರ ಮತ್ತು

ಭಂಡಾರಕೇರಿ ಮಠಗಳ ಸ್ವಾಮಿಗಳು ನಡೆಸುತ್ತಿರುವ ಪಾಠಶಾಲೆಗಳು, ವಿದ್ಯಾರ್ಥಿ ನಿಲಯಗಳು, ಬೆಂಗಳೂರಿನಲ್ಲಿರುವ ಪೂರ್ಣ ಪ್ರಜ್ಞಾ ವಿದ್ಯಾಪೀಠ—ಇವು ಸ್ತುತ್ಯರ್ಹವಾದುವು.

ಬಸವಣ್ಣ, ಶಿವಶರಣರ ಉಪದೇಶ ಮತ್ತು ವಚನಸಾಹಿತ್ಯ ಪ್ರಚಾರಕ್ಕಾಗಿ ವೀರಶೈವಮತವು ಹುಮ್ಮಸ್ಸಿನಿಂದ ಮುಂದೆ ಸಾಗುತ್ತಿದೆ. ಹೊಸಗ್ರಂಥಗಳ ರಚನೆಯಾಗಿ ಅದರ ವಿಪುಲ ಸಾಹಿತ್ಯ ಬೆಳೆಯುತ್ತಿದೆ. ಬಸವ ಕಲ್ಯಾಣ, ಕೂಡಲ ಸಂಗಮ ಮತ್ತು ಕರ್ನಾಟಕ ಪರ್ಯಂತ ಬಸವೇಶ ರರ ಎಂಟನೆಯ ಶತಮಾನೋತ್ಸವ ಸಮಾರಂಭಗಳೂ ಕನ್ನಡ ಮತ್ತಿತರ ಭಾಷೆಗಳಲ್ಲಿ ಬಸವಸಾಹಿತ್ಯದ ಭಾಷಾಂತರಗಳೂ ಕರ್ನಾಟಕದ ಸಮಾಜಸುಧಾರಕರೂ ಸಂತರೂ ಆದ ಬಸವೇಶ್ವರರ ಬೋಧೆಯಲ್ಲಿ ಹೊಸ ಹುರುಪನ್ನು ತಂದಿವೆ. ಚಿತ್ರದುರ್ಗ, ಬಾಳೆಹೊನ್ನೂರು, ಸುತ್ತೂರು, ಸಿದ್ಧಗಂಗೆ ಮತ್ತು ಕ್ರಿ. ಶ. 1909ರಲ್ಲಿ ಬಾದಾಮಿಯಲ್ಲಿ ಹಾನಗಲ್ ಕುಮಾರ ಸ್ವಾಮಿಯವರಿಂದ ಸ್ಥಾಪಿತವಾದ ಶಿವಯೋಗ ಮಂದಿರ ಮತ್ತು ಧಾರವಾಡದಲ್ಲಿರುವ ವೀರಶೈವಮಠಗಳು ವಿದ್ಯಾಪ್ರಚಾರ ಕೇಂದ್ರಗಳಾಗಿವೆ. ಶ್ರೀಮಂತ ಶಿಷ್ಯಕೋಟಿಗಳ ಸಹಕಾರದಿಂದ ಮೇಲಿನ ಮಠಗಳ ಜ್ಞಾನಿಗಳಾದ ಮಠಾಧಿಪತಿಗಳು ಅನೇಕ ವಿದ್ಯಾಲಯಗಳನ್ನೂ ವಿದ್ಯಾರ್ಥಿ ನಿಲಯಗಳನ್ನೂ ಶಾಲಾ ಕಾಲೇಜುಗಳನ್ನೂ ಆರಂಭಿಸಿ ತಮ್ಮ ಜನಾಂಗ ಮತ್ತಿತರ ಸಾರ್ವತ್ರಿಕರ ನೈತಿಕ ಹಾಗೂ ಬೌದ್ಧಿಕ ಪ್ರಗತಿಗೆ ಶ್ರಮಿಸುತ್ತಿದ್ದಾರೆ.

ಜೈನ ಮತವನ್ನು ಕುರಿತು ಹೇಳುವುದಾದರೆ—ಕರ್ನಾಟಕದಲ್ಲಿರುವ ಶ್ರವಣಬೆಳಗೊಳ, ಶಿವಮೊಗ್ಗ ಜಿಲ್ಲೆಯ ಹೊಂಬುಚ್ಚ ಯಾತ್ರಾಸ್ಥಳಗಳು ಸಾವಿರಾರು ಯಾತ್ರಿಕರನ್ನು ಪ್ರತಿವರ್ಷವೂ ಭಾರತದ ಎಲ್ಲಾ ಭಾಗಗಳಿಂದಲೂ ಆಕರ್ಷಿಸುತ್ತಿವೆ. ಗೊಮ್ಮಟನ ಮಸ್ತಕಾಭಿಷೇಕ ಉತ್ಸವ ಸಂದರ್ಭದಲ್ಲಿ ಲಕ್ಷಗಟ್ಟಲೆ ಜನರು ಸೇರುತ್ತಾರೆ. ಚಂದ್ರಗಿರಿಯ ಶಿಖರದ ಮೇಲಿರುವ ಶಾಂತಜಿನಮೂರ್ತಿ ಗೊಮ್ಮಟನು ಸದಾ ಸಕಲ ಮಾನವರಿಗೂ ಕಲ್ಯಾಣ ಕೋರುವಂತಿರುವನು. ಮುಖ್ಯವಾಗಿ ಬೇಲೂರು ಹಳೇಬೀಡು ಸ್ಥಳಗಳಲ್ಲಿ ಕೇಂದ್ರೀಕೃತವಾಗಿದ್ದರೂ ದೇಶಾದ್ಯಂತ ಅಧಿಕ ಸಂಖ್ಯೆಯಲ್ಲಿ ತನ್ನ ಅನುಯಾಯಿಗಳನ್ನು ಹೊಂದಿ ಜೈನಮತವು ಕರ್ನಾಟಕದಲ್ಲಿ ಬಹಳ ಅಭ್ಯುದಯ ಸ್ಥಿತಿಯಲ್ಲಿದೆ. ತಮ್ಮ ಮತ ಧರ್ಮತತ್ವಗಳನ್ನು ಪರಿಪಾಲಿಸಿಕೊಂಡು ಜೈನರು ಇತರ ಮತಾವಲಂಬಿಗಳೊಡನೆ ಸ್ನೇಹ ಸೌಹಾರ್ದದಿಂದ ಕರ್ನಾಟಕ ಮತಧರ್ಮಕ್ಕೆ ವಿಶೇಷ ಸೇವೆ ಸಲ್ಲಿಸುತ್ತಿದ್ದಾರೆ. ಧರ್ಮಸ್ಥಳದ ಮಂಜಯ್ಯ ಹೆಗ್ಗಡೆಯವರು ‹ ನಡಾವಳಿ › ಪದ್ಧತಿಯನ್ನು ಪುನರುದ್ಧಾರಗೊಳಿಸಿ ಕನ್ನಡದಲ್ಲಿ ಅನೇಕ ಜೈನಗ್ರಂಥಗಳ ಪ್ರಕಟನಕ್ಕೆ ಕಾರಣರಾಗಿದ್ದಾರೆ. ಜೈನಧರ್ಮ ಸಮಾಜ, ಮಹಾವೀರ ಸಂಸ್ಥೆ, ಜೈನಧರ್ಮಪ್ರಚಾರ ಪರಿಷತ್ ಮತ್ತು ಅಣುವ್ರತ ಸಮಿತಿಗಳು ಶ್ಲಾಘನೀಯ ಕೆಲಸ ಮಾಡುವ ಸಂಸ್ಥೆಗಳಾಗಿವೆ.

ಅಲ್ಪ ಸಂಖ್ಯಾನುಯಾಯಿಗಳನ್ನೊಳಗೊಂಡಿದ್ದರೂ ಬೌದ್ಧಮತದಲ್ಲಿ ಒಂದು ಹೊಸ ಆಸಕ್ತಿಯ ಎಚ್ಚರ ಮೂಡುತ್ತಿದೆ. ಜನಪ್ರಿಯ ಸಾಹಿತ್ಯದ್ವಮೂಲಕ ಪ್ರಚಾರ ಮಾಡುವುದಲ್ಲದೆ ಪ್ರಾರ್ಥನಾಶಾಲೆಗಳನ್ನೊಳಗೊಂಡು ಒಳ್ಳೆಯ ಸಮಾಜ ಸೇವಾ ಕಾರ್ಯದಲ್ಲಿ ತತ್ಪರವಾದ ಮಹಾಬೋಧಿ ಸಂಸ್ಥೆಯೊಂದು ಬೆಂಗಳೂರು ನಗರದಲ್ಲಿದೆ.

ಇಂದಿಗೂ ಬಹು ಪ್ರಭಾವಶಾಲಿ ಧರ್ಮವೆನಿಸಿದ ಇಸ್ಲಾಮ್‌ಮತದ ಅನುಯಾಯಿಗಳು ಅನ್ಯಮತಸ್ಥರೊಡನೆ ಸ್ನೇಹಿತರಾಗಿ ಬಾಳುತ್ತಿದ್ದಾರೆ. ಎಲ್ಲ ಮತಸ್ಥರೂ ವಿಶೇಷ ಸಂಖ್ಯೆಯಲ್ಲಿ ಭಾಗವಹಿಸುವ ಇಸ್ಲಾಮ್‌ಮತಸ್ಥಾಪಕ ಪೈಗಂಬರರ ದಿನಾಚರಣೆಯು ಎಲ್ಲ ಸ್ಥಳಗಳಲ್ಲಿಯೂ ಆಚರಿಸಲ್ಪಡುತ್ತಿದೆ. ಕರ್ನಾಟಕದ ಅರಸುಗಳ ಕಾಲದಲ್ಲಿ ಹೆಚ್ಚು ರೂಢಿಯಲ್ಲಿದ್ದ ಇಸ್ಲಾಂಮತವು ತನ್ನ ಮತಾಚಾರಗಳಲ್ಲಿ ಹೆಚ್ಚು ಸ್ವಾತಂತ್ರ್ಯವನ್ನು ಹೊಂದಿದೆ. ಅರಾಬಿಕ್ ಭಾಷೆಯಲ್ಲಿನಷ್ಟೇ ಕನ್ನಡದಲ್ಲಿಯೂ ಪರಿಶ್ರಮ ಪಡೆದಿರುವ

ಮೌಲ್ವಿಗಳು ಕೊರಾನ್ ಮತ್ತಿತರ ಗ್ರಂಥಗಳನ್ನು ಭಾಷಾಂತರ ಮಾಡಿರುವುದು ಕರ್ಣಾಟಕದಲ್ಲಿ ಈ ಶತಮಾನದ ಗಮನಾರ್ಹ ಅಂಶ.

ರಾಮಕೃಷ್ಣಪರಮಹಂಸರ ಮತ್ತು ಮಹಾತ್ಮಾ ಗಾಂಧಿಯವರ 'ಸರ್ವಧರ್ಮ ಸಮಭಾವ'ವೂ ವಿವಿಧಮತಗಳಲ್ಲಿ ವಿಶಾಲ ಮನೋಭಾವ ಮತ್ತು ಅನ್ಯೋನ್ಯ ಗೌರವಗಳನ್ನುಂಟುಮಾಡಲು ಸಾಧಕಗಳಾಗಿವೆ. ಸತ್ಯ ಸಂಶೋಧಕರ ಸಂಸ್ಥೆ (F.F.T.) ಕರ್ಣಾಟಕದಲ್ಲಿ ನಾನಾಮತಧರ್ಮಸ್ಥರಲ್ಲಿ ಏಕತೆ ಮತ್ತು ಪ್ರೀತಿ ವಿಶ್ವಾಸಗಳು ಬೆಳೆಯಲು ಬೆಂಗಳೂರು ನಗರದಲ್ಲಿ ಒಂದು ಕೇಂದ್ರ ಕಛೇರಿಯ ಮೂಲಕ ಕೆಲಸಮಾಡುತ್ತಿದೆ.

ಹತ್ತೊಂಬತ್ತನೆಯ ಶತಮಾನದಲ್ಲಿ ಭಾರತದಲ್ಲಿ ಉದ್ಭವವಾದ ಧಾರ್ಮಿಕ ಮತ್ತು ಸಾಮಾಜಿಕ ಸುಧಾರಣಾಚಳವಳಿಗಳು ಜನಸಾಮಾನ್ಯರ ಧಾರ್ಮಿಕ ಜೀವನದ ಮೇಲೆ ಸಾಕಷ್ಟು ಪ್ರಭಾವವನ್ನು ಬೀರಿದುವು. ಬ್ರಹ್ಮಸಮಾಜದ ಒಂದು ಶಾಖೆ ಬೆಂಗಳೂರಿನಲ್ಲಿದೆ. ಆರಂಭದಶೆಯಲ್ಲಿ 'ಬ್ರಾಹ್ಮೋ' ಧರ್ಮದ ರೀತಿಯಲ್ಲಿ ಅಂತರ್ಜಾತೀಯ ವಿವಾಹವೇ ಮುಂತಾದ ಸಾಮಾಜಿಕ ಸುಧಾರಣೆಗಳಿಗೆ ಅದು ನೆಲೆಯಾಗಿದ್ದಿತು. 'ಬ್ರಾಹ್ಮೋಯಿಸಂ' ಅಥವಾ ಬ್ರಹ್ಮ ಸಮಾಜ ಇಸ್ಲಾಮ್ ಮತ್ತು ಕ್ರೈಸ್ತ ಮತಗಳಂತೆ ಸರ್ವಧರ್ಮ ಪ್ರಿಯತೆಗಳಿಂದ ಕೂಡಿದ ಉಪನಿಷತ್ಪ್ರೇರಿತ ಸೇಶ್ವರ ಮತ. ಅದು ವಿಗ್ರಹಾರಾಧನೆ, ವೈದಿಕ ಕರ್ಮವಿಧಿಗಳು ಮತ್ತು ಜಾತಿ ಭೇದಗಳನ್ನು ಒಪ್ಪುವುದಿಲ್ಲ.

ಬೆಂಗಳೂರು, ಮೈಸೂರು ಮತ್ತು ಮಂಗಳೂರಿನಲ್ಲಿ ಶಾಖೆಗಳನ್ನೊಳಗೊಂಡ ಕರ್ಣಾಟಕದಲ್ಲಿ ರೂಢಿಯಲ್ಲಿರುವ ಮತ್ತೊಂದು ಚಳವಳಿಯೆಂದರೆ ಆರ್ಯ ಸಮಾಜ. ಬ್ರಹ್ಮಸಮಾಜದಂತೆ ವಿಗ್ರಹಾರಾಧನೆ ಮತ್ತು ಜಾತಿಭೇದಗಳನ್ನು ಇದೂ ಒಪ್ಪುವುದಿಲ್ಲ. "ವೇದಗಳಿಗೆ ಹಿಂತಿರುಗೋಣ" ಎಂಬುದು ಇದರ ಮುಖ್ಯಗುರಿ. ಮತಪ್ರಚಾರಕ ಸಂಸ್ಥೆಗಳಿಂದ ತನ್ನ ತತ್ವಪ್ರಚಾರ ಕಾರ್ಯವನ್ನು ಇದು ನಡೆಸುತ್ತಿದೆ. ಸ್ವಾಮಿ ದಯಾನಂದರವರ 'ಸತ್ಯಾರ್ಥ ಪ್ರಕಾಶಿಕೆ'ಯನ್ನು ಕನ್ನಡಕ್ಕೆ ಅನುವಾದ ಮಾಡಿದೆ. 'ಶ್ರದ್ಧಾನಂದ ಭವನ' ಎಂಬ ಹೆಸರಿನ ಇದರ ಶಾಖೆ ಬೆಂಗಳೂರಿನಲ್ಲಿದೆ.

ಬ್ರಹ್ಮಸಮಾಜ ಮತ್ತು ಆರ್ಯಸಮಾಜಗಳಂತೆ ಹಿಂದೂ ಧರ್ಮದಿಂದ ತೀವ್ರ ಬದಲಾವಣೆ ಹೊಂದಲಿಚ್ಛಿಸದ ಎರಡು ಧಾರ್ಮಿಕ ಚಳವಳಿಗಳಿವೆ. ಅವುಗಳಲ್ಲಿ ಒಂದು ಅನ್ಯದೇಶದಲ್ಲಿ ಹುಟ್ಟಿ ಭಾರತದಲ್ಲಿ ಪೋಷಣೆ ಪಡೆದ ಥಿಯೋಸಾಫಿಕಲ್ ಸೊಸೈಟಿ. ರಷ್ಯಾದೇಶ ನಿವಾಸಿನಿ ಮೇಡಂ ಬ್ಲವಟ್‌ಸ್ಕಿ ಅದರ ಸಂಸ್ಥಾಪಕಳು. ಕರ್ಣಾಟಕದಲ್ಲಿ ಅದರ ಅನುಯಾಯಿಗಳು ಅಧಿಕ ಸಂಖ್ಯೆಯಲ್ಲಿದ್ದಾರೆ. ಭಾರತದಲ್ಲಿ ಅದರ ಬೆಳವಣಿಗೆಗಾಗಿ ಶ್ರಮಿಸಿದ ಡಾಕ್ಟರ್ ಆನಿ ಬೆಸಂಟ್ ನಮ್ಮ ನಾಡಿನ ಜನರೊಡನೆ ಹಾಗೂ ಅವರ ತಾತ್ವಿಕ, ಧಾರ್ಮಿಕ, ಸಾಮಾಜಿಕ ಮತ್ತು ರಾಜಕೀಯ ಜೀವನದಲ್ಲಿ ಬಹಳ ಒಂದುಗೂಡಿ ಮೈಸೂರು ಬೆಂಗಳೂರು ನಗರಗಳಿಗೆ ಭೇಟಿಕೊಟ್ಟು ಅಲ್ಲಿ ಥಿಯೋಸಾಫಿಕಲ್ ಸೊಸೈಟಿಯ ಶಾಖೆಯನ್ನು ಸ್ಥಾಪಿಸಲು ಕಾರಣರಾದರು. ಕರ್ಣಾಟಕದ ವಿವಿಧ ಧರ್ಮಗಳ ಅನುಯಾಯಿಗಳಲ್ಲಿ ಮೈತ್ರೀಭಾವವನ್ನು ಬೆಳಸಿ ಅವುಗಳಲ್ಲಿಯ ಪರಸ್ಪರ ಸಾಮ್ಯವನ್ನು ಅಧ್ಯಯನಮಾಡಲು ಈ ಸಂಸ್ಥೆಗಳು ಸಹಾಯಕವಾಗಿವೆ. ವಿದ್ಯಾವಂತರಾದ ಕನ್ನಡಿಗರಲ್ಲಿ ಪಾರಮಾರ್ಥಿಕ ಭಾವನೆಗಳು ಪ್ರಚಾರವಾಗಲು ಬಹಳ ದಿನದಿಂದಲೂ 'ಸುಪಂಥ' ಎಂಬ ಒಂದು ಕನ್ನಡ ಪತ್ರಿಕೆ ಪ್ರಚಾರದಲ್ಲಿದೆ. ಪ್ರಾಚೀನ ಪ್ರಜ್ಞಾವಲಂಬಿಯಾದುದರಿಂದ ಥಿಯೋಸಾಫಿಕಲ್ ಸಂಸ್ಥೆಯು ಸಂಸ್ಕೃತ ಭಾಷೆ ಮತ್ತು ಪ್ರಾಚ್ಯ ಜ್ಞಾನಾರ್ಜನೆಗಳ ವೇದಿಕೆಯ ತಳಹದಿಯಂತಿದೆ.

ಥಿಯೋಸಾಫಿಕಲ್ ಸೊಸೈಟಿಯಲ್ಲದೆ ಶ್ರೀ ಬಿ.ಪಿ. ವಾಡಿಯಾ ಅವರಿಂದ ಸ್ಥಾಪಿತವಾದ ಒಂದು ಥಿಯೋಸಾಫಿಕಲ್ ಲಾಡ್ಜ (ನಿವಾಸ) ಬೆಂಗಳೂರಿನಲ್ಲಿದೆ.

ಚಾರಿತ್ರಿಕ ಮತಧರ್ಮಗಳ ಮೂಲತತ್ವಗಳಿಂದ ಯಾರನ್ನೂ ದೂರ ಎಳೆಯದೆ ಜನಾನುರಾಗಕ್ಕೆ ಪಾತ್ರವಾಗಿ ಎಲ್ಲ ಮತಗಳ ವಿಚಾರದಲ್ಲಿಯೂ ಉದಾರ ಮನೋಭಾವವನ್ನು ಬೆಳೆಸಲು ಸಹಾಯಕವಾದ ಮತ್ತೊಂದು ಸಂಸ್ಥೆಯೆಂದರೆ ರಾಮಕೃಷ್ಣವಿವೇಕಾನಂದರ ಮತಧರ್ಮ ಸಂಸ್ಥೆ. ಕ್ರಿ.ಶ. 1893 ರಲ್ಲಿ ಚಿಕಾಗೋವಿನಲ್ಲಿ ನಡೆದ ವಿಶ್ವಧರ್ಮ ಸಮ್ಮೇಳನದಲ್ಲಿ ಭಾಗವಹಿಸಲು ಹೋಗುವ ಮುನ್ನ ಸ್ವಾಮಿ ವಿವೇಕಾನಂದರು ಕನ್ನಡನಾಡಿಗೆ ಬಂದಂದಿನಿಂದ ಈ ಧರ್ಮ ಪ್ರಸಾರ ಜನರಲ್ಲಿ ಹರಡಿ ಕರ್ಣಾಟಕದಲ್ಲಿ ಬೇರೂರಿದೆ. ಬೆಂಗಳೂರು, ಮೈಸೂರು, ಮಂಗಳೂರು, ಕೊಡಗಿನ ಪೊನ್ನಂಪೇಟೆ—ಮುಂತಾದ ಸ್ಥಳಗಳಲ್ಲಿ ರಾಮಕೃಷ್ಣಾಶ್ರಮಗಳು ಸ್ಥಾಪಿಸಲ್ಪಟ್ಟಿವೆ. ಅವುಗಳ ಮೂಲಕ ರಾಮಕೃಷ್ಣ ವಿವೇಕಾನಂದರುಗಳ ತತ್ವಗಳು ಕನ್ನಡಭಾಷೆಗೆ ಭಾಷಾಂತರವಾಗಿ ಜನಾನುರಾಗಕ್ಕೆ ಪಾತ್ರವಾಗಿವೆ. ಸ್ವಾಮಿ ಪರಮಹಂಸ, ಮಾತೆ ಶಾರದಾದೇವಿ ಮತ್ತು ವಿವೇಕಾನಂದರುಗಳ ಜನ್ಮದಿನೋತ್ಸವಗಳು ಅಸಂಖ್ಯಾತ ಜನರನ್ನು ಆಕರ್ಷಿಸುವ ಸಂದರ್ಭಗಳು. ಉಪನಿಷತ್ತು, ಗೀತೆ ಮತ್ತು ಬ್ರಹ್ಮಸೂತ್ರ ಮುಂತಾದ ವೇದಾಂತ ಭಾಗದ ಮುಖ್ಯಗ್ರಂಥಗಳನ್ನೂ ವಿವಿಧಮತಗಳ ಸ್ತೋತ್ರಗೀತೆಗಳನ್ನೂ ಕನ್ನಡಕ್ಕೆ ಭಾಷಾಂತರಿಸುವುದರಲ್ಲಿ ಮೈಸೂರು ಮತ್ತು ಮಂಗಳೂರಿನ ಮಠಗಳು ಬಹಳ ಆಸಕ್ತಿವಹಿಸಿ ಕೆಲಸಮಾಡುತ್ತಿವೆ. ವಿಜ್ಞಾನ ಮತ್ತು ಆಧ್ಯಾತ್ಮಿಕ ವಿದ್ಯೆಗಳೆರಡರ ಸಂಯಮ ಸಾಧಿಸುವ ಉದ್ದೇಶವುಳ್ಳ ಅನೇಕ ವಿದ್ಯಾಸಂಸ್ಥೆಗಳನ್ನು ರಾಮಕೃಷ್ಣ ಸಂಸ್ಥೆಯು ಕರ್ಣಾಟಕದಲ್ಲಿ ನಡೆಸುತ್ತಿದೆ.

ಇತ್ತೀಚೆಗೆ ಶ್ರೀ ಅರವಿಂದರ ತತ್ವಗಳೂ ಹೆಚ್ಚು ಪ್ರಭಾವವನ್ನು ಬೀರಲಾರಂಭಿಸಿವೆ. ಕರ್ಣಾಟಕದ ಹಲವೆಡೆಗಳಲ್ಲಿ ಶ್ರೀ ಅರವಿಂದ ಗೋಷ್ಠಿಗಳು ಪ್ರಾರಂಭವಾಗಿವೆ. ನಾಡಿನ ಪ್ರಮುಖ ಕವಿಗಳು ಮತ್ತು ಬರವಣಿಗೆಗಾರರ ಕೃತಿಗಳು ಶ್ರೀ ಅರವಿಂದರ ತಾತ್ತ್ವಿಕ ಮತ್ತು ಧಾರ್ಮಿಕ ಭಾವನೆಗಳನ್ನು ಪ್ರತಿ ಬಿಂಬಿಸುತ್ತಿವೆ.

ಬೆಂಗಳೂರಿನಂತಹ ಹಲವಾರು ದೊಡ್ಡನಗರಗಳಲ್ಲಿ ದಿನಂಪ್ರತಿ ನಡೆಯುವ ಭಾಷಣಮಾಲಿಕೆಗಳು ಜನರಲ್ಲಿ ಆಧ್ಯಾತ್ಮಿಕ ಮತ್ತು ತಾತ್ತ್ವಿಕ ವಿಷಯಗಳಲ್ಲಿ ಮೂಡಿರುವ ಆದರಾಸಕ್ತಿಗಳ ಒಂದು ಕುರುಹು. ರಾಮೋತ್ಸವ, ಗಣಪತಿಯ ಉತ್ಸವ, ಗಾಂಧೀ ಜಯಂತಿ ಮತ್ತು ಇತರ ಮತಸ್ಥಾಪಕರುಗಳ ಮತ್ತು ಸಂತರ ಜನ್ಮದಿನೋತ್ಸವ ಸಮಾರಂಭಗಳು ಜನಪ್ರಿಯವಾಗುತ್ತಿರುವುದು ಸರ್ವರಿಗೂ ತಿಳಿದ ವಿಷಯಂ ವಾಗಿದೆ.

ಶ್ರೀರಮಣ ಮಹರ್ಷಿ, ಶ್ರೀ ಬ್ರಹ್ಮ ಚೈತನ್ಯ, ಕಾಞಂಗಾಡಿನ ಶ್ರೀರಾಮದಾಸರು, ಅಗಡಿಯ ಶ್ರೀನಾರಾಯಣ ಭಗವಾನ್, ನಿಂಬಾಲಿನ ಆರ್. ಟಿ. ರ‍್ಯಾನಡೆ, ಕೇರಳದ ನಾರಾಯಣಗುರು, ಶ್ರೀ ಸಾಯಿಬಾಬ, ಪುಟ್ಟಪರ್ತಿಯ ಶ್ರೀ ಬಾಬ, ಶ್ರೀ ಬಾಲಯೋಗಿ—ಮುಂತಾದ ಹಲವಾರು ಮಹಾಶಯರು ಗಳಿಂದ ಸ್ಥಾಪಿಸಲ್ಪಟ್ಟ ಅನೇಕ ಧಾರ್ಮಿಕ ಚಳವಳಿಗಳಿಗೆ ಸೇರಿದ ಸಣ್ಣಪುಟ್ಟ ಗುಂಪುಗಳನ್ನು ಅಲ್ಲಲ್ಲಿ ಕಾಣಬಹುದು. ವಿವಿಧ ಮತಾಚಾರ್ಯರುಗಳು ತಮ್ಮ ತಮ್ಮ ಧರ್ಮದ ವಿಚಾರಗಳಲ್ಲಿ ಭಾಷಣಕೊಡಲು ಮುಖ್ಯನಗರಗಳಿಗೆ ಭೇಟಿಕೊಟ್ಟಾಗ ಹುಮ್ಮಸ್ಸಿನಿಂದ ಜನರು ಹೆಚ್ಚಿನ ಸಂಖ್ಯೆಯಲ್ಲಿ ಸೇರುತ್ತಾರೆ. ಇವೆಲ್ಲವೂ ಜನಸಾಮಾನ್ಯರಲ್ಲಿ ಆಧ್ಯಾತ್ಮಿಕ ಮತ್ತು ಧಾರ್ಮಿಕ ವಿಚಾರದಲ್ಲಿ ಹುಟ್ಟಿರುವ ನವಚೈತನ್ಯದ ಚಿಹ್ನೆಗಳು. ಅಲ್ಲದೆ ಅನೇಕ ವರುಷಗಳಿಂದ ಉದಾಸೀನತೆಯಿಂದ ಬಿಡಲ್ಪಟ್ಟಿದ ಅನೇಕ ದೇವಾಲಯಗಳು

ಪುನಃ ಭಕ್ತಾದಿಗಳಿಂದ ತುಂಬಿ ಸಮಾಜ ಸುಧಾರಣಾ ಕೇಂದ್ರಗಳಾಗಲು ಸಹಾಯಕವಾಗಿವೆ. ಹೃಷೀಕೇಶದ ಶಿವಾನಂದಸ್ವಾಮಿಯವರ ಪ್ರೇರಣೆಯಿಂದ ಆಧ್ಯಾತ್ಮ ಜೀವನ ಕಾರ್ಯಾಲಯಗಳು ಕರ್ಣಾಟಕದ ಕೆಲವು ಮುಖ್ಯ ನಗರಗಳಲ್ಲಿ ಏರ್ಪಟ್ಟು ಭಜನೆ, ಕೀರ್ತನೆ, ಧಾರ್ಮಿಕ ಭಾಷಣ ಮತ್ತು ಗೀತೋಪನಿಷತ್ತುಗಳ ವ್ಯಾಸಂಗಕ್ಕಾಗಿ ಚರ್ಚಾಕೂಟಗಳನ್ನೂ ಏರ್ಪಡಿಸಿವೆ.

ಇಪ್ಪತ್ತನೆಯ ಶತಮಾನದ ಆದಿಭಾಗದ ಮತಧರ್ಮ ಚರಿತ್ರೆಯಲ್ಲಿ ಹಿಂದೂ ಧರ್ಮವನ್ನು ಪುನರುಜ್ಜೀವನಗೊಳಿಸಿ ಅದರ ಪ್ರಮುಖ ಗುಣವಾದ ಸರ್ವಧರ್ಮ ಸಮತಾಭಾವವನ್ನು ಬೆಳಗುವುದರಲ್ಲಿ ಗಾಂಧಿಜೀಯವರ ಜೀವನ ಆದರ್ಶಪ್ರಾಯವಾಗಿತ್ತು. ' ಎಲ್ಲ ಮತಗಳೂ ನನ್ನವು ' ಎಂಬುದು ಗಾಂಧಿಜೀಯವರ ಅಭಿಪ್ರಾಯವಾಗಿದ್ದಿತು. ಸ್ವದೇಶೀಯ ಚಳವಳಿಗಳ ಪ್ರಾರಂಭದಲ್ಲಿ ಅನೇಕ ವಿಚಾರಪೂರಕ ಗ್ರಂಥ ಕರ್ತೃವಾದ ಬಾಲಗಂಗಾಧರ ತಿಲಕರವರ ' ಗೀತಾ ರಹಸ್ಯ 'ದ ಕನ್ನಡ ಭಾಷಾಂತರವು ಜನರಿಗೆ ಬಹು ಜ್ಞಾನಬೋಧಕವಾಗಿದೆ. ಕೇವಲ ರಾಜಕೀಯದ ಚಟುವಟಿಕೆಗಳಲ್ಲಲ್ಲದೆ, ಧಾರ್ಮಿಕ ದೇವರ ವಿಚಾರದಲ್ಲಿ ಹಾಗೂ ಜೀವನದ ಎಲ್ಲ ರಂಗದಲ್ಲಿಯೂ ಅಚಲವಾದ ಮತ್ತು ಅಳಿಯದ ನಂಬಿಕೆಯಿದ್ದ ಗಾಂಧಿಜೀಯವರ ನಾಯಕತ್ವವು ಕರ್ಣಾಟಕದಲ್ಲಿ ಪರಕೀಯರ ಆಡಳಿತವನ್ನು ತಪ್ಪಿಸಿ ನಾಡಿಗೆ ಸ್ವಾತಂತ್ರ್ಯವನ್ನು ಗಳಿಸಲು ಹೃತ್ಪೂರ್ವಕವಾಗಿ ಸಂಕಲ್ಪಮಾಡಿ ಚಳವಳಿಗಿಳಿದಿದ್ದ ಕನ್ನಡಿಗರ ಮನಸ್ಸಿನ ಮೇಲೆ ವಿಶೇಷ ಪರಿಣಾಮವನ್ನುಂಟುಮಾಡಿತು. ಅಲ್ಲದೆ ಕರ್ಣಾಟಕದ ವಿವಿಧ ಮತಗಳ ಧರ್ಮಾವಲಂಬಿಗಳಲ್ಲಿ ಸ್ನೇಹ, ಸೌಹಾರ್ದ ಭಾವಗಳನ್ನು ಬೆಳೆಸಲು ಬಹುಮಟ್ಟಿಗೆ ಸಹಾಯಕವಾಯಿತು.

ಮೂಲಲೇಖಕರು : ಶ್ರೀ. ಎಂ. ಯಾಮುನಾಚಾರ್ಯ
ಅನುವಾದಕರು : ಡಾ॥ ಎಂ. ಎನ್. ನರಸಿಂಹನ್

# ಸಾಮಾಜಿಕ ಜೀವನ

## (ಆಧುನಿಕ ಯುಗ)

18ನೆ ಶತಮಾನದ ಸಾಮಾಜಿಕ ರಚನೆ ಭಾಗಶಃ ಊಳಿಗ ಮಾನ್ಯ ಪದ್ಧತಿಯದಾಗಿತ್ತು. ವ್ಯವಸಾಯ ಮತ್ತು ಕಸಬುಗಾರಿಕೆ ಈ ಸಮಾಜದ ಪ್ರಧಾನ ಲಕ್ಷಣಗಳಾಗಿದ್ದವು. ಐರೋಪ್ಯ ಪರಿಸ್ಥಿತಿಗೆ ಭಿನ್ನವಾಗಿ 19ನೆ ಶತಮಾನದ ಕೊನೆಯಲ್ಲಷ್ಟೇ ಈ ಸಮಾಜ ಸ್ವತಂತ್ರ, ಭಾಗಶಃ ಪೌರ ಹಾಗೂ ಭಾಗಶಃ ಔದ್ಯಮಿಕ ಸಮಾಜವಾಗಿ ಪರಿವರ್ತನೆ ಹೊಂದಿತು. ಆದುದರಿಂದ ಸಾಮಾಜಿಕ ಜೀವನದ ಮೂಲಭೂತ ಲಕ್ಷಣಗಳಲ್ಲಿ ಯಾವುದೇ ಶೀಘ್ರ ಅಥವಾ ಆಮೂಲಾಗ್ರ ಬದಲಾವಣೆ ಕಂಡುಬರಲಿಲ್ಲ; ಕೆಲವು ಹೊಂದಾಣಿಕೆಗಳನ್ನು ಬಿಟ್ಟರೆ ಮೊದಲಿನ ಸಮಾಜದಂತೆಯೇ ಉಳಿಯಿತು.

ಸಮಕಾಲೀನ ಕನ್ನಡ ಕೃತಿಗಳು, ಮರಾಠಿ ಪತ್ರಗಳು ಮತ್ತು ಫ್ರಾನ್ಸಿಸ್ ಬುಕಾನನ್, ಹ್ಯಾಮಿಲ್ಟನ್ ಅಬ್ಬೆ ಡ್ಯುಬ್ವೋಸ್ ಮತ್ತು ಮಿಡೋಸ್ ಟೇಲರ್ ಅವರ ಕೃತಿಗಳಲ್ಲಿ ಈ ಯುಗದ ಸಾಮಾಜಿಕ ಜೀವನದ ವಿವರಣಾತ್ಮಕ ಚಿತ್ರಣವನ್ನು ನಾವು ನೋಡಬಹುದಾಗಿದೆ.

ಮೊಗಲರ ಆಡಳಿತದಲ್ಲಿ ಇದ್ದಂತಹ, ಪಿರಮಿಡ್ಡಿನ ರಚನೆಯನ್ನು ಹೋಲುವಂತಹ ಸಾಮಾಜಿಕ ಸಂಘಟನೆ ಕರ್ಣಾಟಕದಲ್ಲಿ ಇರಲಿಲ್ಲವೆಂದೇ ಹೇಳಬೇಕು. ಈ ರಚನೆಯ ತುದಿಯಲ್ಲಿ ದೊಡ್ಡ ಮಾನ ಸಬದಾರರು, ಜಾಗೀರುದಾರರೇ ಮುಂತಾದವರಿದ್ದರೆ, ಬುಡದಲ್ಲಿ ಬಡ ಸಿಪಾಯಿ ಅಥವಾ ಗುಲಾಮರು ಇರುತ್ತಿದ್ದರು. ಮಧ್ಯದಲ್ಲಿ ವಿವಿಧ ರೀತಿಯ ಮಧ್ಯಮ ವರ್ಗದ ಜನರಿದ್ದರು. ಈ ಪರಿಸ್ಥಿತಿಗೆ ವಿರುದ್ಧವಾಗಿ ಕರ್ಣಾಟಕ ಸಮಾಜದ ರಚನೆ ಸ್ವಭಾವದಲ್ಲಿ ಸಮತಲವಾಗಿದ್ದು ಮುಖ್ಯವಾಗಿ ಸ್ವತಂತ್ರ ಇಲ್ಲವೇ ಭಾಗಶಃ ಸ್ವತಂತ್ರ ಬೇಸಾಯಗಾರರು ಮತ್ತು ಕಸಬುದಾರರಿಂದ ಕೂಡಿತ್ತು. ಭೂಮಾಲಿಕರು ಮತ್ತು ವರ್ತಕರ ನ್ನೊಳಗೊಂಡ ಒಂದು ಮಧ್ಯಮ ವರ್ಗವಿದ್ದರೂ ಅವರ ಜನಸಂಖ್ಯೆ ಎಂದೂ ಹೆಚ್ಚಿರಲಿಲ್ಲ.

ವೃತ್ತಿಯ ಆಯ್ಕೆಯು ಮುಖ್ಯವಾಗಿ ಅನುವಂಶಿಕವಾಗಿ ಮತ್ತು ಜಾತಿಯ ಆಧಾರದ ಮೇಲೆ ನಿರ್ಧರಿಸಲ್ಪಡುತ್ತಿದ್ದುದಾದರೂ, ವೃತ್ತಿಯ ಆಧಾರದ ಮೇಲಾಗಲೀ ಕೋಮಿನ ಆಧಾರದ ಮೇಲಾಗಲೀ ಗುಂಪುಗುಳಿತನವಿರಲಿಲ್ಲ. ಬದಲಾಗಿ ಸಾಮಾಜಿಕ ಜೀವನದ ಪ್ರತಿಯೊಂದು ಹಂತದಲ್ಲೂ ಅವುಗಳ ಪರಸ್ಪರ ಅವಲಂಬನವನ್ನು ಒತ್ತಿಹೇಳಲಾಗುತ್ತಿತ್ತು. ಜಾತಿ ಅಥವಾ ವೃತ್ತಿ ದೈನಂದಿನ ಜೀವನದಲ್ಲಿ ಜನರ ಸ್ಥಾನಮಾನವನ್ನು ನಿರ್ಧರಿಸುತ್ತಿರಲಿಲ್ಲ. ಹಾಗೆ ನೋಡಿದರೆ ನಿಜ ಪರಿಸ್ಥಿತಿಯಲ್ಲಿ, ಪಟ್ಟಣಗಳಲ್ಲೂ ಹಳ್ಳಿಗಳಲ್ಲೂ ನಾಯಕತ್ವವು ಸಾಮಾನ್ಯವಾಗಿ ಉನ್ನತ ಜಾತಿಯವರಲ್ಲದ ಜನಗಳಿಗೇ ದೊರಕುತ್ತಿತ್ತು.

ರಾಜಕೀಯ ವ್ಯವಹಾರಗಳಲ್ಲಿ ಜನಸಾಮಾನ್ಯರಿಗೆ ಅಷ್ಟಾಗಿ ಆಸಕ್ತಿಯೇ ಇರಲಿಲ್ಲ. ಅಧಿಕಾರ ರಾಜಕೀಯದ ಆಟ ಆಡುತ್ತಿದ್ದವರು ಮಹತ್ವಾಕಾಂಕ್ಷೆಯ ಪಾಳೆಯಗಾರರು ಮತ್ತು ಅವರ ಬಂಟರು ಮಾತ್ರ. ಜನಸಾಮಾನ್ಯರು ಸರಕಾರಿ ಅಧಿಕಾರಿಗಳ ಮುಂದೆ, ಅವರು ಯಾರೇ ಆಗಲಿ, ತಲೆತಗ್ಗಿಸಿ ನಡೆಯುತ್ತಿದ್ದರಲ್ಲದೆ, ತೆರಿಗೆಗಳನ್ನು ಕೊಡುತ್ತಿದ್ದರು ಕೆಲವೊಮ್ಮೆ ಶಾಂತಿಯಿಂದ ಬದುಕುವುದಕ್ಕಾಗಿ

ಅಕಾರಣವಾಗಿ ಕೇಳಿದುದನ್ನೂ ಕೊಡುತ್ತಿದ್ದರು. ಆಡಂಬರವಿಲ್ಲದ, ಕಣ್ಣಿಗೆ ಹೊಡೆದು ಕಾಣದಂತಹ ಮನೆಗಳನ್ನವರು ಕಟ್ಟುತ್ತಿದ್ದರು. ನಗನಾಣ್ಯಗಳನ್ನು ನೆಲದಡಿಯಲ್ಲಿ ಹೂಳಿಡುತ್ತಿದ್ದರು.

ಗ್ರಾಮ ಸಮಾಜದ ಮುಖ್ಯಸ್ಥರು ಪಟೇಲ, ಪಂಚಾಯತಿ (ಗ್ರಾಮ ಪರಿಷತ್ತು) ಮತ್ತು ಶ್ಯಾನು ಭೋಗರು. ಪಟೇಲ ಮತ್ತು ಪಂಚಾಯತ, ಗ್ರಾಮಾಡಳಿತವನ್ನು ನೋಡಿಕೊಳ್ಳುತ್ತಿದ್ದರೆ, ಲೆಕ್ಕ ಪತ್ರಗಳನ್ನು ಶ್ಯಾನುಭೋಗರು ಇಡುತ್ತಿದ್ದರು. ಪುರೋಹಿತ ಅಥವಾ ಜೋಶಿ ಗ್ರಾಮಸ್ಥರಿಗೆ ಧಾರ್ಮಿಕ ವಿಷಯಗಳಲ್ಲಿ ತಿಳಿಯಹೇಳುತ್ತಿದ್ದರಲ್ಲದೆ, ಜನಸಾಮಾನ್ಯನ ತಾರಾಬಲಗಳನ್ನು ಗುಣಿಸಿ ಹೇಳುತ್ತಿದ್ದರು. ಪೌರ ಸಮಾಜದ ಮುಖ್ಯಸ್ಥರು ನಾಯಕ, ದೇಸಾಯಿ ಅಥವಾ ಪಾಳೆಯಗಾರರು. ಇವರು ಕೋಟೆ ಕೊತ್ತಲಗಳನ್ನು ಕಟ್ಟಿಸುವುದು, ಅವುಗಳ ರಕ್ಷಣೆ ಮುಂತಾದ ಚಟುವಟಿಕೆಗಳನ್ನು ಸಂಘಟಿಸುತ್ತಿದ್ದುದಲ್ಲದೆ, ಪೌರರ ಭದ್ರತೆ ಮತ್ತು ರಕ್ಷಣೆಯ ವ್ಯವಸ್ಥೆಯನ್ನೂ ಮಾಡುತ್ತಿದ್ದರು.

ಅನೇಕ ಸಹೋದರರು, ಅವರ ಕುಟುಂಬಗಳು, ತಂದೆ, ಮಕ್ಕಳು ಮತ್ತು ಅವರ ಕುಟುಂಬಗಳು—ಇವರೆಲ್ಲರೂ ಕುಟುಂಬದ ಹಿರಿಯನೊಬ್ಬನ ಪ್ರಬಲ ರಕ್ಷಣೆಯಲ್ಲಿರುವ ಅವಿಭಕ್ತ ಕುಟುಂಬವೇ ಸಮಾಜದ ಘಟಕವಾಗಿತ್ತು. ಇದಕ್ಕೆ ಕೆಲವು ಅಪವಾದಗಳಿದ್ದರೂ ಅವು ಅಷ್ಟು ಮಹತ್ವವಲ್ಲ. ಮುಖ್ಯವಾಗಿ ಗಂಡಸೇ ಜೀವನ ಪೂರೈಕೆಗಾಗಿ ದುಡಿಯುವವನಾಗಿದ್ದ.

ಆದರೆ ಊಳಿಗ ವರ್ಗಗಳಲ್ಲಿ ಹೆಂಗಸೂ ದುಡಿದು ಕುಟುಂಬದ ಆದಾಯ ಹೆಚ್ಚಿಸುವುದಕ್ಕೆ ನಿಷೇಧವಿರ ಲಿಲ್ಲ. ಆದರೆ ಆಕೆಯ ಸ್ಥಾನ ಕೈಕೆಳಗಿನದು. ಆಕೆ ಮುಖ್ಯವಾಗಿ ನಾಚಿಕೆಯ ಸ್ವಭಾವದ ವಿನಯಶೀಲೆ ಯಾಗಿಯೇ ಉಳಿದಳು. ಗಂಡಸರು ಹೆಚ್ಚು ಹೆಂಡಿರನ್ನು ಇಟ್ಟುಕೊಳ್ಳುವ ಅವಕಾಶವಿತ್ತು ; ಏಕೆ, ಅದೇ ಪರಿಪಾಠವಾಗಿತ್ತು. ಆದರೆ ವ್ಯಭಿಚಾರದ ಕಾರಣದ ಹೊರತು ಇನ್ನಾವುದೇ ಕಾರಣಕ್ಕಾಗಿ ವಿವಾಹ ವಿಚ್ಛೇದನ ಮಾಡುವ ಹಕ್ಕು ಗಂಡಸರಿಗೆ ಇರಲಿಲ್ಲ. ಹೆಂಗಸರಿಗೆ ಅಷ್ಟಾಗಿ ಹಕ್ಕು ಬಾಧ್ಯತೆಗಳೆಂದಿರಲಿಲ್ಲ. 'ಮೇಲಿನ' ಜಾತಿಗಳಲ್ಲಿ ಸಾಧಾರಣವಾಗಿ ಪ್ರಾಯಕ್ಕೆ ಬರುವ ಮೊದಲೇ ಹುಡುಗಿಯರಿಗೆ ವಿವಾಹ ಮಾಡುತ್ತಿದ್ದರು. 'ನಿಮ್ನ' ಜಾತಿಯ ಹುಡುಗಿಯರು ಶ್ರಮಜೀವನ ಸಾಗಿಸಬೇಕಾಗುತ್ತಿತ್ತು.

ಹದಿನೆಂಟನೆ ಶತಮಾನದ ಕೊನೆಯ ವರೆಗೂ, ಯುದ್ಧ ಕಚ್ಚಾಟಗಳ ನೆಲೆಯಾಗಿದ್ದ ಪ್ರದೇಶಗಳಲ್ಲಿ ಜೀವನ ತುಂಬಾ ದುರ್ಭರವಾಗಿತ್ತು. ಮರಾಠರ ಮತ್ತು ಇತರರ ಆಕ್ರಮಣಗಳು ಸಾಕಷ್ಟು ಬಲಿಯನ್ನು ತೆಗೆದುಕೊಂಡಿದ್ದವು. ಬದುಕು ಮತ್ತು ಆಸ್ತಿಗಳ ವಿಷಯದಲ್ಲಿ ಭದ್ರತೆಯೆಂಬುದೇ ದೂರದ ಮಾತಾಗಿತ್ತು. ದೈಹಿಕ ಮತ್ತು ವಸ್ತುಗಳ ರೂಪದಲ್ಲಿ ಸಲ್ಲಿಸಬಹುದಾದ ಕರಭಾರವಂತೂ ಅತಿ ಜಾಸ್ತಿಯಾಗಿತ್ತು. ಸುಸಂಘಟಿತ ದರೋಡೆ, ಧ್ವಂಸ ಮುಂತಾದ ಕೃತ್ಯಗಳು ಆಗಿಂದಾಗ ಸಂಭವಿಸುತ್ತಿದ್ದವು. ಸಮಕಾಲೀನ ಕೃತಿಗಳು ಅಂತಹ ವಿಧ್ವಂಸಕ ಕೃತ್ಯಗಳ ವಿವರಣೆಗಳಿಂದ ತುಂಬಿಹೋಗಿವೆ. ಇವಲ್ಲದೆ ಬರಗಾಲಗಳು ಮತ್ತು ಸಾಂಕ್ರಾಮಿಕ ರೋಗಗಳ ಹಾವಳಿ ಬೇರೆ. ಇವು ಬಂದಾಗಲೆಲ್ಲ ಸಾಕಷ್ಟು ಜೀವನಾಶವನ್ನುಂಟು ಮಾಡುತ್ತಿದ್ದವು. ಆದರೆ ಇಷ್ಟೆಲ್ಲ ಕಷ್ಟಕಾರ್ಪಣ್ಯ, ಅಡ್ಡಿ ಆತಂಕಗಳಿದ್ದರೂ, ಸಾಮಾಜಿಕ ಜೀವನ ಯಾವುದೇ ಮಹತ್ವದ ಬದಲಾವಣೆ ಹೊಂದದೆ ಹಾಗೆಯೇ ಮುಂದುವರಿಯಿತು. ಏಕೆಂದರೆ ಭಾರತೀಯ ಶ್ರೀ ಸಾಮಾನ್ಯನು ಮೊದಲಿಂದಲೂ ಕಷ್ಟಕಾರ್ಪಣ್ಯಗಳಿಗೆ ಈಡಾಗಿ ಪ್ರಾರಬ್ಧವಾದಿಯಾಗಿದ್ದ.

ಆಕ್ರಮಣಕಾರಿ ಸೇನೆಗಳು ಆಗಾಗ ನಡೆಸುವ ದಾಳಿ ಮತ್ತು ರಾಜರ ಬದಲಾವಣೆಗಳು ನಡೆಯುತ್ತಲೇ ಇದ್ದರೂ, ಒಟ್ಟಾರೆಯಾಗಿ ನೋಡಿದಲ್ಲಿ ಗ್ರಾಮಜೀವನ ಅಷ್ಟಾಗಿ ಅಸ್ತವ್ಯಸ್ತವಾಗಿರಲಿಲ್ಲ. ಅದರ ಗತಿ ಮೊದಲಿನಂತೆಯೇ ಮುಂದುವರಿಯುತ್ತಿತ್ತು. ಪ್ರತಿಯೊಬ್ಬನೂ ಪರಂಪರಾನುಗತವಾಗಿ ಬಂದ

ರೂಢಿ ಪದ್ಧತಿಗಳಿಗನುಸಾರವಾಗಿ ವೃತ್ತಿಯನ್ನನುಸರಿಸುತ್ತಾ, ಹಕ್ಕುಗಳನ್ನು ಭೋಗಿಸಿ ಕರ್ತವ್ಯ ನಿರ್ವಹಣೆ ಮಾಡುತ್ತಾ ಇರುತ್ತಿದ್ದನು.

ಹಳ್ಳಿ ಮತ್ತು ಪಟ್ಟಣಗಳಲ್ಲಿಯ ದೇವಾಲಯಗಳು ಸಾಮಾಜಿಕ ಚಟುವಟಿಕೆಗಳ ಕೇಂದ್ರಗಳಾಗಿದ್ದವು. ಅಲ್ಲಿ ದೇವದಾಸಿಯರು ಜನರಿಗೆ ಮನೋರಂಜನೆಯನ್ನು ಒದಗಿಸುತ್ತಿದ್ದರು. ಜನ ಸಾಮಾನ್ಯರು ಮುಂಜಾನೆಯಿಂದ ಸಂಜೆಯ ವರೆಗೆ ಕಷ್ಟಪಟ್ಟು ದುಡಿಯುತ್ತಿದ್ದರು. ಇದರಿಂದ ಅವರಿಗೆ ತಮ್ಮ ಜೀವನ ನಿರ್ವಹಣೆಗೆ ಮತ್ತು ಉತ್ಸವ ಸಮಾರಂಭಗಳಲ್ಲಿ ಖರ್ಚುಮಾಡಲು ಬೇಕಾದಷ್ಟು ಮಾತ್ರ ಆದಾಯ ಬರುತ್ತಿತ್ತು. ನಾಳಿನ ಬಗ್ಗೆ ಅವರು ಅಷ್ಟಾಗಿ ಯೋಚಿಸುತ್ತಿರಲಿಲ್ಲ.

ತಮ್ಮ ಹಳೆಯ ನಮೂನೆಯ ಎತ್ತಿನ ಗಾಡಿಗಳಲ್ಲಿ ಕುಳಿತು ಪವಿತ್ರ ಸ್ಥಳಗಳಿಗೆ ತೀರ್ಥಯಾತ್ರೆ ಕೈಗೊಳ್ಳುವುದು ಸಾಮಾನ್ಯವಾಗಿತ್ತು. ಕುಲದೇವರಿಗೆ ಹೊತ್ತ ಹರಕೆಯ ಪೂರೈಕೆಯ ದೃಷ್ಟಿಯಿಂದ ಈ ತೀರ್ಥಯಾತ್ರೆಗಳನ್ನು ಮಾಡುತ್ತಿದ್ದರು. ಅಲ್ಲದೆ ಇದರಿಂದ ದೈನಂದಿನ ಏಕತಾನದಬೇಸರವೂ ಹೋಗುತ್ತಿತ್ತು. ಹಳ್ಳಿಗಳ ಮೂಲಕ ಹಾದುಹೋಗುವ ಯಾತ್ರಿಕರನ್ನು ಆದರಾತಿಥ್ಯದಿಂದ ಸತ್ಕರಿಸುತ್ತಿದ್ದರು. ಸಂಕ್ರಾಂತಿ, ಯುಗಾದಿ, ದಸರಾ ಮತ್ತು ದೀಪಾವಳಿಗಳಂತಹ ಋತು ಸಂಬಂಧದ ಉತ್ಸವಗಳು ಎಲ್ಲರೂ ಭಾಗವಹಿಸುವ ಸಾಮುದಾಯಿಕ ಸಂದರ್ಭಗಳಾಗಿದ್ದವು. ಮೊಹರಮಿನಂತಹ ಮುಸ್ಲಿಮ್ ಹಬ್ಬಗಳು ಅಥವಾ ಗ್ರಾಮಾಂತರ ಪ್ರದೇಶಗಳಲ್ಲಿ ಸ್ಥಳೀಯ ಸಂತರ ಉರ್ಸುಗಳು ಇದೇ ರೀತಿಯ ಉತ್ಸವಗಳಾಗಿದ್ದವು. ಈಗ ನಾವು ಹರಿಜನರೆಂದು ಕರೆಯುವ ಜಾತಿಬಾಹಿರರನ್ನುಳಿದು, ಮಿಕ್ಕ ಎಲ್ಲ ಕೋಮಿನವರೂ ಭ್ರಾತೃತ್ವ ಭಾವದಿಂದ ಅಂತಹ ಉತ್ಸವಗಳಲ್ಲಿ ಭಾಗಿಯಾಗುತ್ತಿದ್ದರು. ಜಾತಿಯಿಂದ ಹೊರಗುಳಿದವರು–ಹರಿಜನರು–ಹೆಚ್ಚಾಗಿ ಗುಲಾಮರಾಗಿ, ಭೂಹೀನ ಕಾರ್ಮಿಕರಾಗಿ, ಗ್ರಾಮಗಳಲ್ಲಿ ತಮಗಾಗಿಯೇ ಇದ್ದ ಬೇರೆ ಭಾಗಗಳಲ್ಲಿ ವಾಸಿಸುತ್ತಿದ್ದರು. ಸತ್ತ ಜಾನುವಾರುಗಳ ವಿಲೇವಾರಿಯನ್ನು ಇವರೇ ನೋಡಿಕೊಳ್ಳುತ್ತಿದ್ದರು. ಇದಲ್ಲದೆ ನೇಯ್ಗೆಯಂತಹ ಪೂರಕ ವೃತ್ತಿಯೂ ಹಲವರಿಗಿತ್ತು. ಆದರೂ ಆರ್ಥಿಕ ಹಾಗೂ ಸಾಮಾಜಿಕ ಅಂತಸ್ತು ತೃಪ್ತಿಕರವಾಗಿರಲಿಲ್ಲ. ಅವರ ಉದ್ಧಾರಕ್ಕಾಗಿ ಟೊಂಕಕಟ್ಟಿ ನಿಲ್ಲುವ ಸಮಾಜ ಸುಧಾರಕರು ಮುಂದೆ ಬರಬೇಕಾದರೆ 20ನೆ ಶತಮಾನ ಬರಬೇಕಾಯಿತು. ಮಹಾತ್ಮಾ ಗಾಂಧಿಯವರ ಭಾರೀ ಪ್ರಯತ್ನ ಈ ದಿಶೆಯಲ್ಲಿ ಮಹತ್ವದ ಘಟ್ಟವೆಂದೇ ಹೇಳಬೇಕು. ಹದಿನೆಂಟನೆ ಶತಮಾನದ ಅಂತ್ಯಭಾಗದಲ್ಲಿ—ಅಂದರೆ ಪದೇ ಪದೇ ನಡೆಯುವ ದಾಳಿ, ಯುದ್ಧಕಾಂಡಗಳು ನಿಂತಾಗ–ಸಾಮಾಜಿಕ ಜೀವನ ನಿಜವಾಗಿಯೂ ಸುಧಾರಿಸಿತು. ಈಗ ಅಭದ್ರತೆಯಿರಲಿಲ್ಲ. ಕರನೀತಿ ಅಷ್ಟು ಕಠಿನವಾಗಿರಲಿಲ್ಲ. ಮೈಸೂರಿನಲ್ಲಿ ಬ್ರಿಟಿಷ್ ಕಮಿಷನರುಗಳ (1831–81) ಆಡಳಿತ ಮತ್ತು ಕರ್ಣಾಟಕದ ಇತರ ಭಾಗಗಳಲ್ಲಿ ಬ್ರಿಟಿಷ್ ಆಡಳಿತ–ಇವೆರಡೂ ವ್ಯವಸ್ಥಾತ್ಮಕ ಆಡಳಿತದ ಅಸ್ತಿಭಾರವನ್ನು ಹಾಕಿದವು. ಈಗ ಜನರಿಗೆ ಜೀವನದ ಉನ್ನತ ವಿಷಯಗಳ ಬಗ್ಗೆ ಚಿಂತಿಸುವ ಅವಕಾಶ ಸಿಕ್ಕಿತ್ತು. ಯಕ್ಷಗಾನಗಳು, ನಾಟಕಗಳು ಪ್ರಚಾರಕ್ಕೆ ಬಂದವು. ಮೂಲ ಹಾಗೂ ಭಾಷಾಂತರದ ಸಾಹಿತ್ಯಕೃತಿಗಳು ಬೆಳಕಿಗೆ ಬರತೊಡಗಿದವು. ಇದು ಮುಖ್ಯವಾಗಿ ಹಳೆಯ ಮೈಸೂರು ರಾಜ್ಯಕ್ಕೆ ಅನ್ವಯಿಸುತ್ತದೆ. ಅಲ್ಲಿ ಮಹಾರಾಜ ಮುಮ್ಮಡಿ ಕೃಷ್ಣರಾಜ ಒಡೆಯರು ಮತ್ತು ಚಾಮರಾಜ ಒಡೆಯರುಗಳು ಶಿಕ್ಷಣ ಮತ್ತು ಕಲೆಗಳಿಗೆ ಆಶ್ರಯದಾತರಾಗಿ ಅವನ್ನು ಪೋಷಿಸಿದರು.

ಹತ್ತೊಂಬತ್ತನೆ ಶತಮಾನದ ಕೊನೆಯ ಒಳಗಾಗಿ ಕ್ರಮೇಣ ಔದ್ಯಮೀಕರಣವು ಕಾಲಿಟ್ಟು, ಪೌರ ಜನತೆಯಲ್ಲಿ ಅನೇಕ ಸಾಮಾಜಿಕ ಪರಿವರ್ತನೆಯನ್ನು ತಂದಿತು. ಹಳೆಯ ಮೈಸೂರು ರಾಜ್ಯದಲ್ಲಿ ರೈಲುದಾರಿ ಮತ್ತು ಕೈಗಾರಿಕೆಗಳ ಅಭಿವೃದ್ಧಿ ಯೋಜನೆಗಳು ಕಾರ್ಯರೂಪಕ್ಕೆ ಬಂದವು. ಈ ಶತಮಾನದ

30ರ ಒಳಗೆ ಒಂದು ಔದ್ಯಮಿಕ ಕಾರ್ಮಿಕ ವರ್ಗ ಮತ್ತು ಒಂದು ಪೌರ ಮಧ್ಯಮ ವರ್ಗ ಅಸ್ತಿತ್ವಕ್ಕೆ ಬಂದವು. ರಾಜ್ಯ ಮತ್ತು ಔದ್ಯಮಿಕ ಸಂಸ್ಥೆಗಳಿಂದ ಉದ್ಯೋಗಾವಕಾಶಗಳು ಹೆಚ್ಚಿದವು.

ದೇಶಾದ್ಯಂತ ವಿದ್ಯಾಭ್ಯಾಸ ಹರಡಿದಂತೆ ಜನರ ನಿರೀಕ್ಷೆಗಳು ಹೆಚ್ಚಿದವು—ಎಂತಲೇ, ಉದ್ಯೋಗ ಗಳಿಗೆ ಪ್ರವೇಶ ಪಡೆಯುವುದರಲ್ಲಿ ತೀವ್ರ ಸ್ಪರ್ಧೆ ಹುಟ್ಟಿಕೊಂಡಿತು. ಬೇಡಿಕೆಗಳನ್ನು ಪೂರೈಸುವಷ್ಟರ ಮಟ್ಟಿಗೆ ಅವಕಾಶಗಳು ಬೆಳೆಯಲಿಲ್ಲ—ಎಂತಲೇ, ಸಮುದಾಯಗಳಲ್ಲಿ ಸಾಮಾಜಿಕ ವರ್ಗಭೇದ ಉಂಟಾ ಯಿತು. ಅಂತಹ ವರ್ಗಭೇದದಿಂದ ಪೌರಜೀವನ ಸಾಕಷ್ಟು ಕಲುಷಿತಗೊಂಡಿತು.

ಆದರೂ ಪೌರಜೀವನ ಹೆಚ್ಚು ಸಮೃದ್ಧ, ವೈವಿಧ್ಯಮಯ ಹಾಗೂ ಮನೋರಂಜಕವಾಗಿ ಪರಿಣಮಿಸಿತು. ಕ್ಲಬ್ಬುಗಳು, ಸಿನೆಮಾ, ನಾಟಕರಂಗಗಳು, ಉಪಾಹಾರ ಮಂದಿರಗಳು, ಆಟೋಟ–ಕ್ರೀಡೆಗಳು ಹೆಚ್ಚು ಹೆಚ್ಚು ಜನಪ್ರಿಯವಾದವು. ಸಾಕ್ಷರತೆ ಕ್ರಮೇಣ ವೃದ್ಧಿಯಾಯಿತು. ಸಾಹಿತ್ಯಿಕ ಚಟುವಟಿಕೆಗಳು ವಿದ್ಯಾವಂತರ ವರ್ಗಗಳಲ್ಲಿ ಅಪೇಕ್ಷಿತವೆನಿಸಿದವು.

ಕೆಲವು ಪ್ರದೇಶಗಳಲ್ಲಿ ಗ್ರಾಮಜೀವನ ಸುಧಾರಿಸಿತು. ಈ ಶತಮಾನದ ಆದಿಯಲ್ಲಿ ಕೈಗೊಂಡ ಬೃಹತ್ ನೀರಾವರಿ ಯೋಜನೆಗಳು ಮತ್ತು ವ್ಯಾವಸಾಯಿಕ ಉತ್ಪನ್ನಗಳ ಬೆಲೆಯ ಹೆಚ್ಚಳ–ಇವು ರೈತನ ಆರ್ಥಿಕ ಅಂತಸ್ತನ್ನು ಹೆಚ್ಚಿಸಿದವು. ಆದರೆ ವಿದೇಶಗಳಲ್ಲಿ ತಯಾರಿಸಿದ ಅಗ್ಗದ ಮಾಲುಗಳೊಂದಿಗೆ ಸ್ಪರ್ಧೆಯಲ್ಲಿ ನಿಲ್ಲಲಾರದೆ, ಪುರಾತನ ಕಾಲದಿಂದಲೂ ಬೆಳೆದು ಬಂದ ಗ್ರಾಮೀಣ ಗುಡಿ ಕೈಗಾರಿಕೆಗಳು ತ್ವರಿತಗತಿಯಲ್ಲಿ ಕ್ಷಯಿಸತೊಡಗಿದವು. ಇದರಿಂದಾಗಿ ಉಲ್ಬಣಗೊಳ್ಳುತ್ತಿರುವ ಬಡತನ ಅನಿವಾರ್ಯ ವಾಯಿತು. ಗ್ರಾಮೀಣ ಜನಸಮುದಾಯದ ಭೂಹೀನರಲ್ಲಿ ನಿರ್ಗತಿಕರ ಸಂಖ್ಯೆ ಅಧಿಕವಾಗುತ್ತಾ ಬಂತು. ತುಲನಾತ್ಮಕವಾಗಿ ನೋಡಿದರೆ ಸಮೃದ್ಧ ಗ್ರಾಮಗಳಲ್ಲೂ ಸಾಂಪ್ರದಾಯಿಕ ಉತ್ಸವಗಳನ್ನು ಹೆಚ್ಚು ಧಾರಾಳವಾಗಿ ಆಚರಿಸುವುದನ್ನು ಬಿಟ್ಟರೆ, ಅಲ್ಲಿಯ ಜನರ ಸಮೃದ್ಧಿಯು ಅವರ ಸಾಮಾಜಿಕ ಜೀವನ ಕ್ರಮದ ಮೇಲೆ ಯಾವುದೇ ಪ್ರಭಾವ ಬೀರಲಿಲ್ಲ. ಗ್ರಾಮಸ್ಥನಿಗೆ ಯಾವುದೇ ತರದ ಮನೋರಂಜನೆ ಯಾಗಲೀ ಸುಖಜೀವನವಾಗಲೀ ಇರಲಿಲ್ಲ. ಖಾಸಗಿ ಮತ್ತು ಸಾರ್ವಜನಿಕ ಸೌಕರ್ಯಗಳೆರಡನ್ನೂ ಭೋಗ ಸೌಕರ್ಯಗಳೆಂದು ತಿಳಿಯಲಾಗುತ್ತಿತ್ತು. ಆದರೆ ಆತ ಪಟ್ಟಣಗಳಿಗೆ ಮೊದಲಿಗಿಂತ ಹೆಚ್ಚು ಸಾರಿ ಭೇಟಿ ಕೊಡತೊಡಗಿದ. ಉತ್ಪನ್ನಗಳ ಮಾರಾಟ ಮತ್ತು ಜೀವನಾವಶ್ಯಕ ವಸ್ತುಗಳ ಖರೀದಿ, ಎರಡಕ್ಕೂ ಪಟ್ಟಣದ ಮೇಲೆ ಅವಲಂಬನ ಹೆಚ್ಚಾಯಿತು. ಅಂತಹ ಪ್ರಯಾಣ ಮತ್ತು ಸಂಪರ್ಕಗಳಿಂದ ಹೆಚ್ಚು ನಾಗರಿಕವಾಗಿ ಬದು ಕುವ ಬಗೆಗೆ ಕ್ರಮೇಣ ಆತ ರೂಪಿಸಲ್ಪಡುತ್ತಿದ್ದನಾದರೂ ಪೌರ ಮತ್ತು ಗ್ರಾಮೀಣ ಜೀವನದ ನಡುವಣ ಅಂತರ ಹೆಚ್ಚಾಗಿಯೇ ಉಳಿಯಿತು. ಗ್ರಾಮದ ರೂಕ್ಷಜನ ಪಟ್ಟಣದಲ್ಲಿ ನಿರಾತಂಕವಾಗಿ, ನಿರಾಳವಾಗಿ ವಾಸಿಸುವ ಮತ್ತು ಪಟ್ಟಣದ ನಾಜೂಕಯ್ಯಗಳು ಹಳ್ಳಿಯ ಮನೆಗೆ ಹೋಗಿ ಸಂತೋಷದಿಂದ ಇರುವ, ಒಂದು ಸುಂದರ ಸಂಯೋಜನೆ ದೂರದ ಆದರ್ಶವಾಗಿಯೇ ಉಳಿಯಿತು. ಮೇಲೆ ವಿವರಿಸಿದ ಸಾಮಾಜಿಕ ಜೀವನದ ಪರಿಸ್ಥಿತಿ, 20ನೆ ಶತಮಾನದ ವರುಷಗಳು ಉರುಳಿದಂತೆ ಬದಲಾವಣೆಯಾಗುತ್ತಾ ಬಂತು. ಮೊದಲನೆ ಮಹಾಯುದ್ಧವು (1914–18) ಒಂದು ಮಹಾಘಟನೆ. ಈ ಯುದ್ಧವು ಭಾರತವನ್ನು ರಾಜಕೀಯ ಮತ್ತು ಆರ್ಥಿಕ ಜೀವನದ ಜಾಗತಿಕ ಪ್ರವಾಹಗಳ ಸುಳಿಯಲ್ಲಿ ಕೆಡವಿತು. ಸಾವಿರಾರು ಮಂದಿ ಭಾರತೀಯ ಸೈನಿಕರು ವಿದೇಶಕ್ಕೆ ಹೋದರು ; ಅಲ್ಲಿನ ರಣರಂಗಗಳಲ್ಲಿ ಮಹತ್ವಪೂರ್ಣವಾಗಿ ಹೋರಾಡಿ ಚಿರಸ್ಮರಣೀಯರಾದರು. ಅವರು ತಂತಮ್ಮ ಹಳ್ಳಿಗಳ ಮನೆಗಳಿಗೆ ಮರಳಿದಾಗ ವಿದೇಶಗಳಲ್ಲಿ ಗಳಿಸಿದ ಅನುಭವದ ದೆಸೆಯಿಂದ ಅವರೆಲ್ಲ ತೀರಾ ಹೊಸ ವ್ಯಕ್ತಿಗಳೇ ಆಗಿದ್ದರು. ಮಹಾಯುದ್ಧದಲ್ಲಿ ಭಾರತವು ಮಾಡಿದ ಸಹಾಯದ ಉಪಕಾರಸ್ಮರಣೆಯಾಗಿ ಭಾರತೀಯರು ಹೆಚ್ಚಿನ ರಾಜಕೀಯ ಹಕ್ಕುಗಳನ್ನು

ಆಶಿಸಿದರು. ಎಂತಲೇ ಈ ಶತಮಾನದ ಎರಡು ಮತ್ತು ಮೂರನೆ ದಶಕಗಳಲ್ಲಿ ರಾಜಕೀಯ ಚಳವಳಿಯ ಗತಿ ಬಹಳವಾಗಿ ಹೆಚ್ಚಿತು. ರಾಷ್ಟ್ರೀಯ ಪುನರುತ್ಥಾನಕ್ಕಾಗಿ ಒಂದು ಸಮಗ್ರ ಕಾರ್ಯಕ್ರಮವನ್ನು ಮುಂದಿಟ್ಟು ಯುಗ ಪ್ರವರ್ತಕರಾಗಿ ಬಂದ ಮಹಾತ್ಮಾಗಾಂಧಿಯವರ ಪ್ರಭಾವ ಗ್ರಾಮೀಣ ಮತ್ತು ಪೌರ ಸಮಾಜಗಳನ್ನದೆ ಎಲ್ಲ ವರ್ಗಗಳ ಮೇಲೂ ಆಯಿತು. ಗ್ರಾಮೀಣ ಸಮಾಜದ ಮೇಲೆ ಈ ಪ್ರಭಾವ ಮತ್ತೂ ಹೆಚ್ಚಾಯಿತು. ಗಾಂಧಿಜೀಯವರು ಭಾರತೀಯ ಜೀವನದ ರಾಜಕೀಯ ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ—ಹೀಗೆ ಎಲ್ಲಾ ವಿದ್ಯಮಾನಗಳ ಮೇಲೂ ಪ್ರಭಾವ ಬೀರಿದರು.

ಎರಡನೆ ಮಹಾಯುದ್ಧದಲ್ಲಿ (1939–45) ಇನ್ನೂ ಹೆಚ್ಚಿನ ಪರಿಣಾಮಗಳು ಅಡಕವಾಗಿದ್ದವು. ಭಾರತ ಮಾತ್ರವಲ್ಲದೆ ಇಡೀ ಪ್ರಪಂಚವೇ ಹೊಸಯುಗವೊಂದನ್ನು ಕಂಡಿತು. ವಿದೇಶೀ ರಾಷ್ಟ್ರಗಳ ಪೈಕಿ ಬ್ರಿಟನ್ನಿನೊಂದಿಗೆ ಮಾತ್ರ ಹೆಚ್ಚಿನ ಸಂಪರ್ಕವಿಟ್ಟುಕೊಂಡಿದ್ದ ಭಾರತವು ಈಗ ಅಮೆರಿಕ ಮತ್ತು ಇತರ ವಿದೇಶೀ ರಾಷ್ಟ್ರಗಳೊಂದಿಗೆ ಹೆಚ್ಚಿನ ಸಂಬಂಧ ಬೆಳೆಸತೊಡಗಿತು. ಪೌರ ಮತ್ತು ಗ್ರಾಮೀಣ ಭಾರತೀಯರು ಈಗ ತಮ್ಮ ಮೇಲ್ಗಡೆ ಹಾರಾಡುತ್ತಿರುವ ವಿಮಾನಗಳಿಗೆ, ತಮ್ಮ ರಸ್ತೆಗಳಲ್ಲಿ ಓಡಾಡುವ ಲಾರಿ ಬಸ್ಸುಗಳಿಗೆ, ರೇಡಿಯೋ ಸಿನೇಮಾಗಳಿಗೆ, ಹೊಸ ಪ್ರಯಾಣ ಸೌಕರ್ಯಗಳಿಗೆ ಮತ್ತು ನೂತನ ಮನೋರಂಜನೆಗಳಿಗೆ ಹೊಂದಿಕೊಂಡರು. ಇವೆಲ್ಲ ಹಿಂದಿನ ಪೀಳಿಗೆಯವರಿಗೆ ಗೊತ್ತೇ ಇರಲಿಲ್ಲ.

1947ರಲ್ಲಿ ಭಾಗತ ಸ್ವತಂತ್ರವಾಯಿತು. ಭಾರತೀಯ ಜೀವನದಲ್ಲಿ ಒಂದು ಹೊಸ ಅಧ್ಯಾಯ ಪ್ರಾರಂಭವಾಯಿತು. ಭಾರತೀಯರ ಜೀವನಮಟ್ಟ ಸುಧಾರಿಸಲು ಮತ್ತು ಅವರ ಜೀವನ ಮತ್ತು ಜೀವನ ಚಟುವಟಿಕೆಗಳನ್ನು-ಮುಖ್ಯವಾಗಿ ಉದ್ದಿಮೆ ಮತ್ತು ತಾಂತ್ರಿಕ ರಂಗಗಳಲ್ಲಿ-ಆಧುನೀಕರಿಸಲು ಭಾರತ ಸರ್ಕಾರವು ಕೈಗೊಂಡ ಭಾರೀ ಪ್ರಯತ್ನಗಳು ಈ ಹೊಸ ಆರಂಭವನ್ನು ಸೂಚಿಸಿದವು. 1950ರಲ್ಲಿ ಭಾರತವು ಒಂದು'ಸಾರ್ವಭೌಮ ಪ್ರಜಾಪ್ರಭುತ್ವ ಗಣತಂತ್ರ' ರಾಷ್ಟ್ರವೆಂದು ತನ್ನದೇ ಆದ ಸಂವಿಧಾನವನ್ನು ಅಂಗೀಕರಿಸಿತು. ಆಗಲೇ ಪಾಂಚವರ್ಷಿಕ ಯೋಜನೆಗಳನ್ನು ಘೋಷಿಸಲಾಯಿತು. ಮೂರು ಪಾಂಚವರ್ಷಿಕ ಯೋಜನೆಗಳು ಈಗಾಗಲೇ ಮುಕ್ತಾಯವಾಗಿ ನಾಲ್ಕನೆಯದು ಕಾರ್ಯರೂಪದಲ್ಲಿದೆ. ಬೃಹತ್ ಜಲವಿದ್ಯುತ್ ಯೋಜನೆಗಳು, ನೀರಾವರಿ ಯೋಜನೆಗಳು, ದೈತ್ಯಗಾತ್ರದ ಉಕ್ಕು, ಯಂತ್ರಸಾಧನ ರಾಸಾಯನಿಕ ಗೊಬ್ಬರ ಮತ್ತಿತರ ವಸ್ತುಗಳನ್ನು ಉತ್ಪಾದಿಸುವ ಕಾರ್ಖಾನೆಗಳು, ನಮ್ಮ ಯುವಜನರಿಗಾಗಿ ದೇಶವಿದೇಶಗಳಲ್ಲಿ ವಿದ್ಯಾಭ್ಯಾಸ ಪಡೆಯಲು ಧಾರಾಳವಾಗಿ ಕೊಡಲಾಗುತ್ತಿರುವ ಸವಲತ್ತುಗಳು—ದೇಶದ ಸ್ಥಿತಿಯನ್ನೇ ಬದಲಾಯಿಸಿದವು. ನಮ್ಮ ಗ್ರಾಮಾಂತರ ಪ್ರದೇಶಗಳಲ್ಲಿ ಹೆಚ್ಚಿನ ಭಾಗ ಅಭಿವೃದ್ಧಿ ಮತ್ತು ರಾಷ್ಟ್ರೀಯ ವಿಸ್ತರಣ ಯೋಜನೆಗಳ ವ್ಯಾಪ್ತಿಯಲ್ಲಿ ಬಂದಿತು. ಹಿಂದೆಂದೂ ಇಲ್ಲದಂತಹ ಪ್ರಮಾಣದಲ್ಲಿ ಕಟ್ಟಲಾಗುತ್ತಿರುವ ನಾಗರಿಕ ಕಟ್ಟಡಗಳು, ರಸ್ತೆಗಳು, ಹಡಗುಗಳು, ನೌಕರಿ ಮತ್ತು ಸಂಬಳ ಗಳಿಕೆಗೆ ಹೆಚ್ಚು ಹೆಚ್ಚಿನ ಅವಕಾಶವನ್ನು ಒದಗಿಸಿವೆ. ಇವೆಲ್ಲ ಚಟುವಟಿಕೆಗಳು ಸಮಾಜದ ಎಲ್ಲ ಅಂತಸ್ತುಗಳ ಗ್ರಾಮೀಣ ಹಾಗೂ ಪೌರ ಜನರ ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ ಮಹತ್ವದ ಬದಲಾವಣೆಗಳನ್ನು ತಂದಿವೆ. ಹಲವಾರು ದಶಕಗಳ ಕಾರ್ಯವನ್ನು ಕೆಲವೇ ದಶಕಗಳಲ್ಲಿ ಸಾಧಿಸಲು ಭಾರತವು ಪ್ರಯತ್ನಿಸುತ್ತಿದೆ.

ಸಾಮಾಜಿಕ ಜೀವನದ ಹಳೆಯ ವಿಧಾನಗಳು ಈಗ ಉಳಿದಿಲ್ಲ. ಹಾಗೆಯೇ ಹಳೆಯ ಸಾಂಪ್ರದಾಯಿಕ ಜೀವನ ಮೌಲ್ಯಗಳು ಸ್ವಾಮಿನಿಷ್ಠೆಯನ್ನು ಪಡೆಯುವ ಶಕ್ತಿಯನ್ನು ಕಳಕೊಂಡಿವೆ. ಅನೇಕ ಅವಿರತ ಚಟುವಟಿಕೆಗಳ ಪರಿಣಾಮವಾಗಿ ಈಗ ಭಾರತೀಯ ಸಮಾಜವು ಒಂದು ನಿರಂತರ ವ್ಯಕ್ತ್ಯಾಸ ಪರಂಪರೆಯನ್ನೇ ಅನುಭವಿಸುತ್ತಿದೆ. ಈ ಹೊಸ ಬೆಳವಣಿಗೆಗಳ ಪರಿಣಾಮಗಳನ್ನು ಕರಾರುವಾಕ್ಕಾಗಿ ಈಗಲೇ ಹೇಳುವಂತಿಲ್ಲ. ಭವಿಷ್ಯವನ್ನು ಮುನ್ನೋಡುವಂತಿಲ್ಲ. ಎಲ್ಲಾ ಮಟ್ಟಗಳಲ್ಲೂ ವಿವೇಕಯುಕ್ತ ನಾಯಕತ್ವವಿದ್ದಲ್ಲಿ ಭಾರತವು

ಭದ್ರ ಹಾಗೂ ದೃಢಜೀವನವನ್ನು ಸಾಧಿಸಬಹುದೆಂದೂ ನಮ್ಮ ಸಂವಿಧಾನದಲ್ಲಿ ಸೂಚಿಸಿದ ಮೇರೆಗೆ ಸ್ವಾತಂತ್ರ್ಯ ನ್ಯಾಯ ಮತ್ತು ಅವಕಾಶಗಳಲ್ಲಿ ಸಮತೆ, ಇವುಗಳ ಖಾತರಿ ಆಶ್ವಾಸನೆಯನ್ನು ಕೊಡುವ ಸಮಾಜ ವ್ಯವಸ್ಥೆ ರಚಿಸುವುದು ಸಾಧ್ಯವಾದೀತೆಂದೂ ಆಶಿಸಬಹುದಾಗಿದೆ. ಇವೆಲ್ಲವನ್ನು ಸಾಧಿಸಬೇಕಾದರೆ ಪ್ರಾಚೀನಕಾಲದಿಂದ ಬಳಿವಳಿಯಾಗಿ ಬಂದ ಮತ್ತು ಅದರ ಜೀವನವಿಧಾನವೇ ಆಗಿದ್ದ ನಮ್ಮ ಅಮೂಲ್ಯ ಸಾಂಸ್ಕೃತಿಕ ಪರಂಪರೆಯ ಉದಾತ್ತ ಅಂಶಗಳನ್ನೂ ಧಾರಾಳ ಸಹನೆಯನ್ನೂ ನೈತಿಕ ಪ್ರೇರಣೆಯನ್ನೂ ನಾವು ಮೊರೆ ಹೋಗಬೇಕಾಗುತ್ತದೆ.

ಮೂಲಲೇಖಕರು : ಶ್ರೀ ಜಿ. ನಾರಾಯಣ ರಾವ್
ಅನುವಾದಕರು : ಶ್ರೀ ಟಿ.ಆರ್. ಶಾಮ ಭಟ್ಟ



# ಆರ್ಥಿಕ ಸ್ಥಿತಿಗತಿಗಳ ಸಮೀಕ್ಷೆ

## (ಆಧುನಿಕ ಕಾಲ)

ಮೂರು ಕಾಲಾವಧಿಗಳನ್ನು ಪ್ರತ್ಯೇಕಿಸಿ ಆಧುನಿಕ ಕಾಲದ ಆರ್ಥಿಕ ಸ್ಥಿತಿಗತಿಗಳನ್ನು ಸಮೀಕ್ಷಿಸಬಹುದು. ಇಂದಿನ ಕರ್ಣಾಟಕವನ್ನು ಒಳಗೊಂಡ ಹೈದರಾಲಿ ಮತ್ತು ಟಿಪ್ಪುಸುಲ್ತಾನ್ ಅವರ ಆಳಿಕೆಯ ಕಾಲವಾದ 1760–1799 ಮೊದಲನೆಯ ಕಾಲಾವಧಿ, 1800 ರಿಂದ 1914ರ ವರೆಗಿನದು ಎರಡನೆಯ ಕಾಲಾವಧಿ ಮತ್ತು 1914–1947 ಮೂರನೆಯ ಕಾಲಾವಧಿ.

## ಕ್ರಿ.ಶ. 1760–1799

ಈ ಕಾಲಾವಧಿಯಲ್ಲಿ ಇಡೀ ಕರ್ಣಾಟಕ ರಾಜ್ಯವು ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ಅವರ ಆಳಿಕೆಯಲ್ಲಿದ್ದಿತು. ಕೇಂದ್ರ ನಿರ್ದೇಶಿತವಾದ ದಕ್ಷ ಆಡಳಿತಯಂತ್ರದ ನಿರ್ಮಾಣ ಹಾಗೂ ಒಳ್ಳೆಯ ಪೋಲೀಸು ವ್ಯವಸ್ಥೆ–ಇವೆಲ್ಲವೂ ಒಳ್ಳೆಯ ಆರ್ಥಿಕ ವ್ಯವಸ್ಥೆಗೆ ಅನುಕೂಲವಾಗಿದ್ದ ವಾತಾವರಣ ಕಲ್ಪಿಸಿದ್ದವು. 'ವ್ಯವಸಾಯಗಾರ, ಕೈಗಾರಿಕೆಯವ ಮತ್ತು ವ್ಯಾಪಾರಿ ಇವರೆಲ್ಲರೂ ಹೈದರ್ ಆಲಿಯ ಆಳಿಕೆಯಲ್ಲಿ ಅಭ್ಯುದಯ ಸ್ಥಿತಿಯಲ್ಲಿದ್ದರು; ಕೃಷಿ ವಿಸ್ತರಿಸಿತು, ಹೊಸ ಕೈಗಾರಿಕೆಗಳು ಸ್ಥಾಪಿಸಲ್ಪಟ್ಟವು ಮತ್ತು ರಾಜ್ಯಕ್ಕೆ ಸಂಪತ್ತು ಹರಿದು ಬರುತ್ತಿತ್ತು' ಎಂಬುದಾಗಿ ಫಲ್ಲರ್ ಟನ್ ಅವರು ಹೇಳಿರುತ್ತಾರೆ.

ಜಮೀನ್ದಾರಿ ಪದ್ಧತಿ ರದ್ದು, ಭೂಕಂದಾಯವನ್ನು ಹಣರೂಪದಲ್ಲಿ ನಿಗದಿ ಮಾಡಿದುದು, ರೆವಿನ್ಯೂ ಅಧಿಕಾರಿಗಳಿಗೆ ಧಾನ್ಯ ರೂಪದ ಬದಲು ಹಣ ರೂಪದಲ್ಲಿ ಸಂಭಾವನೆ ನೀಡಿಕೆ ಮತ್ತು ಭೂ ಉತ್ಪತ್ತಿಯನ್ನು ವೃದ್ಧಿಗೊಳಿಸಲು ರಾಜನು ಹೊಂದಿದ್ದ ವೈಯಕ್ತಿಕ ಆಸಕ್ತಿ–ಇವೆಲ್ಲವೂ ಸೇರಿ ವ್ಯವಸಾಯ ಆರ್ಥಿಕತೆಯನ್ನು ಬಲಗೊಳಿಸಿದವು.

ಭೂಮಿ ಸಾಗುವಳಿಗೆ–ಮುಖ್ಯವಾಗಿ ಹೊಸತಾಗಿ ವ್ಯವಸಾಯಕ್ಕೆತರಲಾದ ಭೂಮಿಯ ಸಾಗುವಳಿಗೆ, ದೃಢಕಾಯರಾದ ಕಾರ್ಮಿಕರನ್ನು ರೈತರನ್ನಾಗಿ ನೆಲೆಗೊಳಿಸಲಾಯಿತು. ಕಷ್ಟಪಟ್ಟು ಕೆಲಸ ಮಾಡಬಲ್ಲ ಬಡ ವ್ಯವಸಾಯಗಾರರಿಗೆ ಎತ್ತುಗಳನ್ನು, ಸರಂಜಾಮುಗಳನ್ನು, ಬೀಜವನ್ನು ಕೊಳ್ಳಲು ಸಹಾಯ ಧನ ನೀಡಲಾಗುತ್ತಿತ್ತು. ಹೈದರ್ ಆಲಿಯು ಉಪ್ಪುನೇರಳೆ (Mulberry) ವ್ಯವಸಾಯವನ್ನು ಆರಂಭಿಸಿದನು. ಆದರೆ ಇದು ಅಷ್ಟು ಫಲಪ್ರದವಾಗಲಿಲ್ಲ.

ಭಾರತದ ಇತರ ಭಾಗಗಳಲ್ಲಿ ಇದ್ದಂತೆಯೇ ಕರ್ಣಾಟಕದಲ್ಲಿಯೂ ನೆಯ್ಗೆಯೇ ಅತ್ಯಂತ ವಿಸ್ತಾರವಾಗಿ ಹರಡಿದ್ದ ಕೈಗಾರಿಕೆಯಾಗಿದ್ದಿತು. ಒಳ್ಳೆ ನಯವಾದ ಮತ್ತು ಅಂದವಾದ ಬಟ್ಟೆ ತಯಾರಿಸಲಾಗುತ್ತಿದ್ದಿತೆಂಬುದಾಗಿ ಬುಕ್ಯಾನನ್ ಅವರು ಹೇಳಿರುತ್ತಾರೆ. ಕರ್ಣಾಟಕದ ವಿವಿಧ ಕೇಂದ್ರಗಳಲ್ಲಿ ಅನೇಕ ಕೈಗಾರಿಕೆಗಳು ಅಭ್ಯುದಯ ಸ್ಥಿತಿಯಲ್ಲಿದ್ದವು ; ಕಬ್ಬಿಣ, ಉಕ್ಕು, ಗಾಜಿನ ಸರಕುಗಳು ಈ ಕೈಗಾರಿಕೆಗಳಲ್ಲಿ ಸೇರಿದ್ದವು. ಬಡವರಾದ ತಯಾರಿಕೆಯವರಿಗೆ ಸರ್ಕಾರದ ಧನಸಹಾಯ ದೊರೆಯುತ್ತಿತ್ತು.

ಹೆಚ್ಚು ಆರ್ಥಿಕ ಚಟುವಟಿಕೆ ಹೊಂದಿದ್ದ ವ್ಯಾಪಾರ ಕೇಂದ್ರಗಳು ಅನೇಕವಿದ್ದವು; ಷಾಗಂಜಾಂ, ಬೆಂಗಳೂರು, ಬಿದನೂರು, ಮಂಗಳೂರು, ಹೊನ್ನಾವರ, ಚನ್ನಪಟ್ಟಣ, ಹೊಸಕೋಟೆ, ಸಿರಾ, ಕೋಲಾರ, ಪಿರಿಯಾಪಟ್ಟಣ, ದಾವಣಗೆರೆ, ಬಳ್ಳಾರಿ ಮತ್ತು ಆದವಾನಿ—ಇವು ಇಂತಹ ಮುಖ್ಯವಾದ ಹಿರಿಯ ವ್ಯಾಪಾರ ಕೇಂದ್ರಗಳಾಗಿದ್ದವು. ರಾಜಧಾನಿಯಾದ ಶ್ರೀರಂಗಪಟ್ಟಣದ ಹತ್ತಿರದ ಷಾಗಂಜಾಂ ಎಂಬುದು ಹೈದರ್ ಆಲಿಯು ಸ್ಥಾಪಿಸಿದ ಭಾರಿ ಪೇಟೆಯಾಗಿದ್ದಿತು. ಸ್ವಂತ ರಕ್ಷಣೆಯ ಪ್ರಯೋಜನ ನೀಡಿ ಹೈದರನು ಈ ಪೇಟೆಗೆ ದೇಶದ ಅನೇಕ ಭಾಗಗಳಿಂದ ವ್ಯಾಪಾರಿಗಳೂ ಕೈಗಾರಿಕೆಯವರೂ ಬರುವಂತೆ ಮಾಡಿದ್ದನು. ಇರಾನ್ ಮತ್ತು ಡಾಮನ್ ರಾಜ್ಯಗಳಿಂದ ಅನೇಕ ಹೇರುಗಳ ಅಮೂಲ್ಯ ವಸ್ತುಗಳನ್ನು ಹೈದರನು ಆಕರ್ಷಿಸುತ್ತಿದ್ದನು ಎಂದು ಕಿರ್ಮಾನಿಯು ಹೇಳಿರುವನು. ಟಿಪ್ಪುಸುಲ್ತಾನನು ಸ್ವಂತ ಹೆಸರಿನಲ್ಲಿ ವ್ಯಾಪಾರ ನಡೆಯಿಸಿ ಹೆಚ್ಚು ಲಾಭ ಗಳಿಸುತ್ತಿದ್ದನೆಂದು ಹೇಳಲಾಗಿದೆ. ಒಳಸುಂಕ ಮತ್ತು ಆಕ್ಟ್ರಾಯ್ ತೆರಿಗೆಗಳು ವ್ಯಾಪಾರಕ್ಕೆ ಹೆಚ್ಚಿನ ಹೊರೆಯಾಗುವಂಥವಾಗಿರಲಿಲ್ಲ. ಹೊನ್ನಾವರ ಮತ್ತು ಮಂಗಳೂರು ಬಂದರುಗಳಲ್ಲಿ ವಿಧಿಸಲಾಗಿದ್ದ ಆಮದು ತೆರಿಗೆಗಳ ದರವೂ ಕಡಮೆಯಾಗಿದ್ದಿತು. ಭಾರತೀಯ ಮಾರುಕಟ್ಟೆ ಯಲ್ಲಿ ಆಗಲೇ ನೆಲಸುತ್ತಿದ್ದ ವಿದೇಶೀ ವ್ಯಾಪಾರಿಗಳಿಗೆ ಇದು ಸಹಾಯಕವಾಯಿತು. ಆಗ ಚಲಾವಣೆ ಯಲ್ಲಿರುತ್ತಿದ್ದ ವಿವಿಧ ನಾಣ್ಯಗಳೊಳಗೆ ಸರಿಯಾಗಿ ನಿಗದಿಯಾದ ವಿನಿಮಯ ದರಗಳಿದ್ದವು.

ಆ ಕಾಲದಲ್ಲಿ ಕರ್ಣಾಟಕವು ಗಣನೀಯವಾದ ನೌಕಾಬಲವನ್ನು ಹೊಂದಿದ್ದಿತು. ಮಂಗಳೂರು ಮತ್ತು ಹೊನ್ನಾವರಗಳಲ್ಲಿ ನೌಕಾ ಆಯುಧಶಾಲೆಯನ್ನು ಸ್ಥಾಪಿಸಲಾಯಿತು ಮತ್ತು ಯುದ್ಧ ನೌಕೆಗಳ ನಿರ್ಮಾಣಕ್ಕೆ ತಕ್ಕ ಹಡಗುಕಟ್ಟೆಗಳನ್ನು ನಿರ್ಮಿಸಲಾಯಿತು. ತುಂಗಾನದಿಯ ಮೇಲೆ ನೌಕಾಸಂಚಾರ ವ್ಯವಸ್ಥೆ ಏರ್ಪಾಡುಮಾಡಲು ಹೈದರನು ಪ್ರಯತ್ನಿಸಿದನು; ಆದರೆ ಇದು ಯಶಸ್ವಿಯಾಗಲಿಲ್ಲ. ಹೈದರನ ಕಾಲದ ಸ್ಥಿತಿಗಳ ಪ್ರತಿಯಾಗಿ ಟಿಪ್ಪುವಿನ ರಾಜ್ಯಭಾರವು ಹಿಂಸಾತ್ಮಕವೂ ಸಂಕುಚಿತ ಕಟ್ಟು ಪಾಡುಗಳಿಂದ ಕೂಡಿದುದೂ ಯುದ್ಧದ ಕಷ್ಟಗಳಿಂದ ಕೂಡಿದುದೂ ಆಗಿದ್ದುದು ದುರದೃಷ್ಟ ವಿಷಯ ವಾಗಿದೆ. ಇವೆಲ್ಲವುಗಳಿಂದ ಸಾಮಾನ್ಯ ಜನರು ನೆಮ್ಮದಿಯಿಂದ ಜೀವಿಸುವಂತಿರಲಿಲ್ಲ.

ಕೃಷಿ ಮತ್ತು ಕೈಗಾರಿಕೆಗಳು ಹೆಚ್ಚಾಗಿ ಸ್ಥಳೀಯ ಆವಶ್ಯಕತೆಗಳನ್ನು ಪೂರೈಕೆಗೊಳಿಸುವಂತಹ ಸ್ಥಳೀಯ ಸ್ವಸಂಪೂರ್ಣತೆ, ಸಾಟಿ ಪದ್ಧತಿಯ ಮೂಲಕ ವಿನಿಮಯ, ಸಂಪ್ರದಾಯ ಹಾಗೂ ಅಂತಸ್ತುಗಳ ಆಧಾರದ ಮೇಲೆ ಆರ್ಥಿಕ ಸಂಬಂಧಗಳ ರಚನೆ—ಇವೇ ಆರ್ಥಿಕ ಜೀವನದ ವಿಶೇಷ ಲಕ್ಷಣಗಳಾಗಿದ್ದವು.

ಹಿಂದಿನಿಂದಲೂ ನಡೆದು ಬಂದಿದ್ದ 'ಬಾರಾಬಲೂತಿ' ಪದ್ಧತಿಯು ಈ ಕಾಲದಲ್ಲಿಯೂ ಜಾರಿಯ ಲ್ಲಿದ್ದಿತು. ಪಟೇಲ, ಶ್ಯಾನುಭೋಗ, ಕೋಟಿ, ತಳಾರಿ, ನೀರುಗಂಟಿ, ಜೋಯಿಸ, ಕಮ್ಮಾರ, ಬಡಗಿ, ಕುಂಬಾರ, ಅಗಸ, ಹಜಾಮ ಮತ್ತು ಅಕ್ಕಸಾಲೆ—ಇವರು "ಬಾರಾ ಬಲೂತಿ"ಯಲ್ಲಿ ಸೇರಿದವರಾಗಿದ್ದರು. ಆರ್ಥಿಕ ದೃಷ್ಟಿಯಿಂದ ನೋಡಿದರೆ—ಶ್ರಮವಿಭಜನೆ, ಸಹಕಾರ ಮತ್ತು ಸಂಘ ವ್ಯವಸ್ಥೆಯ ತತ್ವಗಳು ಅಂದಿನ ಗ್ರಾಮ ಜೀವನದಲ್ಲಿ ಹೇಗೆ ಮಿಳಿತವಾಗಿದ್ದವು ಎಂಬುದನ್ನು ಈ ಪದ್ಧತಿಯು ತೋರಿಸುವುದು.

## ಕ್ರಿ.ಶ. 1800–1914

ಕರ್ಣಾಟಕ ರಾಜ್ಯದ ಮೇಲೆ ಬ್ರಿಟಿಷ್ ಸಾರ್ವಭೌಮತ್ವವು 1800 ರಲ್ಲಿ ಸ್ಥಾಪನೆಯಾಯಿತು. ಇದರಿಂದ ವರ್ಷಕ್ಕೆ $24\frac{1}{2}$ ಲಕ್ಷ ರೂಪಾಯಿಗಳಂತೆ ಬ್ರಿಟಿಷ್ ಸಾರ್ವಭೌಮರಿಗೆ ಕರ್ಣಾಟಕವು ಕಪ್ಪ ಕಾಣಿಕೆಯಾಗಿ ಸಲ್ಲಿಸಬೇಕಾಗಿ ಬಂದುದರ ನೇರವಾದ ಹೊರೆ ಕರ್ಣಾಟಕದ ಮೇಲೆ ಬಿದ್ದಂತಾಯ್ತು. ಅಲ್ಲದೆ, ಕರ್ಣಾಟಕದ ಏಕತೆ ಭಂಗವಾಗಿ ಅದರ ಕೆಲವು ಭಾಗಗಳು ಸುತ್ತುಮುತ್ತಲಿನ ಸಂಸ್ಥಾನಗಳೊಡನೆ

ಸೇರಿಸಲ್ಪಟ್ಟವು. ಉತ್ತರ ಮತ್ತು ದಕ್ಷಿಣ ಕನ್ನಡ, ಗುಲ್ಬರ್ಗ, ಬೀದರ್, ರಾಯಚೂರು, ಧಾರವಾಡ, ಬಳ್ಳಾರಿ, ಬೆಳಗಾಂ ಮತ್ತು ಬಿಜಾಪುರ-ಇವುಗಳು ಬ್ರಿಟಿಷ್ ಇಂಡಿಯ ಹಾಗೂ ಕೆಲವು ದೇಶೀಯ ಸಂಸ್ಥಾನಗಳೊಡನೆ ಹೀಗೆ ವಿಲೀನಗೊಳಿಸಲಾದ ಕರ್ನಾಟಕದ ಭಾಗಗಳಾಗಿದ್ದವು. ಹೀಗೆ ಉಂಟಾದ ಬದಲಾವಣೆಗಳಿಂದ ಮೈಸೂರು ಸಂಸ್ಥಾನಕ್ಕೆ ನೇರವಾದ ಸಮುದ್ರ ಸಂಪರ್ಕ ಕಡಿದಂತೆ ಆಯಿತು ; ಇದು ಸಂಸ್ಥಾನದ ಕೈಗಾರಿಕೆಗೆ ಹಾಗೂ ವಾಣಿಜ್ಯಾಭಿವೃದ್ಧಿಗೆ ಪ್ರತಿಕೂಲ ಅಂಶವಾಯಿತು. ಇತರ ಭಾಗಗಳ ಆರ್ಥಿಕದಶೆಯು, ಇವುಗಳು ಸೇರಿಕೊಂಡ ಆಯಾ ಬ್ರಿಟಿಷ್ ಇಂಡಿಯ ಭಾಗದ ಅಥವಾ ದೇಶೀಯ ಸಂಸ್ಥಾನದ ಆರ್ಥಿಕ ಆಗುಹೋಗು ಗಳೊಡನೆ ಬೆರೆತುಕೊಂಡಿತು.

ಕರ್ನಾಟಕದ ವ್ಯಾವಸಾಯಿಕ ಜೀವನವು ಹಿಂದೆ ವಿವರಿಸಿರುವ ರೀತಿಯಲ್ಲಿಯೇ ಮುಂದುವರಿಯಿತೆಂದು ಹೇಳಬಹುದು. ಆದರೆ, ಕೈಗೊಂಡ ಕೆಲವು ಪ್ರಯೋಗಗಳು ಮತ್ತು ವಿಸ್ತರಣಾಕ್ರಮಗಳು ಗಮನಾರ್ಹ ವಾಗಿವೆ. ಚೈನ, ಫಿಲಿಪ್ಪೈನ್ಸ್ ಮತ್ತು ಸೆಯಿಂಟ್ ಹೆಲೆನಾಗಳಿಂದ ಉಪ್ಪುನೇರಳೆಯನ್ನು (Mulberry) ಮೌರಿಷಸ್ ಮತ್ತು ದಕ್ಷಿಣ ಸಮುದ್ರ ದ್ವೀಪಗಳಿಂದ ಕೆಲವು ವಿಧದ ಕಬ್ಬುಗಳನ್ನೂ ನ್ಯೂ ಆರ್ಲಿಯನ್ಸ್, ಸೀಐಲೆಂಡ್ ಮತ್ತು ಬೋರ್ಬನ್‌ಗಳಿಂದ ಹತ್ತಿಯನ್ನೂ ಕರ್ನಾಟಕದ ವ್ಯವಸಾಯ ಕ್ಷೇತ್ರಕ್ಕೆ ಸೇರಿಸುವ ಪ್ರಯೋಗಗಳು ನಡೆಸಲ್ಪಟ್ಟವು. ಕಾಫಿತೋಟ ನಿರ್ಮಾಣಕ್ಕಾಗಿ ವಿಸ್ತಾರ ಪ್ರದೇಶಗಳನ್ನು ಹೆಚ್ಚು ಕಡಮೆ ಮುಫತ್ತಾಗಿಯೇ ನೀಡಿದುದರಿಂದ–ಹೆಚ್ಚಾಗಿ ಐರೋಪ್ಯ ಪ್ಲಾಂಟರುಗಳಿಗೆ ಕಾಫಿಬೆಳೆಯು ವಿಸ್ತರಿಸಿತು. ಆದರೆ 19ನೆ ಶತಮಾನದ ಕೊನೆಯ ದಶಕಗಳ ವರೆಗೂ ಕಾಫಿಯು ಕೇವಲ ರಫ್ತುಸರಕಾಗಿಯೇ ಇದ್ದಿತು. ಅಂದಿನಿಂದೀಚೆಗೆ ಕ್ರಮೇಣವಾಗಿ ರಾಜ್ಯದಲ್ಲಿ ಕಾಫಿ ಸೇವನೆಯು ನಿಧಾನವಾಗಿ ಬೆಳೆಯುತ್ತಾ ಬಂದಿತು.ಸರ್ ಮಾರ್ಕ್ ಕಬ್ಬನ್ ಅವರ ಕಾಲದಲ್ಲಿ ಅಷ್ಟಗ್ರಾಮ ಮತ್ತು ನಗರ ವಿಭಾಗಗಳಲ್ಲಿ ಸಬ್ಬಕ್ಕಿಯ, ಬೆಂಗಳೂರು ವಿಭಾಗದಲ್ಲಿ ಆಲೂಗಡ್ಡೆಯ ಮತ್ತು ಸಂಸ್ಥಾನದ ಅನೇಕ ಭಾಗಗಳಲ್ಲಿ ಹಣ್ಣುಗಳು ಮತ್ತು ಹೊಗೆಸೊಪ್ಪಿನ ಬೆಳೆಗಳಿಗೆ ಸರ್ಕಾರವು ವಿಶೇಷ ಗಮನ ನೀಡಿತು. 19ನೆಯ ಶತಮಾನದ ಮಧ್ಯದಲ್ಲಿ ಏಲಕ್ಕಿ ವ್ಯವಸಾಯಕ್ಕಾಗಿ ಭಾರಿ ತೋಟಗಳನ್ನು ಮೊತ್ತಮೊದಲಾಗಿ ಸ್ಥಾಪಿಸಿದುದೂ ಗಮನಾರ್ಹವಾಗಿದೆ.

ಕುರಿ ಪೋಷಣೆಗಾಗಿ ಆಸ್ಟ್ರೇಲಿಯದಿಂದ ಟಗರುಗಳನ್ನು ತರಿಸಿಕೊಂಡು ಉತ್ತಮ ಜಾತಿಯ ಕುರಿಗಳನ್ನು ಹೆಚ್ಚಿಸುವ ಪ್ರಯೋಗವು ಯಶಸ್ವಿಯಾಗಿ ನಡೆಯಿತು. ಅಲ್ಲದೆ, ಮೈಸೂರಿನ ಉಣ್ಣೆಗೆ ಲಂಡನ್ ಪೇಟೆಯಲ್ಲಿ ಒಳ್ಳೆಯ ಬೆಲೆ ಸಿಗುತ್ತಿತ್ತು.

ಕಮಿಷನ್ನಿನ ಆಳಿಕೆಯಲ್ಲಿ, 1863 ರಲ್ಲಿ ಆರಂಭಿಸಲಾದ ಮೋಜಣಿಕಾರ್ಯವು ಹತ್ತೊಂಬತ್ತನೆಯ ಶತಮಾನದ ಕೊನೆಯ ವೇಳೆಗೆ ಮುಗಿಯಿತು. ವ್ಯವಸಾಯಗಾರರ ಜಮೀನಿನ ಒಡೆತನ ಮತ್ತು ಹಕ್ಕು ಬಾಧ್ಯತೆಗಳ ಬಗ್ಗೆ ನಿಷ್ಕರ್ಷೆ ಮಾಡಿದುದು ಬ್ರಿಟಿಷ್ ಆಳಿಕೆಯಿಂದ ಮೈಸೂರಿಗೆ ಉಂಟಾದ ಮುಖ್ಯ ಪ್ರಯೋಜನವೆಂದು ಹೇಳಬಹುದು.

ಬೆಲೆಗಳು ಮತ್ತು ಕೂಲಿದರಗಳ ಬಗ್ಗೆ ಅಂಕಿ ಅಂಶಗಳು ಸಾಕಷ್ಟು ಇಲ್ಲವಾದರೂ, ಇರತಕ್ಕ ಆಧಾರದ ಮೇಲೆ ಹೇಳವುದಾದರೆ, ಆ ಶತಮಾನದಲ್ಲಿ ಕೂಲಿದರಗಳು ಸಾಮಾನ್ಯವಾಗಿ ದ್ವಿಗುಣಿತವಾದವು. 1913ಕ್ಕೆ ಹಿಂದಿನ ಕಾಲು ಶತಮಾನದ ಅವಧಿಯಲ್ಲಿ ರಾಗಿ ಮತ್ತು ಜೋಳದ ಬೆಲೆಗಳು ಎರಡರಷ್ಟನ್ನು ಮೀರಿಯೂ ಕಡಲೆಬೇಳೆಯ ಬೆಲೆಯು ಶೇಕಡ 50 ಕ್ಕ ಮೀರಿಯೂ ಏರಿದ್ದವು.

ಭಾರತದ ಇತರ ಪ್ರದೇಶಗಳಲ್ಲಿ ಇದ್ದಂತೆಯೇ ಕರ್ನಾಟಕದಲ್ಲಿಯು ಅತಿವೃಷ್ಟಿಯ ಅಥವಾ ಅನಾವೃಷ್ಟಿಯ ಪರಿಣಾಮವಾಗಿ ಪ್ರಾಪ್ತವಾಗುತ್ತಿದ್ದ ಕ್ಷಾಮಂಗಳಿಂದಲೂ, ಆಗಿಂದಾಗ್ಗೆ ಸಂಭವಿಸುತ್ತಿದ್ದ ಯುದ್ಧಗಳಿಂದಲೂ

ಜನಜೀವನದ ನೆಮ್ಮದಿಗೆ ಭಂಗ ಬರುತ್ತಿದ್ದಿತು. 1824, 1831, 1833, 1850, 1866, 1875–77, 1883–85, 1891–92 ಮತ್ತು 1900 ಈ ವರ್ಷಗಳು ಆಹಾರ ಪದಾರ್ಥಗಳ ತೀವ್ರ ಅಭಾವವಿದ್ದ ವರ್ಷಗಳಾಗಿದ್ದವು. 1875–77ರ ಕ್ಷಾಮದಲ್ಲಿ 51 ಲಕ್ಷ ಜನಸಂಖ್ಯೆಯಿದ್ದ ಮೈಸೂರು ರಾಜ್ಯದಲ್ಲಿಯೇ ಸುಮಾರು 11 ಲಕ್ಷಜನ ಮಡಿದರೆಂದು ಅಂದಾಜುಮಾಡಲಾಗಿದೆ. ಆಗಲೇ 'ಮೈಸೂರು ಕ್ಷಾಮ ನಿಯಮಾವಳಿ'ಯನ್ನು ಪ್ರಥಮತಃ ರೂಪಿಸಿ ಇದಕ್ಕೆ ಅನುಸಾರವಾಗಿ ಅನೇಕ ಪರಿಹಾರ ಹಾಗೂ ನಿವಾರಣಾ ಕ್ರಮಗಳನ್ನು ಕೈಗೊಳ್ಳಲಾಯಿತು. ಕ್ಷಾಮಬಾಧಿತ ಪ್ರದೇಶಗಳಿಗೆ ಕ್ಷಿಪ್ರವಾಗಿ ಆಹಾರ ಧಾನ್ಯಗಳನ್ನು ಸಾಗಿಸುವ ಆವಶ್ಯಕತೆಯು ರೈಲ್ವೆ ನಿರ್ಮಾಣದ ಆಲೋಚನೆಗೆ ಕಾರಣವಾಯಿತು. 1864ರಲ್ಲಿ ಬೆಂಗಳೂರು–ಮದರಾಸುಗಳ ನಡುವೆ ಏರ್ಪಾಡಾದ ರೈಲ್ವೆಯು ಸಂಸ್ಥಾನದ ಪ್ರಥಮ ರೈಲ್ವೆ ಮಾರ್ಗವಾಯಿತು. ಇದೇ ರೀತಿಯಲ್ಲಿ ಸಹಕಾರ, ನೀರಾವರಿ ಮತ್ತು ಇತರ ವ್ಯವಸಾಯಾಭಿವೃದ್ಧಿ ಕ್ರಮಗಳನ್ನೂ ಕೈಕೊಳ್ಳಲಾಯಿತು.

ಕರ್ನಾಟಕದ ಅರಣ್ಯಸಂಪತ್ತು ಅಪಾರವಾಗಿದೆ. ಅರಣ್ಯಗಳು ಪ್ರದೇಶದ ಮಳೆಬೀಳುವಿಕೆಯ ಮೇಲೆಯೂ ಪ್ರಭಾವ ಹೊಂದಿದೆ. ಗಂಧದ ಮರ, ನಾಟ, ಉರುವಲು, ಚರ್ಮಹದಗೊಳಿಸುವ ತೊಗಟೆ, ಅರಗು, ಜೇನುತುಪ್ಪ ಮತ್ತು ಮೇಣ ಇತ್ಯಾದಿ—ಉಪಯೋಗಕರ ವಸ್ತುಗಳೆಲ್ಲವನ್ನೂ ಅರಣ್ಯಗಳು ನೀಡುವುವು. ಚೀಫ್ ಕನ್ಸರ್‌ವೇಟರ್ ಕೈಕೆಳಗೆ ಒಂದು ಪ್ರತ್ಯೇಕ ಅರಣ್ಯಶಾಖೆಯು ಹತ್ತೊಂಬತ್ತನೆ ಶತಮಾನದ ಮಧ್ಯಭಾಗದಲ್ಲಿ ಸ್ಥಾಪನೆಯಾಯಿತು. ಲಕ್ಕವಳ್ಳಿ ಕಾಡು ಪ್ರದೇಶದಲ್ಲಿ ಸಾಗುವಾನಿ ಮರದ ಸಸಿಗಳನ್ನು ಹುಟ್ಟುಹಾಕಲಾಯಿತು. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಅರಣ್ಯಗಳು ಗಣನೀಯವಾಗಿ ಅಭಿವೃದ್ಧಿ ಹೊಂದಿದವು; ರಾಜ್ಯದ ಖಜಾನೆಗೆ ಬರುತ್ತಿದ್ದ ಆದಾಯಮೂಲಗಳಲ್ಲಿ ಭೂಕಂದಾಯವನ್ನು ಬಿಟ್ಟರೆ ಅರಣ್ಯಗಳಿಂದ ಹುಟ್ಟುತ್ತಿದ್ದ ವರಮಾನವೇ ಅತ್ಯಂತ ಮುಖ್ಯವಾಗಿದ್ದಿತು.

ಹಿಂದಿನ ಸ್ಥಳೀಯ ಕೈಗಾರಿಕೆಗಳು ಕ್ಷೀಣವಾದುದೂ ಕೆಲವು ಆಧುನಿಕ ಕೈಗಾರಿಕೆಗಳು ಸ್ಥಾಪನೆಯಾದುದೂ ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದ ಕರ್ನಾಟಕದ ಕೈಗಾರಿಕಾ ಇತಿಹಾಸದ ಮುಖ್ಯಾಂಶಗಳಾಗಿದ್ದವು. ಐರೋಪ್ಯ ರಾಷ್ಟ್ರಗಳಿಂದ ಕೈಗಾರಿಕಾಸರಕುಗಳನ್ನು ಆಮದು ಮಾಡಿಕೊಳ್ಳಲಾರಂಭಿಸಿದುದು ಸ್ಥಳೀಯ ಕೈಗಾರಿಕೆಗಳಿಗೆ ಭಾರಿ ಪೆಟ್ಟು ಕೊಟ್ಟಂತಾಯಿತು. ನೇಯ್ಗೆಯವರು ಯಂತ್ರಗಳಿಂದ ತಯಾರಾದ ನೂಲುಗಳನ್ನು ಉಪಯೋಗಿಸಲಾರಂಭಿಸಿದುದು ನೆಯ್ಗೆಗೃಹಕೈಗಾರಿಕೆಯ ಅವನತಿಗೂ ಉಣ್ಣೆಗಿರಣಿಗಳ ಸ್ಥಾಪನೆಯು ಉಣ್ಣೆ ಗೃಹ ಕೈಗಾರಿಕೆಯ ಅವನತಿಗೂ ಕಾರಣವಾದವು. ನೆಯ್ಗೆಯವರನೇಕರು ತಮ್ಮ ಉದ್ಯಮ ಸ್ವತಂತ್ರತೆಯನ್ನು ಕಳೆದುಕೊಂಡು ಕೆಲವು ಧನಿಕರ ಕೈಕೆಳಗೆ ಕಾರ್ಯಮಾನ ಕೂಲಿಯ ಪ್ರಕಾರ ಕೆಲಸಮಾಡಬೇಕಾಯಿತು.

ಅನೇಕ ಇತರ ಗೃಹಕೈಗಾರಿಕೆಗಳೂ ಕುಶಲಕೈಗಾರಿಕೆಗಳೂ ಅವನತಿಯಾದರೂ ಗಣನೀಯ ಸಂಖ್ಯೆ ಸಂಸಾರಗಳಿಗೆ ಆಧಾರವಾಗಿಯೇ ಮುಂದುವರಿದವು. ಹೆಚ್ಚಾಗಿ ತಮಿಳು ಭಾಷೆಯ ಮುಸಲ್ಮಾನರು (ಲಬ್ಬೆಗಳು) ಕೈಗೊಂಡಿದ್ದ ಚರ್ಮ ಹದಗೊಳಿಸುವಿಕೆ, ಕಬ್ಬಿಣ, ಉಕ್ಕು, ಕಂಚು, ತಾಮ್ರ ಇತ್ಯಾದಿ ಲೋಹಗಳ ಕೈಗಾರಿಕೆಗಳು, ಗಾಜಿನ ಬಳೆ, ಜರತಾರಿ ಕುಶಲ ಕೈಗಾರಿಕೆ, ಹೈದರಾಬಾದಿನ ಬಿದ್ರಿಸಾಮಾನು, ಬೆಂಗಳೂರಿನ ನಕ್ಕಿ ಕೆಲಸ, ಚನ್ನಪಟ್ಟಣದ ಚಿತ್ರಗಾರರ ಅರಗಿನ ಕೈಗಾರಿಕೆ, ಸಾಗರ ಮತ್ತು ಸೊರಬದ ಗುಡಿಗಾರರ ಗಂಧದ ಮರದ ಕೆತ್ತನೆ ಕೆಲಸ, ಮಾಗಡಿ ಬ್ರಾಹ್ಮಣರ ಸಂಗೀತವಾದ್ಯಗಳ ತಯಾರಿಕೆ, ವಾದ್ಯಗಳಿಗೆ ಬೇಕಾದ ಉಕ್ಕಿನ ತಂತಿ, ಮೈಸೂರು ಮತ್ತು ಬೆಂಗಳೂರಿನ ಅಗರುಬತ್ತಿ ಮತ್ತು ಸುಗಂಧ ದ್ರವ್ಯಗಳು, ಮೈಸೂರಿನ ಕುಂದಣ ಕೆಲಸ–ಇವೆಲ್ಲವೂ ಸ್ವಲ್ಪ ಅವನತಿ ಹೊಂದಿದ ಕೈಗಾರಿಕೆಗಳಾದರೂ ಅನೇಕ ಸಂಸಾರಗಳಿಗೆ ಆಸರೆಯಾಗಿ ಮುಂದುವರಿದ ಕೈಗಾರಿಕೆಗಳಾಗಿದ್ದವು. ಮರಗೆಲಸ, ಬಿದಿರು ಕೆಲಸ

ಚಾಪೆಹೆಣೆಯುವಿಕೆ, ಹಗ್ಗಮಾಡುವುದು, ಎಣ್ಣೆಗಾಣಗಳು, ಬೆಲ್ಲ ತಯಾರಿಕೆ—ಇವುಗಳು ಆಗಿನ ಕಾಲದ ಗ್ರಾಮೀಣ ಕೈಗಾರಿಕೆಗಳಾಗಿದ್ದವು. ಹತ್ತೊಂಬತ್ತನೆಯ ಶತಮಾನದ ಕೊನೆಯ ವೇಳೆಗೆ ಈ ಎಲ್ಲಾ ಕೈಗಾರಿಕೆಗಳ ಸ್ಥಿತಿಗತಿಗಳು ಅತೃಪ್ತಿಕರವಾಗಿದ್ದವು.

ರೇಷ್ಮೆ ಕೈಗಾರಿಕೆಯು ಕರ್ನಾಟಕದ ವಿಶಿಷ್ಟತರದ ಕೈಗಾರಿಕೆಯಾಗಿ ಬೆಳೆಯಿತು. ನಂಜನಗೂಡು, ಚಾಮರಾಜನಗರ, ಟಿ. ನರಸಿಪುರ, ಮಳವಳ್ಳಿ, ಮಂಡ್ಯ, ರಾಮನಗರ,ಚನ್ನಪಟ್ಟಣ, ಕಾನಕಾನಹಳ್ಳಿ, ದೇವನಹಳ್ಳಿ, ಕುಣಿಗಲ್–ಮಾಗಡಿ ಈ ತಾಲೂಕುಗಳ ಕೆಲವು ಪ್ರದೇಶಗಳೂ ಕೋಲಾರ ಜಿಲ್ಲೆಯ ಕೆಲವು ಪ್ರದೇಶಗಳೂ ಸೇರಿ ಸಂಸ್ಥಾನದ ರೇಷ್ಮೆಪ್ರದೇಶವಾಗಿದ್ದಿತು. 1911—12ರ ವೇಳೆಗೆ ಸುಮಾರು 33,000 ಎಕರೆ ಭೂಮಿಯನ್ನು ಉಪ್ಪುನೇರಳೆ (Mulberry) ವ್ಯವಸಾಯಕ್ಕಾಗಿ ಉಪಯೋಗಿಸಲಾಗಿದ್ದಿತೆಂದೂ ಉತ್ಪಾದನೆಯಾಗುತ್ತಿದ್ದ ರೇಷ್ಮೆಯ ಬೆಲೆ ವರ್ಷಕ್ಕೆ ಸುಮಾರು ರೂ. 80–110 ಲಕ್ಷಗಳಷ್ಟು ಇದ್ದಿತೆಂದೂ ಈ ಉತ್ಪಾದನೆಯ ⅕ ಭಾಗವು ರಫ್ತಾಗುತ್ತಿದ್ದು ಉಳಿದುದು ಸ್ಥಳೀಯ ನೆಯ್ಗೆಯವರಿಂದ ಉಪಯೋಗಿಸಲ್ಪಡುತ್ತಿತ್ತೆಂದೂ ಹೇಳಲಾಗಿದೆ.

ರೇಷ್ಮೆ ಕೈಗಾರಿಕೆಯಲ್ಲಿ ಶ್ರಮವಿಭಜನೆ ತತ್ವದ ಆಚರಣೆಯನ್ನು ಕಾಣಬಹುದು. ಒಂದು ಗುಂಪಿನ ರೈತರು ಉಪ್ಪುನೇರಳೆ ವ್ಯವಸಾಯದಲ್ಲಿಯೂ ಎರಡನೆ ಗುಂಪಿನ ಜನರು ರೇಷ್ಮೆಹುಳುಗಳ ಪೋಷಣೆಯಲ್ಲಿಯೂ ಮೂರನೆಯ ಗುಂಪೊಂದು—ಸಾಮಾನ್ಯವಾಗಿ ಮುಸಲ್ಮಾನರು ಮತ್ತು ಹರಿಜನರು–ರೇಷ್ಮೆ ನೂಲುವುದರಲ್ಲಿಯೂ ನಾಲ್ಕನೆಯ ಗುಂಪು ರೇಷ್ಮೆ ನೆಯ್ಗೆಯಲ್ಲಿಯೂ ತೊಡಗಿದ್ದರು. ಈ ರೇಷ್ಮೆ ಉದ್ಯಮದ ಲಾಭ ಹಂಚಿಕೆಯಲ್ಲಿ ರೇಷ್ಮೆಹುಳು ಪೋಷಕರು ಅತ್ಯಂತ ಹೆಚ್ಚು ಭಾಗ ಪ್ರಯೋಜನವನ್ನು, ಉಪ್ಪುನೇರಳೆ ವ್ಯವಸಾಯಗಾರರು ಅತ್ಯಂತ ಕಡಮೆ ಭಾಗ ಪ್ರಯೋಜನವನ್ನು ಪಡೆಯುತ್ತಿದ್ದರೆಂದು ಹೇಳಲಾಗಿದೆ. ಉದ್ಯಮದ ಈ ಎರಡು ಕ್ರಿಯೆಗಳನ್ನು ಕೈಗೊಳ್ಳುತ್ತಿದ್ದ ಸಂಸಾರದ ಆರ್ಥಿಕ ಸ್ಥಿತಿಯು ಅನೇಕ ಇತರ ವ್ಯವಸಾಯಗಾರರ ಸ್ಥಿತಿಗತಿಗಳಿಗಿಂತಲೂ ಉತ್ತಮವಾಗಿದ್ದಿತು. ರೇಷ್ಮೆ ನೆಯ್ಗೆಕಾರ್ಯದ ಬಹುಭಾಗವು ಬೆಂಗಳೂರಿನಲ್ಲಿ ನಡೆಯುತ್ತಿದ್ದಿತು.

ಪುರಾತನ ಕೈಗಾರಿಕೆಗಳನೇಕವು ಅವನತಿಯಾಗುತ್ತಿದ್ದ ಆ ಕಾಲದಲ್ಲಿಯೇ ಕೆಲವು ಆಧುನಿಕ ಕೈಗಾರಿಕೆಗಳೂ ಕರ್ನಾಟಕದಲ್ಲಿ ಹುಟ್ಟಿದವು. ಜಾನ್‌ಟೇಲರ್ ಮತ್ತು ಪುತ್ರರ ಕೋಲಾರ ಚಿನ್ನದ ಗಣಿ ಕಂಪೆನಿ, ರಾಯಚೂರು-ದೋಆಬ್ ಪ್ರದೇಶದ ಚಿನ್ನದ ಗಣಿ (1882), ಮೈಸೂರು ಸ್ಪಿನ್ನಿಂಗ್ ಮತ್ತು ಮ್ಯಾನುಫಾಕ್ಚರಿಂಗ್ ಕಂಪೆನಿ (1883), ಬೆಂಗಳೂರು ಕಾಟನ್ ಮತ್ತು ಸಿಲ್ಕ್ ಮಿಲ್ಲು ಮತ್ತು ದಾವಣಗೆರೆ ಕಾಟನ್ ಜಿನ್ನಿಂಗ್ ಫ್ಯಾಕ್ಟರಿ, ಗುಲ್ಬರ್ಗದ M. S.K. ಮಿಲ್ಲುಗಳು, ಬೆಂಗಳೂರಿನ ಕಾಫಿ ಕ್ಯೂರಿಂಗ್ ವರ್ಕ್ಸ್1884, ಕಾವೇರಿ ಜಲವಿದ್ಯುಚ್ಛಕ್ತಿ ಯೋಜನೆ ಮತ್ತು ಶಿವಮೊಗ್ಗದ ಮ್ಯಾಂಗನೀಸ್ ಕಂಪೆನಿ (1900)–ಇವು 19ನೆ ಶತಮಾನದ ಕೊನೆಯ ಎರಡು ದಶಕಗಳ ಪ್ರಮುಖ ಕೈಗಾರಿಕೆಯ ಬೆಳವಣಿಗೆಗಳಾಗಿದ್ದವು. ಕರ್ನಾಟಕವು ಆಧುನಿಕ ಕೈಗಾರಿಕಾ ಕ್ಷೇತ್ರವೊಂದನ್ನು ಈ ದಶಕಗಳಲ್ಲಿ ಸ್ಥಾಪಿಸಿತು ಎಂಬುದು ಈ ಬೆಳವಣಿಗೆಗಳಿಂದ ವ್ಯಕ್ತವಾಗುವುದು. ಈ ಕೈಗಾರಿಕೆಯ ಬೆಳವಣಿಗೆಯಲ್ಲಿ ಖಾಸಗಿ ಉದ್ಯಮಶೀಲರ—ರಾಜ್ಯದ ಹೊರಗಡೆಯಿಂದ ಬಂದವರೂ ಸೇರಿ–ಪಾತ್ರ ಮುಖ್ಯವಾಗಿದ್ದಿತು. ಮೈಸೂರು ಸರ್ಕಾರವೂ ಕಂಪೆನಿಗಳ ಷೇರು ಕೊಳ್ಳುವುದು. ಸುಲಭ ಷರತ್ತುಗಳ ಪ್ರಕಾರ ಸಾಲ ನೀಡುವುದು ಮತ್ತು ಇತರ ಅನೇಕ ರೂಪಗಳಲ್ಲಿ ವಿಶೇಷ ಆಸಕ್ತಿಯಿಂದ ಕೈಗಾರಿಕೆಯ ಬೆಳವಣಿಗೆಗೆ ಉತ್ತೇಜನ ಕೊಟ್ಟಿತು.

1914 ರ ವೇಳೆಗೆ ಮೇಲೆ ಹೇಳಿರುವ ಉದ್ಯಮಗಳ ಜೊತೆಗೆ ಅನೇಕ ಗಿರಣಿಗಳು, ಅಕ್ಕಿಯ ಗಿರಣಿ

ಗಳು, ಹೆಂಚಿನ ಕಾರ್ಖಾನೆಗಳು, ಮರಗೆಲಸದ ಕಾರ್ಖಾನೆಗಳು, ಪ್ರಿಂಟಿಂಗ್ ಪ್ರೆಸ್ಸುಗಳು, ಸಿಗರೇಟ ಕಾರ್ಖಾನೆಗಳು, ಕಬ್ಬಿಣ ಮತ್ತು ಹಿತ್ತಾಳೆ ಫೌಂಡ್ರಿಗಳು ಸ್ಥಾಪಿಸಲ್ಪಟ್ಟಿದ್ದವು.

ಗಣಿಗಳನ್ನು ಬಿಟ್ಟರೆ 1913–14ರಲ್ಲಿ ಮೈಸೂರು ಸಂಸ್ಥಾನದಲ್ಲಿ 4,451 ಜನರಿಗೆ ಉದ್ಯೋಗ ನೀಡಿದ್ದ ಮತ್ತು ವರ್ಷಕ್ಕೆ ಸುಮಾರು 1.6 ಕೋಟಿ ರೂಪಾಯಿಗಳ ಬೆಲೆಯ ಸರಕುಗಳನ್ನು ಉತ್ಪಾದಿಸುತ್ತಿದ್ದ 72 ಕಾರ್ಖಾನೆಗಳಿದ್ದವು. 15 ಚಿನ್ನದ ಗಣಿ ಕಂಪೆನಿಗಳು 24,300 ಜನರಿಗೆ ಉದ್ಯೋಗಾವಕಾಶ ಕಲ್ಪಿಸಿದ್ದುವೇ ಅಲ್ಲದೆ ವರ್ಷಕ್ಕೆ ಸುಮಾರು 19 ಲಕ್ಷ ರೂಪಾಯಿ ಬೆಲೆಬಾಳುವ 5 ಲಕ್ಷ ಔನ್ಸುಗಳಷ್ಟು ಚಿನ್ನವನ್ನು ಉತ್ಪಾದಿಸುತ್ತಿದ್ದುವು.

ಆದರೆ, ಒಟ್ಟಿನಲ್ಲಿ ವ್ಯವಸ್ಥಿತ ಆಧುನಿಕ ಕೈಗಾರಿಕೆಯಲ್ಲಿ ನಿರತರಾಗಿದ್ದವರ ಭಾಗ ಒಟ್ಟು ಕೈಗಾರಿಕಾ ಜನಸಂಖ್ಯೆಯ ಸುಮಾರು 4½ಲಕ್ಷ ಜನರ—ಅಂದರೆ ಜನಸಂಖ್ಯೆಯ ಸುಮಾರು ಶೇಕಡ 8 ರಷ್ಟು ಭಾಗದ ಕೇವಲ ಅಲ್ಪಭಾಗ ಮಾತ್ರವೇ ಆಗಿದ್ದಿತು.

ಕೈಗಾರಿಕಾಭಿವೃದ್ಧಿಗೆ ಆವಶ್ಯಕವಾದ ಸಾರಿಗೆ ಮತ್ತು ಸಂಪರ್ಕಗಳ ಪ್ರಗತಿಯು ನಿಧಾನವಾಗಿ ಆಗೊಮ್ಮೆ ಈಗೊಮ್ಮೆ ಸಂಭವಿಸಿತು. ಮೈಸೂರು ಸಂಸ್ಥಾನಕ್ಕೆ ಸಮುದ್ರಕ್ಕೆ ಹೋಗಲು ನೇರವಾದ ಸಂಚಾರದ ಅವಕಾಶವಿರಲಿಲ್ಲ. ಕರ್ಣಾಟಕದ ಬಂದರುಗಳಾದ ಮಂಗಳೂರು, ಕಾರವಾರ ಮತ್ತು ಭಟ್ಕಳ ಗಳು ಅಭಿವೃದ್ಧಿಯಾಗಿರಲಿಲ್ಲ. ರೈಲ್ವೆ ಸಂಚಾರ ಆರಂಭವಾದುದೇ ಆಂತರಿಕ ಸಾರಿಗೆ ಬಗ್ಗೆ ಅತ್ಯಂತ ಗಮನಾರ್ಹ ವಿಷಯವಾಗಿದ್ದಿತು. 1864 ರಲ್ಲಿ ಸ್ಥಾಪಿಸಲಾದ ಬೆಂಗಳೂರು—ಮದರಾಸು ರೈಲ್ವೆ ಸಂಪರ್ಕ ಮತ್ತು ರಾಯಚೂರು ಗುಲ್ಬರ್ಗ ಜಿಲ್ಲೆಗಳ ಮೂಲಕ ಹಾದುಹೋಗುವ ಮದ್ರಾಸು-ಬೊಂಬಾಯಿ ರೈಲ್ವೆಗಳ ಜೊತೆಗೆ ಹತ್ತೊಂಬತ್ತನೆಯ ಶತಮಾನದ ಕೊನೆಯ ಎರಡು ದಶಕಗಳಲ್ಲಿ ಅನೇಕ ರೈಲ್ವೆ ಮಾರ್ಗ ಗಳನ್ನು ತೆರೆಯಲಾಯಿತು. ಬಾಬಾಬುಡನ್ ಬೆಟ್ಟದ ರಸ್ತೆ, ಸಾಗರ-ಮಲ್ನಾಡು ರಸ್ತೆ, ಬಿಸಲೆ ಘಾಟಿ ರಸ್ತೆ, ಮೈಸೂರು-ಮಾನಂತಾಡಿ ರಸ್ತೆ; ಪಶ್ಚಿಮ ಘಟ್ಟಗಳಲ್ಲಿ ನಾಲ್ಕು ಮಾರ್ಗಗಳು—ಆಗುಂಬೆ, ಶಿರಾಡಿ, ಸಂಪಾಜೆ ಮತ್ತು ಚಾರ್ಮಾಡಿ; ಶಿವಮೊಗ್ಗದಲ್ಲಿ ತುಂಗಾಸೇತುವೆ, ಬೆಂಕಿಪುರದಲ್ಲಿ (ಈಗಿನ ಭದ್ರಾವತಿ) ಭದ್ರಾಸೇತುವೆ, ಹರಿಹರದಲ್ಲಿ ತುಂಗಭದ್ರಾ ಸೇತುವೆ, ಸಕಲೇಶಪುರದಲ್ಲಿ ಹೇಮಾವತಿ ಸೇತುವೆ–ಇವೆಲ್ಲವೂ ರಸ್ತೆ ಸಾರಿಗೆ ಕ್ಷೇತ್ರದ ಮುಖ್ಯ ಬೆಳವಣಿಗೆಗಳಾಗಿದ್ದವು.

ಕರ್ಣಾಟಕವು ಇತರ ದೇಶಗಳೊಡನೆ ನಡೆಸುತ್ತಿದ್ದ ವ್ಯಾಪಾರವು ಹೆಚ್ಚಾಗಿ ಹೊನ್ನಾವರದ ಮೂಲಕ ನಡೆಯುತ್ತಿತ್ತು. ಹೊನ್ನಾವರ, ಕುಂದಾಪುರ ಮತ್ತು ಅಂಕೋಲಾ–ಇವು ಮುಖ್ಯ ವ್ಯಾಪಾರ ಕೇಂದ್ರ ಗಳಾಗಿದ್ದುವೆಂದೂ ಮೆಣಸು, ಅಡಕೆ, ತೆಂಗು ಮತ್ತು ಅಕ್ಕಿ—ಇವೇ ರಫ್ತು ವ್ಯಾಪಾರದ ಮುಖ್ಯ ಸರಕು ಗಳಾಗಿದ್ದುವೆಂದೂ ಬುಕ್ಯಾನನ್ ಅವರ ಮೂಲಗ್ರಂಥದಲ್ಲಿ ಹೇಳಲಾಗಿದೆ. ಮೆಣಸಿನ ವ್ಯಾಪಾರದ ಏಕ ಸ್ವಾಮ್ಯವು ಕಂಪೆನಿಗೆ ಸೇರಿದ್ದಿತು; ಅದು ರಫ್ತಿಗೋಸ್ಕರವಾಗಿ ವರ್ಷಕ್ಕೆ ಸುಮಾರು 750 ಖಂಡಿ ಮೆಣಸನ್ನು ಸಂಗ್ರಹಿಸುತ್ತಿತ್ತು (1 ಖಂಡಿ = 520 ಪೌಂಡುಗಳು); ಮತ್ತು ಇದರ ಬೆಲೆ ಖಂಡಿ ಒಂದಕ್ಕೆ 110 ರಿಂದ 120 ರೂಪಾಯಿಗಳ ವರೆಗೆ ಇದ್ದಿತು. ಉಪ್ಪು, ಗಂಧಕ, ತವರ, ಸೀಸ, ಸತವು, ತಾಮ್ರ, ಐರೋಪ್ಯ ಉಕ್ಕು, ಬಣ್ಣಗಳು ಮತ್ತು ಅಂಟು, ಜಾಯಿಕಾಯಿ, ಲವಂಗ, ಕರ್ಪೂರ, ಕಚ್ಚಾ ಸಿಲ್ಕು, ಖರ್ಜೂರ, ಬಾದಾಮಿ ಮತ್ತು ಅನೇಕ ತರದ ಇಂಗ್ಲಿಷ್ ಸಿದ್ಧಪಡಿಸಿದ ವಸ್ತುಗಳು—ಇವೇ ಕರ್ಣಾಟಕವು ಆಮದು ಮಾಡಿಕೊಳ್ಳುತ್ತಿದ್ದ ಸರಕುಗಳಾಗಿದ್ದವು. ಅಡಕೆ, ಗಂಧದಮರ, ಮೆಣಸು, ಏಲಕ್ಕಿ, ಹುಣಸೆಹಣ್ಣು, ಧಾನ್ಯಗಳು–ಚರ್ಮ ಮತ್ತು ಕೊಂಬುಗಳು, ಇವು ರಫ್ತಾಗುತ್ತಿದ್ದ ಸರಕುಗಳಾಗಿದ್ದವು. ಹೊರ ವ್ಯಾಪಾರದ

ಈ ನಮೂನೆಯಲ್ಲಿ ಹೆಚ್ಚು ಬದಲಾವಣೆಯಾಗಲಿಲ್ಲ; ಆದರೆ ಹತ್ತೊಂಬತ್ತನೆಯ ಶತಮಾನದ ದ್ವಿತೀಯಾರ್ಧದಲ್ಲಿ ಕಾಫಿ, ಅಫೀಮು, ಮರಮಟ್ಟು ಇಂತಹ ಕೆಲವು ಸರಕುಗಳು ರಫ್ತು ಪಟ್ಟಿಗೂ, ಹೆಚ್ಚು ವಿಧಗಳ ಸಿದ್ಧಪಡಿಸಿದ ಸರಕುಗಳು ಆಮದು ಪಟ್ಟಿಗೂ ಸೇರಿದವು.

ಹೊರ ವ್ಯಾಪಾರದ ಒಟ್ಟು ಮೊತ್ತವು ಕಡಮೆಯಾಗಿದ್ದುದು ಶತಮಾನದ ಕೊನೆಯ ದಶಕಗಳಲ್ಲಿ ಗಣನೀಯವಾಗಿ ಹೆಚ್ಚಾಯಿತು. ರಾಜ್ಯದ ಆಮದು ವ್ಯಾಪಾರದ ಮೊತ್ತವು 1880–81 ರಲ್ಲಿ ಸುಮಾರು 175 ಲಕ್ಷ ರೂಪಾಯಿಗಳಷ್ಟು ಇದ್ದುದು 1890–91 ರಲ್ಲಿ 281 ಲಕ್ಷಕ್ಕೂ 1913-14 ರಲ್ಲಿ 673 ಲಕ್ಷ ರೂಪಾಯಿಗಳಿಗೂ ಹೆಚ್ಚಿತು; ಇದೇ ರೀತಿಯಲ್ಲಿ ರಫ್ತು ವ್ಯಾಪಾರದ ಮೊತ್ತವು ಇದೇ ಅವಧಿಗಳಲ್ಲಿ ಕ್ರಮವಾಗಿ ಸುಮಾರು 92 ಲಕ್ಷ ರೂಪಾಯಿಗಳಿಂದ 253 ಲಕ್ಷ ಮತ್ತು 547 ಲಕ್ಷಕ್ಕೆ ಹೆಚ್ಚಿತು. ಸಾರಿಗೆ ಸೌಕರ್ಯಗಳ ಬೆಳವಣಿಗೆಯೇ ಈ ಹೆಚ್ಚುವರಿಗಳಿಗೆ ಮುಖ್ಯ ಕಾರಣವಾಗಿದ್ದಿತು.

ವಾರಕ್ಕೊಮ್ಮೆ ನಡೆಯುತ್ತಿದ್ದ ಸಂತೆ ಮತ್ತು ಆಗಿಂದಾಗ್ಗೆ ಸೇರುತ್ತಿದ್ದ ಜಾತ್ರೆಗಳು ಸಾಮಾನ್ಯ ಜನರ ಜೀವನಕ್ಕೆ ಹೆಚ್ಚು ಸಂಬಂಧ ಹೊಂದಿದ್ದ ಆಂತರಿಕ ವ್ಯಾಪಾರದ ಮುಖ್ಯ ಲಕ್ಷಣವಾಗಿದ್ದವು. 19 ನೆಯ ಶತಮಾನದ ಮಧ್ಯಭಾಗದಲ್ಲಿ ವಾರ ವಾರದ ಸಂತೆಯು ರಾಜ್ಯದ 121 ಊರುಗಳಲ್ಲಿ ನಡೆಯುತ್ತಿದ್ದಿತು; ಜನರು ಮಾರಲು ಮತ್ತು ಕೊಳ್ಳಲು ಹೆಚ್ಚು ಸಂಖ್ಯೆಯಲ್ಲಿ ಈ ಸಂತೆಗಳಲ್ಲಿ ಸೇರುತ್ತಿದ್ದರು. ಬ್ಯಾಂಕು ಮತ್ತು ವ್ಯಾಪಾರಿ ಕಂಪೆನಿಗಳು ಹೆಚ್ಚು ಹೆಚ್ಚಾಗಿ ಸ್ಥಾಪನೆಯಾದುದು ವ್ಯಾಪಾರದ ಬೆಳವಣಿಗೆಯನ್ನು ಸೂಚಿಸುವುದು; 1894-95 ರಲ್ಲಿ ರಾಜ್ಯದಲ್ಲಿ 92 ಬ್ಯಾಂಕು ಮತ್ತು ವಾಣಿಜ್ಯ ಕಂಪೆನಿಗಳಿದ್ದವು.

ಈ ಕಾಲಾವಧಿಯಲ್ಲಿ ರಾಜ್ಯದ ಜನಸಂಖ್ಯೆ ಕಡಮೆಯಾಗಿಯೇ ಇದ್ದಿತು. 19ನೆಯ ಶತಮಾನದ ಪ್ರಥಮಾರ್ಧದಲ್ಲಿ ಜನಸಂಖ್ಯೆ ಹೆಚ್ಚು ಕಡಮೆ ದ್ವಿಗುಣಿತವಾಯಿತೆಂದು ಅಂದಾಜುಮಾಡಲಾಗಿದೆ. ಪ್ರಥಮ ಖಾನೇಷುಮಾರಿ ತೆಗೆದುಕೊಂಡ 1871 ರಿಂದ ಈಚಿನ ಜನಸಂಖ್ಯೆ ಬೆಳವಣಿಗೆ ಬಗ್ಗೆ ಹೆಚ್ಚು ವಿಶ್ವಾಸಾರ್ಹವಾದ ಅಂದಾಜುಗಳಿವೆ. ಈ ದಶವಾರ್ಷಿಕ ಗಣನೆಗಳ ಪ್ರಕಾರ 1871–1911ರ ಅವಧಿಯಲ್ಲಿ ಜನಸಂಖ್ಯೆಯು ಶೇಕಡ 14·72 ರಷ್ಟು ಹೆಚ್ಚಿದ್ದಿತು. ಒಟ್ಟು ಜನಸಂಖ್ಯೆಯಲ್ಲಿ ಪಟ್ಟಣವಾಸಿಗಳ ಭಾಗ ಕೇವಲ ಶೇಕಡ 9·7 ರಷ್ಟಿದ್ದಿತು. 1911ರ ವೇಳೆಗೆ ಪಟ್ಟಣಗಳ ಸಂಖ್ಯೆ ಹಿಂದಿಗಿಂತಲೂ ಹೆಚ್ಚಾಗಿದ್ದವಾದರೂ ಇವುಗಳು ಅಷ್ಟೇನೂ ಮಿತಿಮೀರಿದ ಜನಸಾಂದ್ರತೆ ಹೊಂದಿರಲಿಲ್ಲ. 5000 ಕ್ಕೆ ಮೀರಿದ ಜನಸಂಖ್ಯೆಯಿದ್ದ ಪಟ್ಟಣಗಳು ಕೇವಲ 27 ಮಾತ್ರವಾಗಿದ್ದವು. 88,651 ಜನರಿದ್ದ ಬೆಂಗಳೂರು ಮತ್ತು 71,306 ಜನರಿದ್ದ ಮೈಸೂರು ಇವೆರಡೇ ಮೈಸೂರು ರಾಜ್ಯದಲ್ಲಿ ಹೆಚ್ಚಾಗಿ ಬೆಳೆದ ಪಟ್ಟಣಗಳಾಗಿದ್ದವು.

ರಾಜ್ಯದ ಮಲ್ನಾಡು ಪ್ರದೇಶದ ಜನಸಂಖ್ಯೆ ಇಳಿವರಿಯು 1911ರ ಜನಗಣತಿಯಿಂದ ತಿಳಿಯ ಬಂದ ವಿಶೇಷವಾದ ಅಂಶವಾಗಿದೆ. 1901ಕ್ಕೆ ಹೋಲಿಸಿದರೆ 1911 ರಲ್ಲಿ ಜನಸಂಖೆಯು ಶಿವಮೊಗ್ಗ ಜಿಲ್ಲೆಯಲ್ಲಿ 15,020 ರಷ್ಟು ಕಡಮೆಯೂ ಕಡೂರು ಜಿಲ್ಲೆಯಲ್ಲಿ 20,813 ರಷ್ಟು ಕಡಮೆಯೂ ಆಗಿದ್ದಿತು.

ಕರ್ಣಾಟಕ ಹಾಗೂ ನೆರೆಯ ಪ್ರದೇಶಗಳೊಳಗೆ ಜನರು—ಮುಖ್ಯವಾಗಿ ಶ್ರಮ ಜೀವಿಗಳು—ಸ್ಥಾನಾಂತರ ಮಾಡಿಕೊಳ್ಳುತ್ತಿದ್ದುದು ಗಮನಾರ್ಹವಾದ ಇನ್ನೊಂದು ಅಂಶವಾಗಿದೆ. ಹತ್ತೊಂಬತ್ತನೆಯ ಶತಮಾನದ ದ್ವಿತೀಯ ಭಾಗದಲ್ಲಿ ಮೈಸೂರು ಸಂಸ್ಥಾನವು ಬಹುಮಟ್ಟಿಗೆ ಅಕ್ಕಪಕ್ಕ ಪ್ರದೇಶದ ಶ್ರಮ ಜೀವಿಗಳ ಮೇಲೆ ಆಸರೆಯಾಗಿದ್ದಿತು. 1891–1901ರ ಅವಧಿಯ ಎರಡು ದಶಕಗಳಲ್ಲಿ ಮೈಸೂರು

ರಾಜ್ಯಕ್ಕೆ ಹೊರಗಡೆಯಿಂದ ಬಂದವರ ಸಂಖ್ಯೆಯು ರಾಜ್ಯದಿಂದ ಹೊರಗಡೆ ಹೋದವರ ಸಂಖ್ಯೆಗಿಂತಲೂ 3,41,173 ರಷ್ಟು ಹೆಚ್ಚಾಗಿದ್ದಿತು. ರಾಜ್ಯದ ಕಾಫಿ ಮತ್ತು ಅಡಕೆ ತೋಟಗಳೂ, ಮಲ್ನಾಡಿನ ಬತ್ತದ ಸಾಗುವಳಿಯೂ ಉತ್ತರ ಹಾಗೂ ದಕ್ಷಿಣ ಕನ್ನಡ ಮತ್ತು ಮಲಬಾರು ಪ್ರಾಂತ್ಯಗಳ ಶ್ರಮಜೀವಿಗಳನ್ನು ಹೆಚ್ಚಾಗಿ ಅವಲಂಬಿಸಿದ್ದವು. ಕೋಲಾರದ ಚಿನ್ನದ ಗಣಿಗಳಿಗೂ ಬೆಂಗಳೂರಿನಲ್ಲಿ ಸ್ಥಾಪನೆಯಾದ ಕೆಲವು ಗಿರಣಿಗಳು ಮತ್ತು ನಿರ್ಮಾಣ ಕೈಗಾರಿಕೆಗಳಿಗೂ ಉತ್ತರ ಆರ್ಕಾಟು, ಬಳ್ಳಾರಿ, ಅನಂತಪುರ, ಕಡಪಾ ಜಿಲ್ಲೆಗಳಿಂದ ಕಾರ್ಮಿಕರನ್ನು ತೆಗೆದುಕೊಳ್ಳಲಾಯಿತು. ರಾಜ್ಯದ ಕಾರ್ಮಿಕರು ಮುಖ್ಯವಾಗಿ ಕೊಡಗು ಮತ್ತು ಸಿಲೋನ್‌ಗಳಿಗೆ ಸ್ಥಳಾಂತರವಾದರು.

ಸಂಕ್ಷಿಪ್ತವಾಗಿ ಹೇಳುವುದಾದರೆ ಹತ್ತೊಂಬತ್ತನೆಯ ಶತಮಾನದಲ್ಲಿ ರಾಜ್ಯದಲ್ಲಿ ಆಧುನಿಕ ಆರ್ಥಿಕಾಭಿವೃದ್ಧಿಯು ಅಷ್ಟಾಗಿ ಸಂಭವಿಸಲಿಲ್ಲ. ವ್ಯವಸಾಯವು ಸಾಂಪ್ರದಾಯಿಕ ಮಾರ್ಗದಲ್ಲಿಯೇ ನಡೆಯುತ್ತಿತ್ತು. ಹಿಂದಿನ ಪಂಚಾಯತಿ ಪದ್ಧತಿ ಅಳಿದು ಗ್ರಾಮದ ಸಾಮುದಾಯಿಕ ಜೀವನ ಅಸ್ತವ್ಯಸ್ತವಾದುದರಿಂದ ಗ್ರಾಮೀಣ ಆರ್ಥಿಕ ಜೀವನವು ಹದಗೆಟ್ಟಂತೆ ಆಗಿದ್ದಿತು. ಸ್ವದೇಶಿ ಕೈಗಾರಿಕೆಗಳೂ ಕುಶಲವೃತ್ತಿಗಳೂ ಕ್ಷೀಣವಾದುವರಿಂದ ಅನೇಕ ಕುಟುಂಬಗಳು ಬಡತನ ಅನುಭವಿಸುವಂತಾಯಿತು--ಆದರೆ, ವಿದೇಶಿ ವ್ಯಾಪಾರದ ಪ್ರಭಾವದಿಂದಾಗಿ ವ್ಯಾಪಾರ ವರ್ಗದವರು ಪ್ರಯೋಜನ ಪಡೆದರು.

## ಕ್ರಿ.ಶ. 1914–1947

ಈ ಕಾಲಾವಧಿಯು ಆಧುನಿಕ ಆರ್ಥಿಕಾಭಿವೃದ್ಧಿಯು ರೂಪುಗೊಳ್ಳಲಾರಂಭಿಸಿದ ಕಾಲವಾಗಿದ್ದಿತು. ಪ್ರಥಮ ಪ್ರಪಂಚ ಯುದ್ಧ ಆರಂಭಿಸಿದ ಅನಂತರದ ದಶಕದಲ್ಲಿ ಯುದ್ಧದ ಜೊತೆಗೆ ಸಾಂಕ್ರಾಮಿಕ ರೋಗಗಳೂ ಮಹಾಪೂರಗಳೂ ಸೇರಿ ಸಾಮಾನ್ಯ ಸ್ಥಿತಿಗಳು ದುಃಖಕರವಾಗಿದ್ದರೂ, ಕೈಗಾರಿಕಾಭಿವೃದ್ಧಿಗೆ ವಾತಾವರಣ ಅನುಕೂಲವಾಗಿದ್ದಿತಲ್ಲದೆ, ಈ ಬಗ್ಗೆ ಅನುಕೂಲಕರವಾದ ಹೊಸ ನೀತಿಯನ್ನು ಅನುಸರಿಸಲಾಯಿತು. ಯುದ್ಧದ ದೆಸೆಯಿಂದ ವಿದೇಶಿ ಮಾಲುಗಳ ಆಮದು ಕಷ್ಟವಾದುದರಿಂದ ದೇಶದಲ್ಲಿ ಹೊಸತಾಗಿ ಸ್ಥಾಪಿಸಬಹುದಾದ ಕೈಗಾರಿಕೆಗಳಿಗೆ ವಿದೇಶಿ ಪೈಪೋಟಿಯ ವಿರುದ್ಧ ತಾನಾಗಿಯೇ ರಕ್ಷಣೆ ದೊರೆತಂತಾಯಿತು. ಅಲ್ಲದೆ 1921ರಲ್ಲಿ ಭಾರತ ಸರ್ಕಾರವು ಅನುಸರಿಸಿದ ರಕ್ಷಣಾ ವಾಣಿಜ್ಯ ನೀತಿಯು ಕರ್ಣಾಟಕಕ್ಕೂ ಅನುಕೂಲವಾಯಿತು. ಆದರೆ ಬಂಡವಾಳ, ಖಾಸಗಿ ಉದ್ಯಮಸಾಹಸ, ನುರಿತ ಕಾರ್ಮಿಕ ಬಲ, ತಾಂತ್ರಿಕ ಜ್ಞಾನ—ಇವುಗಳ ಬಗ್ಗೆ ಕೊರತೆ ಇದ್ದುದರಿಂದ ಅನುಕೂಲ ವಾತಾವರಣದ ಪೂರ್ಣಪ್ರಯೋಜನ ಪಡೆಯಲಾಗಲಿಲ್ಲ. ಆದರೂ ಭಾರತಕ್ಕೆ ಆರ್ಥಿಕಯೋಜನೆಯ ಬಗ್ಗೆ ಆಲೋಚಿಸಿದ ಮೊದಲಿಗರಾದ ಸರ್ ಎಂ. ವಿಶ್ವೇಶ್ವರಯ್ಯನವರಂತಹ ವ್ಯಕ್ತಿಗಳ ಪ್ರಯೋಜನ ಮೈಸೂರು ರಾಜ್ಯದ ಪಾಲಿಗೆ ಲಭಿಸಿದ್ದಿತು. ಮೈಸೂರು ಸರ್ಕಾರವು ಖಾಸಗಿ ಉದ್ಯಮಿಗಳಿಗೆ ಪ್ರೋತ್ಸಾಹ ನೀಡಿದುದೇ ಅಲ್ಲದೆ, ಅವರ ಕಾರ್ಯಾಚರಣೆಗಳಿಗೆ ಪೂರಕವಾಗುವಂತೆ ಉದ್ದಿಮೆಗಳನ್ನು ಕೈಗೊಂಡಿತು. 1914–1924ರ ದಶಕದಲ್ಲಿ ಮೈಸೂರು ಐರನ್ ಅಂಡ್ ಸ್ಟೀಲ್ ವರ್ಕ್ಸ್, ಗೌರ್ನಮೆಂಟ್ ಸೋಪ್ ಫ್ಯಾಕ್ಟರಿ ಮತ್ತು ಗೌರ್ನಮೆಂಟ್ ಇಂಡಸ್ಟ್ರಿಯಲ್ ವರ್ಕ್‌ಷಾಪ್ ಇವುಗಳು ಸರ್ಕಾರಿ ವಲಯದಲ್ಲಿಯೂ ಮಿನರ್ವ ಮತ್ತು ಕೃಷ್ಣರಾಜೇಂದ್ರ ಮಿಲ್ಲುಗಳು, ಮಹಾಲಕ್ಷ್ಮಿ ವುಲನ್ ಮತ್ತು ಸಿಲ್ಕ್ ಟೆಕ್ಸ್‌ಟೈಲ್‌ಮಿಲ್ಲು, ಮೈಸೂರು ಪ್ರೀಮಿಯರ್ ಮೆಟಲ್ ಫ್ಯಾಕ್ಟರಿ, ಸ್ಟ್ಯಾಂಡರ್ಡ್ ಟೈಲ್ ಅಂಡ್ ಕ್ಲೇ ವರ್ಕ್ಸ್, ಬೆಂಗಳೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಕಂಪೆನಿ, ಕೆಯೊಲಿನ್ ಸಿಂಡಿಕೇಟ್, ಮೈಸೂರು ಆಸ್ಬೆಸ್ಟಾಸ್, ಸಿಂಧುವಳ್ಳಿ ಕ್ರೊಮೈಟ್ ಮತ್ತು ಅನೇಕ ಇತರ ಉದ್ಯಮಗಳು ಖಾಸಗಿ ವಲಯದಲ್ಲಿಯೂ ಸ್ಥಾಪಿಸಲ್ಪಟ್ಟವು. ಇಂಜಿನಿಯರಿಂಗ್ ಕಾಲೇಜು, ಚಾಮರಾಜೇಂದ್ರ ಟೆಕ್ನಿಕಲ್ ಇನ್ಸ್‌ಟಿಟ್ಯೂಟ್ ಮತ್ತು ಮೈಸೂರು ಬ್ಯಾಂಕು ಇವುಗಳ ಸ್ಥಾಪನೆಯೂ ಗಮನಾರ್ಹವಾದ ಬೆಳೆವಣಿಗೆಗಳಾಗಿದ್ದವು. ಇವೆಲ್ಲವುಗಳ ಜೊತೆಗೆ

ವೈಜ್ಞಾನಿಕ, ವ್ಯಾವಸಾಯಿಕ, ಕೈಗಾರಿಕಾ ಹಾಗೂ ವಾಣಿಜ್ಯ ಅಭಿವೃದ್ಧಿಗಳಿಗೆ ಸಂಬಂಧಪಟ್ಟಂತೆ ಸೌತ್ ಇಂಡಿಯನ್ ಸೈನ್ಸ್ ಅಸೋಸಿಯೇಷನ್, ಅಗ್ರಿಕಲ್ಚರಲ್ ಅಂಡ್ ಎಕ್ಸ್‌ಪರಿಮೆಂಟಲ್ ಯೂನಿಯನ್ ಮತ್ತು ಛೇಂಬರ್ ಆಫ್ ಕಾಮರ್ಸ್ ಇತ್ಯಾದಿ ಸಂಸ್ಥೆಗಳ ಸ್ಥಾಪನೆ ಆದುದು ರಾಜ್ಯದ ಪ್ರಗತಿಶೀಲ ದೃಷ್ಟಿಯನ್ನು ಸೂಚಿಸುವುದು.

ಅದೇ ಕಾಲದಲ್ಲಿಯೇ ಯುದ್ಧ, ಅನಾವೃಷ್ಟಿ ಮತ್ತು 1923ರ ಹಿಂದೆಂದೂ ಸಂಭವಿಸದ ಮಹಾಪೂರ ಇವುಗಳ ಪರಿಣಾಮವಾಗಿ ನೇರವಾದ ಮತ್ತು ಪರೋಕ್ಷವಾದ ಹೊರೆಯನ್ನು ಜನತೆಯು ಅನುಭವಿಸ ಬೇಕಾಯಿತು. ಬಡ ವರ್ಗದವರ ಮೇಲೆ ಇವುಗಳು ವಿಶೇಷವಾದ ಭಾರವಾಗಿದ್ದುದರಿಂದ ಸರ್ಕಾರವು ವಿಶೇಷ ಪರಿಹಾರ ಕ್ರಮಗಳನ್ನು ಕೈಗೊಳ್ಳಬೇಕಾಯಿತು.

ಕೈಗಾರಿಕಾಭಿವೃದ್ಧಿಯ ದೃಷ್ಟಿಯಿಂದ 1924ರಿಂದ ಈಚಿನ ಎರಡು ದಶಕಗಳು ಇವುಗಳ ಹಿಂದಿನ ದಶಕಕ್ಕಿಂತಲೂ ಹೆಚ್ಚು ಮಹತ್ವಪೂರಿತವಾಗಿದ್ದವು. ಭಾರತ ಸರ್ಕಾರದ ವಾಣಿಜ್ಯನೀತಿ, ನವೀನೀಕರಣದ ಬಗ್ಗೆ ದಿವಾನ್ ಸರ್ ಮಿರ್ಜಾ ಇಸ್ಮೈಲ್ ಅವರ ತೀವ್ರ ಆಸಕ್ತಿ, ಎರಡನೆಯ ಪ್ರಪಂಚ ಯುದ್ಧದಿಂದಾಗಿ ಒದಗಿಬಂದ ಸದವಕಾಶ–ಇವು ರಾಜ್ಯದ ಈ ಕಾಲದ ಕೈಗಾರಿಕಾ ಪ್ರಗತಿಗೆ ಕಾರಣವಾದ ಕೆಲವು ಮುಖ್ಯಾಂಶಗಳಾಗಿವೆ. ಪ್ರಪಂಚದ ಘೋರ ಆರ್ಥಿಕ ಮುಗ್ಗಟ್ಟಿನ ಕಾಲದಲ್ಲಿಯೂ ಕೂಡ ಮೈಸೂರು ರಾಜ್ಯವು ಹೊಸ ಅಭಿವೃದ್ಧಿ ಯೋಜನೆಗಳನ್ನು ಕೈಕೊಂಡಿತು. ಸರ್ಕಾರವು ಹೊಸ ಕೈಗಾರಿಕೆಗಳನ್ನು ಆರಂಭಿಸಿ ಖಾಸಗಿ ಉದ್ಯಮಿಗಳು ಇವುಗಳನ್ನು ವಹಿಸಿಕೊಳ್ಳಲು ಮುಂದೆ ಬಂದಂತೆ ಅವರಿಗೆ ಅವುಗಳನ್ನು ವಹಿಸಿಕೊಡುವುದು ಸರ್ಕಾರವು ಅನುಸರಿಸಿದ ಅಭಿವೃದ್ಧಿಯ ತಂತ್ರವಾಗಿದ್ದಿತು.

ಕಾಗದ, ಸಿಮೆಂಟು, ವ್ಯವಸಾಯೋಪಯೋಗಿ ಉಪಕರಣಗಳು, ಪೋರ್ಸಿಲಿನ್ ಸರಕುಗಳು, ಲ್ಯಾಂಪು, ಟ್ರಾನ್ಸ್‌ಫಾರ್ಮರು, ಬ್ಯಾಟರಿ ಮತ್ತು ಇನ್‌ಸುಲೇಟರ್ ಇತ್ಯಾದಿ ವಿದ್ಯುಚ್ಛಕ್ತಿ ಸರಕುಗಳು, ಗಾಜು ಮತ್ತು ಎನಾಮಲ್ ವಸ್ತುಗಳು, ಬೇಕಲೈಟ್ ಉತ್ಪನ್ನಗಳು, ಬೆಂಕಿಕಡ್ಡಿ, ಯಂತ್ರೋಪಕರಣಗಳು, ಅರಗು ಮತ್ತು ಬಣ್ಣಗಳು, ಸ್ಟೋನ್‌ವೇರ್ ಕೊಳವೆಗಳು, ಸಕ್ಕರೆ, ಆಲ್ಕೊಹಾಲ್, ರಾಸಾಯನಿಕ ವಸ್ತುಗಳು ಮತ್ತು ಗೊಬ್ಬರ, ಕ್ರೋಮ್ ಮತ್ತು ಚರ್ಮದ ಸಾಮಾನುಗಳು, ಶುದ್ಧಗೊಳಿಸಿದ ಹೊಗೆ ಸೊಪ್ಪು ಮತ್ತು ಕಾಫಿ, ವನಸ್ಪತಿ ತೈಲ ಮತ್ತು ತುಪ್ಪ, ಫಿಲೇಚರ್ ರೇಷ್ಮೆ, ರಸ್ತೆ ನಿರ್ಮಾಣದ ವಸ್ತುಗಳು –ಈ ಅನೇಕ ವಿಧದ ಸರಕುಗಳ ಉತ್ಪಾದನೆಗಾಗಿ ಫ್ಯಾಕ್ಟರಿಗಳು ಸ್ಥಾಪಿಸಲ್ಪಟ್ಟವು. ಈ ಉದ್ಯಮ ಗಳೆಲ್ಲವೂ ಸರ್ಕಾರಿ ಒಡೆತನದಲ್ಲಿದ್ದ ಅಥವಾ ಸರ್ಕಾರಿ ಸಹಾಯ ಪಡೆದ ಉದ್ಯಮಗಳಾಗಿದ್ದವು. ಇವುಗಳ ಜೊತೆಗೆ ಅನೇಕ ಖಾಸಗಿ ಉದ್ಯಮಗಳೂ ಆರಂಭಿಸಲ್ಪಟ್ಟವು. ಈ ಉದ್ಯಮಗಳು ಮುಖ್ಯವಾಗಿ ವ್ಯವಸಾಯ ಹಾಗೂ ಭಾರಿ ತೋಟಗಾರಿಕೆ, ಬಸ್ಸು ಸಾರಿಗೆ, ಇಂಜಿನಿಯರಿಂಗ್ ಕೆಲಸಗಳು, ನಿಯಾನ್ ಚಿಹ್ನೆಗಳು, ಸಿನೆಮಾ ತಯಾರಿಕೆ, ವೃತ್ತ ಪತ್ರಿಕೆಗಳು ಮತ್ತು ವ್ಯಾಪಾರ—ಈ ವಿವಿಧ ಕ್ಷೇತ್ರಗಳಿಗೆ ಸಂಬಂಧ ಪಟ್ಟ ಉದ್ಯಮಗಳಾಗಿದ್ದವು.

ಎರಡನೆಯ ಪ್ರಪಂಚಯುದ್ಧ ಕಾಲದಲ್ಲಿ ಹಿಂದೂಸ್ತಾನ್ ಏರ್‌ಕ್ರಾಫ್ಟ್, ಇಂಡಿಯನ್ ಟೆಲಿಫೋನ್ ಇಂಡಸ್ಟ್ರೀಸ್ ಇತ್ಯಾದಿ ಕೆಲವು ರಾಷ್ಟ್ರೀಯ ಪ್ರಾಮುಖ್ಯವುಳ್ಳ ಕೈಗಾರಿಕೆಗಳು ಸ್ಥಾಪಿಸಲ್ಪಟ್ಟವು, ಅಲ್ಲದೆ ರೇಡಿಯೋ ಅಂಡ್ ಇಲೆಕ್ಟ್ರಿಕಲ್ ಮ್ಯಾನುಫ್ಯಾಕ್ಚರಿಂಗ್ ಕಂಪೆನಿ, ಕಿರ್ಲೋಸ್ಕರ್ ಲಿ., ಕೆಮಿಕಲ್ಸ್ ಅಂಡ್ ಫರ್ಟಿಲೈಸರ್ಸ್–ಇಂತಹ ಹಿರಿಯ ಕೈಗಾರಿಕೋದ್ಯಮಗಳು ಆರಂಭಿಸಲ್ಪಟ್ಟವು. ಮೈಸೂರು ರಾಜ್ಯದಲ್ಲಿಯೇ ದಾಖಲಾದ ಕೂಡು ಬಂಡವಾಳ ಸಂಸ್ಥೆಗಳ ಸಂಖ್ಯೆಯೂ ಇವುಗಳ ಬಂಡವಾಳವೂ 1921 ರಲ್ಲಿ ಕ್ರಮವಾಗಿ 117 ಮತ್ತು 4 ಕೋಟಿ ರೂಪಾಗಳಿದ್ದುದು 1947ರ ವೇಳೆಗೆ ಕ್ರಮವಾಗಿ 315 ಮತ್ತು 20 ಕೋಟಿ

ರೂಪಾಯಿಗಳಿಗೆ ಹೆಚ್ಚಿದ್ದವು. ಇವೇ ಅಲ್ಲದೆ ರಾಜ್ಯದ ಹೊರಗಡೆ ದಾಖಲಾಗಿದ್ದ ಆದರೆ ರಾಜ್ಯದ ಒಳಗಡೆ ಕಾರ್ಯಾಚರಣೆ ನಡೆಸುತ್ತಿದ್ದ ಕಂಪೆನಿಗಳ ಸಂಖ್ಯೆಯೂ 1921 ರಲ್ಲಿ 21 ಮಾತ್ರ ಇದ್ದುದು 1947 ರ ಹೊತ್ತಿಗೆ 167 ಕ್ಕೆ ಏರಿತ್ತು. ಹೀಗೆ ಕರ್ಣಾಟಕದ ಹೆಚ್ಚು ಭಾಗವಾಗಿದ್ದ ಅಂದಿನ ಮೈಸೂರು ಸಂಸ್ಥಾನದ ಕೈಗಾರಿಕಾ ಪ್ರಗತಿಯು ಗಣನೀಯವಾಗಿದ್ದಿತೆಂದು ಹೇಳಬಹುದು.

ಮೈಸೂರು ಸಂಸ್ಥಾನ ಬಿಟ್ಟು ಕರ್ಣಾಟಕದ ಉಳಿದ ಭಾಗಗಳಲ್ಲಿ ಕೈಗಾರಿಕಾಭಿವೃದ್ಧಿಯು ಅಷ್ಟು ಗಣನೀಯವಾಗಿರಲಿಲ್ಲವಾದರೂ ಕೆಲವು ಗಮನಾರ್ಹವಾದ ಬೆಳವಣಿಗೆಗಳಿದ್ದವು. ಮಂಗಳೂರಿನಲ್ಲಿ ಹೆಂಚಿನ ಕಾರ್ಖಾನೆಗಳೂ ಪ್ರಿಂಟಿಂಗ್ ಪ್ರೆಸ್ಸುಗಳೂ ಮೀನುಗಾರಿಕೆಯೂ ಗೋಡಂಬಿ ಕಾರ್ಖಾನೆಗಳೂ ಷಹಾಬಾದಿನ ಸಿಮೆಂಟ್ ಫ್ಯಾಕ್ಟರಿಯೂ, ಹುಬ್ಬಳ್ಳಿಯ ಲೋಹ ಕೈಗಾರಿಕೆಗಳೂ ರೈಲ್ವೆ ಕಾರ್ಖಾನೆಯೂ ಗುಲ್ಬರ್ಗ ಧಾರವಾಡ ಮತ್ತು ಬೆಳಗಾವಿಯ ಬಟ್ಟೆಗಿರಣಿಗಳೂ ಕೊಡಗಿನ ಕಾಫಿ ಶೋಧನೆ ಕೇಂದ್ರ, ಅಕ್ಕಿಮಿಶನ್ನುಗಳು, ಮರಗೆಲಸ ಕಾರ್ಖಾನೆಗಳು ಮತ್ತು ಜೇನು ಸಾಕಣೆ ಕೇಂದ್ರಗಳು—ಇವೆಲ್ಲವೂ ಗಮನಾರ್ಹವಾದ ಬೆಳವಣಿಗೆಗಳಾಗಿದ್ದವು.

ಭಾರತದಲ್ಲಿ ಜಲವಿದ್ಯುಚ್ಛಕ್ತಿ ಕೇಂದ್ರ ಸ್ಥಾಪಿಸಿದ ಮೊದಲಿಗ ಸಂಸ್ಥಾನಗಳಲ್ಲಿ ಮೈಸೂರು ಒಂದಾಗಿದ್ದಿತು. ಪ್ರಥಮತಃ 1902 ರಲ್ಲಿ ಸ್ಥಾಪಿಸಲಾದ ಶಿವಸಮುದ್ರದ ವಿದ್ಯುಚ್ಛಕ್ತಿ ಕೇಂದ್ರವೂ, ತರುವಾಯ ಸ್ಥಾಪಿಸಲಾದ ಶಿಂಷ ಮತ್ತು ಜೋಗ ಕೇಂದ್ರಗಳೂ ಸೇರಿ ರಾಜ್ಯದಲ್ಲಿ ಕೈಗಾರಿಕೆ ಮತ್ತು ನೀರಾವರಿಗೂ, ರಸ್ತೆ ಮತ್ತು ಮನೆ ದೀಪಗಳಿಗೂ ಆವಶ್ಯಕವಾದ ವಿದ್ಯುಚ್ಛಕ್ತಿಯನ್ನು ಸರಬರಾಜು ಮಾಡಿದವು. ಮೈಸೂರು ಸಂಸ್ಥಾನ ಉಳಿದು ಮಿಕ್ಕ ಕರ್ಣಾಟಕದಲ್ಲಿ ಅನೇಕ ಕಡೆಗಳಲ್ಲಿ 'ಥರ್ಮಲ್' ವಿದ್ಯುತ್ ಕೇಂದ್ರಗಳು ಸ್ಥಾಪನೆಯಾದವು.

ಈ ಕಾಲಾವಧಿಯಲ್ಲಿ ಸಾರಿಗೆ ಸೌಕರ್ಯಗಳೂ ವಿಸ್ತರಿಸಿದವು. 1914 ರಿಂದ ಈಚಿನ ಕಾಲು ಶತಮಾನದಲ್ಲಿ ರೈಲ್ವೆ ಮಾರ್ಗಗಳ ಉದ್ದ ದ್ವಿಗುಣಿತವಾಗಿ 1939 ರಲ್ಲಿ ಕರ್ಣಾಟಕದಲ್ಲಿ 1400 ಮೈಲಿ ಉದ್ದದ ರೈಲ್ವೆ ವ್ಯವಸ್ಥೆ ಇದ್ದಿತು. ಆದರೆ ಈ ರೈಲ್ವೆ ಮಾರ್ಗಗಳು ಸಂಘಟಿತ ಕರ್ಣಾಟಕದ ಆವಶ್ಯಕತೆಗೆ ತಕ್ಕಂತೆ ಬೆಳೆದು ಬರಲಿಲ್ಲ.

ರಸ್ತೆ ಸಾರಿಗೆಯಲ್ಲಿ ಆಧುನಿಕ ಮಾದರಿಯ ರಸ್ತೆಗಳು ಮುಖ್ಯವಾಗಿ ಈ ಶತಮಾನದ ನಾಲ್ಕನೆಯ ದಶಕದಲ್ಲಿ ನಿರ್ಮಾಣವಾದವು. ಅಲ್ಲದೇ ಇತರ ರೀತಿಯ ರಸ್ತೆಗಳ ಒಟ್ಟು ರಸ್ತೆ ಉದ್ದವೂ ಹೆಚ್ಚಾಯಿತು. 1947ಕ್ಕೆ ಕೊನೆಯಾದ 25 ವರ್ಷಗಳಲ್ಲಿ ರಾಜ್ಯದ ಒಟ್ಟು ರಸ್ತೆ ಉದ್ದವು ಎರಡರಷ್ಟು ಬೆಳೆದಿದ್ದಿತು. ಆದರೆ ಕರ್ಣಾಟಕದ ಎಲ್ಲಾ ಭಾಗಗಳಲ್ಲಿಯೂ ಈ ಬೆಳವಣಿಗೆಯು ಏಕರೀತಿಯದಾಗಿರಲಿಲ್ಲ. ಸರಾಸರಿ ಲೆಕ್ಕದಲ್ಲಿ 100 ಚದರ ಮೈಲಿಗಳಿಗೆ ಇದ್ದ ರಸ್ತೆ ಉದ್ದವು ಮೈಸೂರು ಸಂಸ್ಥಾನದಲ್ಲಿ 36 ಮೈಲಿಗಳೂ, ಹೈದರಾಬಾದ್-ಕರ್ಣಾಟಕದಲ್ಲಿ 8.6 ಮೈಲಿಗಳೂ ಬೊಂಬಾಯಿ-ಕರ್ಣಾಟಕದಲ್ಲಿ 21.6 ಮೈಲಿಗಳೂ ದಕ್ಷಿಣ ಕನ್ನಡದಲ್ಲಿ 20 ಮೈಲಿಗಳೂ ಕೊಡಗಿನಲ್ಲಿ 26.3 ಮೈಲಿಗಳೂ ಆಗಿದ್ದಿತು.

ಇದೇ ಕಾಲಾವಧಿಯಲ್ಲಿ ಮೋಟಾರು ಸಾರಿಗೆ ಉದ್ಯಮವು ಖಾಸಗಿ ಉದ್ಯಮಶೀಲರ ಆರ್ಥಿಕ ಸಾಹಸದಿಂದಾಗಿ ಬಹುಮಟ್ಟಿಗೆ ಬೆಳೆಯಿತು. ಮೈಸೂರು ಸಂಸ್ಥಾನದಲ್ಲಿ 1936ರಲ್ಲಿ 2,972 ಕಾರುಗಳೂ 572 ಬಸ್ಸುಗಳೂ 364 ಲಾರಿಗಳೂ ಇದ್ದುದು, 1947ರಲ್ಲಿ ಈ ವಾಹನಗಳ ಸಂಖ್ಯೆ ಕ್ರಮವಾಗಿ 4778, 794, 1775ಕ್ಕೆ ಏರಿದ್ದಿತು. ಪ್ರವಾಸಕ್ಕೂ ವ್ಯಾಪಾರಕ್ಕೂ ರಸ್ತೆ ಸಾರಿಗೆ ಸೌಕರ್ಯಗಳು ಎಷ್ಟುಮಟ್ಟಿಗೆ ವಿಸ್ತಾರವಾಗಿದ್ದವು ಎಂಬುದನ್ನು ಈ ಸಂಖ್ಯೆಗಳು ಸೂಚಿಸುವುವು.

ಆಗಲೆ ಹೇಳಿರುವ ರಫ್ತು ಸರಕುಗಳ ಜೊತೆಗೆ ಇನ್ನು ಕೆಲವು ತಯಾರಿಸಿದ ಸರಕುಗಳು ರಫ್ತು ಪಟ್ಟಿಗೆ ಸೇರಿಕೊಂಡವು ; ಕಬ್ಬಿಣ ಹಾಗೂ ಉಕ್ಕಿನ ಕಾರ್ಖಾನೆ, ಸಕ್ಕರೆ ಕಾರ್ಖಾನೆ, ಬಟ್ಟೆಗಿರಣಿಗಳು, ಸಿಗರೆಟ್ ಕಾರ್ಖಾನೆ ಇವುಗಳ ಉತ್ಪನ್ನ ವಸ್ತುಗಳೇ ಈ ಹೊಸ ರಫ್ತು ಸರಕುಗಳಾಗಿದ್ದವು. ಕಲ್ಲಿದ್ದಲು, ಹಿತ್ತಾಳೆ, ತಾಮ್ರ, ತವರ, ಖನಿಜ ತೈಲಗಳು, ಪೆಟ್ರೋಲು, ರಾಸಾಯನಿಕ ಗೊಬ್ಬರ, ಯಂತ್ರ ಹಾಗೂ ಬಿಡಿ ಭಾಗಗಳು ಚರ್ಮದ ವಸ್ತುಗಳು, ಉಡುಪು ಹಾಗೂ ಉಡಿಗೆ ತೊಡಿಗೆಗಳು, ಸೈಕಲ್ಲು, ಮೋಟಾರು ಕಾರು, ಔಷಧಗಳು, ಬೆಂಕಿಪೊಟ್ಟಣಗಳು, ಕಾಗದ, ವೈಜ್ಞಾನಿಕ ಉಪಕರಣಗಳು ಮತ್ತು ಅನೇಕ ಸಿದ್ಧಪಡಿಸಿದ ವಸ್ತುಗಳು ಆಮದು ಸರಕುಗಳ ಪಟ್ಟಿಗೆ ಸೇರಿಕೊಂಡವು. ಜನರ ಹೊಸ ಜೀವನ ಮಟ್ಟಕ್ಕೆ ಸೇರಿದ ರೇಡಿಯೋ, ಗಡಿಯಾರ, ಫೌಂಟನ್‌ಪೆನ್ನು, ಬೈಸಿಕಲ್ಲು. ಸಿನೆಮಾ ಇತ್ಯಾದಿಗಳೆಲ್ಲವೂ ಆಮದು ವ್ಯಾಪಾರವನ್ನು ಅವಲಂಬಿಸಿದ್ದವು.

ವ್ಯಾವಸಾಯಿಕ ಉತ್ಪನ್ನಗಳ ಮಾರಾಟವನ್ನು ಸಹಕಾರ ಸಂಘಗಳ ಮತ್ತು ನಿಯಂತ್ರಿತ ಮಾರುಕಟ್ಟೆಗಳ ಮೂಲಕ ಸುವ್ಯವಸ್ಥಿಗೊಳಿಸುವ ಪ್ರಯತ್ನ ಮಾಡಲಾಯಿತು. ಆದರೆ ವ್ಯಾವಸಾಯಿಕ ಮಾರಾಟಕ್ಕೆ ಸಂಬಂಧಿಸಿದ ಕುಂದುಕೊರತೆಗಳನ್ನೂ ದುರಭ್ಯಾಸಗಳನ್ನೂ ತೊಡೆದು ಹಾಕುವುದರಲ್ಲಿ ಈ ಕ್ರಮಗಳು ಯಶಸ್ವಿಯಾಗಲಿಲ್ಲ.

ಆಧುನಿಕ ಕೈಗಾರಿಕೆಯ ಉಗಮವಾದುದರ ಜೊತೆಯಲ್ಲಿಯೇ ರಾಜ್ಯದಲ್ಲಿ ಕೈಗಾರಿಕಾ ಕಾರ್ಮಿಕರ ಒಂದು ಹೊಸ ಪಂಗಡವು ಅವರದೇ ಆದ ವಿಶೇಷ ಸಮಸ್ಯೆಗಳೊಡನೆ ಉದಯವಾಯಿತು. ರಾಜ್ಯದ ಈ ಆಧುನಿಕ ಕೈಗಾರಿಕೆಗಳಿಗೆ ಸೇರಿಕೊಂಡ ಕಾರ್ಮಿಕರು ಬಹುಮಟ್ಟಿಗೆ ಇತರ ಕಡೆಗಳಿಂದ ಬಂದವರಾಗಿಯೂ ಅವರ ಸ್ವಂತ ಗ್ರಾಮಗಳ ವ್ಯವಸಾಯ ಜೀವನದೊಡನೆ ಸಂಪರ್ಕವನ್ನು ಉಳಿಸಿಕೊಂಡವರಾಗಿಯೂ ಇದ್ದರು. ಬಟ್ಟೆ ಗಿರಣಿಗಳಲ್ಲಿ ಶೇಕಡ 50ರಷ್ಟು ಭಾಗ ಮತ್ತು ಕೋಲಾರ ಚಿನ್ನದ ಗಣಿಗಳಲ್ಲಿ ಶೇಕಡ 43ರಷ್ಟು ಭಾಗ ಕಾರ್ಮಿಕರು ರಾಜ್ಯದ ಹೊರಗಡೆಯಿಂದ ಬಂದವರಾಗಿದ್ದರೆಂದು ಕೆಲವು ವಿಶೇಷ ಪರಿಶೀಲನೆಗಳಿಂದ ತಿಳಿದುಬಂದಿದೆ. ಗಿರಣಿಗಳಿಗೆ ಕಾರ್ಮಿಕರನ್ನು ಒದಗಿಸಲೋಸುಗ 'ಜಾಬರ್' ಪದ್ಧತಿಯು ಜಾರಿಯಲ್ಲಿದ್ದಿತು. ಬ್ರಿಟಿಷ್ ಇಂಡಿಯದಲ್ಲಿ 'ಸರ್ದಾರ್' ಇದ್ದಹಾಗೆ ಮೈಸೂರು ರಾಜ್ಯದಲ್ಲಿ 'ಮೇಸ್ತ್ರಿ' ಗಳಿದ್ದರು. ಇವರುಗಳ ಮೂಲಕ ಗಿರಣಿಗಳು ಕಾರ್ಮಿಕರನ್ನು ಒದಗಿಸಿ ಕೊಳ್ಳುತ್ತಿದ್ದವು. ಈ ಪದ್ಧತಿಯಲ್ಲಿ ಲಂಚ ರುಷುವತ್ತುಗಳು ಇದ್ದಾಗ್ಯೂ ವಿವಿಧ ಭಾಷೆಗಳು ಹಾಗೂ ಪಂಗಡಗಳಿಗೆ ಸೇರಿದ ಕಾರ್ಮಿಕರೊಡನೆ ಆಡಳಿತ ವರ್ಗವು ನೇರ ಸಂಪರ್ಕ ಹೊಂದಲು ಸಾಧ್ಯವಿಲ್ಲದುದರಿಂದ ಈ ಪದ್ಧತಿಯನ್ನು ಸಹಿಸಿಕೊಂಡಿರಬೇಕಾಯಿತು.

ಗಣಿಗಳು ಮತ್ತು ಗಿರಣಿಗಳ ಕಾರ್ಮಿಕರ ಕೆಲಸದ ಕಾಲ, ರಜೆ, ಆರೋಗ್ಯ ಮತ್ತು ರಕ್ಷಣೆ, ಆಕಸ್ಮಿಕಗಳಿಂದ ಸಂಭವಿಸುವ ತೊಂದರೆಗಳಿಗೆ ಪರಿಹಾರ, ಸ್ತ್ರೀ ಕಾರ್ಮಿಕರಿಗೆ ಆವಶ್ಯಕವಾದ ವಿಶೇಷ ಸೌಲಭ್ಯಗಳು, ಕೈಗಾರಿಕಾ ವಿವಾದಗಳ ತೀರ್ಪು ಇತ್ಯಾದಿ ಅಂಶಗಳನ್ನು ಕುರಿತ ಕಾನೂನುಗಳ ಬಗ್ಗೆ ಬ್ರಿಟಿಷ್ ಇಂಡಿಯ ಪ್ರಾಂತಗಳು ಹೊಂದಿದ್ದ ಮಾದರಿಯನ್ನೇ ಮೈಸೂರು ರಾಜ್ಯವು ಅನುಸರಿಸಿತು. ಕಾರ್ಮಿಕ ಚಳವಳಿ ಮೊದಮೊದಲು ಅಷ್ಟಾಗಿ ಮುಂದುವರಿಯಲಿಲ್ಲ; ಆದರೆ 1927ರ ತರುವಾಯ ಕಾರ್ಮಿಕ ಸಂಘ ಕಾನೂನು ಅಂಗೀಕೃತವಾದ ಮೇಲೆ ಕಾರ್ಮಿಕರ ಸಂಘಗಳು ಕಾರ್ಮಿಕರ ಉದ್ಯೋಗ ಸ್ಥಿತಿಗಳನ್ನು ಉತ್ತಮ ಪಡಿಸುವ ಕಾನೂನಿನ ವ್ಯವಸ್ಥಿತ ಸಾಧನವಾಯಿತು. ಎರಡನೆಯ ಪ್ರಪಂಚ ಯುದ್ಧ ಕಾಲದಿಂದ ಈಚೆಗೆ ಕಾರ್ಮಿಕ ಸಂಘಗಳ ಬೆಳವಣಿಗೆಗೆ ತಳಹದಿ ಭದ್ರವಾಯಿತು. ಕಾರ್ಮಿಕರ ಯೋಗ ಕ್ಷೇಮದ ಬಗ್ಗೆ ಸರ್ಕಾರ ಹಾಗೂ ಖಾಸಗಿ ಉದ್ಯಮಿಗಳ ಸಹಾನುಭೂತಿ ಮೊದಲಿನಿಂದಲೂ ಚೆನ್ನಾಗಿದ್ದಿತು. ಆದರೂ ರಾಜ್ಯದ ಕೈಗಾರಿಕಾ ಕಾರ್ಮಿಕ ವರ್ಗದ ಸ್ಥಿತಿಗಳ ಸುಧಾರಣೆ ಬಗ್ಗೆ ಕೈಕೊಳ್ಳಬೇಕಾದ ಅನೇಕ ಕಾರ್ಯಗಳು ಇನ್ನೂ ಉಳಿದಿದ್ದವು.

ರಾಜ್ಯದ ಜನಸಂಖ್ಯೆ ಬೆಳವಣಿಗೆಗೆ ಅನುಗುಣವಾಗಿ ಆಹಾರೋತ್ಪನ್ನ ಬೆಳೆಯಲಿಲ್ಲ; ಆದುದರಿಂದ ರಾಗಿಯಂತಹ ಧಾನ್ಯಗಳನ್ನು ಹಿಂದೆ ರಫ್ತು ಮಾಡುತ್ತಿದ್ದ ಸಂಸ್ಥಾನವು ಕ್ರಮೇಣ ಆಹಾರ ಧಾನ್ಯಗಳ ಆಮದಿನ ಮೇಲೆ ಅವಲಂಬಿತವಾಗಬೇಕಾಯಿತು. ಕೈಗಾರಿಕೆಯ ಆವಶ್ಯಕತೆಗಳನ್ನು ಪೂರೈಸುವ ಸಲುವಾಗಿ ವ್ಯಾವಸಾಯಿಕ ಕಚ್ಚಾ ಸರಕುಗಳನ್ನು ಬೆಳೆಯುವ ಭೂ ಪ್ರದೇಶವು ವಿಸ್ತಾರವಾಯಿತು.

ಸಂಶೋಧನೆ, ವಿದ್ಯಾಭ್ಯಾಸ ಪ್ರಚಾರ, ಪ್ರದರ್ಶನ, ಸಾಲ ಹಣ ಸೌಕರ್ಯಗಳು ಇತ್ಯಾದಿ ಅಂಶಗಳ ಬಗ್ಗೆ 'ರಾಯಲ್ ಕಮಿಷನ್ ಆನ್ ಅಗ್ರಿಕಲ್ಚರ್' ಎಂಬ ಪ್ರಸಿದ್ಧ ಸಮಿತಿಯು 1929ರಲ್ಲಿ ಮಾಡಿದ ಶಿಫಾರಸುಗಳನ್ನು ಅನುಸರಿಸಿ ಸರ್ಕಾರವು ವ್ಯವಸಾಯಾಭಿವೃದ್ಧಿಗಾಗಿ ಕ್ರಮಗಳನ್ನು ಕೈಗೊಂಡಿತು. ಎರಡನೆ ಪ್ರಪಂಚ ಯುದ್ಧ ಕಾಲದಲ್ಲಿ ಆರಂಭಿಸಲಾದ 'ಹೆಚ್ಚು ಆಹಾರ ಬೆಳೆಯಿರಿ' ಎಂಬ ಚಳವಳಿಯ ಅಂಗವಾಗಿಯೂ ಸರ್ಕಾರವು ವ್ಯವಸಾಯ ಉತ್ತಮಗೊಳಿಸಲು ಕೆಲವು ಕ್ರಮಗಳನ್ನು ಕೈಗೊಂಡಿತು.

ಕರ್ಣಾಟಕದ ಅನೇಕ ನದಿಗಳ ನೀರಾವರಿ ಸಾಧ್ಯತೆಯನ್ನು ಉಪಯೋಗಿಸುವಂತೆ ಅಭಿವೃದ್ಧಿ ಕಾರ್ಯಗಳನ್ನು ಕೈಕೊಳ್ಳದಿದ್ದುದರಿಂದ 1950ರಲ್ಲಿ 350 ಲಕ್ಷ ಎಕರೆ ಕೃಷಿ ಭೂ ವಿಸ್ತಾರದಲ್ಲಿ ಕೇವಲ 17 ಲಕ್ಷ ಎಕರೆ ಜಮೀನಿಗೆ ಮಾತ್ರ ನೀರಾವರಿ ಸೌಕರ್ಯವಿದ್ದಿತು. 1,25,000 ಎಕರೆ ಭೂಮಿಗೆ ನೀರಾವರಿ ಒದಗಿಸಿದ ಕೃಷ್ಣರಾಜ ಸಾಗರ ಅಣೆಕಟ್ಟು ಮತ್ತು ಸಂಬಂಧಿಸಿದ ನಾಲೆಗಳು ಸೇರಿದ ಯೋಜನೆಯೊಂದೇ ಈ ಕಾಲದಲ್ಲಿ ಕೈಕೊಂಡ ಮುಖ್ಯ ನೀರಾವರಿ ಯೋಜನೆಯಾಗಿದ್ದಿತು.

ರಾಜ್ಯದ ಹೊರಗಿನ ಕಂಪೆನಿಗಳ ಮೂಲಕ ಟೀ, ಕಾಫಿ ಮತ್ತು ಹೊಗೆಸೊಪ್ಪಿನ ಭಾರಿ ತೋಟಗಳು ಅಭಿವೃದ್ಧಿ ಹೊಂದಿದ್ದವು. 1941ರಲ್ಲಿ ಈ ತೋಟಗಳಲ್ಲಿ ಮೈಸೂರು ಸಂಸ್ಥಾನದಲ್ಲಿಯೇ ಸುಮಾರು 1.44 ಲಕ್ಷ ಕಾರ್ಮಿಕರು ಉದ್ಯೋಗಸ್ಥರಾಗಿದ್ದರು.

ಮುಖ್ಯವಾಗಿ ಉತ್ತರ ಮತ್ತು ದಕ್ಷಿಣ ಕನ್ನಡದ ತೀರಪ್ರದೇಶಗಳಲ್ಲಿ ಮೀನುಗಾರಿಕೆ ಉದ್ಯಮವು ಹೆಚ್ಚಿನ ಪ್ರಗತಿ ಹೊಂದಿದ್ದಿತು. ದಕ್ಷಿಣ ಕನ್ನಡದ ಜನರಿಗೆ ಕೃಷಿ ಬಿಟ್ಟರೆ ಮೀನುಗಾರಿಕೆಯೇ ಅತ್ಯಂತ ಪ್ರಧಾನ ಉದ್ಯಮವಾಗಿದ್ದಿತು. ಸುಮಾರು 200 ಮೈಲಿಗಳಷ್ಟು ಉದ್ದದ ಸಮುದ್ರ ತೀರ ಹೊಂದಿರುವ ಈ ಪ್ರದೇಶಕ್ಕೆ ಸಮುದ್ರ ಮೀನುಗಾರಿಕೆಯು ಒಳ್ಳೆಯ ಅವಕಾಶ ನೀಡಿತು. 1880-81ರಲ್ಲಿ ನಿವ್ವಳವಾಗಿ ಮೀನುಗಳನ್ನು ಆಮದುಮಾಡಿಕೊಳ್ಳುತ್ತಿದ್ದ ಉತ್ತರ ಕನ್ನಡ ಪ್ರದೇಶವು ಕ್ರಮೇಣವಾಗಿ ಮುಖ್ಯ ರಫ್ತು ಪ್ರದೇಶವಾಯಿತು. 1947-48 ರಲ್ಲಿ ಈ ಪ್ರದೇಶದಿಂದ ಸುಮಾರು 21.4 ಲಕ್ಷ ರೂಪಾಯಿಗಳ ಬೆಲೆಯ ಮೀನುಗಳನ್ನು ರಫ್ತು ಮಾಡಲಾಯಿತು. ಆದರೆ 50 ವರ್ಷಗಳಲ್ಲಿ ರಫ್ತು ಪ್ರಮಾಣವು ಸುಮಾರು ಇಪ್ಪತ್ತರಷ್ಟು ಹೆಚ್ಚಾಗಿದ್ದಿತು. 1939ರಲ್ಲಿ ಮಜಲಿ, ಕಾರವಾರ, ಬೀಗಿ, ಚೆಂಡಿಯ, ಹರುಂಡ, ಕಿನಿ ಮತ್ತು ಮುರುಡೇಶ್ವರ ಇವುಗಳಲ್ಲಿ ಮೀನು ಶುದ್ಧೀಕರಣ ಕೇಂದ್ರಗಳು ಸ್ಥಾಪನೆಯಾದವು ಮತ್ತು ಯಾಂತ್ರಿಕ ಶಕ್ತಿ ಬಳಸುವ ದೋಣಿಗಳನ್ನು ಉಪಯೋಗಿಸಲಾರಂಭಿಸಲಾಯಿತು. ಆವಶ್ಯಕವಾದ ತಾಂತ್ರಿಕ ತರಬೇತಿಯನ್ನೂ ಶೀತಗೃಹ ಸೌಕರ್ಯಗಳನ್ನೂ ಒದಗಿಸಲಾಯಿತು. ಈ ಬೆಳವಣಿಗೆಗಳಿಂದ 1939 ರಿಂದ ಈಚೆಗೆ ಮೀನುಗಾರಿಕೆಯ ಅಭಿವೃದ್ಧಿಯೂ ಹೆಚ್ಚು ವೇಗವಾಗಿ ಸಾಗಿತು. ಹೀಗೆ ಬೆಳೆದ ಮೀನುಗಾರಿಕೆ ಉದ್ಯಮವೂ ಮೀನಿನ ಎಣ್ಣೆ ತೆಗೆಯಲು ಮಜಲಿ ಮತ್ತು ಕಾರವಾರಗಳಲ್ಲಿ ಸ್ಥಾಪನೆಯಾದ ಕಾರ್ಖಾನೆಗಳೂ ಮೀನಿನ ಗೊಬ್ಬರ ತಯಾರಿಕೆಯೂ ಆ ಪ್ರದೇಶದ ಅನೇಕ ಸಂಸಾರಗಳಿಗೆ ಪ್ರಯೋಜನಕಾರಿಗಳಾದವು.

1956 ರಲ್ಲಿ ತೀರಪ್ರದೇಶಗಳು ಹೊಸ ಮೈಸೂರು ರಾಜ್ಯದೊಡನೆ ಸೇರ್ಪಡೆಯಾದ ತರುವಾಯ ಮೀನುಗಾರಿಕೆಯು ಇನ್ನೂ ಹೆಚ್ಚು ತೀವ್ರವಾಗಿ ಅಭಿವೃದ್ಧಿಯಾಯಿತು. ವಿಶೇಷ ಮಾದರಿಯ ಯಾಂತ್ರಿಕ

ದೋಣಿ ನಿರ್ಮಾಣಕ್ಕಾಗಿ ಎರಡು ದೋಣಿ ನಿರ್ಮಾಣ ಕೇಂದ್ರಗಳನ್ನು ಸ್ಥಾಪಿಸಲಾಯಿತು; 1964-65ರ ವೇಳೆಗೆ 193 ಅಂತಹ ಆಧುನಿಕ ಮೀನುಗಾರಿಕೆ ದೋಣಿಗಳನ್ನು ನಿರ್ಮಿಸಲಾಯಿತು. ಬೆಸ್ತರಿಗೆ ವಿಶೇಷ ತರಬೇತಿ ನೀಡುವ ಯೋಜನೆಯಂತೆ ಅನೇಕ ಕೇಂದ್ರಗಳನ್ನು ಸ್ಥಾಪಿಸಲಾಯಿತು; 1961-64ರ ಅವಧಿಯಲ್ಲಿ 80 ಬೆಸ್ತರಿಗೂ 1964-65 ರಲ್ಲಿ 140 ಬೆಸ್ತರಿಗೂ ವಿಶೇಷ ತರಬೇತಿ ನೀಡಲಾಯಿತು.

ಸಮುದ್ರ ಮೀನುಗಾರಿಕೆಯ ಜೊತೆಗೆಯೇ ಒಳಪ್ರದೇಶ ಮೀನುಗಾರಿಕೆಗೂ ಉತ್ತೇಜನ ದೊರೆಯಿತು. ಒಳಪ್ರದೇಶದಲ್ಲಿ ಮೀನುಗಾರಿಕೆ ಕೈಕೊಳ್ಳಬಹುದಾದ ಸುಮಾರು 10 ಲಕ್ಷ ಎಕರೆ ವಿಸ್ತೀರ್ಣದ ಜಲ ಪ್ರದೇಶದಲ್ಲಿ ಸುಮಾರು ಒಂದು ಲಕ್ಷ ಎಕರೆ ಜಲಪ್ರದೇಶದಲ್ಲಿ ಮೀನುಗಾರಿಕೆ ಉದ್ಯಮ ಕೈಕೊಳ್ಳಲಾಗಿದೆ.

ಸಮೀಕ್ಷಿಸುತ್ತಿರುವ ಕಾಲಾವಧಿಯಲ್ಲಿ ಅನೇಕ ಗೃಹ ಕೈಗಾರಿಕೆಗಳು ಹಿಂದಿಗಿಂತಲೂ ಕ್ಷೀಣವಾದುವು. ಅಕ್ಕಸಾಲೆ, ಬಡಗಿ, ಚಮ್ಮಾರ, ಚಾಪೆ ಹೆಣೆಯುವವ, ಬೀಡಿಕಟ್ಟುವವ—ಇವರುಗಳ ಉದ್ಯಮಗಳು ಮಾತ್ರ ಹೆಚ್ಚು ಚಟುವಟಿಕೆಯಿಂದ ಸಾಗಿದವು; ಉಳಿದ ಗೃಹ ಕೈಗಾರಿಕೆಗಳು ಕ್ಷೀಣವಾಗುತ್ತಿದ್ದವು. ಇವುಗಳನ್ನು ಪುನಶ್ಚೇತನಗೊಳಿಸಲು ಕೆಲವು ಮುಖ್ಯ ಕ್ರಮಗಳನ್ನು ಕೈಗೊಳ್ಳಲಾಯಿತು; ಖಾದಿ ಪ್ರಚಾರವು ನೂಲುವ ಹಾಗೂ ನೇಯುವ ಗೃಹ ಕೈಗಾರಿಕೆಗಳನ್ನು ಗಮನಾರ್ಹವಾಗಿ ಬಲಗೊಳಿಸಿತು. ಭಾರತದ ಸ್ವಾತಂತ್ರ್ಯಪೂರ್ವ ಕಾಲಾವಧಿಯಲ್ಲಿಯೇ ಖಾದಿ ಉದ್ಯಮಕ್ಕೆ ಪ್ರೋತ್ಸಾಹ ನೀಡಿ, ಈ ಕೈಗಾರಿಕೆಯ ಅಭಿವೃದ್ಧಿಗಾಗಿ ಒಂದು ಸಂಸ್ಥೆಯನ್ನು 1927ರಲ್ಲಿ ಸ್ಥಾಪಿಸಿದ ಮೈಸೂರು ರಾಜ್ಯವು ಅದ್ವಿತೀಯವಾಗಿದ್ದಿತು. ಅಖಿಲ ಭಾರತ ನೂಲುವವರ ಸಂಘದ ಸಹಾಯದಿಂದ ಬದನವಾಳದಲ್ಲಿ ಸ್ಥಾಪನೆಯಾದ ಖಾದಿ ಕೇಂದ್ರವು ಭಾರತದಲ್ಲಿ ಸರ್ಕಾರವೊಂದು ಸ್ಥಾಪಿಸಿದ ಪ್ರಥಮ ಖಾದಿ ಕೇಂದ್ರವಾಗಿದೆ. ಅಲ್ಲಿ 1927ರಲ್ಲಿ ನೂಲುವವರ ಮತ್ತು ನೇಯುವವರ ಸಂಖ್ಯೆ 1052 ಇದ್ದುದು 1947ರಲ್ಲಿ 9,560ಕ್ಕೆ ಏರಿದ್ದಿತು. 1947ರ ವೇಳೆಗೆ ಇಂತಹ ಖಾದಿ ಕೇಂದ್ರಗಳ ಸಂಖ್ಯೆಯೂ 23ಕ್ಕೆ ಏರಿದ್ದಿತು.

ಚರ್ಮ ಹದಗೊಳಿಸುವಿಕೆ, ಕುಂಬಾರಿಕೆ, ಗಾಣಗಾರಿಕೆ, ಚಾಪೆಹೆಣಿಕೆ ಮತ್ತು ಲೋಹವಸ್ತುಗಳು, ಅರಗು ಸಾಮಾನು, ಅಂಟು ಹಾಗೂ ವಜ್ರಸರಿ, ತೆಂಗಿನ ಹುರಿ, ಬೆತ್ತದ ಸಾಮಾನು, ಹೆಂಚು ಮತ್ತು ಕಾಗದ ಇವುಗಳ ತಯಾರಿಕೆ–ಇತ್ಯಾದಿ ಉದ್ಯಮಗಳನ್ನು ಪುನಶ್ಚೇತನಗೊಳಿಸುವ ಪ್ರಯತ್ನದ ಭಾಗವಾಗಿ ಮಾದರಿ ನಿದರ್ಶಕ ಘಟಕಗಳನ್ನು ಸೂಕ್ತವಾದ ಕೇಂದ್ರಗಳಲ್ಲಿ ಸ್ಥಾಪಿಸಲಾಯಿತು. ಗೃಹ ಕೈಗಾರಿಕೆಗಳ ಬೆಳವಣಿಗೆಗಾಗಿ 1939ರಲ್ಲಿ ಪಂಚವಾರ್ಷಿಕ ಯೋಜನೆಯನ್ನು ರೂಪಿಸಿ ವಿಶೇಷ ಸಹಾಯಧನವನ್ನು ನೀಡಲಾಯಿತು. ಆವಶ್ಯಕತೆ ಇದ್ದಲ್ಲಿ ವಿದೇಶಿ ನಿಪುಣರ ಸೇವೆಯನ್ನು ಪಡೆಯಲಾಯಿತು. ಕೊಳ್ಳಲು ಹಾಗೂ ಮಾರಲು ಸಹಾಯಕವಾಗುವಂತೆ ಗೃಹ ಕೈಗಾರಿಕಾ ಸಹಕಾರ ಸಂಘಗಳನ್ನು ಸ್ಥಾಪಿಸಲಾಯಿತು. ಬಿರುಸಾದ ಪ್ರಚಾರ ಹಾಗೂ ಜಾಹಿರಾತು ಕ್ರಮಗಳ ಮೂಲಕ—ಮುಖ್ಯವಾಗಿ ವಿದೇಶಗಳಲ್ಲಿ—ಗೃಹ ಕೈಗಾರಿಕೆ ಸರಕುಗಳಿಗೆ ಬೇಡಿಕೆ ಹೆಚ್ಚಿಸುವ ಪ್ರಯತ್ನ ಮಾಡಲಾಯಿತು. ನಶಿಸುತ್ತಿದ್ದ ಅಥವಾ ದುಃಸ್ಥಿತಿಯಲ್ಲಿದ್ದ ಅನೇಕ ಗೃಹ ಕೈಗಾರಿಕೆಗಳನ್ನು ಸಾಕಷ್ಟು ಮಟ್ಟಿಗೆ ಪುಷ್ಟಿಗೊಳಿಸಲು ಈ ಎಲ್ಲಾ ವಿವಿಧ ಕ್ರಮಗಳು ಸಾಕಾಗಲಿಲ್ಲ. ರಾಜ್ಯದ ಆರ್ಥಿಕತೆಯಲ್ಲಿ ಗೃಹ ಕೈಗಾರಿಕೆಗಳು ತಮ್ಮ ಸೂಕ್ತ ಸ್ಥಾನ ಪ್ರದರ್ಶಿಸುವಂತಾಗಲು ಮತ್ತು ಅವುಗಳಲ್ಲಿ ನಿರತರಾಗಿರುವ ಕಾರ್ಮಿಕರ ಜೀವನ ಮಟ್ಟ ಸರಿಯಾಗಿ ಸುಧಾರಣೆಯಾಗಲು ಇನ್ನೂ ಹೆಚ್ಚಿನ ಪ್ರಯತ್ನ ಆವಶ್ಯಕವಾಗಿದ್ದಿತು.

ಭಾರತದ ಇತರ ಭಾಗಗಳ ಆರ್ಥಿಕ ಜೀವನದ ಮೇಲೆ ಇದ್ದಂತೆ ಕರ್ನಾಟಕ ರಾಜ್ಯದ ಆರ್ಥಿಕ ಜೀವನದ ಮೇಲೆಯೂ ಎರಡನೆಯ ಮಹಾಯುದ್ಧವು ತೀವ್ರವಾದ ಪ್ರಭಾವ ಹೊಂದಿದ್ದಿತು. ಹಿಂದೆ ಎಂದೂ ಆಗದಿದ್ದಷ್ಟು ಬೆಲೆ ಏರಿಕೆಯಿಂದಲೂ ವಿವಿಧ ಬೆಲೆಗಳ ಸಂಬಂಧಗಳು ವಿರೂಪವಾದುದರಿಂದಲೂ ಸಾಮಾನ್ಯ ಜನರ ಜೀವನ ಸ್ಥಿತಿಗತಿಗಳು ಯುದ್ಧ ಪೂರ್ವದಲ್ಲಿ ಇದ್ದಂತೆ ಇರದೆ ತುಂಬ ವ್ಯತ್ಯಾಸವಾದವು.

ದೇಶದಲ್ಲಿ ಹಣದ ಮೊತ್ತ ಅತ್ಯಧಿಕವಾದುದರಿಂದಲೂ ಶೀಘ್ರವಾಗಿ ಹಣಗಳಿಸಲು ಕೆಲವು ವಿಧದ ಅವಕಾಶ ಗಳು ಹುಟ್ಟಿದುದರಿಂದಲೂ ಕೆಲವು ವರ್ಗದವರ ಕೈಗೆ ಹೆಚ್ಚು ಹೆಚ್ಚು ಹಣ ಸೇರುವಂತಾಯಿತು. ಒಂದು ಕಡೆ ಬ್ಯಾಂಕು ಉದ್ಯಮ ಹಾಗೂ ಹೂಟೆ ಬೆಳೆದುವಾದರೆ ಇನ್ನೊಂದು ಕಡೆ ಷೇರುಪೇಟೆ ಹಾಗೂ ಸರಕು ಪೇಟೆಗಳಲ್ಲಿ ಸಲ್ಲದ ಸಟ್ಟಾ ವ್ಯಾಪಾರ ವ್ಯವಹಾರಗಳೂ ಬೆಳೆದವು. ಉದ್ಯೋಗಾವಕಾಶ ವಿಸ್ತರಣೆಯಿಂದ ಕಾರ್ಮಿಕರಿಗೆ ಬೇಡಿಕೆ ಹೆಚ್ಚಿದುದು ಕಾರ್ಮಿಕ ವರ್ಗಕ್ಕೂ ಬೆಲೆಗಳ ಏರಿಕೆಯಿಂದ ಸಾಮಾನ್ಯವಾಗಿ ಕೃಷಿ ವರ್ಗಕ್ಕೂ ಹೆಚ್ಚು ಪ್ರಯೋಜನ ಲಭಿಸಿತು. ಅಂದಿನ ಪರಿಸ್ಥಿತಿಗಳು ಮಧ್ಯಮ ವರ್ಗದ ಜನರಿಗೆ ಅತ್ಯಂತ ಪ್ರತಿಕೂಲವಾಗಿದ್ದವೆಂದು ಹೇಳಬಹುದು. ಒಟ್ಟಿನಲ್ಲಿ ಹೇಳುವುದಾದರೆ, ಯುದ್ಧ ಹಾಗೂ ಯುದ್ಧೇತರ ಕಾಲಗಳಲ್ಲಿ ವಿವಿಧ ವರ್ಗದ ಜನರ ಆರ್ಥಿಕ ಪರಿಸ್ಥಿತಿಯಲ್ಲಿ ತೀವ್ರ ಏರುಪೇರುಗಳಾದವು.

ಕೊನೆಯದಾಗಿ, ಎರಡು ಮುಖ್ಯಾಂಶಗಳನ್ನು ಗಮನಿಸಬಹುದು. ಇಂಡಿಯದ ಇತರ ಪ್ರದೇಶ ಗಳಂತೆಯೇ ಕರ್ಣಾಟಕವೂ ಅದರ ಹುದುಗಿರುವ ಆರ್ಥಿಕ ಸಂಪತ್ಸಾಧನಗಳನ್ನು ಸಾಕಷ್ಟು ಮಟ್ಟಿಗೆ ರೂಢಿಸದ ಅನಭಿವೃದ್ಧಿ ಆರ್ಥಿಕ ಹಂತದಲ್ಲಿಯೇ ಇದ್ದಿತೆಂಬುದು ಮೊದಲನೆಯ ಅಂಶವಾಗಿದೆ. ಇತರ ರಾಜ್ಯಗಳೊಡನೆ ಕೂಡಿಕೊಂಡಿದ್ದ ಕರ್ಣಾಟಕದ ಕೆಲವು ಭಾಗಗಳು ಮತ್ತು ಉಳಿದ ಕರ್ಣಾಟಕ ಭಾಗವಾದ ಹಳೆ ಮೈಸೂರು ರಾಜ್ಯ—ಇವುಗಳೊಳಗೆ ಬೆಳೆದು ಬಂದಿದ್ದ ಪ್ರಾದೇಶಿಕ ಅಸಮತೆಯನ್ನು ಗಮನಿಸಿದರೆ, ಸಂಯುಕ್ತ ಕರ್ಣಾಟಕ ರಾಜ್ಯ ನಿರ್ಮಾಣಕ್ಕೆ ಕೇವಲ ಭಾಷೆ ಆಧಾರವೇ ಅಲ್ಲದೆ, ಆರ್ಥಿಕ ಸಮಾಧಾನವೂ ಇದ್ದಿತೆಂಬುದು ಎರಡನೆಯ ಅಂಶವಾಗಿದೆ.

ಮೂಲ ಲೇಖಕರು ಮತ್ತು ಅನುವಾದಕರು : ಶ್ರೀ ಎ. ಪಿ. ಶ್ರೀನಿವಾಸ ಮೂರ್ತಿ



# ಆಧುನಿಕ ವಿದ್ಯಾಭ್ಯಾಸ

**ಹಳೆಯ ಮೈಸೂರು ರಾಜ್ಯ**

ಹೈದರಾಲಿಯು ದಳವಾಯಿಗಳಿಂದ ಸರ್ಕಾರದ ಆಡಳಿತ ಸೂತ್ರವನ್ನು ವಹಿಸಿಕೊಂಡ ಮೇಲೆ ಮೊದಲ ಬಾರಿಗೆ ಮೈಸೂರು ಮುಸ್ಲಿಮರ ಆಡಳಿತಕ್ಕೆ ಒಳಪಟ್ಟಿತು. ಆದರೂ ಹೈದರಾಲಿ ಆಗ ಸಿಂಹಾಸನವನ್ನು ಅಲಂಕರಿಸಿದ್ದ ಹಿಂದೂ ರಾಜನಿಗೆ ಸಂಪ್ರದಾಯದಂತೆ ಗೌರವ ಕಾಣಿಕೆಯನ್ನು ಸಲ್ಲಿಸುತ್ತಲೇ ಬಂದನು. 1782ರಲ್ಲಿ ಟಿಪ್ಪು ಅಧಿಕಾರಕ್ಕೆ ಬಂದಾಗ ಈ ತೋರಿಕೆಯ ವ್ಯವಹಾರವನ್ನು ನಿಲ್ಲಿಸಿದನು. ಏಕೆಂದರೆ ಟಿಪ್ಪು ಇಸ್ಲಾಮ್ ಮತದಲ್ಲಿ ನಿಷ್ಠೆಯುಳ್ಳವನಾಗಿ ಮುಸ್ಲಿಮ್ ರಾಜನಂತೆ ಅಧಿಕಾರವನ್ನು ಚಲಾಯಿಸಬೇಕೆಂಬ ಮಹಾದಾಶೆಯುಳ್ಳವನಾಗಿದ್ದನು. ರಾಜ್ಯವನ್ನು ದೇವರೇ ತನಗೆ ಒಪ್ಪಿಸಿರುವನೆಂಬ ಭಾವನೆಯನ್ನು ತಳೆದಿದ್ದುದೇ ಅವನ ಈ ಧೋರಣೆಗೆ ಮುಖ್ಯ ಕಾರಣವಾಗಿತ್ತು. ಟಿಪ್ಪುವಿನ ಜೀವನ ಚರಿತ್ರೆಯನ್ನು ಬರೆದಿರುವ ಕಿರ್ಮಾನಿಯವರು, 'ಟಿಪ್ಪು ಪ್ರತಿಯೊಂದು ಹಳ್ಳಿಯಲ್ಲೂ ಮಸೀದಿಗಳನ್ನು ಕಟ್ಟಿಸಿ ಮುಲ್ಲಾಗಳನ್ನು ನೇಮಿಸಿದನು. ಇದು ಮುಸ್ಲಿಮ್ ಯುವಕರಿಗೆ ಭೌತಿಕ ಮತ್ತು ಧಾರ್ಮಿಕ ವಿದ್ಯಾಭ್ಯಾಸ ಮಾಡಿಸುವ ತೀವ್ರ ಪ್ರಯತ್ನಕ್ಕೆ ಎಡೆಮಾಡಿಕೊಟ್ಟಿತು' ಎಂದು ಹೇಳಿದ್ದಾರೆ.

ಇಂಗ್ಲಿಷರು, ಫ್ರೆಂಚರು, ಮತ್ತು ನೈಜಾಮರು ತಮ್ಮ ಸೈನ್ಯ ಸಮೇತ ಗ್ರಾಮಾಂತರ ಪ್ರದೇಶಗಳಲ್ಲಿ ಹಾದು ಹೋದೆಡೆಯಲ್ಲೆಲ್ಲಾ ದಾಳಿಮಾಡಿ ಲೂಟಿಮಾಡಿದರು. ಅದರಿಂದ ದೇಶದಲ್ಲಿ ಬಹಳ ಕಷ್ಟನಷ್ಟಗಳುಂಟಾದುವು. ಹೀಗಿದ್ದರೂ ದೇಶದ ಉಳಿದ ಭಾಗಗಳಲ್ಲಿ ಜನತೆ ಸಾಂಪ್ರದಾಯಿಕವಾದ ಶಾಂತಿಯುತ ಜೀವನವನ್ನು ನಡೆಸಿಕೊಂಡು ಹೋಗುತ್ತಲೇ ಇದ್ದಿತು. ಸಾಂಘಿಕ ಗ್ರಾಮಜೀವನವು ಬಹಳ ಹಿಂದಿನ ಕಾಲದಿಂದಲೂ ಅಭಿವೃದ್ಧಿ ಹೊಂದುತ್ತ, ತನ್ನ ಕರ್ತವ್ಯಗಳನ್ನು ಪರಿಪಾಲಿಸಿಕೊಂಡು ಬಂದಿರುವುದು ಇದಕ್ಕೆ ಮುಖ್ಯ ಕಾರಣ. ಮೈಸೂರಿನಲ್ಲಿ ''ಬಾರಾಬರೂತಿ'' ಅಥವಾ ಹಳ್ಳಿಯ ಹನ್ನೆರಡು ಪದ್ಧತಿ ಜಾರಿಯಲ್ಲಿತ್ತು. ಈ ಪದ್ಧತಿಗೆ ಒಳಪಟ್ಟವರು ಪ್ರತಿ ಸುಗ್ಗಿಯಲ್ಲಿಯೂ ತಮ್ಮ ತಮ್ಮ ಭಾಗಗಳನ್ನು ಪಡೆಯುತ್ತಿದ್ದರು. ಹೀಗೆ ಭಾಗಗಳನ್ನು ಪಡೆಯುತ್ತಿದ್ದವರು ಸಾಮಾನ್ಯವಾಗಿ ಶಾಲಾ ಅಧ್ಯಾಪಕರು, ಪುರೋಹಿತರು ಮತ್ತು ಹಳ್ಳಿಯ ಕಸಬುದಾರರು. ಈ ಕಸಬುದಾರರು ವಂಶಪಾರಂಪರ್ಯವಾಗಿ ಬಂದ ತಮ್ಮ ಕಸಬನ್ನು ತಮ್ಮ ಮಕ್ಕಳಿಗೆ ಕಲಿಸುತ್ತಿದ್ದರು.

ದೇಶಾದ್ಯಂತ ಈಗಿರುವಂತೆ ವ್ಯವಸ್ಥಿತ ವಿದ್ಯಾಭ್ಯಾಸ ಪದ್ಧತಿಯು ಇಂಡಿಯಾ ದೇಶದ ಹಿಂದಿನ ಹಿಂದೂ ಅಥವಾ ಮುಸ್ಲಿಮ್ ರಾಜರುಗಳ ಜವಾಬ್ದಾರಿಗೆ ಒಳಪಟ್ಟಿರಲಿಲ್ಲ. ಅದು ಬಹುಮಟ್ಟಿಗೆ ಖಾಸಗಿಯವರ ಪ್ರಯತ್ನದಿಂದ ಮತ್ತು ಶ್ರೀಮಂತರ ಅಥವಾ ದೊರೆಗಳ ಉದಾರ ನೆರವಿನಿಂದ ನಡೆಯುತ್ತಿತ್ತು. ಪ್ರೌಢ ಹಾಗೂ ಧಾರ್ಮಿಕ ವಿದ್ಯಾಭ್ಯಾಸವು ವಿಶೇಷವಾಗಿ ಹಿಂದೂ, ಮುಸ್ಲಿಂ, ಜೈನ ಮತ್ತು ಕ್ರೈಸ್ತ ಪುರೋಹಿತ ವರ್ಗದವರ ಕೈಯಲ್ಲಿ ಇತ್ತು. ಆದರೆ ಔದ್ಯೋಗಿಕ ಮತ್ತು ತಾಂತ್ರಿಕ ವಿದ್ಯಾಭ್ಯಾಸವು ಬಹುಮಟ್ಟಿಗೆ ಕಸಬುದಾರರ ವಂಶಗಳಿಗೆ ಮಾತ್ರ ಸೀಮಿತವಾಗಿತ್ತು.

1833ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಮೈಸೂರಿನಲ್ಲಿ ತೆರೆದ ಇಂಗ್ಲಿಷ್ ಶಾಲೆಯಿಂದ

ಇಂಗ್ಲಿಷ್ ವಿದ್ಯಾಭ್ಯಾಸವು ಮೊದಲುಗೊಂಡಿತು. ಶಾಲೆಗಳನ್ನು ತೆರೆಯುವ ಕ್ರೈಸ್ತಮಿಷನರಿಗಳ ಪ್ರಯತ್ನಕ್ಕೆ ಸರ್ಕಾರವೂ ನೆರವು ನೀಡಿತು. 1840-54ರ ಅವಧಿಯಲ್ಲಿ ವೆಸ್ಲಿಯನ್ ಮಿಷನ್ ಕೆಲವು ಜಿಲ್ಲಾ ಕೇಂದ್ರಗಳಲ್ಲಿ ಇಂಗ್ಲಿಷ್ ಶಾಲೆಗಳನ್ನು ಸ್ಥಾಪಿಸಿತು. ಅವುಗಳಲ್ಲಿ 'ಬೆಂಗಳೂರು ಸ್ಕೂಲ್' 1851ರಲ್ಲಿ ಆರಂಭವಾಯಿತು.

1854ರಲ್ಲಿ ಹೆಸರಾಂತ "ವುಡ್ ಡಿಸ್ಪ್ಯಾಚ್" ಪ್ರಕಟಗೊಂಡ ಮೇಲೆ, 1857ರಲ್ಲಿ ನ್ಯಾಯಾಂಗ ಕಮಿಷನರ್ ಆಗಿದ್ದ ಶ್ರೀ ಡೆವರೋ ಮೈಸೂರು ಮತ್ತು ಕೊಡಗಿನಲ್ಲಿ ವಿದ್ಯಾಭ್ಯಾಸದ ವಿಸ್ತರಣೆಗೆ ಒಂದು ಯೋಜನೆಯನ್ನು ಸಿದ್ಧಗೊಳಿಸಿದನು. ಈ ಯೋಜನೆಗೆ ಅನುಗುಣವಾಗಿ ಸರ್ಕಾರವು ಬೆಂಗಳೂರಲ್ಲಿ 1858ರಲ್ಲಿ ಒಂದು ಸರ್ಕಾರಿ ಪ್ರೌಢಶಾಲೆಯನ್ನು ಸ್ಥಾಪಿಸಿತು. ಅನಂತರ ಅದೇ ಸೆಂಟ್ರಲ್ ಕಾಲೇಜಾಯಿತು. ತುಮಕೂರು, ಶಿವಮೊಗ್ಗ, ಮೈಸೂರು ಮತ್ತು ಹಾಸನಗಳಲ್ಲಿದ್ದ ಮಿಶನರಿ ಶಾಲೆಗಳನ್ನು ಸರ್ಕಾರ ವಹಿಸಿಕೊಂಡಿತು. ಬೆಂಗಳೂರಲ್ಲಿ 1861ರಲ್ಲಿ ಒಂದು 'ನಾರ್ಮಲ್ ಸ್ಕೂಲು' ಮತ್ತು 1862ರಲ್ಲಿ ಒಂದು 'ಇಂಜಿನಿಯರಿಂಗ್ ಸ್ಕೂಲು' ಆರಂಭವಾದುವು. ಆಗ ವಿದ್ಯಾ ಇಲಾಖೆಯ ಮುಖ್ಯಾಧಿಕಾರಿಯಾಗಿದ್ದ ಬಿ.ಎಲ್. ರೈಸ್ ಅವರ ಯೋಜನೆಯಂತೆ 1868ರಲ್ಲಿ ಪ್ರತಿಯೊಂದು ಹೋಬಳಿ ಕೇಂದ್ರದಲ್ಲಿಯೂ ಶಾಲೆಗಳು ಆರಂಭವಾದುವು. 1871-72ರಲ್ಲಿ ಪ್ರತಿಯೊಂದು ತಾಲೂಕಿನಲ್ಲಿಯೂ ದೇಶಭಾಷೆಯ ಒಂದು ಉನ್ನತಶಾಲೆ ಇತ್ತು. ಮೆಟ್ರಿಕ್ಯುಲೇಶನ್‌ವರೆಗೆ ಬೋಧಿಸುತ್ತಿದ್ದ 11 ಶಾಲೆಗಳೂ ಬಿ.ಎ. ಮಟ್ಟದ ವರೆಗೆ ಬೋಧಿಸುತ್ತಿದ್ದ 5 ಶಾಲೆಗಳೂ ಇದ್ದುವು. ಮೆಟ್ರಿಕ್ಯುಲೇಷನ್‌ಗೆ 122 ವಿದ್ಯಾರ್ಥಿಗಳು, ಎಫ್.ಎ.ಗೆ 13 ಮತ್ತು ಬಿ.ಎ.ಗೆ 14 ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತಿದ್ದರು. ಉತ್ತೀರ್ಣರಾದವರು ಕ್ರಮವಾಗಿ 55, 3 ಮತ್ತು 7. 1875ರಲ್ಲಿ ಹೈಸ್ಕೂಲು 'ಸೆಂಟ್ರಲ್ ಕಾಲೇಜ್' ಎಂದು ಕರೆಯಲ್ಪಟ್ಟು ಮದರಾಸು ವಿಶ್ವವಿದ್ಯಾನಿಲಯದ ಮನ್ನಣೆ ಪಡೆಯಿತು. ಬಿ.ಎ. ಮಟ್ಟದ ವರೆಗೆ ಅಲ್ಲಿ ಬೋಧನೆ ನಡೆಯುತ್ತಿತ್ತು. ಶಿವಮೊಗ್ಗ ಮತ್ತು ಮೈಸೂರಿನಲ್ಲಿದ್ದ ಶಾಲೆಗಳಲ್ಲಿ ಎಫ್.ಎ. ಮಟ್ಟದ ವರೆಗೆ ಬೋಧನೆ ನಡೆಯುತ್ತಿತ್ತು. 1877ರಲ್ಲಿ ಸಂಭವಿಸಿದ ಕ್ಷಾಮದಿಂದ ವಿದ್ಯಾಭ್ಯಾಸದ ಪ್ರಗತಿ ಕುಂಠಿತವಾಯಿತು. 1881 ರ ಅಧಿಕಾರ ವರ್ಗಾವಣೆ ಕಾಲದಲ್ಲಿನ ಪರಿಸ್ಥಿತಿ ಹೀಗಿತ್ತು.

ಶಾಲೆಗಳು ಮತ್ತು ವಿದ್ಯಾರ್ಥಿಗಳು

| | ಸರ್ಕಾರಿ | ನೆರವಿನ ಶಾಲೆಗಳು | ನೆರವಿಲ್ಲದ ಶಾಲೆಗಳು | ಒಟ್ಟು |
|---|---|---|---|---|
| ಶಾಲೆಗಳ ಸಂಖ್ಯೆ ... | 899 | 188 | 1,000 | 2,087 |
| ವಿದ್ಯಾರ್ಥಿಗಳ ಸಂಖ್ಯೆ ... | 33,287 | 9,370 | 15,000 | 57,657 |

ಸರ್ಕಾರಿ ನೆರವಿಲ್ಲದ ಪ್ರಾಥಮಿಕ ಮಟ್ಟದ ಬಹುಪಾಲು ಶಾಲೆಗಳನ್ನು ಬಿಟ್ಟರೆ, ಉಳಿದವುಗಳಲ್ಲಿ 4 ವಿಶ್ವವಿದ್ಯಾನಿಲಯದ ಮಟ್ಟದವು, 166 ಮಾಧ್ಯಮಿಕ, 907 ಪ್ರಾಥಮಿಕ ಮತ್ತು 10 ಇತರ ವಿಶೇಷ ಶಾಲೆಗಳು ಎಂದು ಹಂತ ಹಂತವಾಗಿ ವರ್ಗೀಕರಿಸಲ್ಪಟ್ಟಿದ್ದವು.

1881ರಲ್ಲಿ ರಾಜ್ಯವನ್ನು ಮಹಾರಾಜರಿಗೆ ವಹಿಸಿಕೊಟ್ಟಾಗ ರಂಗಾಚಾರ್ಲು ಅವರು ದಿವಾನರಾಗಿದ್ದರು. ಬ್ರಿಟಿಷ್ ಕಮಿಷನರಿಂದ ಆರಂಭವಾಗಿದ್ದ ಒಳ್ಳೆಯ ಕೆಲಸಕಾರ್ಯಗಳು ಮುಂದುವರಿದವು. ದಕ್ಷ ಆಡಳಿತಗಾರರೆಂದು ಹೆಸರಾಂತ ಸರ್. ಕೆ. ಶೇಷಾದ್ರಿ ಅಯ್ಯರ್ ಅವರು 1886ರಲ್ಲಿ ದಿವಾನ್ ಹುದ್ದೆಗೇರಿದಾಗ ರಾಜ್ಯದಲ್ಲಿದ್ದ ಸಾಮಾನ್ಯ ವಿದ್ಯಾಭ್ಯಾಸ ನೀತಿಯನ್ನು ಕುರಿತು ಈ ಸ್ಮರಣಾರ್ಹ ನುಡಿಗಳಲ್ಲಿ ವಿವರಿಸಿದ್ದಾರೆ: "ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸದ ಎಲ್ಲ ಸಾಧನಗಳನ್ನೂ ಬಳಸಿ

ಕೊಂಡು ಸಮರ್ಥವಾಗಿ ಪೂರ್ಣದಕ್ಷತೆಯಿಂದ ಅದನ್ನು ನಡೆಸಿಕೊಂಡು ಬರಬೇಕು, ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳು ವಿದ್ಯಾಭ್ಯಾಸವನ್ನು ಜನ ಸಾಮಾನ್ಯರಿಗೂ ಎಟಕುವಂತೆ ಮಾಡಬೇಕು. ದೇಶೀಯ ಮತ್ತು ಪ್ರಾಚೀನ ಭಾಷೆಗಳ ಪ್ರೌಢವ್ಯಾಸಂಗಕ್ಕೆ ಉತ್ತೇಜನವನ್ನು ಕೊಡಬೇಕು. ಸ್ತ್ರೀಯರ ವಿದ್ಯಾಭ್ಯಾಸದ ಮಟ್ಟವನ್ನು ಹೆಚ್ಚಿಸಿ, ವಿಸ್ತರಿಸಿ, ರಾಷ್ಟ್ರ ಮಟ್ಟದಲ್ಲಿ ಅದನ್ನು ನಡೆಸಿ ಜನತೆಯ ಅಭಿಮಾನಕ್ಕೆ ಒಳಪಡಿಸ ಬೇಕು. ಉನ್ನತ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಿ ತರುಣರನ್ನು ವೈದ್ಯಕೀಯ ಮತ್ತು ಇಂಜಿನಿಯರಿಂಗ್ ಮೊದಲಾದ ವೃತ್ತಿಗಳಿಗೆ ತಯಾರು ಮಾಡಬೇಕು. ಈ ಮೇಲೆ ಹೇಳಿದುದನ್ನು ಕಾರ್ಯಗತಗೊಳಿಸುವುದ ಕ್ಕಾಗಿ ಕನ್ನಡದಲ್ಲಿ ಸ್ಥಳೀಯ ಪರೀಕ್ಷೆಯೊಂದನ್ನು ಏರ್ಪಡಿಸಲಾಯಿತು; ಮತ್ತು 1886ರಲ್ಲಿ 'ಕರ್ನಾಟಕ 'ಭಾಷೋಜ್ಜೀವಿನೀ ಸಭೆ' ಸ್ಥಾಪಿತವಾಯಿತು ; ಅದಕ್ಕೆ ಒಂದು ಕನ್ನಡ ಕಾಲೇಜನ್ನು ಸೇರಿಸಲಾಯಿತು. ಬೆಂಗಳೂರಿನ ಸಂಸ್ಕೃತಶಾಲೆಯನ್ನು ಕಾಲೇಜಾಗಿ ಪರಿವರ್ತಿಸಲಾಯಿತು. ಮೈಸೂರಿನ ಮಹಾರಾಜಾ ಸಂಸ್ಕೃತ ಕಾಲೇಜನ್ನು ಅಭಿವೃದ್ಧಿಗೊಳಿಸಲಾಯಿತು ; ಅಲ್ಲಿ ಸಂಸ್ಕೃತದ ವಿವಿಧ ಅಂಗಗಳ ವ್ಯಾಸಂಗಕ್ಕೆ ಎಲ್ಲ ಅನುಕೂಲತೆಗಳನ್ನೂ ಕಲ್ಪಿಸಿಕೊಡಲಾಯಿತು. ದಕ್ಷಿಣ ಭಾರತದಲ್ಲೆಲ್ಲಾ ಪ್ರಪ್ರಥಮ ಸಂಸ್ಥೆಯಾದ 'ಮಹಾರಾಣೀ ಗರ್ಲ್ಸ್ ಹೈಸ್ಕೂಲು' ಮೈಸೂರಿನಲ್ಲಿ ಪ್ರಾರಂಭವಾಯಿತು. 1890–95ರ ಅವಧಿಯಲ್ಲಿ ನಡೆದ ಬೆಳವಣಿಗೆಗೆ ಈ ಮುಂದಿನವು ಸಾಕ್ಷಿಯಾಗಿವೆ: ಮಹಾರಾಜಾ ಕಾಲೇಜನ್ನು ಪ್ರಥಮದರ್ಜೆ ಕಾಲೇಜಾಗಿ ಪರಿವರ್ತಿಸಲಾಯಿತು. ಮೈಸೂರು, ಚಿತ್ರದುರ್ಗ ಮತ್ತು ಕೋಲಾರಗಳಲ್ಲಿ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಲಾಯಿತು. 1877ರ ಬರಗಾಲದಲ್ಲಿ ರದ್ದುಮಾಡಿದ್ದ ನಾರ್ಮಲ್ ಶಾಲೆಗಳನ್ನು ಮೈಸೂರು ಶಿವಮೊಗ್ಗ ಮತ್ತು ಕೋಲಾರಗಳಲ್ಲಿ ಮತ್ತೆ ಪ್ರಾರಂಭಿಸಲಾಯಿತು. ಸಂಸ್ಕೃತ ಮತ್ತು ಕನ್ನಡ ತಾಳೆಗರಿ ಗ್ರಂಥಗಳನ್ನೂ ಹಸ್ತಪ್ರತಿಗಳನ್ನೂ ಸಂಗ್ರಹಿಸುವ ಸಲುವಾಗಿ ಮೈಸೂರಿನಲ್ಲಿ 'ಪ್ರಾಚ್ಯ ಪುಸ್ತಕ ಭಂಡಾರ'ವೊಂದನ್ನು ಸ್ಥಾಪಿಸಲಾಯಿತು. ಮೈಸೂರು ಮತ್ತು ಹಾಸನಗಳಲ್ಲಿ ತಾಂತ್ರಿಕ ಶಾಲೆಗಳನ್ನು ತೆರೆಯಲಾಯಿತು. ಹಿಂದುಳಿದ ಪಂಗಡದವರ ಮಕ್ಕಳ ವಿದ್ಯಾಭ್ಯಾಸದ ಕಡೆಗೂ ಗಮನ ಹರಿಸಲಾಯಿತು.

ಈ ಶತಮಾನದ ಪ್ರಾರಂಭದಲ್ಲಿ ವಿದ್ಯಾಭ್ಯಾಸದ ಅಭಿವೃದ್ಧಿಯಲ್ಲಿ ನಡೆದ ಗಮನಾರ್ಹ ಸಂಗತಿ ಯೆಂದರೆ ತಾಂತ್ರಿಕ ವಿದ್ಯಾಭ್ಯಾಸಕ್ಕೂ ಸ್ತ್ರೀಯರ ವಿದ್ಯಾಭ್ಯಾಸಕ್ಕೂ ವಿಶೇಷ ಅವಕಾಶವನ್ನು ಒದಗಿಸಿದುದು. ಮೈಸೂರಿನಲ್ಲಿ ಒಂದು ಇಂಜಿನಿಯರಿಂಗ್ ಶಾಲೆ, ಜಿಲ್ಲಾ ಕೇಂದ್ರಗಳಲ್ಲಿ ಹೆಚ್ಚು ತಾಂತ್ರಿಕ ಶಾಲೆಗಳು ಪ್ರಾರಂಭವಾದುವು. ಮೈಸೂರು ದೇಶದಿಂದ ಹೊರಗೆ ಹೋಗಿ ತಾಂತ್ರಿಕ ಶಿಕ್ಷಣವನ್ನು ವ್ಯಾಸಂಗ ಮಾಡಲು ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನಗಳನ್ನು ಕಲ್ಪಿಸಲಾಯಿತು. 1902–03ರಲ್ಲಿ ಮೈಸೂರಿನ 'ಮಹಾರಾಣಿ ಹೈಸ್ಕೂಲ'ನ್ನು ಕಾಲೇಜಾಗಿ ವಿಸ್ತರಿಸಲಾಯಿತು.

ಸರ್. ಎಂ. ವಿಶ್ವೇಶ್ವರಯ್ಯನವರ ದಕ್ಷಮಾರ್ಗದರ್ಶನದಿಂದ ಈ ಶತಮಾನದ ಎರಡನೆಯ ದಶಕವು ಹಲವಾರು ಚಟುವಟಿಕೆಗಳಿಗೆ ಹೆಸರುವಾಸಿಯಾಯಿತು. 1916 ರಲ್ಲಿ ಮೈಸೂರು ವಿಶ್ವವಿದ್ಯಾನಿಲಯವು ಶಾಸನಬದ್ಧವಾಯಿತು. 1911 ರಿಂದ 16 ರ ವರೆಗೆ ನಡೆದ ಗಮನಾರ್ಹವಾದ ಅಭಿವೃದ್ಧಿ ಕಾರ್ಯ ಗಳೆಂದರೆ ಎಸ್.ಎಸ್.ಎಲ್.ಸಿ. ಏರ್ಪಾಟನ್ನು ಜಾರಿಗೆ ತಂದದ್ದು, ಏಳು ಕನ್ನಡ ಹೈಸ್ಕೂಲುಗಳನ್ನು ತೆರೆದದ್ದು, ಕಡ್ಡಾಯ ಶಿಕ್ಷಣಕ್ಕೆ ಅವಕಾಶಮಾಡಿಕೊಟ್ಟು ಎಲಿಮೆಂಟರಿ ವಿದ್ಯಾಭ್ಯಾಸ ನಿಯಮವನ್ನು ಜಾರಿಗೆ ತಂದದ್ದು. ಹಳೆಯ ಇಂಜಿನಿಯರಿಂಗ್ ಮತ್ತು ಕೈಗಾರಿಕಾ ಶಾಲೆಗಳನ್ನು ಒಟ್ಟಾಗಿ ಸೇರಿಸಿ ಮೆಕ್ಯಾನಿಕಲ್ ಇಂಜಿನಿಯರಿಂಗ್ ಶಾಲೆಯನ್ನು ಬೆಂಗಳೂರಿನಲ್ಲೂ ಚಾಮರಾಜೇಂದ್ರ ತಾಂತ್ರಿಕ ಶಾಲೆಯನ್ನು ಮೈಸೂರಿನಲ್ಲೂ ಪ್ರಾರಂಭಿಸಲಾಯಿತು. ಸರ್ಕಾರಿ ವಾಣಿಜ್ಯಶಾಲೆಗಳನ್ನು ಬೆಂಗಳೂರು ಮತ್ತು ಮೈಸೂರುಗಳಲ್ಲಿ ತೆರೆಯಲಾಯಿತು. 1913ರಲ್ಲಿ ತೆರೆದ ಹೆಬ್ಬಾಳದ ವ್ಯವಸಾಯಶಾಲೆ ರಾಜ್ಯದಲ್ಲಿ ವ್ಯವಸಾಯ ಶಿಕ್ಷಣ ಪ್ರಾರಂಭದ ಒಂದು ದಾಖಲೆಯನ್ನು ಸ್ಥಾಪಿಸಿತು. 1946ರಲ್ಲಿ ವ್ಯವಸಾಯ ಕಾಲೇಜು ಸ್ಥಾಪಿಸಲ್ಪಟ್ಟಿತು.

ವಿದ್ಯಾಭ್ಯಾಸದಲ್ಲಿ ಸಾಧಿಸಬೇಕಾದ ಮುಂದಿನ ಪ್ರಗತಿಯನ್ನು ಗುರುತಿಸುವುದಕ್ಕಾಗಿ ಸರ್ಕಾರವು 1921ರಲ್ಲಿ ವ್ಯಾಪಕವಾದ ಒಂದು ಠರಾವನ್ನು ಅಂಗೀಕರಿಸಿತು. ಸರ್ಕಾರಿ ನೆರವು ಪಡೆಯುತ್ತಿದ್ದ ಪ್ರಾಥಮಿಕ ಶಾಲೆಗಳನ್ನು ಸರ್ಕಾರಿಶಾಲೆಗಳಾಗಿ ಪರಿವರ್ತಿಸಿ ಅರ್ಹ ಸಿಬ್ಬಂದಿಯನ್ನೂ ಸಾಕಷ್ಟು ಸಲಕರಣೆಗಳನ್ನೂ ಒದಗಿಸಿದರು. ಮಾಧ್ಯಮಿಕ ಶಾಲೆಗಳಿಗೆ ಸುಧಾರಿಸಿದ ಪಾಠಕ್ರಮವನ್ನು ಗೊತ್ತುಪಡಿಸಲಾಯಿತು. ಪ್ರೌಢಶಾಲೆಯ ವಿದ್ಯಾಭ್ಯಾಸದ ಅಂಗವಾಗಿ ವೃತ್ತಿಶಿಕ್ಷಣದ ವಿದ್ಯಾಭ್ಯಾಸ ಕ್ರಮವನ್ನು ರೂಪಿಸಿದರು. ಶಿಕ್ಷಕರ ತರಬೇತಿಗೆ ಸಾಕಷ್ಟು ಅವಕಾಶ ಮಾಡಲಾಯಿತು. 1915–16ರಲ್ಲಿ ಪ್ರಾಥಮಿಕ ವಿದ್ಯಾಭ್ಯಾಸದ ವೆಚ್ಚ ರೂ. 6,37,814 ಇದ್ದದ್ದು 1921-22ರಲ್ಲಿ ರೂ. 13,37,865ಕ್ಕೆ ಏರಿತು.

ರಾಜ್ಯದ ಪ್ರಾಥಮಿಕ ಶಿಕ್ಷಣದ ಆಡಳಿತ ಹಾಗೂ ಆರ್ಥಿಕ ವ್ಯವಸ್ಥೆ ಮತ್ತು ಕಡ್ಡಾಯ ಶಿಕ್ಷಣವನ್ನು ಜಾರಿಗೆ ತರುವ ಕ್ರಮಗಳು ಹಲವಾರು ಹಂತಗಳಲ್ಲಿ ಮುಂದುವರಿದಿವೆ. ಇವಕ್ಕೆ ಒಂದು ವೈವಿಧ್ಯಪೂರ್ಣ ಚರಿತ್ರೆಯಿದೆ. 1893ರಿಂದ ಸುಮಾರು 1928ರ ವರೆಗೆ ಸ್ಥಳೀಯ ನೆರವನ್ನು ಒದಗಿಸಿಕೊಳ್ಳುವುದು ಮತ್ತು ಸರ್ಕಾರಿ ನೆರವು ಪಡೆಯುವ ಶಾಲೆಗಳಿಗೆ ಉತ್ತೇಜನ ಕೊಡುವುದೇ ಆಗಿತ್ತು. 1928ರ ತರುವಾಯ ಪ್ರಾಥಮಿಕ ವಿದ್ಯಾಭ್ಯಾಸದ ಆಡಳಿತ ಮತ್ತು ಹಣಕಾಸಿನ ವಿಷಯಗಳಲ್ಲಿ ಸರ್ಕಾರದ ನೇರವಾಗಿ ಜವಾಬ್ದಾರಿಯನ್ನು ತಪ್ಪಿಸಿ ಆ ಕಾರ್ಯವನ್ನು ಗ್ರಾಮ ಪಂಚಾಯತಿಗಳಿಗೆ ವಹಿಸುವ ಪ್ರಯತ್ನವನ್ನು ನಡೆಸಲಾಯಿತು. ಆದರೆ ಗ್ರಾಮಪಂಚಾಯತಿಗಳು ಸಮಸ್ಯೆಗಳನ್ನು ಸಮರ್ಪಕವಾಗಿ ಪರಿಹರಿಸಿ ನಿರ್ವಹಿಸಲಾರವೆಂಬುದು ಗೊತ್ತಾದ ಮೇಲೆ 1931ರಲ್ಲಿ ಡಿಸ್ಟ್ರಿಕ್ಟ್ ಬೋರ್ಡುಗಳು ಅಸ್ತಿತ್ವಕ್ಕೆ ಬಂದುವು. ಈ ಕಾರ್ಯವಿಧಾನವನ್ನು ಹತ್ತು ವರ್ಷಗಳು ಪ್ರಯೋಗ ಮಾಡಿ ನೋಡಿದ ಮೇಲೆ, ರಾಜ್ಯದಲ್ಲೆಲ್ಲಾ ಸ್ಥಿರವಾದ ಏಕರೀತಿಯ ವಿದ್ಯಾಭ್ಯಾಸದ ಬೆಳವಣಿಗೆಯನ್ನು ಸಾಧಿಸಬೇಕಿದ್ದರೆ ಆ ಜವಾಬ್ದಾರಿಯನ್ನು ಸರ್ಕಾರ ವಹಿಸಿಕೊಳ್ಳಬೇಕೆಂಬುದನ್ನು ಒಪ್ಪಲಾಯಿತು. 1941ರಿಂದ ಇದು ಪ್ರಾಥಮಿಕ ವಿದ್ಯಾಭ್ಯಾಸದ ವಿಷಯದಲ್ಲಿ ಸರ್ಕಾರದ ಮಾರ್ಗದರ್ಶಕ ಕಾರ್ಯನೀತಿಯಾಗಿದೆ.

1913ರಲ್ಲಿ ಮೂಲ ಶಿಕ್ಷಣ ವಿಧಿ (Elementary Education Act) ಯಂತೆ ಕಡ್ಡಾಯ ಶಿಕ್ಷಣವನ್ನು ಜಾರಿಗೆ ತರುವುದನ್ನು ಆಲೋಚಿಸಿ ಶಾಲಾಸಮಿತಿಗಳನ್ನು ನೇಮಿಸಲಾಯಿತು. 1921-22ರ ಹೊತ್ತಿಗೆ ಈ ಯೋಜನೆ 240 ಕೇಂದ್ರಗಳಲ್ಲಿ ಕಾರ್ಯಗತಗೊಳಿಸುವ ಆಡಳಿತ ವಿಧಾನ ಸಮರ್ಪಕವಾಗಿ ಕಂಡುಬರಲಿಲ್ಲ. ಕಡ್ಡಾಯ ಶಿಕ್ಷಣದ ವಿಸ್ತರಣೆಗೆ ಪ್ರಯತ್ನಿಸುವುದಕ್ಕೆ ಮೊದಲು, ವಿಶೇಷವಾದ ಸಂಘಟನೆ, ವ್ಯರ್ಥವಾದ ವೆಚ್ಚವನ್ನು ತಡೆಗಟ್ಟುವುದು ಅವಶ್ಯವೆಂದು ಕಂಡುಬಂದಿತು. 1930ರ ಮೂಲಶಿಕ್ಷಣ ವಿಧಿಯಂತೆ (Elementary Education Regulation) ಸ್ಥಳೀಯ ಸಂಸ್ಥೆಗಳಿಗೆ ಆಡಳಿತಾಧಿಕಾರವನ್ನು ವರ್ಗಾಯಿಸಲಾಯಿತು. ಇದರಿಂದ ಹತ್ತುವರ್ಷಗಳ ಅವಧಿಯಲ್ಲಿ ವಿದ್ಯಾಭ್ಯಾಸದ ವಿಸ್ತರಣೆಗೆ ಒಂದು ಮಾರ್ಗವಾಯಿತಲ್ಲದೆ ಮುಂದೆ ಕಡ್ಡಾಯ ಶಿಕ್ಷಣಕ್ಕೆ ಅವಕಾಶವೊದಗಿತು. 1941ರಲ್ಲಿ ಕಡ್ಡಾಯ ಹಾಜರಾತಿ ಪದ್ಧತಿಯನ್ನು ಜಾರಿಗೆ ತರಲಾಯಿತು. ಇದರಿಂದ ತಂದೆತಾಯಿಗಳು ಒಮ್ಮೆ ಶಾಲೆಗೆ ಸೇರಿಸಿದ ಮಗುವನ್ನು 12ವರ್ಷ ವಯಸ್ಸಿನ ವರೆಗೂ ಬಿಡಿಸದೆ ಕಡ್ಡಾಯವಾಗಿ ಕಳಿಸುವಂತಾಯಿತು. ಹತ್ತುವರ್ಷಗಳಲ್ಲಿ ದೇಶದಾದ್ಯಂತ ಈ ಪದ್ಧತಿಯನ್ನು ವ್ಯಾಪಕವಾಗಿ ಜಾರಿಗೆ ತರುವುದಕ್ಕಾಗಿ ಈ ಯೋಜನೆಯನ್ನು ವಿಸ್ತರಿಸಲಾಯಿತು. ಶಾಲೆಗೆ ಮಕ್ಕಳನ್ನು ಸೇರಿಸುವ ವಿಷಯ ತಂದೆತಾಯಿಗಳ ಇಚ್ಛೆಗೆ ಸೇರಿದ್ದುದರಿಂದಲೂ ಖರ್ಚುಮಾಡಿದ ವೆಚ್ಚಕ್ಕೆ ಅನುಗುಣವಾಗಿ ಫಲ ದೊರಕಲಿಲ್ಲವಾದ್ದರಿಂದಲೂ 1950ರಲ್ಲಿ ಈ ಯೋಜನೆಯನ್ನು ಕೈಬಿಡಲಾಯಿತು. ಈ ವ್ಯರ್ಥವಾದ ಖರ್ಚು 1951–52ರ ವರೆಗೂ ಒಂದು ದೊಡ್ಡ ಸಮಸ್ಯೆಯಾಗಿಯೇ ಉಳಿಯಿತು. 1948–49ರಲ್ಲಿ ಒಂದನೆಯ ತರಗತಿಗೆ ಪ್ರವೇಶ ಪಡೆದ ವಿದ್ಯಾರ್ಥಿಗಳಲ್ಲಿ ಶೇಕಡ 33 ವಿದ್ಯಾರ್ಥಿಗಳು ಮಾತ್ರ ನಾಲ್ಕನೆಯ ತರಗತಿಯನ್ನು ಮುಟ್ಟಿದರು.

ಒಬ್ಬರೇ ಉಪಾಧ್ಯಾಯರಿರುವ ಶಾಲೆಗಳು, ಕಡಮೆ ವಿದ್ಯಾರ್ಹತೆಯನ್ನು ಪಡೆದ ಪ್ರಾಥಮಿಕಶಾಲಾ ಅಧ್ಯಾಪಕರುಗಳು—ಇವು, ಸರ್ಕಾರ ಎದುರಿಸಬೇಕಾದ ಸಮಸ್ಯೆಗಳಾಗಿ ಪರಿಣಮಿಸಿದುವು.

ವಯಸ್ಕರ ಶಿಕ್ಷಣದ ವಿಷಯದಲ್ಲಿ, 1905ಕ್ಕೆ ಮೊದಲೇ ವಯಸ್ಕರಿಗಾಗಿ ರಾತ್ರಿಶಾಲೆಗಳನ್ನು ತೆರೆಯುವ ಪ್ರಯತ್ನಗಳು ನಡೆದಿದ್ದುವು ; ಅದು ಬಹುಮಟ್ಟಿಗೆ ಸ್ವಯಂಪ್ರೇರಿತವಾಗಿತ್ತು, ಸುಸಂಘಟಿತ ವಾಗಿರಲಿಲ್ಲ. 3941ರಲ್ಲಿ ಮೈಸೂರು ಪ್ರಾಂತ ವಯಸ್ಕರ ಶಿಕ್ಷಣ ಸಮಿತಿ ರೂಪಿತವಾಗಿ ಈ ಕ್ಷೇತ್ರದಲ್ಲಿ ಕ್ರಮಬದ್ಧವಾದ ಶಿಕ್ಷಣಕ್ಕೆ ಪ್ರಯತ್ನಮಾಡಲಾಯಿತು. ನಾಲ್ಕು ವರ್ಷಗಳ ಅನಂತರ ಈ ಸಮಿತಿ "ಮೈಸೂರು ರಾಜ್ಯದ ವಯಸ್ಕರ ಶಿಕ್ಷಣ ಸಮಿತಿ" ಎಂದು ಕರೆಯಲ್ಪಟ್ಟಿತು. ಅದು ಹೊಸತಾಗಿ ಅಕ್ಷರಸ್ಥರಾದವರಿಗೆ ಸಾಹಿತ್ಯವನ್ನು ಪ್ರಕಟಿಸುವುದು ಗ್ರಾಮಾಂತರಶಾಲೆಗಳ ಮಾದರಿಯ ವಿದ್ಯಾಪೀಠಗಳನ್ನು ತೆರೆದು ಅಲ್ಲಿ ವಯಸ್ಕರಿಗೆ ವಸತಿಸೌಕರ್ಯವನ್ನೊದಗಿಸಿ ಅವರಿಗೆ ಸಾಮಾನ್ಯ ವಿದ್ಯಾಭ್ಯಾಸ, ವ್ಯವಸಾಯ ತರಬೇತಿ, ಗ್ರಾಮಾಂತರ ಕೈಗಾರಿಕೆ ಇವೆಲ್ಲವನ್ನೂ ಕಲಿಸಿಕೊಡುವುದು—ಈ ರೀತಿಯಲ್ಲಿ ಅತ್ಯುತ್ತಮ ಕಾರ್ಯವನ್ನು ಸಾಧಿಸಿತು.

1921ಕ್ಕೂ ಮೊದಲು ವಿದ್ಯಾರ್ಥಿಗಳನ್ನು ಕನ್ನಡ ಲೋಯರ್ ಸೆಕೆಂಡರಿ ಪರೀಕ್ಷೆಗೆ ಸಿದ್ಧಪಡಿಸುವ ಐದು ಪ್ರಾಥಮಿಕ ತರಗತಿಗಳನ್ನುಳ್ಳ ದೇಶಭಾಷೆಯ ಮಾಧ್ಯಮಿಕ ಶಾಲೆಗಳಿದ್ದವು. ಈ ಪರೀಕ್ಷೆಯಲ್ಲಿ ಉತ್ತೀರ್ಣರಾದವರು ಇಂಗ್ಲಿಷ್ ಭಾಷೆಯ ಶಾಲೆಯಲ್ಲಿ ಎರಡು ವರ್ಷದ ಶಿಕ್ಷಣವನ್ನು ಪಡೆದು, ಇಂಗ್ಲಿಷ್ ಪರೀಕ್ಷೆಗೆ ಕುಳಿತು, ಇಂಗ್ಲಿಷ್ ಲೋಯರ್ ಸೆಕೆಂಡರಿ ಪರೀಕ್ಷೆಯನ್ನು ಪಾಸುಮಾಡ ಬಹುದಾಗಿತ್ತು. ಆ ಮೇಲೆ ಕನ್ನಡ ಲೋಯರ್ ಸೆಕೆಂಡರಿ ಪರೀಕ್ಷೆಗಳನ್ನು ರದ್ದುಗೊಳಿಸಿದರು. ಪ್ರೌಢಶಾಲೆಯ ಮಟ್ಟದ ಎಲ್ಲ ವಿಷಯಗಳನ್ನೂ ಕನ್ನಡದಲ್ಲೇ ಬೋಧಿಸಿ, ಅಪ್ಪರ್ ಸೆಕೆಂಡರಿ ಪರೀಕ್ಷೆಗೆ ವಿದ್ಯಾರ್ಥಿಗಳನ್ನು ಸಿದ್ಧಗೊಳಿಸುವ ಆರು ಕನ್ನಡ ಪ್ರೌಢಶಾಲೆಗಳು ಕೂಡ ಇದ್ದುವು. ಅವು ಇಂಗ್ಲಿಷ್ ಹೈಸ್ಕೂಲಿನ ಜೊತೆಯ ಸ್ಪರ್ಧೆಯಲ್ಲಿ ಉಚ್ಚಾಯ ಸ್ಥಿತಿಗೇರಲಿಲ್ಲ. ಆದುದರಿಂದ 1935ರಲ್ಲಿ ಅವು ಗಳನ್ನು ರದ್ದುಪಡಿಸಿದರು. ಗ್ರಾಮಾಂತರ ಪ್ರದೇಶಗಳವರ ಇಂಗ್ಲಿಷ್ ವಿದ್ಯಾಭ್ಯಾಸದ ವ್ಯಾಪಕವಾದ ಬೇಡಿಕೆಯನ್ನು ಪೂರೈಸಲು "ಹೊಸ ಮಾದರಿಯ" ಮಾಧ್ಯಮಿಕ ಶಾಲೆಗಳನ್ನು ತೆರೆಯಲಾಯಿತು. ಇದರ ಹೊಸತನವೆಂದರೆ. ಪ್ರಾಥಮಿಕ ಶಾಲೆಗಳಿಗೆ ಒಬ್ಬ ಇಂಗ್ಲಿಷ್ ಅಧ್ಯಾಪಕರನ್ನು ಒದಗಿಸಿಕೊಟ್ಟು ಮಾಧ್ಯಮಿಕ ಶಾಲೆಯ ತರಗತಿಗಳನ್ನು ಆರಂಭಿಸಿದುದು. ಕ್ರಮೇಣ ಇವು ಪರಿಪೂರ್ಣ ಮಾಧ್ಯಮಿಕ ಶಾಲೆಗಳಾಗಿ ಅಭಿವೃದ್ಧಿಗೊಂಡುವು.

ನಾಲ್ಕು ವರ್ಷಗಳ ಪ್ರಾಥಮಿಕ ಮತ್ತು ನಾಲ್ಕು ವರ್ಷಗಳ ಮಾಧ್ಯಮಿಕ ಉಚಿತ ವಿದ್ಯಾಭ್ಯಾಸವೂ ಅನಂತರ ಕ್ರಮವಾಗಿ ರೂ. 3-00, ರೂ. 3-50, ರೂ. 4-00 ಶುಲ್ಕವಿರುವ ಮೂರು ವರ್ಷಗಳ ಪ್ರೌಢಶಾಲಾವ್ಯಾಸಂಗ—ಇದು ಸಾಮಾನ್ಯವಾಗಿ ವಿದ್ಯಾಭ್ಯಾಸದ ಪದ್ಧತಿಯಾಗಿತ್ತು. ಶುಲ್ಕ ನೆರೆಯ ಪ್ರಾಂತಗಳಿಗಿಂತಲೂ ಕಡಮೆಯಾಗಿತ್ತು. 1931-32ರಲ್ಲಿ ಮೊದಲ ಬಾರಿಗೆ ಪ್ರೌಢಶಾಲೆಯಲ್ಲಿ ಕನ್ನಡವನ್ನು ಶಿಕ್ಷಣ ಮಾಧ್ಯಮವಾಗಿ ಆರಂಭಿಸಲಾಯಿತು. ಕ್ರಮೇಣ ಎಲ್ಲ ವಿಷಯಗಳನ್ನು ಕನ್ನಡ ಮಾಧ್ಯಮದಲ್ಲಿ ಆರಂಭಿಸಿ ಅದಕ್ಕಾಗಿ ಅಗತ್ಯವಾದ ಪಠ್ಯಪುಸ್ತಕಗಳನ್ನೂ ಬರೆಸಿ ಸಿದ್ಧಪಡಿಸಲಾಯಿತು. ಕನ್ನಡ ಶಿಕ್ಷಣ ಮಾಧ್ಯಮದ ಭಾಗವು ಒಂದೇ ಬಗೆಯಾಗಿರದೆ ಸ್ಥಿತ್ಯಂತರವಾಗುತ್ತಿದೆ. ಇತ್ತೀಚೆಗೆ ಇಂಗ್ಲಿಷ್ ಮಾಧ್ಯಮಕ್ಕೆ ಬೇಡಿಕೆ ಹೆಚ್ಚಾಗುತ್ತಿದೆ. ಏಕೆಂದರೆ ವಿಶ್ವವಿದ್ಯಾನಿಲಯಗಳಲ್ಲಿ ಅಥವಾ ತಾಂತ್ರಿಕಶಾಲೆಗಳಲ್ಲಿ ಅಥವಾ ರಾಜ್ಯದ ಹೊರಭಾಗಗಳಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸುವವರಿಗೆ ಇದು ಹೆಚ್ಚು ಪ್ರಯೋಜನಕಾರಿಯೆಂದು ಭಾವಿಸಲ್ಪಟ್ಟಿದೆ.

1916ರಲ್ಲಿ ಮೈಸೂರು ವಿಶ್ವವಿದ್ಯಾನಿಲಯವು ಸ್ಥಾಪಿಸಲ್ಪಟ್ಟಿತು. ಅಲ್ಲಿಯ ವರೆಗೆ ಮದರಾಸು ವಿಶ್ವವಿದ್ಯಾನಿಲಯದ ಮನ್ನಣೆ ಪಡೆದು ಅದಕ್ಕೆ ಸೇರಿದ್ದ ಕಾಲೇಜುಗಳನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ತೆಗೆದುಕೊಳ್ಳಲಾಯಿತು. 1919ರಲ್ಲಿ ವಿಶ್ವವಿದ್ಯಾನಿಲಯದ ಎಂಟ್ರೆನ್ಸ್ ತರಗತಿಯೂ ಅನಂತರ ಮೂರು ವರ್ಷಗಳ ಪದವಿ ಶಿಕ್ಷಣವೂ ಉಳ್ಳ ಪದ್ಧತಿ ಆರಂಭವಾಯಿತು. ಈ ಉದ್ದೇಶದಿಂದ ಕೆಲವು ಪ್ರೌಢಶಾಲೆಗಳನ್ನು ಉನ್ನತಗೊಳಿಸಲಾಯಿತು. ಆದರೆ ಈ ಯೋಜನೆಯನ್ನು ಬಿಟ್ಟು, 1928 ರಲ್ಲಿ ಬೇರೆ ವಿಶ್ವವಿದ್ಯಾನಿಲಯಗಳಲ್ಲಿ ರೂಢಿಯಲ್ಲಿರುವ ಎರಡು ವರ್ಷಗಳ ಇಂಟರ್ ಮೀಡಿಯಟ್ ಶಿಕ್ಷಣ, ಆ ಮೇಲೆ ಎರಡು ವರ್ಷಗಳ ಪದವಿ ಶಿಕ್ಷಣವನ್ನು ಕೊಡುವ ಪದ್ಧತಿಯನ್ನು ಉಳಿಸಿಕೊಳ್ಳಲಾಯಿತು. ವಿಶ್ವವಿದ್ಯಾನಿಲಯದ ಕಾಯಿದೆಯನ್ನು (University Act) 1933ರಲ್ಲಿ ತಿದ್ದುಪಡಿ ಮಾಡಲಾಯಿತು. ಇದರ ಪರಿಣಾಮವಾಗಿ ಅಕಾಡೆಮಿಕ್ ಕೌನ್ಸಿಲ್ ಸ್ಥಾಪಿತವಾಯಿತು; ಸೆನೆಟನ್ನು ವಿಸ್ತರಿಸಿ ಸಾರ್ವಜನಿಕ ಹಿತಾಸಕ್ತಿಗಳಿಗೆ ಹೆಚ್ಚು ಪ್ರಾತಿನಿಧಿಕವಾಗುವಂತೆ ಮಾಡಲಾಯಿತು. 1939ರಲ್ಲಿ ಮಾಡಿದ ಕಾಯಿದೆಯ ಮತ್ತೊಂದು ತಿದ್ದುಪಡಿಯಿಂದ ರಾಜ್ಯದೊಳಗಿನ ಸಂಸ್ಥೆಗಳನ್ನು ತನ್ನ ಅಧಿಕಾರ ವ್ಯಾಪ್ತಿಗೊಳಪಡಿಸಿಕೊಳ್ಳಲು ಸಹಾಯಕವಾಯಿತು. ಇದರಿಂದ ಬೆಂಗಳೂರು ಕಂಟೋನ್ಮೆಂಟಿನ ಕಾಲೇಜುಗಳು ಮೈಸೂರು ವಿಶ್ವವಿದ್ಯಾಲಯಕ್ಕೆ ಸೇರುವಂತಾಯಿತು.

1948ರಲ್ಲಿ ಸ್ಥಾಪಿಸಲ್ಪಟ್ಟ ಶ್ರೀ ಕೃಷ್ಣರಾಜೇಂದ್ರ ಸಿಲ್ವರ್ ಜ್ಯೂಬಿಲಿ ಟೆಕ್ನಿಕಲ್ ಇನ್‌ಸ್ಟಿಟ್ಯೂಟ್ ನೆಯ್ಗೆ ಕಲೆಯಲ್ಲಿ ತಾಂತ್ರಿಕ ಶಿಕ್ಷಣವನ್ನೊದಗಿಸುತ್ತಿದೆ. 1943ರಲ್ಲಿ ಸ್ಥಾಪಿತವಾದ ಶ್ರೀ ಜಯಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆಯು (ಆಕ್ಯುಪೇಷನಲ್ ಇನ್‌ಸ್ಟಿಟ್ಯೂಟ್) ವೃತ್ತಿಶಿಕ್ಷಣ ವಿದ್ಯಾಭ್ಯಾಸವನ್ನು ನೀಡುವುದರಲ್ಲಿ ಇಂಡಿಯಾದಲ್ಲಿಯೇ ಪ್ರಥಮವಾಯಿತು. ಡಾ॥ ಎಂ. ವಿಶ್ವೇಶ್ವರಯ್ಯನವರು ನೀಡಿದ ಎರಡು ಲಕ್ಷ ರೂಪಾಯಿಗಳ ದಾನದ ಫಲವಾಗಿ ರೂಪಿತವಾದ ಈ ಸಂಸ್ಥೆ ರಾಜ್ಯದ ತಾಂತ್ರಿಕ ವಿದ್ಯಾಭ್ಯಾಸದ ಇತಿಹಾಸದಲ್ಲಿ ಒಂದು ಮೈಲಿಗಲ್ಲಾಗಿ ಪರಿಣಮಿಸಿತು. ಅನಂತರ ದಾವಣಗೆರೆ, ಭದ್ರಾವತಿ, ಹಾಸನ, ಚಿಂತಾಮಣಿ, ಮೊದಲಾದ ಸ್ಥಳಗಳಲ್ಲಿ ತಾಂತ್ರಿಕ ಶಾಲೆಗಳು ಆರಂಭವಾದುವು.

1860ರಷ್ಟು ಹಿಂದೆಯೇ ಮೈಸೂರಿನಲ್ಲಿ ಪ್ರಾಥಮಿಕ ಶಾಲೆಯ ಅಧ್ಯಾಪಕರುಗಳಾಗಿ ಅಧ್ಯಾಪಕ ತರಬೇತಿ ಶಾಲೆಯೊಂದು ತೆರೆಯಲ್ಪಟ್ಟಿತ್ತು. ಅನಂತರ ಕಾಲದಲ್ಲಿ ಜಿಲ್ಲಾ ಕೇಂದ್ರಗಳಲ್ಲಿ ಅನೇಕ ನಾರ್ಮಲ್ ಸ್ಕೂಲುಗಳು ಆರಂಭವಾದುವು. 1912–13ರಲ್ಲಿ ಮಾಧ್ಯಮಿಕ ಶಾಲೆಗಳ ಅಧ್ಯಾಪಕರುಗಳ ತರಬೇತಿಗಾಗಿ ಮೈಸೂರಿನಲ್ಲಿ ಶಾಲೆಯೊಂದು ಆರಂಭವಾಯಿತು. ಇದರಂತೆಯೇ ಅಧ್ಯಾಪಕಿಯರ ತರಬೇತಿಯು 1928–29ರಲ್ಲಿ ಆರಂಭವಾಯಿತು.

ಮೈಸೂರು ವಿಶ್ವವಿದ್ಯಾನಿಲಯವು ಸ್ಥಾಪಿತವಾಗುವುದಕ್ಕೆ ಮೊದಲು, ಪದವೀಧರರಿಗೆ ಅಧ್ಯಾಪಕ ವೃತ್ತಿಗೆಂದು ತರಬೇತಿಕೊಡುವ ಯಾವ ಶಾಲೆಗಳೂ ಇರಲಿಲ್ಲ. ಅನಂತರ ಅವರ ತರಬೇತಿಗಾಗಿ ಮಹಾರಾಜಾ ಕಾಲೇಜಿನಲ್ಲಿ ಅವಕಾಶ ಮಾಡಿಕೊಡಲಾಯಿತು. ಪ್ರತ್ಯೇಕವಾದ ಅಧ್ಯಾಪಕ ತರಬೇತಿ ಕಾಲೇಜೊಂದು 1947ರಲ್ಲಿ ಮೈಸೂರಿನಲ್ಲಿ ಸ್ಥಾಪಿಸಲ್ಪಟ್ಟಿತು.

ತರುವಾಯ ಈ ಕ್ಷೇತ್ರದಲ್ಲಿ ಖಾಸಗಿಯವರ ಪ್ರಯತ್ನದಿಂದ ಸರ್ಕಾರದ ಸಹಾಯಪಡೆದು, ಅನೇಕ ತರಬೇತಿ ಶಾಲೆಗಳು ಆರಂಭವಾಗಿವೆ. ಇವು ಸರ್ಕಾರದ ಹಾಗೂ ವಿದ್ಯಾಭ್ಯಾಸ ಇಲಾಖೆಯ ಚಟುವಟಿಕೆಗಳಿಗೆ ಪೂರಕವಾಗಿವೆ.

ಬೆಂಗಳೂರಿನಲ್ಲಿರುವ ಎಲ್ಲ ನಿಯೋಜಕ ಕಾಲೇಜುಗಳನ್ನು ಒಳಕೊಂಡು 1964ರಲ್ಲಿ ಸ್ಥಾಪಿತವಾದ ಬೆಂಗಳೂರು ವಿಶ್ವವಿದ್ಯಾನಿಲಯವು ದೇಶದ ಉನ್ನತ ಶಿಕ್ಷಣ, ತಾಂತ್ರಿಕ ಶಿಕ್ಷಣಗಳ ಬೆಳವಣಿಗೆಯಲ್ಲಿ ಹೊಸ ಮೈಲಿಗಲ್ಲಾಗಿ ಪರಿಣಮಿಸಿದೆ.

ಮೂಲ ಲೇಖಕರು : ಶ್ರೀ ಕೆ. ಸಂಪದ್ಗಿರಿ ರಾವ್
ಅನುವಾದಕರು : ಶ್ರೀ ನಾರಾಯಣ ಸಂಗಮ

# ಶಿಕ್ಷಣ–ಆಧುನಿಕ ಕಾಲ

## ಮುಂಬಯಿ ಕರ್ನಾಟಕ

ಬ್ರಿಟಿಷರ ಆಡಳಿತ ಕಾಲದಲ್ಲಿ ಧಾರವಾಡ, ಬಿಜಾಪುರ, ಬೆಳಗಾವಿ, ಕಾರವಾರ ಜಿಲ್ಲೆಗಳು ಮುಂಬಯಿ ಪ್ರಾಂತದ ಒಂದು ಭಾಗವೆಂದು ಪರಿಗಣಿಸಲ್ಪಟ್ಟಿದ್ದವು. ಈ ಜಿಲ್ಲೆಗಳಲ್ಲಿ ಆಂಗ್ಲ ವಿದ್ಯಾಭ್ಯಾಸ ಮಾಡಿಸುವಲ್ಲಿ ಕ್ರೈಸ್ತಮತ ಪ್ರಚಾರಕ ಮಂಡಲಿಗಳು ಅತಿ ಮುಖ್ಯ ಪಾತ್ರವಹಿಸುತ್ತಿದ್ದವು. 1793ಕ್ಕೆ ಮುಂಚೆ ಈಸ್ಟ್ ಇಂಡಿಯಾ ಕಂಪೆನಿಯು ಈ ಮಂಡಲಿಗಳಿಗೆ ವಿದ್ಯಾಪ್ರಚಾರಕ್ಕಾಗಿ ಸಹಾಯ ಮಾಡುತ್ತಿತ್ತು. ಆದರೆ 1793 ರಿಂದ ಈಚೆಗೆ ಈ ಕಂಪೆನಿಯು ಧಾರ್ಮಿಕ ವಿದ್ಯಾಭ್ಯಾಸದ ಬಗೆಗೆ ತಟಸ್ಥವಾಗಿರಲು ಅಪೇಕ್ಷಿಸಿ ಈ ಸಹಾಯವನ್ನು ನಿಲ್ಲಿಸಿತು. 1813ರಲ್ಲಿ ಅಂದರೆ ಈ ಕಂಪೆನಿಯ ರಾಜಶಾಸನವು ನವೀಕರಿಸಲ್ಪಟ್ಟಾಗ, ಭಾರತೀಯರಿಗೆ ವಿದ್ಯಾಭ್ಯಾಸವನ್ನು ಒದಗಿಸುವ ಜವಾಬ್ದಾರಿಯನ್ನು ಮೊದಲ ಬಾರಿಗೆ ಪರಿಗಣಿಸಲಾಯಿತು; ಮತ್ತು ಈ ಸಂಸ್ಥೆಯ ನಿಯಮದ ರೀತ್ಯಾ ಅಖಂಡ ಭಾರತದಲ್ಲಿ ವಿದ್ಯಾಪ್ರಚಾರಕ್ಕಾಗಿ ಒಂದು ಲಕ್ಷ ರೂಪಾಯಿಗಳನ್ನು ಮೀಸಲಿಡಲಾಯಿತು. ಮತಪ್ರಚಾರಕ ಮಂಡಲಿ (Missionaries) ಗಳಿಂದ ತೆರೆಯಲ್ಪಟ್ಟಿದ್ದ ಪ್ರಾಥಮಿಕ ಶಾಲೆಗಳಲ್ಲಾಗಲೇ ದೇಶ ಭಾಷೆಗಳಲ್ಲಿ ವಿದ್ಯಾಭ್ಯಾಸ ಮಾಡಲಾಗುತ್ತಿತ್ತು. ಇದರೊಟ್ಟಿಗೆ ಆಂಗ್ಲ ಭಾಷೆಯ ಮೂಲತತ್ವಗಳನ್ನೂ ಕಲಿಸಲಾಗುತ್ತಿತ್ತು. ಮುಂಬಯಿ ಪ್ರಾಂತದಲ್ಲಿ 1855ಕ್ಕೆ ವಿದ್ಯಾ ಇಲಾಖೆ ಸ್ಥಾಪನೆಯಾಯಿತು ; ಮತ್ತು ಆಂಗ್ಲ ಹಾಗೂ ಪ್ರಾದೇಶಿಕ ಭಾಷೆಗಳನ್ನು ಕಲಿಸುತ್ತಿದ್ದ ಶಾಲೆಗಳು ಸ್ಥಾಪಿತವಾದುವು.

ಈ ಕಾಲಕ್ಕೆ ಓದು, ಬರಹ, ಲೆಕ್ಕ (Three R's) ಗಳನ್ನು ಬೋಧಿಸುವ ಸಾಂಪ್ರದಾಯಿಕ ದೇಶೀಯ ಶಾಲೆಗಳು ದೇಶದಲ್ಲೆಲ್ಲಾ ಇದ್ದುವು.ಇಲ್ಲಿ ಮಕ್ಕಳು ಕಂಠಪಾಠದಲ್ಲಿ ಕನ್ನಡ ಪದ್ಯಗಳನ್ನೂ ಪೂರ್ಣಾಂಕಗಳ ಭಿನ್ನರಾಶಿಗಳ ಮಗ್ಗಿ, ವ್ಯವಹಾರಕ್ಕೆ ಸಂಬಂಧಿಸಿದ ಲೆಕ್ಕಗಳನ್ನೂ ಕಲಿತರು. ಈ ಶಾಲೆಗಳನ್ನು ಸ್ಥೂಲವಾಗಿ ಎರಡು ಭಾಗವಾಗಿ ವರ್ಗೀಕರಿಸಬಹುದು: ಒಂದನೆಯದು-ಸಾಂಪ್ರದಾಯಿಕವಾಗಿ ಸಂಸ್ಕೃತವನ್ನು ಕಲಿಸುತ್ತಿದ್ದ ಮತ್ತು ಮೂರು 'ಆರ್' (R)ಗಳ ಜೊತೆಯಲ್ಲೇ ಪೌರೋಹಿತ್ಯದ ತಯಾರಿ ಕೊಡುವ ಶಾಲೆಗಳು. ಇಂತಹ ಶಾಲೆಗಳಲ್ಲಿ ಬ್ರಾಹ್ಮಣ ಬಾಲಕರಿಗೆ ಮಾತ್ರ ಪ್ರವೇಶವಿತ್ತು. ಎರಡನೆಯದೆಂದರೆ, ಎಲ್ಲಾ ಕೋಮುಗಳ ಬಾಲಕರಿಗೆ ಅವಕಾಶವಿದ್ದು, ಲಿಂಗಾಯಿತ ಉಪಾಧ್ಯಾಯರುಗಳಿದ್ದ ಶಾಲೆಗಳು. ಇಲ್ಲಿ ತಾಡೋಲೆಗಳ ಮೇಲೆ ಬರೆಯುವ ಅವಕಾಶವನ್ನು ಒದಗಿಸಲಾಗಿತ್ತು. ಸಂಚಾರೀ ಧರ್ಮಬೋಧಕರು ಇಂತಹ ಶಾಲೆಗಳುಳ್ಳ ಹಳ್ಳಿಗಳಿಗೆ ಹೋಗಿ ನೀತಿ ಮತ್ತು ಮತ ಪ್ರಚಾರಗಳ ಮೇಲೆ ಪ್ರವಚನ ಕೊಡುತ್ತಿದ್ದರು. ಇವರು ಸಾಂಘಿಕ ವಿದ್ಯಾಭ್ಯಾಸ ಕಾರ್ಯ ಕ್ಷೇತ್ರದಲ್ಲಿ ಸ್ವಪ್ರೇರಿತ ಕೆಲಸಗಾರರಾಗಿ ದುಡಿದು ಹೆಚ್ಚು ಗೌರವಕ್ಕೆ ಪಾತ್ರರಾಗಿದ್ದರು. ಕುಶಲ ವೃತ್ತಿಗಳು ಆನುವಂಶಿಕವಾಗಿದ್ದು, ಕುಶಲ ಕರ್ಮಿಗಳು ತಮ್ಮ ಮನೆಯಲ್ಲೇ ಅವುಗಳನ್ನು ರೂಢಿಸುತ್ತಿದ್ದರು.

19ನೆ ಶತಮಾನದ ಪ್ರಾರಂಭದಲ್ಲಿ ಕ್ರೈಸ್ತ ಧಾರ್ಮಿಕ ಸಂಸ್ಥೆಗಳಿಂದ ಹಾಗೂ ಸರ್ಕಾರದಿಂದ ಸ್ಥಾಪಿಸಲ್ಪಟ್ಟ ಶಾಲೆಗಳಿಂದಾಗಿ ಈ ಹಳೇ ಸಂಪ್ರದಾಯದ ಶಾಲೆಗಳು ತಮ್ಮ ಪ್ರಾಮುಖ್ಯವನ್ನು ಕಳೆದುಕೊಂಡವು. ಅಲ್ಲದೆ ಹೊಸ ಮಾದರಿಯ 'ಇಂಗ್ಲೀಷ್ ಶಾಲೆಗಳಿಗೆ ಹೆಚ್ಚು ಹೆಚ್ಚು ಬೇಡಿಕೆ–ಪ್ರೋತ್ಸಾಹ

ಕಂಡುಬಂದಿತು. ಈ ಹೊಸ ಶಾಲೆಗಳಲ್ಲಿ ಸಂಪೂರ್ಣವಾಗಿ ಜಾತ್ಯತೀತ ವಿದ್ಯಾಭ್ಯಾಸ ಕ್ರಮವಿತ್ತು. ಎಲ್ಲಾ ಕೋಮಿನ ಮಕ್ಕಳಿಗೆ ವಿದ್ಯಾರ್ಜನೆಗೆ ಅವಕಾಶವಿದ್ದು ಎಲ್ಲಾ ಕೋಮಿನ ಉಪಾಧ್ಯಾಯರುಗಳನ್ನು ನೇಮಕ ಮಾಡಲಾಗುತ್ತಿತ್ತು, ಪ್ರಾಥಮಿಕ ಶಾಲಾ ಉಪಾಧ್ಯಾಯರುಗಳ ಸಂಬಳದ ಶ್ರೇಣಿ 12 ರಿಂದ 16 ರೂಪಾಯಿಗಳ ವರೆಗೆ ಇತ್ತು. ಮುಂಬಯಿ ಕರ್ನಾಟಕದಲ್ಲಿ 1829ಕ್ಕೆ ಮುಂಚೆ ಮರಾಠಿ ಶಾಲೆಗಳು ಆರಂಭವಾದವು. ಕನ್ನಡ ಶಾಲೆಗಳು 1835 ರಲ್ಲಿ ಪ್ರಾರಂಭಿಸಲ್ಪಟ್ಟವು. 1855 ರಲ್ಲಿ ವಿದ್ಯಾ ಇಲಾಖೆ ಆರಂಭವಾದಾಗ ಮುಂಬಯಿ ಪ್ರಾಂತವನ್ನು ಮೂರು ಭಾಗಮಾಡಿ ಅದರಲ್ಲಿ ವಿದ್ಯಾಭ್ಯಾಸದ ಉದ್ದೇಶವನ್ನು ಕಾರ್ಯಗತಗೊಳಿಸಲು ಒಬ್ಬೊಬ್ಬ ಉಪ ತನಿಖಾಧಿಕಾರಿಯನ್ನು ನೇಮಿಸಲಾಯಿತು. ದಕ್ಷಿಣ ವಲಯದಲ್ಲಿ ಕರ್ನಾಟಕದ ನಾಲ್ಕು ಜಿಲ್ಲೆಗಳೊಂದಿಗೆ (ಧಾರವಾಡ, ಕಾರವಾರ, ಬೆಳಗಾವಿ ಬಿಜಾಪುರ) ಕೊಲಬ ಮತ್ತು ರತ್ನಗಿರಿ ಜಿಲ್ಲೆಗಳನ್ನು ಸೇರಿಸಲಾಯಿತು. ಕೆಲ ಕಾಲಾನಂತರ ಕೊಲ್ಹಾಪುರವೂ ಈ ವ್ಯಾಪ್ತಿಗೆ ಒಳಪಟ್ಟಿತು.

1856ಕ್ಕೆ ಧಾರವಾಡದಲ್ಲಿ 13, ಬೆಳಗಾವಿಯಲ್ಲಿ 13, ಬಿಜಾಪುರದಲ್ಲಿ 9 ರಂತೆ ಪ್ರಾಥಮಿಕ ಶಾಲೆಗಳಿದ್ದವು. ಕಾರವಾರ ಜಿಲ್ಲೆಯ ಅಂಕಿ ಅಂಶಗಳು ದೊರಕಿಲ್ಲ. ಇವರ ಜೊತೆಯಲ್ಲಿ ಈ ನಾಲ್ಕು ಜಿಲ್ಲೆಗಳೂ ಸೇರಿ 5 ಇಂಗ್ಲಿಷ್ ಶಾಲೆಗಳಿದ್ದವು. 1865 ರಲ್ಲಿ ಶ್ರೀಯುತ ರಸೆಲ್‌ರವರು ಉಪತನಿಖಾಧಿಕಾರಿಗಳಾದ ಮೇಲೆ ಕನ್ನಡಕ್ಕೆ ಪ್ರೋತ್ಸಾಹ ನೀಡಿದರು. ಅವರೇ 1866ರಲ್ಲಿ ಶ್ರೀ ಚನ್ನಬಸಪ್ಪನವರನ್ನು ಉಪ ವಿದ್ಯಾಧಿಕಾರಿಯನ್ನಾಗಿ ನೇಮಿಸಿದರು. ಈ ಅಧಿಕಾರದಲ್ಲಿ ಶ್ರೀ ಚನ್ನಬಸಪ್ಪನವರು 1881ರ ವರೆಗೆ ಕೆಲಸ ಮಾಡಿದರು. ಅವರ ಶ್ರಮದ ಕಾರಣದಿಂದಾಗಿ 1882ಕ್ಕೆ ಧಾರವಾಡದಲ್ಲಿ 341, ಬೆಳಗಾವಿಯಲ್ಲಿ 177 ಮತ್ತು ಬಿಜಾಪುರದಲ್ಲಿ 150 ಕನ್ನಡ ಶಾಲೆಗಳಾದವು. ಆಗ್ಗ ಶಾಲೆಯ ಶುಲ್ಕ ತಿಂಗಳೊಂದಕ್ಕೆ ಒಂದಾಣೆಯಿತ್ತು. 1861 ರಿಂದ ಶಾಲಾ ಕಟ್ಟಡಗಳ ಮೇಲೆ ಉಪಾಧ್ಯಾಯರ ಸಂಬಳಗಳಲ್ಲಿ, ಅರ್ಧ ಖರ್ಚನ್ನು ಸರ್ಕಾರ ಕೊಡಲಾರಂಭಿಸಿತು. ಜಿಲ್ಲಾ ಮಂಡಳಿಗಳು, ಪುರಸಭೆಗಳು, ಪ್ರಾಥಮಿಕ ವಿದ್ಯಾಭ್ಯಾಸದ ವೆಚ್ಚದಲ್ಲಿ ಒಂದು ಭಾಗವನ್ನು ಕೊಡುತ್ತಿದ್ದುವು. 1901 ರಲ್ಲಿ ಈ ಜಿಲ್ಲೆಗಳಲ್ಲುಂಟಾದ ಪ್ಲೇಗಿನ ಪ್ರಭಾವದಿಂದಾಗಿ ಈ ಶಾಲೆಗಳ ಬೆಳವಣಿಗೆಯು ಹಿಂದೆ ಬಿತ್ತು.

ಖಾಸಗಿ ಶಾಲೆಗಳು, ಮೂರು 'ಆರ್'ಗಳು (ಓದು, ಬರಹ, ಲೆಕ್ಕ), ಪದ್ಯಗಳ ಕಂಠಪಾಠ, ಮಗ್ಗಿ, ಮೊದಲಾದ ಸಂಪ್ರದಾಯಿಕ ವಿದ್ಯಾಭ್ಯಾಸ ಕ್ರಮವನ್ನೇ ಅನುಸರಿಸಿದುವು. ಆದರೆ ಸರ್ಕಾರಿ ಮತ್ತು ಸ್ಥಳೀಯ ಸಂಸ್ಥೆಗಳು ಮೂರು 'ಆರ್'ಗಳು, ವ್ಯವಸಾಯ, ವಿಜ್ಞಾನ, ರೇಖಾಚಿತ್ರ, ಮರಗೆಲಸ ಆರೋಗ್ಯ, ಚರಿತ್ರೆ, ಭೂಗೋಳ, ಮೊದಲಾದ ವಿಷಯಗಳನ್ನೊಳಗೊಂಡ ಏಕರೀತಿಯ ವಿದ್ಯಾಭ್ಯಾಸ ಕ್ರಮವನ್ನು ಅನುಸರಿಸಿದವು. ಪ್ರಾಥಮಿಕ ಶಾಲೆಗಳಲ್ಲಿ ಒಂದರಿಂದ ನಾಲ್ಕರ ವರೆಗೆ ದರ್ಜೆಗಳಿದ್ದವು: ಮತ್ತು ಕನ್ನಡದಲ್ಲಿ ಪಾಠಗಳನ್ನು ಬೋಧಿಸಲಾಗುತ್ತಿತ್ತು. ಐದರಿಂದ ಏಳನೆ ದರ್ಜೆಗಳ ವರೆಗೆ ಮಾಧ್ಯಮಿಕ ಶಾಲೆಗಳೆಂದು ಕರೆಯಲಾಯಿತು. ಆದರೆ ಅವುಗಳ ಸಂಖ್ಯೆ ಕಡಿಮೆಯಾಗಿದ್ದು ಕನ್ನಡ ಅಥವಾ ಇಂಗ್ಲೀಷ್ ಶಿಕ್ಷಣ ಮಾಧ್ಯಮವಾಗಿತ್ತು.

ಶ್ರೀಯುತ 'ವುಡ್' ಅವರ ವಿದ್ಯಾಭ್ಯಾಸದ ಮೇಲಿನ ಅಧಿಕೃತ ಲೇಖನವು 1854ರಲ್ಲಿ ಭಾರತದಲ್ಲಿನ ವಿದ್ಯಾಭ್ಯಾಸದ ಬೆಳವಣಿಗೆಯಲ್ಲಿ ಒಂದು ಹೆಗ್ಗುರುತಾಯಿತು. ಜಿಲ್ಲಾ ಮಂಡಳಿಗಳು ಮತ್ತು ಪೌರ ಮಂಡಳಿಗಳು ಪ್ರಾಥಮಿಕ ವಿದ್ಯಾಭ್ಯಾಸದ ವಿಸ್ತರಣೆಯಲ್ಲಿ ಹೆಚ್ಚಿನ ಹೊಣೆಗಾರಿಕೆಯನ್ನು ಹೊಂದಿದುವು. 1904ರಲ್ಲಿ ಭಾರತ ಸರ್ಕಾರವು ಪ್ರಾಥಮಿಕ ವಿದ್ಯಾಭ್ಯಾಸದ ತೀವ್ರತರ ವಿಸ್ತರಣೆಗೆ ತಕ್ಕ ವ್ಯವಸ್ಥೆ ಮಾಡಲು ತೀರ್ಮಾನಿಸಿತು.

ಮುಂಬಯಿ ಸರ್ಕಾರವು 1918ರಲ್ಲಿ ಪ್ರಾಥಮಿಕ ವಿದ್ಯಾಭ್ಯಾಸದ ಕಾನೂನನ್ನು ಜಾರಿಗೆ ತಂದಿತು. ಅದರ ಪ್ರಕಾರ ಕೆಲವೇ ಕ್ಷೇತ್ರಗಳಲ್ಲಿ ಕಡ್ಡಾಯ ಶಿಕ್ಷಣವನ್ನು ಆಚರಣೆಗೆ ತರಲಾಯಿತು. ಇದು ವಿದ್ಯಾಭ್ಯಾಸದ ತೀವ್ರತರ ಬೆಳವಣಿಗೆಗೆ ಕಾರಣವಾಯಿತು. 1911 ರಿಂದ 1947ರ ವರೆಗಿನ ಶಾಲೆಗಳ ಬೆಳವಣಿಗೆಯನ್ನು ಈ ರೀತಿ ಹೇಳಬಹುದು.

**ಶಾಲಾಸಂಖ್ಯೆಗಳು**

| ಜಿಲ್ಲೆಗಳು | | 1910—11 | 1921—22 | 1931—32 | 1941—42 | 1946—47 |
|---|---|---|---|---|---|---|
| ಧಾರವಾಡ : | ಬಾಲಕರು .... | 624 | 724 | 822 | 1230 | 1107 |
| | ಬಾಲಕಿಯರು .... | 72 | 103 | 115 | 140 | 147 |
| ಬೆಳಗಾವಿ : | ಬಾಲಕರು .... | 390 | 479 | 778 | 1104 | 1066 |
| | ಬಾಲಕಿಯರು .... | 43 | 49 | 81 | 90 | 93 |
| ಬಿಜಾಪುರ : | ಬಾಲಕರು .... | 439 | 526 | 575 | 1046 | 1011 |
| | ಬಾಲಕಿಯರು .... | 36 | 53 | 61 | 88 | 115 |
| ಕಾರವಾರ : | ಬಾಲಕರು .... | 259 | 300 | 317 | 546 | 525 |
| | ಬಾಲಕಿಯರು .... | 17 | 24 | 30 | 45 | 49 |
| ಒಟ್ಟು : | ಬಾಲಕರು .... | 1712 | 2099 | 2392 | 3926 | 3709 |
| | ಬಾಲಕಿಯರು .... | 168 | 229 | 278 | 363 | 402 |
| ಒಟ್ಟು | .... | 1880 | 2258 | 2679 | 4289 | 4111 |

ಸರ್ಕಾರಿ ಶಾಲೆಗಳನ್ನು ತೆರೆಯಲು ಜನತೆಯಿಂದ ಹೆಚ್ಚು ಬೇಡಿಕೆ ಬಂತಲ್ಲದೆ ವಿದ್ಯಾರ್ಥಿ ಸಂಖ್ಯಾಬಲವೂ ಹೆಚ್ಚಿತು. ಮರಗೆಲಸದಂತಹ ವೃತ್ತಿಕ ಶಿಕ್ಷಣಗಳಿದ್ದಾಗ್ಯೂ ಅಭ್ಯಾಸಕ್ರಮವು ಹೆಚ್ಚು ಬೌದ್ಧಿಕವಾಗಿತ್ತು. ಆಗ್ಗೆ ರಾಷ್ಟ್ರದಲ್ಲಿ ಜಾಗೃತಿ ಉಂಟಾಯಿತು; ಮತ್ತು ಜೈನ, ಮರಾಠಿ, ಲಿಂಗಾಯತ ಮತಗಳ ಮುಖಂಡರು ಆಗ ಇದ್ದ ವಿದ್ಯಾಭ್ಯಾಸಾನುಕೂಲತೆಗಳ ಬೇಡಿಕೆಯನ್ನು ಸರಿದೂಗಿಸಲು ಎಲ್ಲಾ ಜನಾಂಗಕ್ಕೂ ಅವಕಾಶವಿರುವ ಶಾಲೆಗಳನ್ನು ಸ್ಥಾಪಿಸಿದರು. ಮೊದಮೊದಲು ಈ ಸಾರ್ವಜನಿಕ ಶಾಲೆಗಳಿಗೆ ಹರಿಜನರೇ ಮೊದಲಾದ ಹಿಂದುಳಿದ ಜನಾಂಗಗಳ ಮಕ್ಕಳನ್ನು ಸೇರಿಸಲು ಪ್ರತಿಬಂಧಕವಿತ್ತಾದರೂ ಕ್ರಮೇಣ ಆ ಭಾವನೆ ಶಿಥಿಲವಾಯಿತು. ಪ್ರಾಥಮಿಕ ನಾಲ್ಕನೆ ವರ್ಗದನಂತರ ಅನೇಕ ವಿದ್ಯಾರ್ಥಿಗಳು ವಿದ್ಯಾಭ್ಯಾಸವನ್ನು ಮುಂದುವರಿಸುತ್ತಿರಲಿಲ್ಲ. ಮುಂಬಯಿ ಸರ್ಕಾರವು 1925ರಲ್ಲಿ ವಿಸ್ತರಿತ ಪ್ರಾಥಮಿಕ ವಿದ್ಯಾಭ್ಯಾಸದ ಕಾನೂನನ್ನು ಜಾರಿಗೆ ತಂದಿತು. ಅದರ ಪ್ರಕಾರ ಬಾಲಕ ಬಾಲಕಿಯರಿಗೆ ಕಡ್ಡಾಯವಾಗಿಯೂ ಮುಫತ್ತಾಗಿಯೂ ಶಿಕ್ಷಣ ಕೊಡುವಿಕೆಯ ಬಗೆಗೆ ಆಸ್ಥೆ ವಹಿಸಲಾಗಿತ್ತು.

ಪ್ರಾಥಮಿಕ ಪಾಠ ಪ್ರಣಾಳಿಕೆಯು, ಮೂಲಶಿಕ್ಷಣದ ಎರಡು ವರ್ಷ ಬಿಟ್ಟು, ಏಳುವರ್ಷದ್ದಾಗಿತ್ತು ಮತ್ತು ಪ್ರಾಥಮಿಕ ಶಾಲಾಯೋಗ್ಯತಾ ಪತ್ರದ ಪರೀಕ್ಷೆಯೊಂದನ್ನು ಆರಂಭಿಸಲಾಯಿತು. ಆದರೆ 1942ರಲ್ಲಿ ಪ್ರಾಥಮಿಕ ನಾಲ್ಕನೆ ವರ್ಗಕ್ಕೆ ಬಾಲಕರಲ್ಲಿ ಶೇಕಡಾ 89, ಬಾಲಕಿಯರಲ್ಲಿ ಶೇಕಡಾ 93ರಷ್ಟರ ಮಟ್ಟಿಗೆ ಅಪವ್ಯಯ ಹೆಚ್ಚಿತು. ಜಿಲ್ಲಾಶಾಲಾ ಮಂಡಳಿಗಳು—ಅಂದರೆ ಬ್ಯಾಡಗಿ ಪುರಸಭೆಯು 1920ರಲ್ಲಿ, ಧಾರವಾಡ ಪುರಸಭೆಯು 1942ರಲ್ಲಿ, ಧಾರವಾಡ ಜಿಲ್ಲಾ ಮಂಡಲಿಯು 1942ರಲ್ಲಿ, ಬಿಜಾಪುರ

ಪುರಸಭೆಯು 1944ರಲ್ಲಿ ಮತ್ತು ಬೆಳಗಾವಿ ಜಿಲ್ಲಾಮಂಡಳಿ 1949ರಲ್ಲಿ ಕಡ್ಡಾಯ ಶಿಕ್ಷಣವನ್ನು ಕ್ರಮಕ್ರಮೇಣ ಕಾರ್ಯರೂಪಕ್ಕೆ ತರಲು ಪ್ರಯತ್ನಿಸಿದವು.

1857 ರಂದು ಸ್ಥಾಪನೆಯಾದ ಮುಂಬಯಿ ವಿಶ್ವವಿದ್ಯಾಲಯವು ಮೆಟ್ರಿಕ್ಯುಲೇಶನ್ ಪರೀಕ್ಷೆಯನ್ನು ನಡೆಸಿತು. ಪ್ರೌಢಶಾಲಾ ವಿದ್ಯಾಭ್ಯಾಸಕ್ಕೆ ಇದು ಒಳ್ಳೆ ಪ್ರೇರಣೆಯಾಯಿತು. ಮೊದಮೊದಲು ಮುಂಬಯಿ ಕರ್ನಾಟಕ ಪ್ರಾಂತದಲ್ಲಿ ಆರಂಭವಾದ ಪ್ರೌಢಶಾಲೆಗಳೆಂದರೆ ಇವು: ಬೆಳಗಾವಿಯ ಬಾಸೆಲ್ ಮಿಷನ್ ಹೈಸ್ಕೂಲ್ (1832), ಧಾರವಾಡದ ಇಂಗ್ಲೀಷ್ ಸ್ಕೂಲು (1848), ಧಾರವಾಡದ ಬಾಸೆಲ್ ಮಿಷನ್ ಹೈಸ್ಕೂಲ್ (1863), ಕಾರವಾರದ ಸರ್ಕಾರಿ ಹೈಸ್ಕೂಲ್ (1864) ಮತ್ತು ಬಿಜಾಪುರದ ಸರ್ಕಾರಿ ವ್ಯವಸಾಯ ಪೌಢಶಾಲೆ (1885). ಸಾಮಾನ್ಯವಾಗಿ ಈ ಶಾಲೆಗಳು ಒಂದರಿಂದ ಏಳರ ವರೆಗೆ ತರಗತಿಗಳನ್ನು ಹೊಂದಿದ್ದು ಅದರಲ್ಲಿ ಮೊದಲ ಮೂರು ಮಾಧ್ಯಮಿಕ ಶಾಲೆಯೆಂದೂ ಕೊನೆಯ ನಾಲ್ಕನ್ನು ಪ್ರೌಢಶಾಲಾ ವರ್ಗಗಳೆಂದೂ ಕರೆಯಲಾಯಿತು. ಕೆಲವೊಂದು ಸ್ಥಳಗಳಲ್ಲಿ ಮಾಧ್ಯಮಿಕ ಶಾಲೆಯನ್ನು ಪ್ರಾಥಮಿಕ ಶಾಲೆಗಳಲ್ಲೇ ಕೂಡಿಸಲಾಯಿತು. ಮತ್ತೆ ಕೆಲವೆಡೆಗಳಲ್ಲಿ ಹೈಸ್ಕೂಲಿಗೆ ಸೇರಿಸಲಾಯಿತು. 1938 ರ ವರೆಗೆ ಹೈಸ್ಕೂಲ್‌ಗಳಲ್ಲಿ ಶಿಕ್ಷಣ ಮಾಧ್ಯಮವು ಇಂಗ್ಲೀಷಾಗಿಯೇ ಇತ್ತು. 1939 ರಿಂದ ಪ್ರಾಂತೀಯ ಭಾಷೆಗಳನ್ನು ಶಿಕ್ಷಣ ಮಾಧ್ಯಮವಾಗಿ ಬಳಸಲಾಯಿತು. ಎಸ್.ಎಸ್.ಎಲ್.ಸಿ. ಪರೀಕ್ಷಾ ಮಂಡಳಿಯು ಏರ್ಪಟ್ಟು, ಆ ಪರೀಕ್ಷೆಯನ್ನು ಆಂಗ್ಲ ಹಾಗೂ ಪ್ರಾಂತೀಯ ಭಾಷಾ ಮಾಧ್ಯಮಗಳಲ್ಲಿ ನಡೆಸಲಾಯಿತು. ಆಗ ಪರೀಕ್ಷಾ ಅಧಿಕಾರವನ್ನು ವಿಶ್ವವಿದ್ಯಾನಿಲಯದಿಂದ ಈ ಮಂಡಳಿಗೆ ನೀಡಲಾಯಿತು. ಬಾಲಕಿಯರು ಬಾಲಕರ ಹೈಸ್ಕೂಲುಗಳಲ್ಲಿ ಸೇರಿದರೂ ಬಾಲಕಿಯರಿಗಾಗಿಯೇ ಮೀಸಲಾದ ಮಾಧ್ಯಮಿಕ ಹಾಗೂ ಪ್ರೌಢ ಶಾಲೆಗಳಿದ್ದುವು. ಈ ಶಾಲೆಗಳು ಅನುಕ್ರಮವಾಗಿ 1912–13 ರಲ್ಲಿ 30 ಮತ್ತು 9 ಇದ್ದು 1947–48 ರಲ್ಲಿ 83 ಮತ್ತು 61 ಕ್ಕೇರಿದುವು.

ಪ್ರತಿ ಜಿಲ್ಲೆಯಲ್ಲಿಯೂ ಕನಿಷ್ಠಪಕ್ಷ ಒಂದೊಂದು ಹೈಸ್ಕೂಲನ್ನು ತೆರೆಯುವುದು ಮತ್ತು ಜಿಲ್ಲಾ ಸ್ಥಳೀಯ ಸಂಸ್ಥೆಗಳಿಗೆ, ಪುರಸಭೆಗಳಿಗೆ, ಹಾಗೂ ಖಾಸಗಿ ಸಂಸ್ಥೆಗಳಿಗೆ ಹೈಸ್ಕೂಲುಗಳನ್ನು ತೆರೆಯಲು ಸಹಾಯ ಧನ ಕೊಡುವುದು ಸರ್ಕಾರದ ಉದ್ದೇಶವಾಗಿತ್ತು. 1932 ರಲ್ಲಿ ಹಿಂದುಳಿದ ವರ್ಗದವರಿಗೆ ವಿದ್ಯಾರ್ಥಿ ವೇತನವನ್ನು ಕೊಡಲು ಆರಂಭಿಸಲಾಯಿತು. 1943 ಕ್ಕೆ ಸರ್ಕಾರವು ಎಸ್.ಎಸ್.ಎಲ್.ಸಿ. ಮಟ್ಟದಲ್ಲಿ ವೈವಿಧ್ಯಮಯ ವಿದ್ಯಾಭ್ಯಾಸ ಕ್ರಮದ ಆವಶ್ಯಕತೆಯನ್ನು ಗಮನಿಸಿತು. ಅದುವರೆಗೂ ವಿಶ್ವವಿದ್ಯಾಲಯದ ಪ್ರವೇಶಕ್ಕೆ ಅಗತ್ಯವಾದ ಬೌದ್ಧಿಕ ವಿದಾಭ್ಯಾಸ ಕ್ರಮದಲ್ಲಿ ವಿದ್ಯಾರ್ಥಿಗಳನ್ನು ತಯಾರು ಮಾಡಲಾಗುತ್ತಿತ್ತು.

1857 ರಲ್ಲಿ ಆರಂಭವಾದ ಮುಂಬಯಿ ವಿಶ್ವವಿದ್ಯಾಲಯವು ಬೇರೆ ಬೇರೆ ಪ್ರಾದೇಶಿಕ ವಿಶ್ವ ವಿದ್ಯಾನಿಲಯಗಳು ಆರಂಭವಾಗುವ ವರೆಗೆ ಅಂದರೆ 1946 ರ ವರೆಗೂ ಆ ಪ್ರಾಂತದಲ್ಲಿ ವಿದ್ಯಾಭ್ಯಾಸಕ್ಕೆ ಅನುಕೂಲತೆಯನ್ನು ಒದಗಿಸಿತು. ಕರ್ನಾಟಕ ವಿಶ್ವವಿದ್ಯಾಲಯವು 1949 ಕ್ಕೆ ಧಾರವಾಡದಲ್ಲಿ ಪ್ರಾರಂಭ ವಾಯಿತು. ಈ ಮುಂದೆ ಕಾಣಿಸಿದ ಕಾಲೇಜುಗಳು ಅದರ ವ್ಯಾಪ್ತಿಗೆ ಒಳಪಟ್ಟವು.

| ಜಿಲ್ಲೆಗಳು | ಕಾಲೇಜುಗಳು | ಪ್ರಾರಂಭಕಾಲ | ಸಂಖ್ಯಾಬಲ |
|---|---|---|---|
| ಧಾರವಾಡ | ಸರ್ಕಾರಿ ಕರ್ನಾಟಕ ಕಾಲೇಜು | 1917 | 922 |
| | ಕೆ.ಇ. ಮಂಡಳಿಯ ಕಲೆ ಮತ್ತು ವಿಜ್ಞಾನ ಕಾಲೇಜು | 1944 | 126 |
| ಬೆಳಗಾವಿ | ಲಿಂಗರಾಜ ಕಾಲೇಜು | 1933 | 1014 |
| | ಮಾಧ್ಯಮಿಕ ತರಬೇತಿ ಕಾಲೇಜು | 1939 | 95 |
| | ರಾಜ ಲಕಮನಗೌಡ ಕಾನೂನು ಕಾಲೇಜು | 1939 | 211 |
| ಬಿಜಾಪುರ | ಶ್ರೀ ಬಸವೇಶ್ವರ ಕಾಲೇಜು-ಬಾಗಲಕೋಟೆ | 1944 | 220 |
| | ವಿಜಯ ಕಾಲೇಜು-ಬಿಜಾಪುರ | 1945 | 85 |

ಹುಬ್ಬಳ್ಳಿಯಲ್ಲಿನ ವಾಣಿಜ್ಯ ಕಾಲೇಜು ಮತ್ತು ಧಾರವಾಡದಲ್ಲಿನ ಸರ್ಕಾರಿ ವ್ಯವಸಾಯ ಕಾಲೇಜು 1942ರಲ್ಲಿ ಆರಂಭವಾದವು. ಬೆಳಗಾವಿಯ ಅರಟಾಳ ರುದ್ರಗೌಡ ಮತ್ತು ಧಾರವಾಡದ ಶ್ರೀನಿವಾಸ ರೊದ್ದ ಇವರುಗಳು ಪಟ್ಟ ಶ್ರಮ ಹಾಗೂ ಸಂಗ್ರಹಿಸಿದ ಹಣದಿಂದಾಗಿ 1917ರ ಕಾಲಕ್ಕಾಗಲೇ ಸರ್ಕಾರಿ ಕಾಲೇಜುಗಳು ಆರಂಭವಾಗಿದ್ದವು.

1856ರಲ್ಲಿ ಧಾರವಾಡದಲ್ಲಿ ಒಂದು ಶಿಕ್ಷಕರ ಪಾಠಶಾಲೆ ಆರಂಭವಾಯಿತು. ಡೆಪ್ಯುಟಿ ಚನ್ನಬಸಪ್ಪನವರು ಅದರ ಮೊದಲನೆ ಪ್ರಿನ್ಸಿಪಾಲರಾಗಿದ್ದರು. ಐದು ವರ್ಷ ಪ್ರಾಥಮಿಕ ವಿದ್ಯಾಭ್ಯಾಸವನ್ನು ಮುಗಿಸಿದವರಿಗೆ ಈ ಶಾಲೆಯಲ್ಲಿ ಪ್ರವೇಶಾವಕಾಶವಿತ್ತು. ಪ್ರತಿಯೊಬ್ಬ ವಿದ್ಯಾರ್ಥಿಗೂ ಒಂದು ತಿಂಗಳಿಗೆ ಮೂರು ರೂಪಾಯಿಯಂತೆ ಶಿಕ್ಷಣ ವೇತನ (Stipend) ಕೊಡಲಾಗುತ್ತಿತ್ತು. ಮೂಲತಃ ಇದು ಮೂರು ವರ್ಷಗಳ ಪಾಠ ಪ್ರಣಾಳಿಕೆ (Course) ಯಾಗಿದ್ದು ಅನಂತರ ಎರಡು ವರ್ಷಗಳಿಗೆ ಇಳಿಸಲಾಯಿತು. ಬೆಳಗಾವಿಗೆ 1861ರಲ್ಲಿ ಈ ಪಾಠಶಾಲೆಯನ್ನು ವರ್ಗಾಯಿಸಲಾಯಿತು. 1864ರಲ್ಲಿ ಅದನ್ನು ಶಿಕ್ಷಣ ಕಾಲೇಜು ಎಂದು ಹೆಸರಿಸಲಾಯಿತು. ಪುನಃ ಇದನ್ನು 1875ರಲ್ಲಿ ಧಾರವಾಡಕ್ಕೆ ತರಲಾಯಿತು. 1895ರಲ್ಲಿ ಮಹಿಳಾ ಶೈಕ್ಷಣಿಕ ಕಾಲೇಜು ಧಾರವಾಡದಲ್ಲಿ ಪ್ರಾರಂಭವಾಯಿತು. ಒಂದು ಜಿಲ್ಲೆಗೆ ಎರಡರಂತೆ ಸರ್ಕಾರಿ ಶಿಕ್ಷಣ ಶಾಲೆಗಳನ್ನು ನಡೆಸುವುದರ ಜೊತೆಗೆ ಖಾಸಗಿ ಸಂಸ್ಥೆಗಳ ಪ್ರಯತ್ನವನ್ನೂ ಸರ್ಕಾರ ಪ್ರೋತ್ಸಾಹಿಸಿತು. ಕೆ.ಇ. ಮಂಡಳಿಯ ಶಿಕ್ಷಣ ಕಾಲೇಜು 1939ರಲ್ಲಿ, ನವಲಗುಂದ ಮತ್ತು ಬಾಗಲಕೋಟೆಯ ಬಸವೇಶ್ವರ ಶಿಕ್ಷಣ ಕಾಲೇಜುಗಳು 1944ರಲ್ಲಿ, ಬೆಳಗಾವಿಯ ಕೆ.ಎಲ್.ಇ. ಸೊಸೈಟಿಯ ಶಿಕ್ಷಣ ಕಾಲೇಜು ಮತ್ತು ಬಿಜಾಪುರದ ಸರ್ಕಾರಿ ಶಿಕ್ಷಣ ಕಾಲೇಜು 1945ರಲ್ಲಿ, ಧಾರವಾಡದ ಬಾಸೆಲ್ ಮಿಷನ್ ಶಿಕ್ಷಣ ಕಾಲೇಜು 1947ರಲ್ಲಿ ಆರಂಭಿಸಲ್ಪಟ್ಟವು. ಅಂಗಸಾಧನೆಯ ವಿಷಯಗಳನ್ನು ಬೋಧಿಸಲು ಶಿಕ್ಷಕರನ್ನು ಶಾಲೆಗಳಿಗೆ ಒದಗಿಸುವ ಸಲುವಾಗಿ ದೈಹಿಕ ಶಿಕ್ಷಣ ಸಂಸ್ಥೆಯು ಮುಂಬಯಿ ಬಳಿಯಿರುವ ಖಾಂಡಿವ್ಲಿಯಲ್ಲಿ ಆರಂಭವಾಯಿತು. ಇಲ್ಲಿಗೆ ಮುಂಬಯಿ ಪ್ರಾಂತದ ಸಮಗ್ರ ವಿಷಯವನ್ನೂ ಹೇಳಿದಂತಾಯಿತು.

ಮೂಲಲೇಖಕರು : ಶ್ರೀ. ವಿ.ಕೆ. ಜವಳಿ

ಅನುವಾದಕರು : ಶ್ರೀ ಬಿ. ರಾಚಪ್ಪ

# ದಕ್ಷಿಣ ಕನ್ನಡ ಮತ್ತು ಬಳ್ಳಾರಿ

ಮುಂಚೆ ಮದ್ರಾಸ ಪ್ರಾಂತಕ್ಕೆ ಸೇರಿದ್ದ ದಕ್ಷಿಣ ಕನ್ನಡ ಮತ್ತು ಬಳ್ಳಾರಿ ಜಿಲ್ಲೆಗಳ ಶೈಕ್ಷಣಿಕ ಅಭಿವೃದ್ಧಿಯನ್ನು ನಾಲ್ಕು ಹಂತಗಳಲ್ಲಿ ವಿಂಗಡಿಸಬಹುದು: (1) 1760 ರಿಂದ 1799, (2) 1799 ರಿಂದ 1882, (3) 1882 ರಿಂದ 1921 ಮತ್ತು (4) 1921 ರಿಂದ 1947.

## ಕ್ರಿ.ಶ. 1760–1799

ಈ ಕಾಲದಲ್ಲಿ ಹೈದರ ಮತ್ತು ಟಿಪ್ಪುವಿನ ಯುದ್ಧ ಮತ್ತು ಸುಲಿಗೆಗಳ ಪರಿಣಾಮವಾಗಿ ಉಂಟಾದ ಅನಿಶ್ಚಿತ ಪರಿಸ್ಥಿತಿಯ ದೆಸೆಯಿಂದ ದೇಶದಲ್ಲಿ ಒಂದು ಸಾರ್ವತ್ರಿಕ ಮತ್ತು ಸುವ್ಯವಸ್ಥಿತವಾದ ಶಿಕ್ಷಣ ಪದ್ಧತಿಗೆ ಅವಕಾಶವಾಗಲಿಲ್ಲ. ಆದರೆ ಶಾನುಭೋಗರು ನಡೆಸುತ್ತಿದ್ದ 'ಅಯ್ಯಗಳ ಮಠಗಳು' ಅಥವಾ ಜಮೀನದಾರರ ಮಕ್ಕಳಿಗೆ ಪಾಠಹೇಳಲೆಂದು ಇದ್ದ ಗುಮಾಸ್ತರು ನಡೆಸುತ್ತಿದ್ದ ಶಾಲೆಗಳು ಅಥವಾ ಖಾಸಗಿ ಉದ್ಯಮವಾಗಿ ನಡೆಸುತ್ತಿದ್ದ ಶಾಲೆಗಳು; ಅಥವಾ ಧರ್ಮ ಬುದ್ಧಿಯ ಪಂಡಿತರು, ಬ್ರಾಹ್ಮಣರು, ಜಂಗಮರು, ಜೈನರು ಮಠ ಮತ್ತು ಮಂದಿರಗಳಲ್ಲಿ ನಡೆಸುತ್ತಿದ್ದ ಶಾಲೆಗಳು—ಮುಂತಾದ ದೇಶೀ ಶಾಲೆಗಳು ದೇಶದಲ್ಲಿ ಅಲ್ಲಲ್ಲಿ ಇದ್ದವು. ಇಂಥ ಶಾಲೆಗಳಿಗೆ 'ಪಿಯಲ್ ಶಾಲೆ' (Pial Schools) ಗಳೆಂದು ಕರೆಯುತ್ತಿದ್ದರು.

ಈ ಶಾಲೆಗಳಲ್ಲಿ ಶಿಕ್ಷಣ ಕೇವಲ ಕಂಠಪಾಠಕ್ಕೆ ಸೀಮಿತವಾಗಿತ್ತು. ಮಕ್ಕಳು ಮರಳಿನಲ್ಲಿ, ಆ ಮೇಲೆ ತಾಳೆಗರಿಯ ಮೇಲೆ, ಕಂಠದಿಂದ ಕನ್ನಡ ಅಕ್ಷರಗಳನ್ನು ಬರೆಯುವುದನ್ನು ಕಲಿತುಕೊಳ್ಳುತ್ತಿದ್ದರು. ಅಲ್ಪಸ್ವಲ್ಪ ಲೆಕ್ಕ ಕಲಿತು, ಕೂಡುವ ಮತ್ತು ಗುಣಿಸುವ ಅಂಕಿ ಮಗ್ಗಿಗಳನ್ನು ಕಂಠಪಾಠ ಮಾಡುತ್ತಿದ್ದರು. ಅಪೂರ್ಣಾಂಕ ಮತ್ತು ಬಾಯಿ ಲೆಕ್ಕಗಳಿಗೂ ಗಮನ ಕೊಡಲಾಗುತಿತ್ತು. ಮಕ್ಕಳಿಗೆ ಕೈಬರಹ ಹಾಗೂ ಸಮನ್ವಯ ಪದರಚನೆಯಲ್ಲಿ (drawing up of forms of agreement) ಒಳ್ಳೆಯ ಅಭ್ಯಾಸ ಮಾಡಿಸಲಾಗುತ್ತಿತ್ತು. ಅದಾದ ಮೇಲೆ ಮಹಾಭಾರತ, ರಾಮಾಯಣ ಮತ್ತು ಭಾಗವತ, ಜೈಮಿನಿ ಮತ್ತು ಪುರಾಣಗಳಿಂದ ಪದ್ಯಗಳನ್ನು ಕಂಠಪಾಠ ಮಾಡಿಸಲಾಗುತ್ತಿತ್ತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಯಕ್ಷಗಾನದ ರೀತಿಯ ಹಾಡುಗಾರಿಕೆಯ ಜೊತೆಗೆ ಸಂಗೀತವನ್ನೂ ಕಲಿಸಲಾಗುತ್ತಿತ್ತು.

ಈ ಶಾಖೆಗಳಲ್ಲದೆ ವೈದಿಕ ಪಾಠಶಾಲೆಗಳಿದ್ದವು. ಅಲ್ಲಿ ವೇದ, ಉಪನಿಷತ್ತುಗಳು, ತರ್ಕ, ತತ್ವಜ್ಞಾನ, ಜ್ಯೋತಿಷ, ವ್ಯಾಕರಣ ಮತ್ತು ಪುರಾಣಗಳನ್ನು ವಿವರವಾಗಿ ಕಲಿಸಲಾಗುತ್ತಿತ್ತು. ಬೋಧನೆ ಸಂಸ್ಕೃತದಲ್ಲಿ ನಡೆಯುತ್ತಿತ್ತು. ಈ ಪಾಠಶಾಲೆಗಳಲ್ಲಿ ಬೋಧನೆ ಉಚಿತವಾಗಿತ್ತು.

ಕ್ಯಾಥೋಲಿಕ್ ಪಾದ್ರಿಗಳೂ ಪ್ರಶ್ನೋತ್ತರ ರೂಪದ ಶಿಕ್ಷಣಕ್ಕಾಗಿ ಚರ್ಚುಗಳಲ್ಲಿ ಶಾಲೆಗಳನ್ನು ತೆರೆದಿದ್ದರು. ಮಸೀದಿಗಳಲ್ಲಿ ಕೇವಲ ಮುಸಲ್ಮಾನರ ಮಕ್ಕಳಿಗೆ ಕುರಾನ್ ಬೋಧಿಸಲು ಶಾಲೆಗಳನ್ನು ತೆರೆಯಲಾಗಿತ್ತು. ಈ ಶಾಲೆಗಳು ಕೇವಲ ಧಾರ್ಮಿಕ ಸ್ವರೂಪ ತಳೆದಿದ್ದುವು.

## ಕ್ರಿ.ಶ. 1799–1882

ದೇಶವು ಆಂಗ್ಲರ ಹಸ್ತಗತವಾದ ಕೂಡಲೆ ಶಿಕ್ಷಣದ ಅಭಿವೃದ್ಧಿಗಾಗಿ ಸರ್ಕಾರವು ನೇರವಾಗಿ ಯಾವ ಕ್ರಮವನ್ನೂ ಕೈಗೊಳ್ಳಲಿಲ್ಲ. ಯುದ್ಧಗಳು ದೇಶೀಶಿಕ್ಷಣದ ಪದ್ಧತಿಯನ್ನು ಅಸ್ತವ್ಯಸ್ತಗೊಳಿಸಿದ್ದವು. ಚರ್ಚಿನ ಆಸ್ತಿಯನ್ನು ಟಿಪ್ಪು ಸುಲ್ತಾನನು ಜಪ್ತು ಮಾಡಿದುದರಿಂದ ಆ ಶಾಲೆಗಳು ಮುಚ್ಚಲ್ಪಟ್ಟವು. ಆದರೂ ದೇಶೀಶಾಲೆಗಳು ವೈದಿಕ ಪಾಠಶಾಲೆಗಳು ಅಲ್ಲಲ್ಲಿ ಉಳಿದುಕೊಂಡಿದ್ದವು.

1882 ರಲ್ಲಿ ಸರ್ ಥಾಮಸ್ ಮನ್ರೊ ಶಿಕ್ಷಣದ ಬಗ್ಗೆ ಪರಿಶೀಲನೆಗೆ ಆಜ್ಞೆಮಾಡಿ ಶಿಕ್ಷಣದ ಪ್ರಗತಿಗಾಗಿ ಒಂದು ಯೋಜನೆಯನ್ನು ಸಿದ್ಧಪಡಿಸಿದನು. 1833ರಲ್ಲಿ ಮದ್ರಾಸಿನಲ್ಲಿ 'ಶಿಕ್ಷಣ ಮಂಡಲಿ' ಸ್ಥಾಪಿಸಲಾಯಿತು. ಆದರೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಏನೂ ಮಾಡಲಿಲ್ಲ.

1854ರ 'ವುಡ್ಡನ ವರದಿ'ಯು ಕನ್ನಡಜಿಲ್ಲೆ ಮತ್ತು ಬಳ್ಳಾರಿಯ ಶಿಕ್ಷಣದ ಪ್ರಗತಿಯಲ್ಲಿ ಒಂದು ಹೊಸ ಮಾರ್ಗವನ್ನೇ ನಿರ್ಮಿಸಿತು. 'ವರದಿ'ಗನುಸಾರವಾಗಿ ಸ್ಥಾಪಿತವಾದ ಶಿಕ್ಷಣ ಖಾತೆ ಶಿಕ್ಷಣದ ವಿಸ್ತರಣ ಕಾರ್ಯವನ್ನು ಕೈಗೊಂಡಿತು. ಒಂದು ನಾರ್ಮಲ್ ಸ್ಕೂಲ್ (ತರಬೇತಿ ಶಾಲೆ) ಸ್ಥಾಪಿಸಿ ಶಿಕ್ಷಕರ ತರಬೇತಿಗಾಗಿ ಅವಕಾಶ ಕಲ್ಪಿಸಲಾಯಿತು. ಇದ್ದ ಶಾಲೆಗಳನ್ನು ಮುಂದುವರಿಸಲಾಯಿತು. ಪ್ರಾಥಮಿಕ, ಪ್ರೌಢ ಮತ್ತು ಕಾಲೇಜು ಶಿಕ್ಷಣ ಒಂದು ನಿಶ್ಚಿತವಾದ ರೂಪವನ್ನು ಪಡೆಯಿತು. 1855—56ರಲ್ಲಿ ದಕ್ಷಿಣ ಕನ್ನಡ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಸರ್ಕಾರಿ ಶಾಲೆಗಳನ್ನು ಸ್ಥಾಪಿಸಲಾಯಿತು. ಮಿಷನರಿ ಸಂಸ್ಥೆಗಳು ಶಿಕ್ಷಣ ಕ್ಷೇತ್ರದಲ್ಲಿ ಪ್ರವೇಶ ಮಾಡಿದವು. ಮಂಗಳೂರು ಉಡುಪಿ ಮತ್ತು ಬಳ್ಳಾರಿಯಲ್ಲಿ ಶಾಲೆಗಳನ್ನು ಸ್ಥಾಪಿಸಿದವು (1838). 1844ರಲ್ಲಿ ಜೆಸ್ಯೂಟ್ ಮಿಷನ್ ಮಂಗಳೂರಿನಲ್ಲಿ ತನ್ನ ಶಾಲೆಯನ್ನು ಪ್ರಾರಂಭಿಸಿತು. 1867ರಲ್ಲಿ ಸುಮಾರು 65,000 ರೂ. ಗಳ ಸ್ಥಳೀಯ ಚಂದಾ ಹಣದ ಸಹಾಯದಿಂದ ಮಂಗಳೂರಿನಲ್ಲಿ ಒಂದು ಸರ್ಕಾರಿ ಶಾಲೆ ಸ್ಥಾಪಿಸಲಾಯಿತು. ಶಿಕ್ಷಣ ಖಾತೆಯು ಪಠ್ಯವಸ್ತು, ಪಠ್ಯ ಪುಸ್ತಕಗಳು ಮತ್ತು ಶಾಲೆಗಳಲ್ಲಿ ಸಾಧಿಸಬೇಕಾದ ವಿದ್ಯಾಭ್ಯಾಸದ ಮಟ್ಟವನ್ನು ಗೊತ್ತುಮಾಡಿತು.

ಮದ್ರಾಸ್ ವಿಶ್ವವಿದ್ಯಾನಿಲಯವನ್ನು 1857ರಲ್ಲಿ ಸ್ಥಾಪಿಸಲಾಯಿತು. ಅದು 'ಮೆಟ್ರಿಕ್ಯುಲೇಶನ್' ಮತ್ತು 'ಡಿಗ್ರಿ' ಪರೀಕ್ಷೆಗಳನ್ನು ನಡೆಸಿತು. 1869 ರಲ್ಲಿ ಮಂಗಳೂರಿನ ಸರ್ಕಾರಿ ಶಾಲೆಯ ಸ್ಥಾನಮಾನ ವನ್ನು ಎರಡನೆಯ ದರ್ಜೆಯ ಕಾಲೇಜಿಗೆ ಏರಿಸಲಾಯಿತು. ಜೆಸ್ಯೂಟ್ ಮಿಷನ್ ಕೂಡಾ ಆ ಮೇಲೆ ಒಂದು ಕಾಲೇಜನ್ನು ಪ್ರಾರಂಭಿಸಿತು. ಶಾಲೆಗಳಲ್ಲಿ 5ನೆಯ ತರಗತಿಯಿಂದ ಶಿಕ್ಷಣದ ಮಾಧ್ಯಮ ಇಂಗ್ಲೀಷ್ ಆಗಿತ್ತು.

ಮೊದಲು 1855ರಲ್ಲಿ ಜಾರಿಗೆ ಬಂದ ಮತ್ತು ಅನಂತರ ತಿದ್ದುಪಡಿ ಹೊಂದಿದ 'ಸಹಾಯಕ ಅನುದಾನ ಸಂಹಿತೆ' ಯಲ್ಲಿ ವಿದ್ಯಾಸಂಸ್ಥೆಗಳಿಗೆ ಧನಸಹಾಯದ ಅವಕಾಶ ಕಲ್ಪಿಸಲಾಯಿತು. ಇದರಿಂದ ಅನೇಕ 'ದೇಶೀಶಾಲೆ' ಗಳನ್ನು ಪ್ರಾಥಮಿಕ ಶಿಕ್ಷಣ ಕ್ರಮಕ್ಕೆ ಒಳಪಡಿಸಲು ಅನುಕೂಲವಾಯಿತು. 1863ರಲ್ಲಿ ಅಂಗೀಕರಿಸಲಾದ 'ಮದ್ರಾಸ ಪ್ರಾಥಮಿಕ ಶಿಕ್ಷಣದ ಅಧಿನಿಯಮ' (The Madras Elementary Education Act.) ಮತ್ತು 1871ರ 'ಸ್ಥಾನಿಕ ನಿಧಿಯ ಅಧಿನಿಯಮ' (Local Funds Act.) ಶಾಲೆಗಳ ಸ್ಥಾಪನೆಗೆ, ನಡೆಸಿಕೊಂಡು ಹೋಗುವುದಕ್ಕೆ ಮತ್ತು ಸಮೀಕ್ಷೆಗೆ ಸ್ಥಳೀಯ ಸಂಸ್ಥೆಗಳಿಂದ ಧನ ಸಹಾಯ ನೀಡಿಸಿ ಪ್ರಾಥಮಿಕ ಶಿಕ್ಷಣದ ಸುಭದ್ರವಾದ ತಳಹದಿಯನ್ನು ಹಾಕಿದವು. ಇದಕ್ಕೆ ಜಿಲ್ಲೆಯ ಕಲೆಕ್ಟರು ಅಧಿಕಾರ ಪ್ರಯುಕ್ತ ಅಧ್ಯಕ್ಷರಾಗಿದ್ದು ಮೂವರು ಅಥವಾ ನಾಲ್ವರು ಖಾಸಗಿ ಜನರು ಮತ್ತು ಅಷ್ಟೇ ಜನ ಸರ್ಕಾರಿ ಅಧಿಕಾರಿಗಳು ಸದಸ್ಯರಾಗಿರುತ್ತಿದ್ದರು. ಪಟ್ಟಣಗಳಲ್ಲಿ "ಪೌರಸಮಿತಿಗಳು"

ಪ್ರಾಥಮಿಕ ಶಿಕ್ಷಣದ ಹೊಣೆಯನ್ನು ಹೊತ್ತವು. ಶಿಕ್ಷಣವು ಕಂದಾಯದಲ್ಲಿ ಖರ್ಚಿನ ಮೊದಲನೆ ಬಾಬು ಆಯಿತು. ತತ್ಪರಿಣಾಮವಾಗಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 1870–71 ರಲ್ಲಿ 73 ಆಗಿದ್ದ ವಿದ್ಯಾ ಸಂಸ್ಥೆಗಳ ಸಂಖ್ಯೆಯು 1880–81 ರಲ್ಲಿ 148ಕ್ಕೆ ಏರಿತು. ಅದೇ ಅವಧಿಯಲ್ಲಿ ಬಳ್ಳಾರಿ ಜಿಲ್ಲೆಯ ಶಿಕ್ಷಣ ಸಂಸ್ಥೆಗಳ ಸಂಖ್ಯೆಯು ಕ್ರಮವಾಗಿ 132 ರಿಂದ 726ಕ್ಕೆ ಏರಿತು. ಈ ಶಾಲೆಗಳಲ್ಲಿ ದಕ್ಷಿಣ ಕನ್ನಡದ ಜಿಲ್ಲೆಯಲ್ಲಿ 123 ಮತ್ತು ಬಳ್ಳಾರಿಯಲ್ಲಿ 267 ಪ್ರಾಥಮಿಕ ಶಾಲೆಗಳಿದ್ದು ಅವುಗಳಲ್ಲಿ ಅನುಕ್ರಮವಾಗಿ 4,119 ಮತ್ತು 4,802 ಮಕ್ಕಳು ಶಿಕ್ಷಣ ಪಡೆಯುತ್ತಿದ್ದರು.

ವಿಶ್ವವಿದ್ಯಾನಿಲಯದಿಂದ ಮೆಟ್ರಿಕ್ಯುಲೇಶನ್ ಮತ್ತು ಡಿಗ್ರಿ ವರ್ಗಗಳ ಪರೀಕ್ಷೆ ನಡೆಸಲಾಗುತ್ತಿತ್ತು. ಸರ್ಕಾರವು ಪ್ರಾಥಮಿಕ ಶಿಕ್ಷಣದ ವಿವಿಧ ಹಂತಗಳಲ್ಲಿ ಪರೀಕ್ಷೆಗಳ ವ್ಯವಸ್ಥೆ ಮಾಡಿತ್ತು.

## ಕ್ರಿ.ಶ. 1882–1921

1914 ರಲ್ಲಿ ಪ್ರಾರಂಭವಾದ ಮೊದಲನೆಯ ಮಹಾಯುದ್ಧವು ಶಿಕ್ಷಣದ ಪ್ರಗತಿಯ ಮೇಲೆ ಸರ್ವವ್ಯಾಪಿಯಾದ ಪ್ರಭಾವವನ್ನು ಬೀರಿತು. ಆರ್ಥಿಕ ಅಡಚಣೆಗಳಿಂದ ಅಪೇಕ್ಷಣೀಯ ಯೋಜನೆಗಳನ್ನು ಮುಂದೂಡುವುದು ಅನಿವಾರ್ಯವಾಯಿತು. ಜರ್ಮನಿಯ ಮಿಷನರಿ ಶಿಕ್ಷಣ ಸಂಸ್ಥೆಗಳನ್ನು ವಿದೇಶೀಯವೆಂದು ಭಾವಿಸಲಾದುದರಿಂದ ಅವು ಹೆಚ್ಚಿನ ಕಷ್ಟವನ್ನು ಅನುಭವಿಸಬೇಕಾಯಿತು. ದಕ್ಷಿಣ ಕನ್ನಡ ಮತ್ತು ಬಳ್ಳಾರಿ ಜಿಲ್ಲೆಯ ಇಂಥ ಪ್ರತಿಯೊಂದು ಶಾಲೆಗೆ ವಿಶೇಷ ಸಮಿತಿಯನ್ನು ಮತ್ತು ಅನುಮೋದಿತ ಪಾರುಪತ್ಯಗಾರರನ್ನು ನಿಯಮಿಸುವದರಿಂದ ಅವುಗಳು ಉಳಿಯುವಂತಾಯಿತು.

ಗವರ್ನ್‌ಮೆಂಟ್ ಆರ್ಟ್ಸ್ ಕಾಲೇಜು ಮತ್ತು ಸೈಂಟ್ ಅಲೋಸಿಯಸ್ ಕಾಲೇಜು ಈ ಎರಡೇ ಕಾಲೇಜುಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿದ್ದವು. ಬಳ್ಳಾರಿ ಜಿಲ್ಲೆಯಲ್ಲಿ ಯಾವ ಕಾಲೇಜೂ ಇದ್ದಿರಲಿಲ್ಲ.

ಎಸ್.ಎಸ್.ಎಲ್.ಸಿ. ಯ ಪಾಠಸೂಚಿಕೆ ಮತ್ತು ಪಾಠಪ್ರಣಾಳಿಕೆಗಳನ್ನು ಪರಿಷ್ಕರಿಸಲಾಯಿತು. ಮತ್ತು ಹೊಸ ವಿಧಾನಕ್ಕನುಸರಿಸಿ ಮೊದಲನೆಯ ಪರೀಕ್ಷೆ 1918 ರಲ್ಲಿ ನಡೆಸಲಾಯಿತು.

ಈ ಅವಧಿಯಲ್ಲಿ ಪ್ರೌಢಶಾಲೆಗಳ ಸಂಖ್ಯೆ ಹೆಚ್ಚಾಯಿತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಗಂಡುಮಕ್ಕಳ 18 ಪ್ರೌಢಶಾಲೆಗಳು ಮತ್ತು ಹೆಣ್ಣುಮಕ್ಕಳ 6 ಪ್ರೌಢಶಾಲೆಗಳು ಇದ್ದವು. ಬಳ್ಳಾರಿಯಲ್ಲಿ ಗಂಡುಮಕ್ಕಳ 11 ಪ್ರೌಢಶಾಲೆಗಳಿದ್ದು ಹೆಣ್ಣು ಮಕ್ಕಳ ಪ್ರೌಢಶಾಲೆ ಒಂದೂ ಇರಲಿಲ್ಲ. ಸ್ಥಳೀಯ ಉತ್ತೇಜನದಿಂದ ಮಂಗಳೂರಿನಲ್ಲಿ 'ಕೆನರಾ ಹೈಸ್ಕೂಲು' ಮತ್ತು 'ಗಣಪತಿ ಹೈಸ್ಕೂಲಿ' ನಂತಹ ಧನ ಸಹಾಯ ಪಡೆದ ಪ್ರೌಢಶಾಲೆಗಳು ಹುಟ್ಟಿಕೊಂಡವು. ಶಿಕ್ಷಣದ ವೆಚ್ಚವನ್ನು ರಾಜ್ಯದ, ಸ್ಥಳೀಯ ಮಂಡಲಿಯ ಮತ್ತು ಪುರಸಮಿತಿಯ ನಿಧಿಯಿಂದ ಪೂರೈಸಲಾಗುತ್ತಿತ್ತು. ಪ್ರೌಢಶಾಲೆಯಲ್ಲಿ ಪ್ರತಿ ವಿದ್ಯಾರ್ಥಿಗಾಗಿ ಸರಾಸರಿ 116 ರೂ. ಖರ್ಚಾಗುತ್ತಿದ್ದು ಕಾಲೇಜಿನಲ್ಲಿ ಈ ಖರ್ಚು 577 ರೂ. ಆಗಿತ್ತು. ಆದರೆ ಪ್ರಾಥಮಿಕ ಶಾಲೆಗಳಲ್ಲಿ ಈ ಖರ್ಚು ಕೇವಲ 23·5 ರೂ. ಆಗಿತ್ತು.

ಈ ಅವಧಿಯು ಯುದ್ಧದಿಂದ ಪ್ರಭಾವಿತವಾಗಿದ್ದರೂ ಕೇಂದ್ರ ಸರ್ಕಾರದ ವಿಶೇಷ ಧನಸಹಾಯದಿಂದ ಪ್ರಾಥಮಿಕ ಶಿಕ್ಷಣದಲ್ಲಿ ಗಮನಾರ್ಹವಾದ ವಿಸ್ತರಣೆಯಾಯಿತು. ಖಾಸಗಿ ಸಂಸ್ಥೆಗಳಿಗೆ ಸರ್ಕಾರದ ಅಂಶದಾನ ಪ್ರಮಾಣವನ್ನು ಹೆಚ್ಚಿಸುವ ಎಷ್ಟೋ ಬದಲಾವಣೆಗಳನ್ನು 'ಸಹಾಯಕ ಅನುದಾನ ಸಂಹಿತೆ' ಯಲ್ಲಿ ಮಾಡಲಾಯಿತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಗಂಡುಮಕ್ಕಳ ಶಾಲೆಗಳ ಸಂಖ್ಯೆ 614 ಕ್ಕೆ ಮತ್ತು

ಬಳ್ಳಾರಿಯಲ್ಲಿ 859 ಕ್ಕೆ ಏರಿತು. ಹೆಣ್ಣು ಮಕ್ಕಳ ಶಾಲೆಗಳ ಸಂಖ್ಯೆ 48 ಮತ್ತು 87 ಇತ್ತು. 1920–21 ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 46,261 ಹುಡುಗರು ಮತ್ತು 4,077 ಜನ ಹುಡುಗಿಯರು, ಬಳ್ಳಾರಿಯಲ್ಲಿ 29,329 ಜನ ಹುಡುಗರು 3,851 ಜನ ಹುಡುಗಿಯರು ಶಿಕ್ಷಣ ಪಡೆಯುತ್ತಿದ್ದರು.

ಪ್ರಾಥಮಿಕ ಶಾಲೆಗಳಲ್ಲಿ 4 ರಿಂದ 7 ವರ್ಗಗಳಿದ್ದು 4ನೆಯ ವರ್ಷದ ಮತ್ತು 7ನೆಯ ವರ್ಷದ ಅಂತ್ಯದಲ್ಲಿ ಪರೀಕ್ಷೆ ಇರುತ್ತಿತ್ತು. ಆದರೆ 1918ರಲ್ಲಿ 7ನೆಯ ವರ್ಷದ ಅಂತ್ಯದಲ್ಲಿ ನಡೆಯುವ ಪರೀಕ್ಷೆಯನ್ನು ರದ್ದುಗೊಳಿಸಲಾಯಿತು. ಈ ಶಾಲೆಗಳಲ್ಲಿ (Three R's) ಓದುವುದು, ಬರೆಯುವುದು ಮತ್ತು ಲೆಕ್ಕ ಈ ಮೂರು ವಿಷಯಗಳಿಗೆ ಗಮನ ಕೊಡಲಾಗುತ್ತಿತ್ತು. ವಿಶೇಷ ಗಮನ ಬೌದ್ಧಿಕ ಕಾರ್ಯಕ್ಕೆ ಕೊಡಲಾಗುತ್ತಿತ್ತು. 'ಪಠ್ಯವಸ್ತು' ವಿನಲ್ಲಿ 'ನಿಸರ್ಗ ವಿಮರ್ಶೆ' ಭೂಗೋಲ ಮತ್ತು ಪೌರನೀತಿಯೂ ತಮ್ಮ ಸ್ಥಾನವನ್ನು ಪಡೆದಿದ್ದವು.

'ಪ್ರಾಚ್ಯ ಶಿಕ್ಷಣ'ದ ಹೆಸರಿನಲ್ಲಿ ಸಂಸ್ಕೃತಕ್ಕೂ ಗಮನ ಕೊಡಲಾಯಿತು. ದೇಶೀಶಾಲೆಗಳಿಗೆ ಧನ ಸಹಾಯ ನೀಡಲಾಗುತ್ತಿದ್ದು ಅವುಗಳನ್ನು ಸಮೀಕ್ಷಿಸಲಾಗುತ್ತಿತ್ತು. ದಕ್ಷಿಣ ಕನ್ನಡದ ಉಡುಪಿ, ಕಾರ್ಕಳ ಮತ್ತು ಪೆರಡಾಲದಲ್ಲಿ 6 ಮತ್ತು ಬಳ್ಳಾರಿ ಜಿಲ್ಲೆಯಲ್ಲಿಯ ಉಜ್ಜಯಿನಿ ಮತ್ತು ಬಳ್ಳಾರಿಯಲ್ಲಿ 3 ಸಂಸ್ಕೃತ ಶಾಲೆಗಳಿದ್ದವು. ಇವಲ್ಲದೆ ದಕ್ಷಿಣ ಕನ್ನಡದ ಕಾರ್ಕಳ ಮತ್ತು ಉಡುಪಿಯಲ್ಲಿ ಎರಡು ಸಂಸ್ಕೃತ ಕಾಲೇಜುಗಳಿದ್ದವು.

ಸರಕಾರವು ಮುಸಲ್ಮಾನರ ಶಿಕ್ಷಣಕ್ಕೆ ಮಹತ್ವ ಕೊಟ್ಟಿತು. ಮುಸಲ್ಮಾನರಿಗಾಗಿ ಪ್ರತ್ಯೇಕ ಶಾಲೆಗಳನ್ನು ತೆರೆಯಲಾಯಿತು. ಆ ಶಾಲೆಗಳಲ್ಲಿ ಕುರಾನ್, ಅರಬಿ ಮತ್ತು ಉರ್ದು ಕಲಿಸಲಾಗುತ್ತಿತ್ತು. ಬಳ್ಳಾರಿಯಲ್ಲಿ ಮುಸಲ್ಮಾನರಿಗಾಗಿ ಒಂದು ಪ್ರತ್ಯೇಕ ಪ್ರೌಢಶಾಲೆ ಇತ್ತು.

ಕಾರ್ಮಿಕ ಖಾತೆಯು ಆದಿದ್ರಾವಿಡ ಅಥವಾ ಹರಿಜನರಿಗಾಗಿ ಶಾಲೆಗಳನ್ನು ತೆರೆದಿತ್ತು. ಆದರೆ ಪೋಷಕರು 12 ವರ್ಷದ ವಯಸ್ಸಿನಲ್ಲಿಯೇ ಮಕ್ಕಳನ್ನು ಶಾಲೆ ಬಿಡಿಸಿ ಕೆಲಸಕ್ಕೆ ಕರೆದುಕೊಂಡು ಹೋಗುತ್ತಿದ್ದುದರಿಂದ ಶಾಲೆಯಲ್ಲಿ ಹಾಜರಿ ಕಡಮೆ ಆಗಿತ್ತು. ಅವಕ್ಕಾಗಿ ಅವರು ಪ್ರೌಢಶಾಲೆಯ ಮಟ್ಟಕ್ಕೆ ಮುಟ್ಟುತ್ತಿರಲಿಲ್ಲ. ಸ್ಥಳೀಯ ಸಂಸ್ಥೆಗಳು ಉಚಿತವಾಗಿ ಪಾಟಿ (Slate) ಪುಸ್ತಕಗಳನ್ನು ಒದಗಿಸುತ್ತಿದ್ದವು.

ಪುರ ಮತ್ತು ನಗರಗಳಲ್ಲಿ ಹೆಣ್ಣುಮಕ್ಕಳಿಗಾಗಿ ಪ್ರತ್ಯೇಕ ಶಾಲೆಗಳನ್ನು ಸ್ಥಾಪಿಸಲಾಗಿತ್ತು. ಅವುಗಳಿಗೆ ಶಿಕ್ಷಕಿಯರ ಅಭಾವವಿತ್ತು. ಮಿಷನ್ ಮತ್ತು ಕ್ಯಾಥೋಲಿಕ್ ಸಂಸ್ಥೆಗಳು (ಆಡಳಿತ ಮಂಡಲಿಗಳು) ಅನೇಕ ಹೆಣ್ಣುಮಕ್ಕಳ ಶಾಲೆಗಳನ್ನು ತೆರೆದವು. ಸಂಗೀತ ಮತ್ತು ಕಸೂತಿ ಕೆಲಸಗಳನ್ನು ಹೆಣ್ಣುಮಕ್ಕಳ ಶಾಲೆಯಲ್ಲಿ ಕಲಿಸಲು ಪ್ರಾರಂಭ ಮಾಡಲಾಯಿತು. ಅನೇಕ ವಿದ್ಯಾರ್ಥಿ ವೇತನಗಳನ್ನು ಮತ್ತು ಫೀಜುಗಳಲ್ಲಿ ರಿಯಾಯತಿಗಳನ್ನು ನೀಡಲಾಯಿತು. ಕಾನ್‌ವೆಂಟ್ ಸೋದರಿಯರು ಮಂಗಳೂರಿನಲ್ಲಿ 'ಸೈಂಟ್ ಆಗ್ನೇಸ್ ಕಾಲೇಜು' ಎಂಬ ಒಂದು ಕಾಲೇಜನ್ನು ತೆರೆದರು. ಈ ಎಲ್ಲ ಶಾಲೆಗಳಲ್ಲದೆ ದಕ್ಷಿಣ ಕನ್ನಡದಲ್ಲಿ 2 ಮತ್ತು ಬಳ್ಳಾರಿಯಲ್ಲಿ 55 ರಾತ್ರಿ ಶಾಲೆಗಳಿದ್ದವು.

### ಕ್ರಿ.ಶ. 1921–1947

ಕ್ರಿ.ಶ. 1921–1947 ರ ಈ ಅವಧಿಯು ದೇಶದ ಶಿಕ್ಷಣದ ಮಹತ್ತಾದ ವಿಸ್ತರಣೆಯು

ದೃಷ್ಟಿಯಿಂದ ವೈಶಿಷ್ಟ್ಯ ಪೂರ್ಣವಾಗಿದೆ. ಇಂಡಿಯಾ ಸರ್ಕಾರದ 1919 ರ ಅಧಿನಿಯಮದ ಪ್ರಕಾರ ಡಿಸೆಂಬರ್ 1920 ರಲ್ಲಿ ಮದ್ರಾಸಿನಲ್ಲಿ ಮೊದಲನೆಯ ಶಿಕ್ಷಣ ಮಂತ್ರಿಯನ್ನು ನಿಯಮಿಸಲಾಯಿತು.

ಅಂಗೀಕೃತ ' ಮದ್ರಾಸ ಪ್ರಾಥಮಿಕ ಶಿಕ್ಷಣದ ಅಧಿನಿಯಮ'ಕ್ಕನುಸಾರವಾಗಿ ದಕ್ಷಿಣ ಕನ್ನಡ ಮತ್ತು ಬಳ್ಳಾರಿಯಲ್ಲಿ ಪ್ರಾಥಮಿಕ ಶಾಲೆಗಳಿಗೆ ಮಾನ್ಯತೆ ಸಹಾಯ ನೀಡುವ ಮತ್ತು ಕಡ್ಡಾಯ ಶಿಕ್ಷಣವನ್ನು ಜಾರಿಗೆ ತರಲು ಕರವನ್ನು ಹೇರುವ ಅಧಿಕಾರ ಹೊಂದಿದ ' ಜಿಲ್ಲಾ ಶಿಕ್ಷಣ ಪರಿಷತ್ತು'ಗಳನ್ನು ಸ್ಥಾಪಿಸಲಾಯಿತು. ದೇಶದ ಶಿಕ್ಷಣದ ಇತಿಹಾಸದಲ್ಲಿ ಮೊದಲನೆಯ ಸಲ ಶಿಕ್ಷಣದ ವಿಸ್ತರಣೆಯ ವಿಷಯ ಸರ್ಕಾರದಿಂದ ಖಾಸಗಿ ಸಂಸ್ಥೆಗಳಿಗೆ ಹಸ್ತಾಂತರ ಹೊಂದಿತು. ' ಸ್ಥಳೀಯ ಮಂಡಲಿಗಳ ಅಧಿನಿಯಮ ' ಮತ್ತು ಮದ್ರಾಸ ಜಿಲ್ಲಾ ಪೌರಸಮಿತಿಗಳ ಅಧಿನಿಯಮ ' ಅಂಗೀಕೃತವಾದ ಮೇಲೆ ಪ್ರಾಥಮಿಕ ಶಿಕ್ಷಣವನ್ನು ' ಜಿಲ್ಲಾ ಮಂಡಲಿ 'ಗಳ ವ್ಯಾಪ್ತಿಯಿಂದ ತೆಗೆದು 'ತಾಲೂಕು ಮಂಡಲಿ' ಮತ್ತು 'ಪಂಚಾಯತ್ ಮಂಡಲಿ'ಗಳಿಗೆ ಒಪ್ಪಿಸಲಾಯಿತು. ಖಾಸಗಿ ಸಂಸ್ಥೆ (private agencies) ಗಳಿಗಲ್ಲದೆ ಪ್ರಾಥಮಿಕ ಶಿಕ್ಷಣದ ಪ್ರಸರಣ ಕಾರ್ಯವನ್ನು ಮೀನುಗಾರಿಕೆ ಮತ್ತು ಕಾರ್ಮಿಕ ಖಾತೆಗಳಿಗೂ ವಹಿಸಿಕೊಡಲಾಗಿತ್ತು. ಶಾಲೆಗಳ ಮತ್ತು ವಿದ್ಯಾರ್ಥಿಗಳ ಸಂಖ್ಯೆಯು ಈ ಅವಧಿಯಲ್ಲಿ ಗಮನಾರ್ಹವಾಗಿ ಬೆಳೆಯಿತು. 1927ರಲ್ಲಿ–ದಕ್ಷಿಣ ಕನ್ನಡ ಮತ್ತು ಬಳ್ಳಾರಿ ಯಲ್ಲಿ ಅನುಕ್ರಮವಾಗಿ ಶಾಲೆಗಳ ಮತ್ತು ವಿದ್ಯಾರ್ಥಿಗಳ ಸಂಖ್ಯೆ 1917ರಲ್ಲಿದ್ದ 579 ಮತ್ತು 41, 174 ರಿಂದ 1224 ಮತ್ತು 75,278ಕ್ಕೂ, 848 ಮತ್ತು 29,687 ರಿಂದ 1321 ಮತ್ತು 43.230ಕ್ಕೂ ಏರಿತು, ಬಳ್ಳಾರಿ ಜಿಲ್ಲೆಯ ಹೊಸಪೇಟೆಯ ಪೌರಸಮಿತಿಯು ಕಡ್ಡಾಯ ಶಿಕ್ಷಣ ಜಾರಿಗೆ ತಂದಿತು. ಇದಲ್ಲದೆ 148 ರಾತ್ರಿ ಶಾಲೆಗಳನ್ನು ಪ್ರಾಥಮಿಕ ಶಿಕ್ಷಣದ ಪ್ರಸರಣ ಕಾರ್ಯಕ್ಕೆ ಬಳಸಿಕೊಳ್ಳಲಾಯಿತು. ವಯಸ್ಕರ ಶಿಕ್ಷಣದ ಒಂದು ಯೋಜನೆಯನ್ನು ಹಾಕಿ ವಯಸ್ಕರ ಶಿಕ್ಷಣದ ಕೇಂದ್ರಗಳನ್ನು ಪಾಂಡೇಶ್ವರ, ಫರಂಗಿಪೇಟೆ ಮತ್ತು ಪುತ್ತೂರು ಇವುಗಳಲ್ಲಿ ತೆರೆಯಲಾಯಿತು. ಈ ಕೇಂದ್ರಗಳು ಬಹಳ ಉಪಯುಕ್ತವಾದ ಕಾರ್ಯವನ್ನು ಮಾಡಿದವು. 1934ರಲ್ಲಿ ತಾಲೂಕು ಮಂಡಲಿಗಳನ್ನು ರದ್ದುಗೊಳಿಸಲಾಯಿತು. ಪ್ರಾಥಮಿಕ ಶಿಕ್ಷಣ ಜಿಲ್ಲಾ ಮಂಡಲಿಗಳ ವಶಕ್ಕೆ ಬಂದಿತು. ಮದ್ರಾಸ ಪ್ರಾಥಮಿಕ ಶಿಕ್ಷಣ ಅಧಿನಿಯಮದಲ್ಲಿ ತಿದ್ದುಪಡಿ ಮಾಡಲಾಯಿತು ಮತ್ತು ಶಾಲೆಗೆ ಹೋಗುವ ವಯಸ್ಸಿನ ಮಕ್ಕಳನ್ನು ಆ ವಯಸ್ಸು ಇರುವ ತನಕ ಶಾಲೆ ಬಿಡಿಸಲು ಆಗದಂತೆ ಪರಿವರ್ತನೆ ಹೊಂದಿದ ಕಡ್ಡಾಯ ಶಿಕ್ಷಣವನ್ನು ಜಾರಿಗೆ ತರಲಾಯಿತು. ತತ್ಪರಿಣಾಮವಾಗಿ ಶಾಲೆಯಲ್ಲಿ ಮಕ್ಕಳ ಸಂಖ್ಯೆ ಸುಧಾರಣೆ ಆಯಿತು.

ಭಾರತ ಸರ್ಕಾರದ 1935ರ ಅಧಿನಿಯಮ ಅಂಗೀಕೃತವಾದುದರಿಂದ 1937ರಲ್ಲಿ ಶಿಕ್ಷಣ ಸಚಿವಾಲಯಕ್ಕೆ ಸಾಮಾನ್ಯ ಶಿಕ್ಷಣದ ಪ್ರಸರಣ ಮತ್ತು ನಿಯಂತ್ರಣದ ಪೂರ್ಣ ಅಧಿಕಾರ ಸಿಕ್ಕಿತು. ಆರಿಸಿದ ವಿಭಾಗಗಳಲ್ಲಿ 1938ರಲ್ಲಿ ಮೂಲ ಶಿಕ್ಷಣ (ವರ್ಧಾ ಪದ್ಧತಿಯ ಶಿಕ್ಷಣ) ಜಾರಿಗೆ ತರಬೇಕೆಂದು ಸರ್ಕಾರ ಉದ್ದೇಶಿಸಿತು. ಮೊದಲನೆಯ ಬಾರಿಗೆ ಪ್ರಾಥಮಿಕ ' ಶಿಕ್ಷಣ ನಿಯಮಾವಳಿ ' (ಕೈಪಿಡಿ) ಮತ್ತು ಹೊಸ ' ಪಾಠ ಸೂಚಿ 'ಗೆ ಅನುಗುಣವಾಗಿ ಶಿಕ್ಷಕರಿಗಾಗಿ ಕೈಪಿಡಿಗಳನ್ನು ಸಿದ್ಧಪಡಿಸಲಾಯಿತು. ಇದ್ದ ಪಾಠ ಸೂಚಿಯನ್ನು ಪರಿಷ್ಕರಿಸಲಾಯಿತು.

1923ರಲ್ಲಿಯೇ ಶಿಕ್ಷಣ ಸಚಿವ ಖಾತೆ ಪ್ರೌಢ ಶಿಕ್ಷಣದ ಸಂಘಟನೆಯ ಕಾರ್ಯವನ್ನೂ ಕೈಗೊಂಡಿತು. ಆಗ ದಕ್ಷಿಣ ಕನ್ನಡ ಮತ್ತು ಬಳ್ಳಾರಿಯಲ್ಲಿ ಪ್ರೌಢ ಶಾಲೆಗಳಿಗೆ ಸಹಾಯಕ ಅನುದಾನ ನೀಡುವ, ಮಾನ್ಯತೆ ನೀಡುವ, ವೃತ್ತಿ ತರಬೇತಿ, ವೈದ್ಯಕೀಯ ಶಿಕ್ಷಣ, ನೀತಿಶಿಕ್ಷಣ ಮುಂತಾದ ಎಲ್ಲ ವಿಷಯಗಳ ಬಗ್ಗೆ ವಿದ್ಯಾಖಾತೆಗೆ ಸಲಹೆ ನೀಡಲು ಜಿಲ್ಲಾ ಶಿಕ್ಷಣ ಮಂಡಲಿಗಳನ್ನು ಸ್ಥಾಪಿಸಲಾಯಿತು. 1925ರ ತರುವಾಯ ಸರ್ಕಾರವು IVನೆಯ ಫಾರ್ಮ್ ಮತ್ತು ಅದರ ಮೇಲಿನ ವರ್ಗಗಳಲ್ಲಿ ಮಾತೃಭಾಷೆಯನ್ನು ಶಿಕ್ಷಣದ ಮಾಧ್ಯಮವನ್ನಾಗಿ ತೆಗೆದುಕೊಳ್ಳಲು ಮತ್ತು ಹಾಗೆ ಮಾತೃಭಾಷೆಯಲ್ಲಿ ಶಿಕ್ಷಣ ಪಡೆದವರು ಪರೀಕ್ಷೆಯಲ್ಲಿ

ಆಯಾ ಭಾಷೆಗಳಲ್ಲಿಯೇ ಉತ್ತರಗಳನ್ನು ಬರೆಯಲೂ ಅನುಮತಿ ಕೊಟ್ಟಿತು. ಈ ಅವಧಿಯಲ್ಲಿ ಪ್ರೌಢ ಶಾಲೆಗಳ ಸಂಖ್ಯೆಯಲ್ಲಿ ವಿಶೇಷವಾದ ವೃದ್ಧಿ ಆಗಲಿಲ್ಲ. 1946-47ರಲ್ಲಿ ಬಳ್ಳಾರಿಯಲ್ಲಿ 11 ಶಾಲೆಗಳು ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 29 ಶಾಲೆಗಳಿದ್ದವು.

1925ರಲ್ಲಿಯೇ ಪ್ರೌಢಶಾಲೆಗಳ ಪಠ್ಯವಸ್ತುವಿನ ಪುನರ್ವ್ಯವಸ್ಥೆಯನ್ನು ಕೈಕೊಳ್ಳಲಾಗಿತ್ತು. ತರುಣರನ್ನು ಕೇವಲ ವಿಶ್ವವಿದ್ಯಾನಿಲಯದ ಅಥವಾ ವೃತ್ತಿಯ ಜೀವನಕ್ಕೆ ಮಾತ್ರವಲ್ಲದೆ ಉಳಿದ ಕಸಬು ಗಳಲ್ಲಿಯೂ ಪ್ರವೇಶಿಸಲು ಬೇಕಾದ ಸಿದ್ಧತೆ ಹೊಂದುವಂತೆ ಪ್ರೌಢಶಾಲಾ ಶಿಕ್ಷಣ ಆದರ್ಶವಾಗಿರಬೇಕೆಂದು ವಿವೇಚಿಸಲಾಗಿತ್ತು. ಪೌಢಶಾಲೆಗಳಲ್ಲಿ ಬಡಗಿ ಕೆಲಸ, ಪುಸ್ತಕಕ್ಕೆ ರಟ್ಟುಹಾಕುವುದು, ನೇಯ್ಗೆಕೆಲಸ, ಮುದ್ರಣ ಮುಂತಾದ ಶಾರೀರಿಕವಾದ :ಶಿಕ್ಷಣ ಮತ್ತು ಕಸಬುಗಳನ್ನು ಕಲಿಸಬೇಕೆಂದು ಸರ್ಕಾರ ನಿರ್ಬಂಧ ಮಾಡಿತು. ಈ ರೀತಿ ಪ್ರತಿಯೊಂದು ಪ್ರೌಢಶಾಲೆಯಲ್ಲಿ ವೃತ್ತಿವಿಷಯಕ ಶಿಕ್ಷಣಕ್ಕೆ ಅವಕಾಶ ಇದ್ದು ವಿದ್ಯಾರ್ಥಿಗಳು ಅವುಗಳಲ್ಲಿ ಆಸಕ್ತಿ ವಹಿಸುತ್ತಿದ್ದರು.

1929ರಲ್ಲಿ ಜಾರಿಯಲ್ಲಿ ತಂದ ಎಸ್.ಎಸ್.ಎಲ್.ಸಿ. ಪದ್ಧತಿ 1939ರಲ್ಲಿ ಮತ್ತೊಂದು ಪದ್ಧತಿ ಜಾರಿಗೆ ತರುವ ವರೆಗೆ ಮುಂದುವರಿಯಿತು. ಈ ಕ್ರಮದಲ್ಲಿ ಕೈಕೆಲಸದ ಶಿಕ್ಷಣ ಆವಶ್ಯಕ ವಿಷಯವಾದರೂ ಅದು ಪರೀಕ್ಷಾ ವಿಷಯವಾಗಿರಲಿಲ್ಲ. ಇತಿಹಾಸ, ಬೀಜಗಣಿತ, ರೇಖಾಗಣಿತ, ಭೌತಶಾಸ್ತ್ರ, ರಸಾಯನ ಶಾಸ್ತ್ರಗಳು ವಿದ್ಯಾರ್ಥಿಗಳ ನೆಚ್ಚಿನ ವಿಷಯಗಳಾಗಿದ್ದು 'ಲೇಖಾಶಾಸ್ತ್ರ' ಮತ್ತು 'ಮುದ್ರಾಲೇಖನ' ಐಚ್ಛಿಕ ವಿಷಯಗಳಾಗಿದ್ದವು.

1938ರಲ್ಲಿ ಹಿಂದಿ ಒಂದು ಆವಶ್ಯಕ ವಿಷಯವೆಂದು ಸೇರಿಸಲಾಯಿತು. ಆದರೆ ಮರುವರ್ಷ Iರಿಂದ IIIನೆಯ ಫಾರ್ಮ್ ವರೆಗೆ ಮತ್ತು ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಐಚ್ಛಿಕ ವಿಷಯವೆಂದು ಮಾಡ ಲಾಯಿತು.

ಎಸ್.ಎಸ್.ಎಲ್.ಸಿ. ಮಂಡಲಿ ಅಂತಿಮ ಪರೀಕ್ಷೆಯನ್ನು ನಡೆಸುತ್ತಿತ್ತು. ವರ್ಗದ ದಾಖಲೆ ಗಳನ್ನು ನೋಡಿ ಗುಣಗಳನ್ನು ಸಂಯುತಗೊಳಿಸುವ ಪದ್ಧತಿ 1925ರಲ್ಲಿ ರದ್ದುಗೊಳಿಸಲಾಯಿತು.

1939ರ ಎರಡನೆಯ ಮಹಾಯುದ್ಧ ಶಿಕ್ಷಣದ ವಿಸ್ತರಣವನ್ನು ಸ್ಥಗಿತಗೊಳಿಸಿತು. ಆದರೆ 1944–45ರಲ್ಲಿ ಸರ್ಕಾರವು ಯುದ್ಧಾನಂತರದ ಶಿಕ್ಷಣದ ಪುನಾರಚನೆಯ ಯೋಜನೆಯನ್ನು ಕೈಗೊಂಡಿತು. ಅದರ ಪ್ರಕಾರ 1945–46ರಲ್ಲಿ ದಕ್ಷಿಣಕನ್ನಡದ ಕರಾವಳಿ ಪ್ರದೇಶದಲ್ಲಿ ಮತ್ತು ಬಳ್ಳಾರಿ ಜಿಲ್ಲೆಯ ಆರಿಸಿದ ಕೆಲವು ಭಾಗಗಳಲ್ಲಿ ಕಡ್ಡಾಯ ಪ್ರಾಥಮಿಕ ಶಿಕ್ಷಣ ಜಾರಿಗೆ ತರಲಾಯಿತು. ಆ ಮೇಲೆ ಇದನ್ನು ವಿಸ್ತರಿಸಲು ಯೋಜನೆಯಲ್ಲಿ ಅವಕಾಶವಿತ್ತು.

1938ರಲ್ಲಿ ಜಿಲ್ಲಾ ಶಿಕ್ಷಣ ಪರಿಷತ್ತುಗಳನ್ನು ರದ್ದುಗೊಳಿಸಿ, ಶಾಲೆಗಳಿಗೆ ಮಾನ್ಯತೆ ಮತ್ತು ಸಹಾಯ ನೀಡುವ ಅಧಿಕಾರ ಶಿಕ್ಷಣಖಾತೆಯ ಅಧಿಕಾರಿಗಳಿಗೆ ಕೊಡಲಾಯಿತು.

ಪ್ರಾಥಮಿಕ ಶಾಲೆಗಳಲ್ಲಿ 1 ರಿಂದ 5 ವರ್ಗಗಳಿದ್ದವು. 8 ವರ್ಷಗಳಿದ್ದ ಉಚ್ಚ ಪ್ರಾಥಮಿಕ ಶಾಲೆಗಳೂ ಇದ್ದವು. ಪ್ರಾರಂಭದಲ್ಲಿ ಪ್ರಾಥಮಿಕ ಶಾಲೆಗಳಲ್ಲಿ ಸಾರ್ವಜನಿಕ ಪರೀಕ್ಷೆ (Public Examination) ಇದ್ದಿಲ್ಲ. Vನೆಯ ತರಗತಿ ಮತ್ತು VIIIನೆಯ ತರಗತಿಯ ಪರೀಕ್ಷೆಗಳನ್ನು ನಡೆಸಿ ಪ್ರಶಸ್ತಿ ಪತ್ರಗಳನ್ನು ಕೊಡುವ ಅಧಿಕಾರ ಸಮೀಕ್ಷಾ ಅಧಿಕಾರಿಗಳಿಗೆ ಕೊಡಲಾಗಿತ್ತು. ಆದರೆ 1943ರಲ್ಲಿ

VIII ನೆಯ ತರಗತಿಗೆ ಸಾರ್ವಜನಿಕ ಪರೀಕ್ಷೆ ಪ್ರಾರಂಭಿಸಲಾಯಿತು. ಈ ಪರೀಕ್ಷೆಯಲ್ಲಿ ಇಂಗ್ಲೀಷನ್ನು ಐಚ್ಛಿಕ ವಿಷಯವನ್ನಾಗಿ ತೆಗೆದುಕೊಂಡು ಉತ್ತೀರ್ಣರಾದ ವಿದ್ಯಾರ್ಥಿಗಳು ಹೈಸ್ಕೂಲಿನ IV ಫಾರಂಗೆ ಮತ್ತಾವ ಪರೀಕ್ಷೆಯೂ ಇಲ್ಲದೆ ಅರ್ಹರಾಗುತ್ತಿದ್ದರು. ಈ ರೀತಿ ಉಚ್ಚ ಪ್ರಾಥಮಿಕ ಶಾಲೆಗಳು ಪ್ರೌಢ ಶಾಲೆಗಳಿಗೆ ಪೋಷಕಶಾಲೆಗಳಾಗಿದ್ದವು.

ಈ ಭಾಗದಲ್ಲಿ ಪದವೀಧರರಿಗಾಗಿ ತರಬೇತಿ ಕಾಲೇಜುಗಳು ಇದ್ದಿರಲಿಲ್ಲ. ಬಳ್ಳಾರಿಯಲ್ಲಿ 3 ಮತ್ತು ದಕ್ಷಿಣ ಕನ್ನಡದಲ್ಲಿ 4 ತರಬೇತಿ ಶಾಲೆಗಳಿದ್ದವು. ಪಂಡಿತರಂತಹ ಭಾಷಾಶಿಕ್ಷಕರ ತರಬೇತಿಗಾಗಿ ಯಾವ ಅನುಕೂಲತೆಗಳೂ ಇರಲಿಲ್ಲ.

ಉಚ್ಚಶಿಕ್ಷಣದ ಬೇಡಿಕೆಯನ್ನು ಪೂರೈಸಲು ದಕ್ಷಿಣ ಕನ್ನಡದಲ್ಲಿ ಮೂರು ಕಾಲೇಜುಗಳಿದ್ದವು. ಆದರೆ ಬಳ್ಳಾರಿಯಲ್ಲಿ ಒಂದೂ ಇರಲಿಲ್ಲ. 1921ರಲ್ಲಿ ಅಪಾಸ್ಟಲಿಕ್ ಕಾರ್ಮೆಲ್ ಸನ್ಯಾಸಿನಿಯರು (Apostolic Carmel Nuns) ಮಹಿಳೆಯರಿಗಾಗಿ ಸೈಂಟ್‌ಆಗ್ನೇಸ್ ಕಾಲೇಜು ತೆರೆದರು. ಆದರೆ ಮಂಗಳೂರಿನ ಗೌರ್ನ್‌ಮೆಂಟ್ ಆರ್ಟ್ಸ್ ಕಾಲೇಜು ಕೇವಲ ಇಂಟರ್ ಮೀಡಿಯಟ್ ಕ್ಲಾಸುಗಳನ್ನು ಹೊಂದಿ ಎರಡನೆಯ ದರ್ಜೆಯ ಕಾಲೇಜು ಆಗಿ ಉಳಿಯಿತು. ಎಲ್ಲ ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಯಿತು.

ದಕ್ಷಿಣ ಕನ್ನಡ ಮತ್ತು ಬಳ್ಳಾರಿಯಲ್ಲಿ ಮುಸಲ್ಮಾನರಿಗಾಗಿ ಪ್ರತ್ಯೇಕ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳನ್ನು ಪ್ರಾರಂಭಿಸಲಾಯಿತು. ದಕ್ಷಿಣ ಕನ್ನಡದಲ್ಲಿ 'ಮಾಪಿಳ್ಳೆ'ಯರ ಶಿಕ್ಷಣಕ್ಕೆ ವಿಶೇಷ ಗಮನ ಕೊಡಲಾಯಿತು. ಅವರಿಗಾಗಿ ಬೇರೆ ಶಾಲೆಗಳನ್ನು ತೆರೆಯಲಾಯಿತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಉರ್ದು ಭಾಷೆಯನ್ನು ಕಲಿಸುವ ಮುಸ್ಲಿಮ್ ಶಾಲೆಗಳಲ್ಲದೆ ಇಂಥ 80 ಗಂಡು ಮಕ್ಕಳ ಶಾಲೆಗಳನ್ನು ಮತ್ತು 11 ಹೆಣ್ಣು ಮಕ್ಕಳ ಶಾಲೆಗಳನ್ನು ತೆರೆಯಲಾಯಿತು.

ಶಾಲೆಯಲ್ಲಿಯೇ ಧರ್ಮದ ಅಧ್ಯಯನ ಮಾಡುವ ಬಹು ಮುಖ್ಯವಾದ ರಿಯಾಯತಿಯನ್ನು ಮುಸಲ್ಮಾನರಿಗೆ ಕೊಡಲಾಯಿತು. ಮುಸಲ್ಮಾನರ ಶಿಕ್ಷಣದ ಸುಧಾರಣೆಗಾಗಿ ನಿಯಮಿಸಿದ ಸಮಿತಿಯ ಶಿಫಾರಸ್ಸುಗಳ ಪ್ರಕಾರ ಸರ್ಕಾರವು ಎಲ್ಲ ಸರ್ಕಾರಿ, ಬೋರ್ಡ್ ಮತ್ತು ಇತರ ಶಾಲೆಗಳಲ್ಲಿ ಕುರಾನ್ ಶಿಕ್ಷಕರನ್ನು ನಿಯಮಿಸಿ, ಮುಸ್ಲಿಮ್ ವಿದ್ಯಾರ್ಥಿಗಳಿಗೆ ಧರ್ಮ ಬೋಧೆಯ ಅವಕಾಶವನ್ನು ಕಲ್ಪಿಸಿ ಕೊಟ್ಟಿತು. ಈ ಕುರಾನ ಶಿಕ್ಷಕರ ಸಂಬಳ ಸಾರ್ವಜನಿಕ ನಿಧಿಯಿಂದ ಕೊಡಲಾಗುತಿತ್ತು.

ಬಳ್ಳಾರಿಯಲ್ಲಿ ಹೆಣ್ಣು ಮಕ್ಕಳಿಗಾಗಿ ಪ್ರೌಢಶಾಲೆ ಇರಲಿಲ್ಲ. ಆದರೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೆಣ್ಣು ಮಕ್ಕಳಿಗಾಗಿ ಏಳು ಪ್ರೌಢಶಾಲೆಗಳು ಒಂದು ಕಾಲೇಜು ಇದ್ದವು. ಹೆಣ್ಣು ಮಕ್ಕಳ 'ಪಠ್ಯವಸ್ತು'ವಿನಲ್ಲಿ ಗೃಹವಿಜ್ಞಾನ, ಕಸೂತಿ ಮತ್ತು ಸಂಗೀತ ಕಡ್ಡಾಯ ವಿಷಯಗಳೆಂದು ಸೇರಿಸಲಾಗಿದ್ದು ಅದು ಉಳಿದ ಎಲ್ಲ ವಿಧದಲ್ಲಿ ಗಂಡು ಮಕ್ಕಳ ಪಠ್ಯವಸ್ತುವಿನಂತೆಯೇ ಇತ್ತು. ಹೆಣ್ಣು ಮಕ್ಕಳ ಶಾಲೆಯಲ್ಲಿ ಕೆಲಸ ಮಾಡುವವರೆಲ್ಲರೂ ಸ್ತ್ರೀಯರಾಗಿರುತ್ತಿದ್ದರು ಮತ್ತು ಎಲ್ಲ ಹಂತಗಳಲ್ಲಿ ಸ್ತ್ರೀ ಸಮೀಕ್ಷಕಿಯರೇ ಇರುತ್ತಿದ್ದರು.

ದಲಿತ ವರ್ಗದವರ ಮಕ್ಕಳ ಶಿಕ್ಷಣದ ಮೇಲ್ವಿಚಾರಣೆ ಸರ್ಕಾರದ ಖರ್ಚಿನಿಂದ ಕಾರ್ಮಿಕ ಇಲಾಖೆ ಮಾಡುತ್ತಿತ್ತು. ಈ ಇಲಾಖೆಯು ಅವರಿಗಾಗಿ ಪ್ರತ್ಯೇಕ ಶಾಲೆಗಳನ್ನು ತೆರೆಯಿತು. ಬಳ್ಳಾರಿಯಲ್ಲಿ ಈ ಶಾಲೆಗಳ ಸಂಖ್ಯೆ 47 ಮತ್ತು ವಿದ್ಯಾರ್ಥಿಗಳ ಸಂಖ್ಯೆ 1,269, ಮತ್ತು ದಕ್ಷಿಣ ಕನ್ನಡದಲ್ಲಿ ಈ

ಶಾಲೆಗಳ ಸಂಖ್ಯೆ 1,358 ಇತ್ತು. ಖಾಸಗಿ ಸಂಸ್ಥೆಗಳು (Private agencies) ಮತ್ತು 'ಸ್ಥಳೀಯ ಮಂಡಲಿ'ಗಳು ಸಹ ದಲಿತ ವರ್ಗದವರ ಮಕ್ಕಳಿಗಾಗಿ ಶಾಲೆಗಳನ್ನು ತೆರೆದವು. ಮಂಗಳೂರು ಮತ್ತು ಉಡುಪಿಯಲ್ಲಿ ಕೊರಗರ ಮಕ್ಕಳಿಗಾಗಿ 'ಡಿಪ್ರೆಸ್ಡ್ ಕ್ಲಾಸ್ ಮಿಷನ್' ತನ್ನ ಶಾಲೆಗಳನ್ನು ತೆರೆದಿತ್ತು.

ಎಲ್ಲ ಸಾರ್ವಜನಿಕ ಶಾಲೆಗಳಲ್ಲಿ ಹರಿಜನರ ಮಕ್ಕಳಿಗೆ ಪ್ರವೇಶ ಸಿಕ್ಕುವಂತೆ ಮಾಡಲಾಯಿತು. ಹರಿಜನರ ಮಕ್ಕಳನ್ನು ಸೇರಿಸದ ಶಾಲೆಗಳ ಸಹಾಯ, ಅನುದಾನಗಳನ್ನು 'ರಿಜಿಸ್ಟ್ರಾರ್ ಜನರಲ್ ಆಫ್ ಪಂಚಾಯತ್' ಹಿಂದೆಗೆದುಕೊಳ್ಳುತ್ತಿದ್ದರು. ಸರ್ಕಾರ ಅಂಥ ಶಾಲೆಗಳ ಮಾನ್ಯತೆಯನ್ನು ಹಿಂದೆಗೆದು ಕೊಳ್ಳುತ್ತಿತ್ತು. ಪುಸ್ತಕ ಪಾಟಿಗಳು ಉಚಿತವಾಗಿ ಸ್ಥಳೀಯ ಮಂಡಲಿಗಳಿಂದ ಮತ್ತು ಪರೋಪಕಾರಿ ಜನರಿಂದ ಹಂಚಲಾಗುತ್ತಿದ್ದವು. ಉಚಿತ ಮಧ್ಯಾಹ್ನದ ಊಟದ ವ್ಯವಸ್ಥೆಯೂ ಇತ್ತು.

ಬಳ್ಳಾರಿಯಲ್ಲಿ ಲಂಬಾಣಿ ಜನರಿಗಾಗಿ 29 ಪ್ರತ್ಯೇಕ ಶಾಲೆಗಳಿದ್ದವು. ಅವುಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ 721 ಇತ್ತು.

ಕೇವಲ ಬಳ್ಳಾರಿಯಲ್ಲಿ ಮಾತ್ರ ಐರೋಪ್ಯ ಶಿಕ್ಷಣಕ್ಕೆ ಅವಕಾಶ ಇತ್ತು. ಈ ಜಿಲ್ಲೆಯಲ್ಲಿ ಹೆಣ್ಣು ಮಕ್ಕಳಿಗಾಗಿ ಎರಡು ಮತ್ತು ಗಂಡು ಮಕ್ಕಳಿಗಾಗಿ ಒಂದು ಪ್ರೌಢಶಾಲೆಗಳಿದ್ದುವು. ಜೊತೆಗೆ ಹೆಣ್ಣು ಮಕ್ಕಳಿಗಾಗಿ ಒಂದು ಮಾಧ್ಯಮಿಕ ಶಾಲೆ, ಒಂದು ತರಬೇತಿ ಶಾಲೆ ಬೇರೆ ಇದ್ದುವು. ಈ ಶಾಲೆಗಳು ಒಂದು ವಿಶೇಷ 'ಪಠ್ಯವಸ್ತು'ವನ್ನು ಅನುಸರಿಸುತ್ತಿದ್ದವು. ಬೇರೆ ಸಮೀಕ್ಷಕರಿಂದ ಇವುಗಳ ಮೇಲ್ವಿಚಾರಣೆ ನಡೆಯುತ್ತಿತ್ತು. ಕುಶಲಕಲಾ ತರಬೇತಿ ಮತ್ತು ವಿಜ್ಞಾನಕ್ಕೆ ಈ ಶಾಲೆಗಳಲ್ಲಿ ವಿಶೇಷ ಗಮನ ಕೊಡಲಾಗುತ್ತಿತ್ತು.

ಸರ್ಕಾರವು ಸಂಸ್ಕೃತ ಶಾಲೆಗಳಿಗೆ ಉತ್ತೇಜನ ಕೊಟ್ಟಿತು. ಪೌರಸ್ತ್ಯ ಶಾಲೆಗಳಿಗೆ ಒಬ್ಬ ವಿಶೇಷ ಇನ್ಸ್‌ಪೆಕ್ಟರ್ ಇದ್ದು ಅವರ ಕೆಳಗೆ ಸಮೀಕ್ಷೆ ಮಾಡುವುದಕ್ಕಾಗಿ ಮೇಲ್ವಿಚಾರಕರಿದ್ದರು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇಂಥ 6 ಶಾಲೆಗಳಿದ್ದು ವಿದ್ಯಾರ್ಥಿಗಳ ಸಂಖ್ಯೆ 497 ಇತ್ತು. ಇದಲ್ಲದೆ ಪೆರ್ಡಾಲ, ಕಾರ್ಕಳ ಮತ್ತು ಉಡುಪಿಯಲ್ಲಿ ಸಂಸ್ಕೃತ ಕಾಲೇಜುಗಳಿದ್ದು ವಿದ್ಯಾರ್ಥಿಗಳಿಗೆ ಮದ್ರಾಸ ವಿಶ್ವವಿದ್ಯಾನಿಲಯದ 'ವಿದ್ವಾನ್', 'ಶಿರೋಮಣಿ' ಮತ್ತು ಉಳಿದ ಪ್ರಶಸ್ತಿ (Title) ಪರೀಕ್ಷೆಗಳಿಗಾಗಿ ಶಿಕ್ಷಣ ಕೊಡು ತ್ತಿದ್ದವು. ಬಳ್ಳಾರಿಯಲ್ಲಿ ಅಂಥ ಶಾಲೆಗಳಿರಲಿಲ್ಲ.

ಮಂಗಳೂರಿನಲ್ಲಿ ಶೀಘ್ರಲಿಪಿ, ಮುದ್ರಾಲೇಖನ ಮತ್ತು ವಾಣಿಜ್ಯ ವಿಷಯಗಳನ್ನು ಕಲಿಸುವ, ಸರ್ಕಾರದಿಂದ ಸಹಾಯ ಮತ್ತು ಮಾನ್ಯತೆ ಪಡೆದ, ಒಂದು ವಾಣಿಜ್ಯ ಶಾಲೆ ಇತ್ತು. ಇದಲ್ಲದೆ ವಿದ್ಯಾರ್ಥಿ ಗಳಿಗೆ ಬಡಗಿ ಕೆಲಸ, ಇಂಜಿನಿಯರಿಂಗ್ ಮತ್ತು ಉಳಿದ ಕಸುಬುಗಳನ್ನು ಕಲಿಸುವ ನಾಲ್ಕು ನಾಲ್ಕು ವೃತ್ತಿಶಿಕ್ಷಣ ಶಾಲೆಗಳು ಬಳ್ಳಾರಿ ಮತ್ತು ದಕ್ಷಿಣ ಕನ್ನಡದಲ್ಲಿದ್ದವು.

ಕಡ್ಡಾಯ ಶಿಕ್ಷಣವಿಲ್ಲದ ಪ್ರಾಥಮಿಕ ಶಾಲೆಗಳಲ್ಲಿ ಆರೋಗ್ಯ ಪರೀಕ್ಷೆ ಕಡ್ಡಾಯವಾಗಿರಲಿಲ್ಲ. ಪ್ರೌಢಶಾಲೆಗಳಲ್ಲಿ ಆರೋಗ್ಯ ಪರೀಕ್ಷೆ ಸರ್ಕಾರ ಮತ್ತು ಸಂಬಂಧಪಟ್ಟ ಆಡಳಿತ ಮಂಡಲದವರ ಖರ್ಚಿನಿಂದ ಕಡ್ಡಾಯವಾಗಿ ನಡೆಸಲಾಗುತ್ತಿತ್ತು. ಆದರೆ ಕಾಲೇಜುಗಳಲ್ಲಿ ಈ ದೆಸೆಯಲ್ಲಿ ಏನೂ ನಡೆಯುತ್ತಿರಲಿಲ್ಲ.

ಶಿಕ್ಷಣ ಖಾತೆಯ ಸಂಚಾಲಕರು ಅಧ್ಯಕ್ಷರಾಗಿದ್ದ ಮತ್ತು 40 ಜನ ಸದಸ್ಯರಿಂದ ಕೂಡಿದ 'ಮದ್ರಾಸ

ಪಠ್ಯಪುಸ್ತಕ ಸಮಿತಿಯು ಅನುಮೋದಿತ ಪುಸ್ತಕಗಳ ಪಟ್ಟಿಯನ್ನು ಸಿದ್ಧಮಾಡುತ್ತಿತ್ತು. ಆದರೆ ಪ್ರತಿಯೊಂದು ಶಾಲೆಗೂ ಸರ್ಕಾರ ಪಠ್ಯ ಪುಸ್ತಕಗಳನ್ನು ನೇಮಿಸುತ್ತಿರಲಿಲ್ಲ. ಸಮಿತಿ ಅನುಮೋದಿಸಿದ ಪುಸ್ತಕಗಳ ಪಟ್ಟಿಯಿಂದ ಉತ್ತಮ ಪುಸ್ತಕಗಳನ್ನು ಆರಿಸಿ ಕೊಳ್ಳುವ ಸ್ವಾತಂತ್ರ್ಯ ಮುಖ್ಯೋಪಾಧ್ಯಾಯರಿಗೂ ಸಂಬಂಧಪಟ್ಟ ಆಡಳಿತ ಮಂಡಲಕ್ಕೂ ಇತ್ತು.

ಸ್ಥಳೀಯ ಮಂಡಲಿಗಳು ಮತ್ತು ಪೌರಸಮಿತಿಗಳು ಪ್ರಾಥಮಿಕ ಶಾಲೆಗಳ ಪಠ್ಯಪುಸ್ತಕಗಳ ಆಯ್ಕೆಗಾಗಿ ಪ್ರತ್ಯೇಕವಾದ 'ಸ್ಥಾಯಿ ಸಮಿತಿ'ಗಳನ್ನು ರಚಿಸಿಕೊಂಡಿದ್ದವು. ಪಠ್ಯಪುಸ್ತಕಗಳನ್ನು ನೇಮಿಸುವುದರಲ್ಲಿ ಸ್ಪಷ್ಟವಾದ ಏಕರೂಪತೆ ಇರಲಿಲ್ಲ. ಆದರೆ ಒಮ್ಮೆ ಪಠ್ಯಪುಸ್ತಕಗಳೆಂದು ಸ್ವೀಕೃತವಾದ ಪುಸ್ತಕಗಳನ್ನು ಮೂರು ವರ್ಷಗಳ ವರೆಗೆ ಬದಲಾಯಿಸಲು ಬರುತ್ತಿರಲಿಲ್ಲ.

ಮೂಲ ಲೇಖಕರು : ಶ್ರೀ ಬಿ.ವಿ. ರಾಮನ್
ಅನುವಾದಕರು : ಶ್ರೀ ಶಿವಶರಣಪ್ಪ

# ಹೈದರಾಬಾದ ಕರ್ಣಾಟಕ

ಹೈದರಾಬಾದ ಕರ್ಣಾಟಕವೆಂದು ಸಾಧಾರಣವಾಗಿ ಕರೆಯಲಾಗುವ ಪ್ರದೇಶವು ಮುಖ್ಯವಾಗಿ ಗುಲ್ಬರ್ಗ ರಾಯಚೂರು ಮತ್ತು ಬೀದರ್ ಈ ಮೂರು ಜಿಲ್ಲೆಗಳನ್ನೊಳಗೊಂಡು, 1956ರ ವರೆಗೆ ಹಳೆಯ ಹೈದರಾಬಾದ ಸಂಸ್ಥಾನದ ಒಂದು ಭಾಗವಾಗಿತ್ತು. ಉಸ್ಮಾನಾಬಾದ, ನಾಂದೇಡ ಮೆಹಬೂಬ ನಗರ ಮುಂತಾದ ನೆರೆಜಿಲ್ಲೆಗಳಲ್ಲಿರುವ ಕೆಲವು ಜನರ ಮಾತೃಭಾಷೆ ಕೂಡ ಕನ್ನಡವಾಗಿದೆ. ಆದರೆ ವ್ಯಾವಹಾರಿಕವಾಗಿ ಮೂರೇ ಜಿಲ್ಲೆಗಳನ್ನು ಹೈದರಾಬಾದ ಕರ್ಣಾಟಕವೆಂದು ಪರಿಗಣಿಸಲಾಗುತ್ತಿತ್ತು-ಅದೂ ಕೂಡ, 20ನೆಯ ಶತಮಾನದ ಮೂರನೆಯ ದಶಕದಿಂದ ಆಡಳಿತ ದೃಷ್ಟಿಯಿಂದ ಸರ್ಕಾರವು ಹೈದರಾಬಾದ ಪ್ರಾಂತವನ್ನು "ತೆಲಂಗಾಣ" ಮತ್ತು "ಮರಾಠವಾಡ" ಎಂದು ಎರಡು ಸ್ಥೂಲವಾದ ಭಾಗಗಳಲ್ಲಿ ವಿಂಗಡಿಸಿತ್ತು. ಹೈದರಾಬಾದ ಕರ್ಣಾಟಕವು ಮರಾಠವಾಡದ ಒಂದು ಭಾಗವಾಗಿತ್ತು. ಆದರೆ ಆ ಮೇಲೆ ಗುಲಬರ್ಗ, ರಾಯಚೂರು ಮತ್ತು ಬೀದರ್ ಈ ಜಿಲ್ಲೆಗಳನ್ನು ಹೈದರಾಬಾದ ಕರ್ಣಾಟಕ ವೆಂದು ಕರೆಯಲಾಯಿತು. ಈ ಮೂರು ಜಿಲ್ಲೆಗಳಲ್ಲೂ ಮರಾಠಿ, ತೆಲುಗು ಮತ್ತು ಉರ್ದು ಮುಂತಾದ ಬೇರೆ ಬೇರೆ ಭಾಷೆಗಳನ್ನು ಮಾತೃಭಾಷೆಯಾಗಿ ಉಳ್ಳ ಜನರು ವಾಸಿಸುತ್ತಿದ್ದರು. ಇದರಿಂದ ಕೊನೆಗೆ ಭಾಷಾವಾರು ಪ್ರಾಂತರಚನೆಯ ಕಾಲದಲ್ಲಿ ಈ ಜಿಲ್ಲೆಗಳನ್ನು ವಿಭಜಿಸಿ, ಜನರು ಮಾತನಾಡುವ ಭಾಷೆಯನ್ನು ಅನುಲಕ್ಷಿಸಿ, ಮಹಾರಾಷ್ಟ್ರ ಅಥವಾ ಆಂಧ್ರಕ್ಕೆ ಆಯಾ ತಾಲೂಕುಗಳು ಸೇರಲು ಅನುಮತಿ ಕೊಡುವಂತಾಯಿತು.

ಅನೇಕ ಸ್ಥಳಗಳಲ್ಲಿ ಪ್ರಾಚೀನ ಭಾರತೀಯ ಮಾದರಿಯ ದೇಶೀ ಶಾಲೆಗಳಿದ್ದವು. ಇಂಥ ಶಾಲೆಗಳು ನಡೆಯುತ್ತಿದ್ದ ಸುರಪುರ, ಗದ್ವಾಲ್ ಮುಂತಾದ ಸ್ಥಳಗಳಲ್ಲಿ ಸಾಮಾನ್ಯವಾಗಿ ಶಿಕ್ಷಕರಿಗೆ ಅಲ್ಲಿಯ ಜನರಿಂದ ಪದಾರ್ಥಗಳ ರೂಪದಲ್ಲಿ ಸಂಬಳ ಕೊಡಲಾಗುತ್ತಿತ್ತು. ಆಸಕ್ತ ವಿದ್ಯಾರ್ಥಿಗಳಿಗೆ, ಆ ಕಾಲದಲ್ಲಿ ಪ್ರಚಲಿತ ವಾಗಿದ್ದ ವಿವಿಧ ವಿಷಯಗಳನ್ನು ಕಲಿಸಿಕೊಡಲು ಶಿಕ್ಷಣದಲ್ಲಿ ಆಸಕ್ತಿಯಿದ್ದ ಮತ್ತು ತಾವೇ ವಿದ್ಯಾಪರಿಣತ ರಾದ ಅರಸರು ಮತ್ತು ಶ್ರೀಮಂತರು ವಿದ್ಯಾವಂತರಿಗೆ ಭೂಮಿ ಮತ್ತು ಹಣವನ್ನು ಮಂಜೂರು ಮಾಡುತ್ತಿದ್ದರು.

ರಾಜಧಾನಿಯಾದ ಹೈದರಾಬಾದ ಪಟ್ಟಣದಲ್ಲಿ 1854ರಲ್ಲಿ 'ದಾರುಲ್ ಉಲೂಮ್' (ಪೌರಸ್ತ್ಯ ಶಿಕ್ಷಣ ಸಂಸ್ಥೆ) ಎಂಬ ಶಾಲೆಯನ್ನು ಪ್ರಾರಂಭಿಸಿದಾಗ ಸಂಸ್ಥಾನದ ಶಿಕ್ಷಣ ಪದ್ಧತಿ ಪ್ರಾರಂಭವಾಯಿತು.

1859ರಲ್ಲಿ ಪ್ರತಿಯೊಂದು ತಾಲೂಕಿನಲ್ಲಿ ಒಂದು ಫಾರಸಿ ಭಾಷೆಯ ಮತ್ತೊಂದು ಪ್ರದೇಶ ಭಾಷೆಯ ಶಾಲೆ ತೆರೆಯಬೇಕೆಂದು ಆಜ್ಞೆ ಹೊರಡಿಸಲಾಯಿತು. ಶಿಕ್ಷಣವು ಸಂಪೂರ್ಣವಾಗಿ ಕಂದಾಯ ಇಲಾಖೆಯ ಅಧಿಕಾರಿಗಳ ವಶದಲ್ಲಿದ್ದುದರಿಂದ ಯಥೋಚಿತವಾದ ಗಮನ ಪಡೆಯಲಿಲ್ಲ. 1869-70ರಲ್ಲಿ ಶಿಕ್ಷಣಖಾತೆಯನ್ನು ಸೃಷ್ಟಿಸಲಾಯಿತು. 1871-72ರಲ್ಲಿ ಇದರ ಪುನರ್ವ್ಯವಸ್ಥೆ ಮಾಡಲಾಯಿತು. ವಿಧಿನಿಯಮಗಳನ್ನು ರಚಿಸಲಾಯಿತು ಮತ್ತು ಶಾಲೆಗಳ ಮೇಲ್ವಿಚಾರಣೆ ಮಾಡಲು ಜಿಲ್ಲೆಗಳಲ್ಲಿ ಐದು ಜನ ಡೆಪ್ಯುಟಿ ಇನ್ಸ್‌ಪೆಕ್ಟರುಗಳನ್ನು ನೇಮಿಸಲಾಯಿತು.

1875–76 ರಲ್ಲಿ ಗುಲ್ಬರ್ಗದಲ್ಲಿ ಆಂಗ್ಲದೇಶೀ ಭಾಷಾ ಶಾಲೆಯೊಂದನ್ನು (Anglo-Vernacular School) ತೆರೆಯಲಾಯಿತು. 1884 ರಲ್ಲಿ ದಿವಂಗತ ಹಿಸ್‌ಹೈನೆಸ್ ನವಾಬ ಮೀರ್ ಮೆಹಬೂಬ ಅಲಿಖಾನ್ ಬಹಾದೂರರವರು ಶಿಕ್ಷಣದ ಪ್ರಸರಣದಲ್ಲಿ ಹೆಚ್ಚಿನ ಆಸಕ್ತಿಯನ್ನು ತೋರಿಸಿ ಹತ್ತುಸಾವಿರ ಮತ್ತು ಅದಕ್ಕೂ ಹೆಚ್ಚಿನ ಜನಸಂಖ್ಯೆಯುಳ್ಳ ಸ್ಥಳದಲ್ಲಿ ಒಂದು ಆಂಗ್ಲ-ದೇಶೀಭಾಷಾ ಶಾಲೆಯನ್ನು ತೆರೆಯಬೇಕೆಂದು ಆಜ್ಞೆ ಮಾಡಿದರು. ಪ್ರತಿಯೊಂದು 'ಸುಭಾ'ದಲ್ಲಿ ಒಂದು ಪ್ರೌಢಶಾಲೆ ಮತ್ತು ಹೆಚ್ಚು ಜನಸಂಖ್ಯೆಯುಳ್ಳ ಪ್ರತಿಯೊಂದು ಹಳ್ಳಿಯಲ್ಲಿ ಒಂದು ಪ್ರಾಥಮಿಕ ಶಾಲೆ ತೆರೆಯಲಾಯಿತು. 1885–86 ರಲ್ಲಿ ಗುಲ್ಬರ್ಗದ ಆಂಗ್ಲ-ದೇಶೀಯ ಶಾಲೆಯ ಸ್ಥಾನಮಾನವನ್ನು ಪ್ರೌಢಶಾಲೆಗೆ ಏರಿಸಲಾಯಿತು. 1895–96ರಲ್ಲಿ ಬೀದರಿನ ಆಂಗ್ಲದೇಶೀಯ ಶಾಲೆಯ ಸ್ಥಾನಮಾನವನ್ನು ಪ್ರೌಢಶಾಲೆಗೆ ಏರಿಸಲಾಯಿತು. ಆ ವರೆಗೆ ಕೇವಲ ರಾಜಧಾನಿಗೆ ಮಾತ್ರ ಸೀಮಿತವಾಗಿದ್ದ 'ಸಹಾಯಕ ಅನುದಾನ' ಪದ್ಧತಿಯನ್ನು ಜಿಲ್ಲೆಗಳಿಗೂ ವಿಸ್ತರಿಸಲಾಯಿತು.

1885–87 ರಲ್ಲಿ ರಾಯಚೂರು ಮತ್ತು ಸುರಪುರಗಳಲ್ಲಿ ಮಾಧ್ಯಮಿಕ ಶಾಲೆಗಳನ್ನು ಸ್ಥಾಪಿಸಲಾಯಿತು.

ಕರ್ಣಾಟಕದ ಜಿಲ್ಲೆಗಳಲ್ಲಿ ಶಿಕ್ಷಣದ ಮಾಧ್ಯಮ ಮರಾಠಿಯಾಗಿತ್ತು. ಈ ಜಿಲ್ಲೆಗಳಲ್ಲಿ ಇನ್ನು ಮುಂದೆ ಶಿಕ್ಷಣದ ಮಾಧ್ಯಮ ಕನ್ನಡವಾಗಬೇಕೆಂದು 1887–88 ರಲ್ಲಿ ಆಜ್ಞೆ ಹೊರಡಿಸಲಾಯಿತು.

1891 ರಲ್ಲಿ ರಾಜ್ಯಮಟ್ಟದ ಮಾಧ್ಯಮಿಕ ಶಾಲಾ ಪರೀಕ್ಷೆಯನ್ನು ಪ್ರಾರಂಭಿಸಲಾಯಿತು. ಶಾಲೆಗಳ ಮೇಲ್ವಿಚಾರಣೆಗಾಗಿ ಪ್ರತಿಯೊಂದು ಜಿಲ್ಲೆಗೆ ಒಬ್ಬ ಸಹಾಯಕ ಸಮೀಕ್ಷಾ ಅಧಿಕಾರಿ (Assistant Inspector of Schools) ಯನ್ನು ನೇಮಿಸಲಾಯಿತು.

1903 ರಲ್ಲಿ ಹೈದರಾಬಾದ ಕರ್ಣಾಟಕದಲ್ಲಿ ವಿದ್ಯಾಸಂಸ್ಥೆಗಳು ಈ ಕೆಳಗೆ ಕಾಣಿಸಿದಂತಿದ್ದವು :

| ಜಿಲ್ಲಾ | | ಪ್ರಾಥಮಿಕಶಾಲೆಗಳು | ಮಾಧ್ಯಮಿಕಶಾಲೆಗಳು | ಪ್ರೌಢ ಶಾಲೆಗಳು |
|---|---|---|---|---|
| ಗುಲ್ಬರ್ಗ | .... | 43 | 1 | 1 |
| ಬೀದರ್ | .... | 30 | 2 | 1 |
| ರಾಯಚೂರು | .... | 31 | 2 | — |
| ಒಟ್ಟು | .... | 104 | 5 | 2 |

ಮೊದಲನೆಯ ಮಹಾಯುದ್ಧದ ತರುವಾಯ ಹೈದರಾಬಾದ ಸಂಸ್ಥಾನವು ಶಿಕ್ಷಣ ಕ್ಷೇತ್ರದಲ್ಲಿ ಒಳ್ಳೆಯ ಪ್ರಗತಿಯನ್ನು ಸಾಧಿಸಿತು. ಆದರೆ ಹೆಚ್ಚು ಶಿಕ್ಷಣ ಸಂಸ್ಥೆಗಳು ರಾಜಧಾನಿಯಾದ ಹೈದರಾಬಾದಿನಲ್ಲಿಯೇ ಇದ್ದವು.

1916–17 ರಲ್ಲಿ ಹೈದರಾಬಾದ ಸಂಸ್ಥಾನದ ಸಲುವಾಗಿ ಉರ್ದುಭಾಷಾ ಮಾಧ್ಯಮ ಹಾಗೂ ಪರೀಕ್ಷೆಗಳನ್ನುಳ್ಳ ಕಾಲ, ವಿಜ್ಞಾನ, ವಾಣಿಜ್ಯ, ಇಂಜಿನಿಯರಿಂಗ್ ಮತ್ತು ವೈದ್ಯಕೀಯ ವಿಭಾಗಗಳಿಂದ ಕೂಡಿದ 'ಉಸ್ಮಾನಿಯಾ ವಿಶ್ವವಿದ್ಯಾನಿಲಯ'ವೆಂಬ ವಿಶ್ವವಿದ್ಯಾನಿಲಯವನ್ನು ಪ್ರಾರಂಭಿಸಲಾಯಿತು. ಈ ಎಲ್ಲ ಕಾಲೇಜುಗಳು ಹೈದರಾಬಾದಿನಲ್ಲಿಯೇ ಇದ್ದವು. 1931–32 ರಲ್ಲಿ ಗುಲ್ಬರ್ಗದಲ್ಲಿದ್ದ ಇಂಗ್ಲಿಷ್

ಮಾಧ್ಯಮ ಮತ್ತು ಉರ್ದು ಮಾಧ್ಯಮದ ಎರಡೂ ಸರ್ಕಾರಿ ಹೈಸ್ಕೂಲುಗಳನ್ನು ಒಂದುಗೂಡಿಸ ಲಾಯಿತು ಮತ್ತು ಒಂದು ಇಂಟರ್‌ಮೀಡಿಯಟ್ ಕಾಲೇಜು ಪ್ರಾರಂಭ ಮಾಡಲಾಯಿತು. ತರುವಾಯ ಅದನ್ನು ಬಿ.ಎ., ಬಿ.ಎಸ್‌ಸಿ., ವರೆಗೆ ಶಿಕ್ಷಣ ಕೊಡುವ ಡಿಗ್ರಿ ಕಾಲೇಜಿನ ಮಟ್ಟಕ್ಕೆ ಏರಿಸಲಾಯಿತು. 1947ರ ವರೆಗೆ ಹೈದರಾಬಾದ ಕರ್ಣಾಟಕದಲ್ಲಿ ಇದೊಂದೇ ಉಚ್ಚ ಶಿಕ್ಷಣದ ಸಂಸ್ಥೆ ಆಗಿತ್ತು.

ಹೈದರಾಬಾದಿನಲ್ಲಿ ಉಸ್ಮಾನಿಯಾ ವಿಶ್ವವಿದ್ಯಾನಿಲಯದ ಸ್ಥಾಪನೆ ಸಂಸ್ಥಾನದಲ್ಲೆಲ್ಲ ಪ್ರೌಢಶಿಕ್ಷಣಕ್ಕೆ ಹುರುಪನ್ನು ಕೊಟ್ಟಿತು. ಆಂಗ್ಲ ದೇಶೀಭಾಷಾ ಶಾಲೆಗಳನ್ನು ಉರ್ದು ಮಾಧ್ಯಮದ ಉಸ್ಮಾನಿಯಾ ಹೈಸ್ಕೂಲುಗಳಾಗಿ ಪರಿವರ್ತನಗೊಳಿಸಲಾಯಿತು. ಈ ಶಾಲೆಗಳಲ್ಲಿ ಉಸ್ಮಾನಿಯಾ ವಿಶ್ವವಿದ್ಯಾನಿಲಯದ ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಗಾಗಿ ಶಿಕ್ಷಣ ನೀಡಲಾಗುತ್ತಿತ್ತು. 1 911 ರಲ್ಲಿ ಪ್ರಾರಂಭವಾದ ಎಸ್.ಎಸ್.ಎಲ್.ಸಿ., (High School leaving Certificate) ಬೋರ್ಡಿನ ಪರೀಕ್ಷೆಗಾಗಿ ಶಿಕ್ಷಣ ನೀಡುವ ಇಂಗ್ಲಿಷ್ ಮಾಧ್ಯಮದ ಸರ್ಕಾರಿ 'ಇಂಗ್ಲಿಷ್ ಹೈಸ್ಕೂಲು'ಗಳ ಸಂಖ್ಯೆಯು ಬೆಳೆಯಿತು. ಈ ಇಂಗ್ಲಿಷ್ ಹೈಸ್ಕೂಲುಗಳು ಹೈದರಾಬಾದಿನಲ್ಲಿದ್ದ ಮತ್ತು ಮದ್ರಾಸ ವಿಶ್ವವಿದ್ಯಾನಿಲಯಕ್ಕೆ ಸೇರಿದ ಸಂಯೋಜಿತ ನೈಜಾಮ ಕಾಲೇಜಿಗೆ ಪೋಷಕವಾಗಿದ್ದವು. ಅನಂತರ ಪ್ರೌಢಶಿಕ್ಷಣ ಮಂಡಲಿ ಸಂಘಟಿಸ ಲಾಯಿತು. ಮತ್ತು ಎಚ್.ಎಸ್.ಎಲ್.ಸಿ. (High School Leaving Certificate) ಮತ್ತು ಉಸ್ಮಾನಿಯಾ ಮೆಟ್ರಿಕ್ಯುಲೇಶನ್ ಪಾಠ ಪ್ರಣಾಳಿಕೆಗಳನ್ನು ಎಚ್. ಎಸ್. ಸಿ. (Higher Secondary Certificate Examination) ಎಂಬ ಏಕಪಾಠ ಪ್ರಣಾಳಿಕೆಯಲ್ಲಿ ವಿಲೀನಗೊಳಿಸಲಾಯಿತು. ಇಂಗ್ಲಿಷ್ ಮತ್ತು ಉರ್ದು ಇವೆರಡೂ ಇದರ ಮಾಧ್ಯಮಗಳಾದವು.

### ಹೈದರಾಬಾದಿನಲ್ಲಿ ಶಿಕ್ಷಣದ ರೂಪರೇಖೆ

| ವರ್ಗಗಳು | ಅವಧಿ | ಮಾಧ್ಯಮ |
|---|---|---|
| ಪ್ರಾಥಮಿಕ I—IV | 4 ವರ್ಷ | ಮಕ್ಕಳ ಮಾತೃಭಾಷೆ |
| ಮಾಧ್ಯಮಿಕ V—VII | 3 ವರ್ಷ | ಇಂಗ್ಲಿಷ್ ಅಥವಾ ಉರ್ದು |
| ಹೈಸ್ಕೂಲು VIII—X | 3 ವರ್ಷ | ಇಂಗ್ಲಿಷ್ ಅಥವಾ ಉರ್ದು |
| ಕಾಲೇಜಿನಲ್ಲಿ 1 ನೆಯ ಡಿಗ್ರಿ ಕೋರ್ಸ್ | 2 ವರ್ಷ ಇಂಟರ್ ಮೀಡಿಯಟ್ | ನೈಜಾಮಕಾಲೇಜಿನಲ್ಲಿ ಇಂಗ್ಲಿಷ್ |
| | 2 ವರ್ಷ ಡಿಗ್ರಿ ಕೋರ್ಸ್ | ಉಸ್ಮಾನಿಯಾ ವಿಶ್ವವಿದ್ಯಾನಿಲಯದಲ್ಲಿ ಉರ್ದು |

1921–22 ರಲ್ಲಿ ರಾಜ್ಯದಲ್ಲಿ ಪ್ರಾಥಮಿಕ ಶಿಕ್ಷಣ ಉಚಿತಮಾಡಲಾಯಿತು.

ಪ್ರಾಥಮಿಕ ಶಿಕ್ಷಣದ ಕ್ಷೇತ್ರದಲ್ಲಿ ನಿಶ್ಚಲ ಪ್ರಗತಿಯನ್ನು ಸಾಧಿಸಲಾಯಿತು ಮತ್ತು 1932ರ ಷ್ಟರಲ್ಲಿ ಪ್ರತಿಯೊಂದು ತಾಲೂಕಿನಲ್ಲಿ ಒಂದು ಮಾಧ್ಯಮಿಕ ಶಾಲೆ ತೆರೆಯಲಾಯಿತು. ಯಾದಗಿರಿ (ಯಾದಗೀರ್—ಗುಲ್ಬರ್ಗಜಿಲ್ಲೆ), ರಾಯಚೂರು ಮತ್ತು ಬೀದರಿನಲ್ಲಿ ಉಸ್ಮಾನಿಯಾ ಹೈಸ್ಕೂಲು ಗಳಿದ್ದವು.

1939 ರಲ್ಲಿ ರಾಯಚೂರು ಜಿಲ್ಲೆಯ ಕೊಪ್ಪಳದಲ್ಲಿ ಅನಂತರ ಅದೇ ಜಿಲ್ಲೆಯ ಗಂಗಾವತಿಯಲ್ಲಿ ಒಂದೊಂದು ಹೈಸ್ಕೂಲು ತೆರೆಯಲಾಯಿತು. ಗುಲ್ಬರ್ಗ ಜಿಲ್ಲೆಯ ಸುರಪುರದ ಮಾಧ್ಯಮಿಕ ಶಾಲೆಯನ್ನು

1947 ರ ಸುಮಾರಿನಲ್ಲಿ ಉಸ್ಮಾನಿಯಾ ಹೈಸ್ಕೂಲಾಗಿ ಮಾರ್ಪಡಿಸಲಾಯಿತು. ಪ್ರಾಥಮಿಕಶಾಲಾ ಶಿಕ್ಷಕರಿಗಾಗಿ ಒಂದು ವಿಶೇಷ ತರಬೇತಿ ಪಾಠ ಪ್ರಣಾಳಿಕೆ ಇತ್ತು. ಇದನ್ನು 1923–24 ರಲ್ಲಿ ರದ್ದು ಗೊಳಿಸಲಾಯಿತು.

ಈ ವಿಭಾಗದಲ್ಲಿ ಮೆಟ್ರಿಕ್ಯುಲೇಟ್ ಆದ ಜನರ ಅಭಾವವಿದ್ದ ಕಾರಣ ಮಿಡ್ಲ್‌ಸ್ಕೂಲ್ ಪರೀಕ್ಷೆ ಪಾಸಾದ ಅಭ್ಯರ್ಥಿಗಳನ್ನು ಪ್ರಾಥಮಿಕ ಶಾಲೆಯ ಶಿಕ್ಷಕರನ್ನಾಗಿ ನೇಮಿಸಲಾಗುತ್ತಿತ್ತು. ಹೈದರಾಬಾದಿನ 'ಗೌರ್ನ್‌ಮೆಂಟ್ ನಾರ್ಮಲ್ ಸ್ಕೂಲಿ'ನಲ್ಲಿ ಮೊದಲು ಕೇವಲ ಉರ್ದು ಮತ್ತು ತೆಲುಗು ವರ್ಗಗಳಿದ್ದವು. ಆದರೆ 1889–90 ರಲ್ಲಿ ಅದಕ್ಕೊಂದು ಕನ್ನಡವರ್ಗ ಸೇರಿಸಲಾಯಿತು.

ಕೆಲವು ಆಯ್ದ ಹಳ್ಳಿಗಳಲ್ಲಿ ಪ್ರಾಥಮಿಕ ಶಾಲಾಶಿಕ್ಷಕರು ಶಾಲೆಯ ಸಮಯದ ಅನಂತರ ವಯಸ್ಕರಿಗಾಗಿ ಅಕ್ಷರಾಭ್ಯಾಸದ ವರ್ಗಗಳನ್ನು ನಡೆಸಬೇಕೆಂದು ಆದೇಶವಿತ್ತು. ತಮ್ಮ ಸಮೀಕ್ಷೆಯ ಸಂಚಾರದಲ್ಲಿ ಡೆಪ್ಯುಟಿ ಇನ್ಸ್‌ಪೆಕ್ಟರು ಈ ವಯಸ್ಕರನ್ನು ಪರೀಕ್ಷಿಸುತ್ತಿದ್ದರು. ಇವರು ಸಂಪಾದಿಸಿದ ವಿದ್ಯೆಗನುಸಾರವಾಗಿ ಶಿಕ್ಷಕರಿಗೆ ಅಲ್ಪಸ್ವಲ್ಪ ಸಂಭಾವನೆ ಕೊಡಲಾಗುತ್ತಿತ್ತು.

ಮೂಲ ಲೇಖಕರು : ಶ್ರೀ ನಾರಾಯಣರಾವ್ ಜೋಶಿ
ಅನುವಾದಕರು : ಶ್ರೀ ಶಿವಶರಣಪ್ಪ

# ಕರ್ನಾಟಕದ ಪತ್ರಿಕೋದ್ಯಮದ ಇತಿಹಾಸ

ಟಿಪ್ಪುವಿನ ಪತನ, ದಕ್ಷಿಣ ಭಾರತದಲ್ಲಿ ಬ್ರಿಟಿಷರ ಆಡಳಿತದ ಸುಸಂಘಟನೆ, ಇವು ಆದ ಮೇಲೆ ಕನ್ನಡ ವನ್ನು ಮಾತನಾಡುವ ಸೀಮೆ ಐದು ಆಡಳಿತ ಪ್ರದೇಶಗಳಿಗೆ ಹಂಚಿ ಹೋಯಿತು : ಬೊಂಬಾಯಿ, ಮದರಾಸು, ಕೊಡಗು, ಮೈಸೂರು, ಹೈದರಾಬಾದು. ಇವುಗಳಲ್ಲಿ ಕೊಡಗು, ಮೈಸೂರು ಎರಡರಲ್ಲೇ ಹೆಚ್ಚಾಗಿ ಕನ್ನಡ ಮಾತಾಡುವ ಜನ ಇದ್ದದ್ದು. ಇವಲ್ಲದೆ ಇನ್ನು ಹದಿನಾಲ್ಕು ಸಂಸ್ಥಾನಗಳು ಇದ್ದವು. ಅಲ್ಲಿನ ಪ್ರಜೆಗಳು ಕನ್ನಡ ಮಾತಾಡಿದರೂ ರಾಜರು ಅವರ ಮೇಲೆ ಮರಾಠಿಯನ್ನು ಹೇರಿದ್ದರು. ಮರಾಠಿಯು ಭಾಷೆ ರಾಜರದು, ಆಡಳಿತಗಾರರದು. ಬ್ರಿಟಿಷ್ ಆಡಳಿತದ ಎಲ್ಲಾ ಪ್ರದೇಶಗಳಲ್ಲೂ ಕನ್ನಡ ಜನರದು ಅಲ್ಪ ಸಂಖ್ಯೆ. ಆದ್ದರಿಂದ ಅವರಿಗೆ ಸರ್ವ ಸಾಮಾನ್ಯ ಸಾರ್ವಜನಿಕ ಅಭಿಪ್ರಾಯವನ್ನು ತಮ್ಮ ಹಿತಕ್ಕೆ ಸಂಬಂಧಿಸಿದ ಯಾವ ವಿಷಯಗಳಲ್ಲಿಯೂ ರೂಪಿಸಲು ಸಾಧ್ಯವಿರಲಿಲ್ಲ,

ಕನ್ನಡದಲ್ಲಿ ಪತ್ರಿಕೋದ್ಯಮ ಮೈಸೂರಿನಲ್ಲೂ ಬೊಂಬಾಯಿ ಪ್ರಾಂತ್ಯದ ನಾಲ್ಕು ಜಿಲ್ಲೆಗಳಲ್ಲೂ ಬೇಗ ವಿಕಾಸಗೊಂಡಿತು. ಆದರೆ ಪತ್ರಿಕೋದ್ಯಮದ ಬಿತ್ತನೆ ಆದಕ್ಕಿಂದ ಮೊದಲು ಬಳ್ಳಾರಿ ಜಿಲ್ಲೆಯಲ್ಲೂ ಮಂಗಳೂರು ಜಿಲ್ಲೆಯಲ್ಲೂ ಆಗಿತ್ತು. ಆಗ ಅವು ಮದರಾಸು ಪ್ರಾಂತ್ಯದಲ್ಲಿ ಇದ್ದವು. ಈ ಸ್ಥಳಗಳಲ್ಲಿ ಇದ್ದ ಜರ್ಮನ್ ಪಾದರಿಗಳು ತಮ್ಮ ಮತ ಪ್ರಚಾರಕ್ಕಾಗಿ ಪತ್ರಿಕೆಗಳನ್ನು ಪ್ರಾರಂಭಿಸಿದರು. ಕನ್ನಡಿಗರನ್ನು ಜರ್ಮನಿಗೆ ಕಳುಹಿಸಿ ಕನ್ನಡ ಅಕ್ಷರಗಳನ್ನು ಎರಕ ಹುಯ್ಯುವ ಕಾರ್ಯವನ್ನು ಕಲಿತು ಬರಲು ಅವಕಾಶ ಮಾಡಿದರು.

### ಹಳೆಯ ಮೈಸೂರು ಸಂಸ್ಥಾನದಲ್ಲಿ ಮುದ್ರಣಾಲಯ

ಮೈಸೂರಿನಲ್ಲಿ ಮೊತ್ತಮೊದಲು ಮುದ್ರಣಾಲಯ ಪ್ರಾರಂಭ ಆದದ್ದು 1950 ರಲ್ಲಿ. ಮೈಸೂರಿನಲ್ಲಿ ಪ್ರಕಟವಾದ ಮೊದಲನೆ ವೃತ್ತಪತ್ರಿಕೆ 'ಬೆಂಗಳೂರು ಹೆರಾಲ್ಡ್'. 1859 ರಲ್ಲಿ ಹುಟ್ಟಿದ ಇದಕ್ಕೆ ಜೇಮ್ಸ್ ಸಂಪಾದಕ. ಒಂದು ಇಂಗ್ಲಿಷ್-ಕನ್ನಡ ಪತ್ರಿಕೆಯೂ ಇತ್ತು. ಅದು ಭಾಷ್ಯಾಚಾರಿಯ ಸಂಪಾದಕತ್ವದಲ್ಲಿ 'ಮೈಸೂರು ವೃತ್ತಾಂತ ಬೋಧಿನಿ.' 1862 ರಲ್ಲಿ 'ಅರುಣೋದಯ' ಎಂಬ ಇಂಗ್ಲಿಷ್–ಕನ್ನಡ ಪತ್ರಿಕೆ ಶ್ರೀ ಬಿ. ರೈಸ್ ಅವರ ಸಂಪಾದಕತ್ವದಲ್ಲಿ ಆರಂಭವಾಯಿತು. 1863ರಲ್ಲಿ ಬೆಂಗಳೂರಿನಿಂದ 'ಕಾಸಿಮ್ ಆಲ್-ಅಕ್ಬಾರ್' ಎಂಬ ಒಂದು ಹಿಂದುಸ್ತಾನಿ ಪತ್ರಿಕೆ ಪ್ರಕಟವಾಗುತ್ತಿತ್ತು. ಇದರ ಸಂಪಾದಕ, ಕವಿ-ಪಂಡಿತ ಜನಾಬ್ ಮುಹಮ್ಮದ್ ಖಾಸೀಂ 'ಘಾಂ'. ಕೈಯಲ್ಲಿ ಬರೆದು ಕೈಯಿಂದಲೇ ತಿರುಗಿಸುತ್ತಿದ್ದ ಚಿಕ್ಕ ಲಿತೋ ಮುದ್ರಣಾಲಯದಿಂದ ಹೊರಡುತ್ತಿದ್ದ ಸಣ್ಣ ಪತ್ರಿಕೆ ಇದು. ಒಂದೆರಡು ನೂರು ಪ್ರತಿ ಅಚ್ಚಾದರೆ ಹೆಚ್ಚು. ಪ್ರಾರಂಭಕಾಲದ ಅನೇಕ ಪತ್ರಿಕೆಗಳಿಗೆ ಇದ್ದ ಹಾಗೆ ಇದಕ್ಕೂ ಅಲ್ಪ ಆಯುಸ್ಸು.

ಮೊತ್ತಮೊದಲನೆಯ ಕನ್ನಡ ವಾರ ಪತ್ರಿಕೆ 'ಕರ್ನಾಟಕ ಪ್ರಕಾಶಿಕಾ' 1865ರಲ್ಲಿ ಪ್ರಕಟವಾಯಿತು. ಪಂಡಿತರೂ ವಿದ್ವಾಂಸರೂ ಅದನ್ನು ನಡೆಸುತ್ತಿದ್ದುದರಿಂದ ಅದರ ಭಾಷೆ ಬಹಳ ಉತ್ತಮವಾಗಿತ್ತು. ಆದರೆ ಅದೂ ಅಲ್ಪಾಯುಷಿಯೇ.

ಮತ್ತೆ 1874ರಲ್ಲಿ ಅದನ್ನು ಪ್ರಸಿದ್ಧ ಸಂಸ್ಕೃತ ವಿದ್ವಾಂಸರಾದ ಟಿ.ಜಿ. ಶ್ರೀನಿವಾಸಾಚಾರ್ಯರು ಕನ್ನಡ ಇಂಗ್ಲೀಷ್ ವಾರ ಪತ್ರಿಕೆಯಾಗಿ ಪುನರುಜ್ಜೀವನ ಮಾಡಿದರು. ಇನ್ನೊಬ್ಬ ಪ್ರಸಿದ್ಧ ಸಂಸ್ಕೃತ ಪಂಡಿತರು ಭಾಷ್ಯಂ ತಿರುಮಲಾಚಾರ್ಯರು ಅದಕ್ಕೆ ಸಂಪಾದಕರು. ಸಂಸ್ಥಾನದ ಒಳಕ್ಕೆ ನುಸುಳಿಕೊಂಡು ಬರುತ್ತಿದ್ದ ಮೈಸೂರೇತರರನ್ನು ವಿರೋಧಿಸಿ ಕೆಲಸ ಮಾಡುತ್ತಿದ್ದ ಮೈಸೂರು ಪಕ್ಷದ ಧೋರಣೆಯನ್ನು ಸಮರ್ಥಿಸುವುದು ಅದರ ನೀತಿ. ಆರ್ಥಿಕ ತಾಪತ್ರಯದಿಂದಾಗಿ ಮತ್ತೆ 1898ರಲ್ಲಿ ಅದು ನಿಂತುಹೋಯಿತು. ಮೈಸೂರು ಸರಕಾರ ಪತ್ರಿಕೆ 'ಮೈಸೂರು ಗಜೆಟ್' 1866ರಲ್ಲಿ ಪ್ರಕಟವಾಗಿ ಇಂಗ್ಲಿಷ್ ಕನ್ನಡ ಎರಡರಲ್ಲೂ ಇನ್ನೂ ನಡೆಯುತ್ತಿದೆ.

1881ರಲ್ಲಿ ಮೈಸೂರನ್ನು ಬ್ರಿಟಿಷ್ ಸರಕಾರ ಹಿಂದಕ್ಕೆ ಕೊಟ್ಟ ಮೇಲೆ ಕನ್ನಡದ ಪತ್ರಿಕೆಗಳಿಗೆ ಒಂದು ಹೊಸ ಚೇತನ ಬಂತು. ಸಾರ್ವಜನಿಕಾಭಿಪ್ರಾಯ ಸ್ವತಂತ್ರವಾಗಿ ಪ್ರಕಟವಾಗತೊಡಗಿತು.

1881ರಿಂದ1 908ರ ವರೆಗೆ ಇಂಗ್ಲೀಷಿನಲ್ಲೂ ಕನ್ನಡದಲ್ಲೂ ಹಲವಾರು ಪತ್ರಿಕೆಗಳು ಮೊದಲಾದವು. ಮೊತ್ತ ಮೊದಲನೆಯ ಕನ್ನಡ ಮಾಸ ಪತ್ರಿಕೆ 'ಹಿತ ಬೋಧಿನಿ' ಮೈಸೂರಿನಲ್ಲಿ 1881ರಲ್ಲಿ ಪ್ರಾರಂಭ ವಾಯಿತು. ಶ್ರೀರಾಮಾನುಜ ಅಯ್ಯಂಗಾರರು ಆದರ ಒಡೆಯರು ಹಾಗೂ ಸಂಪಾದಕರು. ಅದರಲ್ಲಿ ವೈಜ್ಞಾನಿಕ ವಿಷಯದ ಲೇಖನಗಳೂ ಸಾಮಾನ್ಯ ರುಚಿಯ ವಿಷಯದ ಲೇಖನಗಳೂ ಬರುತ್ತಿದ್ದವು. ಉತ್ತಮ ಸಾಹಿತ್ಯ ಗುಣದ ಉಳಿದ ಮಾಸಪತ್ರಿಕೆಗಳು 'ಕಾವ್ಯಮಂಜರಿ' ಹಾಗೂ 'ಗ್ರಂಥಮಾಲೆ'. ಈ ಮಾಸ ಪತ್ರಿಕೆಗಳು ಸಹಜವಾಗಿಯೇ ಎಲ್ಲೋ ಕೆಲವರ ಕೈಗೆ ಹೋಗುತ್ತಿದ್ದವು.

ಮೊದಲನೆಯ ಕನ್ನಡದ ದಿನಪತ್ರಿಕೆ 'ಸೂರ್ಯೋದಯ ಪ್ರಕಾಶಿಕಾ' 1888ರಲ್ಲಿ ಮೈಸೂರಿನಲ್ಲಿ ಬಿ. ನರಸಿಂಗರಾಯರಿಂದ ಸ್ಥಾಪಿತವಾಯಿತು. 1894ರಲ್ಲಿ 'ದೇಶಾಭಿಮಾನಿ' ಎಂಬ ಕನ್ನಡ ವಾರಪತ್ರಿಕೆ ಪ್ರಾರಂಭವಾಯಿತು. ಅದನ್ನು ಶ್ರೀ ಬಿ. ಶ್ರೀನಿವಾಸ ಅಯ್ಯಂಗಾರರು ಸಂಪಾದಿಸುತ್ತಿದ್ದರು. ಸಂಪಾದಕರಿಗೂ ಆಗ ಮೈಸೂರಿನ ದಿವಾನರಾಗಿದ್ದ ಸರ್ ಕೆ. ಶೇಷಾದ್ರಿ ಅಯ್ಯರರಿಗೂ ಕೂಡಿ ನಡೆಯಲಿಲ್ಲ. ಆದ್ದರಿಂದ ಪತ್ರಿಕೆ ಅನೇಕ ಕಷ್ಟಗಳಿಗೆ ಗುರಿಯಾಯಿತು. ಕಟ್ಟಕಡೆಗೆ ಅದು ನಿಂತುಹೋಯಿತು.

ಮೈಸೂರಿನ 'ವೃತ್ತಾಂತ ಪತ್ರಿಕೆ' 1887ರಲ್ಲಿ ಪ್ರಾರಂಭವಾಗಿ ವೆಸ್ಲಿಯನ್ ಮಿಷನ್ ಅವರ ಸಂಸ್ಥಾಪಕತ್ವದಲ್ಲಿ ವಾರಪತ್ರಿಕೆಯಾಗಿ ನಡೆಯಿತು, ರೆ. ಹೆನ್ರಿ ಹೇಗ್ ಅವರು ಇತರ ಪತ್ರಿಕೋದ್ಯಮಿ ಪಾದ್ರಿಗಳ ಜೊತೆಗೆ ಇದನ್ನು ಬೆಳೆಸಿದರು. ಅದರಲ್ಲಿ ವಿವೇಕಯುಕ್ತವಾದ ಒಂದು ವಾರ್ತಾವಾಹಿನಿ ಇತ್ತು. ಅದು ರಚನಾತ್ಮಕ ಸಲಹೆಗಳನ್ನು ಕೊಡುತ್ತಿತ್ತು. ಬಲು ದೀರ್ಘಕಾಲದ ಅಸ್ಖಲಿತ ವೃತ್ತಿಯಲ್ಲಿ ಅದು ಅರ್ಧ ಶತಮಾನಕ್ಕಿಂತ ಹೆಚ್ಚು ಕಾಲ ನಡೆದು 1942ರಲ್ಲಿ ನಿಂತುಹೋಯಿತು.

ಯಜಮಾನ್ ವೀರಬಸಪ್ಪ 1900ರಲ್ಲಿ 'ಸ್ಟಾರ್' ಎಂಬ ಕನ್ನಡ ವಾರಪತ್ರಿಕೆಯನ್ನು ಸ್ಥಾಪಿಸಿದರು. ಅದಕ್ಕೆ ಅನೇಕ ವಿದ್ವಾಂಸರು ಬರೆಯುತ್ತಿದ್ದರು. ಅವರ ವಾರಪತ್ರಿಕೆಯಲ್ಲಿ ಇಂಗ್ಲಿಷ್ ಲೇಖನಗಳನ್ನೂ ಪ್ರಕಟಿಸುತ್ತಿದ್ದರು. ಹಿಂದುಳಿದ ಸಮಾಜಗಳ ಧೋರಣೆಯನ್ನು ಪ್ರತಿಪಾದಿಸುತ್ತಿತ್ತು. ಈ ಪತ್ರಿಕೆ. ಅದರ ಅಗ್ರಲೇಖನಗಳು ಸಾಧಾರಣವಾಗಿ ಶಕ್ತಿವಂತವಾಗಿರುತ್ತಿದ್ದವು. ಅವನ್ನು ಸಾರ್ವಜನಿಕ ವರ್ತುಲಗಳಲ್ಲಿಯೂ ಅಧಿಕಾರಿಗಳ ಗುಂಪುಗಳಲ್ಲಿಯೂ ಚರ್ಚೆ ಮಾಡುತ್ತಿದ್ದರು. ಆದರೂ 'ಮೈಸೂರು ಸ್ಟಾರ್' ಪತ್ರಿಕೆಯಲ್ಲಿ ರಾಷ್ಟ್ರೀಯತೆ ಇರಲಿಲ್ಲ. ಅದರಿಂದಾಗಿ ಅದನ್ನು ನಿಲ್ಲಿಸಬೇಕಾಗಿ ಬಂತು. 'ಮೈಸೂರು ಸ್ಟಾರ್' ಪತ್ರಿಕೆಯ ಕಡೆಯ ದಿನಗಳಲ್ಲಿ ತೊಂಬತ್ತು ವರುಷದ ವೃದ್ಧರಾದ ವಿರೂಪಾಕ್ಷಯ್ಯನವರು ಅದರ ಜೊತೆಗೆ ಹೊಂದಿಕೊಂಡಿದ್ದರು.

ರಾಷ್ಟ್ರೀಯತೆಯು, ದೇಶಭಕ್ತಿಯು, ಪ್ರಜಾಸತ್ತಾತ್ಮಕ ಆದರ್ಶಗಳನ್ನು ಪ್ರಚಾರ ಮಾಡಲು ಎಂ. ವೆಂಕಟಕೃಷ್ಣಯ್ಯನವರು ಕನ್ನಡ ವಾರಪತ್ರಿಕೆ 'ವೃತ್ತಾಂತ ಚಿಂತಾಮಣಿ'ಯನ್ನು 1885ರಲ್ಲಿ ಪ್ರಾರಂಭಿಸಿದರು. ಈ ಆದರ್ಶಗಳಿಗೆ ಮೈಸೂರಿನ ಆಗಿನ ದಿವಾನರಾದ ರಂಗಾಚಾರ್ಲು ಪ್ರೋತ್ಸಾಹ ನೀಡಿದರು. ಈ ಪತ್ರಿಕೆ ಬಹಳ ಯಶಸ್ವಿಯಾಯಿತು. ಆ ಮೇಲೆ ವೆಂಕಟಕೃಷ್ಣಯ್ಯನವರು ಸುಮಾರು ಹತ್ತಕ್ಕಿಂತ ಹೆಚ್ಚು ಪತ್ರಿಕೆಗಳನ್ನು ಇಂಗ್ಲಿಷಿನಲ್ಲಿಯೂ ಕನ್ನಡದಲ್ಲಿಯೂ ಸ್ಥಾಪಿಸಲು ಕಾರಣರಾದರು. 'ಹಿತ ಬೋಧಿನಿ', 'ಉದಂತ-ಚಿಂತಾಮಣಿ' 'ಸಂಪದಭ್ಯುದಯ', 'ಸಾಧ್ವಿ', 'ಪೂರ್ಣ ಸಾಮಾಜಿಕ ಪತ್ರಿಕೆ' ಇವನ್ನು ಕನ್ನಡದಲ್ಲಿಯೂ 'ಮೈಸೂರು ಪೇಟ್ರಿಯಟ್', 'ವೆಲ್ತ್ ಆಫ್ ಮೈಸೂರು', 'ನೇಚರ್‌ಕ್ಯೂರ್', 'ಮೈಸೂರು ಹೆರಾಲ್ಡ್'—ಇವನ್ನು ಇಂಗ್ಲಿಷಿನಲ್ಲಿಯೂ ಪ್ರಾರಂಭಿಸಿದರು. ಇವುಗಳಲ್ಲಿ 'ಮೈಸೂರು ಹೆರಾಲ್ಡ್'—ಪತ್ರಿಕೆ ಜನಪ್ರಿಯವಾಗಿತ್ತು. ಅದಕ್ಕೆ ಸಾಕಷ್ಟು ಒಳ್ಳೆಯ ಪ್ರಚಾರವೂ ಇತ್ತು.

ಇಬ್ಬರು ಸೋದರರನ್ನು—ಎಂ. ಗೋಪಾಲ ಅಯ್ಯಂಗಾರ್ ಮತ್ತು ಎಂ. ಶ್ರೀನಿವಾಸ ಅಯ್ಯಂಗಾರ್ ಎಂಬವರನ್ನು ವೆಂಕಟಕೃಷ್ಣಯ್ಯನವರು ತರಬೇತು ಮಾಡಿದರು. ಆ ಮೇಲೆ ಅವರು ಬೆಂಗಳೂರಿಗೆ ಹೋಗಿ ಅಲ್ಲಿ 'ಕನ್ನಡ ನಡೆಗನ್ನಡಿ' ಎಂಬುದನ್ನು 1885ರಲ್ಲಿ ಸ್ಥಾಪಿಸಿದರು. ಇದು ಜನಪ್ರಿಯ ಕನ್ನಡ ವಾರಪತ್ರಿಕೆ ಆಗಿತ್ತು. ಅದರ ಜೊತೆಗೆ ಒಂದು ಇಂಗ್ಲಿಷ್ ದ್ವಿ ವಾರಪತ್ರಿಕೆಯನ್ನು 'ಮೈಸೂರು ಸ್ಟಾಂಡರ್ಡ್' ಎಂಬ ಹೆಸರಿನಿಂದ ಪ್ರಾರಂಭಿಸಿದರು. ಪ್ರಾಯಶಃ ಈ ಪತ್ರಿಕೋದ್ಯಮಿ ಸೋದರರೇ ಮೈಸೂರು ಕರ್ಣಾಟಕದ ಪ್ರಥಮ ಪೂರ್ಣ ಸಮಯದ ಪತ್ರಿಕೋದ್ಯಮಿಗಳು. 'ನಡೆಗನ್ನಡಿ' ತನ್ನ ಓದುಗರ ಮೇಲೆ ಹೆಚ್ಚು ನೈತಿಕ ಹಾಗೂ ಬೌದ್ಧಿಕ ಪ್ರಭಾವವನ್ನು ಬೀರುತ್ತಿತ್ತು. ಆಗಿನ ದಿವಾನರಾಗಿದ್ದ ಶ್ರೀ ಪಿ.ಎನ್. ಕೃಷ್ಣಮೂರ್ತಿ ಹಾಗೂ ವಿ.ಪಿ. ಮಾಧವರಾಯರ ಅಸಂತೋಷವನ್ನು ಆ ಪತ್ರಿಕೆಗಳು ಗಳಿಸಿದವು. ಮೈಸೂರು ಶಾಸನ ಸಭೆ 190೮ರ ವೃತ್ತಪತ್ರಿಕೆಗಳ ನಿಯಂತ್ರಣದ ಶಾಸನವನ್ನು ಮಾಡಿ, ಸ್ವತಂತ್ರ ಬುದ್ಧಿಯ ರಾಷ್ಟ್ರೀಯ ವೃತ್ತಪತ್ರಿಕೆಗಳನ್ನು ಮಟ್ಟಹಾಕುವಂತೆ ಮಾಡಿತು. ಆ ಶಾಸನದ ಪ್ರಕಾರ ಅಯ್ಯಂಗಾರ್ ಸೋದರರ 'ನಡೆಗನ್ನಡಿ'ಯನ್ನು ತುಳಿದು ಹಾಕಿದ್ದಲ್ಲದೆ ಅದರ ಸಂಪಾದಕರನ್ನು ಸಂಸ್ಥಾನದಿಂದ ಗಡಿಪಾರು ಮಾಡಿದರು. ಆ ವೇಳೆಗೆ ವಾರಪತ್ರಿಕೆಯಾಗಿದ್ದ 'ಸೂರ್ಯೋದಯ ಪ್ರಕಾಶಿಕಾ' ಪತ್ರಿಕೆ ಕೂಡ ಸರಕಾರದ ಅಸಂತೋಷಕ್ಕೆ ಗುರಿಯಾಗಿ ಹೋಯಿತು. 19)8ರ ಆ ದುಷ್ಟ ವೃತ್ತಪತ್ರಿಕಾ ಶಾಸನವನ್ನು ಟೀಕಿಸಿದ್ದನ್ನು ಪ್ರಕಟಿಸಿದ್ದೇ ಅದರ ಅಪರಾಧ. ಇದಕ್ಕೆ ಮೈಸೂರಿನ ಕನ್ನಡ ಸಂಪಾದಕರೆಲ್ಲರೂ ಶ್ರೀ ವೆಂಕಟಕೃಷ್ಣಯ್ಯನವರ ನೇತೃತ್ವದಲ್ಲಿ ಕೂಡಲೇ ಕಾರ್ಯಕ್ರಮ ಕೈಗೊಂಡು ಪ್ರತಿಭಟನಾರ್ಥವಾಗಿ ಎಲ್ಲಾ ಕನ್ನಡ ವೃತ್ತಪತ್ರಿಕೆಗಳನ್ನು ಮುಚ್ಚಿಬಿಟ್ಟರು. ಕೆಲವು ಮಾತ್ರ ಇದಕ್ಕೆ ಅಪವಾದವಾಗಿ ಉಳಿದಿದ್ದವು. 1908ರ ಈ ದುಷ್ಟ ವೃತ್ತಪತ್ರಿಕಾ ಶಾಸನಕ್ಕೆ 'ಭಾರತಿ' ಎಂಬ ಕನ್ನಡ ರಾಷ್ಟ್ರೀಯ ದಿನ ಪತ್ರಿಕೆಯು ಆಹುತಿಯಾಯಿತು. ಇದರ ಸಂಪಾದಕರು ನವರತ್ನ ಕೃಷ್ಣಸ್ವಾಮಿ. ಈ ವೃತ್ತ ಪತ್ರಿಕಾ ಶಾಸನ ಅಳಿದು ಹೋಗದಿದ್ದರೂ ಎರಡು ವರುಷ ಆದ ಮೇಲೆ ವೆಂಕಟಕೃಷ್ಣಯ್ಯನವರು ಮತ್ತೊಂದು ವಾರಪತ್ರಿಕೆ 'ಸಾಧ್ವಿ'ಯನ್ನು ಪ್ರಾರಂಭಿಸಿದರು. ಈಗಲೂ ಅದು ಒಂದು ಚಿಕ್ಕ ದಿನಪತ್ರಿಕೆಯಾಗಿ ಮೈಸೂರು ನಗರದಿಂದ ಹೊರಡುತ್ತದೆ.

ವೆಂಕಟಕೃಷ್ಣಯ್ಯನವರಿಗೆ ಪತ್ರಿಕಾ ವೃತ್ತಿಯನ್ನು ವಿಶ್ವವಿದ್ಯಾಲಯ ಮಟ್ಟದಲ್ಲಿ ಚೆನ್ನಾಗಿ ತರಬೇತಿ ಕೊಟ್ಟು ಬೆಳಸಬೇಕು ಎಂಬುದರಲ್ಲಿ ತುಂಬಾ ಶ್ರದ್ಧೆ. ಮೈಸೂರು ವಿಶ್ವವಿದ್ಯಾಲಯದಲ್ಲಿ ಆಗ ಪತ್ರಿಕೋದ್ಯಮ ವ್ಯಾಸಂಗಕ್ಕೆ ವ್ಯವಸ್ಥೆ ಇರಲಿಲ್ಲ. ಆದರೂ ಪತ್ರಿಕೋದ್ಯಮದ ಉತ್ತಮ ವಿದ್ಯಾರ್ಥಿಗೆ ಮೈಸೂರು ವಿಶ್ವವಿದ್ಯಾಲಯವು ಆ ಶಿಕ್ಷಣವನ್ನು ಪ್ರಾರಂಭಮಾಡಿದ ಮೇಲೆ ಒಂದು ಬಹುಮಾನ ಕೊಡಲಿ ಎಂದು ಒಂದು ದತ್ತಿಯನ್ನು ಬಿಟ್ಟರು. ಅವರು ದತ್ತಿ ನೀಡಿದ ಮೂವತ್ತು ವರುಷಗಳ ತರುವಾಯ,

1951ರಲ್ಲಿ ಪತ್ರಿಕೋದ್ಯಮ ಶಿಕ್ಷಣ ಪ್ರಾರಂಭವಾಯಿತು. ಶ್ರೀ ವೆಂಕಟಕೃಷ್ಣಯ್ಯನವರ ಹೆಸರನ್ನು ಶಾಶ್ವತಗೊಳಿಸುವುದಕ್ಕಾಗಿ ಈಗ ಈ ಬಹುಮಾನವನ್ನು ಆ ಶಿಕ್ಷಣದ ಉತ್ತಮ ವಿದ್ಯಾರ್ಥಿಗೆ ಕೊಡಲಾಗುತ್ತಿದೆ.

ಬೆಲೆಯುಳ್ಳ ವಿಚಾರ ಧಾರೆಯನ್ನು ನೀಡಿದ ಇನ್ನೊಬ್ಬ ಪತ್ರಕಾರರೆಂದರೆ (ಈಗ ಡಾಕ್ಟರ್) ಶ್ರೀ ಡಿ.ವಿ. ಗುಂಡಪ್ಪ. ಇವರು ಸಂಸ್ಕೃತ, ಕನ್ನಡ, ಮತ್ತು ಇಂಗ್ಲಿಷಿನಲ್ಲಿ ವಿದ್ವಾಂಸರು. 'ಕರ್ನಾಟಕ ಎಂಬ ಇಂಗ್ಲಿಷ್ ದ್ವಿವಾರ ಪತ್ರಿಕೆಯನ್ನು ಇವರು ಪ್ರಾರಂಭಿಸಿದರು. ಈ ಪತ್ರಿಕೆಯಲ್ಲಿ ಆಡಳಿತಕ್ಕೆ ಎಷ್ಟೋ ರಚನಾತ್ಮಕ ಸಲಹೆಗಳನ್ನು ಕೊಡಲಾಗುತ್ತಿತ್ತು. ಈ ಪತ್ರಿಕೆಯ ಓದುಗರ ಸಂಖ್ಯೆ ಬಹಳ ಪರಿಮಿತ; ಆದರೆ ಆರಿಸಿದವರು. ರಾಜಕೀಯವಾಗಿಯೂ ಸಾಮಾಜಿಕವಾಗಿಯೂ ಈ ಪತ್ರಿಕೆಯ ಧೋರಣೆ ಸ್ವತಂತ್ರ. ಕೆಲವು ವರುಷಗಳ ತರುವಾಯ ಈ ಪತ್ರಿಕೆ ನಿಂತು ಹೋಯಿತು. ಆ ಮೇಲೆ ಗುಂಡಪ್ಪನವರು 'ಅರ್ಥ ಸಾಧಕ ಪತ್ರಿಕೆ' ಎಂಬ ಮಾಸಪತ್ರಿಕೆಯನ್ನು ಕೆಲವು ಕಾಲ ನಡೆಸಿದರು. ಇಂಗ್ಲಿಷಿನಲ್ಲಿ 'ಇಂಡಿಯನ್ ರಿವ್ಯೂ ಆಫ್ ರಿವ್ಯೂಸ್' ಎಂಬ ಪತ್ರಿಕೆಯನ್ನು ಪ್ರಾರಂಭಿಸಿದರು. ಅದು ಕೂಡ, ಬಹುಕಾಲ ಬದುಕಲಿಲ್ಲ. ಆದರೂ ರಾಜಕಾರಣ ಸಂಸ್ಕೃತಿಗಳ ಬಗ್ಗೆ ಬೇರೆ ಬೇರೆ ಪತ್ರಿಕೆಗಳಿಗೆ ಅವರು ಕೊಡುವ ವಿದ್ವತ್ಪೂರ್ಣ ಲೇಖನಗಳ ಪ್ರವಾಹ ಇನ್ನೂ ಸಾಗುತ್ತಲೆ ಇದೆ. ಅವರೇ ಸ್ಥಾಪಿಸಿದ ಗೋಖಲೆ ಸಾರ್ವಜನಿಕ ಸಂಸ್ಥೆಯ ಪತ್ರಿಕೆಯ ಸಂಪಾದಕರು ಆಗಿದ್ದಾರೆ ಈಗ ಅವರು.

'ವಿಶ್ವಕರ್ನಾಟಕ' ಎಂಬ ರಾಷ್ಟ್ರೀಯ ವಾರಪತ್ರಿಕೆಯನ್ನು ಒಂದು ಸಾಪ್ತಾಹಿಕ-ಆವೃತ್ತಿಯ ಸಮೇತ 1921ರಲ್ಲಿ ತಿರುಮಲೆ ತಾತಾಚಾರ್ಯ ಶರ್ಮ ಅವರು ಪ್ರಾರಂಭಿಸಿದರು. ರಾಷ್ಟ್ರೀಯ ಪತ್ರಿಕಾ ವೃತ್ತಿಯ ಸಂಪ್ರದಾಯಗಳನ್ನು ಅದು ಎತ್ತಿ ಹಿಡಿಯಿತು. ಆದರೆ ಅದಕ್ಕೆ ಫಲವಾಗಿ ಆರ್ಥಿಕ, ಅಸ್ಥಿರತೆಯೂ ಸರಕಾರದ ಸಿಟ್ಟೂ ಅದಕ್ಕೆ ಲಭಿಸಿದವು. 1942ರಲ್ಲಿ ಅದಕ್ಕೆ ಸಿದ್ದವನಹಳ್ಳಿ ಕೃಷ್ಣಶರ್ಮರು ಸಂಪಾದಕರಾಗಿದ್ದರು. "ಭಾರತ ಬಿಟ್ಟು ಹೋಗಿ ಚಳವಳಿ"ಯ ಉಗ್ರಕಾಲದಲ್ಲಿ ಅವರ ಮಾರ್ಗದರ್ಶನ ದಲ್ಲಿ ಪತ್ರಿಕೆ ರಾಷ್ಟ್ರೀಯ ಚಳವಳಿಯ ಪ್ರತಿನಿಧಿಯಾಯಿತು. 1944ರಲ್ಲಿ ಸರಕಾರ ಆ ಪತ್ರಿಕೆಯನ್ನು ಪ್ರಕಟಿಸದಂತೆ ಅಡ್ಡಿಮಾಡಿತು. ಇದಕ್ಕೆ ಕಾರಣ ಒಂದು ರಾಜದ್ರೋಹಾತ್ಮಕವೆಂದು ಆರೋಪಿಸಲಾದ ಸಂಪಾದಕೀಯ ಲೇಖನ ಹಾಗೂ ವೈಸ್‌ರಾಯ್ ಲಾರ್ಡ್ ಲಿನ್ ಲಿತ್‌ಗೋಗೆ ಬರೆದ ಒಂದು ಬಹಿರಂಗ ಪತ್ರ. 'ವಿಶ್ವಕರ್ನಾಟಕ' 1945ರಲ್ಲಿ ಮತ್ತೆ ಪ್ರಾರಂಭವಾಯಿತು. ಆದರೆ ಆರ್ಥಿಕ ತಾಪತ್ರಯ ಹಾಗೂ ಇತರ ತೊಂದರೆಗಳನ್ನೂ ಇದಿರಿಸಬೇಕಾಯಿತು. 1947ರಲ್ಲಿ 'ದೇಶಬಂಧು' ಎಂಬ ಸ್ಥಳೀಯ ಕನ್ನಡ ದಿನಪತ್ರಿಕೆಯ ಸಂಪಾದಕರಾಗಿದ್ದ ಎನ್. ಎಸ್. ವೆಂಕೋಬರಾಯರು ಅದರ ಸಂಪಾದಕರಾದರು. ಸಂಜೆಯ ಹೊತ್ತಿಗೆ ಹೊರಡುತ್ತಿದ್ದ ಒಂದು ಸುದ್ದಿಯ ಹಾಳೆಯ ಬದಲು, ಬೆಳಗ್ಗಿನ ಒಂದು ದಿನಪತ್ರಿಕೆಯಾಯಿತು ಅದು ಅವರ ಸಂಪಾದಕತ್ವದಲ್ಲಿ. 1956ರಲ್ಲಿ 'ವಿಶ್ವಕರ್ನಾಟಕ' ಕಡೆಗೆ ಮುಚ್ಚಿ ಹೋಯಿತು.

1925ರಲ್ಲಿ ಮೈಸೂರಿನಲ್ಲಿ ಹುಟ್ಟಿತು 'ತಾಯಿನಾಡು'. ಮುಂದಿನ ವರುಷ ಬೆಂಗಳೂರಿಗೆ ಬದಲಾಯಿತು. ವೆಂಕಟಕೃಷ್ಣಯ್ಯನವರ ಶಿಷ್ಯ ಪಿ.ಆರ್. ರಾಮಯ್ಯನವರೇ ಅದರ ಸಂಸ್ಥಾಪಕರು.ಕೆಲವು ವರುಷಗಳ ತರುವಾಯ ಪಿ. ಬಿ. ಶ್ರೀನಿವಾಸನ್ ಅವರು ಅದರ ಸಂಪಾದಕರಾದರು. ತಮ್ಮ ಸಂಪಾದಕತನದ ಕಾಲದಲ್ಲಿ ಶ್ರೀನಿವಾಸನ್ ಇಂಗ್ಲೆಂಡಿನಲ್ಲೂ ಅಮೆರಿಕಾದಲ್ಲೂ ಪ್ರವಾಸ ಮಾಡಿ ಬಂದು ತಮ್ಮ ಅಮೂಲ್ಯ ಅನುಭವಗಳನ್ನು ಪತ್ರಿಕೆಗೆ ನೀಡಿದರು. 1952ರಲ್ಲಿ ತನ್ನ ರಜತೋತ್ಸವವನ್ನು ನಡೆಸಿದ ಮೊತ್ತ ಮೊದಲ ಕನ್ನಡ ಪತ್ರಿಕೆ ಅದು. 1957ರಲ್ಲಿ 'ತಾಯಿನಾಡು' ಹಸ್ತಾಂತರವಾಯಿತು. ಪಿ. ಆರ್. ರಾಮಯ್ಯ ಅದನ್ನು ಸುಪ್ರಸಿದ್ಧ ಕಂಟ್ರಾಕ್ಟರ್ ಆದ ಎಂ. ಎಸ್. ರಾಮಯ್ಯ ಅವರಿಗೆ

ಮಾರಿದರು. ರುಮಾಲೆ ಚೆನ್ನಬಸವಯ್ಯ ಅದರ ಸಂಪಾದಕರಾಗಿ ಬಂದರು. ಆಗ ಪತ್ರಿಕೆಯನ್ನು ಅದರ ಮೂಲ ಪ್ರಕಟನ ಸ್ಥಾನದಿಂದ ಬದಲಾಯಿಸಿದರು. 'ತಾಯಿನಾಡು'ವಿಗೆ ಟಿ. ಸಿದ್ದಪ್ಪನವರು ಸಂಪಾದಕರಾದರು. ಹಿಂದೆ ವೃತ್ತಪತ್ರಿಕೆಯ ಅನುಭವವನ್ನು ಪಡೆದಿದ್ದ ಶ್ರೀ ಆರ್. ದಯಾನಂದ ಸಾಗರ್ ಯೂರೋಪಿನಲ್ಲಿ ತಮ್ಮ ವ್ಯಾಸಂಗ ಪ್ರವಾಸಗಳ ತರುವಾಯ ಹೊಚ್ಚ ಹೊಸ ಹಾಗೂ ಶ್ರೇಷ್ಠ ಅನುಭವವನ್ನು ಪತ್ರಿಕೆಯಲ್ಲಿ ಅದರ ವ್ಯವಸ್ಥಾಪಕ-ಸಂಪಾದಕರಾಗಿ ಮೂಡಿಸಿದರು.

'ಜನವಾಣಿ' ಮತ್ತೊಂದು ಕನ್ನಡ ವೃತ್ತಪತ್ರಿಕೆ. 1934ರಲ್ಲಿ ಶ್ರೀ ಬಿ.ಎನ್. ಗುಪ್ತ ಅವರು ದೇಶಭಕ್ತಿ, ರಾಷ್ಟ್ರೀಯತೆಗಳ ಪ್ರಚಾರಕ್ಕಾಗಿ ಇದನ್ನು ಪ್ರಾರಂಭಮಾಡಿದರು. ಕೆಲವು ಕಾಲ ಶ್ರೀ ಕೆ.ಸಿ. ರೆಡ್ಡಿಯವರು ಕೂಡ ಅದರ ಸಂಪಾದಕರಾಗಿದ್ದರು. 1943ರಲ್ಲಿ ಬಿ.ಎನ್. ಗುಪ್ತರು 'ಜನವಾಣಿ'ಯನ್ನೂ ತಮ್ಮ ಸುವಿಖ್ಯಾತ 'ಪ್ರಜಾಮತ' ವಾರಪತ್ರಿಕೆಯನ್ನೂ ಬೊಂಬಾಯಿಯ ಕೈಗಾರಿಕೋದ್ಯಮಿಯಾದ ಧರ್ಮ ಪ್ರಕಾಶ ಶ್ರೀ ಶ್ರೀನಿವಾಸಯ್ಯನವರಿಗೆ ಮಾರಿದರು. ಶ್ರೀ ಜಿ ಎಸ್. ನರಸಿಂಹ ಸೋಮಯಾಜಿಗಳು ಅದರ ಸಂಪಾದಕರಾಗಿ ನೇಮಕವಾದರು. 'ಜನವಾಣಿ' ಒಂದು ಸಂಜೆಯ ಪತ್ರಿಕೆ. ಅದರ ಬೆಲೆ ಕಡಮೆ. ಅದರಲ್ಲಿ ಸ್ಥಳೀಯ ವರ್ತಮಾನವೇ ಹೆಚ್ಚು. ಅದರ ಧೋರಣೆ ಸ್ವತಂತ್ರ.

1931ರಲ್ಲಿ ಪ್ರಾರಂಭವಾದ 'ಪ್ರಜಾಮತ' ಬಹಳ ಜನಪ್ರಿಯ ಪತ್ರಿಕೆ. ಅದರ ಮಾಲಿಕ ಸಂಪಾದಕರಾದ ಬಿ.ಎನ್. ಗುಪ್ತರು ಈ ವಾರಪತ್ರಿಕೆಯ ಯಶಸ್ಸಿಗೆ ಮುಖ್ಯ ಕಾರಣ. ಅದನ್ನು ಮೈಸೂರು ಸರ್ಕಾರ ನಿಲ್ಲಿಸಿತು. ಆದರೆ ಬೆಳಕು ಹರಿಯುವುದರೊಳಗಾಗಿ ಅದು ಹುಬ್ಬಳ್ಳಿಗೆ ಹೋಗಿ ಅಲ್ಲಿಂದ ಪ್ರಕಟವಾಯಿತು. 'ಪ್ರಜಾಮತ' ಪತ್ರಿಕೆಯ ಪ್ರತಿಗಳನ್ನು ಮೈಸೂರು ಸಂಸ್ಥಾನದ ಒಳಗೆ ಬಾರದಂತೆ ಸರಕಾರ ತಡೆದಾಗ ಅದರ ಹೆಸರು ಬದಲಾಗಿ 'ಪ್ರಜಾಮಿತ್ರ' ಎಂದು ಮೈಸೂರು ಬೆಂಗಳೂರು ಬೀದಿಗಳಲ್ಲಿ ಮಾರಾಟವಾಯಿತು. ಶ್ರೀನಿವಾಸಯ್ಯನವರು ಇದರ ಮಾಲಿಕರಾದಾಗ ಶ್ರೀ ಎಂ. ಎಸ್. ಗುರುಪಾದಸ್ವಾಮಿ ಅವರು ಅದರ ಸಂಪಾದಕತ್ವವನ್ನು ವಹಿಸಿಕೊಂಡರು. ಶ್ರೀ ಟಿ. ಸಿದ್ದಪ್ಪನವರು ಕೆಲವು ಕಾಲ ಅದರ ಸಂಪಾದಕರಾಗಿದ್ದರು. ಈಗಲೂ ಪ್ರಜಾಮತ ಕ್ರಮವಾಗಿ ಬರುತ್ತಿದೆ. ಮೊದಲಿನ ಹಾಗೆ ಜನಪ್ರಿಯವಾಗಿದೆ. ಎಚ್.ವಿ. ನಾಗರಾಜ್ ಈಗ ಅದನ್ನು ನೋಡಿಕೊಳ್ಳುತ್ತಿದ್ದಾರೆ. ಅದರ ಆಡಳಿತ ಹೊಸತಾಗಿ 'ಪ್ರಜಾಮತ'ದ ತೆಲುಗು ಆವೃತ್ತಿಯನ್ನು ಪ್ರಾರಂಭಿಸಿದ್ದಾರೆ. ಇದಕ್ಕೆ ಆಂಧ್ರ ಪ್ರದೇಶದಲ್ಲಿ ಪ್ರಚಾರ.

ಭಾರತೀಯ ಸ್ವಾತಂತ್ರ್ಯ ಹೋರಾಟವನ್ನು ಎತ್ತಿಹಿಡಿಯಲು ಕೆಲವು ಪತ್ರಿಕೆಗಳು ಆಗ ಪ್ರಾರಂಭವಾದವು. ಶ್ರೀ ವೀರಣ್ಣ ಗೌಡರಿಂದ ಸಂಪಾದಿತವಾದ 'ಚಿತ್ರಗುಪ್ತ', ಇಂಗ್ಲಿಷಿನಲ್ಲಿ ಎಸ್.ಆರ್.ಎಸ್. ರಾಘವನ್ ಅವರಿಂದ ಸಂಪಾದಿಸಲ್ಪಟ್ಟ 'ಡೆಮೊಕ್ರೆಟ್' ಪತ್ರಿಕೆ, ವೀರಕೇಸರಿ ಸೀತಾರಾಮಶಾಸ್ತ್ರಿಗಳಿಂದ ಸಂಪಾದಿತವಾಗುತ್ತಿದ್ದ 'ವೀರಕೇಸರಿ', ಶ್ರೀ ಅಶ್ವತ್ಥನಾರಾಯಣ ರಾಯರು ಸಂಪಾದಿಸುತ್ತಿದ್ದ 'ನವಜೀವನ' ಇವು ಸ್ವಾತಂತ್ರ್ಯ ಸಮರಕ್ಕೆ ಅದ್ಭುತ ಸೇವೆ ಮಾಡಿದವು

## ಬೊಂಬಾಯಿ ಕರ್ನಾಟಕದಲ್ಲಿ ಪತ್ರಿಕೋದ್ಯಮ

ಮೈಸೂರು ಸಂಸ್ಥಾನ ಆದ ಮೇಲೆ ಕನ್ನಡ ಭಾಷೆಯ ವೃತ್ತಪತ್ರಿಕೆಗಳು ಬೆಳೆದದ್ದು ಬೊಂಬಾಯಿ ಕರ್ನಾಟಕ ಪ್ರದೇಶದಲ್ಲಿ. ಈ ಪ್ರದೇಶದಲ್ಲಿ ಪ್ರಕಟವಾದ ಮೊತ್ತ ಮೊದಲನೆಯ ಪತ್ರಿಕೆ 'ಸುಬುದ್ಧಿ ಪ್ರಕಾಶ'. 1851 ರ ಸೆಪ್ಟಂಬರ 1ನೆ ದಿನ ಬೆಳಗಾವಿಯಲ್ಲಿ ಇದು ಪ್ರಾರಂಭವಾಯಿತು. ಅದರಲ್ಲಿ ಬ್ರಿಟಿಷ್ ಸರಕಾರದ ಘೋಷಣಾ ಪತ್ರಿಕೆಗಳ ಇಂಗ್ಲಿಷ್ ಪ್ರಕಟನಗಳ ಸಾರ ಇರುತ್ತಿತ್ತು. ಶುದ್ಧ ಕನ್ನಡದಲ್ಲಿ ಅದನ್ನು ಬರೆಯುತ್ತಿದ್ದರು.

1957ರ ಭಾರತ ಕ್ರಾಂತಿಯ ಸಂದರ್ಭದಲ್ಲಿ ಅನೇಕ ಕನ್ನಡದ ಸುದ್ದಿಹಾಳೆಗಳು ಕಂಡು ಬಂದವು. ಎಲ್ಲವೂ ಅಲ್ಪಾಯುಷ್ಸಿನವು. ಈ ಸುದ್ದಿ ಹಾಳೆಗಳೆಲ್ಲವೂ ಈಸ್ಟ್ ಇಂಡಿಯಾ ಕಂಪನಿಯ ವಿರುದ್ಧ ಬಂಡು ಗಾರರನ್ನು ಸ್ಫೂರ್ತಿಗೊಳಿಸಿದವು. 1857ರ ದೇಶಭಕ್ತಿಯ ಚಳವಳಿಯಲ್ಲಿ ಬೊಂಬಾಯಿ ಕರ್ನಾಟಕವು ನೆಲಗಟ್ಟು ಆಗಿತ್ತು.

ಈ ಪ್ರದೇಶದ ಪೂರ್ಣ ವೃತ್ತಪತ್ರಿಕೆಯಾಗಿ ಮೊದಲು ಹೊರಟದ್ದು 'ಹಿತೇಚ್ಛು'. ಬಾಗಲಕೋಟೆಯ ಹತ್ತಿರದ ಕಲಾದಗಿಯಿಂದ ಇದು ಪ್ರಾರಂಭವಾಯಿತು. ಧಾರವಾಡದಲ್ಲಿ ಇನ್ನೂ ಮೂರು ವೃತ್ತಪತ್ರಿಕೆಗಳು ಇದ್ದವು : 'ವಿಜಯ', 'ರಾಜಹಂಸ' ಹಾಗೂ 'ಕರ್ನಾಟಕ ವೃತ್ತ'. ಇದಲ್ಲದೆ 1880ರ ವೇಳೆಗೆ ಬೆಳಗಾವಿಯಲ್ಲಿ ಇನ್ನೂ ಮೂರು ಪತ್ರಿಕೆಗಳಿದ್ದವು. ಬೆಳಗಾವಿಯ ಈ ಪತ್ರಿಕೆಗಳು ಎಲ್ಲವೂ ಅಲ್ಲಿ ಮರಾಠಿಗರ ಮರಾಠಿ ಭಾಷೆಯ ಆಕ್ರಮಣವನ್ನು ತಡೆಯಲು ಹುಟ್ಟಿದವು. ಮಾನದ ಕಟ್ಟಿ ಕಲ್ಯಾಣಪ್ಪ, ವಿಭೂತಿ ಹುಚ್ಚಯ್ಯ—ಎರಡು ಮಾಸ ಪತ್ರಿಕೆಗಳನ್ನು 'ಚಂದ್ರೋದಯ', 'ಪುಷ್ಪಮಾಲಿಕೆ' ಗಳನ್ನು ಪ್ರಾರಂಭಿಸಿದರು. ಇದೇ ಕಾರಣಕ್ಕಾಗಿಯೇ 'ಕರ್ನಾಟಕ ಪತ್ರ' ಎಂಬ ವಾರಪತ್ರಿಕೆಯನ್ನು ದೇಸಾಯಿ ಶೀನಪ್ಪ ಪ್ರಾರಂಭಿಸಿದರು. ಈ ಪ್ರಾರಂಭದ ಪತ್ರಿಕೆಗಳಲ್ಲಿ ಹಳಗನ್ನಡದ ಶೈಲಿ ಇದ್ದರೂ ಇವು ದೇಶಾಭಿ ಮಾನದ ಭಾವನೆಗಳನ್ನು ಪ್ರಕಟಿಸಿ ಜನತೆಯನ್ನು ಎಚ್ಚರಿಸಿದವು. ಇವುಗಳಲ್ಲಿ ಸುದ್ದಿ ಸಮಾಚಾರ ಹೆಚ್ಚಾಗಿ ಇರುತ್ತಿರಲಿಲ್ಲ. ಸುದ್ದಿ ಪತ್ರಿಕೆಗಳಿಗಿಂತ ಹೆಚ್ಚಾಗಿ ಅವು ಅಭಿಪ್ರಾಯ ಪತ್ರಿಕೆಗಳು.

1885ರ ತರುವಾಯ ಹಲವುವಾರ ಪತ್ರಿಕೆಗಳು ಪ್ರಾರಂಭವಾದವು. ಅವುಗಳಲ್ಲಿ 'ಲೋಕಶಿಕ್ಷಕ' 'ಕರ್ನಾಟಕ ವೃತ್ತ', 'ಲೋಕ ಬಂಧು' ಗಳನ್ನು ಹೆಸರಿಸಬಹುದು. ಈ ತುಳುಕಿನ ಹಿಂದೆ ಇದ್ದ ವೀರ ಪುರುಷ ಎಂದರೆ ಮುದವೀಡು ಕೃಷ್ಣರಾಯರು. ಅವರ 'ಕರ್ನಾಟಕ ವೃತ್ತ' ವಾರಪತ್ರಿಕೆ 35 ವರ್ಷಕಾಲ ಪ್ರಕಟವಾಗುತ್ತಿತ್ತು. ಅದರಲ್ಲಿ ಅವರ ಸ್ಫೂರ್ತಿವಂತ, ದೇಶಭಕ್ತಿಯುಕ್ತ ಬರವಣಿಗೆ ಬರುತ್ತಾ ಇತ್ತು. ಅವರ ಶಕ್ತಿಶಾಲಿ ಭಾಷಣಗಳೋ ಸುಪ್ರಸಿದ್ಧ ಆಗಿದ್ದವು.

1890ರ ಸುಮಾರಿನಲ್ಲಿ ಗದಗಯ್ಯ ಹೊನ್ನಾಪುರ ಮಠ ಇವರು 'ಕನ್ನಡ ಸಿಂಹ', ರಾಜಹಂಸ', ಚಂದ್ರೋದಯ' ಎಂಬ ವಾರ ಪತ್ರಿಕೆಗಳನ್ನು ಪ್ರಾರಂಭಿಸಿದರು.

ಹುಬ್ಬಳ್ಳಿ ನಗರದಲ್ಲಿ ಬಿಂದೂರಾಯರು ಸಂಪಾದಿಸುತ್ತಿದ್ದ 'ಕನ್ನಡ ಕೇಸರಿ' ಬಾಗಲಕೋಟೆಯ ಕೆರೂರು ವಾಸುದೇವಾಚಾರ್ಯರು ಸಂಪಾದಿಸುತ್ತಿದ್ದ 'ಸಚಿತ್ರ ಭಾರತ' ಎಂಬ ಎರಡು ವಾರಪತ್ರಿಕೆಗಳು ಹುಟ್ಟಿದವು. ವಾಸುದೇವಾಚಾರ್ಯರು ಪ್ರಸಿದ್ಧ ಕತೆಗಾರರು, ನಾಟಕಕಾರರು. ಅವರ ಪ್ರಭಾವದಿಂದ ಧಾರವಾಡದಲ್ಲಿ ಮತ್ತೊಂದು ವಾರಪತ್ರಿಕೆ 'ಶುಭೋದಯ' ಪ್ರಾರಂಭವಾಯಿತು. ಅವರ ಶೈಲಿ, ಅವರ ನವುರಾದ ಹಾಸ್ಯ, ಅವರ ಕಟು ಟೀಕೆಗಳಿಂದ ಅದು ಬಹಳ ಜನಪ್ರಿಯವಾಯಿತು. 1921ರಲ್ಲಿ ವಾಸು ದೇವಾಚಾರ್ಯರು ತೀರಿಕೊಂಡಾಗ, ಅದೂ ನಿಂತುಹೋಯಿತು. ಸ್ವದೇಶಿ ಚಳವಳಿಯ ಕಾಲದಲ್ಲಿ ಮಂಜಪ್ಪ ಹರಡೇಕರರು 'ಧನುರ್ಧಾರಿ' ಪತ್ರಿಕೆಯನ್ನು ಪ್ರಾರಂಭಿಸಿದರು. ಅದರಲ್ಲಿ ತಿಲಕರ ಕೇಸರಿಯಿಂದ ಕೆಲವು ಅವತರಣಿಕೆಗಳನ್ನು ಕೊಡುತ್ತಿದ್ದರು.

ಕರ್ನಾಟಕದ ಅತಿ ಪುರಾತನ ವಾರಪತ್ರಿಕೆಗಳಲ್ಲಿ 'ಕರ್ನಾಟಕ ವೈಭವ'ವೂ ಒಂದು. 1892ರಲ್ಲಿ ಬಿಜಾಪುರದಲ್ಲಿ ಮಣ್ಣೂರು ಗೋವಿಂದರಾಯರು ಇದನ್ನು ಪ್ರಾರಂಭಿಸಿದರು. 1922ರಲ್ಲಿ ಅದರ ಮಾಲಿಕ ತನವನ್ನು, ಅದರ ಸಂಪಾದಕತನವನ್ನು ವಹಿಸಿಕೊಂಡ ಮೊಹರೆ ಹನುಮಂತರಾಯರು ಮೊದಲಿನಿಂದಲೂ ಅದನ್ನು ಚೆನ್ನಾಗಿ ನಡೆಸಿಕೊಂಡು ಬಂದರು. ಈ ಪತ್ರಿಕೆ ಮುಖ್ಯವಾಗಿ ಭಾರತ ಸ್ವಾತಂತ್ರ್ಯ ಸಮರಕ್ಕೆ

ಮೀಸಲಾಗಿ ಸರಕಾರದ ಕೈಯಿಂದ ಎಷ್ಟೋ ಕಷ್ಟಗಳಿಗೆ ಗುರಿಯಾಗಬೇಕಾಯಿತು. ಹುಬ್ಬಳ್ಳಿಯ ಮುತಾಲಿಕ ದೇಸಾಯರ 'ವೀರಕೇಸರಿ', ಪಿ. ಆರ್. ಚಿಕ್ಕೋಡಿಯವರ 'ವಿಭಾಕರ', ವಿ. ಪಿ. ಪುರಾಣಿಕರ 'ಲೋಕಮತ', ಹೊಸಕೇರಿಯ ಅಣ್ಣಾಚಾರ್ಯರ 'ವಿಜಯ' 1920ರ ವೇಳೆಗೆ ಹೆಸರಾಗಿದ್ದವು.

ಬಳ್ಳಾರಿಯಲ್ಲಿ 1880ರ ಕಾಲದಲ್ಲಿ ಪ್ರಕಟವಾದ 'ವಿಜಯಧ್ವಜ' ಎಂಬುದನ್ನು ಹೇಳಬಹುದು. 1930ರಲ್ಲಿ ಇದನ್ನು ಸರಕಾರ ನಿಷೇಧಿಸಿತು.

ಧಾರವಾಡದಲ್ಲಿ ಪ್ರಾರಂಭವಾದ ಇನ್ನೊಂದು ವಾರಪತ್ರಿಕೆ 'ಕರ್ಮವೀರ.' ಎಷ್ಟೋ ಕಷ್ಟ ನಷ್ಟಗಳು, ಮುಟ್ಟುಗೋಲು ಬಂದರೂ ಪ್ರಾರಂಭದಿಂದಲೂ ಚೇತೋವಂತವಾಗಿದೆ. ಆಗ ಶ್ರೀ ರಂಗನಾಥ ದಿವಾಕರರು ಅದರ ಸಂಪಾದಕರು. ದಿವಾಕರ ರಂಗನಾಥರಾಯರೂ ಅದರ ವ್ಯವಸ್ಥಾಪಕರಾದ ಹುಕ್ಕೇರಿಕರರೂ 1921ರಲ್ಲಿ ಸೆರೆಯಾದರು. ಮುಂದೆ 'ಜಯ ಕರ್ನಾಟಕ' ಎಂಬ ಮಾಸ ಪತ್ರಿಕೆಯ ಸಂಪಾದಕರಾದ ಆಲೂರು ವೆಂಕಟರಾಯರು ಈ ರಾಷ್ಟ್ರೀಯ ವಾರಪತ್ರಿಕೆ ನಿಲ್ಲದಂತೆ ಮಾಡಲು ಸಹಾಯ ಮಾಡಿದರು. ಈಗ 'ಕರ್ಮವೀರ' ಪತ್ರಿಕೆ ಹುಬ್ಬಳ್ಳಿಯಿಂದ ಹೊರಡುತ್ತಿದೆ. ಕರ್ನಾಟಕದಲ್ಲಿ ಇದಕ್ಕೆ ಹೆಚ್ಚು ಪ್ರಸಾರ ಇದೆ.

ಬೆಳಗಾವಿಯಲ್ಲಿ ಕರ್ನಾಟಕ ಏಕೀಕರಣ ಕೆಲಸಗಾರರು ಕೆಲವರು 1933ರಲ್ಲಿ 'ಸಂಯುಕ್ತ ಕರ್ನಾಟಕ' ಎಂಬ ವಾರ ಪತ್ರಿಕೆಯನ್ನು ಪ್ರಾರಂಭಿಸಿದರು. ಪ್ರಮುಖ ಸಾರ್ವಜನಿಕ ವ್ಯಕ್ತಿಗಳಾದ ದತ್ತೋಪಂತ ಬೆಳವಿ, ನಾರಾಯಣರಾವ್ ಜೋಷಿ, ದಾತಾರ ಬಳವಂತರಾಯರು ಹಾಗೂ ಗೋಖಲೆ ಕೇಶವರಾಯರು ಈ ವಾರ ಪತ್ರಿಕೆಯ ಸ್ಥಾಪಕರಲ್ಲಿ ಕೆಲವರು. ಈ ಪತ್ರಿಕೆ ಬೇಗನೆ ದಿನಪತ್ರಿಕೆಯಾಯಿತು. ಶ್ರೀ ಕಟ್ಟಿ ಅವರ ತರುವಾಯ 1934ರಲ್ಲಿ 'ಸಂಯುಕ್ತ ಕರ್ನಾಟಕ'ಕ್ಕೆ ಸಂಪಾದಕರಾಗಿರಲು ಮೊಹರೆ ಹಣವಂತರಾಯರನ್ನು ಕರೆಯಲಾಯಿತು. ಆ ವರುಷ ದಿವಾಕರ್ ಅವರು ಬಿಡುಗಡೆಯಾಗಿ ಬಂದ ಮೇಲೆ, ಆ ಪತ್ರಿಕೆಯನ್ನು ಲೋಕ ಶಿಕ್ಷಣ ಟ್ರಸ್ಟ್ ವಹಿಸಿಕೊಂಡಿತು. ಅಲ್ಲಿಂದ ಒಂದು ಕಾಲು ಶತಮಾನ ಶ್ರೀ ಹಣವಂತರಾಯರೇ ಅದರ ಸಂಪಾದಕರಾಗಿದ್ದರು. 'ಸಂಯುಕ್ತ ಕರ್ನಾಟಕ'ದಿನಪತ್ರಿಕೆಯನ್ನು ಬೆಳೆಸಿದುದಲ್ಲದೆ 'ಕರ್ಮವೀರ'ವನ್ನು ನಡೆಸಿಕೊಂಡು ಬಂದರು. ಕನ್ನಡದ ಜನಪ್ರಿಯ ಸಂಕಲನ ಪತ್ರಿಕೆಯಾದ 'ಕಸ್ತೂರಿ'ಗೆ ಪ್ರಥಮ ಸಂಪಾದಕರೂ ಆಗಿದ್ದರು. 'ಸಂಯುಕ್ತ ಕರ್ನಾಟಕ'ದ ಬೆಂಗಳೂರು ಆವೃತ್ತಿ 1959ರ ಜನವರಿಯಲ್ಲಿ ಪ್ರಾರಂಭವಾಯಿತು. ಅದಕ್ಕಿಂತ ಮುಂಚೆಯೇ ರೋಟರೀ ಮುದ್ರಣಯಂತ್ರವನ್ನು ತಂದುಹಾಕಿ 'ಸಂಯುಕ್ತಕರ್ನಾಟಕ' ಕನ್ನಡ ಪತ್ರಿಕೋದ್ಯಮದ ಇತಿಹಾಸದಲ್ಲಿ ತನ್ನ ಹೆಸರನ್ನು ಶಾಶ್ವತಗೊಳಿಸಿತು. ಮುಖ್ಯವಾಗಿ ಗ್ರಾಮಸ್ಥರಿಗಾಗಿ 'ಕಾಮಧೇನು' ಎಂಬ ಮಾಸಪತ್ರಿಕೆಯನ್ನು ಟ್ರಸ್ಟ್ ಪ್ರಾರಂಭಿಸಿತು.

ಹಿಂದುಸ್ತಾನಿ ಸೇವಾದಳದ ಸ್ಥಾಪಕರಾದ ಎನ್. ಎಸ್. ಹರ್ಡೀಕರ್ ಅವರು 1937ರಲ್ಲಿ 'ಹುಬ್ಬಳ್ಳಿ ಗಜೆಟ್' ಎಂಬ ವಾರಪತ್ರಿಕೆಯನ್ನು ಹುಬ್ಬಳ್ಳಿಯ ಪೌರ ಸಮಸ್ಯೆಗಳಿಗಾಗಿ ಪ್ರಾರಂಭಿಸಿದರು. 1947ರಲ್ಲಿ ಹುಬ್ಬಳ್ಳಿಗಜೆಟನ್ನು 'ಜೈಹಿಂದ್' ಎಂಬ ಹೊಸ ಹೆಸರನ್ನು ಇಟ್ಟು ಪ್ರಕಟಿಸಲಾಯಿತು.

ಈ ವೃತ್ತ ಪತ್ರಿಕೆಗಳೂ ಮಾಸಪತ್ರಿಕೆಗಳೂ ಅಲ್ಲದೆ ಇನ್ನೂ ಅನೇಕವಾಗಿ ಕನ್ನಡ ಭಾಷೆಯಲ್ಲಿ ಕಾಣಿಸಿಕೊಂಡವು. ಎಲ್ಲವೂ ರಾಷ್ಟ್ರೀಯ ಪತ್ರಿಕೆಗಳು. ಬ್ರಿಟಿಷ್ ಸರಕಾರವನ್ನು ಉಗ್ರವಾಗಿ ಟೀಕಿಸುವುದರಿಂದ ಬಹುಮಟ್ಟಿಗೆ ಇವುಗಳನ್ನು ನಿಷೇಧಿಸಲಾಯಿತು. ಅಸಹಕಾರ ಚಳವಳಿಯ ಕಾಲದಲ್ಲಿ ಇವಕ್ಕೆ ಬಹಳ ಪ್ರಸಾರ ಇದ್ದರೂ ಇವುಗಳ ಆಯುಸ್ಸು ಬಹಳ ಸ್ವಲ್ಪ.

## ದಕ್ಷಿಣ ಕನ್ನಡದಲ್ಲಿ

ಕನ್ನಡ ಪತ್ರಿಕೋದ್ಯಮದ ಪ್ರಾರಂಭ ಮಂಗಳೂರಿನಲ್ಲಿ ಕ್ರಿಶ್ಚಿಯನ್ ಪಾದ್ರಿಗಳಿಂದ ನಡೆಯಿತು. 1842ರಲ್ಲಿ 'ಮಂಗಳೂರು ಸಮಾಚಾರ', 'ಕ್ರಿಸ್ತ ಸದ್ಧರ್ಮ ದೀಪಿಕೆ' ಎಂಬ ವಾರ ಪತ್ರಿಕೆಗಳನ್ನು ಕ್ರಿಶ್ಚಿಯನ್ ಮತದ ಪ್ರಚಾರಕ್ಕಾಗಿ ಪ್ರಾರಂಭಿಸಿದರು. ಆ ಮೇಲೆ 1896ರಲ್ಲಿ 'ಸತ್ಯದೀಪಿಕೆ'ಯು ಅವರಿಂದ ಪ್ರಾರಂಭವಾಯಿತು.

ಮಂಗಳೂರು ಕನ್ನಡ ವಾರ ಪತ್ರಿಕೆಗಳನೇಕಕ್ಕೆ ಜನ್ಮಸ್ಥಳ. ರಾಷ್ಟ್ರೀಯ ಚಳವಳಿಯ ಕಾಲದಲ್ಲಿ ಅನೇಕ ವಾರಪತ್ರಿಕೆಗಳು, ಮಾಸಪತ್ರಿಕೆಗಳು ಪ್ರಾರಂಭವಾದವು. ಇವುಗಳಲ್ಲಿ ಉಡುಪಿಯ 'ಕೃಷ್ಣಸೂಕ್ತಿ' 1905 ರಲ್ಲಿ ಪ್ರಾರಂಭವಾಯಿತು. ಇದರ ಜತೆಗೆ ಕೆರೋಡಿ ಸುಬ್ಬರಾಯರ ಹೆಸರು, ಕೆ. ರಾಜಗೋಪಾಲ ಕೃಷ್ಣರಾಯರ ಹೆಸರು ಸಂಬಂಧಿಸಿದ್ದವು. ಎಂ. ಎನ್. ಕಾಮತರ ಸಹವಾಸದಿಂದ 'ಸ್ವದೇಶಾಭಿಮಾನಿ' ಹೆಸರಾಯಿತು. ಬೆನಗಲ್ ರಾಮರಾಯರು, 'ಸುವಾಸಿನಿ' ಮಾಸ ಪತ್ರಿಕೆಯನ್ನು ನಡೆಸಿದರು. ಹೋಂರೂಲ್ ಚಳವಳಿಯೂ ಆ ಮೇಲೆ ಅಸಹಕಾರ ಚಳವಳಿಯೂ ಹಲವು ವಾರಪತ್ರಿಕೆಗಳಿಗೆ ಜನ್ಮಕೊಟ್ಟವು. ಅವುಗಳಲ್ಲಿ ಹುರುಳಿ ಭೀಮರಾಯರು ಸಂಪಾದಿಸುತ್ತಿದ್ದ (1919) 'ಕಂಠೀರವ', ಎ.ಬಿ. ಶೆಟ್ಟರು ಸಂಪಾದನೆ ಮಾಡುತ್ತಿದ್ದ 'ನವಯುಗ', ಕಡೆಂಗೋಡ್ಲು ಶಂಕರ ಭಟ್ಟರು ಸಂಪಾದಕರಾಗಿದ್ದ 'ಸ್ವತಂತ್ರ ಭಾರತ' (ಇದು 1937 ರಲ್ಲಿ ದಿನಪತ್ರಿಕೆ ಆಯಿತು, ಆ ಮೇಲೆ ಶಂಕರ ಭಟ್ಟರು 'ರಾಷ್ಟ್ರಮತ' ಎಂಬ ಪತ್ರಿಕೆಯನ್ನು ಸಂಪಾದಿಸಿದರು). ಡಿ.ಕೆ. ಭಾರದ್ವಾಜರು ಸಂಪಾದಕರಾಗಿದ್ದ 'ಸತ್ಯಾಗ್ರಹಿ', 'ತಿಲಕಸಂದೇಶ'ಗಳನ್ನು ಹೆಸರಿಸಬಹುದು. 'ಸ್ವರಾಜ್ಯ'ವೂ ಅಷ್ಟೆ. ಈ ಪತ್ರಿಕೆಗಳಿಗೆ ಆ ಜಿಲ್ಲೆಯಲ್ಲಿಯೇ ಪ್ರಚಾರವಿದ್ದರೂ ಅವುಗಳ ಬರವಣಿಗೆ, ಲೇಖನಗಳ ಸಾಹಿತ್ಯದ ವೈಶಿಷ್ಟ್ಯ ಸುಪ್ರಸಿದ್ಧವಾಗಿದ್ದವು. ಆ ಜಿಲ್ಲೆಯ ಪ್ರಮುಖ ಸಾಹಿತಿಗಳಾದ ಪಂಜೆ ಮಂಗೇಶರರಾಯರು (ಇವರ ಲೇಖನನಾಮ 'ಹರಟೆಮಲ್ಲ'), ಎಂ. ಗೋವಿಂದ ಪೈಗಳು ಈ ಪತ್ರಿಕೆಗಳಿಗೆ ಲೇಖನಗಳನ್ನು ಕೊಟ್ಟು ಶ್ರೀಮಂತಗೊಳಿಸುತ್ತಿದ್ದರು. ಅನೇಕ ಸಂಪಾದಕರು ಕೂಡ ಸ್ವಯಂ ಉತ್ತಮ ಸಾಹಿತಿಗಳು ಆಗಿದ್ದರು.

1941 ರಲ್ಲಿ ಮಂಗಳೂರು 'ನವಭಾರತ' ಎಂಬ ಪ್ರಥಮ ದಿನಪತ್ರಿಕೆಯನ್ನು ಕಂಡಿತು. ಸುಪ್ರಸಿದ್ಧ ಕೈಗಾರಿಕೋದ್ಯಮಿ ವಿ.ಎಸ್. ಕುಡ್ವರು ಈ ಪತ್ರಿಕೆಯನ್ನು ಪ್ರಾರಂಭಿಸಿ ಸಂಪಾದಕರಾಗಿ ಪ್ರಾರಂಭದಲ್ಲಿ ನಡೆಸಿಕೊಂಡು ಬಂದರು. ಅವರು ಒಂದು ಸಾರಿಗೆ–ಸಾಗಣೆ ಸಂಸ್ಥೆಯ ಮಾಲಿಕರಾಗಿದ್ದುದರಿಂದ ಪತ್ರಿಕೆಗಳನ್ನು ಜಿಲ್ಲೆಯ ಮೂಲೆಮೂಲೆಗೂ ಹಂಚುವುದು ಅವರಿಗೆ ಸುಲಭವಾಗಿತ್ತು. ಬೇಗನೆ ಇದು ಆ ಜಿಲ್ಲೆಯ ಬಹಳ ಜನಪ್ರಿಯ ದಿನಪತ್ರಿಕೆ ಆಯಿತು.

## ಹೈದರಾಬಾದ ಕರ್ನಾಟಕ

ಹೈದರಾಬಾದ ನಗರದಲ್ಲಿ ಎರಡು ಕನ್ನಡ ಪತ್ರಿಕೆಗಳಿದ್ದವು: 'ಹೈದರಾಬಾದ್ ಸಮಾಚಾರ' ಸರ್ಕಾರದ ಪತ್ರಿಕೆ. ಕನ್ನಡ ಜನರಿಗೆ ಸರಕಾರದ ಚಟುವಟಿಗಳನ್ನು ತಿಳಿಸುವ ಉದ್ದೇಶದಿಂದ ಪ್ರಕಟವಾಗುತ್ತಿತ್ತು. ಪಕ್ಕಾ ಕಾಂಗ್ರೆಸಿಗರಾದ ಜಿ.ಕೆ. ಪ್ರಾಣೇಶಾಚಾರ್ಯರು 'ಸಾಧನ' ಎಂಬ ಪತ್ರಿಕೆಯನ್ನು ಹೈದರಾಬಾದ್ ಕನ್ನಡಿಗರ ದುಃಖವನ್ನು ಹೊರಗೆಡಹಲಿಕ್ಕೆ ಪ್ರಾರಂಭಿಸಿದರು.

**ಕೊಡಗು**

ಕರ್ನಾಟಕ ಏಕೀಕರಣವಾಗುವುದಕ್ಕೆ ಮುಂಚೆ ಕೊಡಗು ಚೀಫ್ ಕಮಿಷನರ ಪ್ರಾಂತ್ಯವಾಗಿತ್ತು. ಅಲ್ಲಿ ಎರಡು ವೃತ್ತಪತ್ರಿಕೆಗಳಿದ್ದವು ; 'ಕೊಡಗು' (1921), 'ಕೊಡಗು ವೃತ್ತಾಂತ' ಈ ಎರಡೂ ಸ್ಥಳೀಯ ಸ್ವಭಾವದವು. ಪಿ.ಐ. ಬೆಳ್ಯಪ್ಪ ಮತ್ತು ಸಿ.ಎಂ. ಪೂಣಚ್ಚ ಇಬ್ಬರೂ ಈ ಕ್ಷೇತ್ರದಲ್ಲಿ ಪ್ರಾರಂಭಿಕರು.

**ಕರ್ನಾಟಕದಲ್ಲಿ ಸ್ವಾತಂತ್ರ್ಯಾನಂತರ ಪತ್ರಿಕೋದ್ಯಮ**

ಭಾರತೀಯ ಸ್ವಾತಂತ್ರ್ಯ ಬಂದ ಮೇಲೆ ಭಾರತೀಯ ಪತ್ರಿಕೆಗಳ ಬೆಳವಣಿಗೆಗೆ ಅನೇಕ ಕಾರಣಗಳು ಬಂದವು. ದೇಶದ ಪತ್ರಿಕೋದ್ಯಮ ಸುಭದ್ರವಾಯಿತು. ಓದುಗರಂತೂ ದಿನವೂ ಬೆಳೆಯುತ್ತಲೇ ಇದ್ದಾರೆ. ಇವರ ಆವಶ್ಯಕತೆಗಳನ್ನು ಪೂರೈಸಲು ಹೊಸಹೊಸ ಪತ್ರಿಕೆಗಳು ಹುಟ್ಟಿದವು.

ಹುಬ್ಬಳ್ಳಿಯಲ್ಲಿ ಎರಡು ಪತ್ರಿಕೆಗಳು 1947ರಲ್ಲಿ ಪ್ರಾರಂಭವಾದವು. ಟಿ. ಆರ್. ನೇಸ್ವಿ ಅವರು ಎಂ. ಗೋವರ್ಧನರಾವ್, ಟಿ. ಸಿದ್ದಪ್ಪ ಮತ್ತು ಪಾಟೀಲ ಪುಟ್ಟಪ್ಪ ಇವರ ಸಹಾಯದಿಂದ 'ನವಯುಗ' ವನ್ನು ನಡೆಸಿದರು. ಕೆಲವು ವರ್ಷ ಉಪಯುಕ್ತ ಸೇವೆ ಸಲ್ಲಿಸಿ ಆ ಮೇಲೆ ಪತ್ರಿಕೆ ನಿಂತುಹೋಯಿತು.

1941ರಲ್ಲಿ ಕೆ. ಎಫ್. ಪಾಟೀಲರು ಹುಬ್ಬಳ್ಳಿಯಲ್ಲಿ ಸ್ಥಾಪಿಸಿದ "ವಿಶಾಲ ಕರ್ನಾಟಕ" ಸ್ವಲ್ಪ ಕಾಲ ನಡೆಯಿತು. ಬೊಂಬಾಯಿಯಲ್ಲಿ ಉಪಸಚಿವರು ಆಗಿದ್ದುದರಿಂದ ಈ ಪತ್ರಿಕೆಗೆ ಪೂರ್ಣ ಸಮಯವನ್ನು ಕೊಡಲು ಆಗಲಿಲ್ಲ. ಪತ್ರಿಕೆಗೆ ಎಚ್. ಆರ್. ಇಟಗಿ ಸಂಪಾದಕರಾದರು. ಆ ಮೇಲೆ ಕೆಲವು ಕಾಲ ಪಾಟೀಲ ಪುಟ್ಟಪ್ಪನವರು—"ನವಯುಗ" ವನ್ನು ಬಿಟ್ಟ ಮೇಲೆ—ಅದರ ಸಂಪಾದಕರಾಗಿದ್ದರು. ಆದರೂ ಅದಕ್ಕೆ ಸಾಕಷ್ಟು ಬೆಂಬಲ ಸಿಗಲಿಲ್ಲ. ಮುಚ್ಚಬೇಕಾಯಿತು.

ಸ್ವಾತಂತ್ರ್ಯಾನಂತರ ಕನ್ನಡದಲ್ಲಿ ಪ್ರಾರಂಭವಾದ ವೃತ್ತ ಪತ್ರಿಕೆಗಳಲ್ಲಿ 'ಪ್ರಜಾವಾಣಿ' ಮುಖ್ಯ 1948ರಲ್ಲಿ ಅದು 'ಡೆಕ್ಕನ್ ಹೆರಾಲ್ಡ್' ಇಂಗ್ಲಿಷ್ ಪತ್ರಿಕೆಯ ಜೊತೆಗೆ ಪ್ರಾರಂಭವಾಗಲು ತೊಡಗಿತು. ಇಂಗ್ಲೀಷ್ ಪತ್ರಿಕೆ ಕೆಲವು ವಾರ ಮೊದಲು ಪ್ರಾರಂಭವಾಯಿತು. ಕೂಡಲೆ ಅದು ಜನಪ್ರಿಯವೂ ಆಯಿತು. ಅದರ ಪ್ರಥಮ ಸಂಪಾದಕರು ಬಿ. ಪುಟ್ಟಸ್ವಾಮಯ್ಯನವರು. ಆ ಮೇಲೆ ಖಾದ್ರಿ ಶಾಮಣ್ಣನವರು ಸಂಪಾದಕರಾಗಿದ್ದರು. ಈಗ ಅದರ ಮುಖ್ಯ ಸಂಪಾದಕರಾಗಿರುವ ಹಾಗೂ ಆ ಪತ್ರಿಕೆಯ ವಿಶೇಷ ಲೇಖಕ ರಾದ ಟಿ. ಎಸ್. ರಾಮಚಂದ್ರರಾಯರು, ಸಂಪಾದಕರಾದರು. 'ಪ್ರಜಾವಾಣಿ' ಬೋಧನಪರವಾದ ದಿನಪತ್ರಿಕೆ. ಅದರಲ್ಲಿ ಪ್ರಚಲಿತ ರಾಜಕೀಯ ಆರ್ಥಿಕ ವಿಷಯಗಳನ್ನು ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಮಟ್ಟದಲ್ಲಿ ಚರ್ಚಿಸಲಾಗುತ್ತದೆ.

ಬೊಂಬಾಯಿ ಕರ್ನಾಟಕದಲ್ಲಿ 1947ರ ತರುವಾಯ ಪ್ರಾರಂಭವಾದ ಮುಖ್ಯ ವಾರಪತ್ರಿಕೆಯಲ್ಲಿ ಪ್ರಮುಖವಾದುದು ಹುಬ್ಬಳ್ಳಿಯ 'ಪ್ರಪಂಚ'. 1954ರಲ್ಲಿ ಅದು ಪ್ರಾರಂಭವಾಯಿತು. ಪಾಟೀಲ ಪುಟ್ಟಪ್ಪ ಬಹಳ ಉತ್ಸಾಹಿ ಪತ್ರಿಕೋದ್ಯಮಿ ತರುಣರು ; ಅಮೇರಿಕಕ್ಕೆ ಪತ್ರಿಕೋದ್ಯಮದ ಪ್ರೌಢ ವ್ಯಾಸಂಗಕ್ಕಾಗಿ ಹೋಗಿ ಅಲ್ಲಿ ಎಂ.ಎಸ್‌ಸಿ. ಡಿಗ್ರಿಯನ್ನು ಪತ್ರಿಕೋದ್ಯಮದಲ್ಲಿ ಸಂಪಾದಿಸಿ, ಹಿಂದಿರುಗಿ ಬಂದು ಈ ಪತ್ರಿಕೆಯನ್ನು ಪ್ರಾರಂಭಿಸಿದರು.

ಕನ್ನಡ ದಿನಪತ್ರಿಕೆ 'ವಿಶ್ವವಾಣಿ' ಯನ್ನು ಹುಬ್ಬಳ್ಳಿಯಲ್ಲಿ ಪಾಟೀಲ ಪುಟ್ಟಪ್ಪನವರು 1959

ಆಗಸ್ಟ್ 31ರಲ್ಲಿ ಪ್ರಾರಂಭಿಸಿದರು. ಇದಕ್ಕೆ ನಾಲ್ಕು ಪುಟ, ಕ್ರಮವಾದ ಲೇಖನ ವೈಶಿಷ್ಟ್ಯವಿದೆ. ಎಲ್ಲಾ ಸುದ್ದಿಯನ್ನು ಕೊಡುತ್ತದೆ.

ಕನ್ನಡ ಪತ್ರಿಕೋದ್ಯಮದ ಇತಿಹಾಸ ಭಾರತೀಯ ಪತ್ರಿಕೋದ್ಯಮದ ಒಂದು ಬಹಳ ಸ್ವಾರಸ್ಯಪೂರ್ಣವಾದ ಮಹತ್ತರ ಅಧ್ಯಾಯ. ಕನ್ನಡ ಪ್ರದೇಶಗಳು ಎಲ್ಲವೂ ಒಂದೇ ಆಡಳಿತದಲ್ಲಿ ಏಕೀಕೃತವಾದದ್ದು ಕನ್ನಡ ಪತ್ರಿಕೋದ್ಯಮಕ್ಕೆ ಒಂದು ಹೊಸ ಕಳೆ ತರುವ ಸಂಕೇತ ಆಗಿದೆ. ಕನ್ನಡ ಟೈಪರೈಟರಿನ ಅವತಾರ, ಕನ್ನಡದಲ್ಲಿ ಇಂಟರ್ ಟೈಪ್ ಹಾಗೂ ಮಾನೊ ಕಾಸ್ಟರ್ ಕನ್ನಡ ಭಾಷೆಯಲ್ಲಿ ಬಂದುದರಿಂದ ಪತ್ರಿಕೋದ್ಯಮದ ಯಾಂತ್ರಿಕ ಪಕ್ಷಕ್ಕೂ ಕಳೆ ಬಂದು, ಭವ್ಯಭವಿಷ್ಯವನ್ನು ತೋರುತ್ತಿದೆ.

ಮೂಲಲೇಖಕರು : ಶ್ರೀ ನಾಡಿಗ್ ಕೃಷ್ಣಮೂರ್ತಿ
ಅನುವಾದಕರು : ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ

# ಕರ್ನಾಟಕದಲ್ಲಿ ಕ್ರೈಸ್ತಧರ್ಮ ಪ್ರಚಾರ ಸಂಸ್ಥೆಗಳು

ಹಿಂದಿನ ಅಧ್ಯಾಯದ ಪರಿಚ್ಛೇದವೊಂದರಲ್ಲಿ ಭಾರತಕ್ಕೆ ಕ್ರೈಸ್ತಧರ್ಮ ಪ್ರವೇಶವಾದುದನ್ನು ತಿಳಿಸಿ, ಅದರ ಚಾರಿತ್ರಿಕ ನಿರೂಪಣೆಯನ್ನು ಕೊಡಲಾಗಿತ್ತು. ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ನಡೆದಿರುವ ವಿದ್ಯಾಭಿವೃದ್ಧಿಯನ್ನು ಕುರಿತು ಈಗಾಗಲೇ ನಾವು ವಿಚಾರಮಾಡಿದ್ದೇವೆ. ಕ್ರೈಸ್ತಧರ್ಮ ಪ್ರಚಾರಕರ ಕೊಡುಗೆಯ ವಿಚಾರವೂ ಪ್ರಾಸಂಗಿಕವಾಗಿ ಪ್ರಸ್ತಾವಿಸಲ್ಪಟ್ಟಿದೆ. ಆದರೆ ವಿದ್ಯಾಭ್ಯಾಸ ಮತ್ತು ಸಮಾಜ ಕಲ್ಯಾಣಕ್ಷೇತ್ರಗಳಲ್ಲಿ ಕರ್ನಾಟಕವು ಅಷ್ಟೇ ಅಲ್ಲ, ಇಡೀ ಭಾರತವು ಸಾಧಿಸಿರುವ ಪ್ರಗತಿಯನ್ನು ಕುರಿತ ಯಾವ ನಿರೂಪಣೆಯೂ ಹೊರದೇಶದ ಕ್ರೈಸ್ತಧರ್ಮಸಂಸ್ಥೆಗಳು ಮಾಡಿರುವ ಮಹತ್ಕಾರ್ಯವನ್ನು ಯಥೋಚಿತವಾಗಿ ಉಲ್ಲೇಖಿಸದೆ ಪೂರ್ಣವಾಗಲಾರದು. ವಿದ್ಯಾಭ್ಯಾಸ, ವೈದ್ಯಕೀಯ ಸಹಾಯ, ಕೈಗಾರಿಕಾಪ್ರಗತಿ, ಅಚ್ಚುಕೂಟಗಳ ಪ್ರಾರಂಭ, ಕನ್ನಡವನ್ನೂ ಒಳಗೊಂಡ ಭಾರತದ ವಿವಿಧ ಭಾಷೆಗಳಲ್ಲಿ ಸಾಹಿತ್ಯಪುನರುಜ್ಜೀವನಕ್ಕಾಗಿ ನೆರವು ನೀಡುವುದು–ಈ ಧ್ಯೇಯಸಾಧನೆಗಾಗಿ ಕ್ರೈಸ್ತಸಂಸ್ಥೆಗಳು ಮಾಡಿರುವ ಶ್ರೇಷ್ಠವೂ ಮಾರ್ಗದರ್ಶಕವೂ ಆದ ಕಾರ್ಯವನ್ನು ಎಷ್ಟು ಹೇಳಿದರೂ ಸ್ವಲ್ಪವೇ. ಈಗ ನಾವು ಕರ್ನಾಟಕದ ಕಲ್ಯಾಣಕ್ಕಾಗಿ ಕ್ರೈಸ್ತಧರ್ಮಪ್ರಚಾರಕರು ನೀಡಿರುವ ಕೊಡುಗೆಯನ್ನು ಕುರಿತು ವಿಚಾರಮಾಡೋಣ.

ಕರ್ನಾಟಕದಲ್ಲಿ ಕಾರ್ಯನಿರತರಾದ ಮೊದಮೊದಲಿನ ಗೋವೆಯ ಪಾದ್ರಿಗಳಲ್ಲಿ ಫಾದರ್ ಜೋಸೆಫ್ ವಾಸ್. (Fr. Joseph Vaz) ಎಂಬವನ ಹೆಸರು ವಿಶೇಷವಾಗಿ ಉಲ್ಲೇಖಿಸಲು ಅರ್ಹವಾಗಿದೆ.

ಪರ್ವಾಡೊ (Parvado) ಧರ್ಮ ಪ್ರಚಾರಕನಾಗಿ ಕೆನರಾದಲ್ಲಿದ್ದ ಫಾದರ್ ಜೋಸೆಫ್ ವಾಸ್ ಮಂಗಳೂರಿನಲ್ಲಿ 1680 ರಿಂದ 1684ರ ವರೆಗೆ ವಾಸವಾಗಿದ್ದನು. ಇಡೀ ಜಿಲ್ಲೆಯಲ್ಲಿ ಜಾತಿಮತಗಳನ್ನು ಗಣನೆಗೆ ತಾರದೆ ಸಮಾಜದ ಮೇಲ್ಮೆಗಾಗಿ ನಡೆಸಿದ ಬಹುಮಟ್ಟಿನ ಕಾರ್ಯಕಲಾಪಗಳಿಗೆ ಈತನೇ ಕಾರಣ. ಈತನು ತನ್ನ ಸರ್ವಸ್ವವನ್ನೂ ಬಡವರಿಗೆ ದಾನಮಾಡಿದನು.

ಹಾಗೆಯೇ ಜರ್ಮನಿಯವನಾದ ಫಾದರ್ ಆಲ್ಬರ್ಟ್ ಜ್ಯಾರ್ಟ್, ಎಸ್.ಜೆ. [Fr. Albert Zart, S. J.] 1756 ರಿಂದ 1763ರ ವರೆಗೆ ಬೆಳಗಾಂ ಜಿಲ್ಲೆಯ ಕಿತ್ತೂರಿನಲ್ಲಿ ಬಹಳ ಕೆಲಸ ಮಾಡಿದನು. ಆದರೆ ಟಿಪ್ಪು ಸುಲ್ತಾನನು ಕ್ರೈಸ್ತರ ಚಟುವಟಿಕೆಗಳನ್ನು ಕಾರ್ಯತಃ ನಿಗ್ರಹಿಸಲಾಗಿ ಧರ್ಮಪ್ರಚಾರಕರ ಸಾಹಸ ತಟಸ್ಥವಾಗಬೇಕಾಯಿತು.

ಇಂಗ್ಲಿಷರ ಪ್ರವೇಶ, ಮೈಸೂರಿನ ಸಿಂಹಾಸನದಲ್ಲಿ ಹಿಂದೂ ರಾಜಮನೆತನದವರ ಪುನಃಸ್ಥಾಪನೆ–ಇವು ಕಾರಣವಾಗಿ 1799ರಿಂದ ಪರಿಸ್ಥಿತಿ ಬದಲಾಯಿತು.

ಪ್ರಖ್ಯಾತ ಧರ್ಮಪ್ರಚಾರಕರಿಬ್ಬರು ರಂಗದ ಮೇಲೆ ಕಾಣಿಸಿಕೊಂಡರು. ಅವರು ಸೆಯಿಂಟ್ ಅನ್ನೆ (St. Anne) ಚರ್ಚಿಗೆ ಸೇರಿದ ಅಬ್ಬೆ ಡುಬಾಯ್ (Abbe Dubois) ಮತ್ತು ಫಾದರ್ ಫ್ರಾನ್ಸಿಸ್ ಕ್ಷೇವಿಯರ್ (Fr. Francis Xavier) ಎಂಬವರು. ಅಬ್ಬೆ ಡುಬಾಯ್ ಟಿಪ್ಪುವಿನ ಆಡಳಿತ ಕಾಲದಲ್ಲಿ ಬಾರಾ ಮಹಲ್ಸ್ ಎಂಬಲ್ಲಿ ಕೆಲಸಮಾಡುತ್ತಿದ್ದನು. ಟಿಪ್ಪುವಿನ ಮರಣಾನಂತರ, ಅವನು ಬೆಂಗಳೂರಿಗೆ ಹೋಗಿ

ಚೆದರಿಹೋಗಿದ್ದ ಕ್ರೈಸ್ತ ಮತೀಯರನ್ನು ಒಂದುಗೂಡಿಸಬೇಕೆಂದು ಅವನ ಮೇಲಧಿಕಾರಿ ಬಿಷಪ್ ಚೆರ್‌ಬೊನೌರನ (Bishop Cherbonour) ಅಪ್ಪಣೆಯಾಯಿತು.

ಅವನು ತನ್ನ ಕೋಮಿಗಾಗಿ ಬೆಂಗಳೂರು ಮತ್ತು ಕೆನರಾಗಳಲ್ಲಿ 1800 ರಿಂದ 1822ರ ವರೆಗೆ ಕೆಲಸಮಾಡಿದನು. ಅವನ ಕಾರ್ಯ, ಅದರಲ್ಲೂ ಮುಖ್ಯವಾಗಿ ಸಮಾಜ ಕಾರ್ಯ, ಬ್ರಿಟಿಷ್ ನಿವಾಸಿಗಳ ಅತ್ಯಧಿಕ ಪ್ರಶಂಸೆಗೆ ಪಾತ್ರವಾಯಿತು. ಅವನ ಪ್ರಯಾಣದ ವೆಚ್ಚವನ್ನು ಈಸ್ಟ್ ಇಂಡಿಯಾ ಕಂಪನಿಯೇ ವಹಿಸಿಕೊಂಡಿತು. ಸೈಂಟ್ ಅನ್ನೆಯ ಫಾದರ್ ಫ್ರಾನ್ಸಿಸ್ ಕ್ಸೇವಿಯರ್ ಸಿಸಲಿಯ ಪುರಾತನವೂ ಶ್ರೇಷ್ಠವೂ ಆದ ಪೆಸೆಟ್ಟಿ (Pescetti) ಮನೆತನಕ್ಕೆ ಸೇರಿದವನು. ಅವನು ಕಾರ್‌ಮೆಲ್ ಪಂಥದವನು. 1801ನೆಯ ಇಸವಿ ಏಪ್ರಿಲ್ 13 ರಂದು ಅವನು ಸುಂಕೇರಿಗೆ ಬಂದು ತಲಪಿದನು. ಟಿಪ್ಪುವಿನ ಯೋಧರು ತಮ್ಮನ್ನು ಬಂಧಿಸದಂತೆ ತಲೆತಪ್ಪಿಸಿಕೊಳ್ಳುವ ಸಲುವಾಗಿ ಕ್ರಿಶ್ಚಿಯನ್ನರು ಮನೆಮಠಗಳನ್ನು ತೊರೆದು ದೇಶಾಂತರ ವಾಸಿಗಳಾಗಿದ್ದರು. ಇವರು ತಮ್ಮ ಸೌಕರ್ಯಕ್ಕಾಗಿ 1792ರಿಂದಲೇ ಲೂಟಿಯ ಕೆಲಸದಲ್ಲಿ ತೊಡಗಿದ್ದ ಎಂಗಿನಾಯಕ (Engi Naik) ಮತ್ತು ಇತರ ಡಕಾಯಿತರ ತಂಡಗಳನ್ನು ಸೇರಿಕೊಂಡು ಹೆಚ್ಚಿನ ಹಾವಳಿಗೆ ಕಾರಣರಾದರು. ಕೊನೆಗೆ 1799ರಲ್ಲಿ ಶಾಂತಿ ಸ್ಥಾಪನೆಯಾದ ಮೇಲೆ ಈ ಕ್ರಿಶ್ಚಿಯನ್ನರು ಹಿಂದಿರುಗಿದರು. ಈ ಕೋಮಿನವರನ್ನು ಸಂಘಟಿಸುವ ಕೆಲಸ ಫಾದರ್ ಕ್ಸೇವಿಯರನ ಪಾಲಿನದಾಯಿತು. ಅವನು ಸರ್ಕಾರದಿಂದ ಸ್ವಲ್ಪ ಭೂಮಿಯನ್ನು ಪಡೆದುಕೊಂಡು ಅವರು ಅದರಲ್ಲಿ ನೆಲಸುವಂತೆ ಮಾಡಿದನು. ಇವನು ಸುಂಕೇರಿಯಲ್ಲಿ 1801 ರಿಂದ 1831ರ ವರೆಗೂ ಕೆಲಸಮಾಡಿದನು.

ಹಳೆಯ ಧರ್ಮ ಪ್ರಚಾರಕ ಮಂಡಳಿಯ ಸಂಸ್ಥೆ 'ಎತ್ರಾಂಗೆರೆ' (Extrangere) 1776ರಲ್ಲಿ ಪ್ರಾರಂಭಮಾಡಿದ್ದ ಕೆಲಸವನ್ನು 1822ರ ವರೆಗೂ ಅಬ್ಬೆಡುಬಾಯ್ ಮುಂದುವರಿಸಿದನು. ಇನ್ನೂ ಮುಂದುವರಿದು ಅದು 'ಫಾರಿನ್ ಮಿಷನ್ ಸೊಸೈಟಿ ಆಫ್ ಪ್ಯಾರಿಸ್' (Foreign Mission Society of Paris) ಎಂಬ ಹೆಸರನ್ನು ತಳೆಯಿತು. ಈ ಸಂಘವು ಬೆಂಗಳೂರಿನ ಕ್ರಿಶ್ಚಿಯನ್ನರ ಎಲ್ಲ ಆವಶ್ಯಕತೆಗಳನ್ನೂ ಪೂರೈಸುತ್ತಿತ್ತು.

ಬಾಸೆಲ್ ಜರ್ಮನ್ ಇವಾನ್‌ಜೆಲಿಕಲ್ ಮಿಷನಿಗೆ (Basel German Evangelical Mission) ಸೇರಿದ ಪ್ರಚಾರಕರು 1834ರಲ್ಲಿ ಮಂಗಳೂರಿಗೆ ಬಂದು ಬಲ್ಮಠ (Balmatta) ಎಂಬಲ್ಲಿ ನೆಲಸಿದರು. ಜರ್ಮನಿಯಿಂದ ಬಂದ ಇವರು ಲೂಥರ್ ಮಠಕ್ಕೆ ಸೇರಿದವರು. ಇವರು ದೊಡ್ಡ ವಿದ್ವಾಂಸರೂ ಆಗಿದ್ದರು.

ಕ್ಯಾಥೊಲಿಕ್ ಪಂಗಡವು ಉನ್ನತ ಶಿಕ್ಷಣ ಬೇಕೆಂಬ ಅಪೇಕ್ಷೆ ಹೊಂದಿದ್ದಿತು. ದೀರ್ಘಕಾಲ ಸಂಧಾನ ನಡೆಸಿದ ಮೇಲೆ ರೋಮ್ ಮಠವು ಜೀಸಸ್ ಸೊಸೈಟಿಯ ಸದಸ್ಯರ ವರ್ಗವನ್ನು ಮಂಗಳೂರಿಗೆ ಕಳುಹಿಸಲು ಸಮ್ಮತಿಸಿತು. 1878 ರ ಡಿಸೆಂಬರ್ 31 ರಂದು ಈ ಸದಸ್ಯರು ಮಂಗಳೂರನ್ನು ಬಂದು ತಲಪಿದರು,

ಕ್ರೈಸ್ತಧರ್ಮ ಪ್ರಚಾರಕರ ಪೈಕಿ ವಿದ್ಯಾಕ್ಷೇತ್ರದಲ್ಲಿ ಮೊದಲಿಗರಾಗಿದ್ದವರೆಂದರೆ ಇವರೆ. ಇವರೆಲ್ಲರೂ ಯೂರೋಪಿನ ಪ್ರಮುಖ ವಿಶ್ವವಿದ್ಯಾನಿಲಯಗಳಲ್ಲಿ ಶಿಕ್ಷಣಹೊಂದಿದ್ದುದರಿಂದ ವಿಶೇಷಾರ್ಹತೆಯುಳ್ಳವರೂ ಶ್ರೇಷ್ಠ ವಿದ್ವಾಂಸರೂ ಆಗಿದ್ದರು. ಅವರಿಗೆ ಭಾರತೀಯ ಜೀವನದ ಸ್ಥಿತಿಗತಿಗಳು ಹೊಸತಾಗಿದ್ದರೂ ಕ್ರಮಕ್ರಮವಾಗಿ ಅವರು ಅವಕ್ಕೆ ಒಗ್ಗಿಕೊಂಡು, ಮನಃಪೂರ್ವಕವಾಗಿ ಜನಗಳೊಡನೆ ಬೆರೆಯತೊಡಗಿದರು.

ಹೀಗೆ ಬಾಸೆಲ್ ಮಿಷನ್ ಸೊಸೈಟಿಯು (Basel Mission Society) 1836 ರಲ್ಲಿ ಕನ್ನಡ ಜಿಲ್ಲೆಯ ಮಂಗಳೂರಿನಲ್ಲಿ ಮೊದಲ ಶಾಲೆಯನ್ನು ತೆರೆಯಿತು. ಮಂಗಳೂರಿನ ಕಾರ್ಮೆಲ್ ಪಂಥದವರು 1860 ರಲ್ಲಿ ಚರ್ಚಿನಲ್ಲಿ ಒಂದು ಶಾಲೆಯನ್ನು ತೆರೆದಿದ್ದರು. ಅದನ್ನು ನಡೆಸುತ್ತಿದ್ದವರು ಐರಿಷ್ ಸೋದರರು (The Irish Brothers).

ಮಂಗಳೂರಿನ ಕ್ಯಾಥೊಲಿಕ್ ಪಂಗಡದವರು ಈ ಶಿಕ್ಷಣದಿಂದ ತೃಪ್ತರಾಗದೆ ಉನ್ನತ ಶಿಕ್ಷಣಕ್ಕಾಗಿ ವರಾತ ಮಾಡತೊಡಗಿದರು. ಇದರ ಫಲವಾಗಿ, ಜೇಸಸ್ ಸೊಸೈಟಿಯ ಸದಸ್ಯರು ಆಗಮಿಸಿದಾಗ 1879 ರಲ್ಲಿ ಅವರು ಸೆಯಿಂಟ್ ಅಲೋಸಿಯಸ್ ಕಾಲೇಜನ್ನು (St. Aloysius College) ತೆರೆದರು.

1882 ರಲ್ಲಿ ಫಾರಿನ್ ಮಿಷನ್ ಸೊಸೈಟಿ ಆಫ್ ಪ್ಯಾರಿಸ್ ಬೆಂಗಳೂರಿನಲ್ಲಿ ಸೆಯಿಂಟ್ ಜೋಸೆಫ್ ಕಾಲೇಜನ್ನು (St. Joseph College) ಪ್ರಾರಂಭಿಸಿತು. ಅದನ್ನು 1937 ರಲ್ಲಿ ಮಂಗಳೂರಿನ ಜೇಸಸ್ ಸೊಸೈಟಿಯ ಸದಸ್ಯರಿಗೆ ವಹಿಸಿಕೊಡಲಾಯಿತು.

ಧರ್ಮ ಪ್ರಚಾರಕರಲ್ಲಿ ಪುರುಷರ ಸರಿಸಮಕ್ಕೆ ಸ್ತ್ರೀಯರೂ ಕರ್ಣಾಟಕದ ವಿದ್ಯಾಕ್ಷೇತ್ರವನ್ನು ಪ್ರವೇಶಿಸಿದರು. ಮಂಗಳೂರಿನ ಕಾರ್ಮೆಲ್ ತಂಡದವರು, ಫ್ರಾನ್ಸಿನಲ್ಲಿರುವ ಸಂನ್ಯಾಸಿನಿಯರ ವರ್ಗವೊಂದರಿಂದ ಕೆಲವು ಸದಸ್ಯರನ್ನು ಕರೆಸಿಕೊಂಡರೆ, ಮಂಗಳೂರಿನಲ್ಲಿ ಬಾಲಿಕೆಯರ ವಿದ್ಯಾಭ್ಯಾಸದ ಪ್ರಸಾರವಾಗುವುದೆಂದು ಪೂರ್ವಭಾವಿಯಾಗಿಯೇ ಆಲೋಚಿಸಿದ್ದರು. ಈ ವರ್ಗದ ಸದಸ್ಯರು ಮಂಗಳೂರಿಗೆ ಬಂದ ಮೇಲೆ ಸಂನ್ಯಾಸಿನಿಯರ ಒಂದು ಸ್ಥಳೀಯ ವರ್ಗ ತಲೆಯೆತ್ತುವಂತೆ ಕುಶಲತೆಯಿಂದ ಕೆಲಸ ಮಾಡಿದರು. ಹೀಗೆಯೇ ಮಂಗಳೂರಿನಲ್ಲಿ ಅಪಾಸ್ಟಲಿಕ್ ಕಾರ್ಮೆಲ್ ವರ್ಗ (Order of Apostolic Carmel) ವೂ ಬೆಳೆಯಿತು. ಇದು ಗಮನಾರ್ಹವಾಗಿ ಬೆಳೆದು, ಭಾರತ ಮತ್ತು ಸಿಲೋನ್‌ಗಳಲ್ಲೆಲ್ಲಾ ಶಾಖೆಗಳನ್ನು ಪ್ರಸರಿಸಿತು. ಅವರ ಕೆಲವು ಶಾಖೆಗಳನ್ನು ಈಗಲೂ ಕರ್ಣಾಟಕದಲ್ಲಿ ಕಾಣಬಹುದು.

ಇಷ್ಟೇ ಅಲ್ಲದೆ, ಮಂಗಳೂರಿನಲ್ಲಿ ಸಹ ಉರ್ಸುಲ ಪಂಗಡದವರು (Ursulines M.) ಮತ್ತು ಬೆಥಾನಿ ಸೋದರಿಯರು (Bethany sisters) ಎಂದು ಹೆಸರಾದ ಸಂನ್ಯಾಸಿನಿಯರ ಇತರ ಸ್ಥಳೀಯ ವರ್ಗಗಳೂ ಇವೆ. ಇದರ ಜೊತೆಗೆ ಕೇರಳ ಮೊದಲಾದ ಇತರ ಸ್ಥಳಗಳ ಸಂನ್ಯಾಸಿನಿಯರ ವರ್ಗಗಳೂ ಇದ್ದು, ಅವು ತಮ್ಮ ಶಾಖೆಗಳನ್ನು ಕರ್ಣಾಟಕದಲ್ಲೂ ಹರಡಿವೆ.

ಈ ಎಲ್ಲ ಮಹಿಳಾ ಮತೀಯ ವರ್ಗಗಳೂ ವಿದ್ಯಾಪ್ರಸಾರದಲ್ಲಿ ಸಹ ನಿರತವಾಗಿವೆ. ಇವು ಕರ್ಣಾಟಕದಾದ್ಯಂತ, ಮೂಲೆ ಮೂಲೆಯ ಹಳ್ಳಿಗಳಲ್ಲಿ ಸಹ, ಅತಿಶಯವಾಗಿ ಬೆಳೆಯುತ್ತಿರುವ ವಿದ್ಯಾ ಸಂಸ್ಥೆಗಳನ್ನು ನಡೆಸುತ್ತಿವೆ. ಮೈಸೂರು, ಮಂಗಳೂರು ಮತ್ತು ಬೆಂಗಳೂರುಗಳಲ್ಲಿ ಬಹು ದಕ್ಷತೆಯಿಂದ ಕೆಲಸಮಾಡುತ್ತಿರುವ, ಸ್ತ್ರೀಯರಿಗೇ ಮೀಸಲಾಗಿರುವ ಪದವೀತರಗತಿಯ ಕೆಲವು ಕಾಲೇಜುಗಳು ಇವುಗಳ ವಶದಲ್ಲಿವೆ.

ಕನ್ನಡ ಭಾಷೆ ಬಗೆಬಗೆಯ ಉಚ್ಚಾರಗಳಿಂದ ಕೂಡಿ, ಮುದ್ರಣಕಾರ್ಯಕ್ಕೆ ಅಗಾಧವಾದ ತೊಡಕಾಗಿ ನಿಂತಿತು. ಆದರೂ ಅವರು ಎದೆಗುಂದದೆ, ಕಲ್ಲಚ್ಚು ಮೊದಲಾದವುಗಳಿಂದಲೇ ಕೆಲಸವನ್ನು ಮುಂದು ವರಿಸಿದರು. ಈ ಒರಟಾದ ಸಲಕರಣೆಯಿಂದಲೇ ಕನ್ನಡದ ಶ್ರೇಷ್ಠಕೃತಿಗಳಾದ ಜೈಮಿನಿ ಭಾರತ (1886),

ದಶಪರ್ವಭಾರತ (1851), ಬಸವ ಪುರಾಣ (1850) ಮತ್ತು ಚೆನ್ನಬಸವಪುರಾಣ (1851) ಗಳನ್ನು ಅಚ್ಚುಹಾಕಿದರು.

ಯಂತ್ರೋಪಕರಣಗಳು ಸಾಕಷ್ಟು ಸಂಗ್ರಹವಾದ ಮೇಲೆ ಸೀಸವನ್ನು ಬಳಸಲಾರಂಭಿಸಿದರು. ಈ ಉದ್ಯಮದಲ್ಲಿ, ಅವರಿಗೆ ಕಸಬುದಾರರಾಗಿದ್ದ ಮಂಗಳೂರಿನ 'ಲೋಹಕಾರ'ರ ನೆರವು ದೊರಕಿತು. ಅವರ ಪೈಕಿ ಅನಂತಾಚಾರಿ ಎಂಬವನ ಹೆಸರು ಪ್ರಸಿದ್ಧವಾದುದು. ಇವನು ಈ ಅಚ್ಚಿಗಾಗಿಯೂ ಬೊಂಬಾಯಿ ಯಲ್ಲಿ ಗುಜರಾತಿ ಅಚ್ಚಿನ ಮೊಳೆಗಾಗಿಯೂ ವಿಶೇಷವಾಗಿ ಶ್ರಮಿಸಿದವನು. ಬೊಂಬಾಯಿಯಲ್ಲಿ ಅವನು ತಯಾರಿಸಿದ ನಾಗರೀಲಿಪಿಯ ಮುದ್ರಾಕ್ಷರಗಳ ಮಾಲೆಗೆ ಅವನ ಹೆಸರನ್ನೇ ('Anant Shades') ಕೊಡಲಾಗಿದೆ.

ಬಾಸೆಲ್ ಮಿಷನ್ ಅಚ್ಚುಕೂಟವು (Basel Mission Press) ಸಾಕಷ್ಟು ಪ್ರಬಲವಾದ ಮೇಲೆ ಈ ಧರ್ಮಪ್ರಚಾರಕರು ಬಳ್ಳಾರಿಯಲ್ಲಿ ಮುದ್ರಿಸುತ್ತಿದ್ದ ಕನ್ನಡ ಸಮಾಚಾರ (Kannada Samachar) ವೆಂಬ ಪತ್ರಿಕೆಯನ್ನು ಮಂಗಳೂರಿಗೇ ತಂದು ಮುದ್ರಿಸಲಾರಂಭಿಸಿದರು.

ಶೀಘ್ರದಲ್ಲೇ ಈ ಅಚ್ಚುಕೂಟವು ಪ್ರಾಮುಖ್ಯವನ್ನು ಪಡೆಯಿತು. ಬೈಬಲ್ ಸಂಬಂಧವಾದ ಹಲವು ಗ್ರಂಥಗಳ ಜೊತೆಗೆ ಅಕ್ಷರ ಮಾಲಾ (1844), ನೀತಿಪಾಠ (1848), ಭೂಗೋಳ (1845) ಮೊದಲಾದ ಶಾಲೋಪಯೋಗಿ ಪುಸ್ತಕಗಳನ್ನು ಸಹ, ಅವರು ಅಚ್ಚುಮಾಡಲಾರಂಭಿಸಿದರು. ಇವು ಯಂತ್ರದ ಅಚ್ಚಿನಲ್ಲಿ ಅಚ್ಚಾದುವು. ಬೊಂಬಾಯಿ ಮತ್ತು ಮದ್ರಾಸ್ ಸರ್ಕಾರಗಳು ಶಾಲಾಪುಸ್ತಕ ಮೊದಲಾದವುಗಳನ್ನು ಅಚ್ಚುಮಾಡಲು ಅವರ ಸೇವೆಯನ್ನು ನಿಯೋಜಿಸಿಕೊಂಡುವು.

ಅವರು ತುಳು ಭಾಷೆಯ ಪುಸ್ತಕಗಳನೂ ನೀಲಗಿರಿಯ ಬಡಗರಿಗಾಗಿ ಅವರ ಬಡಗ ಭಾಷೆಯ ಪುಸ್ತಕಗಳನ್ನೂ ಕನ್ನಡಲಿಪಿಯಲ್ಲಿ ಮುದ್ರಿಸಿದರು. ಇವುಗಳೇ ಅಲ್ಲದೆ ಮೂರು ಸಾವಿರದ ಐನೂರಕ್ಕೂ ಮೀರಿದ ಕನ್ನಡ ಗಾದೆಗಳ ಒಂದು ಮಾಲೆ, ಕನಕದಾಸರ ಹರಿಭಕ್ತಿಸಾರ, ರಾವಣ ದಿಗ್ವಿಜಯವೆಂಬ ಯಕ್ಷಗಾನ—ಇವೂ ಅಚ್ಚಾದುವು.

ರೆವರೆಂಡ್ ಜಿ. ಫ್ಲೆಸ್ಟ್ (G. Phlest) ಎಂಬವನಿಂದ ಇಲ್ಲಿ ಸೀಸದ ಮುದ್ರಾಕ್ಷರಗಳ ಬಳಕೆ 1862ರಲ್ಲಿ ಪ್ರಾರಂಭವಾಯಿತು. ಮೂವರು ಭಾರತೀಯ ತಜ್ಞರ ಸಲಹೆಯ ಮೇರೆಗೆ ಇವು ಜರ್ಮನಿಯ ಬಾಸೆಲ್ ನಗರದಲ್ಲಿ ತಯಾರಾದವು

ಜೀಸಸ್ ಸೊಸೈಟಿಯ ಸದಸ್ಯರು ಸಹ ಕೊಡಿಯಾಲಬೈಲ್ ಅಚ್ಚುಕೂಟವನ್ನು 1882ರಲ್ಲಿ ಆರಂಭಿಸಿದರು. ಈ ಅಚ್ಚುಕೂಟವು ಕೆನರಾದಲ್ಲಿ ಮಾತ್ರವೇ ಅಲ್ಲದೆ ಪಶ್ಚಿಮ ಭಾರತದಲ್ಲಿ ಸಹ ಮಹತ್ವದ ಪಾತ್ರವನ್ನು ವಹಿಸಿತು. ಇದು ಭದ್ರವೂ ಮನೋಹರವೂ ಆದ ರಕ್ಷಾಪುಟ ಬಂಧನಕ್ಕೆ ಹೆಸರುವಾಸಿಯಾಗಿದ್ದಿತು. ಜೊತೆಗೆ ಈ ಅಚ್ಚುಕೂಟದಲ್ಲಿ ಫಾದರ್ ಥಾಮಸ್ ಸ್ಟೀಫನ್ಸ್ ಎಸ್. ಜೆ. (Fr. Thomas Stephens S. J.) ಎಂಬವನ 'ಕ್ರೈಸ್ತಪುರಾಣ'ವನ್ನು ಜೋಸೆಫ್ ಸಾಲ್ಡಾನಾ (Joseph Saldanha) ಎಂಬ ಶ್ರೇಷ್ಠ ವಿದ್ವಾಂಸನು ಇಂಗ್ಲಿಷ್ ಲಿಪಿಯಲ್ಲಿ ಮುದ್ರಿಸಿದನು.

ಬಾಸೆಲ್ ಮಿಷನ್ ಸೊಸೈಟಿಯು 1851ರಲ್ಲಿ ಕೈಮಗ್ಗದ ನೆಯ್ಗೆಯನ್ನು ಪ್ರಾರಂಭಿಸಿತು. ಜರ್ಮನಿಯವರಿಂದ ಪಡೆದ ಬಹುಮಟ್ಟಿನ ತಾಂತ್ರಿಕ ಜ್ಞಾನಕ್ಕೂ ಅದರಲ್ಲೂ ಮುಖ್ಯವಾಗಿ ವೇಗವಾಗಿ

ತಿರುಗುವ ಲಾಳಿಯಿಂದ ಕೂಡಿ 'ಧರ್ಮಪ್ರಚಾರಕರ ಮಗ್ಗ' (Mission Loom)ವೆಂದು ಹೆಸರು ಪಡೆದ ಮಗ್ಗದ ಬಳಕೆಗೂ ಈ ಸಂಘವೇ ಕಾರಣವಾಗಿದೆ. ಜರ್ಮನಿಯ ಧರ್ಮಪ್ರಚಾರಕರಿಂದ ಪ್ರಾರಂಭಿಸಲ್ಪಟ್ಟ ಈ ಕೈಮಗ್ಗದ ಕೈಗಾರಿಕೆಯು ಈಗಲೂ ಆ ಜಿಲ್ಲೆಯಲ್ಲಿ ಅಭಿವೃದ್ಧಿಹೊಂದುತ್ತಿದೆ.

ಬಾಸೆಲ್ ಧರ್ಮಪ್ರಚಾರಕರು ಕೈಮಗ್ಗದ ನೆಯ್ಗೆಯಲ್ಲಿ 'ಖಾಕಿ' ಎಂಬ ಹೆಸರಿನಿಂದ ಜನಪ್ರಿಯ ವಾಗಿರುವ, ಒಂದು ಬಣ್ಣವನ್ನು ಹೊರತಂದರು. ಈ ಬಣ್ಣದ ಬಟ್ಟೆಯು ಪೋಲಿಸರ ಸಮವಸ್ತ್ರಕ್ಕಾಗಿ ಭಾರತದಾದ್ಯಂತವೂ ಸೈನಿಕ ಸಿಬ್ಬಂದಿಗಳ ಸಮವಸ್ತ್ರಕ್ಕಾಗಿ ಬ್ರಿಟಿಷ್ ಸಾಮ್ರಾಜ್ಯದಾದ್ಯಂತವೂ ವಿನಿಯೋಗ ವಾಗುತ್ತಿತ್ತು. ಇಂಗ್ಲಿಷ್ ಭಾಷೆಯನ್ನಾಡುವ ಕಡೆಗಳಲ್ಲೆಲ್ಲಾ 'ಖಾಕಿ' ಎಂಬ ಮಾತೂ ಬಟ್ಟೆಯೂ ಬಹಳ ಜನಪ್ರಿಯವಾದವು.

ಹೆಂಚಿನ ತಯಾರಿಕೆಯನ್ನು ಆರಂಭಿಸಿ ಊರ್ಜಿತಗೊಳಿಸುವುದರಲ್ಲಿ ಬಾಸೆಲ್ ಧರ್ಮಪ್ರಚಾರಕರು ಮೊದಲಿಗರಾದರು. "ಮಂಗಳೂರು ಹೆಂಚುಗಳು" ಎಂದು ಹೆಸರಾದ ಈ ಹೆಂಚುಗಳು ಜಗತ್ಪ್ರಸಿದ್ಧವಾಗಿ ಪ್ರಪಂಚದ ಮಾರುಕಟ್ಟೆಯಲ್ಲೂ ಸ್ಥಾನವನ್ನುಗಳಿಸಿಕೊಂಡಿವೆ. 1865ರಲ್ಲಿ ಪ್ರಾರಂಭವಾದ ಈ ಕೈಗಾರಿಕೆಯು ಈಗಲೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದು ಪ್ರಮುಖವಾದ ಕೈಗಾರಿಕೆಯಾಗಿದೆ.

ಬಾಸೆಲ್ ಸಂಸ್ಥೆಯು ಕಬ್ಬಿಣವನ್ನು ಎರಕ ಹೊಯ್ಯುವ ಒಂದು ಕಾರ್ಖಾನೆಯನ್ನು ಸಹ ಸ್ಥಾಪಿಸಿತು. ಆ ಜಿಲ್ಲೆಯಲ್ಲಿರುವ ಈ ಬಗೆಯ ಕಾರ್ಖಾನೆಗಳಲ್ಲಿ ಇದೇ ಮೊತ್ತ ಮೊದಲಿನದು.

ಹೊಸತಾಗಿ ಕ್ರೈಸ್ತಮತಕ್ಕೆ ಸೇರಿದ ಜೆಪ್ಪುಗ್ರಾಮ ನಿವಾಸಿಗಳ ದೊಡ್ಡ ತಂಡಕ್ಕೆ ಉದ್ಯೋಗವನ್ನು ಕಲ್ಪಿಸುವ ಮುಖ್ಯ ಉದ್ದೇಶದಿಂದ ಆ ಗ್ರಾಮದಲ್ಲೇ ಜೀಸಸ್ ಸೊಸೈಟಿಯ ಸದಸ್ಯರು 'ಸೈಂಟ್ ಜೋಸೆಫ್ ಕೈಗಾರಿಕೋದ್ಯಮ'ಗಳನ್ನು (St. Joseph's Industrial Works) 1889ರಲ್ಲಿ ಪ್ರಾರಂಭಿಸಿದರು. ಇವು ಆ ಜಿಲ್ಲೆಯಲ್ಲಿ ಅಭಿವೃದ್ಧಿ ಹೊಂದುತ್ತಿರುವ ಸಂಸ್ಥೆಗಳಾಗಿದ್ದು ಇಡೀ ಭಾರತದ ಕೈಗಾರಿಕೋದ್ಯಮಿಗಳ ಗಮನವನ್ನು ಸೆಳೆದಿವೆ.

ವೈದ್ಯಕೀಯ ಕ್ಷೇತ್ರದಲ್ಲಿ ಕ್ರೈಸ್ತಧರ್ಮ ಪ್ರಚಾರಕರು ಭಾರತದಲ್ಲೆಲ್ಲಾ ಕ್ರೈಸ್ತರಿಂದಲೂ ಕ್ರೈಸ್ತೇತರ ರಿಂದಲೂ ಏಕಪ್ರಕಾರವಾಗಿ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ಧರ್ಮಪ್ರಚಾರಕರೊಬ್ಬೊಬ್ಬರೂ ಮುಖ್ಯವಾಗಿ ಬಡ ಕ್ರೈಸ್ತರಿಗೋಸ್ಕರ, ಹೋಮಿಯೋಪತಿಯ ಹಾಗೂ ರೋಗ ಚಿಕಿತ್ಸೆಯ (Homeopathic and Tissue-Remedies) ಔಷಧಿಗಳುಳ್ಳ ಪೆಟ್ಟಿಗೆಯೊಡನೆ ವೈಯಕ್ತಿಕವಾಗಿ ಕಾರ್ಯಾರಂಭ ಮಾಡಿದರು. 1891ರಲ್ಲಿ ಫಾದರ್ ಅಗಸ್ಟಸ್ ಮುಲ್ಲರ್ ಎಸ್. ಜೆ. (Fr. Augustus Muller S J.) ಎಂಬವನಿಂದ ಸ್ಥಾಪಿತವಾಗಿ ಈಗ ಜಗತ್ ಪ್ರಸಿದ್ಧವಾಗಿರುವ ಮಂಗಳೂರಿನ 'ಫಾದರ್ ಮುಲ್ಲರ್ ಸಂಸ್ಥೆ'ಗಳಿಗೆ ಇದೇ ನಾಂದಿಯಾಯಿತು. ಈಗ ಈ ಸಂಸ್ಥೆಯಲ್ಲಿ ಮಕ್ಕಳ ಆಸ್ಪತ್ರೆ, ಶಸ್ತ್ರ ಚಿಕಿತ್ಸಾಲಯ, ಹೆರಿಗೆ ಆಸ್ಪತ್ರೆ, ಕ್ಷಯದ ಆಸ್ಪತ್ರೆ, ಕುಷ್ಠರೋಗದ ಆಸ್ಪತ್ರೆ ಮತ್ತು ಅನಾಥಾಲಯ, ದಾದಿಯರ ಶಿಕ್ಷಣಶಾಲೆ, ಔಷಧದ ಮತ್ತು ಶಸ್ತ್ರಚಿಕಿತ್ಸೆಯ ಸಾಮಾನ್ಯ ಆಸ್ಪತ್ರೆಗಳು ಇವೆ.

1900ರಲ್ಲಿ ವಿಕ್ಟೋರಿಯಾ ಆಸ್ಪತ್ರೆ ಪ್ರಾರಂಭವಾಗುವ ವರೆಗೆ ಹಳೆಯ ಮೈಸೂರು ರಾಜ್ಯದಲ್ಲಿ ನಿಜವಾಗಿಯೂ ಇದ್ದುದು 'ಸೈಂಟ್ ಮಾರ್ಥಾಸ್ ಆಸ್ಪತ್ರೆ' (St. Marthas Hospital) ಒಂದೇ

ಒಂದು. ಇದನ್ನು ಗುಡ್‌ಷೆಪರ್ಡ್ (Good Shepherd) ಸೋದರಿಯರು ಸೇವಾತತ್ಪರರಾಗಿ ನಡೆಸುತ್ತಿದ್ದಾರೆ.

ಮೈಸೂರಿನ ಹೋಲ್ಡ್ಸ್‌ವರ್ತ್ ಮೆಮೋರಿಯಲ್ ಆಸ್ಪತ್ರೆಯೂ ಉಲ್ಲೇಖಾರ್ಹವಾದುದು.

ಅವರ ಸಂಸ್ಥೆಗಳಲ್ಲಿ ಕುಷ್ಠರೋಗವು ಬೃಹದಾಕಾರವಾಗಿ ಕಾಣಿಸುತ್ತದೆ. ಮಂಗಳೂರಿನಲ್ಲಿ ಫಾದರ್ ಮುಲ್ಲರ್ ಸಂಸ್ಥೆಗೆ ಸೇರಿದಂತಿರುವ ಕುಷ್ಠರೋಗಿಗಳ ಕೊಠಡಿಯು ಆ ಬಗೆಯಲ್ಲೇ ಏಕಮಾತ್ರವೂ ಅದ್ವಿತೀಯವೂ ಆಗಿದೆ. ಬೆಳಗಾಂ ಬಳಿಯಲ್ಲಿರುವ ಹಿಂಡಲಗಿಯಲ್ಲಿ ಮತ್ತೊಂದು ಕುಷ್ಠರೋಗಿಗಳ ಅನಾಥಾಲಯವಿದೆ.

ಮಾನವ ಹಿತಸಾಧನೆಯ ಮತ್ತು ಜನೋಪಕಾರದ ಕಾರ್ಯಗಳಿಗಾಗಿ ಈ ಧರ್ಮಪ್ರಚಾರಕ ಸಂಸ್ಥೆಗಳು, ತೊರೆದ ಮಕ್ಕಳನ್ನು ತಂದು ಸಾಕುವ ಶಿಶುವಿಹಾರಗಳು, ಬಾಲಕ ಬಾಲಿಕೆಯರ ಅನಾಥಾಲಯಗಳು, ದೀನರ ಮತ್ತು ವೃದ್ಧರ ವಸತಿಗೃಹಗಳು- ಇವೇ ಮೊದಲಾದ ಹಲವಾರು ಸಂಸ್ಥೆಗಳನ್ನು ನಡೆಸಿಕೊಂಡು ಬಂದಿವೆ.

ನಾನಾವರ್ಗಗಳಿಗೆ ಸೇರಿದ ಸಂನ್ಯಾಸಿನಿಯರು ಈ ಸಂಸ್ಥೆಗಳನ್ನು ನಡೆಸಿಕೊಂಡು ಹೋಗುತ್ತಿದ್ದಾರೆ.

ಇವೆಲ್ಲಕ್ಕೂ ಕಳಶವಿಟ್ಟಂತೆ ಬೆಂಗಳೂರಿನಲ್ಲಿ ಇತ್ತೀಚೆಗೆ ಸೈಂಟ್ ಜಾನ್ ಮೆಡಿಕಲ್ ಕಾಲೇಜು ಹಾಗೂ ಆಸ್ಪತ್ರೆ (St. John Medical College and Hospital) ಗಳನ್ನು ತೆರೆಯುವ ಸಾಹಸ ಮಾಡಿದ್ದಾರೆ. ಈ ಧ್ಯೇಯಕ್ಕೆ ಅಂತಾರಾಷ್ಟ್ರೀಯ ಬೆಂಬಲ ದೊರೆತಿರುವುದೇ ಅಲ್ಲದೆ, ಪೋಷಕರ ನೇರವಾದ ಆಶ್ರಯವೂ ಇದೆ.

ಈ ಸಂಸ್ಥೆಯು ದೇಶದಲ್ಲಿ ವೈದ್ಯಕೀಯ ವಿಜ್ಞಾನ ಮತ್ತು ವೈದ್ಯಕೀಯ ಸಹಾಯಗಳ ಪ್ರಗತಿಗೆ ಅತ್ಯಂತ ಮಹತ್ವಪೂರ್ಣವಾದ ಕೊಡುಗೆಯಾಗಲಿದೆ.

ಈ ಧರ್ಮಪ್ರಚಾರಕರಲ್ಲಿ ಕೆಲವರ ಅಸಾಧಾರಣ ಸಾಮರ್ಥ್ಯವು ಅವರನ್ನು ಕರ್ನಾಟಕದ ದೇಶೀಯ ಸಾಹಿತ್ಯ ಕ್ಷೇತ್ರಗಳನ್ನು ಒಳಹೊಕ್ಕು ಶೋಧಿಸುವಂತೆ ಮಾಡಿತು. ಹೀಗೆ ಅವರು ಆ ಭಾಷೆಗಳಲ್ಲಿ ಶ್ರೇಷ್ಠ ಸಂಶೋಧನ ಕೃತಿಗಳನ್ನು ಹೊರ ತರಲು ಸಮರ್ಥರಾದರು. ಡಾಕ್ಟರ್ ಎಫ್. ಕಿಟ್ಟೆಲನ (Dr. F. Kittel) ಕನ್ನಡ–ಇಂಗ್ಲಿಷ್ ನಿಘಂಟು (ಬಾಸೆಲ್ ಮಿಷನ್ ಪ್ರೆಸ್, 1894) ಕನ್ನಡ ಶಬ್ದ ಕೋಶಕ್ಕೆ ಇಂದಿನ ವರೆಗೂ ಪ್ರಮಾಣ ಭೂತವಾಗಿದೆ. ಹದಿನೆಂಟು ವರ್ಷಗಳ ಸತತ ಸಂಶೋಧನೆಯ ಫಲವೇ ಈ ಕೃತಿ. ಇದೇ ನೆಲೆಯಲ್ಲಿ ನಿಲ್ಲುವ ಕೃತಿ ಡಾ. ಎಫ್. ಸೈಗ್ಲರನ (Dr. F. Zeigler) ತುಳು-ಇಂಗ್ಲಿಷ್ ನಿಘಂಟು.

ಜೀಸಸ್ ಸೊಸೈಟಿಯ ಸದಸ್ಯವರ್ಗದವರ ಸಂಶೋಧನ ಸಾಮರ್ಥ್ಯಕ್ಕೆ ಫಾದರ್ ಎ.ಎಫ್.ಎಕ್ಸ್. ಮ್ಯಾಫೇಟ್, ಎಸ್.ಜೆ. (Fr. A.F.X., Maffei, S.J.) ಕೊಂಕಣಿ ಭಾಷೆಯಲ್ಲಿ ರಚಿಸಿರುವ 'ಕೊಂಕಣಿ ವ್ಯಾಕರಣ' ಹಾಗೂ 'ಕೊಂಕಣಿ–ಇಂಗ್ಲಿಷ್ ನಿಘಂಟು'ಗಳು ನಿದರ್ಶನವಾಗಿವೆ.

ಆದಿಮ ಧರ್ಮಪ್ರಚಾರಕರ ಈ ಕೃತಿಗಳು ವಿಶೇಷ ಪ್ರಶಂಸೆಗೆ ಅರ್ಹವಾಗಿವೆ. ಇವರು ಅದಿ

ಪ್ರವರ್ತಕರಾದ ಶ್ರೇಷ್ಠ ಸಂಶೋಧಕರು. ಕನ್ನಡ, ಕೊಂಕಣಿ ಮತ್ತು ತುಳು ಸಾಹಿತ್ಯಗಳು ಈ ಧರ್ಮ ಪ್ರಚಾರಕರಿಗೆ ಚಿರ ಋಣಿಗಳಾಗಿವೆ.

ಈ ಧರ್ಮ ಪ್ರಚಾರಕರಲ್ಲಿ ಕೆಲವರು ಯೂರೋಪಿನ ವಿದ್ವಾಂಸರೊಡನೆಯೂ ದೇಶೀಯ ಪಂಡಿತರೊಡನೆಯೂ ಸಂಪರ್ಕ ಬೆಳೆಸಿಕೊಂಡು ಪಂಡಿತ ಸಂಘಗಳನ್ನು ಪ್ರಾರಂಭಿಸಿದರು.

ಬೆಂಗಳೂರಿನ ಫಾರಿನ್ ಮಿಷನ್ ಸೊಸೈಟಿಯ ಫಾವರ್ ಟ್ಯಾಬರ್ಡ್ (Fr. Tabard) ಎಂಬವರೇ ಮಿಥಿಕ್ ಸೊಸೈಟಿಯ (Mythic Society) ಸ್ಥಾಪಕರು.

ಕ್ರಿಶ್ಚಿಯನ್ನರು ಸಂಖ್ಯೆಯಲ್ಲಿ ಅಲ್ಪವಾಗಿದ್ದರೂ ಅವರು ಬೀರಿರುವ ಪ್ರಭಾವ ಮಾತ್ರ ಅಗಾಧವಾಗಿದೆ.

ಮೂಲಲೇಖಕರು : ಶ್ರೀ ಎಸ್. ಸಿಲ್ವಾ
ಅನುವಾದಕರು : ಶ್ರೀಮತಿ ಎಂ. ಎಲ್. ಲಲಿತಮ್ಮ

# ಕನ್ನಡ—ಆಧುನಿಕ ಕಾಲ

ಮೈಸೂರಿನ **ಚಿಕ್ಕದೇವರಾಯರ** ಕಾಲದಲ್ಲಿ (1672-1704) ಕನ್ನಡ ಸಾಹಿತ್ಯವು ವಿಶೇಷವಾದ ರಾಜಾಶ್ರಯವನ್ನು ಪಡೆದು, ಹೊಸ ಎತ್ತರ ಬಿತ್ತರಗಳನ್ನು ತಲಪಿತು. ಆದರೆ ದುರ್ದೈವದಿಂದ, ಚಿಕ್ಕದೇವರಾಯರ ಕಾಲದನಂತರ ಕನ್ನಡ ಸಾಹಿತ್ಯವು ಇಳಿಮೊಗವಾಗಿ ಮುಂದಿನ ಶತಮಾನದ ಸಮೃದ್ಧವಾದ ಬೆಳೆಗೆ ಮುನ್ನ ಪಾಳುಬಿದ್ದ ಬಂಜರು ಭೂಮಿಯಂತಾಯಿತು. ಈ ಮಧ್ಯಕಾಲದಲ್ಲಿ ಕೆಲವು ಅಪ್ರಮುಖ ಕೃತಿಗಳು ಮೂಡಿದರೂ ಕನ್ನಡ ಸಾಹಿತ್ಯದ ಸಂಪತ್ತನ್ನೇನೂ ಅವು ಹೆಚ್ಚಿಸಲಿಲ್ಲ.

ಹದಿನೆಂಟನೆ ಶತಮಾನದ ಉತ್ತರಾರ್ಧದ ಗಮನಾರ್ಹವಾದ ಲಕ್ಷಣಗಳೆಂದರೆ, ಹಿಂದಿನ ದಾಸಕೂಟ ಪರಂಪರೆಯ ಹಲವು ಭಕ್ತಕವಿಗಳು ಉದಯವಾದದ್ದು. ಅವರಲ್ಲಿ **ಜಗನ್ನಾಥ ದಾಸರ** (1775) ಹೆಸರು ಉಜ್ವಲವಾದದ್ದು.

1794ರಿಂದ 1868ರ ವರೆಗೆ ಆಳಿದ **ಮುಮ್ಮಡಿ ಕೃಷ್ಣರಾಜ ಒಡೆಯರು** ಕನ್ನಡ ಮತ್ತು ಸಂಸ್ಕೃತದಲ್ಲಿ ತಾವೆ ದೊಡ್ಡ ವಿದ್ವಾಂಸರಾಗಿದ್ದು ಕನ್ನಡ ಸಾಹಿತ್ಯದ ಬೆಳವಣಿಗೆಗೆ ವಿಶೇಷ ಪ್ರೋತ್ಸಾಹವನ್ನು ನೀಡಿದರು. ಅವರು ವಿಪುಲ ಗ್ರಂಥ ನಿರ್ಮಾಪಕರಾಗಿದ್ದುಕೊಂಡು, ಸಾಹಿತ್ಯದ ಬಹುಮುಖದ ರಚನೆಗಳಿಗೆ ಉದಾರವಾದ ಆಶ್ರಯವನ್ನು ಕೊಟ್ಟರು. ಅಂಥ ಸಾಹಿತ್ಯ ಪ್ರಕಾರಗಳಲ್ಲಿ ಯಕ್ಷಗಾನವೂ ಒಂದು. ಯಕ್ಷಗಾನದ ಉಳಿವಿಗೆ ಮತ್ತು ಬಳವಿಗೆಗೆ ಇವರ ವಿಶೇಷವಾದ ಔದಾರ್ಯವೇ ಕಾರಣ. ಈ ಮಾದರಿಯ ಸಾಹಿತ್ಯ ರಚನೆಯಲ್ಲಿ ಸುಪ್ರಸಿದ್ಧನಾದ ದಕ್ಷಿಣ ಕನ್ನಡ ಜಿಲ್ಲೆಯ ಪಾರ್ತಿಸುಬ್ಬ ಇದ್ದದ್ದು ಈ ಕಾಲದಲ್ಲಿಯೆ. ಸಂಸ್ಕೃತದ ಸುಪ್ರಸಿದ್ಧವಾದ ಕೃತಿಗಳನ್ನು ಕನ್ನಡಕ್ಕೆ ಪರಿವರ್ತಿಸುವ ವಿಚಾರದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ವಿಶೇಷವಾದ ಪ್ರೋತ್ಸಾಹವನ್ನು ಕೊಟ್ಟರು. ಅವರೇ ರಚಿಸಿದ ರಾಮಾಯಣ ಮತ್ತು ಮಹಾಭಾರತದ ಪರಿವರ್ತನೆಗಳು ಹೆಸರಿಸಲು ತಕ್ಕವಾಗಿವೆ. ಕನ್ನಡ ಸಾಹಿತ್ಯಕ್ಕೆ ಇವರ ಕಾಲದಲ್ಲಿ ಸಂದ ಕೊಡುಗೆ ಗಣನೀಯವಾದ ಪ್ರಮಾಣದಲ್ಲಿದೆ. ವಾಸ್ತವವಾಗಿ, ಆಧುನಿಕ ಕನ್ನಡ ಗದ್ಯ ಸಾಹಿತ್ಯದ ತಳಹದಿ ನಿರ್ಮಿತವಾದದ್ದು ಇವರ ಕಾಲದಲ್ಲಿಯೆ. ಮುಮ್ಮಡಿ ಕೃಷ್ಣರಾಜರ ಆಸ್ಥಾನ ಕವಿಯಾದ ದೇವಚಂದ್ರನ 'ರಾಜಾವಳೀ ಕಥೆ'ಯು ಹೇಳಿಕೊಳ್ಳಬಹುದಾದ ಸಾಹಿತ್ಯಮೌಲ್ಯದಿಂದ ಕೂಡಿದ ಕೃತಿಯಾಗಿಲ್ಲದಿದ್ದರೂ ತಕ್ಕಷ್ಟು ಚಾರಿತ್ರಿಕ ಮಹತ್ವವುಳ್ಳ ಗಣನೀಯ ಕೃತಿಯಾಗಿದೆ. ಅದು ಕನ್ನಡದ ಹಳೆಯ ಮತ್ತು ಹೊಸ ರೂಪಗಳನ್ನು ಅತ್ಯಂತ ಧಾರಾಳವಾಗಿ ಹಾಗೂ ವಿವೇಚನೆಯಿಲ್ಲದೆ ಕಲಬೆರಕೆ ಮಾಡಿದ, ಹದಿನೆಂಟನೆಯ ಶತಮಾನದ ಕಡೆಯ ಭಾಗದ ಕನ್ನಡದ ವಿಲಕ್ಷಣ ಶೈಲಿಗೆ ನಿದರ್ಶನವಾಗಿದೆ. ಇದೇ ಗ್ರಂಥಕರ್ತನ ಮತ್ತೊಂದು ಕೃತಿ 'ರಾಮ ಕಥಾವತಾರ'. ಚಂಪೂ ಶೈಲಿಯಲ್ಲಿ ರಚಿತವಾಗಿರುವ ಈ ಕೃತಿಯು, ಜೈನ ಸಂಪ್ರದಾಯದಲ್ಲಿ ನಿರೂಪಿತವಾದ ರಾಮಾಯಣದ ಕತೆಯನ್ನು ಒಳಗೊಂಡಿದೆ. ಇದೇ ಕಾಲದ ಇನ್ನೊಬ್ಬ ಆಸ್ಥಾನ ಕವಿಯಾದ ಕೆಂಪುನಾರಾಯಣನ (1823) 'ಮುದ್ರಾಮಂಜೂಷ'ವು ಕನ್ನಡ ಗದ್ಯ ಸಾಹಿತ್ಯದಲ್ಲಿ ಹೊಸ ಯುಗವೊಂದರ ಆರಂಭವನ್ನು ಸೂಚಿಸುತ್ತದೆ. ಅದು ಸುಪ್ರಸಿದ್ಧವಾದ ಸಂಸ್ಕೃತ ನಾಟಕ 'ಮುದ್ರಾರಾಕ್ಷಸ'ದ ಕನ್ನಡ ಗದ್ಯರೂಪವಾದರೂ ಕೆಂಪುನಾರಾಯಣನು ಮೂಲದ ಕಥಾನಕವನ್ನು, ಹಳಗನ್ನಡ-ಹೊಸಗನ್ನಡರೂಪಗಳ ಸಮ್ಮಿಶ್ರಣದಿಂದ, ತನ್ನದೇ ಆದ ಗಂಭೀರಗತಿಯಲ್ಲಿ ಸಾಗುವ, ಒಂದು

ವ್ಯಕ್ತಿ ವಿಶಿಷ್ಟವಾದ ಶೈಲಿಯಲ್ಲಿ ವಿಸ್ತಾರವಾಗಿ ಪುನಾರಚಿಸಿದ್ದಾನೆ. ಚಂದ್ರಗುಪ್ತ ಮೌರ್ಯನ ಅಭ್ಯುದಯುವನ್ನು ಕೇಂದ್ರದಲ್ಲಿರಿಸಿಕೊಂಡು, ಈ ಅರ್ಧ ಚಾರಿತ್ರಿಕ ವಸ್ತುವನ್ನು ಕುರಿತ ಮುದ್ರಾಮಂಜೂಷವು, ಕನ್ನಡ ಗದ್ಯ ಕಾದಂಬರಿಯ ಆರಂಭದಶೆಯನ್ನು ಸೂಚಿಸುತ್ತದೆ.

ಇದೇ ಕಾಲದಲ್ಲಿ ತಮ್ಮ ಸಾಹಿತ್ಯಾಭಿವ್ಯಕ್ತಿಗೆ ಪದ್ಯರೂಪದ ಮಾಧ್ಯಮವನ್ನು ಇಷ್ಟಪಟ್ಟ ಕೆಲವು ಕವಿಗಳೂ ವರ್ಧಿಸಿದರು. ಅವರಲ್ಲಿ ಮುಖ್ಯರಾದ ಕೆಲವರಲ್ಲಿ, ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನ ಕವಿ ಮಾತ್ರವಲ್ಲದೆ, ರಾಜ ಮನೆತನಕ್ಕೆ ಸೇರಿದವನೇ ಆದ ಅಳಿಯಲಿಂಗರಾಜನನ್ನು ಹೆಸರಿಸಬಹುದು. ಈತ ಬಹುಮುಖ ಸಾಮರ್ಥ್ಯವುಳ್ಳ, ವಿಪುಲ ಕೃತಿ ನಿರ್ಮಾಪಕ. ನಲವತ್ತೇಳು ಕೃತಿಗಳನ್ನು ಇವನು ಬರೆದನೆಂದು ಹೇಳಲಾಗಿದೆ. ಚಂಪೂ, ಷಟ್ಪದಿ, ಸಾಂಗತ್ಯ, ಯಕ್ಷಗಾನ, ಶತಕ, ಪದ, ಲಾವಣಿ–ಇತ್ಯಾದಿ ಅನೇಕ ಮಾಧ್ಯಮಗಳಲ್ಲಿ ಇವನು ಕೃತಿ ರಚನೆಮಾಡಿದ್ದಾನೆ. ಯಕ್ಷಗಾನಕ್ಕೆ ಇವನ ಕೊಡುಗೆ ಗಣನೀಯವಾಗಿದೆ.

ಈ ಕಾಲದ ಅತ್ಯಂತ ಗಮನಾರ್ಹವಾದ ಲೇಖಕನೆಂದರೆ ಆಸ್ಥಾನವಿದ್ವಾನ್ ಬಸವಪ್ಪ ಶಾಸ್ತ್ರೀ (1843–1891). ಶಾಕುಂತಲ, ವಿಕ್ರಮೋರ್ವಶೀಯ, ರತ್ನಾವಳಿ, ಚಂಡ ಕೌಶಿಕ, ಉತ್ತರ ರಾಮಚರಿತ ಇಂತಹ ದೊಡ್ಡ ನಾಟಕಗಳನ್ನೂ ಮತ್ತಿತರ ಕೃತಿಗಳನ್ನೂ ಸಂಸ್ಕೃತದಿಂದ ಕನ್ನಡಕ್ಕೆ ತಂದ ಯಶಸ್ಸು ಈತನಿಗೆ ಸಲ್ಲುತ್ತದೆ. ಷೇಕ್ಸ್‌ಪಿಯರನ ಒಥೆಲೋ ನಾಟಕವನ್ನು ಈತ 'ಶೂರಸೇನ ಚರಿತೆ' ಎಂಬ ಹೆಸರಿನಲ್ಲಿ ಕನ್ನಡಕ್ಕೆ ಅನುವಾದ ಮಾಡಿದ್ದಾನೆ. ಇವನ ಸಂಸ್ಕೃತ ನಾಟಕದ ಕನ್ನಡ ಅನುವಾದಗಳಂತೂ ಕನ್ನಡ ನಾಟಕಸಾಹಿತ್ಯದ ದಾರಿದೀಪಗಳಾಗಿ, ಕನ್ನಡ ರಂಗಭೂಮಿಯ ನಿರ್ಮಾಣಕ್ಕೆ ಶ್ರಮಿಸಿದ ಕೆಲವರಲ್ಲಿ ಈತನಿಗೆ ಅಗ್ರಮಾನ್ಯತೆಯನ್ನು ತಂದುಕೊಟ್ಟಿವೆ. ಈತನನ್ನು ಅಭಿನವ ಕಾಳಿದಾಸನೆಂದು ಕರೆದದ್ದು ಸಾರ್ಥಕವಾಗಿದೆ. ನಾಟಕಗಳನ್ನು ಮಾತ್ರವಲ್ಲದೆ ಈತ ಕೆಲವು ಸ್ವತಂತ್ರ ಕೃತಿಗಳನ್ನೂ ರಚಿಸಿದ್ದಾನೆ. ಅವುಗಳಲ್ಲಿ 'ದಮಯಂತೀ ಚರಿತ್ರೆ'ಯು ಚಂಪೂ ಶೈಲಿಯಲ್ಲಿಯೂ 'ಸಾವಿತ್ರೀ ಚರಿತ್ರೆ'ಯು ಷಟ್ಪದಿಯ ಲ್ಲಿಯೂ ರಚಿತವಾಗಿವೆ. ಇಷ್ಟೇ ಅಲ್ಲದೆ, ಈತ ಸಂಸ್ಕೃತದಲ್ಲಿಯೂ ಅನೇಕ ಸ್ತೋತ್ರಗಳನ್ನು ರಚಿಸಿದ್ದಾನೆ. ಬಸವಪ್ಪ ಶಾಸ್ತ್ರಿಗಳ ಮತ್ತು ಅವರ ಪರಂಪರೆಯ ಕೆಲವರ ಮಾರ್ಗದರ್ಶಕ ಪ್ರಯತ್ನಗಳ ಫಲವಾಗಿ ಷೇಕ್ಸ್‌ಪಿಯರನ ಮತ್ತು ಆಂಗ್ಲ ಸಾಹಿತ್ಯದ ಪ್ರಭಾವವು ಕನ್ನಡದ ಮೇಲೆ ಬೀಳಲು ಆರಂಭಿಸಿತು. ಬಸವಪ್ಪ ಶಾಸ್ತ್ರಿಗಳ ಶೂರಸೇನ ಚರಿತೆಯು ಇದಕ್ಕೆ ಒಂದು ನಿದರ್ಶನದಂತಿದೆ. ಕನ್ನಡದ ಮೇಲೆ ಬೀಳ ತೊಡಗಿದ ಇಂಗ್ಲಿಷ್ ಸಾಹಿತ್ಯದ ಪ್ರಭಾವವು, ಕನ್ನಡ ಸಾಹಿತ್ಯದಲ್ಲಿ ಹೊಸ ಆವಿಷ್ಕಾರ ಹಾಗೂ ಆಲೋ ಚನೆಗಳಿಗೆ ಅವಕಾಶ ಮಾಡಿಕೊಟ್ಟಿತು.

ಮುದ್ದಣನೆಂಬ ಕಾವ್ಯನಾಮದಿಂದ ಅದ್ಭುತ ರಾಮಾಯಣ, ರಾಮಪಟ್ಟಾಭಿಷೇಕ ಮತ್ತು ರಾಮಾಶ್ವಮೇಧಗಳನ್ನು ಬರೆದ ನಂದಳಿಕೆ ಲಕ್ಷ್ಮೀನಾರಾಯಣಪ್ಪನು, ಆಧುನಿಕ ಕನ್ನಡ ಸಾಹಿತ್ಯದ ಅರುಣೋದಯದ ಆಕಾಶದಲ್ಲಿ ಮುಂಬೆಳಗನ್ನು ಸೂಚಿಸುವ ನಕ್ಷತ್ರ ಎನ್ನಬಹುದು. ಈತನ ಕೃತಿಗಳು ಪ್ರಾಚೀನತೆ–ನವೀನತೆಗಳ ಹೊಂದಾಣಿಕೆಗೆ ನಿದರ್ಶನವಾಗಿವೆ. ಭಾಷೆ ಮತ್ತು ವಸ್ತುಗಳು ಹಳೆಯವಾದರೂ ಶೈಲಿ ಮತ್ತು ತಂತ್ರದಲ್ಲಿ ನವೀನತೆಯನ್ನು ತಂದಿದ್ದಾನೆ. ಇದಕ್ಕೆ ಅತ್ಯುತ್ತಮನಿದರ್ಶನ 'ರಾಮಾಶ್ವಮೇಧ'. ರಾಮಾಶ್ವಮೇಧವು ಶುದ್ಧವಾದ ಹಳಗನ್ನಡ ಭಾಷೆಯಲ್ಲಿ ರಚಿತವಾಗಿದೆ. ಆದರೆ ಇದರ ಗದ್ಯವು ನುಡಿಗಟ್ಟಿನ ಮತ್ತು ಶೈಲಿಗಳ ದೃಷ್ಟಿಯಿಂದ ಸಂಪೂರ್ಣ ಆಧುನಿಕವಾಗಿದೆ. ಸಾಹಿತ್ಯ ಮಾಧ್ಯಮವಾಗಿ ಗದ್ಯವನ್ನು ಬಳಸಬೇಕೇ, ಪದ್ಯವನ್ನು ಬಳಸಬೇಕೇ ಎಂಬ ಪ್ರಶ್ನೆಯನ್ನೆತ್ತಿಕೊಂಡು, ಮುದ್ದಣನು ಗದ್ಯವೇ ಹೃದ್ಯವಾದುದೆಂದು ಘೋಷಿಸಿದ್ದಾನೆ. ಹೀಗೆ ಗದ್ಯದ ಕಡೆಗೆ ಒಲವನ್ನು ತೋರಿಸುವ ವಿಚಾರದಲ್ಲಿ, ಅವನು ಖಂಡಿತವಾಗಿಯೂ ಶ್ರೀ ಬಿ. ವೆಂಕಟಾಚಾರ್, ಗಳಗನಾಥ ಮತ್ತಿತರ ಸಮಕಾಲೀನ ಕನ್ನಡ

ಕಾದಂಬರಿಕಾರರ ಪ್ರಭಾವಕ್ಕೆ ಒಳಗಾಗಿದ್ದನೆಂದು ಹೇಳಬಹುದು. ಅವನು ಇನ್ನೂ ಕೆಲವು ಕಾಲ ಬದುಕಿದ್ದ ಪಕ್ಷದಲ್ಲಿ ಕನ್ನಡದ ಮೊದಲ ಕಾದಂಬರಿಕಾರರಲ್ಲಿ ಒಬ್ಬನಾಗುತ್ತಿದ್ದನೆಂದು, ಅವನು ಅರ್ಧ ರಚಿಸಿ ನಿಲ್ಲಿಸಿರುವ 'ಗೋದಾವರಿ 'ಎಂಬ ಕಾದಂಬರಿಯ ಹಸ್ತಪ್ರತಿಯಿಂದ ಗೊತ್ತಾಗುತ್ತದೆ. ಆದರೆ, ದುರದೃಷ್ಟವಶಾತ್, ಈ ಕೃತಿರಚನೆಯನ್ನು ಮುಗಿಸುವುದರೊಳಗೇ ಕ್ಷಯರೋಗದಿಂದ ಈ ಸಾಹಿತಿಯ ಜೀವನವು ಇನ್ನೂ ಕೇವಲ ಮೂವತ್ತೊಂದು ವರ್ಷದ ಹರೆಯದಲ್ಲೇ ಮುಕ್ತಾಯವಾಯಿತು.

ಕಳೆದ ಶತಮಾನದಲ್ಲಿ, ಕರ್ಣಾಟಕದ ದಕ್ಷಿಣಭಾಗದಲ್ಲಿ, ಸಾಹಿತ್ಯ ನಿರ್ಮಿತಿಗೆ ಅಂಥ ಅನುಕೂಲಕರವಾದ ವಾತಾವರಣವಿರಲಿಲ್ಲ. ಉತ್ತರ ಕರ್ಣಾಟಕದಲ್ಲಾದರೋ ಪೇಶ್ವೆ ಆಡಳಿತಕ್ಕೆ ಒಳಪಟ್ಟಿದ್ದರ ಕಾರಣದಿಂದ, ಮಹಾರಾಷ್ಟ್ರೀಯರ ಪ್ರಾಧಾನ್ಯ ವಿಶೇಷವಾಗಿ, ಕನ್ನಡಕ್ಕೆ ಗ್ರಹಣ ಹಿಡಿದಂತಾಗಿತ್ತು. ಈ ಭಾಗವು, ಅನಂತರ ಬ್ರಿಟಿಷರ ಆಡಳಿತಕ್ಕೆ ಬಂದ ಮೇಲೆ ಕೂಡ, ಉತ್ತರ ಕರ್ಣಾಟಕದ ಜನರು ಮರಾಠಿಯನ್ನು ಬಳಸುವುದರಲ್ಲೇ ಹೆಮ್ಮೆಪಟ್ಟುಕೊಳ್ಳುವ ಕಾಲವಿನ್ನೂ ಇತ್ತು. ಉತ್ತರ ಕರ್ಣಾಟಕವನ್ನು 'ದಕ್ಷಿಣ ಮಹಾರಾಷ್ಟ್ರ 'ವೆಂದೇ ಕರೆಯಲಾಗುತ್ತಿತ್ತು. ಈ ತಪ್ಪು ಕಲ್ಪನೆಯನ್ನು ಮೊತ್ತಮೊದಲಿಗೆ, ಶ್ರೀ ವಿಲಿಯಂ ರಸೆಲ್, ಮತ್ತು 'ಡೆಪ್ಯುಟಿ' ಚನ್ನಬಸಪ್ಪ ಇವರು ಈ ಭಾಗದಲ್ಲಿ ಕನ್ನಡ ಶಾಲೆಗಳನ್ನು ತೆರೆಯುವುದರ ಮೂಲಕ, ಮತ್ತು ಕನ್ನಡದಲ್ಲಿ ಪಠ್ಯಪುಸ್ತಕಗಳನ್ನು ಶ್ರಮವಹಿಸಿ ರಚಿಸುವುದರ ಮೂಲಕ, ನಿವಾರಿಸಿದರು. ಈ ಕನ್ನಡಶಾಲೆಗಳಿಗೆ ಅಧ್ಯಾಪಕರನ್ನು ಒದಗಿಸಲು ಒಂದು 'ಟ್ರೇನಿಂಗ್ ಕಾಲೇಜು' ಆರಂಭವಾಗಿ. ಈ ಜನದ ಭಾಷೆಗೆ ಒಂದು ಮನ್ನಣೆ ದೊರೆಯುವಂತಾಯಿತು.

ಕ್ರೈಸ್ತ ಮಿಶನರಿಗಳಾದ, ರೆವರೆಂಡ್ ಕಿಟ್ಟೆಲ್, ಶ್ರೀ ಜೀಲರ್, ಬಿ. ಲೂಯಿಸ್ ರೈಸ್, ಡಾ॥ ಕಾಲ್ಡ್‌ವೆಲ್, ಇ.ಪಿ. ರೈಸ್, ಮತ್ತಿತರರು ಕನ್ನಡದಲ್ಲಿ ಉತ್ತಮ ದರ್ಜೆಯ ಪುಸ್ತಕಗಳನ್ನು ಒದಗಿಸುವುದರಲ್ಲಿ ಕೈಗೊಂಡ ಮುಂದಾಳುತನದ ಕಾರ್ಯವು, ಕನ್ನಡದ ಪುನರುಜ್ಜೀವನಕ್ಕೆ ಅಮೂಲ್ಯವಾದ ಕೊಡುಗೆಗಳನ್ನು ಸಲ್ಲಿಸಿದೆ. ಉದ್ದಾಮ ಪಂಡಿತರಾದ ಆರ್. ನರಸಿಂಹಾಚಾರ್, ಎಸ್.ಜಿ. ನರಸಿಂಹಾಚಾರ್, ರಾಮಾನುಜ ಅಯ್ಯಂಗಾರ್ ಮತ್ತಿತರರಿಂದ ಮುಂದುವರಿಯಿತು. ಈ ಕಾಲದಲ್ಲಿ ಇವರು ಹಳಗನ್ನಡ ಮಹಾಕವಿಕೃತಿಗಳನ್ನು ಸಂಪಾದಿಸಿ ಪ್ರಕಟಿಸಿದರು. ಅದರಲ್ಲೂ ಆರ್. ನರಸಿಂಹಾಚಾರ್ಯರು, ಮೂರು ಮಹಾ ಸಂಪುಟಗಳಲ್ಲಿ 'ಕರ್ಣಾಟಕ ಕವಿಚರಿತೆ'ಯನ್ನು ಬರೆದು ಪ್ರಕಟಿಸಿ, ಕನ್ನಡಕ್ಕೆ ಅಗಾಧವಾದ ಸೇವೆಯನ್ನು ಸಲ್ಲಿಸಿದ್ದಾರೆ. ಈ ಕವಿಚರಿತೆಯು, ಮೊತ್ತಮೊದಲಿಗೆ, ಕ್ರಿ.ಶ. 900 ರಿಂದ 1900 ತನಕ ಹರಹಿದ ಹತ್ತು ಶತಮಾನಗಳ ಅವಧಿಯಲ್ಲಿದ್ದ, ಸುಮಾರು ಸಾವಿರದ ಇನ್ನೂರು ಕವಿಗಳ ಸಂಕ್ಷೇಪವಾದ ವಿವರಗಳನ್ನು ಕೊಡುತ್ತದೆ. ಈ ಎಲ್ಲ ಮಹನೀಯರ ಸ್ಫೂರ್ತಿದಾಯಕವಾದ ಪ್ರಭಾವದಿಂದ, ಕನ್ನಡ ಸಾಹಿತ್ಯದಲ್ಲಿ ನವೋದಯವಾಯಿತೆಂದು ಹೇಳಬಹುದು.

### ಆಧುನಿಕ ಕನ್ನಡ ಸಾಹಿತ್ಯ

ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ, ಆಧುನಿಕ ಕಾಲದಲ್ಲಿ ಕನ್ನಡ ಸಾಹಿತ್ಯವು ರೂಪ ರೀತಿಗಳೆರಡರಲ್ಲಿಯೂ ಒಂದು ಕ್ರಾಂತಿಕಾರಕವಾದ ಬದಲಾವಣೆಯನ್ನು ಪಡೆಯಿತು. ಹಳೆಯ ಕಾವ್ಯರೂಪಗಳಾದ ಚಂಪೂ ಇತ್ಯಾದಿಗಳು ಅಕಾಲಿಕವಾಗಿ, ಆ ರೀತಿಯಲ್ಲಿ ಬರೆಯುವವರು ಇಲ್ಲವಾಯಿತು. ಕ್ರಮೇಣ ಗದ್ಯವು ಅಭಿವ್ಯಕ್ತಿಯ ಪ್ರಧಾನ ಮಾಧ್ಯಮವಾಗಿ ನಾಟಕ, ಕಾದಂಬರಿ, ಸಣ್ಣಕತೆ, ಜೀವನ ಚರಿತ್ರೆ–ಇತ್ಯಾದಿ ಪ್ರಕಾರಗಳಿಗೆ ಕಾರಣವಾಯಿತು.

ಕಳೆದ ಆರು ದಶಕಗಳ ಕನ್ನಡ ಸಾಹಿತ್ಯ ಚರಿತ್ರೆಯನ್ನು ನೋಡಿದರೆ, ವ್ಯಕ್ತಿವಿಶಿಷ್ಟವಾದ

ಬರೆವಣಿಗೆಯಿಂದ, ಸಾಹಿತ್ಯವು ಆಧುನಿಕತೆಯ ಕಡೆ ಹೊರಳಿರುವುದನ್ನು ಕಾಣಬಹುದು. ಎಲ್ಲ ಕಾಲದ ಸಾಹಿತ್ಯ ಚಳವಳಿಗಳಲ್ಲಿಯಂತೆ, ಈ ಕಾಲದ ಮೊದಲಿನಲ್ಲಿದ್ದ ಆಧುನಿಕ ಕವಿಗಳು, ತಾವಿನ್ನೂ ಹೊಸ ಸತ್ವವನ್ನು ಹಿಡಿದಿಡುವ ಪ್ರಯೋಗಗಳಲ್ಲಿ ತೊಡಗಿದಾಗ, ಸಂಪ್ರದಾಯವಾದಿಗಳ ಅನುದಾರವಾದ ಟೀಕೆಗಳಿಗೆ ಗುರಿಯಾಗಬೇಕಾಯಿತು. ಕಾವ್ಯಕ್ಕೆ ಯಾವ ವಿಷಯವನ್ನೆತ್ತಿಕೊಳ್ಳಬೇಕು. ಅದರ ಭಾಷೆ ಹೇಗಿರಬೇಕು ಎನ್ನುವ ವಿಚಾರದಲ್ಲಿ, ಆಧುನಿಕರಿಗೂ ಸಂಪ್ರದಾಯವಾದಿಗಳಿಗೂ ಇದ್ದ ಸಂಘರ್ಷಣೆ ಈಗಂತೂ ಬಹುಮಟ್ಟಿಗೆ ಮುಗಿದಿದೆ ಎನ್ನಬೇಕು. ಆದರೂ, ಇದು ಆಧುನಿಕರಿಗೆ ಸ್ಪರ್ಧಿಯಾಗಿ ನಿಂತ 'ಹಳೆಯ ಮಾದರಿ'ಯ ಲೇಖಕರಿಗೂ ಕವಿಗಳಿಗೂ ಅವಕಾಶ ಮಾಡಿಕೊಡದೆ ಇಲ್ಲ. ಸಾಹಿತ್ಯದಲ್ಲಿ ಹಳತು ಹೊಸತು ಎಂಬ ಈ ವಿಭಜನೆ ಆಧುನಿಕ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ—ಅದರಲ್ಲೂ ಕಾವ್ಯ ಪ್ರಕಾರದಲ್ಲಿ, ವಿಶೇಷವಾಗಿ ಗೋಚರಿಸುತ್ತದೆ.

ಈ ರೀತಿಯಲ್ಲಿ ಹೊಸ ದೃಷ್ಟಿಕೋನಗಳು, ಹೊಸಬಗೆಯ ಚಿಂತನೆಗಳು, ಹೊಸರೀತಿಯ ಅಭಿವ್ಯಕ್ತಿಗಳು, ಪ್ರತಿಮಾ-ದೃಷ್ಟಾಂತಾದಿಗಳಿಂದ ಕೂಡಿದ ಶೈಲಿಯೂ-ಈ ಕಾಲದಲ್ಲಿ ಕಾಣಿಸಿಕೊಂಡಿವೆ. ಹೀಗೆ ಕನ್ನಡದಲ್ಲಿ ಬಂದ ಆಧುನಿಕ ಸಾಹಿತ್ಯ ಕ್ರಾಂತಿ ಎರಡು ಮುಖವಾದದ್ದು: ಒಂದು ತಂತ್ರ ಹಾಗೂ ರೂಪದಲ್ಲಾದ ಬದಲಾವಣೆ, ಮತ್ತೊಂದು ಮನಶ್ಶಾಸ್ತ್ರೀಯವಾದ ಅನುಭವಗಳನ್ನು ಗ್ರಹಿಸುವ ಹಾಗೂ ರೂಪಿಸುವ ವಿಧಾನದಲ್ಲಿ ಆದ ಬದಲಾವಣೆ.

ಆಧುನಿಕ ಕನ್ನಡದ ಭಾವಗೀತ ಸಾಹಿತ್ಯವು, ಆಚಾರ್ಯ 'ಶ್ರೀ' (ಬಿ.ಎಂ. ಶ್ರೀಕಂಠಯ್ಯ: 1884–1946), 'ಶ್ರೀನಿವಾಸ' (ಮಾಸ್ತಿ ವೆಂಕಟೇಶ ಅಯ್ಯಂಗಾರ್), ಡಿ. ವಿ. ಜಿ., ಗೋವಿಂದ ಪೈ, ಪಂಜೆ ಮಂಗೇಶರಾಯರು, ಶಾಂತಕವಿಗಳು, ಮತ್ತಿತರ ಮುಂದಾಳುಗಳ ಪ್ರಯೋಗ ಪರಿಣತಿಯಿಂದಲೂ ವೈಯಕ್ತಿಕ ಸಾಧನೆಯಿಂದಲೂ ರೂಪುಗೊಂಡಿತು. ಇಂಗ್ಲಿಷ್ 'ರೊಮ್ಯಾಂಟಿಕ್' ಕವಿಗಳಾದ ವರ್ಡ್ಸ್‌ವರ್ತ್, ಕೋಲ್‌ರಿಜ್, ಬೈರನ್, ಷೆಲ್ಲಿ ಮತ್ತಿತರರ ಕಾವ್ಯಮಾರ್ಗದ ಪ್ರೇರಣೆಯಿಂದ, ಈ ನಮ್ಮ ಕವಿಗಳು ಹೊಸವಲಯಗಳಲ್ಲಿ ಸಂಚರಿಸಿದರು. 'ಶ್ರೀ' ಯವರ 'ಇಂಗ್ಲಿಷ್ ಗೀತಗಳು' ಕನ್ನಡದಲ್ಲಿ ರೊಮ್ಯಾಂಟಿಕ್ ಕಾವ್ಯದ ಮಾರ್ಗದರ್ಶಕ ಕೃತಿ ಎಂದು ಪ್ರಶಂಸಿತವಾಗಿದೆ. ಈ ಹೊಸಗನ್ನಡ ಕಾವ್ಯ ಪಂಥವು ಕುವೆಂಪು ಮತ್ತು ಅಂಬಿಕಾತನಯದತ್ತರ ಪ್ರತಿಭೆಯಿಂದ ಅಪೂರ್ವವಾದ ಸೊಗಸನ್ನೂ, ಗಾಂಭೀರ್ಯವನ್ನೂ ಪಡೆಯಿತು. ಇಂದಿಗೂ ಕನ್ನಡ ಕಾವ್ಯಪ್ರೇಮಿಗಳ ಮೇಲೆ, ಈ ಇಬ್ಬರು ಕವಿಗಳ ಪ್ರಭಾವವು ಗಾಢವಾಗಿಯೇ ಇದೆ. ಕುವೆಂಪು ಅವರ 'ಶ್ರೀರಾಮಾಯಣ ದರ್ಶನ'ವು ರಾಷ್ಟ್ರೀಯ ಯಶಸ್ಸನ್ನೂ ಮಹತ್ವವನ್ನೂ ಪಡೆದಿರುವ ಆಧುನಿಕ ಕನ್ನಡದ ಏಕಮಾತ್ರ ಮಹಾಕಾವ್ಯವಾಗಿದೆ. ಈ ನವೋದಯ ಕಾಲದಲ್ಲಿ ಸಾಲಿ ರಾಮಚಂದ್ರರಾವ್, ವಿ.ಸೀ. (ವಿ. ಸೀತಾರಾಮಯ್ಯ), ಪು. ತಿ. ನರಸಿಂಹಾಚಾರ್, ಕಡೆಂಗೋಡ್ಲು ಶಂಕರ ಭಟ್ಟ, ಬೆಟಗೇರಿ ಕೃಷ್ಣಶರ್ಮ, ವಿ.ಕೃ. ಗೋಕಾಕ್, ಮಧುರಚೆನ್ನ ಮತ್ತು ರಂ. ಶ್ರೀ. ಮುಗಳಿ–ಇತ್ಯಾದಿ ಕವಿಗಳು ಭಾವಗೀತದ ಬೆಳವಣಿಗೆಗೆ ವಿಶಿಷ್ಟವಾದ ಕಾಣಿಕೆಯನ್ನು ನೀಡಿದ್ದಾರೆ. ಈ ರೊಮ್ಯಾಂಟಿಕ್ ಮಾದರಿಯ ಬರೆವಣಿಗೆಯ ಕೊನೆಯ ಸಾಲಿನಲ್ಲಿ ಜಿ.ಪಿ. ರಾಜರತ್ನಂ, ರಾಘವ (ಎಂ. ವಿ. ಸೀತಾರಾಮಯ್ಯ), ಎಸ್. ವಿ. ಪರಮೇಶ್ವರ ಭಟ್ಟ, ಕೆ. ಎಸ್. ನರಸಿಂಹಸ್ವಾಮಿ, ಬಿ. ಎಚ್. ಶ್ರೀಧರ, ಪಾಂಡೇಶ್ವರ ಗಣಪತಿರಾವ್, ಗೋಪಾಲಕೃಷ್ಣ ಅಡಿಗ ಮತ್ತಿತರ ಕವಿಗಳು ಕಾಣಿಸಿಕೊಂಡಿದ್ದಾರೆ. ಇವರಲ್ಲಿ ರಾಜರತ್ನಂ ಅವರು ತಮ್ಮ 'ರತ್ನನ ಪದ'ಗಳ ಮೂಲಕ, ನರಸಿಂಹ ಸ್ವಾಮಿಯರು ತಮ್ಮ ಮೈಸೂರು ಮಲ್ಲಿಗೆಯ ಮೂಲಕ ಅತ್ಯಂತ ಜನಪ್ರಿಯ ಕವಿಗಳಾದರು. ಗೋಕಾಕ್ ಮತ್ತು ಅಡಿಗರು, ಮುಖ್ಯವಾಗಿ ಟಿ.ಎಸ್. ಈಲಿಯಟ್ ಕವಿಯ ಕಾವ್ಯಮಾರ್ಗದಿಂದ ಪ್ರಭಾವಿತರಾಗಿ, ಕನ್ನಡದಲ್ಲಿ ಬೇರೊಂದು ಕಾವ್ಯಮಾರ್ಗವನ್ನು ತೆರೆದು 'ನವ್ಯಕಾವ್ಯ'ದ ಉಗಮಕ್ಕೆ ಕಾರಣರಾಗಿದ್ದಾರೆ.

ಒಟ್ಟಿನಲ್ಲಿ ಮೊದ ಮೊದಲ ಭಾವಗೀತ ಸಾಹಿತ್ಯವು, ಸತ ತಃ ' ರೊಮ್ಯಾಂಟಿಕ್ ' ಮಾದರಿಯದಾಗಿ, ಹಲವು ವೇಳೆ ಬೇಸರ ತರಿಸುವಷ್ಟು ಸಂಗೀತಮಯವೂ ದಾರ್ಶನಿಕವೂ ಆಗಿದೆ; ಆದರೆ ಇತ್ತೀಚೆಗೆ ಕಾವ್ಯವು ಮುಚ್ಚುಮರೆಯಿಲ್ಲದ ರೀತಿಯಲ್ಲಿ ಹಳೆಯ ಕಟ್ಟು ಪಾಡುಗಳನ್ನು ಕಿತ್ತೆಸೆದು ಕ್ರಾಂತಿಕಾರಕವಾಗಿದೆ.

ನವ್ಯಕಾವ್ಯದ ಪ್ರವರ್ತಕರಲ್ಲಿ ಶ್ರೀ ಗೋಪಾಲಕೃಷ್ಣ ಅಡಿಗರನ್ನು ಪ್ರಮುಖರೆಂದು ಹೇಳಬಹುದು. ಇವರು ಕನ್ನಡ ಕಾವ್ಯಕ್ಕೆ ಕೆಲವು ಹೊಸ ಎತ್ತರ ಬಿತ್ತರಗಳನ್ನು ತಂದರು. ಹಾಗೆಯೆ ಇವರ ಕಾವ್ಯ ಮಾರ್ಗವನ್ನು ಹಲವು ತರುಣಕವಿಗಳು ಅನುಸರಿಸಿದರು. ನವ್ಯಕಾವ್ಯ ಅರ್ಥವಾಗದಷ್ಟು ಕ್ಲಿಷ್ಟವಾಗಿದೆ ಎನ್ನುವುದು, ಆ ಕಾವ್ಯದ ಬಗ್ಗೆ ' ರೊಮ್ಯಾಂಟಿಕ್ ' ಕಾವ್ಯದ ಪ್ರತಿಪಾದಕರು ಮಾಡುವ ಆರೋಪಣೆ ಗಳಲ್ಲಿ ಪ್ರಧಾನವಾದದ್ದು. ಆದರೆ ನವ್ಯಕಾವ್ಯವು ಮೂಲತಃ ಆಧುನಿಕ ಜಗತ್ತಿನ ಬದುಕಿನ ಸಂಕೀರ್ಣ ಸಂಗತಿಗಳ ಬಗೆಗೆ ಈ ಕವಿಗಳು ತಾಳಿದ ನೂತನ ಸಂವೇದನೆಗಳಿಗೆ ಸಾಕ್ಷಿಯಾಗಿದೆ. ಆಧುನಿಕ ಅಮೂರ್ತ ಚಿತ್ರಕಲೆಯ ಹಾಗೆ, ನವ್ಯಕಾವ್ಯವೂ ಕೃತಿರಚನೆಯನ್ನು ನಿಯಂತ್ರಿಸುತ್ತಿದ್ದ ಸಿದ್ಧ ಮಾದರಿಗಳನ್ನೂ ಕಟ್ಟು ಪಾಡುಗಳನ್ನೂ ಕಿತ್ತೆಸೆದಿದೆ. ನವ್ಯಕಾವ್ಯವು ಉದ್ದೇಶಪೂರ್ವಕವಾಗಿಯೆ, ಸಾಂಪ್ರದಾಯಿಕ ಕಾವ್ಯಶೈಲಿ ಗಳನ್ನು ನಿರಾಕರಿಸಿ, ಹೊಸ ತಂತ್ರ ನಿರ್ಮಾಣದಲ್ಲಿ, ಹೊಸ ಸಂಕೇತ, ಪ್ರತಿಮೆಗಳನ್ನು ನಿರ್ಮಿಸಿ, ಕಾವ್ಯದಲ್ಲಿ ಬಳಸುವ ಮಾತುಗಳಿಗೆ ಹೊಸ ಅರ್ಥವನ್ನು ತುಂಬುವ ಪ್ರಯತ್ನದಲ್ಲಿ ತೊಡಗಿದೆ. ಕವಿಗಳಾದ ಜಿ.ಎಸ್. ಶಿವರುದ್ರಪ್ಪ, ಚೆನ್ನವೀರ ಕಣವಿ, ರಾಮಚಂದ್ರಶರ್ಮ, ಗಂಗಾಧರ ಚಿತ್ತಾಲ, ಕ.ವೆಂ. ರಾಜಗೋಪಾಲ, ಚಂದ್ರಶೇಖರ ಪಾಟೀಲ, ಕೆ.ಎಸ್. ನಿಸ್ಸಾರ್ ಅಹಮದ್, ಅಕ್ಬರ್ ಆಲಿ ಮತ್ತು ಕೆಲವರು ಕಾವ್ಯದಲ್ಲಿ ಈ ನವಚೈತನ್ಯವನ್ನು ಪ್ರಕಟಿಸಿದ್ದಾರೆ. ಆದರೂ ದುರದೃಷ್ಟವಶಾತ್, ಇವರಲ್ಲಿ ಕೆಲವರ ಹಾಗೂ ಇವರ ಅನುಕರಣೆ ಮಾಡುವ ಕೆಲವರ ಬರವಣಿಗೆಯ ಭಾವ-ಭಾಷೆಗಳಲ್ಲಿ ಒಮ್ಮೊಮ್ಮೆ ಕಾಣಿಸಿಕೊಳ್ಳುವ ಅಸ್ಪಷ್ಟತೆ ಹಾಗೂ ಸಂದಿಗ್ಧತೆಗಳು, ಅವರ ಕಾವ್ಯದ ಪ್ರಾಮಾಣಿಕತೆಯ ಬಗೆಗೆ ಶಂಕೆಯನ್ನು ಹುಟ್ಟಿಸುತ್ತವೆ. ಇನ್ನು ಕನ್ನಡದಲ್ಲಿ ನವ್ಯಕಾವ್ಯಕ್ಕೂ ಸಾಮಾನ್ಯ ಓದುಗರಿಗೂ ನಡುವೆ ಕಂದರವೇ ಇದೆ. ಪರಿಸ್ಥಿತಿ ಹೀಗಿದ್ದರೂ ಈ ನವ್ಯಕಾವ್ಯವು ಕನ್ನಡದ ಯುವಜನಾಂಗದ ಹೊಸ ಮನೋಧರ್ಮವನ್ನು ಪ್ರಕಟಿಸುವಂತೆ ತೋರುತ್ತದೆ.

ಇದೇ ಬಗೆಯ ಹೊಸಲಕ್ಷಣಗಳು ಕನ್ನಡದ ಹಲವು ಗದ್ಯ ಪ್ರಕಾರದ ಬರೆವಣಿಗೆಯಲ್ಲಿ ಕಾಣಿಸಿ ಕೊಳ್ಳುತ್ತಿವೆ. ಸೃಜನಶೀಲತೆಯು ಬಹುಮುಖವಾದ ಅಭಿವ್ಯಕ್ತಿಯನ್ನು ಪಡೆದಿದೆ. ಈ ಅಭಿವ್ಯಕ್ತಿಯಲ್ಲಿ ಎಲ್ಲವನ್ನೂ ಪಟ್ಟಿಮಾಡಿ ಹೇಳುವುದು ಕಷ್ಟ. ಕಳೆದ ಐವತ್ತು ವರುಷಗಳ ಕನ್ನಡ ಗದ್ಯದ ಬೆಳವಣಿಗೆಯನ್ನು ನೋಡಿದರೆ, ಬದುಕಿನ ಬಗ್ಗೆ ಆಳವಾದ ಹಾಗೂ ತೀವ್ರವಾದ ಸಂವೇದನೆಯುಳ್ಳ ಅಭಿವ್ಯಕ್ತಿಯ ತಂತ್ರ ದಲ್ಲಿ ಕುಶಲರಾದ ಅನೇಕ ಲೇಖಕರು ಕನ್ನಡ ಜನತೆಗೆ ಪರಿಚಯವಾಗಿದ್ದಾರೆ.

ಸಮಕಾಲೀನ ಜೀವನದ ಚಿತ್ರವಾಗಿ, ವ್ಯಕ್ತಿ ಮತ್ತು ಅವನ ಪರಿಸರ ಇವುಗಳ ನಡುವಣ ಘರ್ಷಣೆ ಯನ್ನು ಚಿತ್ರಿಸುವ ಕಾದಂಬರಿ, ಕನ್ನಡ ಸಾಹಿತ್ಯದಲ್ಲಿ ಅತ್ಯಂತ ಜನಪ್ರಿಯವಾದ ಒಂದು ಪ್ರಕಾರವಾಗಿದೆ. ಕನ್ನಡದ ಮೊತ್ತಮೊದಲಿನ ಕಾದಂಬರಿಗಳು, ಬಹುಪಾಲು ಬಂಗಾಳಿ ಮತ್ತು ಮರಾಠಿಯ ಅನುವಾದ ಗಳಾಗಿವೆ. ಈ ಶತಮಾನದ ಆದಿಯಲ್ಲಿ ಬಿ. ವೆಂಕಟಾಚಾರ್ಯರು ಮತ್ತು ಗಳಗನಾಥರು ಕಾದಂಬರೀ ಕ್ಷೇತ್ರದಲ್ಲಿ ಪ್ರಮುಖರಾಗಿದ್ದರು. ಇವರ ಅನುವಾದಗಳು ಮತ್ತು ಕೆಲವು ಸ್ವತಂತ್ರ ಕಾದಂಬರಿಗಳು, ಕರ್ಣಾಟಕಾದ್ಯಂತ ತುಂಬಾ ಜನಪ್ರಿಯವಾಗಿ, ಜನತೆಯಲ್ಲಿ ಓದುವ ಅಭಿರುಚಿಯನ್ನೂ ಹೊಸ ಓದುಗರನ್ನೂ ನಿರ್ಮಿಸಲು ಕಾರಣವಾದುವು. ಅಂದು ಅವರು ಬರೆದ ಕಾದಂಬರಿಗಳಲ್ಲಿ ಕೆಲವು ಇಂದಿಗೂ ಮಹತ್ವದ ಕೃತಿಗಳಾಗಿ ಉಳಿದಿವೆ. ಕಾಲಮಾನದ ದೃಷ್ಟಿಯಿಂದ ಕನ್ನಡದ ಪ್ರಪ್ರಥಮ ಕಾದಂಬರಿ ಗುಲವಾಡಿ

ವೆಂಕಟರಾಯರ 'ಇಂದಿರಾಬಾಯಿ' (1899) ಎಂಬುದು. ಅನಂತರ ಬಂದದ್ದು ಬೋಳಾರ ಬಾಬು ರಾಯರ 'ವಾಗ್ದೇವಿ' (1905) ಮತ್ತು ಕೆರೂರು ವಾಸುದೇವಾಚಾರ್ಯರ 'ಇಂದಿರಾ' (1908). ಇವರಲ್ಲಿ ಕೆರೂರು ವಾಸುದೇವಾಚಾರ್ಯರು ಬರೆದ ಯದುಮಹಾರಾಜ (1916) ಕನ್ನಡದ ಮೊತ್ತ ಮೊದಲಿನ ಚಾರಿತ್ರಿಕ ಕಾದಂಬರಿಯಾಗಿದೆ, ಆದರೂ ಎಂ.ಎಸ್. ಪುಟ್ಟಣ್ಣನವರ 'ಮಾಡಿದ್ದುಣ್ಣೊ ಮಹಾರಾಯ' ಅದರ ಮನ ಸೆಳೆಯುವ ಹಾಸ್ಯದಿಂದ, ಪಾತ್ರ ವಿರಚನೆಯಿಂದ ಮತ್ತು ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದ ಸಮಾಜದ ನೈಜ ಚಿತ್ರಣದಿಂದ, ಕನ್ನಡದ ಮೊತ್ತಮೊದಲಿನ ಮಹತ್ವದ ಕಾದಂಬರಿಯಾಗಿದೆ. ಈ ಕಾದಂಬರಿಯ ಉದ್ದಕ್ಕೂ ಚಿತ್ರಿತವಾಗಿರುವ ವಿಲಕ್ಷಣವಾದ ಸನ್ನಿವೇಶಗಳ ತುಂಬ ಒಂದು ಬಗೆಯ ಪ್ರಖರವಲ್ಲದ ಸಮಾಜ ವಿಡಂಬನೆ ಪ್ರವಹಿಸಿದೆ. ಹೀಗೆ ಕನ್ನಡ ಕಾದಂಬರಿ ಅದರ ಮೊದಲಿಗರ ಮತ್ತು ಅನಂತರದವರ ಕೈಯಲ್ಲಿ, ಒಂದು ರೀತಿಯಲ್ಲಿ ರೂಪುಗೊಳ್ಳುತ್ತಾ, ಅನಂತರ 1930–40 ರ ದಶಕಗಳಲ್ಲಿ ಅನೇಕ ಕಾದಂಬರಿಕಾರರ ಕೈಯಲ್ಲಿ ತಂತ್ರ ಕಲಾಪರಿಣತಿಯನ್ನು ಪಡೆಯಿತು. ಇವರಲ್ಲಿ, ಇದುವರೆಗಿನ ಕಾದಂಬರಿಕಾರರಲ್ಲಿ ಅ.ನ. ಕೃಷ್ಣರಾಯರು ಅಗ್ರಗಣ್ಯರು. ಕನ್ನಡಕ್ಕೆ ಸಾಮಾಜಿಕ ಕಾದಂಬರಿಗಳನ್ನು ಪರಿಚಯ ಮಾಡಿಕೊಟ್ಟು, ಕನ್ನಡ ಕಾದಂಬರಿ ಕ್ಷೇತ್ರ ಸಮೃದ್ಧವಾಗಲು ಇವರು ಪ್ರೇರಕಶಕ್ತಿಯಾದರು. ಅ.ನ.ಕೃ. ಅವರ ಕಾದಂಬರಿಗಳು ನೂರಕ್ಕೂ ಮಿಗಿಲಾಗಿವೆ; ಅವುಗಳಲ್ಲಿ 'ಸಂಧ್ಯಾರಾಗ' ದಂಥ ಕೆಲವು ತುಂಬಾ ಜನಪ್ರಿಯವಾಗಿವೆ. ಕುವೆಂಪು ಮತ್ತು ಕಾರಂತರು ಕನ್ನಡಕ್ಕೆ ಅಮೂಲ್ಯವಾದ ಕಾದಂಬರಿಗಳನ್ನು ಕೊಟ್ಟು, ಈ ಜನಪ್ರಿಯ ಸಾಹಿತ್ಯ ಪ್ರಕಾರದ ಬೆಲೆಯನ್ನು ಹೆಚ್ಚು ಮಾಡಿದರು. ಕಾರಂತರ 'ಮರಳಿ ಮಣ್ಣಿಗೆ' ಮತ್ತು ಕುವೆಂಪು ಅವರ 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಇವು ಕಾದಂಬರಿಕಾರರ ವೈಯಕ್ತಿಕ ಸಿದ್ಧಿಯ ಹಾಗೂ ಕನ್ನಡ ಕಾದಂಬರೀ ಪರಂಪರೆಯ ಅಪೂರ್ವ ಸಾಕ್ಷಿಗಳಾಗಿವೆ. ಮಾಸ್ತಿ ವೆಂಕಟೇಶ ಅಯ್ಯಂಗಾರ್, ದೇವುಡು ನರಸಿಂಹ ಶಾಸ್ತ್ರಿ, ವಿ.ಎಂ. ಇನಾಂದಾರ್, ಕೆ.ವಿ. ಅಯ್ಯರ್ ಮತ್ತೆ ಇನ್ನೂ ಕೆಲವರು ಬಹುಕಾಲ ಉಳಿಯುವಂಥ ಕಾದಂಬರಿಗಳನ್ನು ಬರೆದಿದ್ದಾರೆ.

ಇವತ್ತಿನ ಕಾದಂಬರಿಗಳ ಕಥಾವಸ್ತು, ಇವತ್ತಿನ ಸಮಾಜದ ರುಚಿಗೆ ಅನುಗುಣವಾಗಿದೆ. ನಿರಂಜನ, ಬಸವರಾಜ ಕಟ್ಟೀಮನಿ, ತ. ರಾ. ಸುಬ್ಬರಾವ್. ಕೃಷ್ಣಮೂರ್ತಿ ಪುರಾಣಿಕ, ಇವರಂಥ ಜನಪ್ರಿಯ ಕಾದಂಬರಿಕಾರರೂ ತ್ರಿವೇಣಿಯಂಥ ಮಹಿಳಾ ಕಾದಂಬರಿಕಾರ್ತಿಯರೂ ತಮ್ಮದೇ ಆದ ಪರಂಪರೆ ಮತ್ತು ನಿಲುವುಗಳನ್ನು ಸ್ಥಾಪಿಸಿದ್ದಾರೆ. ಇವರು ತಮ್ಮ ಕಾದಂಬರಿಗಳಲ್ಲಿ, ಸಮಕಾಲೀನ ಸಾಮಾಜಿಕ ಸಮಸ್ಯೆಗಳನ್ನು ಕುರಿತು—ಎಂದರೆ ಕಾಮ, ಮದುವೆ. ಆಧುನಿಕ ಸಮಾಜದಲ್ಲಿ ನಡೆಯುತ್ತಿರುವ ಮೌಲ್ಯಗಳ ಸಂಘರ್ಷಣೆ ಇತ್ಯಾದಿಗಳನ್ನು ಕುರಿತು–ತಮ್ಮ ಸೂಕ್ಷ್ಮವಾದ ಸಂವೇದನೆಗಳನ್ನು ಪ್ರಕಟಿಸಿದ್ದಾರೆ.

ಇತ್ತೀಚೆಗಂತೂ ಕಾದಂಬರಿಕಾರರ ಸಂಖ್ಯೆ ಎಷ್ಟು ಬೆಳೆದಿದೆ ಎಂದರೆ, ಆ ಬಗ್ಗೆ ಯಾವ ಒಬ್ಬ ವಿಮರ್ಶಕನೂ ಸಮಗ್ರವಾಗಿ ಪರಿಶೀಲನೆ ನಡೆಸುವುದು ಅಸಾಧ್ಯವಾಗಿದೆ. ದುರದೃಷ್ಟವಶಾತ್, ಕೆಲವರಂತೂ ಕಾದಂಬರಿಯ ಕಾರ್ಖಾನೆಗಳನ್ನು ತೆರೆದವರಂತೆ ತೋರುತ್ತಾರೆ; ಅಷ್ಟು ಯಾಂತ್ರಿಕವಾಗಿ ತಯಾರಾಗಿ ಬರುತ್ತವೆ ಅವರ ಕಾದಂಬರಿಗಳು. ಅವರ ಬರವಣಿಗೆಯ ಮೂಲ ಸಾಮಗ್ರಿಯೋ, ಕಾಮ ಮತ್ತು ಕೇವಲ ಭಾವೋದ್ರೇಕ ಪ್ರವೃತ್ತಿ. ಹಾಗೆಯೆ ಕಾದಂಬರಿ ರಚನೆಯೂ ಒಂದು ವ್ಯಾಪಾರೋದ್ಯಮವಾಗಿ, ಸಾಮಾನ್ಯ ಓದುಗರ ಅಲ್ಪಸ್ವಲ್ಪ ಸಾಹಿತ್ಯಾಭಿರುಚಿಯನ್ನೂ ಕದಡಿ ಬಗ್ಗಡಗೊಳಿಸತೊಡಗಿದೆ.

ನಾಟಕವು ಇಪ್ಪತ್ತನೆಯ ಶತಮಾನದ ಒಂದು ಸಾಹಿತ್ಯ ಪ್ರಕಾರವಾಗಿ, ಕರ್ಣಾಟಕದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಅದು ಬಹು ಮುಖ್ಯವಾದ ಪಾತ್ರವನ್ನು ವಹಿಸಿದೆ. ಈ ಶತಮಾನದ ಆದಿಯಲ್ಲಿ, ಸ್ವತಂತ್ರ ಕನ್ನಡ ನಾಟಕ ಸಾಹಿತ್ಯವೆ ಇರಲಿಲ್ಲ. ಇದ್ದ ನಾಟಕಗಳೇನಿದ್ದರೂ ಸಂಸ್ಕೃತದ ಅಥವಾ ಇಂಗ್ಲಿಷಿ

ಅನುವಾದಗಳಾಗಿ ಬೆಳ್ಳಾವೆ ನರಹರಿಶಾಸ್ತ್ರಿಗಳ ನಾಟಕಗಳಂತೆ, ವೃತ್ತಿನಾಟಕ ರಂಗಗಳಿಗಾಗಿ ರಚಿತವಾದವುಗಳಾಗಿದ್ದುವು. ಟಿ.ಪಿ. ಕೈಲಾಸಂ, ಶ್ರೀರಂಗ, ಮತ್ತು ಕೆ.ಎಸ್. ಕಾರಂತ ಇವರ ನಾಟಕಗಳು ಕನ್ನಡ ನಾಟಕ ರಚನೆಯಲ್ಲಿ ಹೊಸ ಸತ್ವವನ್ನು ಪ್ರಕಟಿಸಿವೆ. ಇವರು ನಾಟಕ ಕಲೆಯಲ್ಲಿ ಹೊಸ ಪ್ರಯೋಗಗಳನ್ನು ತಂತ್ರಗಳನ್ನು ಆವಿಷ್ಕಾರ ಮಾಡಿ, ರಂಗದ ಮೇಲೆ ಅಭಿನಯಿಸಿ ತೋರಲು ಅನುಕೂಲವಾಗುವಂಥ ಜನಪ್ರಿಯವಾದ ಮತ್ತು ಸ್ವಾರಸ್ಯವಾದ ನಾಟಕಗಳನ್ನು ಬರೆದರು. ನಾಟಕಗಳಲ್ಲಿ ಹಾಸ್ಯವನ್ನು ಎಷ್ಟರ ಮಟ್ಟಿಗೆ ತರಬಹುದು, ಎನ್ನುವ ಸಾಧ್ಯತೆಗಳಿಗೆ ಇವರ ಕೃತಿಗಳು ನಿದರ್ಶನವಾಗಿವೆ. ಮುಖ್ಯವಾಗಿ ಈ ನಾಟಕಕಾರರ ಕೃತಿಗಳು ಸಮಾಜ ವಿಡಂಬನೆಗಳಾದರೂ ಇವರಲ್ಲಿ ಒಬ್ಬೊಬ್ಬರೂ ಈ ಸಾಮಾಜಿಕ ಸಮಸ್ಯೆಗಳನ್ನು ಎದುರಿಸುವ ರೀತಿ ಮಾತ್ರ ಬೇರೆ ಬೇರೆಯಾಗಿದೆ. ಕೈಲಾಸಂ ಅವರು ಸಾಮಾಜಿಕ ದೌಷ್ಟ್ಯಗಳನ್ನು ಕಂಡು ನಗುವುದರ ಮೂಲಕ ತಮ್ಮ ಪ್ರತಿಕ್ರಿಯೆಯನ್ನು ಪ್ರಕಟಿಸುತ್ತಾರೆ. ಆದರೆ ಆ ನಗೆಯ ಹಿಂದೆ ಇರುವ ಅನ್ಯಾಯ, ನೋವು, ದುಃಖಗಳ ಬಗೆಗೆ ಅವರಿಗೆ ಎಚ್ಚರವಿದೆ. ಕೈಲಾಸಂ ಅವರ ಹಾಸ್ಯ ನಿರೂಪಣೆಯ ಹಿಂದೆ ದುಃಖದ ಸ್ಪರ್ಶವಿದೆ. ಸಾಮಾಜಿಕ ದೌಷ್ಟ್ಯಗಳ ಬಗ್ಗೆ ಶ್ರೀರಂಗರ ಪ್ರತಿಕ್ರಿಯೆಯು ಕ್ರೋಧ ಹಾಗೂ ಪ್ರತೀಕಾರ ರೂಪದ್ದಾಗಿದೆ—ಇವುಗಳನ್ನು ಕಂಡು ನಗಬಹುದಾದದ್ದು ಸಾಕಷ್ಟಿದೆ ಎಂಬ ಅರಿವಿದ್ದರೂ. ಕಾರಂತರು ಮಾತ್ರ ವಿಧ್ವಂಸಕ ವಿಡಂಬನೆಯನ್ನು ನಾಟಕದಲ್ಲಿ ಝಳಪಿಸುತ್ತಾರೆ. ಈ ಮೂವರು ನಾಟಕಕಾರರು ಆಧುನಿಕ ಕನ್ನಡ ನಾಟಕದ ಬೆಳವಣಿಗೆಯಲ್ಲಿ ಉನ್ನತವಾದ ಹಾಗೂ ಚಿರಕಾಲಿಕವಾದ ಸ್ಥಾನವನ್ನು ಗಳಿಸಿಕೊಂಡಿದ್ದಾರೆ.

ಕನ್ನಡಕ್ಕೆ ಇತರ ಭಾಷೆಗಳಿಂದ ಅನುವಾದ ಹಾಗೂ ರೂಪಾಂತರಗಳ ಮೂಲಕ ನಾಟಕಗಳನ್ನು ತರುವ ಸಫಲ ಪ್ರಯತ್ನಗಳೂ ಸಾಕಷ್ಟು ನಡೆದಿವೆ. ಈ ಪ್ರಯತ್ನಗಳಲ್ಲಿ ಮೊದಲನೆಯದು ಚುರಮುರಿ ಶೇಷಗಿರಿರಾಯರು (1870) ಮಾಡಿದ ಕಾಳಿದಾಸನ ಶಾಕುಂತಲ ನಾಟಕದ ಅನುವಾದ. ಅನಂತರ ಬಂದದ್ದು ಬಸವಪ್ಪ ಶಾಸ್ತ್ರಿಗಳ ಶಾಕುಂತಲ ಅನುವಾದ (1883). ಅದೇ ಕಾಲದ ಧೊಂಡೋ ನರಸಿಂಹ ಮುಳುಬಾಗಿಲ, ಸುಬ್ಬಾಶಾಸ್ತ್ರಿ, ಅನಂತ ನಾರಾಯಣ ಶಾಸ್ತ್ರಿ, ಮೈಸೂರು ಸೀತಾರಾಮ ಶಾಸ್ತ್ರಿ ಮತ್ತಿತರ ಉದ್ದಾಮ ಪಂಡಿತರು ತಮ್ಮ ಮಾರ್ಗದರ್ಶಕ ಕಾರ್ಯದಿಂದ ಕನ್ನಡ ನಾಟಕ ಸಾಹಿತ್ಯದ ಸಂಪತ್ತನ್ನು ಹೆಚ್ಚಿಸಿದರು. ಷೇಕ್ಸ್‌ಪಿಯರ್, ಮೋಲಿಯರ್, ಇಬ್ಸೆನ್, ಗೋಲ್ಡ್‌ಸ್ಮಿತ್ ಇತ್ಯಾದಿ ಲೇಖಕರ ಸುಪ್ರಸಿದ್ಧ ನಾಟಕಗಳು—ಡಿ.ವಿ.ಜಿ., ಮಾಸ್ತಿ, ಎ.ಎನ್. ಮೂರ್ತಿರಾವ್, ಕುವೆಂಪು, ಪರ್ವತವಾಣಿ, ಎಸ್.ಜಿ. ಶಾಸ್ತ್ರಿ, ದೇವುಡು ಮತ್ತಿತರ ಲೇಖಕರಿಂದ ಭಾಷಾಂತರ ಇಲ್ಲವೆ ರೂಪಾಂತರವಾಗಿ ಕನ್ನಡಕ್ಕೆ ಬಂದಿವೆ. ವಿದ್ವಾಂಸರಾದ ಎಲ್. ಗುಂಡಪ್ಪ, ಎಸ್.ವಿ. ಪರಮೇಶ್ವರ ಭಟ್ಟ, ಮತ್ತು ಡಾ. ಕೆ. ಕೃಷ್ಣಮೂರ್ತಿಯವರು ಭಾಸನ ಹಾಗೂ ಕಾಳಿದಾಸನ ಕೃತಿಗಳನ್ನು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಸೊಫೋಕ್ಲಿಸ್ ಮಹಾಕವಿಯ ಎಜಾಕ್ಸ್ ನಾಟಕದ ಅತ್ಯುತ್ಕೃಷ್ಟ ರೂಪಾಂತರವಾಗಿರುವ, ಶ್ರೀಯವರ 'ಅಶ್ವತ್ಥಾಮನ್' ಕನ್ನಡಕ್ಕೆ ಬಂದ ಮೊತ್ತಮೊದಲ ಗ್ರೀಕ್ ನಾಟಕವಾಗಿದೆ. ಈ ಪರಂಪರೆಯಲ್ಲಿ ಕೆ.ವಿ. ರಾಘವಾಚಾರ್ಯರು ನೇರವಾಗಿ ಗ್ರೀಕ್ ಭಾಷೆಯಿಂದಲೆ, ಸುಪ್ರಸಿದ್ಧ ಗ್ರೀಕ್ ರುದ್ರ ನಾಟಕಗಳ ಅನುವಾದವನ್ನು ಮಾಡಿದ್ದಾರೆ.

**ಏಕಾಂಕ ನಾಟಕಗಳು** ಕಲಾವಿಲಾಸೀ ರಂಗದ ವಿಶೇಷ ಲಕ್ಷಣಗಳಾಗಿವೆ. ಕೆ.ಎಸ್. ಕಾರಂತ, ದ.ರಾ. ಬೇಂದ್ರೆ, 'ಪರ್ವತವಾಣಿ' 'ಕೈವಾರ ರಾಜಾರಾವ್', 'ಕ್ಷೀರಸಾಗರ', ಮತ್ತು ಎನ್ಕೆ ಕುಲಕರ್ಣಿ ಇವರು ತಮ್ಮ ಏಕಾಂಕ ನಾಟಕಗಳಲ್ಲಿ ಸಮಾಜದ ನ್ಯೂನತೆಗಳನ್ನು ಚಿತ್ರಿಸಿದ್ದಾರೆ. ಕೆಲವರು ಏಕಾಂಕ ನಾಟಕಕಾರರ ಪಾಲಿಗಂತೂ ಏಕಾಂಕ ನಾಟಕವೆಂದರೆ ಮುಖ್ಯವಾಗಿ ಪ್ರೇಕ್ಷಕರನ್ನು ನಗಿಸುವ ಒಂದು ಸಾಧನ ಎಂಬ ಭಾವನೆ ಇದೆ. ಏಕಾಂಕ ನಾಟಕಗಳಲ್ಲಿ ಇನ್ನೂ ಹೆಚ್ಚಿನ ವಸ್ತು ವೈವಿಧ್ಯ ಮತ್ತು ಭಾವ ಪ್ರಕಾಶನ ಕೌಶಲ ಬರಬೇಕಾಗಿದೆ. ರೇಡಿಯೋ ನಾಟಕಗಳು ಹೆಚ್ಚಿನ ಸಾಧ್ಯತೆಗಳನ್ನು ತರಲು ಅನುಕೂಲವಾದ

ಪ್ರಭೇದಗಳಾದರೂ ಇಂದಿಗೂ ಆ ನಾಟಕತಂತ್ರವನ್ನು ಕನ್ನಡದ ಲೇಖಕರು ಪರಿಣತವಾದ ರೀತಿಯಲ್ಲಿ ಸಾಧಿಸಿಕೊಂಡಿಲ್ಲ.

ಪಾಶ್ಚಾತ್ಯ 'ಅಪೆರಾ' ಗಳ ಮಾದರಿಯ ಗೀತನಾಟಕಗಳು, ಕಾರಂತ, ಪು.ತಿ. ನರಸಿಂಹಾಚಾರ್, ಸಿದ್ಧಯ್ಯ ಪುರಾಣಿಕ ಇವರಿಂದ ರಚಿತವಾಗಿವೆ. ಅವುಗಳಲ್ಲಿ ಕೆಲವು ರಂಗಭೂಮಿಯ ಮೇಲೂ ರೇಡಿಯೋ ಪ್ರಸಾರದಲ್ಲೂ ಯಶಸ್ವಿಯಾಗಿ ಬಂದಿವೆ. ಈ ದಿಕ್ಕಿನಲ್ಲಂತೂ ಇನ್ನೂ ಕೃಷಿ ಮಾಡಬಹುದಾದ ಕ್ಷೇತ್ರ ವಿಸ್ತಾರವಾಗಿದೆ.

ಸಣ್ಣ ಕತೆ ಅತ್ಯಂತ ಜನಪ್ರಿಯವಾದ ಒಂದು ಸಾಹಿತ್ಯ ಪ್ರಕಾರ. ಬಹು ಮಂದಿ ತರುಣ ಲೇಖಕರು ಇದರ ರಚನೆಯಲ್ಲಿ ಆಸಕ್ತರಾಗಿದ್ದಾರೆ. 'ಶ್ರೀನಿವಾಸ'ರು ಆಧುನಿಕ ಸಣ್ಣಕತೆಯ ಜನಕರೆಂದು ಸಾರ್ಥಕವಾಗಿ ಹೆಸರಾಗಿದ್ದಾರೆ. ಕಥೆಯ ನಿರೂಪಣೆ ಮತ್ತು ತಂತ್ರ, ಪಾತ್ರಚಿತ್ರಣ ಮತ್ತು ಶೈಲಿಗಳ ದೃಷ್ಟಿಯಿಂದ ಇವರು ಅತಿ ಮಹತ್ವದ ಲೇಖಕರಾಗಿದ್ದಾರೆ. ಅವರು ಬದುಕಿನ ಯಾವ ಮುಖವನ್ನೂ ತಮ್ಮ ಕಥೆಗಳಲ್ಲಿ ಚಿತ್ರಿಸದೆ ಬಿಟ್ಟಿಲ್ಲ. ಅವರ ಅನೇಕ ಕತೆಗಳು ತಿಳಿಯಾದ ನಗೆಯನ್ನು ತುಳುಕಿಸುತ್ತ ವಿಶಿಷ್ಟವಾಗಿವೆ. ಅವುಗಳಲ್ಲಿ ಎಷ್ಟೋ ಕತೆಗಳು ಸರಳತೆಯೇ ಮೂರ್ತಿವೆತ್ತ ಮಹಾಕೃತಿಗಳಾಗಿವೆ.

ಶ್ರೀನಿವಾಸರ ಪರಂಪರೆಯನ್ನು ಯಶಸ್ವಿಯಾಗಿ ಮುಂದುವರಿಸಿದವರು ಕೆ. ಗೋಪಾಲಕೃಷ್ಣರಾಯರು. ಮತ್ತು 'ಆನಂದ'ರು. 'ಆನಂದ'ರ ಕತೆಗಳಲ್ಲಿ, ಮಾನವ ಜೀವನದಲ್ಲಿ ವಿಧಿವಿಲಾಸದ ವಿಲಕ್ಷಣತೆ ಮನೋವೇಧಕವಾಗಿ ಚಿತ್ರಿತವಾಗಿದೆ. ಗೋಪಾಲಕೃಷ್ಣರಾಯರು ತಮ್ಮ ಕತೆಗಳಲ್ಲಿ ಬದುಕಿನ ಬಹು ಮುಖಗಳನ್ನು ಚಿತ್ರಿಸಿದ್ದಾರೆ. ಈ ಇಬ್ಬರು ಕತೆಗಾರರ ಬರೆವಣಿಗೆಯಲ್ಲಿ ನವಿರಾದ ಹಾಸ್ಯ, ಒಂದು ವಿಶೇಷ ಲಕ್ಷಣವಾಗಿದೆ. ಕಾರಂತ ಮತ್ತು ಕುವೆಂಪು ಅವರ ಕತೆಗಳಲ್ಲಿ ಬದುಕಿನ ಹಲವು ಮುಖಗಳ ಸ್ವಾರಸ್ಯವಾದ ನಿರೂಪಣೆಯೂ ತೀವ್ರವಾದ ಸತ್ಯಾನ್ವೇಷಕ ಪ್ರವೃತ್ತಿಯೂ ಕಾಣಿಸುತ್ತವೆ. ಕುವೆಂಪು ಅವರ ಕತೆಗಳು ಕೆಲವು ವೇಳೆ ಕಾವ್ಯಮಯವಾಗುತ್ತವೆ. ಮತ್ತೆ ಕೆಲವು ವೇಳೆ ವಿಶೇಷವಾಗಿ ಪ್ರಬಂಧ ರೂಪಗಳನ್ನು ಹೋಲುವ, ಅತ್ಯಂತ ಶಕ್ತವಾದ ವ್ಯಕ್ತಿಚಿತ್ರಗಳಾಗುತ್ತವೆ. ಈ ಮಾತು ಗೊರೂರು ರಾಮಸ್ವಾಮಿ ಅಯ್ಯಂಗಾರರ ಸಣ್ಣಕತೆಗಳಿಗೂ ವಿಶೇಷವಾಗಿ ಅನ್ವಯಿಸುತ್ತದೆ. ಕನ್ನಡದಲ್ಲಿ ವ್ಯಕ್ತಿ ಚಿತ್ರಣಗಳನ್ನು ಬರೆಯುವುದರಲ್ಲಿ ಗೊರೂರು ಅವರು ಮಹತ್ವದ ಸ್ಥಾನವನ್ನು ಪಡೆದಿದ್ದಾರೆ. ಇಂಗ್ಲಿಷ್ ಲೇಖಕ ಗೋಲ್ಡ್‌ಸ್ಮಿತನ ಹಾಗೆ, ಗೊರೂರ್ ಅವರು ಸೊಗಸಾದ ಪ್ರಸನ್ನ ಹಾಸ್ಯ ಪ್ರವೃತ್ತಿಯನ್ನುಳ್ಳ ಲೇಖಕರು. ಹಳ್ಳಿಯ ಬದುಕನ್ನು ಕುರಿತ ಅವರ ಚಿತ್ರಗಳಾಗಲಿ, ಅಲ್ಲಿ ಕಂಡು ಬರುವ ಪಾತ್ರಗಳಾಗಲಿ, ನಮ್ಮ ನೆನಪಿನಲ್ಲಿ ಬಹು ಕಾಲ ಅಚ್ಚೊತ್ತಿ ನಿಲ್ಲುತ್ತವೆ. ಇದಕ್ಕೆ ಕಾರಣ, ಅವರ ನಿರೂಪಣೆ ಕೇವಲ ವಾಸ್ತವ ಹಾಗೂ ಪರಿಣಾಮಕಾರಿಯಾಗಿದೆ. ಎಂಬುದಷ್ಟೆ ಅಲ್ಲ, ಅವರು ಹಾಸ್ಯದ ಕಣ್ಣಿನ ಮೂಲಕ ಮಾನವ ಸ್ವಭಾವಗಳನ್ನು ಕಂಡು ಚಿತ್ರಿಸಬಲ್ಲರು, ಎನ್ನುವುದು. ಸಣ್ಣ ಕತೆಯ ಕ್ಷೇತ್ರದಲ್ಲಿ ಬರೆಯುತ್ತಿರುವ ಇನ್ನೂ ಎಷ್ಟೋ ಲೇಖಕರಿದ್ದಾರೆ. ಅವರನ್ನೆಲ್ಲಾ ಹೆಸರಿಸಲು, ಅವರ ಸಂಖ್ಯೆ ದೊಡ್ಡದಾದ ಕಾರಣ ಸಾಧ್ಯವಿಲ್ಲ. ಆದರೆ ಅವರಲ್ಲಿ ಗಮನಾರ್ಹರಾದ ಕೆಲವರು—ಅ.ನ. ಕೃಷ್ಣರಾಯರು, ಎಂ.ವಿ. ಸೀತಾರಾಮಯ್ಯನವರು, ಚದುರಂಗ, ಭಾರತೀಪ್ರಿಯ, 'ನಿರಂಜನ', ಮತ್ತಿತರರು. ಫ್ರಾಯ್ಡನ ಮನಶ್ಶಾಸ್ತ್ರದ ಪರಿಣಾಮವಾಗಿ ಬಂದ 'ಪ್ರಜ್ಞಾಪ್ರವಾಹತಂತ್ರ' ಸಣ್ಣ ಕತೆಯ ಇತ್ತೀಚಿನ ಹೊಸ ಬರೆಹಗಳಲ್ಲಿ ಕಾಣಿಸಿಕೊಳ್ಳುತ್ತಲಿದೆ. ಈ ಹೊಸ ಪೀಳಿಗೆಯ ಕತೆಗಾರರಲ್ಲಿ ಕೆಲವರಾಗಿ—ಸದಾಶಿವ, ರಾಮಚಂದ್ರಶರ್ಮ ಮತ್ತಿತರರಿದ್ದಾರೆ.

ಪಾಶ್ಚಾತ್ಯ ಸಾಹಿತ್ಯಕ್ಕೆ ಋಣಿಯಾದ ಮತ್ತೊಂದು ಸಾಹಿತ್ಯ ಪ್ರಕಾರವೆಂದರೆ—ಪ್ರಬಂಧ (Essay) ಸಾಹಿತ್ಯ. ಇದು ಕೂಡ ವ್ಯಕ್ತಿನಿಷ್ಠ, ಚಿಂತನಪರ, ಲಘು ಹಾಸ್ಯರಂಜಿತ, ಅಣಕು ಚಿತ್ರ, ರೇಖಾಚಿತ್ರ —

ಇತ್ಯಾದಿ ಹಲವು ರೂಪದಲ್ಲಿ ಬಂದಿದೆ. ಒಂದೊಂದು ಸಲ ಯಾವುದೋ ಒಂದು ಭಾವ, ಪ್ರಬಂಧ ರಚನೆಯ ಕೇಂದ್ರವಾಗಿ ಬರುತ್ತದೆ; ಅದರ ಸುತ್ತಾ ಅದಕ್ಕೆ ಅನುಗುಣವಾದ ಇನ್ನೆಷ್ಟೋ ಭಾವಗಳು, ವಿಚಾರಗಳು ಬಂದು ಹೆಣೆದುಕೊಳ್ಳುತ್ತವೆ. ಈ ರೀತಿ ಅಪ್ರಸ್ತುತ ವಿಧಾನದಲ್ಲಿ ಮುಂದುವರಿಯುವ ಪ್ರವೃತ್ತಿ ವಿನೋದಪರ ಅಥವಾ ಚಿಂತನಪರ ಪ್ರಬಂಧವಾಗುತ್ತದೆ. ಚಿರಪರಿಚಿತವಾಗಿರುವ ಈ ಬರೆವಣಿಗೆಯ ಇನ್ನೊಂದು ರೂಪ ಅಣಕ ಅಥವಾ ವ್ಯಂಗ್ಯಚಿತ್ರ. ಎ.ಎನ್. ಮೂರ್ತಿ ರಾವ್, ಗೋರೂರು, ನಾ. ಕಸ್ತೂರಿ, ಶ್ರೀರಂಗ, ಕಾರಂತ ಮತ್ತು ನಗೆಮಾರಿ ಇವರು—ಈ ಬಗೆಯ ಪ್ರಬಂಧ ರಚನೆಯಲ್ಲಿ ವಿಶಿಷ್ಟತೆಯನ್ನು ಗಳಿಸಿಕೊಂಡು, ಉಳಿದ ಲೇಖಕರಿಗೆ ಮಾದರಿಯಾಗಿದ್ದಾರೆ.

ಇಷ್ಟೆ ಅಲ್ಲದೆ, ಈ ಸಾಹಿತ್ಯ ನಿರ್ಮಿತಿಯ ಜೊತೆಗೆ ಪತ್ರಲೇಖನ, ಆತ್ಮಕಥಾನಕ, ಸ್ಮೃತಿ ಚಿತ್ರಗಳು, ಪ್ರವಾಸ ಕಥನ–ಇತ್ಯಾದಿ ಸಾಹಿತ್ಯ ಪ್ರಕಾರಗಳ ನಿರ್ಮಿತಿಯೂ ನಿರಂತರವಾಗಿ ನಡೆದಿದೆ. ನವರತ್ನ ರಾಮರಾಯರ ‘ ಕೆಲವು ನೆನಪುಗಳು ’, ಈ ಮಾದರಿಯ ಬೆಳವಣಿಗೆಯಲ್ಲಿ ಅಪೂರ್ವವಾದದ್ದು. ಇದಲ್ಲದೆ ಕೆಲವು ಕತೆಗಳನ್ನೂ ಅವರು ಬರೆದಿದ್ದಾರೆ. ಡಿ.ವಿ.ಜಿ., ಎ.ಆರ್. ಕೃಷ್ಣಶಾಸ್ತ್ರಿ, ಸಿ.ಕೆ. ವೆಂಕಟರಾಮಯ್ಯ, ತೀ.ನಂ. ಶ್ರೀಕಂಠಯ್ಯ, ಡಿ.ಎಲ್. ನರಸಿಂಹಾಚಾರ್—ಇವರು ಮಹತ್ವದ ಸಾಹಿತ್ಯ ವಿಮರ್ಶೆಯ ಕೃತಿಗಳಿಂದ ಕನ್ನಡ ಸಾಹಿತ್ಯದ ಬೆಲೆಯನ್ನು ಹೆಚ್ಚಿಸಿದ್ದಾರೆ. ರಂ.ಶ್ರೀ. ಮುಗಳಿಯವರು ಸಮಗ್ರವಾದ ಕನ್ನಡ ಸಾಹಿತ್ಯ ಚರಿತ್ರೆಯನ್ನು ಬರೆದು, ಬಹುಕಾಲದ ಅರಕೆಯನ್ನು ತುಂಬಿದ್ದಾರೆ. ಅತಿ ಪುರಾತನವಾದ ಪ್ರವಾಸ ಕಥನ ಕಲೆ–ಕಾರಂತ, ಗೋಕಾಕ ಮತ್ತಿತ್ತರರ ಕೈಯಲ್ಲಿ ಹೇಗೆ ಹೊಸ ಹೊಗರನ್ನು ಪಡೆದಿದೆ ಎನ್ನುವುದು ಸ್ವಾರಸ್ಯವಾದ ಸಂಗತಿಯಾಗಿದೆ.

ಸಮಕಾಲೀನ ಸಾಹಿತ್ಯದ ಈ ಎಲ್ಲ ಸಂಗತಿಗಳ ಕಡೆಗೆ ಕಣ್ಣಾಡಿಸಿದಾಗ, ನಮ್ಮ ಇಂದಿನ ಬರೆಹಗಾರರನೇಕರಲ್ಲಿ ಒಂದು ವಿಶಿಷ್ಟವಾದ ಮನೋಧರ್ಮ ರೂಪಿತವಾಗಿರುವುದನ್ನು ಯಾರಾದರೂ ಕಾಣಬಹುದಾಗಿದೆ. ಸಾಹಿತ್ಯದ ನೆಪದಲ್ಲಿ ಆದರ್ಶಗಳನ್ನು ಕುರಿತು ಉದ್ಬೋಧನೆಯ ಉಪನ್ಯಾಸ ಮಾಡುವ ಅಥವಾ ನೀತಿಬೋಧೆಯಲ್ಲಿ ತೊಡಗುವ ಕಾಲ ಎಂದೋ ಮುಗಿದು ಹೋಗಿದೆ. ಇವತ್ತಿನ ಲೇಖಕನಿಗೆ ತನ್ನ ಸುತ್ತಣ ಬದುಕಿನ ಯಥಾವತ್ತಾದ ಸಂಗತಿಗಳ ಬಗೆಗೆ ತನಗೇನನ್ನಿಸುತ್ತದೆ ಎನ್ನುವುದನ್ನು ಸಾಹಿತ್ಯದ ಮೂಲಕ ತಿಳಿಯಪಡಿಸುವ ಕಾತರವಿದೆ. ಆಧುನಿಕ ಲೇಖಕರಲ್ಲಿ ಈ ಒಂದು ಮನೋಧರ್ಮ ಖಚಿತವಾಗಿ ಮೂಡುತ್ತಿದೆ. ನಮ್ಮ ಲೇಖಕರ ಗಮನ ಹಿಂದೆ ಏನಾಯಿತು ಎಂಬುದಕ್ಕಿಂತ, ಇವತ್ತೇನಾಗಬೇಕು, ಹಾಗೆಯೆ ನಾಳೆ ಏನಾಗಬೇಕು ಎನ್ನುವುದರ ಕಡೆಗೆ, ಅದರಲ್ಲೂ ತಮ್ಮ ಸುತ್ತಲೂ ಏನು ನಡೆಯುತ್ತಿದೆಯೋ ಅದರ ಕಡೆಗೆ ಹರಿಯುತ್ತಿದೆ. ಹೀಗಾದದ್ದು, ಆಗಬೇಕಾದದ್ದೆ.

ಮೂಲಲೇಖಕರು : ಡಾ॥ ಎಂ.ಎಸ್. ಸುಂಕಾಪುರ
ಅನುವಾದಕರು : ಡಾ॥ ಜಿ.ಎಸ್. ಶಿವರುದ್ರಪ್ಪ

# ಸಂಸ್ಕೃತ—ಆಧುನಿಕ ಕಾಲ

**ಹಳೆಯ ಮೈಸೂರು ರಾಜ್ಯ**

ಹಳೆಯ ಮೈಸೂರು ರಾಜ್ಯದಲ್ಲಿ 1760–1947ರ ನಡುಗಾಲದಲ್ಲಿ ಸಂಸ್ಕೃತದ ಸಾಹಿತ್ಯ ಚಟುವಟಿಕೆ ಗಮನಾರ್ಹವಾಗಿತ್ತು. 18ನೆಯ ಶತಮಾನದ ಉತ್ತರ ಭಾಗದಲ್ಲಿ ಮೈಸೂರಿನ ರಾಜ್ಯಾಡಳಿತದಲ್ಲಿ ಬಹು ಪ್ರಮುಖ ಸ್ಥಾನವನ್ನಾಕ್ರಮಿಸಿದ್ದ ದಳವಾಯಿ ನಂಜರಾಜನು ಸಾಹಿತ್ಯ ಸಂಬಂಧವಾದ ಕಾರ್ಯಗಳಲ್ಲಿ ಮನಸ್ಸು ಕೊಡುವುದಕ್ಕೂ ಕಾಲವೊದಗಿಸಿಕೊಳ್ಳುತ್ತಿದ್ದನು. ಅವನು ಅನೇಕ ಗ್ರಂಥಗಳನ್ನು ಸಂಸ್ಕೃತದಿಂದ ಕನ್ನಡಕ್ಕೆ ಭಾಷಾಂತರ ಮಾಡಿದನು. ಸಂಸ್ಕೃತದಲ್ಲಿ 'ಸಂಗೀತ ಗಂಗಾಧರ'ವನ್ನು ರಚಿಸಿದನು. ಅದರಲ್ಲಿ ನಾಲ್ಕು ಅಧ್ಯಾಯಗಳಿವೆ. ಜಯದೇವನ 'ಗೀತಗೋವಿಂದ'ವನ್ನು ಈ ಗ್ರಂಥಕರ್ತ ಬಹು ವಿವರವಾಗಿ ಅನುಸರಿಸಿದ್ದಾನೆ. ಆದರೆ, ಇಲ್ಲಿ ಶಿವನೇ ನಾಯಕ. ನಂಜರಾಜನು ವಿದ್ವಾಂಸರಿಗೆ ಉದಾರವಾಗಿ ಆಶ್ರಯ ಕೊಡುತ್ತಲೂ ಇದ್ದನು. ನರಸಿಂಹನು 'ಚಂದ್ರಕಲಾ ಪರಿಣಯ' ಎಂಬ ನಾಟಕದ ಪ್ರಸ್ತಾವನೆಯಲ್ಲಿ ಆಧುನಿಕ ಭೋಜ ಎಂದು ಅವನನ್ನು ಹೊಗಳಿದ್ದಾನೆ. ಗ್ರಂಥಕರ್ತನ ಆಶ್ರಯದಾತನೇ ಈ ನಾಟಕದ ನಾಯಕ. ಈ ಗ್ರಂಥಕರ್ತನಿಗೆ 'ಅಭಿನವ ಕಾಳಿದಾಸ' ಎಂಬ ಬಿರುದಿತ್ತು. ಅವನು 'ನಂಜರಾಜ ಯಶೋಭೂಷಣ' ಎಂಬ ಅಲಂಕಾರ ಗ್ರಂಥವನ್ನೂ ಬರೆದಿದ್ದಾನೆ. ಈ ಗ್ರಂಥದಲ್ಲಿನ ಉದಾಹರಣ ಪದ್ಯಗಳು ಆಶ್ರಯದಾತನ ಪ್ರಶಂಸೆಗೆ ಮೀಸಲಾಗಿವೆ.

ಮುಮ್ಮಡಿ ಕೃಷ್ಣರಾಜ ಒಡೆಯರು ಅನೇಕ ಮಂದಿ ವಿದ್ವಾಂಸರಿಗೆ ಆಶ್ರದಾತರಾಗಿದ್ದುದರ ಜೊತೆಗೆ, ತಾವೂ ಅನೇಕ ಗ್ರಂಥಗಳನ್ನು ರಚಿಸಿದವರಾಗಿದ್ದರು. ಅವರ ಗ್ರಂಥಗಳಲ್ಲಿ ಮುಖ್ಯವಾದ ಕೆಲವು ಇವು: 'ಸೂರ್ಯಚಂದ್ರಾದಿ ವಂಶಾವತರಣ' (1857)–ಇದರಲ್ಲಿ ರಾಮಾಯಣ, ಮಹಾಭಾರತಗಳಲ್ಲಿ ಒಂದೊಂದರಿಂದಲೂ ನೂರು ನೂರು ಉಪಾಖ್ಯಾನಗಳನ್ನೂ ಮೈಸೂರೊಡೆಯರ ವಂಶದ ಮೂಲ ಪುರುಷರಾದ ಯದುರಾಯ ಕೃಷ್ಣರಾಯರೆಂಬ ಸೋದರರ ಸಾಹಸ ಕಾರ್ಯಗಳನ್ನೂ ವಿವರಿಸಲಾಗಿದೆ. 'ಶ್ರೀ ತತ್ವನಿಧಿ'— ಅನೇಕ ಮೂಲಗಳಿಂದ ಬೇರೆ ಬೇರೆ ದೇವತೆಗಳನ್ನು ಕುರಿತ ಪದ್ಯಗಳನ್ನು ಆಯ್ದು ಕೂಡಿಸಿದ ಸಂಕಲನ. 'ದಶರಥನನ್ದನ ಚರಿತ'–ಕವಿ ತನ್ನ ಸ್ವಂತ ಮಾತುಗಳಲ್ಲಿ 'ಆರ್ಯಾವೃತ್ತ'ದಲ್ಲಿ ರಚಿಸಿರುವ ರಾಮಾಯಣ ಕಥೆ. 'ಗ್ರಹಣದರ್ಪಣ' (1842)—1841 ರಿಂದ 1902ರ ವರೆಗೆ ಆದ 82 ಗ್ರಹಣಗಳ ವಿಚಾರವನ್ನು ನಕ್ಷೆ ಚಿತ್ರಗಳೊಡನೆ ವಿವರಿಸುವುದು; 'ಸಂಖ್ಯಾರತ್ನಕೋಶ' (1856) ಮತ್ತು 'ಚತುರಂಗ ಸಾರಸರ್ವಸ್ವ' (1856).

ಅವರ ಆಸ್ಥಾನದಲ್ಲಿ ಅನೇಕ ಮಂದಿ ಕವಿಗಳೂ ಗ್ರಂಥಕರ್ತರೂ ಇದ್ದರು. ಅವರಲ್ಲಿ ಈ ಕೆಳಗೆ ಉಲ್ಲೇಖಿಸಿದವರನ್ನು ಗಮನಿಸಬಹುದು :

ಹಾಸನದ ರಾಮಕೃಷ್ಣಶಾಸ್ತ್ರಿ—ಈತ 'ಭುವನ ಪ್ರದೀಪಿಕಾ' (1808) ಎಂಬ ವಿಶ್ವಕೋಶದ ಕರ್ತೃ. ಸೃಷ್ಟಿ, ಕಾಲ, ಭೂವಿವರಣೆ, ಖಗೋಳ ಶಾಸ್ತ್ರ, ಪುರಾಣಗಳು, ದಕ್ಷಿಣ ಭಾರತ ಚರಿತ್ರೆ (ಇದರಲ್ಲಿ ತನ್ನ ಆಶ್ರಯದಾತನ ಬಗ್ಗೆ ಅನೇಕ ವಿವರಗಳಿವೆ)—ಇವನ್ನು ಕುರಿತ ವಿವರಗಳಿವೆ.

ಶ್ರೀನಿವಾಸ ಕವಿಸಾರ್ವಭೌಮನು 'ಕೃಷ್ಣರಾಜ ಪ್ರಭಾವೋದಯ' ಮತ್ತು 'ಕೃಷ್ಣನೃಪ ಜಯೋತ್ಕರ್ಷ ಚಂಪೂ' ಎಂಬೆರಡು ಗ್ರಂಥಗಳನ್ನು ರಚಿಸಿದ್ದಾನೆ. ಇವುಗಳಲ್ಲಿ ಕವಿಯ ಆಶ್ರಯದಾತನ ಜೀವನವಿಚಾರ ವರ್ಣಿತವಾಗಿದೆ. ಈ ಚಂಪೂ ಕೃತಿ ಒಂದು ಕಾವ್ಯಸಾಹಸ. ಲೇಖನ ಚಿಹ್ನೆಯನ್ನು ಸ್ವಲ್ಪ ವ್ಯತ್ಯಾಸ ಮಾಡುವುದರಿಂದಲೇ (ಓದುವುದರಲ್ಲಿ ವಿರಾಮ ಸ್ಥಾನವನ್ನು ಹೆಚ್ಚು ಕಡಮೆ ಮಾಡುವುದರಿಂದ) ಈ ಗ್ರಂಥ ಸಂಸ್ಕೃತವೋ ಕನ್ನಡವೋ ಆಗಿಬಿಡುತ್ತದೆ. ಅಹೋಬಲ ನರಸಿಂಹನು 'ಅಭಿನವ ಕಾದಂಬರಿ' ಅಥವಾ 'ತ್ರಿಮೂರ್ತಿ ಕಲ್ಯಾಣ' (1795)ವನ್ನು ಬರೆದನು. ಈ ಗ್ರಂಥ ಒಂದು ಸಾಹಸಾಹ್ವಾನದ (Challenge) ಫಲವಾಗಿ ರಚಿತವಾಯಿತು. ಇದರಲ್ಲಿ ಎರಡು ಭಾಗಗಳಿವೆ; ಇದು ಆಶ್ರಯದಾತನ ಸಾಹಸಗಳನ್ನು ವಿವರಿಸುತ್ತದೆ.

ಮಲ್ಲಾರಿ ಆರಾಧ್ಯನು, 18ನೆಯ ಶತಮಾನಕ್ಕೆ ಸೇರಿದವನು. ಇವನು 'ಶಿವಲಿಂಗ ಸೂರ್ಯೋದಯ' ಎಂಬ ಐದಂಕದ ನಾಟಕವನ್ನು ರಚಿಸಿದನು. ವೀರಶೈವ ಮತದ ಉತ್ಕರ್ಷವನ್ನು ಸ್ಥಾಪಿಸುವುದೇ ಈ ಗ್ರಂಥದ ಉದ್ದೇಶ.

ಸುರಪುರಂ ಜಮೀನ್ದಾರರ ಆಸ್ಥಾನದಲ್ಲಿದ್ದ ಅಣ್ಣಯಾಚಾರ್ಯ ದೀಕ್ಷಿತನ ಮಗ ತಿರುಮಲ ಬುಕ್ಕಾಪಟ್ಟಂ ವೇಕಟಾಚಾರ್ಯನು 'ಅಲಂಕಾರ ಕೌಸ್ತುಭ'ವನ್ನು ಬರೆದನು. ಅವನ ಸೋದರನ ಮಗ ಸುರಪುರಂ ಶ್ರೀನಿವಾಸಾಚಾರ್ಯನು 'ರಸಮಂಜರಿ' ಮತ್ತು ಸುಪ್ರಸಿದ್ಧ 'ತತ್ತ್ವಮಾರ್ತಾಂಡ' ಗ್ರಂಥಗಳನ್ನು ರಚಿಸಿದನು.

ಮೈಸೂರಿನ ಉದಯೇಂದ್ರಪುರಂ ಅನಂತಾಚಾರ್ಯನು 1817ರಲ್ಲಿ ಬಹಳ ಕವಿತಾಚಾತುರ್ಯದಿಂದ ಕೂಡಿದ 'ಯಾದವ-ರಾಘವ-ಪಾಂಡವೀಯ'ಎಂಬ ಗ್ರಂಥವನ್ನು ರಚಿಸಿದನು. ಈ ಗ್ರಂಥದಲ್ಲಿ ಪ್ರತಿಯೊಂದು ಶ್ಲೋಕದಲ್ಲಿಯೂ ಕೃಷ್ಣ, ರಾಮ, ಪಾಂಡವರು—ಈ ಮೂವರ ಕಥೆಗಳೂ ನಿರೂಪಿತವಾಗಿವೆ. ಅವನ ಮಗಳು ತ್ರಿವೇಣಿಯೂ ಸಮರ್ಥ ಕವಯಿತ್ರಿಯಾಗಿದ್ದಳು. 'ರಂಗಾಭ್ಯುದಯ' ಮತ್ತು 'ರಂಗನಾಥ ಸಾಹಸ' ಎಂಬ ಕಾವ್ಯಗಳು, 'ಶುಕಸಂದೇಶ' ಎಂಬ ಭಾವಗೀತ, 'ರಂಗವಟ ಸಮುದಾಯ' ಎಂಬ ನಾಟಕ ಮತ್ತು 'ತತ್ತ್ವಮುದ್ರಾ ಭದ್ರೋದಯಂ'ಎಂಬ ಆಧ್ಯಾತ್ಮಿಕ ಸಂಕೇತ ನಾಟಕ— ಇವು ಆಕೆಯ ರಚನೆಗಳಲ್ಲಿ ಕೆಲವು.

1884ರಲ್ಲಿ ಚಿಂಚೋಳಿ ವೆಂಕಣ್ಣಾಚಾರ್ ತನ್ನ 'ಅಷ್ಟಾಧ್ಯಾಯೀ ದರ್ಪಣ'ವನ್ನು ಪ್ರಕಟಪಡಿಸಿದನು. ಇದು ಪಾಣಿನಿಯ 'ಅಷ್ಟಾಧ್ಯಾಯೀ ಸೂತ್ರ'ಗಳ ಅಕಾರಾದಿ ಅನುಕ್ರಮಣಿಕೆ. ಪ್ರತಿಯೊಂದು ಸೂತ್ರದೆದುರಿನಲ್ಲೂ ಅದು ಸಿದ್ಧಾಂತ ಕೌಮುದಿಯಲ್ಲಿ ಯಾವ ಕಡೆ ಬರುತ್ತದೆಯೆಂಬುದನ್ನು ಸೂಚಿಸಲಾಗಿದೆ.

ರಾಜಲಿಂಗ ಸೂರಿ, ಅಥವಾ ರಾಜಮಲ್ಲಯ್ಯನು 'ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ'ವನ್ನು (1884) ರಚಿಸಿದ ಕವಿ. ಈ ಗ್ರಂಥ ಮಲ್ಲಿಕಾರ್ಜುನ ಪಂಡಿತನ ಜೀವನ ಚರಿತ್ರೆಯನ್ನು ಕುರಿತದ್ದು. ಬಸವನ ಜೀವನ ಕಥೆಯೂ ಇದರಲ್ಲಿ ಬರುತ್ತದೆ; ಪಂಡಿತನ ಒಬ್ಬ ಶಿಷ್ಯ ಆ ಕಥೆಯನ್ನು ಹೇಳಿದಂತೆ ನಿರೂಪಿಸಿದೆ. ಈ ಗ್ರಂಥದ ಆದಿಭಾಗದಲ್ಲಿ ವೀರಶೈವ ಮತತತ್ತ್ವಗಳ ವಿವರವಾದ ನಿರೂಪಣೆಯೂ ಇದೆ. ಅನಾವಶ್ಯಕವಾದ ವರ್ಣನೆಗಳಿಲ್ಲದಿರುವುದು ಈ ಗ್ರಂಥದ ವಿಶೇಷ ಲಕ್ಷಣ.

ಮತ ಮತ್ತು ವೇದಾಂತತತ್ತ್ವಗಳನ್ನೊಳಗೊಂಡ 'ಆರ್ಯಧರ್ಮ ಪ್ರಕಾಶಿಕಾ' 1890ರಲ್ಲಿ ಮಂಡಿಕಲ್ ರಾಮಾಶಾಸ್ತ್ರಿಯಿಂದ ಪ್ರಕಟವಾಯಿತು. ಆತನ ಇನ್ನೊಂದು ಮುಖ್ಯ ಗ್ರಂಥ,

'ಭೈಮೀಪರಿಣಯ' ಅಥವಾ 'ನಳವಿಜಯ' 1914ರಲ್ಲಿ ಹೊರಬಂತು. ಈ ನಾಟಕ ಹತ್ತು ಅಂಕಗಳಲ್ಲಿ ದಮಯಂತಿಯ ಸ್ವಯಂವರವನ್ನು ನಿರೂಪಿಸುತ್ತದೆ. ಸರಳ ಗಂಭೀರ ಸಂಸ್ಕೃತದಲ್ಲಿ ರಚಿಸಿರುವ ಈ ನಾಟಕ ಉತ್ಕೃಷ್ಟ ಪ್ರೌಢಗ್ರಂಥಗಳಿಗೆ ಯಾವ ರೀತಿಯಲ್ಲೂ ಕಡಮೆಯಾಗಿಲ್ಲ. ಮಾನವ ಹೃದಯದ ಪರಿಪಕ್ವ ಭಾವಗಳು ಇದರಲ್ಲಿ ಅಭಿವ್ಯಕ್ತಹೊಂದಿವೆ; ಮತ್ತು ಅಮೌಲ್ಯ ಉಪದೇಶಗಳೂ ಅಡಗಿವೆ. 1923ರಲ್ಲಿ ಇದೇ ಗ್ರಂಥಕರ್ತ 'ಮೇಘ ಪ್ರತಿಸಂದೇಶ' ಎಂಬ ಒಂದು ಲಘುಕಾವ್ಯವನ್ನು ರಚಿಸಿ ತನ್ನ ವ್ಯಾಖ್ಯಾನದೊಡನೆ ಪ್ರಕಟಿಸಿದನು. ಕಾಳಿದಾಸನ ಸುಪ್ರಸಿದ್ಧ 'ಮೇಘಸಂದೇಶ'ಕ್ಕೆ ಪೂರಕವಾಗಿ ಇದನ್ನು ರಚಿಸಲಾಗಿದೆ; 'ಮೇಘಸಂದೇಶ'ವೇ ಇದಕ್ಕೆ ಮಾದರಿ. ಈ ಹೊಸ ರಚನೆಯಲ್ಲಿ ಯಕ್ಷಪತ್ನಿ ತನ್ನ ಪ್ರಿಯನಿಗೆ ಸಂದೇಶ ಕಳಿಸುತ್ತಾಳೆ. ಕಾಳಿದಾಸನ ಶೈಲಿಯನ್ನೇ ಬಹುಮಟ್ಟಿಗೆ ಅನುಸರಿಸುವುದಕ್ಕೆ ಪ್ರಯತ್ನ ಪಟ್ಟಿದ್ದಾನೆ ಗ್ರಂಥಕರ್ತ. ಆತನ ಇತರ ಗ್ರಂಥಗಳು: 'ಕುಂಭಾಭಿಷೇಕಚಂಪು' ಮತ್ತು 'ಕಥಾಸಪ್ತತಿ' (1924). ಸರಳ ಸಂಸ್ಕೃತಗದ್ಯದಲ್ಲಿ ಬರೆದ ಎಪ್ಪತ್ತು ನೀತಿಬೋಧಕ ಕಥೆಗಳನ್ನೊಳಗೊಂಡ ಪುಸ್ತಕ ಕಥಾಸಪ್ತತಿ. ಸಂಸ್ಕೃತಾಭ್ಯಾಸವನ್ನು ಪ್ರಾರಂಭಿಸುವವರಿಗೆ ಇದು ಬಹು ಉಪಯುಕ್ತವಾಗಿದೆ.

'ಪ್ರಾಕೃತ ಶಬ್ದದೀಪಿಕಾ' (1890) ಒಂದು ಪ್ರಾಕೃತ ವ್ಯಾಕರಣ. ಇದನ್ನು ಬರೆದವನು ಕಾನಕಾನಹಳ್ಳಿ ನರಸಿಂಹಶಾಸ್ತ್ರಿ. ಸಂಸ್ಕೃತ ವ್ಯಾಕರಣಕಾರರು ಅನುಸರಿಸುವ ಪದ್ಧತಿಯಲ್ಲೇ ಈ ಪ್ರಾಕೃತ ವ್ಯಾಕರಣವನ್ನು ರಚಿಸಿದೆ. ಆದರೆ, ಇದರಲ್ಲಿ ಎಲ್ಲಾ ಬಗೆಯ ನಾಮಗಳ ವಿಭಕ್ತಿ ರೂಪಗಳನ್ನೂ ವಿವರವಾಗಿ ಕೊಡುವುದಕ್ಕೆ ಹೆಚ್ಚು ಗಮನ ಹರಿದಿದೆ. ಕೆಲವು ವಿಶೇಷ ಶಬ್ದಗಳನ್ನು ಪಟ್ಟಿಮಾಡಿ ಅದಕ್ಕೆ ಸಂಸ್ಕೃತದ ಪ್ರತಿಶಬ್ದಗಳನ್ನು ಸೂಚಿಸಲಾಗಿದೆ.

ಸೋಸಲೆ ಗರಳಪುರಿಶಾಸ್ತ್ರಿ 1891ರಲ್ಲಿ 'ರಾಮಾಯಣ ಚಂಪೂ'—ಯುದ್ಧಕಾಂಡವನ್ನು ರಚಿಸಿದನು. ಪೆರಿಸ್ವಾಮಿ ತಿರುಮಲಾಚಾರ್ ಅದಕ್ಕೆ ವ್ಯಾಖ್ಯಾನ ಬರೆದನು. 'ಶ್ರೀಕೃಷ್ಣಭೂಪಾಲೀಯ'ವು (1931) ಆತನ ಇನ್ನೊಂದು ರಚನೆ. ಅದು ಅಲಂಕಾರಗ್ರಂಥ. ಇದರಲ್ಲಿ ಲಕ್ಷಣನಿರ್ದೇಶ ಸೂತ್ರರೂಪವಾಗಿದೆ; ವೃತ್ತಿಯು 'ಕುವಲಯಾನಂದ'ದ ಮಾದರಿಯಲ್ಲಿದೆ. ಉದಾಹರಣೆಗಳು ಮುಮ್ಮಡಿ ಕೃಷ್ಣರಾಜಒಡೆಯರ ಕೀರ್ತಿಪ್ರಶಂಸೆಗೆ ಮೀಸಲಾಗಿವೆ.

ದೇವನಪುರೀ ಆಗಮಿಕ ನಂಜುಂಡದೀಕ್ಷಿತನು 'ಶೈವಾಗಮಸಾರ'ವನ್ನು 1893ರಲ್ಲಿಪ್ರಕಟಪಡಿಸಿದನು. ಇದು 315 ಬೇರೆಬೇರೆ ವಿಷಯಗಳನ್ನು ವಿಸ್ತಾರವಾಗಿ ವಿವರಿಸುವ ಆಗಮ ಗ್ರಂಥ.

ಏಳು ಅಧ್ಯಾಯ (ಲಹರಿ)ಗಳಿಂದ ಕೂಡಿದ ಗೀತಾಚಾರ್ಯನ 'ಕೃಷ್ಣರಾಜಾಭ್ಯುದಯ ಚಂಪು' (1895) ಸ್ವಲ್ಪಮಟ್ಟಿಗೆ ಪ್ರಾಮುಖ್ಯವುಳ್ಳ ಗ್ರಂಥ. ಮುಮ್ಮಡಿ ಕೃಷ್ಣರಾಜ ಒಡೆಯರ ಜೀವನಚರಿತ್ರೆ ಇದರಲ್ಲಿ ನಿರೂಪಿಸಲಾಗಿದೆ. ಆಕರ್ಷಣೀಯ ಶೈಲಿಯಲ್ಲಿ ಸ್ಥಳಗಳ ಮತ್ತು ಜನರ ಮನೋಹರವಾದ ವರ್ಣನೆಗಳಿವೆ. ಮೂಲಪುರುಷ ಯದುರಾಯರಿಂದ ಮೊದಲುಗೊಂಡು ಮೈಸೂರು ರಾಜವಂಶದ ಚರಿತ್ರೆಯನ್ನೂ ಸ್ವಲ್ಪಮಟ್ಟಿಗೆ ವಿವರಿಸುತ್ತದೆ.

ಮೈಸೂರು ಸೀತಾರಾಮಶಾಸ್ತ್ರಿ ಹಲವು ಸಂಸ್ಕೃತ ಕನ್ನಡ ಗ್ರಂಥಗಳ ಕರ್ತೃ. ಸಂಸ್ಕೃತದಲ್ಲಿ 'ಸೂಕ್ತಿ ಮಂಜರಿ' (1929), 'ಕೃಷ್ಣೋದಂತ ತರಂಗಿಣಿ' ಮೊದಲಾದ ಕಾವ್ಯಗಳನ್ನು ಆತ ಪ್ರಕಟಿಸಿದ್ದಾನೆ.

ಮೈಸೂರಿನ ಶ್ರೀಕೃಷ್ಣ ಬ್ರಹ್ಮತಂತ್ರ ಪರಕಾಲ ಸ್ವಾಮಿಗಳು ಸರ್ವವಿಷಯಗಳಲ್ಲೂ ಸಮರ್ಥರಾದ ಕವಿ. ಹತ್ತಿರ ಹತ್ತಿರ ನೂರು ಗ್ರಂಥಗಳು ಅವರಿಂದ ರಚಿತವಾಗಿವೆ. 1896 ರಲ್ಲಿ ಅವರ ಉತ್ಕೃಷ್ಟ ಪ್ರಬಂಧ

'ನವ್ಯೋಪಾಕರ್ಮನಿರ್ಣಯ' ಪ್ರಕಟವಾಯಿತು. 'ಉಪಾಕರ್ಮಕ್ಕೆ ಸಂಬಂಧಪಟ್ಟ ಸಮಸ್ಯೆಗಳನ್ನೆಲ್ಲ ಈ ಗ್ರಂಥ ಸ್ಫುಟವಾಗಿ ವಿವರಿಸುತ್ತದೆ. ವೇದಾಂತ ದೇಶಿಕರ 'ಹಂಸಸಂದೇಶ'ದ ಮೇಲೆ ಅವರು ರಚಿಸಿದ 'ರಸಾಸ್ವಾದಿನಿ' ಎಂಬ ಸಮಗ್ರವ್ಯಾಖ್ಯಾನ 1913 ರಲ್ಲಿ ಪ್ರಕಟವಾಯಿತು. ಅವರ, ಇನ್ನೊಂದು ಮುಖ್ಯರಚನೆ 'ಅಲಂಕಾರ ಮಣಿಹಾರ' (1917–1922) ಅಲಂಕಾರ ಶಾಸ್ತ್ರಕ್ಷೇತ್ರದಲ್ಲಿ ಬಹು ವಿವರವಾದ ಗ್ರಂಥ. ಈ ಗ್ರಂಥದ ವೈಶಿಷ್ಟ್ಯವೇನೆಂದರೆ—ಇದರಲ್ಲಿ ಕೊಟ್ಟಿರುವ ಉದಾಹರಣೆಗಳೆಲ್ಲ ಗ್ರಂಥಕರ್ತನ ಸ್ವಂತರಚನೆ; ಮತ್ತು ಎಲ್ಲವೂ ಶ್ರೀ ಶ್ರೀನಿವಾಸನ ಸ್ತುತಿರೂಪವಾದವು. ಹಿಂದಿನ ಉದ್ದಾಮ ಆಲಂಕಾರಿಕರಾದ ಜಗನ್ನಾಥ, ಅಪ್ಪಯ್ಯ ದೀಕ್ಷಿತ ಮತ್ತು ಇತರರ ಅಭಿಪ್ರಾಯಗಳನ್ನು ಸಂಬಂಧಪಟ್ಟ ಸಂದರ್ಭಗಳಲ್ಲಿ ಎತ್ತಿಕೊಂಡು ಚರ್ಚಿಸಲಾಗಿದೆ. ಇವರ ಇತರ ಕೃತಿಗಳಲ್ಲಿ ಈ ಕೆಲವನ್ನು ಹೆಸರಿಸಬಹುದು : 'ರಂಗರಾಜ ವಿಲಾಸ', 'ನೃಸಿಂಹವಿಲಾಸ' ಮತ್ತು 'ಚಪೇಟ ಹತಿಸ್ತುತಿ'.

1898 ರಲ್ಲಿ ಚಾಮರಾಜನಗರದ ಶ್ರೀ ಕಂಠಶಾಸ್ತ್ರಿಗಳು 'ಧಾತುರೂಪ ಪ್ರಕಾಶಿಕಾ'ವನ್ನು ಬರೆದರು. ಸಂಸ್ಕೃತದಲ್ಲಿರುವ ಎಲ್ಲಾ ಧಾತುಗಳಿಗೂ ಬೇರೆ ಬೇರೆ ಕಾಲಗಳಲ್ಲಿ ಉಂಟಾಗುವ ರೂಪಗಳನ್ನೂ ಅವುಗಳ ಸಾಧಿತರೂಪಗಳನ್ನೂ ಒಂದೂ ಬಿಡದಂತೆ ಸಂಗ್ರಹಮಾಡಿ ಸೇರಿಸಿದೆ ಈ ಗ್ರಂಥದಲ್ಲಿ. ಎಲ್ಲಾ 'ಗಣ'ಗಳಿಗೂ ಸೇರಿದ ಧಾತುಗಳನ್ನೆಲ್ಲಾ ಪಟ್ಟಿಮಾಡಿ ಕೊಟ್ಟಿದೆ. ಈ ಗ್ರಂಥ ಪದ್ಯರೂಪವಾಗಿರುವುದರಿಂದ ಗಟ್ಟಿ ಮಾಡಿ ನೆನೆಪಿಟ್ಟುಕೊಳ್ಳುವುದಕ್ಕೆ ಸುಲಭವಾಗಿದೆ. ಆತನ 'ಯಾಮಿನೀ ವಿನೋದಕಥಾ' (1926) 'ಅರೇಬಿಯನ್ ನೈಟ್ಸ್' (Arabian Nights) ಗ್ರಂಥದ ಭಾಷಾಂತರ.

ಹರ್ಬರ್ಟ್ ಸ್ಪೆನ್ಸರನ 'ಎಡ್ಯುಕೇಷನ್' (Education) ಎಂಬ ಪ್ರಬಂಧವನ್ನು ಎಚ್. ಸುಬ್ಬ ರಾವ್ 'ವಿದ್ಯಾಭ್ಯಾಸಪದ್ಧತಿ' (1899) ಎಂಬ ಹೆಸರಿನಿಂದ ಸಂಸ್ಕೃತ ಗದ್ಯದಲ್ಲಿ ಪರಿವರ್ತಿಸಿದ್ದಾನೆ. ಮೂಲ ಗ್ರಂಥಕಾರನು ನಿರೂಪಿಸಿರುವುದೆಲ್ಲವನ್ನೂ ಸರಳವಾದ ಶೈಲಿಯಲ್ಲಿ ತಿಳಿಯಪಡಿಸಲು ಇಲ್ಲಿ ಪ್ರಯತ್ನ ಮಾಡಲಾಗಿದೆ.

ಸುಂದರವಲ್ಲಿಯೆಂಬೊಬ್ಬ ಸಮರ್ಥ ಕವಯಿತ್ರಿಯು 'ರಾಮಾಯಣ ಚಂಪು'ವನ್ನು ರಚಿಸಿದ್ದಾಳೆ ಇದರಲ್ಲಿ 'ವಾಲ್ಮೀಕಿ ರಾಮಾಯಣ'ದ ಆರು ಕಾಂಡಗಳಿಗೆ ಸಂವಾದಿಯಾಗಿ ಈ ಕಾವ್ಯದಲ್ಲಿ ಆರು ಅಧ್ಯಾಯಗಳಿವೆ.

ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯ ಒಬ್ಬ ಮಹಾ ವಿದ್ವಾಂಸ; ತತ್ತ್ವಶಾಸ್ತ್ರ (ವೇದಾಂತ) ಸಂಬಂಧವಾಗಿ ಬೇಕಾದಷ್ಟು ಗ್ರಂಥಗಳನ್ನು ರಚಿಸಿದ್ದಾನೆ. 1902ರಲ್ಲಿ 'ಭಗವದ್ಗೀತಾ ಪ್ರಬಂಧ ಮೀಮಾಂಸಾ' ಎಂಬ ಒಂದು ಪ್ರಬಂಧವನ್ನು ಆತ ಪ್ರಕಟಿಸಿದನು. ಗೀತೆಯ ವಿಚಾರವಾಗಿ ಭಾರತೀಯ ದರ್ಶನದ ಎಲ್ಲ ಮುಖ್ಯ ಪಂಥಗಳವರ ಅಭಿಪ್ರಾಯವನ್ನೂ ಇದರಲ್ಲಿ ಚರ್ಚಿಸಲಾಗಿದೆ. 'ಪೂರ್ವ ಮೀಮಾಂಸಾ' ಸೂತ್ರಗಳ ಮೇಲೆ ಕುಮಾರಿಲ ಮತಾನುಸಾರವಾಗಿ 'ಮೀಮಾಂಸ ಭಾಷ್ಯಭೂಷಣ' (1928) ಎಂಬ ಟಿಪ್ಪಣಿ ಬರೆದನು. 1933ರಲ್ಲಿ ಆತನ ಇನ್ನೊಂದು ಮುಖ್ಯ ಗ್ರಂಥ 'ದರ್ಶನೋದಯ' ಹೊರಬಂತು. ಇದರಲ್ಲಿ ವೇದಾಂತ ಸಂಬಂಧವಾದ ಬೇರೆ ಬೇರೆ ವಾದಗಳನ್ನೆಲಾ ಸಮರಸಗೊಳಿಸುವುದಕ್ಕೆ ಪ್ರಯತ್ನಮಾಡಲಾಗಿದೆ; ಅವಕ್ಕೆಲ್ಲಾ ಸಮರ್ಥನೆ ನೀಡಲಾಗಿದೆ. ಇದಲ್ಲದೆ ಭಾರತೀಯ ದರ್ಶನದ ಬೇರೆ ಬೇರೆ ಪಂಥಗಳ ಸ್ವರೂಪವನ್ನು ಸಂಕ್ಷೇಪವಾಗಿ ವಿವರಿಸಲಾಗಿದೆ. ಸಿದ್ಧಾಂತ ಸಂಬಂಧವಾದ ವಾದ ಗಳನ್ನು ವಿಶದವಾಗಿ ಸಂಗ್ರಹವಾಗಿ ನಿರೂಪಿಸಲಾಗಿದೆ.

ಕಸ್ತೂರಿ ರಂಗಾಚಾರ್ಯ ದೊಡ್ಡ ವಿದ್ವಾಂಸ; ಸುಮಾರು ಮೂವತ್ತು ಗ್ರಂಥಗಳ ಕರ್ತೃ.

1896ರಲ್ಲಿ 'ನವ್ಯೋಪಾಕರ್ಮ ನಿರ್ಣಯ'ದ ಮೇಲೆ 'ಭಾವಪ್ರಕಾಶನ' ಎಂಬ ಒಂದು ಪ್ರೌಢ ವ್ಯಾಖ್ಯಾನ ಬರೆದನು. ವಿಶಿಷ್ಟಾದ್ವೈತದ ನೆಲೆಯಿಂದ ಮೋಕ್ಷ ಸ್ವರೂಪವನ್ನು ನಿರೂಪಿಸುವ 'ಕಾರ್ಯಾಧಿಕರಣತತ್ತ್ವ' (1903) ಒಂದು ವೇದಾಂತ ಗ್ರಂಥ. ಖಂಡದೇವನ 'ಭಟ್ಟದೀಪಿಕಾ' ಮತ್ತು 'ವಚಸ್ಸುಧಾತತ್ತ್ವ' ಇವು ಇವನ ಇತರ ಪ್ರಕಟಿತ ಕೃತಿಗಳು.

ಚಾಮರಾಜ ನಗರದ ರಾಮಶಾಸ್ತ್ರಿ ತಾನೇ ರಚಿಸಿದ ವ್ಯಾಖ್ಯಾನಸಮೇತವಾಗಿ 'ಸೀತಾರಾವಣ ಸಂವಾದ ಝರಿ' (1905) ಎಂಬ ಸಣ್ಣದಾದ, ಆದರೆ ಸ್ವಾರಸ್ಯಕರವಾದ ಒಂದು ಕಾವ್ಯವನ್ನು ಪ್ರಕಟ ಪಡಿಸಿದನು. ರಾವಣನಿಗೂ ಸೀತೆಗೂ ನಡೆದ ಸಂವಾದವನ್ನು 108 ಪದ್ಯಗಳಲ್ಲಿ ಇದು ವಿವರಿಸುತ್ತದೆ. ಕವಿಗೆ ಭಾಷೆಯ ಮೇಲಿರುವ ಪ್ರಭುತ್ವವೂ ಉಚಿತವರಿತು ಅದನ್ನು ಉಪಯೋಗಿಸುವ ಚಾತುರ್ಯವೂ ಇದರಲ್ಲಿ ಎದ್ದು ಕಾಣುತ್ತದೆ. ಪದ್ಯಗಳ ಕಡೆಯ ಪಾದದಲ್ಲಿ ಸೂಚಿಸಿರುವ ಕೆಲವು ಅಕ್ಷರಗಳನ್ನು ಸಮಯೋಚಿತವಾಗಿ ಹೊರಳಿಸುವುದರಿಂದ ಮೊದಲಿನ ಮೂರು ಪಾದಗಳ ಅರ್ಥವೇ ಮಾರ್ಪಟ್ಟು ಬೇರೊಂದು ಅರ್ಥ ಹೊಳೆಯುತ್ತದೆ. ಶಬ್ದ ಚಮತ್ಕಾರ ತುಂಬಿದ್ದರೂ ಈ ಕಾವ್ಯ ಮೊದಲಿನಿಂದ ಕಡೆಯ ವರೆಗೂ ಕುತೂಹಲವನ್ನು ಕೆರಳಿಸುತ್ತಲೇ ಇರುತ್ತದೆ.

ಕಳಲೆ ವೆಂಕಟರಂಗಾಚಾರ್ ಗೋಲ್ಡ್‌ಸ್ಮಿತನ 'ದಿ ಟ್ರಾವೆಲರ್' (The Traveller) ಮತ್ತು ಕೌಪರನ 'ಆನ್ ರೆಸೀಟ್ ಆಫ್ ಮೈ ಮದರ್ಸ್ ಪಿಕ್ಚರ್' (On Receipt of My Mother's Picture) ಎಂಬ ಕವಿತೆಗಳನ್ನು 'ಯಾತ್ರಿಕ' ಮತ್ತು 'ಮದಂಬಾ ಪ್ರತಿಕೃತಿ' (1908) ಎಂದು ಭಾಷಾಂತರ ಮಾಡಿದ್ದಾನೆ. ಈ ಕವಿತೆಗಳು ಸರಳವಾಗಿ, ತಿಳಿಯಾಗಿ, ಮೂಲಕ್ಕೆ ಯಥಾವತ್ತಾದ ಪ್ರತಿಬಿಂಬವಾಗಿವೆ.

'ರಸಿಕಜನ ಮನೋಲ್ಲಾಸಿನೀ ಸಾರಸಂಗ್ರಹ ಭರತ ಶಾಸ್ತ್ರ' (1908) ಎಂಬುದು ವೆಂಕಟಸುಂದರ ಸಾನಿ ವಿರಚಿತವಾದ ಒಂದು ಸ್ವಾರಸ್ಯವಾದ ಗ್ರಂಥ. ಇದರಲ್ಲಿ ಮೂರು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಕವಿ, ಕಾವ್ಯ ಮತ್ತು ಕಾವ್ಯವಸ್ತು—ಇವುಗಳ ಲಕ್ಷಣವನ್ನು ಸಂಗ್ರಹವಾಗಿ ವಿವರಿಸಿದೆ. ಎರಡನೆಯ ಭಾಗವು ನಾಟಕ, ಅದರ ಭೇದಗಳು, ನಾಯಕನಾಯಕಿಯರ ಗುಣಲಕ್ಷಣಗಳು—ಇವನ್ನು ಕುರಿತು ಹೇಳುತ್ತವೆ. ಅಲ್ಲದೆ, ಶೃಂಗಾರ ವಿಷಯವನ್ನು ಪ್ರಸ್ತಾವಿಸುತ್ತದೆ. ಮೂರನೆಯ ಭಾಗವು ಸಂಗೀತ ನೃತ್ಯಗಳಿಗೆ ಮೀಸಲಾಗಿದೆ.

ಶ್ರೀ ಶಂಕರಾಚಾರ್ಯರ ಜೀವನಕಾರ್ಯಗಳನ್ನು ಕುರಿತ ನಾಲ್ಕು ತರಂಗಗಳಿಂದ ಕೂಡಿದ 'ಜಗದ್ಗುರು ಜಯಕಾವ್ಯ' (1914) ಎಂಬ ಸುಂದರಕಾವ್ಯವನ್ನು ಯಳಂದೂರು ಶ್ರೀಕಂಠಶಾಸ್ತ್ರಿ ಪ್ರಕಟಪಡಿಸಿದನು. ರಾಮಸುಬ್ಬಶಾಸ್ತ್ರಿಯ 'ಮಧ್ವಚಂದ್ರಿಕಾ ಖಂಡನ'ಕ್ಕೆ ಪ್ರತ್ಯುತ್ತರ ರೂಪವಾಗಿ ಗೌಡಗೆರೆ ವೆಂಕಟರಮಣಾಚಾರ್ 'ತಾತ್ಪರ್ಯ ಚಂದ್ರಿಕಾ ಪ್ರಕಾಶ ಪ್ರಸಾರ' (1920)ವನ್ನು ಬರೆದು ದ್ವೈತ ಸಿದ್ಧಾಂತವನ್ನು ಸಮರ್ಥಿಸಿದ್ದಾನೆ. ಇದರ ಜೊತೆಗೆ 'ಅದ್ವೈತ ದೀಪಿಕಾ ವಾತಾಗಮ' ಎಂಬ ತನ್ನ ಗ್ರಂಥದಲ್ಲಿ 'ಅದ್ವೈತ ದೀಪಿಕಾ' ಗ್ರಂಥದ ನಿಲುವನ್ನು ಖಂಡಿಸಿದ್ದಾನೆ.

ರಾಜಗೋಪಾಲ ಚಕ್ರವರ್ತಿಯ 'ಶೈವಲಿನೀ' ಮತ್ತು 'ಕುಮುದಿನೀ' ಈ ಎರಡೂ ಗದ್ಯದಲ್ಲಿ ರಚಿಸಿರುವ ರಮ್ಯ ಕಥೆಗಳು. 'ತೀರ್ಥಾಟನ' ಎಂಬ ನಾಲ್ಕು ಸರ್ಗದ ಕಾವ್ಯ ಭಾರತ ದೇಶದ ಸುತ್ತಲೂ ಆತ ಮಾಡಿದ ತೀರ್ಥಯಾತ್ರೆಯನ್ನು ವರ್ಣಿಸುತ್ತದೆ. 'ಕವಿಕಾವ್ಯವಿಚಾರ' (1927) ಎಂಬ ಆತನ ಸ್ವತಂತ್ರ ಕೃತಿಯಲ್ಲಿ ಆತನ ಸ್ವಂತ ಕೊಡುಗೆಯನ್ನು ಕಾಣಬಹುದು. ಈ ಅಲಂಕಾರ ಗ್ರಂಥದಲ್ಲಿ ಸಾಹಿತ್ಯಚರಿತ್ರೆ

ಯನ್ನೂ ಕಾವ್ಯವಿಮರ್ಶೆಯನ್ನೂ ಜೊತೆಜೊತೆಯಲ್ಲೇ ವಿವರಿಸಿದೆ. ಆಧುನಿಕ ಸಂಶೋಧನೆಗಳ ಫಲಿತಾಂಶವೂ ಇದರಲ್ಲಿ ಅಡಕವಾಗಿದೆ.

ಮೈಸೂರಿನ ಕೆ. ವಾಸುದೇವಾಚಾರ್ಯ ಹೊಸ ಮಾರ್ಗವನ್ನು ಹಿಡಿದು ಸಂಗೀತಕ್ಷೇತ್ರವನ್ನು ಪ್ರವೇಶಿಸಿದನು ; ಆತ ಸಂಸ್ಕೃತದಲ್ಲಿ ಅನೇಕ ಸ್ವತಂತ್ರ ಕೀರ್ತನೆಗಳನ್ನು ರಚಿಸಿದನು. 'ವಾಸುದೇವ ಕೀರ್ತನ ಮಂಜರಿ' (1929) ಆತನ ಸಂಗೀತ ಶಾಸ್ತ್ರಜ್ಞಾನಕ್ಕೂ ಗೀತರಚನಾ ಚಾತುರ್ಯಕ್ಕೂ (ಕೌಶಲಕ್ಕೂ) ಸಾಕಷ್ಟು ಸಾಕ್ಷಿಯಾಗಿದೆ.

ವೈ. ಸುಬ್ರಹ್ಮಣ್ಯಶರ್ಮನ 'ಮೂಲಾವಿದ್ಯಾನಿರಾಸ' ಅಥವಾ 'ಶಂಕರಹೃದಯ' (1929) ಪಾಂಡಿತ್ಯ ಪೂರ್ಣವಾದ ಪ್ರೌಢಗ್ರಂಥ. ಮೂಲಾವಿದ್ಯೆಯ ಅಂಗೀಕಾರವನ್ನು ನಿಷೇಧಿಸುವುದಕ್ಕೆ ಇಲ್ಲಿ ಪ್ರಯತ್ನ ಮಾಡಲಾಗಿದೆ.

ಕಲ್ಕಿ ನರಸಿಂಹ ಭಗವಾನ್ ತನ್ನ 'ಸಹಸ್ರ ಗಾಥಾರತ್ನಾವಳಿ' (1930–34)ಯಲ್ಲಿ 'ತಿರುವಾಯ್ ಮೊೞಿ' ಎಂಬ ತಮಿಳು ಪ್ರಬಂಧವನ್ನು ತಿಳಿಯಾದ ಸಂಸ್ಕೃತಕ್ಕೆ ಭಾಷಾಂತರ ಮಾಡಿದ್ದಾನೆ. ಇತರ ಆಳ್ವಾರರುಗಳ ಕೃತಿಗಳನ್ನು ಕೂಡ ಆತ ಭಾಷಾಂತರಿಸಿದ್ದಾನೆ (1934).

ಜಗ್ಗು ಆಳ್ವಾರ್ ಅಯ್ಯಂಗಾರ್ (ಜಗ್ಗು ಶ್ರೀ ವಕುಳಾಭೂಷಣಂ) ಶ್ರೇಷ್ಠ ದರ್ಜೆಯ ಕವಿ. ನಾಟಕ, ಕಾವ್ಯ, ರಮ್ಯಕಥೆ ಮೊದಲಾದ ಪ್ರಕಾರಗಳಲ್ಲಿ ಸುಮಾರು 27 ಕೃತಿಗಳನ್ನು ಈತ ರಚಿಸಿದ್ದಾನೆ. 'ಅದ್ಭುತಾಂಶುಕಂ' (1932) ಆರು ಅಂಕಗಳ ನಾಟಕ. ಇದು ಭಟ್ಟನಾರಾಯಣನ 'ವೇಣೀಸಂಹಾರ'ದ ಪೂರ್ವಭಾಗವೆನ್ನಲಾಗಿದೆ. ನಾಟಕ ರಚನೆಯಲ್ಲಿ ಈತ ಪೂರ್ವಸಂಪ್ರದಾಯವನ್ನೇ ಅನುಸರಿಸುತ್ತಾನೆ. ಈತ ಇಪ್ಪತ್ತನೆಯ ವರ್ಷ ವಯಸ್ಸಿನಲ್ಲೇ ರಚಿಸಿದ 'ಜಯಂತಿಕಾ', ಕಾದಂಬರಿಯ ಹಾಗೆಯೇ ಬಹು ಸುಂದರವಾದ ಅದ್ಭುತರಮ್ಯಕಥೆ. 'ಯದುವಂಶ ಚರಿತ'ವು ಬಾಣನ 'ಹರ್ಷಚರಿತ'ದ ಮಾದರಿಯಲ್ಲಿ ರಚಿಸಿರುವ ಒಂದು ಗದ್ಯ ಗ್ರಂಥ.

ಜಗ್ಗು ವೆಂಕಟಾಚಾರ್ ಮಹಾ ಪಂಡಿತ. ಕವಿತೆಯಲ್ಲಿಯೂ ತತ್ತ್ವಶಾಸ್ತ್ರದಲ್ಲಿಯೂ ಏಕರೀತಿಯ ಸಾಮರ್ಥ್ಯವುಳ್ಳಾತ. 'ಕಾವೇರೀಮಹಿಮಾದರ್ಶ' ಮತ್ತು 'ವ್ಯಾಘ್ರುತಟಾಕ ಭೂವಿವರ ವರ್ಣನ' (1933) ಇವೆರಡೂ ವರ್ಣನಾತ್ಮಕವಾದ ಸೊಗಸಾದ ಸಣ್ಣಕವಿತೆಗಳು. ಮೊದಲನೆಯದು ಕೃಷ್ಣರಾಜಸಾಗರ ಅಣೆಕಟ್ಟೆಯ ಮೇಲೂ ಎರಡನೆಯದು ಹುಲಿಕೆರೆ ಸುರಂಗದ ಮೇಲೂ ರಚಿಸಿರುವ ಕವಿತೆಗಳು. 'ರಸಗಂಗಾ ಧರ ಮರ್ಮಪ್ರಕಾಶ' (1933) ವೊಂದು ವಿಮರ್ಶ ಪ್ರಬಂಧ. ನಾಗೇಶಭಟ್ಟನು 'ರಸಗಂಗಾಧರ'ದ ಮೇಲೆ ರಚಿಸಿರುವ ವ್ಯಾಖ್ಯಾನದಲ್ಲಿರುವ ಪೂರ್ವಾಪರವಿರೋಧಗಳನ್ನು ಎತ್ತಿ ತೋರಿಸಿ ಟೀಕಿಸುತ್ತದೆ ಈ ಪ್ರಬಂಧ. 'ಕುವಲಯಾನಂದ ಚಂದ್ರಿಕಾ ಚಕೋರ'ವೂ (1943) ಇದೇ ರೀತಿಯ ರಚನೆ. 'ಕುವಲಯಾನಂದ'ದ ಮೇಲಿನ ವೈದ್ಯನಾಥನ ವ್ಯಾಖ್ಯಾನವನ್ನು ಸೂಕ್ಷ್ಮಪರೀಕ್ಷೆಗೆ ಒಳಪಡಿಸುತ್ತದೆ ಈ ಕೃತಿ. ಸಂಬಂಧಪಟ್ಟ ವಿಷಯಗಳಲ್ಲಿ ಜಗನ್ನಾಥನ ಅಭಿಪ್ರಾಯಗಳನ್ನು ಗಮನಕ್ಕೆ ತಂದುಕೊಳ್ಳಲಾಗಿದೆ. ಈ ಗ್ರಂಥ ಬೆಲೆಯುಳ್ಳದ್ದಾಗಿದೆ ; ಅಲಂಕಾರ ವಿಚಾರದಲ್ಲಿ ಮುಂದುವರಿದ ಗ್ರಂಥಗಳ ಸಂಗತಿಗಳನ್ನು ಸ್ಮರಿಸಿಕೊಳ್ಳುತ್ತದೆ. 'ಅಲಂಕಾರತತ್ತ್ವ' (1943), 'ದ್ರಾವಿಡೋಪನಿಷತ್ಸಾರ ಸಂಗ್ರಹ' ಮತ್ತು 'ದಿವ್ಯಪ್ರಬಂಧ ಪ್ರಾಮಾಣ್ಯ ಸಮರ್ಥನ'—ಇವು ಈತನ ಇತರ ಕೆಲವು ಮುಖ್ಯ ಕೃತಿಗಳು.

ಕಟ್ಟೆಮಳಲವಾಡಿ ವೆಂಕಟರಾಮ ಅವಧಾನಿ 'ಯಾಜುಷಪೂರ್ವಪ್ರಯೋಗರತ್ನಾಕರ'ವನ್ನು (1934)

ಬರೆದನು. ಇದು ಪುರೋಹಿತರಿಗೆ ಉಪಯುಕ್ತವಾದ ಕೈಪಿಡಿಯಾಗಲೆಂದು ಬರೆದದ್ದಾದರೂ ವಿದ್ವಾಂಸರ ಆಸಕ್ತಿಗೂ ಪಾತ್ರವಾಗಿದೆ; ಕರ್ಮತಂತ್ರಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಚರ್ಚಿಸುತ್ತಾ ಅನೇಕ ಆಧಾರಗ್ರಂಥಗಳಿಂದ ವಿಪುಲವಾಗಿ ಉದಾಹರಣಗಳನ್ನು ಎತ್ತಿ ಹೇಳುವುದರಿಂದ ಆಸಕ್ತಿಯನ್ನು ಪ್ರಚೋದಿಸುತ್ತದೆ.

ಕೋಟೇಶ್ವರದ ನರಸಿಂಹಾರ್ಯನು 'ಸೌದಾಮಿನಿ'ಯೆಂಬ ಎಂಟಧ್ಯಾಯದ ಕಾದಂಬರಿಯ ಕರ್ತೃ. ಮಗಧದ ರಾಜ ಸುರಸೇನನಿಗೂ ವಿದರ್ಭದ ರಾಜ ಕಾಮಪಾಲನ ಮಗಳು ಸೌದಾಮಿನಿಗೂ ನಡೆದ ಗುಟ್ಟಿನ ಮದುವೆಯನ್ನು ವರ್ಣಿಸುತ್ತದೆ ಈ ಕಾದಂಬರಿ. 'ಭಾರತಕಥಾ' ಎಂಬ ಗದ್ಯಗ್ರಂಥವನ್ನೂ ಇತರ ಕೃತಿಗಳನ್ನೂ ಆತ ಬರೆದಿದ್ದಾನೆ.

'ಆಪಸ್ತಂಭ ಧರ್ಮಸೂತ್ರ ಮಂಜರಿ' (1935) ಆರ್.ಎನ್. ಸೂರ್ಯನಾರಾಯಣನ ಕೃತಿ. ಆಪಸ್ತಂಭರು ರಚಿಸಿದ ಸೂತ್ರಗಳನ್ನು ವಿಷಯಾನುಸಾರವಾಗಿ ಮರುವಿಂಗಡಣೆ ಮಾಡಿ ಜೋಡಿಸಿದೆ ಈ ಗ್ರಂಥವಲ್ಲಿ. ಅದೇ ರೀತಿ 'ಸಂಪುಟೀಕೃತ ಭಗವದ್ಗೀತಾ'ದಲ್ಲಿ (1947) 'ಭಗವದ್ಗೀತೆ'ಯ ಶ್ಲೋಕಗಳನ್ನೆಲ್ಲಾ ಏಳು ವಿಷಯಗಳಲ್ಲಿ ಅಡಕಮಾಡಿ ವಿಂಗಡಿಸಿ ಮರು ಜೋಡಣೆ ಮಾಡಲಾಗಿದೆ.

ಸಿ. ವೆಂಕಟರಮಣಯ್ಯ ಬಹುಮುಖ ಪಾಂಡಿತ್ಯವುಳ್ಳಾತ. ಆತ ಅನೇಕ ಪುಸ್ತಕಗಳನ್ನು ಬರೆದಿದ್ದಾನೆ. 'ಸ್ತುತಿ ಕುಸುಮಾಂಜಲಿ' (1936) ಒಂದು ಸ್ತೋತ್ರ ಸಂಗ್ರಹ. 'ಉಮಾದರ್ಶ' ಒಂದು ಸಣ್ಣ ಕವನ. ಇದು ಕೆ.ವಿ. ಕೃಷ್ಣಸ್ವಾಮಿ (1937) ಅಯ್ಯರ 'ಉಮಾಸ್ ಮಿರರ್' (Uma's Mirror) ಎಂಬ ಇಂಗ್ಲಿಷ್ ಕವನದ ಭಾಷಾಂತರ. ಕರ್ನಲ ವಿಜಯನಾಟಕ' (1938) ಟೆನಿಸನ್ನನ 'ದಿ ಕಪ್' (The Cup) ಎಂಬ ಕೃತಿಯ ಸಂಸ್ಕೃತ ರೂಪಾಂತರ. ಇತರ ಸಂಸ್ಕೃತ ನಾಟಕಗಳಂತಲ್ಲದೆ ಈ ನಾಟಕದಲ್ಲಿ ದೃಶ್ಯ ವಿಭಾಗ ಕಂಡುಬರುತ್ತದೆ. ಇದು ನಾಟಕದ ಅಚ್ಚಿನಲ್ಲಿ ರೂಪುಗೊಂಡಿರುವುದು ಮಾತ್ರವೇ ಅಲ್ಲ, ಕವಿತಾ ಸೌಂದರ್ಯದಿಂದ ಮನೋಹರವೂ ಆಗಿದೆ. 'ಸರ್ವಸಮವೃತ್ತ ಪ್ರಭಾವ' (1938) ಛಂದಶ್ಶಾಸ್ತ್ರದ ಮೇಲಿನ ಒಂದು ಪ್ರಬಂಧ. 'ಸಂಸ್ಕೃತ ವಿದ್ಯಾಭ್ಯುದಯ ಚಂಪು' (1938) ಚಿಕ್ಕದೇವರಾಜರ ಕಾಲದಿಂದ 1920ರ ವರೆಗೂ ಮೈಸೂರು ದೇಶದಲ್ಲಿ ಸಂಸ್ಕೃತ ವಿದ್ಯಾಭ್ಯಾಸದ ಮುನ್ನಡೆಯನ್ನು ವಿವರಿಸುವ ಒಂದು ಚಿಕ್ಕ ಕೃತಿ. ಆತನ 'ಕಾವ್ಯಸಮುದಾಯ' (1944) ಮೂರು ಸ್ವಂತ ಕಾವ್ಯಗಳ ಸಂಕಲನ; ಇವರಲ್ಲಿ ಗ್ರಂಥಕರ್ತನೇ ಬರೆದ ವ್ಯಾಖ್ಯಾನ ಸಮೇತವಾದ 'ಉಮಾದರ್ಶ'ವೂ ಸೇರಿದೆ. ವೇದಗಳಲ್ಲಿ ಹೇಳಿರುವ ಹರಿಶ್ಚಂದ್ರ, ವಿಶ್ವಾಮಿತ್ರ, ನಾಭನೇದಿಷ್ಠರ ಕಥೆಗಳಿಂದ ಈ ಕಾವ್ಯಗಳಿಗೆ ವಸ್ತುವನ್ನು ಆಯ್ದು ಕೊಂಡಿದ್ದಾನೆ. 'ಜೀವ ಸಂಜೀವಿನೀ ನಾಟಕ' (1945) ಐದಂಕಗಳಿಂದ ಕೂಡಿದ ಒಂದು ನಾಟಕ. ಇದರ ವಸ್ತು ಸ್ವಕಲ್ಪಿತ; ಆಯುರ್ವೇದದ ಉಪಯುಕ್ತತೆಯನ್ನು ಒತ್ತಿ ಹೇಳುವುದು ಇದರ ಉದ್ದೇಶ. ಈತನ ಕವಿತೆಯಲ್ಲಿ ಸಹಜ ಕವಿಯ ಲಕ್ಷಣಗಳು ಚೆನ್ನಾಗಿ ವ್ಯಕ್ತವಾಗಿವೆ. ಈತನಿಗೆ ಭಾಷೆಯ ಮೇಲಿನ ಹಿಡಿತ ಮೆಚ್ಚತಕ್ಕದ್ದಾಗಿದೆ. ಉತ್ಕರ್ಷಸಾಧಕವಾದ ವಿಷಯಗಳ ಮೇಲೆ ತಿಳಿಯಾದ ಮತ್ತು ಗಂಭೀರವಾದ ಶೈಲಿಯಲ್ಲಿ ಬರೆಯುತ್ತಾನೆ. ಈತ 'ಸನಾತನ ವಿಜ್ಞಾನ ಸಮುದಾಯ' (1944-46) ಎಂಬ ಚಿಕ್ಕದೊಂದು ವಿಜ್ಞಾನ ಗ್ರಂಥವನ್ನೂ ರಚಿಸಿದ್ದಾನೆ. ಪುರಾತನ ಭಾರತದ ಆರ್ಯರು ಅರಿತಿದ್ದ ಭೌತ ವಿಜ್ಞಾನ (Physics) ರಸಾಯನ ವಿಜ್ಞಾನ (Chemistry), ಸಸ್ಯ ವಿಜ್ಞಾನ (Botany), ಭೂವಿಜ್ಞಾನ (Geology), ಪ್ರಾಣಿವಿಜ್ಞಾನ (Zoology), ಮತ್ತು ಶರೀರ ವಿಜ್ಞಾನ (Physiology)–ಈ ವಿಜ್ಞಾನ ಶಾಖೆಗಳನ್ನು ಕುರಿತು ಈ ಚಿಕ್ಕ ಸಂಕಲನದಲ್ಲಿ ವಿವರಿಸಲಾಗಿದೆ. ಸರಳ ಸಂಸ್ಕೃತದಲ್ಲಿ ಅನೇಕ ವೈಜ್ಞಾನಿಕ ಸತ್ಯಗಳನ್ನು ಪ್ರತಿಪಾದಿಸಲಾಗಿದೆ. ಇದು ಈ ಬಗೆಯ ಗ್ರಂಥಗಳಲ್ಲಿ ಮೊತ್ತಮೊದಲನೆಯದು. ಬೇರೆ

ಬೇರೆ ವಿಜ್ಞಾನ ವಿಷಯಗಳನ್ನು ವಿವರಿಸುವುದಕ್ಕೆ ಸಂಸ್ಕೃತ ಪಾರಿಭಾಷಿಕ ಶಬ್ದಗಳನ್ನು ಎಷ್ಟು ಮಟ್ಟಿಗೆ ಬಳಸಬಹುದೆಂಬುದನ್ನು ಪರಿಶೀಲಿಸಲು ಇದೊಂದು ಸ್ವಾರಸ್ಯವಾದ ಪ್ರಯೋಗವಾಗಿದೆ.

'ಅರ್ಥಶಾಸ್ತ್ರ'ದಿಂದ ಪ್ರಖ್ಯಾತಿ ಹೊಂದಿರುವ ಡಾ॥ ಆರ್. ಶಾಮಶಾಸ್ತ್ರಿ ಖಗೋಳ ಶಾಸ್ತ್ರವನ್ನು ಕುರಿತ 'ವೇದಾಂಗ ಜ್ಯೋತಿಷ'ದ ಮೇಲೆ ಬಹು ವಿವರವೂ ಸರ್ವಶ್ರೇಷ್ಠವೂ ಆದ ಒಂದು ವ್ಯಾಖ್ಯಾನ (1936) ಬರೆದನು. ಇದರಲ್ಲಿ ಪ್ರಾಚೀನ ಮತ್ತು ಅರ್ವಾಚೀನ ಪ್ರಮಾಣ ಪುರುಷರ ಅಭಿಪ್ರಾಯಗಳನ್ನು ಪ್ರಸ್ತಾವಿಸಿ ವಿಷಯಗಳನ್ನು ಚರ್ಚಿಸಲಾಗಿದೆ. ಜರ್ಮನ್ ಕವಿ ಲೆಸಿಂಗನ 'ಅಮಿಲಿಯಾ-ಗಲೆಟ್ಟಿ (Amelia Galetti) ಎಂಬ ನಾಟಕವನ್ನು ಆತ ಸಂಸ್ಕೃತಕ್ಕೆ ಪರಿವರ್ತಿಸಿದ್ದಾನೆ (1931–32).

ಶ್ರೀ ಕೆ. ಎಸ್. ನಾಗರಾಜನ್ ಉತ್ತಮ ತರಗತಿಯ ಆಧುನಿಕ ಕವಿ. 'ಸ್ತೋತ್ರಮುಕ್ತಾಫಲ' ಆತನ ಕವಿತೆಗಳ ಒಂದು (1946) ಸಂಕಲನ. ಹದಿನಾರು ಸರ್ಗಗಳ ಮಹಾಕಾವ್ಯ 'ಸೀತಾ ಸ್ವಯಂವರ' (1949) ಆತನ ಕವಿತಾ ಪ್ರೌಢಿಮೆಗೆ ಸಾಕ್ಷಿಯಾಗಿದೆ. ಭಾಷೆ ಪ್ರವಾಹ ರೂಪವಾಗಿ ಹರಿಯುತ್ತದೆ; ಕಲಾಪೂರ್ಣವಾಗಿ, ಗಂಭೀರವಾಗಿದೆ.

ಮೈಸೂರು ಮಹಾರಾಜರ ಸಂಸ್ಕೃತ ಕಾಲೇಜಿನ ಪತ್ರಿಕೆ ಆ ಕಾಲೇಜಿನ ಪಂಡಿತರುಗಳು ರಚಿಸಿದ ಕೃತಿಗಳನ್ನೂ ವಿದ್ವತ್ಪ್ರಬಂಧಗಳನ್ನೂ ಪ್ರಕಟಿಸುತ್ತಿತ್ತು. ಆ ಪತ್ರಿಕೆಯಲ್ಲಿ ಪ್ರಕಟಗೊಂಡು ಪ್ರಸಿದ್ಧವಾದ ಗ್ರಂಥಗಳಲ್ಲಿ ಈ ಕೆಳಗಿನವು ಗಮನಾರ್ಹವಾಗಿವೆ:

'ಶೋಣಾದ್ರಿ ವರ್ಣ'ನ (1932)-ಕೆಮ್ಮಣ್ಣುಗುಂಡಿಯನ್ನು ವರ್ಣಿಸುವ ಒಂದು ಕವಿತೆ. 'ಚೇತಃ ಪ್ರಸಾದ' (1835) ಕಾಲಟಿಯಲ್ಲಿ ನಡೆದ ಕುಂಭಾಭಿಷೇಕವನ್ನು ಕುರಿತ ಕಾವ್ಯ, ಮತ್ತು 'ಶ್ರುತಿಧರ್ಮ ಮೀಮಾಂಸಾ' ಪುರುಷಾರ್ಥಗಳ ವಿಷಯದ ಒಂದು ಪ್ರಬಂಧ. ಈ ಮೂರೂ ಶಿವಮೊಗ್ಗದ ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿ' ರಚಿತಗಳು. 'ಆತ್ಮನೋ ಮಹಿಮಾ ತಚ್ಛಕ್ತಿಶ್ಚ' (1932) ಮತ್ತು 'ತಂತ್ರ ತತ್ತ್ವಾಧಿಗಮ ಜಿಜ್ಞಾಸಾ' (1940) ಇವೆರಡೂ ಪಿ. ಆರ್. ಶಿವಸುಬ್ರಹ್ಮಣ್ಯ ಶಾಸ್ತ್ರಿ ರಚಿಸಿದವು. 'ಬೀಜ ಫಲವಿಮರ್ಶ' (1933) ಮತ್ತು 'ಭೌಮಾಂತರಿಕ್ಷ ಸಂಸರ್ಗ ನಿರೂಪಣ' (1940)—ಆಕಾಶದಲ್ಲಿನ ನಕ್ಷತ್ರಗಳಿಗೂ ಭೂಮಿಯಲ್ಲಿನ ಜೀವನಕ್ಕೂ ಇರುವ ಸಂಬಂಧವನ್ನು ವಿವರಿಸುವ ಸ್ವಾರಸ್ಯಕರ ಕೃತಿ—ಇವು ಜ್ಯೋತಿಷ ವಿದ್ವಾಂಸ ಕರೂರು ಶೇಷಾಚಾರ್ಯ ವಿರಚಿತಗಳು. ಪ್ರಸಿದ್ಧ ಪಂಡಿತ ಕಾಶಿ ಪ್ರಾಣೇಶಾಚಾರ್ಯರಚಿತ 'ಯೋಗವಾದ' (1924); ಕಾಶಿ ತಿಮ್ಮಣ್ಣಾಚಾರ್ಯ ವಿರಚಿತ 'ರಾಮಸ್ತವ ರತ್ನಾವಳಿ' (1935); ಶ್ರೀನಿವಾಸ ದೇಶಿಕಾಚಾರ್ಯ ವಿರಚಿತವಾದ 'ಕೃಷ್ಣರಾಜ ಯಶೋವರ್ಣನ' (1936); ನಾರಾಯಣಸ್ವಾಮಿ ದೀಕ್ಷಿತನ 'ಶ್ರೌತಪ್ರಕಾಶಿಕಾ' (1939); ಮತ್ತು ಪ್ರಸಿದ್ಧ ವೇದಾಂತ ವಿದ್ವಾಂಸ ಎಂ. ಎಸ್. ವೆಂಕಟೇಶ ಶಾಸ್ತ್ರಿ ವಿರಚಿತ 'ಧರ್ಮತತ್ತ್ವದರ್ಪಣ' (1939).

ಪೆರಿಸ್ವಾಮಿ ತಿರುಮಲಾಚಾರ್ಯನು ರಚಿಸಿದ 'ಸುಲಭ ಸಂಸ್ಕೃತ ಬಾಲಪಾಠ'ದ ಕ್ರಮಿಕ ಪುಸ್ತಕಗಳು ಕಳೆದ ಶತಮಾನದ ಕಡೆಯ ದಶಕಗಳಲ್ಲಿ ಸಂಸ್ಕೃತ ಪ್ರಚಾರಕ್ಕೆ ಅಪಾರ ನೆರವು ನೀಡಿದವು. ಇದಕ್ಕಾಗಿ ಆತನ ಹೆಸರು ಚಿರಸ್ಮರಣೀಯವಾಗಿದೆ.

ಮೂಲ ಲೇಖಕರು : ಡಾ॥ ಎಸ್. ರಾಮಚಂದ್ರರಾವ್
ಅನುವಾದಕರು : ಶ್ರೀ ಎಲ್. ಗುಂಡಪ್ಪ

# ಸಂಸ್ಕೃತ—ಉತ್ತರ ಕರ್ಣಾಟಕ

ಹತ್ತೊಂಬತ್ತನೆಯ ಶತಮಾನ ಮತ್ತು ಇಪ್ಪತ್ತನೆಯ ಶತಮಾನದ ಪೂರ್ವಾರ್ಧಗಳಲ್ಲಿ ಉತ್ತರ ಕರ್ಣಾಟಕದಲ್ಲಿಯ ಕೆಲವು ಸಂಸ್ಕೃತವಿದ್ವಾಂಸರು ಶಾಸ್ತ್ರ ಮತ್ತು ಸಾಹಿತ್ಯ ಎರಡೂ ಕ್ಷೇತ್ರಗಳಲ್ಲಿಯೂ ಕೆಲವು ಉಪಯುಕ್ತ ಗ್ರಂಥಗಳನ್ನು ರಚಿಸಿದ್ದಾರೆ. ಈ ಶತಕಗಳಲ್ಲಿ ಉತ್ತರ ಕರ್ಣಾಟಕವು ಬ್ರಿಟಿಷರ ಆಳಿಕೆಗೆ ಸೇರಿದ ಮುಂಬಯಿ ಪ್ರಾಂತದ ಒಂದು ಭಾಗವಾದ್ದರಿಂದ ಸಂಸ್ಕೃತಸಾಹಿತ್ಯದ ಬೆಳವಣಿಗೆಗೆ ಸರಕಾರದ ಸಹಾಯವು ಏನೂ ಇರಲಿಲ್ಲ. ಅಲ್ಲದೆ ಆಧುನಿಕ ವಿದ್ಯಾಭ್ಯಾಸದ ಶಾಲಾ–ಕಾಲೇಜುಗಳು ಸ್ಥಾಪಿತವಾದ್ದರಿಂದ ಬುದ್ಧಿವಂತ ವಿದ್ಯಾರ್ಥಿಗಳೆಲ್ಲ ಇವುಗಳ ಕಡೆಗೆ ಆಕರ್ಷಿಸಲ್ಪಟ್ಟರು. ಆದುದರಿಂದ ಸಂಸ್ಕೃತ ವಿದ್ಯಾಭ್ಯಾಸವು ಹಿಂದೆ ಬೀಳತೊಡಗಿತು. ಆದರೂ ಎರಡು ಕಾರಣಗಳಿಂದ ಸಂಸ್ಕೃತವಿದ್ಯಾಭ್ಯಾಸವು ತಕ್ಕಮಟ್ಟಿಗೆ ಮುಂದುವರಿಯಲು ಸಹಾಯವಾಯಿತು. ಮೊದಲನೆಯದಾಗಿ ಉತ್ತರಕರ್ಣಾಟಕದಲ್ಲಿಯ ಕೆಲವು ಮನೆತನಗಳು ಅನೇಕ ತಲೆಮಾರುಗಳಿಂದ ಆಧುನಿಕ ವಿದ್ಯಾಭ್ಯಾಸಕ್ಕೇ ಮೀಸಲಾಗಿದ್ದವು. ಈ ಮನೆತನಗಳಿಂದ ಕೆಲವರು ಆಧುನಿಕ ವಿದ್ಯಾಭ್ಯಾಸಕ್ಕೆ ಹೋದರೂ ಇನ್ನೂ ಅನೇಕರು ಸಂಸ್ಕೃತ ವಿದ್ಯಾಭ್ಯಾಸವನ್ನೇ ಮುಂದುವರಿಸಿದರು. ಎರಡನೆಯದಾಗಿ ಸಾಂಗಲಿ, ಮಿರಜ, ಜಮಖಂಡಿ, ರಾಮದುರ್ಗ, ಸೊಂಡೂರು, ಗದ್ವಾಲ ಇತ್ಯಾದಿ ಸಂಸ್ಥಾನಗಳ ರಾಜರು, ಜಮೀನುದಾರರು ಮತ್ತು ಮಠಾಧಿಪತಿಗಳು ಸಂಸ್ಕೃತಪಾಠಶಾಲೆಗಳನ್ನು ಸ್ಥಾಪಿಸಿ, ವಿದ್ವತ್–ಸಭೆಗಳನ್ನು ಏರ್ಪಡಿಸಿ ಸಂಸ್ಕೃತ ವಿದ್ಯಾಭ್ಯಾಸವು ಮುಂದುವರಿಯಲು ನೆರವಾದರು. ಆದುದರಿಂದ ಈ ಶತಕಗಳಲ್ಲಿಯೂ ಕೆಲವು ಸುಪ್ರಸಿದ್ಧ ವಿದ್ವಾಂಸರು ಆಗಿ ಹೋದರು ಮತ್ತು ಕೆಲವು ಉಪಯುಕ್ತ ಗ್ರಂಥಗಳು ಬರೆಯಲ್ಪಟ್ಟವು.

ವೈದಿಕವಾಙ್ಮಯ, ಪೂರ್ವಮೀಮಾಂಸಾ ಮತ್ತು ಧರ್ಮಶಾಸ್ತ್ರಗಳಲ್ಲಿ, ಧಾರವಾಡದ ದಂಡವತಿ ಮಹಾದೇವ ಶಾಸ್ತ್ರಿಗಳು ಬರೆದ 'ಚತುರ್ವೇದ ನಿತ್ಯಾಹ್ನಿಕ ರತ್ನಮಾಲಾ', 'ಆಪಸ್ತಂಭ ಸಂಸ್ಕಾರ ರತ್ನಮಾಲಾ' ಆಪಸ್ತಂಭ ಮತ್ತು ಸತ್ಯಾಷಾಢ ಶ್ರೌತ-ಸೂತ್ರಗಳ ಭಾಷ್ಯಗಳು ಮುದ್ರಿತವಾಗಿವೆ. ಇವರ ಯಜುರ್ವೇದದ ವ್ಯಾಖ್ಯಾನವು ಇನ್ನೂ ಪ್ರಕಾಶವಾಗಿಲ್ಲ. ಇದರಲ್ಲಿ ಇವರು ಸೋಮಯಾಗ, ಚಾತುರ್ಮಾಸ್ಯಯಾಗ, ಸಾವಿತ್ರೀಚಯನ ಮತ್ತು ಸೌತ್ರಾಮಣೀ ಯಾಗಗಳ ಪ್ರಯೋಗಕ್ಕೆ ಸಂಬಂಧಿಸಿದ ವಿವರಗಳನ್ನು ಚರ್ಚಿಸಿದ್ದಾರೆ. ಧಾರವಾಡದ ಉಪ್ಪಿನ ಬೆಟಗೇರಿ ನಾಗೇಶಶಾಸ್ತ್ರಿಗಳು 'ಪಶ್ವಾಲಂಭ ಮೀಮಾಂಸಾ' ಎಂಬ ಗ್ರಂಥವನ್ನು ಬರೆದಿದ್ದಾರೆ. ಇದರಲ್ಲಿ ಯಾಗಗಳಲ್ಲಿ ಪಶುಹಿಂಸೆಯನ್ನು ಸಮರ್ಥಿಸಿದ್ದಾರೆ. ಯಾಗಗಳಲ್ಲಿ ಪಶುಹಿಂಸೆಯನ್ನು ಜೈನರೇ ಮೊದಲಾದ ಅವೈದಿಕ ಮತದವರು ವಿರೋಧಿಸುವುದಲ್ಲದೆ, ಮಾಧ್ವ ಸಂಪ್ರದಾಯದವರೂ ವಿರೋಧಿಸುತ್ತಾರೆ. ಈ ಹಳೆಯ ವಿವಾದವನ್ನು ಆಧುನಿಕ ಸಮಾಜ ಸುಧಾರಕರು ಮತ್ತೆ ಆರಂಭಿಸಿದರು. ವೈದಿಕ ಯಾಗಗಳಲ್ಲಿ ಪಶುಹಿಂಸೆಯು ಶಾಕ್ತ, ಪಾಶುಪತ, ಇತ್ಯಾದಿಗಳ ಸಂಪರ್ಕದಿಂದ ಸೇರಿಕೊಂಡಿತು. ಮೊದಲು ಇರಲಿಲ್ಲ ಎಂಬುದು ಇವರ ವಾದ. ಪಶುಹಿಂಸೆಯನ್ನು ಬೋಧಿಸುವ ಪ್ರಮಾಣವಚನಗಳಿಗೆ ಇವರು ಬೇರೆ ಅರ್ಥವನ್ನು ಕಲ್ಪಿಸತೊಡಗಿದರು. ಆದುದರಿಂದ ನಾಗೇಶಶಾಸ್ತ್ರಿಗಳು ಪಶುಹಿಂಸೆಯು ಶಾಸ್ತ್ರಸಮ್ಮತವೆಂದು ಸಮರ್ಥಿಸಿ ಈ ಗ್ರಂಥವನ್ನು ಬರೆದರು. ಆನಂದಾಶ್ರಮ ಗ್ರಂಥಮಾಲೆಯಲ್ಲಿ ಪ್ರಕಟವಾದ ಪೂರ್ವಮೀಮಾಂಸಾದರ್ಶನ, ದರ್ಶಪೂರ್ಣಮಾಸ ಪ್ರಕರಣ, ಇತ್ಯಾದಿ ಗ್ರಂಥಗಳಿಗೆ ನಾಗೇಶಶಾಸ್ತ್ರಿಗಳು ಬರೆದ ಸಂಸ್ಕೃತ-ಭೂಮಿಕೆಗಳು ವಿದ್ವತ್ಪೂರ್ಣವಾಗಿವೆ. ಇವರು ನ್ಯಾಯ ಮತ್ತು ವೇದಾಂತಗಳಲ್ಲಿ

ಉದ್ದಾಮ ಪಂಡಿತರೂ ಸಂಸ್ಕೃತ ಕನ್ನಡ ಮತ್ತು ಮರಾಠೀ ಭಾಷೆಗಳಲ್ಲಿ ಉತ್ತಮ ವಾಗ್ಮಿಗಳೂ ಆಗಿದ್ದರು. ಇವರ ಪೂರ್ವಮೀಮಾಂಸಾ ಶಾಸ್ತ್ರದ ಲೇಖನಗಳು ಮಾತ್ರ ಉಪಲಬ್ಧವಾಗಿವೆ. ಮಳಗಿ ವೇದವ್ಯಾಸಾಚಾರ್ಯರು ಬರೆದ 'ಪಿಷ್ಟಪಶು ಮೀಮಾಂಸಾ' ಎಂಬ ಗ್ರಂಥವು ಇದೇ ಸಮಸ್ಯೆಯ ಇನ್ನೊಂದು ಮುಖವನ್ನು ಸಮರ್ಥಿಸುತ್ತದೆ. ಮಹಾಮಹೋಪಾಧ್ಯಾಯ ವೈದ್ಯನಾಥಶಾಸ್ತ್ರಿಗಳು ಶಬರಭಾಷ್ಯದ ಮೊದಲನೆಯ ಅಧ್ಯಾಯದ ಮೊದಲನೆಯ ಪಾದದ ಮೇಲೆ ವ್ಯಾಖ್ಯಾನವನ್ನು ಬರೆದಿರುವರು. ರೆಡ್ಡಿ ರಂಗಾಚಾರ್ಯರು ಆಪದೇವನ 'ಮೀಮಾಂಸಾ ಪ್ರಕಾಶ'ದ ಮೇಲೆ ವ್ಯಾಖ್ಯಾನವನ್ನು ಬರೆದಿರುವರು. ಇದರಲ್ಲಿ ಪೂರ್ವಮೀಮಾಂಸೆಯ ಅನೇಕ ಪಾರಿಭಾಷಿಕ ಪದಗಳನ್ನು ಸುಲಲಿತವಾಗಿ ವಿವರಿಸಿರುವರು.

ಗೋಕರ್ಣದ ದೇವರಾತ ಮಹರ್ಷಿಗಳು ವೈದಿಕ ಭಾಷೆಯಲ್ಲಿ ಮತ್ತು ವೈದಿಕ ಛಂದಸ್ಸುಗಳಲ್ಲಿ ಸೂಕ್ತಗಳನ್ನು ರಚಿಸಿರುವರು. ಈ ಸೂಕ್ತಗಳಲ್ಲಿ ವೈದಿಕ ಸ್ವರಕ್ರಮವನ್ನು ಅನುಸರಿಸಿರುವರು. ಅರವಿಂದ ಮಹರ್ಷಿಗಳ ಶಿಷ್ಯರಾದ ಶಿರಸಿಯ ಕಪಾಲೀ ಶಾಸ್ತ್ರಿಗಳು ಅರವಿಂದರ ವಿಚಾರಸರಣಿಯನ್ನನುಸರಿಸಿ ಋಗ್ವೇದಕ್ಕೆ ವ್ಯಾಖ್ಯಾನವನ್ನು ಬರೆದಿರುವರು. ಬೆಳಗಾವಿಯ ಪಾಂಫ್ರಿ ತಾತಾಚಾರ್ಯರು ಮಧ್ವಾಚಾರ್ಯರು ತಮ್ಮ ಋಗ್‌ಭಾಷ್ಯದಲ್ಲಿ ನಿರ್ದೇಶಿಸಿದ ಕ್ರಮವನ್ನನುಸರಿಸಿ ಋಗ್ವೇದಕ್ಕೆ ವ್ಯಾಖ್ಯಾನವನ್ನು ಬರೆದಿರುವರು. ಈ ವಿಸ್ತಾರವಾದ ಗ್ರಂಥವು ಇನ್ನೂ ಅಪ್ರಕಾಶಿತವಾಗಿಯೇ ಉಳಿದಿದೆ. ಚಿಕ್ಕೋಡಿ ಭಗವಂತರಾಯರು ತಮ್ಮ 'ಬೃಹತೀ ಸಹಸ್ರವ್ಯಾಖ್ಯಾನ' ವೆಂಬ ಗ್ರಂಥದಲ್ಲಿ ಋಗ್ವೇದದ ಒಂದು ಸಾವಿರ ಸೂಕ್ತಗಳಿಗೆ ವ್ಯಾಖ್ಯಾನವನ್ನು ಬರೆದಿದ್ದಾರೆ.

ಲಿಂಗಾಭಟ್ಟರ ಮಗನಾದ ನಾಗೇಶಭಟ್ಟನು ಬರೆದ 'ಗೋತ್ರ ಪ್ರವರದೀಪಿಕಾ' ಬಾಪೂಭಟ್ಟ ಕೇಳಕರನು ಬರೆದ 'ಪ್ರಾಯಶ್ಚಿತ್ತ ಮಂಜರೀ' ದಿವಾಕರನು ಬರೆದ 'ಸ್ಮಾರ್ತಪ್ರಾಯಶ್ಚಿತ್ತ'—ಇವು ಈ ಶತಕಗಳಲ್ಲಿ ಬರೆಯಲ್ಪಟ್ಟ ಕೆಲವು ಧರ್ಮಶಾಸ್ತ್ರ ಗ್ರಂಥಗಳು. ತಿರುಮಲಾರ್ಯನ 'ನಿಬಂಧ ಚೂಡಾಮಣಿ'ಯಲ್ಲಿ ಧರ್ಮಶಾಸ್ತ್ರದ ಅನೇಕ ವಿವರಗಳನ್ನು ಕೊಡಲಾಗಿದೆ. ಆಯಿ ನರಹರಿಯು 'ಸದಾಚಾರ ಸ್ಮೃತಿ'ಯ ಮೇಲೆ ಒಂದು ವ್ಯಾಖ್ಯಾನವನ್ನೂ 'ಚಾತುರ್ಮಾಸ್ಯಮೀಮಾಂಸಾ' ಎಂಬ ಗ್ರಂಥವನ್ನೂ ಬರೆದಿರುವನು.

ಈ ಶತಕಗಳಲ್ಲಿ ವೇದಾಂತದ ಅಧ್ಯಯನವು ವಿದ್ವಾಂಸರ ಗಮನವನ್ನು ವಿಶೇಷವಾಗಿ ಸೆಳೆದಿದೆ. ದ್ವೈತ ಮತ್ತು ಅದ್ವೈತ ಮತಗಳಲ್ಲಿ ವಾದಗ್ರಸ್ತ ವಿಷಯಗಳ ಕಡೆಗೆ ಇವರು ಹೆಚ್ಚಿನ ಗಮನವನ್ನು ಕೊಟ್ಟಿದ್ದಾರೆ. ಕೊಪ್ಪಳದ ಹತ್ತಿರದ ಹುಲಿಗಿ ಗ್ರಾಮದ ಶ್ರೀಯಃಪತ್ಯಾಚಾರ್ಯರು 'ದ್ವೈತದ್ಯುಮಣಿ' ಎಂಬ ಗ್ರಂಥವನ್ನು ಬರೆದು ತ್ರ್ಯಂಬಕ ಶಾಸ್ತ್ರಿಗಳ 'ಶ್ರುತಿ ಮತೋದ್ಯೋತ' ಎಂಬ ಗ್ರಂಥವನ್ನು ವಿಮರ್ಶಿಸಿದ್ದಾರೆ. ಇವರು 'ಸತ್ ತತ್ವದೀಪಿಕಾ' 'ತರ್ಕತಾಂಡವ ಟಿಪ್ಪಣಿ' ಮತ್ತು 'ಭೇದೋಜ್ಜೀವನ ಟಿಪ್ಪಣಿ'ಗಳೆಂಬ ಇನ್ನೂ ಮೂರು ಗ್ರಂಥಗಳನ್ನು ಬರೆದಿದ್ದಾರೆ. ಧಾರವಾಡ ಜಿಲ್ಲೆಯ ಮಾಸೂರು ಗ್ರಾಮದ ಪಾಂಡುರಂಗಿ ನರಸಿಂಹಾಚಾರ್ಯರು 'ವಾಕ್ಯಾರ್ಥ ರತ್ನಮಾಲಾ' ಎಂಬ ಗ್ರಂಥವನ್ನು ಬರೆದಿದ್ದಾರೆ. ಇದು ಜಯತೀರ್ಥರ 'ನ್ಯಾಯಸುಧಾ'ದ ಮೇಲೆ ವಿದ್ಯಾಧೀಶರು ಬರೆದಿರುವ 'ವಾಕ್ಯಾರ್ಥ ಚಂದ್ರಿಕಾ' ವ್ಯಾಖ್ಯಾನದ ವ್ಯಾಖ್ಯಾನವು. ವೇದಗರ್ಭ ಪದ್ಮನಾಭಾಚಾರ್ಯರು ಬರೆದ 'ಮಧ್ವಸಿದ್ಧಾಂತ ಸಾರ'ವು ರಾಮಾನುಜ ಮತಕ್ಕೆ 'ಯತೀಂದ್ರ ದೀಪಿಕೆ' ಇರುವಂತೆ ಮಧ್ವಮತಕ್ಕೆ ಇರುವ ಒಂದು ಪ್ರಕರಣ ಗ್ರಂಥವು. ಗಜೇಂದ್ರಗಡಕರ ಮನೆತನಕ್ಕೆ ಸೇರಿದ ಸಾತಾರಿ ರಾಘವೇಂದ್ರಾಚಾರ್ಯರು ವೇದಾಂತ ಮತ್ತು ವ್ಯಾಕರಣ ಎರಡರಲ್ಲಿಯೂ ಘನ ವಿದ್ವಾಂಸರಾಗಿದ್ದರು. ಇವರು ಗೀತೆ, ಶ್ವೇತಾಶ್ವತರ ಉಪನಿಷತ್ತು ಮತ್ತು 'ವಿಷ್ಣುಸಹಸ್ರನಾಮ'ಗಳ ಮೇಲೆ ವ್ಯಾಖ್ಯಾನಗಳನ್ನು ಬರೆದಿರುವರು. ಪಾಂಡುರಂಗಿ ಶ್ರೀನಿವಾಸಾಚಾರ್ಯರು ಬರೆದ 'ಪ್ರಮಾಣಸಂಗ್ರಹ'ವು ಜಯತೀರ್ಥರ

ಪ್ರಮಾಣಪದ್ಧತಿಯ ಸಾರಸಂಗ್ರಹವು. ತಿರುಪತಿಯ ಪಾಂಡುರಂಗಿ ಹುಚ್ಚಾಚಾರ್ಯರು ಬರೆದ 'ಸೂತ್ರ ಪ್ರಮೇಯಾವಲಿ'ಯಲ್ಲಿ ಶ್ಲೋಕರೂಪಗಳಲ್ಲಿ ಬ್ರಹ್ಮಸೂತ್ರಗಳ ಸಾರವನ್ನು ಕೊಡಲಾಗಿದೆ. ಕಲ್ಲಾಪುರ ಅಣ್ಣಯಾಚಾರ್ಯರ 'ಅಧಿಕರಣಾರ್ಥಸಂಗ್ರಹ', ತೊನಸೀ ಶ್ರೀನಿವಾಸರ 'ಶ್ರುತ್ಯರ್ಥರತ್ನಮಾಲಾ', ರಾಮಕೃಷ್ಣನ 'ಶ್ರುತ್ಯರ್ಥಪ್ರಕಾಶ', ಕೋಲಾರ್ಯಶಿಷ್ಯನ 'ಸೂತ್ರಯುಕ್ತಿಸಂಗ್ರಹ' ಇವೆಲ್ಲ ಬ್ರಹ್ಮ ಸೂತ್ರಗಳ ಅಧ್ಯಯನಕ್ಕೆ ನೆರವಾಗುವ ಗ್ರಂಥಗಳು.

ಶ್ರೀ ಸತ್ಯಧ್ಯಾನತೀರ್ಥರು ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲಿಯ ಶ್ರೇಷ್ಠ ವೇದಾಂತ ವಿದ್ವಾಂಸರು. ಇವರು ಮತತ್ರಯದಲ್ಲಿಯೂ ನ್ಯಾಯಶಾಸ್ತ್ರದಲ್ಲಿಯೂ ಉದ್ದಾಮ ಪಂಡಿತರಾಗಿದ್ದರು. ಇವರು ಭಾರತದ ನಾನಾಭಾಗಗಳಲ್ಲಿ ವಿದ್ವತ್ ಸಭೆಗಳನ್ನು ಏರ್ಪಡಿಸಿ ವೇದಾಂತವಾಕ್ಯಾರ್ಥಕ್ಕೆ ಉತ್ತೇಜನ ವನ್ನು ಕೊಡುತ್ತಿದ್ದರು. ಇವರು ಸಂಸ್ಕೃತದಲ್ಲಿಯೂ ಕನ್ನಡ ತೆಲುಗು, ತಮಿಳು ಮತ್ತು ಮರಾಠೀ ಭಾಷೆಗಳಲ್ಲಿಯೂ ಗ್ರಂಥಗಳನ್ನು ಬರೆದಿರುವರು. ಇವರು ಬರೆದ 'ಚಂದ್ರಿಕಾಮಂಡನ'ವು ರಾಮಸುಬ್ಬ ಶಾಸ್ತ್ರಿಗಳ 'ಚಂದ್ರಿಕಾ ಖಂಡನ'ಕ್ಕೆ ಉತ್ತರವಾಗಿದೆ. 'ಗೀತಾವಿಮರ್ಶೆ', 'ಬ್ರಹ್ಮಸೂತ್ರವಿಮರ್ಶೆ', 'ಅದ್ವೈತ ಭ್ರಾಂತಿಪ್ರಕಾಶ' ಇವು ಇವರ ಇನ್ನಿತರ ಗ್ರಂಥಗಳು. 'ಸಭಾಸಾರ ಸಂಗ್ರಹ'ವೆಂಬ ಗ್ರಂಥವು ಗೀತೆಯ ಮೇಲಿನ ಇವರ ಉಪನ್ಯಾಸಗಳ ಸಂಕಲನವಾಗಿದೆ. ನ್ಯಾಯಾಲಯಗಳಲ್ಲಿಯ ಕ್ರಮವನ್ನನುಸರಿಸಿ ಸಾಕ್ಷಿ, ಪ್ರಶ್ನೆಕೇಳು ವದು ಈ ರೀತಿಯಲ್ಲಿ ವೇದಾಂತ ತತ್ವಗಳನ್ನು ಸಮರ್ಥಿಸುವ ಇನ್ನೊಂದು ಗ್ರಂಥವನ್ನೂ ರಚಿಸಿದ್ದಾರೆ. ಇವರ ಇಬ್ಬರು ಪ್ರಮುಖ ಶಿಷ್ಯರಾದ ಪಾಂಡುರಂಗಿ ಕೃಷ್ಣಾಚಾರ್ಯ ಮತ್ತು ವರಖೇಡಿ ನರಸಿಂಹಾ ಚಾರ್ಯರು ರಾಮಸುಬ್ಬಾಶಾಸ್ತ್ರಿಗಳ ಚಂದ್ರಿಕಾ ಖಂಡನಕ್ಕೆ ಉತ್ತರ ರೂಪವಾಗಿ ಗ್ರಂಥಗಳನ್ನು ಬರೆದಿದ್ದಾರೆ. ಈ ದ್ವೈತಾದ್ವೈತವಿವಾದವನ್ನು ಅನಂತ ಕೃಷ್ಣಶಾಸ್ತ್ರಿಗಳು 'ಅದ್ವೈತ ತತ್ತ್ವಸುಧಾ' ಎಂಬ ಗ್ರಂಥವನ್ನು ಬರೆದು ಮುಂದುವರಿಸಿದರು. ಇದಕ್ಕೆ ಉತ್ತರವಾಗಿ ಸತ್ಯಪ್ರಮೋದತೀರ್ಥರು ಈ ವಿವಾದಕ್ಕೆ ಸಂಬಂಧಿಸಿದ ಎಲ್ಲ ಅಂಶಗಳನ್ನೊಳಗೊಂಡ 'ಸುಧಾಮಂಡನ'ವೆಂಬ ಗ್ರಂಥವನ್ನು ಬರೆದಿರುವರು. ಸುಧಾಮಂಡನವು ಈ ಶತಮಾನದ ಶ್ರೇಷ್ಠ ಗ್ರಂಥವಾಗಿದೆ. ಇದೇ ಉದ್ದೇಶವನ್ನೊಳಗೊಂಡ 'ಅದ್ವೈತಸುಧಾಸಮೀಕ್ಷಾ' ಎಂಬ ಗ್ರಂಥವನ್ನು ವಿದ್ಯಾಮಾನ್ಯ ತೀರ್ಥರು ಬರೆದಿರುವರು.

ಚಿಕ್ಕೋಡಿ ಭಗವಂತರಾಯರು ಮತ್ತು ಕೃಷ್ಣಾವಧೂತ ಪಂಡಿತರು ಈ ಕಾಲದ ಇನ್ನಿಬ್ಬರು ಗ್ರಂಥಕಾರರು. ಭಗವಂತರಾಯರು ಬರೆದ 'ಭಾವ ಪ್ರದೀಪ'ವೆಂಬ ಬ್ರಹ್ಮಸೂತ್ರ ಭಾಷ್ಯದ ವ್ಯಾಖ್ಯಾನವು ಬೆಳಗಾವಿಯಲ್ಲಿ ಮುದ್ರಿತವಾಗಿದೆ. ಇವರು 'ತತ್ತ್ವ-ಸಂಖ್ಯಾನ' ಮತ್ತು 'ಭಾಗವತ'ಗಳ ಮೇಲೆಯೂ ವ್ಯಾಖ್ಯಾನಗಳನ್ನು ಬರೆದಿರುವರು. ಹೊಸಪೇಟೆಯ ಕೃಷ್ಣಾವಧೂತ ಪಂಡಿತರು ಬಹುಮುಖ ಪ್ರತಿಭೆಯ ವಿದ್ವಾಂಸರು. ಇವರ 'ಸೂತ್ರಾರ್ಥಾಮೃತ ಲಹರಿ'ಯು ಮದ್ರಾಸ ವಿಶ್ವವಿದ್ಯಾನಿಲಯದಿಂದಲೂ 'ಅದ್ವೈತ ನವನೀತ'ವು ಕರ್ಣಾಟಕ ವಿಶ್ವವಿದ್ಯಾನಿಲಯದಿಂದಲೂ ಪ್ರಕಟಿಸಲ್ಪಟ್ಟಿವೆ. 'ವಿಶಿಷ್ಟಾದ್ವೈತನವನೀತಮ್,' 'ಮಧ್ವತತ್ವಸೂತ್ರಾಣಿ', ಮತ್ತು 'ಮಧ್ವಮತ ಸರ್ವಸ್ವಮ್' ಇವು ಇವರ ಇನ್ನಿತರ ವೇದಾಂತಗ್ರಂಥಗಳು.

ನ್ಯಾಯದಲ್ಲಿ ಉತ್ತಮ ವಿದ್ವಾಂಸರಿದ್ದರೂ ಗ್ರಂಥಗಳೇನೂ ವಿಶೇಷವಾಗಿ ಬರೆಯಲ್ಪಟ್ಟಿಲ್ಲ. ಒಂದೆರಡು ಉತ್ತಮ ಗ್ರಂಥಗಳೂ ಕೆಲವು ಚಿಕ್ಕ ಗ್ರಂಥಗಳೂ ಬರೆಯಲ್ಪಟ್ಟಿವೆ. ಅವುಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಕುಣಿಗಲ್ ರಾಮಾಶಾಸ್ತ್ರಿಗಳ 'ಕೋಟಿ' ಎಂಬ ನ್ಯಾಯಶಾಸ್ತ್ರಗ್ರಂಥಕ್ಕೆ ಶೃಂಗೇರಿಯ ಶ್ರೀ ನರಸಿಂಹಭಾರತಿ ಸ್ವಾಮಿಗಳು ಬರೆದ 'ಕುಲ್ಯಾ' ಎಂಬ ವ್ಯಾಖ್ಯಾನಕ್ಕೆ ಹಾನಗಲ್ ವಿರೂಪಾಕ್ಷಶಾಸ್ತ್ರಿಗಳು 'ನೌಕಾ' ಎಂಬ ವ್ಯಾಖ್ಯಾನವನ್ನು ಬರೆದಿರುವರು. ತರ್ಕಶಾಸ್ತ್ರದ ಈ ಮೂರು ಉನ್ನತ ಗ್ರಂಥಗಳಲ್ಲಿ ಶ್ರೇಷ್ಠಮಟ್ಟದ ಪರಿಷ್ಕಾರಗಳಿರುವವು. ಧಾರವಾಡದ ಉಪ್ಪಿನ ಬೆಟಗೇರಿ ಕೃಷ್ಣಶಾಸ್ತ್ರಿಗಳು 'ಕೃಷ್ಣಭಟ್ಟೀಯ' ಮೇಲೆ 'ಕ್ರೋಡಪತ್ರ'ಗಳನ್ನು ಬರೆದಿರುವರು. ಕೃಷ್ಣಾವಧೂತಪಂಡಿತರು 'ತರ್ಕನವನೀತ','ಪದಾರ್ಥಸಾಗರ'

ಮತ್ತು 'ತರ್ಕ ಸಂಗ್ರಹವ್ಯಾಖ್ಯಾವಿವೃತಿ' ಎಂಬ ಉಪಯುಕ್ತ ಚಿಕ್ಕ ಗ್ರಂಥಗಳನ್ನು ಬರೆದಿರುವರು. ಚಿಕ್ಕೇರೂರಿನ ಪಾಂಡುರಂಗಿ ವೆಂಕಟರಮಣಚಾರ್ಯರ 'ಪ್ರಾಚೀನ ನ್ಯಾಯಸಾರ'ವೆಂಬ ಗ್ರಂಥದಲ್ಲಿ ಉದಯನನೇ ಮೊದಲಾದ ಪ್ರಾಚೀನ ನ್ಯಾಯಗ್ರಂಥಕಾರರ ಅಭಿಪ್ರಾಯದ ಸಾರವನ್ನು ಸಂಗ್ರಹಿಸಲಾಗಿದೆ. ವಿಜಾಪುರದ ಝಳಕೀಕರ್ ಭೀಮಸೇನಾಚಾರ್ಯರ 'ನ್ಯಾಯಕೋಶ'ದಲ್ಲಿ ನ್ಯಾಯಶಾಸ್ತ್ರದಲ್ಲಿಯ ಲಕ್ಷಣ ಪರಿಷ್ಕಾರಗಳನ್ನು ಸಂಗ್ರಹಿಸಲಾಗಿದೆ. ಈ ಗ್ರಂಥದ ಮಾದರಿಯನ್ನನುಸರಿಸಿಯೇ 'ಮೀಮಾಂಸಾಕೋಶ,' 'ಧರ್ಮಕೋಶಾದಿ'ಗಳು ರಚಿಸಲ್ಪಟ್ಟಿವೆ.

ವ್ಯಾಕರಣ ಮತ್ತು ಅಲಂಕಾರ ಶಾಸ್ತ್ರಗಳಲ್ಲಿಯೂ ಗ್ರಂಥರಚನೆಯು ಮುಂದುವರಿದಿದೆ. ಸಾತಾರೆಯ ಗಜೇಂದ್ರಗಡಕರ ರಾಘವೇಂದ್ರಾಚಾರ್ಯರು ಪರಿಭಾಷೇಂದು ಶೇಖರಕ್ಕೆ ತ್ರಿಪಥಗಾ ಎಂಬ ವ್ಯಾಖ್ಯಾನವನ್ನೂ 'ಶಬ್ದರತ್ನ'ಕ್ಕೆ 'ಪ್ರಭಾ' ಎಂಬ ವ್ಯಾಖ್ಯಾನವನ್ನೂ ಬರೆದಿರುವರು. ಕುಂಡಲಗಿರಿಯವರು 'ಭಟ್ಟೋಜಿಕುಟ್ಟನ'ವೆಂಬ ಚಿಕ್ಕ ವ್ಯಾಕರಣ ಗ್ರಂಥದಲ್ಲಿ ಶ್ರೀ ಮಧ್ವಾಚಾರ್ಯರ ಕೆಲವು ಪ್ರಯೋಗಗಳನ್ನು ಸಮರ್ಥಿಸಿರುವರು. ಕೃಷ್ಣಾವಧೂತಪಂಡಿತರ 'ಸುಲಭಸಾಧ್ಯವ್ಯಾಕರಣ'ವು ಹೆಸರಿಗೆ ತಕ್ಕಂತಿದೆ. 'ಕಾವ್ಯಪ್ರಕಾಶ'ಕ್ಕೆ ಝಳಕೀಕರರು ಬರೆದ ವ್ಯಾಖ್ಯಾನವು ಅಲಂಕಾರ ಶಾಸ್ತ್ರದಲ್ಲಿ ಈ ಶತಮಾನದಲ್ಲಿಯೇ ಅತ್ಯುತ್ತಮ ಗ್ರಂಥವು. ಕಾವ್ಯ ಪ್ರಕಾಶದ ಮೇಲಿನ ಸುಮಾರು ನಾಲ್ವತ್ತು ಪ್ರಾಚೀನ ವ್ಯಾಖ್ಯಾನಗಳಲ್ಲಿಯ ವಿಷಯಗಳನ್ನು ಇದರಲ್ಲಿ ಸಂಗ್ರ ಹಿಸಲಾಗಿದೆ ಮತ್ತು ಕೆಲವು ಹೊಸ ವಿಷಯಗಳನ್ನೂ ಈ ವಿಸ್ತಾರವಾದ ಗ್ರಂಥದಲ್ಲಿ ಕೊಡಲಾಗಿದೆ. ಸಂಕೇಶ್ವರದ ಆತ್ಮಾರಾಮಶಾಸ್ತ್ರಿ ಜಡೆ ಎಂಬವರು 'ರಸತರಂಗಿಣಿ'ಯ ಮೇಲೆ ನೌಕಾ ಎಂಬ ವ್ಯಾಖ್ಯಾನವನ್ನು ಬರೆದಿರುವರು. ಕೃಷ್ಣಾವಧೂತ ಪಂಡಿತರು 'ಕಾವ್ಯಲಕ್ಷಣ ಸಂಗ್ರಹ', 'ಸಾರಸ್ವತಾಲಂಕಾರಸೂತ್ರ.' ಅದಕ್ಕೊಂದು ಭಾಷ್ಯ ಹೀಗೆ ಮೂರು ಅಲಂಕಾರ ಗ್ರಂಥಗಳನ್ನು ಬರೆದಿರುವರು. ರೆಡ್ಡಿ ರಂಗಾಚಾರ್ಯರು ದಂಡಿಯ 'ಕಾವ್ಯಾದರ್ಶ'ಕ್ಕೆ ಲಲಿತವಾದ ಮತ್ತು ವಿಮರ್ಶಾತ್ಮಕವಾದ ವ್ಯಾಖ್ಯಾನವನ್ನು ಬರೆದಿದ್ದಾರೆ. 'ಅಲಂಕಾರಮೌಕ್ತಿಕಮಾಲಾ' ಎಂಬ ಗ್ರಂಥವು ಸತ್ಯಸಂಧರ ಚರಿತ್ರೆ. ಇದರಲ್ಲಿ ಒಂದೊಂದು ಶ್ಲೋಕ ದಲ್ಲಿಯೂ ಒಂದೊಂದು ಅಲಂಕಾರದ ಲಕ್ಷಣವೂ ಉದಾಹರಣೆಯೂ ಸತ್ಯಸಂಧರ ಚರಿತ್ರಕಥನದಲ್ಲಿ ಜೋಡಿಸಲ್ಪಟ್ಟಿದೆ.

ಕಾವ್ಯ—ನಾಟಕಾದಿ ಸಾಹಿತ್ಯಕ್ಷೇತ್ರದಲ್ಲಿಯೂ ಕೆಲವು ಉತ್ತಮ ಕೃತಿಗಳು ಬಂದಿವೆ. ಧಾರವಾಡದ ನವಲಗುಂದ ತಮ್ಮಣ್ಣಶಾಸ್ತ್ರಿಗಳು 'ಸರೋಜಿನೀ' ಎಂಬ ಸಂಸ್ಕೃತ ಗದ್ಯಗ್ರಂಥವನ್ನು ಬರೆದಿದ್ದಾರೆ. 'ದೇವೀ ವಾಸಂತೀ' ಎಂಬುದು ಗಲಗಲಿ ರಾಮಾಚಾರ್ಯರು ಬರೆದ ಉತ್ತಮ ಗದ್ಯಕಾವ್ಯವು. 'ಮಧ್ವವಿಲಾಸ ಚಂಪೂ'ಕಾವ್ಯವನ್ನು ಬರೆದವರ ಹೆಸರು ತಿಳಿದುಬರುವುದಿಲ್ಲ. ಶೇಷದೀಕ್ಷಿತರ 'ಕೃಷ್ಣವಿಲಾಸ,' ರಾಘವಾಚಾರ್ಯರ 'ಇಂದಿರಾಭ್ಯುದಯ' ರಘೂತ್ತಮರ 'ಮುಕುಂದವಿಲಾಸ' ಮಹಾಲಿಂಗನ ಲಿಂಗವಿಲಾಸ ಚರಿತ' ಇವು ಈ ಶತಮಾನದಲ್ಲಿ ಬರೆಯಲ್ಪಟ್ಟ ಕೆಲವು ಕಾವ್ಯಗಳು. 'ವರ್ಧಮಾನ ಚರಿತ,' ಮತ್ತು 'ದ್ರೌಪದ್ಯುತ್ಪತ್ತಿ' ಈ ಕಾವ್ಯಗಳ ಕರ್ತೃಗಳ ಹೆಸರು ತಿಳಿದುಬರುವುದಿಲ್ಲ. ಧಾರವಾಡದ ಸಹಸ್ರಬುದ್ಧೆ ಎಂಬವರು ಮೇಘದೂತದ ಮಾದರಿಯ ಮೇಲೆ 'ಕಾಕದೂತ' ಎಂಬ ಖಂಡಕಾವ್ಯವನ್ನು ಬರೆದಿರುವರು. ಧಾರವಾಡದ ಕಾವ್ಯಾನಂದರು 'ವಿವಿಧಪದ್ಯಾವಲೀ' ಎಂಬ ತಮ್ಮ ಬಿಡಿಪದ್ಯಗಳ ಸಂಕಲನವನ್ನು ಪ್ರಕಟಿಸಿದ್ದಾರೆ. ಪುಣೇಕರ ಎಂಬ ಇವರ ಮಕ್ಕಳೂ ಹಾಸ್ಯರಸಪ್ರಧಾನವಾದ ಕೆಲವು ಪದ್ಯಗಳನ್ನು ಪ್ರಕಟಿಸಿದ್ದಾರೆ. ಗಲಗಲಿ ರಾಮಾಚಾರ್ಯ, ಬುರ್ಲಿ ಶ್ರೀನಿವಾಸಾಚಾರ್ಯ ಮತ್ತು ಗಲಗಲಿ ಪಂಢರಿ ನಾಥಾಚಾರ್ಯರ ಪದ್ಯಗಳು ಮಧುರವಾಣಿಯ ಸಂಚಿಕೆಗಳಲ್ಲಿ ಪ್ರಕಟವಾಗಿವೆ. ಕೆ. ಟಿ. ಪಾಂಡುರಂಗಿಯವರು 'ಶೈಶವಮ್' ಎಂಬ ತಮ್ಮ ಪದ್ಯಗಳ ಸಂಕಲನವನ್ನು ಪ್ರಕಟಿಸಿದ್ದಾರೆ. 'ಸರ್ವಜ್ಞವಚನಾನಿ' ಎಂಬುದು ಕೆ. ಟಿ. ಪಾಂಡುರಂಗಿ ಇವರು ಮಾಡಿದ ಸರ್ವಜ್ಞವಚನಗಳ ಸಂಸ್ಕೃತ ಅನುವಾದ. ಅಲ್ಲದೆ ಇವರು 'ಪುರಂದರವಾಣೀ' ಎಂಬ ಚಿಕ್ಕ ಹೊತ್ತಗೆಯಲ್ಲಿ ಶ್ರೀ ಪುರಂದರದಾಸರ ನೂರು ವಾಕ್ಯಗಳನ್ನು

ಸಂಸ್ಕೃತಕ್ಕೆ ಅನುವಾದಿಸಿದ್ದಾರೆ. 'ನಭೋವಾಣೀರೂಪಕಾಣಿ' ಎಂಬುದು ಇವರು ಬರೆದ ಸಂಸ್ಕೃತ ರೇಡಿಯೋ ನಾಟಕಗಳ ಸಂಕಲನ. ಇದರಲ್ಲಿ ತಪಃಫಲಮ್, ಸೀತಾತ್ಯಾಗ ಇತ್ಯಾದಿ ನಾಲ್ಕು ರೂಪಕಗಳಿವೆ. ಸಾಲಿ ರಾಮಚಂದ್ರರಾಯರು ಬರೆದ 'ಸುದಾಮಚರಿತ'ವು ಐದು ಸರ್ಗಗಳ ಸುಂದರ ಸಂಸ್ಕೃತಕಾವ್ಯವು. 'ಅಭಿಸಾರ' ಎಂಬುದು ಇವರ ಇನ್ನೊಂದು ಲಘುಕಾವ್ಯವು. ಇವರ 'ವಚನ ರಾಮಾಯಣ'ವು ವಾಲ್ಮೀಕಿ ರಾಮಾಯಣದ ಗದ್ಯರೂಪದ ಸಾರ. ಇದರಲ್ಲಿ ವಾಲ್ಮೀಕಿ ರಾಮಾಯಣದ ಪದ್ಯಗಳನ್ನೇ ಸಾಧ್ಯವಾದಷ್ಟು ಉಪಯೋಗಿಸಲಾಗಿದೆ. ಗಲಗಲಿ ಪಂಢರೀನಾಥಾಚಾರ್ಯರು 'ತಿಲಕಚರಿತಮ್', 'ದೇಶಭಕ್ತಚರಿತಮ್', ಎಂಬ ಎರಡು ಚರಿತ್ರಾತ್ಮಕ ಗದ್ಯಗ್ರಂಥಗಳನ್ನು ಬರೆದಿದ್ದಾರೆ.

ಮೇಲಿನ ಕಾವ್ಯ—ನಾಟಕಾದಿ ಗ್ರಂಥಗಳಲ್ಲದೆ ಸಂಸ್ಕೃತ ಪತ್ರಿಕಾಪ್ರಪಂಚದಲ್ಲಿ ಉತ್ತರ ಕರ್ಣಾಟಕವು ಗಣನೀಯವಾದ ಪಾತ್ರವನ್ನು ವಹಿಸಿರುವುದು. ಸಂಸ್ಕೃತಚಂದ್ರಿಕಾ ಎಂಬ ಮಾಸಪತ್ರಿಕೆಯು ಕೊಲ್ಲಾಪುರದಿಂದ ಹೊರಡುತ್ತಿದ್ದರೂ ಇದರಲ್ಲಿ ಬಹುಮಟ್ಟಿನ ಲೇಖನಗಳು ಕರ್ಣಾಟಕದವರಿಂದಲೇ ಬರೆಯಲ್ಪಡುತ್ತಿದ್ದವು. ಮಧುರವಾದ ಕವಿತೆಗಳು, ಸುಂದರವಾದ ಗದ್ಯಶೈಲಿ ಮತ್ತು ವಿಮರ್ಶಾತ್ಮಕ ಲೇಖನಗಳಿಗೆ ಈ ಪತ್ರಿಕೆಯು ಪ್ರಸಿದ್ಧವಾಗಿದ್ದಿತು. ಈ ಪತ್ರಿಕೆಯು ನಿಂತ ಮೇಲೆ ಬೆಳಗಾವಿಯಿಂದ ಗಲಗಲಿ ರಾಮಾಚಾರ್ಯರೂ ಬರ್ಲಿ ಶ್ರೀನಿವಾಸಾಚಾರ್ಯರೂ ಆರಂಭಿಸಿದ 'ಮಧುರವಾಣೀ' ಪತ್ರಿಕೆಯು ಪ್ರಸಿದ್ಧಿಗೆ ಬಂದಿತು. ಭಾರತದ ನಾನಾಭಾಗದವರು ಇದರಲ್ಲಿ ಲೇಖನಗಳನ್ನು ಬರೆಯುತ್ತಿದ್ದರು. ವಿದೇಶೀಯರು ಆಗಾಗ ಬರೆಯುತ್ತಿದ್ದರು. 'ಅಮರಭಾರತೀ' ಎಂಬ ಪತ್ರಿಕೆಯು ಬನಾರಸಿನಿಂದ ಹೊರಡುತ್ತಿದ್ದರೂ ಇದರ ಸಂಪಾದಕರಾದ ವರಖೇಡಿ ನರಸಿಂಹಾಚಾರ್ಯರೂ ಅನೇಕ ಲೇಖಕರೂ ಕರ್ಣಾಟಕದವರಾಗಿದ್ದರು. ಮಧುರವಾಣಿ ಮತ್ತು ಅಮರಭಾರತಿಯಲ್ಲಿ ಬರುವ ಸಮಸ್ಯಾಪೂರ್ತಿಗಳು ಭಾರತದ ಎಲ್ಲಾ ಭಾಗದವರಿಗೂ ಪ್ರಿಯವಾಗಿದ್ದವು.

ಮೂಲ ಲೇಖಕರು ಮತ್ತು ಅನುವಾದಕರು : ಶ್ರೀ ಕೆ. ಟಿ. ಪಾಂಡುರಂಗಿ

# ಸಂಸ್ಕೃತ—ದಕ್ಷಿಣ ಕನ್ನಡ

ದಕ್ಷಿಣ ಕನ್ನಡ ಜಿಲ್ಲೆಯ ಸಂಸ್ಕೃತ ಗ್ರಂಥಕರ್ತರು ಮುಖ್ಯವಾಗಿ ವೇದಾಂತ ಮತ್ತು ಜೈನಮತಗಳ ದಾರ್ಶನಿಕ ಭಾವನೆಗಳಿಂದ ಸ್ಫೂರ್ತಿಯನ್ನು ಪಡೆದರು. ಇವುಗಳಿಗೆ ಉಡುಪಿ ಮತ್ತು ಮೂಡಬಿದರೆಗಳೆ ಉಜ್ವಲ ಕೇಂದ್ರಸ್ಥಾನಗಳಾಗಿದ್ದವು. ಹದಿಮೂರನೆ ಶತಮಾನದ ಮಧ್ಯಭಾಗದಲ್ಲಿ ಪೂಜ್ಯ ಮಧ್ವಾಚಾರ್ಯರು ದ್ವೈತವೇದಾಂತದರ್ಶನವನ್ನು ಸ್ಥಾಪಿಸಿದರು. ಅನಂತರ ವೇದಾಂತಜ್ಞಾನಾರ್ಜನೆಗೂ ವೈಷ್ಣವಮತಕ್ಕೂ ಉಡುಪಿಯು ಪ್ರಮುಖ ಕೇಂದ್ರವಾಯಿತು. ಅನೇಕ ಶತಮಾನಗಳಿಂದ ಮೂಡಬಿದರೆ ಜೈನಮತದ ಪ್ರಖ್ಯಾತ ಕೇಂದ್ರವಾಗಿದೆ. ಈ ಎರಡು ಸ್ಥಳಗಳು ಇಡೀ ಜಿಲ್ಲೆಯಲ್ಲಿ ಸಂಸ್ಕೃತ ಸಾಹಿತ್ಯ ರಚನಾಭ್ಯಾಸದ ವಿಷಯದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದವು.

ಇಂಗ್ಲಿಷ್ ವಿದ್ಯಾಭ್ಯಾಸವು ಆರಂಭವಾದ ಬಳಿಕ ಪ್ರಾಚೀನ ಭಾಷೆಗಳ ವ್ಯಾಸಂಗವು ನಿರ್ಲಕ್ಷಿಸಲ್ಪಟ್ಟು, ಸಂಸ್ಕೃತಾಭ್ಯಾಸಿಗಳ ಭವಿಷ್ಯವು ಮಸುಕಾಯಿತು. ಇಂಗ್ಲಿಷ್ ಭಾಷೆ ಮತ್ತು ಪಾಶ್ಚಾತ್ಯ ಜೀವನ ರೀತಿ, ಇವುಗಳ ವ್ಯಾಮೋಹವು ಜನರಲ್ಲಿ ಸ್ವದೇಶೀಯ ಸಾಹಿತ್ಯ ಹಾಗೂ ದೇಶ ಭಾಷೆಗಳ ವಿಷಯದಲ್ಲಿ ತಾತ್ಸಾರ ವನ್ನುಂಟುಮಾಡತೊಡಗಿತು. ಈ ವ್ಯಾಧಿಯಿಂದ ಸಂಪೂರ್ಣವಾಗಿ ನಾವಿನ್ನೂ ಚೇತರಿಸಿಕೊಂಡಿಲ್ಲ.

ಸಂಸ್ಕೃತ ಭಾಷೆಗೆ ಈ ಸಾರ್ವತ್ರಿಕ ಪ್ರತಿಕ್ರಿಯೆಯುಂಟಾದರೂ ಈ ಜಿಲ್ಲೆಯಲ್ಲಿ ಅನೇಕ ವಿದ್ವಾಂಸರು ಸಂಸ್ಕೃತ ಸಾಹಿತ್ಯದ ಅಭಿವೃದ್ಧಿಗೋಸ್ಕರ ಸ್ತುತ್ಯರ್ಹವಾದ ಸೇವೆಯನ್ನು ಸಲ್ಲಿಸಿರುವರಲ್ಲದೆ, ಸಂಸ್ಕೃತ ವಿದ್ಯಾಪ್ರದೀಪವು 18-19ನೆ ಶತಮಾನಗಳಲ್ಲಿ ಉಜ್ವಲವಾಗಿ ಪ್ರಕಾಶಿಸುವಂತೆ ಮಾಡಿದರು.

ಹದಿನೆಂಟನೆ ಶತಮಾನದ ಉತ್ತರಾರ್ಧದಲ್ಲಿ ಪೇಜಾವರ ಮಠಾಧೀಶರಾದ. ಮಹಾವಿದ್ವಾನ್ ವಿಶ್ವಪತಿ ತೀರ್ಥರು ಉಡುಪಿಯಲ್ಲಿ ವಾಸಿಸುತ್ತಿದ್ದರು. ಮಧ್ವಾಚಾರ್ಯರ "ದ್ವಾದಶ ಸ್ತೋತ್ರ", ತ್ರಿವಿಕ್ರಮ ಪಂಡಿತಾಚಾರ್ಯರ "ವಾಯುಸ್ತುತಿ" ಮತ್ತು ನಾರಾಯಣ ಪಂಡಿತಾಚಾರ್ಯರ "ಸಂಗ್ರಹ ರಾಮಾಯಣ" "ಮಧ್ವವಿಜಯ"-ಮೊದಲಾದ ಅನೇಕ ಶ್ರೇಷ್ಠ ಕೃತಿಗಳಿಗೆ ಅನರ್ಘ್ಯವಾದ ವ್ಯಾಖ್ಯಾನ ಗಳನ್ನು ರಚಿಸಿರುವುದರಿಂದ, ಮಧ್ವಸಿದ್ಧಾಂತದ ವಿದ್ಯಾರ್ಥಿಗಳು ಈಗಲೂ ಇವರನ್ನು ಬಹಳವಾಗಿ ಸ್ಮರಿಸುತ್ತಾರೆ. ಇಂದೂ ಅವರ ವ್ಯಾಖ್ಯಾನಗಳು ಅದಿ ತೀಯವಾಗಿವೆ. ಈ ಕೃತಿಗಳು ದ್ವೈತಸಿದ್ಧಾಂತದ ವ್ಯಾಖ್ಯಾತೃವರೇಣ್ಯರ ಕೃತಿಗಳಿಗೆ ಸರಿಸಮನಾಗಿ ಪರಿಗಣಿಸಲ್ಪಡುತ್ತವೆ. ವಿಶ್ವಪತಿತೀರ್ಥರು, ಈ ವ್ಯಾಖ್ಯಾನಗಳನ್ನಲ್ಲದೆ ಮತ್ತೆ ಕೆಲವು ಸ್ತೋತ್ರಗಳನ್ನೂ ತಾವೇ ರಚಿಸಿರುವರೆಂದು ನಂಬಲಾಗಿದೆ.

ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ (ಕ್ರಿ.ಸ. 1802) ಉಡುಪಿಯ ಸೋದೆ ಮಠದ ಶ್ರೀ ವಿಬುಧವರ್ಯ ತೀರ್ಥರು, "ಸುಭದ್ರಾಹರಣ" ಎಂಬ ಮಹಾಕಾವ್ಯವನ್ನು ರಚಿಸಿದರು. ಉಡುಪಿ ಯವರೇ ಆದ ಪಂಡಿತ ಲಕ್ಷ್ಮಣಾಚಾರ್ಯರು ಇದಕ್ಕೆ ಒಂದು ಟೀಕೆಯನ್ನು ಬರೆದರು. ಉಡುಪಿಯಲ್ಲಿ ಬಂದು ನೆಲಸಿದ್ದ, ಕಾಶಿ ತಿಮ್ಮಣಾಚಾರ್ಯರು ಅನೇಕ ಇತರ ವ್ಯಾಖ್ಯಾನಗಳನ್ನಲ್ಲದೆ, ಜಯತೀರ್ಥರ "ನ್ಯಾಯಸುಧೆ"ಯ ಮೇಲೂ ಒಂದು ಹೊಸತಾದ (ಕಾಶಿಕಾ) ವ್ಯಾಖ್ಯಾನವನ್ನು ಬರೆದರು. ಇದು ಅವರ ನಿಷ್ಕಳಂಕವಾದ ಪಾಂಡಿತ್ಯಕ್ಕೂ ವೇದಾಂತ ಜ್ಞಾನಕ್ಕೂ ದೃಢವಾದ ಪ್ರಮಾಣವಾಗಿದೆ.

ಉಡುಪಿಗೆ ಆಗಮಿಸಿ, ನೆಲಸಿದ್ದ ಏಲತ್ತೂರು ಕೃಷ್ಣಾಚಾರ್ಯರು 19ನೆ ಶತಮಾನದ ಪಂಡಿತರ ಸಮೂಹದಲ್ಲಿ ಮೆಚ್ಚುಗೆಗೆ ಪಾತ್ರರಾಗಿದ್ದರು. ಅವರು 19ನೆ ಶತಮಾನದ ಅಪ್ರತಿಮ ವಿದ್ವಾಂಸರು. ನ್ಯಾಯ ಮತ್ತು ವೇದಾಂತಗಳಲ್ಲಿ ಅನುಪಮ ಪಾಂಡಿತ್ಯವನ್ನು ಹೊಂದಿದ್ದರು. "ಕಾಮಾಕ್ಷಿ ವ್ಯಾಖ್ಯಾನ" ಎಂದು ಪ್ರಸಿದ್ಧವಾಗಿರುವ, ತರ್ಕಸಂಗ್ರಹವ್ಯಾಖ್ಯಾನವನ್ನು ಇವರು ಬರೆದರು.

19ನೆ ಶತಮಾನದಲ್ಲಿ ಶ್ರೀ ವಾದಿರಾಜತೀರ್ಥರ ಜೀವನ ಚರಿತ್ರೆಯನ್ನು ಷಟ್ಪುರಾಚಾರ್ಯರು ಬರೆದರು. ಇವರ ಸರಿಯಾದ ಹೆಸರು ತಿಳಿದು ಬಂದಿಲ್ಲ. ಇವರು, ಉಡುಪಿಯಿಂದ ಆರು ಮೈಲಿ ದೂರದಲ್ಲಿದ್ದ ಆರೂರು ಎಂಬ ಗ್ರಾಮದವರಾಗಿದ್ದಿರಬೇಕೆಂದು ಇವರ ಹೆಸರು ಸೂಚಿಸುತ್ತದೆ.

ಉಡುಪಿಯ ಬಳಿ ಇರುವ ಅಂಬಲಪಾಡಿಯ ಬೆಳ್ಳಾಳ ನಾರಾಯಣಾಚಾರ್ಯರು, ಇದೇ ಸಮಯದಲ್ಲಿ ಮಧ್ವಾಚಾರ್ಯರ "ಸದಾಚಾರಸ್ಮೃತಿ" ಎಂಬ ಗ್ರಂಥಕ್ಕೆ ವಿಸ್ತಾರವಾದ ಒಂದು ವ್ಯಾಖ್ಯಾನವನ್ನು ಬರೆದರು. ಅವರ ಈ ಕೃತಿಯು ಪ್ರಮಾಣಗ್ರಂಥವೆಂದು ಪರಿಗಣಿಸಲ್ಪಟ್ಟಿದೆ.

ಸಂಸ್ಕೃತಕ್ಕೆ 19ನೆ ಶತಮಾನವು ಬರಡುಕಾಲವೆನಿಸಿತ್ತೆಂದು ತೋರುತ್ತದೆ. ಸಂಸ್ಕೃತ ಶಿಕ್ಷಣ ತಜ್ಞನು ಸಂಸ್ಕೃತ ವಿದ್ಯಾಭ್ಯಾಸದ ಆವಶ್ಯಕತೆಯನ್ನು ಉಳಿಸುವ ನಿರ್ಬಂಧಕ್ಕೀಡಾಗಿದ್ದನಲ್ಲದೆ ಅದನ್ನು ದೃಢವಾಗಿ ಪ್ರತಿಪಾದಿಸುವವನಾಗಿರಲಿಲ್ಲ. ಕಾರ್ಕಳದ ಪಂಡಿತ ರಮಾಬಾಯಿಯು (ಕ್ರಿ.ಶ. 1832) ಇಂತಹ ಸಾರ್ವಜನಿಕ ಮನೋಭಾವನೆಗೆ ಹೊರತಾಗಿದ್ದುದು ಅತಿ ಗಮನೀಯವಾದುದು. ಕ್ರೈಸ್ತಮತಕ್ಕೆ ಸೇರಿಕೊಂಡಿದ್ದರಿಂದ ಅವಳು ಅಂತಾರಾಷ್ಟ್ರೀಯ ಖ್ಯಾತಿಯನ್ನು ಗಳಿಸಿದಳು. ಹನ್ನೆರಡು ವರ್ಷಗಳ ಹುಡುಗಿಯಾಗಿದ್ದಾಗಲೇ ಉತ್ತರ ಭಾರತದಲ್ಲಿ ಸಂಚರಿಸಿ ಸಂಸ್ಕೃತ ವಿದ್ಯಾಭ್ಯಾಸದ ಬಗೆಗೆ ಅದರಲ್ಲೂ ಮಹಿಳೆಯರಿಗೆ ಅದರ ಆವಶ್ಯಕತೆಯನ್ನು ಕುರಿತು ಉಪನ್ಯಾಸಗಳನ್ನು ಮಾಡಿದಳು. ಭಾಷಾವೈಖರಿಯಿಂದ ಕೂಡಿ ಶ್ರೋತೃಗಳನ್ನು ಸ್ತಂಭೀಭೂತರನ್ನಾಗಿಸುವ, ಆ ಬಾಲೆಯ ಭಾಷಣಗಳು ಎಲ್ಲರನ್ನೂ ಆಕರ್ಷಿಸಿದುವು. ಅವಳು ಪಾಶ್ಚಾತ್ಯ ದೇಶಗಳಲ್ಲಿಯೂ ಪ್ರವಾಸ ಮಾಡಿದಳು. ಬೊಂಬಾಯಿಯಲ್ಲಿ ಒಂದು ವಿಧವಾಶ್ರಮವನ್ನು ಸ್ಥಾಪಿಸಿದಳು. ಸಂಸ್ಕೃತಾಭ್ಯಾಸದ ಏಳಿಗೆಗಾಗಿ ಆಕೆ ಮಾಡಿದ ಸಾಹಸೋದ್ಯಮ ಹಾಗೂ ಕಾರ್ಯ ಚಟುವಟಿಕೆಗಳು, ಖಂಡಿತವಾಗಿಯೂ ಅಸಾಮಾನ್ಯವಾದವು. 20ನೆ ಶತಮಾನದ ಮತ್ತೊಬ್ಬ ವಿದುಷಿ ಉದ್ಯಾವರದ (ಉತ್ತರ ಉಡುಪಿಯ) ಕಮಲಾಬಾಯಿ. ಆಕೆ ಕಾಳಿದಾಸ ಮತ್ತು ಆತನ ಕೃತಿಗಳ ವಿಷಯವಾಗಿ ಒಂದು ಪ್ರಬಂಧವನ್ನು ಬರೆದಳು. (ಕಾಳಿದಾಸಃ ತತ್ಕೃತಿಶ್ಚ).

"ಮಂದಾರಮರಂದ ಚಂಪೂ"ವಿನ ಕರ್ತೃವಾದ ಕೃಷ್ಣಕವಿಯು ದಕ್ಷಿಣ ಕನ್ನಡಕ್ಕೆ ಸೇರಿದ ಗ್ರಂಥ ಕರ್ತನೇ ಎಂದು ಪರಿಗಣಿಸಲ್ಪಟ್ಟಿದ್ದಾನೆ. ಆದರೆ ಅವನ ದೇಶಕಾಲಗಳ ವಿಷಯವಾಗಿ ಏನೂ ತಿಳಿದು ಬಂದಿಲ್ಲ. ಈ ಚಂಪು ಪಾಂಡಿತ್ಯಪೂರ್ಣವಾದ ಅಲಂಕಾರ ಗ್ರಂಥ. ಪ್ರಾಸಂಗಿಕವಾಗಿ, ಇದರಲ್ಲಿ ಮಧ್ವಾಚಾರ್ಯರ ಜೀವನ ಚರಿತ್ರೆಯೂ ಬರುತ್ತದೆ. ಇದನ್ನು ರಚಿಸಿದ ಕೃಷ್ಣಕವಿಯು ಗುಹಪುರವು ತನ್ನ ಜನ್ಮಭೂಮಿಯೆಂದು ತಿಳಿಸಿದ್ದಾನೆ. ಪ್ರಾಯಶಃ, ಈ ಗುಹಪುರವು, ಈ ಜಿಲ್ಲೆಯ ಪ್ರಮುಖ ಯಾತ್ರಾಸ್ಥಳವಾದ ಸುಬ್ರಹ್ಮಣ್ಯಕ್ಕಿಂತ ಬೇರೆಯಾಗಿರಲಾರದು. ರಾಷ್ಟ್ರೀಯತೆಯ ಭಾವೋನ್ಮೇಷದಿಂದಲೂ ಮುದ್ರಣಾಲಯಗಳ ಸಹಾಯದಿಂದ ಸಂಸ್ಕೃತ ಸಾಹಿತ್ಯ ಪ್ರಚಾರದ ವ್ಯವಸ್ಥಿತ ಪ್ರಯತ್ನಗಳಿಂದಲೂ ಸಂಸ್ಕೃತ ವಿದ್ಯಾಭ್ಯಾಸವು 20ನೆ ಶತಮಾನದಲ್ಲಿ ಪುನರುಜ್ಜೀವಗೊಂಡಿತು.

ಸಂಸ್ಕೃತ ವಿದ್ಯಾಭ್ಯಾಸದ ಸಾಂಪ್ರದಾಯಿಕ ಬೋಧನಾ ಪದ್ಧತಿಯು ತ್ವರಿತ ಗತಿಯಲ್ಲಿ ಕ್ಷಯಿಸುತ್ತಿದ್ದರೂ ಕಳೆದ 60 ವರ್ಷಗಳಲ್ಲಿ ದಕ್ಷಿಣ ಕನ್ನಡವು ಸಂಸ್ಕೃತದ ರಚನಾತ್ಮಕ ಕೃತಿಗಳನ್ನು ಅರ್ಜಿಸಿದೆ.

ಎಂಬುದು ಗಮನಾರ್ಹವಾದ ಸಂಗತಿ. ಈ ಶತಮಾನದ ಪೂರ್ವಾರ್ಧದಲ್ಲಿ, ಉಡುಪಿಯ ಎಸ್.ಎಂ.ಎಸ್.ಪಿ. ಸಂಸ್ಕೃತಕಾಲೇಜಿನ ಸಾಹಿತ್ಯ ಪ್ರಾಧ್ಯಾಪಕರಾಗಿದ್ದ, ಬಿಳಿಯಾರುವಿನ ದಿ॥ ಶ್ರೀನಿವಾಸ ಭಟ್ಟರು ಪ್ರತಿಭಾನ್ವಿತ ಕವಿಗಳು. ಇವರು "ರಾಮಾನಂದಂ" ಮೊದಲಾದ ಕೆಲವು ನಾಟಕಗಳನ್ನೂ ಅನೇಕ ಕವನಗಳನ್ನೂ ರಚಿಸಿದ್ದಾರೆ.

ಉಡುಪಿಯ ಎಸ್.ಎಂ.ಎಸ್.ಪಿ. ಸಂಸ್ಕೃತ ಕಾಲೇಜಿನಲ್ಲಿಯೇ ಪ್ರಾಧ್ಯಾಪಕರಾಗಿದ್ದ ಆಲೆವೂರು ಸೀತಾರಾಮ ಆಚಾರ್ಯರು ವ್ಯಾಕರಣದಲ್ಲಿ ಉದ್ದಾಮ ಪಂಡಿತರಾಗಿದ್ದರು. ಸಂಸ್ಕೃತದಲ್ಲಿ ಸ್ವಚ್ಛ ಶೈಲಿಯನ್ನು ಪಡೆದಿದ್ದ ಅವರು ಕೆಲವು ಲಘುಕಾವ್ಯಗಳನ್ನೂ "ಭೈಷ್ಮೀ ಪರಿಣಯ" ಮೊದಲಾದ ಕೆಲವು ನಾಟಕಗಳನ್ನೂ ವಾದಿರಾಜರ "ದಶಾವತಾರಸ್ತುತಿ"ಗೆ ಟೀಕೆಯನ್ನೂ ಬರೆದಿದ್ದಾರೆ.

ತರ್ಕಕೇಸರಿ, ವೇದಾಂತ ವಾಚಸ್ಪತಿ, ಪದಮನ್ನೂರು ನಾರಾಯಣಾಚಾರ್ಯರು ನ್ಯಾಯ ಮತ್ತು ವೇದಾಂತಗಳಲ್ಲೆರಡರಲ್ಲಿಯೂ ಅದ್ವಿತೀಯ ಪಂಡಿತರು. ಉಡುಪಿಯ ಎಸ್.ಎಂ.ಎಸ್.ಪಿ. ಸಂಸ್ಕೃತ ಕಾಲೇಜಿನಲ್ಲಿ ಅವರು ಉಪಾಧ್ಯಕ್ಷರಾಗಿಯೂ ವೇದಾಂತ ಪ್ರಾಧ್ಯಾಪಕರಾಗಿಯೂ 1915 ರಿಂದ 1960 ವರೆಗೆ ಸೇವೆ ಸಲ್ಲಿಸಿದರಲ್ಲದೆ, ತಮ್ಮ ಸಮಕಾಲೀನರಾದ ಉಡುಪಿ ಮಠದ ಅನೇಕ ಸ್ವಾಮಿಗಳಿಗೆ ವಿದ್ಯಾಭ್ಯಾಸ ಮಾಡಿಸಿದರು. ಅನ್ನಂಭಟ್ಟನ ತರ್ಕಸಂಗ್ರಹಕ್ಕೆ "ಸಂಗ್ರಹಾರ್ಥ ಸಂಗ್ರಹ" ಎಂಬ ವ್ಯಾಖ್ಯಾನವನ್ನು ಬರೆದರು. ವಾದಿರಾಜ ತೀರ್ಥರ "ಸನ್ಯಾಯ ರತ್ನಾವಳಿ"ಯ ವ್ಯಾಖ್ಯಾನ, ವ್ಯಾಸತೀರ್ಥರ "ನ್ಯಾಯಾಮೃತ"ದ ಸಂಗ್ರಹರೂಪವಾದ "ನ್ಯಾಯಾಮೃತ ಕುಲ್ಯ" ಇವು, ನಾರಾಯಣಾಚಾರ್ಯರಿಂದ ರಚಿತವಾದ ಇತರ ವೇದಾಂತ ಗ್ರಂಥಗಳು.

ಉಡುಪಿಯ ಎಸ್.ಎಂ.ಎಸ್.ಪಿ. ಕಾಲೇಜಿನ ವೇದಾಂತ ಪ್ರಾಧ್ಯಾಪಕರಾದ ಸುಬ್ರಾಯ ಪುರಾಣಿಕರು "ಈಶ್ವರ ಮೀಮಾಂಸಾ"ಎಂಬ ನಿಬಂಧವನ್ನು 1930ರ ದಶಕದಲ್ಲಿ ಬರೆದರು. ಮದ್ರಾಸ್ ದೇಶದ ಎಲ್ಲ ಸಂಸ್ಕೃತ ವಿದ್ಯಾರ್ಥಿಗಳಿಗೂ ಮಹಾಮಹೋಪಾಧ್ಯಾಯ, ಸಾಹಿತ್ಯಭೂಷಣ, ಕೆ.ಎಲ್.ವಿ. ಶಾಸ್ತ್ರಿಯವರ ಹೆಸರು ಚಿರಪರಿಚಿತ. ಇವರು ಮಂಗಳೂರಿನ ಹತ್ತಿರದ "ಕೊಳುವೆಬೈಲು"ಎಂಬಲ್ಲಿ ಜನ್ಮತಾಳಿದರು. ಮುಂದೆ ಮದರಾಸಿನಲ್ಲಿ ನೆಲಸಿ, ಅಲ್ಲಿಯೇ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಹಿರಿಯ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಇವರು 1963ರಲ್ಲಿ ಗತಿಸಿದರು. ಶಾಸ್ತ್ರಿಗಳು "ಪ್ರಥಮ ಪಾಠಾವಳಿ" ಮತ್ತು "ದ್ವಿತೀಯ ಪಾಠಾವಳಿ" ಮೊದಲಾದ ಪಠ್ಯ ಪುಸ್ತಕಗಳನ್ನು ಸಂಸ್ಕೃತ ಅಭ್ಯಾಸಿಗಳಿಗೋಸ್ಕರ ಬರೆಯುವುದರ ಮೂಲಕ, ಹೆಚ್ಚಾದ ರಚನಾತ್ಮಕ ಕಾರ್ಯವನ್ನು ಮಾಡಿದರು. ಕವಿತಾ ಚಾತುರ್ಯವನ್ನು ಪಡೆದಿದ್ದ ಅವರು, "ಮಧ್ವಾನಂದ ಲಹರಿ" ಮುಂತಾದ ಕಾವ್ಯಗಳನ್ನೂ "ವಿದ್ಯುನ್ಮಾಲಾ" ಮುಂತಾದ ನಾಟಕಗಳನ್ನೂ ರಚಿಸಿದ್ದಾರೆ. ಅವರ ಕೃತಿಗಳಲ್ಲಿ "ಪೂರ್ಣ ಪ್ರಜ್ಞನಾಟಕ" ಮತ್ತು "ಕಾಲಿದಾಸೀಯ ನಾಟಕ ಕಥಾ ಸಂಗ್ರಹ"ಗಳೂ ಸೇರಿವೆ.

ಈಗಿನ ಬಾರ್ಕೂರಿನ (ಉಡುಪಿಯಿಂದ 13 ಮೈಲಿ ದೂರದಲ್ಲಿರುವ) ಭಂಡಾರಕೇರಿ ಮಠದ ಸ್ವಾಮಿಗಳವರಾದ ಶ್ರೀ ವಿದ್ಯಾಮಾನ್ಯ ತೀರ್ಥರು "ಅದ್ವೈತತತ್ವಸುಧಾಸಮೀಕ್ಷಾ"ವನ್ನು ರಚಿಸಿದರು. ಇದು ಶ್ರೀ ಅನಂತಕೃಷ್ಣಶಾಸ್ತ್ರಿಗಳವರ "ಅದ್ವೈತ ತತ್ವ ಸುಧೆ"ಗೆ ಸವಾಲು ಹಾಕುವಂತಿದೆ. ಶ್ರೀ ಸ್ವಾಮಿಗಳವರು ಕೆಲವು ದ್ವೈತ ಗ್ರಂಥಗಳನ್ನೂ ಕನ್ನಡಕ್ಕೆ ಭಾಷಾಂತರಿಸಿದ್ದಾರೆ.

ಉಡುಪಿಯ ಬಳಿ ಇರುವ ಅಂಬಲಪಾಡಿಯ ದಿ॥ ನಾರಾಯಣ ಬಲ್ಲಾಳರು, ಧರ್ಮಶಾಸ್ತ್ರದ ಚರ್ಚೆಗಳನ್ನೊಳಗೊಂಡ "ಆಶೌಚಸಿದ್ಧಾಂತ ಸಾರ ಸಂಗ್ರಹ" ಎಂಬ ಗ್ರಂಥವನ್ನು ಬರೆದರು.

ಮೂಡಬಿದರೆ ಮತ್ತು ಕಾರ್ಕಳದ ಜೈನಮಠಗಳು, ಸಂಸ್ಕೃತ ವಿದ್ವಾಂಸರಿಗೆ ಆಶ್ರಯ ಕೊಟ್ಟು, ಜೈನಮತದ ಗ್ರಂಥಗಳ ವಿವರಣೆ ಮತ್ತು ವ್ಯಾಖ್ಯಾನಗಳ ರಚನೆಗೆ ಪ್ರೋತ್ಸಾಹಿಸುವುದೇ ಮುಂತಾದ ಪ್ರಯತ್ನಗಳಿಂದ ಸಂಸ್ಕೃತವನ್ನು ಅಭಿವೃದ್ಧಿಪಡಿಸಿ, ಅಮಿತವಾದ ಸೇವೆಯನ್ನು ಸಲ್ಲಿಸಿವೆ. ಕಾರ್ಕಳದ ಶಾಂತಿರಾಜಶಾಸ್ತ್ರಿಗಳು 'ಮಹಾಪುರಾಣ'ವೇ ಮೊದಲಾದ ಜೈನ ಗ್ರಂಥಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಜೈನಮತವಿಷಯಕ್ಕೆ ಪ್ರಮಾಣ ಪುರುಷರಾಗಿದ್ದ ಇವರನ್ನು ಮೈಸೂರಿನ ಮಹಾರಾಜರು ಆಸ್ಥಾನವಿದ್ವಾಂಸರನ್ನಾಗಿ ಗೌರವಿಸಿದರು.

ಶಾಂತರಾಜ ಶಾಸ್ತ್ರಿಗಳ ಸಮಕಾಲೀನರಾದ, ಮೂಡಬಿದಿರೆಯ ಲೋಕನಾಥ ಶಾಸ್ತ್ರಿಗಳು 'ಜಿನಸ್ತವ'ವನ್ನು ಕನ್ನಡಿಸಿದ್ದಾರೆ. ಕಾರ್ಕಳದ ದಿ। ಚಿನ್ನಮ್ಮನವರು ಹಿಂದಿಯಿಂದ ಸಂಸ್ಕೃತಕ್ಕೆ ಕೆಲವು ಗ್ರಂಥಗಳನ್ನು ಪರಿವರ್ತಿಸಿದ್ದಾರೆ. ಈಗ ನಮಗೆ ತಿಳಿದಿರುವಂತೆ ಈ ಜಿಲ್ಲೆಯ ಜೈನರಲ್ಲಿ ಸಂಸ್ಕೃತದಲ್ಲಿ ಬರೆದಿರುವ ಮಹಿಳೆಯೆಂದರೆ ಇವರೊಬ್ಬರೇ.

ಮೂಡಬಿದರೆಯ ವಿದ್ಯಾಭೂಷಣ ಪಂಡಿತ ಭುಜಬಲಿ ಶಾಸ್ತ್ರಿಗಳು, ಈ ಪ್ರದೇಶದಲ್ಲಿ ಜೈನಮತದಲ್ಲಿ ನಿಷ್ಣಾತರು. ಶ್ರೀ ಶಾಸ್ತ್ರಿಗಳು ಸಂಸ್ಕೃತ, ಹಿಂದಿ ಮತ್ತು ಕನ್ನಡಗಳಲ್ಲಿ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. "ಭುಜಬಲಿ ಚರಿತಂ" "ಮುನಿ ಸುವ್ರತ ಕಾವ್ಯಂ" ಮೊದಲಾದ ಸಂಸ್ಕೃತ ಕಾವ್ಯಗಳನ್ನು ಹಿಂದಿಗೆ ಭಾಷಾಂತರಿಸಿರುವುದಲ್ಲದೆ, "ಶಾಂತಿ ಶೃಂಗಾರ ವಿಲಾಸಂ" ಮೊದಲಾದ ಮೂಲ ಸಂಸ್ಕೃತ ಪದ್ಯ ಕಾವ್ಯಗಳನ್ನು ರಚಿಸಿದ್ದಾರೆ.

ಕಾರ್ಕಳ ಮತ್ತು ಮೂಡಬಿದರೆಗಳು ಅನೇಕ ಜೈನ ವಿದ್ವಾಂಸರ ಜನ್ಮಭೂಮಿ. ಈಗ ಅವರು ದೇಶದ ನಾನಾ ಕಡೆಗಳಲ್ಲಿ ನೆಲಸಿ, ಅನೇಕ ವಿಧಗಳಲ್ಲಿ ಸಂಸ್ಕೃತಕ್ಕೆ ಸೇವೆಯನ್ನು ಸಲ್ಲಿಸುತ್ತಿದ್ದಾರೆ, ಅವರಲ್ಲಿ ನಿರ್ದೇಶಿಸಬಹುದಾದವರು ಬೆಂಗಳೂರಿನ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನ ಸಂಸ್ಕೃತ ಪಂಡಿತರಾಗಿ ಕೆಲಸಮಾಡುತ್ತಿರುವ ಸುಬ್ಬಯ್ಯಶಾಸ್ತ್ರಿಗಳು.

ಇದು ಈ ಜಿಲ್ಲೆಯ ಸಂಸ್ಕೃತ ವಿದ್ವಾಂಸರ ಮತ್ತು ಗ್ರಂಥಕರ್ತರ ಸಂಪೂರ್ಣ ಪಟ್ಟಿಯಲ್ಲ. ಮುದ್ರಣದ ಮತ್ತು ಪ್ರಕಟನದ ಮೂಲಕ, ಸಾರ್ವಜನಿಕ ಪ್ರಚಾರ ಪಡೆಯದ ಗ್ರಂಥಕರ್ತರ ನಾಮಧೇಯಗಳು, ಹಿಂದೆಯೂ ಅನೇಕವಿದ್ದುವು; ಈಗಲೂ ಇವೆ ಎನ್ನುವುದರಲ್ಲಿ ಸಂದೇಹವಿಲ್ಲ.

ಮೂಲ ಲೇಖಕರು : ಶ್ರೀ ಬನ್ನಂಜೆ ಗೋವಿಂದಾಚಾರ್ಯ

ಅನುವಾದಕರು : ಶ್ರೀ ಎಂ. ಎ. ಲಕ್ಷ್ಮೀತಾತಾಚಾರ್ಯ

# ಕನ್ನಡ ರಂಗಭೂಮಿ

## ಆಧುನಿಕ ಕಾಲ

ಕನ್ನಡದಲ್ಲಿ ದೊರೆತ ಮೊದಲ ನಾಟಕ 'ಮಿತ್ರಾವಿಂದಾ ಗೋವಿಂದ'. ಮೈಸೂರು ಮಹಾರಾಜ ಚಿಕ್ಕದೇವರಾಜರ ಆಸ್ಥಾನದಲ್ಲಿ ಪಂಡಿತರಾಗಿದ್ದ ಸಿಂಗರಾರ್ಯ ಎಂಬವರು 17ನೆಯ ಶತಮಾನದ ಕೊನೆಯ ಕಾಲುಭಾಗದಲ್ಲಿ ಈ ನಾಟಕವನ್ನು ಬರೆದರು. ನಿಜವಾಗಿ ನೋಡಿದರೆ ಶ್ರೀಹರ್ಷ ವಿರಚಿತ 'ರತ್ನಾವಲೀ' ಎಂಬ ಸಂಸ್ಕೃತ ನಾಟಕದ ಕನ್ನಡದ ರೂಪಾಂತರವೇ ಈ ನಾಟಕ. ಇದಕ್ಕಿಂತ ಮೊದಲಿನದೆನ್ನುವ ಒಂದೇ ಒಂದು ನಾಟಕವಾದರೂ ಕನ್ನಡದಲ್ಲಿ ಈಗ ಉಪಲಬ್ಧವಿಲ್ಲ. ಆದರೆ ಕನ್ನಡನಾಡಿನಲ್ಲಿ 17ನೆಯ ಶತಮಾನದ ಹಿಂದೆ ಅದರದೇ ಆದ ನಾಟಕವೇ ಇರಲಿಲ್ಲವೆಂಬ ಕಲ್ಪನೆ ತಪ್ಪಾದೀತು. ಕ್ರಿ. ಶ. 10ನೆಯ ಶತಮಾನದಿಂದಲೇ ಕನ್ನಡನಾಡಿನಲ್ಲಿ ರಂಗ-ಮನೋರಂಜನೆಯ ಪರಂಪರೆಯಿತ್ತೆಂದು ಇತ್ತೀಚಿನ ಸಂಶೋಧನೆಗಳು ಸ್ಥಿರಪಡಿಸಿವೆ. ಇಂಗ್ಲಿಷಿನ 'ಡ್ರಾಮಾ' ಶಬ್ದಕ್ಕೆ ಸರಿಹೊಂದುವ 'ನಾಟಕ' ಎಂಬ ಶಬ್ದ ನಮ್ಮ ಪ್ರಾಚೀನ ಗ್ರಂಥಗಳಲ್ಲಿ ಅಲ್ಲಲ್ಲಿ ಸಿಗುತ್ತದೆ. 'ನಾಟಕಶಾಲೆ' ಎಂಬ ಶಬ್ದವೂ ಪುರಾತನ ಕನ್ನಡ ಸಾಹಿತ್ಯ ಮತ್ತು ಶಾಸನಗಳಲ್ಲಿ ಅನೇಕ ಸಲ ಕಂಡುಬಂದಿದೆ. 'ನಾಟಕಶಾಲೆ' ಎಂಬ ಶಬ್ದ ಕಂಡು ಬರುವ ಶಾಸನಗಳಲ್ಲಿ ಅತಿ ಹಿಂದಿನದೆಂದು ಹೇಳಲಾದ ಶಾಸನವು ಕ್ರಿ.ಶ. 1045 ನೆಯ ಇಸವಿಗೆ ಸೇರಿದ ಶಿಲಾಶಾಸನ. ಧಾರವಾಡದ ಪಶ್ಚಿಮಕ್ಕೆ 9 ಮೈಲು ದೂರದಲ್ಲಿರುವ ಮುಳುಗುಂದ ಎಂಬ ಹಳ್ಳಿಯಲ್ಲಿ ಇಂದಿಗೂ ಈ ಶಾಸನ ಶತಮಾನಗಳ ಬಿಸಿಲು ಮಳೆ ಗಾಳಿಗಳನ್ನೆದುರಿಸಿ ಸುರಕ್ಷಿತವಾಗಿರುವುದನ್ನು ಕಾಣ ಬಹುದಾಗಿದೆ.

"ಪುರಾತನ ಕಾಲದಿಂದಲೂ ಕನ್ನಡ ನಾಡಿನಲ್ಲಿ ಒಂದು ವಿಧದ ನಾಟಕ ಪ್ರಚಾರದಲ್ಲಿತ್ತು ಮತ್ತು ಕ್ರಮೇಣ ಅದು ಎರಡು ಶಾಖೆಗಳಾಗಿ ಬೆಳೆಯಿತು. ಒಂದು ಶಾಖೆ ರಾಜಾಸ್ಥಾನಗಳ ಆಶ್ರಯದಲ್ಲಿದ್ದುಕೊಂಡು ವಿದ್ಯಾವಂತ ವರ್ಗದವರಿಗೂ ಇನ್ನೊಂದು ಶಾಖೆ ಸ್ವಂತ ನೆಲದಲ್ಲೇ ಹುಟ್ಟಿ ಜನಸಾಮಾನ್ಯರ ಬೆಂಬಲ ಪಡೆದು ಅವರಿಗೂ ಮನೋರಂಜನೆಯನ್ನು ನೀಡುತ್ತಿತ್ತು" ಎಂಬ ಈ ವಿಷಯಗಳಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿಲ್ಲ. ಎರಡನೆ ಶಾಖೆಯೇ ರಾಜಾಸ್ಥಾನದಲ್ಲಿ ಅಭಿವೃದ್ಧಿ ಹೊಂದಿದ ರಂಗಪದ್ಧತಿಗಿಂತ ತೀರಾ ಹಿಂದಿನದೆಂದೂ ಬಹುಶಃ ಅದು ಸಂಗೀತ ಮತ್ತು ಸಂಭಾಷಣೆಗಳೆರಡೂ ಸೇರಿದ್ದ ಕಾರ್ಯಕ್ರಮವಾಗಿದ್ದಿರಬೇಕೆಂದೂ ಭಾವಿಸಲಾಗಿದೆ. ಆದರೆ ರಾಜಾಸ್ಥಾನಗಳ 'ನಾಟಕ'ವು ಸಂಭಾಷಣೆಗಿಂತ ಹೆಚ್ಚಾಗಿ 'ಕಥಕ್ಕಳಿ' ಯಂತೆ 'ವಿಷಯ ನಿರೂಪಣಾ ನೃತ್ಯ'ವಾಗಿತ್ತು. ಕ್ರಿ.ಶ. 14ನೆಯ ಶತಮಾನದ ನಿಘಂಟುಕಾರನಾದ ಅಭಿನವ ಮಂಗರಾಜನು 'ನಾಟಕ' ಎಂಬ ಶಬ್ದಕ್ಕೆ ಕೊಟ್ಟ ನಿರ್ವಚನ ಅಥವಾ ಅರ್ಥ ಈ ಊಹೆಯನ್ನು ಸಮರ್ಥಿಸುತ್ತದಲ್ಲದೆ, ಪ್ರಾಚೀನ ಕವಿಗಳಾದ ಆದಿ ಪಂಪ, ಕವಿ ಕಾಮದೇವ ಮತ್ತು ರತ್ನಾಕರ ವರ್ಣಿಯಂಥವರು ಈ ಶಬ್ದಕ್ಕೆ ಕೊಟ್ಟ ವಿವರಣೆಗಳೂ ಈ ವ್ಯಾಖ್ಯಾನಕ್ಕೆ ಬೆಂಬಲ ನೀಡುತ್ತವೆ. ವಿಷಯ ನಿರೂಪಣಾ ನೃತ್ಯರೂಪಕಗಳಲ್ಲದೆ ರಾಜಾಸ್ಥಾನದ ರಂಗಗಳಲ್ಲಿ ಪ್ರಸಿದ್ಧ ಸಂಸ್ಕೃತ ನಾಟಕಗಳನ್ನೂ ಅವುಗಳ ಕನ್ನಡ ರೂಪಾಂತರಗಳನ್ನೂ ಆಡಲಾಗುತ್ತಿತ್ತು. ಈ ಎಲ್ಲ ವಿಷಯಗಳನ್ನೂ ಪರಿಗಣನೆಗೆ ತೆಗೆದುಕೊಂಡಾಗ ಕನ್ನಡನಾಡಿನಲ್ಲಿ ಕ್ರಿ.ಶ. 10ನೆಯ ಶತಮಾನದಿಂದಲೇ ತನ್ನದೇ ಆದ 'ರಂಗಭೂಮಿಯ ಪರಂಪರೆ' ಇತ್ತೆಂಬ ಸಂಗತಿ ನಿರ್ವಿವಾದವೆಂದು ಗೊತ್ತಾಗುತ್ತದೆ.

ನಮ್ಮ ದೇಶದಲ್ಲಿ ಬಹುಶಃ ಇತರ ಯಾವುದೇ ಪ್ರಾದೇಶಿಕ ರಂಗಭೂಮಿಗಿಂತ ಕನ್ನಡ ರಂಗ ಭೂಮಿಯು ಹಿಂದಿನದೆಂದು ಹೇಳಬಹುದಾದರೂ ಪ್ರಾಚೀನತೆಯೊಂದೇ ಕನ್ನಡ ರಂಗಭೂಮಿಯ ಹೆಮ್ಮೆಯಲ್ಲ. ಪಾಶ್ಚಾತ್ಯರ ಗಮನವನ್ನು ಅಷ್ಟು ಆಕರ್ಷಿಸಿದ ನಮ್ಮ ಜಾನಪದ ರಂಗ ಭೂಮಿಯು ತನ್ನ ವರ್ಣರಂಜಿತ 'ಯಕ್ಷಗಾನ', ಭಾಗವತರ ಆಟ, ದೊಡ್ಡಾಟ ಮತ್ತು ಸಣ್ಣಾಟಗಳಿಂದ ವೈವಿಧ್ಯಪೂರ್ಣ ವಾಗಿದೆ. ನಮ್ಮ ಕಂಪೆನಿ ನಾಟಕ ರಂಗಭೂಮಿಗೆ ಈಗ ಸುಮಾರು 75 ವರ್ಷಗಳಾದುವು. ಆದರೆ ಈ ಅತ್ಯಲ್ಪಕಾಲದಲ್ಲೇ ಅದು ಬಸವಪ್ಪಶಾಸ್ತ್ರಿ (ಅಭಿನವ ಕಾಳಿದಾಸ), ಕೆರೂರು ವಾಸುದೇವಾಚಾರ್ಯ, ಹುಯಿಲಗೋಳ ನಾರಾಯಣರಾವ್, ಗರುಡ ಮತ್ತು ಬಿ. ಪುಟ್ಟಸ್ವಾಮಯ್ಯ-ಮೊದಲಾದ ಶ್ರೇಷ್ಠ ನಾಟಕ ಕಾರರನ್ನು ಬೆಳಕಿಗೆ ತಂದಿತು. ಅದಲ್ಲದೆ ಅನೇಕ ಪ್ರತಿಭಾವಂತ ರಂಗ ಕಲಾಕಾರರನ್ನೂ ಅದು ಸೃಷ್ಟಿಸಿತು. ಈ ಕಲಾಕಾರರ ಭವ್ಯಪರಂಪರೆಯಲ್ಲಿ ಎ. ವಿ. ವರದಾಚಾರ್, ಮಹಮ್ಮದ್ ಪೀರ್, ಹಂದಿಗನೂರ್ ಮತ್ತು ಹಿರಣ್ಣಯ್ಯ ಅವರು ಸೇರಿದ್ದಾರೆ. ಶಿರಹಟ್ಟಿ ವೆಂಕೋಬರಾವ್ ಮತ್ತು ಗುಬ್ಬಿವೀರಣ್ಣರಂತಹ ಪ್ರಭಾವಿ ನಿರ್ದೇಶಕರನ್ನೂ ಅದು ನಾಡಿಗೆ ನೀಡಿತು. ಅನೇಕ ಸುಸಜ್ಜಿತ ನಾಟಕಮಂಡಲಿಗಳು ತಂತಮ್ಮ ನಿಷ್ಣಾತ ಕಲಾಕಾರರೊಂದಿಗೆ ಆಗಾಗ ದೇಶಾದ್ಯಂತ ಸುತ್ತಾಡಿ ಕರ್ನಾಟಕದಲ್ಲಿ ಮಾತ್ರವಲ್ಲ, ಇಡೀ ದಕ್ಷಿಣ ಭಾರತದಲ್ಲೇ ನಾಟಕಗಳ ಬಗೆಗೆ ಅಭಿರುಚಿಯನ್ನು ಹುಟ್ಟಿಸಿದವು.

ಕನ್ನಡದಲ್ಲಿ ಪ್ರಾರಂಭದ ನಾಟಕಸಾಹಿತ್ಯವು ಸಂಸ್ಕೃತ ಮತ್ತು ಇಂಗ್ಲಿಷ್‌ಗಳಂತಹ ಅನ್ಯಭಾಷೆ ಗಳಿಂದ ಬಂದಿವೆಯೆಂದರೆ, ಕನ್ನಡದ ಕೆಲವು ಮೂಲಕೃತಿಗಳನ್ನು ಕಡೆಗಣಿಸಲಾಗಿದೆಯೆಂದು ತಿಳಿಯಬಾರದು. ಶಾಂತಕವಿ (ಸಕ್ಕರಿ ಬಾಳಾಚಾರ್ಯ), ಶ್ರೀನಿವಾಸಕವಿ (ವೆಂಕಣ್ಣಾಚಾರ್ಯ ಅಗಳಗಟ್ಟಿ), ವೀರಪ್ಪಶಾಸ್ತ್ರಿ, ರಾಜಕವಿ ಶ್ರೀನಿವಾಸ ಅಯ್ಯಂಗಾರ್ ಮತ್ತು ಇತರರು ಕನ್ನಡದಲ್ಲೇ ಮೂಲ ನಾಟಕಗಳನ್ನು ರಚಿಸಿದರು. 1921ರೊಳಗಾಗಿಯೇ ಬೆಳ್ಳಾವೆ ನರಹರಿಶಾಸ್ತ್ರಿಗಳು "ಒಬ್ಬ ಅತಿ ಸಮೃದ್ಧ ನಾಟಕಕಾರರಾದರು" ಎಂದು ಇ.ಪಿ. ರೈಸ್ ಎಂಬ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ನಾರಾಯಣರಾವ್ ಹುಯಿಲಗೋಳ ಮತ್ತು ಗರುಡರು ಆಡುವುದಕ್ಕಾಗಿ ಸಾಮಾಜಿಕ ನಾಟಕಗಳನ್ನೂ ಬರೆದರು. ಕುಂದಗೋಳ ಹನುಮಂತ ರಾಯರು ಅವರ ಸಾಲಿಗೆ ಆ ಮೇಲೆ ಸೇರಿದರು. ಮೊದಲ ನಾಟಕಗಳ ಕಥಾವಸ್ತುಗಳನ್ನು ಹೆಚ್ಚಾಗಿ ರಾಮಾಯಣ, ಮಹಾಭಾರತ ಮತ್ತು ಭಾಗವತಗಳಂತಹ ಪುರಾತನ ರಮ್ಯ ಮಹಾಕಾವ್ಯಗಳಿಂದ ಆಯ್ದುಕೊಳ್ಳಲಾಗುತ್ತಿತ್ತು.

ತದನಂತರ, ಈ ಶತಮಾನದ ಮೂರನೆಯ ದಶಕದ ಹೊತ್ತಿಗೆ ಸಂತಕವಿಗಳಾದ ತುಕಾರಾಮ್, ಕಬೀರ್ ಮತ್ತು ಶರಣಬಸವ (ಗರುಡರಿಂದ), ಹೇಮರೆಡ್ಡಿ ಮಲ್ಲಮ್ಮ (ಬೆಳ್ಳಾವೆಯವರಿಂದ) ಮತ್ತು ಅಕ್ಕಮಹಾದೇವಿ (ಬಿ. ಪುಟ್ಟಸ್ವಾಮಯ್ಯನವರಿಂದ) ಮುಂತಾದವರ ಜೀವನಕಥೆಗಳ ಮೇಲೆ ಆಧಾರಿತವಾದ ನಾಟಕಗಳು ರಂಗದ ಮೇಲೆ ಬರತೊಡಗಿದವು. ರಾಷ್ಟ್ರೀಯತೆಯ ಪುನರುದಯದ ವಾತಾವರಣದಲ್ಲಿ ಎಚ್ಚಮನಾಯಕ, ಟಿಪ್ಪು ಸುಲ್ತಾನ್, ನರಗುಂದ ಬಾಬಾಸಾಹೇಬ್ ಮತ್ತು ಕಿತ್ತೂರು ಚೆನ್ನಮ್ಮ ಮುಂತಾದ ವೀರರ – ವೀರ ರಮಣಿಯರ —ಜೀವನ ಕಥನಗಳ ಮೇಲೆ ಆಧಾರಿತವಾದ ನಾಟಕಗಳು ಬೆಳಕಿಗೆ ಬಂದವು. ಅಪರೂಪವಾಗಿ 'ಶಿಕ್ಷಣ ಸಂಭ್ರಮ' ಅಥವಾ 'ಸಂಸಾರನೌಕ'ಗಳಂತಹ ಸಾಮಾಜಿಕ ನಾಟಕಗಳೂ ಬೆಳಕಿಗೆ ಬಂದವು. ಆದರೆ ರಂಗಭೂಮಿಯ ತುಂಬ ದೇವದೇವಿಯರ, ರಾಕ್ಷಸರ ಮತ್ತು ಯಕ್ಷಯಕ್ಷಿಣಿಯರ ಪ್ರಭಾವವೇ ಹೆಚ್ಚಾಗಿತ್ತು. ನಾಟಕಗಳ ಭಾಷೆ, ಪ್ರೌಢವೂ ಪಂಡಿತಮಾನ್ಯವೂ ಕೃತಕವೂ ಆಗಿತ್ತು. ಅತಿಯಾದ ರಂಗಸಜ್ಜಿಕೆ, ವೈಭವಪೂರ್ಣವಾದ ವರ್ಣರಂಜಿತ ಉಡುಗೆ ತೊಡುಗೆಗಳಿಂದಾಗಿ ನಾಟಕಗಳ ಪ್ರದರ್ಶನ ಕೀಳುಮಟ್ಟದ್ದಾಗಿತ್ತು. ನಿಜವಾದ ಪಾತ್ರನಿರ್ವಹಣೆಯ ಸ್ಥಾನವನ್ನು ಮೂಕಾಭಿನಯ, ತಮಾಷೆಗಳು ಆಕ್ರಮಿಸಿದವು. ವರದಾಚಾರ್ಯರಂತಹ ಪ್ರತಿಭಾಸಂಪನ್ನರು ಬಳಸಿದಾಗ ಹೊರತು,

ಸಾಧಾರಣವಾಗಿ ರಂಗಭೂಮಿಯು ಸಂಗೀತ ಗೊಂದಲವಾಗಿ ಪರಿಣಮಿಸುತ್ತಿತ್ತು. ನಾಟಕಗಳು ಸುದೀರ್ಘವೂ ನಿಧಾನ ಚಲನೆಯುಳ್ಳವೂ ಆಗಿದ್ದವು. ಮುಸ್ಸಂಜೆಯಿಂದ ಮುಂಜಾವದ ವರೆಗಿನ ಕಾಲಯಾಪನೆ ಅವರು ಮಾಡಬೇಕಾಗಿತ್ತು ಎಂಬುದು ಇದಕ್ಕೆ ಒಂದು ಕಾರಣ.

ಈ ಪರಿಸ್ಥಿತಿಯು ಹೊಸತಾಗಿ ವಿದ್ಯಾವಂತರಾದ ಬುದ್ಧಿಜೀವಿಗಳಲ್ಲಿ ಒಂದು ವಿಧದ ಸ್ವಾಭಾವಿಕ ಪ್ರತಿಕ್ರಿಯೆಯನ್ನು ಮೂಡಿಸಿತು. ವಿಚಾರಪೂರ್ಣ ನಾಟಕ ಹಾಗೂ ಅವುಗಳ ಅರ್ಥವಂತ ಪ್ರದರ್ಶನವನ್ನು ಅವರು ಬಯಸಿದರು—ಎಂತಲೇ, ಕಂಪೆನಿ ರಂಗಭೂಮಿಯು ಸ್ಥಾಪಿಸಿದ ವ್ಯಾಪ್ತಿಯಿಂದಲೇ ಹೊರ ಬಂದು ಅದರ ಜಾಗದಲ್ಲಿ ಏನಾದರೂ ಹೊಸತನ್ನು ಬಳಕೆಗೆ ತರುವ ಒಂದು ಪ್ರವೃತ್ತಿ ಬೆಳೆಯತೊಡಗಿತು. ಈ ಕಾರಣದಿಂದ ಈ ಶತಮಾನದ ಇಪ್ಪತ್ತರಿಂದ ಮೂವತ್ತರ ಸುಮಾರಿನಲ್ಲಿ ಒಂದು ಹೊಸ ಕ್ರಾಂತಿಯುಗವೇ ಪ್ರಾರಂಭವಾಯಿತು. ಜನಪ್ರಿಯ ನಾಟಕಕಾರರಾದ ಕೈಲಾಸಂ, ಶ್ರೀರಂಗ ಮತ್ತು ಕಾರಂತರು ಕ್ರಮವಾಗಿ ಮೈಸೂರು, ಉತ್ತರ ಕರ್ಣಾಟಕ ಮತ್ತು ದಕ್ಷಿಣ ಕನ್ನಡಗಳಲ್ಲಿ ಈ ಕ್ರಾಂತಿಗೆ ಕಾರಣಕರ್ತರಾದರು.

ಹೊಸ ತಂತ್ರಗಳನ್ನೊಳಗೊಂಡ ನವೀನ ನಾಟಕಸಾಹಿತ್ಯ ರಚನೆ ಪ್ರಾರಂಭವಾಯಿತು. ಈಗಾಗಲೇ ಜನರ ಅಭಿರುಚಿ ಬದಲಾವಣೆಯಾಗಿತ್ತು. ಕಲಾವಿಲಾಸಿ ತಂಡಗಳು ನಾಟಕರಂಗವನ್ನು ಪ್ರವೇಶಿಸ ತೊಡಗಿದವು. ಇದರ ಪ್ರಭಾವ ವೃತ್ತಿಪರ ನಾಟಕಕಾರನ ಮೇಲೆ ಬಿದ್ದಿತು—ಎಂತಲೇ, ಆತ ಕಥಾವಸ್ತು ಮತ್ತು ಪ್ರದರ್ಶದ ಕ್ರಮಗಳಲ್ಲಿ ಬದಲಾವಣೆಗಳನ್ನು ತಂದು ತರಾತುರಿಯ ರಾಜಿ ಹೊಂದಾಣಿಕೆಗಳನ್ನು ಮಾಡಲೇಬೇಕಾಯಿತು. ಹಲಗೇರಿ ಕಂಪೆನಿಯು ಆಗಲೇ ಸಾಮಾಜಿಕನಾಟಕ ಪ್ರದರ್ಶನವನ್ನು ಪ್ರಾರಂಭಿಸಿಬಿಟ್ಟಿತ್ತು. 'ಪಶ್ಚಾತ್ತಾಪ' ಮತ್ತು 'ಸತ್ಯಸಂಕಲ್ಪ'ಗಳಂತಹ ಗರುಡರ ನಾಟಕಗಳು ಚಾರಿತ್ರಿಕ ವಸ್ತುಗಳನ್ನೊಳಗೊಂಡಿದ್ದರೂ ಸತ್ವ ಮತ್ತು ಪರಿಣಾಮಗಳಲ್ಲಿ ಸಾಮಾಜಿಕವೇ ಆಗಿದ್ದವು. ಪ್ರಸಿದ್ಧ ನಟ ಮಹಮ್ಮದ್ ಪೀರ್ ಅವರು, ಸಿಂಹರ ಸಾಮಾಜಿಕ ನಾಟಕ 'ಸಂಸಾರನೌಕ'ದ ಮೂಲಕ ರಂಗಭೂಮಿಯ ಆಕರ್ಷಣೆಯಾದರು. ತದನಂತರ ಕೆ. ಹಿರಣ್ಣಯ್ಯನವರು 'ದೇವದಾಸಿ' ಮತ್ತು 'ಮಕ್ಮಲ್‌ಟೋಪಿ'ಗಳಂತಹ ವಿಡಂಬನಾತ್ಮಕ ನಾಟಕಪ್ರದರ್ಶನಗಳ ಮೂಲಕ ಬಹಳ ಯಶಸ್ವಿಯಾದರು. ಪೌರಾಣಿಕ ನಾಟಕಗಳ ಪ್ರದರ್ಶನದಲ್ಲಿ ಭಾರೀ ಕೀರ್ತಿಯನ್ನು ಪಡೆದ ಗುಬ್ಬಿ ಕಂಪೆನಿಯು ಕೂಡ, 'ನಿಶಾಮಹಿಮೆ' 'ಸಾಹುಕಾರ' ಮತ್ತು 'ಕಾಲಚಕ್ರ'ಗಳಂತಹ ಸಾಮಾಜಿಕ ನಾಟಕಗಳ ಪ್ರದರ್ಶನವನ್ನು ಪ್ರಾರಂಭಿಸಿತು.

ಕಲಾವಿಲಾಸಿ ರಂಗಭೂಮಿಯೂ ಬಲಯುತವಾಗಿ ಬೆಳೆಯತೊಡಗಿತ್ತು. ಮನೋರಂಜನೆ ಒಂದೇ ರಂಗಭೂಮಿಯ ಉದ್ದೇಶವಾಗಿ ಉಳಿಯದಂತೆ ನೋಡಿಕೊಳ್ಳುವುದು ಅದರ ಗುರಿಯಾಗಿತ್ತು. ಶಿಕ್ಷಣ ನೀಡುವುದಲ್ಲದೆ ಸಾಮಾಜಿಕ ಕೆಡುಕುಗಳಾದ ಅಂಧವಿಶ್ವಾಸ, ನಿರಕ್ಷರತೆ, ಜಾತೀಯತೆ, ಅಸಮವಿವಾಹ, ವರದಕ್ಷಿಣೆ, ಕುಡುಕತನ—ಮುಂತಾದವುಗಳನ್ನು ಸಮರ್ಥವಾಗಿ ಎದುರಿಸುವುದೂ ಅದರ ಉದ್ದೇಶವಾಗಿತ್ತು.

ಹೊಸ ನಾಟಕಗಳು ಮುನ್ನಡೆದು ವಿಭಿನ್ನಮಾರ್ಗಗಳಲ್ಲಿ ಹರಿಯತೊಡಗಿದವು. ಸಾಂಪ್ರದಾಯಿಕ ಕತೆಗಳ ಆಧಾರದ ಮೇಲೆ ಬರೆದ ನಾಟಕಗಳು, ಪದ್ಯ ನಾಟಕಗಳು, ಸಂಗೀತ ರಂಗ ವಿಭ್ರಮ ಮತ್ತು ಗೀತನಾಟಕಗಳು (ಅಪೆರಾಗಳು) ಮುಂತಾದವುಗಳ ಪ್ರದರ್ಶನಗಳು ಬರತೊಡಗಿದವು. ಅನಂತರ ಚರ್ಚಾ ನಾಟಕ, ಆಶುನಾಟಕ ಮತ್ತು ರೇಡಿಯೋ ನಾಟಕಗಳು ಬಂದವು. ಪೌರಾಣಿಕ ಮತ್ತು ಐತಿಹಾಸಿಕ ವಸ್ತುಗಳ ಮೇಲೆ ಆಧಾರಿತವಾದ ನಾಟಕಗಳನ್ನು ಆಗಾಗ ಪ್ರದರ್ಶಿಸುತ್ತಿದ್ದರಾದರೂ, ಈ ಅವಧಿಯಲ್ಲಿ ಸಾಮಾಜಿಕ ನಾಟಕಗಳೇ ಹೆಚ್ಚು ಪ್ರಸಿದ್ಧಿಯನ್ನು ಪಡೆದವು. ಉತ್ತರಕರ್ಣಾಟಕದಲ್ಲಿ ಇದನ್ನು

ಪ್ರಾರಂಭಿಸಿದವರು ಹುಯಿಲಗೋಳ ನಾರಾಯಣರಾಯರು. ಮೈಸೂರಲ್ಲಿ ಅದೇ ಕೆಲಸವನ್ನು ಕೈಲಾಸಂ ಅವರು ಮಾಡಿದರು. ಈ ಕ್ರಾಂತಿಯ ನಾಯಕತ್ವ ವಹಿಸಿದ್ದ ಕೈಲಾಸಂ, ಶ್ರೀರಂಗ ಮತ್ತು ಕಾರಂತರು—ಈ ಪರಿಣತತ್ರಯರು—ಮೂರು ದಶಕಗಳ ಕಾಲ 'ಕಟಕಿ' ವಿಡಂಬನೆಗಳನ್ನು ತೀವ್ರ ಸಾಧನಗಳನ್ನಾಗಿ ಬಳಸಿಕೊಂಡು ನಿರ್ಭಯುವಾಗಿ ನಿರಂತರವಾಗಿ ಬರೆದರು. ವಸ್ತುಗಳ ದೃಷ್ಟಿಯಿಂದ ನೋಡಿದರೆ ಕಾರಂತರು ಹೊಸ ಹೊಸ ಪ್ರಯೋಗಗಳನ್ನು ಮಾಡುತ್ತಲೇ ಇದ್ದರು. ಹೆಚ್ಚಾಗಿ ಮಧ್ಯಮ ವರ್ಗದ ಜೀವನವನ್ನು ವಸ್ತುವಾಗಿ ಆಯ್ಕೆಮಾಡುತ್ತಿದ್ದ ಇವರು ಸಾಮಾಜಿಕ ಜೀವನದ ಹೃದಯವನ್ನು ಸೀಳಿ ತೆರೆದಿಟ್ಟು, ಇದ್ದೆಲ್ಲಾ ತೋರಿಕೆ ಕಪಟಗಳನ್ನೂ ಬಯಲು ಮಾಡತೊಡಗಿದರು. ಅ. ನ. ಕೃಷ್ಣರಾಯರೂ ಈ ಶಸ್ತ್ರಕ್ರಿಯೆಗೆ ಚಾಕು ಹಿಡಿದು ಸನ್ನದ್ಧರಾಗಿ ನಿಂತರು. 'ಉದ್ಧಾರ' ಮತ್ತು 'ಸಾಯೋ ಆಟ' ಗಳಂತಹ ನಾಟಕಗಳ ತೀಕ್ಷ್ಣ ವಿಡಂಬನೆಯ ಮೂಲಕ ದ. ರಾ. ಬೇಂದ್ರೆಯವರು ಉನ್ನತವಾದ ವೈಯಕ್ತಿಕ ಪ್ರತಿಭೆಯನ್ನು ಒಡಗೂಡಿಸಿದರು. ವಿ.ಕೆ. ಗೋಕಾಕರು 'ವಿಮರ್ಶಕ ವೈದ್ಯ' ನಾಟಕದಲ್ಲಿ ಮೊನಚಾದ ಹಾಸ್ಯದ ಚಿತ್ರಣವನ್ನು ನೀಡಿ, ಆ ಮೇಲೆ 'ಜನನಾಯಕ', 'ಯುಗಾಂತರ'ಗಳಂತಹ ಹೆಚ್ಚು ಸಫಲ ಸೈದ್ಧಾಂತಿಕ ನಾಟಕಗಳನ್ನು ಬರೆಯುವುದರತ್ತ ಗಮನ ಹರಿಸಿದರು. ಹಿರಿಯ ಲೇಖಕರಾದ ಶ್ರೀಯುತ ಆರ್.ಎಸ್. ಮುಗಳಿ, ಕೃಷ್ಣಕುಮಾರ ಕಲ್ಲೂರ್, ಎಲ್.ಜೆ. ಬೇಂದ್ರೆ ಮತ್ತು ಎನ್.ಕೆ. ಕುಲಕರ್ಣಿಯವರುಗಳು ಉತ್ತರ ಕರ್ಣಾಟಕದ ಸಾಮಾಜಿಕ ನಾಟಕಗಳಿಗೆ ಸಾಕಷ್ಟು ವೈವಿಧ್ಯವನ್ನು ನೀಡಿದರು. ಸದಾ ಹೊಸತನ್ನೇ ನೀಡುತ್ತಿರುವ ಕೈಲಾಸಂ ಪರಂಪರೆಯನ್ನು ಜಿ.ಪಿ. ರಾಜರತ್ನಂ ಮುಂದುವರಿಸಿದರು. ಪರ್ವತ ವಾಣಿಯವರು ಈ ಪರಂಪರೆಯನ್ನು ಎತ್ತಿಹಿಡಿದು ಅನೇಕ ನಾಟಕಗಳನ್ನು ಬರೆದರು. 'ಕ್ಷೀರ ಸಾಗರ' ಮತ್ತು ಕೈವಾರ ರಾಜಾರಾಯರು ಮನೋರಂಜಕ ಗೃಹಜೀವನದ ಚಿತ್ರಣಗಳನ್ನು ನೀಡಿದರು. ಏಕಾಂತ ನಾಟಕಗಳೂ ತಮ್ಮದೇ ಆದ ಸ್ಥಾನ ಗಳಿಸತೊಡಗಿದವು. ಕೆ.ಟಿ. ಪುರಾಣಿಕ, ಎಂ.ಎಸ್. ಬಾಬು, ಕುಮಾರ ವೆಂಕಣ್ಣ, ಕೆ. ಗುಂಡಣ್ಣ, ಸದಾಶಿವಯ್ಯ ಮತ್ತು ದಾಶರಥಿ ದೀಕ್ಷಿತ್ ಅವರೂ ಸೇರಿದಂತೆ ಅನೇಕರು ಹಿರಿಯ ಕಿರಿಯರೆನ್ನದೆ ಹೊಸ ಸಾಹಿತ್ಯದ ಮೊತ್ತಕ್ಕೆ ತಂತಮ್ಮ ಕೊಡುಗೆಯನ್ನು ನೀಡಿದರು.

ಹೀಗೆ, ಸಾಮಾಜಿಕನಾಟಕಗಳಿಂದಾಗಿ ಕನ್ನಡ ನಾಟಕಸಾಹಿತ್ಯ ಗಾತ್ರದಲ್ಲಿ ಸಾಕಷ್ಟು ಬೆಳೆಯಿತು. ಆದರೆ ಶ್ರೀ ಕೆ. ವಿ. ಪುಟ್ಟಪ್ಪ ಮತ್ತು ಅವರ ಹಿರಿಯ ಸಮಕಾಲೀನರಾದ ಶ್ರೀಯುತರು ಬಿ, ಎಮ್. ಶ್ರೀಕಂಠಯ್ಯ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಡಿ.ವಿ. ಗುಂಡಪ್ಪ ಮತ್ತು ಎಂ.ಆರ್. ಶ್ರೀನಿವಾಸ ಮೂರ್ತಿ ಮುಂತಾದವರು ರಚಿಸಿದ ಅತ್ಯುತ್ತಮವಾದ ಸರಳರಗಳೆಯ (Blank-verse) ಪದ್ಯನಾಟಕಗಳು ಇಲ್ಲದಿರುತ್ತಿದ್ದರೆ, ಸತ್ವ ಮತ್ತು ವೈವಿಧ್ಯದಲ್ಲಿ ಕನ್ನಡ ನಾಟಕಸಾಹಿತ್ಯ ಬಡಕಲಾಗುತ್ತಿತ್ತು. "ಪಾತ್ರ, ಘಟನೆ ಮತ್ತು ಪರಿಸರ–ಇವುಗಳ ಬಗೆಗೆ ಷೇಕ್ಸ್‌ಪಿಯರನ ಗ್ರಹಣಶಕ್ತಿಯನ್ನು ಪಡೆದುಕೊಂಡಿದ್ದ" ಆ ಅದ್ಭುತ ಪ್ರತಿಭಾಶಾಲಿ 'ಸಂಸ'ರ ಐತಿಹಾಸಿಕ ನಾಟಕಗಳು, ಪು.ತಿ. ನರಸಿಂಹಾಚಾರ್ ಮತ್ತು ಕೀರ್ತಿನಾಥ ಕುರ್ತುಕೋಟಿ ಇವರುಗಳ ಭವ್ಯ ಸಂಗೀತ ನಾಟಕಗಳು, 'ಅಜ್ಜಂಪುರ' ಅವರ ಆಕರ್ಷಕ ಜಾನಪದ ನಾಟಕಗಳು, ಮಾಥ್ಯೂ ಆರ್ನಾಲ್ಡ್, ಮೋಲಿಯೇರ್, ಇಬ್ಸೆನ್ ಮತ್ತು ಷೇಕ್ಸ್‌ಪಿಯರ್ ಇವರ ಕೃತಿಗಳ ಆಧಾರದ ಮೇಲೆ ಶ್ರೀಗಳಾದ ವಿ. ಸೀತಾರಾಮಯ್ಯ, ಎ.ಎನ್. ಮೂರ್ತಿರಾವ್, ಎಸ್. ಜಿ. ಶಾಸ್ತ್ರಿ ಮತ್ತು 'ಪರ್ವತವಾಣಿ'–ಇವರುಗಳು ಬರೆದ ಮನಸೆಳೆಯುವ ನಾಟಕಗಳು, ನಾ. ಕಸ್ತೂರಿ ಮತ್ತು ಅವರ ಪ್ರತಿಭಾವಂತ ಸಂಗಾತಿಗಳು ನೀಡಿದ ಆಶುನಾಟಕಗಳು, ಶ್ರೀ ಕಾರಂತರ ಪಳಗಿದ ಕೈಯಲ್ಲಿ ತಿದ್ದಲ್ಪಟ್ಟ ಯಕ್ಷಗಾನ ನಾಟಕ, ಛಾಯಾನಾಟಕ ಮತ್ತು ಮೂಕ ನಾಟಕಗಳು, ಕೌಜಲಗಿ ಹನುಮಂತರಾವ್ 'ಕ್ಷೀರ ಸಾಗರ' ಮತ್ತು ಕೃಷ್ಣಕುಮಾರ್ ಅವರ ಏಕಪಾತ್ರಾಭಿನಯ ನಾಟಕಗಳು, ಶಿವಸ್ವಾಮಿ, ರಂಗನಾಥ, 'ಚದುರಂಗ', 'ಬೀಚಿ', 'ಬೆಟಗೇರಿ ಮತ್ತು ರಾಮಚಂದ್ರ ಶರ್ಮ–ಇವರ ರೇಡಿಯೋ ನಾಟಕಗಳು, ಪುಟ್ಟಪ್ಪ, ಹೊಯ್ಸಳ ಮತ್ತು ಇತರರು ರಚಿಸಿದ ಮಕ್ಕಳ ನಾಟಕಗಳು—ಇವೆಲ್ಲ ಸಮಕಾಲೀನ

ನಾಟಕವನ್ನು ಈಗಿನ ಸ್ಥಿತಿಗೆ ತರುವುದರಲ್ಲಿ ಸಹಾಯಕವಾಗಿವೆ. ಎಲ್.ಜಿ. ಬೇಂದ್ರೆ, ವಿ.ಎಮ್. ಇನಾಂದಾರ್, ಜಿ.ಜಿ. ಹೆಗ್ಡೆ ಮತ್ತು ಪರ್ವತವಾಣಿ–ಇವರುಗಳು ಕನ್ನಡದ ಪ್ರಮುಖ ನಾಟಕಕಾರರಾಗುವ ಭರವಸೆಯನ್ನು ಮೂಡಿಸಿದ್ದಾರೆ.

ಇಂತಹ ರಂಗಭೂಮಿಯ ಭವ್ಯಪರಂಪರೆಯು ನೆರೆಹೊರೆಯ ಪ್ರದೇಶಗಳ ರಂಗಭೂಮಿಯ ಮೇಲೆ ಪ್ರಭಾವ ಬೀರದೆ ಇರಲು ಸಾಧ್ಯವೇ ಇಲ್ಲ. ಮಹಾರಾಷ್ಟ್ರ, ಆಂಧ್ರ ಮತ್ತು ತಮಿಳುನಾಡುಗಳ ರಂಗಭೂಮಿಯ ಮೇಲೆ ಕನ್ನಡ ರಂಗಭೂಮಿಯು ಗಮನಾರ್ಹವಾಗಿ ಪ್ರಭಾವ ಬೀರಿತು.

ಮರಾಠೀ ಕಂಪೆನಿ ರಂಗಭೂಮಿಯು ಕನ್ನಡ ಜಾನಪದ ರಂಗಭೂಮಿಯ ಪ್ರಭಾವದಿಂದ ಅಸ್ತಿತ್ವಕ್ಕೆ ಬಂತು ಎಂಬುದನ್ನು ಎ.ವಿ. ಕುಲಕರ್ಣಿ, ಡಾ॥ ಯಾಜ್ಞಿಕ್, ವಿ.ಪಿ. ದಾಂಡೇಕರ್, ಮತ್ತು ಮಾಮಾ ವಾರೇರ್‌ಕರ್–ಇವರಂತಹ ಮಹಾರಾಷ್ಟ್ರದ ವಿಮರ್ಶಕರು ಒಪ್ಪಿಕೊಂಡಿದ್ದಾರೆ. ಮರಾಠೀ 'ತಮಾಶಾ'ವು ಹಿಂದಿನ ಕನ್ನಡ ದಾಸರಾಟದ ಇನ್ನೊಂದು ರೂಪ, ಅಷ್ಟೇ. ಉತ್ತರ ಕನ್ನಡ ಜಿಲ್ಲೆಯ 'ಕರ್ಕಿ ಯಕ್ಷಗಾನ ಮಂಡಳಿ'ಯು 1842 ರಲ್ಲಿ ಅಲ್ಲಿಯ ರಾಜರಾದ ಶ್ರೀಮಂತ ಅಪ್ಪಾಸಾಹೇಬ್ ಪಟವರ್ಧನ್ ಅವರ ಆಮಂತ್ರಣದ ಮೇರೆಗೆ ಸಾಂಗ್ಲಿಗೆ ಭೇಟಿಕೊಟ್ಟಿತು. ಯಕ್ಷಗಾನವನ್ನು ಅಲ್ಲಿಯ ರಾಜರು ಎಷ್ಟು ಮೆಚ್ಚಿದರೆಂದರೆ, ಕನ್ನಡ ಯಕ್ಷಗಾನದ ಧಾಟಿಯಲ್ಲಿ ಮರಾಠಿ ನಾಟಕಗಳ ಪ್ರದರ್ಶನ ನಡೆಸುವುದು ಯುಕ್ತವೆಂದು ಅವರು ಭಾವಿಸಿದರು. ಯಕ್ಷಗಾನದ ನಮೂನೆಯ ನಾಟಕಗಳನ್ನು ಮರಾಠಿಯಲ್ಲಿ ಬರೆಯುವಂತೆ ಅವರು ತಮ್ಮ ಪ್ರತಿಭಾವಂತ ಕಾರಕೂನ ವಿಷ್ಣುಪಂತ ಭಾವೆಯವರಿಗೆ ಹೇಳಿದರು. ರಾಜರ ಆಜ್ಞಾನುಸಾರವಾಗಿ ಭಾವೆಯವರು 1845 ರಲ್ಲಿ ಬರೆದ 'ಸೀತಾ ಸ್ವಯಂವರ' ಪ್ರಥಮ ಮರಾಠಿ ನಾಟಕವಾಯಿತು. ಅದರ ಯಶಸ್ಸಿನಿಂದ ಉತ್ತೇಜಿತರಾದ ಭಾವೆಯವರು ಇನ್ನೂ ಅನೇಕ ಮರಾಠಿ ನಾಟಕಗಳನ್ನು ಬರೆದರು. ಪ್ರಸಿದ್ಧ 'ಸಾಂಗ್ಲೀಕರ ನಾಟಕ ವೃಂದ'ಗಳನ್ನು ಅವರು ಸಂಘಟಿಸಿದರಲ್ಲದೆ, ಮರಾಠೀ ಕಂಪೆನಿ ರಂಗಭೂಮಿಯ ಕಾರ್ಯವನ್ನು ಆರಂಭಿಸಿದರು.

ತೂರಮುರಿ ಶೇಷಗಿರಿರಾಯರು ಮಾಡಿದ ಕಾಳಿದಾಸನ 'ಶಾಕುಂತಲ'ದ ಪ್ರಥಮ ಕನ್ನಡ ಅನುವಾದವು ಅದೇ ನಾಟಕದ ಮರಾಠೀ ಭಾಷಾಂತರ ಮಾಡಿದ ಅಣ್ಣಾಸಾಹೇಬ್ ಕಿರ್ಲೋಸ್ಕರ್ ಅವರನ್ನು ಪ್ರೇರೇಪಿಸಿತೆಂದ ಹೇಳಲಾಗಿದೆ. ತೂರಮುರಿ ಮತ್ತು ಕಿರ್ಲೋಸ್ಕರ್ ಇಬ್ಬರೂ ಬೆಳಗಾಂ ಜಿಲ್ಲೆಯ ಗುರ್ಲಹೊಸೂರು ಗ್ರಾಮಕ್ಕೆ ಸೇರಿದವರಾಗಿದ್ದು, ಪರಸ್ಪರ ಮಿತ್ರರೂ ಆಗಿದ್ದರು. ತೂರಮುರಿಯವರು 1869 ರಲ್ಲೇ ಈ ನಾಟಕದ ಭಾಷಾಂತರವನ್ನು ಮಾಡಿದ್ದರೂ ಅದನ್ನು ಕೂಡಲೇ ಪ್ರಕಟಿಸುವ ಅಥವಾ ಪ್ರದರ್ಶಿಸುವ ಗೋಜಿಗೇ ಅವರು ಹೋಗಿರಲಿಲ್ಲ. ಸುಮಾರು ಒಂದು ದಶಕದ ಅನಂತರ ಕಿರ್ಲೋಸ್ಕರ್ ಅವರು 'ಶಾಕುಂತಲ'ದ ಮರಾಠೀ ಅನುವಾದವನ್ನು ಮಾಡಿದರಲ್ಲದೆ, ಕೂಡಲೇ ಅದನ್ನು ರಂಗಭೂಮಿಯ ಮೇಲೆ ಪ್ರದರ್ಶನಕ್ಕೆ ತಂದರು. ಇವೆರಡು ಅನುವಾದವನ್ನೂ ಹೋಲಿಸಿ ನೋಡಿದಾಗ, ಕಿರ್ಲೋಸ್ಕರ್ ಅವರ ಮೇಲೆ ಆದ ತೂರಮುರಿಯವರ ಪ್ರಭಾವ ಖಚಿತವಾಗುತ್ತದೆ. ಕನ್ನಡ ಜಾನಪದಗೀತಗಳ ಲಯ, ಜಾವಳಿ ಮತ್ತು ದಾಸರ ಪದ ಇವುಗಳು ಆದಿಕಾಲದ ಮರಾಠೀ ರಂಗಭೂಮಿಯ ಸಂಗೀತವನ್ನು ರೂಪಿಸುವುದರಲ್ಲಿ ಸಹಕರಿಸಿದವು. ಅನಂತರದ ವರ್ಷಗಳಲ್ಲಿ ಸಾಂಗ್ಲೀಕರ್, ಕಿರ್ಲೋಸ್ಕರ್ ಮತ್ತು ಬಾಲಗಂಧರ್ವ ಇವರ ನಾಟಕಮಂಡಳಿಗಳು ಉತ್ತರ ಕರ್ಣಾಟಕಕ್ಕೆ ಆಗಾಗ ಭೇಟಿಕೊಟ್ಟು ಹಣ ಮತ್ತು ಕೀರ್ತಿಗಳೆರಡನ್ನೂ ಸಂಪಾದಿಸಿದವು. ಗದುಗಿನ ಗರುಡ ಸದಾಶಿವರಾಯರು ಮಹಾರಾಷ್ಟ್ರದ ಅನೇಕ ಪ್ರಮುಖ ಪಟ್ಟಣಗಳಿಗೆ ಭೇಟಿಯಿತ್ತು ತಮ್ಮ ನಾಟಕಗಳನ್ನು ಪ್ರದರ್ಶಿಸಿದರು.

ಆಂಧ್ರದ ಡಾ॥ ಸಿ. ನಾರಾಯಣರಾಯರಂತಹ ವಿದ್ವಾಂಸರು ಆಂಧ್ರ ರಂಗಭೂಮಿಯ ಮೇಲೆ ಕನ್ನಡ ರಂಗಭೂಮಿಯ ಪ್ರಭಾವ ಸಾಕಷ್ಟು ಆಗಿತ್ತು—ಎಂಬ ಸಂಗತಿಯನ್ನು ಒಪ್ಪಲು ಹಿಂದೆ ಮುಂದೆ ನೋಡಲಿಲ್ಲ. ಆಂಧ್ರಕ್ಕೆ ಬಂದ ಮೊದಲ ವೃತ್ತಿಪರ ನಾಟಕತಂಡವು 1884ರಲ್ಲಿ ಧಾರವಾಡದಿಂದ ಬಂದಿತು ಎಂದು ಅವರು ಹೇಳುತ್ತಾರೆ. ಆಂಧ್ರದ ಮುಖ್ಯಪಟ್ಟಣಗಳಲ್ಲಿ ಆ ತಂಡ ಮನಮುಟ್ಟುವ ನಾಟಕಗಳನ್ನು ಪ್ರದರ್ಶಿಸಿತು. ಈ ಪ್ರದರ್ಶನಗಳಿಂದ ಪ್ರಭಾವಿತರಾದ 'ತೆಲುಗು ನಾಟಕ ಪಿತಾಮಹ' ರೆನಿಸಿದ ಡಿ. ಕೃಷ್ಣಮಾಚಾರ್ಲು ಅವರು ಕನ್ನಡದಲ್ಲಿ 'ಸ್ವಪ್ನ ಅನಿರುದ್ಧ' ಎಂಬ ನಾಟಕವನ್ನು ಬರೆದರು. ಕನ್ನಡವು ನಾಟಕಗಳನ್ನು ಬರೆಯಲೆಂದೇ ಇರುವ ಭಾಷೆಯೆಂದು ಅವರ ಗೆಳೆಯರು ಹೇಳುತ್ತಿದ್ದರೆಂದು ಅವರು ಹೇಳುತ್ತಾರೆ. ಅನಂತರದ ವರ್ಷಗಳಲ್ಲಿ ಕನ್ನಡ ಮತ್ತು ತೆಲುಗು ನಾಟಕ ತಂಡಗಳು ಪರಸ್ಪರವಾಗಿ ಎರಡೂ ಭಾಷಾ ಪ್ರದೇಶಗಳಿಗೆ ಭೇಟಿಯಿತ್ತು, ನಿರಾತಂಕವಾಗಿ ಪ್ರದರ್ಶನಗಳನ್ನು ನೀಡಿದವು. ಡಿ. ಕೃಷ್ಣಮಾಚಾರ್ಲು ಅವರ ಸೋದರಳಿಯ, ಆಂಧ್ರದ ಟಿ. ರಾಘವಾಚಾರಿಯವರು ಕನ್ನಡ ರಂಗಭೂಮಿಯಲ್ಲಿ ಪ್ರಸಿದ್ಧರಾಗಿ ರಾರಾಜಿಸಿದರು. ಸ್ಥಾನಂ ನರಸಿಂಹರಾಯರೂ ಇಲ್ಲಿ ಭಾರೀ ಜನಪ್ರಿಯತೆಯನ್ನು ಗಳಿಸಿದರು. ವರದಾಚಾರ್ ಅವರ ಪ್ರಸಿದ್ಧ ರತ್ನಾವಲೀ ನಾಟಕ ತಂಡ, ಮಹಮ್ಮದ್ ಪೀರರ ಚಂದ್ರಕಲಾ ನಾಟಕತಂಡ ಮತ್ತು ಜಿ.ಎಚ್. ವೀರಣ್ಣನವರ ಗುಬ್ಬಿ ಕಂಪೆನಿಗಳು ಆಂಧ್ರದ ಅನೇಕ ಕೇಂದ್ರಗಳಲ್ಲಿ ನಾಟಕಗಳನ್ನು ಪ್ರದರ್ಶಿಸಿದವು. ಜಿ.ಎಚ್. ವೀರಣ್ಣನವರಿಗೆ 'ಕರ್ಣಾಟಕಾಂಧ್ರ ನಾಟಕ ಸಾರ್ವಭೌಮ' ಎಂಬ ಬಿರುದನ್ನು ನೀಡಿ ಗೌರವಿಸುವುದರ ಮೂಲಕ, ಆಂಧ್ರವು ಕನ್ನಡ ರಂಗಭೂಮಿಗೆ ಮಹತ್ವಪೂರ್ಣ ಶುಭಾಶಯವನ್ನು ತೋರ್ಪಡಿಸಿತು. ಎನ್. ಶ್ರೀಕಂಠಶಾಸ್ತ್ರಿಗಳು ಪ್ರಧಾನ ತೆಲುಗು ನಾಟಕಗಳಲ್ಲಿ ಹೆಚ್ಚಿನವನ್ನು ಕನ್ನಡಕ್ಕೆ ಅನುವಾದಿಸಿದರು.

ಕನ್ನಡ ರಂಗಭೂಮಿಯು ತಮಿಳು ನಾಡಿನ ರಂಗಭೂಮಿಯ ಮೇಲೂ ತನ್ನ ಪ್ರಭಾವ ಬೀರಿತು. ಕನ್ನಡ ನಾಟಕಗಳ ಭಾರೀ ಪ್ರಭಾವಕ್ಕೊಳಗಾದ ಡಿ. ಕೃಷ್ಣಮಾಚಾರ್ಲು ಅವರು 'ಸರಸ ವಿನೋದಿನೀ ಸಭಾ' ಎಂಬ ಪ್ರಸಿದ್ಧ ನಾಟಕತಂಡವನ್ನು ಆರಂಭಿಸಿ, ತಮಿಳು ನಾಡಿನ ಆದ್ಯಂತ ಸಂಚಾರ ಮಾಡಿದರು. ಮೈಸೂರು ಅರಮನೆಯ ಕಂಪೆನಿಯೂ ತಮಿಳು ನಾಡಿನ ಮುಖ್ಯ ಪಟ್ಟಣಗಳಿಗೆ ಭೇಟಿಯಿತ್ತಿತು. ತಮಿಳುನಾಡಿನ ರಂಗಭೂಮಿಯ ಪ್ರಥಮ ನಾಟಕಕಾರ ಗೋವಿಂದಸ್ವಾಮಿರಾಜ ಕರ್ಣಾಟಕದಲ್ಲೇ ಇದ್ದರು. ಇಲ್ಲಿ ನೋಡಿದ ಕನ್ನಡ ತೆಲುಗು ನಾಟಕಗಳಿಂದ ಅವರು ಸ್ಫೂರ್ತಿಯನ್ನು ಪಡೆದರು. ಅನಂತರದ ವರ್ಷಗಳಲ್ಲಿ ಜ್ಞಾನಾಂಬಾಳ್, ರಾಜಮಾಣಿಕ್ಯಂ ಪಿಳ್ಳೆ ಮತ್ತು ಗೋವಿಂದಸ್ವಾಮಿ ನಾಯಕರ್—ಅವರ ತಮಿಳು ನಾಟಕ ತಂಡಗಳು ಕರ್ಣಾಟಕದ ಪ್ರಮುಖ ಪಟ್ಟಣಗಳಿಗೆ ಭೇಟಿಯಿತ್ತವು. ವರದಾಚಾರ್ಯರಿಗೆ ಮದರಾಸು ಎರಡನೆಯ ಮನೆಯಾಗಿತ್ತು. ಅವರೂ ಅವರ ಅನಂತರ ವೀರಣ್ಣನವರೂ ಈರೋಡು, ಮದರಾಸು, ಕೊಯಮತ್ತೂರು, ತಿರುಚಿ ಮತ್ತು ಮಧುರೆಗಳಲ್ಲಿ ಆಗಾಗ್ಗೆ ಕಾಣಿಸಿಕೊಳ್ಳುತ್ತಿದ್ದರು. 1917ರಲ್ಲಿ ತಮಿಳುನಾಡು ಆನಿಬೆಸೆಂಟ್ ಅಧ್ಯಕ್ಷತೆ ವಹಿಸಿದ್ದ ಸಭೆಯಲ್ಲಿ ಕನ್ನಡದ ನಟಶಿಖಾಮಣಿ ವರದಾಚಾರ್ಯರನ್ನು 'ನಾಟಕ ಶಿರೋಮಣಿ' ಎಂಬ ಬಿರುದನ್ನಿತ್ತು ಗೌರವಿಸಿತು. ತಮ್ಮ ಅಂತಿಮ ದಿನಗಳ ವರೆಗೂ ವರದಾಚಾರ್ಯರು ಈ ಬಿರುದನ್ನು ಹೆಮ್ಮೆಯಿಂದ ತಮ್ಮ ಎದೆಯ ಮೇಲೆ ಧರಿಸಿರುತ್ತಿದ್ದರು.

ಹೀಗೆ ಕನ್ನಡ ರಂಗಭೂಮಿಯ ಇತಿಹಾಸ ಸಮೃದ್ಧವೂ ಮಹತ್ವದ ಘಟನಾವಳಿಗಳಿಂದ ಕೂಡಿದ್ದೂ ಆಗಿದೆ. ನೆರೆಹೊರೆಯ ಪ್ರಾಂತಗಳ ರಂಗಭೂಮಿಯಲ್ಲಿ ಅದರ ಪ್ರಭಾವ ಅಚ್ಚೊತ್ತಿ ನಿಂತಿದೆ. ಆದರೆ, ಹೊರಗಿನ ಪ್ರಪಂಚ ಅದರ ಬಗ್ಗೆ ಏನನ್ನೂ ತಿಳಿದುಕೊಂಡಿಲ್ಲ. ಭಾರತೀಯ ರಂಗಭೂಮಿಯ ಮೇಲೆ ಇಂಗ್ಲಿಷಿನಲ್ಲಿ ಕೆಲವಾರು ಪುಸ್ತಕಗಳು ಹೊರಬಿದ್ದಿವೆ. ಆದರೆ, ಅವುಗಳಲ್ಲಿ ಕನ್ನಡ ರಂಗಭೂಮಿಯ ಬಗೆಗೆ ಇರುವುದು ಅತ್ಯಲ್ಪ ಮಾತ್ರ. 'ಇಂಡಿಯನ್ ಥಿಯೇಟರ್' ಎಂಬ ತಮ್ಮ ವಿಚಾರಪ್ರಚೋದಕ

ಕೃತಿಯಲ್ಲಿ ಡಾ॥ ಯಾಜ್ಞಿಕ್ ಅವರು ಕನ್ನಡ ರಂಗಭೂಮಿ ಮತ್ತು ಮರಾಠೀ ರಂಗದ ಮೇಲೆ ಅದರ ಪ್ರಭಾವವನ್ನು ಗುರುತಿಸಿದ್ದಾರೆ. ಆದರೆ ಅವರು ಕೂಡ, ಕನ್ನಡ ರಂಗಭೂಮಿ ಹಳೆಯ ಮೈಸೂರಲ್ಲಿ ಮಾತ್ರ ಇತ್ತೆಂದೂ ಅದೂ, "ಮದರಾಸು ರಂಗಭೂಮಿ"ಯ ಒಂದು ಭಾಗವಾಗಿತ್ತೆಂದೂ ಭಾವಿಸಿದ್ದಾರೆ.

ಮೂಲಲೇಖಕರು : ಡಾ॥ ಎಚ್. ಕೆ. ರಂಗನಾಥ
ಅನುವಾದಕರು : ಶ್ರೀ ಟಿ. ಆರ್. ಶಾಮ ಭಟ್ಟ



# ಕರ್ಣಾಟಕ ಸಂಗೀತ

## ಆಧುನಿಕ ಕಾಲ

ಭಕ್ತಿ ಪಂಥವನ್ನು ಬಹುವಾಗಿ ಪ್ರಸಾರಮಾಡುವುದರಲ್ಲಿ ಶತಶತಮಾನಗಳಿಂದಲೂ ಅದ್ಭುತವಾದ ಪ್ರಭಾವ ಬೀರಿದ ಹರಿದಾಸರು 18 ಮತ್ತು 19ನೆಯ ಶತಮಾನಗಳಲ್ಲಿ ತಮ್ಮ ಮನೋಮೋಹಕ ಸಂಗೀತ ರಚನೆಗಳಿಂದ ಕರ್ಣಾಟಕ ಸಂಗೀತ ಪದ್ಧತಿಯ ಪರಂಪರೆಯನ್ನು ಉಳಿಸಿಕೊಂಡು ಬಂದರು. ಅವರ ರಚನೆಗಳು ಕರ್ಣಾಟಕ ಸಂಗೀತವು ಶ್ರೀಮಂತವಾಗುವುದಕ್ಕೆ ಹೊಸ ಮಾವರಿಗಳನ್ನು ಒದಗಿಸಿದುದೇ ಅಲ್ಲದೆ ಒಬ್ಬರಾದ ಮೇಲೊಬ್ಬರಂತೆ ವಾಗ್ಗೇಯಕಾರರು ಅವ್ಯಾಹತವಾಗಿ ಕೃತಿರಚನೆಮಾಡಲು ಪ್ರೇರಣೆಯನ್ನು ನೀಡಿದುವು. ಅಂತಹ ವಾಗ್ಗೇಯಕಾರರಲ್ಲಿ, ಈ ಕೆಳಗೆ ಹೇಳಿರುವ ಪ್ರಸಿದ್ಧರು ಉಲ್ಲೇಖನಾರ್ಹರು. ಅವರಲ್ಲಿ ಪ್ರತಿಯೊಬ್ಬರ ರಚನೆಯಲ್ಲೂ ಸಂಗೀತ ದೃಷ್ಟಿಯಿಂದ ಪ್ರತ್ಯೇಕತೆ ಇದೆ, ವೈಶಿಷ್ಟ್ಯವಿದೆ. ಈ ಪಟ್ಟಿ ಪೂರ್ಣವಲ್ಲ. ರಚನೆಗಳ ಸಂಖ್ಯೆ ಹೆಚ್ಚಿಲ್ಲದಿದ್ದರೂ ಅವುಗಳ ಮೌಲ್ಯದ ದೃಷ್ಟಿಯಿಂದ ಇವರುಗಳ ರಚನೆಗೆ ಯಾವ ವಿಧದಿಂದಲೂ ಕಮ್ಮಿಯಲ್ಲವೆಂಬಂತೆ ಕೃತಿರಚನೆ ಮಾಡಿದ ಇನ್ನೂ ಅನೇಕ ಭಕ್ತರುಗಳಿದ್ದರು. ಆದರೆ ಇತ್ತೀಚೆಗೆ ಬೆಳಕಿಗೆ ಬಂದ ಅವರುಗಳ ಒಂದೆರಡು ರಚನೆಗಳಿಂದ ಹೊರತಾಗಿ ಅವರುಗಳು ಜನಮನದಿಂದ ಮರೆಯಾಗಿಬಿಟ್ಟಿದ್ದಾರೆ. 18ನೆಯ ಶತಮಾನದಲ್ಲೂ 19ನೆಯ ಶತಮಾನದ ಮೊದಲ ಭಾಗದಲ್ಲೂ ವಿಪುಲವಾಗಿ ಕೃತಿರಚನೆಮಾಡಿ ಹರಿದಾಸಪರಂಪರೆಯನ್ನು ಉಳಿಸಿ ಬೆಳೆಸಿದವರಲ್ಲಿ ಬಹು ಮುಖ್ಯರಾದ ಕೆಲವರಲ್ಲಿ ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು, ಪ್ರಸನ್ನ ವೆಂಕಟದಾಸರು ಮತ್ತು ಮೋಹನದಾಸರು ಮುಖ್ಯರು. ಸುಳಾದಿ, ಉಗಾಭೋಗ, ಸುವ್ವಾಲಿ ಮುಂತಾದ ವಿಶಿಷ್ಟರಚನಾರೂಪಗಳನ್ನೊಳಗೊಂಡ ಅವರ ರಚನೆಗಳು ರಾಗ ವೈವಿಧ್ಯದಿಂದ ಸಮೃದ್ಧವಾಗಿವೆ. ವಿಜಯದಾಸರ (18ನೆಯ ಶತಮಾನ) ಸಮಕಾಲೀನರಾದ ಪ್ರಸನ್ನ ವೆಂಕಟದಾಸರು ಬಾಗಲಕೋಟೆಯವರು. ಅವರು ಭಾಗವತ ಮತ್ತು ಜೋಗುಳ ಪದಗಳನ್ನು ರಚಿಸಿದರು. ಅಲ್ಲದೆ ಅವರು ತಮ್ಮದೇ ಆದ ಭಾವಗೀತ ಶೈಲಿಯಲ್ಲಿ ರಚನೆಗಳನ್ನು ಮಾಡಿದ್ದು ಕರ್ಣಾಟಕ ಸಂಗೀತಕ್ಕೆ ಅಪೂರ್ವವಾದ ಕೊಡುಗೆ. ಹಯವದನ ವಿಠಲ ಎಂಬ ಅಂಕಿತದಿಂದ ಕೃತಿರಚನೆಮಾಡಿದ ವಿಜಯದಾಸರ ಸೋದರನ ಕೃತಿಗಳೂ ಅಷ್ಟೇ ಗಮನಾರ್ಹ. ಆವರು 1783 ರಿಂದ 1858ರ ವರೆಗೆ 75 ವರ್ಷಗಳು ಬದುಕಿದ್ದರೆಂದು ನಂಬಲಾಗಿದೆ.

ಸುರಪುರಿಯ ಶ್ರೀ ಆನಂದದಾಸರು ಮೈಸೂರಿನ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ ಸಮಕಾಲೀನರೆಂದು ಹೇಳಲಾಗುತ್ತದೆ. ಅಲ್ಲದೆ ಅವರು ಆ ರಾಜರ ಆಸ್ಥಾನಕ್ಕೂ ಬಂದಿದ್ದರೆಂದು ಪ್ರತೀತಿ. ಸಂಗೀತದಷ್ಟೇ ಅವರಿಗೆ ಸಾಹಿತ್ಯ, ತರ್ಕ ಮತ್ತು ವೇದಾಂತಗಳಲ್ಲೂ ಪಾಂಡಿತ್ಯ ಇದ್ದಿತು. ಅವರು ಮೊದಲು ಹಿಂದುಸ್ಥಾನಿ ಸಂಗೀತ ಕಲಿತು ಅನಂತರ ಕರ್ಣಾಟಕ ಸಂಗೀತ ಸಂಪ್ರದಾಯವನ್ನು ರೂಢಿಸಿಕೊಂಡು ಅದರಲ್ಲಿ ಕೃತಿರಚನೆ ಮಾಡಿದರು. ಅವರು ಹೀಗೆ ಮಾಡಿದ ಕೃತಿರಚನೆ ಎಷ್ಟು ವಿಶಿಷ್ಟವಾಗಿತ್ತೆಂದರೆ 'ಸುರಪುರ ಶೈಲಿ' ಎಂದೇ ಈ ಶೈಲಿ ಪ್ರಸಿದ್ಧವಾಯಿತು. ಕರ್ಣಾಟಕ ಸಂಗೀತವೊಂದನ್ನೇ ದೇವತೆಗಳು ಕೂಡ ಮೆಚ್ಚುವರೆಂಬುದು ತಮ್ಮ ನಂಬಿಕೆಯೆಂದು ಅವರು ತಿಳಿಸಿದ್ದರೆಂದು ಖಚಿತವಾಗಿ

ಹೇಳುತ್ತಾರೆ. ಅವರ ರಚನೆಗಳಲ್ಲಿ ಸಂಗೀತದ ಮಾಧುರ್ಯ, ಸಾಹಿತ್ಯದ ಸೌಂದರ್ಯಗಳ ಅಪೂರ್ವ ಮೇಳವನ್ನು ಕಾಣಬಹುದು.

ಬಾಗಲಕೋಟೆಯವರಾದ ಮಹೀಪತಿ ಕಾಖಂಡಿಕಿ ಉರ್ದು ಮತ್ತು ಕನ್ನಡಗಳೆರಡರಲ್ಲೂ ಪಂಡಿತರಾಗಿದ್ದು ಈ ಎರಡೂ ಭಾಷೆಗಳಲ್ಲಿ ಪುರಾಣ ಹೇಳುವುದರಲ್ಲಿ ಪ್ರಸಿದ್ಧರಾಗಿದ್ದ ಅಣ್ಣಾವಧೂತ— ಇವರಿಬ್ಬರೂ ಸರಳಸುಂದರವಾದ ತಮ್ಮ ರಚನೆಗಳನ್ನು ಕೂಡಿಸಿ ನಮ್ಮ ಪರಂಪರೆಯ ಸಂಗೀತ ಸಂಪತ್ತನ್ನು ಹೆಚ್ಚಿಸಿಕೊಟ್ಟಿದ್ದಾರೆ. ಅವರಿಬ್ಬರೂ ಮಹಾ ಅನುಭಾವಿಗಳು ; ಆತ್ಮ ಸಾಕ್ಷಾತ್ಕಾರ ಸಾಧಿಸಿದ ಮಹಾತ್ಮರು. 'Pathway to God in Kannada Literature' (ಕನ್ನಡ ಸಾಹಿತ್ಯದಲ್ಲಿ ಭಗವತ್ಸಾಕ್ಷಾತ್ಕಾರದ ಮಾರ್ಗ) ಎಂಬ ಗ್ರಂಥದ ಲೇಖಕರಾದ ಆರ್. ಡಿ. ರಾನಡೆ ಅವರು ಮಹೀಪತಿಯವರ ರಚನೆಗಳ ಬಗೆಗೆ ಬಹು ಹೆಚ್ಚಳದ ಮಾತುಗಳನ್ನು ಬರೆದಿದ್ದಾರೆ. ಮತ್ತು "ಅವರು ಮೂರು ಶತಮಾನಗಳ ಹಿಂದೆ ಆಸ್ಥಾನದಲ್ಲಿ ಮಂತ್ರಿಯಾಗಿದ್ದರು" (ಪುಟ 70) ಎನ್ನುತ್ತಾರೆ. ಅವರ ಮಗ ಕೃಷ್ಣರಾಯರೂ ಅನೇಕ ಕೃತಿಗಳನ್ನು ರಚಿಸಿದ್ದರು.

ಬಹುಸಂಖ್ಯಾತರಾದ ವಾಗ್ಗೇಯಕಾರರೆಲ್ಲರ ಕೃತಿಗಳ ವಿವರವಾದ ಮೌಲ್ಯಮಾಪನ ಮಾಡಬೇಕಾದರೆ ಬಹು ದೊಡ್ಡ ಗ್ರಂಥವನ್ನೇ ಬರೆಯಬೇಕಾದೀತು. ಪ್ರಸ್ತುತ ಲೇಖನದ ವ್ಯಾಪ್ತಿಗೆ 18ನೆಯ ಶತಮಾನದ ಮಧ್ಯದಿಂದ ಹಿಡಿದು 20 ನೆಯ ಶತಮಾನದ ಪ್ರಾರಂಭದ ವರೆಗೆ ಕೃತಿರಚನೆ ಮಾಡಿದ ಹರಿದಾಸರಲ್ಲಿ ಮುಖ್ಯರಾದವರ ಹೆಸರುಗಳನ್ನು ಮಾತ್ರ ಹೇಳಿದರೆ ಸಾಕು.

ವೆಂಕಟ ವಿಠಲ, ವೈಕುಂಠ ಕೇಶವ, ಅಚ್ಯುತ ವಿಠಲ, ವಾಸುದೇವ ವಿಠಲ, ಕಮಲೇಶ ವಿಠಲ, ಭೀಮೇಶ ವಿಠಲ, ಜನಾರ್ದನ ವಿಠಲ, ಶ್ರೀಪತಿ ವಿಠಲ, ರಘುನಾಥ ವಿಠಲ, ಪ್ರಾಣೇಶ ವಿಠಲ, ಶ್ರೀ ವಿಠಲಪ್ರಸನ್ನ, ವೆಂಕಟಪತಿ, ಅನಂತಾದ್ರೀಶ, ಅಭಿನವ ಜನಾರ್ದನ ವಿಠಲ, ಅಚಲಾನಂದ ವಿಠಲ ಮತ್ತು ವೆಂಕಟೇಶ್ವರ—ಇವು ಈ ಕಾಲದಲ್ಲಿ ಕರ್ಣಾಟಕ ಸಂಗೀತಕ್ಷೇತ್ರದ ಪರಂಪರೆಯನ್ನು ಉಳಿಸಿಕೊಂಡು ಬೆಳೆಸಿಕೊಂಡು ಬಂದವರಲ್ಲಿ ಕೆಲವರ ಹೆಸರುಗಳು ಅಥವಾ ಅಂಕಿತಗಳು. ಈ ರಚನೆಗಳಲ್ಲಿ ಕೆಲವು ನೀತಿಬೋಧಕ ವಿಷಯಗಳಿಂದ ತುಂಬಿವೆ. ಮತ್ತು ಜನಪ್ರಿಯ ಹಾಗೂ ಅಪರೂಪ ರಾಗಗಳನ್ನು ಉಪಯೋಗಿಸಿ ಮಾರ್ಗ ಸಂಗೀತದ ಲಕ್ಷಣಗಳನ್ನು ಉಳಿಸಿಕೊಂಡು ಬಂದಿವೆ.

ಭಾವಪೂರಿತವಾದ ಮತ್ತು ನಿರರ್ಗಳವಾದ ಧಾಟಿಯಲ್ಲಿ ದೇವರ ನಾಮಗಳನ್ನು ರಚಿಸಿದ ವಿದ್ಯಾಕಾಂತರು ಶ್ರೀ ವ್ಯಾಸರಾಯರ ಶಿಷ್ಯಪರಂಪರೆಯಲ್ಲಿ ಹದಿನಾರನೆಯವರು.

ಮಂಗಳೂರಿನ ಹೆಸರಾಂತ 'ತುಪಾಕಿ' ವಂಶದವರಲ್ಲಿ ಪ್ರಸಿದ್ಧರಾದ ವೆಂಕಟರಮಣಾಚಾರ್ಯ, ಸುಬ್ಬಣ್ಣಾಚಾರ್ಯ ಮತ್ತು ರಾಮಾಚಾರ್ಯ ಇವರುಗಳು ದೇವರನಾಮಗಳ ರಚನೆಗೆ ಪ್ರಸಿದ್ಧರು. ಇವರಲ್ಲಿ ಮುನ್ನೀಘರಾಗಿದ್ದ ಶ್ರೀ ತುಪಾಕಿ ವೆಂಕಟರಮಣಾಚಾರ್ಯರು ತಮ್ಮ ಕಡೆಕಡೆಯ ದಿನಗಳನ್ನು ಸರಳವಾದ ಹಾಗೂ ನೇರವಾಗಿ ಮನಮುಟ್ಟುವಂತಹ ದೇವರನಾಮಗಳನ್ನು ರಚಿಸಲು ಮುಡುಪಾಗಿಟ್ಟರು. ಕೋಲಾರ ತಾಲೂಕಿನ ಬ ಗೇಪಲ್ಲಿಯ ಗುರುರಾಮವಿಠಲರೆಂಬ ಕುರುಡ ಹರಿದಾಸರು ಮತ್ತೊಬ್ಬ ಮುಖ್ಯ ವ್ಯಕ್ತಿ. ಅವರು ರಚಿಸಿದ ರಮ್ಯ ಮನೋಹರ ದೇವರನಾಮಗಳು ಅವುಗಳ ಭಾವಪೂರ್ಣತೆ ರಚನಾ ಚಾತುರ್ಯಗಳಿಂದ ಹೆಚ್ಚು ಹೆಚ್ಚಾಗಿ ಜನಪ್ರಿಯವಾಗುತ್ತಿವೆ.

ಹರಿದಾಸರ ಹಾಗೂ ದಾಸಕೂಟದ ವಿಶಿಷ್ಟವೂ ಶಾಶ್ವತವೂ ಆದ ಕೊಡುಗೆಯ ವಿವರವನ್ನು ಈಗಿನ

ಕಾಲದ ವರೆಗೂ ಗುರುತಿಸುತ್ತ ಬರುವ ಸಂದರ್ಭದಲ್ಲಿ, ಸೋಸಲೆ ವಿದ್ಯಾರತ್ನಾಕರ (ನರಹರಿ ವಿಠಲ) ಮತ್ತು ಶ್ರೀ ವ್ಯಾಸರಾಯ ಮಠಾಧೀಶರಾದ ಶ್ರೀ ವಿದ್ಯಾಪ್ರಸನ್ನ ತೀರ್ಥ ಇವರುಗಳ ಹೆಸರನ್ನು ಮರೆಯಲಾಗುವುದಿಲ್ಲ. ಇವರುಗಳ ಸಂಗೀತಪಾಂಡಿತ್ಯವು ಸುಮನೋಹರ ದೇವರನಾಮುಗಳಲ್ಲಿ ಹೊನಲಾಗಿ ಹರಿದಿದೆ.

ಶಿವಶರಣರ ವಚನಗಳು ಸಂಗೀತಕ್ಕೆ ಸುಲಭವಾಗಿ ಅಳವಡುತ್ತವೆ. ಅವು ಸಂಗೀತದ ಬೆಳವಣಿಗೆಗೆ ಸಾಕಷ್ಟು ಉತ್ತೇಜನ ನೀಡಿವೆ ಮತ್ತು ಸಂಗೀತಭಂಡಾರವನ್ನು ಬಹುಮಟ್ಟಿಗೆ ತುಂಬಿಸಿವೆ. ವಚನಕಾರರ ಪೈಕಿ ಸಪ್ಪಣ್ಣಸ್ವಾಮಿ ಎಂದು ಹೆಸರಾಗಿರುವ ಬೆಂಗಳೂರಿನ ಸರ್ಪಭೂಷಣ ಶಿವಯೋಗಿಗಳು ಈ ಕಾಲದವರು. ಅವರ ರಚನೆಗಳು ರಾಗಭಾವದ ಅಭಿವ್ಯಕ್ತಿಗೆ ವಿಶೇಷ ಅವಕಾಶ ಹೊಂದಿವೆ.

19 ಮತ್ತು 20ನೆಯ ಶತಮಾನಗಳಲ್ಲಿ ಮೈಸೂರು ರಾಜಮನೆತನ ಸಂಗೀತದ ಬೆಳವಣಿಗೆಗೆ ಇತ್ತ ಪ್ರೋತ್ಸಾಹವನ್ನು ಗುರುತಿಸದಿದ್ದರೆ ಕರ್ನಾಟಕ ಸಂಗೀತದ ಬೆಳವಣಿಗೆಯ ಪೂರ್ಣ ಇತಿಹಾಸವನ್ನು ಗುರುತಿಸಿದಂತಾಗುವುದಿಲ್ಲ. ಉತ್ತಮ ರಸಜ್ಞರಾದ ಮುಮ್ಮಡಿ ಕೃಷ್ಣರಾಜ ಒಡೆಯರು ತಮ್ಮ ಆಸ್ಥಾನದ ಘನತೆಗೆ ತಕ್ಕಂತೆ ಅನೇಕಾನೇಕ ಸಂಗೀತ ವಿದ್ವಾಂಸರನ್ನು ಆದರಿಸಿ ಪೋಷಿಸಿದರು. ತಂಜಾವೂರಿನ ಸುಪ್ರಸಿದ್ಧ ವಾಗ್ಗೇಯಕಾರರಾದ ವೀಣೆ ಕುಪ್ಪಯ್ಯರ ಮೊಮ್ಮಕ್ಕಳಾದ ಶ್ರೀ ವೀಣೆ ವೆಂಕಟಸುಬ್ಬಯ್ಯನವರನ್ನು ದಿವಾನ್ ಪೂರ್ಣಯ್ಯನವರು ಮೈಸೂರಿಗೆ ಆಹ್ವಾನಿಸಿದರೆಂದೂ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ಅವರ ಸಂಗೀತ ಸಾಮರ್ಥ್ಯಕ್ಕೆ ಮೆಚ್ಚಿ ಅವರಿಗೆ ಒಂದು ಬಂಗಾರದ ವೀಣೆಯನ್ನಿತ್ತು ಬಹುಮಾನಿಸಿದರೆಂದೂ ಪ್ರತೀತಿ. ಅವರ ಅನಂತರ ಪಟ್ಟಕ್ಕೆ ಬಂದ ಶ್ರೀ ಚಾಮರಾಜ ಒಡೆಯರ್ ಅವರು ತಂದೆಯು ಹಾಕಿಕೊಟ್ಟ ಮಾರ್ಗದಲ್ಲೇ ನಡೆದು ಭಾರತದೇಶದಲ್ಲೆಲ್ಲಾ ಪ್ರಖ್ಯಾತಿ ಪಡೆದ ವೀಣೆ ಶೇಷಣ್ಣ, ಸುಬ್ಬಣ್ಣ ಮತ್ತು ಇತರ ವಿದ್ವಾಂಸರುಗಳನ್ನು ಆದರಿಸಿ ಪೋಷಿಸಿದರು.

ತಮ್ಮ ಅಲಂಕಾರಪೂರ್ಣ ರಚನೆಗಳಿಂದ ಸಂಗೀತಕ್ಷೇತ್ರದಲ್ಲಿ ಒಂದು ಶಾಶ್ವತವಾದ ಸ್ಥಾನ ಗಳಿಸಿರುವ ಮೈಸೂರು ಸದಾಶಿವರಾಯರು ಮೈಸೂರಿನ ಆಸ್ಥಾನವನ್ನು ಅಲಂಕರಿಸಿದ್ದರು. ಇವರು ಪ್ರಖ್ಯಾತರಾದ ವೀಣೆ ಶೇಷಣ್ಣ, ಸುಬ್ಬಣ್ಣ ಮುಂತಾದವರುಗಳ ಗುರುಗಳು. ತಾಳಲಯ ಸಾಮರ್ಥ್ಯವಿಲ್ಲದಿದ್ದರೆ ಮತ್ತು ಒಳ್ಳೆಯ ಶಾರೀರವಿಲ್ಲದಿದ್ದರೆ ಅವರ ಕೆಲವು ಕೃತಿಗಳನ್ನು ಹಾಡುವುದು ಸಾಧ್ಯವಿಲ್ಲ. ಅವರ ಕೃತಿಗಳು ಸಂಗೀತ ತ್ರಿಮೂರ್ತಿಗಳಾದ ತ್ಯಾಗರಾಜ, ದೀಕ್ಷಿತರು ಮತ್ತು ಶ್ಯಾಮಾಶಾಸ್ತ್ರಿ--ಇವರುಗಳ ಪಾಲಿಗೆ ಸೇರಿದ್ದು, ಸಂಗೀತಪರಂಪರೆಯ ಅವಿಭಾಜ್ಯ ಅಂಗವಾಗಿವೆ. ಇವರ ಸಮಕಾಲೀನರ ಪೈಕಿ ಪ್ರಖ್ಯಾತ ಸಂಗೀತ ವಿದ್ವಾಂಸರಾದ ಮೂಗೂರು ಸುಬ್ಬಣ್ಣನವರು ಉಲ್ಲೇಖನಾರ್ಹರು. ಮೈಸೂರು ಅರಮನೆಯು ಸಂಗೀತ ದಿಗ್ದಂತಿಗಳಾದ ಪಟ್ಣಂ ಸುಬ್ರಹ್ಮಣ್ಯ ಅಯ್ಯರ್, ತಿರುಕ್ಕೊಡಿ ಕಾವಲ್ ಕೃಷ್ಣ ಅಯ್ಯರ್ ಮತ್ತು ಮಹಾವೈದ್ಯನಾಥ ಅಯ್ಯರ್ ಮುಂತಾದವರನ್ನೆಲ್ಲಾ ಕರೆಸಿ ಗೌರವಿಸಿತು.

ಶ್ರೀ ನಾಲ್ಮಡಿ ಕೃಷ್ಣರಾಜ ಒಡೆಯರ್ ಅವರ ಉದಾರಾಶ್ರಯದಲ್ಲಿ 20ನೆಯ ಶತಮಾನದ ಮೊದಲಿನಲ್ಲಿ ಸಂಗೀತಪ್ರಪಂಚ ಹೊಸ ಜೀವ ತಾಳಿ ಹೊಸ ಹೊಸ ರಚನೆಗಳಿಗೂ ಕಲಾ ಪ್ರಾವೀಣ್ಯಕ್ಕೂ ಎಡೆಮಾಡಿಕೊಟ್ಟಿತು. ಸುಪ್ರಸಿದ್ಧ ವೀಣಾವಿದ್ವಾಂಸರಾದ ಶೇಷಣ್ಣನವರ ಸ್ವರಜತಿ, ವರ್ಣ ಮತ್ತು ತಿಲ್ಲಾನಗಳು ಅವರ ಅತ್ಯಪೂರ್ವ ಕಲಾಪ್ರತಿಭೆಗೆ ಕಳಶಪ್ರಾಯವಾಗಿವೆ. ಸಾಂಬಯ್ಯನವರು ಆ ಕಾಲದಲ್ಲಿ ಬಹು ಶ್ರೇಷ್ಠ ಸ್ವರಜತಿಗಳನ್ನು ರಚಿಸಿದ ಮತ್ತೊಬ್ಬ ಮಹನೀಯರು. ಈ ಸಂದರ್ಭದಲ್ಲಿ ಶ್ರೀ ಬಿಡಾರಂ ಕೃಷ್ಣಪ್ಪನವರು ಸ್ಮರಣೀಯರು. ಅನೇಕ ರಾಗಗಳಲ್ಲಿ ಕೃತಿ ರಚನೆಮಾಡಿದ ಶ್ರೀ ಮುತ್ತಯ್ಯ ಭಾಗವತರೂ ಶ್ರೀ ವಾಸುದೇವಾಚಾರ್ಯರೂ ಸಮಕಾಲೀನ ಸಂಗೀತದ ಮೇಲೆ ಮರೆಯಲಾಗದಷ್ಟು ಮಟ್ಟಿನ ಪ್ರಭಾವ ಬೀರಿದ್ದಾರೆ. ಶ್ರೀ ಕೃಷ್ಣರಾಜ ಒಡೆಯರ ಆಶ್ರಯದಲ್ಲಿ ಮತ್ತು ಅವರ ಪ್ರಚೋದನೆಯಿಂದ

ಶ್ರೀ ಮುತ್ತಯ್ಯಭಾಗವತರು 108 ರಾಗಗಳಲ್ಲಿ ಶ್ರೀ ಚಾಮುಂಡೇಶ್ವರಿಯ ಮೇಲೆ 108 ಕೀರ್ತನೆಗಳನ್ನು ರಚಿಸಿದರು. ಅದುವರೆಗೂ ಬಳಕೆಯಲ್ಲಿಲ್ಲದಿದ್ದ ಅನೇಕ ಜನ್ಯರಾಗಗಳನ್ನು ಈ ಅಪೂರ್ವವಾದ ಕೀರ್ತನೆಗಳಲ್ಲಿ ಉಪಯೋಗಿಸಿರುವುದು ಕೇಳುವವರ ಮನೋರಂಜನೆಗೆ ಬಹು ಸಹಕಾರಿಯಾಗಿದೆ. ಈ ಕೃತಿಗಳು ಕನ್ನಡ ದಲ್ಲಿವೆಯೆಂಬುದು ಗಮನಾರ್ಹವಾದ ಅಂಶ. ವಾಸುದೇವಾಚಾರ್ಯರು ತೆಲುಗು, ಸಂಸ್ಕೃತ—ಇವೆರಡ ರಲ್ಲಿಯೂ ಅಸಂಖ್ಯಾತವಾದ ಕೃತಿಗಳನ್ನು ರಚಿಸಿದರು. ಅವರ ಕೃತಿಗಳು ದಕ್ಷಿಣಭಾರತದ ಎಲ್ಲಾ ವಿದ್ವಾಂಸರ ಮನ್ನಣೆಗೂ ಪಾತ್ರವಾಗಿವೆ. ಈ ಕೃತಿಗಳು ಭಾವಪೂರಿತವಾಗಿ ಸಹಜಾಭಿವ್ಯಕ್ತಿಗೂ ನಿರರ್ಗಳವಾದ ನಡೆಗೂ ರಾಗ ಭಾವಕ್ಕೂ ಹೆಸರಾಗಿವೆ. ರಾಗ ಭಾವ ಕೃತಿಗೆ ಬಹುಮುಖ್ಯ. ಒಂದಲ್ಲ ಒಂದು ಇವರ ಕೃತಿಯನ್ನು ಕಛೇರಿಗಳಲ್ಲಿ ಹಾಡದ ವಿದ್ವಾಂಸರೇ ಅಪರೂಪ. ದೇವೋತ್ತಮಜೋಯಿಸರು ಕನ್ನಡ ಹಾಡುಗಳನ್ನು ರಚಿಸಿದ ಮುಖ್ಯರಲ್ಲಿ ಮತ್ತೊಬ್ಬರು. 'ನರಸಿಂಹ' ಎಂಬ ಅಂಕಿತದಿಂದ ಕೃತಿರಚನೆ ಮಾಡಿದ ಸಂಗೀತ ವಿದ್ಯಾ ಕಂಠೀರವ ಕರಿಗಿರಿರಾವ್ ಅವರು ಮಹಾರಾಜರ ಆಶ್ರಯದಲ್ಲಿದ್ದ ಮತ್ತೊಬ್ಬ ಸುಪ್ರಸಿದ್ಧ ವಿದ್ವಾಂಸರು. ಅವರ ಶಿಷ್ಯಂದಿರಲ್ಲಿ ಪ್ರಸಿದ್ಧರು ಬಿಡಾರಂ ಕೃಷ್ಣಪ್ಪನವರು ಮತ್ತು ಚಿಕ್ಕರಾಮರಾಯರು.

ದಕ್ಷಿಣ ಭಾರತದಲ್ಲಿ ಪ್ರಖ್ಯಾತಿಗಳಿಸಿದ ಸಂಗೀತ ವಿದುಷಿಯರ ಪೈಕಿ ಹೆಸರಿಸಬಹುದಾದವರು ಬೆಂಗಳೂರು ನಾಗರತ್ನಮ್ಮ. ಅವರು ಚಿಕ್ಕವರಾಗಿದ್ದಾಗ ಭರತ ನಾಟ್ಯಕ್ಕೆ ಹೆಸರು ಪಡೆದಿದ್ದರು. ಅವರಿಗೆ ಸುಸಮೃದ್ಧವಾದ ಗುಂಭವಾದ ಧ್ವನಿಯಿತ್ತು. ಬಹು ದೈವಭಕ್ತರಾದ ಅವರ ಹಾಡುಗಾರಿಕೆ ಪರಿಶುದ್ಧ ಶೈಲಿಗೂ ನಿರ್ದುಷ್ಟ ನಡೆಗೂ ಹೆಸರಾಗಿತ್ತು. ತಿರುವಾಯೂರಿನಲ್ಲಿ ಸಂಗೀತ ಪಿತಾಮಹ ಶ್ರೀ ತ್ಯಾಗರಾಜರ ಸಮಾಧಿಯ ಪುನರುಜ್ಜೀವನ ಕಾರ್ಯವನ್ನು ನಡೆಸಿದ ಇವರು ತ್ಯಾಗರಾಜರ ಸ್ಮರಣೆಗೆ ಸಲ್ಲಿಸಿದ ಸೇವೆ ಅಪೂರ್ವ, ಅನ್ಯಾದೃಶ. ಈಗ ಅಲ್ಲಿ ಪ್ರತಿ ವರ್ಷವೂ ಈ ಸಂತರ ಪುಣ್ಯತಿಥಿಯಂದು ಕರ್ನಾಟಕ ಸಂಗೀತಕ್ಕೆ ಹೆಸರಾಂತ ವಿದ್ವಾಂಸರೆಲ್ಲ ಸೇರಿ ತಮ್ಮ ಭಕ್ತ್ಯಂಜಲಿಯನ್ನು ಸಂಗೀತ ಸೇವೆಯ ಮೂಲಕ ಸಲ್ಲಿಸುವುದು ಸಂಪ್ರದಾಯವಾಗಿದೆ.

ಶ್ರೀ ನಾಲ್ಮಡಿ ಕೃಷ್ಣರಾಜ ಒಡೆಯರ ಆಳಿಕೆಯ ಕಾಲವನ್ನು (1902–1940) ಕರ್ನಾಟಕ ಸಂಗೀತದ ಸುವರ್ಣಯುಗವೆನ್ನಬಹುದು. ಅವರ ಆಸ್ಥಾನದಲ್ಲಿ ಭಾರತದಾದ್ಯಂತದಿಂದ ಬಂದ ಅನೇಕ ವಿದ್ವಾಂಸರುಗಳಿಗೆ ಸನ್ಮಾನ, ಕೊಡುಗೈ ಬಹುಮಾನಗಳು ದೊರಕುತ್ತಿದ್ದವು. ವೀಣಾ ಧನಮ್ಮಾಳ್, ಅರಿಯಾಕುಡಿ ರಾಮಾನುಜ ಅಯ್ಯಂಗಾರ್, ಟೈಗರ್ ವರದಾಚಾರ್ಯರೇ ಮುಂತಾದ ಕರ್ನಾಟಕಸಂಗೀತ ವಿದ್ವಾಂಸರೇ ಅಲ್ಲದೆ ಫಿಯಾಜ್‌ಖಾನ್, ಅಬ್ದುಲ್ ಕರೀಂಖಾನ್ ಮೊದಲಾದ ಹಿಂದುಸ್ತಾನಿ ಸಂಗೀತ ಗಾರರನ್ನೂ ಅವರು ಆಹ್ವಾನಿಸಿ ಆದರಿಸುತ್ತಿದ್ದರು. ಕಾಲಾನುಕಾಲದಿಂದ ರಾಜಮನೆತನಗಳು ಮತ್ತು ಜಮೀನ್ದಾರರುಗಳಿಂದ ಆದರಹೊಂದಿ ಬೆಳೆದುಕೊಂಡು ಬಂದ ಕರ್ನಾಟಕ ಸಂಗೀತ ಮೈಸೂರು ದೊರೆಗಳ ಕಾಲದಲ್ಲಿ ತನ್ನ ಉತ್ಕರ್ಷದ ಪರಾಕಾಷ್ಠಸ್ಥಿತಿಗೇರಿತು. ಮೈಸೂರು ಮಹಾರಾಜರಾದ ಶ್ರೀ ಜಯ ಚಾಮರಾಜ ಒಡೆಯರು ಸಂಗೀತ ರಸಿಕರೇ ಅಲ್ಲದೆ ಸ್ವತಃ ವಾಗ್ಗೇಯಕಾರರೆಂಬುದು ಬಹು ಸಂತಸದ ವಿಷಯ.

ಮೂಲಲೇಖಕರು : ಶ್ರೀ ಡಿ. ಸುಬ್ಬರಾಮಯ್ಯ

ಅನುವಾದಕರು : ಶ್ರೀಮತಿ ಎಲ್.ಜಿ. ಸುಮಿತ್ರಾ

# ಕರ್ನಾಟಕದಲ್ಲಿ ಹಿಂದುಸ್ತಾನೀ ಸಂಗೀತ

18ನೆ ಶತಮಾನದ ಉತ್ತರಾರ್ಧದಿಂದ ಮುಂಬೈಕರ್ನಾಟಕವು ಮಹಾರಾಷ್ಟ್ರದ ಪ್ರಭಾವಕ್ಕೆ ತುಂಬ ಒಳಗಾಗಿತ್ತು. ಆದ್ದರಿಂದ ಮಹಾರಾಷ್ಟ್ರದಲ್ಲಿ ಪ್ರಚಲಿತವಾಗಿದ್ದ ಹಿಂದುಸ್ತಾನೀ ಸಂಗೀತದಿಂದ ಮುಂಬೈ ಕರ್ನಾಟಕವು ಪ್ರಭಾವಿತವಾದುದು ಸ್ವಾಭಾವಿಕವೇ ಸರಿ. ಪುರಂದರದಾಸರೇ ಮೊದಲಾದ ದಾಸರ ಪದಗಳ ಮೂಲಕ ಮೌಖಿಕ ಪಾರಂಪರ್ಯದಿಂದ ಬಂದ ಕರ್ನಾಟಕ ಭಕ್ತಿಸಂಗೀತದ ಪ್ರಭಾವವು ಅತ್ಯಲ್ಪವಾಗಿತ್ತೆಂದು ಹೇಳಬಹುದು. ಆದರೆ, ಈ ಸಂದರ್ಭದಲ್ಲಿ ಒಂದು ರೋಚಕವಿಷಯವೆಂದರೆ, ಗುಲ್ಬರ್ಗಾ ಜಿಲ್ಲೆಯ ಸುರಪುರ ಗ್ರಾಮದಲ್ಲಿ ಮಾತ್ರ ಕರ್ನಾಟಕ ಸಂಗೀತವಷ್ಟೆ ಅಲ್ಲ. ದಾಕ್ಷಿಣಾತ್ಯರ ವಿಶಿಷ್ಟಪದ್ಧತಿಯಾದ ಭರತನಾಟ್ಯವೂ ಊರ್ಜಿತಾವಸ್ಥೆಯಲ್ಲಿದ್ದವು. 19ನೆ ಶತಮಾನದ ಮಧ್ಯದ ವರೆಗೆ ಪ್ರತಿಭಾವಂತ ಸಂಗೀತಜ್ಞರೂ ಆನಂದದಾಸರಂಥ ದಾಸರೂ ಈ ಓಜಸ್ವೀ ಸಂಪ್ರದಾಯವನ್ನು ಜೀವಂತವಾಗಿ ಇಟ್ಟುಕೊಂಡಿದ್ದರು. ಈ ಎರಡೂ ಪದ್ಧತಿಗಳು ಮುಖ್ಯವಾಗಿ ಹಾಡುಗಾರಿಕೆಯ ರೀತಿಯಲ್ಲಿ ಭಿನ್ನ ಭಿನ್ನವಾಗಿವೆ.

18 ಮತ್ತು 19ನೆಯ ಶತಮಾನಗಳಲ್ಲಿ ಗ್ವಾಲಿಯರ್, ರಾಮಪುರ, ಬಡೋದಾ, ಇಚಲಕರಂಜಿ, ಔಂಧ ಮುಂತಾದ ಹಳೆಯ ರಾಜ್ಯಗಳಲ್ಲಿ ಹಿಂದುಸ್ತಾನೀ ಸಂಗೀತವನ್ನು ಚೆನ್ನಾಗಿ ಹಾಡುವಂಥ ಎಷ್ಟೋ ಕಲಾಭಿಜ್ಞರಿದ್ದರು. ಆಗ ಸದಾರಂಗ, ಅದಾರಂಗ, ಮನರಂಗ ಮೊದಲಾದ ಪ್ರಾಚೀನ ಗಾಯಕರ ರಚನೆಗಳು ವಿದ್ಯಾರ್ಥಿಗಳಲ್ಲಿ ಲೋಕಪ್ರಿಯವಾಗಿದ್ದವು. ಇದರಿಂದ ಆಗಿನ ಕಾಲದಲ್ಲಿ ಉಚ್ಚಶಿಕ್ಷಣಕ್ಕೋಸ್ಕರ ಪುಣೆ ಮತ್ತು ಮುಂಬಯಿಗೆ ಹೋಗುತ್ತಿದ್ದ ಉತ್ತರಕರ್ನಾಟಕದ ವಿದ್ಯಾರ್ಥಿಗಳ ಮೂಲಕ ಉತ್ತರ ಕರ್ನಾಟಕದಲ್ಲಿ ಹಿಂದುಸ್ತಾನೀ ಸಂಗೀತದ ಅಭಿರುಚಿಯು ಬೆಳೆಯುವಂತಾಯಿತು.

19ನೆಯ ಶತಮಾನದ ಉತ್ತರಾರ್ಧದಲ್ಲಿ ಮತ್ತು 20ನೆಯ ಶತಮಾನದ ಪೂರ್ವಾರ್ಧದಲ್ಲಿ ಉತ್ತರ ಕರ್ನಾಟಕದ ಆಧುನಿಕ ಸಂಗೀತ ಕ್ಷೇತ್ರದಲ್ಲಿ ಉತ್ತರಕರ್ನಾಟಕದ ತುಂಬಾ ಪ್ರಭಾವವನ್ನು ಬೀರಿದ ಕೆಲವು ವಿಖ್ಯಾತ ಸಂಗೀತಗಾರರ ಹೆಸರುಗಳನ್ನು ಇಲ್ಲಿ ಉಲ್ಲೇಖಿಸಬಹುದು: ಕರ್ನಾಟಕದ ಗಡಿಯ ಸಮೀಪದಲ್ಲಿರುವ ಮಿರ್ಜಿಯ ಅಬ್ದುಲ್ ಕರೀಮಖಾನ್ ಅವರಲ್ಲಿ ಒಬ್ಬರು. ಹಿಂದೂಸ್ತಾನೀ ಸಂಗೀತವನ್ನು ಅಭ್ಯಸಿಸುತ್ತಿದ್ದ ಅಂದಿನ ಉದಯೋನ್ಮುಖ ಹಾಡುಗಾರರ ಮೇಲೆ ಅವರ ಪ್ರಭಾವವು ತುಂಬ ಪ್ರಬಲವಾಗಿತ್ತು. ಸಪ್ತಕದ ಎಲ್ಲಸ್ವರಗಳನ್ನೂ ನಿರಾಯಾಸವಾಗಿ ಹಾಡುವ ಅವರ ಧ್ವನಿಯು (ಶಾರೀರವು) ಬಹು ಕೋಮಲವೂ, ಚಪಲವೂ ಆಗಿದ್ದು ಮಂದ್ರ ಸಪ್ತಕದಿಂದ ತಾರಸಪ್ತಕದ ವರೆಗೆ ಸುಖವಾಗಿ ಏರಿ ಇಳಿಯುವಂತಿತ್ತು. ಅವರ ಆರೋಹಣ ಅವರೋಹಣಗಳ ಮೇರೆಯು ಅದ್ಭುತವಾಗಿತ್ತು. ಅವರ ಕಂಠವು ಕೋಮಲ ಮತ್ತು ಅತಿ ಕೋಮಲ ಸ್ವರಗಳನ್ನು ಕೂಡ (ಕರ್ನಾಟಕ ಪದ್ಧತಿಯಲ್ಲಿ ಸಾಧಾರಣ ಗಾಂಧಾರ, ಕೋಮಲ, ಮಧ್ಯಮ, ಕೈಶಿಕಿನಿಷಾದ ಇತ್ಯಾದಿ) ಪರಮ ಚಾತುರ್ಯದಿಂದ ಸಹಜವಾಗಿ ನುಡಿಸುವಂತಿತ್ತು. ಇದರಿಂದ ಕರ್ನಾಟಕ ಸಂಗೀತದ ತವರುಮನೆಯಾದ ಮೈಸೂರು ಮತ್ತು ಮದ್ರಾಸಿನ ಸಂಗೀತ ಸಮೀಕ್ಷಕರು ಕೂಡ ಅವರನ್ನು ಮುಕ್ತ ಕಂಠದಿಂದ ಹೊಗಳುತ್ತಿದ್ದರು. ಅವರು ಕರ್ನಾಟಕ ಗಾಯನ ಪದ್ಧತಿಯನ್ನೂ ಕಲಿತರು. ಇನ್ನೂ ಕೆಲವು ವರ್ಷ ಅವರು ಜೀವಿಸಿದ್ದರೆ ಉತ್ತರ ಹಿಂದುಸ್ತಾನಿ ಮತ್ತು ದಾಕ್ಷಿಣಾತ್ಯ ಪದ್ಧತಿಗಳ ಅನುಯಾಯಿಗಳು ಪರಸ್ಪರ ಪದ್ಧತಿಗಳನ್ನು ತಿಳಿದು ಪ್ರಶಂಸಿಸಲು ಎಷ್ಟೋ

ಅನುಕೂಲವಾಗುತ್ತಿತ್ತು. 'ಸವಾಯಿ ಗಂಧರ್ವ' ಎಂದು ಪ್ರಸಿದ್ಧರಾದ ರಾಮಭಾವು ಕುಂದಗೋಳಕರ್ ಇವರು ಅಬ್ದುಲ್ ಕರೀಮಖಾನರ ನಾಮಾಂಕಿತ ಶಿಷ್ಯರಲ್ಲೊಬ್ಬರು. ಅವರು ಮೊದಲು ನಾಟಕಗಳಲ್ಲಿ ಪಾತ್ರಗಳನ್ನು ವಹಿಸುತ್ತಿದ್ದರು. ನಾಟಕ ರಂಗದಿಂದ ನಿವೃತ್ತರಾದ ಮೇಲೆ ಹಿಂದುಸ್ಥಾನೀಸಂಗೀತದ ಹಾಡುಗಾರರೆಂದು ಹೆಸರುವಾಸಿಯಾದರು. ಈ ಸಂಪ್ರದಾಯವನ್ನು ಮುಂದುವರಿಸಲು ಸವಾಯಿ ಗಂಧರ್ವರು ವಿ.ಎ. ಕಾಜಲಕರ್ ಮೊದಲಾದವರಿಗೆ ಸಂಗೀತವನ್ನು ಕಲಿಸಿದರು. ಅನೇಕ ಶತಮಾನಗಳಿಂದ ಗ್ವಾಲಿಯರ್ ಪಟ್ಟಣವು ಹಿಂದೂಸ್ಥಾನೀ ಸಂಗೀತದ ಒಂದು ವಿಶಿಷ್ಟಪದ್ಧತಿಗೆ ತವರು ಮನೆಯಾಗಿದೆ. ರಹಮತ್‌ಖಾನ್ ಮತ್ತು ನಿಸ್ಸಾರ ಹುಸೇನ್‌ಖಾನರಂಥ ಅಲ್ಲಿಯ ಸಂಗೀತಗುರುಗಳಿಂದ ಕೆಲವು ಕರ್ಣಾಟಕ ಪ್ರತಿಭಾ ಸಂಪನ್ನ ಶಿಷ್ಯರು ಸಂಗೀತವನ್ನು ಕಲಿತು ಗ್ವಾಲಿಯರ್ ಮನೆತನದ (ಘರಾಣಾ)ದ ಹಾಡುಗಾರಿಕೆಯನ್ನು ಅಂಗೀಕರಿಸಿದರು. ರಾಮಕೃಷ್ಣ ಬುವಾ ವಝೆ ಮತ್ತು ಶಿವರಾಮ ಬುವಾ ಇವರ ಹೆಸರುಗಳನ್ನು ಇಲ್ಲಿ ಉಲ್ಲೇಖಿಸಬಹುದು. ಗುರುರಾವ್ ದೇಶಪಾಂಡೆ ಮತ್ತು ಭೀಮಸೇನ ಜೋಶಿ ಇವರು ಕನ್ನಡ ಭಕ್ತಿಗೀತಗಳನ್ನು ಹೊಸ ಧಾಟಿಗಳಿಗೆ ಕೂಡಿಸಿ ತಮ್ಮ ಸಂಗೀತ ಭಂಡಾರವನ್ನು ಬೆಳೆಸಿಕೊಂಡರು. ಗಂಗೂಬಾಯಿ ಹಾನಗಲ್, ನೀಲಕಂಠ ಬುವಾ ಗಾಡಗೋಳಿ ಮತ್ತು ವೆಂಕಟರಾವ್ ರಾಮದುರ್ಗ ಇವರು ಕೂಡ, ಗ್ವಾಲಿಯರ್ ಮನೆತನದ ಉಲ್ಲೇಖನೀಯ ಹಾಡುಗಾರರು.

ಮಲ್ಲಿಕಾರ್ಜುನ ಮನ್ಸೂರ್ ಇವರು ಕರ್ಣಾಟಕದ ಇಂದಿನ ಸುಪ್ರಸಿದ್ಧ ಗಾಯಕರು. ಗ್ವಾಲಿಯರ್ ಮತ್ತು ಜಯಪುರ ಮನೆತನಗಳ ಪ್ರತಿನಿಧಿಗಳಾದ ಹಾಗೂ ಕುಶಲಗಾಯಕರಾದ ಮಂಜೀಖಾನ್ ಮತ್ತು ಬರ್ಜೀಖಾನ್ ಇವರ ಹಾಡುಗಾರಿಕೆಯಲ್ಲಿಯ ಸುಂದರ ಅಂಶಗಳನ್ನು ಮಲ್ಲಿಕಾರ್ಜುನ ಮನ್ಸೂರ್ ಇವರು ತಮ್ಮ ಹಾಡುಗಾರಿಕೆಯಲ್ಲಿ ಪರಿಗ್ರಹಿಸಿರುವರು. ಮನ್ಸೂರರು ಅನೇಕ ಶಿಷ್ಯರಿಗೆ ಸಂಗೀತಶಿಕ್ಷಣವನ್ನು ಕೊಟ್ಟಿರುವರು. ಅವರು ತಮ್ಮದೇ ಒಂದು ವಿಶಿಷ್ಟ ವೈಯಕ್ತಿಕ ಗಾಯನ ಪದ್ಧತಿಯನ್ನು ಬೆಳೆಸಿಕೊಂಡಿರುವರು ; ಅದು ಶಾಸ್ತ್ರಸಮ್ಮತವೂ ಸುಶ್ರಾವ್ಯವೂ ಆಗಿದೆ. ಹುಟ್ಟು ಕುರುಡರಾದ ಉಭಯಗಾನ ವಿಶಾರದ ಪಂಚಾಕರಯ್ಯನವರು ಸಂಗೀತದಲ್ಲಿ ಅಪ್ರತಿಮ ಪ್ರತಿಭಾಸಂಪನ್ನರು. ಅವರಿಗೆ ಸಂಗೀತವು ಕಲಾಸಾಧನೆಗಿಂತ ಹೆಚ್ಚು ಧರ್ಮಸಾಧನೆಯಾಗಿತ್ತು. ಬಸವರಾಜ ರಾಜಗುರು, ಅವರ ಶಿಷ್ಯರಲ್ಲೊಬ್ಬರು.

ಉಸ್ತಾದ್ ಫಿಯಾಜಖಾನ್ ಇವರು ಆಗ್ರಾಮನೆತನಕ್ಕೆ ಗೌರವ ತಂದವರಲ್ಲಿ ಪ್ರಮುಖರು. ಇವರು 'ರಂಗೀಲೆ' ಅಂದರೆ ರಸಿಕ ಸಂಪ್ರದಾಯಕ್ಕೆ ಸೇರಿದವರು. ಆಗ್ರಾ ಮನೆತನದ ಹಾಡುಗಾರಿಕೆಯಲ್ಲಿ ಶಾಸ್ತ್ರೀಯ ಹಿಂದೂಸ್ಥಾನೀ ಸಂಗೀತ ಪದ್ಧತಿಯ ಎಲ್ಲ ಉತ್ಕೃಷ್ಟ ಗುಣಗಳೂ ಸುರಕ್ಷಿತವಾಗಿ ಉಳಿದಿವೆ. ಈಗ ಬೆಂಗಳೂರಿನಲ್ಲಿ ನೆಲಸಿರುವ ರಾಮರಾವ್ ವಿ. ನಾಯಕ್ ಇವರು ಈ ಪದ್ಧತಿಯನ್ನು ಕರ್ಣಾಟಕ ಲೋಕಪ್ರಿಯ ಮಾಡಿದರು. ಅವರು ತಮ್ಮ ಅನೇಕ ಶಿಷ್ಯರಿಗೂ ಈ ಪದ್ಧತಿಯನ್ನು ಕಲಿಸಿದರು. ರಾಮರಾಯರು ಉಸ್ತಾದ್ ಫಿಯಾಜಖಾನರ ಭಾವನ್ಮೈದುನ ಮತ್ತು ಶಿಷ್ಯರಾದ ಅತ್ತಾಹುಸೇನರ ಶಿಷ್ಯರಿದ್ದು 10 ವರ್ಷಗಳ ವರೆಗೆ ಫಿಯಾಜಖಾನರ ಸಂಪರ್ಕದಲ್ಲಿದ್ದರು. ಅದರಿಂದ ಆಗ್ರಾಮನೆತನದ ಎಲ್ಲ ಸೂಕ್ಷ್ಮ ರಾಗರಹಸ್ಯಗಳನ್ನು ತಮ್ಮ ಹಾಡುಗಾರಿಕೆಯಲ್ಲಿ ವ್ಯಕ್ತಪಡಿಸುವಷ್ಟು ಯೋಗ್ಯತಾ ಸಂಪನ್ನರಾಗಿದ್ದಾರೆ. ಆಗ್ರಾ ಹಾಡುಗಾರಿಕೆಯು ಪ್ರಾಚೀನ ಧ್ರುವಪದದ ಶುದ್ಧತೆ ಮತ್ತು ಪ್ರೌಢಿಮೆಯನ್ನು ಸಾಕಷ್ಟು ಪರಿಮಾಣದಲ್ಲಿ ಕಾಯ್ದುಕೊಂಡಿದೆ.

ವಾದ್ಯ ಸಂಗೀತಜ್ಞರಲ್ಲಿ ವಿಶೇಷವಾಗಿ ಉಲ್ಲೇಖನೀಯ ಹೆಸರುಗಳೆಂದರೆ : ಹನುಮಂತರಾವ್ ವಾಳವೇಕರ್—ಉತ್ತರ ಕರ್ಣಾಟಕದಲ್ಲಿ ಪಿಟೀಲಿಗೆ ಲೋಕಪ್ರಿಯತೆಯನ್ನು ತಂದವರೇ ಇವರು. ಪಿಟೀಲ್ ಅನಂತಪ್ಪನವರು ದೊಡ್ಡಾಟ, ಬಯಲಾಟಗಳಲ್ಲಿ ಲೋಕಗೀತಗಳ ಸಂಗತಿಯನ್ನು ಮಾಡುವುದರಲ್ಲಿ ತುಂಬ ಲೋಕಪ್ರಿಯರು. ಸ್ವರಮಂಡಲವಾದಕರಾದ ಸಾಧು ದತ್ತಾತ್ರೇಯ ಪರ್ವತೀಕರ್ ಇವರ ಸಂಗೀತವು

ಸಂಪೂರ್ಣವಾಗಿ ಅಧ್ಯಾತ್ಮ ಸಾಧನೆಗೆ ಮೀಸಲಾದದ್ದು. ಆಧುನಿಕ ಕಾಲದಲ್ಲೆ ದುರ್ಲಭವಾದ ಕಿನ್ನರಿ ವಾದ್ಯವನ್ನು ಬಾರಿಸುತ್ತಿದ್ದ ಹುಲಗೂರ ಕೃಷ್ಣಾಚಾರ್ಯರು ಉತ್ತಮ ವಾದಕರಷ್ಟೇ ಅಲ್ಲದೆ, ಪ್ರಸಿದ್ಧ ಸಂಗೀತ ಶಾಸ್ತ್ರಜ್ಞರೂ ಇದ್ದು ಪ್ರಾಚೀನ ಗ್ರಂಥಗಳ ಆಧಾರದ ಮೇಲೆ ಸಂಗೀತ ಶಾಸ್ತ್ರದಲ್ಲಿ ತುಂಬ ಸಂಶೋಧನೆಯನ್ನು ನಡೆಸಿದ್ದರು.

ಕನ್ನಡ ಭಕ್ತಿಪ್ರಧಾನ ಸಂಗೀತವು ಹೊಸ ಹೊಸ ರೂಪಗಳನ್ನು ಹೊಂದುತ್ತಲಿದೆ. ಈ ಸಂದರ್ಭದಲ್ಲಿ ಕನ್ನಡಹಾಡುಗಳ ಭವಿಷ್ಯವೇನು ? ಮುಂದೆ ಎಂದಾದರೂ ಪ್ರತಿಭಾ ಸಂಪನ್ನ ಕನ್ನಡ ವಾಗ್ಗೇಯಕಾರರ ರಚನೆಗಳಿಗೆ ತ್ಯಾಗರಾಜರ ತೆಲುಗು ಕೀರ್ತನೆಗಳಿಗೆ ಪ್ರಾಪ್ತವಾದ ಗೌರವಸ್ಥಾನವು ಸಿಗಬಹುದೆ? ಸಿಗಬಹುದು. ಹೇಗೆ ? ಇದು ಬಹುಮಟ್ಟಿಗೆ ಹಿಂದುಸ್ತಾನೀ ಮತ್ತು ಕರ್ಣಾಟಕಸಂಗೀತ ಪದ್ಧತಿಗಳ ಸುಂದರ ಸಮನ್ವಯ ದಿಂದ ಸಾಧ್ಯವಾಗಬಹುದು ; ಅಥವಾ ಕನ್ನಡ ಸಂಗೀತವು ಲಯಪ್ರಧಾನ ದಾಕ್ಷಿಣಾತ್ಯಪದ್ಧತಿಯ ಬೇಡೆಗಳ ಬೆಗಾವಿನಿಂದ ಪಾರಾಗಿ, ಜೊತೆಜೊತೆಗೆ ಹಿಂದುಸ್ತಾನೀ ಪದ್ಧತಿಯನ್ನನುಸರಿಸಿ ಕನ್ನಡ ಗೀತಗಳನ್ನು ಹಾಡುವ ಉತ್ತರ ಕರ್ಣಾಟಕದ ಹಾಡುಗಾರರ ಶಬ್ದೋಚ್ಚಾರಣ ಶೈಥಿಲ್ಯದಿಂದ ಬಿಡುಗಡೆಹೊಂದಿ ತನ್ನ ಮೂಲ ಶುದ್ಧ ಸ್ವರೂಪವನ್ನು ಹೊಂದುವುದರಿಂದಲೂ ಇದು ಸಾಧ್ಯ ಆಗಬಹುದು.

ಸುಗಮಸಂಗೀತವು ಲೋಕ ಪ್ರಿಯವಾಗಿದ್ದು ಅದರಲ್ಲಿ ಭಾವಗೀತಗಳೂ ಸಿನೇಮಾ ಹಾಡುಗಳೂ ಜನಪದ ಗೀತಗಳೂ ಮತ್ತು ಅಂಥವೇ ಇನ್ನಿತರ ಸರಳ ಪ್ರಕಾರಗಳೂ ಸಮಾವೇಶಗೊಳ್ಳುತ್ತವೆ. ಲೋಕಪ್ರಿಯ ಹಾಡುಗಾರರಲ್ಲಿ ಬಾಳಪ್ಪ ಹುಕ್ಕೇರಿ, ಉಷಾ ಖಾಡಿಲ್ಕರ್, ಗೀತಾ ಕುಲಕರ್ಣಿ ಮತ್ತು ಶಾಂತಿಮತಿ ಗಂಗೊಳ್ಳಿ ಇವರ ಹೆಸರುಗಳನ್ನು ಹೇಳಬಹುದು. ಸಿನೇಮಾ ಸಂಗೀತದಲ್ಲಿ ಈಗ ಪಾಶ್ಚಾತ್ಯ ಸಂಗೀತದ ಪದ್ಧತಿ ಮತ್ತು ತಂತ್ರ ಇವುಗಳ ಪ್ರಭಾವವು ತುಂಬಾ ಹೆಚ್ಚಾಗಿದೆ. ಹಾಡುಗಾರನ ಹಿನ್ನೆಲೆಯಾಗಿ ಈಗ ಆ ತಂತ್ರವು ಉಪಯೋಗದಲ್ಲಿದೆ. ಅದರಿಂದ ವಿಚಿತ್ರ ರಾಗಪ್ರಕಾರಗಳು ನಿರ್ಮಾಣವಾಗುತ್ತಿವೆ. ಭಾರತದ ಶಾಸ್ತ್ರೀಯ ಸಂಗೀತದ ಮೇಲೆ ಭವಿಷ್ಯದಲ್ಲಿ ಇದರ ಪರಿಣಾಮವು ಹೇಗೆ ಆಗುವುದೆಂಬುದನ್ನು ಈಗ ಹೇಳುವುದು ಕಠಿನ.

### ಯಕ್ಷಗಾನ ಮತ್ತು ನಾಟಕ ಸಂಗೀತ

ಬಯಲಾಟ, ದೊಡ್ಡಾಟ, ಭಾಗವತರಾಟ--ಇವೆಲ್ಲವೂ ಒಂದೇ ಜಾತಿಯವಿದ್ದು ನಾಟ್ಯ ಮತ್ತು ಗಾಯನವನ್ನು ಒಂದುಗೂಡಿಸಿ ಜನಸಾಮಾನ್ಯರ ಕಲಾ ಸಂಸ್ಕೃತಿಯನ್ನು ಬೆಳೆಸಲು ಸಹಾಯಕವಾಗಿವೆ. ಇವುಗಳ ಮೇಲೆ ಉತ್ತರ ಹಿಂದುಸ್ತಾನೀ ಸಂಗೀತದ ಪ್ರಭಾವವು ಎಳ್ಳಷ್ಟೂ ಇಲ್ಲ.

ಕರ್ಣಾಟಕದ ಕಲಾವಿದರು ಕರ್ಣಾಟಕ ಮತ್ತು ಹಿಂದುಸ್ತಾನೀ ಸಂಗೀತ ಪದ್ಧತಿಗಳ ಸುಂದರ ಸಮನ್ವಯವನ್ನು ಉಂಟುಮಾಡಲು ಎಲ್ಲ ವಿಧದಲ್ಲಿಯೂ ಯೋಗ್ಯರಿದ್ದಾರೆ. ಯಾಕೆಂದರೆ ಕನ್ನಡಿಗರು ಕರ್ಣಾಟಕದ ಭಿನ್ನಭಿನ್ನ ಭಾಗಗಳಲ್ಲಿ (ಅಂದರೆ ಹಿಂದೆ ಮದ್ರಾಸ್ ಪ್ರಾಂತ, ಬೊಂಬಾಯಿ ಪ್ರಾಂತ, ಮೈಸೂರು ಮತ್ತು ಹೈದರಾಬಾದ ಸಂಸ್ಥಾನಗಳಲ್ಲಿ ಹಂಚಿ ಹೋದ ಕರ್ಣಾಟಕದ ಭಾಗಗಳಲ್ಲಿ) ನೆಲಸಿದ್ದರಿಂದ ಎರಡೂ ಸಂಗೀತ ಪದ್ಧತಿಗಳು ಅವರಿಗೆ ಸುಪರಿಚಿತವಾಗಿವೆ. ಅಲ್ಲದೆ, ಈ ಕಾರ್ಯದಲ್ಲಿ ಅವರಿಗೆ ಸಹಾಯಮಾಡಲು ಪರಂಪರಾಪ್ರಾಪ್ತ ಸಂಗೀತ ಸಂಪತ್ತಿಯೂ ಅವರ ಸ್ವಾಧೀನದಲ್ಲಿದೆ.

ಮೂಲ ಲೇಖಕರು : ಶ್ರೀ ಎಸ್.ಆರ್. ತಟ್ಟಿ
ಅನುವಾದಕರು : ಶ್ರೀ ಟಿ. ಭೀಮಾಚಾರ್ಯ

# ಹಳೆಯ ಮೈಸೂರು ಸಂಸ್ಥಾನದಲ್ಲಿ ನೃತ್ಯಕಲೆ

ಕಳೆದ ಶತಮಾನದಲ್ಲಿ ಮೈಸೂರು ಸಂಸ್ಥಾನದಲ್ಲಿ ವಿಜೃಂಭಿಸಿದ ನಾಟ್ಯಕಲೆಯ ಐತಿಹಾಸಿಕ ಅವಲೋಕನವನ್ನು, ಕಲಾಪ್ರೇಮಿಗಳೂ ಕಲಾವಂತರೂ ಆಗಿದ್ದು ಇನ್ನೂ ಇರುವ, ಕೆಲವು ವೃದ್ಧರ ನೆನಪಿನ ಪುಟಗಳಿಂದ ಮಾತ್ರ ಸಂಗ್ರಹ ಮಾಡಬಹುದಾಗಿದೆ. ಆದರೆ ಈ ಬಗ್ಗೆ ತಿಳಿಯಲಪೇಕ್ಷಿಸುವವರಿಗೆ ಇರುವ ಸಾಹಿತ್ಯ ಅತ್ಯಲ್ಪ. ಪ್ರಸ್ತುತ ಕಾಲದಲ್ಲಿ ನೃತ್ಯಗಾರ್ತಿಯರು ಅಥವಾ ನಾಯಕಸಾನಿಯರೆಂದು ಕರೆಯಲಾಗುತ್ತಿದ್ದ ಸ್ತ್ರೀಯರಿಗೆ ಕಳಂಕಯುಕ್ತವಾದ ಸ್ಥಾನವಿರಲಿಲ್ಲ. ಮೈಸೂರು, ಬೆಂಗಳೂರು ಮುಳುಬಾಗಿಲು, ಕಡೂರು, ಟಿ. ನರಸೀಪುರ ಮುಂತಾದ ಪ್ರದೇಶಗಳಲ್ಲಿದ್ದ ದೇವಾಲಯಗಳಲ್ಲಿ ದೇವದಾಸಿಯರೆಂದು ಕರೆಯಲಾಗಿದ್ದ ಪ್ರಸಿದ್ಧ ನೃತ್ಯಗಾರ್ತಿಯರಿದ್ದರು. ಇವರು ದೇವಾಲಯಗಳ ಬಳಿಯಲ್ಲಿಯೇ ವಾಸಿಸುತ್ತಿದ್ದರು ; ಶಾಸ್ತ್ರ, ಸಂಗೀತ ಮತ್ತು ಭರತನಾಟ್ಯಗಳಲ್ಲಿ ಅಪರಿಮಿತ ಜ್ಞಾನವನ್ನು ಪಡೆದಿದ್ದರು. ಅನೇಕ ವೇಳೆ ಈ ಸ್ತ್ರೀಯರು ಐಶ್ವರ್ಯವಂತರಾದ ವರ್ತಕರು, ಜಮೀನ್‌ದಾರರು ಮತ್ತು ನೃತ್ಯಕಲಾ ರಸಿಕರ ಆಶ್ರಯಕ್ಕೆ ಒಳಪಡುತ್ತಿದ್ದುದೂ ಉಂಟು. ಸಮಾಜದಲ್ಲಿ ಇವರ ಸ್ಥಾನವು ಅಂಗೀಕೃತವಾಗಿ, ಸುಭದ್ರವಾಗಿದ್ದಿತು. ಅಲ್ಲದೆ ' ನಿತ್ಯಸುಮಂಗಲಿ 'ಯರೆಂದು ಕರೆಯಲಾಗಿದ್ದ ಇವರು ಮಂಗಳಸೂತ್ರಧಾರಣೆಮಾಡಿದ ಹೊರತು ಯಾವ ವಿವಾಹಾದಿಗಳೂ ಜರಗುತ್ತಿರಲಿಲ್ಲ. ಇವರು ಆಶ್ರಯದಾತರುಗಳಿಗೆ ಬಹಳ ಆಪ್ತರಾಗಿದ್ದು ಅವರ ಮೇಲೆ ನಿತಾಂತ ಪ್ರಭಾವವನ್ನು ಬೀರುತ್ತಿದ್ದರು. ಇವರ ಮಕ್ಕಳಿಗೆ ಆಶ್ರಯದಾತರ ಆಸ್ತಿಯ ಮೇಲೆ ಸಂಪೂರ್ಣ ಹಕ್ಕುಬಾಧ್ಯತೆಗಳಿಲ್ಲದಿದ್ದರೂ ಅವರ ಜಮೀನಿನ ಕೆಲವು ಭಾಗಗಳು ದಕ್ಕುತ್ತಿದ್ದವು. ಆಶ್ರಯದಾತರ ಮೇಲೆ ಇವರು ಬೀರುತ್ತಿದ್ದ ಈ ಅತಿಯಾದ ಪ್ರಭಾವಗಳ ಕಾರಣದಿಂದಲೇ ಕೆಲವು ಕಾಲಾನಂತರ ನಾಟ್ಯದ ವಿರುದ್ಧ ಚಳವಳಿ ಆರಂಭವಾಗಿ ನೃತ್ಯಗಾರ್ತಿಯರ ಸ್ಥಾನ ಸಮಾಜದಲ್ಲಿ ಕೀಳೆನಿಸಲು ಪ್ರಾರಂಭವಾಯಿತು. ನಮ್ಮ ದೇಶದಲ್ಲಿ ಆಂಗ್ಲ ವಿದ್ಯಾಭ್ಯಾಸ ಮುನ್ನಡೆದಂತೆ ಸಂಗೀತ ಮತ್ತು ನೃತ್ಯಕ್ಕೆ ಇದ್ದ ತಿರಸ್ಕಾರ ಮತ್ತು ಕ್ರೋಧಗಳು ಹೆಚ್ಚಳ ಗೊಂಡುವು. ಇಷ್ಟು ಕ್ರೋಧಗಳ ನಡುವೆಯೂ ಕೆಲವು ಕಲಾರಸಿಕರು ವಿಶೇಷತಃ ಅರಮನೆಯ ಸಂಗೀತ ವಿದ್ವಾಂಸರು ಮತ್ತು ಇತರರು ಈ ಕಲೆಗಳನ್ನು ಪ್ರೋತ್ಸಾಹಿಸಿ, ಅವುಗಳಿಂದ ಆನಂದಾನುಭವವನ್ನು ಸಮೃದ್ಧಿಯಾಗಿ ಪಡೆಯುತ್ತಿದ್ದರು. ಹಬ್ಬ ಹರಿದಿನಗಳಲ್ಲಿ ದೇವಾಲಯಗಳಲ್ಲಿಯೂ ಶ್ರೀಮಂತ ವರ್ಗದ ವಿವಾಹಾದಿ ಸಂದರ್ಭಗಳಲ್ಲಿಯೂ ಕಲಾಪ್ರದರ್ಶನಕ್ಕೆ ಅವಕಾಶವಿರುತ್ತಿದ್ದಿತು.

ಈ ಶತಮಾನದ ಆದಿಭಾಗದ ವರೆಗೂ ವಿದ್ಯಾವಂತ ವರ್ಗದವರಿಂದ ಸಂಗೀತ ಮತ್ತು ನೃತ್ಯದ ಬಗ್ಗೆ ಇದ್ದ ತಿರಸ್ಕಾರಗಳು ಅಂತೆಯೇ ಉಳಿದುವು. ಸಂಗೀತ ನಾಟ್ಯಗಳು ಅಪ್ರಾಕೃತ ಕಲೆಗಳೆಂದೂ ಯುವ ಜನಾಂಗದಲ್ಲಿ ಅಶ್ಲೀಲ ಪ್ರಚೋದನೆಗಾಗಿ ನಿಯೋಜಿತವಾದುವೆಂದೂ ಸುಸಂಸ್ಕೃತ ಜನಾಂಗದಲ್ಲಿ ಇವುಗಳ ಅಭ್ಯಾಸವಿರಕೂಡದೆಂದೂ ಅಭಿಪ್ರಾಯವಿದ್ದಿತು. ಆದರೆ ಕಾಲಚಕ್ರ ಉರುಳಿದಂತೆ, ಜನರ ಸಾಂಪ್ರದಾಯಿಕ ಮಾರ್ಗಗಳು ಬದಲಾಗುತ್ತಾ ಬಂದವು. ನಮ್ಮ ಲಲಿತ ಕಲೆಗಳ ಕ್ಷೇತ್ರದಲ್ಲಿ ಒಂದು ಪುನರುತ್ಥಾನದ ಅಧ್ಯಾಯ ಆರಂಭವಾಯಿತು.

ಆಳಿದ ಮೂರನೆಯ ಕೃಷ್ಣರಾಜ ಒಡೆಯರವರ ಕಾಲದಲ್ಲಿ ಸಂಗೀತ ನೃತ್ಯಕಲೆಗಳಿಗೆ ಗಮ್ಯವಾದ

ರಾಜಾಶ್ರಯಗಳು ದೊರೆತವು. 1860ರಿಂದ 1881ರ ವರೆಗೂ--ಅಂದರೆ, ದಿವಂಗತ ಚಾಮರಾಜ ಒಡೆಯರವರು ಪ್ರಾಪ್ತವಯಸ್ಕರಾಗಿ ಸಿಂಹಾಸನವನ್ನೇರುವ ವರೆಗೂ ಈ ಕಲೆಗಳ ಪ್ರಗತಿ ಸ್ವಲ್ಪಮಟ್ಟಿಗೆ ಇಳಿಮುಖವಾಗಿದ್ದಿತು. ಅನಂತರ ನೃತ್ಯ ಮತ್ತು ಸಂಗೀತ ವಿದ್ವಾಂಸರನೇಕರು ಆಸ್ಥಾನವನ್ನು ಅಲಂಕರಿಸಿ ಈ ಕಲೆಗಳು ಆಸ್ಥಾನದ ಶಿಷ್ಟಾಚಾರಗಳಲ್ಲಿ ಒಂದಾದುವು. ಸ್ವತಃ ಕಲೆಗಾರರಾಗಿದ್ದ ದಿವಂಗತ ನಾಲ್ಕನೆ ಕೃಷ್ಣರಾಜ ಒಡೆಯರ ಕಾಲದಲ್ಲಿ ಈ ಕಲೆಗಳ ಪುರೋಭಿವೃದ್ಧಿ ಇಮ್ಮಡಿಸಿತು. ಇದರಿಂದ ಸಂಗೀತ ಮತ್ತು ಕಲೆಗಳು ರಾಜಾಶ್ರಯಗಳಲ್ಲಿ ವೃದ್ಧಿಗೊಂಡುವು. ಇತರ ಕಲಾಪ್ರೇಮಿಗಳು ಕಲೆಗಳ ಸೌಂದರ್ಯವನ್ನು ಆಸ್ವಾದಿಸಲು ಸಹಾಯಕವಾಯಿತು.

19ನೆ ಶತಮಾನದ ಅಂತ್ಯದ ವರೆಗೂ ಮೊದಲನೆಯ ಮಹಾಯುದ್ಧದ ಕೊನೆಯ ವರೆಗೂ ಮೈಸೂರು ಪ್ರಾಂತ್ಯದಲ್ಲಿ ದೇವಾಲಯಗಳಿಗೆ ಸೇರಿದ ಅನೇಕ ದೇವದಾಸಿಯರಿದ್ದರು. ಸಂಸ್ಥಾನದ ಸಾಮಾಜಿಕ ಜೀವನಕ್ಕೂ ದೇವಾಲಯಗಳಿಗೂ ನಿಕಟ ಸಂಪರ್ಕವೇರ್ಪಡುತ್ತಿದ್ದಿತು. ತಿರುಮಕೂಡಲು ನರಸೀಪುರ, ಮುಳುಬಾಗಿಲು, ಚಿಂತಾಮಣಿಯ ಬಳಿಯಿರುವ ಹೂವಾಡಿ ಅಥವಾ ಪೂವಲ್ವಾಡಿ ಮುಂತಾದ ಸ್ಥಳಗಳಲ್ಲಿ 200ಕ್ಕೂ ಮಿಗಿಲಾಗಿ ನರ್ತಕಿಯರಿದ್ದರು. ಮತ್ತು ಹಲವು 'ನಟ್ಟುವನಾರ್'ಗಳೂ ವಾಸಿಸುತ್ತಿದ್ದರು. ಮುಳುಬಾಗಿಲಿನಲ್ಲಿರುವ ದೇವಾಲಯಕ್ಕೆ ಸೇರಿದಂತೆ 14 ಜನ ನರ್ತಕಿಯರಿದ್ದು ಇವರು ವಾರಕ್ಕೊಂದು ಬಾರಿ ನೃತ್ಯಸೇವೆಯನ್ನು ಸಲ್ಲಿಸಬೇಕೆಂಬ ನಿಯಮವಿದ್ದಿತು. ದೇವದಾಸಿಯರಿಗೆ ನಟ್ಟುವನಾರ್‌ಗಳೇ ಅಲ್ಲದೆ ಸಂಸ್ಕೃತ ಮತ್ತು ಅಭಿನಯ ಶಾಸ್ತ್ರಗಳಲ್ಲಿ ಪರಿಣತರಾಗಿದ್ದ ಕೆಲವು ಬ್ರಾಹ್ಮಣ ಪಂಡಿತೋತ್ತಮರುಗಳೂ ನೃತ್ಯ ಶಿಕ್ಷಣವನ್ನು ನೀಡುತ್ತಿದ್ದರು. ಅವರುಗಳಲ್ಲಿ 19ನೆ ಶತಮಾನದ ಉತ್ತರ ಭಾಗದಲ್ಲಿ ಮುಳುಬಾಗಿಲಿನಲ್ಲಿ ಪ್ರಖ್ಯಾತ ನೃತ್ಯ ಶಿಕ್ಷಕರೆಂದು ಹೆಸರಾಂತಿದ್ದ ಪನ್‌ಶೇಕರಿ ವೆಂಕಟಸುಬ್ಬಾಭಟ್ಟ ಎಂಬವರು ಮುಖ್ಯರಾದವರು. ಇವರು ತಮ್ಮ ಶಿಷ್ಯಂದಿರ ಕಾಲಿಗೆ ತಂತಿಗಳನ್ನು ಬಿಗಿದು ಅವರು ನರ್ತಿಸ ಬೇಕಾದ ಆವರಣದ ನಿಯಮವನ್ನು ವಿಧಿಸುತ್ತಿದ್ದರೆಂದೂ ಶಿಷ್ಯರು ತಪ್ಪಿದಲ್ಲಿ ಅವರನ್ನು ಹೊಡೆದು ಶಿಕ್ಷಿಸುತ್ತಿದ್ದರೆಂದೂ ಹೇಳಲಾಗಿದೆ. ಈ ಕಾರಣಗಳಿಂದ ನರ್ತಕಿಯರು ನಾಟ್ಯಶಾಸ್ತ್ರದಲ್ಲಿ ನಿರ್ದಿಷ್ಟತೆ ಹಾಗೂ ಪಾಂಡಿತ್ಯವನ್ನು ಪಡೆಯಲು ಸಾಧ್ಯವಾಗಿದ್ದಿತು. ಪ್ರಸಿದ್ಧರಾದ ನರ್ತಕಿಯರಲ್ಲಿ ಸೂಕ್ಷ್ಮಭಾವಪ್ರದರ್ಶನಕ್ಕೆ ಮತ್ತು ವಿವಿಧ ಭಂಗಿಗಳ ಅಭಿನಯಕ್ಕೆ ಖ್ಯಾತಿಪಡೆದಿದ್ದ ಬೈರಕೂರ್ ವೆಂಕಟಲಕ್ಷ್ಮಿ ಎನ್ನುವವರೂ ಒಬ್ಬರು. ಜಯದೇವನ ಅಷ್ಟಪದಿ "ಯಾಹಿ ಮಾಧವ ಯಾಹಿ ಕೇಶವ" ಎಂಬುದನ್ನು ಭಾವಪೂರಿತವಾಗಿ ಅಭಿನಯಿಸುತ್ತಿದ್ದ ಟಿ. ನರಸೀಪುರಕ್ಕೆ ಸೇರಿದ ತಿರುಮಕೂಡಲು ಸುಂದರಮ್ಮನವರಂಥವರ ನಾಟ್ಯದಿಂದ ಸೌಂದರ್ಯಾನುಭವವನ್ನು ಪಡೆಯುತ್ತಿದ್ದ ಕಲಾರಸಿಕರುಗಳಿಗೇನೂ ಹಿಂದೆ ಕೊರತೆಯಿರಲಿಲ್ಲ. ಮೈಸೂರು ದೇಶದ ನಾಟ್ಯಲೋಕದಲ್ಲಿ ಹೆಸರಾಂತ ಇತರ ನರ್ತಕಿಯರೆಂದರೆ : ಚಂದ್ರವದನಮ್ಮ, ಪುಟ್ಟದೇವಮ್ಮ, ಬೆಂಗಳೂರಿನ ನಾಗರತ್ನ ಮತ್ತು ವರಾಳು, ಕೋಣಮಾರ ದೇವಿಯಮ್ಮ, ರಮಾಮಣಿ, ದೇವಾಲಯವೊಂದನ್ನು ಕಟ್ಟಿಸಿ ದಾನಮಾಡಿದ ಮುಗಳೂರ್ ತ್ರಿಪುರಸುಂದರಮ್ಮ ಮತ್ತು ಮೈಸೂರಿನ ಜಟ್ಟಿತಾಯಮ್ಮ ಮುಂತಾದವರು. ಆಶ್ರಯದಾತ ರಾಜರುಗಳಿಗೆ ಇವರ ಪಾಂಡಿತ್ಯದ ಬಗ್ಗೆ ತಿಳಿಯಲು ಒಂದೆರಡು ವರ್ಷಗಳೇ ಬೇಕಾಗುತ್ತಿದ್ದಿತು. ಅನಂತರ ಇವರು ಕಠಿನ ಪರೀಕ್ಷೆಯೊಂದಕ್ಕೆ ಒಳಪಡುತ್ತಿದ್ದರು. ಆಸ್ಥಾನದ ವಿದ್ವಾಂಸರುಗಳು ತೀವ್ರ ವಿಮರ್ಶಕರಾಗುತ್ತಿದ್ದರು, ಅಲ್ಲದೆ ಅವರಿಗೆ ಕಲೆಗಾರರ ಪಾಂಡಿತ್ಯದ ಬಗ್ಗೆ, ರಾಜಸಮ್ಮುಖದಲ್ಲಿ ನರ್ತನ ಏರ್ಪಡಿಸಲು ಅರ್ಹತೆಯಿದೆ ಎಂಬುದಾಗಿ ವೈಯಕ್ತಿಕ ಭರವಸೆಯೂ ಅನಿವಾರ್ಯವಾಗಿದ್ದಿತು. ಈ ವಿಷಯಗಳಿಗೆ ಸ್ವತಃ ಕಲೆಗಾರರಾಗಿದ್ದ ಅಂಬಿಳ್ ನರಸಿಂಹಯ್ಯಂಗಾರ್ ಎಂಬವರು ರಾಜನ ಗೌರವಕ್ಕೆ ಪಾತ್ರರಾಗಿ ಭರವಸೆಯನ್ನು ಗಳಿಸಿದ್ದರು.

ಮೈಸೂರಿನಲ್ಲಿ ಸುಮಾರು 200 ವರ್ಷಗಳ ಹಿಂದೆ ಪ್ರಾರಂಭವಾದ ನಾಟ್ಯ ಪದ್ಧತಿಯು ಒಂದು ವಿಶಿಷ್ಟ ರೀತಿಯಲ್ಲಿ ಬೆಳೆದು ಬಂದಿದೆ. ಈ ಕಲೆಯ ಬೆಳವಣಿಗೆಯ ವಿಷಯದಲ್ಲಿ ಅರಮನೆಯಿಂದ

ನೇಮಕಗೊಳ್ಳುತ್ತಿದ್ದ ದೇವಾಲಯದ ನರ್ತಕಿಯರು ಮತ್ತು ಅವರ ಗುರುಗಳು ಅಭಿನಂದನಾರ್ಹರು. ಇಲ್ಲಿ ಅಭಿನಯ ಕಲೆಯಲ್ಲಿ ನಿಷ್ಣಾತರೆನಿಸಿದ್ದ ಕವೀಶ್ವರ ಗಿರಿಯಪ್ಪ ಮತ್ತು ಕಾಶಿಗುರು ಎಂಬವರ ಹೆಸರುಗಳನ್ನು ಸೂಚಿಸಬಹುದು. ಅನಂತರ ಬಂದ ನೃತ್ಯ ಶಿಕ್ಷಕರುಗಳೆಂದರೆ ಅಮೃತಪ್ಪ, ದಾಸಪ್ಪ, ಕಿಟ್ಟಪ್ಪ, ಮತ್ತು ಜಟ್ಟಿತಾಯಮ್ಮ. ಈ ಶ್ರೇಷ್ಠಗುರುಗಳ ಶಿಷ್ಯವರ್ಗದಲ್ಲಿ ಅನೇಕರು ಇಂದಿಗೂ ಮೈಸೂರು ಸಂಸ್ಥಾನದಲ್ಲಿ ಅಭಿನಯ ಕಲೆಯನ್ನು ಬೆಳಗಿಸುತ್ತಿದ್ದಾರೆ. ಇವರು ಭರತನಾಟ್ಯದಲ್ಲಿ ಅಭಿನಯಿಸುವ ರಚನೆಗಳನ್ನು ಕ್ರಮವಾಗಿ ಮಂಗಳ, ಸ್ತುತಿ, ಅಲರಿಪ್ಪು, ಸ್ವರಜತಿ, ವರ್ಣ, ತಿಲ್ಲಾನ ಮತ್ತು ಕೊನೆಯದಾಗಿ ಅಭಿನಯ ಎಂದು ವ್ಯವಸ್ಥೆಗೊಳಿಸಿದ್ದಾರೆ. ಅಭಿನಯ ಭಾಗದಲ್ಲಿ ಸಂಸ್ಕೃತ ಶ್ಲೋಕಗಳಿಗೆ ಮತ್ತು ಅಷ್ಟಪದಿಗಳಿಗೆ ಹೆಚ್ಚು ಪ್ರಾಮುಖ್ಯವುಂಟು. ಇಂದಿಗೂ ಅಮರವಾಗಿರುವ ಕೆಲವು ನೃತ್ಯ ಶಿಕ್ಷಕರುಗಳ ಹೆಸರುಗಳೆಂದರೆ—1947 ರಲ್ಲಿ ದೈವಾಧೀನರಾದ ಮೈಸೂರಿನ ಜಟ್ಟಿತಾಯಮ್ಮ, ಕೋಲಾರದ ಕಿಟ್ಟಪ್ಪ ಮತ್ತು ಅವರ ಶಿಷ್ಯ ಕೋಲಾರದ ಪುಟ್ಟಪ್ಪ.

ಜಟ್ಟಿತಾಯಮ್ಮನವರು ಪ್ರಸಿದ್ಧ ಜಟ್ಟಿಯಾಗಿದ್ದ ದಾಸಪ್ಪನವರ ಪುತ್ರಿ. ಮುಮ್ಮಡಿ ಕೃಷ್ಣರಾಜ ಒಡೆಯರವರ ಆಸ್ಥಾನದಲ್ಲಿದ್ದ ಈಕೆ ಕಲೆಗಾಗಿ ಆತ್ಮಾರ್ಪಣೆಮಾಡಿದ್ದ ಪ್ರಬುದ್ಧ ನೃತ್ಯಗಾರ್ತಿ. ಆಕೆಗೆ ನೃತ್ಯಕಲೆಯು ಕೇವಲ ಸಂಸ್ಕಾರ ಮಾತ್ರವೇ ಅಲ್ಲದೆ ಆತ್ಮಸಾಕ್ಷಾತ್ಕಾರದ ಸಾಧನವೂ ಆಗಿದ್ದಿತು. ಇವರಿಗೆ ಮೊದಲು ನೃತ್ಯ ಶಿಕ್ಷಣ ದೊರೆತದ್ದು ಸುಬ್ಬರಾಯಪ್ಪನವರಲ್ಲಿ. ಅನಂತರ ಪ್ರೌಢ ಅಭಿನಯ ಶಿಕ್ಷಣವನ್ನು ಪ್ರಸಿದ್ಧ ನಾಟ್ಯಾಚಾರ್ಯರುಗಳಾದ ಕವೀಶ್ವರ ಗಿರಿಯಪ್ಪ, ಚಂದ್ರಶೇಖರಶಾಸ್ತ್ರಿ ಮತ್ತು ಅಭಿನವ ಕಾಳಿದಾಸನೆಂದು ಖ್ಯಾತಿವೆತ್ತಿದ್ದ ಕರಿಬಸಪ್ಪಶಾಸ್ತ್ರಿಗಳಿಂದ ತಾಯಮ್ಮನವರು ಪಡೆದರು. ಇಂಥ ಪಂಡಿತೋತ್ತಮರುಗಳಿಂದ ಅನುಗೃಹೀತಳಾದ ಈಕೆ ಈ ಶತಮಾನದ ಆದಿಭಾಗದಲ್ಲಿ ಉತ್ತಮ ನೃತ್ಯ ಗಾರ್ತಿಯಾಗಿ ವಿಜೃಂಭಿಸಿದರು. ಜಟ್ಟಿತಾಯಮ್ಮನವರ ಕಲಾಭಂಡಾರದಲ್ಲಿ ಕನ್ನಡ ಮತ್ತು ಸಂಸ್ಕೃತ ಭಾಷೆಗಳೆರಡರಲ್ಲೂ ಸಾವಿರಾರು ಪದಗಳು, ಜಾವಳಿಗಳು, ಶ್ಲೋಕಗಳು ಅಡಗಿದ್ದುವು. ಮಹಾರಾಜ ಶ್ರೀಜಯಚಾಮರಾಜ ಒಡೆಯರವರು ತಾಯಮ್ಮನವರನ್ನು ಗೌರವಿಸಿ ಸನ್ಮಾನಿಸಿದ್ದರು. ತಾಯಮ್ಮನವರ ಯಶಸ್ಸು ಅವರ 82ನೆ ವಯಸ್ಸಿನ ವರೆಗೂ ಅಂದರೆ, ಅವರ ಅಂತ್ಯಕಾಲದ ವರೆಗೂ ಸ್ವಲ್ಪವೂ ಕುಗ್ಗಿರಲಿಲ್ಲ. ಅವರ 80ನೆಯ ವಯಸ್ಸಿನಲ್ಲಿ ಡಾ॥ ರಾಧಾಕೃಷ್ಣನವರು ಜಟ್ಟಿತಾಯಮ್ಮನವರನ್ನು 'ನಾಟ್ಯಸರಸ್ವತಿ' ಎಂಬ ಬಿರುದನ್ನು ಕೊಟ್ಟು ಸನ್ಮಾನಿಸಿದ್ದರು.

ಪ್ರಖ್ಯಾತ ನೃತ್ಯಗಾರ್ತಿಯಾಗಿದ್ದ ಚಂದ್ರವದನಮ್ಮನವರಿಗೂ ರಾಜಾಶ್ರಯದ ಸುಯೋಗವು ಲಭಿಸಿದ್ದಿತು. ಈಕೆ ಉತ್ತಮ ಗಾಯಕಿಯರಷ್ಟೇ ಅಲ್ಲದೆ ಭಾವಾಭಿನಯದಲ್ಲೂ ಪಾರಂಗತರಾಗಿದ್ದರು. ಪುಟ್ಟದೇವಮ್ಮ ಮತ್ತು ಚಿಕ್ಕದೇವಮ್ಮ ಇವರುಗಳು ಪ್ರಸಿದ್ಧ ನೃತ್ಯ ಶಿಕ್ಷಕರುಗಳಾಗಿದ್ದ ಅಮೃತಮ್ಮ ಮತ್ತು ಅಪ್ಪಯ್ಯನವರಲ್ಲಿ ಶಿಷ್ಯ ವೃತ್ತಿಯನ್ನು ಕೈಗೊಂಡಿದ್ದರು. ಅಲ್ಲದೆ, ಅರಮನೆಯಲ್ಲಿಯೂ ಉತ್ತಮ ನೃತ್ಯಗಾರ್ತಿಯರೆಂದು ಖ್ಯಾತಿವೆತ್ತಿದ್ದರು. ಬೆಂಗಳೂರಿನಲ್ಲಿ ಉಜ್ವಲ ನಾಟ್ಯಾಚಾರ್ಯರಾಗಿದ್ದ ಕೋಲಾರದ ವಿದ್ವಾನ್ ಕಿಟ್ಟಪ್ಪ ಮತ್ತು ಅವರ ಶಿಷ್ಯರುಗಳಾದ ನಾಗರತ್ನ ಮತ್ತು ವರಾಳು ಎಂಬವರು ಅತ್ಯಂತ ಪ್ರವೀಣೆಯರೆಂದು ಹೆಸರಾಗಿದ್ದಾರೆ. ಅತ್ಯಂತ ಉತ್ತಮ ನೃತ್ಯಗಾರ್ತಿಯೆಂದೂ ಅದರಲ್ಲೂ ಮೊದ ಮೊದಲು ಉತ್ತಮ ನರ್ತಕಿಯೆನಿಸಿಕೊಂಡು ಅಭಿನಯ ಕೋವಿದೆಯೆಂದೂ ಹೆಸರು ಪಡೆದವರಲ್ಲಿ ಬೆಂಗಳೂರಿನ ನಾಗರತ್ನ ಅವರು ಮೊದಲಿಗರು. ಅನಂತರ ಇವರ ಸಂಗೀತ ಪ್ರತಿಭೆ ನಾಟ್ಯಪಾಂಡಿತ್ಯಕ್ಕಿಂತಲೂ ಮಿಗಿಲೆನಿಸಿತು. ನಾಟ್ಯಮನೆತನದವರೇ ಆದ ಕೋಲಾರದ ಕಿಟ್ಟಪ್ಪ ಈ ಕಲೆಯನ್ನು ಕಾಂಚಿಯಿಂದ ಪಂಡನಲ್ಲೂರಿನ ವರೆಗೆ ಪ್ರಖ್ಯಾತರಾಗಿದ್ದ ಕಾಂಚಿ ಸದಾಶಿವಯ್ಯನವರಲ್ಲಿ ರೂಢಿಸಿಕೊಂಡರು. ಕೋಲಾರದ ಪುಟ್ಟಪ್ಪನವರು ಕೋಲಾರದ ಕಿಟ್ಟಪ್ಪನವರಲ್ಲಿ ನಟ್ಟುವನಾರ್ ಆಗಿ ನೃತ್ಯ ಕಲೆಯನ್ನು ಅಭ್ಯಾಸಮಾಡಿದ್ದರು.

ಇವರು 1945ರ ವರೆಗೆ ಜೀವಂತರಾಗಿದ್ದು ಶ್ರೇಷ್ಠ ಶಾಸ್ತ್ರೀಯ ನಾಟ್ಯಶಿಕ್ಷಕರೆಂದು ಪ್ರಸಿದ್ಧರಾಗಿದ್ದರು. ಅಲ್ಲದೆ, ಶ್ರೀಯುತರುಗಳಾದ ರಾಮಗೋಪಾಲ್ ಮತ್ತು ಯು.ಎಸ್. ಕೃಷ್ಣರಾವ್ ಅವರಿಗೆ ಗುರುಗಳಾಗಿದ್ದರು.

ನಾಟ್ಯ ಕಲೆಯನ್ನು ವೃತ್ತಿಯೆಂದು ಅವಲಂಬಿಸಿದ್ದ ಕಲೆಗಾರರ ಬಗ್ಗೆ ವಿಶೇಷವಾದ ಪೂರ್ವಗ್ರಹಗಳು ತಲೆದೋರಿ 1910ರಿಂದ 1930ರ ವರೆಗೆ ಈ ಕಲೆಯು ಅವನತಿಯನ್ನು ಹೊಂದಲು ಕಾರಣವಾಯಿತು. ಆದರೂ ಈ ನಿರ್ಮಲ ಕಲೆಯ ಹೊಂಬೆಳಕನ್ನು ಕೆಲವೇ ಕಲಾಭಿಮಾನಿಗಳು, ಶಿಕ್ಷಕರು ಮತ್ತು ನರ್ತಕರು ಎತ್ತಿ ಹಿಡಿದು ನಿಲ್ಲಿಸಿದರು. ದೇವಾಲಯಗಳಲ್ಲಿ ನಾಟ್ಯ ಪ ದರ್ಶನವನ್ನು ನಿಷೇಧಿಸಿದ್ದುದರಿಂದ ಕಲೆಗಾರರು ಜೀವನೋಪಾಯಕ್ಕಾಗಿ ಮದುವೆ ಮುಂತಾದ ಸನ್ನಿವೇಶಗಳಲ್ಲಿ ನಾಟ್ಯವನ್ನು ಪ್ರದರ್ಶಿಸಲು ಆರಂಭ ಮಾಡಿದರು.

ಆರ್ಷೇಯ ಸಾಂಸ್ಕೃತಿಕ ರೂಪವೆನಿಸಿದ್ದ ನೃತ್ಯಕಲೆ, ಕಲಾವಂತರ ಹಾಗೂ ಗಣ್ಯವ್ಯಕ್ತಿಗಳ ಸಹಕಾರದಿಂದ ಮದ್ರಾಸಿನಲ್ಲಿ ನಿರ್ಮಾಣವಾದ ಕಲಾಕ್ಷೇತ್ರದಲ್ಲಿ ನಿರಂತರವಾಗಿ ಬೆಳೆಯಿತು. ಅನೇಕ ಪುಸ್ತಕಗಳಲ್ಲಿ ಮತ್ತು ಪ್ರಕಟವಾಗುತ್ತಿದ್ದ ಅನೇಕ ಬರೆಹಗಳಲ್ಲಿ ಈ ಕಲೆಗಳ ವೈಶಿಷ್ಟ್ಯದ ಬಗ್ಗೆ ವಿವೇಚಿಸಲಾಗುತ್ತಿದ್ದಿತು. ಅಲ್ಲದೆ, ನೃತ್ಯಕಲೆಯು ಅನೇಕ ಸುಂದರವಾದ ನಾಟ್ಯ ಶಿಲ್ಪಭಂಗಿಗಳನ್ನು ಸೃಷ್ಟಿಸಲು ಪ್ರೇರಕವಾಯಿತು. ವಿದೇಶಿಯರಲ್ಲೂ ನಮ್ಮದೇಶದ ಹೆಸರಾಂತ ನೃತ್ಯಕಲಾವಿದರುಗಳಾದ ಉದಯ ಶಂಕರ್, ರಾಮಗೋಪಾಲ್, ಮೃಣಾಲಿನಿ ಮುಂತಾದವರನ್ನು ತಮ್ಮ ದೇಶಗಳಿಗೆ ಆಹ್ವಾನಿಸಿ ನಮ್ಮ ಕಲೆಯ ಸೌಂದರ್ಯವನ್ನು ಮನಗಾಣುವ ಮನೋಭಾವ ಉಂಟಾಯಿತು. ಇವೆಲ್ಲ ಕಾರಣಗಳಿಂದ ಕಳೆದ ಎರಡು ಶತಮಾನಗಳಿಂದ ಕಲೆಗಳ ಬಗ್ಗೆ ನಿರಾಸಕ್ತಿಯಿಂದಿದ್ದ ನಮ್ಮ ದೇಶದ ಜನ ಸಮುದಾಯದಲ್ಲಿ ಆಸಕ್ತಿ ತಲೆದೋರಿದೆ.

ವಿದ್ಯಾವಂತರಾದ ಸುಸಂಸ್ಕೃತ ಜನರು ಕಲೆಗಳ ಪುನರುಜ್ಜೀವನಕ್ಕೆ ಹೆಚ್ಚು ಗಮನ ಕೊಡಲು ಪ್ರಾರಂಭಿಸಿದರು. ಈ ಕಲೆಯ ಪ್ರಗತಿಯ ಯಶಸ್ಸು ದೇಶವಿದೇಶಗಳಲ್ಲಿ ಖ್ಯಾತಿಪಡೆದಿದ್ದ ಮತ್ತು 1937ರಲ್ಲಿ ನೃತ್ಯಕಲೆಯ ಅಭ್ಯಾಸಕ್ಕೆ ತೊಡಗಿದ್ದ ಶ್ರೀರಾಮಗೋಪಾಲರಿಗೆ ಸಲ್ಲುತ್ತದೆ. 1939ರಲ್ಲಿ ಶ್ರೀಯುತ ಯು.ಎಸ್. ಕೃಷ್ಣರಾವ್ ಅವರೂ ನೃತ್ಯಕಲೆಯ ಅಭ್ಯಾಸಕ್ಕೆ ತೊಡಗಿ ಕಲೆಯ ಬೆಳವಣಿಗೆಗೆ ಪೋಷಕರಾದರು. ಕಾಲಕ್ರಮೇಣ ನಶಿಸಿಹೋಗಲಿದ್ದ ನೃತ್ಯ ಕಲೆ, ಲಲಿತ ಕಲೆಗಳಲ್ಲಿ ಸುಭದ್ರ ಸ್ಥಾನ ಪಡೆಯಿತು. ಈಚೆಗೆ ಪ್ರಸ್ತುತ ಕಲೆಯ ಕ್ರಮಬದ್ಧ ಅಧ್ಯಯನವೂ ತ್ವರಿತಗತಿಯಲ್ಲಿ ಸಾಗುತ್ತಲಿದೆ. ಯುದ್ಧ ಕಾಲದಲ್ಲಿ ಮೈಸೂರು ರಾಜ್ಯದಲ್ಲಿ ಸಹಾಯ ನಿಧಿಗಳ ಸಂಗ್ರಹಣೆಗೆ ನುರಿತ ನೃತ್ಯಕಲಾವಿದರುಗಳಿಂದ ನೃತ್ಯ ಪ್ರದರ್ಶನಗಳು ಏರ್ಪಟ್ಟು ಈ ಕಲೆಗೆ ಪ್ರಾಮುಖ್ಯ ದೊರೆಯಿತು. ಮೇಲಿನ ಹಲವಾರು ಕಾರಣಗಳಿಂದ ಲಲಿತ ಕಲೆಗಳ ಸೌಂದರ್ಯವನ್ನು ಆಸ್ವಾದಿಸುವ ಅಭಿರುಚಿ ಜನಸಮುದಾಯದಲ್ಲಿ ಅಂಕುರಿಸಿತು.

ನಮಗೆ ಸ್ವಾತಂತ್ರ್ಯ ದೊರೆತನಂತರ ನೃತ್ಯ ಕಲೆಗೆ ಮನ್ನಣೆದೊರೆತು, ಪ್ರತಿಭಾವಂತ ಕಲಾವಿದರುಗಳಿಗೆ ಸ್ಟೇಟ್ ಲಲಿತ ಕಲಾ ಅಕೆಡಮಿ ಮತ್ತು ಇಂಡಿಯಾದೇಶದ ಸಾಂಸ್ಕೃತಿಕ ಸಂಸ್ಥೆಗಳು ನೀಡಿದ ಪಾರಿತೋಷಕಗಳಿಂದ ಕಲಾಲೋಕದಲ್ಲಿ ಒಂದು ಹೊಸ ಅಧ್ಯಾಯ ಪ್ರಾರಂಭವಾಗಿದೆ. ಇಂದು ಪ್ರತಿಯೊಂದು ನಗರ ತಾಲೂಕುಗಳಲ್ಲೂ ಹೆಮ್ಮೆಪಡುವಂಥ ನರ್ತಕರು ಹಾಗೂ ನೃತ್ಯ ಶಿಕ್ಷಕರುಗಳಿದ್ದಾರೆ. ಇಂಡಿಯಾದೇಶದ ಶಾಲಾ ಕಾಲೇಜುಗಳಲ್ಲಿಯೂ ನೃತ್ಯವು ಒಂದು ಅಧ್ಯಯನದ ವಿಷಯವಾಗಿದೆ. ಈಗಂತೂ ಪರಿಸ್ಥಿತಿ

ಬದಲಾಗಿದೆ. ಸಂಗೀತದಂತೆಯೇ ನೃತ್ಯವೂ ಸುಸಂಸ್ಕೃತ ಮನೆತನಕ್ಕೆ ಸೇರಿದ ಪ್ರತಿಯೊಬ್ಬ ಹುಡುಗಿಗೂ ಆವಶ್ಯಕವಾಗಿ ಇರಲೇಬೇಕಾದ ಸಂಸ್ಕಾರವೆನಿಸಿದೆ. ಆದುಪರಿಂದ ದೊಡ್ಡ ನಗರಗಳಲ್ಲಿ ನೃತ್ಯ ಶಿಕ್ಷಕರುಗಳ ಆವಶ್ಯಕತೆ ಹೆಚ್ಚುತ್ತಲಿದೆ. ಇವುಗಳಿಂದ ಉಳಿದ ಕಲೆಗಳ-ಶಾಸ್ತ್ರೀಯ ಕಲೆಗಳ, ಅಧ್ಯಯನದಲ್ಲಿ ಮತ್ತು ವಿದ್ಯಾಭ್ಯಾಸದಲ್ಲಿ ಆಗುತ್ತಿರುವಂತೆ ನೃತ್ಯ ಕಲೆಯು ಮಟ್ಟದಲ್ಲಿ ಇಳಿಮುಖವಾಗದಿದ್ದರೆ ಆಶ್ಚರ್ಯವೇ ಸರಿ.

ಮೂಲಲೇಖಕರು : ಶ್ರೀ ಯು. ಕೃಷ್ಣರಾವ್
ಅನುವಾದಕರು : ಶ್ರೀಮತಿ ಟಿ. ಆರ್. ನಾಗರತ್ನಮ್ಮ

# ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ

## (Architecture and Sculpture)

ವಿಜಯನಗರದ ಸಾಮ್ರಾಜ್ಯವು 1565ರಲ್ಲಿ ಶೋಚನೀಯವಾಗಿ ಉರುಳಿದಾಗ ಕಟ್ಟಡಗಳ ನಿರ್ಮಾಣವು ತಾತ್ಕಾಲಿಕವಾಗಿ ಕಣ್ಮರೆಯಾಯಿತು. ದೇಶದ ಬೇರೆ ಬೇರೆ ಭಾಗಗಳಲ್ಲಿ ಪಾಳೆಯಗಾರರು ತಮ್ಮ ಮುಖ್ಯ ಪಟ್ಟಣಗಳಲ್ಲಿ ಚಿಕ್ಕರೀತಿಯಲ್ಲಿ ಏನು ಸಾಧ್ಯವೋ ಅದನ್ನು ಮಾಡಿದರು.

ನಮ್ಮ ದೇಶದ ಇತಿಹಾಸದಲ್ಲಿ 17ನೆಯ ಶತಮಾನದ ಕೊನೆಯ ಭಾಗವು ರಾಜಕೀಯವಾಗಿ ಅಭದ್ರವಾಗಿ ವಿಷಮಾವಸ್ಥೆಯಲ್ಲಿತ್ತು. 18ನೆಯ ಶತಮಾನದಲ್ಲಿ ಆಧುನಿಕ ರೀತಿಯಲ್ಲಿ ಬೆಳವಣಿಗೆಯು ಪ್ರಾರಂಭವಾಯಿತು.

ಬಿಜಾಪುರದ ಸುಲ್ತಾನರು ಮುಸಲ್ಮಾನರ ಶೈಲಿಯಲ್ಲಿ 1557ರಿಂದ 1570ರ ವರೆಗೆ ಜುಮ್ಮ ಮಸೀದಿಯನ್ನೂ 1626ರಿಂದ 1656ರ ವರೆಗೆ ಪ್ರಖ್ಯಾತವಾದ ಗೋಲ್‌ಗುಂಬಜನ್ನೂ ಕಟ್ಟಿದ್ದರು. 1687ರಲ್ಲಿ ಬಿಜಾಪುರವು ಮೊಗಲರ ವಶವಾದಾಗ ಕರ್ಣಾಟಕದ ಶಿಲ್ಪಿಗಳ ಕೌಶಲವು ಹೊರಕ್ಕೆ ಬರಲು ಅವಕಾಶವಾಗಲಿಲ್ಲ. ಮೈಸೂರಿನ ಮಹಾರಾಜರುಗಳ ಕಾಲದಲ್ಲಿ, 19ನೆಯ ಶತಮಾನದಲ್ಲಿ ಮತ್ತೆ ಬೆಳಕಿಗೆ ಬಂತು.

ಕರ್ಣಾಟಕ ದೇಶದ ಕಟ್ಟಡಗಳಲ್ಲೆಲ್ಲಾ ನೈಸರ್ಗಿಕವಾದ ಮತ್ತು ಚಾರಿತ್ರಿಕವಾದ ಕೆಲವು ಕಾರಣಗಳ ದೆಸೆಯಿಂದ ಏಕರೂಪತೆಯನ್ನು ಕಾಣಲಾಗುವುದಿಲ್ಲ. ದಕ್ಷಿಣ ಮತ್ತು ಉತ್ತರ ಕನ್ನಡದ ಜಿಲ್ಲೆಗಳಲ್ಲಿ ಒಳ್ಳೆಯ ಕಟ್ಟಡದ ಕಲ್ಲೇ ಸಿಕ್ಕುವುದಿಲ್ಲ. ರಾಯಚೂರು, ಗುಲ್ಬರ್ಗ ಮತ್ತು ಬಿದರೆ ಜಿಲ್ಲೆಗಳಲ್ಲಿ ಕೊನೆ ಕೊನೆಗೆ ಪ್ರೋತ್ಸಾಹವು ಕಡಮೆಯಾಯಿತು. ಧಾರವಾಡ ಮತ್ತು ಬೆಳಗಾವಿ ಜಿಲ್ಲೆಗಳನ್ನು ಕೇಳುವವರೇ ಇರಲಿಲ್ಲ.

ಕರ್ಣಾಟಕದ ಕಟ್ಟಡದ ಕಲೆಯಲ್ಲಿ 19ನೆಯ ಶತಮಾನವು ಒಂದು ಸಂಧಿ ಕಾಲದಂತೆ ಇತ್ತು. ಆಗ ದೇವಸ್ಥಾನ ಮತ್ತು ಮಸೀದಿಗಳಿಗಿಂತ ಪಾಠಶಾಲೆಗಳು, ಪ್ರಯೋಗ ಶಾಲೆಗಳು, ಕಾರಖಾನೆಗಳು ಮತ್ತು ಆಸ್ಪತ್ರೆಗಳಿಗೆ ಪ್ರಮುಖತೆ ಬಂತು. 1947ರಲ್ಲಿ ನಮ್ಮ ದೇಶವು ಸ್ವತಂತ್ರವಾದ ಮೇಲೆ ಈ ದಿಕ್ಕಿನಲ್ಲಿ ಗಣ್ಯವಾದ ಪ್ರಗತಿಯಾಗಿದೆ. ಎರಡು ದಶಕಗಳ ಅವಧಿಯಲ್ಲಿ ಭಾರಿಯಾದ ಸಾರ್ವಜನಿಕ ಕಟ್ಟಡಗಳು ಕಚೇರಿಗಳು ಮತ್ತು ಕಾರ್ಖಾನೆಗಳು ಬೆಳೆದಿವೆ. ಹಿಂದೆ ಇಷ್ಟು ಕೆಲಸ ಜರಗಲು ಒಂದು ಶತಮಾನವೇ ಬೇಕಾಗುತ್ತಿತ್ತು.

ಕಳೆದ ಎರಡು ಶತಮಾನಗಳ ಅವಧಿಯಲ್ಲಿ ಅಡಚಣೆಗಳಿದ್ದರೂ ಆದ ಸಾಧನೆಗಳನ್ನು ನೋಡಬಹುದು. ಹೈದರ್ ಆಲಿ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲಿ ಫ್ರೆಂಚ್ ಶಿಲ್ಪಿಗಳ ಸಹಾಯದಿಂದ ಭಾರಿ ಧಾನ್ಯದ ಕಣಜಗಳು ಮತ್ತು ಉಗ್ರಾಣಗಳಿಂದ ಕೂಡಿದ ಕೋಟೆಕೊತ್ತಳಗಳು, ಚಿತ್ರದುರ್ಗದಲ್ಲಿ ಸೇನಾಶಿಲ್ಪದ

ಮಾದರಿಗಳಾಗಿವೆ. ಬೆಂಗಳೂರು ಕೋಟೆಯಲ್ಲಿರುವ ಟಿಪ್ಪುಸುಲ್ತಾನನ ಅರಮನೆ, ಕಾವೇರಿಯ ತೀರದಲ್ಲಿ ಶ್ರೀರಂಗಪಟ್ಟಣದಲ್ಲಿ ಎತ್ತರವಾದ ಮೇಲ್ಪಾಯದ ಮೇಲೆ ನಿಂತು, ಗೋಡೆಗಳ ಮೇಲೆ ಅನೇಕ ಬಣ್ಣದ ಚಿತ್ರಗಳುಳ್ಳ ದರಿಯಾ ದೌಲತ್, ಮೈಸೂರು ಅರಮನೆಯ ಹಳೆಯ ದರ್ಬಾರ್ ಭವನ (ಈಗ ಇದು ಬೆಂಕಿಯಿಂದ ನಾಶವಾಗಿದೆ)—ಇವೆಲ್ಲಾ ಭಾರತೀಯ ಮತ್ತು 'ಸ್ಯಾರಸೆನಿ' ಅಲಂಕಾರಗಳನ್ನೊಳಕೊಂಡಿವೆ. ದಿಲಾವರ್ ಖಾನ್ ಸಿರಾದಲ್ಲಿ ಕಟ್ಟಿದ ಮೊಗಲಾಯಿ ವಾಸ್ತುಶಿಲ್ಪದ ಸುಂದರವಾದ ಮಾದರಿಯ ಮೇಲೆ ಹೈದರ್ ಆಲಿ ಮತ್ತು ಟಿಪ್ಪುಸುಲ್ತಾನರು ತಮ್ಮ ಅರಮನೆಗಳನ್ನು ಕಟ್ಟಿದ್ದಾರೆ. ಆದರೆ ಕಟ್ಟಡದಲ್ಲಿ ಚಿನ್ನದ 'ರೇಕು' ಹಚ್ಚಿ ಬಣ್ಣಗಳಿಂದ ಅಲಂಕಾರವನ್ನು ಮಾಡಿದ್ದರೂ ಕೆಟ್ಟು ಹೋಗುವ ಸಂಭವವುಳ್ಳ ಸಾಮಗ್ರಿಗಳನ್ನು ಬಳಸಿದ್ದರಿಂದ ಈಗ ಅದರ ಸೊಬಗಾಗಲಿ ಅಂದವಾಗಲಿ ಕಾಣುತ್ತಿಲ್ಲ. ಟಿಪ್ಪು ಸುಲ್ತಾನನು ಚಿತ್ರದುರ್ಗದಲ್ಲಿ ಎದ್ದು ಕಾಣುವ ಒಂದು ಅರಮನೆಯನ್ನು ಕಟ್ಟಿಸಿದ್ದನು. ಈಗ ಅದು ಹಾಳು ಸುರಿಯುತ್ತಿದೆ.

ಮೈಸೂರು ಸಂಸ್ಥಾನದಲ್ಲಿರುವ ಮೊಗಲ್ ಶೈಲಿಯ ಇತರ ಕಟ್ಟಡಗಳು ಇವು : (1) ಕೋಲಾರದಲ್ಲಿ ಹೈದರನ ಸಂಸಾರದವರ ಸಮಾಧಿಭವನ, (2) ಶ್ರೀರಂಗ ಪಟ್ಟಣದಲ್ಲಿ ಹಳೆಯ ದೇವಸ್ಥಾನವೊಂದರ ನಿವೇಶನದ ಮೇಲೆ ಕಟ್ಟಲಾದ ಎತ್ತರವಾದ ಕಂಬಗಳ ಹಾಗಿರುವ ಎರಡು ಗೋಪುರಗಳು, (3) ಶ್ರೀರಂಗ ಪಟ್ಟಣದ ಹತ್ತಿರ ಗಂಜಾಮಿನಲ್ಲಿರುವ ಹೈದರ್ ಮತ್ತು ಟಿಪ್ಪು—ಇವರ ಸಮಾಧಿಭವನ. ಈ ಭವನದ ಮೇಲೆ ದೊಡ್ಡ ಗುಮ್ಮಟವನ್ನು ಕಟ್ಟಿದ್ದಾರೆ. ಕಟ್ಟಡದಲ್ಲಿ ಕರಿಯ ಸರ್ಪಶಿಲೆಯ ಕಂಬಗಳ ಸಾಲುಗಳಿವೆ. ಬಾಗಿಲುಗಳನ್ನು ಕರಿಯ ಮರದಿಂದ ಮಾಡಿ, ದಂತದ ಚಿತ್ರ ಕೊರೆತವನ್ನು ಜೋಡಿಸಿದ್ದಾರೆ.

ಮೈಸೂರಿನ ಈಗಿನ ಅರಮನೆಯು ಹಿಂದು—ಸ್ಯಾರಸೆನಿ ಶೈಲಿಯಲ್ಲಿದೆ. ಹೊರ ಭಾಗವು ಮೊಗಲರ ಶೈಲಿಯಲ್ಲಿಯೂ ಒಳಗಿನ ವಿವರಗಳು ಹೊಯಿಸಳರ ಶೈಲಿಯಲ್ಲಿಯೂ ಇವೆ. ಆದರಲ್ಲಿ ದಂತದ ಅಲಂಕಾರ ವನ್ನು ಹುದುಗಿಸಿದ್ದಾರೆ. ಮರವನ್ನು ಬೆಳ್ಳಿಯ ತಗಡುಗಳಿಂದ ಮುಚ್ಚಿದ್ದಾರೆ. ಬೇಲೂರು ಮತ್ತು ಹಳೇಬೀಡಿನ ದೇವಸ್ಥಾನಗಳನ್ನು ಜ್ಞಾಪಕಕ್ಕೆ ತರುವ ತೆಳುವಾದ ಎಲೆಗಳ ಆಕಾರದ ಸುರುಳಿಗಳಿಂದ ಅಲಂಕರಿಸಿದ್ದಾರೆ. ಮಹಾರಾಜ ಶ್ರೀಕೃಷ್ಣರಾಜ ಒಡೆಯರವರ ಸೋದರಿಯರ ಅರಮನೆಯಲ್ಲಿಯೂ ಇದೇ ಶೈಲಿಯನ್ನು ಬಳಸಿದ್ದಾರೆ.

ಕ್ರಿಸ್ತಶಕ 19 ನೆಯ ಶತಮಾನದ ನಡುವಿನಲ್ಲಿ ಮೈಸೂರಿನ ಸಾರ್ವಜನಿಕ ಇಲಾಖೆಯನ್ನು ಪ್ರಾರಂಭಿಸಿದಾಗ ಸಾರ್ವಜನಿಕ ಕಟ್ಟಡಗಳಲ್ಲಿ ಹೊಸತೊಂದು ವಾಸ್ತುಶಿಲ್ಪದ ಶೈಲಿಯು ಬೆಳಕಿಗೆ ಬಂತು. ಪಾಶ್ಚಾತ್ಯ ಇಂಜಿನಿಯರುಗಳು ತಮ್ಮೊಡನೆ ಅಯೋನಿಕ್, ಡೋರಿಕ್, ಕಾರಿಂತಿಯನ್ ಮತ್ತು ಮಿಶ್ರಶೈಲಿಗಳನ್ನು ತಂದರು. ಇವು ಪ್ರಾಚೀನ ಗ್ರೀಸ್ ಮತ್ತು ಕಲೆಗಳ ಪುನರುಜ್ಜೀವನದ ಕಾಲದ ಫ್ರಾನ್ಸ್—ಇವುಗಳ ಕಾಲದ ಶೈಲಿಗಳು. ಈ ಶೈಲಿಗೆ ಕೆಲವು ಉದಾಹರಣೆಗಳನ್ನು ಕೊಡಬಹುದು. (1) ಬೆಂಗಳೂರಿನ ಡಿಸ್ಟ್ರಿಕ್ಟ್ ಕಚೇರಿ (1856), (2) ಅಠಾರಾ ಕಚೇರಿ (1869), (3) ಮ್ಯೂಜಿಯಮ್ (1879), (4) ಡೇಲಿ ಸ್ಮಾರಕ ಭವನ, (5) ಮೈಸೂರಿನಲ್ಲಿ ಮಹಾರಾಜರವರ ಕಾಲೇಜು, (1894), (6) ಜೂಬಿಲಿ ಸಂಸ್ಥೆ (1898), (7) ಸಾರ್ವಜನಿಕ ಕಚೇರಿ (1895), (8) ನ್ಯಾಯಶಾಲೆಯ ಕಟ್ಟಡ (1899).

ಸಾರ್ವಜನಿಕ ಕಟ್ಟಡಗಳಲ್ಲಿಯೂ ಒಂದೇ ವಾಸ್ತುಶಿಲ್ಪದ ಶೈಲಿಯಿರಲಿಲ್ಲವೆಂಬುದನ್ನು ಈ ಉದಾಹರಣೆಗಳಿಂದ ನೋಡಬಹುದು. ಬೆಂಗಳೂರಿನ ಸೆಂಟ್ರಲ್ ಕಾಲೇಜು (1901) ಗಾತಿಕ್ ಶೈಲಿಯಲ್ಲಿರುವ ಲಕ್ಷಣವಾದ ಕಟ್ಟಡ. ಆದರೆ ಬೆಂಗಳೂರಿನ ಅರಮನೆಯು (1882) ಇಂಗ್ಲೆಂಡ್ ಮತ್ತು ನಾರ್ಮಂಡಿಯ ಮಧ್ಯಮ ಯುಗದ ಕೋಟೆಗಳ ಶೈಲಿಗಳಲ್ಲಿದೆ. ವಿಕ್ಟೋರಿಯ ಆಸ್ಪತ್ರೆಯ (1896)

ಶೈಲಿಯೇ ಬೇರೆ. ಈ ಶತಮಾನದ ಆರಂಭದಲ್ಲಿ ಕಟ್ಟಿದ ಭಾರತೀಯ ವಿಜ್ಞಾನ ಸಂಸ್ಥೆಯ (Indian Institute of Science) ಕಟ್ಟಡದ ಮೇಲೆ ಗಂಟೆಯ ಆಕಾರದ ಒಂದು ಗೋಪುರವಿದೆ. ಈ ಕಟ್ಟಡವು ಹೊರಗೆ ನೋಡಲು ಅಂದವಾಗಿದೆ. ಒಳಗಡೆ ಕೊಠಡಿಗಳ ಜೋಡಣೆಯು ಕೆಲಸ ಮಾಡುವವರ ಅನುಕೂಲಕ್ಕೆ ತಕ್ಕ ಹಾಗಿದೆ. ಮೊದಲನೆಯ ಮಹಡಿಯ ಮೇಲಿರುವ ಪುಸ್ತಕ ಭಂಡಾರವು ಇವೊತ್ತಿಗೂ ಅನುಕೂಲಕ್ಕೆ ತಕ್ಕಹಾಗೆ ಕಟ್ಟಿದ ಮಾದರಿಯಾದ ಕಟ್ಟಡ.

ಬೆಂಗಳೂರಿನಲ್ಲಿ ಸಾರ್ವಜನಿಕ ಪುಸ್ತಕ ಭಂಡಾರವಿರುವ ಸರ್. ಕೆ. ಶೇಷಾದ್ರಿ ಅಯ್ಯರ್ ಸ್ಮಾರಕ ಭವನ, ಕೋಟೆಯಲ್ಲಿರುವ ಸರ್ಕಾರದ ಹೈಸ್ಕೂಲು, ಮಿಂಟೋ ಕಣ್ಣಾಸ್ಪತ್ರೆ, ಮೈಸೂರಿನಲ್ಲಿ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆ—ಇವು ಮಿಶ್ರಶೈಲಿಯ ಲಕ್ಷಣವಾದ ಕಟ್ಟಡಗಳು. ಮೈಸೂರಿನ ಶ್ರೀಕೃಷ್ಣರಾಜೇಂದ್ರ ಆಸ್ಪತ್ರೆಯು ಅಮೇರಿಕದ ಪುನರುತ್ಥಾನದ (Renaissance) ಶೈಲಿಯಲ್ಲಿಯೂ ಬೆಂಗಳೂರಿನ 'ವಾಣೀವಿಲಾಸ' ಹೆರಿಗೆಯ ಆಸ್ಪತ್ರೆಯು ಆಧುನಿಕ ಶೈಲಿಯಲ್ಲಿಯೂ ಇವೆ.

ಬೆಂಗಳೂರಿನಲ್ಲಿ ಗೋಪುರದಲ್ಲಿ ಗಡಿಯಾರವಿರುವ ಶ್ರೀಕೃಷ್ಣರಾಜೇಂದ್ರ ಸಿಲ್ವರ್ ಜೂಬಿಲಿ ಟೆಕ್ನಲಾಜಿಕಲ್ ಸಂಸ್ಥೆಯ ಕಟ್ಟಡವು ಆಧುನಿಕ ಶೈಲಿಯಲ್ಲಿದೆ. ಇದನ್ನು ಕಲ್ಲಿನಿಂದ ಕಟ್ಟಿದ್ದಾರೆ.

ಧಾರವಾಡದಲ್ಲಿರುವ ಕರ್ಣಾಟಕ ವಿಶ್ವವಿದ್ಯಾನಿಲಯದ ಕಚೇರಿ ಮತ್ತು ವ್ಯವಸಾಯ ಶಾಸ್ತ್ರದ ಕಾಲೇಜಿನ ಕಟ್ಟಡಗಳು ಕಲ್ಲಿನಿಂದ ಕಟ್ಟಿದ ಆಧುನಿಕ ಶೈಲಿಗೆ ಒಳ್ಳೆಯ ಮಾದರಿಗಳಾಗಿವೆ.

ಮೈಸೂರಿನ ಲಲಿತ ಮಹಲ್ ಕಟ್ಟಡಕ್ಕೆ ತನ್ನದೇ ಆದ ಒಂದು ಸೊಬಗು ಇದೆ. ಅದನ್ನು ಬಹಳ ಎತ್ತರವಾದ ಜಾಗದಲ್ಲಿ ಕಟ್ಟಿದ್ದಾರೆ. ಕಟ್ಟಡದ ಬೇರೆ ಬೇರೆ ಭಾಗಗಳಿಗೆ ಒಂದು ಹಿತವಾದ ಹೊಂದಿಕೆಯಿದೆ. ಅದರ ಮೂಲೆಗಳಲ್ಲಿ ಎತ್ತರವಾದ ಗುಮ್ಮಟಗಳಿವೆ (Domes).

ರಾಜೇಂದ್ರ ವಿಲಾಸವು ಮೈಸೂರಿನ ಚಾಮುಂಡಿ ಬೆಟ್ಟದ ನೆತ್ತಿಯ ಮೇಲೆ ಕಟ್ಟಿರುವ ಅರಮನೆ. ಇದರ ಮೇಲೆ ಒಂದು ಗುಮ್ಮಟವಿದೆ. ಈ ಅರಮನೆಯ ಮುಂಭಾಗದಲ್ಲಿ ನಿಂತರೆ ಕೆಳಗಡೆ ತೋಟದ ನಗರವಾದ ಮೈಸೂರಿನ ದೃಶ್ಯವು ಮನೋಹರವಾಗಿ ಕಾಣುತ್ತದೆ. ಹೊಸ ರೈಲ್ವೆಯ ಕಚೇರಿ, ಅರಮನೆಯ ಕಚೇರಿಗಳು ಮತ್ತು ಮೈಸೂರಿನ ಹತ್ತಿರವಿರುವ ಕೃಷ್ಣರಾಜಸಾಗರದ ಹೋಟೆಲ್–ಇವುಗಳ ಉಪಯುಕ್ತತೆಯೊಂದಿಗೆ ಕಟ್ಟಡದ ಸೌಂದರ್ಯವೂ ಬೆರೆತಿದೆ.

ಬೆಂಗಳೂರಿನ ಶಂಕರಮಠವು ಒಂದು ಭವ್ಯವಾದ ಹಿಂದು ಶೈಲಿಯ ಕಲ್ಲಿನ ಕಟ್ಟಡ. ಅದರ ಮುಂದುಗಡೆ ಬಲಗಡೆ ಶ್ರೀ ಶಂಕರಾಚಾರ್ಯರ, ಮತ್ತು ಎಡಗಡೆ ಶ್ರೀ ಶಾರದಮ್ಮನವರ ಕಲ್ಲಿನ ದೇವಾಲಯಗಳಿವೆ. ಈಚೆಗೆ ಇವುಗಳ ಮೇಲೆ ಲಕ್ಷಣವಾದ ಗೋಪುರಗಳನ್ನು ಕಟ್ಟಿದ್ದಾರೆ.

ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿಯಲ್ಲಿ 1915ರಲ್ಲಿ ಕಗ್ಗಲ್ಲಿನಿಂದ (Granite) ಕಟ್ಟಿದ ಶ್ರೀ ಶಾರದಾ ದೇವಾಲಯದಲ್ಲಿ ಪ್ರಾಚೀನ ದ್ರಾವಿಡಶೈಲಿಯ ಪುನರುಜ್ಜೀವನವನ್ನು ಕಾಣಬಹುದು. ಈ ಕಲೆಯು ತಮಿಳುನಾಡಿನ ನಾಟುಕೋಟೆಯ ವರ್ತಕರ ಔದಾರ್ಯದಿಂದ ದಕ್ಷಿಣ ಭಾರತದಲ್ಲಿ ಇನ್ನೂ ಜೀವಂತ ವಾಗಿದೆ. ಒಳಗಡೆ ಗರ್ಭಗೃಹದ ಗೋಡೆಗಳನ್ನು ಬಹಳ ನಯವಾಗಿ ಮಾಡಿದ ಅಚ್ಚ ಕರಿಕಲ್ಲಿನಿಂದ ಕಟ್ಟಿದ್ದಾರೆ. ಮುಖಮಂಟಪದಲ್ಲಿರುವ ಅಲಂಕಾರವಾದ ಕಲ್ಲಿನ ಕಂಬಗಳ ಮೇಲೆ ಸಿಂಹ ಲಲಾಟಗಳು, ವಿಗ್ರಹಗಳು ಮತ್ತು ಲೋಟಕಗಳು, ಅದರ ಮುಂದುಗಡೆ ನೆಲದ ಮಟ್ಟದಲ್ಲಿ ದೇವಾಲಯದ ಸುತ್ತಲೂ

ವಿಶಾಲವಾದ ಆವರಣ, ಇನ್ನೂ ಮುಂದೆ ಸುತ್ತಲೂ ಅಗಲವಾದ ಜಗಲಿ, ಪಕ್ಕದಲ್ಲಿಯೇ ಹರಿಯುವ ತುಂಗಾನದಿಗೆ ಈಚೆಗೆ ಎಡದಡದಲ್ಲಿ ಒಂದು ಅಗಲವಾದ ಕಲ್ಲಿನ ಸೋಪಾನವನ್ನು ಕಟ್ಟಿ ಸ್ನಾನ ಮಾಡುವವರಿಗೆ ಅನುಕೂಲವನ್ನು ಕಲ್ಪಿಸಿದ್ದಾರೆ.

ಕರ್ಣಾಟಕದ ವಾಸ್ತುಶಿಲ್ಪದ ವಿಚಾರವಾಗಿ ಬರೆಯುವಾಗ ಬೇಲೂರು, ಹಳೇಬೀಡು, ಸೋಮನಾಥಪುರ ಮುಂತಾದ ಕ್ಷೇತ್ರಗಳಲ್ಲಿರುವ ಭವ್ಯವಾದ ಹೊಯಿಸಳ ಶೈಲಿಯ ದೇವಾಲಯಗಳನ್ನು ಬಿಡುವುದು ಅಕ್ಷಮ್ಯ. ಆದರೆ ಈ ಪುಟ್ಟ ಲೇಖನದಲ್ಲಿ ಅವುಗಳನ್ನು ಸೇರಿಸುವುದು ಅಸಾಧ್ಯ.

ಕರ್ಣಾಟಕದ ಪ್ರಾಂತದಲ್ಲಿ ಅನೇಕ ಚರ್ಚುಗಳನ್ನೂ ಮಸೀದಿಗಳನ್ನೂ ವಾಸ್ತುಶಿಲ್ಪದ ಮಾದರಿಗಳಾಗಿ ಕಟ್ಟಿದ್ದಾರೆ. ಮಂಗಳೂರಿನ ಸೈಂಟ್ ಅಲೋಕಿಯಸ್ಸಿನ ಚರ್ಚು, ಸೈಂಟ್ ಮಾರ್ಕನ ಕ್ರೈಸ್ತ ಆರಾಧನ ಮಂದಿರ, ಬೆಂಗಳೂರಿನ ಟ್ರಿನಿಟಿ ಚರ್ಚು, ಜುಮ್ಮ ಮಸೀದಿ ಮತ್ತು ಮೈಸೂರಿನ ಸೈಂಟ್ ಫಿಲೋಮಿನ ಚರ್ಚು— ಇವುಗಳನ್ನು ಉದಾಹರಣೆಗಳಾಗಿ ಕೊಡಬಹುದು.

ಬೆಂಗಳೂರಿನ ತಾತಾ ವಿಜ್ಞಾನ ಸಂಸ್ಥೆಯ ಆಡಳಿತದ ಕಟ್ಟಡಗಳು, ಪುಸ್ತಕ ಭಂಡಾರಗಳು, ಪ್ರಯೋಗಶಾಲೆಗಳು ಮತ್ತು ವರ್ಕ್‌ಷಾಪುಗಳಿಗೆ ಕಳೆದ ಹದಿನೈದು ವರ್ಷಗಳ ಅವಧಿಯಲ್ಲಿ ನಡೆದ ಅಗಾಧವಾದ ಬಡಾವಣೆಗಳು ವಾಸ್ತುಶಿಲ್ಪದ ಭಾವನೆಯಲ್ಲಿ ನಡೆದ ಹೊಂದಿಕೆಗಳನ್ನು ತೋರಿಸುತ್ತವೆ. ಭದ್ರ ಕಾಂಕ್ರೀಟ್ (Reinforced) ವಿದ್ಯುಚ್ಚಾಲಿತವಾದ ಎತ್ತು ಯಂತ್ರಗಳು (Lifts) ಬೆಳಕಿನ ಏರ್ಪಾಡು, ಕಟ್ಟಡದ ಒಳಗಿನ ಗಾಳಿಯನ್ನು ಒಂದೇ ಖರತ್ವದಲ್ಲಿ (Temperature) ಇಡುವ ಏರ್ಪಾಡುಗಳು, ಇವುಗಳ ಬಳಕೆಯಿಂದ ಈಗಿನ ಸಂವಿಧಾನಗಳು ಒಂದೊಂದು ಆವಶ್ಯಕತೆಯನ್ನೂ ಪ್ರಯೋಗಶಾಲೆಯಲ್ಲಿಯೂ ಕಾರ್ಖಾನೆಯಲ್ಲಿಯೂ ಪ್ರತ್ಯೇಕವಾಗಿ ಪರೀಕ್ಷೆಮಾಡಿ ನೋಡುವಂತೆ ಮಾಡುತ್ತವೆ.

ಆಧುನಿಕ ವಾಸ್ತುಶಿಲ್ಪದ ಬೆಳವಣಿಗೆಗಳನ್ನು ಹಿಂದುಸ್ಥಾನದ ವಿಮಾನಗಳು, ಯಾಂತ್ರಿಕ ಹತ್ಯಾರಗಳು, ಟೆಲಿಫೋನ್ ಕೈಗಾರಿಕೆಗಳು, ಭಾರತದ ಎಲೆಕ್ಟ್ರಾನಿಕ್ಸ್ ಮತ್ತು ಸೈನ್ಯಶಾಖೆಯ ಕಟ್ಟಡಗಳು ಮತ್ತು ವಿಮಾನ ನಿಲ್ದಾಣಗಳಲ್ಲಿ ಕಾಣಬಹುದು.

ಬೆಂಗಳೂರಿನ ವಿಧಾನಸೌಧವು ಹೊರಗಡೆ ಪ್ರಾಚೀನದೇವಾಲಯಗಳ ವಾಸ್ತುಶಿಲ್ಪವನ್ನು ಜ್ಞಾಪಕಕ್ಕೆ ತರುತ್ತದೆ. ಆದರೆ ಅದರ ಭೂಮಿಕೆ (Plan) ಸಲಕರಣೆಗಳು ಮತ್ತು ಪೀಠೋಪಕರಣಗಳು ಆಧುನಿಕ ಶೈಲಿಯಲ್ಲಿವೆ. ಈ ಸಂಕೀರ್ಣ ಶೈಲಿಯ ಕಟ್ಟಡವು ಹಿಂದಿನ ಅಠಾರಾಕಚೇರಿಗೆ ಎದುರಾಗಿದ್ದು ಹೊಸ ಕರ್ಣಾಟಕ ರಾಜ್ಯದ ಸರ್ಕಾರದ ನೆಲೆಯಾಗಿದೆ. ಇದನ್ನು ನೋಡಲು ಪ್ರವಾಸಿಗಳು ಎಲ್ಲಾ ಕಡೆಗಳಿಂದಲೂ ಬರುತ್ತಾರೆ.

ಮೂರ್ತಿಶಿಲ್ಪ (Sculpture)—ಕರ್ಣಾಟಕ ಮೂರ್ತಿಶಿಲ್ಪದ ಸಂಪ್ರದಾಯಗಳನ್ನು ನವ್ಯ ಶಿಲ್ಪಿಗಳು ಅವಿಚ್ಛಿನ್ನವಾಗಿ ಕಾಪಾಡಿಕೊಂಡು ಬಂದಿದ್ದಾರೆ. ಶಿವಗಂಗೆಯ ಅಮೃತಶಿಲೆಯ ಶ್ರೀ ಶಾರದಾ ವಿಗ್ರಹವು ಶಾಸ್ತ್ರೀಯವಾಗಿದ್ದು ನೋಡಲು ಬಹು ಮುದ್ದಾಗಿದೆ. ಶೃಂಗೇರಿಯಲ್ಲಿ ತುಂಗಾನದಿಯ ಬಲ ದಡದಲ್ಲಿರುವ ದೇವಾಲಯಗಳಲ್ಲಿ ಮುಕ್ತರಾದ ಜಗದ್ಗುರುಗಳಾದ ಶ್ರೀ ಸಚ್ಚಿದಾನಂದ ಶಿವಾಭಿನವ ನರಸಿಂಹಭಾರತಿಗಳ ಅಮೃತಶಿಲೆಯ ವಿಗ್ರಹವೂ ಅವರನಂತರ ಬಂದ ಶ್ರೀ ಚಂದ್ರಶೇಖರ ಭಾರತಿಗಳ ವಿಗ್ರಹವೂ ತಪಸ್ವಿಗಳ ಮುಖಭಾವವನ್ನು ಯಥಾರ್ಥವಾಗಿ ತೋರಿಸುತ್ತವೆ.

ಕೀರ್ತಿಶೇಷ ಶ್ರೀ ಕೆ. ವೆಂಕಟಪ್ಪನವರು ಚಿತ್ರಕಲೆಯಲ್ಲಿ ಪ್ರವೀಣರು. ಅವರಿಗೆ ಮೂರ್ತಿಶಿಲ್ಪವು ಇನ್ನೊಂದು ಕುಶಲಕಲೆಯಾಗಿತ್ತು. ಕೀರ್ತಿಶೇಷ ವೀಣೆ ಶೇಷಣ್ಣನವರ ತಲೆ ಮತ್ತು ಎದೆಯ ಭಾಗದ ಪ್ರತಿಮೆಯು, ತಮ್ಮ ಶಿಷ್ಯರಿಗೆ ಗುರುಗಳಲ್ಲಿದ್ದ ಅಪಾರ ಭಕ್ತಿಯನ್ನು ಸೂಚಿಸುತ್ತದೆ. ಆ ಶಿಷ್ಯರು ಚಿತ್ರಕಲೆಗೂ ಮೂರ್ತಿಶಿಲ್ಪಕ್ಕೂ ಸಂಕ್ರಮಣದ ಪ್ರಾಂತದಲ್ಲಿರುವ ಈ ಕಲಾಕೃತಿಗಳಲ್ಲಿ ತಮ್ಮ ಅಪೂರ್ವವಾದ ಪ್ರತಿಭೆಯನ್ನು ತೋರಿಸಿದ್ದಾರೆ. ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿರುವ ಠಾಕೂರರ ತಲೆ ಮತ್ತು ಎದೆಯ ಭಾಗದ ಪ್ರತಿಮೆಯು ಶಾಂತಿನಿಕೇತನದ ಕವಿಗಳಲ್ಲಿ ನಮಗಿರುವ ಅಪಾರ ಗೌರವವನ್ನು ಸೂಚಿಸುತ್ತದೆ.

ಕಲೆಗಾರ ಶ್ರೀ ವೆಂಕಟಪ್ಪನವರು ಅರೆಯುಬ್ಬು ಚಿತ್ರಗಳನ್ನು (Bas-reliefs) ಚಿತ್ರಕಲೆಗೂ ಮೂರ್ತಿಶಿಲ್ಪಕ್ಕೂ ನಡುವಣ ಪ್ರಾಂತದಲ್ಲಿ "ಪ್ಲಾಸ್ಟರ್ ಆಫ್ ಪ್ಯಾರಿಸ್ಸಿ"ನಲ್ಲಿ ರಚಿಸಿದ್ದಾರೆ. ಈ ಕಲಾಕೃತಿಗಳಲ್ಲಿ ಬಣ್ಣಗಳಿಂದ ಸಹಾಯವನ್ನು ತೆಗೆದುಕೊಳ್ಳುವುದು ಸಾಧ್ಯವಿಲ್ಲ. ಶಿಲ್ಪಕಲೆಯಲ್ಲಿನ ಹಾಗೆ ಮೂರನೆಯ ಕ್ಷೇತ್ರದಿಂದಲೂ (Third Dimension) ಸಹಾಯವನ್ನು ತೆಗೆದುಕೊಳ್ಳುವ ಹಾಗಿಲ್ಲ. ಏಕೆಂದರೆ ಕಲಾಕೃತಿಯ ಉಬ್ಬುಗಳು ಹೆಚ್ಚೆಂದರೆ ಎರಡು ಅಂಗುಲಗಳಿರುತ್ತವೆ. ಆದರೂ ಶ್ರೀ ವೆಂಕಟಪ್ಪನವರು ಒಂದೊಂದು ಸನ್ನಿವೇಶದ ಕಲೆಯನ್ನೂ ಅನುಪಮವಾದ ರೀತಿಯಲ್ಲಿ ರೂಪಿಸಿದ್ದಾರೆ. ಶಿವತಾಂಡವ ನೃತ್ಯ. ಶಕುಂತಲೆಯು ಕಣ್ವಮಹರ್ಷಿಗಳನ್ನು ಕಾಳಿದಾಸನ 'ಶಾಕುಂತಲ'ದಲ್ಲಿ ಬೀಳ್ಕೊಡುವ ಸನ್ನಿವೇಶ, ರಾಮಾಯಣದ ಸುಂದರಕಾಂಡದಲ್ಲಿ ಸೀತೆಯು ರಾಮನಿಗಾಗಿ ಹನುಮಂತನ ಹತ್ತಿರ ಚೂಡಾಮಣಿಯನ್ನು ಕಳಿಸುವುದು. ದ್ರೋಣಾಚಾರ್ಯರು ಮತ್ತು ಏಕಲವ್ಯ—ಈ ಕಲಾಕೃತಿಗಳನ್ನು ಈ ಸಂದರ್ಭದಲ್ಲಿ ನೆನಸಿಕೊಳ್ಳಬಹುದು.

ಮೂರ್ತಿಶಿಲ್ಪವು (Sculpture) ಅಮೃತಶಿಲೆಯ ಲೌಕಿಕ ಪ್ರತಿಮೆಗಳಲ್ಲಿ ಯಾವ ನಿರ್ಬಂಧಗಳೂ ಇಲ್ಲದೆ ವ್ಯಕ್ತವಾಗುತ್ತದೆ. ಬೆಂಗಳೂರಿನ ಲಾಲ್‌ಬಾಗಿನಲ್ಲಿರುವ ಶ್ರೀ ಚಾಮರಾಜ ಒಡೆಯರ ಪ್ರತಿಮೆಯು ಜೀವಂತವಾಗಿರುವಂತೆ ತೋರುತ್ತದೆ. ಕಬ್ಬನ್‌ಪಾರ್ಕಿನಲ್ಲಿರುವ ಇವರದೇ ಅಮೃತ ಶಿಲೆಯ ವಿಗ್ರಹ. ಮೈಸೂರಿನ ಅರಮನೆಯ ಮುಂದಿರುವ ಶ್ರೀ ಚಾಮರಾಜ ಒಡೆಯರವರ ವಿಗ್ರಹ, ಮತ್ತು ಅದರ ಹತ್ತಿರವೇ ಈಚೆಗೆ ರಚಿಸಿದ ಶ್ರೀ ಕೃಷ್ಣರಾಜ ಒಡೆಯರವರು ನಿಂತಿರುವ ವಿಗ್ರಹ—ಇವು ಕುಶಲ ಕಲಾಕೃತಿಗಳು.

ಶಿಲ್ಪ ಸಿದ್ಧಾಂತಿ ಸಿದ್ಧಲಿಂಗ ಸ್ವಾಮಿಗಳು ಕೃಷ್ಣರಾಜಸಾಗರದ ಕಲ್ಲಿನ ಕಟ್ಟೆಯ ಹಿಂದೆ ಕರಿಯ ಕಲ್ಲಿನಿಂದ ಒಂದು ಹೂವಿನ ದಳಗಳ ಪೀಠದ ಮೇಲೆ ನಿಂತಿರುವ ಶ್ರೀ ಕಾವೇರೀ ದೇವಿಯ ವಿಗ್ರಹದ ಕೈಗಳಲ್ಲಿ ಹಿಡಿದಿರುವ ಕಲಶದಿಂದ ನೀರು ಸತತವಾಗಿ ಹೊರಕ್ಕೆ ಬರುವ ಹಾಗೆ ರಚಿಸಿದ್ದಾರೆ.

ಮೈಸೂರಿನ ಅರಮನೆಯ ಬಳಿ ಇರುವ ಶ್ರೀ ಗಾಯತ್ರಿ ಮತ್ತು ಶ್ರೀ ಭುವನೇಶ್ವರೀ ದೇವಿಯರ ದೇವಾಲಯಗಳನ್ನು ಈ ಶಿಲ್ಪಿಗಳೇ ರಚಿಸಿದರು. ಇವರೇ ಸಾವಿತ್ರೀದೇವಿ ಮತ್ತು ರಾಜರಾಜೇಶ್ವರಿಯ ವಿಗ್ರಹಗಳನ್ನು ಸುಂದರವಾಗಿ ನಿರ್ಮಿಸಿದ್ದಾರೆ. ಇವಲ್ಲದೆ ನಮ್ಮ ದೇಶದ ಅನೇಕ ದೇವಾಲಯಗಳಿಗೆ ದೇವತಾ ಪ್ರತಿಮೆಗಳನ್ನು ರಚಿಸಿ ಕೊಟ್ಟಿದ್ದಾರೆ. ಬೆಂಗಳೂರಿನ ಹತ್ತಿರ ಇರುವ ಶ್ರೀಗಣೇಶ, ಶ್ರೀ ಸುಬ್ರಹ್ಮಣ್ಯ, ಮತ್ತು ಶ್ರೀ ಕೋದಂಡರಾಮನ ವಿಗ್ರಹಗಳನ್ನು, ಆವರಣದಲ್ಲಿಯೇ ಎತ್ತರದ ಪೀಠದ ಮೇಲೆ ನವಗ್ರಹಗಳ ಮೂರ್ತಿಗಳನ್ನು ಶಾಸ್ತ್ರೀಯವಾಗಿ ರಚಿಸಿದ್ದಾರೆ. ಇಷ್ಟೇ ಅಲ್ಲದೆ ಸಿದ್ಧಾಂತಿಗಳ ಮನೆತನದವರು ಈ ಕಲೆಯನ್ನು ಶಿಷ್ಯರಿಗೆ ಕಲಿಸುವ ಶಾಲೆಯನ್ನು ನಡೆಸುತ್ತಾ ಇದ್ದಾರೆ.

ಸಾಗರ, ಸೊರಬ, ಸಿರಸಿ ಮತ್ತು ಸಿದ್ದಾಪುರದ ಗುಡಿಗಾರರು ಅದ್ಭುತವಾದ ಶಿಲ್ಪಿಗಳು. ಆದರೆ ಇವರು ಗಂಧದ ಮರದಲ್ಲಿಯೂ ದಂತದಲ್ಲಿಯೂ ಮೂರ್ತಿಗಳನ್ನು ಮಾಡುವುದೇ ಹೆಚ್ಚು. ಈ ಕಲೆಯ ಉದಾಹರಣೆಗಾಗಿ ಶಿವತಾಂಡವ ನೃತ್ಯವನ್ನು ಹೆಸರಿಸಬಹುದು.

ದಂತದಲ್ಲಿ ವಿಗ್ರಹಗಳನ್ನು ಸುಂದರವಾಗಿ ಕೆತ್ತುವ ಕಲೆಯು ಕರ್ನಾಟಕದ ಅನೇಕ ಭಾಗಗಳಲ್ಲಿ ರೂಢಿಯಲ್ಲಿದೆ. ಮಹಾಭಾರತದ ಯುದ್ಧಕ್ಕೆ ಮುಂಚೆ ಭಗವದ್ಗೀತೆಯ ಒಂದನೆಯ ಅಧ್ಯಾಯದಲ್ಲಿ ಕಾಣುವ "ಅರ್ಜುನ ವಿಷಾದ"ದ ಕೆತ್ತನೆಯು ಪ್ರಖ್ಯಾತವಾಗಿದೆ.

ಮೂಲ ಲೇಖಕರು ಮತ್ತು ಅನುವಾದಕರು : ಶ್ರೀ ಎಚ್. ಪಿ. ಕಪಿನೀಪತಿ ಭಟ್ಟ

# ಅಧ್ಯಾಯ 4

## ಕಾಂಗ್ರೆಸ್ ಮತ್ತು ಕರ್ನಾಟಕ

**ಈ ಪರಿಚ್ಛೇದದಲ್ಲಿ** ಕಾಂಗ್ರೆಸ್ ಚಳವಳಿಯಿಂದ ಜಾಗೃತಿಗೊಂಡ ದೇಶ, ಕಾಂಗ್ರೆಸ್ ಸಂಸ್ಥೆಯ ಅಂಗರಚನೆ, ಅದರ ವಿಭಾಗಗಳು ಮತ್ತು ತತ್ಸಂಬಂಧದ ವಿಚಾರಗಳನ್ನು ಕುರಿತು ಪ್ರಸ್ತಾಪ ಮಾಡಲಾಗುವುದು. ಸ್ವಾತಂತ್ರ್ಯದ ಹೋರಾಟದ ಕಾಲದಲ್ಲಿ ಕರ್ನಾಟಕ ವಹಿಸಿದ ಪ್ರಭಾವಶಾಲಿ ಪಾತ್ರದ ಕುರಿತು ಪ್ರತ್ಯೇಕ ಪರಿಚ್ಛೇದವೇ ಮೀಸಲಾಗಿದೆ.

ವ್ಯಕ್ತಿಯ ಉಳಿವಿಗೆ, ಬದುಕಿಗೆ ಶ್ವಾಸೋಚ್ಛ್ವಾಸ ಎಷ್ಟು ಮುಖ್ಯವೋ, ಪ್ರತಿಯೊಂದು ರಾಷ್ಟ್ರಕ್ಕೂ ಸ್ವಾತಂತ್ರ್ಯ ಅಷ್ಟೇ ಪ್ರಮುಖವಾದುದು. ಸ್ವಾತಂತ್ರ್ಯವೇ ರಾಷ್ಟ್ರದ ಜೀವನಾಡಿ. ದೇಶದ ಸುಗಮ ಪ್ರಗತಿಗೆ, ಉದ್ದೇಶಪೂರಿತ ಗುರಿ ಸಾಧಿಸಲು ತವಕಿಸುತ್ತಿರುವ ಜನತೆಗೆ ಇದು ಆಧಾರ ಸ್ತಂಭ. ಈ ಮೂಲ ಅರ್ಥವನ್ನು ಮನಸ್ಸಿನಲ್ಲಿ ಇಟ್ಟುಕೊಂಡೇ, "ಸ್ವರಾಜ್ಯವು ನಮ್ಮ ಆಜನ್ಮ ಸಿದ್ಧ ಹಕ್ಕು" ಎಂದು ಲೋಕಮಾನ್ಯ ತಿಲಕರು ಸಾರಿದರು. ಇದನ್ನು ನಾವು ಗಳಿಸಿಯೇ ಗಳಿಸುತ್ತೇವೆ ಎಂದು ವ್ರತತೊಟ್ಟರು ಗಾಂಧಿಜೀಯವರು. ಕಡೆಗೆ ಈ ಗುರಿ ನಾವು ಸಾಧಿಸಿಯೇ ಸಾಧಿಸಿದೆವು. ನಾವು ಸ್ವಾತಂತ್ರ್ಯ ಗಳಿಸಿದ್ದು ಅನೂಚಾನ ಕಾಲದಿಂದ ನಡೆದು ಬಂದಿರುವ ಸಾಮಾನ್ಯ ಮಾರ್ಗದಿಂದ ಅಲ್ಲ—ಆದರೆ ಅಹಿಂಸೆಯು ಅಸ್ತ್ರದ ನೆರವಿನಿಂದ; ಅಸಾಮಾನ್ಯವಾದ ಮಾರ್ಗಾನುಸರಣೆಯಿಂದ.

ಮೇಲೆ ಸೂಚಿಸಿರುವ ಕ್ರಮದಿಂದ ನಮಗೆ ಸ್ವರಾಜ್ಯ ಗಳಿಸಿ ಕೊಟ್ಟ ಸಂಸ್ಥೆ ಭಾರತ ರಾಷ್ಟ್ರೀಯ ಕಾಂಗ್ರೆಸ್. ಜನತೆಯನ್ನು ಬಡಿದೆಬ್ಬಿಸಿ, ಅವರಲ್ಲಿ ಅಸಾಧಾರಣ ಉತ್ಸಾಹ ತುಂಬಿ, ನಾನಾ ಸಾಧನೋಪಾಯಗಳನ್ನು ಕಂಡುಹಿಡಿಯುವುದರಿಂದಲೂ ಸಾಹಸೋದ್ಯಮಗಳಿಂದಲೂ ಬ್ರಿಟಿಷರ ಕಪಿ ಮುಷ್ಟಿಯಿಂದ ಬಿಡಿಸಿಕೊಳ್ಳಲು, ಜನತೆಯನ್ನು ಪ್ರೇರಿಸಲು ಈ ಸಂಸ್ಥೆಯೇ ಮುಖ್ಯ ಸಾಧನ. ಪ್ರಪಂಚ ಇದುವರೆಗೂ ಕಂಡರಿಯದ ರಾಷ್ಟ್ರದ ಹಾಗೂ ಜನತೆಯ ಮಹಾನಾಯಕ ಮಹಾತ್ಮಾಗಾಂಧಿಯ ಅಹಿಂಸಾತ್ಮಕ ರೀತಿಯ ಹೋರಾಟದ ಕರೆಗೆ ಭಾರತದ ಎಲ್ಲ ಭಾಗದ ಜನಸ್ತೋಮ ಓಗೊಟ್ಟುದರ ಪರಿಣಾಮವಾಗಿ ಸ್ವರಾಜ್ಯ ಸಾಧಿತವಾಯಿತು.

ಕಾಂಗ್ರೆಸ್ ಸಂಸ್ಥೆ ಸ್ವಾತಂತ್ರ್ಯಕ್ಕಾಗಿ 1906 ರಿಂದ ವಿಶೇಷವಾಗಿ, 1920 ರಿಂದ 1947ರ ವರೆಗೆ ಅವ್ಯಾಹತವಾಗಿ ನಡೆಸಿದ ಸ್ವಾತಂತ್ರ್ಯದ ಹೋರಾಟವಲ್ಲಿ ಕರ್ನಾಟಕದ ಸ್ತ್ರೀ ಪುರುಷರು ಅತ್ಯಂತ ಗಮನಾರ್ಹ ಪಾತ್ರವಹಿಸಿದ್ದರು. ಈ ಚರಿತ್ರಾರ್ಹವಾದ ಹೋರಾಟಕ್ಕೆ ನೀಡಿದ ಕರ್ನಾಟಕದ ಕಾಣಿಕೆಯ ಕಥೆಯನ್ನೆಲ್ಲ ಕೆಲವೇ ಮಾತುಗಳಲ್ಲಿ ಸಂಕ್ಷಿಪ್ತವಾಗಿ ಮುಗಿಸಿ ಹೇಳುವುದು ಅಸಾಧ್ಯದ ಕೆಲಸ. ಆದರೆ ಕರ್ನಾಟಕದಲ್ಲಿ ನಡೆದ ಸ್ವಾತಂತ್ರ್ಯ ಸಂಗ್ರಾಮದ ರೂಪರೇಖೆಯನ್ನಾದರೂ ಕೊಡದೆ ಹೋದಲ್ಲಿ ಈ ಗ್ರಂಥ ಪರಿಪೂರ್ಣವಾಗದು. ಆದ್ದರಿಂದ ಕರ್ನಾಟಕದ ಜನತೆ, ಭಾರತದ ಇತರ ಭಾಗಗಳ ತಮ್ಮ ಸಹೋದರ

ಸಹೋದರಿಯರೊಡನೆ ಭುಜಕ್ಕೆ ಭುಜಕೊಟ್ಟು ನಡೆಸಿದ ಸ್ವಾತಂತ್ರ್ಯ ಹೋರಾಟದ ಪಕ್ಷಿನೋಟದ ಚಿತ್ರವನ್ನು ಇಲ್ಲಿ ಕೊಡಲು ಪ್ರಯತ್ನಿಸಲಾಗಿದೆ.

ಬ್ರಿಟಿಷ್ ಆಳಿಕೆ ಭಾರತದಲ್ಲಿ ಭದ್ರವಾಗಿ ಬೇರೂರಿದ ಮೇಲೂ ಪರದೇಶಿಯರು ತಮ್ಮ ಪ್ರಭುತ್ವವನ್ನು ಈ ದೇಶದ ಮೇಲೆ ಬಲಾತ್ಕಾರವಾಗಿ ಹೊರಿಸುವುದರ ವಿರುದ್ಧ ಅಲ್ಲೊಂದು ಇಲ್ಲೊಂದು ಪ್ರಯತ್ನ, ರೈತರ ದಂಗೆ, 1824ರಷ್ಟು ಹಿಂದಿನ ಕಾಲಕ್ಕೇ ಕಿತ್ತೂರಿನ ರಾಣಿ ಚೆನ್ನಮ್ಮನ ವೀರ ಪ್ರತಿಭಟನೆಯುಂಥಾ ನಿದರ್ಶನಗಳಿಗೆ ಕೊರತೆಯಿಲ್ಲ ಎನ್ನಬಹುದು. ಈ ಎಲ್ಲ ಪ್ರಯತ್ನಗಳೂ ವಿದೇಶೀಯರ ಆಳಿಕೆಯನ್ನು ತಡೆಗಟ್ಟಲು ನಡೆಸಿದ ಜನತೆಯ ದೃಢ ಸಂಕಲ್ಪದ ಪ್ರತೀಕವಾಗಿ, 1857ರಲ್ಲಿ ನಡೆದ ಮೊದಲನೆ ಸ್ವಾತಂತ್ರ್ಯ ಸಮರದಲ್ಲಿ ತುತ್ತತುದಿಯನ್ನು ಮುಟ್ಟಿದುವು. ದುರ್ದೈವವಶಾತ್, ಯಾವ ಕಾರಣಗಳು ವಿದೇಶೀಯರು ನಮ್ಮ ದೇಶವನ್ನು ಪ್ರವೇಶಿಸಿ, ಇಲ್ಲಿಯೇ ಸುಭದ್ರವಾಗಿ ನೆಲಸಲು ಸಹಾಯವಾದುವೋ, ಅವೇ ಕಾರಣಗಳ ದೆಸೆಯಿಂದ, ಈ ಸ್ವಾತಂತ್ರ್ಯ ಸಮರದ ಪ್ರಯತ್ನಗಳೂ ನಿಷ್ಫಲವಾದುವು. ಭಯಂಕರ ಸಾಮೂಹಿಕ ವಿನಾಶಕಾರಿ ಶಸ್ತ್ರಗಳಿಂದ, ಆಧುನಿಕ ಸೈನ್ಯ ವ್ಯವಸ್ಥೆ ಮತ್ತು ಯಂತ್ರೋಪಕರಣಗಳಿಂದ ಸಜ್ಜಿತವಾದ ಸುವ್ಯವಸ್ಥಿತ ಸರ್ಕಾರದ ವಿರುದ್ಧ ಸಶಸ್ತ್ರ ಪ್ರತಿಭಟನೆ ಅಥವಾ ಬಂಡಾಯ ನಡೆಸುವುದು ಅಸಾಧ್ಯವೆಂದು ಗ್ರಹಿಸಲು ರಾಷ್ಟ್ರ ಕಾಲು ಶತಮಾನ ಕಾಲ ಕಾಯಬೇಕಾಯಿತು. ಬೇರೆ ಬಗೆಯ ಪ್ರತಿಭಟನೆಯ ಸೂಚನೆಯೊದಗಿತು. ವಿದೇಶೀಯರ ಆಳಿಕೆಯ ಸ್ವೇಚ್ಛಾವೃತ್ತಿಯನ್ನು ಸವಿನಯದಿಂದ ತಡೆ ಹಿಡಿಯುವ ಸಿದ್ಧತೆಗೆ ಬೇಕಾದ ಜನಾಭಿಪ್ರಾಯವನ್ನು ರೂಢಿಸಿ ಅವರ ಸಂಕಲ್ಪವನ್ನು ದೃಢಗೊಳಿಸುವುದೇ ಸ್ವಾತಂತ್ರ್ಯ ಸಾಧನೆಯ ಹೊಸ ಮಾರ್ಗವಾಯಿತು. ಬೊಂಬಾಯಿ, ಮದರಾಸು, ಕಲ್ಕತ್ತ ಈ ಮೂರು ಪ್ರಾಂತಗಳಲ್ಲಿ ಈ ದಿಸೆಯಲ್ಲಿ ಮಾಡಿದ ಪ್ರಯತ್ನಗಳ ಫಲವಾಗಿ 'ರಾಷ್ಟ್ರೀಯ ಮಹಾಸಭೆ 'ಯಾ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಹುಟ್ಟಿಕೊಂಡಿತು.

ಇದೂ ಒಂದು ವಿಚಿತ್ರ : ಈ ರಾಷ್ಟ್ರೀಯ ಮಹಾ ಸಭೆಯನ್ನು ಸ್ಥಾಪಿಸಿ. ರೂಪಿಸಿದ ಹಿರಿಮೆ ಅಲನ್ ಆಕ್ಟೇವಿಯನ್ ಹ್ಯೂಂ ಎಂಬ ಪಾಶ್ಚಾತ್ಯನಿಗೆ ಸೇರಿದೆ. ಭಾರತದ ಸೇವೆಗಾಗಿ, ಭಾರತೀಯರ ಉದ್ಧಾರಕ್ಕಾಗಿ ದುಡಿಯುವುದು ಆತನಿಗೆ ನೀಡಲ್ಪಟ್ಟಿತೆನ್ನುವ ಒಂದು ಪ್ರಾಂತದ ಲೆಫ್ಟಿನೆಂಟ್ ಗವರ್ನರ್ ಅಧಿಕಾರಕ್ಕಿಂತ ಹಿರಿದೆನಿಸಿತ್ತು. ಕಾಲ ಪರಿಸ್ಥಿತಿಯನ್ನು ಅವನು ಗ್ರಹಿಸಿದ್ದನು. ಅವನಿಗೆ ಲಭ್ಯವಾದ ಏಳು ಸಂಪುಟಗಳು ಜನತೆ ಅನುಭವಿಸುತ್ತಿದ್ದ ನಿಜವಾದ ಕಷ್ಟ ಸಂಕಟಗಳನ್ನೂ ಇವನ್ನು ಅನುಭವಿಸುವುದಕ್ಕಿಂತ ದಂಗೆ ಏಳುವುದೇ ಲೇಸು ಎಂಬ ಭಾವನೆ ಜನತೆಯಲ್ಲಿ ತಲೆದೋರುತ್ತಿರುವುದನ್ನೂ ಮನಗಾಣಿಸಿದ್ದವು. (ಅ) ಈ ದೇಶಕ್ಕೆ ಅನುಗುಣವಲ್ಲದ ದುಬಾರಿ ವೆಚ್ಚದ, ಮಂದಗಾಮಿಯಾದ ಸಿವಿಲ್ ಮತ್ತು ಕ್ರಿಮಿನಲ್ ವ್ಯವಹಾರ ಪದ್ಧತಿ, (ಆ) ಜನರನ್ನು ಪೀಡಿಸುವ ಕಂದಾಯ ಪದ್ಧತಿ, (ಇ) ಅನಾಚಾರದಿಂದ ಕೂಡಿದ ದಬ್ಬಾಳಿಕೆಯ ಪೋಲೀಸ್ ಆಡಳಿತ, (ಈ) ಜನರ ಕಷ್ಟಸಂಕಟಗಳಿಗೆ ಕಿಂಚಿತ್ ಸಹಾನುಭೂತಿಯನ್ನೂ ತೋರಿಸದ ದಯಾರಹಿತ ಪ್ರಭುತ್ವ—ಇವುಗಳ ಸುತ್ತ ಜನತೆಯ ಕಷ್ಟ ಕಾರ್ಪಣ್ಯಗಳೂ ಆಡಳಿತದ ಲೋಪದೋಷಗಳೂ ಮುತ್ತಿಕೊಂಡಿದ್ದುವು.

1883ರಲ್ಲಿ ಹ್ಯೂಂ ಕಲ್ಕತ್ತ ವಿಶ್ವವಿದ್ಯಾಲಯದ ಪದವೀಧರರನ್ನು ಕುರಿತು ಮಾಡಿದ ಭಾಷಣದ ದಾಖಲೆಯಿದೆ. ದೇಶದ ಅಂಧಕಾರಮಯವಾದ ಚಿತ್ರವನ್ನು ಅವರ ಮುಂದಿಟ್ಟು, ದೇಶದ ಏಳ್ಗೆಗಾಗಿ ನಿಃಸ್ವಾರ್ಥ ಬುದ್ಧಿಯಿಂದ ಸೇವೆ ಸಲ್ಲಿಸಲು ಸಿದ್ಧವಾದ ಐವತ್ತು ಯೋಗ್ಯ ತರುಣರಿಗಾಗಿ ಅವನು ಮನವರಿಕೆ ಮಾಡಿಕೊಂಡನು. ಜನ ಕಷ್ಟ ಸಂಕಟದಲ್ಲಿ ಮುಳುಗಿ ಸಂಕಟಪಡುತ್ತಿರುವಾಗ ಅದರ ನಿವಾರಣೆಗಾಗಿ ನಿಃಸ್ವಾರ್ಥ ಕಾರ್ಯಕರ್ತರು ಬೇಕೆಂದು ಬಯಸುವುದು ಎಲ್ಲ ಸನ್ನಿವೇಶಗಳಲ್ಲೂ ಎಷ್ಟು ಸಮಯೋಚಿತ !

ಕಾಂಗ್ರೆಸ್ ಸಂಸ್ಥೆ ರಾಜಕೀಯ ತಜ್ಞರ ವೇದಿಕೆ ಆಗಿರಬೇಕೆಂಬುದೇ ಹ್ಯೂಂ ಅವರ–ಮೊದಲ ಉದ್ದೇಶವಾಗಿತ್ತು ಎನ್ನುವುದರಲ್ಲಿ ಸಂದೇಹವಿಲ್ಲ. ಆದರೆ ಆ ಪ್ರಾಂತದ ಗೌರ್ನರ್ ಅಥವಾ ಆಡಳಿತದ ಮುಖ್ಯಾಧಿಕಾರಿ ಅದರ ಅಧ್ಯಕ್ಷತೆ ವಹಿಸಬೇಕೆಂಬುದೇ ಅವರ ಅಭಿಪ್ರಾಯವಾಗಿತ್ತು. ಹಾಗಿದ್ದರೂ ಆಗಿನ ವೈಸ್‌ರಾಯ್ ಲಾರ್ಡ ಡಫರಿನ್ ಅವರ ಅಭಿಪ್ರಾಯ ಕೇಳಿದಾಗ, ರಾಜಕೀಯ ಕುಶಾಗ್ರಬುದ್ಧಿಯಿಂದ ಅವರು ನೀಡಿದ ಸೂಚನೆಯೆಂದರೆ—ಗೌರ್ನರ್ ಅಥವಾ ಆಡಳಿತಾಧಿಕಾರಿ ಇದರ ಅಧ್ಯಕ್ಷರಾದರೆ ಕೇವಲ ಹೊಗಳುಭಟ್ಟಂಗಿಗಳು ಮಾತ್ರ ಅವರ ಸುತ್ತ ಮುತ್ತಿಕೊಂಡು ಜನತೆಯ ನಿಜವಾದ ಕಷ್ಟಕಾರ್ಪಣ್ಯಗಳು, ಅವುಗಳ ಕಾರಣ, ನಿವಾರಣೆ ಇವುಗಳನ್ನು ಬಿಚ್ಚು ಮನಸ್ಸಿನಿಂದ ಸಭೆಯ ಮುಂದೆ ಮಂಡಿಸಲು ಬೆಂಬಲ ದೊರೆಯದು ಎಂಬುದೇ. ಎಷ್ಟು ನಿಜವಾದ ಶಂಕೆ !

ಕಟ್ಟಕಡೆಗೆ ಡಬ್ಲ್ಯು. ಸಿ. ಬ್ಯಾನರ್ಜಿ ಅವರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ಸಿನ ಮೊತ್ತಮೊದಲನೆಯ ಅಧಿವೇಶನ ನಡೆಸುವ ಸೌಭಾಗ್ಯ ಬೊಂಬಾಯಿಗೆ ದಕ್ಕಿತು. 1885ರಲ್ಲಿ ಈ ಮೊದಲ ಅಧಿವೇಶನ ಗೋವಾಲಿಯ ಟ್ಯಾಂಕ್ ರಸ್ತೆಯಲ್ಲಿರುವ ಗೋಕುಲದಾಸ್ ತೇಜಪಾಲ್ ಸಂಸ್ಕೃತ ಕಾಲೇಜಿನಲ್ಲಿ ನಡೆಯಿತು. ಈ ಅಧಿವೇಶನದಲ್ಲಿ ಭಾರತದ ನಾನಾ ಭಾಗಗಳಿಂದ 72 ಪ್ರತಿನಿಧಿಗಳು ಹಾಜರಿದ್ದರೆಂದು ವರದಿಯಾಗಿದೆ. ಇದರಲ್ಲಿ ಸಭಾಪತಿ ಮೊದಲಿಯಾರ್ ಅವರ ಹೆಸರು ಬಂದಿದೆಯಾದರೂ ನಿಜವಾಗಿ ಕರ್ನಾಟಕವನ್ನು ಪ್ರತಿನಿಧಿಸಿದವರು ಬಳ್ಳಾರಿಯ ಕೋಲಾಚಲಂ ವೆಂಕಟರಾವ್. ಇವರು ಉದಾರಚರಿತರೂ ಧಾರ್ಮಿಕ ಬುದ್ಧಿಯುಳ್ಳವರೂ ಆಗಿದ್ದರು. 1900ರಲ್ಲಿ ಕಾಂಗ್ರೆಸ್ ಗದ್ದುಗೆ ಏರಿದ ಶ್ರೀ ನಾರಾಯಣ ಚಂದಾವರ್‌ಕರ್ ಅವರು ಕರ್ನಾಟಕದವರೇ ಆಗಿದ್ದರು ಎಂಬುದನ್ನಿಲ್ಲಿ ತಿಳಿಸಬೇಕು. ಅಷ್ಟು ಹೊತ್ತಿಗೇ ಬೊಂಬಾಯಿಯ ಪ್ರಮುಖ ಸಾರ್ವಜನಿಕ ವ್ಯಕ್ತಿಯಾದ ಇವರು ಕಾಂಗ್ರೆಸ್ ಅಧಿವೇಶನ ನೆರೆಯುವ ಸ್ವಲ್ಪ ಕಾಲಕ್ಕೆ ಮುಂಚಿತವಾಗಿಯೇ 1895ರಲ್ಲಿ ನಿಯೋಗದ ಸದಸ್ಯರಾಗಿ ಇಂಗ್ಲೆಂಡಿಗೆ ಹೋಗಿದ್ದರು.

ಕರ್ನಾಟಕ ಎಂಬ ಆಡಳಿತ ವಿಭಾಗ ಇರಲಿಲ್ಲ ಎಂದು ಈ ಸಂದರ್ಭದಲ್ಲಿ ಹೇಳಬಹುದು. ಕನ್ನಡಿಗರಲ್ಲಿ ಅಂತಹ ಒಂದು ಪ್ರತ್ಯೇಕ ಪ್ರಾಂತ ಬೇಕೆಂಬ ಭಾವನೆಯೂ ತಲೆಹಾಕಿರಲಿಲ್ಲ. 1799ರಲ್ಲಿ ಟಿಪ್ಪುವಿನ ಮರಣಾನಂತರ ಅವನ ರಾಜ್ಯವನ್ನು ತುಂಡು ತುಂಡಾಗಿ ಬ್ರಿಟಿಷರು ವಿಭಜಿಸಿದ ತರುವಾಯ, ಒಂದು ಭಾಗವಾಗಿ ಉಳಿದಿದ್ದುದು ಮೈಸೂರು ರಾಜ್ಯ ಮಾತ್ರ. ಸಾಮ್ರಾಜ್ಯದ ಮಿಕ್ಕ ಭಾಗಗಳೆಲ್ಲವೂ ನೆರೆಯ ಜಿಲ್ಲೆ ಅಥವಾ ಪ್ರಾಂತಗಳಿಗೆ ಹಂಚಿಹೋಗಿದ್ದವು. ಕನ್ನಡ ಅಥವಾ ಕೆನರಾ ಜಿಲ್ಲೆಯನ್ನು ಉತ್ತರ ಮತ್ತು ದಕ್ಷಿಣ ಎಂದು ಪ್ರತ್ಯೇಕ ಭಾಗಗಳಾಗಿ ಅಸಹಕಾರದ ಚಳವಳಿಯ ನೀತಿಯಂತೆ ತುಂಡರಿಸಿ ಒಡೆದು ಒಂದು ಭಾಗವನ್ನು ಮದ್ರಾಸಿನೊಡನೆಯೂ ಮತ್ತೊಂದು ಭಾಗವನ್ನು ಬೊಂಬಾಯಿ ಪ್ರಾಂತದೊಡನೆಯೂ ಸೇರಿಸಲಾಯಿತು. ಕನ್ನಡಿಗರೆಲ್ಲರೂ ಒಂದಾಗಬೇಕು, ಒಟ್ಟುಗೂಡಿ ಬೆಳೆಯಬೇಕು ಎಂಬ ಭಾವನೆ ಬೆಳೆಯಲು ಸುಮಾರು ಐವತ್ತು ವರ್ಷಗಳು ಬೇಕಾದುವು. ಒಂದೇ ನಡೆ, ನುಡಿ, ಚರಿತ್ರೆ ಇನ್ನಿತರ ಬಾಂಧವ್ಯ ಕೂಡಿದ ಜನಾಂಗವಾಗಿ ತಮ್ಮೆಲ್ಲರ ಭವಿಷ್ಯವನ್ನು ರೂಪಿಸಿಕೊಳ್ಳುವ ಸಲುವಾಗಿ ಕಾಂಗ್ರೆಸ್ ಮಂಡಲಿಯೊಂದು ಇರಬೇಕು ಎಂಬ ಬೇಡಿಕೆ 1917ರಲ್ಲಿ ಹೊರಬಿತ್ತು. ಈ ಭಾವನೆ ರೂಪಗೊಂಡು ಬೆಳೆಯಲು ಇಷ್ಟು ದೀರ್ಘಕಾಲ ಬೇಕಾಯಿತು.

1905-6ರಲ್ಲಿ ವಂಗ ವಿಭಜನೆಯ ವಿರುದ್ಧ ಪ್ರಚಂಡ ಸ್ವದೇಶಿ ಚಳವಳಿಯ ಕಾಲದಲ್ಲಿ ಒಂದು ನವ ಜಾಗೃತಿಯೂ ಈ ರಾಷ್ಟ್ರೀಯ ಆಂದೋಳನದಲ್ಲಿ ಭಾಗವಹಿಸಬೇಕು ಎಂಬ ಭಾವನೆಯೂ ಕನ್ನಡ ಭಾಷೆಯನ್ನಾಡುವ ಅಖಂಡ ಕರ್ನಾಟಕದ ಎಲ್ಲ ಭಾಗಗಳಲ್ಲೂ ಮಸುಕು ಮಸುಕಾಗಿ ಗೋಚರಿಸಿದವು. ಈ ಜಾಗೃತ ಮನೋಭಾವನೆ ಹಾಗೂ ರಾಷ್ಟ್ರೀಯ ಭಾವನೆ ಬೆಳೆಯಲು ಮತ್ತು ಕಾಂಗ್ರೆಸ್ ಸಂಸ್ಥೆಯಲ್ಲಿ ತಮ್ಮದೇ ಆದ ಕಾಂಗ್ರೆಸ್ ವರ್ತುಲ ಇರಬೇಕೆಂದು ಒತ್ತಾಯ ಮಾಡಲು ಇದು ನಾಂದಿ ಆಯಿತು.

ಆದರೆ, ತನ್ನದೇ ಪ್ರತ್ಯೇಕ ಕಾಂಗ್ರೆಸ್ ವರ್ತುಲ ಆಗಲು ಕರ್ನಾಟಕ 1920ರ ವರೆಗೂ ಕಾಯಬೇಕಾಯಿತು. ಆಂಧ್ರಕ್ಕೆ ಪ್ರತ್ಯೇಕ ಕಾಂಗ್ರೆಸ್ ಮಂಡಲಿ 1917ರಲ್ಲೂ ಸಿಂಧು ಪ್ರಾಂತಕ್ಕೆ 1918ರಲ್ಲೂ ದೊರೆತವು.

ಹತ್ತೊಂಬತ್ತನೆಯ ಶತಮಾನದ ಆದಿ ಭಾಗದಲ್ಲೇ ಕನ್ನಡ ಜಿಲ್ಲೆಯ ಭೂಮಾಲಿಕರು ಥಾಮಸ್ ಮನ್ರೋ ಜಿಲ್ಲಾಧಿಕಾರಿಯಾಗಿದ್ದ ಕಾಲದಲ್ಲಿ—ಕೈಗೊಂಡ ಅಸಹಕಾರ ಚಳವಳಿ ಕೇವಲ ಸಾಂಕೇತಿಕವಾಗಿರಲಿಲ್ಲ ಎಂದು ಇಲ್ಲಿ ಉಲ್ಲೇಖಿಸಬಹುದಾಗಿದೆ. ಆಗಿನ ಸರ್ಕಾರ ಒಂದು ಹೊಸ ಕಂದಾಯ ಪದ್ಧತಿಯನ್ನು ಜಾರಿಗೆ ತರಬೇಕೆಂದು ಆಶಿಸಿದಾಗ ಭೂಮಾಲಿಕರನ್ನು ಅವರ ಹಕ್ಕುದಾರಿಕೆಯ ದಾಖಲೆಗಳನ್ನು ತೋರಿಸಬೇಕೆಂದು ಕೋರಿತು. ಸರ್ಕಾರ ತನ್ನದೆ ಆದ ಪಟ್ಟಾ ಅಥವಾ ಆಸ್ತಿಯ ದಸ್ತಾವೇಜು ಕೊಡಬೇಕೆಂದಿತ್ತು. ಹಳೆಯ ಪಟ್ಟಾ ತೆಗೆದುಕೊಂಡು ಹೊಸ ದಸ್ತಾವೇಜು ಕೊಡಬೇಕೆಂಬುದೇ ಅವರ ಉದ್ದೇಶ. ಇವರಲ್ಲಿ ಏನೋ ಮೋಸವಿದೆ ಎಂಬ ಭಾವನೆ ಸಣ್ಣ ಮತ್ತು ದೊಡ್ಡ ಭೂಮಾಲಿಕರಲ್ಲಿ ತಲೆದೋರಿ ಅವರೆಲ್ಲರೂ ಸರ್ಕಾರದೊಡನೆ ಅಸಹಕಾರವನ್ನು ಪ್ರಾರಂಭಿಸಿದರು. ರೆವಿನ್ಯು ಅಧಿಕಾರಿಗಳು ತಮ್ಮ ಸಿಬ್ಬಂದಿಯೊಡನೆ ಬರುತ್ತಲೇ, ನಗರ ಮತ್ತು ಹಳ್ಳಿಯ ಜನರೆಲ್ಲರೂ ತಮ್ಮ ಮನೆ ಮಠಗಳನ್ನು ತೊರೆದು ಜಮೀನುಗಳಲ್ಲೂ ಕಾಡುಗಳಲ್ಲೂ ಕಣ್ಮರೆಯಾಗುತ್ತಿದ್ದರು. ಈ ಕಣ್ಣು ಮುಚ್ಚಾಲೆಯ ಚಳವಳಿ ತಿಂಗಳಗಟ್ಟಲೆ ದೀರ್ಘಕಾಲ ನಡೆಯಿತು. ಸರ್ಕಾರ ಏನೂ ಮಾಡಲಾರದೆ ಹೋಯಿತು. ಕನ್ನಡ ಜಿಲ್ಲೆಯ ಜನತೆಯ ಈ ಉಪಾಯದ ಕುರಿತು ಥಾಮಸ್ ಮನ್ರೋ ಬರೆದ ಒಂದು ಪತ್ರದಲ್ಲಿ "ಕನ್ನಡ ಜಿಲ್ಲೆಯಲ್ಲಿ ಅರಸಾಗಿ ಬಾಳುವುದಕ್ಕಿಂತ, ಒಂದು ನಡುಗಡ್ಡೆಯಲ್ಲಿ ಸಾಮಾನ್ಯ ಸಿಪಾಯಿ ಆಗಿ ಬಾಳುವುದೇ ಲೇಸು" ಎಂಬ ಉದ್ಗಾರ ತೆಗೆದಿರುವನು.

ಮುಂದೆ ಒಂದು ಶತಮಾನದ ತರುವಾಯ 1930-32-34 ರಲ್ಲಿ ಉತ್ತರ ಕನ್ನಡದ ರೈತರು ನಡೆಸಿದ ಕಪ್ಪ ಕರನಿರಾಕರಣೆಯ ಆಂದೋಲನ ಮೇಲ್ಕಂಡ ಅಸಹಕಾರ ಚಳವಳಿಯಲ್ಲಿಯೇ ಅಂಕುರಾರ್ಪಣವಾಗಿತ್ತೆಂದು ಹೇಳಬಹುದು.

ಭಾರತದಲ್ಲಿ ಪ್ರಾರಂಭದ ಘಟ್ಟದ ಕಾಂಗ್ರೆಸಿನ ಚಟುವಟಿಕೆಗಳಲ್ಲಿ ಉತ್ಸಾಹ ನೀಡುವ, ಸ್ಫೂರ್ತಿದಾಯಕ ಕ್ರಾಂತಿಕಾರಕ ಆಗುಹೋಗುಗಳೇನೂ ಕಂಡುಬರಲಿಲ್ಲ. ವರುಷ ವರುಷವೂ ಕ್ರಿಸ್‌ಮಸ್ ರಜಾ ದಿನಗಳಲ್ಲಿ ನೆರೆಯುತ್ತಿದ್ದ ಕಾಂಗ್ರೆಸ್ ಅಧಿವೇಶನ ಚಿರಪರಿಚಿತವಾದ ಒಂದೇ ಬಗೆಯ ನಿರ್ಣಯಗಳನ್ನು ಪುನರುಚ್ಚರಿಸುತ್ತಿದ್ದಿತು. ಚಕ್ರವರ್ತಿಗೆ ರಾಜಭಕ್ತಿ, ಸರ್ಕಾರದ ನೌಕರಿಗಳಲ್ಲಿ ಹೆಚ್ಚು ಅವಕಾಶಕ್ಕೆ ಸಾಮಾನ್ಯ ಬೇಡಿಕೆ, ಮಿಲಿಟರಿ ವೆಚ್ಚದಲ್ಲಿ ಖೋತಾ, ಭಾರತೀಯ ಸಿವಿಲ್ ಸರ್ವಿಸು ಪರೀಕ್ಷೆಗಳನ್ನು ಏಕಕಾಲದಲ್ಲಿ ಇಂಗ್ಲೆಂಡ್ ಮತ್ತು ಭಾರತದಲ್ಲಿ ನಡೆಸುವುದು,ಆಡಳಿತದಲ್ಲಿ ಭಾರತೀಯರಿಗೆ ಯೋಗ್ಯ ಹಾಗೂ ನ್ಯಾಯವಾದ ಪಾಲು ಕೊಡುವಂತೆ ಒತ್ತಾಯ ಮಾಡುವುದು–ಈ ರೀತಿಯ ಸಾಮಾನ್ಯ ನಿರ್ಣಯಗಳು ಮೇಲಿಂದ ಮೇಲೆ ಅಂಗೀಕೃತವಾಗುತ್ತಿದ್ದುವು. ಆದರೆ ವರುಷಗಳು ಉರುಳುತ್ತಾ ಹೋದಂತೆ ಈ ನಿರ್ಣಯಗಳ ಧಾಟಿ ತೀವ್ರಗೊಳ್ಳುತ್ತಿತ್ತು; ಭಾಷೆ ಸ್ಫುಟವಾಗುತ್ತಿತ್ತು; ಬೇಡಿಕೆಗಳು ಪ್ರಬಲಗೊಳ್ಳುತ್ತಾ ಒತ್ತಾಯ ಅತಿಯಾಗುತ್ತಲೂ ಇದ್ದವು. ನಾನಾ ಪ್ರಾಂತಗಳ ಎಲ್ಲ ಪ್ರಮುಖ ಜಾತಿಗಳ ಮುಖಂಡರೂ ಇದರಲ್ಲಿ ಹೆಚ್ಚು ಹೆಚ್ಚಾಗಿ ಭಾಗವಹಿಸತೊಡಗಿದಂತೆ, ಕಾಂಗ್ರೆಸಿನ ರಾಷ್ಟ್ರೀಯ ಸ್ವರೂಪ ಹೆಚ್ಚುಹೆಚ್ಚಾಗಿ ಸ್ಫುಟವಾಗುತ್ತಾ ಬಂತು. ಪ್ರಾರಂಭದಿಂದಲೂ ಈ ಸಂಸ್ಥೆ ಮತೀಯ ಅಥವಾ ಜಾತೀಯ ಸಮಸ್ಯೆಗಳಿಗೆ ಗಮನ ಕೊಡದೇ ಇದ್ದುದು ಇದರ ಜಾತ್ಯತೀತ ಲಕ್ಷಣಕ್ಕೆ ಸಾಕ್ಷಿಯಾಗಿದೆ. 1895 ರಲ್ಲಿ ಪೂನಾದಲ್ಲಿ ನಡೆದ ಕಾಂಗ್ರೆಸ್ಸಿನ ವಾರ್ಷಿಕ ಅಧಿವೇಶನದಲ್ಲಿ, ಅಧಿವೇಶನಕ್ಕಾಗಿ ಕಟ್ಟಿದ ಚಪ್ಪರದಲ್ಲಿ ಸೋಷಿಯಲ್ ರಿಫಾರಮ್ ಕಾನ್ಫರೆನ್ಸ್ (ಸಮಾಜ ಸುಧಾರಕ ಸಮ್ಮೇಳನ) ನವರು ತಮ್ಮ ಸಭೆ ನಡೆಸಲು ಅವಕಾಶ

ಕೋರಿದರು. ರಾಜಕೀಯ ಮತ್ತು ಆರ್ಥಿಕ ಸಮಸ್ಯೆಗಳು ಹಾಗೂ ಸಾಮಾಜಿಕ, ಮತೀಯ ಮತ್ತು ಧಾರ್ಮಿಕ ಸಮಸ್ಯೆಗಳು ಕಲೆತು ಬೆರೆತುಕೊಳ್ಳುವುದು ಉಚಿತವಲ್ಲ. ಇವು ಪ್ರತ್ಯೇಕವಾಗಿಯೇ ಉಳಿಯ ಬೇಕು–ಎಂದು ತಿಲಕರವರು ಚಪ್ಪರವನ್ನು ಸಮಾಜ ಸುಧಾರಣಾ ಸಮಿತಿಯವರು ಬಳಸಿಕೊಳ್ಳಲು ಒಪ್ಪಲಿಲ್ಲ. ಸಾಮಾಜಿಕ ವಿಷಯಗಳಲ್ಲಿ ತೀರ ಭಿನ್ನಾಭಿಪ್ರಾಯಗಳು ಸಾಕಷ್ಟು ಇವೆ. ಆ ಸಮಸ್ಯೆಗಳಿಗೆ ಕಾಂಗ್ರೆಸ್ ಕೈಹಾಕದಿರುವುದೇ ಲೇಸು. ದೂರದೃಷ್ಟಿಯ ರಾಜಕೀಯ ಪಟುಗಳೂ ಸ್ವಾತಂತ್ರ್ಯದ ಕೆಚ್ಚೆದೆಯ ಹೋರಾಟಗಾರರೂ ಆದ ಲೋಕಮಾನ್ಯರು ಈ ರೀತಿಯ ಅಭಿಪ್ರಾಯ ವ್ಯಕ್ತಪಡಿಸುತ್ತಿದ್ದರು. ಜಾತ್ಯತೀತ ಎಂದರೆ ಜಾತಿ ಮತಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಬಿಟ್ಟು ಹೆಚ್ಚುಕಡಮೆ ಏಕಮತವಿರುವ ಉಳಿದ ಸಮಸ್ಯೆಗಳ ಮೇಲೆ ತನ್ನ ಶಕ್ತಿಯನ್ನು ಕೇಂದ್ರೀಕರಿಸುತ್ತಿರುವ ಕಾಂಗ್ರೆಸ್ಸಿನ ಏಕತೆಗೆ ಇದರಿಂದ ಧಕ್ಕೆ ಆಗಬಾರದು ಎಂದು ಹೇಳುತ್ತಿದ್ದರು. ಆಗಿನ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದ ಸರ್ ಸುರೇಂದ್ರನಾಥ ಬ್ಯಾನರ್ಜಿ ಅವರೂ ತಿಲಕರ ಈ ಅಭಿಪ್ರಾಯವನ್ನು ಸಮರ್ಥಿಸಿ ಪುಷ್ಟೀಕರಿಸಿದರು. ಕಾಂಗ್ರೆಸ್ ಸಂಸ್ಥೆಯ ವಾರ್ಷಿಕ ಕೂಟದ ಸೌಮ್ಯ ತೆರೆಯ ಮರೆಯಲ್ಲಿ ರಾಜಕೀಯ ಚಿಂತನೆ ಮತ್ತು ಆಶೋತ್ತರಗಳು ಕೇಂದ್ರೀಕೃತವಾಗಿ ಬೆಳೆಯುತ್ತಿದ್ದುದು ಒಂದು ಗಮನಾರ್ಹ ಅಂಶ. ಕಾಂಗ್ರೆಸ್ ದೇಶದ ರಾಜಕೀಯ ಆಶೋತ್ತರಗಳನ್ನು ಪ್ರತಿಧ್ವನಿಸುವ ಮಹಾಸಂಸ್ಥೆ ಎಂದು, ಅದರ ವಾಣಿಯೇ ಜನತೆಯ ವಾಣಿ ಎಂದು ಎಲ್ಲರೂ ಒಪ್ಪಿಕೊಳ್ಳುತ್ತಿದ್ದರು.

ಆಗಿನ ಕಾಲಕ್ಕೆ ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಮತ್ತು ತಮಿಳುನಾಡು ರಾಜಕೀಯ ಅಥವಾ ಸಾಂಸ್ಕೃತಿಕವಾಗಿಯಾದರೂ ಸಮರೂಪವುಳ್ಳ ಅಸ್ತಿತ್ವವನ್ನು ಹೊಂದಿರಲಿಲ್ಲ. ಈ ದಿಶೆಯಲ್ಲಿ ಹೆಚ್ಚು ಜಾಗೃತಿಯೂ ಉಂಟಾಗಿರಲಿಲ್ಲ. ಕರ್ನಾಟಕ ಮತ್ತು ಕನ್ನಡ ಮಾತನಾಡುವ ಜನರು ಮುಖ್ಯವಾಗಿ ಐದು ಬ್ರಿಟಿಷ್ ಆಡಳಿತ ಪ್ರಾಂತಗಳಲ್ಲಿ ಮಾತ್ರವಲ್ಲದೆ, ಆಗಿನ ಕಾಲಕ್ಕೆ ರಾಜರ ಆಶ್ರಯದಲ್ಲಿದ್ದು ದೇಶೀಯ ಸಂಸ್ಥಾನಗಳೆಂದು ಕರೆಯಿಸಿಕೊಳ್ಳಲ್ಪಡುತ್ತಿದ್ದ ಸುಮಾರು ಹದಿನಾಲ್ಕು ಸಣ್ಣಪುಟ್ಟ ದೇಶೀಯ ಸಂಸ್ಥಾನಗಳಲ್ಲಿ ಹರಿದು ಹಂಚಿಹೋಗಿದ್ದರು. ಈ ದೇಶೀಯ ಸಂಸ್ಥಾನಗಳು ಬ್ರಿಟಿಷರ ಅಧೀನದಲ್ಲಿದ್ದ, ಸಮಗ್ರವಾಗಿ 'ಬ್ರಿಟಿಷ್ ಇಂಡಿಯ' ಎಂದು ಒಂದೇ ಹೆಸರಿನಲ್ಲಿ ಕರೆಯಲ್ಪಡುತ್ತಿದ್ದ ಪ್ರಾಂತಗಳಿಂದ ವಿಶಿಷ್ಟವಾದುವು. ಬೊಂಬಾಯಿ ಪ್ರಾಂತ, ಮದರಾಸು ಪ್ರಾಂತ, ಮೈಸೂರು ಸಂಸ್ಥಾನ, ನೈಜಾಮ ಸಂಸ್ಥಾನಗಳು ಮತ್ತು ಕೊಡಗು–ಇವು ಈ ಐದು ಆಡಳಿತ ವಿಭಾಗಗಳು. ರಾಷ್ಟ್ರೀಯ ಸುವಾರ್ತೆ, ನೂತನ ರಾಜಕೀಯ ಜಾಗೃತಿ, ಹರಿದು ಹಂಚಿಹೋಗಿದ್ದ ಕರ್ನಾಟಕದ ವಿಭಾಗಗಳಲ್ಲಿ, ಬೇರೆ ಬೇರೆ ರೀತಿಯಲ್ಲಿ, ಅಸಮ ಪ್ರಮಾಣದಲ್ಲಿ ತಮ್ಮ ಪ್ರಭಾವ ಬೀರತೊಡಗಿದುದರಿಂದ ಈ ವಿಷಯವನ್ನು ಇಲ್ಲಿ ಪ್ರಸ್ತಾಪ ಮಾಡುವುದು ಸೂಕ್ತವಾಗಿದೆ. ಬೆಳಗಾವಿ, ಧಾರವಾಡ, ಕಾರವಾರ ಮತ್ತು ಬಿಜಾಪುರ —ಬೊಂಬಾಯಿ ಪ್ರಾಂತದ ಭಾಗಗಳಾಗಿದ್ದವು. ಈ ನಾಲ್ಕು ಜಿಲ್ಲೆಗಳು ಮಹಾರಾಷ್ಟ್ರಕ್ಕೆ ನೆರೆಯಾಗಿ, ಅಲ್ಲದೆ ಬೊಂಬಾಯಿ ಪ್ರಾಂತದಲ್ಲಿ ಒಂದಾಗಿ ಸೇರಿಕೊಂಡಿದ್ದುದರಿಂದ ಪಕ್ಕದ ಭಾಗಗಳಲ್ಲಿ ಮೂಡಿದ ಜಾಗೃತಿಯಿಂದ ಪ್ರಭಾವಿತವಾದುವು. ಈ ಜಿಲ್ಲೆಗಳು ಮೈಸೂರು ಸಂಸ್ಥಾನದ ಗಡಿಗೆ ಹೊಂದಿಕೊಂಡಿದ್ದರೂ ನುಡಿ ಮತ್ತು ಸಂಸ್ಕೃತಿ ಒಂದೇ ಆಗಿದ್ದರೂ ರಾಜಕೀಯವಾಗಿ ಅಲ್ಲದೆ ಆರ್ಥಿಕ ಮತ್ತು ಸಾಮಾಜಿಕವಾಗಿಯೂ ಇವುಗಳೊಡನೆ ಉಭಯ ಸಾಮಾನ್ಯವಾದ ಸಂಬಂಧವಿರಲಿಲ್ಲ. ಮೈಸೂರು ಜಾಗೃತವಾಗಿದ್ದರೂ ರಾಜಕೀಯವಾಗಿ ಹಿಂದುಳಿದಿತ್ತು. ಬಿಜಾಪುರ ಜಿಲ್ಲೆಯು ನೈಜಾಮ ರಾಜ್ಯಗಳಿಗೆ ಅಂಟಿಕೊಂಡು, ಗುಲ್ಬರ್ಗ, ರಾಯಚೂರು ಮತ್ತು ಬೀದರ್ ಇವುಗಳೊಡನೆ ಹೊಂದಿಕೊಂಡಿದ್ದರೂ ಈ ವಿಭಾಗಗಳ ಜನತೆಯೊಡನೆ ಯಾವ ಸಂಬಂಧವೂ ಇರಲಿಲ್ಲ. ಏಕೆಂದರೆ, ನೈಜಾಮರ ರಾಜ್ಯಪದ್ಧತಿ ಓಬೀರಾಯನ ಕಾಲದ್ದಾಗಿತ್ತು. 1940ರ ತರುವಾಯ ಭಾರತ ಸ್ವತಂತ್ರವಾಗಿ, ಪೋಲೀಸ್ ಕಾರ್ಯಾಚರಣೆಯ ಪರಿಣಾಮವಾಗಿ, ನೈಜಾಮನ ಅಧೀನದಲ್ಲಿದ್ದ ಭಾಗಗಳು ಸಮಗ್ರ ಭಾರತದ ಸಂಘದೊಡನೆ ವಿಲೀನವಾಗುವ ವರೆಗೂ ಈ ವಿಷಯದ ಬಗ್ಗೆ ಯಾರೂ ಏನೂ ಮಾಡುವಂತಿರಲಿಲ್ಲ. ಸಮುದ್ರ ತೀರಪ್ರದೇಶದ ದಕ್ಷಿಣ ಕನ್ನಡ ಮತ್ತು ಒಳನಾಡಿನ

ಬಳ್ಳಾರಿ–ಇವೆರಡೂ ಮದ್ರಾಸ್ ಪ್ರಾಂತದಲ್ಲಿ ಇದ್ದರೂ ಇವುಗಳಲ್ಲಿ ಸಾಮೀಪ್ಯವಾಗಲಿ ಸಮಾನಾಸಕ್ತಿಯ ಸಂಬಂಧವಾಗಲಿ ಬೆಳೆಯಲು ಯಾವ ಅವಕಾಶವೂ ಇರಲಿಲ್ಲ. ಕೊಡಗು ಭೌಗೋಳಿಕವಾಗಿ ಮೈಸೂರಿಗೆ ಹೊಂದಿ ಕೊಂಡಿದ್ದರೂ ರಾಜಕೀಯ ಜೀವನದ ದೃಷ್ಟಿಯಿಂದ, ಇದು ಕರ್ನಾಟಕದ ಇತರ ಭಾಗಗಳ ಸಂಪರ್ಕದಿಂದ ಕಡಿದುಹೋಗಿತ್ತು. ಪ್ರಸ್ತುತ ಕಾಂಗ್ರೆಸ್ ಮತ್ತು ಕರ್ನಾಟಕ ನಮ್ಮ ವಿಷಯವಾಗಿರುವುದರಿಂದ ಎರಡು ದಶಮಾನಗಳನ್ನು ಸುರಕ್ಷಿತವಾಗಿ ದಾಟಿ 1904ನೆಯ ಸಂವತ್ಸರಕ್ಕೆ ಬರಬಹುದು. ಇದು ಭಾರತದ ಇತಿಹಾಸದಲ್ಲಿ ಮಾತ್ರವಲ್ಲ, ಇಡೀ ಏಷ್ಯದ ಇತಿಹಾಸದಲ್ಲೇ ಗಮನಾರ್ಹವಾದ ವರ್ಷ. ಏಕೆಂದರೆ ಪೌರಸ್ತ್ಯ ರಾಷ್ಟ್ರವಾದ ಜಪಾನ್ ಉದಯೋನ್ಮುಖವಾಗಿ ನೌಕಾಸಮರದಲ್ಲಿ ಅದು ರಷ್ಯಕ್ಕೆ ತತ್ತರಿಸುವಂಥಾ ಬಲವಾದ ಪೆಟ್ಟುಕೊಟ್ಟು ಸೋಲಿಸಿತು. ಪೂರ್ವಾರ್ಧಗೋಳದ ಒಂದು ಸಣ್ಣ ರಾಷ್ಟ್ರ ವಿಶಾಲ ರಷ್ಯವನ್ನು ಯುದ್ಧದಲ್ಲಿ ಪರಾಭವಗೊಳಿಸಿದುದರಿಂದ ಪೌರಸ್ತ್ಯ ರಾಷ್ಟ್ರಗಳಲ್ಲಿ ಆತ್ಮವಿಶ್ವಾಸ ಬೆಳೆಯತೊಡಗಿ, ತಾವು ಕೆಳಮಟ್ಟದವರು ಎಂಬ ಕೀಳು ಮನೋಭಾವನೆ, ಕಡೆಗೆ ತಾತ್ಕಾಲಿಕವಾಗಿಯಾದರೂ ದೂರವಾಗ ತೊಡಗಿತು. 'ಪಾಶ್ಚಾತ್ಯರನ್ನು ಪರಾಭವಗೊಳಿಸುವುದು ಸಾಧ್ಯವಿಲ್ಲ' ಎಂಬ ಗೂಢವಾದ ಮೂಢ ನಂಬಿಕೆಯನ್ನು ದಮನಮಾಡುತ್ತಿದ್ದ ಹಾಗೆಯೇ ಭಾರತೀಯರಲ್ಲಿ, ವಿಶೇಷವಾಗಿ ಯುವಜನರ ಧಮನಿಗಳಲ್ಲಿ ಬಿಸಿ ರಕ್ತ ಮತ್ತಷ್ಟು ತೀವ್ರಗತಿಯಿಂದ ಹರಿಯುತ್ತಿದೆ—ಎಂಬ ಭಾವನೆ ಮೂಡಿತು.

ಏತನ್ಮಧ್ಯೆ, ಭಾರತ ಇದುವರೆಗೂ ಕಂಡಿದ್ದ ವೈಸರಾಯರುಗಳಲ್ಲಿ ಉತ್ಕಟ ಸಾಮ್ರಾಜ್ಯವಾದಿ ಲಾರ್ಡ್ ಕರ್ಜನ್, 'ಮಹಮ್ಮದೀಯರೂ ಹಿಂದುಗಳೂ ವೈರಿಗಳು' ಎಂಬ ತನ್ನ ಸ್ವಂತ ತುಂಟ ಅಭಿಪ್ರಾಯವನ್ನು ಅಡಿಪಾಯವಾಗಿ ಮಾಡಿಕೊಂಡು, ಬಂಗಾಳವನ್ನು ಎರಡಾಗಿ ವಿಭಜಿಸಿದನು. ಇದರ ಪರಿಣಾಮವಾಗಿ ಹಿಂದೆ ಎಂದೂ ಕಾಣದಷ್ಟು ತೀವ್ರ ರಾಷ್ಟ್ರೀಯ ಭಾವನೆ ದೇಶದಲ್ಲಿ ಉಕ್ಕಿ ಹರಿಯು ವಂತಾಗಿ, 1905-06 ರಲ್ಲಿ ಬೃಹತ್ ಪ್ರಮಾಣದ ಸ್ವದೇಶಿ ಚಳವಳಿ ಕಾರ್ಯಾತ್ಮಕ ರೂಪತಾಳಿತು.

ಲಾರ್ಡ್ ಕರ್ಜನ್ ಅವನ ಉದ್ದೇಶ ಏನೇ ಇದ್ದಿರಲಿ, ವಂಗವಿಭಜನೆಯಿಂದ ಆಗಬಹುದಾದ ಪರಿಣಾಮ ಅವನು ಮನಗಂಡಿರಲಿಲ್ಲ ಎಂಬುದು ಸ್ವಯಂ ವಿದಿತ. ಪ್ರಾರಂಭದಲ್ಲಿ ಬಂಗಾಳದ ವಿಭಜನೆ ಯಿಂದ ತೀವ್ರವಿರೋಧ ಭಾವನೆ ಎದ್ದು ಕಾಣತೊಡಗಿತು. ಇದನ್ನು ಕೇವಲ ಸ್ಥಳೀಯ ಚಳವಳಿ ಎನ್ನ ಬಹುದು. ಮುಸಲ್ಮಾನರ ಜನಾಂಗಕ್ಕೆ ವಿಶೇಷ ಪ್ರಾತಿನಿಧ್ಯ ಕಲ್ಪಿಸಿಕೊಡುವುದು ಈ ಉದ್ದೇಶಿತ ವಿಭಜನೆಯ ಗುರಿಯಾಗಿದ್ದರೂ ಮುಸಲ್ಮಾನರೇ ಸ್ವತಃ ಅಷ್ಟೇ ತೀವ್ರ ಪ್ರತಿಭಟನೆ ವ್ಯಕ್ತಪಡಿಸಿ ಚಳವಳಿ ಯಲ್ಲಿ ಭಾಗವಹಿಸಿದರು. ಈ ರೀತಿಯಲ್ಲಿ ಇಡೀ ಚಳವಳಿ ರಾಷ್ಟ್ರೀಯ ದೃಷ್ಟಿತಳೆದು, ಜಾತ್ಯತೀತ ಆಧಾರದ ಮೇಲೆ ಮುಂದುವರಿಯತೊಡಗಿತು. ಆದರೆ ಈ ಚಳವಳಿ ಕೇವಲ ವಂಗೀಯರಿಗೆ ಮಾತ್ರ ಸೀಮಿತ ವಾಗಿರದೆ ಸಮಗ್ರ ಭಾರತದಲ್ಲಿ ಹರಡಿಕೊಂಡಿತು.

ಪ್ರತಿ ವರ್ಷವೂ ಕಾಂಗ್ರೆಸ್ ತನ್ನ ವಾರ್ಷಿಕ ಅಧಿವೇಶನ ಸೇರಿಸುತ್ತಿದ್ದುದಲ್ಲದೆ, ಪ್ರಗತಿದಾಯಕವಾದ ಅದರ ನಿರ್ಣಯಗಳು ಅತ್ಯುಗ್ರಸ್ವರೂಪ ತಾಳುತ್ತಿದ್ದುವು. ಜನರಿಗೆ ಅಧಿಕಾಧಿಕ ರಾಜಕೀಯ ಹಕ್ಕು ದೊರಕಿಸಿಕೊಡಬೇಕೆಂಬ ಉದ್ದೇಶದಿಂದ ಹೆಚ್ಚು ಹೆಚ್ಚು ವ್ಯಾಪಕವಾದ ಠರಾವುಗಳನ್ನು ಅದು ಮಾಡುತ್ತಾ ಬರುತ್ತಿತ್ತು. ಈ ಕಾರ್ಯಕ್ರಮಗಳಿಂದ ಭಾರತೀಯರೆಲ್ಲರೂ ಒಂದೇ ರಾಷ್ಟ್ರಕ್ಕೆ ಸೇರಿದ ಸಂಯುಕ್ತ ಜನಾಂಗ ಎಂಬ ಸಾರ್ವತ್ರಿಕ ಏಕಭಾವನೆ ಬೆಳೆದು, ಎಲ್ಲರೂ ಒಂದೆಡೆಯಲ್ಲಿ ಕುಳಿತು ಅಭಿಪ್ರಾಯ ವಿನಿಮಯ ಮಾಡಿಕೊಳ್ಳಲು ಅಖಿಲ ಭಾರತ ವೇದಿಕೆಯೊಂದನ್ನು ಸೃಜಿಸಿಕೊಡುವುದರಲ್ಲಿ ಜಯಗಳಿಸಿತ್ತು. ಈ ರಾಷ್ಟ್ರೀಯ ಜಾಗೃತಿ ಜನತೆಗೆ ತುಂಬ ಸಹಾಯಕವಾಯಿತು. ಬಂಗಾಳ ಚಳವಳಿಯನ್ನು ಪ್ರಾರಂಭಿಸುತ್ತಲೇ, ಭಾರತದ ಇತರ ಭಾಗಗಳೂ ಆಂದೋಳನವನ್ನು ಪ್ರಾರಂಭಿಸಿದುವು. ಈ ವಿಭಜನೆ ಕೇವಲ ಬಂಗಾಳಿಗಳಿಗೆ

ಮಾತ್ರ ಮುಖಭಂಗಮಾಡುತ್ತಿಲ್ಲ; ಹೋರಾಟ ನಡೆಸಲು ಸಾಕಷ್ಟು ಅಸಮಾಧಾನಕ್ಕೆ ಕಾರಣವಾದ ರಾಷ್ಟ್ರೀಯ ಪ್ರಶ್ನೆ ಇದು ಎಂದು ರಾಷ್ಟ್ರ ಮನಗಂಡಿತ್ತು ಎಂಬುದು ಸ್ವತಃ ಸಿದ್ಧವಾಗಿತ್ತು.

ಈ ಚಳವಳಿ ಪ್ರತಿಭಟನಾ ಸಭೆಗಳನ್ನು ಸೇರಿಸುವುದು,ಮನವಿಗಳನ್ನು ಅರ್ಪಿಸುವುದು, ಗುರುತರವಾದ ನಿಯೋಗಗಳನ್ನು ಒಯ್ಯುವುದು ಇವುಗಳಿಂದಲೇ ಕೊನೆಗೊಳ್ಳಲಿಲ್ಲ ಎಂದು ಈ ಘಟ್ಟದಲ್ಲಿ ಗಮನಿಸುವುದು ಅಗತ್ಯ. ಬಂಗಾಳಿಗಳು ರಾಷ್ಟ್ರೀಯ ಸತ್ಯಸಂದೇಶದ ಜ್ವಲಂತ ವಾಹಕರಾದರು. ಈ ಭಾವನೆ ಜನರ ಕಲ್ಪನೆಯನ್ನು ಕೆರಳಿಸಿ ಅದು ದೇಶದ ಆದ್ಯಂತ ಹರಡುವಂತೆ ಮಾಡಿತು. ಬಂಗಾಳಿಗಳೂ ಇತರರೂ ಯಾವುದಾದರೂ ಪರಿಣಾಮಕಾರಿ ಕಾರ್ಯಕ್ರಮ ಅಗತ್ಯವೆಂದು ಮನಗಂಡರು. ವ್ಯಕ್ತಿಯ ಅಥವಾ ಸ್ಥಳೀಯ ಕುಂದು ಕೊರತೆಗಳನ್ನು ಹೋಗಾಡಿಸಿಕೊಳ್ಳುವುದರಿಂದ ಅಂತ್ಯ ಸಾಧಿತವಾಗದು ಅಥವಾ ಕಾಯಿಲೆ ಸಾಕಷ್ಟು ಗುಣವಾಗದು ಎಂದು ಸ್ವಯಂ ಆತ್ಮಪ್ರೇರಣೆಯಿಂದ ಗ್ರಹಿಸಿಕೊಂಡರು. ದೊಡ್ಡ ಮತ್ತು ಸಣ್ಣ, ಈ ಎಲ್ಲ ಕುಂದುಕೊರತೆಗಳ ಮೂಲ ಕಾರಣ ದೇಶವನ್ನು ಸೂರೆಗೊಳ್ಳುತ್ತಿರುವ ಪರದೇಶೀ ಆಡಳಿತ ಪದ್ಧತಿಯಾಗಿರುವುದರಿಂದ ಬ್ರಿಟಿಷ್ ದಬ್ಬಾಳಿಕೆಯ ಸರ್ಕಾರವನ್ನೇ ಮೂಲೋತ್ಪಾಟನ ಮಾಡುವುದು ಅಗತ್ಯ ಎಂದು ಗ್ರಹಿಸಿದರು.

ಬಾರಿಸಾಲಿನ ಹಿರಿಯ ರಾಷ್ಟ್ರೀಯ ಹೋರಾಟಗಾರ ಅಶ್ವಿನಿಕುಮಾರ ದತ್ತ ಅವರ ನಾಯಕತ್ವದಲ್ಲಿ ನಡೆದ ಮೆರವಣಿಗೆ ಭಾರತದಲ್ಲಿ ಆಚರಿಸಲ್ಪಟ್ಟ ಮೊತ್ತಮೊದಲ ಸಾಮೂಹಿಕ ಸವಿನಯ ಕಾಯಿದೆ ಭಂಗ ಚಳವಳಿ ಎಂದು ಗುರುತಿಸಬಹುದಲ್ಲದೆ, ಅದನ್ನು ಈಗ ಸ್ಮರಣೆಗೆ ತಂದುಕೊಳ್ಳುವುದೂ ಉಚಿತವಾಗಿದೆ. ಬಂಗಾಳದ ಪ್ರಾಂತೀಯ ಸಮ್ಮೇಳನ ಬಾರಿಸಾಲ್ ಪಟ್ಟಣದಲ್ಲಿ ನಡೆಯಲು ಕರೆಕೊಡಲಾಗಿತ್ತು ಮತ್ತು ಆ ಸಭೆ ಸೇರುವ ಮುನ್ನ ಒಂದು ಮೆರವಣಿಗೆ ನಡೆಸುವ ಕಾರ್ಯಕ್ರಮವಿತ್ತು. ಕ್ರಿಮಿನಲ್ ಸಂಹಿತೆಯ 144ನೆ ವಿಧಿ ಪ್ರಕಾರ ಮೆರವಣಿಗೆ ನಡೆಸಲಾಗದು ಎಂದು ಸಂಚಾಲಕರ ಮೇಲೆ ವಿಧಿಕ್ರಮ ಜಾರಿ ಮಾಡಲಾಗಿತ್ತು. ಆದರೆ ದತ್ತರು ಈ ನಿಷೇಧಾಜ್ಞೆ ಮಾನ್ಯ ಮಾಡದಿರಲು ನಿರ್ಧರಿಸಿದರು. ಮೆರವಣಿಗೆ ಹೊರಟಿತು. ಪೋಲೀಸಿರು ಬಲಪ್ರಯೋಗದಿಂದ ಮೆರವಣಿಗೆ ಚದರಿಸಿದರು. ಎಂದಿನಂತೆ ಲಾಠಿ ಹೊಡೆತ ಮತ್ತು ಬಂಧನಗಳು ಹಿಂಬಾಲಿಸಿದುವು. ಮೆರವಣಿಗೆಯಲ್ಲಿ ಭಾಗವಹಿಸಿದ್ದವರಲ್ಲಿ ಕಿಂಚಿತ್ತೂ ಹಿಂಸೆ ಕಾಣಿಸಿಕೊಳ್ಳಲಿಲ್ಲ. ಶಾಂತಿಯುತ ಪ್ರದರ್ಶನದಲ್ಲಿ ತೊಡಗಿದ್ದವರ ಮೇಲೆ ನಡೆದ ದಾಳಿಯನ್ನು ಅವರು ಅತ್ಯಂತ ಸಂಯಮದಿಂದ ಸೈರಿಸಿಕೊಂಡರು. ಅಪ್ರಚೋದಕವೂ ಅಕ್ರಮವೂ ಆದ ಪೋಲೀಸರ ಈ ವರ್ತನೆ ವಿದ್ಯುಚ್ಛಕ್ತಿಯಾಗಿ ಪರಿಣಮಿಸಿ, ಸಾಧ್ಯವಾದಲ್ಲೆಲ್ಲ ಅಧಿಕಾರದ ದರ್ಪವನ್ನು ಶಾಂತ ರೀತಿಯಲ್ಲಿ ಪ್ರತಿಭಟಿಸುವುದಗತ್ಯ ಎಂಬ ದೃಢಸಂಕಲ್ಪ ಮತ್ತಷ್ಟು ಬಲಗೊಳ್ಳಲು ತುಂಬ ನೆರವಾಯಿತು.

ದೈವದತ್ತ ಲೇಖನ ಶಕ್ತಿಯುಳ್ಳವರು ಹಲವು ಸಂದರ್ಭಗಳಲ್ಲಿ ಒಂದು ಇಡೀ ರಾಷ್ಟ್ರದ ಜನತೆಯ ಅಂತಃ ಸ್ಫುರಣ, ಆಶೆ—ಆಶೋತ್ತರಗಳು, ಭಯವಿಹ್ವಲತೆ—ಇವುಗಳಿಗೆ ಸುಸಂಸ್ಕೃತ ಮೂರ್ತಿ ಸ್ವರೂಪ ಕೊಡುತ್ತಾರೆ ಎಂಬುದರತ್ತ, ಕೆಲವು ಜನ ಕೂಡ ತಮ್ಮ ಮನಸ್ಸನ್ನು ಹರಿಯಗೊಡುವುದಿಲ್ಲ. ಬಂಗಾಳದ ದೇಶ ಭಕ್ತಿಯುತ ಹೋರಾಟದ ಪ್ರಯತ್ನಗಳ ಪರಂಪರೆಯಲ್ಲಿ ಬ್ರಿಟಿಷ್ ಪ್ರಭುತ್ವದ ವಿರುದ್ಧ ಸನ್ಯಾಸಿ ಬಂಡಾಯದ ಒಂದು ಕಥೆ ಪ್ರಚಲಿತದಲ್ಲಿತ್ತು. ಬಂಗಾಳದ ಶ್ರೇಷ್ಠ ಕಾದಂಬರಿಕಾರ ಬಂಕಿಮಚಂದ್ರ ಚಟರ್ಜಿ, ಈ ಕಥೆಯನ್ನು ಬಳಸಿಕೊಂಡು 'ಆನಂದಮಠ' ಎಂಬ ಕಾದಂಬರಿ ಬರೆದರು. ಇದು ಕನ್ನಡಕ್ಕೂ ಅನುವಾದಿತವಾಗಿದೆ. ಈಗ ರಾಷ್ಟ್ರಗೀತವಾಗಿ ಪ್ರಸಿದ್ಧವಾಗಿರುವ 'ವಂದೇ ಮಾತರಂ' (ಭಾರತ ಮಾತೆಗೆ ವಂದನೆ) ಎಂಬ ಗೀತವನ್ನೂ ಅವರು ರಚಿಸಿದ್ದರು. ಮಾತೃಭೂಮಿಗಾಗಿ ಅಗತ್ಯವಾದರೆ ಸನ್ಯಾಸಿಗಳು ತಮ್ಮ ಜೀವವನ್ನು ಅರ್ಪಿಸಲು ಸಹ ಸಿದ್ಧವಾಗಿರಬೇಕೆಂದು ಈ ಗೀತ ಕರೆಕೊಡುತ್ತದೆ. ಈ ಗೀತಪದ ಸಂಕಲನವಾಗಿ ಕೇಳುವವರೇ ಇಲ್ಲದೆ ವರುಷಗಟ್ಟಲೆ ಮೂಲೆಗುಂಪಾಗಿ ಬಿದ್ದಿತ್ತು;

ಸಂದರ್ಭೋಚಿತವಾಗಿ ಅದು ಹಠಾತ್ತನೆ ಭಾರತದ ರಾಷ್ಟ್ರಗೀತವಾಯಿತು. ಅಂತೆಯೇ ಕರ್ನಾಟಕದ ಶಾಂತಕವಿಯ "ಮಾತೃಭೂಮಿ ಜನನಿ ನಿನ್ನ ಚರಣ ಸೇವೆಮಾಡುವಾ" ಎಂಬ ಗೀತವು 1921ರ ಧಾರವಾಡದ ಗಲಭೆಯಲ್ಲಿ ಅನ್ಯಾಯವಾಗಿ ಶಿಕ್ಷೆಗೆ ಗುರಿಯಾದ ಅಜ್ಞಾನಿ ದೇಶಭಕ್ತ ಸಂತ್ರಸ್ತರಿಗೆ ವಿಚಾರಣೆಗಾಗಿ ಕೋರ್ಟಿಗೆ ದಿನವಹಿ ಹೋಗಿ ಬರುವ ಕಾಲದಲ್ಲಿ ತಾಳಕ್ಕೆ ಸರಿಯಾಗಿ ಹೆಜ್ಜೆ ಹಾಕಲು ಸ್ಫೂರ್ತಿದಾಯಕವಾಗಿತ್ತು. ಹುಯಿಲಗೋಳ ನಾರಾಯಣರಾಯರ "ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು" ಎಂಬ ಈ ಹಾಡು 1924ರಲ್ಲಿ ನಡೆದ ಬೆಳಗಾವಿ ಕಾಂಗ್ರೆಸ್ಸಿನಲ್ಲಿ ಜನಪ್ರಿಯವಾಗಿ ಇಂದಿಗೂ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ರಾಷ್ಟ್ರಗೀತವಾಗಿ ಉಳಿದಿದೆ.

ವಂಗ ವಿಭಜನೆಯ ವಿರುದ್ಧದ ಚಳವಳಿ, ಅಥವಾ ಮುಂದೆ ಸ್ವದೇಶಿ ಚಳವಳಿ ಎಂದು ಹೆಸರಾಂತ ಆಂದೋಳನ ಅನೇಕ ದೃಷ್ಟಿಗಳಿಂದ, ಮುಖ್ಯವಾಗಿ ಅದು ರಾಷ್ಟ್ರದ ಮುಂದೆ ಇಟ್ಟ ಸಕ್ರಿಯ ಕಾರ್ಯಕ್ರಮ ಗಮನಾರ್ಹವಾದುದು. ಈ ಕಾರ್ಯಕ್ರಮದ ಮುಖ್ಯಾಂಶಗಳು ನಾಲ್ಕು : (ಅ) ಸ್ವದೇಶಿ ಮಾಲಿನ ಬಳಕೆ ಮತ್ತು ದೇಶೀ ಕೈಗಾರಿಕೆಗಳ ಪ್ರೋತ್ಸಾಹ, (ಆ) ಪರದೇಶಿ, ಅದರಲ್ಲೂ ವಿಶೇಷವಾಗಿ ಬ್ರಿಟಿಷ್ ವಸ್ತುಗಳ ಬಹಿಷ್ಕಾರ, (ಇ) ಕೇವಲ ಬುದ್ಧಿವಂತ ಕಾರಕೂನರನ್ನು ತಯಾರಿಸುತ್ತಿದ್ದ ಆತ್ಮರಹಿತ ಶಿಕ್ಷಣಕ್ಕೆ ಬದಲಾಗಿ ಅದಕ್ಕಿಂತ ಭಿನ್ನವಾದ ಆತ್ಮವಿಕಾಸಗೊಳಿಸುವ ರಾಷ್ಟ್ರೀಯ ಶಿಕ್ಷಣ, (ಈ) ಇಂಗ್ಲೆಂಡಿನ ಮಾದರಿಯ ಸ್ವರಾಜ್ಯ ಅಥವಾ ಸ್ವಯಂ ಆಡಳಿತದ ಬೇಡಿಕೆ. 1906 ರಲ್ಲಿ ಕಲ್ಕತ್ತದಲ್ಲಿ ನಡೆದ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧಿವೇಶನದಲ್ಲಿ ಈ ಕಾರ್ಯಕ್ರಮವನ್ನು ಮಂಡಿಸಲಾಯಿತು. ಭಾರತದ ವೃದ್ಧ ಪಿತಾಮಹ ದಾದಾಭಾಯಿ ನವರೋಜಿ ಅವರು ಈ ಅಧಿವೇಶನದ ಅಧ್ಯಕ್ಷರಾಗಿದ್ದರು. 'ಸ್ವರಾಜ್ಯ ಗಳಿಸುವ ವರೆಗೂ ಶಾಂತರಾಗಿ ಸುಮ್ಮನೆ ಕುಳಿತಿರುವವರಲ್ಲ ನಾವು' ಎಂಬ ನೂತನ ಕ್ರಾಂತಿಕಾರಿ ರಾಷ್ಟ್ರೀಯ ಆಂದೋಳನದ ಮುಖಂಡರಾಗಿ ಲೋಕಮಾನ್ಯ ತಿಲಕ್, ಬಾಬು ಅರವಿಂದ ಘೋಷ್, ಲಾಲಾ ಲಜಪತರಾಯ್, ಬಿಪಿನ್ ಚಂದ್ರಪಾಲ್, ಸುರೇಂದ್ರನಾಥ ಬ್ಯಾನರ್ಜಿ ಮತ್ತು ಇತರರ ಹೆಸರುಗಳು ಇಷ್ಟು ವೇಳೆಗೆ ಭಾರತದ ಅದ್ಯಂತ ಮನೆ ಮಾತಾಗಿದ್ದುವು.

ಕರ್ನಾಟಕದಲ್ಲಿ 1904-06 ರಲ್ಲಿ ನಡೆದ ಘಟನೆಗಳನ್ನು ಈ ಹಿನ್ನೆಲೆಯ ದೃಷ್ಟಿಯಲ್ಲಿ ಗಮನಿಸಿ ಅಭ್ಯಾಸಮಾಡಬೇಕು. ಬೇರೆ ಬೇರೆ ಆಡಳಿತ ವಿಭಾಗಗಳಲ್ಲಿ ಹಂಚಿಹೋಗಿದ್ದ ಜನತೆಯ ಮೇಲೆ ಸಹಜವಾಗಿಯೇ ಬೇರೆ ಬೇರೆ ವಿಧದ ಪ್ರಭಾವ ಆಗುತ್ತಿದ್ದುದರಿಂದ, ಈ ಕಾಲದ ಘಟನೆಗಳನ್ನು ವಿವರಿಸುವ ಇಡೀ ಕರ್ನಾಟಕಕ್ಕೆ ಅನ್ವಯಿಸುವಂಥಾ ಒಂದೇ ಮಾದರಿಯ ಒಂದೇ ತೆರನಾದ ಕಥೆಗಳು ಲಭ್ಯವಾಗದಿರುವುದು ದುರದೃಷ್ಟಕರ. ನ್ಯಾಯುವಾದ ಕಾರಣಗಳಿಗಾಗಿ ನಿರ್ಭಯವಾಗಿ ವೀರೋಚಿತವಾಗಿ ಹೋರಾಡುವ ಕನ್ನಡ ಜನರ ಗುಣಸ್ವಭಾವ ಎಲ್ಲೆಲ್ಲೂ ಎದ್ದು ಕಾಣುತ್ತಿತ್ತು ಎಂದು ಸಾಮಾನ್ಯವಾಗಿ ಹೇಳಬಹುದು. ಸಾಮಾನ್ಯವಾಗಿ ಜನರ ಮನೋಧೋರಣೆ ಉದಾರವಾದ ಅಥವಾ ಮಿತವಾದದಿಂದ ಆಕರ್ಷಿತವಾಗುವುದಕ್ಕಿಂತ ತೀವ್ರವಾದದಿಂದ ಹೆಚ್ಚು ಆಕರ್ಷಿತವಾಗುತ್ತದೆ. ಉದಾಹರಣೆಗೆ ಗೋಪಾಲ ಕೃಷ್ಣ ಗೋಖಲೆ ಮತ್ತು ಇತರರು ಭಾರತದ ಮಿತವಾದ ಪಕ್ಷವನ್ನು ಪ್ರತಿನಿಧಿಸುತ್ತಿದ್ದರೆ, ಲೋಕಮಾನ್ಯ ತಿಲಕರು ಉಗ್ರಪಕ್ಷದ ಪ್ರತಿನಿಧಿಗಳಾಗಿದ್ದರು. ತಿಲಕರ ದೃಷ್ಟಿಕೋನಕ್ಕೆ ಕರ್ನಾಟಕದಲ್ಲಿ ಅತಿಶಯ ಬೆಂಬಲವಿತ್ತು ಎಂದು ಯಾರಾದರೂ. ಸುಲಭವಾಗಿ ನೋಡಬಹುದಾಗಿತ್ತು. ಸಾಹಸಪುರುಷರನ್ನು ಪೂಜಿಸುವ ಪ್ರವೃತ್ತಿ ಜನತೆಯ ವಿಶೇಷ ಲಕ್ಷಣ. ಉದಾಹರಣೆಗೆ ಗಾಂಧಿ ಭಾರತದ ರಾಜಕೀಯದಲ್ಲಿ ಕಾಣಿಸಿಕೊಂಡ ಪ್ರಾರಂಭದಿಂದಲೂ ಜನತೆ ಅವರಲ್ಲಿ ಅತಿ ಹೆಚ್ಚಿನ ಭಕ್ತಿಗೌರವ ವ್ಯಕ್ತಪಡಿಸುತ್ತಾ ಬಂದಿದೆ. ಕರ್ನಾಟಕದ ಬಹುಜನ ಏಕರೂಪವೂ ಅಚಲವೂ ಭಕ್ತಿಪೂರ್ವಕವೂ ಆದ ಶ್ರದ್ಧಾಭಕ್ತಿಗಳಿಂದ ಅವರ ಅನುಯಾಯಿಗಳಾಗಿ ನಡೆದು ಬರುತ್ತಿದ್ದಾರೆ. ನೆಹರು ಅವರ ವಿಷಯದಲ್ಲೂ ಸ್ವಲ್ಪ ಹೆಚ್ಚು ಕಡಮೆ ಇದೇ ಮಾತುಗಳು ಅನ್ವಯಿಸುತ್ತವೆ.

ಬಂಗಾಳದ ವಿಭಜನೆಯ ವಿರುದ್ಧ ಎದ್ದ ಅಸಮಾಧಾನದ ಅಲೆ ಭಾರತದ ಇತರ ಭಾಗಗಳಲ್ಲಿ ತನ್ನ ಪ್ರಭಾವ ಬೀರಿದಂತೆ, ಕರ್ನಾಟಕದಲ್ಲಿಯೂ ತನ್ನ ತೀವ್ರ ಪ್ರಭಾವ ಬೀರಿತು, ಇದು ನಾಲ್ಕು ರೂಪಗಳ ಸ್ವದೇಶಿ ಚಳವಳಿಯಲ್ಲಿ ಕಾಣಿಸಿಕೊಂಡಿತು. ಕನ್ನಡದ ಜನ ಇದನ್ನು ಇಡೀ ಕರ್ನಾಟಕದಲ್ಲಿ ಬೆಳಸಿದರೂ ಅದರ ತೀವ್ರತೆ ಎಲ್ಲೆಲ್ಲೂ ಏಕಪ್ರಕಾರವಾಗಿತ್ತು ಎಂದು ಹೇಳಲಾಗದು. ಕರ್ನಾಟಕದ ಭಾಗಗಳಲ್ಲಿ ಈ ಆಂದೋಳನದ ವಿವರಗಳನ್ನು ಅವಲೋಕಿಸುವುದಕ್ಕೆ ಮೊದಲು, ಭಾರತಕ್ಕೆ ರಾಷ್ಟ್ರೀಯ ಕಾಂಗ್ರೆಸ್ಸಿನಿಂದ ಪ್ರತಿನಿಧಿಸಲ್ಪಡುತ್ತಿದ್ದ ಈ ಆಂದೋಳನವನ್ನು ಆವರ್ತಕಾಲಗಳಾಗಿ ವಿಭಜಿಸುವುದರಿಂದ ಒಂದೊಂದು ಪ್ರಕರಣವನ್ನೂ ಸುಲಭವಾಗಿ ಅಭ್ಯಾಸಮಾಡಬಹುದು.

ಕಾಂಗ್ರೆಸ್ 1885ರಲ್ಲಿ ಸ್ಥಾಪಿತವಾದರೂ, ವಂಗವಿಭಜನೆ ಇಡೀ ದೇಶವನ್ನು ಕುಲುಕಾಡಿಸುವ ವರೆಗೂ ಅದರ ಅಡಿಪಾಯ ವಿಶಾಲವಾಗಿಯೂ ಇರಲಿಲ್ಲ, ಜನ ಸಮುದಾಯವನ್ನು ಆಕರ್ಷಿಸುವಂತೆಯೂ ಇರಲಿಲ್ಲ. ವಿಭಜನೆ ರದ್ದುಗೊಳಿಸಬೇಕು, ಸ್ವರಾಜ್ಯ ಸಾಧಿಸಬೇಕು ಎಂಬ ಸರ್ವಮಾನ್ಯ ರಾಜಕೀಯ ವಾದಾಂಶಗಳು ಒಂದು ನೂತನ ದೇಶಭಕ್ತಿಯ ಚೇತನವನ್ನು ಪ್ರಚೋದಿಸಿದುವು. 1905-6 ರಲ್ಲಿ ಹುಟ್ಟಿಕೊಂಡ ಈ ಅಲೆ ಡಿಸೆಂಬರ್ 1907ರ ವರೆಗೂ ಇಳಿತ ಕಾಣದೆ ಅವ್ಯಾಹತವಾಗಿ ಏರುತ್ತಲೇ ಬಂತು. ಆದರೆ ಸೂರತ್ತಿನಲ್ಲಿ ಸಮಾವೇಶಗೊಂಡ ಅಧಿವೇಶನದಲ್ಲಿ ತಿಲಕ್ ಮತ್ತು ಅರವಿಂದ ಅವರ ನಾಯಕತ್ವದ ಉಗ್ರ ಪಂಥಿಗಳು ಒಂದೆಡೆ, ಮತ್ತೊಂದೆಡೆ ಮಿತವಾದಿಗಳ ನಡುವೆ ತೀವ್ರ ಬಿರುಕು ಕಾಣಿಸಿಕೊಂಡಿತು. ಕರ್ನಾಟಕದ ಪ್ರತಿನಿಧಿಗಳು ತಿಲಕರ ಕಡೆಗೇ ಸೇರಿಕೊಂಡರು. ಇಂಥ ಅವಕಾಶವನ್ನೇ ಕಾದುನೋಡುತ್ತಿದ್ದ ಸರ್ಕಾರ, ಲೋಕಮಾನ್ಯ ತಿಲಕರ ಮೇಲೆ ರಾಜದ್ರೋಹದ ಬರಹಗಳಿಗಾಗಿ ವಿಚಾರಣೆ ನಡೆಸಿ ಅವರನ್ನು ಆರು ವರುಷಗಳ ಕಾರಾಗೃಹವಾಸದ ಶಿಕ್ಷೆಗೆ ಒಳಪಡಿಸಿತು. ಶಿಕ್ಷಾವಧಿ ಅನುಭವಿಸಲು ಅವರನ್ನು ಬರ್ಮಾದಲ್ಲಿರುವ ಮಾಂಡಲೆಗೆ ಕಳುಹಿಸಲಾಯಿತು. ಶ್ರೀ ಅರವಿಂದರು ಮತ್ತು ತಿಲಕರ ಇತರ ಸಂಗಡಿಗರು ಕ್ರಾಂತಿಯ ಜ್ವಾಲೆ ಉರಿಯುತ್ತಿರುವಂತೆ ನೋಡಿಕೊಂಡರು. ಆದರೆ ಅರವಿಂದರು 1910ರಲ್ಲಿ ಯೋಗ ಸಾಧನೆಯ ಅಂತರ್ವಾಣಿಯ ಕರೆಗೆ ಓಗೊಟ್ಟು, ಫ್ರೆಂಚ್ ಭಾರತದ ಪಾಂಡಿಚೇರಿಗೆ ತಾವಾಗಿ ಗಡೀಪಾರು ಮಾಡಿಕೊಂಡರು. 1914ರಲ್ಲಿ ತಿಲಕರು ಮಾಂಡಲೆಯಿಂದ ಹಿಂತಿರುಗಿ ಬಂದು, ಕಾಂಗ್ರೆಸ್ಸಿನ ಹೊರಗೆ, 'ಹೋಂ ರೂಲ್ ಲೀಗ್' ಸ್ಥಾಪಿಸಿ ಅಖಿಲ ಭಾರತ ಮಟ್ಟದಲ್ಲಿ ಒಂದು ನೂತನ ಆಂದೋಳನ ಹೂಡಿದರು. ಇದುವರೆಗೂ ರಾಜಕೀಯದಲ್ಲಿ ಆಸಕ್ತಿ ವಹಿಸದೆ ಇದ್ದ ಶ್ರೀಮತಿ ಆನಿಬೆಸೆಂಟ್ ಅವರು, ತಮ್ಮದೇ ಆದ ಅಖಿಲ ಭಾರತ ಹೋಂ ರೂಲ್ ಲೀಗ್ ಸ್ಥಾಪಿಸಿ, ಅವರ ಪರ ಪತ್ರಿಕೆ ಮತ್ತು ವೇದಿಕೆಯ ಮೂಲಕ ಬಿರುಗಾಳಿಯಂತೆ ಪ್ರಚಂಡ ಪ್ರಚಾರ ನಡೆಸುತ್ತಾ ಬುದ್ಧಿಮತಿಗಳನ್ನು ಬೇರು ಸಹಿತ ಅಲುಗಾಡಿಸಿಬಿಟ್ಟರು. 1918–19ರಲ್ಲಿ ರೌಲತ್ ಮಸೂದೆ ಅಥವಾ ಕರಾಳ ಕಪ್ಪುಶಾಸನ ಕಾಣಿಸಿಕೊಂಡು ಗಾಂಧಿಯವರಿಗೆ ತಮ್ಮ ನೂತನ ಸತ್ಯಾಗ್ರಹದ ಅಸ್ತ್ರ ಪ್ರಯೋಗಿಸುವ ಅವಕಾಶ ದೊರೆಯುವ ವರೆಗೂ ಅವ್ಯಾಹತವಾಗಿ ಇದು ಸಾಗುತ್ತಲೆ ಇತ್ತು. 1919ರಲ್ಲಿ ಯಾವ ಪ್ರಚೋದನೆಯೂ ಇಲ್ಲದೆ ನಡೆದ ಜಾಲಿಯನ್‌ವಾಲಾ ಬಾಗಿನ ಕಗ್ಗೊಲೆ ಭಾರತದಲ್ಲಿ ಬ್ರಿಟಿಷ್ ಆಳಿಕೆಯ ವಿಷಪೂರಿತ ಹಲ್ಲುಗಳನ್ನು ಹಿಂದಿನಿಂದ ಯಾವ ಘಟನೆಗಳೂ ಬಹಿರಂಗ ಪಡಿಸದ ರೀತಿಯಲ್ಲಿ ಹೊರಗೆಡಹಿದವು. ತದನಂತರ ಖಿಲಾಫತ್ತಿನ ಪದಚ್ಯುತಿ ಘಟಿಸಿತು. ಜಾಲಿಯನ್‌ವಾಲಾ ಬಾಗಿನ ಸಾಮೂಹಿಕ ಕೊಲೆ, ಮತ್ತು ಖಿಲಾಫತ್–ಇವೆರಡೂ ಒಂದಾಗಿ, ಹಿಂದು ಮತ್ತು ಮುಸಲ್ಮಾನ್ ಇವರನ್ನೊಳಗೊಂಡ ಸಾರ್ವಜನಿಕ ಅಭಿಪ್ರಾಯನ್ನು ಬ್ರಿಟಿಷ್ ಆಳಿಕೆಯ ವಿರುದ್ಧ ಎತ್ತಿ ಕಟ್ಟಲು ಗಾಂಧಿಯವರಿಗೆ ವಿಶೇಷ ಅವಕಾಶ ಒದಗಿಸಿಕೊಟ್ಟವು.ಅವರು ಈ ಅಧರ್ಮ ಪ್ರಕರಣಗಳನ್ನು "ಪಂಜಾಬ್ ಮತ್ತು ಖಿಲಾಫತ್ ಮಹಾದುರಂತಗಳು" ಎಂದು ಕರೆದರು. ಮುಸ್ಲಿಮ್ ಮುಖಂಡರು ರೋಷಾವೇಶದಿಂದ ಕೆರಳಿ ಸರ್ಕಾರದೊಡನೆ ಗಾಂಧಿಯವರಿಂದ ನೀಡಲ್ಪಟ್ಟ ಅಹಿಂಸಾತ್ಮಕ ಅಸಹಕಾರವನ್ನು ಅಂಗೀಕರಿಸಿದರು. ರಾಷ್ಟ್ರ ಮಟ್ಟದಲ್ಲಿ ಸಾರ್ವಜನಿಕ ಚಳವಳಿ ನಡೆಸುವ ಒಂದು ನವೀನ ಶಕ ಈ ರೀತಿಯಲ್ಲಿ

ಉದಯಿಸಿತು. ಡಿಸೆಂಬರ್ 1920ರಲ್ಲಿ ನಾಗಪುರದಲ್ಲಿ ನಡೆದ ಭಾರತ ರಾಷ್ಟ್ರೀಯ ಮಹಾಸಭೆ ಅಹಿಂಸಾತ್ಮಕ ಅಸಹಕಾರ ಕಾರ್ಯಕ್ರಮವನ್ನು ಸಮಗ್ರವಾಗಿ ಅಂಗೀಕರಿಸಿತು.

1885ರಿಂದ 1905ರ ಅವಧಿಯಲ್ಲಿ ಕಾಂಗ್ರೆಸ್ ಅಂದಿನ ಕಾಲದ ವಿದ್ಯಾವಂತರಲ್ಲಿ ರಾಷ್ಟ್ರೀಯ ಏಕತೆಯ ಅಸ್ತಿಭಾರ ಹಾಕಿತು; ಮತ್ತು ಧರ್ಮ ಮತ್ತು ಭಾಷಾಭೇದ, ಪ್ರಾಂತೀಯ ಹಕ್ಕುದಾರಿಕೆ, ಮತೀಯ ಮತ್ತು ಜಾತೀಯ ಭಿನ್ನತೆ—ಇವೆಲ್ಲ ಇದ್ದರೂ ಎಲ್ಲ ಜನರನ್ನೂ ಏಕ ರಾಜಕೀಯ ವೇದಿಕೆಯ ಮೇಲೆ ಕಲೆಯುವಂತೆ ಮಾಡಿತು. ರಾಜಕೀಯ ಅಂಗಕ್ಕೆ ಸಂಬಂಧಪಟ್ಟ ಸಕಲ ಸಾಮಾನ್ಯ ಸಮಸ್ಯೆಗಳನ್ನೂ ಜಾತ್ಯತೀತ ದೃಷ್ಟಿಯಿಂದ ಅವಲೋಕಿಸುವ ಕಾಂಗ್ರೆಸ್ಸಿನ ಧೋರಣೆ ಇಲ್ಲಿಂದ ಪ್ರಾರಂಭವಾಯಿತು. 'ಒಡೆದು ಆಳು' ಎಂಬ ಕುಟಿಲನೀತಿಯನ್ನು ಬ್ರಿಟಿಷ್ ದುರಾಡಳಿತ ಅನುಸರಿಸುತ್ತಾ ಬಂದಿದ್ದರೂ, ಅನೇಕ ದಾರುಣ ಪರಿಸ್ಥಿತಿಗಳನ್ನು ಕಷ್ಟ ಸಂಕಟಗಳನ್ನು ಅದು ಎದುರಿಸಬೇಕಾಗಿ ಬಂದರೂ, ಕಾಂಗ್ರೆಸ್ ಈ ತನ್ನ ಜಾತ್ಯತೀತ ದೃಷ್ಟಿಯನ್ನು ಸ್ವಾತಂತ್ರ್ಯದ ಹೋರಾಟದ ಕಾಲದಲ್ಲೂ ಸ್ವರಾಜ್ಯಗಳಿಕೆಯಾದ ನಂತರವೂ ಏಕರೀತಿಯಾಗಿ ಪಾಲಿಸಿಕೊಂಡು ಬರುತ್ತಿದೆ.

1904 ರಿಂದ 1910ರ ಅವಧಿಯನ್ನು ಆಳವಾಗಿ ಬೇರುಬಿಟ್ಟುಕೊಂಡ ನಿಜವಾದ ರಾಷ್ಟ್ರೀಯ ಜಾಗೃತಿಯ ಕಾಲ ಎಂದು ವರ್ಣಿಸಬಹುದು. ಈ ಅವಧಿಯಲ್ಲಿ ಜನಸಾಮಾನ್ಯರೂ ಬ್ರಿಟಿಷ್ ಅಧೀನದಲ್ಲಿ ರಾಷ್ಟ್ರಕ್ಕೆ ಉಂಟಾಗಿದ್ದ ಅವನತಿಯನ್ನು ಮನಗಂಡಿದ್ದರು. ಉಗ್ರ ಪಂಥಿಗಳು ತಮ್ಮ ಪ್ರಭಾವ ಬೀರ ತೊಡಗಿದುದು ಮತ್ತೊಂದು ಗಣನೀಯ ಅಂಶ. ಉಗ್ರವಾದಿಗಳು ಕಾಂಗ್ರೆಸ್ಸಿನ ಒಳಗೆ ಉಳಿದುಕೊಂಡು ತಮ್ಮ ಪ್ರಭಾವ ಬೀರಲಾರದೆ ಹೋದರೂ ಜನತೆಯನ್ನು ತಮ್ಮೊಡನೆ ಒಯ್ಯುವುದರಲ್ಲಿ ಅವರು ಯಶಸ್ವಿಯಾಗಿದರು. ಅಂದಿನಿಂದ ಮುಂದೆ ಕೇವಲ ಪ್ರಾರ್ಥನಾ ಪತ್ರಗಳಿಗೂ ಸಂಭಾವಿತ ಬೇಡಿಕೆಗಳಿಗೂ ಮಾತ್ರವಲ್ಲದೆ, ಈ ಅವಧಿಯಲ್ಲಿ ರೂಪಗೊಂಡ ಅಹಿಂಸಾತ್ಮಕ ವಿಧಾಯಕಗಳಾದ ಸ್ವದೇಶೀ ಮತ್ತು ಬಹಿಷ್ಕಾರ ಇವೇ ಮೊದಲಾದವುಗಳತ್ತ ತಮ್ಮ ಗಮನ ಕೊಡಬೇಕಾಯಿತು.

1910 ರಿಂದ 1914ರ ಅವಧಿಯನ್ನು ಆಂತರಿಕ ಒಳಜಗಳ, ಸರ್ಕಾರದ ದಬ್ಬಾಳಿಕೆ—ಇವುಗಳ ಪರಿಣಾಮವಾಗಿ ಕಾಂಗ್ರೆಸ್ಸಿನ ಹಾಗೂ ಉಗ್ರವಾದಿಗಳ ಶಕ್ತಿಗಳು ನಿಷ್ಪ್ರಯೋಜಕವಾಗಿವೆ ಎಂದು ಸರ್ಕಾರ ಭಾವಿಸಿರಬಹುದಾದ ಕಾಲವಾಗಿತ್ತು.

1914 ರಿಂದ 1920ರ ಅವಧಿಯನ್ನು ಶಾಸನಬದ್ಧ ಚಳವಳಿಯ ಮಹತ್ವದ ಕಾಲ ಎನ್ನಬಹುದು. ಈ ಕಾಲದಲ್ಲಿ ಹೋಮ್ ರೂಲ್ ಹಾಗೂ ಸ್ವರಾಜ್ಯದ ಧ್ಯೇಯ ಧೋರಣೆಗಳು ಆಳವಾಗಿ ಬೇರು ಬಿಟ್ಟುಕೊಂಡುವು.

1907 ರಲ್ಲಿ ಸೂರತ್ತಿನಲ್ಲಿ ತಲೆದೋರಿದ ಬಿರುಕಿನ ಅನಂತರ ಕಾಡುಪಾಲಾಗಿದ್ದ ಉಗ್ರವಾದಿಗಳು 1916ರಲ್ಲಿ ಮತ್ತೆ ಕಾಂಗ್ರೆಸ್ ಪ್ರವೇಶಿಸಿ ಆ ವರುಷವನ್ನು ಕಾಂಗ್ರೆಸ್ಸಿನ ಜೀವಮಾನದ ಒಂದು ಪ್ರಮುಖ ಅವಧಿಯಾಗಿ ಮಾಡಿದರು. ಕಾಂಗ್ರೆಸ್ಸಿನಲ್ಲಿದ್ದ ಮಿತವಾದಿಗಳು, ಕಾಂಗ್ರೆಸ್ಸಿನ ಒಳಗೆ ಅಥವಾ ದೇಶದಲ್ಲಿ ತಮ್ಮ ಹಿಂದಿನ ಸ್ಥಾನಮಾನ ಗಳಿಸಿಕೊಳ್ಳಲು ಸಾಧ್ಯವಾದೀತು ಎಂಬ ಆಸೆ ಸಂಪೂರ್ಣವಾಗಿ ಕೈ ಬಿಟ್ಟರು. ಸ್ವರಾಜ್ಯ ಅಥವಾ ಪ್ರಜಾಪ್ರಭುತ ಪದ್ಧತಿಯ ಬೇಡಿಕೆ ಶಾಸನಸಮ್ಮತ ಎಂಬ ಲೋಕಮಾನ್ಯರ ಹೇಳಿಕೆ, ಅಧಿಕಾರಾರೂಢವಾದ ಸರ್ಕಾರದ ಆಡಳಿತ ಅಥವಾ ದರ್ಪ ಎಷ್ಟೇ ಕಟುವಾದ ಟೀಕೆಗೆ ಒಳಗಾದರೂ ಅದು ಶಾಸನ ಸಮ್ಮತ ಎಂಬ ಬೊಂಬಾಯಿ ಹೈಕೋರ್ಟ್ ಇತ್ತ ತೀರ್ಪು ಈ ಎರಡು ಕಾರಣಗಳಿಂದ ಈ

ವರುಷ ಬಹಳ ಗಮನಾರ್ಹವಾದುದು. ಹೋಮ್‌ರೂಲ್ ಪರವಾಗಿ ಶ್ರೀಮತಿ ಆನಿಬೆಸೆಂಟ್ ಅವರು ಕೈಗೊಂಡು ನಡೆಸಿದ ಸುಂಟರಗಾಳಿಯ ಪ್ರಚಂಡ ಪ್ರಚಾರದ ಪ್ರಯುಕ್ತ ಸರ್ಕಾರ ಅವರನ್ನು ನಿರ್ಬಂಧವಾಸಕ್ಕೆ ಒಳಪಡಿಸಿತು. ಆದರೆ ಕಾಂಗ್ರೆಸ್ ಆಕೆಯನ್ನು 1917ರ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷಳನ್ನಾಗಿ ಚುನಾಯಿಸಿತು. ಇದರಿಂದ ಐರ್ಲೆಂಡಿನ ಹೋಮ್‌ರೂಲಿನಂತೆ ಪ್ರಜಾಪ್ರಭುತ್ವ ಪದ್ಧತಿಯನ್ನು ಸ್ಥಾಪಿಸಲು ಕೈಗೊಳ್ಳುವ ಶಾಸನಸಮ್ಮತ ಚಳವಳಿಗೆ ಕಾಂಗ್ರೆಸ್ ತನ್ನ ಅನುಮೋದನೆಯನ್ನು ನಿಸ್ಸಂದೇಹವಾಗಿ ಕೊಟ್ಟಂತೆ ಆಯಿತು.

1919ನೆಯ ಇಸವಿ ಅತ್ಯಂತ ನಿರ್ಣಾಯಕ ವರುಷವಾಗಿತು ಎಂದು ತೋರಿಸಿಕೊಡುವುದು ಅನಗತ್ಯ. ಖಿಲಾಫತ್ ಚಳವಳಿಯ ಪರಿಣಾಮವಾಗಿ ಹಿಂದೂ-ಮುಸಲ್ಮಾನರು ಹಿಂದೆ ಮತ್ತು ಮುಂದೆ ಎಂದೂ ಸಂಭವಿಸದ ರೀತಿಯಲ್ಲಿ ಸಮೀಪಕ್ಕೆ ಬಂದರು. ಶಾಂತಿ ಮತ್ತು ನೆಮ್ಮದಿ ಕಾಪಾಡುವ ನೆಪದಲ್ಲಿ ರಾಷ್ಟ್ರೀಯ ಆಂದೋಳನ ಹತ್ತಿಕ್ಕಲು ಸರಕಾರವು ಕಡೆಯ ಪ್ರಯತ್ನ ಮಾಡಿದ ವರುಷವಿದು. ಇದಕ್ಕಾಗಿ ಸ್ಥಳೀಯ ಅಧಿಕಾರಿಗಳಿಗೆ ಸರಕಾರ ಅನಿರ್ಬಂಧಿತ ಸ್ವೇಚ್ಛಾಧಿಕಾರ ಕೊಟ್ಟಿತು. ಕೇಂದ್ರ ಶಾಸನ ಸಭೆಗಳಲ್ಲಿ ರೌಲತ್ ಮಸೂದೆ ಮಂಡಿಸಲ್ಪಟ್ಟಿತು. ಗಾಂಧಿ ಮತ್ತು ಕಾಂಗ್ರೆಸ್ ಇದನ್ನು ಯಾವ ರೀತಿಯಲ್ಲಿ ಪ್ರತಿಭಟಿಸಿದರು ಎಂಬುದು ಮತ್ತು ಅತ್ಯಂತ ಮಿತವಾದಿಗಳಾದ ಜನರು ಸಹ, ಇದರ ವಿರುದ್ಧ ಹೇಗೆ ಎದ್ದು ನಿಂತರು ಎಂಬುದು ನಮಗೆ ಗೊತ್ತಿದೆ. ಸತ್ಯಾಗ್ರಹದ ಜನನ, ಅಹಿಂಸಾತ್ಮಕ ಅಸಹಕಾರದ ಹುಟ್ಟು ಮತ್ತು ಗಾಂಧಿಯವರ ಬತ್ತಳಿಕೆಯಲ್ಲಿ ಇತರ ಅಸ್ತ್ರಗಳು ಕಾಣಿಸಿಕೊಂಡುದು—ಈ ಅವಧಿಗೆ ವಿಶೇಷ ಗಣ್ಯಸ್ಥಾನ ಕೊಟ್ಟಿವೆ.

1920-1922 ಇವುಗಳ ನಡುವಿನ ವರ್ಷಗಳು ಸರಕಾರದೊಡನೆ ತೀವ್ರ ಅಸಹಕಾರ ನಡೆದ ಅವಧಿ. ತುಂಬ ದುಃಖಕರವಾದ **ಚೌರಿ ಚೌರ** ದುರ್ಘಟನೆ ನಡೆದುದರ ಪರಿಣಾಮವಾಗಿ ಬಾರ್ದೋಲಿಯದ ಕರನಿರಾಕರಣೆ ಚಳವಳಿ ಹಿಂದೆಗೆದುಕೊಳ್ಳಲ್ಪಟ್ಟದ್ದೂ ಇದೇ ಅವಧಿಯಲ್ಲಿ. ರಾಜದ್ರೋಹಕ್ಕಾಗಿ ಗಾಂಧಿಯವರ ಆರು ವರುಷಗಳ ಅವಧಿಯ ಬಂಧನ ಇವುಗಳನ್ನು ಹಿಂಬಾಲಿಸಿಯೇ ಬಂದಿತು. ಇವುಗಳ ಹಿನ್ನೆಲೆಯಲ್ಲಿ ಬಂಗಾಳದ ಸಿ. ಆರ್. ದಾಸ್ ಅವರ ನೇತೃತ್ವದಲ್ಲಿ ಶಾಸನ ಸಭೆಗಳನ್ನು ಪ್ರವೇಶಿಸುವ ಉದ್ದೇಶಹೊಂದಿದ ನೂತನ ಪಕ್ಷದ ಜನನವನ್ನು 1923 ಕಂಡಿತು.

1924ರಲ್ಲಿ ಗಾಂಧಿಯವರು ಬಂಧಮುಕ್ತರಾದರು ಮತ್ತು ಬೆಳಗಾವಿಯ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷತೆ ವಹಿಸಿದರು. 1929 ರಿಂದ ಕಾಂಗ್ರೆಸ್, ಉಭಯ ಪಕ್ಷಗಳಲ್ಲೂ ಹೊಂದಾಣಿಕೆಯಿದ್ದ ಎರಡು ಪಕ್ಷಗಳು—ಒಂದು ಶಾಸನಾಂಗದ ವಿಭಾಗ ಮತ್ತೊಂದು ನಿರ್ಮಾಣಕಾರ್ಯಕ್ರಮ ವಿಭಾಗ—ಜೊತೆಗೂಡಿ ಕೆಲಸ ಮಾಡುತ್ತಿದ್ದುವು. ಎರಡನೆಯ ಕಾರ್ಯಕ್ರಮವನ್ನು ಸೃಜಿಸಿದವರು ಗಾಂಧಿ. ಇದರೊಡನೆ ಅವರು ಎಡಬಿಡದೆ ಹೊಂದಿಕೊಂಡಿದ್ದರೂ ಶಾಸನ ಪ್ರವೇಶ ಪಕ್ಷದ ವಿರುದ್ಧ ತಮ್ಮ ಶಕ್ತಿಯನ್ನು ಅವರು ವ್ಯಯ ಮಾಡಲಿಲ್ಲ. 1928-29 ರಲ್ಲಿ ಸರ್ವಪಕ್ಷಗಳ ಸಮ್ಮೇಳನ ಕೂಡಿಸಿ ಸರಕಾರದ ಮುಂದಿಡಲು ರಾಜ್ಯಾಂಗ ಘಟನೆ ಸಿದ್ಧಗೊಳಿಸುವ ಪ್ರಯತ್ನದಲ್ಲಿ ಕಾಂಗ್ರೆಸ್ ಮಗ್ನವಾಗಿತ್ತು. ಕಾಂಗ್ರೆಸ್ ಮತ್ತು ಮುಸ್ಲಿಂಲೀಗ್ ಇವುಗಳಲ್ಲಿ ತೋರಿಬಂದ ಭಿನ್ನತೆಗಳಿಂದ ಅದು ಪೂರ್ಣಯಶಸ್ಸುಗಳಿಸಲಿಲ್ಲ. ಬ್ರಿಟಿಷ್ ಚಕ್ರಾಧಿಪತ್ಯದ ಒಳಗೇ ಉಳಿದು ಸ್ವರಾಜ್ಯಗಳಿಸುವ ಸಂಧಾನ ನಿಷ್ಪ್ರಯೋಜಕವಾಗಲು, ಲಾಹೋರ್ ಅಧಿವೇಶನದಲ್ಲಿ ಪೂರ್ಣಸ್ವಾತಂತ್ರ್ಯವೇ ಭಾರತದ ಗುರಿ ಎಂದು ಘೋಷಿಸಲಾಯಿತು.

ಏಪ್ರಿಲ್ 1930ರಿಂದ ಮಾರ್ಚ್ 1931ರ ವರೆಗೆ ವ್ಯಾಪಕವಾದ ಸವಿನಯ ಕಾಯಿದೆ ಭಂಗದ ಚಳವಳಿಯಲ್ಲಿ ಕಾಂಗ್ರೆಸ್ ನಿರತವಾಗಿತ್ತು. ಗಾಂಧಿ--ಇರ್ವಿನ್ ಒಪ್ಪಂದ ಮಾರ್ಚಿ 5, 1931ರಿಂದ ಆಚರಣೆಗೆ ಬಂದರೂ ಅದು ಕೇವಲ ತಾತ್ಕಾಲಿಕವಾಗಿ ಪರಿಣಮಿಸಿತು. ಈ ನಡುವೆ ಗಾಂಧಿ ಲಂಡನಿನಲ್ಲಿ

ನಡೆದ ದುಂಡುಮೇಜಿನ ಪರಿಷತ್ತಿಗೆ ಕಾಂಗ್ರೆಸ್ಸಿನ ಏಕೈಕ ಪ್ರತಿನಿಧಿಯಾಗಿ ಹೋಗಿ ಬರಿಗೈಯಲ್ಲಿ ಹಿಂದಿರುಗಿದರು. ಅನೇಕ ಭಾರತೀಯ ಪ್ರಮುಖರ ಸಂಕುಚಿತ ದೃಷ್ಟಿ ಮತ್ತು ಬ್ರಿಟಿಷರ ಒಳಸಂಚು ಈ ಸಮ್ಮೇಳನದ ವಿಫಲತೆಗೆ ಕಾರಣವಾಯಿತು. 1932ರಲ್ಲಿ ಶಾಸನಭಂಗ ಚಳವಳಿಯನ್ನು ಮತ್ತೆ ಪ್ರಾರಂಭಿಸಬೇಕಾಯಿತು. ಇದು 1934ರ ವರೆಗೆ ಎಡವುತ್ತಾ ಕುಂಟುತ್ತಾ ಸಾಗುತ್ತಿತ್ತು. ತನ್ಮಧ್ಯೆ ಗಾಂಧಿ ಅಖಿಲಭಾರತ ಹರಿಜನ ಪ್ರವಾಸ, ಹರಿಜನರಿಗಾಗಿ ನಿರಶನ ವ್ರತ ಆಚರಿಸಿದರು. ಶಾಸನಭಂಗ ಚಳವಳಿ 1934ರಲ್ಲಿ ಕ್ರಮಬದ್ಧವಾಗಿ ಹಿಂದಕ್ಕೆ ತೆಗೆದುಕೊಳ್ಳಲ್ಪಟ್ಟಿತು. ವಾಸ್ತವವಾಗಿ ಪ್ರಾಂತೀಯ ಸ್ವಾಯತ್ತತೆಯನ್ನು ಒಪ್ಪಿಕೊಂಡಿದ್ದ ನೂತನ ರಾಜಕೀಯ ಶಾಸನದ ಪ್ರಕಾರ 1935ರಲ್ಲಿ ಚುನಾವಣೆಗಳಲ್ಲಿ ಹೋರಾಡಲು ಕಾಂಗ್ರೆಸ್ ತೀರ್ಮಾನಿಸಿತು. ಇಷ್ಟರಲ್ಲಿ ದ್ವಿತೀಯ ವಿಶ್ವಸಮರ ಪ್ರಾರಂಭವಾಯಿತು. ಜನಪ್ರಿಯ ಮಂತ್ರಿ ಸಂಪುಟಗಳ ಅಭಿಪ್ರಾಯ ಪಡೆಯದೆ, ಭಾರತವು ಜರ್ಮನಿಯ ವಿರುದ್ಧದ ಯುದ್ಧದಲ್ಲಿ ಭಾಗವಹಿಸುವುದಾಗಿ ಘೋಷಿಸಲ್ಪಟ್ಟುದರಿಂದ, ಕಾಂಗ್ರೆಸ್ ಮಂತ್ರಿಸಂಪುಟಗಳು ಪ್ರತಿಭಟಿಸಿ ರಾಜಿನಾಮೆ ಸಲ್ಲಿಸಿದವು.

ಮತ್ತೊಮ್ಮೆ ಕಾಂಗ್ರೆಸ್ಸಿಗೆ ಅರಣ್ಯವಾಸ ಪ್ರಾಪ್ತವಾಗಿ, 1940–42ರಲ್ಲಿ ವ್ಯಕ್ತಿ ಸತ್ಯಾಗ್ರಹ ಆಚರಿಸಲ್ಪಟ್ಟಿತು. ಆದರೆ ಆಗಸ್ಟ್ 1942ರಲ್ಲಿ 'ಭಾರತದಿಂದ ತೊಲಗಿ' ಎಂದು ಮುಂದೆ ಹೆಸರಾಂತ ಹೋರಾಟ ಆರಂಭವಾಗಿ ಇತರ ಚಳವಳಿಗಳೆಲ್ಲವೂ ಅದಕ್ಕೆ ದಾರಿಮಾಡಿಕೊಟ್ಟವು. 1944ರ ವರೆಗೆ ದಂಗೆಯ ಸಾಮಾನ್ಯದ ವಾತಾವರಣ ಕೆಲಕಾಲ ದೇಶದ ಆದ್ಯಂತ ಮೂಡಿತ್ತು. ಗಾಂಧಿಯವರು ಬಂಧನ ಮುಕ್ತರಾದ ಬಳಿಕ ಭಾರತೀಯರಿಗೆ ಅಧಿಕಾರ ವಹಿಸಿಕೊಡುವ ಬಗ್ಗೆ, ಸರ್ಕಾರ ಕಾಂಗ್ರೆಸ್ ಮತ್ತು ಮುಸ್ಲಿಂಲೀಗ್—ಈ ಮೂವರಲ್ಲಿ ಸಂಧಾನದ ಘಟ್ಟ ಪ್ರಾರಂಭವಾಯಿತು. ಕಟ್ಟಕಡೆಗೆ ಇದು 1947ರಲ್ಲಿ ಬ್ರಿಟಿಷ್ ಪಾರ್ಲಿಮೆಂಟಿನ 1947ನೆ ಇಸವಿಯ ಸ್ವಾತಂತ್ರ್ಯದ ಶಾಸನಕ್ಕೆ ದಾರಿ ಮಾಡಿಕೊಟ್ಟಿತು. ದುರದೃಷ್ಟವಶಾತ್, ಭಾರತ ವಿಭಜನೆ ಸ್ವಾತಂತ್ರ್ಯವನ್ನು ಕೊಡುವುದರ ಪೂರ್ವಭಾವಿ ಷರತ್ತಾಯಿತು.

ಡಿಸೆಂಬರ್ 1946ರಲ್ಲಿ ರಾಜ್ಯಾಂಗ ರಚನಾಸಭೆಯ ಕಾರ್ಯಕಲಾಪಗಳು ಪ್ರಾರಂಭವಾಗಿ, ಅದು ಸ್ವತಂತ್ರಭಾರತಕ್ಕಾಗಿ ರೂಪಿಸಿದ ಭಾರತದ ಸಂವಿಧಾನ 26–1–50ರಲ್ಲಿ ಜಾರಿಗೆ ಬಂತು. ತದನಂತರ 1–11–56ರಲ್ಲಿ ರೂಪಗೊಂಡ ಕರ್ಣಾಟಕ ರಾಜ್ಯ, ಕರ್ಣಾಟಕದ ದೃಷ್ಟಿಯಲ್ಲಿ ಅತ್ಯಂತ ಮಹತ್ವಪೂರಿತ ಘಟನೆಯಾಯಿತು. ರಾಜ್ಯದ ಮರುವಿಂಗಡಣೆಯ ಆಯೋಗದ ಶಿಫಾರಸ್ಸುಗಳ ಆಧಾರದ ಮೇಲೆ, ಹಳೆಯ ಮೈಸೂರು ಸಂಸ್ಥಾನದಲ್ಲಿ ಸುತ್ತುಮುತ್ತಲಿನ ಕನ್ನಡಪ್ರದೇಶಗಳನ್ನು ವಿಲೀನಗೊಳಿಸಿ 'ಮೈಸೂರು ರಾಜ್ಯ'ಎಂದು ಕರೆಯಲ್ಪಡುವ ಕರ್ಣಾಟಕ ರಾಜ್ಯ ಅಸ್ತಿತ್ವಕ್ಕೆ ಬಂತು.

ಮೇಲೆ ಕಾಣಿಸಿರುವುದು ಭಾರತದ ಕಾಂಗ್ರೆಸ್ಸಿನ ಕಥೆಯ ಮೈಲಿಗಲ್ಲುಗಳು ಎನ್ನಬಹುದು. ಅನುಪಮ ಅಹಿಂಸಾತ್ಮಕ ಭಾರತ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲಿ ಕರ್ಣಾಟಕ ಯಾವ ಗಣನೀಯ ಅಲ್ಪಕಾಣಿಕೆ ನೀಡಿತು ಎಂದೂ ತದನಂತರ ಈಗ ಮೈಸೂರು ರಾಜ್ಯ ಎನಿಸಿಕೊಳ್ಳುವ ಕರ್ಣಾಟಕ ರಾಜ್ಯ ಹೇಗೆ ರಚಿತವಾಯಿತು ಎಂದೂ ನೋಡಲು ಈಗ ಸುಲಭವಾದೀತು.

ಕನ್ನಡ ಮಾತನಾಡುವ ಜನರು ಸುಮಾರು ಹತ್ತೊಂಬತ್ತು ಪ್ರತ್ಯೇಕ ಆಡಳಿತ ವಿಭಾಗಗಳಲ್ಲಿ ಹರಿದು ಹಂಚಿ ಹೋಗಿದ್ದರೂ ಭಾರತದ ಇತರ ಭಾಗಗಳ ಜನರಂತೆಯೇ ಅವರು ಸಹ, 1905–10ರ ನಿಜವಾದ ರಾಷ್ಟ್ರೀಯ ಜಾಗೃತಿ ಮತ್ತು ಸ್ವದೇಶಿ ಆಂದೋಳನದ ಅಲೆಗಳಲ್ಲಿ ಸಿಲುಕಿಕೊಂಡಿದ್ದರು. ಆದರೆ ತೋರಿ ಬಂದ ವ್ಯತ್ಯಾಸ ಇಷ್ಟೇ : ತೀಕ್ಷ್ಣತೆ ಮತ್ತು ಏಕರೂಪತೆಯಲ್ಲಿ ಚಳವಳಿ ಕರ್ಣಾಟಕದ ಎಲ್ಲ

ಭಾಗಗಳಲ್ಲೂ ಒಂದೇ ಸಮನಾಗಿ ಇರಲಿಲ್ಲ. ಮಹಾರಾಷ್ಟ್ರಕ್ಕೆ ಹೊಂದಿಕೊಂಡಿರುವ ನಾಲ್ಕು ಜಿಲ್ಲೆಗಳ ಪಾತ್ರ ಇತರ ಭಾಗಗಳಿಗಿಂತ ಹಿರಿದಾಗಿತ್ತು ಎನ್ನಬಹುದು. ಕಾರಣ ಸರ್ವವೇದ್ಯ. ಇವು ಬೊಂಬಾಯಿ ಪ್ರಾಂತದ ಭಾಗಗಳಾಗಿದ್ದುವು. ಅಲ್ಲದೆ, ದೇಶಕ್ಕೆ ಸ್ಫೂರ್ತಿ ನೀಡುತ್ತಿದ್ದ ಪೂನಾದ ಲೋಕಮಾನ್ಯ ತಿಲಕರಿಗೆ ಸಮೀಪವಾಗಿದ್ದುವು. ಈ ನಾಲ್ಕು ಜಿಲ್ಲೆಗಳ ಎಲ್ಲ ವಿದ್ಯಾರ್ಥಿಗಳೂ ಉಚ್ಚ ಶಿಕ್ಷಣಕ್ಕಾಗಿ ಪೂನಾ ಅಥವಾ ಬೊಂಬಾಯಿಗೆ ಹೋಗಬೇಕಾಗಿತ್ತು. ಹೀಗಾಗಿ ರಾಜಧಾನಿ ಮತ್ತು ಪೂನಾ ನಗರಗಳ ಪ್ರಭಾವ ಸುಲಭವಾಗಿ ಆಗುತ್ತಿತ್ತು. ವಾಸ್ತವವಾಗಿ ಮೂಲ ರಾಷ್ಟ್ರೀಯ ಜಾಗೃತಿ ಮತ್ತು ಬ್ರಿಟಿಷ್ ಆಡಳಿತದ ನೊಗವನ್ನು ಹೇಗೆ ಕಿತ್ತೊಗೆಯುವುದು ಎಂಬ ತೀವ್ರ ಆಕಾಂಕ್ಷೆ-ಇವು ಅಂದಿನ ದಿನಗಳ ಮಹತ್ವಪೂರ್ಣ ವಿಷಯಗಳಾಗಿದ್ದುವು. ಸಭೆಗಳ ಉಗ್ರಭಾಷಣಗಳು ಕರ್ನಾಟಕದ ಪತ್ರಿಕೆಗಳ ಲೇಖನಗಳು ಇವುಗಳಿಂದ ಇವೆರಡೂ ಪ್ರದರ್ಶಿತ ವಾಗುತ್ತಿದ್ದುವು. ಮುಖ್ಯವಾಗಿ ಬಟ್ಟೆ ಮತ್ತು ಸಕ್ಕರೆ ಮೊದಲಾದ ಬ್ರಿಟಿಷ್ ವಸ್ತುಗಳ ಬಹಿಷ್ಕಾರ, ಸ್ವದೇಶದಲ್ಲಿ ಸಿದ್ಧವಾದ ಸರಕುಗಳ ಬಳಕೆ, ಅಲ್ಲಿ ಇಲ್ಲಿ ಹಲ ಕೆಲವು ರಾಷ್ಟ್ರೀಯ ಶಾಲೆಗಳ ಸ್ಥಾಪನೆ ಇವುಗಳಲ್ಲಿ ಇವೆರಡೂ ವ್ಯಕ್ತವಾಗುತ್ತಿದ್ದುವು. ಲೋಕಮಾನ್ಯ ತಿಲಕರು 1906ರಲ್ಲಿ ಬೆಳಗಾವಿಗೆ ಇತ್ತ ಭೇಟಿಯ ಪರಿಣಾಮವಾಗಿ ಚಳವಳಿಗೆ ಮತ್ತಷ್ಟು ಪ್ರೋತ್ಸಾಹ ಸಿಕ್ಕಿತು ಮತ್ತು ಸ್ಥಳೀಯ ಜನ ಮುಂದಾಳುತ್ವ ವಹಿಸುವಂತಾಯಿತು. ಬೆಳಗಾವಿಯ ಗಂಗಾಧರರಾವ್ ದೇಶಪಾಂಡೆ, ಬಿಜಾಪುರದ ಶ್ರೀನಿವಾಸರಾವ್ ಕೌಜಲಗಿ, ವೆಂಕಟರಾವ್ ಆಲೂರು, ಧಾರವಾಡದ ಗಡಿಗೆಯ್ಯ ಹೊನ್ನಾಪುರ ಮಠ-ಇವರನ್ನು ಇಲ್ಲಿ ಉಲ್ಲೇಖಿಸಬಹುದು. ನೇಯ್ಗೆ, ಬೆಂಕಿ ಕಡ್ಡಿ, ಸ್ಲೇಟು, ಬಳೆ, ಪೆನ್ಸಿಲ್ ಇವುಗಳನ್ನು ತಯಾರಿಸಲು ಹೆಬ್ಬಾಳ ಅಲಗವಾಡಿ ಮತ್ತು ಇತರರಿಂದ ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸುವ ಪ್ರಯತ್ನ ನಡೆಯಿತು. ಬ್ರಿಟಿಷ್ ವಸ್ತ್ರ, ಸಕ್ಕರೆ, ಸೀಮೆ ಎಣ್ಣೆ ಇವು ಬಹಿಷ್ಕೃತವಾದುವು. ಬೆಳಗಾವಿ, ಧಾರವಾಡ, ಹುಬ್ಬಳ್ಳಿ ಮತ್ತು ಬಾಗಲಕೋಟೆಗಳಲ್ಲಿ ರಾಷ್ಟ್ರೀಯ ಶಾಲೆಗಳನ್ನು ಸ್ಥಾಪಿಸುವ ಪ್ರಯತ್ನಗಳು ಕಾಕಾ ಕಾಲೇಲ್ಕರ್, ಆಲೂರು ವೆಂಕಟರಾವ್ ಬುರ್ಸೆ, ಜಯರಾವ್ ನರಗುಂದ ಮತ್ತು ಇತರರಿಂದ ನಡೆದುವು. ಬೆಳಗಾವಿಯಲ್ಲಿ ಸೇಂದಿ ಅಂಗಡಿಗಳ 'ಪಿಕೆಟಿಂಗ್' ಅಥವಾ ಸರ್ಪಕಾವಲು ವ್ಯವಸ್ಥೆ ನಡೆದುದು ಗಮನಾರ್ಹ. ಪಚ್ಚಾಪುರದ ಡಾಕ್ಟರ್ ಜೋಷಿ, ಬೆಳಗಾವಿಯ ಗೋವಿಂದರಾವ್ ಯಾಳಗಿ-ಇವರನ್ನೊಳಗೊಂಡ ಮೂರು ಮಂದಿ 1906ರಲ್ಲಿ ಒಂದು ವಾರದ ಶಿಕ್ಷೆಗೆ ಗುರಿಯಾದರು.

ಬಂಗಾಳ ಮತ್ತು ಮಹಾರಾಷ್ಟ್ರದ ಕ್ರಾಂತಿಕಾರರಲ್ಲಿ ಸಡಿಲವಾದ ಸಂಬಂಧವಿತ್ತು. ಭೀಮರಾವ್ ಬೇಪೂರ್ ಮತ್ತು ಧಾರವಾಡದ ಡಾಕ್ಟರ್ ಹಂಡೂರ್ ಅವರು ಬಂಧಿತರಾಗಿ, ಚಿತ್ರಹಿಂಸೆಗೆ ಒಳಗಾಗಿ ಪ್ರಶ್ನಿಸಲ್ಪಟ್ಟರು. ಗೋವೆಯನ್ನು ಕ್ರಾಂತಿಕಾರರ ಚಟುವಟಿಕೆಯ ಕೇಂದ್ರವಾಗಿ ಮಾಡಿಕೊಳ್ಳುವ ಉದ್ದೇಶ ದಿಂದ ಇಬ್ಬರು ಬಂಗಾಳಿ ಯುವಕರು ಗೋವಾ ಮತ್ತು ಹುಬ್ಬಳ್ಳಿಗೆ ಬಂದ ಸಂದರ್ಭದಲ್ಲಿ ಇವರ ಮೇಲೂ ದೋಷಾರೋಪಣೆ ಹೊರಿಸಲಾಯಿತು. ಸ್ವತಃ ಗಂಗಾಧರರಾವ್ ದೇಶಪಾಂಡೆ ಇವರನ್ನು ಸಹ ಬಾಂಬು ತಯಾರಿಕೆಯ ಸಂಬಂಧವಾಗಿ ಆಪಾದನೆಗೆ ಗುರಿಪಡಿಸಲು ಪೋಲೀಸರಿಂದ ಪ್ರಯತ್ನಗಳು ನಡೆದುವು.

ಇಡೀ ಬೊಂಬಾಯಿ ಕರ್ನಾಟಕ, ಖಚಿತವಾಗಿ ಉಗ್ರ ಪಂಥಕ್ಕೇ ಸೇರಿತ್ತು. 1907ರ ಸೂರತ್ ಕಾಂಗ್ರೆಸ್ ಅಧಿವೇಶನದ ಈ ಭಾಗದ ಪ್ರತಿನಿಧಿಗಳಲ್ಲಿ ವೆಂಕಟರಾವ್ ಆಲೂರ್, ಶ್ರೀನಿವಾಸರಾವ್ ಕೌಜಲಗಿ, ಹೊಸಕೇರಿ ಅಣ್ಣಾಚಾರ್ಯ, ಗಂಗಾಧರರಾವ್ ದೇಶಪಾಂಡೆ—ಇವರನ್ನೊಳಗೊಂಡ ಪ್ರತಿನಿಧಿಗಳು ತಿಲಕರ ಪರ ಇದ್ದರು. ಶ್ರೀ ಅರವಿಂದರು ನಡೆಸಿದ ಗುಪ್ತ ಸಭೆಯಲ್ಲಿ ಗೋವಿಂದರಾವ್ ಯಾಳಗಿ ಅವರು ಹಾಜರಿದ್ದು ದೇಶಸೇವೆಯಲ್ಲಿ ತೊಡಗುವ ದೀಕ್ಷೆ ತೆಗೆದುಕೊಂಡರು. 1908 ರಲ್ಲಿ ತಿಲಕರಿಗೆ ವಿಧಿಸಲ್ಪಟ್ಟ ಆರು ವರ್ಷಗಳ ಕ್ರೂರ ಶಿಕ್ಷೆ ಇಡೀ ಕರ್ನಾಟಕವನ್ನೇ ತಲ್ಲಣಗೊಳಿಸಿತು. ಕಡೆಗೆ ಶಾಲಾ ವಿದ್ಯಾರ್ಥಿಗಳೂ ಮುಷ್ಕರ ಹೂಡಿದರು. ಹೊರಗಿನ ದೃಷ್ಟಿಗೆ ತಾತ್ಕಾಲಿಕವಾಗಿ ಚಳವಳಿ ತಣ್ಣಗೆ

ಆದಂತೆ ಗೋಚರಿಸಿದರೂ ದೇಶಭಕ್ತಿಯ ಬಿತ್ತನೆ ಫಲವತ್ತಾದ ಭೂಮಿಯಲ್ಲೇ ಆಗಿದ್ದುದರಿಂದ ಮುಂದೆ ಅದು ಹುಲುಸಾದ ಪೈರಾಗಿ ಮೊಳೆಯಲು ಸಾಧ್ಯವಾಯಿತು.

ದಕ್ಷಿಣ ಕನ್ನಡದಲ್ಲಿ ಅಮ್ಮೆಂಬಳ ಪೈ, ಸುಬ್ರಾಯ ಬಾಳಿಗ, ಪಿ.ಕೆ. ರಾವ್, ಪಂಜೆ ಮಂಗೇಶರಾವ್ ಮತ್ತು ಇತರರು ಪಂಜನ್ನು ಹೊತ್ತಿಸಿ ಅದು ಹುರಿಯುತ್ತಿರುವಂತೆ ಮಾಡಿದರು. ಬಳ್ಳಾರಿಯಲ್ಲಿ ವೃದ್ಧ ಕೋಲಾಚಲಂ ಮತ್ತು ಅಂದಿನ ಮೈಸೂರು ರಾಜ್ಯದಲ್ಲಿ ವೆಂಕಟಕೃಷ್ಣಯ್ಯ ಇವರ ಹೆಸರುಗಳು ಲಕ್ಷ್ಯ ಕೊಡಬೇಕಾದವು.

ಅಂದಿನ ಕಾಲದ ವಾತಾವರಣ ಹೇಗಿತ್ತು ಎಂದು ಉದಾಹರಿಸಲು ಒಂದು ಸಣ್ಣ ಘಟನೆಯನ್ನು ಇಲ್ಲಿ ತಿಳಿಸಬಹುದು : ಬಿಜಾಪುರದ ಒಬ್ಬ ಉಪಾಧ್ಯಾಯ ಭೀಮಾಚಾರ್ಯ ಚಿಮ್ಮಲಗಿ ತನ್ನ ಮನೆಯಲ್ಲಿ ಲೋಕಮಾನ್ಯ ತಿಲಕರ ಭಾವಚಿತ್ರ ಇರಿಸಿದ್ದನಲ್ಲದೆ ದೇಶಭಕ್ತರ ಭಾವಚಿತ್ರಗಳನ್ನೂ ಮಾರುತ್ತಿದ್ದನು. ಹೀಗೆ ಮಾಡಲಾಗದು ಎಂದು ಪೋಲೀಸರು ಅವನಿಗೆ ಆಜ್ಞಾಪಿಸಿದರು. ಆದರೆ ಅವನು ಪಟ್ಟುಹಿಡಿದ. ಇದರಿಂದ ತನ್ನ ಉದ್ಯೋಗಕ್ಕೆ ರಾಜೀನಾಮೆ ಕೊಡಬೇಕಾಯಿತು. ಉದ್ಯೋಗ ಅರಸುತ್ತಾ ಅವನು ಹೈದರಾಬಾದ್ ಸೇರಿದನು. ಸಹಜವಾಗಿ ಅವನು ಅಲ್ಲಿ ಚಿತ್ರಗ್ರಾಹಕನಾಗಿಯೂ ಕ್ಯಾಮರಾ ಮತ್ತು ರೇಡಿಯೋ ವ್ಯಾಪಾರಿಯಾಗಿಯೂ ಯಶಸ್ಸು ಗಳಿಸಿದನು. ಆದರೆ ಅದೊಂದು ಪ್ರತ್ಯೇಕ ವಿಷಯ.

ಲೋಕಮಾನ್ಯ ತಿಲಕರ ಹೋಮ್‌ರೂಲ್ ಚಳವಳಿಯ ಕರೆಗೆ ಕರ್ನಾಟಕ ಉತ್ಸಾಹಪೂರಿತವಾಗಿ ಓಗೊಟ್ಟಿತು. ಸ್ವಯಂ ಪ್ರೇರಣೆಯಿಂದ ಆಲೂರು ವೆಂಕಟರಾಯರು ಈ ಚಳವಳಿ ಕನ್ನಡದಲ್ಲೇ ನಡೆಯ ಬೇಕೆಂದೂ ಸಕಲ ಸಾಹಿತ್ಯವೂ ನಾಡನುಡಿಯಾದ ಕನ್ನಡದಲ್ಲಿಯೇ ಪ್ರಕಟಿತವಾಗಬೇಕೆಂದೂ ನಿರ್ಧರಿಸಿದರು. ಅವರ ತರ್ಕಬದ್ಧವಾದ ಸರಣಿಯನ್ನು ಅಲುಗಾಡಿಸುವಂತಿರಲಿಲ್ಲ. ಮೇ, 1916ರಲ್ಲಿ ಹೋಮ್‌ರೂಲ್ ಲೀಗಿನ ಕರ್ನಾಟಕದ ಶಾಖೆ ಗಂಗಾಧರರಾವ್ ದೇಶಪಾಂಡೆ ಅವರ ಅಧ್ಯಕ್ಷತೆಯಲ್ಲಿ ಧಾರವಾಡದಲ್ಲಿ ಸ್ಥಾಪಿಸಲ್ಪಟ್ಟಿತು. ಬಹಳ ಹಿಂದಿನ ಕಾಲಕ್ಕೇ ಎಂದರೆ 1906ರಲ್ಲಿ ತಿಲಕರು ಬೆಳಗಾವಿ, ಶಹಾಪುರ, ಗುರ್ಲ ಹೊಸೂರು ಮತ್ತು ಇತರ ಕೆಲವು ಸ್ಥಳಗಳಿಗೆ ಭೇಟಿಕೊಟ್ಟಾಗ, ಕರ್ನಾಟಕದ ಚಳವಳಿ ಕನ್ನಡದಲ್ಲಿಯೇ ಸಾಗಬೇಕೆಂದು ಅವರು ಗಂಗಾಧರರಾವ್ ಮತ್ತು ಇತರರಿಗೆ ಸ ಷ್ಟವಾಗಿ ತಿಳಿಸಿದ್ದರು. ಸಾಮಾನ್ಯ ಜನತೆಯ ಮುಖಂಡರಾದ ತಿಲಕರಿಗೆ ಸ್ವಾಭಾವಿಕವಾಗಿ ಈ ವಿಷಯದಲ್ಲಿ ಯಾವ ಸಂದೇಹವೂ ಇರಲಿಲ್ಲ. ಮಹಾರಾಷ್ಟ್ರದಲ್ಲಿ ಮರಾಠಿ ಭಾಷೆಯಲ್ಲಿ ತಮ್ಮ 'ಕೇಸರಿ' ಪತ್ರಿಕೆಯ ಮೂಲಕ ಮಾಡಲು ಸಾಧ್ಯವಾದುದನ್ನು ಅನ್ಯಭಾಷೆಯ ಮೂಲಕ ಮಾಡಲು ತಮಗೆ ಸಾಧ್ಯವಾಗದು ಎಂಬುದನ್ನು ಅವರು ಅರಿತಿದ್ದರು. 'ಮರಾಠಿ' ಎಂಬ ಆಂಗ್ಲ ಭಾಷೆಯ ವಾರ ಪತ್ರಿಕೆಯನ್ನು ಅವರು ಸ್ಥಾಪಿಸಿದ್ದು ನಿಜ. ಆದರೆ ಅದರ ಪ್ರಭಾವ ತುಂಬ ಸೀಮಿತವಾಗಿತ್ತು.

ಬೊಂಬಾಯಿ ಪ್ರಾಂತೀಯ ರಾಜಕೀಯ ಸಮ್ಮೇಳನ 1916ರಲ್ಲಿ ಬೆಳಗಾವಿನಲ್ಲಿ ನೆರೆಯುವಂತೆ ಮಾಡಿ, ಅಲ್ಲಿ ತಿಲಕರ ನೇತೃತ್ವದಲ್ಲಿ ಉಗ್ರಪಕ್ಷವು ಕಾಂಗ್ರೆಸ್ ಸೇರುವಂತೆ ತೆಗೆದುಕೊಂಡ ತೀರ್ಮಾನದಿಂದ ಕರ್ನಾಟಕವು ಹೋಮ್‌ರೂಲ್ ಚಳವಳಿಗೆ ಮತ್ತೊಂದು ಗಮನಾರ್ಹ ನೆರವು ನೀಡಿದಂತಾಯಿತು. ಗಂಗಾಧರರಾಯರ ವಿಶೇಷ ಪ್ರಾರ್ಥನೆಯನ್ನು ಮನ್ನಿಸಿ ಮಹಾತ್ಮಗಾಂಧಿ ಬೆಳಗಾವಿಗೆ ಭೇಟಿ ಇತ್ತರು. ವಾಸ್ತವವಾಗಿ ಇದು ಕರ್ನಾಟಕಕ್ಕೆ ಅವರಿತ್ತ ಮೊದಲ ಭೇಟಿ. ಲೋಕಮಾನ್ಯ ತಿಲಕರು ಧಾರವಾಡ ಮತ್ತು ಇತರ ಕೆಲವು ಸ್ಥಳಗಳನ್ನು ಸಂದರ್ಶಿಸಿದರು. ಇದರ ಪರಿಣಾಮವಾಗಿ ಸ್ವರಾಜ್ಯದ ಸಾಧನೆಗಾಗಿ ರಾಷ್ಟ್ರೀಯ ಚಳವಳಿಯನ್ನು ಪುನರುಜ್ಜೀವಿತಗೊಳಿಸಲು ಜನರನ್ನು ಇದು ಹುರಿದುಂಬಿಸಿತು. ಧಾರವಾಡದಲ್ಲಿ ಬಹಿರಂಗ ಭಾಷಣಗಳನ್ನು ಮಾಡಕೂಡದೆಂದು ಕ್ರಿ.ಪ್ರೊ. ಶಾಸನದ 144ನೆ ಸೆಕ್ಷನ್ ಜಾರಿಗೆ ತರಲಾಯಿತು.

ಇದರಿಂದ ಸ್ವಲ್ಪವೂ ಅಂಜದೆ, ಗಣ್ಯವಕೀಲರಾದ ಬಳ್ಳಾರಿ ರಾಮರಾವ್ ಅವರ ಮನೆಯ ವಿಶಾಲವಾದ ಹೊರ ಆವರಣದಲ್ಲಿ ಸಭೆ ನೆರೆದು. ತಿಲಕರ ಭಾಷಣ ಆಲಿಸಲು ಕೂಡಲೇ ವ್ಯವಸ್ಥೆ ಮಾಡಲಾಯಿತು. ಬೆಳಗಾವಿಯಲ್ಲಿ 1916ರಲ್ಲಿ ನಡೆದ 18ನೆಯ ಬೊಂಬಾಯಿ ರಾಜಕೀಯ ಸಮ್ಮೇಳನದಲ್ಲಿ ಉಗ್ರಪಂಥಿಗಳು ಕಾಂಗ್ರೆಸ್ ಪ್ರವೇಶಿಸಬೇಕೆಂದು ಪ್ರೋತ್ಸಾಹಿಸುವ ನಿರ್ಣಯ ಅಂಗೀಕೃತವಾಯಿತು. ಅಂದಿನ ಕಾಲದ ಕಾಂಗ್ರೆಸ್ಸಿನ ಸೌಮ್ಯವಾದಿ ನಾಯಕರು ಉಗ್ರವಾದಿಗಳು ಕಾಂಗ್ರೆಸ್ ಪ್ರವೇಶಿಸಲು ನಿಯಮಗಳಿಗೆ ಸೂಕ್ತ ತಿದ್ದುಪಡಿಗಳನ್ನು ಮಾಡಿದರು. ಈ ನೂತನ ಬದಲಾವಣೆಗಳನ್ನು ಮಾಡಿದ ಮಹಾಶಕ್ತಿಯ ಹಿಂದೆ ಇದ್ದವರು ತಿಲಕರು. ಲಕ್ನೋ ಕಾಂಗ್ರೆಸ್ ಸೇರಿದಾಗ ಮುಸ್ಲಿಮ್‌ಲೀಗಿನವರು ಕಾಂಗ್ರೆಸ್ಸಿನೊಡನೆ ಸೇರಿ ಕೊಂಡು ಹೋಗಲು ಅನುಗುಣವಾದ ವಾತಾವಾರಣ ಕಲ್ಪಿಸಿಕೊಡುವ ಉದ್ದೇಶದಿಂದ ಸೂಕ್ತ ಬದಲಾವಣೆ ಗಳನ್ನು ಮಾಡುವ ದೂರದೃಷ್ಟಿಯೂ ಅವರಲ್ಲಿ ಇತ್ತು.

ಕರ್ನಾಟಕದ ಅನೇಕ ಭಾಗಗಳಿಗೆ ಹೋಮ್‌ರೂಲ್ ಚಳವಳಿ ವ್ಯಾಪಿಸಿಕೊಂಡಿತು. ಮತ್ತು ಸ್ವರಾಜ್ಯದ ಉದ್ದೇಶಗಳನ್ನು ತಕ್ಕಮಟ್ಟಿನ ವಿವರಗಳೊಂದಿಗೆ ಜನಪ್ರಿಯಗೊಳಿಸಿದರು. ಭಾರತೀಯರಿಂದ ಭಾರತದ ಜನರಿಗಾಗಿ, ಅಗತ್ಯವಾದರೆ ಬ್ರಿಟಿಷ್ ಕಿರೀಟದ ಅಧೀನದಲ್ಲಿ, ನಡೆಸಲ್ಪಡುವ ಸರಕಾರವೇ ಸ್ವರಾಜ್ಯ ಎಂದು ಸ್ಪಷ್ಟವಾಗಿ ನಿರ್ಭಯವಾಗಿ ವಿವರಿಸಿ ಹೇಳುತ್ತಿದ್ದರು. ಬ್ರಿಟಿಷ್ ಮಕುಟ ತಲೆಗೆ ಭೂಷಣವಾದ ಕೇವಲ ಒಂದು ಆಭರಣ ಎಂದು ಅವರು ಸ್ಪಷ್ಟಪಡಿಸುತ್ತಿದ್ದರು. ಪಾರ್ಲಿಮೆಂಟರಿ ಸರ್ಕಾರದ ಕ್ರಮದಲ್ಲಿ ನಿಜ ಅಧಿಕಾರ ಜನರಲ್ಲಿ ಅಡಕವಾಗಿರಬೇಕು; ಇದೇ ಅವರ ಬೋಧನೆಯ ಸಾರ ಸರ್ವಸ್ವವಾಗಿತ್ತು. ಸುರಾಜ್ಯ ಸ್ವರಾಜ್ಯಕ್ಕಿಂತ ಲೇಸಾಗದು ಎಂದೂ ಸ್ವರಾಜ್ಯವಿಲ್ಲದೆ ರಾಷ್ಟ್ರಪ್ರಗತಿ ಎಂದಿಗೂ ಸಾಧಿತವಾಗದೆಂದೂ ಅವರು ಹೇಳುತ್ತಿದ್ದರು.

1916–1919 ಈ ಅಂತರದ ವರ್ಷಗಳು ಕರ್ನಾಟಕದ ಇತಿಹಾಸದಲ್ಲಿ ಅಷ್ಟು ಮಹತ್ವಪೂರಿತವೇನೂ ನಡೆಯಲಿಲ್ಲ. ಆದರೆ ಇದೇ ಅವಧಿಯಲ್ಲಿ ಸ್ವರಾಜ್ಯದ ಹಸಿವಿನ ಜೊತೆಗೆ, ರಾಜಕೀಯ ಮತ್ತು ಆಡಳಿತದ ದೃಷ್ಟಿಯಿಂದ ಅಖಂಡ ಕರ್ನಾಟಕ ಪ್ರತ್ಯೇಕ ಅಸ್ತಿತ್ವ ತಾಳಿರಬೇಕೆಂಬ ಭಾವನೆ ತೀವ್ರಗತಿಯಿಂದ ಬೆಳೆಯಿತು.

1916 ರಲ್ಲಿ ಆಲೂರು ವೆಂಕಟರಾವ್, ಕಡಪ ರಾಘವೇಂದ್ರರಾವ್ ಮತ್ತು ಇತರರು ಈ ವಿಷಯದಲ್ಲಿ ಜನ ಜಾಗೃತಿ ಬೆಳೆಸಲು ಧಾರವಾಡದಲ್ಲಿ ಕರ್ನಾಟಕ ಸಭೆ ಎಂಬ ಹೆಸರಿನ ಸಂಸ್ಥೆ ಸ್ಥಾಪಿಸಿದರು. ವಾಸ್ತವಾಗಿ 1917 ರಲ್ಲಿ ಮದರಾಸಿನಲ್ಲಿ ಸೇರಿದ್ದ ಕಾಂಗ್ರೆಸ್ ಅಧಿವೇಶನದಲ್ಲಿ ಕರ್ನಾಟಕ ವೃತ್ತ ರಚಿಸಿಕೊಡಬೇಕೆಂಬ ಬೇಡಿಕೆ ಮಂಡಿಸಲ್ಪಟ್ಟಿತು. ಆಂಧ್ರ 1917 ರಲ್ಲೂ ಸಿಂಧ್ 1918 ರಲ್ಲೂ ಈ ಬೇಡಿಕೆಗಳನ್ನು ಈಡೇರಿಸಿ ಕೊಂಡವು. 1920ರ ವರೆಗೂ ಕರ್ನಾಟಕ ತನ್ನ ಕೋರಿಕೆಯನ್ನು ಪಡೆಯುವುದರಲ್ಲಿ ಯಶಸ್ವಿಯಾಗಲಿಲ್ಲ. ಮತ್ತೊಮ್ಮೆ ತಿಲಕರು ಬೆಳಗಾವಿ ಜಿಲ್ಲೆಯ ಚಿಕ್ಕೋಡಿ, ನಿಪ್ಪಾಣಿ ಮತ್ತು ಇತರ ಕಡೆಗಳಲ್ಲಿ ಕೈಗೊಂಡ ಪ್ರವಾಸ ಈ ಅವಧಿಯ ಮತ್ತೊಂದು ಚಿರಸ್ಮರಣೀಯ ಘಟನೆ. ಬೆಳಗಾವಿ ಜಿಲ್ಲೆಯ ರಾಜಕೀಯ ಸಮ್ಮೇಳನ ನಿಪ್ಪಾಣಿಯಲ್ಲಿ 12–4–1917 ರಲ್ಲಿ ನಡೆಯಲು ನಿಶ್ಚಿತವಾಗಿದ್ದ ಸಂದರ್ಭದಲ್ಲಿ ಈ ಪ್ರವಾಸ ಕೈಗೊಳ್ಳಲ್ಪಟ್ಟಿತು. 1918 ರಲ್ಲಿ ವಿಠ್ಠಲಭಾಯಿ ಪಟೇಲರ ಅಧ್ಯಕ್ಷತೆಯಲ್ಲಿ ಬಿಜಾಪುರದಲ್ಲಿ ನಡೆದ ಬೊಂಬಾಯಿ ಪ್ರಾಂತದ ರಾಜಕೀಯ ಸಮ್ಮೇಳನ ಮತ್ತೊಂದು ಘಟನೆ. ಗಾಂಧಿಯವರೂ ಈ ಸಭೆಯಲ್ಲಿ ಉಪಸ್ಥಿತರಾಗಿದ್ದರು. ಕರ್ನಾಟಕಕ್ಕೆ ಇದು ಅವರ ದ್ವಿತೀಯ ಭೇಟಿ. ಅಸ್ಪೃಶ್ಯರನ್ನು ಉದ್ದೇಶಿಸಿ ಮಾತನಾಡಬೇಕು ಎಂದು ಅವರನ್ನು ಕೇಳಿಕೊಂಡಾಗ, ಅಸ್ಪೃಶ್ಯರೇ ಇಲ್ಲದಿದ್ದ ಆ ಸಭೆಯಲ್ಲಿ. "ಇಲ್ಲಿ ಅಸ್ಪೃಶ್ಯರು ಎಲ್ಲಿದ್ದಾರೆ ?" ಎಂದು ಪ್ರಶ್ನಿಸಿದರು. ಗಾಂಧಿಯವರು ಎಂದೂ ಸಂಪ್ರದಾಯ ಶರಣರಾಗಿರಲಿಲ್ಲ.

ರೂಢಿ ಬಿಟ್ಟು ನಡೆಯುವುದೇ ಅವರ ಮಾರ್ಗ ಮತ್ತು ಸಾಧನೆಯ ಕ್ರಮ. ಏಕೆಂದರೆ ನಿಖರತೆ ಮತ್ತು ನಾವೀನ್ಯ ಅವರಿಗೆ ಸ್ವಾಭಾವಿಕವಾಗಿತ್ತು.

ಈ ರೀತಿಯಾಗಿ ಮೂರು ವರ್ಷಗಳ ಅವಧಿಯಲ್ಲಿ ಬೊಂಬಾಯಿ ಪ್ರಾಂತದ ಎರಡು ರಾಜಕೀಯ ಸಮ್ಮೇಳನಗಳನ್ನು ನಡೆಸುವ ವೈಶಿಷ್ಟ್ಯ ಕರ್ನಾಟಕಕ್ಕೆ ಪ್ರಾಪ್ತವಾಗಿತ್ತು. ಈ ಎಲ್ಲ ಸಮ್ಮೇಳನಗಳಲ್ಲೂ 'ಭಾರತದ ಕ್ರಾಂತಿ ಪುರುಷ' ಲೋಕಮಾನ್ಯ ತಿಲಕರು ಹಾಜರಿದ್ದರು. ಸ್ವದೇಶಿ ಚಳವಳಿಯ ಕಾಲದಿಂದ ಹೆಸರಾಂತ ಬೆಳಗಾವಿ ಜಿಲ್ಲೆ ಸ್ವಾಭಾವಿಕವಾಗಿ ಇದರಲ್ಲೂ ಮುಂದಿತ್ತು. ಗಂಗಾಧರರಾವ್ ದೇಶಪಾಂಡೆ ಮತ್ತು ಶ್ರೀನಿವಾಸರಾವ್ ಕೌಜಲಗಿ ಇವರ ಹೆಸರು ಮನೆಮಾತಾಗಿತ್ತು. ಇವರ ಹೆಸರು ಕೇಳದವರು ಕರ್ನಾಟಕದಲ್ಲಿ ಅತಿ ವಿರಳ. ರಾಷ್ಟ್ರೀಯ ಭಾರತದ ಆದ್ಯಂತ ಇವರ ಹೆಸರು ವ್ಯಾಪಕವಾಗಿತ್ತು.

ಹೋಮ್‌ರೂಲ್ ಚಳವಳಿ ಮತ್ತು ಎಲ್ಲ ವೇದಿಕೆಗಳಿಂದಲೂ ಮಾರ್ದನಿಸುತ್ತಿದ್ದ ಸ್ವರಾಜ್ಯದ ಕೂಗು, ಚೀರಿಕಾರುತ್ತಿದ್ದ ಆದರೂ ಅರ್ಥ ಗರ್ಭಿತವೂ ತರ್ಕಬದ್ಧವೂ ಆದ, ತಿಲಕ, ಬೆಸೆಂಟ್, ಸುರೇಂದ್ರ ನಾಥ, ಬಿ.ಸಿ. ಪಾಲ್ ಮತ್ತು ಇತರರ ಭಾಷಣಗಳು ವ್ಯರ್ಥವಾಗಿ ಹೋಗಲಿಲ್ಲ. ಅಂದಿನ ಭಾರತದ ಕಾರ್ಯದರ್ಶಿ ಮಾಂಟೆಗೂ ಅವರು ಭಾರತಕ್ಕೆ 1917 ರಲ್ಲಿ ಭೇಟಿಯಿತ್ತರು. ಹೋಮ್‌ರೂಲ್ ಲೀಗಿನ ಪರವಾಗಿ ಲೋಕಮಾನ್ಯ ತಿಲಕರು ಒಂದು ನಿಯೋಗವನ್ನು ಒಯ್ದರು. ಕರ್ನಾಟಕದಿಂದ ಗಂಗಾಧರರಾವ್ ಮತ್ತು ಬೆಳ್ವಿ ಅವರು, ಕಪರ್ದೆ, ಕರಂದಿಕರ್, ಡಾಕ್ಟರ್ ಮುಂಜೆ ಮತ್ತು ಇತರರೊಂದಿಗೆ ಇದರಲ್ಲಿ ಭಾಗವಹಿಸಿದ್ದರು.

ಉಗ್ರಪಂಥಿಗಳ ದೃಷ್ಟಿಯನ್ನು ಕಾಂಗ್ರೆಸ್ ತನ್ನದಾಗಿ ಮಾಡಿಕೊಂಡಿದ್ದುದು ಮಾತ್ರವಲ್ಲದೆ, ಇದುವರೆಗೂ ಅನುಸರಿಸಿಕೊಂಡು ಬರುತ್ತಿದ್ದ ಶಾಸನಬದ್ಧ ಎನಿಸಿಕೊಳ್ಳುತ್ತಿದ್ದ ಕ್ರಮಗಳಿಂದ ಅಸಂಪ್ರದಾಯವೂ ವಿನೂತನವೂ ಆದ ಗಾಂಧಿಜೀಯವರ ಮಾರ್ಗ ತುಳಿಯಲು 1918–20 ರಲ್ಲಿ ಪ್ರಾರಂಭಿಸಿತು. ಮಾಂಟೆಗೂ–ಚೆಲಮ್ಸ್‌ಫರ್ಡ್ ಸುಧಾರಣೆಗಳು ಕಾಂಗ್ರೆಸಿಗೆ ಅತೃಪ್ತಿಕರವೂ, ಅನಂಗೀಕೃತವೂ ಆಗಿದ್ದುವು, ಕಪ್ಪುಮಸೂದೆ ಎಂದು ಹೆಸರಾಂತ ರೌಲತ್ ಮಸೂದೆ ಇಡೀ ರಾಷ್ಟ್ರದ ಕೋಪವನ್ನು ಕೆರಳಿಸಿತು. ಲಿಬರಲ್ ಪಕ್ಷದವರೂ ಇದರಲ್ಲಿ ಒಮ್ಮತ ಹೊಂದಿದ್ದರು. ಜಾಲಿಯನ್‌ವಾಲಾ ಬಾಗಿನ ಅಜ್ಞಾನಿಗಳ ಕೊಲೆ, ಮತ್ತು ಈ ಕೊಲೆಪಾತಕರ ಬಗ್ಗೆ ಬ್ರಿಟಿಷ್ ಪಾರ್ಲಿಮೆಂಟಿನ ವರ್ತನೆ, ಲಷ್ಕರೀ ಶಾಸನಗಳ ಭಯಂಕರ ಅಮಾನುಷ ಕೃತ್ಯಗಳು ಮತ್ತು ಇವುಗಳಿಗೆ ಪುರಸ್ಕಾರವೀಯುತ್ತಿದ್ದ ಪ್ರಭುತ್ವದ ಧೋರಣೆ–ಇವೆಲ್ಲವೂ ರಾಜಕೀಯ ಸುಧಾರಣೆ ಎಂದೆನಿಸಿಕೊಳ್ಳುತ್ತಿದ್ದ ತೆರೆಯ ಮರೆಯಲ್ಲಿ ಅಡಗಿದ್ದ ಕಬ್ಬಿಣದ ಹಿಮ್ಮಡಿಯ ರೀತಿನೀತಿಯನ್ನೂ ಒಮ್ಮೆಲೆ ಹೊರಗೆಡಹಿದವು.

ಗಾಂಧಿಯವರಿಗೆ ಇದು ಒಳ್ಳೆಯ ಅವಕಾಶ ಕಲ್ಪಿಸಿಕೊಟ್ಟಿತು. ಅವರು ಈ ಅವಕಾಶವನ್ನು ಧೈರ್ಯದಿಂದ ಬಳಸಿಕೊಂಡರು. ಪಾಲಕರಯುಗ ಅಳಿದು ಹೋಗುತ್ತಾ ಬಂದಿತ್ತು. ತರ್ಕಬದ್ಧ ಬುದ್ಧಿ ಕುಶಲತೆಯ ಪ್ರದರ್ಶನ, ಮಾತಿನ ಮಲ್ಲ ಯುದ್ಧ, ಕತ್ತಿವರಸೆ, ಶಾಸನ ಬದ್ಧ ಮಾರ್ಗಾನುಸರಣೆ–ಇವೆಲ್ಲಕ್ಕೂ ಒಂದು ಮಿತಿಯುಂಟು ಎಂದು ಗಾಂಧಿಯವರು ಬಹಿರಂಗವಾಗಿಯೇ ಘೋಷಿಸಿದರು. ಸವಿನಯ ಕಾಯಿದೆ ಭಂಗ, ಸ್ವಯಂ ಕಷ್ಟಸಹಿಷ್ಣುತೆ, ಕೇಡು ಬಗೆದವನಿಗೆ ಪ್ರತಿಯಾಗಿ ಕೇಡು ಬಯಸಬೇಕೆಂಬ ಭಾವನೆಗೆ ಲೇಶವೂ ಎಡೆಗೊಡದೆ ಸತ್ಯಾಗ್ರಹದ ನಾಡು ಈ ಗಡಿಯಾಚೆ ಇದೆ. ಗಾಂಧಿಯವರ ತರ್ಕಬದ್ಧವಾದ ಸರಣಿಯ ಶಕ್ತಿಯನ್ನು ಲೋಕಮಾನ್ಯರು ಗ್ರಹಿಸಿದ್ದರು, ಮತ್ತು ಚಿರಾಲ್ ಮೊಕದ್ದಮೆಗಾಗಿ ಇಂಗ್ಲೆಂಡಿಗೆ ಹೋಗುವ ಮುನ್ನ ಗಾಂಧಿಯವರನ್ನು ವಿರೋಧಿಸಬೇಡಿ ಎಂದು ತನ್ನ ಅನುಯಾಯಿಗಳಿಗೆ ತಿಳಿಸಿದ್ದರು. ತಿಲಕರು ಆಗಸ್ಟ್ 1, 1920ರಲ್ಲಿ ತೀರಿಕೊಂಡರು. ಖಿಲಾಫತ್ ಸಮಿತಿ ಮತ್ತು

ಆತ್ಮಗೌರವವುಳ್ಳ ರಾಷ್ಟ್ರಕ್ಕೆ ಉಳಿದಿರುವ ಒಂದೇ ಒಂದು ಗೌರವಾನ್ವಿತ ಮಾರ್ಗ–ಎಂದರೆ ಬ್ರಿಟಿಷ್ ಸರ್ಕಾರದೊಡನೆ ಅಹಿಂಸಾತ್ಮಕ ಅಸಹಕಾರ ಕೈಗೊಳ್ಳುವುದು ಎಂದು ಅದೇ ದಿನ ಗಾಂಧಿಯವರು ನಾಟಕೀಯವಾಗಿ ಪ್ರಕಟಿಸಿದರು. ಖಿಲಾಫತ್ ವಜಾ ಮಾಡಿದ್ದರಿಂದ ಕಂಪಿತರಾಗಿದ್ದ ಮುಸಲ್ಮಾನರು ಗಾಂಧಿಜೀ ಸೂಚಿಸಿದ ಕಾರ್ಯಕ್ರಮವನ್ನು ತ್ವರಿತವಾಗಿ ಸ್ವೀಕರಿಸಿದರು. ಸೆಪ್ಟಂಬರಿನ ವಿಶೇಷ ಅಧಿವೇಶನ, ಡಿಸೆಂಬರ್ 1920ರ ನಾಗಪುರದ ಕಾಂಗ್ರೆಸ್ ಇವೆರಡೂ ನೆರೆಯುವ ಪೂರ್ವಭಾವಿಯಾಗಿಯೇ, ಜೂನ್ ತಿಂಗಳಿನಲ್ಲಿ ಅಲಹಾಬಾದಿನಲ್ಲಿ ನಡೆದ ಸಭೆಯಲ್ಲಿ ಅಸಹಕಾರದ ಕಾರ್ಯಕ್ರಮವನ್ನು ಖಿಲಾಫತ್ ಸಮಿತಿ ಅಂಗೀಕರಿಸಿತು. ಕರ್ಣಾಟಕದ ಹಿಂದುಗಳು ಮತ್ತು ಮುಸಲ್ಮಾನರು ಈ ಪಂಕ್ತಿಯಲ್ಲಿ ಒಂದುಗೂಡಿದರು.

1920ರಷ್ಟು ಹಿಂದಿನ ಕಾಲದಿಂದಲೂ ಕರ್ಣಾಟಕ ಗಾಂಧಿಜೀಯವರಿಗೆ ಹೃತ್ಪೂರ್ವಕ ಬೆಂಬಲ ಕೊಡುತ್ತಾ ಬಂತು ಎಂದು ಹೇಳಬೇಕಾದ್ದು ಅನಗತ್ಯ. ಈ ಕಾರಣದಿಂದ ಕರ್ಣಾಟಕವು 'ಗಾಂಧೀಪ್ರಾಂತ' ಎಂಬ ಹೆಸರುಗಳಿಸಿತು. ಅಹಿಂಸಾತ್ಮಕ ಅಸಹಕಾರ ಚಳವಳಿಯಲ್ಲಿ ಕರ್ಣಾಟಕ ಕೈಗೊಂಡ ಪಾತ್ರದ ವಿವರಗಳನ್ನು ಮುಂದಿನ ಪರಿಚ್ಛೇದದಲ್ಲಿ ಕೊಡಲಾಗಿದೆ.

ರಾಷ್ಟ್ರೀಯ ಹೋರಾಟದಲ್ಲಿ ಕರ್ಣಾಟಕ ಸಂಪೂರ್ಣವಾಗಿ ಕಾಂಗ್ರೆಸ್ಸಿನೊಡನೆ ಜೊತೆಗೂಡಿ ಇದ್ದರೂ ಪ್ರಾರಂಭದಲ್ಲಿ ಕರ್ಣಾಟಕಕ್ಕೆ ಪ್ರತ್ಯೇಕ ಕಾಂಗ್ರೆಸ್ ಪ್ರಾಂತವಿರಬೇಕೆಂಬ ಬೇಡಿಕೆಯನ್ನು ಒತ್ತಾಯ ಪಡಿಸುತ್ತಲೆ ಇತ್ತು. ಆಶ್ಚರ್ಯವೆಂದರೆ, 1918ರಷ್ಟು ಮೊದಲೇ ಲೋಕಮಾನ್ಯ ತಿಲಕರು ಇದಕ್ಕೆ ಮಾನ್ಯತೆ ನೀಡಿದ್ದರು. ಆ ವೇಳೆಗೆ ಗಾಂಧಿಯವರು ಈ ಬಗ್ಗೆ ಉದಾಸೀನರಾಗಿದ್ದರು. ತಮ್ಮ ಕೊನೆಯ ದಿನಗಳಲ್ಲಿ ಲೋಕಮಾನ್ಯರು ಡೆಮೊಕ್ರಾಟಿಕ್ ಸ್ವರಾಜ್ಯ ಪಕ್ಷ ಹುಟ್ಟು ಹಾಕಿದ್ದರು. ಭಾಷಾನುಗುಣ ಪ್ರಾಂತಗಳ ರಚನೆ ಈ ಪಕ್ಷದ ಧ್ಯೇಯಗಳಲ್ಲಿ ಒಂದಾಗಿತ್ತು. ಇದು ಲೋಕಮಾನ್ಯರಿಗೆ ಸಲ್ಲಬೇಕಾದ ಋಣ. 1920ರಲ್ಲಿ ಸಿಡಿಲು ಸಿಂಹದಂತೆ ಕರ್ಣಾಟಕದ ಏಕೀಕರಣಕ್ಕಾಗಿ ಹೋರಾಡುತ್ತಿದ್ದ ಕಡಪ ರಾಘವೇಂದ್ರರಾಯರು, ನಾಗಪುರ ಕಾಂಗ್ರೆಸ್ ಅಧಿವೇಶನಕ್ಕೆ ಎಂಟು ನೂರಕ್ಕೂ ಹೆಚ್ಚು ಪ್ರತಿನಿಧಿಗಳನ್ನು ಕೂಡಿಸಿ ಕರ್ಣಾಟಕ ಪ್ರಾಂತ ಆಗಲೇಬೇಕು ಎಂಬ ಬೇಡಿಕೆಯನ್ನು ಗಾಂಧಿಜೀಯವರ ಮುಂದೆ ತೀವ್ರತೆ ಯಿಂದ ಮಂಡಿಸಿದರು. ಡಿಸೆಂಬರ್ 1920ರ ನಾಗಪುರದ ಕಾಂಗ್ರೆಸ್ ಅಧಿವೇಶನದಲ್ಲಿ ಅಂಗೀಕೃತವಾದ ಕಾಂಗ್ರೆಸ್ಸಿನ ನೂತನ ಅಂಗರಚನೆಯಲ್ಲಿ ಕರ್ಣಾಟಕಕ್ಕೆ ಪ್ರತ್ಯೇಕ ಪ್ರಾಂತ ಕೊಡಲ್ಪಟ್ಟಿತು. ಅಂದಿನಿಂದ ಗದಗಿನಲ್ಲಿ ತನ್ನ ಕೇಂದ್ರ ಕಾರ್ಯಾಲಯ ಸ್ಥಾಪಿಸಿಕೊಂಡು ಪ್ರತ್ಯೇಕ ಪ್ರಾಂತವಾಗಿ ಕರ್ಣಾಟಕ ಕಾರ್ಯಮಾಡ ತೊಡಗಿತು.

ಕಾಂಗ್ರೆಸ್ ಪ್ರಾಂತ ಅಸ್ತಿತ್ವಕ್ಕೆ ಬಂದುದೇ ತಡ. ಕನ್ನಡ ಮಾತನಾಡುವ ಎಲ್ಲ ಭಾಗಗಳ ರಾಷ್ಟ್ರೀಯ ಶಕ್ತಿಗಳು ಗಾಂಧಿಯವರ ಕರೆಗೆ ಉತ್ಸಾಹದಿಂದ ಓಗೊಡತೊಡಗಿದುವು. ಕಾಂಗ್ರೆಸ್ಸಿನ ಕರ್ಣಾಟಕದ ಇತಿಹಾಸ ವಾಸ್ತವವಾಗಿ ಪ್ರಾರಂಭವಾದುದು ಕರ್ಣಾಟಕ ಪ್ರಾಂತೀಯ ಕಾಂಗ್ರೆಸ್ ಕಮಿಟಿ ಎಂಬ ಹೆಸರಿನಿಂದ ವ್ಯವಸ್ಥಿತ ಏಕಸಂಸ್ಥೆಯಾಗಿ ಕೆಲಸ ಮಾಡಲು ತೊಡಗಿದ ಮೇಲೆಯೇ (ಇಂದು ಇದು ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿ ಎಂದು ನಾಮಾಂಕಿತವಾಗಿದೆ). ಬಹುಮಟ್ಟಿಗೆ ಕನ್ನಡ ನುಡಿ ನುಡಿಯುತ್ತಿದ್ದ ಅರ್ಧ ಭಾಗ ದೇಶೀರಾಜರ ಅಧೀನದಲ್ಲಿ ಇದ್ದರೂ (ಆ ದಿನಗಳ ಮೈಸೂರು ಮತ್ತು ಹೈದರಾಬಾದ್) 1920–21 ರಿಂದ ಅದು ಉತ್ತಮ ಕೆಲಸ ಮಾಡತೊಡಗಿತು.

1920–1947 ಈ ಇಪ್ಪತ್ತೇಳು ವರ್ಷಗಳ ಅವಧಿ ಭಾರತ ಸ್ವಾತಂತ್ರ್ಯ ಹೋರಾಟದ ನಿರ್ಣಾಯಕ ವರ್ಷಗಳಾಗಿದ್ದುವು.

ತಿಲಕ, ಗಾಂಧಿ ಮತ್ತು ಕಾಂಗ್ರೆಸ್ ಇವರ ನೇತೃತ್ವದಲ್ಲಿ ನಡೆಯುತ್ತಿದ್ದ ಭಾರತ ಸ್ವಾತಂತ್ರ್ಯದ ಬೇಡಿಕೆ ಮತ್ತು ಹೋರಾಟದಲ್ಲಿ ಕರ್ನಾಟಕ ಸದಾ ಮುಂದಿರುತ್ತಿತ್ತು ಎಂದು ಸಾಮಾನ್ಯವಾಗಿ ಹೇಳಬಹುದು. ಪಂಜಾಬ, ಬಂಗಾಳ ಮತ್ತು ಮಹಾರಾಷ್ಟ್ರ ಇವುಗಳಿಗೆ ಸಕ್ರಿಯ ಹಿಂಸಾ ಆಂದೋಳನದಲ್ಲಿ ವಿಶ್ವಾಸವಿದ್ದಂತೆ, ಕರ್ನಾಟಕದಲ್ಲಿ ಇಲ್ಲದೆ ಇದ್ದುದರಿಂದ ಇಲ್ಲಿ ಅಂಥಾ ಕ್ರಿಯಾಶೀಲ ಕ್ರಾಂತಿಕಾರರ ಘಟನೆಗಳು ಸಂಭವಿಸಿಲ್ಲ. ಕ್ರಾಂತಿಕಾರಕ ಚಟುವಟಿಕೆಗಳಲ್ಲಿ ದಾರಿ ತಪ್ಪಿದ ಕೆಲವು ವ್ಯಕ್ತಿಗಳಿದ್ದರು ಮತ್ತು ಅವರ ಬಗ್ಗೆ ಸಾಕಷ್ಟು ಸಹಾನುಭೂತಿ ಸದಾಕಾಲಕ್ಕೂ ಇದ್ದೇ ಇದ್ದಿತು. ಆದರೆ ಈ ಮಣ್ಣಿನಲ್ಲಿ ರಕ್ತಸಿಂಚಿತ ಕ್ರಾಂತಿಕಾರಿ ಉದ್ದೇಶಗಳು ಬೇರುಬಿಡಲಿಲ್ಲ ಎಂದು ಹೇಳಬಹುದು. ಕಾಂಗ್ರೆಸ್ ಸದಾ ಕಾಲಕ್ಕೂ ಅಹಿಂಸಾತ್ಮಕ ಕ್ರಿಯೆಗಳಲ್ಲಿಯೇ ವಿಶ್ವಾಸ ಹೊಂದಿದ್ದರೂ ತಿಲಕ್, ಅರವಿಂದ, ಲಜಪತರಾಯ್ ಮೊದಲಾದ ಉಗ್ರವಾದಿ ಪ್ರಮುಖರು ಮುಖ್ಯವಾಗಿ ಸಾಮೂಹಿಕ ಕಾರ್ಯಾಚರಣೆಯಲ್ಲಿ ನಂಬಿಕೆ ಇಟ್ಟಿದ್ದರು ಎಂಬ ವಿಷಯಗಳನ್ನು ಗಣನೆಗೆ ತೆಗೆದುಕೊಂಡರೂ ಕಾಂಗೆಸ್ಸಿನ ಧ್ಯೇಯ ಧೋರಣೆಗಳಲ್ಲಿ ಕರ್ನಾಟಕ ಸಂತತವಾದ ಭಕ್ತಿಗೌರವವಿಟ್ಟುಕೊಂಡೇ ಬಂದಿರುತ್ತದೆ.

ಗಾಂಧಿಯವರು ಜೈಲಿನಲ್ಲಿ ಇದ್ದಾಗ, ಡಿಸೆಂಬರ್ 1922ರ ಗಯಾ ಕಾಂಗ್ರೆಸ್ ಅಧಿವೇಶನದಲ್ಲಿ ಕಾಂಗ್ರೆಸ್ಸಿನ ಎರಡು ಪಕ್ಷಗಳಲ್ಲಿ ಹಣಾಹಾಣಿ ಹೋರಾಟವೇ ನಡೆಯಿತು. ಬಹಿಷ್ಕಾರದ ನಾಲ್ಕು ಕಾರ್ಯಕ್ರಮಗಳನ್ನು ಕಟ್ಟುನಿಟ್ಟಾಗಿ ಮುಂದುವರಿಸಿಕೊಂಡು ಬರಬೇಕು ಎಂದು ಒಂದು ಪಕ್ಷವಿದ್ದರೆ, ಸಿ. ಆರ್. ದಾಸರ ಮುಂದಾಳುತನದ ಮತ್ತೊಂದು ಪಕ್ಷವು, ಶಾಸನ ಸಭೆಗಳ ಪ್ರವೇಶದ ವಿರುದ್ಧವಿದ್ದ ನಿಷೇಧ ತೆಗೆಯಬೇಕು ಎಂದು ಹೇಳುತ್ತಿತ್ತು. ಯಥಾಸ್ಥಿತಿಯೇ ಇರಲಿ ಎಂಬ, ಬದಲಾವಣೆ ಬಯಸದ ಪಕ್ಷ ಜಯಗಳಿಸಿತು. ಅಧ್ಯಕ್ಷರಾಗಿದ್ದ ದಾಸರು ರಾಜಿನಾಮೆಯಿತ್ತು, ಕಾಂಗ್ರೆಸ್ಸಿನಿಂದ ಹೊರಗೆ, ಸ್ವರಾಜ್ಯ ಪಕ್ಷ ಸ್ಥಾಪಿಸಿದರು. ರಾಜಾಜಿಯವರ ಸಮರ್ಥನೆ ಪಡೆದಿದ್ದ, ಬದಲಾವಣೆ ಬಯಸದ ಪಕ್ಷವನ್ನೇ ಕರ್ನಾಟಕ ಸಮರ್ಥಿಸಿ ನಿಂತಿತು ಎಂದು ಹೇಳಬೇಕಾದ ಅಗತ್ಯವಿಲ್ಲ. 1924ರಲ್ಲಿ ಬಂಧನ ಮುಕ್ತರಾದ ಗಾಂಧಿಯವರ ಬುದ್ಧಿವಂತಿಕೆ ಮತ್ತು ಹೊಂದಾಣಿಕೆಯ ನಾಯಕತ್ವ ಎರಡು ಪಕ್ಷಗಳನ್ನೂ ಒಂದುಗೂಡಿಸಿ ಉಭಯತ್ರರಲ್ಲೂ ಸಹಕಾರ ಮೂಡುವಂತೆ ಮಾಡಿತು.

1924ರಲ್ಲಿ ಕಾಂಗ್ರೆಸ್ ಅಧಿವೇಶನ ಬೆಳಗಾವಿಯಲ್ಲಿ ಗಾಂಧಿಯವರ ಅಧ್ಯಕ್ಷತೆಯಲ್ಲಿ ನಡೆಯಿತು. ಜೈಲಿನ ಒಳಗೆ ಅಥವಾ ಹೊರಗೆ, ಅವರು ಕಾಂಗ್ರೆಸ್ ಚಳವಳಿಯ ಜೀವಾತ್ಮವಾಗಿದ್ದರು. ಅವರು ಕಾಂಗ್ರೆಸ್ ' ಗಾದಿ ' ಅಥವಾ ಗದ್ದುಗೆಯನ್ನು ಅಲಂಕರಿಸಿದ್ದು ಒಂದೇ ಒಂದು ಬಾರಿಗೆ; ಅದೂ ಕರ್ನಾಟಕದಲ್ಲಿ 1924ರಲ್ಲಿ.

1924ರಲ್ಲಿ ಮಹಾತ್ಮಾಗಾಂಧಿಯವರ ಅಧ್ಯಕ್ಷತೆಯಲ್ಲಿ ಕರ್ನಾಟಕದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನ ರಾಷ್ಟ್ರೀಯ ದೃಷ್ಟಿಯಿಂದ ಅನೇಕ ಮಹತ್ತರ ವಿಷಯಗಳನ್ನು ಸಾಧಿಸಿದ್ದಲ್ಲದೆ, ಕನ್ನಡ ಮಾತನಾಡುವ ಜನರನ್ನು ಗಮನಾರ್ಹವಾದ ರಾಷ್ಟ್ರೀಯ ಪ್ರಯತ್ನದಲ್ಲಿ ಸಂಘಟಿಸಿತು. ಬದಲಾವಣೆ ಬೇಕು, ಬೇಡ ಎಂಬ ಕಾಂಗ್ರೆಸ್ಸಿನ ಎರಡು ಒಳಪಕ್ಷಗಳಲ್ಲಿ ರಾಜಿ ಸಮಾಧಾನ ಏರ್ಪಡಿಸಿದರು. ಶಾಸನಸಭೆಗಳಲ್ಲಿನ ಕಾರ್ಯಗಳಿಂದ ಯಾವ ಪ್ರಯೋಜನವೂ ಆಗದು ಎಂದು ಅವರು ಅಲ್ಲಗಳೆಯುತ್ತಿದ್ದರೂ ಸಿ.ಆರ್. ದಾಸ್ ಮತ್ತು ಅವರ ಗೆಳೆಯರು " ಸ್ವರಾಜ್ಯ ಪಕ್ಷ " ಎಂಬ ಹೆಸರಿನಲ್ಲಿ ತಮ್ಮ ಕಾರ್ಯಕ್ರಮ ಮುಂದುವರಿಸಿಕೊಂಡು ಬರುವ ಅವಕಾಶ ಮಾಡಿಕೊಟ್ಟರು. ನೂಲಿನ ಆಧಾರದ ಸದಸ್ಯತ್ವ ಕಾಂಗ್ರೆಸ್ಸಿನಲ್ಲಿ ಜಾರಿಗೆ ತಂದು ತನ್ನ ಅನುಯಾಯಿಗಳ ಸತ್ವಪರೀಕ್ಷೆ ನಡೆಸಿದರು. ಇದನ್ನು ಮುಂದೆ ಅವರು ಮಾರ್ಪಡಿಸಬೇಕಾಯಿತು. ಖಾದಿ ಹಾಗೂ ಗ್ರಾಮಕೈಗಾರಿಕೆಗಳ ನಾಯಕತ್ವ ಪ್ರತ್ಯಕ್ಷವಾಗಿ ಅವರೇ ವಹಿಸಿಕೊಂಡರಲ್ಲದೆ, ರಚನಾತ್ಮಕ ಕಾರ್ಯಕ್ರಮ ಎಂದು ಒಟ್ಟಾರೆ ಕರೆಯಲ್ಪಡುವ ಅನೇಕ ಚಟುವಟಿಕೆಗಳ ಸಂಘಟನೆ ಕೈಗೊಂಡುದು ಇನ್ನೂ

ಹೆಚ್ಚಿನ ಪ್ರಮುಖ ವಿಷಯ. ಹುಬ್ಬಳ್ಳಿಯ ಡಾಕ್ಟರ್ ನಾ. ಸು. ಹರ್ಡೀಕರ್ ಅವರ ದಕ್ಷ ಅವಿರತ ಸ್ಫೂರ್ತಿದಾಯಕ ನಾಯಕತ್ವದಲ್ಲಿ ಹಿಂದುಸ್ಥಾನಿ ಸೇವಾದಳ ರೂಪಗೊಂಡು ಕ್ರಮಬದ್ಧವಾಗಿ ಉದಯವಾದುದು ಬೆಳಗಾಂ ಕಾಂಗ್ರೆಸ್ಸಿನ ದಾಖಲೆಗಳಲ್ಲಿ ಮತ್ತೊಂದು ಗಮನಾರ್ಹವಾದ ಮೈಲಿಗಲ್ಲು. ಅದು ಕಾಕಿನಾಡ ಅಧಿವೇಶನದಲ್ಲಿ ಕಾಂಗ್ರೆಸ್ಸಿನ ಆಶ್ರಯದಲ್ಲಿ ಮೊದಲೇ ಜನ್ಮತಾಳಿತ್ತು. ಜವಹರಲಾಲರು ಪ್ರಾರಂಭದಿಂದಲೇ ಇದಕ್ಕೆ ಪ್ರೋತ್ಸಾಹ ನೀಡುತ್ತಿದ್ದರು. ಶಿಸ್ತು ಮತ್ತು ಸಂಘಟನೆಯಲ್ಲಿ ಇದು ಬೆಳಗಾವಿಯಲ್ಲಿ ಅತ್ಯಂತ ಮಹತ್ವಪೂರ್ಣ ಪಾತ್ರ ವಹಿಸಿತ್ತು ಮತ್ತು ರಾಷ್ಟ್ರೀಯ ಧ್ವಜವನ್ನು ವಿಧಿವತ್ತಾಗಿ ಏರಿಸುವ ಒಂದು ಹೊಸ ಸಂಪ್ರದಾಯವನ್ನು ಕಾಂಗ್ರೆಸ್ ಸಮಾರಂಭಗಳಲ್ಲಿ ಆಚರಿಸಿಕೊಂಡು ಬರುವಂತೆ ಮಾಡಿತು. ಇದರ ಶಕ್ತಿ ಏಕಪ್ರಕಾರವಾಗಿ ಏರುತ್ತಾ 1931ರಲ್ಲಿ ಕಾಂಗ್ರೆಸ್ ಸಂಸ್ಥೆಯಲ್ಲಿ ವಿಲೀನಗೊಂಡು ಇಂದಿಗೂ ಇದು ಕಾಂಗ್ರೆಸ್ಸಿನ ಅಂಗವಾಗಿ 'ಕಾಂಗ್ರೆಸ್ ಸೇವಾದಳ'ಎಂಬ ಹೆಸರಿನಲ್ಲಿ ಮುಂದುವರಿಯುತ್ತಿದೆ.

ಡಾಕ್ಟರ್ ಹರ್ಡೀಕರ್ ಅವರು ಇಂದಿಗೂ ಸೇವಾದಳಕ್ಕೆ ಮಾರ್ಗದರ್ಶನ ನೀಡುತ್ತಿರುವ ಜೀವಾಳವಾಗಿದ್ದಾರೆ. ಈ ಬಗ್ಗೆ ಅವರ ವಿಷಯದಲ್ಲಿ ಕರ್ಣಾಟಕ ಹೆಮ್ಮೆಪಡಬಹುದಾಗಿದೆ. 1930-34ರ ಸ್ವಾತಂತ್ರ್ಯ ಹೋರಾಟ ಕಠಿಣ ಪ್ರಸಂಗದಲ್ಲಿ ಸೇವಾದಳ ತನ್ನ ಕಾರ್ಯಚಟುವಟಿಕೆಗಳಿಂದಲೂ ಪರಿಣಾಮಕಾರಿ ಕೆಲಸಗಳಿಂದಲೂ ಸೇವಾದಳ ತುಂಬ ಪ್ರಾಮುಖ್ಯಗಳಿಸಿದ್ದುದರಿಂದ, ಅಕ್ರಮಕೂಟವೆಂದು ಸಾರಲ್ಪಟ್ಟಿದ್ದ ಈ ಸಂಸ್ಥೆಯ ಮೇಲಿನ ನಿರ್ಬಂಧ ತೆಗೆದುಹಾಕಲು ಸರ್ಕಾರ ಸಮ್ಮತಿಸಲಿಲ್ಲ. ಕಾಂಗ್ರೆಸ್ಸಿನ ಮೇಲಿದ್ದ ಪ್ರತಿಬಂಧಕವನ್ನು 1934ರಲ್ಲಿ ತೆಗೆದುಹಾಕಿದರೂ ಸೇವಾದಳದ ಮೇಲಿದ್ದ ಪ್ರತಿಬಂಧಕವನ್ನು ತೆಗೆಯಲು ಸರ್ಕಾರ ನಿರಾಕರಿಸಿತು. 1937ರ ವರೆಗೂ ಈ ಪ್ರತಿಬಂಧಕ ಜಾರಿಯಲ್ಲಿತ್ತು.

ರಾಜಕೀಯ ಸ್ವಾತಂತ್ರ್ಯ ಹೋರಾಟದಲ್ಲಿ ಕರ್ಣಾಟಕವು ಗಾಂಧಿಯವರನ್ನು ಎಷ್ಟು ಶ್ರದ್ಧಾಭಕ್ತಿ ಉತ್ಸಾಹಗಳಿಂದ ಹಿಂಬಾಲಿಸುತ್ತಿತ್ತೋ ಅಷ್ಟೇ ಶ್ರದ್ಧಾಭಕ್ತಿ ಉತ್ಸಾಹಗಳಿಂದ ಖಾದಿ ಮತ್ತು ಇತರ ರಚನಾತ್ಮಕ ಕಾರ್ಯಕ್ರಮಗಳಲ್ಲೂ ಅನುಸರಿಸುತ್ತಿತ್ತು. ಚರಖಾ ಸಂಘದ ಕರ್ಣಾಟಕ ಶಾಖೆ ಗಂಗಾಧರರಾವ್ ದೇಶಪಾಂಡೆ ಅವರ ನೇತೃತ್ವದಲ್ಲಿ ವ್ಯವಸ್ಥಿತಗೊಂಡಿತು. ಹನುಮಂತರಾವ್ ಕೌಜಲಗಿ, ಸಿದ್ದೂರಾವ್ ಪೂಜಾರಿ. ಕಾರ್ನಾಡ ಸದಾಶಿವರಾವ್, ಪರಮಣ್ಣ ಹೊಸಮನಿ, ಟಿ. ಎಸ್. ನಾಯಕ್, ಮತ್ತು ಇತರರು ಈ ಕೆಲಸ ವಹಿಸಿಕೊಂಡರು. ದೇಶೀಯ ಸಂಸ್ಥಾನಗಳ ಸರ್ಕಾರಗಳಲ್ಲಿ 'ಮೈಸೂರು ಖಾದಿ ಕೇಂದ್ರ'ವನ್ನು ಸ್ಥಾಪಿಸುವುದರಲ್ಲಿ ಮೈಸೂರು ಸಂಸ್ಥಾನ ಮೊದಲ ಹೆಜ್ಜೆ ಇಟ್ಟಿತು ಎಂಬುದು ಗಮನಾರ್ಹವಾದುದು. ಇದು ಪ್ರಾರಂಭವಾದುದು ಬದನವಾಳ ಎಂಬ ಹಳ್ಳಿಯಲ್ಲಿ. ಈ ಬೆಳವಣಿಗೆಯಿಂದ ಗಾಂಧಿಯವರು ಸಂತುಷ್ಟರಾಗಿ ಜನಪ್ರಿಯ ಮಹಾರಾಜರನ್ನು ಕುರಿತು ಕೆಲವು ಮೆಚ್ಚುಗೆಯ ಮಾತುಗಳನ್ನು ಆಡಿರುತ್ತಾರೆ.

1924-29 ಈ ಅವಧಿಯಲ್ಲಿ ರಚನಾತ್ಮಕ ಕಾರ್ಯಗಳು ಕರ್ಣಾಟಕ ಹಾಗೂ ಭಾರತದ ಆದ್ಯಂತ ತುಂಬ ಭರದಿಂದ ಸಾಗುತ್ತಿದ್ದುವು. ಖಾದಿ ಮತ್ತು ಇತರ ಕಾರ್ಯಕ್ರಮಗಳ ಪರಿಣಾಮವಾಗಿ ಹಳ್ಳಿಯ ಜನರೊಡನೆ ಈ ಅವಧಿಯಲ್ಲಿ ಬೆಳೆಸಿದ ಸಂಪರ್ಕ, 1930 ರಲ್ಲಿ ಅಸಹಕಾರ ಚಳವಳಿ ಪ್ರಾರಂಭವಾದಾಗ ತುಂಬ ಸಹಾಯಕವಾಗಿ ಪರಿಣಮಿಸಿತು. ಗಂಗಾಧರರಾಯರ ಹುದ್ಲಿ, ಹಳ್ಳೀಕೇರಿ ಮತ್ತು ಮಾಗಡಿಯವರ ಹೊಸರಿತ್ತಿ ಆಶ್ರಮ, ನೀಲೇಶ್ವರ, ಅಂಕೋಲ ಮತ್ತು ಕಲಾದಗಿ ಇವೇ ಮೊದಲಾದ ಕೇಂದ್ರಗಳು ಪ್ರಾಮುಖ್ಯವನ್ನು ಗಳಿಸಿದುವು. ನೂರಾರು ಕಾರ್ಯಕರ್ತರು, ಲಕ್ಷಾಂತರ ಗ್ರಾಮೀಣರ ನಡುವೆ ಚರಖದ ನೆರವಿನಿಂದ ಸ್ವರಾಜ್ಯ, ಸ್ವಪರಿಪೂರ್ಣತೆ, ಸರಳಜೀವನ ಈ ಮೊದಲಾದ ಗಾಂಧಿಯವರ ಸಂದೇಶ ಹೊತ್ತು ಅಡ್ಡಾಡಿದರು. ಜನಜಾಗೃತಿ ಮತ್ತು ಸ್ವರಾಜ್ಯದ ಹಸಿವು ಅಪಾಯ ಸ್ಥಿತಿಯಲ್ಲಿದೆ ಎಂಬ ಅರಿವು ಆಗುತ್ತಲೇ, ಜನತೆಯಲ್ಲಿ ಕೆಲಸ ಮಾಡಬೇಕಾದುದರ ಪ್ರಮುಖತೆ ಮನವರಿಕೆಯಾಯಿತು.

ಭೂವರಮಾನ ಪುನರ್ವಿಮರ್ಶನದ ಕಾಲದಲ್ಲಿ ಭೂಕಂದಾಯವನ್ನು ಅತಿಯಾಗಿ ಅಧಿಕಗೊಳಿಸಲಾಗಿದೆ ಎಂಬ ಆರ್ಥಿಕ ಕಾರಣಕ್ಕಾಗಿ 1928 ರಲ್ಲಿ ಬರ್ದೋಲಿಯಲ್ಲಿ ಯಶಸ್ವಿಯಾಗಿ ನಡೆದ ಕರನಿರಾಕರಣೆಯ ಆಂದೋಳನ ಜನತೆ ಹಾಗೂ ಸರ್ಕಾರ ಉಭಯತ್ರರಿಗೂ ವಿನೂತನ ಪ್ರಯೋಗವಾಗಿತ್ತು. ಮುಖಂಡರಾದ ವಲ್ಲಭಭಾಯಿ, ನಾರಿಮನ್ ಮತ್ತು ಇತರರು, ಜನತೆಯ ನಡುವೆ ಕೈಗೊಂಡು ನಡೆಸುವ ರಚನಾತ್ಮಕ ಕಾರ್ಯಕ್ರಮ ಮತ್ತು ಗಾಂಧೀ ಪ್ರಣೀತ ತಾಂತ್ರಿಕ ಸಾಧನಗಳಿಂದ ಮಾತ್ರವೇ ನಾಯಕ ಮತ್ತು ಅವರ ಹಿಂಬಾಲಕರ ನಡುವೆ ಏಕಭಾವನೆ ಮತ್ತು ಸೌಹಾರ್ದ ನೆಲಸುವಂತೆ ಮಾಡಲು ಸಾಧ್ಯ ಎಂದು ಗ್ರಹಿಸಿದರು. ಮನಸ್ಸು ಮಾಡಿದರೆ ಸರ್ಕಾರದ ವಿರುದ್ಧ ಹೋರಾಟ ನಡೆಸುವ ಶಕ್ತಿ ತಮ್ಮಲ್ಲಿ ಇದೆ, ಮಾಡಬಹುದು; ಆದರೆ ಸತ್ಯ ನಮ್ಮಕಡೆ ಇರಬೇಕು ಮತ್ತು ಹೋರಾಟ ಅಹಿಂಸಾತ್ಮಕವಾಗಿ ನಡೆಯಬೇಕು ಎಂದು ಜನತೆ ಗ್ರಹಿಸಿತು. ದಬ್ಬಾಳಿಕೆಯ ಅಸ್ತ್ರಗಳು ಎಷ್ಟೇ ಕ್ರೂರವಾಗಿರಲಿ, ಅನ್ಯದೃಷ್ಟಿಗಳಿಂದ ಅದು ತುಂಬ ಯಶಸ್ವಿ ಎನಿಸಿದರೂ ಏನೇ ಕಷ್ಟ ಸಂಕಟಗಳು ಬರಲಿ, ಅವುಗಳನ್ನು ಸಹಿಸಲು ಮತ್ತು ಮಣಿಯದಿರಲು ದೃಢ ಸಂಕಲ್ಪ ಮಾಡಿರುವ ಜನತೆಯ ಮುಂದೆ ಅವು ನಿರುಪಯೋಗಿ ಎಂದು ಸರ್ಕಾರ ಮನಗಂಡಿತು. ಬಾರ್ದೋಲಿಯ ಜಯಭೇರಿಯ ಸಂದೇಶ ಭಾರತದ ಹಳ್ಳಿ ಹಳ್ಳಿಗಳಲ್ಲೂ ವ್ಯಾಪಿಸಿಕೊಂಡಿತು. ಕರ್ನಾಟಕವೂ ಇದರಿಂದ ಪಾಠಕಲಿತು, ಮುಂದೆ 1930-34 ರಲ್ಲಿ ಹಿರೆಕೆರೂರು ಮತ್ತು ಉತ್ತರ ಕನ್ನಡ ಕರನಿರಾಕರಣೆಯ ಚಳವಳಿಯನ್ನು ಕೈಗೊಂಡಿತು.

ಇತ್ತ ಶಾಸನಬದ್ಧ ಕಾರ್ಯಕ್ಷೇತ್ರದಲ್ಲಿ ಶಾಸನ ಸಭೆಗಳ ಕಾಂಗ್ರೆಸ್ ಸದಸ್ಯರು ಮುಸ್ಲಿಮ್‌ಲೀಗ್ ಮತ್ತು ಇತರ ಪಕ್ಷಗಳ ಶಕ್ತಿಗಳನ್ನು ಒಂದುಗೂಡಿಸಿ, ಒಕ್ಕೊರಲಿನಿಂದ ಸ್ವರಾಜ್ಯದ ಕೂಗನ್ನು ಬಲಪಡಿಸಲು ಪ್ರಯತ್ನಿಸುತ್ತಿದ್ದರು. ಸ್ವತಂತ್ರ ಭಾರತದ ಸಂವಿಧಾನವನ್ನು ರೂಪಿಸಿ ಸರ್ಕಾರದ ಅಂಗೀಕಾರಕ್ಕೆ ಒಪ್ಪಿಸಲು, ಸರ್ವ ಪಕ್ಷಗಳ ಸಮ್ಮೇಳನವು ಮೋತಿಲಾಲ್ ನೆಹರು ಅವರ ಅಧ್ಯಕ್ಷತೆಯಲ್ಲಿ ಒಂದು ಉಪ ಸಮಿತಿಯನ್ನು ನೇಮಿಸಿತು. ಕರ್ನಾಟಕ ಪ್ರಾಂತ ಕಾಂಗ್ರೆಸ್ ಸಮಿತಿಯು ಕರ್ನಾಟಕ ಏಕೀಕರಣ ಸಮಿತಿಯೊಂದಿಗೆ ಒಂದು ' ಮೆಮೊರಾಂಡಂ ' ಅಥವಾ ಕರಡು ಘಟನೆ ಸಿದ್ಧಗೊಳಿಸಿ ನೆಹರು ಸಮಿತಿಗೆ 1928ರಲ್ಲಿ ಒಪ್ಪಿಸಿತು. ಅಲಹಾಬಾದಿನಲ್ಲಿ ನೆರೆದ ನೆಹರು ಉಪಸಮಿತಿಯು ತನ್ನ ಮುಂದೆ ಒಪ್ಪಿಸಿದ ರೀತಿಯನ್ನು ಮೆಚ್ಚಿಕೊಂಡಿದ್ದು ಮಾತ್ರವಲ್ಲದೆ, ದೇಶೀಯ ಸಂಸ್ಥಾನಗಳಲ್ಲಿ ಅಂದಿನ ಕಾಲಕ್ಕೆ ಸೇರಿಹೋಗಿದ್ದ ಕನ್ನಡದ ಭಾಗಗಳನ್ನು ಬಿಟ್ಟು ಸಹ, ಇತರ ಕನ್ನಡದ ಭಾಗಗಳನ್ನು ಒಂದುಗೂಡಿಸಿ, ಸಂಯುಕ್ತ ಕರ್ನಾಟಕ ಪ್ರಾಂತ ರಚಿಸಬಹುದು ಎಂದು ಖಚಿತಪಡಿಸಿದೆ ಎಂದೂ ತನ್ನ ವರದಿಯಲ್ಲಿ ಅಂಗೀಕರಿಸಿತು. ಅನಂತರ ಲಕ್ನೋದಲ್ಲಿ ನಡೆದ ಅಖಿಲ ಭಾರತ ಸರ್ವ ಪಕ್ಷೀಯ ಸಮ್ಮೇಳನದಲ್ಲಿ ಆಂಧ್ರ ಮತ್ತು ಕರ್ನಾಟಕ ಉಭಯತ್ರರೂ ಭಾಷಾನುಗುಣ ಪ್ರಾಂತಗಳನ್ನು ರಚಿಸಲು ಸಾಕಷ್ಟು ಆಧಾರಗಳಿವೆ ಎಂದು ತಮ್ಮ ವಾದವನ್ನು ಸಾಮರ್ಥ್ಯದಿಂದ ಮಂಡಿಸಿ, ಈ ವಾದದಲ್ಲಿ ಹುರುಳಿದೆ ಎಂದು ಅಧ್ಯಕ್ಷರಾದ ಮೋತೀಲಾಲ್ ನೆಹರು ಒಪ್ಪಿಕೊಳ್ಳುವಂತೆ ಮಾಡಿದರು.

ಲಾಹೋರಿನಲ್ಲಿ 1929ರಲ್ಲಿ ಜವಹರಲಾಲ್ ನೆಹರೂ ಅವರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ ಅಧಿವೇಶನ ನಡೆಯಿತು. ಕರ್ನಾಟಕದ ಪ್ರತಿನಿಧಿಗಳು ಅವರಿಗೆ ಹೃತ್ಪೂರ್ವಕವಾದ ಬೆಂಬಲ ನೀಡಿದರು ಎಂದು ಹೇಳುವುದು ಅನಗತ್ಯ.

ಬ್ರಿಟಿಷ್ ಚಕ್ರಾಧಿಪತ್ಯದ ಸೀಮಿತದಲ್ಲಿ ಸ್ವರಾಜ್ಯ ಕೊಡಿ ಎಂಬ ಬೇಡಿಕೆಯನ್ನು ಸರ್ಕಾರ ತಿರಸ್ಕರಿಸಿದುದರಿಂದ ಪೂರ್ಣಸ್ವರಾಜ್ಯವೇ ತನ್ನ ಗುರಿ ಎಂದು ಕಾಂಗ್ರೆಸ್ ಸಾರಿತು. ಮುಂದೆ ಸಹಜವಾಗಿ ಅನಿರ್ಬಂಧಿತ ಸ್ವರಾಜ್ಯ ಗಳಿಸಲು ಸಂಪೂರ್ಣ ಅಸಹಕಾರ ಚಳವಳಿ 1930ರಲ್ಲಿ ಕೈಗೊಳ್ಳುವುದು

ಅನಿವಾರ್ಯವಾಯಿತು. ಈ ಹೋರಾಟವು ಗಾಂಧಿಯವರ ದಾಂಡಿ ಜೈತ್ರಯಾತ್ರೆಯಿಂದ ಪ್ರಾರಂಭವಾಗಿ 6-4-1930ರಲ್ಲಿ ಮುಕ್ತಾಯಗೊಳಿಸುವ ತನಕ ನಡೆಯಿತು. 1934ರಲ್ಲಿ ಅಸಹಕಾರ ಆಂದೋಳನವನ್ನು ಹಿಂತೆಗೆದುಕೊಂಡು ಅದನ್ನು ಕೊನೆಗಾಣಿಸಿದರು. ಮಾರ್ಚಿ 1931 ರಲ್ಲಿ ಗಾಂಧಿ ಇರ್ವಿನ್ ಒಪ್ಪಂದ ವಾಯಿತು. ದುಂಡು ಮೇಜಿನ ಪರಿಷತ್ತಿನಲ್ಲಿ ಭಾಗವಹಿಸಲು ಗಾಂಧಿಯವರು ಲಂಡನ್ನಿಗೆ ತೆರಳಿದರು.

ಅಸಹಕಾರ ಆಂದೋಳನ 1933ರಲ್ಲಿ ಕುಂದುತ್ತಾ ಬಂದರೂ, ಅತಿಮುಖ್ಯವಾದ ಘಟನೆಯೊಂದು ನಡೆಯಿತು. ಇದೇ ಜಾತೀಯ ಪ್ರಶ್ನೆಯ ತೀರ್ಪು. ಭಾರತದ ಹೊಸ ರಾಜ್ಯಾಂಗದಲ್ಲಿ ಅಸ್ಪೃಶ್ಯರಿಗೆ ಪ್ರತ್ಯೇಕ ಚುನಾವಣಾ ಪದ್ಧತಿ ಕಲ್ಪಿಸಿಕೊಟ್ಟಿರುವುದಾಗಿ ಇಂಗ್ಲೆಂಡಿನ ಪ್ರಧಾನಿ ಘೋಷಿಸಿದರು. ಹಿಂದೂ ಸಮಾಜದಲ್ಲಿ ಖಾಯಂ ಆಗಿ ಇದು ಒಂದು ಬಿಣೆಯನ್ನು ಹೊಡೆಯಲಿದೆ ಎಂದು ಗಾಂಧಿಯವರು ಗ್ರಹಿಸಿದರು. ಜೈಲಿನಲ್ಲಿ ಇದ್ದಾಗಲೇ ತನ್ನ ಜೀವವನ್ನು ಪಣವಾಗಿ ಒಡ್ಡಿ ಉಪವಾಸ ಕೈಗೊಂಡರು. ಇದರ ಪರಿಣಾಮವಾಗಿ ಸಮಗ್ರ ಹಿಂದುಗಳಿಗೂ ಅನ್ವಯಿಸುವ ಜಂಟಿ ಚುನಾವಣಾ ಪದ್ಧತಿ ಅಂಗೀಕೃತವಾಗಿ 'ಯರವಾಡ ಒಪ್ಪಂದ' ಜಾರಿಗೆ ಬಂದುದರಿಂದ ಗಾಂಧಿಯವರು ತಮ್ಮ ನಿರಶನವ್ರತ ಮುಕ್ತಾಯ ಗೊಳಿಸಿದರು. ಗಾಂಧಿ ಅಖಿಲ ಭಾರತ ಪ್ರವಾಸ ಕೈಗೊಂಡರು. ಕರ್ನಾಟಕವು ಆಗ ಅಸ್ಪೃಶ್ಯತೆಯನ್ನು ತೊಡೆದು ಹಾಕುವ ಪಣ ತೊಟ್ಟಿದ್ದು ಮಾತ್ರವಲ್ಲದೆ, ಉದಾರ ಧನಸಹಾಯವನ್ನು ಕೊಡುವ ಮೂಲಕ ಭವ್ಯ ಸಹಕಾರ ನೀಡಿತು. ವೀರನಗೌಡ ಪಾಟೀಲ್ ಮೊದಲಾದ ಪ್ರಮುಖರ ನೇತೃತ್ವದಲ್ಲಿ ಹರಿಜನ ಸೇವಕ ಸಂಘ ರೂಪಗೊಂಡಿತು. ಕರ್ನಾಟಕದ ಶಾಖೆ, ಅಖಿಲ ಭಾರತ ಸಂಘ ಅನುಸರಿಸುತ್ತಿರುವ ದಾರಿಯನ್ನೇ ಹಿಡಿದು ಅದೇ ರೀತಿಯಲ್ಲಿ ಇಂದಿಗೂ ಕೆಲಸ ಮಾಡುತ್ತಿದೆ.

1934 ರಲ್ಲಿ ಪಾಟ್ನಾದಲ್ಲಿ ನಡೆದ ಅಖಿಲಭಾರತ ಕಾಂಗ್ರೆಸ್ ಸಮಿತಿ ಅಸಹಕಾರ ಚಳವಳಿಯನ್ನು ಕ್ರಮಬದ್ಧವಾಗಿ ನಿರ್ಣಯದ ಮೂಲಕ ಹಿಂದೆಗೆದುಕೊಂಡಿತು. ಜೀವಂತ ಸ್ಮರಣೆಯ ಅವಧಿಯಲ್ಲಿ ಹಿಂದೆ ಎಂದೂ ಕಂಡರಿಯದಂಥ ಅತಿಭಯಂಕರ ಭೂಕಂಪ ಆ ವರ್ಷ ಬಿಹಾರದಲ್ಲಿ ಸಂಭವಿಸಿ ಅದು ಇಡೀ ಭಾರತವನ್ನೇ ಅಲುಗಾಡಿಸಿಬಿಟ್ಟಿತು. ಡಾಕ್ಟರ್ ಹರ್ಡೀಕರ್ ಅವರು ಕರ್ನಾಟಕದಿಂದ ಐವತ್ತು ಸ್ವಯಂ ಸೇವಕರನ್ನು ಬಿಹಾರಿಗೆ ಜನಸೇವೆಗಾಗಿ ಕೂಡಲೇ ಕಳುಹಿಸಿಕೊಟ್ಟರು. ಅವರಿಂದ ಕಳುಹಿಸಿ ಕೊಡಲ್ಪಟ್ಟ ಸ್ವಯಂಸೇವಕರ ವ್ಯವಸ್ಥಿತ, ಸುಸಂಘಟಿತ, ಪರಿಣಾಮಕಾರಿಯಾದ ಕೆಲಸವು ಪರಿಹಾರಕಾರ್ಯದಲ್ಲಿ ಮಾರ್ಗ ದರ್ಶನ ನೀಡುತ್ತಿದ್ದ ರಾಜೇಂದ್ರ ಪ್ರಸಾದರ ಗಮನ ಸೆಳೆಯಿತು.

ಅಕ್ಟೋಬರ್ 1934ರಲ್ಲಿ ಬೊಂಬಾಯಿಯಲ್ಲಿ ನೆರೆದ ಕಾಂಗ್ರೆಸ್ ಅಧಿವೇಶನವು ರಾಜೇಂದ್ರ ಪ್ರಸಾದರ ಸಲಹೆಯಂತೆ ರಚನಾತ್ಮಕ ಕಾರ್ಯಕ್ರಮಕ್ಕೆ ಪ್ರಾಧಾನ್ಯ ಕೊಟ್ಟು, 1935 ನೆಯ ಇಂಡಿಯಾ ಸರಕಾರ ಶಾಸನದಂತೆ ಬರಲಿದ್ದ ರಾಜಕೀಯ ಸುಧಾರಣೆಗೆ ಕಾದು ಕುಳಿತಿತು. 1935 ರಿಂದ 1939 ರ ಅವಧಿಯಲ್ಲಿ ಇತರ ಪ್ರಾಂತಗಳಂತೆ ಕರ್ನಾಟಕವೂ ಒಂದೆಡೆ ಶಾಸನ ಸಭೆಗಳ ಚುನಾವಣೆಯಲ್ಲೂ ಮತ್ತೊಂದೆಡೆ ನಿರ್ಮಾಣ ಕಾರ್ಯಕ್ರಮದಲ್ಲೂ ಆಸಕ್ತಿ ವಹಿಸಿದ್ದಿತು. ಈ ಎರಡು ಕಾರ್ಯಕ್ಷೇತ್ರಗಳಲ್ಲೂ ಕರ್ನಾಟಕ ಶ್ಲಾಘನೀಯ ಕೆಲಸ ಮಾಡಿತು. ಕರ್ನಾಟಕದಲ್ಲಿ ಸಾರ್ವತ್ರಿಕ ಚುನಾವಣೆಗಳಲ್ಲಿ ಕಾಂಗ್ರೆಸ್ ಹುರಿಯಾಳುಗಳ ವಿರುದ್ಧ ಪೈಪೋಟಿ ನಡೆಸುವಷ್ಟು ವ್ಯವಸ್ಥಿತವಾದ ಹೆಸರು ಹೇಳಿಸಿಕೊಳ್ಳುವಂಥ ಮತ್ತೊಂದು ಪಕ್ಷ ಇರಲಿಲ್ಲ. ಚುನಾವಣೆಗಳಲ್ಲಿ ಜಯ ಗಳಿಸಿದ ಪರಿಣಾಮವಾಗಿ ಏಳು ಪ್ರಾಂತಗಳಲ್ಲಿ ಕಾಂಗ್ರೆಸ್ ಅಧಿಕಾರ ಸ್ವೀಕರಿಸಿ ಮಂತ್ರಿ ಸಂಪುಟ ರಚಿಸಿತು. ಬೆಳಗಾವಿಯ ಎಂ. ಪಿ. ಪಾಟೀಲರು ಬೊಂಬಾಯಿ ಸರ್ಕಾರದ ಮಂತ್ರಿ ಸಂಪುಟದಲ್ಲೂ ಡಾಕ್ಟರ್ ಎ.ಬಿ. ಶೆಟ್ಟಿ ಅವರು ಮದ್ರಾಸ್ ಸಂಪುಟದಲ್ಲೂ ಸಚಿವರಾಗಿದ್ದರು. ಆದರೆ 1939 ರಲ್ಲಿ, ಬ್ರಿಟಿಷ್ ಸರ್ಕಾರ ಜರ್ಮನಿಯ ವಿರುದ್ಧ ಯುದ್ಧ

ಘೋಷಿಸಿದಾಗ, ಭಾರತದ ಜನತಾ ಮಂತ್ರಿಸಂಪುಟಗಳ ಅಭಿಪ್ರಾಯವನ್ನರಿತುಕೊಳ್ಳಲು ಪ್ರಯತ್ನಿಸದೆ, ಭಾರತವೂ ಜರ್ಮನಿಯ ವಿರುದ್ಧ ಯುದ್ಧ ಘೋಷಿಸಿರುವುದಾಗಿ ಸಾರಿತು. ಕಾಂಗ್ರೆಸ್ ಮಂತ್ರಿಗಳು ರಾಜೀನಾಮೆ ಇತ್ತರು. ಕಾಂಗ್ರೆಸ್ಸಿಗೆ ಮತ್ತೆ ವನವಾಸ ಲಭಿಸಿತು. ಭಾರತದ ಸಮ್ಮತಿ ಇಲ್ಲದೆ ದೇಶವನ್ನು ಯುದ್ಧಕ್ಕೆ ದೂಡಿದ ಸರ್ಕಾರದ ಕ್ರಮವನ್ನು ಪ್ರತಿಭಟಿಸಲು, ಸ್ವಾತಂತ್ರ್ಯ ಹೋರಾಟದ ಸೋಪಾನದಲ್ಲಿ ಮತ್ತೊಂದು ಹೆಜ್ಜೆಯಿಟ್ಟು, ಗಾಂಧಿಯವರು ವ್ಯಕ್ತಿ ಸತ್ಯಾಗ್ರಹದ ಚಳವಳಿ ಕೈಗೊಂಡರು. 1940ರಲ್ಲಿ ಉಪಕ್ರಮವಾದ ಈ ಸತ್ಯಾಗ್ರಹದಲ್ಲಿ ಡಾಕ್ಟರ್ ನಾಗನಗೌಡ ಇವರ ನೇತೃತ್ವದಲ್ಲಿ ಕರ್ನಾಟಕ ತನ್ನ ಹೃತ್ಪೂರ್ವಕ ಸಂಪೂರ್ಣ ಸಹಕಾರ ನೀಡಿತು. ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಉಪಾಧ್ಯಕ್ಷಳಾದ ಶ್ರೀಮತಿ ಕೃಷ್ಣಾಬಾಯಿ ಪಂಜೀಕರ್, ಸತ್ಯಾಗ್ರಹದಲ್ಲಿ ಭಾಗವಹಿಸಲು ಸಿದ್ಧರಾಗಿದ್ದ ಇನ್ನೂರಕ್ಕೂ ಹೆಚ್ಚಿನ ಪ್ರಮುಖ ಕಾಂಗ್ರೆಸ್ಸಿಗರ ಪ್ರಥಮಪಟ್ಟಿಯನ್ನು ಸೇವಾಗ್ರಾಮದಲ್ಲಿದ್ದ ಗಾಂಧಿಯವರ ಒಪ್ಪಿಗೆಗಾಗಿ ಅವರ ಮುಂದಿಟ್ಟರು. ಈ ಪ್ರತಿಕ್ರಿಯೆ ನೋಡಿ ಅವರು ಸಂತೋಷಪಟ್ಟರು.

ವಿಶ್ವಯುದ್ಧದ ಪರಿಸ್ಥಿತಿ ದಿನದಿನಕ್ಕೂ ಉಲ್ಬಣಿಸುತ್ತಾ ಬರುತ್ತಿತ್ತು. ಜಪಾನೀಯರು ಭಾರತದ ಈಶಾನ್ಯ ದಿಕ್ಕಿನ ದ್ವಾರದ ಬಳಿಯಲ್ಲಿ ಬಂದಿದ್ದರು. ಕಾಂಗ್ರೆಸ್ ಪ್ರಮುಖರು ಈ ಸನ್ನಿವೇಶದಲ್ಲಿ ಏನು ಮಾಡಬೇಕೆಂದು ಅರಿಯದೆ ದಿಗ್ಭ್ರಾಂತರಾಗಿದ್ದರು. ಬ್ರಿಟಿಷ್ ಸರ್ಕಾರದ ಯುದ್ಧ ನೆರವಿನ ಕಾರ್ಯಕ್ರಮ ಗಳಲ್ಲಿ ಭಾಗವಹಿಸದೆ, ಅಸಹಕಾರ ಮುಂದುವರಿಸಿಕೊಂಡು ಬಂದರೆ, ಜಪಾನೀಯರ ಆಡಳಿತಕ್ಕೆ ಒಪ್ಪಿಗೆ ಕೊಟ್ಟಂತೆಯೇ ಆದೀತು. ಇದು ನಾಯಕರ ಅಭಿಪ್ರಾಯವಾಗಿತ್ತು ; ಆದರೆ ಗಾಂಧಿಯವರ ಅಭಿಮತ ಭಿನ್ನವಾಗಿತ್ತು. ಕಡೆಗೆ 1942ರಲ್ಲಿ 'ಭಾರತದಿಂದ ತೊಲಗಿ' ಎಂದು ಹೆಸರು ಗಳಿಸಿರುವ ಸಾಹಸಮಯ ಕಾರ್ಯಕ್ರಮವನ್ನು ಅವರು ದೇಶದ ಮುಂದೆ ಇಟ್ಟರು. ಈ ಕಾರ್ಯಕ್ರಮದಲ್ಲಿ ತರ್ಕಕ್ಕಿಂತ, ಅಂತರ್ವಾಣಿ ಯಿಂದ ಅವರು ಹೆಚ್ಚು ಪ್ರೇರಣೆ ಪಡೆದಿದ್ದರು. ಪ್ರಮುಖರು ತನ್ನಕಡೆ ಇಲ್ಲದಿದ್ದರೂ ಜನತೆಯ ಬೆಂಬಲ ತನಗಿದೆ ಎಂದು ಅವರು ಅರಿತಿದ್ದರು. ನಾಯಕರು ಅವರು ಹೆಜ್ಜೆಯಿಟ್ಟ ದಾರಿಯಲ್ಲೇ ನಡೆಯ ಬೇಕಾಯಿತು. 8–8–42ರಲ್ಲಿ 'ಮಾಡು ಅಥವಾ ಮಡಿ' ಚಳವಳಿ ಉಪಕ್ರಮವಾಯಿತು. ಅವರು ಬಂಧಿತರಾಗದೆ ಜೈಲಿನ ಹೊರಗೇ ಉಳಿದಿದ್ದರೆ, ಚಳವಳಿಯನ್ನು ಯಾವ ರೀತಿಯಲ್ಲಿ ನಡೆಸಿಕೊಂಡು ಬರುತ್ತಿದ್ದರು ಎಂಬುದು ಕಲ್ಪನಾ ಪ್ರಪಂಚಕ್ಕೆ ಸೇರಿದ್ದು. ಆದರೆ ಸರ್ಕಾರ ಹಠಾತ್ತನೆ ಎಲ್ಲ ಪ್ರಮುಖ ಮುಖಂಡರ ಮೇಲೂ ಎರಗಿ ಬಂಧಿಸಿ, ಹೆಚ್ಚು ಕಡಮೆ ಕಾಂಗ್ರೆಸ್ ವಿರುದ್ಧ ಯುದ್ಧವನ್ನೇ ಘೋಷಿಸಿ, ಅತ್ಯಂತ ಕ್ರೂರ ದಬ್ಬಾಳಿಕೆ ಪ್ರಾರಂಭಿಸಿತು.

ಈ ಪರಿಸ್ಥಿತಿಯಲ್ಲಿ ಬ್ರಿಟಿಷ್ ಸರ್ಕಾರ ಭಾರತ ರಾಜಕೀಯ ಭವಿಷ್ಯದ ಕುರಿತು ಗಾಢ ಚಿಂತನೆ ಮಾಡುತ್ತಿತ್ತು. 1945ರಲ್ಲಿ ನಡೆದ ಕೇಂದ್ರ ಶಾಸನ ಸಭೆಯ ಚುನಾವಣೆಗಳು, ಜನತೆಯ ಹೃದಯದ ಮೇಲೆ ಕಾಂಗ್ರೆಸ್ಸಿಗೆ ಬಲವಾದ ಹಿಡಿತವಿದೆ ಎಂದು ಖಚಿತಮಾಡಿಕೊಂಡಿದ್ದುವು. ಮುಂದೆ 1945–47 ಈ ಎರಡು ವರ್ಷಗಳ ಅಂತರದಲ್ಲಿ ಸ್ವರಾಜ್ಯದ ಬಗ್ಗೆ ನಡೆದ ಸಂಧಾನ ಮತ್ತು ಭಾರತವನ್ನು ಇಬ್ಭಾಗವಾಗಿ ಸೀಳಿದ ದುರಂತ–ಇವನ್ನು ಇಲ್ಲಿ ಪುನರುಚ್ಚರಿಸಬೇಕಾದ್ದು ಅನವಶ್ಯ. 1947ರಲ್ಲಿ ಸ್ವಾತಂತ್ರ್ಯ ಪ್ರಾಪ್ತವಾದನಂತರ ಕರ್ನಾಟಕವನ್ನು ಒಂದೇ ಆಡಳಿತಕ್ಕೆ ಹೇಗೆ ತರುವುದು ಎಂಬುದೇ ಕರ್ನಾಟಕವನ್ನು ಬಾಧಿಸುತ್ತಿದ್ದ ದೊಡ್ಡ ಸಮಸ್ಯೆಯಾಗಿತ್ತು. ಫಜಲ್ ಆಲಿ ಅವರ ಅಧ್ಯಕ್ಷತೆಯಲ್ಲಿ ರಚಿತವಾದ ರಾಜ್ಯಗಳ ಮರುವಿಂಗಡಣೆಯ ಆಯೋಗದ ಶಿಫಾರಸುಗಳನ್ನು ಜಾರಿಗೆ ತಂದ ತರುವಾಯವೇ ಈ ಉದ್ದೇಶ ಈಡೇರಿತು. ನವೆಂಬರ್ 1, 1956ರಲ್ಲಿ ಕರ್ನಾಟಕ ಒಂದೇ ಆಡಳಿತಕ್ಕೆ ಒಳಗಾಗಿ ಅಸ್ತಿತ್ವಕ್ಕೆ ಬಂತು ಎಂದು ಹೇಳಬಹುದು. ಆದರೆ ಮೈಸೂರು ಪ್ರತಿನಿಧಿಗಳ ಒತ್ತಾಯದಂತೆ ಹೊಸ ರಾಜ್ಯವು, ಮೈಸೂರು ರಾಜ್ಯ ಎಂದರೆ **ಕರ್ನಾಟಕ** ಎಂದು ಹೆಸರು ಪಡೆಯಿತು. ಪರಂಪರಾಗತವಾಗಿ ಬಂದಿರುವ ಅದರ

ಸಂಪದ್ಯುಕ್ತವಾದ ಸಂಸ್ಕೃತಿ, ಅಪಾರವೂ ವೈವಿಧ್ಯಪೂರ್ಣವೂ ಆದ ಅದರ ನೈಸರ್ಗಿಕ ಸಂಪತ್ತು, ವೀರ್ಯವತ್ತಾದ ಜನ ಸಾಮರ್ಥ್ಯ, ಸ್ವಾತಂತ್ರ್ಯದ ಹೋರಾಟ ಕಾಲದಲ್ಲಿ ವ್ಯಕ್ತಪಟ್ಟ ನಿಃಸ್ವಾರ್ಥ ಸೇವೆ, ತ್ಯಾಗ ಮತ್ತು ಅದೇ ದೃಷ್ಟಿ ವೈಶಾಲ್ಯ—ಇವು ಮುಂದೆಯೂ ಈ ನೂತನ ರಾಜ್ಯದ ಸ್ತ್ರೀ ಪುರುಷರಿಗೆ ದಾರಿದೀಪವಾಗಿ ಹುರಿದುಂಬಿಸುತ್ತಾ ಬಂದರೆ, ಕರ್ನಾಟಕವು ಸರ್ವತೋಮುಖವಾದ ಅಭಿವೃದ್ಧಿಯ ದಾರಿ ಹಿಡಿಯುವುದರಲ್ಲಿ ಯಾವ ಸಂದೇಹವೂ ಇರಲಾರದು.

ಮೂಲ ಲೇಖಕರು : ಶ್ರೀ ಆರ್. ಆರ್. ದಿವಾಕರ್
ಅನುವಾದಕರು : ಶ್ರೀ ವಿ. ಎಸ್. ನಾರಾಯಣರಾವ್

# ಕಾಂಗ್ರೆಸ್ ಮತ್ತು ಕರ್ನಾಟಕದ ದೇಶೀಯ ಸಂಸ್ಥಾನಗಳು

ಕಾಂಗ್ರೆಸ್ ಚಳವಳಿ ಮತ್ತು ಅದರಿಂದ ಉದ್ರಿಕ್ತವಾಗಿ ಬ್ರಿಟಿಷ್ ಪ್ರಭುತ್ವದ ವಿರುದ್ಧ ತಲೆಯೆತ್ತಿದ ಬಂಡಾಯದ ಕಿಚ್ಚು ಸಹಜವಾಗಿ ನೇರವಾಗಿ ಬ್ರಿಟಿಷ್ ಆಡಳಿತದಲ್ಲಿದ್ದ ಭಾಗಗಳಲ್ಲಿ ಜ್ವಲಂತವಾಗಿ ಹಬ್ಬಿ ಹರಡತೊಡಗಿತು. ಕರ್ನಾಟಕದ ಅರ್ಧಕ್ಕೂ ಹೆಚ್ಚು ಪ್ರದೇಶ ದೇಶೀಯ ರಾಜರ ಅಧೀನದಲ್ಲಿ ಇದ್ದಿತು. ಇಡೀ ಕರ್ನಾಟಕದ ಅರ್ಧಕ್ಕಿಂತ ಎಲ್ಲಿಯೋ ಸ್ವಲ್ಪ ಕಡಮೆಯಾಗಬಹುದಾದ ಪ್ರದೇಶ ಮೈಸೂರು ಸಂಸ್ಥಾನವಾಗಿತ್ತು. ಹೈದರಾಬಾದ ಸಂಸ್ಥಾನದಲ್ಲಿ ಮೂರು ಕನ್ನಡ ಜಿಲ್ಲೆಗಳಿದ್ದವು. ಇವಲ್ಲದೆ ಸಂಡೂರು, ಸವಣೂರು, ರಾಮದುರ್ಗ, ಜಮಖಂಡಿ, ಮುಧೋಳ, ಅಕ್ಕಲಕೋಟೆ—ಮೊದಲಾದ ಒಂದು ದರ್ಜನಿಗಿಂತಲೂ ಅಧಿಕವಾದ ಸಂಸ್ಥಾನಗಳಿದವು; ಇವನ್ನು ಆಳುತ್ತಿದ್ದ ಅರಸರಲ್ಲಿ ಕನ್ನಡ ಮಾತು ಬಾರದವರೇ ಹೆಚ್ಚು. ಇವೆಲ್ಲವೂ ಚಾರಿತ್ರಿಕವಾದ ಆಕಸ್ಮಿಕ ಕಾರಣಗಳಿಂದ ತಲೆಯೆತ್ತಿಕೊಂಡ ಪುಟ್ಟ ಪ್ರಭುತ್ವಗಳು. ಕೊಡಗು ನೇರವಾಗಿ ಕೇಂದ್ರಾಡಳಿತದ ಅಧೀನಕ್ಕೆ ಒಳಪಟ್ಟು ತನ್ನದೇ ಆದ ಪ್ರಜಾಪ್ರಭುತ್ವೇತರ ರಾಜಕೀಯ ವ್ಯವಸ್ಥೆಯನ್ನು ಹೊಂದಿದ್ದಿತು.

ಪ್ರತ್ಯೇಕ ಪ್ರಭುತ್ವಗಳ ಅಧೀನವಾಗಿದ್ದ ಈ ದೇಶೀ ಸಂಸ್ಥಾನಗಳ ಪ್ರಜೆಗಳು ಎಲ್ಲ ಕಡೆಯಿಂದ ಬ್ರಿಟಿಷ್ ಇಂಡಿಯಾದ ಪ್ರಾಂತಗಳಿಂದ ಆವೃತವಾದ ನಡುಗಡ್ಡೆಗಳವರಂತೆ ಇದ್ದರು. ನೆರೆಯ ಬ್ರಿಟಿಷ್ ಆಳಿಕೆಗೊಳಗಾದ ಪ್ರದೇಶಗಳಲ್ಲಿ ನಡೆಯುತ್ತಿದ್ದ ಪ್ರಚಲಿತ ರಾಜಕೀಯ ಆಂದೋಳನ ಹಾಗೂ ಪ್ರಾಬಲ್ಯಗಳ ಪ್ರಭಾವಕ್ಕೆ ಅವರು ಒಳಗಾಗಿದ್ದರು. ದೇಶೀ ಸಂಸ್ಥಾನಗಳ ಈ ಜನರಿಗೂ ಬ್ರಿಟಿಷ್ ಭಾರತ ವಿಭಾಗದ ಕನ್ನಡ ಬಾಂಧವರಿಗೂ ಪರಸ್ಪರ ನಿಕಟ ಸಂಬಂಧ ಇದ್ದೇ ಇತ್ತು. ಈ ಸಂಬಂಧ ಕೌಟುಂಬಿಕ, ಸಾಮಾಜಿಕ ಸಾಂಸ್ಕೃತಿಕ ಮತ್ತು ಆರ್ಥಿಕವಾಗಿ ಬೆಳೆದು ಬಂದಿತ್ತು. ಆದುದರಿಂದ ಗಡಿಯಾಚೆ ಬ್ರಿಟಿಷ್ ವಿಭಾಗದಲ್ಲಿ ವಾಸಿಸುತ್ತಿದ್ದವರು ತಮ್ಮ ಬಂಧು ಬಾಂಧವರ ಪ್ರಜಾಪ್ರಭುತ್ವ ಧ್ಯೇಯದ ರಾಜಕೀಯ ಆಶೋತ್ತರ ಗಳಿಂದ ಪ್ರಭಾವಿತರಾಗುವುದು ಸಹಜವಾಗಿತ್ತು. ಆ ಕಾರಣ, ಬ್ರಿಟಿಷ್ ಭಾರತದಲ್ಲಿ ತಲೆಯೆತ್ತಿದ ಕ್ಷೋಭೆ ದೇಶೀ ಸಂಸ್ಥಾನಗಳ ಜನರ ಮೇಲೆ ತನ್ನ ಪ್ರಭಾವವನ್ನು ಬೀರದೆ ಇರಲಿಲ್ಲ.

1905–06ರ ಸ್ವದೇಶಿ ಚಳವಳಿ, 1920–21 ರಲ್ಲಿ ಗಾಂಧೀಜಿ ಎಬ್ಬಿಸಿದ ಅಸಹಕಾರ ಆಂದೋಳನ—ಇವೇ ಮೊದಲಾದ ರಾಷ್ಟ್ರೀಯ ಚಳವಳಿಯ ಪ್ರಾರಂಭಿಕ ಸ್ಥಿತಿಗತಿಗಳು ದೇಶೀ ಸಂಸ್ಥಾನ ಗಳಲ್ಲಿ ಕೂಡ, ಪ್ರತಿಕ್ರಿಯೆಯನ್ನು ಉಂಟುಮಾಡಿದವು. ಆದರೆ ಇದರ ಪರಿಣಾಮವಾಗಿ ಪ್ರಜೆಗಳ ಹಾಗೂ ಪ್ರಭುಗಳ ನಡುವೆ ಯಾವ ಗಣನೀಯ ಘರ್ಷಣೆಯೂ ತಲೆದೋರಿದಂತಿಲ್ಲ. ಆದರೆ 1929ರ ಲಾಹೋರ್ ಕಾಂಗ್ರೆಸ್ ಅಧಿವೇಶನವು ಸಂಪೂರ್ಣ ಸ್ವಾತಂತ್ರ್ಯದ ನಿರ್ಣಯವನ್ನು ಅಂಗೀಕರಿಸಿತು. ಅದರನಂತರ 1930 ರಲ್ಲಿ ಉಪ್ಪಿನ ಸತ್ಯಾಗ್ರಹ ಪ್ರಾರಂಭಿಸಿದ ಪರಿಣಾಮವಾಗಿ ದೇಶಾದ್ಯಂತವೂ ರಾಜಕೀಯ ಚಳವಳಿ ನವಚೈತನ್ಯವನ್ನು ತಾಳಿ ಹುರುಪುಗೊಂಡಿತು. ದೇಶೀ ಸಂಸ್ಥಾನದ ಪ್ರಜೆಗಳೂ ಈ ಪ್ರವಾಹದ ಹೊಡೆತಕ್ಕೆ ಸಿಕ್ಕಿ ಸಾಗತೊಡಗಿದರು. ನೂರಾರು ಜನ ಗಡಿ ದಾಟಿ, ಬ್ರಿಟಿಷ್ ಪ್ರಾಂತವನ್ನು ಪ್ರವೇಶಿಸಿ, ಸ್ವಯಂಸೇವಕರಾಗಿ ಪ್ರಮುಖ ಭಾಗವಹಿಸಿದರು. ವಿಶೇಷವಾಗಿ ರಾಷ್ಟ್ರೀಯ ಧ್ವಜವಂದನೆಯ ಸಂದರ್ಭಗಳಲ್ಲಿ ದೇಶೀಯ ಸಂಸ್ಥಾನದ ಪ್ರಜೆಗಳ ಮತ್ತು ಪ್ರಭುತ್ವಗಳ ನಡುವಣ ತಿಕ್ಕಾಟ ಹೆಚ್ಚುವಂತೆ ಮಾಡಿದವು. ದಬ್ಬಾಳಿಕೆ ಪ್ರಾರಂಭವಾಯಿತು. ಇದರಿಂದ ಪ್ರತಿಭಟನೆಗೆ ಮತ್ತಷ್ಟು ಪುಟವಿಟ್ಟಂತೆ

ಆಯಿತು. ರಾಷ್ಟ್ರೀಯ ಕಾಂಗ್ರೆಸ್ ಮಹಾಸಭೆ ದೇಶೀಯ ಸಂಸ್ಥಾನಗಳ ವ್ಯವಹಾರದಲ್ಲಿ ಕೈ ಹಾಕಲು ಇಚ್ಛಿಸದೆ, ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ದೇಶೀಯ ಸಂಸ್ಥಾನಗಳ ಜನತಾ ಸಮ್ಮೇಳನದ ಮೂಲಕ ಪ್ರಜೆಗಳ ನ್ಯಾಯಬದ್ಧ ರಾಜಕೀಯ ಆಶೋತ್ತರಗಳಿಗೆ ನೈತಿಕ ಬೆಂಬಲ ನೀಡುತ್ತಿತ್ತು.

ತಮ್ಮ ಕಾಲಿನ ಮೇಲೆಯೇ ನಿಂತು, ದೇಶೀ ಸಂಸ್ಥಾನದ ಪ್ರಜೆಗಳು ಸಂಘಟಿತರಾಗಿ, ಬ್ರಿಟಿಷ್ ಭಾರತದಲ್ಲಿ ಆಚರಿಸುತ್ತಿದ್ದ ಸತ್ಯಾಗ್ರಹದಂತಹ ರಾಜಕೀಯ ಆಂದೋಳನದ ತಂತ್ರಗಳನ್ನು ಅವರೂ ಅನುಸರಿಸಿದರು. ಅನೇಕ ವೇಳೆ ಬ್ರಿಟಿಷ್ ಇಂಡಿಯದ ತಮ್ಮ ಭ್ರಾತೃಗಳು ಅನುಭವಿಸಬೇಕಾಗಿ ಬಂದುದಕ್ಕಿಂತ ಹೆಚ್ಚು ಸಂಕಟವನ್ನು ಸಹಿಸಬೇಕಾಗಿ ಬಂತು.

1935ರ ರಿಫಾರಂಸ್ ಆಕ್ಟ್ ಪ್ರಕಾರ ಬ್ರಿಟಿಷ್ ಇಂಡಿಯದಲ್ಲಿ ಚುನಾವಣೆಗಳು ನಡೆದಾಗ ಕಾಂಗ್ರೆಸ್ ಉಮೇದುವಾರರು ಅಧಿಕ ಸಂಖ್ಯೆಯಲ್ಲಿ ಚುನಾಯಿತರಾದರು. ಇದರಿಂದ ಹೆಚ್ಚಿನ ಪ್ರಾಂತಗಳಲ್ಲಿ ಕಾಂಗ್ರೆಸ್ ಮಂತ್ರಿ ಸಂಪುಟಗಳು ರಚಿತವಾಗಿ ಅಧಿಕಾರಕ್ಕೆ ಬರಲು ಸಾಧ್ಯವಾಯಿತು. ದೇಶೀಯ ಸಂಸ್ಥಾನಗಳಲ್ಲಿ ಜವಾಬುದಾರಿ ಸರ್ಕಾರ ಸ್ಥಾಪಿಸಬೇಕೆಂಬ ಚಳವಳಿ ಮತ್ತಷ್ಟು ಪ್ರಬಲಗೊಂಡಿತು.

ಹಿಂದಿನ ಕಾಲದ ಭಾವನೆಗಳೇ ಬೇರೂರಿಕೊಂಡಿದ್ದ ಅನೇಕ ಸಣ್ಣಸಣ್ಣ ಸಂಸ್ಥಾನಗಳ ರಾಜರು ತಮ್ಮ ರಾಜ್ಯಗಳನ್ನು ಸ್ವಂತ ಆಸ್ತಿ ಎಂದು ಭಾವಿಸಿದ್ದರು. ಆ ಸಂಸ್ಥಾನಾಧೀಶರಿಗೆ ತ್ವರಿತಗತಿಯಲ್ಲಿ ಬದಲಾವಣೆ ಆಗುತ್ತಿದ್ದ ಸನ್ನಿವೇಶಕ್ಕೆ ಹೊಂದಿಕೊಳ್ಳುವುದು ತ್ರಾಸದಾಯಕವಾಗಿತ್ತು. ಹಲವಾರು ಸಂಸ್ಥಾನಗಳ ಜನತೆ ಯಾದರೊ ಗುರಿ ಸಾಧಿಸುವ ವರೆಗೂ ಧೈರ್ಯದಿಂದ ತಮ್ಮ ಹೋರಾಟವನ್ನು ಮುಂದುವರಿಸಿಕೊಂಡು ಹೋದರು. ಪ್ರಜಾಪ್ರಮುಖರಿಗೂ ಸಂಸ್ಥಾನಾಧೀಶರಿಗೂ ಹಲವೆಡೆ ಘರ್ಷಣೆಗಳು ಸಂಭವಿಸಿದುವು. ಸಾಮಾನ್ಯವಾಗಿ ಈ ಹೋರಾಟ ಅಹಿಂಸಾತ್ಮಕವಾಗಿದ್ದರೂ ರಾಮದುರ್ಗದಂತೆ ಎಲ್ಲೋ ಒಂದೆರಡು ಕಡೆ ಗಳಲ್ಲಿ ಚಳವಳಿ ಅಹಿಂಸಾತ್ಮಕವಾಗಿ, ದಬ್ಬಾಳಿಕೆಗೆ ದಾರಿಮಾಡಿಕೊಟ್ಟುವು. ಆದರೆ ಜಮಖಂಡಿಯಂಥಾ ಸಂಸ್ಥಾನವೂ ಇದ್ದಿತು. ಅಲ್ಲಿನ ವಿವೇಕಶಾಲಿ ಅರಸರು ಜನತೆಯ ನೂತನ ಆಶೋತ್ತರಗಳನ್ನು ಮನಗಂಡು ತದನುಗುಣವಾಗಿ ವರ್ತಿಸತೊಡಗಿದರು. ವಾಸ್ತವವಾಗಿ ಜನತೆಯ ಆಶೋತ್ತರಗಳಿಗೆ ಓಗೊಟ್ಟ ರಾಜ್ಯಗಳಲ್ಲಿ ಜಮಖಂಡಿಯೇ ಮೊದಲನೆಯದು. ಆದರೆ ಕಟ್ಟಕಡೆಯಲ್ಲಿ, ದೊಡ್ಡ ಹಾಗೂ ಸಣ್ಣ ಎಲ್ಲ ದೇಶೀ ಸಂಸ್ಥಾನಗಳೂ ಭಾರತ ಹಾಗೂ ಅದರ ಪ್ರಜಾಸತ್ತಾತ್ಮಕ ಸಂವಿಧಾನಕ್ಕನುಗುಣವಾಗಿ ಅಡಿಯಿಡ ಬೇಕಾಯಿತು. ಸುತ್ತಮುತ್ತಲ ಪ್ರದೇಶಗಳಲ್ಲಿ ಕಾಂಗ್ರೆಸ್ಸನ್ನು ಅಧಿಕಾರಕ್ಕೆ ತಂದ, ಪ್ರಜಾಪ್ರಭುತ್ವ ಪ್ರವಾಹದ ಅಲೆಗಳನ್ನು ತಡೆಗಟ್ಟಲು ಸಂಸ್ಥಾನದ ಅರಸರಿಗೆ ಅಸಾಧ್ಯವಾಯಿತು. ಅಂತೆಯೇ ಅಂದಾನಪ್ಪ ದೊಡ್ಡಮೇಟಿ, ಮುನವಳ್ಳಿ, ವೀರಣ್ಣಗೌಡ ಪಾಟೀಲ್, ಹನುಮಂತರಾವ್ ಕೌಜಲಗಿ ಮೊದಲಾದ ನಾಯಕರ ನೇತೃತ್ವದಲ್ಲಿ ಮುಂದುವರಿಯುತ್ತಿದ್ದ ಜನತಾ ಚಳವಳಿಯ ಪ್ರವಾಹವನ್ನು ತಡೆಗಟ್ಟುವುದು ಅಸಾಧ್ಯವಾಯಿತು. ಕರ್ನಾಟಕದಲ್ಲಿದ್ದ ದೇಶೀಯ ಸಂಸ್ಥಾನಗಳು ಒಂದರ ಹಿಂದೆ ಒಂದಾಗಿ ಮಣಿಯಲೇ ಬೇಕಾಗಿ, ಕಡೆಗೆ ಸರ್ದಾರ್ ಪಾಟೇಲರಿಂದ ಸೂಚಿಸಲ್ಪಟ್ಟ ಒಪ್ಪಂದಕ್ಕೆ ಒಪ್ಪಿ, ಸುತ್ತಮುತ್ತಲ ಪ್ರದೇಶ ಗಳೊಡನೆ ವಿಲೀನವಾದವು.

**ಕಾಂಗ್ರೆಸ್ ಮತ್ತು ಮೈಸೂರು ರಾಜ್ಯ**

1920ರ ನಾಗಪುರದ ಕಾಂಗ್ರೆಸ್ ಅಧಿವೇಶನದ ತರುವಾಯ, ಭಾಷಾವಾರು ಪ್ರಾಂತ ರಚನೆಯ ತತ್ವಕ್ಕೆ ಅನುಸಾರವಾಗಿ ಕರ್ನಾಟಕದ ಪ್ರಾಂತೀಯ ಕಾಂಗ್ರೆಸ್ ಸಮಿತಿ ಗದುಗಿನಲ್ಲಿ ಸ್ಥಾಪಿತವಾಯಿತು. ಬೆಂಗಳೂರು,

ಮೈಸೂರು, ತುಮಕೂರು, ಕಡೂರು ಮೊದಲಾದ ಮೈಸೂರು ರಾಜ್ಯದ ಪ್ರಮುಖ ನಗರಗಳಲ್ಲಿ ಹಿಂದೂ ಮುಸ್ಲಿಮ್ ಸಖ್ಯ, ಸ್ವದೇಶಿ ಮತ್ತು ಖಾದೀ, ಪಾನ ನಿರೋಧ, ಅಸ್ಪೃಶ್ಯತೆಯನ್ನು ಹೋಗಾಡಿಸುವುದೇ ಮೊದಲಾದ ರಚನಾತ್ಮಕ ಕಾರ್ಯಗಳನ್ನು ಕೈಗೊಳ್ಳಲು ಕಾಂಗ್ರೆಸ್ ಸಮಿತಿಗಳನ್ನು ಸ್ಥಾಪಿಸಲಾಯಿತು. ಹಾಜಿ ಉಸ್ಮಾನ್ ಸೇಟ್‌ಅನಂತರ ಲೋಕಮಾನ್ಯ ತಿಲಕರೊಡನೆ ಕೆಲಸ ಮಾಡುತ್ತಿದ್ದ ನಿವೃತ್ತ ಹೈಕೋರ್ಟಿನ ನ್ಯಾಯಾಧೀಶ ಎಸ್. ಎಸ್. ಸೆಟ್ಲೂರ್ ಅವರು ಬೆಂಗಳೂರು ಕಾಂಗ್ರೆಸಿನ ಅಧ್ಯಕ್ಷರಾಗಿದ್ದರು. ಸುರೇಂದ್ರ ರಾವ್, ಅನಂತರ ಎಸ್. ಆರ್. ಎಸ್. ರಾಘವನ್, ಅನಂತರ ರಜ್ವಿ ಕಾರ್ಯದರ್ಶಿಗಳಾಗಿದ್ದರು. ಮೈಸೂರಿನ ವೃದ್ಧ ಪಿತಾಮಹ ಎಂ. ವೆಂಕಟೇಶಯ್ಯನವರ ನೇತೃತ್ವದಲ್ಲಿ, ತಗಡೂರು ರಾಮಚಂದ್ರರಾಯರು ರಚನಾತ್ಮಕ ಕಾರ್ಯಕ್ರಮದ ಹಲವಾರು ಅಂಶಗಳನ್ನು ಮೈಸೂರು ಜಿಲ್ಲೆಯ ತಮ್ಮ ಗ್ರಾಮದಲ್ಲಿ ಪೂರ್ಣವಾಗಿ ಜಾರಿಗೆ ತರಲು ಶ್ರಮಿಸಿದರು. ಕೆ. ರಂಗ ಅಯ್ಯಂಗಾರ್ ಮತ್ತು ಇತರರು ತುಮಕೂರಿನಲ್ಲಿ ಕಾರ್ಯೋನ್ಮುಖರಾದರು. ಉತ್ತರ ಕರ್ನಾಟಕದ ಪ್ರಮುಖ ನಾಯಕರಾದ ಕಡಪ ರಾಘವೇಂದ್ರರಾವ್, ಗಂಗಾಧರರಾವ್ ದೇಶಪಾಂಡೆ, ಕೃಷ್ಣರಾವ್ ಮುದವೇಡ್‌ಕರ್, ಡಾಕ್ಟರ್ ಹರ್ಡೀಕರ್, ಪಂಡಿತ ತಾರಾನಾಥ ಮೊದಲಾದವರು ಮೈಸೂರು ಸಂಸ್ಥಾನಕ್ಕೆ ಆಗಿಂದಾಗ ಬರುತ್ತಾ ಗಾಂಧಿಜೀಯವರ ಸಂದೇಶ, ಅದರಲ್ಲೂ ವಿಶೇಷವಾಗಿ ಸಾಮಾಜಿಕ ಮತ್ತು ಆರ್ಥಿಕ ವಿಚಾರಗಳ ಸಂದೇಶ ಬೀರುತ್ತಿದ್ದರು. 1924ರಲ್ಲಿ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಬೆಳಗಾವಿನಲ್ಲಿ ನಡೆದ ಕಾಂಗ್ರೆಸಿನ ವಾರ್ಷಿಕ ಅಧಿವೇಶನ ಮೈಸೂರು ಸಂಸ್ಥಾನದ ಜನತೆಯನ್ನು ಕಾಂಗ್ರೆಸ್ಸಿಗೆ ಮತ್ತಷ್ಟು ಸಮೀಪಕ್ಕೆ ಒಯಿತು. ನೂತನವಾಗಿ ಸ್ಥಾಪಿತವಾದ ಹಿಂದೂಸ್ಥಾನಿ ಸೇವಾದಳದಲ್ಲಿ ಡಾಕ್ಟರ್ ಹರ್ಡಿಕರರಿಂದ ಶಿಕ್ಷಣ ಪಡೆದ ಅನೇಕ ಉತ್ಸಾಹಿ ತರುಣರು ಈ ಅಧಿವೇಶನದಲ್ಲಿ ಸ್ವಯಂಸೇವಕರಾಗಿ ಸೇವೆ ಸಲ್ಲಿಸಿದರು. ರಾಜ್ಯ ಸರ್ಕಾರ ಕಾಂಗ್ರೆಸ್ ವಸ್ತುಪ್ರದರ್ಶನದಲ್ಲಿ ಪ್ರಮುಖ ಪಾತ್ರ ವಹಿಸಿತು. ಅರಮನೆಯ ಅನೇಕ ಸಂಗೀತಗಾರರು ಪ್ರತಿನಿಧಿಗಳ ಮನೋರಂಜನೆಗಾಗಿ ಏರ್ಪಡಿಸಿದ್ದ ಸಂಗೀತ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡಿದ್ದರು.

ಏಪ್ರಿಲ್ 1927ರಲ್ಲಿ ಗಾಂಧಿಜೀ ಉತ್ತರ ಕರ್ನಾಟಕದಲ್ಲಿ ತೀವ್ರ ಪ್ರವಾಸ ಕೈಗೊಂಡುದರ ಪರಿಣಾಮವಾಗಿ ಸ್ವಲ್ಪ ಪಾರ್ಶ್ವವಾಯು ಪೀಡಿತರಾದಾಗ, ಮೈಸೂರಿನ ದಿವಾನರು ಅವರನ್ನು ನಂದಿಬೆಟ್ಟದ ಮೇಲೆ ತಂಗಿದ್ದು ತಮ್ಮ ದೇಹಸ್ಥಿತಿಯನ್ನು ಸುಧಾರಿಸಿಕೊಳ್ಳಬೇಕಾಗಿ ಆಹ್ವಾನಿಸಿದರು. ಗಾಂಧಿಯವರು ನಾಲ್ಕು ತಿಂಗಳು ಇಲ್ಲಿ ತಂಗಿದ್ದ ಕಾರಣದಿಂದ ಕಾಂಗ್ರೆಸ್ಸಿನ ಅನೇಕ ಪ್ರಮುಖರು ಮೈಸೂರಿಗೆ ಭೇಟಿ ಕೊಡುವ ಅವಕಾಶ ಒದಗಿ ಬಂತು. ತಮ್ಮ ದೇಹಸ್ಥಿತಿ ಸುಧಾರಿಸಿಕೊಂಡ ತರುವಾಯ ಗಾಂಧಿಜೀ ಮೈಸೂರು ದೇಶದಲ್ಲಿ ಪ್ರವಾಸ ಕೈಗೊಂಡು ರಾಜ್ಯದ ಅನೇಕ ನಾಗರಿಕರು ಅವರನ್ನು ನೋಡುವ ಮತ್ತು ಅವರ ಸಂದೇಶ ಕೇಳುವ ಅಪರೂಪ ಅವಕಾಶವನ್ನು ಒದಗಿಸಿ ಕೊಟ್ಟರು. ಬದನವಾಳಿನಲ್ಲಿ ಮೈಸೂರು ಸರ್ಕಾರ ಒಂದು ಖಾದಿ ಕೇಂದ್ರವನ್ನು ಸ್ಥಾಪಿಸಿತು. ಸಂಸ್ಥಾನವನ್ನು ಬಿಟ್ಟು ಹೊರಡುವ ಮುನ್ನ ಬೆಂಗಳೂರಿನಲ್ಲಿ ದಕ್ಷಿಣ ಭಾರತ ಖಾದೀ ಪ್ರದರ್ಶನ ಪ್ರಾರಂಭೋತ್ಸವವನ್ನು ಗಾಂಧಿಯವರು ನೆರವೇರಿಸಿದರು.

1929ರಲ್ಲಿ ಲಾಹೋರ್ ಕಾಂಗ್ರೆಸ್ ಅಧಿವೇಶನದಲ್ಲಿ ಅಂಗೀಕೃತವಾದ ಸಂಪೂರ್ಣ ಸ್ವರಾಜ್ಯದ ನಿರ್ಣಯ ಮತ್ತು ಜನವರಿ 26, 1930ರಲ್ಲಿ ರಾಷ್ಟ್ರಧ್ವಜ ವಂದನೆಯ ಕಾರ್ಯಕ್ರಮಗಳು ಮೈಸೂರು ಸಂಸ್ಥಾನದಲ್ಲಿ ವಿಶೇಷ ಪ್ರತಿಕ್ರಿಯೆಯನ್ನುಂಟುಮಾಡಿದುವು. ಆಗ ಮೊತ್ತ ಮೊದಲ ಬಾರಿಗೆ ಕಾಂಗ್ರೆಸ್ ಸಂಸ್ಥೆಗೂ, ಮೈಸೂರು ಸರ್ಕಾರಕ್ಕೂ ತೀವ್ರ ಘರ್ಷಣೆ, ಸಂಭವಿಸಿತ್ತು. ತರುವಾಯ ಗಾಂಧಿಜೀಯವರಿಂದ ಪ್ರಾರಂಭಿಸಲ್ಪಟ್ಟ ಉಪ್ಪಿನ ಸತ್ಯಾಗ್ರಹವನ್ನು ಮೈಸೂರುಸಂಸ್ಥಾನದ ಜನತೆ ಅತ್ಯುತ್ಸಾಹದಿಂದ ಗಮನಿಸಿತು. ಅನೇಕ ಸ್ವಯಂಸೇವಕರು ಕಾರವಾರ ಮತ್ತು ಇತರ ಕಡೆಗಳಿಗೆ ಹೋರಾಟದಲ್ಲಿ ಭಾಗವಹಿಸಲು ಹೋದರು. ಇಲ್ಲಿಂದ ಮುಂದೆ ಬ್ರಿಟಿಷ್ ಕರ್ನಾಟಕದಲ್ಲಿ ನಡೆಯುತ್ತಿದ್ದ ಕರನಿರಾಕರಣೆ ಮತ್ತು

ಅಸಹಕಾರ ಚಳವಳಿಗಳಲ್ಲಿ ಭಾಗವಹಿಸಲು ಉತ್ಸಾಹಿ ತರುಣರು ತಂಡ ತಂಡವಾಗಿ ಅಲ್ಲಿಗೆ ಹೋಗ ತೊಡಗಿದರು.

ಬ್ರಿಟಿಷ್ ಭಾರತದಲ್ಲಿ ಕಾರ್ಯ ಚಕ್ರ ತೀವ್ರಗತಿ ಹಿಡಿದಿತ್ತು. ಅದರಂತೆ ಮೈಸೂರು ಮತ್ತು ಇತರ ದೇಶೀಯ ಸಂಸ್ಥಾನಗಳಲ್ಲಿ ಜವಾಬ್ದಾರಿ ಸರ್ಕಾರದ ಒತ್ತಡ ಅಧಿಕವಾಗುತ್ತಾ ಬಂತು. ಮಿತ ಪ್ರಾಂತೀಯ ಸ್ವಾತಂತ್ರ್ಯ ಮತ್ತು ಬ್ರಿಟಿಷ್ ಭಾರತದ ಪ್ರಾಂತಗಳಲ್ಲಿ ಜವಾಬುದಾರಿ ಮಂತ್ರಿ ಸಂಪುಟಗಳನ್ನು ರಚಿಸಿ ಕೊಳ್ಳಬಹುದಾದ 1935ನೆ ಇಂಡಿಯ ಸರ್ಕಾರದ ಶಾಸನ ಜಾರಿಗೆ ಬಂದು, ಈ ಅವಕಾಶವನ್ನು ಉಪಯೋಗ ಮಾಡಿಕೊಂಡು ಚುನಾವಣೆಗಳಲ್ಲಿ ಭಾಗವಹಿಸಿ, ಅಧಿಕಾರ ಸ್ವೀಕರಿಸಬೇಕೆಂಬ ಕಾಂಗ್ರೆಸ್ ಕೈಗೊಂಡ ತೀರ್ಮಾನದಿಂದ ದೇಶೀಯ ಸಂಸ್ಥಾನಗಳಲ್ಲಿ ಕೂಡ ರಾಜಕೀಯ ವಾತಾವರಣದ ಕಾವು ಏರದೊಡಗಿತು. ಮೈಸೂರಿನಲ್ಲೂ ರಾಜಕೀಯ ಪಕ್ಷಗಳು ಸಕ್ರಿಯವಾಗಿದ್ದುವು. ಆದರೆ ಸರ್ಕಾರದ ನೌಕರಿಯಲ್ಲಿ ಹಿಂದುಳಿದ ಪಂಗಡಗಳಿಗೆ ನ್ಯಾಯ ದೊರಕಿಸಿ ಕೊಡುವ ಗುರಿಸಾಧನೆ ಮತ್ತು ಈ ಬಗೆಯ ಇತರ ಉದ್ದೇಶಗಳಿಗೆ ಮಾತ್ರ ತನ್ನ ಚಳವಳಿಯನ್ನು, ಸೀಮಿತಗೊಳಿಸಿದ್ದುವು. 1937 ರಲ್ಲಿ ನಡೆದ ಚುನಾವಣೆಗಳಲ್ಲಿ ಕಾಂಗ್ರೆಸ್ ಬಾರಿಸಿದ ಜಯಭೇರಿಯಿಂದ ಎಚ್ಚತ್ತುಕೊಂಡ ಮೈಸೂರಿನ ರಾಜಕೀಯ ಪ್ರಮುಖರು ಕಾಂಗ್ರೆಸ್ಸಿನೊಡನೆ ಧ್ಯೇಯಸಾಧನೆಗಾಗಿ ಒಂದುಗೂಡಬೇಕಾದ ಆವಶ್ಯಕತೆಯನ್ನು ಗ್ರಹಿಸಿದರು.

1938 ರಲ್ಲಿ ಮೈಸೂರು ಕಾಂಗ್ರೆಸ್ ಅಸ್ತಿತ್ವಕ್ಕೆ ಬರಲು ಕಾರಣ ಇದೇ ಆಯಿತು. ಇದರ ಪ್ರಥಮ ಅಧಿವೇಶನ ಮದ್ದೂರಿನ ಸಮೀಪದ ಶಿವಪುರದಲ್ಲಿ ನಡೆಯಿತು. ಟಿ. ಸಿದ್ದಲಿಂಗಯ್ಯನವರು ಇದರ ಪ್ರಥಮ ಅಧ್ಯಕ್ಷರಾಗಿದ್ದರು. ಮೈಸೂರು ಕಾಂಗ್ರೆಸ್ ಸ್ವತಂತ್ರ ಸಂಸ್ಥೆಯಾಗಿತ್ತು. ಕರ್ನಾಟಕ ಕಾಂಗ್ರೆಸ್ ಅಥವಾ ಅಖಿಲ ಭಾರತ ಕಾಂಗ್ರೆಸ್ ಈ ಉಭಯ ಸಂಸ್ಥೆಗಳೊಡನೆಯೂ ಇದು ವಿಲೀನ ವಾಗಿರಲಿಲ್ಲ. ಜವಾಬುದಾರಿ ಸರ್ಕಾರದ ಗಳಿಕೆಯೇ ಇದರ ಮುಖ್ಯಗುರಿ. ಈ ಬೆಳವಣಿಗೆ ಮೈಸೂರು ಸರ್ಕಾರಕ್ಕೆ ರುಚಿಸಲಿಲ್ಲ. ಧ್ವಜವಂದನೆ ಮೊದಲಾದ ಪ್ರದರ್ಶನಗಳನ್ನು ಸರ್ಕಾರ ನಿಷೇಧಿಸಿತು. ನಿಷೇಧಾಜ್ಞೆ ಜಾರಿಯಲ್ಲಿದ್ದರೂ ವಿದುರಾಶ್ವತ್ಥದಲ್ಲಿ ನೆರೆದಿದ್ದ ಗುಂಪಿನ ಮೇಲೆ ಪೋಲಿಸರು ಗುಂಡು ಹಾರಿಸಿದರು. ಅನೇಕ ಕಾಂಗ್ರೆಸ್ಸಿಗರನ್ನು ಬಂಧಿಸಿದರು. ವಿದುರಾಶ್ವತ್ಥದ ಗಲಭೆಯ ವಿಚಾರಣಾ ಸಮಿತಿ ಮಾತ್ರದಲ್ಲದೆ ಎಷ್ಟು ಮಟ್ಟಿಗೆ ರಾಜಕೀಯ ಸುಧಾರಣೆಗಳನ್ನು ಜಾರಿಗೆ ತರಬಹುದೆಂಬುದನ್ನು ಗೊತ್ತು ಮಾಡಲು ರಾಜಕೀಯ ಸುಧಾರಣಾ ಸಮಿತಿಯೊಂದನ್ನು ಮೈಸೂರು ಸರ್ಕಾರ ನೇಮಿಸಿತು. ಆದರೆ ಕಾಂಗ್ರೆಸ್ ಇದನ್ನು ಬಹಿಷ್ಕರಿಸಿತು. ದಬ್ಬಾಳಿಕೆ ದಿನ ದಿನಕ್ಕೂ ಉಗ್ರವಾಗುತ್ತಾ ಬಂತು. ಇದರಿಂದ ಖತಿಗೊಂಡ ಗಾಂಧಿಯವರು, ದಿವಾನರೊಡನೆ ಸಂಧಾನ ನಡೆಸಿ ಮೈಸೂರು ಕಾಂಗ್ರೆಸ್ ಮತ್ತು ಮೈಸೂರು ಸರ್ಕಾರ ಉಭಯತ್ರರಲ್ಲಿ ಸೌಹಾರ್ದ ವಾತಾವರಣ ಏರ್ಪಡಿಸಲು ಸರ್ದಾರ್ ಪಟೇಲ ಮತ್ತು ಆಚಾರ್ಯ ಕೃಪಲಾನಿಯವರನ್ನು ಮೈಸೂರಿಗೆ ಕಳುಹಿಸಿಕೊಟ್ಟರು. ರಾಷ್ಟ್ರಧ್ವಜ ಹಾಗೂ ಮೈಸೂರು ಧ್ವಜ ಇವೆರಡನ್ನು ಒಂದೇ ಮಟ್ಟದಲ್ಲಿ ಹಾರಿಸುವ ವ್ಯವಸ್ಥೆಗೆ ಮೈಸೂರು ಸರ್ಕಾರ ಒಪ್ಪಿಗೆ ನೀಡಿತು. ಮುಸುಕಿನ ಗುದ್ದು ತೆರೆಮರೆಯ ದಬ್ಬಾಳಿಕೆ ಸಾಗುತ್ತಲೇ ಇತ್ತು. 1942ರ "ಭಾರತದಿಂದ ತೊಲಗಿ," ಚಳವಳಿಯಲ್ಲಿ ಮೈಸೂರು ಕಾಂಗ್ರೆಸ್ಸಿನ ಕಾರ್ಯಕರ್ತರೂ ಸ್ವಯಂಸೇವಕರೂ ಮೈಸೂರಿನ ಒಳಗೂ ಹೊರಗೂ ಉತ್ಸಾಹದಿಂದ ಭಾಗ ವಹಿಸಿದರು. ಮೈಸೂರು ಸರ್ಕಾರ ಶಾಂತಿ ಪಾಲನೆ ಮತ್ತು ನೆಮ್ಮದಿ ರಕ್ಷಣೆಗಾಗಿ ಎಂದಿನಂತೆ ಕ್ರಮಗಳನ್ನು ಕೈಗೊಂಡಿತು. ಸಭೆ ಮೆರವಣಿಗೆಗಳು ನಿಷೇಧಿಸಲ್ಪಟ್ಟವು. ಲಾಠಿ ಪ್ರಯೋಗ ನಡೆಯಿತು ; ದಂಡ ವಿಧಿಸಲಾಯಿತು. ಸೆರೆಮನೆಗಳು ತುಂಬಿದವು. ಶಿಕ್ಷಣಶಾಲೆ ಹಾಗೂ ದೊಡ್ಡ ಕಾರ್ಖಾನೆಗಳಲ್ಲಿ ದೀರ್ಘಾವಧಿ ಮುಷ್ಕರ ನಡೆಯಿತು. ಸುಮಾರು 2500 ಬಂಧಿತರಾದರು.

156 ಜನರು ಮಡಿದರು. 789 ಜನರು ಅನೇಕ ಸ್ಥಳಗಳಲ್ಲಿ ಗುಂಡಿನ ಏಟಿಗೆ ಸಿಕ್ಕಿ ಗಾಯಗೊಂಡರು. ನಾಲ್ಕು ಗ್ರಾಮಗಳ ಮೇಲೆ ಪುಂಡುಗಂದಾಯ ವಿಧಿಸಿ, ಸರ್ಕಾರ 2,000 ರೂ. ದಂಡ ವಸೂಲ್ಮಾಡಿತು.

1945 ರಲ್ಲಿ ದ್ವಿತೀಯ ವಿಶ್ವಸಮರ ಕೊನೆಗೊಂಡಾಗ ಬ್ರಿಟನ್ ಮತ್ತು ಭಾರತ ಉಭಯತ್ರರ ನಡುವೆ ಉನ್ನತ ಮಟ್ಟದಲ್ಲಿ ರಾಜಕೀಯ ಸಂಧಾನದ ಮಾತುಕತೆ ಪ್ರಾರಂಭವಾಯಿತು. ಕಡೆಯ ಪ್ರಕರಣದಲ್ಲಿ ಮೈಸೂರು ಮತ್ತು ಇಂಡಿಯಾದಲ್ಲಿ ಆದ ಈಚಿನ ರಾಜಕೀಯ ಬೆಳವಣಿಗೆ ಕುರಿತು ಪ್ರಸ್ತಾಪಿಸಲಾಗಿದೆ.

ತನ್ನ ಉದ್ದೇಶ ಸಾಧಿತವಾದುದರಿಂದ ಆಗಸ್ಟ್ 1950 ರಲ್ಲಿ ಮೈಸೂರು ಕಾಂಗ್ರೆಸ್ ತಾನಾಗಿ ಪರಿತ್ಯಕ್ತವಾಯಿತು. ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಅಂಗಸಂಸ್ಥೆಯಾಗಿ ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿ ಅಸ್ತಿತ್ವಕ್ಕೆ ಬಂದು, ಕೆ. ಹನುಮಂತಯ್ಯನವರು ಇದರ ಮೊದಲ ಅಧ್ಯಕ್ಷರಾದರು.

ಮೂಲಲೇಖಕರು : ಶ್ರೀ ಕೆ. ಸಂಪದ್ಗಿರಿ ರಾವ್
ಅನುವಾದಕರು : ಶ್ರೀ ವಿ. ಎಸ್. ನಾರಾಯಣ ರಾವ್

# ಹೈದರಾಬಾದ ಕರ್ನಾಟಕ ಮತ್ತು ಕಾಂಗ್ರೆಸ್

ಹೈದರಾಬಾದ ಸಂಸ್ಥಾನವು ಬ್ರಿಟಿಷ್ ಸಾಮ್ರಾಜ್ಯವಾದದ ಒಂದು ಬಲಿಷ್ಠ ಕೋಟೆ ಮತ್ತು ಮುಸ್ಲಿಮ್ ಊಳಿಗ ಮಾನ್ಯದ ಒಂದು ಕೇಂದ್ರವಾಗಿತ್ತು. ಶಿಕ್ಷಣದಲ್ಲಿ ಬಹಳ ಹಿಂದೆ ಬಿದ್ದಿತ್ತು. ನಾಗರಿಕ ಸಾತಂತ್ರ್ಯವಾಗಲಿ, ನಗರಪಾಲಿಕೆ (ಮುನಿಸಿಪಾಲಿಟಿ)ಗಳಾಗಲಿ, ಜಿಲ್ಲಾ ಸಮಿತಿಗಳಾಗಲಿ ಇರಲಿಲ್ಲ. ಸರಕಾರದ ಪೂರ್ವಭಾವಿ ಅಪ್ಪಣೆಯಿಲ್ಲದೆ ಯಾವ ಖಾಸಗಿ ಶಾಲೆಯನ್ನೂ ಪ್ರಾರಂಭಿಸುವಂತೆ ಇರಲಿಲ್ಲ. ವಾಕ್ ಸ್ವಾತಂತ್ರ್ಯ ಸೊನ್ನೆ, ಲಂಚ, ಭ್ರಷ್ಟಾಚಾರ, ದುರಾಡಳಿತ ಅತಿಯಾಗಿ ಇತ್ತು. ಬ್ರಿಟಿಷ್ ರೆಸಿಡೆಂಟನು ಅಪ್ರತ್ಯಕ್ಷವಾಗಿ ನಿಜಾಮನನ್ನೂ ಅವನ ಸಂಸ್ಥಾನವನ್ನೂ ಹತೋಟಿಯಲ್ಲಿ ಇಟ್ಟುಕೊಂಡಿದ್ದನು. ಬ್ರಿಟಿಷ್ ಆಡಳಿತದ ವಿರುದ್ಧವಾಗಿ ಏನು ಮಾಡಲೂ, ಏನು ಹೇಳಲೂ ಸಂಸ್ಥಾನದ ಜನರನ್ನು ಅವನು ಬಿಡುತ್ತಿರಲಿಲ್ಲ. ಈ ಸನ್ನಿವೇಶದಲ್ಲಿ ಸಾಮ್ರಾಜ್ಯವಾದ ಮತ್ತು ಊಳಿಗ ಮಾನ್ಯ—ಈ ಎರಡೂ ಅವಳಿ ಜವಳಿ ಶಕ್ತಿಗಳನ್ನೂ ಇದಿರಿಸಿ ಸಂಸ್ಥಾನದ ಜನರು ಹೋರಾಡಬೇಕಾಗಿತ್ತು.

1857ರಲ್ಲಿ ನಡೆದ ಮೊದಲನೆಯ ಸ್ವಾತಂತ್ರ್ಯ ಸಮರಕ್ಕೆ ಮೊದಲೇ, ಕೊಪ್ಪಳದ ಒಬ್ಬ ಮುಖ್ಯ ಜಮೀನುದಾರ, ವೀರಪ್ಪ 1818ರಲ್ಲೇ ಬ್ರಿಟಿಷ್ ಆಡಳಿತದ ವಿರುದ್ಧ ಬಹದೂರ್‌ಬಂಡ ಕೋಟೆಯಲ್ಲಿ ದಂಗೆ ಎದ್ದಿದ್ದನು[1]. ಬ್ರಿಟಿಷ್ ಸೇನೆ ಅವನ ವಿರುದ್ಧ ನಡೆಯಿತು. ಅವನನ್ನು ಸೆರೆಹಿಡಿದು ಗಲ್ಲಿಗೇರಿಸಲಾಯಿತು. 1857ರ ಕೊಪ್ಪಳದ ದಂಗೆಯಲ್ಲಿ ಭೀಮರಾಯನೂ ಅವನ ಸಹಕಾರಿ ಕೆಂಚೇನಗೌಡನೂ ರಣರಂಗದಲ್ಲಿ ಯುದ್ಧ ಮಾಡುತ್ತಾ ಬಿದ್ದುಹೋದರು. ಆಗ ಫಿರಂಗಿಯ ಬಾಯಿಗೆ ಎಪ್ಪತ್ತೇಳು ಜನರು ಗುರಿಯಾದರು. ಇಬ್ಬರನ್ನು ಗಲ್ಲಿಗೇರಿಸಲಾಯಿತು[2]. ಸುರಪುರದ ದಂಗೆಯಲ್ಲಿ ರಾಜಾ ವೆಂಕಟಪ್ಪನಾಯಕನು ಬ್ರಿಟಿಷ್ ಆಡಳಿತವನ್ನು ವಿರೋಧಿಸಿ ತನ್ನ ಪ್ರಾಣ ತ್ಯಾಗಮಾಡಿ ಹುತಾತ್ಮನಾದನು.

ಇತ್ತೀಚೆಗೆ ಮಹಾತ್ಮಾ ಗಾಂಧಿ ತಮ್ಮ ಅಹಿಂಸಾತ್ಮಕ ಸತ್ಯಾಗ್ರಹವನ್ನು ಪ್ರಾರಂಭಿಸಿದಾಗ, ಸುರಪುರದ ಮತ್ತು ಕೊಪ್ಪಳದ ವೀರರು ಸ್ವಾತಂತ್ರ್ಯಕ್ಕಾಗಿ ಪ್ರಾಣತ್ಯಾಗ ಮಾಡಿದ ಘನ ಸಂಪ್ರದಾಯಗಳನ್ನು ಅನುಸರಿಸಿ ಬ್ರಿಟಿಷರ ವಿರುದ್ಧ ಹೋರಾಡಲು ಜನರು ಮುಂದೆ ಬಂದರು. ಗಾಂಧಿ ಬರುವ ಮುನ್ನ ಹೈದರಾಬಾದ ಕರ್ನಾಟಕದ ಜನರನ್ನು ತಿಲಕರ ರಾಜಕೀಯವು ಪ್ರಭಾವಗೊಳಿಸಿತ್ತು. ಅವರ ಹೆಮ್ಮಾತು—"ಶಿಕ್ಷಣ ನೀಡಿ, ಚಳವಳಿಮಾಡಿ, ಹೋರಾಡಲು ಸಂಘಟಿಸಿಕೊಳ್ಳಿ" ಎಂಬುದು. ಗುಲ್ಬರ್ಗದಲ್ಲಿ 'ನೂತನ ವಿದ್ಯಾಲಯ' ಎಂಬ ಹೆಸರಿನಿಂದ ಒಂದು ರಾಷ್ಟ್ರೀಯ ವಿದ್ಯಾಲಯವನ್ನೂ ಚಿಂಚೋಳಿಯಲ್ಲಿ, ಒಂದು ರಾಷ್ಟ್ರೀಯ ವಿದ್ಯಾಲಯವನ್ನೂ ಪ್ರಾರಂಭಿಸಿದರು. ಮುಂದೆ ರಾಯಚೂರಿನಲ್ಲಿ 'ಹಮ್‌ದರ್ದ್' ಶಾಲೆ, ಕುಕನೂರಿನಲ್ಲಿ 'ವಿದ್ಯಾನಂದ ಶಾಲೆ'—ಇವು ರಾಷ್ಟ್ರೀಯ ಶಿಕ್ಷಣ ನೀಡಲು ಪ್ರಾರಂಭಿಸಿದವು. ಈ ಶಾಲೆಗಳು ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡಿದ್ದಲ್ಲದೆ, ಸತ್ಯಾಗ್ರಹಕ್ಕೆ ಸಾವಿರಾರು ಜನ ಸ್ವಯಂ ಸೇವಕರನ್ನು ಒದಗಿಸಿದವು.

---

1 ಹೈದರಾಬಾದ ಸ್ವಾತಂತ್ರ್ಯ ಸಂಗ್ರಾಮ ಚರಿತ್ರೆ, ಸಂಪುಟ 1, ಪುಟ 101

2 ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಚರಿತ್ರೆ ಸಂಪುಟ, 1. ಪು. 440

ರಾಜಕೀಯ ಕ್ಷೇತ್ರದಲ್ಲಿ ಪ್ರಾರಂಭಕಾರರಾದ ಪಂಡಿತ ತಾರಾನಾಥರು ಹೈದರಾಬಾದ ಕರ್ನಾಟಕದಲ್ಲಿ ಗಾಂಧಿವಾದವನ್ನು ಹರಡಿದರು. ಅವರ ರಾಷ್ಟ್ರೀಯ ಚಟುವಟಿಕೆಗಳಿಂದಾಗಿ ಅವರನ್ನು ಗಡಿಪಾರು ಮಾಡಲಾಯಿತು. 1934ರಲ್ಲಿ ಹೈದರಾಬಾದ ಕರ್ನಾಟಕದ ಮುಖಂಡರು ಅಲ್ಲಿನ ಜನತೆಯ ಆಶೆ ಆಕಾಂಕ್ಷೆಗಳನ್ನು ವ್ಯಕ್ತಪಡಿಸಲು ಹೈದರಾಬಾದ್ ಕರ್ನಾಟಕ ಪರಿಷತ್ತನ್ನು ಪ್ರಾರಂಭಿಸಲು ತೀರ್ಮಾನಿಸಿದರು. ಇವರೆಲ್ಲರೂ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಹೋಗಿ ಅದರಿಂದ ಸ್ಫೂರ್ತಿ ಪಡೆದರು. ಹೈದರಾಬಾದ ಕರ್ನಾಟಕ ಪರಿಷತ್ತು ಐದು ಅಧಿವೇಶನಗಳನ್ನು ನಡೆಸಿ ಹೈದರಾಬಾದಿನ ಮೂರೂ ಕನ್ನಡ ಜಿಲ್ಲೆಗಳಲ್ಲಿ ಸಾಕಷ್ಟು ರಾಜಕೀಯ ಜಾಗೃತಿಯನ್ನು ಉಂಟುಮಾಡಿತು. ಕಾಂಗ್ರೆಸಿನ ಆದರ್ಶಗಳನ್ನು ಪ್ರಚಾರಮಾಡಿ ಖಾದಿ, ಗ್ರಾಮೋದ್ಯೋಗ, ಹಿಂದೂ ಮುಸ್ಲಿಮ್ ಸೌಹಾರ್ದ, ಅಸ್ಪೃಶ್ಯತಾ ನಿವಾರಣೆ,—ಇಂಥ ರಚನಾತ್ಮಕ ಕಾರ್ಯಕ್ರಮವನ್ನು ಕೈಗೊಂಡಿತು. ಈ ಪರಿಷತ್ತು ನಿಜಾಮರಲ್ಲಿ ರಾಜನಿಷ್ಠೆಯ ತೀರ್ಮಾನ ದಿಂದ ಪ್ರಾರಂಭವಾಗುತ್ತಿತ್ತು. ಆದರೆ ಯೋಗ್ಯ ಸಮಯದಲ್ಲಿ ಜವಾಬುದಾರಿ ಸರಕಾರವನ್ನು ಸ್ಥಾಪಿಸಬೇಕು ಎಂಬ ತೀರ್ಮಾನವನ್ನೂ ಮಾಡುತ್ತಿತ್ತು.

ಮೊದಲೇ ಹೇಳಿದಂತೆ, ಹೈದರಾಬಾದ ಕರ್ನಾಟಕ ನಿಜಾಮರ ಸಂಸ್ಥಾನದ ಒಂದು ಭಾಗ 30 ಸಾವಿರ ಕನ್ನಡ ಜನರು ಹೈದರಾಬಾದ್ ನಗರದಲ್ಲೇ ಇದ್ದರು. ಶ್ರೀ ಗುಡಗುಂಟೆ ರಾಮಾಚಾರ್ಯರು ಮತ್ತು ಶ್ರೀ ಜನಾರ್ದನರಾವ್ ದೇಸಾಯಿ, ಇವರಿಬ್ಬರೂ ರಾಜಧಾನಿಯಿಂದಲೇ ಈ ಚಳವಳಿಯನ್ನು ನಡೆಸುತ್ತಿದ್ದರು. ಸೋದರ ಸಂಸ್ಥೆಗಳಾದ ಆಂಧ್ರ ಮಹಾಸಭೆ, ಮಹಾರಾಷ್ಟ್ರ ಪರಿಷತ್ತುಗಳ ಜೊತೆಯಲ್ಲಿ ಈ ಚಳವಳಿ ಕೆಲಸಮಾಡಿ, ಜನರಲ್ಲಿ ರಾಜಕೀಯ ಜಾಗೃತಿಯನ್ನು ಉಂಟುಮಾಡಲು ಪ್ರಯತ್ನಿಸಿತು. ಆಗ ಇಡೀ ಸಂಸ್ಥಾನಕ್ಕೆ ಸಂಬಂಧಿಸಿದಂತೆ ಒಂದು ಸಂಸ್ಥೆ ಬೇಕು ಎಂದು ಅನಿಸಿತು. ಈ ಮೂರೂ ಭಾಷೆಯ ಭಾಗಗಳಿಗೆ ಒಂದೇ ವೇದಿಕೆ ಬೇಕು ಎನಿಸಿತು. ಅದರಂತೆ 1938 ರಲ್ಲಿ ಸ್ಟೇಟ್ ಕಾಂಗ್ರೆಸ್ ರೂಪಗೊಂಡಿತು. ಇನ್ನೂ ಅಸ್ತಿತ್ವಕ್ಕೆ ಬರುವ ಮೊದಲೇ ಸರಕಾರ ಅದನ್ನು ನಿಷೇಧಿಸಿತು. ನಾನಲ್ ಗೋವಿಂದರಾಯರ ನೇತೃತ್ವದಲ್ಲಿ ಕರ್ನಾಟಕದ ಜನಾರ್ದನರಾವ್ ದೇಸಾಯಿ, ಮಹಾರಾಷ್ಟ್ರದ ಶ್ರೀನಿವಾಸ ರಾವ್ ಬೋರೀಕರ್, ತೆಲಂಗಾಣದ ರಾವಿ ನಾರಾಯಣ ರೆಡ್ಡಿ, ಹೈದರಾಬಾದ್ ನಗರದ ರಾಮಕೃಷ್ಣ ಧೂತ್—ಇವರು ಆ ನಿಷೇಧಾಜ್ಞೆಯನ್ನು ಮುರಿದರು. ಹಲವಾರು ಮಂದಿ ಸೆರೆಯಾದರು. ಸತ್ಯಾಗ್ರಹ ಮುಂದುವರಿಯಿತು. ಸುಮಾರು 400 ಜನರು ಸೆರೆಯಾದರು. ಮಹಾತ್ಮಾ ಗಾಂಧಿಯವರ ಸಲಹೆಯ ಮೇರೆಗೆ ಸತ್ಯಾಗ್ರಹವನ್ನು ನಿಲ್ಲಿಸಲಾಯಿತು. ನಿಷೇಧಾಜ್ಞೆಯನ್ನು ಹಿಂದೆಗೆದುಕೊಳ್ಳುವಂತೆ ಮಾಡುವುದಾಗಿ ಗಾಂಧಿಜೀ ಹೇಳಿದರು. ಗಾಂಧಿಜೀಗೂ ಆಗಿನ ಪ್ರಧಾನ ಮಂತ್ರಿಯಾಗಿದ್ದ ಅಕ್ಬರ್ ಹೈದರಿಗೂ ಬಹುಕಾಲ ಪತ್ರವ್ಯವಹಾರ ನಡೆಯಿತು. ಸಮಾಜದ ಬಹುಸಂಖ್ಯಾತರ ಮೇಲೆ ನಡೆಯುತ್ತಿದ್ದ ಹಿಂಸಾಚಾರಗಳ ಬಗ್ಗೆ ಹೈದರಿಗೆ ಬರೆದು, ಸ್ಟೇಟ್ ಕಾಂಗ್ರೆಸ್ ಮೇಲಿನ ನಿಷೇಧಾಜ್ಞೆಯನ್ನು ಹಿಂದೆಗೆದುಕೊಳ್ಳುವಂತೆ ಅವರಿಗೆ ಹೇಳಿದರು-ಗಾಂಧಿಯವರು. ಎರಡನೆಯ ಕರ್ನಾಟಕ ಪರಿಷತ್ತು ಬೀದರಿನಲ್ಲಿ ನಡೆಯಿತು. ಅಲ್ಲಿನ ಪರಿಷತ್ತನ್ನು ಮುಗಿಸಿಕೊಂಡು ಹೋಗಿದ್ದವರು ಹೈದರಾಬಾದನ್ನು ತಲಪುವ ಮೊದಲೇ ಬೀದರಿನ ಕೆಲವು ಭಾಗಗಳು ಅಗ್ನಿ ನಾರಾಯಣನಿಗೆ ಆಹುತಿಯಾದವು. "ಲಂಕಾ ದಹನದ ತರುವಾಯ ಬಂತು ಬೀದರ ದಹನ"—ಎಂದು ಉದ್ಗಾರ ತೆಗೆದರು ಗಾಂಧಿಜೀ. ಅವರು ಬರೆದ ಕಾಗದದ ಅವರ ಸ್ವಹಸ್ತಾಕ್ಷರದ ಕರಡು ಪ್ರತಿಯೊಂದರ ಕಲವು ಮಾತನ್ನು ಕೆಳಗೆ ಕೊಟ್ಟಿದೆ :

"ಬೀದರಿನ ಘಟನೆಗಳು ಕಣ್ತೆರೆಯಿಸುವಂಥವು. ಸಂಸ್ಥಾನದಲ್ಲಿ ಕೆಲವು ಕಾಲದಿಂದ ಏನು ನಡೆಯು ತ್ತಿದೆಯೋ ಅದಕ್ಕೆ ಕಳಸ ಇದ್ದ ಹಾಗೆ ಇದೆ ಇದು. ಸಂಸ್ಥಾನದಲ್ಲಿ ಪ್ರಾಣಕ್ಕಾಗಲಿ, ಆಸ್ತಿಗಾಗಲಿ ಸುರಕ್ಷೆ ಇಲ್ಲ. ಕೇವಲ ಗುಲಾಮರಾಗಿ ನಡೆದುಕೊಂಡವರಿಗೆ ಮಾತ್ರ ಸುರಕ್ಷೆ. ಬೀದರಿನ ಬಗ್ಗೆ ಅವರು ಹೊರಡಿಸಿರುವ ಸುದ್ದಿ ಪತ್ರ' ಅಲ್ಲಿ ನ್ಯಾಯಸಿಗುತ್ತದೆ ಎಂಬ ಆಸೆಯನ್ನು ಧ್ವಂಸಮಾಡಿದೆ, ಜವಾಬುದಾರಿ ಸರಕಾರದ



ಬೇಡಿಕೆಯನ್ನು ಮತ್ತಷ್ಟು ಬಲಗೊಳಿಸಿದೆ. ಆ ಬೇಡಿಕೆ ದುರ್ದಮ್ಯವಾಗಿದೆ. ಆದರೆ ಪ್ರತಿಯೊಬ್ಬ ಶಿಷ್ಟ ಪೌರನ ತುರ್ತಿನ ಉದ್ದೇಶ, ತನ್ನ ಕೈಲಾದುದೆಲ್ಲವನ್ನೂ ಮಾಡಿ ಇದಕ್ಕೆ ಪರಿಹಾರ ಗಳಿಸಿ ಮತ್ತೊಮ್ಮೆ ಬೀದರಿನಂಥ ಘಟನೆ ನಡೆಯದಂತೆ ಮಾಡುವುದೇ '.

ಕಾಂಗ್ರೆಸ್ ಚಳವಳಿ ಪೂರ್ಣಪ್ರವಾಹದಲ್ಲಿ ಇದ್ದಾಗ ಸಂಸ್ಥಾನದ ವಿದ್ಯಾರ್ಥಿಗಳು ಕಾಲೇಜನ್ನು ಬಿಡುವ ಚಳವಳಿಯನ್ನು ಪ್ರಾರಂಭಿಸಿದರು. ಅದಕ್ಕೆ ಸಾಧಾರಣ ಜನತೆಯಲ್ಲಿ ' ವಂದೇ ಮಾತರಂ ಚಳವಳಿ ' ಎಂಬ ಹೆಸರು ಬಂತು. ಕಾಲೇಜು ವಿದ್ಯಾರ್ಥಿನಿಲಯಗಳಲ್ಲಿ ವಂದೇ ಮಾತರಂ ಹಾಡನ್ನು ಹಾಡಲು ಸರ್ಕಾರ ನಿಷೇಧ ಹಾಕಿತ್ತು. ವಿದ್ಯಾರ್ಥಿಗಳು ಪ್ರತಿಭಟಿಸಿದರು. ಸಂಸ್ಥಾನದಲ್ಲೆಲ್ಲ ಈ ಚಳವಳಿ ಕಾಳ್ಗಿಚ್ಚಿನಂತೆ ಹರಡಿ ಹೋಯಿತು. ಹಿಂದೂ ವಿದ್ಯಾರ್ಥಿಗಳು ಇಡೀ ಸಂಸ್ಥಾನದಲ್ಲೆಲ್ಲ ಕಾಲೇಜುಗಳನ್ನೂ ಶಾಲೆಗಳನ್ನೂ ಬಹಿಷ್ಕರಿಸಿದರು. ಗುಲ್ಬರ್ಗದ ಡಾ। ಪದ್ಮನಾಭ ಪುರಾಣಿಕ್ ಮತ್ತು ಬೀದರಿನ ನರೇಂದ್ರದತ್ ಇಬ್ಬರೂ ವಿದ್ಯಾರ್ಥಿ ಚಳವಳಿಯ ಮುಖಂಡರು. ಈ ವಿದ್ಯಾರ್ಥಿಗಳ ಪ್ರತಿಭಟನೆ ಸರಕಾರದ ಮೇಲೆ ತುಂಬಾ ಪ್ರಭಾವ ಬೀರಿತು.

ಗಾಂಧಿಜೀ ಆರಂಭಿಸಿದ "ಭಾರತ ಬಿಟ್ಟು ತೊಲಗಿ" ಚಳವಳಿ ಹಿಂದುಸ್ಥಾನದಲ್ಲಿ ಬ್ರಿಟಿಷರ ಆಡಳಿತದ ತಳಹದಿಯನ್ನೇ ಅಲ್ಲಾಡಿಸಿತು. ಎರಡನೆಯ ಮಹಾಯುದ್ಧ ಆದ ಮೇಲೆ ಪರಿಸ್ಥಿತಿ ಬೇಗ ಬೇಗ ಬದಲಾಗುತ್ತಿತ್ತು. ಬ್ರಿಟಿಷ್ ಸಚಿವ ಮಂಡಲದ ನಿಯೋಗವೊಂದು ಹಿಂದೂಸ್ಥಾನಕ್ಕೆ ಬಂದಿತು. ಭಾರತೀಯರಿಗೆ ಅಧಿಕಾರವನ್ನು ವಹಿಸಿಕೊಡುವ ಉದ್ದೇಶ ಅದರದು. ಶ್ರೀ ಜವಹರಲಾಲ್ ನೆಹರು ಸ್ಟೇಟ್ ಕಾಂಗ್ರೆಸ್ಸಿನ ಮೇಲಿನ ನಿಷೇಧಾಜ್ಞೆಯನ್ನು ಉಪಸಂಹರಿಸುವಂತೆ ನಿಜಾಮರಿಗೆ ಬರೆದರು. ನಿಷೇಧಾಜ್ಞೆಯನ್ನು ಹಿಂದೆಗೆದುಕೊಳ್ಳುವಂತೆ ಶ್ರೀ ಗುಡಗಂಟೆ ರಾಮಾಚಾರ್ಯರೂ ಸರಕಾರದ ಸಂಗಡ ಪತ್ರವ್ಯವಹಾರ ಮಾಡುತ್ತಿದ್ದರು. ಸಂಸ್ಥಾನೀ ಜನರ ಪರಿಷತ್ತು ಮಾಡಿದ ತೀರ್ಮಾನವನ್ನು ಆಚರಣೆಗೆ ತರಲು ಶ್ರೀ ಎ. ಕೆ. ವಾಘಮಾರೆ, ಡಾ। ಜಿ. ಎಸ್. ಮೇಲ್ಕೋಟೆ, ಶ್ರೀ ದಿಗಂಬರ ರಾವ್ ಬಿಂದು, ಶ್ರೀ ಕೃಷ್ಣಾಚಾರ್ಯ ಜೋಶಿ—ಇವರದೊಂದು ಸಮಿತಿಯನ್ನು ಮಾಡಿ ಸತ್ಯಾಗ್ರಹ ಮಾಡುವಂತೆ ಸ್ವಾಮಿ ರಾಮಾನಂದ ತೀರ್ಥರು ತೀರ್ಮಾನಿಸಿದರು. ಆಗ ಸರಕಾರ ಸಂಸ್ಥಾನದ ಕಾಂಗ್ರೆಸಿನ ಮೇಲೆ ನಿಷೇಧಾಜ್ಞೆಯನ್ನು ಹಿಂದೆಗೆದುಕೊಳ್ಳಲು ಒಪ್ಪಿಕೊಂಡಿತು.

ಗುಲ್ಬರ್ಗ ಜಿಲ್ಲೆಯ ಸ್ವಾಮಿ ರಾಮಾನಂದ ತೀರ್ಥರು ಜನತೆಯ ನಾಯಕರು ಎಂದು ಎಲ್ಲರೂ ಒಪ್ಪಿಕೊಳ್ಳುತ್ತಿದ್ದರು. ಸಂಸ್ಥೆಗೆ ನಿಷೇಧವಿದ್ದರೂ ಎಂಟು ವರ್ಷಕಾಲ ಕಾಂಗ್ರೆಸ್ ಬಾವುಟವನ್ನು ಎತ್ತಿ ಹಿಡಿದೇ ಇದ್ದರು ಅವರು. ನಿಷೇಧಾಜ್ಞೆ ಹೊರಟು ಹೋದ ಮೇಲೆ ಮೂರೂ ಪ್ರಾಂತೀಯ ಸಭೆಗಳು—ಕರ್ಣಾಟಕ ಪರಿಷತ್ತು, ಮಹಾರಾಷ್ಟ್ರ ಪರಿಷತ್ತು ಹಾಗೂ ಆಂಧ್ರ ಮಹಾಸಭೆ—ಎಲ್ಲವೂ ಒಂದಾಗಿ ಸಂಸ್ಥಾನ ಕಾಂಗ್ರೆಸ್ ಆದವು. ಇವು ಮೂರು ಅದರ ಪ್ರಾಂತೀಯ ವಿಭಾಗಗಳು ಆದವು. ಸ್ವಾಮಿ ರಾಮಾನಂದ ತೀರ್ಥರನ್ನು ಸಂಸ್ಥಾನದ ಕಾಂಗ್ರೆಸಿನ ಮೊದಲನೆಯ ಅಧ್ಯಕ್ಷರಾಗಿ ಚುನಾಯಿಸಿದರು. ಪ್ರಥಮ ಅಧಿವೇಶನ 1946 ರ ಜುಲೈಯಲ್ಲಿ ನಡೆಯಿತು. ಕೆಳಗಿನ ಎರಡು ತೀರ್ಮಾನಗಳು ಅಂಗೀಕೃತವಾದವು :

(1) ಹೈದರಾಬಾದ ಸಂಸ್ಥಾನ ಭಾರತದ ಒಕ್ಕೂಟಕ್ಕೆ ಸೇರಬೇಕು.
(2) ಜವಾಬ್ದಾರಿ ಸರಕಾರವನ್ನು ಕೊಡಬೇಕು.

ಸಂಸ್ಥಾನದ ಜನತೆಯ ರಾಜಕೀಯ ಇತಿಹಾಸದಲ್ಲಿ ಅದು ಬಹಳ ವಿಷಮ ಘಟ್ಟ. ಭಾರತ ಸ್ವತಂತ್ರ

ಸಾರ್ವಭೌಮ ಗಣರಾಜ್ಯ ಆಗುವಾಗ ಹೈದರಾಬಾದಿನ ನಿಜಾಮ ಆದರಿಂದ ಹೊರಗೆ ಉಳಿದು ಸ್ವತಂತ್ರ ಆಗಿರಬೇಕು ಎಂದು ಬಯಸಿದ. ಅಪಾರ ತ್ಯಾಗಮಾಡಿದ ಜನರು ಈ ಸವಾಲನ್ನು ಎತ್ತಿಕೊಂಡರು. 1946 ಆಗಸ್ಟ್ 13 ರ ದಿನ ಒಂದು ಪ್ರಕಟಣೆ ಹೊರಡಿಸಿ ಭಾರತೀಯ ಒಕ್ಕೂಟದ ಧ್ವಜವನ್ನು ಯಾರೂ ಹಾರಿಸಕೂಡದು ಎಂದು ನಿಜಾಮ ನಿಷೇಧಿಸಿದ. ಎಲ್ಲರೂ ಸಂಭ್ರಮಯುಕ್ತವಾಗಿ ರಾಷ್ಟ್ರೀಯ ಧ್ವಜವನ್ನು ಹಾರಿಸುವಂತೆ ಸ್ವಾಮೀಜೀ ಬಿನ್ನಯಿಸಿದರು. ಸಂಸ್ಥಾನದ ಜನ ಹೈದರಾಬಾದು ಭಾರತದ ಅವಿಭಾಜ್ಯ ಅಂಗ ಎಂದು ಭಾವಿಸಿ, ಧ್ವಜ ತಮ್ಮದೇ ಎಂದು ತಿಳಿದು ಏನೇ ಬರಲಿ, ಎಷ್ಟೇ ಬೆಲೆ ತೆರಬೇಕಾಗಿ ಬರಲಿ, ಅದನ್ನು ಹಾರಿಸಿಯೇ ತೀರಬೇಕು ಎಂದು ನಿರ್ಧರಿಸಿದರು. ನಿಜಾಮರ ಸರಕಾರ ಈ ಧ್ವಜಾರೋಹಣ ಸಮಾರಂಭವನ್ನು ತಡೆಗಟ್ಟಲು ಬಯಸಿತು. ಪೋಲಿಸರು ಸಂಸ್ಥಾನದ ಕಾಂಗ್ರೆಸಿನ ಅಧ್ಯಕ್ಷರಾದ ಸ್ವಾಮಿ ರಾಮಾನಂದ ತೀರ್ಥರನ್ನೂ ಡಾ॥ ಮೇಲ್ಕೋಟೆ ಮತ್ತು ಕೃಷ್ಣಾಚಾರ್ಯ ಜೋಶಿಯವರನ್ನೂ (ಇಬ್ಬರೂ ಸಮಿತಿಯ ಸದಸ್ಯರು) 1947 ರ ಆಗಸ್ಟ್ 15ನೆಯ ತಾರೀಖಿನ ಬೆಳಗು ಮುಂಜಾನೆ ಪ್ರಿವೆಂಟಿವ್ ಡಿಟೆನ್‌ಷನ್ ಆಕ್ಟ್ ಪ್ರಕಾರ ದಸ್ತಗಿರಿ ಮಾಡಿದರು. ಅವತ್ತೇ ಸಂಸ್ಥಾನಾದ್ಯಂತ ದಸ್ತಗಿರಿಗಳಾದವು. ಹೈದರಾಬಾದ ಕರ್ನಾಟಕದ ಪ್ರಮುಖ ಕಾಂಗ್ರೆಸ್ ಮುಂದಾಳುಗಳು, ಬೀದರಿನ ಎಕ್ಬೆಳ್ಳೀಕರ್ ಶ್ರೀನಿವಾಸರಾಯರು, ಗುಲ್ಬರ್ಗದ ಹನುಮಂತರಾವ್ ಕಕ್ಕೇರಿ ಹಾಗೂ ರಾಯಚೂರಿನ ಗುಡಿಹಾಳ ಹನುಮಂತರಾಯರು—ಇವರನ್ನೂ ಇತರ ಮುಖ್ಯ ಕಾರ್ಯಕರ್ತರನ್ನೂ ಸೆರೆಗೆ ಒಯ್ದರು. ಹೈದರಾಬಾದ ಕಾಂಗ್ರೆಸು ಪ್ರಾರಂಭಮಾಡಿದ ಈ ಹೋರಾಟ ಹದಿನಾಲ್ಕು ತಿಂಗಳು ಕಾಲ ನಡೆಯಿತು. ಸಂಸ್ಥಾನದಲ್ಲಿ ಒಟ್ಟು ಇಪ್ಪತ್ತು ಸಾವಿರ ಜನರು ಸೆರೆಗೆ ಹೋದರು. ಐದು ಸಾವಿರ ಜನರು ಕೊಲೆಯಾದರೆಂದು ವರದಿಯಾಯಿತು. ರಜಾಕಾರರಿಂದ–ನಿಜಾಮರ ಆಶ್ರಯ ಪಡೆದ ಆಯುಧಪಾಣಿ ಮುಸ್ಲಿಂ ಸ್ವಯಂಸೇವಕರಿಂದ, ಅನೇಕ ಕ್ರೂರ ಕೃತ್ಯಗಳು ಹೆಚ್ಚುತ್ತ ಹೋದವು. ಬೆಣಕಲ್ಲಿನ ಶ್ರೀ ಭೀಮಸೇನರಾವ್ ದೇಸಾಯಿ ಅವರನ್ನು ಗುಲ್ಬರ್ಗ ಜೇಲಿನಲ್ಲಿ ಲಾಠಿಗಳಿಂದ ಹೊಡೆದು ಸಾಯಿಸಲಾಯಿತು. ಗಡಿಪ್ರದೇಶದಲ್ಲಿ ಚಿಟ್ಟಿ ಗುಪ್ಪದ ಶ್ರೀ ಬಸವರಾಜರು ಬಿದ್ದರು. ಸಂಸ್ಥಾನದಲ್ಲಿ ನ್ಯಾಯ, ನಿಯಮ ಯಾವುದೂ ಇರಲಿಲ್ಲ. ಸುತ್ತಮುತ್ತಲಿನ ಭಾರತದ ಒಕ್ಕೂಟದ ಹಳ್ಳಿಗಳನ್ನೂ ಮುಸ್ಲಿಮ್ ರಜಾಕಾರರು ಮುತ್ತ ತೊಡಗಿದರು. ಗಡಿಯಲ್ಲಿ ಸಾವಿರಾರು ಜನ ಕಾಂಗ್ರೆಸ್‌ಕಾರ್ಯಕರ್ತರು ಒಂದು ಪ್ರತಿರೋಧದ ಚಳವಳಿಯನ್ನು ಪ್ರಾರಂಭಿಸಿದರು. ಈ ಗಡಿಯ ಚಳವಳಿಯನ್ನು ಮಾಡಿಸುತ್ತಾ ಶ್ರೀ ಜನಾರ್ದನ ರಾವ್ ದೇಸಾಯಿ ಗದುಗನ್ನು ತಮ್ಮ ಮುಖ್ಯಕೇಂದ್ರವಾಗಿ ಮಾಡಿಕೊಂಡಿದ್ದರು. ಕರ್ನಾಟಕದ ಮುಖಂಡರು ನಿಜಾಮ ಸಂಸ್ಥಾನದ ಈ ಸ್ವಾತಂತ್ರ್ಯದ ಚಳವಳಿಗೆ ನೆರವಾದರು.

1947ನೆಯ ನವೆಂಬರ್ 30ರಂದು, ನಿಜಾಮನೊಡನೆ ಒಂದು 'ಯಥಾಸ್ಥಿತಿ' ಒಪ್ಪಂದ ಅಂಗೀಕೃತವಾಯಿತು. ಭಾರತ ಸರ್ಕಾರಕ್ಕೂ ನಿಜಾಮನಿಗೂ ನಡುವೆ ಒಂದು ಒಪ್ಪಂದಕ್ಕಾಗಿ ಸಂಧಾನ ನಡೆಯುತ್ತಿತ್ತು. ನಿಜಾಮನು ಭಾರತದ ಒಕ್ಕೂಟಕ್ಕೆ ಸೇರಲು ಒಪ್ಪಲಿಲ್ಲ. ರಜಾಕಾರರಿಂದ ದಕ್ಷಿಣ ಭಾರತದಲ್ಲಿ ಶಾಂತಿಗೆ ಗಂಡಾಂತರ ಬಂದೀತೆಂಬ ಭಯವುಂಟಾಯಿತು. ಸಂಸ್ಥಾನದಲ್ಲಿ ಅರಾಜಕ ಪರಿಸ್ಥಿತಿ ಇತ್ತು. ಭಾರತ ಸರಕಾರದ ಉಪಪ್ರಧಾನಿ ವಲ್ಲಭಭಾಯಿ ಪಟೇಲರು ಕಟ್ಟಕಡೆಗೆ ಪೋಲಿಸ್ ಕಾರ್ಯಾಚರಣೆಯನ್ನು ಕೈಗೊಳ್ಳಬೇಕಾಯಿತು. 1948ನೆಯ ಸೆಪ್ಟೆಂಬರ್ 13ರಂದು ಪೋಲೀಸ್ ಕಾರ್ಯಾಚರಣೆ ಕೈಗೊಂಡರು. ಇದರಿಂದ ಹೈದರಾಬಾದಿನ ಜನತೆಯ ಚಳವಳಿ ಯಶಸ್ವಿಯಾಗಿ ಮುಕ್ತಾಯಗೊಳ್ಳುವಂತೆ ಆಯಿತು.

ಪೋಲಿಸ್ ಕಾರ್ಯಾಚರಣೆಯ ತರುವಾಯ ಸಂಸ್ಥಾನದಲ್ಲಿ ಶಾಂತಿಯ ಪುನಃಸ್ಥಾಪನೆಯಾಯಿತು. ಭಾರತದ ಒಕ್ಕೂಟಕ್ಕೆ ಸೇರಿ ಹೈದರಾಬಾದು ಭಾರತೀಯ ಗಣರಾಜ್ಯದ ಅವಿಭಾಜ್ಯ ಅಂಗವಾಯಿತು. ಸಂಸ್ಥಾನದ ಕಾಂಗ್ರೆಸ್ಸು ಭಾರತೀಯ ರಾಷ್ಟ್ರೀಯ ಮಹಾಸಭೆಯಲ್ಲಿ (ಇಂಡಿಯನ್ ನ್ಯಾಷನಲ್ ಕಾಂಗ್ರೆಸ್) ಲೀನವಾಗಿ ಅದರ ಪ್ರಾಂತೀಯ ಶಾಖೆಯಾಯಿತು.

ಹೈದರಾಬಾದಿನ ಸ್ವಾತಂತ್ರ್ಯ ಚಳವಳಿಗೆ ಐತಿಹಾಸಿಕ ಪ್ರಾಧಾನ್ಯವಿದೆ. ಕಾಶ್ಮೀರದಲ್ಲೂ ಗೋವಾದಲ್ಲೂ ಆದ ಸ್ವಾತಂತ್ರ್ಯ ಚಳವಳಿಗಳಿಗೆ ಇದನ್ನು ಹೋಲಿಸಬಹುದು. ಈ ಮೂರೂ ರಾಜ್ಯಗಳಲ್ಲಿ ತನ್ನ ಪೋಲೀಸರ ಹಾಗೂ ಸೈನ್ಯದ ಕಾರ್ಯಾಚರಣೆಗಳಿಂದ ಭಾರತ ಸರಕಾರವು ನಡುವೆ ಪ್ರವೇಶಿಸಬೇಕಾಯಿತು. ಭಾರತದ ಒಕ್ಕೂಟದಲ್ಲಿ ಒಂದು ಭಾಗವಾಗಲು ಜನರು ಬಹಳ ಕಷ್ಟಪಟ್ಟು ಹೋರಾಡಬೇಕಾಯಿತು. ಸಂಸ್ಥಾನದ ಪುನರ್ ವ್ಯವಸ್ಥೆ ಆದ ಮೇಲೆ 'ಹೈದರಾಬಾದ ಕರ್ನಾಟಕ' ಎಂದರೆ ರಾಯಚೂರು, ಗುಲ್ಬರ್ಗ, ಬೀದರ್—ಈ ಮೂರು ಜಿಲ್ಲೆಗಳು ಈ ರಾಜಕೀಯ ಹಿನ್ನೆಲೆಯಲ್ಲಿ ಈಗಿನ ಮೈಸೂರು ಸಂಸ್ಥಾನದ ಅಂಗವಾಗಿ ಸೇರಿದವು.

ಮೂಲಲೇಖಕರು : ಶ್ರೀ ಕೃಷ್ಣಾಚಾರ್ಯ ಜೋಶಿ
ಅನುವಾದಕರು : ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ

# ಅಧ್ಯಾಯ 5

## ಸ್ವಾತಂತ್ರ್ಯದ ಪ್ರಮುಖ ಆಂದೋಲನಗಳು

ಕರ್ಣಾಟಕದಲ್ಲಿಯ ಕಾಂಗ್ರೆಸಿನ ಕುರಿತ ಅಧ್ಯಾಯವು ಇಲ್ಲಿಯ ರಾಷ್ಟ್ರೀಯತದ ಜಾಗೃತಿ ಮತ್ತು ರಾಷ್ಟ್ರೀಯ ಆಂದೋಲನಗಳ ಬೆಳವಣಿಗೆಯ ಸಂಕ್ಷಿಪ್ತ ವೃತ್ತಾಂತವನ್ನು ಕೊಟ್ಟಿದೆ. ಆಗ ದೇಶದ ಆ ಭಾಗದಲ್ಲಿಯ ಸಾಮುದಾಯಿಕ ಪ್ರಮಾಣದಲ್ಲಿ ನಡೆದ ಪ್ರಮುಖ ಸ್ವಾತಂತ್ರ್ಯಾಂದೋಲನಗಳ ಹಾಗೂ 1947ರ ಅಗಸ್ಟಿನಲ್ಲಿ ಸ್ವಾತಂತ್ರ್ಯ ಸಾಧನೆಗಾಗಿ ಕರ್ಣಾಟಕವು ಸಲ್ಲಿಸಿದ ಕಾರ್ಯ–ಇವುಗಳ ಚಿಕ್ಕದೊಂದು ಇತಿವೃತ್ತವನ್ನು ಕೊಡುವುದು ಅಗತ್ಯವೆಂದು ಭಾವಿಸಲಾಗಿದೆ.

1921–22ರ ಅಹಿಂಸಾತ್ಮಕ ಅಸಹಕಾರವೆ ಮೊತ್ತಮೊದಲಿನ ರಾಷ್ಟ್ರವ್ಯಾಪಿಯಾದ ಸಾಮುದಾಯಿಕ ಆಂದೋಲನವು. ಪ್ರಕಟವಾಗಿ ಅದು ಪಂಜಾಬ ಹಾಗೂ ಖಿಲಾಫತ್‌ಗಳ ಅನ್ಯಾಯ ಅಕೃತ್ಯಗಳನ್ನು ಸರಿಪಡಿಸಲೆಂದು ಇದ್ದರೂ, "ಒಂದು ವರ್ಷದಲ್ಲಿ ಸ್ವರಾಜ್ಯ" ಎಂಬುದೆ ಅದರ ಘೋಷಣೆ ಆಗಿತ್ತು. ಅನಂತರದ್ದು 1930ರ ಉಪ್ಪಿನ ಸತ್ಯಾಗ್ರಹವನ್ನೊಳಗೊಂಡ ಸವಿನಯ ಕಾಯಿದೆ ಭಂಗದ ಚಳವಳಿಯಾಗಿತ್ತು. ಅದನ್ನು 1934ರಲ್ಲಿ ವಿಧಿವತ್ತಾಗಿ ಹಿಂದೆಗೆದುಕೊಳ್ಳಲಾಯಿತು. ಆ ಮೇಲೆ 1940ರ ವೈಯಕ್ತಿಕ ಸತ್ಯಾಗ್ರಹವು ಬಂದಿತು ; ಅದರ ಬೆನ್ನಿಗೆ 1942ರ "ಚಲೇಜಾವ್" (ಕ್ವಿಟ್ ಇಂಡಿಯಾ) ಹೋರಾಟ ಸ್ವರಾಜ್ಯದ ಆಗಮನಕ್ಕೆ ಹಾದಿ ಮಾಡಿಕೊಟ್ಟ ಕೊನೆಯ ಸಾಮುದಾಯಕ ಆಂದೋಲನವದು.

ಕರ್ಣಾಟಕದಲ್ಲಿ, ಆರಂಭದಲ್ಲಿ ಜಸ್ಟೀಸ್ ಪಾರ್ಟಿ ಮತ್ತು ಬ್ರಾಹ್ಮಣೇತರ ಚಳವಳಿ ತನ್ನ ಪ್ರಭಾವ ಬೀರಿತ್ತೆಂಬುದು ನಿಜ. ಹಾಗೆ ಆಗಿದ್ದರೂ ಆ ಚಳವಳಿಯ ಬಹಳಷ್ಟು ಮುಂದಾಳುಗಳು ದೂರವೆ ನಿಂತಿದ್ದರು. 1921ರಲ್ಲಿ ಕೂಡಾ ಕಾಂಗ್ರೆಸಿನ ಕರೆಗೆ ಸಾಮಾನ್ಯವಾಗಿ ಬಹುಜನ ಸಮುದಾಯವೆ ಓಗೊಟ್ಟಿತೆಂದು ಹೇಳಬಹುದು. 1930ರಲ್ಲಿ ಸಿದ್ದಪ್ಪ ಹೊಸಮನಿ ಮತ್ತು ಮಂಜಪ್ಪ ಹರ್ಡೇಕರರು ಅಲ್ಲಲ್ಲಿ ಸಭೆ ಸೇರಿಸಿ ಸ್ವರಾಜ್ಯಕ್ಕಾಗಿ ಸವಿನಯ ಕಾಯಿದೆಭಂಗ ಚಳವಳಿಯಲ್ಲಿ ಎಲ್ಲರೂ ಭಾಗವಹಿಸಬೇಕೆಂದು ಕರೆನೀಡುವ ಗೊತ್ತುವಳಿಗಳನ್ನು ಮಾನ್ಯ ಮಾಡಿಸಿದಾಗ, ಉಪ್ಪಿನ ಸತ್ಯಾಗ್ರಹದ ಪ್ರಚಂಡತೆಯು ಸಾಮುದಾಯಿಕ ಪರಿಮಾಣವನ್ನು ಪಡೆಯಿತು. ಅಂದಿನಿಂದ ಮುಂದೆಲ್ಲ ಕಾಂಗ್ರೆಸಿಗೆ ಘನವಾದ ಬೆಂಬಲ ದೊರೆಯುತ್ತ ಹೋಯಿತು.

### 1 ಅಸಹಕಾರ

1919ರಲ್ಲಿ ಗಾಂಧಿಜೀ, ಸತ್ಯಾಗ್ರಹ ಆಂದೋಲನವನ್ನು ಆರಂಭಿಸುವ ಸಮಯಕ್ಕೆ ಕರ್ಣಾಟಕವು ಸ್ವಾತಂತ್ರ್ಯದ ಹೋರಾಟದಲ್ಲಿ ಸಾರ್ಥಕವಾದ ಸಾಹಸದಿಂದ ನುಗ್ಗಲಿಕ್ಕೆ ಹದಗೊಂಡೇ ಇತ್ತು. ಅಮೃತಸರ ಕಾಂಗ್ರೆಸು (1919) ಕರ್ಣಾಟಕದ ಎಲ್ಲ ಭಾಗಗಳಿಂದ ದೊಡ್ಡ ಸಂಖ್ಯೆಯಲ್ಲಿ ಪ್ರತಿನಿಧಿಗಳನ್ನು ಆಕರ್ಷಿಸಿತು.

1920ರಲ್ಲಿ ನಾಗಪುರ ಕಾಂಗ್ರೆಸಿಗೆ ನಮ್ಮಲ್ಲಿಂದ ೪00ರಷ್ಟು ಪ್ರತಿನಿಧಿಗಳು ಉಪಸ್ಥಿತರಿದ್ದರು. ಇದಕ್ಕೂ ತುಸು ಮೊದಲು ಗಾಂಧಿಜೀಯ ಸಂಚಾರವು ದೇಶಭಕ್ತಿಯ ಉತ್ಸಾಹದ ಮಹಾ ತೆರೆಯನ್ನು ಎಬ್ಬಿಸಿತ್ತು. ನಾಗಪುರ ಕಾಂಗ್ರೆಸಿಗೆ ಹೋದವರು ಹಿರಿಯ ಸ್ಫೂರ್ತಿಯನ್ನು ಪಡೆದು ತಂದರು. ಜನತೆ ಸ್ವಾತಂತ್ರ್ಯದ ಹೊಸ ಭಾವದಲ್ಲಿ ಉಸಿರಾಡಿತು. ಮಹಾತ್ಮಾ ಗಾಂಧಿಯವರ ಸಂತತ್ವವು ಜನತೆಯ ಮನಸ್ಸನ್ನು ಸೂರೆಗೊಂಡಿತು. ಮತ್ತು ಮೊದಲ ಬಾರಿ ಜನತೆಗೆ ಸಮೀಪದ ಭವಿಷ್ಯದಲ್ಲಿಯೇ ಸ್ವರಾಜ್ಯವನ್ನು ಸಾಧಿಸುವ ಸಂಭವ ಇರುವುದೆಂಬ ಅರಿವುಂಟಾಯಿತು. ಹಳೆಯ ಮತ್ತು ಹೊಸ ಪತ್ರಿಕೆಗಳು ಈ ಸಂದೇಶವನ್ನು ನಾಡಿನ ಉದ್ದಗಲಕ್ಕೂ ಸಾರ್ವತ್ರಿಕವಾಗಿ ಹಬ್ಬಿಸಿದವು.

ಮೊದಲ ಬಾರಿ ಪೂರ್ಣಾವಧಿ ಕಾರ್ಯಕರ್ತರು ತಮ್ಮ ಎಲ್ಲ ಹಣಗಳಿಕೆಯ ವೃತ್ತಿವ್ಯವಸಾಯಗಳನ್ನು ಗಾಳಿಗೆ ತೂರಿ, ತಮ್ಮ ಆಯುಷ್ಯವನ್ನೇ ರಾಷ್ಟ್ರದ ಸೇವೆಗಾಗಿ ನಿವೇದಿಸಿಕೊಳ್ಳಲಿಕ್ಕೆ ಮುಂದೆ ಬಂದರು. ಸರ್ವಸ್ವಾರ್ಪಣೆ ಮಾಡಿದ ಉತ್ತರ ಕನ್ನಡದ ಟಿ.ಎಸ್. ನಾಯಕರು ಮತ್ತು ಬಿಜಾಪುರದ ಕಾಕಾ ಕಾರಖಾನೀಸರಂಥ ಸತ್ಯಾಗ್ರಹಿಗಳು ಗಾಂಧಿಯವರ ಸಾಬರ್ಮತಿ ಆಶ್ರಮದಲ್ಲಿ ಹೋಗಿ ವಾಸಿಸಿ ಸತ್ಯಾಗ್ರಹದ ನಿಜವಾದ ತತ್ವಗಳನ್ನು ಅರಗಿಸಿಕೊಂಡರು. ಇವರು ಇಂದಿಗೂ ತಮ್ಮ ನೈಷ್ಠಿಕ ಸೇವೆಯನ್ನು ಅನುಕ್ರಮವಾಗಿ ಸರ್ವೋದಯದ ಹಾಗೂ ಹರಿಜನೋದ್ಧಾರದ ಕ್ಷೇತ್ರದಲ್ಲಿ ಸಲ್ಲಿಸುತ್ತಿದ್ದಾರೆ. ಆಗ ತಮ್ಮ ವಕೀಲಿ ವೃತ್ತಿಯನ್ನು ಸ್ಥಗಿತಮಾಡಿದ ಗಣ್ಯ ಮುಂದಾಳುಗಳ ಹೊರತಾಗಿ ರಂಗನಾಥ ದಿವಾಕರ, ವೀರಪ್ಪವಾಲಿ, ನೀಲಕಂಠಪ್ಪ ಸುಗಂಧಿ, ಚೆನ್ನಮಲ್ಲಪ್ಪ ಕುರ್ಲೆ, ಡಾ॥ ಹರ್ಡೀಕರ್, ಹನುಮಂತರಾವ್ ಕೌಜಲಗಿ, ಹನುಮಂತರಾವ್ ಮೋಹರೆ, ಪರಮಣ್ಣ ಹೊಸಮನಿ ಪ್ರಭೃತಿಗಳು ಸ್ವಾತಂತ್ರ್ಯದ ಧ್ಯೇಯಕ್ಕಾಗಿ ತಮ್ಮ ಸರ್ವಸ್ವವನ್ನು ಪಣಕ್ಕೆ ಹಚ್ಚಿದ ಹೊಸ ಕಾರ್ಯಕರ್ತರಲ್ಲಿ ಸೇರಿದರು. ಅನೇಕ ಸಂಖ್ಯೆಯಲ್ಲಿ ಇತರ ತರುಣ ಕಾರ್ಯಕರ್ತರೂ ಮಿಗಿಲಾದ ಧೈರ್ಯ ತ್ಯಾಗಗಳೊಂದಿಗೆ ಭಾಗ ವಹಿಸಿದರು. ಮಂಜಪ್ಪ ಹರ್ಡೇಕರರು ಈ ಮೊದಲು ಸಾಮಾಜಿಕ ಧಾರ್ಮಿಕ ಕಾರ್ಯಕ್ಕೆ ತಮ್ಮನ್ನು ಹಚ್ಚಿಕೊಂಡವರು, ಈಗ ಗಾಂಧೀವಾದದ ತತ್ತ್ವಗಳ ಪ್ರಸಾರವನ್ನು ಕೈಗೊಂಡರು. ಈ ತತ್ತ್ವಗಳಲ್ಲಿ ಕೆಲವು 12ನೆಯ ಶತಮಾನದಲ್ಲಿ ವೀರಶೈವ ಸಂತರೂ ಸಮಾಜ ಸುಧಾರಕರೂ ಆದ ಶ್ರೀ ಬಸವೇಶ್ವರರು ಬೋಧಿಸಿದ ತತ್ವಗಳನ್ನೇ ವಿಶಾಲವಾದ ಔದಾರ್ಯಭಾವ ಮತ್ತು ಸಾಮಾಜಿಕ ದೃಷ್ಟಿಕೋನದಲ್ಲಿ ಹೋಲುತ್ತಿದ್ದವು. ಈಗಲೂ ಬಹಳ ಮುಂದಾಳುಗಳು ಸುಶಿಕ್ಷಿತ ವರ್ಗಗಳಿಂದಲೇ ಬಂದವರಾಗಿದ್ದರು. ಆದರೆ ಬಹುಜನ ಸಮುದಾಯವು ಎಚ್ಚರಗೊಳ್ಳಲು ತೊಡಗಿತ್ತು.

ಬಂಗಾಲಕ್ಕೂ ಮಹಾರಾಷ್ಟ್ರಕ್ಕೂ ಸ್ವದೇಶೀ ಚಳವಳಿಯು ಹೇಗೋ ಹಾಗೆಯೆ ಈ ಅವಧಿಯು ಕರ್ಣಾಟಕಕ್ಕೆ ಆಯಿತು. ಕರ್ಣಾಟಕವು ಭರದಿಂದ ತನ್ನ ಕಕ್ಷೆಯನ್ನು ಕಂಡುಕೊಂಡು ಗತಿವಡೆಯಿತು. ಅಹಿಂಸಾತ್ಮಕ ಅಸಹಕಾರ ಆಂದೋಲನದ ಪ್ರತ್ಯಕ್ಷವಾದ ಕಾರ್ಯಕ್ರಮವೆಂದರೆ—ಬಿರುದುಗಳು, ಶಾಲೆ ಕಾಲೇಜುಗಳು, ಕೋರ್ಟು ಕಚೇರಿಗಳು, ವಿದೇಶೀ ಬಟ್ಟೆ. ಸೆರೆ ಸೇಂದಿ ಇವುಗಳ ನಿಷೇಧ-ಬಹಿಷ್ಕಾರ, ಅಸ್ಪೃಶ್ಯತಾ ನಿವಾರಣೆ ಮತ್ತು ಖಾದಿಯ ಪ್ರಸಾರ—ಇವಲ್ಲದೆ ಗಾಂಧಿಜೀ ಗುಜರಾತಿನ ಬಾರ್ದೋಲಿ ತಾಲೂಕನ್ನು ಕರನಿರಾಕರಣೆಯ ಚಳವಳಿಗಾಗಿ ಅಣಿಗೊಳಿಸುತ್ತಿದ್ದರು. ಕರ್ಣಾಟಕವು ಚಳವಳಿಗೆ ಒಳ್ಳೆಯ ಪ್ರತಿಕ್ರಿಯೆ ನೀಡಿತು. ನೂರುಗಟ್ಟಲೆ ವಿದ್ಯಾರ್ಥಿಗಳು ಶಾಲೆ ಕಾಲೇಜುಗಳನ್ನು ಬಹಿಷ್ಕರಿಸಿ ಹೊಸತಾಗಿ ಪ್ರಾರಂಭಿಸಿದ ರಾಷ್ಟ್ರೀಯ ಸಂಸ್ಥೆಗಳನ್ನು ಸೇರಿದರು ; ಗ್ರಾಮೋದ್ಧಾರದ ಕೆಲಸಕ್ಕೆ ತೊಡಗಿದರು. ಸುಮಾರು ನೂರು ವಕೀಲರು ತಮ್ಮ ವ್ಯವಸಾಯವನ್ನು ಬದಿಗಿಟ್ಟು ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಖಾದಿಯು ಸಾರ್ವತ್ರಿಕವಾಗಿ ಜನಪ್ರಿಯತೆಯನ್ನು ಗಳಿಸಿತು. ಹಲವು ಕಡೆಗೆ ಸೇಂದಿ ಅಂಗಡಿಗಳ ಮುಂದೆ ಪಿಕೆಟಿಂಗ್ ಮಾಡಲಾಯಿತು. 48 ರಾಷ್ಟ್ರೀಯ ಶಾಲೆಗಳು ಅಸ್ತಿತ್ವಕ್ಕೆ ಬಂದವು. ಸಾವಿರಕ್ಕೆ ಮಿಕ್ಕ ವಿದ್ಯಾರ್ಥಿಗಳು ಅವುಗಳಲ್ಲಿ ಹಾಜರಿದ್ದರು. ಸಾರ್ವತ್ರಿಕ ಜನಜಾಗೃತಿಯು ಅಸಾಮಾನ್ಯ

ರೀತಿಯಲ್ಲಿ ಆಯಿತು. ಅದು ವಿದೇಶೀ ಆಳಿಕೆಯ ಬಗೆಗೆ ಅತ್ಯಂತ ತಿರಸ್ಕಾರದ ಮಟ್ಟಕ್ಕೆ ಮುಟ್ಟಿತು. ಈ ಚಳವಳಿಯಲ್ಲಿ ಪ್ರತ್ಯಕ್ಷ ಸೇರದಿದ್ದ ಜನರ ಹೃದಯದಲ್ಲಿಯೂ ಗಾಂಧಿಯವರು ಅಭಿಮಾನ ಗೌರವಗಳ ಸ್ಥಾನವನ್ನು ಆಕ್ರಮಿಸಿದ್ದರು. 1922 ರಲ್ಲಿ ಅಸಹಕಾರ ಆಂದೋಲನವು ಸ್ಥಗಿತವಾದಾಗ ಕರ್ನಾಟಕವು ಚಳವಳಿಯ ಮೊದಲಿಗಿಂತ ಪೂರ್ತಿ ಭಿನ್ನವಾಗಿ ರೂಪಗೊಂಡು ಹೊರಬಂದಿತು. 1921 ರಲ್ಲಿ ಅಸ್ತಿತ್ವಕ್ಕೆ ಬಂದ ಕರ್ನಾಟಕ ಪ್ರಾಂತದ ಕಾಂಗ್ರೆಸು ಕಮಿಟಿಯ ಮಾರ್ಗದರ್ಶನದಲ್ಲಿ ನಡೆದ ಚಳವಳಿಯು ಪ್ರಾಂತದ ಎಲ್ಲಾ ಭಾಗಗಳನ್ನೂ ವ್ಯಾಪಿಸಿತು ಮತ್ತು ಹಿಂದೆಂದೂ ಇಲ್ಲದಂತಹ ಐಕ್ಯಭಾವನೆಯನ್ನು ಜನತೆಯಲ್ಲಿ ಒಡಮೂಡಿಸಿತು. ಗಾಂಧೀವಾದ ಪ್ರಸಾರದ ಮುಖ್ಯ ಭಾರವು ಸಹಜವಾಗಿಯೆ ಪತ್ರಿಕೆಗಳ ಮೇಲೆ ಬಿದ್ದಿತು. 'ಕರ್ಮವೀರ'ದಂಥ ಸಾಪ್ತಾಹಿಕಗಳೂ 'ನವಶಕ್ತಿ', 'ಕರ್ನಾಟಕ ವೈಭವ' 'ಕರ್ನಾಟಕ ವೃತ್ತ', 'ರಾಷ್ಟ್ರಬಂಧು', ವಿಶ್ವಕರ್ನಾಟಕ', 'ಸತ್ಯಾಗ್ರಹಿ', 'ಶರಣ ಸಂದೇಶ' ಮತ್ತು ಇತರ ಹಲವಾರು ಪತ್ರಿಕೆಗಳೂ ಆಂದೋಲನದ ಪ್ರಸಾರಕ್ಕೆ ದೊಡ್ಡ ಮೊತ್ತದಲ್ಲಿ ಸೇವೆ ಸಲ್ಲಿಸಿದವು.

ಆಂದೋಲನದ ಬೆಳೆಯುವ ಗಾತ್ರವನ್ನು ಕಂಡು ಹೆದರಿದ ನೌಕರ ಶಾಹಿಯು ಭಾಷಣ ಲೇಖನಗಳನ್ನು ದಂಡವಿಚಾರಣೆಗೆ ಗುರಿಪಡಿಸಿತು. ಗಂಗಾಧರ ರಾವ್ ದೇಶ ಪಾಂಡೆಯವರಿಗೆ 6 ತಿಂಗಳ ಸಜೆ ವಿಧಿಸಲಾಯಿತು. ದಿವಾಕರ, ಹನುಮಂತ ರಾವ್ ಮೋಹರೆ, ಹನುವಂತರಾವ್ ಕೌಜಲಗಿ, ಡಿ. ಆರ್. ಮಜಲಿ ಮತ್ತು ಇನ್ನಿತರರಿಗೆ 1 ವರ್ಷ ಮತ್ತು ಅದಕ್ಕೂ ಹೆಚ್ಚು ಶಿಕ್ಷೆ ವಿಧಿಸಲ್ಪಟ್ಟಿತು. ಆದರೆ ಅತ್ಯಂತ ಹೆಚ್ಚು ಗಮನವನ್ನು ಸೆಳೆದುಕೊಂಡ ಘಟನೆಯೆಂದರೆ, 1921ರ ಜೂನ್ 30ಕ್ಕೆ ಧಾರವಾಡದಲ್ಲಿ ಸೇಂದಿ ಅಂಗಡಿಯ ಇದಿರು ಪಿಕೆಟಿಂಗ್ ನಡೆದಾಗ ಶಾಂತರಾಗಿದ್ದ ಜನರ ಸ್ತೋಮದ ಮೇಲೆ ನಡೆದ ಗೋಳಿಬಾರು. ಆಗ ಮೂರು ಮಂದಿ ನಿಂತಲ್ಲಿಯೇ ಗುಂಡಿಗೆ ಹತರಾದರು. ಅನೇಕರಿಗೆ ಗಾಯಗಳಾದುವು. ಅಖಿಲ ಭಾರತೀಯ ಕಾಂಗ್ರೆಸ್ ಕಮಿಟಿ ನೇಮಿಸಿದ ಸಮಿತಿಯು ಈ ಗೋಳಿಬಾರು ತೀರಾ ಅಸಮರ್ಥನೀಯವೂ ಅನಾವಶ್ಯಕವೂ ಆಗಿತ್ತೆಂದು ತೀರ್ಮಾನಿಸಿತು. ಗೋಳಿಬಾರಿನ ಬೆನ್ನಿಗೇ ಅಧಿಕಾರಿಗಳು ಸೇಡಿಗೆ ಬಿದ್ದು, ಖಿಲಾಫತ್ ನಾಯಕರು, ಪ್ರಮುಖ ರಾಜಕೀಯ ಕಾರ್ಯಕರ್ತರು, ವಕೀಲರು, ಪತ್ರಿಕೋದ್ಯಮಿಗಳು—ಇವರನ್ನು ಒಳಗೊಂಡ 27 ಜನರ ವಿರುದ್ಧವಾಗಿ ದಂಗೆ, ಲೂಟಿ, ಕೊಲೆಯ ಪ್ರಯತ್ನ ಇತ್ಯಾದಿ ಆಪಾದನೆಗಳ ಸುಳ್ಳು ಖಟ್ಲೆಗಳನ್ನು ಹಾಕಿದರು. ಅಖಿಲ ಭಾರತೀಯ ಧುರೀಣರು ಆ ಆರೋಪಣೆಗಳಿಂದ ಆತ್ಮರಕ್ಷಣೆ ಮಾಡಿಕೊಳ್ಳುವುದು ಬೇಡವೆಂದು ಸಲಹೆ ಕೊಟ್ಟರು. ಸುಳ್ಳು ಪುರಾವೆಗಳನ್ನು ರಚಿಸಿ ಆಪಾದಿತರಲ್ಲಿ 23 ಮಂದಿಗೆ 3 ವರ್ಷಗಳ ಕಠಿಣವಾದ ಬೇರೆ ಬೇರೆಯ ಶಿಕ್ಷೆಗಳನ್ನು ವಿಧಿಸಲಾಯಿತು. ಆಪಾದಿತರಲ್ಲಿ ಒಬ್ಬರಾಗಿದ್ದ ದಿವಾಕರರು ಇತರರ ಸಂಗಡವೇ ವಿಚಾರಣೆಯಲ್ಲಿ ಭಾಗವಹಿಸಲು ನಿರಾಕರಿಸಿದರು. ಕೋರ್ಟಿನಲ್ಲಿ ಅವರಿತ್ತ ಹೇಳಿಕೆ ಜನತೆಯಲ್ಲಿ ಮಿಗಿಲಾದ ಪರಿಣಾಮವನ್ನು ಉಂಟುಮಾಡಿತು. ಆ ಹೇಳಿಕೆಯ 5,000 ಪ್ರತಿಗಳು ಕೆಲವೇ ತಾಸುಗಳಲ್ಲಿ ಮಾರಿಹೋದವು. ಅವರು ಆ ಹೇಳಿಕೆಯಲ್ಲಿ ತನ್ನನ್ನೂ ತನ್ನ ಸಹಕಾರಿಗಳಾದ ಕಬ್ಬೂರ ಮಧ್ವರಾಯರನ್ನೂ ಗೋಳಿಬಾರಿನ ಕೆಲವು ದಿನಗಳ ಹಿಂದೆ ಜಿಲ್ಲಾ ಕಲೆಕ್ಟರನು ಕರೆಯಿಸಿಕೊಂಡು ತಾನು "ಕರ್ಮವೀರ" ದಲ್ಲಿಯ ಲೇಖನಗಳಿಂದ ಕೆರಳಿ ಅವರ ನೆತ್ತರಿಗಾಗಿ ನೀರಡಸಿದ್ದು, ಅವರನ್ನು ಕನಿಷ್ಠ 1 ವರ್ಷವಾದರೂ ಸೆರೆಮನೆಯಲ್ಲಿ ಇರಿಸಿ ನೋಡಿದರೇನೇ ತನಗೆ ತೃಪ್ತಿಯಾಗುವುದೆಂದು ಆಡಿ ತೋರಿಸಿದ್ದನ್ನು ಉಲ್ಲೇಖಿಸಿದ್ದರು. ಈ ಪ್ರಕರಣದಲ್ಲಿ ವಿಫಲವಾಗಿ ಕಲೆಕ್ಟರನು ದಿವಾಕರರನ್ನು ಇನ್ನೊಂದು ಪ್ರಕರಣದಲ್ಲಿ ಪ್ರತಿಬಂಧಕ ಕಲಮಿನನ್ವಯ ರಾಜದ್ರೋಹಕ್ಕಾಗಿ ಜೈಲಿಗೆ ಅಟ್ಟಿದನು.

1922 ರಲ್ಲಿ ಉತ್ತರ ಪ್ರದೇಶದ ಚೌರಿಚೌರಾದಲ್ಲಿ ಆದ ದುರ್ಘಟನೆಗಳ ಮೂಲಕ ಗಾಂಧಿಜೀ ಬಾರ್ದೋಲಿಯಲ್ಲಿಯ ಸಂಕಲ್ಪಿತ ಕರನಿರಾಕರಣೆಯ ಆಂದೋಲನವನ್ನು ಹಿಂದೆಗೆದುಕೊಂಡರು. ಅದೇ

ವರ್ಷ ಅವರನ್ನು ರಾಜದ್ರೋಹಕ್ಕಾಗಿ 6 ವರ್ಷದ ಸಾದಾ ಶಿಕ್ಷೆಯನ್ನು ವಿಧಿಸಿ ಯೆರವಾಡ ಜೈಲಿಗೆ ಒಯ್ಯಲಾಯಿತು. ಅಲ್ಲಿ ಈ ಮೊದಲೇ ಸೆರೆಯಲ್ಲಿದ್ದ ಕರ್ಣಾಟಕದ ಕೆಲವು ಧುರೀಣರು ಬಾರ್ದೋಲಿಯ ಕರನಿರಾಕರಣೆಯನ್ನು ಹಿಂದೆಗೆದುಕೊಂಡಿದ್ದರಿಂದ ಉಂಟಾದ ತೀವ್ರ ಹತಾಶೆ, ಉತ್ಸಾಹ ಭಂಗಗಳ ಕುರಿತು ಗಾಂಧಿಯವರನ್ನು ಕೇಳಿದರು. ಅದಕ್ಕೆ ಅವರು 'ಹೇಗಿದ್ದರೂ ದೇಶವು 30 ವರ್ಷದ ಮುನ್ನಡೆಯನ್ನು ಸಾಧಿಸಿದ್ದು ಸ್ವರಾಜ್ಯಕ್ಕೆ ಹಿಂದಿಗಿಂತ ಸಮೀಪ ಬಂದಿದೆ'—ಎಂದು ಗಂಭೀರವಾಗಿ ಉತ್ತರವಿತ್ತರು. ಅಹಿಂಸೆಯ ಮೂಲಕ ಸತ್ಯವನ್ನು ಸಾಧಿಸುವ ತನ್ನ ಪದ್ಧತಿಗಳಲ್ಲಿ ಗಾಂಧಿಜೀಯವರ ವಿಶ್ವಾಸ ಅಷ್ಟು ಭದ್ರವಾಗಿತ್ತು.

## 2. ಸತ್ಯಾಗ್ರಹ ಚಳವಳಿ (1930–34)

ಅಸಹಕಾರ ಆಂದೋಲನವು ಸ್ಥಗಿತಗೊಂಡನಂತರ ದೇಶದ ಇದಿರು ಕೌನ್ಸಿಲ್–ಪ್ರವೇಶದ ಕಾರ್ಯಕ್ರಮವಿತ್ತು. ಈ ವಿಧಾಯಕ ಕಾರ್ಯಕ್ರಮದ ವಿಧಿವತ್ತಾದ ಆರಂಭವು 1924 ರಲ್ಲಿ ಉಂಟಾಯಿತು. ಆದರೆ ಮುಂದಿನ ದೊಡ್ಡ ಚಳವಳಿಯ ತೆರೆಯು 1930 ರಲ್ಲಿ ಉಪ್ಪಿನ ಸತ್ಯಾಗ್ರಹದಿಂದ ಆರಂಭವಾಗಿ ದೇಶದಾದ್ಯಂತ ಹಬ್ಬಿತು.

ಅಸಹಾಕಾರ ಆಂದೋಲನವು ಪರಕೀಯ ಸರಕಾರದ ನಿಜ ಸ್ವರೂಪದ ಬಗೆಗೆ ದೇಶಕ್ಕೆ ಪ್ರಖರವಾದ ಆಘಾತವನ್ನು ಕೊಟ್ಟು ಅಲುಗಾಡಿಸಿ, ಅಭೂತಪೂರ್ವ ಅಸಂತೋಷವನ್ನುಂಟುಮಾಡಿ ಕಾಂಗ್ರೆಸ್ಸನ್ನು ರಾಷ್ಟ್ರೀಯ ಸಂಘಟನೆಯಾಗಿ ಬಲಪಡಿಸಿದ್ದರೆ, 1930ರ ಸತ್ಯಾಗ್ರಹ ಆಂದೋಲನವು ಸ್ವಾತಂತ್ರ್ಯದ ಹಾದಿಯಲ್ಲಿ ರಾಷ್ಟ್ರವನ್ನು ಇನ್ನೊಂದು ದೊಡ್ಡ ದಾಪು (Stride) ಹಾಕುವಂತೆ ಮಾಡಿತು. ಸತ್ಯಾಗ್ರಹದ ಸಾರವೆಂದರೆ: ಹಿಂಸೆಯಿಲ್ಲದೆ ಸತ್ಯಕ್ಕೆ ಅಂಟಿಕೊಂಡು ಉಳಿಯುವುದು, ದುರ್ಭಾವನೆಗೆ ಇಂಬುಗೊಡದೆ ಆತ್ಮಕ್ಲೇಶದಿಂದ ದಬ್ಬಾಳಿಕೆಗಾರನ ಆಯುಧಗಳನ್ನು ಮೊಂಡುಗೊಳಿಸುವುದು ಮತ್ತು ಯಾವುದಕ್ಕಾಗಿ ಈ ಕ್ಲೇಶಗಳನ್ನು ಸ್ವೀಕರಿಸಲಾಯಿತೊ ಆ ಉದ್ದೇಶವನ್ನು ಬಲಪಡಿಸುವುದು.

1929ರ ಡಿಸೆಂಬರಿನಲ್ಲಿ ಲಾಹೋರ್ ಕಾಂಗ್ರೆಸ್ಸಿನಲ್ಲಿ ಸ್ವೀಕೃತವಾದ ಗೊತ್ತುವಳಿಯ ಪೂರೈಕೆಗೆ ಗಾಂಧಿಜಿ ಸತ್ಯಾಗ್ರಹದ ಚಳವಳಿಯನ್ನು ಆರಂಭಿಸಲು ಒಂದು ಸಾದಾ ಪದ್ಧತಿಯನ್ನು ಆರಿಸಿಕೊಂಡರು. ಅವರು ಕಾಯಿದೆ ಭಂಗಕ್ಕಾಗಿ ಉಪ್ಪಿನ ಕರದ ವಿಷಯವನ್ನು ಆಯ್ದುಕೊಂಡರು. ಭಾರತದಲ್ಲಿಯ ಬ್ರಿಟಿಷರ ಆಳಿಕೆಯ ಅನ್ಯಾಯ-ವೈಷಮ್ಯಕ್ಕೆ ಅದು ಪ್ರತೀಕವಾಗಿತ್ತು. ಸಾದಾ ರೀತಿಯಲ್ಲಿ ಲೈಸನ್ಸ್ ಪರವಾನಗಿ ಇಲ್ಲದೆ ಉಪ್ಪನ್ನು ನೇರವಾಗಿ ಒಟ್ಟುಹಾಕಿ ತಯಾರಿಸಿ ಇಲ್ಲವೇ ಹಂಚಿದ ಮಾತ್ರಕ್ಕೆ ಈ ಕರದ ಕಾಯಿದೆಯನ್ನು ಪ್ರತಿಭಟಿಸಬಹುದಿತ್ತು. ಈ ಕಾಯಿದೆ ಭಂಗವನ್ನು ಆಬಾಲ-ವೃದ್ಧರೂ ಸುಶಿಕ್ಷಿತರೂ, ಅಶಿಕ್ಷಿತರು ಯಾರೂ ಆಚರಿಸಬಹುದಿತ್ತು. ಗುಜರಾತಿನಲ್ಲಿ ಗಾಂಧಿಯವರು ಅಹಮದಾಬಾದಿನಿಂದ 200 ಮೈಲು ದೂರದ ದಾಂಡಿಯ ಯಾತ್ರೆಯಲ್ಲಿ ಮುಂದುವರಿದಂತೆ ಅವರ ಭಾಷಣಗಳು, ಉದ್ಗಾರಗಳು ಸರಕಾರದ ವಿರುದ್ಧ ಉಗ್ರ ಅಸಂತೋಷವನ್ನು ರಾಜದ್ರೋಹವನ್ನು ಸೂಸಹತ್ತಿದವು. ಅವರ ಕಹಳೆಯ ಕರೆಗೆ ಸಮಗ್ರ ದೇಶವೇ ಪ್ರತಿಧ್ವನಿ ಮೊಳಗಿಸಿತು. ಹೊಸತಾದ ರೀತಿಯ ಶಾಂತಿಯುತ ಸಂಗ್ರಾಮಕ್ಕೆ ಸನ್ನಾಹಗೊಳ್ಳತೊಡಗಿತು. 1930ರ ಜನವರಿಯ 26ಕ್ಕೆ ಭಾರತದ ಆದ್ಯಂತ ಜರಗಿದ ಸಭೆಗಳಲ್ಲಿ ಮಿಲಿಯಗಟ್ಟಲೆ ಜನರು ಸ್ವಾತಂತ್ರ್ಯದ ಸಾಧನೆಗಾಗಿ ಎಲ್ಲ ಕ್ಲೇಶಗಳನ್ನು ಇದಿರಿಸುವ ಶಪಥವನ್ನು ತೊಟ್ಟರು. ಇದು ಜನತೆಯ ಉನ್ನತವಾದ ಕೆಚ್ಚಿಗೂ ಹೋರಾಟವನ್ನು ಕೈಗೊಳ್ಳುವ ಅವರ ಸಿದ್ಧತೆಗೂ ಸಾಕ್ಷಿಯಾಗಿತ್ತು. ಕಾರ್ನಾಡ ಸದಾಶಿವರಾಯ, ಗಂಗಾಧರ ದೇಶಪಾಂಡೆ, ಟಿ.ಎಸ್. ನಾಯಕ, ಪರ್ಮಣ್ಣ ಹೊಸಮನಿ, ದಿವಾಕರ, ಹನುಮಂತರಾವ್ ಕೌಜಲಗಿ ಮತ್ತು ಡಾ॥ ಹರ್ಡೀಕರರು ಉತ್ತರ ಕನ್ನಡ ಜಿಲ್ಲೆಯ

ಸಮುದ್ರ ಕರಾವಳಿಯಲ್ಲಿ ಅಂಕೋಲೆಯನ್ನು ಉಪ್ಪಿನ ಸತ್ಯಾಗ್ರಹ ಆರಂಭಿಸಲು ಅತ್ಯಂತ ಯೋಗ್ಯ ಸ್ಥಳವೆಂದು ಆಯ್ಕೆ ಮಾಡಿದರು. ಅದೇ ಸಮಿತಿಯು ತೇಕೂರು ಸುಬ್ರಹ್ಮಣ್ಯಂ ಮತ್ತು ಶಂಕರರಾವ್ ಗುಲ್ವಾಡಿ ಇವರ ಸಮೇತ **ಕರ್ನಾಟಕ ಸತ್ಯಾಗ್ರಹ ಮಂಡಲವೆಂದು** ಪುನರ್ಘಟಿತವಾಗಿ ಚಳವಳಿಯ ಮಾರ್ಗದರ್ಶನ ಕೈಗೊಂಡಿತು. ಡಾ॥ ಹರ್ಡೀಕರರು ಸಂಘಟಿಸಿದ **ಹಿಂದುಸ್ಥಾನೀ ಸೇವಾದಲವು** ತನ್ನ ಎಲ್ಲ ಸ್ವಯಂಸೇವಕ ಬಲವನ್ನು ಶೇಖರಿಸಿ ಸತ್ಯಾಗ್ರಹ ಶಿಬಿರಗಳನ್ನು ನಡೆಯಿಸಿತು. ಎಲ್ಲ ಜಿಲ್ಲೆಗಳಲ್ಲಿ ತೀವ್ರವಾದ ಪ್ರಚಾರ ಕೈಗೊಳ್ಳಲಾಯಿತು. ಹರ್ಡೀಕರರು ಮತ್ತು ಕೌಜಲಗಿಯವರು ಗಾಂಧಿಜೀಯನ್ನು ಭೆಟ್ಟಿಯಾಗಿ ಇವೆಲ್ಲಾ ಸಿದ್ಧತೆಯ ವಿದ್ಯಮಾನವನ್ನು ಅರಿಕೆ ಮಾಡಲಾಗಿ ಗಾಂಧಿಜೀ ಆಶೀರ್ವಾದವನ್ನು ನೀಡಿದರು. ಅಲ್ಲದೆ ರಾಷ್ಟ್ರದ ಕರೆಗೆ ಕರ್ನಾಟಕವು ಪರಿಪೂರ್ಣ ಪ್ರತ್ಯುತ್ತರವನ್ನು ಕೊಡುವಂತೆ ಹಾರೈಸಿದರು.

ಏಪ್ರಿಲ್ 13ರ ನಿರ್ದಿಷ್ಟವಾದ ದಿವಸ ಗಾಂಧಿಜೀ ಉಪ್ಪಿನ ಕಾಯಿದೆಯನ್ನು ಸಾಂಕೇತಿಕವಾಗಿ ಭಂಗ ಮಾಡಿದ 1 ವಾರದ ಅನಂತರ ಹುಬ್ಬಳ್ಳಿ ಬೆಳಗಾವಿಗಳ ಸತ್ಯಾಗ್ರಹಿಗಳ ಮೂರು ಪ್ರತ್ಯೇಕ ಗುಂಪುಗಳು ಸತ್ಯಾಗ್ರಹಕ್ಕಾಗಿ ಅಂಕೋಲೆಯ ಕೇಂದ್ರವನ್ನು ತಲಪಿದವು. ಎಂ. ಪಿ. ನಾಡಕರ್ಣಿ ಮೊತ್ತಮೊದಲಿನ ಸತ್ಯಾಗ್ರಹಿಯಾಗಿದ್ದರು. ಪ್ರಚಂಡ ಉತ್ಸಾಹದ ದೃಶ್ಯಗಳ ನಡುವೆ ಅವರು ಸಮುದ್ರದ ನೀರಿನಿಂದ ಉಪ್ಪು ತಯಾರಿಸಿದರು. ಕೆಲವು ದಿನಗಳಲ್ಲಿಯೇ ಅವರನ್ನು ಬಂಧಿಸಿ ಶಿಕ್ಷೆಗೆ ಗುರಿಮಾಡಲಾಯಿತು. ಅದೇ ಗತಿ ಅವರ ಇತರ ಸಹಕಾರಿಗಳದೂ ಆಯಿತು. ಆಗ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರಾಗಿದ್ದ ದಿವಾಕರರವರಿಗೆ 6 ತಿಂಗಳ ಶಿಕ್ಷೆ ವಿಧಿಸಲಾಯಿತು. ಡಾ. ಹರ್ಡೀಕರರು ಅಂಕೋಲೆಯಲ್ಲಿ ನೂರಾರು ಸತ್ಯಾಗ್ರಹಿಗಳ ಶಿಬಿರಗಳ ಸಂಚಾಲನೆ ಮತ್ತು ಮಾರ್ಗದರ್ಶನ ನಡೆಯಿಸುತ್ತಲೇ ಇದ್ದರು. ಹೀಗೆ ಆರಂಭಿಸಿದ ಆಂದೋಲನವು ಪ್ರಾಂತದಲ್ಲೆಲ್ಲಾ ಕಿಚ್ಚಿನಂತೆ ಹೊತ್ತಿ ಹಬ್ಬಿತು. ಉತ್ತರ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಅದು ಸಾಮುದಾಯಿಕ ಸ್ವರೂಪವನ್ನು ತಾಳಿತು. ಮತ್ತು ಎಲ್ಲ ಜಿಲ್ಲೆಗಳ ಪ್ರಮುಖ ಸ್ಥಳಗಳಲ್ಲಿ ಸಾಂಕೇತಿಕ ಸತ್ಯಾಗ್ರಹವನ್ನು ಹೂಡಲಾಯಿತು. ಉತ್ತರಕನ್ನಡ ಜಿಲ್ಲೆಯಲ್ಲಿ ಉಪ್ಪಿನ ಉಗ್ರಾಣದ ಮೇಲೆ ಸಾಮೂಹಿಕ ದಾಳಿಗಳಾದುವು. ಸರಕಾರಿ ಅಧಿಕಾರಿಗಳು ಪ್ರಮುಖ ಸತ್ಯಾಗ್ರಹಿಗಳನ್ನು ಮಾತ್ರ ಬಂಧಿಸಿದರು. ಆದರೆ ಅಂಥ ಬಂಧನ ಶಿಕ್ಷೆಗಳಿಂದ ಸಾರ್ವಜನಿಕರ ಉತ್ಸಾಹ ಇನ್ನಷ್ಟು ಹೆಚ್ಚಲು ಕಾರಣವಾಯಿತು. ಶಿಕ್ಷೆಗಳ ಅವಧಿ 1 ವರ್ಷದ ತನಕವೂ ಇರುತ್ತಿತ್ತು. ಆದರೆ ಅದು ಯಾವುದೇ ಪ್ರತಿರೋಧಕ ಪರಿಣಾಮವನ್ನು ಉಂಟು ಮಾಡಲಿಲ್ಲ. ಅಂಕೋಲ ಮತ್ತು ಇತರ ಕಡೆಗಳಲ್ಲಿ ಬಹಿರಂಗವಾಗಿ ಕರತಪ್ಪಿಸಿದ ಉಪ್ಪಿನ ಮಾರುಕಟ್ಟೆಗಳು ನಡೆದವು. ಸಾಣಿಕಟ್ಟ, ಗೋವ, ಬಾಂಗ್ರೆಗಳಲ್ಲಿಯ ಉಪ್ಪಿನ ಸತ್ಯಾಗ್ರಹಿಗಳ ಮೇಲೆ ದಾಳಿಗಳಾಗಿ ಅಲ್ಲಿಯ ಉಪ್ಪು ನಿರಾತಂಕವಾಗಿ ಲೂಟಿಯಾಗಿ ಪುಕ್ಕಟೆ ಹಂಚಲಾಯಿತು.

ಉಪ್ಪಿನ ಸತ್ಯಾಗ್ರಹದ ಒಟ್ಟಿಗೇ ಅಡವಿ ಸತ್ಯಾಗ್ರಹವೂ ನಡೆಯಿತು. ವನಕರುಗಳನ್ನು ಸರಕಾರಿ ಭೂಮಿಗಳಲ್ಲಿ ಸ್ವಚ್ಛಂದವಾಗಿ ಮೇಯಲು ಬಿಡತೊಡಗಿದರು. ಈ ಭೂಮಿಗಳನ್ನು ಸರಕಾರ ಹರಾಜು ಮಾಡುವಲ್ಲಿ ಯಶಸ್ವಿಯಾಗಿ ಪಿಕೆಟಿಂಗ್ ನಡೆಯುತ್ತಿತ್ತು. ಅದರಿಂದ ಸರಕಾರಕ್ಕೆ ಪೆಟ್ಟು ಬಿದ್ದಿತು. ಧಾರವಾಡ, ಬೆಳಗಾವಿಗಳಲ್ಲಿ ಸೇಂದಿ ಮರಗಳನ್ನು ಸಾವಿರಗಟ್ಟಲೆ ಕಡಿದು ಕೆಡಹಲಾಯಿತು. ಉತ್ತರ ಕನ್ನಡ ಹಾಗೂ ಧಾರವಾಡ ಜಿಲ್ಲೆಗಳಲ್ಲಿ ಅಡವಿಯ ಮರಗಳನ್ನು ಕಡಿದು ಜನರು ಹೊತ್ತುಕೊಂಡು ಹೋದರು. ಈ ಚಳವಳಿ ಚಟುವಟಿಕೆಗಳ ತಾರೀಖು ಮೊದಲಿಗೇ ಜಾಹಿರಾತು ಮಾಡಲಾಗುತ್ತಿತ್ತು. ದೊಡ್ಡ ಜನಸ್ತೋಮ ಕೊಡಲಿಗಳನ್ನೆತ್ತಿಕೊಂಡು ನಿರ್ದಿಷ್ಟ ಸ್ಥಳಗಳಿಗೆ ಬರುತ್ತಿದ್ದರು. ಆಗ ರಾಷ್ಟ್ರೀಯ ಪದ್ಯಗಳನ್ನು ಹಾಡುತ್ತಾ, ಘೋಷಣೆಗಳನ್ನು ಕೂಗುತ್ತಾ ಬಂದು ಕಾಯಿದೆ ಭಂಗ ಮಾಡುತ್ತಿದ್ದರು. ಇವರಲ್ಲಿ ಕೆಲವರು ಮಾತ್ರ ಬಂಧಿತರಾಗುತ್ತಿದ್ದರು. ಉತ್ತರ ಕನ್ನಡ ಜಿಲ್ಲೆಯಲ್ಲಿ ಅಡವಿ ಸತ್ಯಾಗ್ರಹವು

ಆಗಸ್ಟ್ ತಿಂಗಳಲ್ಲಿ ಡಾ. ಎನ್. ಬಿ. ಕಬ್ಬೂರರ ನೇತೃತ್ವದಲ್ಲಿ ವ್ಯವಸ್ಥಿತವಾಗಿ ಸಂಘಟಿತವಾಯಿತು. ಆಗಸ್ಟ್ 4ಕ್ಕೆ ಶಿರಸಿಯಲ್ಲಿ ಕೈಗೊಂಡ ಈ ಸತ್ಯಾಗ್ರಹವು ಸುಮಾರು 3,000 ಮಂದಿಯನ್ನು ಆಕರ್ಷಿಸಿತು. ಇವರು ಹಾಡು ಹಾಡುತ್ತಾ ಮೆರವಣಿಗೆ ತೆಗೆದು ಅಡವಿಯಲ್ಲಿ ಮರಗಳನ್ನು ಕಡಿದುಹಾಕಿದರು. ಆಗ ಡಿವಿಜನಲ್ ಅರಣ್ಯಾಧಿಕಾರಿ, ಮಾಮಲೆದಾರ, ಪೋಲಿಸ್ ಸಬ್ ಇನ್ಸ್‌ಪೆಕ್ಟರ್ ಪ್ರಭೃತಿ ಅಧಿಕಾರಿಗಳು, ಅಡವಿಯ ಗಾರ್ಡ್‌ಗಳು ಮತ್ತು 30 ಪೋಲಿಸ್ ಪೇದೆಗಳೊಂದಿಗೆ ಹಾಜರು ಇದ್ದರು. ದೊಡ್ಡ ಸಂಖ್ಯೆಯಲ್ಲಿ ಉರುವಲು ಮರಗಳನ್ನು ಹಾಗೂ ಗಂಧದ ಮರಗಳನ್ನು ಕಡಿದು ಗಾಡಿಗಳಲ್ಲಿ ತುಂಬಿ ಸಾಗಿಸಲಾಯಿತು. ಈ ಸಂದರ್ಭದಲ್ಲಿ ಬರೇ 17 ಸತ್ಯಾಗ್ರಹಿಗಳನ್ನು ಬಂಧಿಸಿ ಶಿಕ್ಷೆ ವಿಧಿಸಲಾಯಿತು. ಜಿಲ್ಲೆಯ ಎಲ್ಲಾ ಭಾಗಗಳಲ್ಲಿ ಈ ಚಳವಳಿಯು ದಳ್ಳುರಿಯಂತೆ ಹಬ್ಬಿತು. ಎಷ್ಟೇ ಬಂಧನ, ದಮನ, ದಂಡನೆಗಳಿಂದ ಅದನ್ನು ತಡೆಯಲು ತೀರಾ ಅಶಕ್ಯವಾಯಿತು. ಕಾರವಾರದಲ್ಲಿ ಒಂದು ದೊಡ್ಡ ಜನಸಂದಣಿಯ ಮೇಲೆ ನಿರ್ದಯವಾಗಿ ಲಾಠಿ ಹಲ್ಲೆ ನಡೆಯಿತು.

ಸೇಂದಿಯ ಮರಗಳ ನಾಶದೊಂದಿಗೆ ಸೇಂದಿ ಸಾರಾಯಿಯ ಅಂಗಡಿಗಳ ಪಿಕೆಟಿಂಗನ್ನು ಎಲ್ಲ ಜಿಲ್ಲೆಗಳಲ್ಲಿ ಕೈಗೊಳ್ಳಲಾಯಿತು. ಮಂಗಳೂರಿನಲ್ಲಿ ಸಾರ್ವಜನಿಕ ಸಭೆಗಳನ್ನೂ ಮೆರವಣಿಗೆಗಳನ್ನೂ 5ಕ್ಕಿಂತ ಹೆಚ್ಚು ಮಂದಿಯ ನೆರವಿಯನ್ನೂ ಪ್ರತಿಬಂಧಿಸುವ ಕಟ್ಟಪ್ಪಣೆ ಜಾರಿಯಲ್ಲಿ ಬಂದಿತು. ಆದರೆ ದೊಡ್ಡ ಸಂಖ್ಯೆಯಲ್ಲಿ ಸ್ವಯಂಸೇವಕರು ಈ ಅಪ್ಪಣೆಯನ್ನು ಮುರಿದು ಬಂಧನಕ್ಕೆ ಒಳಗಾದರು. ಚಳವಳಿಗೆ ಪೂರ್ತಿಯಾಗಿ ಸಾರ್ವಜನಿಕ ಬೆಂಬಲವಿತ್ತು. ಇಡಿಯ ವ್ಯಾಪಾರಿ ವರ್ಗವು ಪ್ರಚಂಡ ಮೆರವಣಿಗೆ ಹೊರಡಿಸಿ ಸತ್ಯಾಗ್ರಹಿಗಳಿಗೆ ಎಲ್ಲ ಬಗೆಯ ಸಹಾಯವನ್ನು ಕೊಡುವುದಾಗಿ ಆಶ್ವಾಸನೆ ಇತ್ತಿತು. ಜೂನ್ 25ಕ್ಕೆ ಬಿ. ಮುಕುಂದ ರಾಯರ ನೇತೃತ್ವದಲ್ಲಿ ಸರಕಾರೀ ಆಜ್ಞೆಯನ್ನು ಮುರಿದು ಹೊರಡಿಸಿದ ದೊಡ್ಡ ಮೆರವಣಿಗೆಯ ಮೇಲೆ ಪೋಲಿಸರು ಹಲ್ಲೆ ಮಾಡಿದರು. ಅಮಾನುಷವಾಗಿ ಬಲಪ್ರಯೋಗ ಮಾಡಿದರು. ಜನಜಂಗುಳಿಯನ್ನು ಚದರಿಸಲಿಕ್ಕೆ ಚೂಪಾದ ತುದಿಯುಳ್ಳ ಲಾಠಿಗಳನ್ನೂ ಹರಿತವಾದ ಉಕ್ಕಿನ ಮೊನೆಗಳುಳ್ಳ ಬೆತ್ತಗಳನ್ನೂ ಬಾರಕೋಲು (ಚಾಟಿ) ಗಳನ್ನೂ ಪ್ರಯೋಗಿಸಲಾಯಿತು. ಒಬ್ಬನನ್ನು ಎಚ್ಚರ ತಪ್ಪಿ ಬೀಳುವ ವರೆಗೂ ಥಳಿಸಿದರು. ಮಹಿಳೆಯರನ್ನೂ ಬಿಡಲಿಲ್ಲ. ಆದರೂ ಏನೂ ಧೈರ್ಯಗೆಡದೆ 2 ವಾರಗಳ ಅಲ್ಪಾವಧಿಯಲ್ಲಿಯೇ 150 ಸತ್ಯಾಗ್ರಹಿಗಳು ಕಾರಾಗೃಹವಾಸವನ್ನು ಸ್ವಾಗತಿಸಿದರು. ಕೊಡಗೂ ಸೇರಿ ಎಲ್ಲ ಜಿಲ್ಲೆಗಳಲ್ಲಿ ಮದ್ಯವಿರೋಧೀ ಚಳವಳಿ ಬಹಳ ರಭಸದಿಂದ ನಡೆಯಿತು. ಈ ಪಿಕೆಟಿಂಗಿನ ಫಲವಾಗಿ ಸರಕಾರಕ್ಕೆ ಹರಾಜುಗಳಲ್ಲಿ ಭಾರೀ ಆರ್ಥಿಕ ಹಾನಿ ಉಂಟಾಯಿತು. ಬಹಳಷ್ಟು ಮದ್ಯದ ಅಂಗಡಿಗಳನ್ನು ಮುಚ್ಚ ಬೇಕಾಯಿತು.

ಸತ್ಯಾಗ್ರಹಕ್ಕೆ ಪೋಷಕವಾಗುವಂತೆ ಇತರ ವಿವಿಧ ಚಟುವಟಿಕೆಗಳನ್ನು ಕೈಗೊಳ್ಳಲಾಯಿತು. ಅನೇಕ ನಗರಪಾಲಿಕೆಗಳು ತಮ್ಮ ಕಚೇರಿಗಳ ಮೇಲೆ ರಾಷ್ಟ್ರೀಯ ಧ್ವಜವನ್ನು ಸ್ವೇಚ್ಛೆಯಿಂದ ಏರಿಸಿದವು. ದಶವಾರ್ಷಿಕ ಜನಗಣತಿಯನ್ನು ಜನರು ಬಹಿಷ್ಕರಿಸಿದರು. ನಸುಕಿನಲ್ಲಿ 'ಪ್ರಭಾತ ಫೇರಿ'ಗಳು ನಿಯತವಾದ ಕ್ರಮವಾದವು. ಸರಕಾರೀ ಆಜ್ಞೆಗಳನ್ನು ಉಲ್ಲಂಘಿಸಿ ಸೈಕ್ಲೋಸ್ಟಾಯಿಲ್ ಮೇಲೆ ಅಚ್ಚು ಹಾಕಿದ ಕರಪತ್ರಗಳು ಪ್ರಕಟವಾಗಹತ್ತಿದವು. ಸರಕಾರವು ಕಾನೂನು ಬಾಹಿರವೆಂದು ಆಕ್ಷೇಪಿಸಿದ ಸಾಹಿತ್ಯವನ್ನು ಸಾರ್ವಜನಿಕವಾಗಿ ಓದಲಾಗುತ್ತಿತ್ತು ಮತ್ತು ಹಂಚಲಾಗುತ್ತಿತ್ತು. ಪೋಲಿಸರೂ ಸೈನಿಕರೂ ರಾಜಿನಾಮೆ ಕೊಡಬೇಕೆಂದು ಕೇಳಿಕೊಳ್ಳುವ ಗೊತ್ತುವಳಿಗಳನ್ನು ಸಾರ್ವಜನಿಕವಾಗಿಯೇ ಜಾಹೀರು ಮಾಡಲಾಗುತ್ತಿತ್ತು. ಶಾಸನಸಭೆಗಳ ಚುನಾವಣೆಗಳಿಗೆ ಯಶಸ್ವಿಯಾಗಿ ಬಹಿಷ್ಕಾರ ಹಾಕಲಾಯಿತು. ಮತಕಟ್ಟೆಗಳಲ್ಲಿ ಪಿಕೆಟಿಂಗ್ ನಡೆದವು. ಇವೆಲ್ಲ ಚಟುವಟಿಕೆಗಳಲ್ಲಿ ಹೆಂಗುಸರು ಗಂಡುಸರೊಂದಿಗೆ ಸರಿಸಮವೆಂಬಂತೆ ಸ್ಪರ್ಧೆಯಿಂದ ಸೇವೆ ಸಲ್ಲಿಸಿದರು. ಆದರೂ ಅವರಲ್ಲಿ ಕೆಲವರನ್ನಷ್ಟೇ ಸೆರೆಹಿಡಿದರು. ಇನ್‌ಸ್ಟಿಗೇಶನ್ ಆರ್ಡಿನೆನ್ಸಿನಂಥ ಹೆಚ್ಚಿನ ದಮನ ನೀತಿಯ ವಿಶೇಷಾಧಿಕಾರಗಳಿಂದ

ಸರಕಾರ ಸಜ್ಜಾಯಿತು ; ಕ್ರಿಮಿನಲ್ ಪ್ರೊಸಿಜರ್ ಕೋಡಿನ 144ನೆಯ ಕಲಮಿನನ್ವಯ ಅಧಿಕಾರವನ್ನು ಸ್ವೈರವಾಗಿ ಚಲಾಯಿಸಿತು. ನವಂಬರದಲ್ಲಿ ಕರ್ನಾಟಕ ಕಾಂಗ್ರೆಸ್ ಕಮಿಟಿ ಹಾಗೂ ಸಂಗಾತಸಂಘಟನೆಗಳನ್ನೂ ಹುಬ್ಬಳ್ಳಿ ಬಾಗಲಕೋಟೆಗಳಲ್ಲಿಯ ಅವುಗಳ ಕಚೇರಿಗಳನ್ನೂ ವಶಪಡಿಸಿಕೊಂಡಿತು. ಪೋಲಿಸರು ಶಾರೀರಿಕ ಹಿಂಸೆಗೆ ತೊಡಗಿದರು. ಶಿರಸಿ, ಸಿದ್ದಾಪುರ, ಮಂಗಳೂರು, ಉಡುಪಿ, ಕಾರ್ಕಳ, ಬೆಳಗಾವಿ, ಹೊನ್ನಾವರ, ಕಾರವಾರ, ಹಳಿಯಾಳ, ಹುಬ್ಬಳ್ಳಿ, ಬಳ್ಳಾರಿಗಳಲ್ಲಿ ಲಾಠಿ ಹಲ್ಲೆಗಳು ನಡೆದವು. ಶಿರಸಿಯಲ್ಲಿ ಸೌಮ್ಯ ಸ್ವರೂಪದಲ್ಲಿ ಗೋಲಿಬಾರ್ ಹಲ್ಲೆಯೂ ನಡೆಯಿತು.

ವಿದೇಶೀ ಬಟ್ಟೆ, ನೂಲು, ಸಕ್ಕರೆ, ಚಹ, ಗಾಜು, ಸಿಗರೇಟು, ಬಳೆ ಮತ್ತು ಸಾಬೂನುಗಳ ಮೇಲಿನ ಬಹಿಷ್ಕಾರ ಒಂದೆಡೆ ತೀವ್ರವಾಯಿತು. ಇನ್ನೊಂದೆಡೆ ಖಾದಿ ಹಾಗೂ ಇತರ ಸ್ವದೇಶೀ ಬಳಕೆಯ ಸರಕುಗಳ ಉತ್ಪಾದನೆಗಾಗಿ ಸಂಘಟನೆ ನಡೆಯಿತು. ಇದರಿಂದ ಸ್ವದೇಶೀ ಸಾಧನೆಗೂ ಮಿಗಿಲಾದ ಉತ್ತೇಜನ ಲಭಿಸುವಂತಾಯಿತು. ಆರ್. ಎಸ್. ಹುಕ್ಕೇರಿಕರರ ಮಾರ್ಗದರ್ಶನದಲ್ಲಿ ಕರ್ನಾಟಕ ಪ್ರಾದೇಶಿಕ ಸಮಿತಿಯು ಜನತೆಯ ಮನಸ್ಸಿಗೆ ಈ ದಿಶೆಯಲ್ಲಿ ಶಿಕ್ಷಣ ಕೊಡಲಿಕ್ಕಾಗಿ ಎಡೆಬಿಡದೆ ದುಡಿಯಿತು.

ಇವೆಲ್ಲ ಚಟುವಟಿಕೆಗಳಲ್ಲಿ ಹಿಂದುಸ್ಥಾನಿ ಸೇವಾದಳವು ಆಯಕಟ್ಟಿನ ಪಾತ್ರವನ್ನು ನಿರ್ವಹಿಸಿತು. ವಾಸ್ತವವಾಗಿ ಸೇವಾದಳದ ಸ್ವಯಂ ಸೇವಕರೂ ನಾಯಕರೂ ಈ ಹೋರಾಟದ ಭಾರವನ್ನು ವಹಿಸಿ ಹೆಣಗಿದರು. ಅಂಶತಃ ಅವರ ಶಿಸ್ತು ಸಹನೆಗಳೇ ಜನತೆಯನ್ನು ಸಂಘಟಿಸಿ ಸಂಗ್ರಾಮವನ್ನು ಯಶಸ್ವಿಯಾಗಿ ಬೆಳೆಯಿಸಿದವು.

ಉಪ್ಪಿನ ಸತ್ಯಾಗ್ರಹ, ಅರಣ್ಯ ಸತ್ಯಾಗ್ರಹ ಮತ್ತು ಇತರ ಮಾದರಿಯ ಸತ್ಯಾಗ್ರಹಗಳ ಅನಂತರ ಕೊನೆಯ ಅಂಶವು ಕರನಿರಾಕರಣೆಯ ರೂಪವನ್ನು ತಾಳಿತು. ಸತ್ಯಾಗ್ರಹ ಆಂದೋಲನ ಭಾಗವಾಗಿ ಅಂಕೋಲಾ ತಾಲೂಕಿನಲ್ಲಿ ಕರನಿರಾಕರಣೆಯ ಚಳವಳಿಯನ್ನು ಕೈಗೊಳ್ಳಲಾಯಿತು. ಆರ್. ಆರ್. ದಿವಾಕರರು ಈ ಚಳವಳಿಗೆ ಮಾರ್ಗದರ್ಶನ ಮಾಡಿದರು. ಬಾಸಗೋಡ ರಾಮನಾಯಕರ ಸಹಕಾರದೊಂದಿಗೆ ಡಿ.ಪಿ. ಕರಮರಕರರು ಇದಕ್ಕೆ ದಿಗ್ದರ್ಶನ ಮಾಡಿದರು. ಕೃಷ್ಣಾಬಾಯಿ ಪಂಜೀಕರ್ ಮತ್ತು ಬೇಪೂರ ಭೀಮರಾವ್ ಇವರು ಮೈಸೂರು ಸಂಸ್ಥಾನದ ಅನೇಕ ಸ್ವಯಂಸೇವಕರೊಂದಿಗೆ ಸ್ಥಾನಿಕ ಮುಂದಾಳುಗಳಿಗೆ ಸಕ್ರಿಯವಾಗಿ ನೆರವಾದರು. ಸ್ವಯಂಸೇವಕರ ಶಿಬಿರಗಳು ತೆರೆಯಲ್ಪಟ್ಟವು. ಸಮಾಚಾರ ಕರಪತ್ರಗಳನ್ನು ನಿಯತವಾಗಿ ಪ್ರಸಾರ ಮಾಡಲಾಯಿತು. ರೈತರು ವ್ಯವಸ್ಥಿತವಾಗಿ ಚಳವಳಿಯನ್ನು ಸಂಘಟಿಸಿದರು. ಕರ್ನಾಟಕದ ಎಲ್ಲೆಡೆಗಳಿಂದ ಅನುಭವಿಕರಾದ ಕಾರ್ಯಕರ್ತರು ಇದರಲ್ಲಿ ಭಾಗವಹಿಸಿದರು. 13 ಶಿಬಿರಗಳು ಸ್ಥಾಪಿತವಾದವು. ಇವುಗಳನ್ನು 40 ಮಂದಿ ಸ್ಥಾನಿಕ ಮತ್ತು 30 ಮಂದಿ ಹೊರಗಿನ ಸ್ವಯಂಸೇವಕರು ನಡೆಸುತ್ತಿದ್ದರು. ಇಡಿಯ ಸಂಘಟನೆಯು ಬಾಸಗೋಡ ರಾಮನಾಯಕ, ಸುಬ್ಬರಾವ್ ನಾಡಕರ್ಣಿ ಮತ್ತು ಭಾವಿಕೇರಿ ರಾಮನಾಯಕರಂತಹ ಸ್ಥಾನಿಕ ಮುಂದಾಳುಗಳ ಮೇಲ್ವಿಚಾರಣೆಯಲ್ಲಿ ಕೆಲಸಮಾಡಿತು. ಹಳ್ಳಿಗರಲ್ಲಿ ಹಾಗೂ ಪಟ್ಟಣದ ಜನರಲ್ಲಿ ಎಷ್ಟೊಂದು ಘನಿಷ್ಠವಾದ ಐಕ್ಯವಿತ್ತೆಂದರೆ ಕಾರ್ಯಕರ್ತರು ಹಾಡೇ ಹಗಲು ಕೆಲಸಮಾಡುತಿದ್ದರೂ ಪೋಲಿಸರಿಗೆ ಸಿಗುತಿದ್ದಿಲ್ಲ ಮತ್ತು ಪತ್ತೆಯಾಗುತ್ತಿದ್ದಿಲ್ಲ. ದಿವಾಕರರು, ನಾರಾಯಣರಾವ್ ಜೋಶಿ ಮತ್ತು ಬಿ.ಎನ್. ದಾತಾರ ಪ್ರಭೃತಿಗಳೇ ಈ ಕ್ಷೇತ್ರವನ್ನು ಸಂದರ್ಶಿಸಿ ಜನತೆಯನ್ನು ಹುರಿದುಂಬಿಸಿದರು. ಅನೇಕ ಮಂದಿ ಪಟೇಲರು ರಾಜಿನಾಮೆ ಇತ್ತರು. ಇದರಿಂದ ಸರಕಾರದ ಗ್ರಾಮಾಂತರ ಸಂಘಟನೆಯು ಕೈಕಾಲೇ ಮುರಿದಂತಾಯಿತು. ಎರಡು ಗ್ರಾಮಗಳ ಪಂಚಾಯತಗಳನ್ನು ಸರಕಾರವು ಅಕ್ರಮವೆಂದು ಸಾರಿತು. ಆದರೆ ಇನ್ನೂ ಹೆಚ್ಚು ಜನರು ಈ ಅಕ್ರಮ ಸಂಸ್ಥೆಗಳಲ್ಲಿ ಬಂದು ಸೇರಿದರು. ಸರಕಾರವು ಬಲಾತ್ಕಾರದ ದಮನ ನೀತಿಯನ್ನು ಕೈಗೊಂಡಿತು. ಅಂಕೋಲೆಯ ಜಮೀನುದಾರರುಗಳು ಈ ಆಘಾತಕ್ಕೆ ಭೇದ್ಯರಾಗುವಷ್ಟು ದುರ್ಬಲರಾಗಿ

ಕರ ಕಂದಾಯಗಳನ್ನು ತೆತ್ತರು. ಆದರೆ ಕರನಿರಾಕರಣೆಯಲ್ಲಿ ಭಾಗವಹಿಸಿದ ಹಳ್ಳಿಯವರು ಮತ್ತು ಕೆಲವು ಹಳ್ಳಿಗಳ ಸಮಸ್ತರು ಕೊನೆಯತನಕವೂ ಕರವನ್ನು ಕೊಡದೆ ದೃಢವಾಗಿ ಉಳಿದರು. ಅಂಕೋಲೆಯ ಈ ಚಳುವಳಿಯು ಗಾಂಧಿ ಇರ್ವಿನ್ ಒಪ್ಪಂದದ ಪರಿಣಾಮವಾಗಿ 1931 ರಲ್ಲಿಯೇ ನಿಂತಿತು.

ಅಂಕೋಲಾ ತಾಲೂಕಿನೊಳಗಿನ ಈ ರಾಜಕೀಯ ಕರನಿರಾಕರಣೆಯ ಆಂದೋಲನಕ್ಕೆ ಅಪ್ರತ್ಯಕ್ಷ ಬೆಂಬಲ ನೀಡುವಂತೆ ಬರಗಾಲ ಉಂಟಾಗಿ, ಬೆಳೆಯು ಬಾರದೆ ಹಿರೆಕೆರೂರು, ಶಿರಸಿ ಸಿದ್ದಾಪುರ ಕಡೆಯ ರೈತರು ಆರ್ಥಿಕ ಕಾರಣಗಳಿಂದಾಗಿ ಕರ ನಿರಾಕರಣೆಗೇ ಶರಣು ಹೋಗುವಂತಾಯಿತು. ಈ ತಾಲೂಕುಗಳಲ್ಲಿ ಪೈರೇ ಪೋಲಾಗಿ, ಬೆಲೆ ಧಾರಣೆಗಳು ಬಿದ್ದವು. ಕಂದಾಯ ರಿಯಾಯಿತಿ ಮಾಡಿ ಪರಿಹಾರ ಒದಗಿಸಬೇಕೆಂದು ಅನೇಕ ಮನವಿಗಳನ್ನು ಸರ್ಕಾರಕ್ಕೆ ಮಾಡಿಕೊಂಡದ್ದಾಯಿತು. ಆದರೆ ಅಧಿಕಾರಿಗಳು ಆಕಡೆಗೆ ಕಿವಿಗೊಡಲಿಲ್ಲ. ಆಗ ಹಿರೆಕೆರೂರು ತಾಲೂಕಿನಲ್ಲಿ ವೀರಣ್ಣಗೌಡ ಪಾಟೀಲರ, ಶಿರಸಿ ಸಿದ್ದಾಪುರ ತಾಲೂಕುಗಳಲ್ಲಿ ಆರ್. ಆರ್. ದಿವಾಕರ್, ಆರ್. ಎಸ್. ಹುಕ್ಕೇರಿಕರ್, ಕೆ. ಎ. ವೆಂಕಟರಾಮಯ್ಯ ಇವರ ನೇತೃತ್ವದಲ್ಲಿ ಕರನಿರಾಕರಣೆಯ ಚಳುವಳಿಯನ್ನು ಕೈಗೊಳ್ಳಲೇ ಬೇಕಾಯಿತು. ಹುಬ್ಬಳ್ಳಿಯ ಸಿದ್ಧರಾಮಪ್ಪ ಪಾವಟೆಯವರು ಅಧ್ಯಕ್ಷತೆ ವಹಿಸಿ ಒಂದು ರೈತ ಪರಿಷತ್ತಿನ ಅನಂತರ ಹಿರೇಕೆರೂರಿನಲ್ಲಿ ಈ ಚಳುವಳಿಗಾಗಿ 16 ಶಿಬಿರಗಳನ್ನು ಸ್ಥಾಪಿಸಲಾಯಿತು. ಈ ಶಿಬಿರಗಳಿಂದ ಈ ಆಂದೋಲನ ಸಂಘಟಿಸಲ್ಪಟ್ಟಿತು. ನೀರಿನ ಕರದಲ್ಲಿ 46 ಸಾವಿರ ರೂಪಾಯಿ ರಿಯಾಯಿತಿ ಮಾಡಿ ಸರಕಾರವು ರೈತರನ್ನು ಸಾಂತ್ವನಗೊಳಿಸಲು ತುಂಬ ತಡವಾಗಿ ಹವಣಿಸಿತು. ಆದರೆ ಅದರಿಂದ ಪ್ರಯೋಜನವಾಗಲಿಲ್ಲ. ಕಂದಾಯದ ಮೊದಲನೆ ಕಂತನ್ನು ಕೊಡುವ ವೇಳೆಗೆ 1,91,000 ರೂಪಾಯಿಯಲ್ಲಿ 1,82,000 ರೂಪಾಯಿ ಬಾಕಿ ಉಳಿಯಿತು. ಮಾರ್ಚಿ 1931ಕ್ಕೆ ಗಾಂಧಿ–ಇರ್ವಿನ್ ಒಪ್ಪಂದದ ಫಲವಾಗಿ ಸತ್ಯಾಗ್ರಹವೂ ಅಂಕೋಲೆಯ ಕರನಿರಾಕರಣ ಚಳವಳಿಯೂ ಸ್ಥಗಿತವಾದುವು. ಆದರೆ ಗಾಂಧೀಜಿಯ ಸಮ್ಮತಿಯಿಂದ ಹಿರೆಕೆರೂರಿನಲ್ಲಿಯ ಚಳವಳಿ ಮುಂದುವರಿಯಿತು ಏಕೆಂದರೆ ಅದು ಆರ್ಥಿಕ ದೃಷ್ಟಿಯದಿತ್ತೇ ಹೊರತು ರಾಜಕೀಯ ಉದ್ದೇಶದಿಂದ ಇದ್ದಿಲ್ಲ. ಎರಡನೆಯ ಕಂತಿನಲ್ಲಿ ಬರೇ 12.000 ರೂಪಾಯಿ ವಸೂಲಾಯಿತು. ಮೇ ತಿಂಗಳಲ್ಲಿ ದಕ್ಷಿಣ ವಿಭಾಗದ ಕಮಿಶನರ್ ಸ್ಮಾರ್ಟರೊಂದಿಗೆ ದಿವಾಕರರ ಒಪ್ಪಂದದ ಮೇರೆಗೆ ಈ ಚಳವಳಿಯನ್ನು ನಿಲ್ಲಿಸಲಾಯಿತು. ಈ ಮೇರೆಗೆ ಕಮಿಶನರನು ಆವಶ್ಯಕ ಪರಿಹಾರಕೊಡುವುದಾಗಿ ಭರವಸೆ ಇತ್ತನು.

ಶಿರಸಿ ಸಿದ್ದಾಪುರ ತಾಲುಕುಗಳಲ್ಲಿಯೂ ರೈತರು ಆರ್ಥಿಕ ಕಾರಣಗಳಿಗಾಗಿ ಕರನಿರಾಕರಣೆಯನ್ನು ಆರಂಭಿಸಿದ್ದರು. ಶಿರಸಿಯಿಂದ ರೂ. 45,000, ಸಿದ್ಧಾಪೂರದಿಂದ ರೂ. 40,000 ಎತ್ತುವಳಿ ಮಾಡಲಿಕ್ಕೆ ಬಲಾತ್ಕಾರದ ಕ್ರಮಗಳನ್ನು ಸರಕಾರವು ಹೂಡಿತು. ಆಸ್ತಿ ಪಾಸ್ತಿ ಜಪ್ತಿಮಾಡುವ ಪ್ರಕರಣಗಳು ಸಿದ್ಧಾಪುರದಲ್ಲಿ 80, ಶಿರಸಿಯಲ್ಲಿ 65 ನಡೆದವು. ಏಳೆಂಟು ಪ್ರಕರಣಗಳಲ್ಲಿ ಜಪ್ತಿಮಾಡಿದ ಆಸ್ತಿಗಳನ್ನು ಹರಾಜಿನಲ್ಲಿ ಸರಕಾರಿ ಅಧಿಕಾರಿಗಳೇ ಸವಾಲಿಗೆ ಕೊಂಡುಕೊಂಡರು. ಜಪ್ತಿಮಾಡಿದ ಸೊತ್ತಿನಲ್ಲಿ ಮನೆಯ ಪಾತ್ರೆ ಸಾಮಾನುಗಳು, ಕರೆವ ದನಕರುಗಳು, ಅಕ್ಕಿ, ಬತ್ತ, ಗಂಡುಸರ ಹೆಂಗುಸರ ಸಣ್ಣ ಪುಟ್ಟ ಆಭರಣಗಳು ಇವೆಲ್ಲ ಇದ್ದವು. ಕಟ್ಟಕಡೆಗೆ ಭಾರತ ಸರಕಾರದ ಆಜ್ಞೆಯ ಮೇರೆಗೆ ಈ ದಮನಚಕ್ರದ ಕ್ರಮಗಳು ನಿಂತವು. ಮತ್ತು 'ದಿವಾಕರ-ಸ್ಮಾರ್ಟ್ ಒಡಂಬಡಿಕೆ' ಯ ಅನುಸಾರವಾಗಿ ತೆರುವ ಸಾಮರ್ಥ್ಯವಿದ್ದವರು ಬಾಕಿ ಬಿದ್ದ ಭೂಕಂದಾಯವನ್ನು ಸಂದಾಯಮಾಡಿದರೂ ಸರಕಾರವು ಆವಶ್ಯಕ ಮತ್ತು ಸಾಕಷ್ಟು ಪರಿಹಾರ ನೀಡುವುದೆಂಬ ತಮ್ಮ ಪಾಲಿನ ಕರಾರನ್ನು ಪಾಲಿಸಲಿಲ್ಲ.

### ಕರ್ಣಾಟಕದ ಕರ್ತೃತ್ವ

ಗಾಂಧಿಜೀ ಮತ್ತು ಸರದಾರ ಪಟೇಲರ ನೇತೃತ್ವದಲ್ಲಿ, ವಿಶೇಷವಾಗಿ ಕರನಿರಾಕರಣೆಯಲ್ಲಿ ಗುಜರಾತು

ಮತ್ತು ಬಾರ್ದೋಲಿಗಳು ಮಾಡಿ ಕಾಣಿಸಿದ ವಿಕ್ರಮವನ್ನು ಇತರ ಪ್ರಾಂತಗಳು ಸಾಧಿಸಲು ಸಮರ್ಥವಾಗ ಲಿಕ್ಕಿಲ್ಲವೆಂದು ಸ್ವಾಭಾವಿಕವಾಗಿಯೇ ಜನರು ಭಾವಿಸಿದ್ದರು. ಆದರೆ ಕರ್ನಾಟಕವು ಈ ಭಾವನೆಯನ್ನು ನಿರಾಧಾರವೆಂದು ಸಿದ್ಧಮಾಡಿ ಕಾಣಿಸಿತು. ಸ್ವಾತಂತ್ರ್ಯದ ಉತ್ಕಟ ಪ್ರೇಮ, ಆತ್ಯಂತಿಕ ತ್ಯಾಗಕ್ಕಾಗಿ ಸಿದ್ಧತೆ, ಗಾಂಧಿಜೀಯವರಲ್ಲಿ ಅಚಲ ನಿಷ್ಠೆ ಮತ್ತು ಯೋಗ್ಯ ನಾಯಕತ್ವ-ಇವೇ ಆವಶ್ಯಕ ಸಂಗತಿಗಳಾಗಿದ್ದವು. ಇವೆಲ್ಲವೂ ಕರ್ನಾಟಕದಲ್ಲಿ ವಿಶೇಷತಃ ಅಂಕೋಲಾ, ಹಿರೇಕೆರೂರು, ಶಿರಸಿ, ಸಿದ್ಧಾಪುರಗಳಲ್ಲಿ ಒದಗಿ ಬಂದಿದ್ದವು. ಉತ್ತರ ಕರ್ನಾಟಕದ ಜಿಲ್ಲೆಗಳ ಬಹು ಜನ ಸಮುದಾಯವು 1930 ರಿಂದ ಈಚೆಗೆ ಹೊಸ ಮನಿ ಸಿದ್ದಪ್ಪ, ಹರ್ಡೇಕರ ಮಂಜಪ್ಪ, ವೀರಣ್ಣಗೌಡ ಪಾಟೀಲ, ಟಿ. ಆರ್. ನೇಸ್ವಿ, ಕಲ್ಲನಗೌಡ ಪಾಟೀಲ, ಎಂ. ಪಿ. ಪಾಟೀಲ ಮತ್ತು ಇತರ ಮುಂದಾಳುಗಳ ನೇತೃತ್ವದಲ್ಲಿ ಹಳ್ಳಿಕೇರಿ, ಮಾಗಡಿ, ದೊಡ್ಡ ಮೇಟಿ ಮುಂತಾದ ಕಡೆಯ ತರುಣರ ಮತ್ತು ಇತರ ಮುಖಂಡರ ಗುಂಪು ಬಂದುದರಿಂದ ಕರ್ನಾಟಕದಲ್ಲಿ ಗಾಂಧೀಚಳವಳಿಯ ಭವಿತವ್ಯದ ಬಗೆಗೆ ಭರವಸೆ ಭದ್ರವಾಯಿತು.

## 3. ಸವಿನಯ ಕಾಯಿದೆ ಭಂಗ ಚಳವಳಿ (1932–33)

1930ರ ಸತ್ಯಾಗ್ರಹ ಆಂದೋಲನದ ನಿಗದಿ ಫಲಿತಾಂಶವೇನೆಂದರೆ : ಸ್ವಾತಂತ್ರ್ಯ ಸಂಗ್ರಾಮದ ಸಾಧನ ಬಲವತ್ತರವಾಯಿತು ; ಕಾಂಗ್ರೆಸ್ ಸಂಘಟನೆ ಹೆಚ್ಚು ಬಲಶಾಲಿಯಾಯಿತು ; ಜನಸಮುದಾಯದಲ್ಲಿ ಅಭೂತಪೂರ್ವ ಜಾಗೃತಿಯುಂಟಾಯಿತು. ಜನಮನದಲ್ಲಿ ಗಾಂಧಿವಾದವು ಆಳವಾದ ಪ್ರಭಾವವನ್ನು ಬೀರಿತು. ಮೈಸೂರು ಸಂಸ್ಥಾನವನ್ನು ಒಳಗೊಂಡ ಕರ್ನಾಟಕದ ಎಲ್ಲ ಭಾಗಗಳು ಈ ಹೋರಾಟದಲ್ಲಿ ಭಾಗವಹಿಸಲು ಧುರೀಣರನ್ನೂ ಕಾರ್ಯಕರ್ತರನ್ನೂ ಕಳುಹಿಸಿ, ಪರ್ಯಾಯವಾಗಿ ಏಕೀಕೃತ ಕರ್ನಾಟಕದ ಸಾಧನೆಗೆ ಸಹಾಯ ಮಾಡಿದವು. ಈ ಹೋರಾಟಕ್ಕೆ ಹೆಚ್ಚಿನ ಪ್ರೋತ್ಸಾಹ ದೊರೆಯಲು ಕಾರಣವೆಂದರೆ— ಎಸ್. ಕೆ. ಹೊಸಮನಿ ಮತ್ತು ಮಂಜಪ್ಪ ಹರ್ಡೇಕರರು ಎರಡು ಪರಿಷತ್ತುಗಳ ಅಧ್ಯಕ್ಷಸ್ಥಾನದಿಂದ ವೀರಶೈವ ಸಮಾಜಕ್ಕೆ ಕಾಂಗ್ರೆಸ್ಸನ್ನು ಸೇರಲು ಕರೆಕೊಟ್ಟದ್ದು. ಇದರಿಂದ ಸಾರ್ವಜನಿಕ ಅಭಿಪ್ರಾಯದಲ್ಲಿ ಬಿರುಕು ಉಳಿಯಲಿಲ್ಲ ; ಜನತೆ ಅಖಂಡವಾಗಿ ಹಾಗೂ ಅನನ್ಯವಾಗಿ ನಿಷ್ಠೆ ಸಲ್ಲಿಸುವ ಸಂಘಟನೆ ಕಾಂಗ್ರೆಸ್ ಒಂದೇ ಆಯಿತು. ನಿಜವಾಗಿಯೂ ದಕ್ಷಿಣ ವಿಭಾಗದ ಕಮಿಶನರನು ಕರ್ನಾಟಕವನ್ನು "ಗಾಂಧೀಪ್ರಾಂತ " ವೆಂದು ವರ್ಣಿಸಿದುದು ಸಾರ್ಥಕವಾಯಿತು.

1931ರ ಮಾರ್ಚಿಯಲ್ಲಿ ಸತ್ಯಾಗ್ರಹವು ಸ್ಥಗಿತವಾದಂದಿನಿಂದ 1932 ಜನವರಿಯಲ್ಲಿ ಪುನಃ ಪ್ರಾರಂಭವಾಗುವ ವರೆಗಿನ ಅವಧಿಯು ಒಂದು ಅಸ್ವಸ್ಥ ಸ್ತಬ್ಧತೆಯದಾಗಿ ತೋರಿತು. ಗಾಂಧಿ-ಇರ್ವಿನ್ ಒಪ್ಪಂದವು ವೈಯಕ್ತಿಕ ಉಪಯೋಗಕ್ಕಾಗಿ ಪುಕ್ಕಟೆ ಉಪ್ಪಿನ ಉತ್ಪಾದನೆ, ವಿದೇಶಿ ವಸ್ತ್ರದ ಅಂಗಡಿಗಳ ಮುಂದೆ ಶಾಂತಿಮಯವಾದ ಪಿಕೆಟಿಂಗ್ ಮುಂತಾದ ಅಂಶಗಳನ್ನು ನಿಸ್ಸಂದಿಗ್ಧವಾಗಿ ಮಾಡಲು ಬಿಟ್ಟಿತು. ಆದರೆ ನೌಕರಶಾಹಿಯು ವೈಸರಾಯ ಲಾರ್ಡ್ ಇರ್ವಿನರ ಶಾಂತಿಯುತ ಧೋರಣೆಯಿಂದ ಸಿಡಿಮಿಡಿ ಗೊಂಡಿತು. ಗಾಂಧಿಜೀ 1031ರಲ್ಲಿ ದುಂಡುಮೇಜಿನ ಪರಿಷತ್ತಿನಿಂದ ನಿರಾಶರಾಗಿ ಮರಳಿದರು. ಆದರೆ ಅವರು ಬಂದು ತಲುಪುವ ಮುಂಚೆಯೆ ಜವಾಹರಲಾಲ ನೆಹರು ಖಾನ ಅಬ್ದುಲ್ ಗಫಾರಖಾನರನ್ನು ಸೆರೆ ಹಿಡಿಯಲಾಯಿತು. ಉತ್ತರ ಪ್ರದೇಶ (ಸಂಯುಕ್ತ ಪ್ರಾಂತ)ದಲ್ಲಿ ಪೀಡಿತ ರೈತರಿಂದ ಪ್ರಾರಂಭವಾದ ಕರನಿರಾಕರಣೆಯ ಚಳವಳಿಯ ಕುರಿತು ದಮನನೀತಿಯ ಉಗ್ರಕ್ರಮವನ್ನು ಕೈಗೊಳ್ಳಲಾಯಿತು. 1932 ಜನವರಿಯ ಪ್ರಾರಂಭದಲ್ಲಿಯೆ ವರ್ಕಿಂಗ್ ಕಮಿಟಿಯ ಸಭೆ ಆದೊಡನೆಯೆ ಸರಕಾರವು ಸಂಗ್ರಾಮಕ್ಕಾಗಿ ತೀರಾ ತ್ವರೆಮಾಡಿತು. ಸರಕಾರವು ಸಂಧಾನದ ಕ್ರಮವನ್ನು ತೆಗೆದುಕೊಳ್ಳಲು ತಪ್ಪಿದ ಪ್ರಸಂಗದಲ್ಲಿ ಸವಿನಯ ಕಾಯಿದೆ ಭಂಗವನ್ನು ಮತ್ತೆ ಆರಂಭಿಸಬೇಕೆಂದು ವರ್ಕಿಂಗ್ ಕಮಿಟಿ ಆದೇಶ ನೀಡಿತು.

ಸರಕಾರವು ಕಾಂಗ್ರೆಸನ್ನು ಹಾಗೂ ಅದಕ್ಕೆ ಸಂಬಂಧಪಟ್ಟ ಪ್ರತಿಯೊಂದು ಸಂಘಟನೆಯನ್ನು ಅಕ್ರಮ (ಕಾನೂನು ಬಾಹಿರ)ವೆಂದು ಸಾರಿ ವ್ಯಕ್ತಿಗಳನ್ನು ಸೆರೆಹಿಡಿಯಲೂ ಆಸ್ತಿ ಸೊತ್ತುಗಳನ್ನು ಜಪ್ತಿಮಾಡಲೂ ಸರಕಾರಕ್ಕೆ ವ್ಯಾಪಕವಾದ ಅಧಿಕಾರಗಳನ್ನು ಕೊಡಲು ಸುಗ್ರೀವಾಜ್ಞೆಗಳನ್ನು ಹೊರಡಿಸಿ ತಾನೇ ಮುಂದಾಗಿ ಉಗ್ರಕ್ರಮ ಕೈಗೊಂಡಿತು. ಒಂದು ಸುತ್ತಿನಲ್ಲಿಯೇ ಎಲ್ಲ ಧುರೀಣರನ್ನು ಮತ್ತು ಕಾರ್ಯಕರ್ತರನ್ನು ಸೆರೆಯಲ್ಲಿ ಇಟ್ಟಿತು. ಆದರೆ ಈ ಗಾಬರಿಗೆಟ್ಟ ಪ್ರಯತ್ನವೆಲ್ಲಾ ವಿಫಲವಾಯಿತು. ಸ್ವಾತಂತ್ರ್ಯದ ಹೋರಾಟವು ಬಿರುಗಾಳಿಗೆದ್ದ ಕಡಲ ತೆರೆಗಳ ಏರಾಟದಂತೆ ಇತ್ತು. ಅಸಹಕಾರದ ಆಂದೋಲನದಲ್ಲಿ ದೇಶದಲ್ಲಿ ಸೆರೆಹಿಡಿಯಲಾದವರ ಸಂಖ್ಯೆ 30,000 ಆದರೆ, 1930–31ರಲ್ಲಿ ಅದು 90,000ಕ್ಕೆ ಏರಿತು. ಕರ್ಣಾಟಕದಲ್ಲಿ 1920–21ರಲ್ಲಿ ಸೆರೆಹಿಡಿಯಲಾದವರ ಸಂಖ್ಯೆ ಚಿಕ್ಕದಾಗಿತ್ತು. ಆದರೆ 1930ರಲ್ಲಿ 1,700ಕ್ಕಿಂತ ಹೆಚ್ಚು ಮಂದಿ ಸರಕಾರದ ಅನ್ಯಾಯದ ಕಾನೂನುಗಳನ್ನೂ ಕಟ್ಟಪ್ಪಣೆಗಳನ್ನೂ ಪ್ರತಿಭಟಿಸುವ ಆಂದೋಲನದಲ್ಲಿ ಸೆರೆಸಿಕ್ಕಿ ಜೈಲು ಸೇರಿದರು. ಸಣ್ಣ ಜಿಲ್ಲೆಯಾಗಿರುವ ಉತ್ತರ ಕನ್ನಡ ಕೂಡ, 400 ಮಂದಿ ಸತ್ಯಾಗ್ರಹಿಗಳನ್ನು ಒದಗಿಸಿತು. 1931ನೆಯ ಡಿಸೆಂಬರಿನಲ್ಲಿ ಸೇವಾದಲದ ದೀಕ್ಷಾ ಸಮಾರಂಭಕ್ಕೆಂದು ಜವಾಹರಲಾಲಜೀ ಹುಬ್ಬಳ್ಳಿಗೆ ಕೊಟ್ಟ ಭೇಟಿಯು ಜನತೆಯ ಅಗಾಧವಾದ ಉತ್ಸಾಹವನ್ನು ಉಕ್ಕೇರಿಸಿತು. ಅವರು ಕೊಟ್ಟ ರಣಕಹಳೆಯ ಕರೆ 1932ರ ಹೋರಾಟದ ನಾಂದಿಯಲ್ಲಿ ಸಂಗ್ರಾಮ-ಬಲಿದಾನಗಳ ಬಗೆಗೆ ಜನತೆಯ ಶ್ರೋತ್ರೇಂದ್ರಿಯದಲ್ಲಿ ಶಬ್ದಾಯಮಾನವಾಯಿತು.

1932 ನೆಯ ಜನವರಿ ಮೊದಲನೆ ವಾರದಲ್ಲಿ ಗಾಂಧಿಜೀಯವರ ಮತ್ತು ವರ್ಕಿಂಗ್ ಕಮಿಟಿಯವರ ಬಂಧನದಿಂದ ಈ ಹೋರಾಟ ಪ್ರಾರಂಭವಾಯಿತು. ಎಲ್ಲ ಕಾಂಗ್ರೆಸ್ ಸಂಘಟನೆಗಳನ್ನು ಅಕ್ರಮ ಕೂಟಗಳೆಂದು ವಿಧಿಸಲಾಯಿತು. ಆದರೆ ಈ ಬಗೆಯ ಬಹಿಷ್ಕಾರವಿದ್ದರೂ ಅಖಿಲಭಾರತೀಯ ಹಾಗೂ ಪ್ರಾಂತಿಕ ಕಾಂಗ್ರೆಸುಗಳು ನಿಯತವಾಗಿ ಕೆಲಸ ಸಾಗಿಸುತ್ತಿದ್ದವು. ಕಾಲಕಾಲಕ್ಕೆ ಗುಪ್ತ ಆದೇಶ–ಸಂದೇಶಗಳನ್ನು ಹೊರಡಿಸುತ್ತಿದ್ದವು. 1932 ನೆಯ ಜನವರಿ 12ನೆ ದಿನವನ್ನು ಅಖಿಳ ಕರ್ಣಾಟಕದ ಸತ್ಯಾಗ್ರಹ ದಿನವೆಂದು ಆಚರಿಸಲಾಯಿತು. ನೂರುಗಟ್ಟಲೆ ಜನರು ಸೆರೆಮನೆ ಸೇರಿದರು. ಮುಂದೆ ಇಂತಹ ದಿನಗಳನ್ನು ಸರಕಾರದಿಂದ ಆಜ್ಞೆಗಳನ್ನು ಮೀರಿ ಮುರಿವ ದಿನಗಳಾಗಿ ಆಚರಿಸಲಾದವು. ಕಾರಾಗೃಹವಾಸ ಮತ್ತು ಶಾರೀರಿಕ ಹಲ್ಲೆಗಳು ಪಾಲಿಗೆ ಬಂದರೂ ವಿದೇಶೀ ವಸ್ತ್ರದ ಅಂಗಡಿಗಳ ಪಿಕೆಟಿಂಗ್ ಮುಂದುವರಿಸಲಾಯಿತು. ಸಾವಿರ ಸಂಖ್ಯೆಯಲ್ಲಿ ಸೇಂದಿ ಮರಗಳನ್ನು ಕಡಿದುಹಾಕಲಾಯಿತು. ಸಾರಾಯಿ ಅಂಗಡಿಗಳನ್ನು ಅವುಗಳ ಹರಾಜುಗಳನ್ನು ಯಶಸ್ವಿಯಾಗಿ ಬಹಿಷ್ಕರಿಸಿ ಪಿಕೆಟಿಂಗ್ ನಡೆಯಿತು. ಹಗಲಿರುಳು ಮದ್ಯದಂಗಡಿಗಳ ಪಿಕೆಟಿಂಗ್ ನಡೆದು, ಉತ್ತರ ಕನ್ನಡದ ಅಂಕೋಲೆಯು ವ್ಯವಹಾರತಃ ಪೂರ್ತಿ 'ಒಣ'ವಾಗಿ (dry) ಮಾರ್ಪಟ್ಟಿತು, ಪತ್ರಿಕೆಗಳು ಜಾಮೀನು ತುಂಬಲು ನಿರಾಕರಿಸಿದವು. ಈ ಕಾರಣದಿಂದ ಮತ್ತು ಅವುಗಳ ಸಂಪಾದಕರನ್ನು ಸೆರೆಹಿಡಿದು ಇಟ್ಟಿದ್ದರಿಂದ ಧಾರವಾಡದ 'ಕರ್ಮವೀರ', ಬಳ್ಳಾರಿಯ 'ಕರ್ಣಾಟಕ ಕೇಸರಿ', ಬೆಳಗಾವಿಯ 'ಸಂಯುಕ್ತ ಕರ್ಣಾಟಕ', ಹುಬ್ಬಳ್ಳಿಯ 'ತರುಣ ಕರ್ಣಾಟಕ', ಬಿಜಾಪುರದ 'ಉದಯ' ಮತ್ತು 'ಕರ್ಣಾಟಕ ವೈಭವ'–ಈ ಪತ್ರಿಕೆಗಳ ಪ್ರಕಟಣೆ ನಿಂತುಹೋಯಿತು. ಆದರೆ ಅವುಗಳ ಸ್ಥಾನದಲ್ಲಿ ಕಾಯಿದೆಗೆ ವಿರುದ್ಧವಾಗಿ ಸುದ್ದಿ ಹಾಳೆಗಳು ಬಂದು, ಎಲ್ಲ ಮುಖ್ಯ ಕೇಂದ್ರಗಳಿಂದಲೂ ಹೊರಡಿಸಲ್ಪಟ್ಟವು. ಭಾರೀ ಶಿಕ್ಷೆಗಳನ್ನು ವಿಧಿಸಲಾಯಿತು ಮತ್ತು ಮೊದಲ ನಾಲ್ಕು ತಿಂಗಳುಗಳಲ್ಲಿಯೇ ಸೆರೆಮನೆಗೆ ಹೋದವರ ಸಂಖ್ಯೆ 2,300ಕ್ಕೆ ಮುಟ್ಟಿತು. ಮಂಗಳೂರು, ಉಡುಪಿ, ಕಾಸರಗೋಡು, ಕೊಟ್ಟೂರು, ಗದಗು, ಹುಬ್ಬಳ್ಳಿ, ಹಾವೇರಿ–ಎಂಬೀ ಕಡೆಗಳಲ್ಲಿ ಜನರ ಸಭೆಗಳನ್ನು ಚದರಿಸಲಿಕ್ಕಾಗಿ ಲಾಠೀ ಹಲ್ಲೆಗಳನ್ನು ನಡೆಯಿಸಬೇಕಾಗಿ ಬಂತು. ಗಂಡುಸರ ಮತ್ತು ಹೆಂಗುಸರ ಮೇಲೆ ಧಾರಾಳವಾಗಿ ಅಮಾನುಷ ಅತ್ಯಾಚಾರಗಳು ನಡೆದವು; ಮಂಗಳೂರು ಜಿಲ್ಲೆಯಲ್ಲಿ ಇದು ಅತ್ಯಂತ ಹೀನಾಯವಾಗಿ ನಡೆಯಿತು. ಉತ್ತರ ಕನ್ನಡ ಜಿಲ್ಲೆಯಲ್ಲಿ, ಮುಖ್ಯವಾಗಿ

ಶಿರಸಿ, ಸಿದ್ಧಾಪುರ, ಅಂಕೋಲೆಗಳಲ್ಲಿ ಈ ಹೋರಾಟವು ಅತ್ಯಂತ ತೀವ್ರ ಸ್ವರೂಪವನ್ನು ತಾಳಿತು. ಅಂಕೋಲೆಯ ಮಾಮಲೇದಾರನ ವರದಿಯಂತೆ ಆ ತಾಲೂಕಿನ 38,000 ಜನರಲ್ಲಿ 15,000 ಮಂದಿ ಸಕ್ರಿಯವಾಗಿ ಭಾಗವಹಿಸಿದರು. ಉಳಿದ 23,000 ಮಂದಿ ಜನರು ಸಕ್ರಿಯವಾಗಿ ಸಹಾನುಭೂತಿ ತೋರಿಸಿದರು. ಪ್ರಾಂತದ ಪ್ರತಿಯೊಂದು ಕಡೆಯಲ್ಲಿ ಸರಕಾರದ ಅನ್ಯಾಯದ ಆಜ್ಞೆಯ ಉಲ್ಲಂಘನೆ ಪ್ರತಿಭಟನೆಗಳೇ ಸಾರ್ವತ್ರಿಕ ನಿಯಮಗಳಾದವು. ಬಾಗಲಕೋಟೆಯಲ್ಲಿ ಅಸಹಾಯ ಸರಕಾರಿ ಅಧಿಕಾರಿಗಳ ಕಣ್ಣೆದುರಿಗೆ ಹ. ರಾ. ಪುರೋಹಿತರ ಅಧ್ಯಕ್ಷತೆಯಲ್ಲಿ ಒಂದು ರಾಜಕೀಯ ಪರಿಷತ್ತು ನೆರವೇರಿತು. ಆಗಿನ ಒಂದು ಉಲ್ಲೇಖನೀಯ ಘಟನೆಯೆಂದರೆ, ಸಾವಿರಗಟ್ಟಲೆ ಸಂಖ್ಯೆಯ ಹಳ್ಳಿಯ ಜನರು ಆ ಪರಿಷತ್ತಿನಲ್ಲಿ ಬಹಿರಂಗವಾಗಿ ಭಾಗವಹಿಸಿದರು. ಈಗ ಆಂದೋಲನವು ಕೆಲವೇ ಸುಶಿಕ್ಷಿತರಿಂದ ನಡೆಯಿಸಲ್ಪಡುವಂಥ ದಾಗಿ ಉಳಿಯಲಿಲ್ಲ. ಹಳ್ಳಿ ಹಳ್ಳಿಯಲ್ಲಿಯೂ ಅವರ ವೀರನಾಯಕನು (Hampden) ಕಾಣಿಸಿದನು. ಈ ಹೋರಾಟವು ಉತ್ತರ ಕನ್ನಡ ಜಿಲ್ಲೆಯಲ್ಲಿ ಕ್ರಮಬದ್ಧವಾಗಿ ಮುಗಿತಾಯವನ್ನು ಮುಟ್ಟಿತು. ಅದನ್ನು ಸ್ವಲ್ಪ ಹೆಚ್ಚು ವಿವರವಾಗಿ ತಿಳಿಸುವುದು ಯೋಗ್ಯವಾಗಿದೆ.

1932ನೆಯ ಜನವರಿ ಮೊದಲ ವಾರ ಧಾರವಾಡದಲ್ಲಿ ಕಾಂಗ್ರೆಸ್ ಕಾರ್ಯಕರ್ತರ ಒಂದು ಅನೌಪಚಾರಿಕ ಸಭೆ ನಡೆಯಿತು. ಅಲ್ಲಿ ನಿರ್ಣಯಿಸಲಾದುದು ಏನೆಂದರೆ, ಕರನಿರಾಕರಣೆಯ ಆಂದೋಲನವನ್ನು ಸಂಘಟಿಸುವ ದೃಷ್ಟಿಯಿಂದ ಆರ್.ಆರ್. ದಿವಾಕರರು ಶಿರಸಿ ಸಿದ್ದಾಪುರ ಕ್ಷೇತ್ರಕ್ಕೂ ಡಿ.ಪಿ. ಕರಮರಕರರು ಅಂಕೋಲಾ ಕ್ಷೇತ್ರಕ್ಕೂ ಸಾಗಬೇಕು—ಎಂದು. ತನ್ನನ್ನು ಸೆರೆಹಿಡಿಯಲು ಪೋಲಿಸರು ಬೆನ್ನ ಹಿಂದೆಯೆ ಇರುತ್ತಿದ್ದರೂ ದಿವಾಕರರು ಪ್ರಮುಖ ಕೇಂದ್ರಗಳಿಗೆ ಭೆಟ್ಟಿಕೊಟ್ಟರು. ಸುಮಾರು 70 ಮುಖ್ಯ ಕೆಲಸ ಗಾರರನ್ನು ಬಿಳಿಗಿಯಲ್ಲಿ ಭೆಟ್ಟಿಯಾದರು. ಇವರಲ್ಲಿ ದೊಡ್ಡಮನೆ ನಾಗೇಶ ಗಣೇಶ ಹೆಗಡೆ, ಕಾನಳ್ಳಿ ಶಿವರಾಮ ಕನ್ನಯ್ಯ ಹೆಗಡೆ, ಶಿರಾಳಗಿಯ ಸುಬ್ರಾಯಭಟ್ಟ ಬಾಲಂಭಟ್ಟ, ಹೊಸಕೊಪ್ಪ ಗಣೇಶ ಹೆಗಡೆ, ಕೋಡಸರದ ರಾಮಪ್ಪ ಹೆಗಡೆ ಪ್ರಭೃತಿಗಳಿದ್ದರು. ಇವರು ಎಂತಹ ಸಂಕಟಗಳನ್ನೂ ಲೆಕ್ಕಿಸದೆ ಮಿಗಿಲಾದ ಬಲಿದಾನಕ್ಕೆ ಮತ್ತು ಅಪಾಯಕ್ಕೆ ಅಣಿಯಾಗಿ ಆಂದೋಲನದ ನಾಯಕತ್ವವನ್ನು ವಹಿಸಿದರು. ಕರನಿರಾಕಣೆಯ ಚಳವಳಿ ಕುರಿತು ಸರ್ವಾನುಮತಿಯಿಂದ ನಿರ್ಣಯವಾಯಿತು. ಆ ಮೇಲೆ ದಿವಾಕರರು ಶಿರಸಿ ತಾಲೂಕಿನ ಕೆಲವು ಕೇಂದ್ರಗಳಿಗೆ ಭೆಟ್ಟಿಕೊಟ್ಟರು. ಅನಂತರ ಅವರನ್ನು ಸೆರೆಹಿಡಿಯಲಾಯಿತು.

ಡಿ. ಪಿ. ಕರಮರಕರರು ಒಳ್ಳೆಯ ನಂಬಿಕೆಯ ಸಹಕಾರಿಗಳಾದ ಕೆ. ಜಿ. ಜೋಶಿಯವರೊಂದಿಗೆ ಅಂಕೋಲಾ ತಾಲೂಕನ್ನು ಪ್ರವೇಶಿಸಿದರು. ಅಲ್ಲಿ ಅವರು ಕರನಿರಾಕರಣೆಯ ಆಂದೋಲನಕ್ಕೆ ಕ್ಷೇತ್ರವು ಸಿದ್ಧವಾಗಿರುವುದನ್ನು ಕಂಡರು. ಸಿದ್ಧಾಪುರದ ಆಂದೋಲನವನ್ನು ಇನ್ನಷ್ಟು ಬಲಿಷ್ಠಗೊಳಿಸಲಿಕ್ಕೆ ಹೂವಿನ ಮನೆಯಲ್ಲಿ ಪ್ರಾತಿನಿಧಿಕ ಕಾರ್ಯಕರ್ತರ ಸಭೆ ಸೇರಿ ಒಬ್ಬರ ಹಿಂದೊಬ್ಬರು ಉತ್ತರಾಧಿಕಾರಿ ಯಾಗುವಂತೆ 7 ಸರ್ವಾಧಿಕಾರಿ (Dictator)ಗಳನ್ನು ನೇಮಿಸಲಾಯಿತು. ಹಿಂದುಸ್ತಾನಿ ಸೇವಾದಲದಲ್ಲಿ ಮುಖ್ಯ ದಳಪತಿಯಾದ ಡಾ॥ ಹರ್ಡೀಕರ್ ಕೆ.ಎ. ವೆಂಕಟರಾಮಯ್ಯ-ಅವರು ಮಾರ್ಚ ತಿಂಗಳಲ್ಲಿ ಹೋಗಿ ಶಿರಸಿ ಸಿದ್ಧಾಪುರ ತಾಲೂಕುಗಳಲ್ಲಿ ಚಳವಳಿಗಾಗಿ ಮುಖ್ಯ ಕೇಂದ್ರಗಳನ್ನು ಸಂಘಟಿಸಿದರು. ಶಿರಸಿ ಸಿದ್ಧಾಪುರದ ಹಳ್ಳಿಗಳಲ್ಲಿ 18 ಶಿಬಿರಗಳನ್ನು ಏರ್ಪಡಿಸಲಾಯಿತು. ಒಂದೊಂದು ಶಿಬಿರದಲ್ಲಿಯೂ ಜನರನ್ನು ಪ್ರೋತ್ಸಾಹಿಸಲಿಕ್ಕೆ, ಕರಪತ್ರಗಳನ್ನು ಹಂಚಲಿಕ್ಕೆ, ಸುದ್ದಿ ಸಂಗ್ರಹಿಸಿ ಕೇಂದ್ರಕಾರ್ಯಾಲಯಕ್ಕೆ ಮುಟ್ಟಿಸಲಿಕ್ಕೆ ತಕ್ಕ ತರಬೇತಿ ಹೊಂದಿದ ವಿಶ್ವಾಸದ ಕಾರ್ಯಕರ್ತರನ್ನು ನೇಮಿಸಲಾಯಿತು. ಅಂಕೋಲೆ ಯಲ್ಲಿಯೂ ಅದೇ ರೀತಿ ನೇರವಾಗಿ ಕರಮರಕರರ ನೇತೃತ್ವದಲ್ಲಿ ಕಣಗಿಲದಲ್ಲಿ ಮುಖ್ಯ ಕೇಂದ್ರ ಕಚೇರಿಯ ಶಿಬಿರವಿದ್ದು, ಉಳಿದವು ಪ್ರಮುಖವಾದ ಹಳ್ಳಿಗಳಲ್ಲಿ ಇದ್ದವು. ಹಿಂದುಸ್ತಾನಿ ಸೇವಾದಲದ ತರಬೇತಿ ಹೊಂದಿದ ಅನೇಕ ಕಾರ್ಯಕರ್ತರು ಶಿಬಿರಗಳ ಸಂಚಾಲನೆಗೆ ನಿಂತರು. ಇವು ಇಡಿಯ ಆಂದೋಲನದ ನಾಡಿ

ಕೇಂದ್ರಗಳಾಗಿದ್ದವು. ಇವು ಕೊನೆತನಕವೂ ಕಾರ್ಯನಡೆಸಿದವು. ತಾಲೂಕಿನ ಮತ್ತು ಹಳ್ಳಿಯ ಮುಂದಾಳುಗಳು ಎಲ್ಲ ಭಾರವನ್ನು ಹೊತ್ತರು. ಸಿದ್ಧಾಪುರದಲ್ಲಿ ಮೇಲೆ ಹೇಳಿದ ಮುಖಂಡರಲ್ಲದೆ ಕಡವೆ ರಾಮಕೃಷ್ಣ ಹೆಗಡೆ, ಬಿಸಿಲ ಕೊಪ್ಪದ ಗಣಪತಿ ಭಟ್ಟ, ಸೊಗವೆಯ ಕೃಷ್ಣಭಟ್ಟ, ಮುಂಡಗೇಸರದ ರಾಮಕೃಷ್ಣ ಹೆಗಡೆ, ಪರಮಯ್ಯ ಗಣಪಯ್ಯ ಹೆಗಡೆ—ಇವರು ಶಿರಸಿಯಲ್ಲಿ ಮುಂದಾಳುತನ ವಹಿಸಿದರು. ಬಾಸಕೋಡ ರಾಮನಾಯಕ, ಬೋಳೆ ಬೊಮ್ಮಯ್ಯನಾಯಕ, ಶೆಟಗೇರಿ ಜೋಗಿನಾಯಕ, ಹಿಚಕಡದ ಬೀರಣ್ಣ ನಾಯಕ, ವಾಸ್ರೆಯ ಸುಬ್ರಾಯನಾಯಕ, ಸುರ್ವೆಯ ಬೊಮ್ಮಯ್ಯ ನಾಯಕ ಮತ್ತು ಇತರರು ಅಂಕೋಲೆಯ ಚಳವಳಿಯ ಭಾರವನ್ನು ವಹಿಸಿದರು. ಮಾರ್ಚಿಯಲ್ಲಿ ಕರಮಕರರು ಸೆರೆಹಿಡಿಯಲ್ಪಟ್ಟ ಅನಂತರ ವಿ.ಎಸ್. ನಾರಾಯಣ ರಾಯರು, ಅವರು ಸೆರೆಯಾದನಂತರ ಟೇಂಗಸೆಯವರು ಅಂಕೋಲಾ ಕೇಂದ್ರ ಕಚೇರಿಯ ಅಧಿಕಾರ ವಹಿಸಿದರು. ಮೈಸೂರು ಕೊಡಗು ಸೇರಿ ಕರ್ಣಾಟಕದ ಎಲ್ಲಾ ಭಾಗಗಳಿಂದ ತರಬೇತಿ ಹೊಂದಿದ ಕಾರ್ಯಕರ್ತರು ಬಂದು ಸೇರಿದರು. ಈ ಸಂಘಟನೆ ಸ್ವಾಭಾವಿಕವಾಗಿ ಗುಪ್ತವಾಗಿಯೆ ನಡೆಯಿತು. ಆದರೆ ಈ ಗುಪ್ತತೆಯಲ್ಲಿ ಯಾವ ಬಗೆಯ ಹೇಡಿತನವೂ ಇಲ್ಲದ್ದರಿಂದ ಈ ಸಂಘಟನೆಯಲ್ಲಿ ನೀತಿಭ್ರಷ್ಟತೆ ಇರಲಿಲ್ಲ. ನಿಜವಾಗಿಯೂ ಈ ಗುಪ್ತ ಸಂಘಟನೆಯನ್ನು ಭದ್ರವಾಗಿ ಇಡಬೇಕೆಂಬ ಉತ್ಸಾಹವೆ ಜನರ ಕೆಚ್ಚನ್ನು ಕುದುರಿಸಿತು. ದ್ರೋಹಿಗಳು ಇದ್ದರೂ ಅಂಥವರು ಕೆಲವೇ ಮಂದಿ. ಇಡಿಯ ಪ್ರದೇಶವೇ ಸರಕಾರದ ವಿರುದ್ಧ ಮೊಹರು ಹೊಡೆದಂತೆ ಆಗಿತ್ತು. ಚಳವಳಿಯಿಂದ ವ್ಯಾಪ್ತವಾದ ಪ್ರದೇಶದಲ್ಲಿ ಸರಕಾರಿ ಅಧಿಕಾರಿಗಳಿಗೆ ವಸ್ತುತಃ ಯಾವ ಸಹಕಾರವೂ ಸಿಗುತ್ತಿದ್ದಿಲ್ಲ.

ಸವಿನಯ ವಿರೋಧಕರ ಬತ್ತಳಿಕೆಯಲ್ಲಿ ಕರನಿರಾಕರಣೆಯ ಚಳವಳಿ ಕೊನೆಯ ಅಸ್ತ್ರವೆಂದು ಭಾವಿಸಲಾಗುತ್ತದೆ. ಅದು ಅಧಿಕಾರದಲ್ಲಿದ್ದ ಸರಕಾರವನ್ನು ಒಪ್ಪದ ಮನ್ನಿಸದ ಕೆಚ್ಚನ್ನು ಸೂಚಿಸುತ್ತದೆ. ವಿರೋಧದಿಂದ ಅತ್ಯಧಿಕವಾದ ಕ್ಲೇಶಕಷ್ಟಗಳನ್ನು ಅದು ಆಹ್ವಾನಿಸುತ್ತದೆ. ಯಾವುವೆಂದರೆ : ಚರ ಆಸ್ತಿಯ ಜಪ್ತಿ, ಹೊಲಗದ್ದೆಗಳನ್ನು ಸರಕಾರ ಸ್ವಾಧೀನಪಡಿಸಿ ಮಾಡುವ ಹರಾಜು, ಕಾರಾಗೃಹವಾಸ ಇವೇ ಮುಂತಾದವು ಆ ಕಷ್ಟಗಳು. ಈ ಆಂದೋಲನದ ಅವಧಿಯಲ್ಲಿ ಅಂಕೋಲಾ ತಾಲೂಕಿನ 400 ಮಂದಿ ರೈತರು ಕೊನೆಯ ತನಕವೂ ಪ್ರತಿಭಟನೆ ಮಾಡಿದರು. 900 ಜಪ್ತಿಗಳಾದವು. ಜಪ್ತಿಆದ ಚರ ಆಸ್ತಿಗಳ ಮೊಬಲಗು ರೂ. 55,000 ಆಯಿತು. ಸುಮಾರು 625 ಎಕರೆಯಷ್ಟು ಬತ್ತ ಬೆಳೆವ ಜಮೀನು ಸರಕಾರಕ್ಕೆ ಜಮೆ ಆಯಿತು. ವಿಶೇಷ ಪೋಲಿಸಿನವರನ್ನು ನೇಮಿಸಿದ ನಿಮಿತ್ತವಾಗಿ ' ಪುಂಡಗಂದಾಯ ' ವೆಂದು 35,000 ರೂಪಾಯಿಗಳನ್ನು ಎತ್ತಲಾಯಿತು. ಸುರ್ವೆ, ವಾಸರ ಕುದಿರೆ, ಬೋಳೆ, ಕಣಗಿಲ–ಈ ಹಳ್ಳಿಗಳು ಇಡಿಯಾಗಿಯೆ ಆಂದೋಲನದಲ್ಲಿ ಭಾಗವಹಿಸಿ ಪ್ರಮುಖತೆ ಪಡೆದವು. ಸಿದ್ಧಾಪುರ ತಾಲೂಕಿನಲ್ಲಿ 420 ಮಂದಿ ರೈತರು ಕೊನೆಯತನಕ ಹೋರಾಡಿದರು. ಜಪ್ತಿ ಆದ ಚರ ಆಸ್ತಿ, ಪಾತ್ರೆಪೊಗಡೆ, ಅಕ್ಕಿ ದನಕರು–ಇವು ಒಟ್ಟು 54,000 ರೂ. ಬೆಲೆ ಬಾಳಿದವು. 1,400 ಎಕರೆ ಅಡಕೆ ಮತ್ತು ಬತ್ತ ಬೆಳೆವ ಜಮೀನುಗಳು — 6·7 ಲಕ್ಷ ರೂಪಾಯಿ ಬೆಲೆಬಾಳುವಂಥವು ಸರಕಾರಕ್ಕೆ ಜಮೆ ಆದವು. ಹಲವು ಮನೆಗಳಲ್ಲಿ ಎಲ್ಲ ಪ್ರೌಢರು (adults) ಸೆರೆ ಸಿಕ್ಕಿದರು, ಜೇಲು ಸೇರಿದರು. ಉದಾಹರಣೆಗೆ, ಒಂದು ಕುಟುಂಬದಲ್ಲಿ 4 ಗಂಡುಸರು ಮತ್ತು 7 ಹೆಂಗುಸರು ಜೇಲಿಗೆ ಹೋಗಿ, ಮನೆಯಲ್ಲಿ ಒಬ್ಬಾಕೆ ಮಾತ್ರ ಉಳಿದಿದ್ದಳು. ಅಂಕೋಲೆ ಸಿದ್ಧಾಪುರ–ಈ ಎರಡೂ ಕಡೆ ಎಷ್ಟೋ ಮನೆಗಳೇ ಜಪ್ತಿಯಾಗಿ, ಮನೆಯವರೆಲ್ಲ ನಿರಾಶ್ರಿತರಾಗಿಬಿಟ್ಟರು. ಇದೇ ಬಗೆಯ ದಮನಕ್ರಮ ಶಿರಸಿಯಲ್ಲಿಯೂ ನಡೆಯಿತು.

ಇದು ಶಾಂತಿಯುತ ಯುದ್ಧವಾಗಿತ್ತು—ಅಹಿಂಸೆಯ ಅದ್ವಿತೀಯ ರೀತಿಯ ಪ್ರದರ್ಶನ. ಸಾಮ್ರಾಜ್ಯಗಳಲ್ಲಿಯೆ ಅತಿಬಲಿಷ್ಠವಾದ ಸತ್ತೆಯ ಎದುರಿಗೆ ನಿಶ್ಶಸ್ತ್ರಜನತೆಯ ಸ್ವಾತಂತ್ರ್ಯದ ಹಕ್ಕಿನ

ಸಾಧನೆಯಿದು. ಪ್ರತ್ಯಕ್ಷ ಭಾಗವಹಿಸಿದವರ ಸಂಖ್ಯೆ ತುಲನೆಯಲ್ಲಿ ಚಿಕ್ಕದಿದ್ದರೂ ಪ್ರತಿಯೊಬ್ಬನಲ್ಲಿಯೂ ಸತ್ಯಾಗ್ರಹದ ಕೆಚ್ಚು ತುಂಬಿತ್ತು. ಮೋಹ, ಆಮಿಷ, ಗದರಿಕೆ, ಕಾರಾಗೃಹ ಶಿಕ್ಷೆ, ದೈಹಿಕ ಹಿಂಸೆ—ಏನೇ ಇದ ರೂ ಆ ಧೀರ ರೈತರೂ ಅವರಲ್ಲಿ ಸಹಾನುಭೂತಿಯುಳ್ಳವರೂ ಅವಮ್ಯರಾಗಿಯೇ ಉಳಿದರು. ಈ ಸಂಕ್ಷಿಪ್ತ ವಿವರಣೆಯಲ್ಲಿ ಈ ಅದ್ವಿತೀಯ ಆಂದೋಲನದ ಕೆಲವೇ ಅಂಶಗಳನ್ನು ಮಾತ್ರ ನಾವು ಸಂಗ್ರಹಿಸಿ ಕೊಡಬಲ್ಲೆವು. ಭೂಕಂದಾಯ ವಸೂಲಿಯ ಮೊದಲನೆಯ ಹೆಜ್ಜೆಯೆಂದು ಅಧಿಕಾರಿಗಳು ಸವಿನಯ ವಿರೋಧಕರ ಚರ ಆಸ್ತಿಯನ್ನು ಜಪ್ತಿಮಾಡಲು ಪ್ರಾರಂಭಿಸಿದರು. ಸಿದ್ಧಾಪುರ ತಾಲೂಕಿನಲ್ಲಿ ಅಂತಹ ಬಹಳ ಜನರು ತಮ್ಮ ಪಾತ್ರೆಪೊಗಡೆಗಳನ್ನು ಯಶಸ್ವಿಯಾಗಿ ಬಚ್ಚಿಟ್ಟಿದ್ದರು. ಆದರೆ ದನಕರುಗಳು ಅನಾಯಾಸವಾಗಿ ಅವರ ಕೈಗೆ ಸಿಕ್ಕಿ ಅವು ದೂರದ ಗ್ರಾಹಕರಿಗೆ ಮಾರಲ್ಪಟ್ಟವು. ಇದಕ್ಕೆ ಪ್ರತಿಭಟನೆಯಾಗಿ ತಾಲೂಕಿನ ಧೀರ ಮಹಿಳೆಯರು ಮಾರಿ ಹೋದ ತಮ್ಮ ದನಕರುಗಳನ್ನು ತಿರುಗಿ ಪಡೆಯಲಿಕ್ಕೆ ಉಪವಾಸವನ್ನು ಕೈಗೊಂಡರು. ಅಂತಹ ಮೊದಲನೆಯ ಉಪವಾಸವನ್ನು, ಮೈಸೂರು ಸಂಸ್ಥಾನದ ಸೊರಬ ತಾಲೂಕಿನ ಹಿಚ್ಚಿಗ್ರಾಮದಲ್ಲಿ 19–3–1932ನೆಯ ದಿನಾಂಕದಂದು, ರಾಮಪ್ಪ ಪಟೇಲನ ಮನೆಯಲ್ಲಿ ಕೆ. ಎ. ವೆಂಕಟರಾಮಯ್ಯನವರ ಪತ್ನಿ ಶ್ರೀಮತಿ ಗೌರಮ್ಮ ಆರಂಭಿಸಿದರು. ಮೂರು ದಿನಗಳ ಉಪವಾಸದ ಅನಂತರ ಎಮ್ಮೆಯನ್ನು ಹಿಂದಿರುಗಿಸಲಾಯಿತು. ರಾಮಪ್ಪನು ಈ ಸತ್ಯಾಗ್ರಹಿ ಗಳಿಗೆ ಎರಡು ಮೂರು ದಿನಗಳ ಆತಿಥ್ಯವನ್ನು ನಿರ್ವಹಿಸಿ ಎಮ್ಮೆಗಳೊಂದಿಗೆ ಅವರನ್ನು ಮೆರವಣಿಗೆಯಲ್ಲಿ ಮನೆಗೆ ಕಳುಹಿಸಿದನು. ಅದೇ ಬಗೆಯ ಉಪವಾಸ ಮಾರ್ಚಿ 30ಕ್ಕೆ ಮತ್ತು ಏಪ್ರಿಲ್ 3ಕ್ಕೆ ಇನ್ನಿಬ್ಬರು ಮಹಿಳೆಯರು ಶಿರಾಳಗಿಯಲ್ಲಿ ಒಬ್ಬ ಗ್ರಾಹಕನ ಮನೆಯಲ್ಲಿ ಕೈಗೊಂಡರು. ಪೋಲಿಸ್ ಇನ್ಸ್‌ಪೆಕ್ಟರನು 30 ಪೇದೆ (Constable) ಗಳ ಪಡೆಯೊಂದಿಗೆ ಬಂದು, ಆ ಇಬ್ಬರನ್ನೂ ಇನ್ನೂ 5 ಮಂದಿಯೊಡನೆ ಸೆರೆಹಿಡಿದನು. ಆಗ ಬೇರೆ ಇಬ್ಬರು ಮಹಿಳೆಯರು ಆ ಸ್ಥಾನದಲ್ಲಿ ಉಪವಾಸ ಮುಂದುವರಿಸಿದರು. ಬಿಡುಗಡೆಯಾಗಿ ಬಂದ ಆರಂಭದ ಸತ್ಯಾಗ್ರಹಿಗಳು ಅವರನ್ನು ಸೇರಿಕೊಂಡರು. ಈ ಉಪವಾಸ ಸತ್ಯಾಗ್ರಹ ಈ ರೀತಿ 22 ದಿನ ನಡೆಯಿತು. ಕೊನೆಗೆ ಗ್ರಾಹಕನಿಗೆ ಪಶ್ಚಾತ್ತಾಪವಾಯಿತು. ಆತ ಎಮ್ಮೆಯ ಬೆಲೆಯನ್ನು ದಂಡವಾಗಿ ತೆತ್ತನು. ಏಕೆಂದರೆ, ಅವನು ಅದನ್ನು ಇನ್ನೊಬ್ಬರಿಗೆ ಮಾರಿಬಿಟ್ಟಿದ್ದನು. ಇದೇ ಸತ್ಯಾಗ್ರಹಿಗಳು ಇಂತಹದೆ ಇನ್ನೊಂದು ಉಪವಾಸವನ್ನು ಇನ್ನೊಂದು ಸ್ಥಳದಲ್ಲಿ ಕೈಗೊಂಡಾಗ ಪೋಲಿಸರು ಅವರಿಗೆ ಒಳ್ಳೆ ಥಳಿಸಿ, ಬಂದಿಕೋಣೆ (Lock-up)ಗೆ ಒಯ್ದರು. ಪೋಲಿಸರು ನಡೆದುಕೊಂಡ ಪಾಶವೀ ವರ್ತನೆಯನ್ನು ಗೌರಮ್ಮ ಮ್ಯಾಜಿಸ್ಟ್ರೇಟರ ಮುಂದೆ ಕೊಟ್ಟ ಹೇಳಿಕೆಯಲ್ಲಿ ಅವರ ಮಾತುಗಳಲ್ಲಿಯೇ ಕೊಡಬಹುದು : "ಆ ದಿನ ನಾನು ನನ್ನ ಗುಂಪಿನವರೊಂದಿಗೆ ಮಹಾದೇವಪ್ಪನ ಮನೆಗೆ ಹೋಗಿದ್ದು ನಿಜ. ಆಗ ಆ ಮನೆಯವರು ಊಟ ಮುಗಿಸಿ ನಿದ್ದೆಹೋಗಿದ್ದರು. ನಾವು ಹೋದಾಗ ಅವರು ನಮಗೆ ಕುಳಿತುಕೊಳ್ಳಲು ಕೊಟ್ಟು ಸ್ವಾಗತಿಸಿದರು. ನಾವು ಹಾಗೆಯೆ ಅಲ್ಲಿ ಅವರೊಂದಿಗೆ ಮಾತಾಡುತ್ತ ಕೂತೆವು. ಅಷ್ಟರಲ್ಲಿ ಸರ್ಕಲ್ ಇನ್ಸ್‌ಪೆಕ್ಟರನೂ ಶಾನುಭೋಗನೂ ಇಬ್ಬರು ಪೋಲೀಸರೂ ಅಲ್ಲಿಗೆ ಬಂದರು. ನಾವು ಕಾಂಗ್ರೆಸ್ ಕೆಲಸಕ್ಕಾಗಿ ಮನೆಯಿಂದ ಮನೆಗೆ ಹೋಗುತ್ತಿದ್ದೇವೆಂದು ಅವರು ಹೇಳಿದರು ಮತ್ತು ನಮಗೆ ಅಪಮಾನವಾದರೆ ನಾವು ಆ ಕೆಲಸ ಬಿಡಬಹುದು—ಎಂದರು. ನಮ್ಮ ಮಾನಭಂಗವಾದರೆ ನಾವು ಆತ್ಮಹತ್ಯೆ ಮಾಡಿಕೊಳ್ಳುವೆವು ಎಂದು ನಾನು ಅವರಿಗೆ ಅಂದೆನು. ಆಗ ಅವರು ಬೀಡಿಯ ಹೊಗೆಯನ್ನು ನಮ್ಮ ಮುಖದ ಮೇಲೆ ಊದಿದರು. ಇದಾದ ಮೇಲೆ ನಾವು ಆ ಸ್ಥಳವನ್ನು ಬಿಟ್ಟೆವು. ಪೋಲಿಸರು ನಮ್ಮನ್ನು ಬಯ್ದರು. ಶಾನುಭೋಗ ನಗುತ್ತಲೇ ಇದ್ದ. ಆಗ ನಮ್ಮನ್ನು ಬಂಧಿಸಲಾಗಿದೆಯೆಂದು ಅವರು ಅಂದರು. ಪೋಲಿಸ್ ಇನ್ಸ್‌ಪೆಕ್ಟರ್ ಇದ್ದಲ್ಲಿಗೆ ಹೋಗಲು ನಮಗೆ ಹೇಳಿದರು. ನಾವು ನಡೆದು ಹೋಗಲು ನಿರಾಕರಿಸಿದೆವು. ಆಗ ಅವರು ನಮ್ಮನ್ನು ಒಂದು ಗಾಡಿ (ಚಕ್ಕಡಿ)ಯಲ್ಲಿ ಸಿದ್ಧಾಪುರಕ್ಕೆ ಒಯ್ದರು. ದೇವದಾಸನೆಂಬವನೊಬ್ಬನು ನಮ್ಮ ಬೆನ್ನ ಮೇಲೆ ಹೊಡೆದನು. ಪೋಲಿಸ್ ಇನ್ಸ್‌ಪೆಕ್ಟರನು ಬಯ್ದನು. ಸಬ್ ಇನ್ಸ್‌ಪೆಕ್ಟರನು ಬೆತ್ತದಿಂದ ನನ್ನ ಎಡಗಾಲ ಮೇಲೆ ಒಂದು ಏಟು ಕೊಟ್ಟನು, ಆಗ

ಇನ್ನೂ ಕೆಲವು ಪೋಲಿಸರು ನನ್ನ ಕುತ್ತಿಗೆಯ ಮೇಲೆ ಹೊಡೆದರು. ಬಂದೂಕಿನ ದಂತದ ಕೊನೆಯಿಂದ ಬೆನ್ನಿಗೆ ತಿವಿದರು. ಯಾರೋ ಇನ್ನೊಬ್ಬನು ನನ್ನ ಬಲ ಮೊಳಕಾಲಿನ ಮೇಲೆ ಹೊಡೆದನು. ಆಗ ಯಾರೋ ನನ್ನನ್ನು ರಸ್ತೆಯಿಂದ ದರದರನೆ ಎಳೆದರು. ನನ್ನ ಸಂಗಾತಿಯೊಬ್ಬಳು ನನ್ನನ್ನು ಬಿಡಿಸಲು ಬಂದಳು. ಅವಳನ್ನೂ ಹೊಡೆದರು. ಪೋಲಿಸ್ ಇನ್ಸ್‌ಪೆಕ್ಟರನು ಆ ಮೇಲೆ ನಮ್ಮನ್ನು ರಾತ್ರಿ 11ಗಂಟೆಯ ವರೆಗೆ ಕಚೇರಿಯಲ್ಲಿಯೇ ನಿಲ್ಲಿಸಿ, ಮರುದಿನ ಬರಲು ಹೇಳಿ ಬಿಟ್ಟುಕೊಟ್ಟನು. ಮರುದಿನ ರವಿವಾರ ಮುಂಜಾನೆ 10ಗಂಟೆಗೆ ನಾವು ಕಚೇರಿಗೆ ಹೋದೆವು. ಪೋಲಿಸ್ ಇನ್ಸ್‌ಪೆಕ್ಟರನು ನಮ್ಮನ್ನು ಬಯ್ದನು. ನಮ್ಮ ಮಾನಭಂಗ ಮಾಡಿದರೆ ನಾವು ಏನು ಮಾಡುವೆವೆಂದು ಕೇಳಿದನು. ಆತ ಹೊರಟು ಹೋದನು. ನಾವು ಕಚೇರಿಯಲ್ಲಿಯೇ ಉಳಿದೆವು. ಸಂಜೆಗೆ ಇನ್ಸ್‌ಪೆಕ್ಟರನು ಬಂದನು. ಸಬ್ ಇನ್ಸ್‌ಪೆಕ್ಟರನು ಹಾಗೆ ಮಾಡಬೇಡವೆಂದು ಹೇಳಿದರೂ ಇನ್ಸ್‌ಪೆಕ್ಟರನು ನನ್ನನ್ನು ಮಾತ್ರ ಹೊಡೆದನು. ಆ ಮೇಲೆ ನನ್ನನ್ನು ಬಟ್ಟೆ ಬದಲಿಸಿ ಬಂದಿಕೋಣೆಯಲ್ಲಿ ಇಡಲಾಯಿತು. ಸಬ್ ಇನ್ಸ್‌ಪೆಕ್ಟರನು ಆ ಮೇಲೆ ಬಂದಿಕೋಣೆಗೆ ಬಾರದಂತೆ ಇನ್ಸ್‌ಪೆಕ್ಟರನನ್ನು ತಡೆದನು. ಎಮ್ಮೆಯನ್ನು ತಿರುಗಿ ಕೊಡಬೇಕು ಅಥವಾ ಅದರ ಬೆಲೆಯನ್ನು ತೆರಬೇಕು--ಎಂದು ಮಹಾದೇವಪ್ಪನಿಗೆ ನಾನು ಹೇಳಿದ್ದು ನಿಜ. ಈ ದನ ಜಪ್ತಿ ಆಗಿ ಹೋದ ಬಡ ತಪ್ಪುಗಾರನ (ಕಂದಾಯ ತೆರದವನ) ಹಿತಕ್ಕಾಗಿ ಆತ ಹಾಗೆ ಮಾಡಿದನು. "

ಗೌರವ್ವ ಇವೆಲ್ಲ ಪಾಶವೀ ವ್ಯವಹಾರದ ಅನಂತರವೂ ಬಂದಿಕೋಣೆಯಲ್ಲಿಯೇ ಉಪವಾಸವನ್ನು ಮುಂದುವರಿಸಿದರು. ಈ ಸತ್ಯಾಗ್ರಹಿಗಳನ್ನು ನಡೆಯಿಸಿಕೊಂಡ ರೀತಿಯಿಂದ ಕೆರಳಿ ಮಹಿಳಾ ಸತ್ಯಾಗ್ರಹಿಗಳ ಇನ್ನೊಂದು ತಂಡವು ಮುಂದೆ ಬಂದಿತು. ಆಗ ಆ ಗ್ರಾಹಕನು ಎಮ್ಮೆಯನ್ನು ಹಿಂದಿರುಗಿ ಕೊಡಲು ಒಪ್ಪಿದನು.

ಇಬ್ಬರು ಮಹಿಳೆಯರು ಮಾವಿನ ಗುಡಿ ಎಂಬಲ್ಲಿ ನಡೆಯಿಸಿದ ಸತ್ಯಾಗ್ರಹದಲ್ಲಿ ಅನುಕ್ರಮವಾಗಿ 31 ದಿನ ಮತ್ತು 22 ದಿನ ಉಪವಾಸವನ್ನು ಕೈಗೊಂಡರು. ಈ ಅವಧಿಯಲ್ಲಿಯೇ ಪೋಲಿಸರು ಅವರಿಗೆ ಉಗ್ರವಾಗಿ ಹೊಡೆದರು. ಈ ಘಟನೆಯು ಆ ಕಾಲದಲ್ಲಿ ದೇಶದಾದ್ಯಂತವೂ ಲಕ್ಷ್ಯವನ್ನು ಸೆಳೆದುಕೊಂಡಿತು. ಈ ಸತ್ಯಾಗ್ರಹವು ಯಶಸ್ವಿಯಾಗಿ ಕೊನೆಗೊಂಡಿತು. ಏಕೆಂದರೆ. ಸರಕಾರವು ಜಪ್ತಿಮಾಡಿ ಇಟ್ಟ ಎಮ್ಮೆಗಳನ್ನು ಖರೀದಿಮಾಡಿದ ಸರಕಾರಿ ಅಧಿಕಾರಿಗಳು ಅವನ್ನು ಅವುಗಳ ಒಡೆಯರಿಗೆ ತಿರುಗಿ ಒಪ್ಪಿಸಿದರು. ಇನ್ನೂ ಹೆಚ್ಚಿನ ಉದಾಹರಣೆಗಳಿಗೆ ಇಲ್ಲಿ ಅವಕಾಶ ಸಾಲದು. ಆದರೆ ಭಾರತದ ಧೀರಪುತ್ರಿಯರ ಈ ವೀರ — ಉಪವಾಸಗಳು ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿಯೆ ಅದ್ವಿತೀಯವಾಗಿವೆ.

ಕರನಿರಾಕರಣೆಯ ಆಂದೋಲನದೊಡನೆಯೆ ಇತರ ಮಾದರಿಯ ಪ್ರತಿಭಟನೆಗಳೂ ನಡೆದವು. 27-3-1932 ರಲ್ಲಿ ಬೀಳಗಿಯಲ್ಲಿನ ಒಂದು ಪ್ರಭಾತ ಫೇರಿಯನ್ನು ಬೆತ್ತದ ಹಲ್ಲೆಯಿಂದ ಚದರಿಸಲು ಹವಣಿಸಲಾಯಿತು. ಆಗ ಹೆಂಗುಸರ ಒಂದು ತಂಡವನ್ನು ಸೆರೆಹಿಡಿದೊಡನೆ ಇನ್ನೊಂದು ಮುಂದೆ ಬಂದಿತು. ಎಲ್ಲರೂ ಬಂಧಿತರಾದರು. ಆ ಮೇಲೆ 5 ಸ್ವಯಂಸೇವಕರ ಹೊರತು ಉಳಿದ ಎಲ್ಲರೂ ಬಿಡುಗಡೆ ಹೊಂದಿದರು. ಮಾರ್ಚ 4ನೆ ದಿನ ಗಾಂಧಿ ದಿನದ ಮೆರವಣಿಗೆಯಲ್ಲಿ ಭಾಗವಹಿಸಿದ ಎಲ್ಲ ಮಹಿಳೆಯರನ್ನೂ ಬಂದೂಕಿನ ಬೆದರಿಕೆಗಳಿಂದ ದೂಡುತ್ತ ಬಂದಿಕೋಣೆ (Lock-up)ಗೆ ಒಯ್ಯಲಾಯಿತು. ಇದರ ಮೂಲಕ ತೀವ್ರ ಗಾಯಗಳೂ ಆದವು. ರಥೋತ್ಸವಗಳಲ್ಲಿ ಭಕ್ತಮಹಾಜನರು ರಥಕ್ಕೆ ಏರಿಸಿದ ರಾಷ್ಟ್ರೀಯಧ್ವಜವನ್ನು ತೆಗೆಯಲು ನಿರಾಕರಿಸಿದರು. ಅವರಲ್ಲಿ ಕೆಲವರನ್ನು ನಿಷ್ಠುರವಾಗಿ ಕೆಟ್ಟರೀತಿಯಿಂದ ನಡೆಯಿಸಿಕೊಳ್ಳಲಾಯಿತು. ಕೊನೆತನಕವೂ ಜನರ ಪ್ರತಿಭಟನೆಯನ್ನು ತಡೆಯಲಾರದೆ ರಥಯಾತ್ರೆಯ ಮೆರವಣಿಗೆಯನ್ನು ಉಪದ್ರವ ವಿಲ್ಲದೆ ಮುಂದುವರಿಸಲು ಬಿಡಲಾಯಿತು. ಮೇ 10 ಕ್ಕೆ ಶಿರಸಿಯಲ್ಲಿ ಅರಣ್ಯಸತ್ಯಾಗ್ರಹಮಾಡಲು ಹೋದ ಜನಸ್ತೋಮವನ್ನು 'ಸೆರೆಹಿಡಿದಿದ್ದೇವೆ' ಎಂದು ಸಾರಿ ಬಂದಿಕೋಣೆಗೆ ಸಾಗಿಸಿ ಅಲ್ಲಿ 23 ಮಂದಿಯನ್ನು

ಹಿಡಿದಿಟ್ಟರು. ಇನ್ನೊಂದು ದೊಡ್ಡ ಜನಸ್ತೋಮ ಜಂಗಲ ಕಾನೂನನ್ನು ಮುರಿದು ಕಟ್ಟಿಗೆ ಕಡಿದು ತಂದಾಗ ಅದರ ಮೇಲೆ ಉಗ್ರವಾದ ಲಾಠೀಹಲ್ಲೆ ನಡೆಯಿತು. ಆದರೆ ಪ್ರತಿಭಟನೆ ಎಷ್ಟೊಂದು ಉಗ್ರಕ್ಕೆ ಏರಿತೆಂದರೆ, ಅಧಿಕಾರಿಗಳು ಪ್ರಭಾತಫೇರಿಗಳನ್ನೂ ಅರಣ್ಯಸತ್ಯಾಗ್ರಹವನ್ನೂ ನಿರುಪದ್ರವವಾಗಿ ಸಾಗಲು ಬಿಡುತ್ತಿದ್ದರು.

ಬಲಾತ್ಕಾರದ ಇನ್ನೂ ಮುಂದಿನ ಹೆಜ್ಜೆಯಾಗಿ ಸರಕಾರವು ಕರನಿರಾಕರಣೆ ಮಾಡಿದವರ ಜಮೀನುಗಳನ್ನು ಜಮೆ ಮಾಡಿ, ಆ ತೋಟಗಳ ಅಡಕೆ ಬೆಳೆಯನ್ನು ಪರಸ್ಥಳದ ಪೇಟೆಗಳಲ್ಲಿ ಮಾರಲು ಹವಣಿಸಿದರು. ಆದರೆ ಅದೂ ಫಲಕಾರಿಯಾಗಲಿಲ್ಲ. ಮುಂಬಯಿಯ ದಲಾಲಿಯವರು ಸ್ಥಾನಿಕ ವ್ಯಾಪಾರಿಗಳಿಗೆ, ಜಪ್ತಿಯಾದ ಜಮೀನುಗಳ ಬೆಳೆಯಾದ್ದರಿಂದ ಅದು ತಮಗೆ ಬೇಡವೆಂದು ನಿರಾಕರಿಸಿದರು. ಆಗ ಅಧಿಕಾರಿಗಳು ಅಡಕೆಯ ಬೆಳೆಯನ್ನು ಮಾರುವ ಹವ್ಯಾಸವನ್ನು ಬಿಟ್ಟುಕೊಟ್ಟರು. ತೋಟಗಾರರೇ ತಮ್ಮ ಬೆಳೆಯನ್ನು ಸ್ವತಂತ್ರವಾಗಿ ಮಾರಿದರು. ಜಪ್ತಿಮಾಡಿ ಹರಾಜಿಗೆ ಇಟ್ಟ ಜಮೀನುಗಳಿಗೆ ಸವಾಲು ಮಾಡುವವರೇ ಸಿಗುತ್ತಿದ್ದಿಲ್ಲ. ಅವನ್ನು ಕೊಂಡುಕೊಳ್ಳುವಂತೆ ಮನವೊಲಿಸಲಾದವರ ಸಂಖ್ಯೆಯೂ ತೀರಾ ಕಡಮೆ.

ಇದರ ಒಂದು ವಿಶಿಷ್ಟ ಮಾದರಿಯ ಉದಾಹರಣೆ ಉಳುವರೆಯದು. ರಾಮದಾಸ ಮತ್ತು ಅವನ ಸಂಗಡಿಗರಾದ ಕರನಿರಾಕರಣಕಾರರು ತಮ್ಮ ಜಮೀನುಗಳನ್ನು ಕಳೆದುಕೊಂಡು ಸ್ವಂತ ಮನೆಗಳಿಂದ ಹೊರದೂಡಲ್ಪಟ್ಟಾಗ ಅವರು ಎಲ್ಲ ಕಷ್ಟನಷ್ಟಗಳನ್ನು ತಾಳ್ಮೆಯಿಂದ ಸಹಿಸಿದರು. ಅವರ ಜಮೀನುಗಳನ್ನು ಖರೀದಿ ಮಾಡಿದ ಬಹದೂರ್ ಖಾನನೆಂಬವನು ಅವನ್ನು ಸಾಗುವಳಿಮಾಡಲು ಪಟ್ಟ ಪ್ರಯತ್ನವೆಲ್ಲ ವ್ಯರ್ಥವಾಯಿತು. ‘ನಿನ್ನ ನಷ್ಟದ ಬಗ್ಗೆ ನಿನಗೆ ಏನೆನಿಸುತ್ತದೆ ?’ ಎಂದು ರಾಮದಾಸನನ್ನು ಕೇಳಿದಾಗ, ಆತನು ಶಾಂತವಾಗಿ ಅಂದನು—“ಈ ಜಮೀನು ನನ್ನದಾಗಿ ಇರುವಾಗಲೂ ನನಗೆ ಅವು ನನ್ನವೆಂದು ಅನಿಸಿದ್ದಿಲ್ಲ. ಈಗ ನಾನು ಅವನ್ನು ಕಳೆದುಕೊಂಡಾಗಲೂ ಅವನ್ನು ಕಳೆದುಕೊಂಡಿದ್ದೇನೆಂದು ಅನಿಸುವುದಿಲ್ಲ”.

1932 ನೆಯ ಸಪ್ಟಂಬರಿನಲ್ಲಿ ಲಂಡನಿನ ಇಂಡಿಯಾ ಲೀಗಿನ ಶ್ರೀ ಮ್ಯಾಟರ್ಸ-ಅವರು ಈ ಕ್ಷೇತ್ರಕ್ಕೆ ಭೆಟ್ಟಿಯಿತ್ತರು. ಆಗ ಅವರು ಕಾಯಿದೆ ಭಂಗಮಾಡುವವರು ಎಷ್ಟೊಂದು ಅಚ್ಚ ಅಹಿಂಸಕರೆಂದೂ ಅವರ ಶಾಂತಿಯುತ ಮೆರವಣಿಗೆಗಳನ್ನು ಹೇಗೆ ಹಿಂಸೆಯಿಂದ ಚದರಿಸಲಾಗುತ್ತಿತ್ತೆಂದೂ ಸ್ವಂತ ಅನುಭವದಿಂದ ಕಂಡುಕೊಂಡರು.

ಜನತೆಯ ಸತ್ವವನ್ನೂ ಧೈರ್ಯವನ್ನೂ ಅಧಿಕಾರಿಗಳು ಎಷ್ಟೆಷ್ಟು ಬಗೆಯ ಉಪಾಯಗಳಿಂದ ಮುರಿಯಲು ಹೆಣಗುತ್ತಿದ್ದರೂ ರೈತವರ್ಗವು ಛಲವಾದಿಯಾಗಿ ಉಳಿಯಿತು. ಕ್ಷಮಾಯಾಚನೆಯ ಒಂದೇ ಒಂದು ಪ್ರಕರಣವೂ ನಡೆಯಲಿಲ್ಲ. ಆದರೆ 1934 ರಲ್ಲಿ ಪಾಟ್ನಾದ ಅಧಿವೇಶನದಲ್ಲಿ ಒಂದು ಗೊತ್ತುವಳಿಯನ್ನು ಮಾಡಿ ಕಾಂಗ್ರೆಸ್ ಸವಿನಯ ಕಾಯಿದೆ ಭಂಗವನ್ನು ಹಿಂದೆಗೆದುಕೊಂಡಾಗ ಈ ಆಂದೋಲನವೂ ಕೊನೆಗೊಂಡಿತು.

ಕಾಂಗ್ರೆಸು ಪ್ರಾಂತಿಕ ಸರಕಾರ ನಡೆಸಲು ಒಪ್ಪಿ 1937 ರಲ್ಲಿ ಅಧಿಕಾರಗ್ರಹಣ ಮಾಡಿದಾಗಲೆ, ಸರಕಾರಕ್ಕೆ-ಜಮಾ ಆದ ಬಹಳಷ್ಟು ಆಸ್ತಿ ಜಮೀನುಗಳನ್ನು ಚಳವಳಿಯ ಸಂತ್ರಸ್ತರಿಗೆ ತಿರುಗಿ ಒಪ್ಪಿಸಲಾಯಿತು.

ಮೂಲ ಲೇಖಕರು : ಶ್ರೀ ಡಿ. ಪಿ. ಕರಮರಕರ್
ಅನುವಾದಕರು : ಶ್ರೀ ಗೌರೀಶ ಕಾಯ್ಕಿಣಿ

# ಭಾರತ ಬಿಟ್ಟು ತೊಲಗಿರಿ—ಚಳವಳಿ

ಬ್ರಿಟಿಷ್ ಸಾಮ್ರಾಜ್ಯ ಸರ್ಕಾರ ಭಾರತೀಯ ನಾಯಕರೊಡನೆ ಒಂದು ಸಮಾಧಾನಕ್ಕೆ ಬರಲು ಅನಿವಾರ್ಯ ನೀತಿಯಾಗಿ ಕೈಕೊಂಡ ಕ್ರಿಪ್ಸ್ ಸಂಧಾನ 1942ರಲ್ಲಿ ಮುರಿದು ಬಿತ್ತು. ಆದದ್ದರಿಂದ ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಸೂತ್ರಧಾರಿ ಗಾಂಧಿಜೀಯವರು ಮನಸ್ಸನ್ನು ದೃಢಪಡಿಸಿಕೊಂಡು, ದೇಶಜನರನ್ನು ಹುರಿದುಂಬಿಸಲು ಎರಡೇ ಶಬ್ದಗಳನ್ನೊಳಗೊಂಡ ಮಂತ್ರವನ್ನು ಉಪದೇಶಿಸಿದರು. ಈ ಮಂತ್ರ "ಕ್ವಿಟ್ ಇಂಡಿಯಾ"–ಭಾರತದಿಂದ ತೊಲಗಿರಿ—ಚಲೇ ಜಾವ್. "ಭರತ ಖಂಡದ ಮೇಲೆ ಭವಿಷ್ಯತ್ ಪರಿಣಾಮ ಎಂತಾದರೂ ಆಗಲಿ, ಭಾರತದ ಭದ್ರತೆ ಹಾಗೆಯೆ ಬ್ರಿಟನಿನ ಭದ್ರತೆ ಎರಡಕ್ಕೂ ಸಾಧಕವಾಗುವಂಥ ಕಾರ್ಯ ಈಗ ಯಾವುದೆಂದರೆ, ಬ್ರಿಟಿಷ್ ಆಳರಸರು ಯುಕ್ತ ಮತ್ತು ಕಾಲೋಚಿತ ಎಂಬ ಪ್ರಜ್ಞೆಯಿಂದ ಇಂಡಿಯವನ್ನು ಬಿಟ್ಟು ಹೊರಡುವುದು" ಎಂದು ಉಗ್ಗಡಿಸಿದರು. 1942ರ ಜುಲೈ 14ರಂದು ಕಾಂಗ್ರೆಸ್ ಕಾರ್ಯಸಮಿತಿಯು ಸಭೆ ಸೇರಿ, ಭಾರತೀಯರ ಕೋರಿಕೆಯನ್ನು ಬ್ರಿಟಿಷರು ತಿರಸ್ಕರಿಸಿದರೆ ಮುಂದಣ ಕಾರ್ಯ ನೀತಿಯೇನೆಂದು ನಿರ್ಧಾರವಮಾಡಬೇಕಾಗುವುದೆಂಬ ನಿರ್ಣಯವನ್ನು ಕೈಗೊಂಡಿತು. ಆಗಸ್ಟ್ ತಿಂಗಳ 7 ಮತ್ತು 8ನೆಯ ತಾರೀಖುಗಳಂದು ಅಖಿಲ ಭಾರತದ ಕಾಂಗ್ರೆಸ್ ಸಮಿತಿಯು ತುರ್ತು ಸಭೆ ನಡೆಯಿಸಿ—ಬ್ರಿಟಿಷರು ಭಾರತವನ್ನು ಬಿಟ್ಟು ತೊಲಗುವ ಜರೂರಾದ ಅವಶ್ಯ ಸಂದರ್ಭವು ಪ್ರಾಪ್ತವಾಗಿದೆಯೆಂದೂ ಹಾಗೆ ಬ್ರಿಟಿಷ್ ಪ್ರಭುತ್ವ ಮೈದೆಗೆಯುವುದು ಭಾರತದ ಪುರೋಭಿವೃದ್ಧಿಗೂ ಯುದ್ಧದಲ್ಲಿ ತೊಡಗಿರುವ ಮಿತ್ರರಾಷ್ಟ್ರಗಳ ವಿಜಯಕ್ಕೂ ಸಾಧಕವಾಗುತ್ತದೆಯೆಂದೂ ನಿರ್ಣಯ ಮಾಡಿತು. ಬ್ರಿಟಿಷರ ಪ್ರಭುತ್ವ ಇಂಡಿಯದಲ್ಲಿ ಮುಂಬರಿಯುವುದರಿಂದ ಭಾರತವು ದಿನೇ ದಿನೇ ಅವನತಿಗಿಳಿಯುತ್ತದೆ ಮತ್ತು ಅದರ ಸತ್ತ್ವವುಡುಗುತ್ತದೆ. ಇಂಥಾ ದುರ್ಗತಿಯಲ್ಲಿ ಭಾರತವು ಆತ್ಮರಕ್ಷಣೆ ಮಾಡಿಕೊಳ್ಳಲೂ ಆರದು, ವಿಶ್ವರಾಷ್ಟ್ರಗಳ ಶಾಂತಿ ಸ್ವಾತಂತ್ರ್ಯಗಳ ರಕ್ಷಣೆಗೋಸ್ಕರ ತನಗೆ ಇರುವ ಕರ್ತವ್ಯ ಪಾತ್ರವನ್ನು ನಿರ್ವಹಿಸಲೂ ಆರದು—ಎಂಬುದು ಅ॥ ಭಾ॥ ಕಾಂಗ್ರೆಸ್ ಸಮಿತಿ ಅಂಗೀಕರಿಸಿದ ನಿರ್ಣಯದ ಸಾರಾಂಶ. ಬ್ರಿಟಿಷರು ಭಾರತವನ್ನು ಬಿಟ್ಟು ಹೊರಡಬೇಕೆಂಬ ಕೇಳಿಕೆಯನ್ನು ಬಿಚ್ಚುಮಾತಿನಲ್ಲಿ ಮುಚ್ಚುಮರೆಯಿಲ್ಲದೆ ಸಮಿತಿಯು ಘೋಷಿಸಿತು. "ಪರಾಧೀನತೆಯನ್ನು ಕಳಚಿ ಹಾಕಿ ಸ್ವತಂತ್ರರಾಗುವುದು ಭರತಖಂಡಕ್ಕಿರುವ ಸ್ವಧರ್ಮರೂಪವಾದ ಹಕ್ಕು ಬಾಧ್ಯತೆ. ಇದನ್ನೆಂದಿಗೂ ಯಾರಿಗೂ ಪರಭಾರೆ ಮಾಡತಕ್ಕದ್ದಲ್ಲ. ಈ ಗುರಿಯನ್ನು ಸಾಧಿಸಲು ಅಹಿಂಸಾತ್ಮಕ ಸಮರವನ್ನು ಆಸೇತು ಹಿಮಾಚಲ ವ್ಯಾಪಕವಾಗಿ ಹೂಡಲು ಅ॥ ಭಾ॥ ಕಾಂಗ್ರೆಸ್ ಸಮಿತಿ ದೃಢ ಪ್ರತಿಜ್ಞೆಮಾಡುತ್ತದೆ."—ಎಂದು ತನ್ನ ನಿಲುವನ್ನು ಸಾರಿತು. ಸಮಿತಿಯ ಅಧಿವೇಶನ ಮುಗಿಯುವ ಘಟ್ಟದಲ್ಲಿ ಗಾಂಧಿಜೀಯವರು, ಮೊತ್ತ ಮೊದಲು ರಾಜಿಯನ್ನು ಸಾಧಿಸಲು ವೈಸ್ರಾಯರನ್ನು ಭೇಟಿಮಾಡುವುದಾಗಿ ತಮ್ಮ ಇಂಗಿತವನ್ನು ಹೇಳಿ, ಕಡೆಗೂ ಸಂಧಾನವು ವಿಫಲವಾಗಿ ಸಮರವು ಅನಿವಾರ್ಯವಾದರೆ, ಆಳ್ವರಸರು ಹೇಗೆ ನಾಯಕರನ್ನು ಬಂಧನದಲ್ಲಿರಿಸುತ್ತಾರೆ; ಆಗ ಭಾರತ ಜನತೆಯಲ್ಲಿ ದೇಶಾಭಿಮಾನಿಯಾದ ಒಬ್ಬೊಬ್ಬನು ಸ್ವಯಂ ನಾಯಕನಾಗಿ ಮುಂದೆ ಬಂದು ಹಿಂಸಾದೂರವಾದ ಸಂಗ್ರಾಮದಲ್ಲಿ ಪರಾಕ್ರಮಿಸಬೇಕಾದವನು. 'ಮಾಡು ಇಲ್ಲವೆ ಮಡಿ' ಎಂಬ ಕಾಳಗದ ವೀರ ಘೋಷವಾಯಿತು. ಇದೇ ಗಾಂಧಿಜೀಯವರು ಅಂದಿನ ಉತ್ಕಟ ಸಂದರ್ಭದಲ್ಲಿ ಭಾರತದ ಜನತೆಗೆ ಕೊಟ್ಟ ಸ್ಫೂರ್ತಿಪ್ರದವಾದ ಸಂದೇಶ.

ಇಂಡಿಯಾ ಸರಕಾರವು ಕೂಡಲೆ ಪ್ರತಿಕ್ರಿಯೆ ತೋರಿತು. 9-8-1942 ರ ಮುಂಜಾನೆ ಕಾಂಗ್ರೆಸ್ ಕಾರ್ಯ ಸಮಿತಿಯ ಸದಸ್ಯರನ್ನೂ ಇತರ ನಾಯಕರನ್ನೂ ದಸ್ತಗಿರಿಮಾಡಿ ಸೆರೆಯಲ್ಲಿಟ್ಟಿತು. ಕಾಂಗ್ರೆಸ್ ಸಮಿತಿಗಳು ನ್ಯಾಯಬಾಹಿರ ಸಂಸ್ಥೆಗಳೆಂದು ಘೋಷಿಸಲ್ಪಟ್ಟುವು. ಆಸೇತು ಹಿಮಾಚಲದ ವರೆಗೆ ರಾಷ್ಟ್ರದಲ್ಲಿ ಎಲ್ಲೆಲ್ಲೂ ನಾಯಕರನ್ನು ಸೆರೆಹಿಡಿದು ಕಾರಾಗೃಹಗಳನ್ನು ತುಂಬಿದರು. ಸಭೆಗಳನ್ನು ಸೇರಲು ಕಾನೂನಿನ ಅಡ್ಡಿ ತಂದಿಟ್ಟರು. ಮೆರವಣಿಗೆ ಹೊರಡುವಂತಿಲ್ಲ. ಸಭೆಸೇರಿದರೆ, ಮೆರವಣಿಗೆ ಹೊರಟರೆ, ಪೋಲಿಸರು ಅಡ್ಡಬಂದು ಲಾಠೀಪ್ರಯೋಗಮಾಡಿ, ಸಗ್ಗದಿದ್ದರೆ ಗುಂಡು ಹಾರಿಸಿ ಜನರನ್ನು ಮರ್ದಿಸಿ ಚದುರಿಸಿದರು.

ಗಾಂಧಿಯವರ ಉದ್ದೇಶ ಆಳ್ವರಸರಲ್ಲಿ ಹೃದಯ ಪರಿವರ್ತನೆಯನ್ನು ಆಗಮಾಡಿಸುವುದು. ಆದರೆ ಸರಕಾರದ ಪ್ರತಿಕ್ರಿಯೆಯೇನು ? ಗಾಂಧಿಯವರ ಪ್ರಯತ್ನವನ್ನು ಯುದ್ಧಪ್ರಯತ್ನವೆಂದು ತಿಳಿದು ಪ್ರತೀಕಾರದಲ್ಲಿ ತೊಡಗಿತು. ಮುಂದೆ ದೇಶದಲ್ಲೆಲ್ಲ ಭೂರಿಯಾಗಿ ಉಣ್ಣಬೇಕಾಗಿದ್ದ ರಣಮಾರಿಯ ಔತಣದ ಮೊದಲ ರುಚಿ ಮುಂಬಯಿ ಪಟ್ಟಣಕ್ಕಾಯಿತು. 9-8-1942 ರಂದೇ ಮುಂಬಯಿ ಪಟ್ಟಣದಲ್ಲಿ ಕೆಲವು ರಾಷ್ಟ್ರಭಕ್ತರು ಗುಂಡೇಟಿಗೆ ಸಿಕ್ಕಿ ಮೊದಲ ಬಲಿದಾನವಾದರು.

ಇಷ್ಟು ಚಳವಳಿಯ ರೂಪರೇಖೆಗಳನ್ನು-ವ್ಯಾಪ್ತಿವಿಧಾನಗಳನ್ನು ನಿಷ್ಕರ್ಷೆಯಾಗಿ ವಿರಚಿಸಿ ದೇಶದ ಮುಂದಿಡಲು ಗಾಂಧಿಜೀಯವರಿಗೆ ಸಾಧ್ಯವಾಗಲಿಲ್ಲ. ಇದು ಅಹಿಂಸಾತ್ಮಕ ಸಮರವೆಂದು ಜನತೆ ಭಾವಿಸಿ ಅಂಗೀಕರಿಸಿತು. ಅಹಿಂಸೆಯ ಮಿತಿಗಳನ್ನರಿತು ಸಮರವನ್ನು ಮುಂಬರಿಸಬೇಕಾದದ್ದು ತಮಗೆ ಕರ್ತವ್ಯ ವೆಂದು ಜನ ತಿಳಿಯಿತು. ಮಾರ್ಗದರ್ಶನಕ್ಕೆ ಹಿರಿಯ ನಾಯಕರಿಲ್ಲ; ಎಲ್ಲರೂ ಸೆರೆಮನೆಯಲ್ಲಿದ್ದಾರೆ. ಆದದ್ದರಿಂದ ಚಳವಳಿ ಹೇಗೂ ಯುದ್ಧಮುಖವನ್ನು ತಳೆದಾಗ, ಚಳವಳಿಕಾರರು ಬಹಿರಂಗವಾಗಿ ಶಾಸನೋಲ್ಲಂಘನಮಾಡಿ, ಅಧಿಕಾರಿಗಳಿಗೆ ಅವಿಧೇಯಕ್ಕಾಗಿ, ಪ್ರಭುತ್ವದ ಅಧಿಕಾರಸ್ಥಾನಗಳ ಮೇಲೆ ದಾಳಿಮಾಡುವುದು ವಿಹಿತವೆಂದುಕೊಂಡರು. ಕಚೇರಿಗಳಿಗೆ ಮುತ್ತಿಗೆ, ಪೋಲಿಸುಠಾಣ್ಯಗಳ ಮೇಲೆ ದಾಳಿ, ಸರಕಾರಿ ಚಟುವಟಿಕೆಗಳನ್ನು ತಡೆಹಿಡಿಯೋಣ, ಸಾರಿಗೆ ಸಂಪರ್ಕವ್ಯವಸ್ಥೆಯನ್ನು ಭಗ್ನಗೊಳಿಸಿ ಅಡಚಣೆಯೊಡ್ಡೋಣ, ರೈಲುಬಂಡಿಗಳು ಸಾಗದಂತೆ ನಿಲ್ಲಿಸೋಣ. ಹಳಿಗಳನ್ನು ಕೀಳೋಣ—ಇವೇ ಮೊದಲಾದ ಚಟುಪಟಿಕೆಗಳಿಗೆ ಜನರು ಮನಸ್ಸುಕೊಟ್ಟರು. ಗಾಂಧೀವಾದದ ಅಧಿಕೃತ ಪ್ರತಿಪಾದಕ ರಲ್ಲೊಬ್ಬರಾದ ಕಿಶೋರಿಲಾಲ್ ಮಶ್ರೂವಾಲಾ ಅವರು "ಹರಿಜನ" ಪತ್ರಿಕೆಯಲ್ಲಿ ಲೇಖನ ಬರೆದು, ಚಳವಳಿಯಲ್ಲಿ ಯಾವ ಕ್ರಮವೇ ಆಗಲಿ ಸಿಂಧುವಾಗುತ್ತದೆ. ಅಹಿಂಸಾಧರ್ಮದ ವ್ಯಾಪ್ತಿಗೊಳಪಟ್ಟು ಕಾರ್ಯಮಾಡಲು ಚಳವಳಿಕಾರರು ಸ್ವತಂತ್ರರು. ಜನರನ್ನೂ ಜನರ ಸೊತ್ತನ್ನೂ ಹಿಂಸೆಗೆ. ದಾಳಿಗೆ. ಗುರಿಮಾಡದಿದ್ದರೆ ಸರಿ—ಎಂದು ಬರೆದರು. ಪ್ರಭುತ್ವದ ಕಣ್ಣಿಗೆ ಬೀಳದೆ ಹೊರಗಡೆ ಇದ್ದ ರಾಷ್ಟ್ರ ನಾಯಕರು ಈ ಹರಿಜನ ಲೇಖನದಿಂದ ಸ್ಫೂರ್ತಿಪಡೆದರು. ಕರ್ನಾಟಕದ ನಾಯಕರು—ಮುಂಬಯಿಯಲ್ಲಿ ಕಾಂಗ್ರೆಸ್ ಸಮಿತಿಯ ಸಭೆಗೆ ಹೋಗಿದ್ದವರು—ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಪ್ರಧಾನ ಕಾರ್ಯದರ್ಶಿ ಸರ್ವಶ್ರೀ ಚನ್ನಬಸಪ್ಪ ಅಂಬಲಿ, ರಂ. ರಾ. ದಿವಾಕರ, ಆರ್. ಎಸ್. ಹುಕ್ಕೇರಿಕರ, ಎಂ.ಪಿ. ಪಾಟೀಲ, ದ ಪ. ಕರಮರಕರ, ವೀರಣಗೌಡ ಪಾಟೀಲ ಮತ್ತು ಇತರರು ಕಿಶೋರಿಲಾಲ್‌ಜೀಯವರ 'ಹರಿಜನ' ಲೇಖನದ ಆಧಾರದ ಮೇಲೆ ಚಳವಳಿಯ ರೂಪರೇಖೆಗಳನ್ನು ತಯಾರಿಸಿದರು. ಕರ್ನಾಟಕದ ನಾನಾ ಕೇಂದ್ರಗಳಿಗೆ ಸುತ್ತೋಲೆಗಳನ್ನು ಕಳಿಸಿ, ಕಾರ್ಯಕರ್ತರು ಮಾಡಬೇಕಾದದ್ದೇನೆಂಬುದನ್ನು ಸೂಚಿಸಿದರು. ಬಹಿರಂಗ ಶಾಸನೋಲ್ಲಂಘನದ ಜೊತೆಗೆ ಸರಕಾರಿ ಕೆಲಸಗಳಾಗದಂತೆ ತಡೆಹಿಡಿಯುವು ದಕ್ಕೂ ಪರವಾನಗಿ ದೊರೆಯಿತು. ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಂಸ್ಥೆ ಚಳವಳಿಯ ಅವಧಿಯ ವರೆಗೆ ಗೋಪ್ಯವಾಗಿ, ಊರ್ಜಿತವಾಗಿದ್ದ ಆದರ ಕಾರ್ಯಸಮಿತಿಯ ಪ್ರಮುಖ ಸದಸ್ಯರು ಮಾರ್ಗದರ್ಶಕರಾಗಿ ಚಳವಳಿಯನ್ನು ನಡಸಿದರು. ಸಮರ ಸಮಿತಿಯೊಂದರ ವ್ಯವಸ್ಥೆಯಾಯಿತು. ಅಂಬಲಿಯವರೇ ಅಧ್ಯಕ್ಷರು.

ದಿವಾಕರರು ಕಾರ್ಯದರ್ಶಿ; ಶ್ರೀನಿವಾಸ ಮಲ್ಯ, ಡಿ.ಪಿ. ಕರಮರಕರ, ಆರ್.ಎಸ್. ಹುಕ್ಕೇರಿಕರ— ಇವರು ಸಮಿತಿಯ ಇತರ ಸದಸ್ಯರು. ಸಮಿತಿಯ ಮುಖ್ಯ ಠಾಣ್ಯ ಮುಂಬಯಿ. ಈ ಸಮಿತಿ ಗೋಪ್ಯವಾಗಿ ಕಾರ್ಯಮಾಡುತ್ತ, ಅಖಿಲಭಾರತ ಕಾಂಗ್ರೆಸ್ ಸಮಿತಿಯ ಗುಪ್ತ ಕಚೇರಿಯೊಂದಿಗೆ ನಿಕಟಸಂಪರ್ಕವಿಟ್ಟುಕೊಂಡು ಚಳವಳಿಗೆ ಮಾರ್ಗದರ್ಶನ ಮಾಡುತ್ತ ಬಂತು. ಜಿಲ್ಲೆಗಳಿಂದ ಕೆಲಸದ ವರದಿಗಳನ್ನು ತರಿಸಿಕೊಂಡು ಅ॥ ಭಾ॥ ಕಾಂಗ್ರೆಸ್ ಕಚೇರಿಗೆ ಕಳುಹಿಸುತ್ತಿರಲಾಯಿತು. ಚಳವಳಿಗೆ ಅವಶ್ಯ ವಾದ ನಿಧಿ ಸಂಗ್ರಹಮಾಡಲಾಯಿತು. ಕರ್ಣಾಟಕದ ನಾನಾಭಾಗಗಳಲ್ಲಿ ಕೆಲಸ ಮಾಡುವ ಕಾರ್ಯಕರ್ತರಿಗೆ ಸಾಧ್ಯವಾದಷ್ಟು ಮೊತ್ತದಲ್ಲಿ ಹಂಚಲಾಯಿತು. ಮೇಲೆ ಹೆಸರಿಸಿದ ನಾಯಕರಲ್ಲಿ ಬಹುಮಂದಿ ಪ್ರಕಟವಾಗಿರದೆ ಅಡಗಿಕೊಂಡಿದ್ದು ಕಾರ್ಯಮಾಡಿದರು. ಹಾಗೆಯೇ ನೂರಾರು ಮಂದಿ ಕಾರ್ಯಕರ್ತರು ಕೂಡ ಅಗೋಚರರಾಗಿದ್ದರು. ಇವರು ಜನರ ಪ್ರಾಣ ಸೊತ್ತುಗಳ ವಿಷಯದಲ್ಲಿ ಜಾಗರೂಕರಾಗಿದ್ದು ಚಳವಳಿ ನಡೆಸಬೇಕೆಂದು, ಅಹಿಂಸೆಯನ್ನು ಪಾಲಿಸಬೇಕೆಂದು, ಜನತೆಗೆ ಸೂಚನೆ ಕೊಡುತ್ತ ಬಂದರು. ಜನತೆಯು ಇವರ ಸೂಚನೆಗಳನ್ನು ತಪ್ಪದೆ ನಡಸುತ್ತ ಬಂದಿತು. ಒಂದೆರಡು ಕಡೆ ಅಧಿಕಾರಿಗಳ ಕೈಗಡಿಯಾರ ಮೊದಲಾದವು ಚಳವಳಿಯ ರಭಸದಲ್ಲಿ ಸ್ವವಶಕ್ಕೆ ಬಂದಾಗ, ಚಳವಳಿಕಾರರು ಅಂಥ ವಸ್ತುಗಳನ್ನು ವಾರಸು ದಾರರಿಗೆ ಮರಳಿ ಕೊಟ್ಟ ಪ್ರಕರಣಗಳು ನಡೆಯದೆ ಇರಲಿಲ್ಲ.

ಹೀಗೆ 9–8–1942 ರಂದು ಪ್ರಾರಂಭವಾದ ಹೋರಾಟ ದೇಶದ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ರೂಪ ತಳೆಯಿತು. ಹೋರಾಟದ ಮೊದಲನೆಯ ಸುತ್ತಿನಲ್ಲಿಯೇ ಪ್ರಭುತ್ವಯಂತ್ರಕ್ಕೆ ವಿಘ್ನ ಪ್ರಯೋಗವಾಯಿತು. ಅನೇಕ ಸ್ಥಳಗಳಲ್ಲಿ ಹಾಡುಹಗಲಲ್ಲೇ ಸರಕಾರಿ ಕಚೇರಿಗಳ ಮುತ್ತಿಗೆಯಾಯಿತು. ಅಲ್ಲಲ್ಲಿ ಪೋಲಿಸರ ಗೋಳೀಬಾರಿನಿಂದ ಜನರು ಅಸುನೀಗಿದರು. ಯುಕ್ತ ಪ್ರಾಂತದ ಕೆಲವು ಪ್ರದೇಶಗಳಲ್ಲೂ ಬಿಹಾರದ ಕೆಲವು ಪ್ರದೇಶಗಳಲ್ಲೂ ಬ್ರಿಟಿಷರ ಆಳಿಕೆ ತಾತ್ಕಾಲಿಕವಾಗಿ ಕಣ್ಮರೆಯಾದಂತೆ ತೋರುವಷ್ಟು ಚಳವಳಿ ಉಗ್ರವಾಗಿ ನಡೆಯಿತು. ಚಳವಳಿಯಲ್ಲಿ ವಿದ್ಯಾರ್ಥಿಗಳ ಪಾತ್ರವು ಪ್ರಮುಖವಾಗಿತ್ತು.

ಸರಕಾರದ ಅಂದಾಜಿನಂತೆ 319 ರೈಲ್ವೆಸ್ಟೇಷನ್ನುಗಳು ಸುಟ್ಟು ಬೂದಿಯಾದುವು. 945 ಅಂಚೆ ಕಚೇರಿಗಳ ಮೇಲೆ ದಾಳಿಯಾಯಿತು. ಇಪ್ಪತ್ತೈದಕ್ಕೆ ಅಷ್ಟಿಷ್ಟು ನಷ್ಟ, 60ಕ್ಕೆ ಪೂರ್ಣನಷ್ಟ ಸಂಭವಿಸಿತು. ರೈಲ್ವೆ ಇಲಾಖೆಯ ಆಸ್ತಿಯಲ್ಲಿ 18 ಲಕ್ಷ ರೂ. ಗಳ ಮೊತ್ತದ ಸರಕು ಹಾಳಾಯಿತು. ರೈಲ್ವೆ ನಿಲ್ದಾಣಗಳ ನಾಶದಿಂದಾದ ನಷ್ಟ 6 ಲಕ್ಷ 50 ಸಾವಿರಕ್ಕೇರಿತು; ಲಾರಿ ಮತ್ತು ಟ್ರಕ್ಕುಗಳಿಗೆ ಆದ ನಷ್ಟದ ಬೆಲೆ 9 ಲಕ್ಷ ರೂಪಾಯಿ. ಅಂಚೆ ಮತ್ತು ತಂತಿ ಇಲಾಖೆಗೆ ತಂತಿಗಳನ್ನು ಕತ್ತರಿಸಿದ್ದರಿಂದ ಆದ ನಷ್ಟ ರೂ 11,282. ಆಗ ಯೂರೋಪಿನಲ್ಲಿ ನಡೆಯುತ್ತಿದ್ದ ದ್ವಿತೀಯ ಮಹಾಯುದ್ಧ ಪ್ರಯತ್ನಗಳಿಗೆ ಇಂಥ ದಾಳಿಗಳ ಫಲವಾಗಿ ವಿಘ್ನವಾಗದಿರಲಿಲ್ಲ. ಬಂಗಾಳ, ಯುಕ್ತಪ್ರಾಂತ ಮತ್ತು ಮದರಾಸು ಪ್ರಾಂತಗಳಲ್ಲಿ ಅಂಚೆ, ತಂತಿಸಂಪರ್ಕ ವ್ಯವಸ್ಥೆ ಸ್ವಲ್ಪಕಾಲ ಸಂಪೂರ್ಣವಾಗಿ ಸ್ಥಗಿತವಾಯಿತು. ಬಿಹಾರ, ಮದರಾಸು ಮತ್ತು ಯುಕ್ತ ಪ್ರಾಂತದ ಪೂರ್ವಭಾಗಗಳಲ್ಲಿ ರೈಲ್ವೆಸಂಚಾರ ಕೆಲವು ದಿನಗಳ ವರೆಗೆ ಪೂರ್ತಿಯಾಗಿ ಸಾಧ್ಯವಾಗದೆ ಹೋಯಿತು. ಕೆಲವು ಇತರ ಸರಕಾರಿ ಕಚೇರಿಗಳೂ ಕೋರ್ಟುಗಳೂ ದಾಳಿಗೀಡಾದವು. ಕೆಲವು ಕಡೆ ಕಾರಾಗೃಹಗಳಲ್ಲಿದ್ದ ಬಂದಿಗಳು ಮುಕ್ತದ್ವಾರವನ್ನು ಮಾಡಿಕೊಂಡರು. ವಾಸ್ತವವಾಗಿ ಒಟ್ಟು ಚಳವಳಿ ಜನತೆಯ ನಿರ್ಭಯ ಪ್ರತಿಭಟನೆಯಾಯಿತು; ಇದರಲ್ಲಿ ಬೇಸಾಯಗಾರರೂ ವಿದ್ಯಾರ್ಥಿಗಳೂ ಪಾತ್ರ ವಹಿಸಿದ್ದರು. ಇದನ್ನಡಗಿಸಲು ಸರ್ಕಾರ ಹುಚ್ಚೆದ್ದು ಉಗ್ರಕ್ರಮಗಳನ್ನನುಸರಿಸಿತು. ಸರಕಾರೀ ಅಂದಾಜಿ ನಂತೆ ಪೋಲಿಸ್ ಮತ್ತು ಮಿಲಿಟರಿ ಗೋಳಿಬಾರಿನಲ್ಲಿ 1,028 ಮಂದಿ ಗುಂಡೇಟಿನಿಂದ ಸತ್ತರು; 3,000 ಕ್ಕಿಂತ ಹೆಚ್ಚುಮಂದಿ ಗುಂಡೇಟಿಗೆ ಸಿಕ್ಕಿ ಗಾಯಾಳುಗಳಾದರು. ಇಂಥ ಗೋಳೀಬಾರು ಪ್ರಕರಣಗಳು 538 ಸಾರಿ ನಡೆದವು. 900 ಕ್ಕಿಂತ ಹೆಚ್ಚು ಮಂದಿಗೆ ಕಶಾ ಪ್ರಹಾರವಾಯಿತು. 60 ಸಾವಿರಕ್ಕಿಂತ ಹೆಚ್ಚು ಮಂದಿ

ಸೆರೆಮನೆಗೆ ದಬ್ಬಲ್ಪಟ್ಟರು. ಇದು ಸರಕಾರಿ ಲೆಕ್ಕ. ಆದರೆ ಪ್ರಜೆಗಳ ಲೆಕ್ಕ ಬೇರೆ. ಅವರ ಅಭಿಪ್ರಾಯದಂತೆ ಹತ್ತುಸಾವಿಕ್ಕಿಂತ ಹೆಚ್ಚು ಮಂದಿ ಕೊಲ್ಲಲ್ಪಟ್ಟರು. ಚಳವಳಿಯನ್ನು ಮುರಿಯಲು ಪ್ರಭುತ್ವವು ಕಠೋರವಾಗಿ ವರ್ತಿಸಿತು. ಆದರೂ ಒಟ್ಟಿನ ಮೇಲೆ ಅಹಿಂಸಾತ್ಮಕವಾಗಿಯೇ ಜನತೆ ಕೆಚ್ಚಿನಿಂದ ಚಳವಳಿಯನ್ನು ಹರಡಿದರು. ಸರಕಾರದ ಪಶುಬಲಪ್ರಯೋಗಕ್ಕೆ ತೀವ್ರ ಪ್ರತಿಕ್ರಿಯೆಯನ್ನು ತೋರಿದ ಕೆಲವು ಕಡೆ ಅಷ್ಟಿಷ್ಟು ಹಿಂಸೆ ಪ್ರಕಟವಾಯಿತು : ಮಧ್ಯಪ್ರದೇಶದ 5 ಕಡೆಗಳಲ್ಲಿ ಮತ್ತು ಬಿಹಾರದ ಒಂದು ಕಡೆ. ಆದರೆ ಸರಕಾರಿ ವರದಿ ಯಂತೆ–60 ಮಂದಿ ಸೈನಿಕ ಸಿಬ್ಬಂದಿ ಮತ್ತು 648 ಪೊಲೀಸು ಪಡೆಯ ಸಿಬ್ಬಂದಿ ಕೊಲ್ಲಲ್ಪಟ್ಟರು. ಜನತೆಯ ಪ್ರತಿಭಟನೆ ಹೀಗೆ 1943 ರ ಫೆಬ್ರುವರಿ ತಿಂಗಳ ವರೆಗೆ ಸಂತತವಾಗಿ ನಡೆದು, ಕೊನೆಗೆ 1944 ರಲ್ಲಿ ಗಾಂಧಿಜೀಯವರ ಬಿಡುಗಡೆಯಾದನಂತರ ಪೂರ್ತಿಯಾಗಿ ಅಡಗಿತು.

ಕರ್ನಾಟಕದಲ್ಲಿ ಚಳವಳಿ ಮೊದಮೊದಲು ಬ್ರಿಟಿಷ್ ಅಧಿಕಾರಕ್ಕೆ ಪ್ರತ್ಯಕ್ಷ ವಿರೋಧದ ರೂಪದಲ್ಲಿ ಪ್ರಕಟವಾಯಿತು, ವಿದ್ಯಾರ್ಥಿಗಳು ಸಾವಿರ ಸಾವಿರ ಸಂಖ್ಯೆಯಲ್ಲಿ ಶಾಲೆ ಕಾಲೇಜುಗಳನ್ನು ತೊರೆದರು ; ಭಾರಿ ಸಭೆ ಮೆರವಣಿಗೆಗಳನ್ನು ಏರ್ಪಡಿಸಿದರು. ಸರಕಾರಿ ಸಂಸ್ಥೆಗಳಲ್ಲಿ ನೌಕರರು ನೂರಾರು ಮಂದಿ ರಾಜೀನಾಮೆಕೊಟ್ಟು ಹೊರಬಂದು ಚಳವಳಿಗೆ ನೆರವಾದರು. ಇಂಥವರಲ್ಲಿ ಮುಂಬಯಿ ಹೈಕೋರ್ಟಿನ ಪ್ಲೀಡರ್ ಶ್ರೀ ಆರ್.ಎ. ಜಾಗೀರದಾರರು ಒಬ್ಬರು. ಮೈಸೂರು ಸಂಸ್ಥಾನದಲ್ಲಿ ಬಹು ವಿಸ್ತಾರ ಪ್ರದೇಶ ದಲ್ಲಿ ಮುಷ್ಕರಗಳು ನಡೆದುವು. ಪ್ರಮುಖ ಯಂತ್ರೋದ್ಯಮ ಸಂಸ್ಥೆಗಳಿಂದ ಮೂವತ್ತು ಸಾವಿರ ಕಾರ್ಮಿಕರು ತಿಂಗಳುಗಟ್ಟಲೆ ಗೈರುಹಾಜರಿಯಾಗಿ ಮುಷ್ಕರ ಹಿಡಿದರು. ಬೆಂಗಳೂರು ನಗರದಲ್ಲಿಯೇ 12 ಬಾರಿ ಲಾಠಿಪ್ರಯೋಗವಾಯಿತು. ಹಳೆಯ ಮೈಸೂರು ವಿಭಾಗದಲ್ಲಿ ಮುಖ್ಯವಾಗಿ ಬೆಂಗಳೂರಿನಲ್ಲಿ ಪದೇಪದೇ ಗೋಳೀಬಾರು ನಡೆಯಿತು. ಗೋಳೀಬಾರಿನಿಂದ ಸತ್ತವರ ಸಂಖ್ಯೆ 156. ಚಳವಳಿ ಮೊದಲಾದ ವಾರದಲ್ಲಿ ಹುಬ್ಬಳ್ಳಿಯಲ್ಲಿ ಆದ ಗೋಳೀಬಾರಿನಲ್ಲಿ 14 ವರ್ಷದ ಬಾಲಕನು ಅಸುನೀಗಿದನು. ಗ್ರಾಮಾಂತರಗಳಲ್ಲೂ ಜನತೆಯ ಕೆಚ್ಚು ಉಜ್ವಲವಾಗಿ ಪ್ರಕಟವಾಯಿತು. ಜಿಳಗಾವಿ ಜಿಲ್ಲೆಯ ಕಡ್ಲಿ ಶಿವಪುರ ಗ್ರಾಮದಲ್ಲಿ ಒಂದು ಮೆರವಣಿಗೆ ಹೊರಟಿತು. ಮುಂಚೂಣಿಯಲ್ಲಿ ಶೆಟ್ಟಪ್ಪ ಯೋಬಣ್ಣವರ ಎಂಬಾತ ನಿಂತಿದ್ದನು. ಗ್ರಾಮವನ್ನು ಸ್ವತಂತ್ರವೆಂದು ಸಾರಿ ಮೆರವಣಿಗೆಯನ್ನು ಹೊರಡಿಸಿದನು. ಮೆರವಣಿಗೆಯನ್ನು ಚದರಿಸಲು ಜಿಲ್ಲಾ ಪೋಲಿಸು ಸೂಪರಿಂಟೆಂಡೆಂಟನು ಬಂದಿದ್ದನು. ಅಧಿಕಾರಿಯ ಬೆದರಿಕೆಗೆ ಸೆಟೆದು ನಿಂತ ಶೆಟ್ಟಪ್ಪ ಯೋಬಣ್ಣವರನ್ನು ಆತನು ಹತ್ತಿರದಿಂದ ಗುಂಡಿಟ್ಟನು. ಶಿವಮೊಗ್ಗ ಜಿಲ್ಲೆಯ ಈಸೂರು ಎಂಬ ಗ್ರಾಮವನ್ನು ಕೂಡ ಸ್ವತಂತ್ರವೆಂದು ಘೋಷಿಸಲಾಯಿತು. ಪೋಲಿಸರು ಅಡ್ಡ ಬಂದು 'ಶರಣಾಗತರಾಗಿರಿ' ಎಂದರು. ಚಳವಳಿಗಾರರು ಜಗ್ಗಲಿಲ್ಲ. ಗೋಳೀಬಾರಾಯಿತು. ಒಬ್ಬ ಬಾಲಕನೂ ಸೇರಿ ಮೂವರು ಗುಂಡಿಗೆ ಬಲಿಯಾದರು. ಚಳವಳಿಗಾರರು ಕೆರಳಿದರು. ರೋಷವುಕ್ಕಿ ಸೇಡುತೀರಿಸಿಕೊಂಡರು. ಗ್ರಾಮಕ್ಕೆ ಆಗಮಿಸಿದ್ದ ಅಮಲ್ದಾರನನ್ನೂ ಪೋಲಿಸ್ ಅಧಿಕಾರಿಯನ್ನೂ ಬಡಿದು ಕೊಂದರು. ಈ ಪ್ರಕರಣವು ಅಪಾದಿತರ ವಿಚಾರಣೆಯಲ್ಲಿ ಕೊನೆಗೊಂಡು ಶಿಕ್ಷೆಗೊಳಗಾದ 5 ಮಂದಿ ಗ್ರಾಮಸ್ಥರು ಗಲ್ಲಿಗೇರಿ ಪ್ರಾಣ ಬಿಡಬೇಕಾಯಿತು. ಒಬ್ಬರು ಮಹಿಳೆಯರೂ ಸೇರಿ ಅನೇಕ ಹಳ್ಳಿಗರು ಕಾರಾಗೃಹವಾಸದ ಶಿಕ್ಷೆಯನ್ನನುಭವಿಸಿದರು. ಸರಕಾರದ ದಬ್ಬಾಳಿಕೆ ಜೋರಾದರೂ ಮೆರವಣಿಗೆಗಳು, ಪ್ರಭಾತಫೇರಿಗಳು ಮತ್ತು ಬಹಿರಂಗ ಸಭೆಗಳು ನೂರುಗಟ್ಟಲೆ ಎಲ್ಲೆಲ್ಲೂ ನಡೆದು ಪರಿಣಾಮ ಶಂಕೆಶೈಥಿಲ್ಯಗಳಿಲ್ಲದೆ ಚಳವಳಿ ಮುಂಬರಿಯಿತು.

ಜನವರ್ಗದ ಇಂಥ ಪ್ರದರ್ಶನಗಳನ್ನು ಆಗದಂತೆ ತಡೆಯುವುದು ಸರಕಾರಕ್ಕೆ ಸುಲಭವಾಗಿತ್ತು. ಜನಜಂಗುಳಿ ಗುಂಪು ಸೇರದಂತೆ ಪೋಲಿಸರು ಕಾನೂನನ್ನು ಪ್ರಯೋಗಿಸುವುದು ಹೆಚ್ಚು ಸರಳ. ಆದರೆ ವಾತಾವರಣವನ್ನು ಕಲಕಿದ್ದು ಈ ಪ್ರದರ್ಶನಗಳಿಗಿಂತ ಹೆಚ್ಚಾಗಿ, ಜನಗಳು ಸರಕಾರಿ ವ್ಯವಹಾರವನ್ನು

ನಿಲುಗಡೆಗೆ ತರಲು ಮಾಡಿಕೊಂಡ ಯೋಜನೆ. ವಾರ್ತಾವಾಹಕಗಳಾದ ತಂತಿಗಳನ್ನು ಕತ್ತರಿಸೋಣ, ಸರಕಾರಿ ಕಡತಗಳನ್ನು ಸುಡೋಣ, ಅಂಚೆ ಕಚೇರಿಗಳಿಗೂ ಪೆಟ್ಟಿಗೆಗಳಿಗೂ ಬೆಂಕಿಯಿಡೋಣ, ರೈಲ್ವೆನಿಲ್ದಾಣಗಳನ್ನು ಸುಟ್ಟೋ ಬೇರೆ ರೀತಿಯಲ್ಲೋ ಪ್ರಯಾಣ ವ್ಯವಸ್ಥೆಗೆ ನಿರುಪಯೋಗವಾಗುವಂತೆ ಹಾಳು ಮಾಡೋಣ, ಅಧಿಕಾರಿಗಳು ತಂಗುವ ಪ್ರವಾಸೀಗೃಹಗಳನ್ನು ಭಗ್ನಗೊಳಿಸೋಣ--ಇಂಥ ವಿಧ್ವಂಸಕ ಕೃತ್ಯಗಳಲ್ಲಿ ಜನ ಗುಂಪುಗುಂಪಾಗಿ ತೊಡಗಿದ್ದುದು ಆತಂಕಕಾರಿಯಾಯಿತು. ಈ ಚಳವಳಿಯ ಮುಂದಾಳುಗಳಾಗಿ ನೆಚ್ಚಿನ ನಾಯಕರಿದ್ದರು. ಈ ನಾಯಕರು ಆ ತಲೆಮಾರಿನ ತರುಣ ಸಮಾಜದಿಂದ ಎದ್ದು ಬಂದವರು.

ಆಗಸ್ಟ್ ತಿಂಗಳ 15–16ನೆಯ ದಿನಗಳ ರಾತ್ರಿ ಚಳವಳಿಯ ಬೋಣಿ ಚಟುವಟಿಕೆಯಾಗಿ ಮುಂಬಯಿ-ಕರ್ಣಾಟಕ ಪ್ರದೇಶದ ನಾಲ್ಕು ರೈಲ್ವೆ ನಿಲ್ದಾಣಗಳು ಹೋಮಾಗ್ನಿಯಲ್ಲಿ ಧಗಧಗನೆ ಉರಿದುವು. ಯಂತ್ರೋಪಕರಣಗಳನ್ನೂ ಇತರ ದಾಖಲೆಗಳನ್ನೂ ಹಾಳುಮಾಡಲಾಯಿತು. ಪ್ರಭುತ್ವಕ್ಕೆ ಬರಸಿಡಿಲ ಪೆಟ್ಟು ಬಿದ್ದಂತಾಯಿತು. ಆ ಮೇಲೆ ಒಟ್ಟು ಇಪ್ಪತ್ತೆಂಟು ರೈಲ್ವೆಸ್ಟೇಷನ್ನುಗಳನ್ನು ಪೂರ್ಣ ಸುಡಲಾಯಿತು, ಇಲ್ಲವೆ ಸಾಕಾದಷ್ಟು ಹಾಳುಮಾಡಲಾಯಿತು. 5 ಕಡೆ ರೈಲ್ವೆ ಹಳಿಗಳನ್ನು ಎತ್ತಿದ್ದಲ್ಲದೆ, ದಾರಿಯಲ್ಲಿ 25 ಸೇತುವೆಗಳನ್ನು ಮುರಿದು ನಿರುಪಯುಕ್ತವಾಗುವಂತೆ ಹಾಳು ಮಾಡಲಾಯಿತು. ಇದರ ಫಲ ಕೆಲವು ಪ್ರದೇಶಗಳಲ್ಲಿ ರೈಲ್ವೆ ಸಾರಿಗೆ ವ್ಯವಸ್ಥೆ ಸಂಪೂರ್ಣವಾಗಿ ಸ್ಥಗಿತವಾಯಿತು. ಅಪಾಯ ಭೀತಿಯಿಂದ ಇರುಳುಪಯಣದ ರೈಲ್ವೆ ಬಂಡಿಗಳನ್ನು ಕೆಲವು ವಾರಗಳ ವರೆಗೆ ತಾತ್ಕಾಲಿಕವಾಗಿ ನಿಲ್ಲಿಸಲಾಯಿತು. ಕ್ರಮಪ್ರಕಾರವಾಗಿ ರೈಲುಗಳನ್ನು ಓಡಿಸಲು ಪುನರಾರಂಭ ಮಾಡಿದಾಗಲೂ ಮೊದಮೊದಲು ಶಸ್ತ್ರಪಾಣಿಗಳಾದ ಸೈನಿಕರು ಕಣ್ಣಿಟ್ಟ ಕಾವಲುಬಂಡಿಗಳು ಮೊದಲು ಹಳಿಗಳ ಮೇಲೆ ಓಡಿದ ಮೇಲೆಯೇ ಪಯಣಿಗರ ಮತ್ತು ಸರಕು ತುಂಬಿದ ಬಂಡಿಗಳನ್ನು ಬಿಡಲಾಯಿತು. ಮುಖ್ಯಮುಖ್ಯವಾದ ರೈಲುಮಾರ್ಗಗಳಲ್ಲಿ ಪ್ರಯಾಣಿಕರೊಡನೆ ಸೇನೆಯ ತುಕಡಿಯೂ ಉಸ್ತುವಾರಿಯಿದ್ದು ಸ್ವಲ್ಪಕಾಲ ಪ್ರಯಾಣದ ವ್ಯವಸ್ಥೆ ಮಾಡಬೇಕಾಯಿತು. ಸೇನೆಯ ಚಲನವಲನವನ್ನು ತಡೆಯುವುದಕ್ಕೋಸ್ಕರ ಭಾಟಾ ರಸ್ತೆಗಳನ್ನೂ ಚಳವಳಿಕಾರರು ಹಾಳುಮಾಡಿದರು.

ಅಂಚೆ ವ್ಯವಸ್ಥೆಯ ಮೇಲೂ ಚಳವಳಿಕಾರರ ಕಣ್ಣು ಬಿತ್ತು. ನಿಪ್ಪಾಣಿಯ ಅಂಚೆ ಕಚೇರಿ ಪೂರ್ತಿ ಬೂದಿಯಾಯಿತು. ಅಂಚೆ ಪೆಟ್ಟಿಗೆಗಳನ್ನು ಒಡೆದು ತೆಗೆದರು; ಹರಿಕಾರರ ಕೈಯಿಂದ ಟಪಾಲು ಕಾಗದ ಪತ್ರಗಳ ಸಂಚಿಯನ್ನು ಸೆಳೆದುಕೊಂಡರು. ಸುಮಾರು 170 ಕಡೆ ಟೆಲಿಗ್ರಾಫ್ ತಂತಿಗಳನ್ನು ಕತ್ತರಿಸಿ ಒಯ್ದರು.ಕೆಲವು ಸ್ಥಳಗಳಲ್ಲಂತೂ ಮೈಲಿಗಳುದ್ದದ ತಂತಿಗಳು ಕಾಣೆಯಾದುವು, ಅಂಚೆಕಚೇರಿಗಳು ಹಲವು ಕಡೆ ಬಂದಾದುವು; ಮನಿಯಾರ್ಡರುಗಳು ವಿಲೆಯಾಗದೆ ಆಯಾ ವಿಭಾಗದ ಮುಖ್ಯ ಕಚೇರಿಯಲ್ಲೇ ಉಳಿದುವು. ಹೀಗೆ ಅಂಚೆಇಲಾಖೆ ಅನೇಕ ಸ್ಥಳಗಳಲ್ಲಿ ಬಲು ಜೋಮು ಹಿಡಿದ ಅಂಗಾಂಗಗಳಂತೆ ನಿಷ್ಕ್ರಿಯವಾಯಿತು.

ಸಾರ್ವಜನಿಕ ವಿಶ್ರಾಂತಿಗೃಹಗಳು ಚಳವಳಿಕಾರರ ಕಣ್ಣನ್ನು ಸೆಳೆದುವು, ಆಡಳಿತಾಧಿಕಾರಿಗಳ ತಂಗಣೆಗೆ ಊನ ಬಂದಿತು. ಇಂಥ 34 ವಿಶ್ರಾಂತಿಗೃಹಗಳು ಧ್ವಂಸವಾದುವು. ಅನೇಕ ಸ್ಥಳಗಳಲ್ಲಿ ಹಳ್ಳಿಯ ರೆಕಾರ್ಡುಗಳು ಪೂರ್ತಿಯಾಗಿ ನಷ್ಟವಾದುವು. " ನಿಮ್ಮ ಕಾಗದಪತ್ರಗಳನ್ನೂ ಹಳೆಯ ರೆಕಾರ್ಡುಗಳನ್ನೂ ಜೋಪಾನ ಮಾಡಿರಿ " ಎಂದು ಗ್ರಾಮಾಧಿಕಾರಿಗಳಿಗೆ ಸೂಚನೆ ಹೋಯಿತು. ವಾಸ್ತವವಾಗಿ ಅನೇಕ ಗ್ರಾಮಗಳಿಂದ ಪ್ರಭುತ್ವವು ಪಟ್ಟಣಗಳಿಗೆ ಪಲಾಯನ ಮಾಡಿತು. ಪೋಲಿಸರು ಒಂಟೊಂಟಿಯಾಗಿ ಗಸ್ತು ತಿರುಗಲಾಗಲಿಲ್ಲ, ಜೊತೆಜೊತೆಯಾಗಿ ದೊಡ್ಡ ಸಂಖ್ಯೆಯಲ್ಲಿ ದೊಣ್ಣೆಗಳೊಡನೆಯೂ ಕೋವಿಗಳೊಡನೆಯೂ ಓಡಾಡಬೇಕಾಯಿತು. ರಕ್ಷಣೆಯ ಏರ್ಪಾಟು ಕುಸಿದು ಅನೇಕ ಗ್ರಾಮಪ್ರದೇಶಗಳಲ್ಲಿ ಸಣ್ಣ ಪುಟ್ಟ ಔಟ್ ಪೋಸ್ಟ್ ಸ್ಟೇಷನ್ನುಗಳನ್ನು ಮುಚ್ಚಿಬಿಡಬೇಕಾಯಿತು.

ಚಳವಳಿಗಾರರು ಸೇಂದಿ ಸಾರಾಯಿ ಅಂಗಡಿಗಳಿಗೆ ದಾಳಿ ಎದ್ದದ್ದರಿಂದ ಪಾನನಿರೋಧೋದ್ದೇಶಕ್ಕೆ ಅಷ್ಟಿಷ್ಟು ಪುಷ್ಟಿ ದೊರೆಯಿತು. ಕುಡಿತದ 62 ಗಡಂಗುಗಳನ್ನು ಧ್ವಂಸಮಾಡಿಯೋ ಕೆಡಿಸಿಯೋ ಆಯಿತು. 39 ಹೆಂಡ ತುಂಬಿದ ತೊಗಲ ಚೀಲಗಳನ್ನು ಹರಿದೀಡಾಡಿದರು. ಈ ಚಟುವಟಿಕೆಯ ಫಲ ಅಲ್ಲಿಂದಾಚೆಗೆ ಸಾರಾಯಿ ಲಿಲಾವುಗಳಲ್ಲಿ ಪ್ರಭುತ್ವಕ್ಕೆ ವರಮಾನ ಕಡಮೆಂಗುಾದದ್ದು. ಉಳುವರೆಯಲ್ಲಿ ಹರಿಗೋಲನ್ನು ಕಾಯುತ್ತಿದ್ದ ಪೋಲಿಸರಿಂದ ಕೈದುಗಳನ್ನು ಕಸಿದುಕೊಂಡು ಹರಿಗೋಲಿಗೆ ಬೆಂಕಿಯಿಡಲಾಯಿತು. ಉತ್ತರಕನ್ನಡ ಜಿಲ್ಲೆಯ ಗಂಗವಳ್ಳಿ, ಹಟ್ಟಿಕೇರಿ ಮತ್ತು ಸಿರಸಿಗಳಲ್ಲಿ ಸರ್ಕಾರಿ ಸಾಗುವಾನಿ ಮಳಿಗೆಗಳಿಗೆ ಬೆಂಕಿಯಿಡಲಾಯಿತು. ಪ್ರಭುತ್ವಕ್ಕೂ ಇದರಿಂದ ಆದ ನಷ್ಟ ಬಹು ಪರಿಣಾಮದ್ದಾಯಿತು. ಬೆಳಗಾವಿಯಲ್ಲಿ ಸೇನೆಗೆ ಸೇರಿದ ಎರಡು ದೊಡ್ಡ ಹುಲ್ಲಿನ ಬಣವೆಗಳನ್ನು ಚಳವಳಿಗಾರರು ಸುಟ್ಟು ಉರಿಸಿದರು.

ಕಂದಾಯ ವಸೂಲಿ ವೇಳೆಗಳಲ್ಲಿ ಚಳವಳಿಗಾರರು 29 ಮಂದಿ ಪೋಲಿಸರ ಶಸ್ತ್ರಾಸ್ತ್ರಗಳನ್ನು ಸೆಳೆದುಕೊಂಡರು. 8 ಕಡೆಗಳಲ್ಲಿ ಕಂದಾಯದ ಹಣವನ್ನು ದೋಚಿಕೊಂಡು ಹೋದರು. ಹೊಸರಿತ್ತಿಯಲ್ಲಿ ನಡೆದೊಂದು ಘಟನೆ ಇಲ್ಲಿ ವಿಶೇಷೋಲ್ಲೇಖನಕ್ಕೆ ಅರ್ಹವಾಗಿದೆ. ದಂಡಿ ಉಪ್ಪಿನ ಸತ್ಯಾಗ್ರಹ ಯಾತ್ರೆಯ ಕಾಲದಲ್ಲಿ ಭಾಗವಹಿಸಿದ ಸತ್ಯಾಗ್ರಹಿ ಮಹದೇವಪ್ಪ ಮೈಲಾರ—ನಾಡಿನೂಳಿಗವಲ್ಲಿ ತ್ರಿಕರಣವನ್ನು ತೆತ್ತ ದೇಶಾಭಿಮಾನಿ ಮತ್ತು ಗಾಂಧಿಜೀಯವರ ನೆಚ್ಚಿನ ಅನುಯಾಯಿ—ಪೋಲಿಸ್ ಠಾಣೆಯನ್ನು ಮುತ್ತಿ ಅಲ್ಲಿ ಜಮಾಯಿಸಿದ್ದ ಭೂಕಂದಾಯದ ಮೊತ್ತವನ್ನು ಕೈಗೆತ್ತಿಕೊಂಡನು. ಆಗ ಯಾಮಿಕರು ಆತನನ್ನು ರೈಫಲ್ ಶೂಲದಿಂದ ತಿವಿದು, ಗುಂಡಿಟ್ಟು ಕೊಂದರು. ಆ ಹೊತ್ತಿಗೆ ಮೈಲಾರನು ತನ್ನ ಇಬ್ಬರು ಸಹೋದ್ಯೋಗಿಗಳೊಡನೆ ಎಪ್ಪತ್ತೈದು ವೀರ ಪ್ರಕರಣಗಳನ್ನು ನಡೆಸಿ ಧೀರನೆನಿಸಿದ್ದವನು. ಗಂಡನೊಡನೆ ಆತನ ಹೆಂಡತಿ ಸಿದ್ದಮ್ಮನು ಅದೇ ವೀರದಲ್ಲಿ ಪಾತ್ರವಹಿಸಿ ಧೀರೆಯೆನಿಸಿ ನೆಗಳಿದಳು.

1942ರ ಆಗಸ್ಟ್ ತಿಂಗಳಿಂದ 1943ರ ಸೆಪ್ಟೆಂಬರ್ ತಿಂಗಳ ವರೆಗೆ ಪ್ರಭುತ್ವ ವಿರೋಧ ಹೀಗೆ ಅಭಿವ್ಯಕ್ತವಾಯಿತು. ನೂರಾರು ಅಂಥ ನಿದರ್ಶನಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಪ್ರಸ್ತಾವಿಸಬಹುದು. 1942ರ ಅಕ್ಟೋಬರ್ 23ರಂದು ಇಬ್ಬರು ವಿದ್ಯಾರ್ಥಿನಿಯರು ಡಿಸ್ಟ್ರಿಕ್ಟ್ ಮತ್ತು ಸೆಷನ್ಸ್ ನ್ಯಾಯಾಧೀಶರ ಕೋರ್ಟಿನೊಳಕ್ಕೆ ನುಗ್ಗಿ, ಒಬ್ಬಳು ನ್ಯಾಯಪೀಠವೇರಿ ಕುಳಿತಳು. ನ್ಯಾಯಾಧೀಶರು ಅಷ್ಟು ಹೊತ್ತಿಗೆ ಬಂದು ಬೆರಗಾಗಿ ನಿಂತರು. ನೂತನ "ನ್ಯಾಯಮೂರ್ತಿ" ನ್ಯಾಯಾಧೀಶರನ್ನು ಆಪಾದಿತನ ಸ್ಥಾನದಲ್ಲಿ ಪರಿಭಾವಿಸಿಕೊಂಡು–"ನೀವು ಕೂಡಲೆ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸೇರಿಕೊಳ್ಳಿ, ಇಲ್ಲದಿದ್ದರೆ ದೇಶದ್ರೋಹಿಯೆಂದು ನಿಮಗೆ ಶಿಕ್ಷೆಯಾಗುತ್ತದೆ!" ಎಂದು ಎಚ್ಚರಿಸಿ ಉಗ್ಗಡಿಸಿದಳು. ಸೆಷನ್ಸ್ ನ್ಯಾಯಾಧೀಶ ಹುಡುಗಿಯ ನಿಲುವಿಗೆ ವಿನೋದಗೊಂಡು–"ಶಿಕ್ಷೆ ಸ್ವಲ್ಪ ಕಠಿನವಾಯಿತಲ್ಲ"! ಎಂದರು. ಅಷ್ಟು ಹೊತ್ತಿಗೆ ಪೋಲಿಸರು ಧಾವಿಸಿ ಈ ವಿದ್ಯಾರ್ಥಿನಿಯರನ್ನು ದಸ್ತಗಿರಿ ಮಾಡುವುದಕ್ಕೆ ತೊಡಗುವುದರೊಳಗಾಗಿ ಇಬ್ಬರು ಹುಡುಗಿಯರೂ ಗುಂಪಿನಲ್ಲಿ ಬೆರೆತು ಕಣ್ಮರೆಯಾದರು. ಆದರೆ ಪೋಲಿಸರು ಗುಮಾಸಿಯಿಟ್ಟು ಪತ್ತೆಮಾಡಿ ಆ ಮೇಲೆ ಇಬ್ಬರನ್ನೂ ಸೆರೆಹಿಡಿದರು. ಇಬ್ಬರಿಗೂ ಶಿಕ್ಷೆಯಾಯಿತು. ಇನ್ನೊಂದು ನಿದರ್ಶನ—ಬೆಳಗಾವಿಯ ಬಾಲಿಕಾ ಆದರ್ಶ ವಿದ್ಯಾಲಯಕ್ಕೆ ಅಸಿಸ್ಟೆಂಟ್ ಎಜುಕೇಷನಲ್ ಇನ್ಸ್‌ಪೆಕ್ಟರು ತನಿಖೆಗಾಗಿ ಬಂದಾಗ, ವಿದ್ಯಾರ್ಥಿನಿಯರೆಲ್ಲ ಘೋಷಣೆಗಳನ್ನು ಕೂಗುತ್ತ ವಿದ್ಯಾಧಿಕಾರಿಯ ಸನ್ನಿಧಿಯಿಂದ ಮೈದೆಗೆದರು. ಅನೇಕ ಸ್ಥಳಗಳಲ್ಲಿ ಕಾನೂನನ್ನು ಮುರಿದು ನಿರ್ಭಯವಾಗಿ ಮೆರವಣಿಗೆಗಳನ್ನು ನಡೆಸಲಾಯಿತು.

ಚಳವಳಿಯನ್ನು ಮುರಿಯಲು ಆಳ್ವರಸರು ಉಗ್ರೋಪಾಯಗಳನ್ನು ಕೈಕೊಂಡರಾದರೂ ಅದರ ಉರುಬನ್ನಿಳಿಸಲು ಅವರಿಗೆ ಸಾಧ್ಯವಾಗಲಿಲ್ಲ. ಪೋಲಿಸರು ಅನೇಕ ಸ್ಥಳಗಳಲ್ಲಿ ಗುಂಡು ಹಾರಿಸಿದರು. ಗೋಳೀಬಾರು ನಡೆದ 18 ಕಡೆಗಳಲ್ಲಿ ಚಳವಳಿಕಾರರ ಪೈಕಿ 186 ಮಂದಿ ಸತ್ತರು. ನೂರಾರು ಮಂದಿ

ಗಾಯಾಳುಗಳಾದರು. 33 ಸ್ಥಳಗಳಲ್ಲಿ ಪೋಲಿಸರು ಲಾಠೀ ಪ್ರಹಾರಗಳನ್ನು ನಡೆಸಿದರು. ಜನದ ಗುಂಪನ್ನು ಅಕ್ರಮಕೂಟಗಳೆಂದು ಚೆದರಿಸಿದರು. ಈ ಲಾಠೀ ಪೆಟ್ಟುಗಳಿಂದ ನೂರಾರು ಜನರು ಗಾಯಗೊಂಡರು. ಪೋಲಿಸರು ಕಶಾ ಪ್ರಹಾರದಿಂದಲೂ ಚಳವಳಿಕಾರರನ್ನು ಎದುರಿಸಿದರು. ಈ ಚಳವಳಿಯಲ್ಲಿ ಪೋಲಿಸರ ಕೈಗೆ ಸಿಕ್ಕದೆ ತಪ್ಪಿಸಿಕೊಂಡು, ಅಡಗಿಕೊಂಡೇ ಚಳವಳಿಯನ್ನು ನಡೆಸಿದವರು ಹಲವರು. ಪ್ರಭುತ್ವದವರು ಅಂಥ 58 ಮಂದಿಯ ಹೆಸರನ್ನು ಪಟ್ಟಿಮಾಡಿ, ಡಂಗುರ ಹೊಡೆಸಿ ಪ್ರಕಟಿಸಿದರು. ಅವರ ಸಮಾಚಾರವನ್ನು ಕೊಟ್ಟ ಬಾತ್ಮೀದಾರರಿಗೆ ರೂ. 250 ರಿಂದ ಹಿಡಿದು ರೂ. 5,000 ದ ವರೆಗೆ ಇನಾಮು ಕೊಡುವುದಾಗಿ ವಾಗ್ದಾನಮಾಡಿ ಆಶೆ ತೋರಿಸಿದರು. ಆದರೂ ಅಡಗಿದ್ದ ದೇಶಾಭಿಮಾನಿಗಳ ಗುಟ್ಟನ್ನು ಬಿಟ್ಟುಕೊಡಲು ಯಾರೂ ಮುಂದೆ ಬರಲಿಲ್ಲ. ದಸ್ತಗಿರಿಯಾಗಿ ದಂಡನೆಗೊಳಗಾದ ದೇಶಭಕ್ತರ ಸಂಖ್ಯೆ ದಿನೇ ದಿನೇ ಏರಿ, ಏಳು ಸಾವಿರವನ್ನು ಮುಟ್ಟಿತು. ಎರಡು ವರ್ಷದಿಂದ ಏಳು ವರ್ಷದ ಅವಧಿಯ ವರೆಗೆ ಕಾರಾಗೃಹವಾಸದ ಕಠಿನ ಶಿಕ್ಷೆಯನ್ನು ಸಂತೋಷದಿಂದ ಅನುಭವಿಸಿದರು ಇವರು. ಸತ್ಯಾಗ್ರಹಿಗಳು ಜುಲ್ಮಾನೆಯ ರೂಪದಲ್ಲಿ ತೆತ್ತದ್ದು ರೂ. 3,36,000. ನಿಪ್ಪಾಣಿಯೊಂದರಲ್ಲೇ ಅಂಚೆ ಕಚೇರಿಯನ್ನೂ ಸಬ್‌ರಿಜಿಸ್ಟ್ರಾರರ ಕಚೇರಿಯನ್ನೂ ಸುಟ್ಟವರೆಂದು ಆಪಾದಿತರಾಗಿ ದಂಡ ತೆತ್ತದ್ದು 1 ಲಕ್ಷ ರೂಪಾಯಿಗಿಂತ ಹೆಚ್ಚು. ಪ್ರಭುತ್ವದ ಈ ದಮನಪ್ರಯತ್ನವೆಲ್ಲ ವ್ಯರ್ಥವಾಯಿತು. ವಾಸ್ತವವಾಗಿ ಒಟ್ಟು ಜನತೆ—ಗಂಡು, ಹೆಣ್ಣು, ಯುವಕ, ಮುದುಕ, ಹಳ್ಳಿಗ, ಪಟ್ಟಣಿಗ—ಎಲ್ಲರೂ ಈ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸೇರಿದ್ದರು. ನಿಷೇಧಾಜ್ಞೆಗಳಿಂದ ವೃತ್ತಪತ್ರಿಕೆಗಳ ಬಹಿರಂಗ ಪ್ರಕಟಣೆ ಸಾಧ್ಯವಾಗದೆ ಹೋದ ಕಡೆ, ರಹಸ್ಯವಾಗಿ ಕೈಬರಹದ್ದು ಟೈಪುಮಾಡಿದ್ದೇ ಆದ ಸೈಕ್ಲೊಸ್ಟೈಲಿನ ಬುಲೆಟಿನ್ನುಗಳು ತಯಾರಾಗಿ ಚಳವಳಿಯ ಸುದ್ದಿ ಪ್ರಚಾರವಾಗುತ್ತಿತ್ತು.

ಜನತೆಯ ಈ ಹೋರಾಟಕ್ಕೆ ಹೀಗೆ ಇಷ್ಟು ಮೊತ್ತದ ಗೆಲುವು ಕೂಡಿಬರುವುದಕ್ಕೆ ಕಾರಣಗಳಿದ್ದುವು. ಮೊದಲನೆಯದು ಜನತೆಯಲ್ಲಿ ತೋರಿಬಂದ ಒಕ್ಕಟ್ಟು. ಎಲ್ಲೂ ಎದೆ ಬಿರುಕುಗಳಿಲ್ಲದ್ದು ಎರಡನೆಯದು. ಎಲ್ಲ ವರ್ಗದ ಜನರೂ ಜಾತಿಮತಗಳ ಎಣಿಕೆಯಿಲ್ಲದೆ ಸಂಗ್ರಾಮದಲ್ಲಿ ಇಳಿದರು. ಒಟ್ಟು ಚಳವಳಿಯ ಸಂಸ್ಥಾವ್ಯವಸ್ಥೆ ಅಡಿಯಿಂದ ಮುಡಿಯ ವರೆಗೆ ಸಮಗ್ರವಾಗಿ ಏಕತೆಯಿಂದ ರೂಪಗೊಂಡಿತ್ತು. ಹಿರಿಯರು ಹಿಂದೆ ನಿಂತು ಯುವಕರಿಗೆ ಮಾರ್ಗದರ್ಶನ ಮಾಡಿದರು. ತರುಣ ಕಾರ್ಯಕರ್ತರು ನೂರುಗಟ್ಟಲೆ ಗುಂಪು ಕಟ್ಟಿಕೊಂಡರು. ಶಂಕೆಗಾಸ್ಪದವಿಲ್ಲದ ಪ್ರಾಮಾಣಿಕತೆ, ತೀವ್ರ ದೇಶಾಭಿಮಾನ ಮತ್ತು ಅಪೂರ್ವ ಧೈರ್ಯ ಸ್ಥೈರ್ಯಗಳಿಂದ ಕೂಡಿ ಪ್ರತಿಭಟನೆಯನ್ನು ಆಯಾ ಪ್ರದೇಶಗಳಲ್ಲಿ ಮೆರೆದರು. ಎಲ್ಲಕ್ಕಿಂತ ಹೆಚ್ಚಾಗಿ ಕಾರ್ಯಕರ್ತರೂ ಜನತೆಯೂ ಹಿಂಸೆಯನ್ನು ಪೂರ್ತಿಯಾಗಿ ತೊರೆದವರು. ಒಂದೊಂದು ವೇಳೆ ಚಳವಳಿಯ ಭರದಲ್ಲಿ ವ್ಯಕ್ತಿಪ್ರಜೆಯ ಆಸ್ತಿಪಾಸ್ತಿಗೆ ನಷ್ಟ ಸಂಭವಿಸಿದ್ದರೆ, ತಿಳಿದ ಕೂಡಲೇ ನಷ್ಟವನ್ನು ಪೂರೈಸಿಕೊಡುವ ಸಿದ್ಧತೆ ಚಳವಳಿಯ ಅಹಿಂಸಾ ಸ್ವರೂಪವನ್ನು ತೋರಿಸಿತು. ಇದು ಬ್ರಿಟಿಷ್ ಪ್ರಭುತ್ವದ ವಿರುದ್ಧ ನಡೆದ ದಂಗೆ; ಶಾಂತ ಮುಖವಾದದ್ದೇ ಆದರೂ ಸಂಪೂರ್ಣಾರ್ಥದಲ್ಲಿ ಇದು ದಂಗೆಯೇ ಸರಿ. ಮೈಸೂರು ಸಂಸ್ಥಾನದ ಕನ್ನಡ ಸೀಮೆ ಸೇರಿ ಒಟ್ಟು ಕರ್ಣಾಟಕವು ಏಕಮನಸ್ಸಿನಿಂದ, ಸಹಜ ಸಮರ ಸ್ಪಂದನೆಯಿಂದ ಚಳವಳಿಯಲ್ಲಿ ಭಾಗಿಯಾಯಿತು.

ಕರ್ಣಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಸಂಗ್ರಾಮ ಸಮಿತಿ–ಹಿಂದೆ ಆಗಲೇ ಹೇಳಿರುವಂತೆ–ಸುಸಂಘಟಿತವಾಗಿದ್ದು, ದೇಶದ ಎಲ್ಲ ಜಿಲ್ಲೆಗಳಲ್ಲೂ ಹರಡಿ ಕೆಲಸಮಾಡುತ್ತಿದ್ದ ಕಾರ್ಯಕರ್ತರೊಂದಿಗೆ ನಿಕಟ ಸಂಪರ್ಕವಿಟ್ಟುಕೊಂಡು ಮಾರ್ಗದರ್ಶನ ಕೊಡುತ್ತಾ, ಆಗಾಗ ಅವಶ್ಯ ಧನವಿತರಣ ಮಾಡುತ್ತ ಇತ್ತು. ಜಿಲ್ಲೆಗಳಲ್ಲೂ ಸಮಿತಿಯ ಶಾಖೆಗಳು ಜಾಗರೂಕವಾಗಿದ್ದವು. ಅವುಗಳ ಮಾರ್ಗದರ್ಶನದಲ್ಲಿ ಅನೇಕ ತಂಡಗಳು ಕಾರ್ಯಮಾಡುತ್ತಿದ್ದವು. ಧಾರವಾಡ ಜಿಲ್ಲೆಯ ಕಾರ್ಯಕರ್ತರ ಶ್ರೇಣಿಗಳನ್ನು ಸರ್ವಶ್ರೀಗಳಾದ ಬಿಂದಾಚಾರ್ಯ ಬುರ್ಲಿ, ಕೆ. ಎಫ್. ಪಾಟೀಲ, ಶಿವರಾಯಪ್ಪ ಮನ್ನವರ, ಶಿವಶಂಕರಪ್ಪ ದೇವಪುರ,

ಕರಿಯಪ್ಪ ಯರೇಸೀಮೆ, ತಿಮ್ಮನಗೌಡ ಮೆಣಸಿನಹಾಳ, ಮಹದೇವಪ್ಪ ಮೈಲಾರ, ಗೋವಿಂದಾಚಾರ್ಯ ಅಗ್ನಿಹೋತ್ರಿ, ಶಿವಪ್ಪನೇಸ್ವಿ, ಮುಾಶೆಪ್ಪ ಯಾಬಣ್ಣವರ, ನಾರಾಯಣ ಹೊಸಕೇರಿ ಮತ್ತು ನರಸಿಂಹ ದಾಬಡೆ-ಮೊದಲಾದ ಮುಂದಾಳುಗಳು ನಡೆಸಿದರು. ಸುಮಾರು 500 ಮಂದಿ ಕಾರ್ಯಕರ್ತರ ಬೇರೆ ಬೇರೆ ತಂಡಗಳು ಇವರ ನೇತೃತ್ವದಲ್ಲಿ ಕಾರ್ಯ ಮಾಡಿದವು. ಕೇಂದ್ರ ಸಂಗ್ರಾಮ ಸಮಿತಿಯ ಜ್ಯೇಷ್ಠ ನಾಯಕರು ಇವರಿಗೆಲ್ಲ ತಕ್ಕ ನೆರವನ್ನಿತ್ತರು. ಬೆಳಗಾವಿ ಜಿಲ್ಲೆಯಲ್ಲಿ ಸರ್ವಶ್ರೀಗಳಾದ ಕಾಮತ, ಚನ್ನಪ ವಾಲಿ, ವಾಮನ ರಾವ ಬಿದ್ರಿ, ವೆಂಕಟರೆಡ್ಡಿ ಹೂಲಿ, ಅಣ್ಣಾ ಗುರೂಜಿ, ಅಪ್ಪಣ್ಣ ಪಾಟೀಲ, ಜಯದೇವ ಕುಲಕರ್ಣಿ, ವಡವಿ ರಾಮಚಂದ್ರ ಮತ್ತು ಇತರ ಮುಂದಾಳುಗಳು ದಂಗೆಯ ನಾಯಕರು. ಉತ್ತರ ಕನ್ನಡ ಜಿಲ್ಲೆಯಲ್ಲಿ ಸರ್ವಶ್ರೀಗಳಾದ ಕೆ. ಜಿ. ಜೋಶಿ, ದಯಾನಂದ ನಾಡಕರ್ಣಿ ಮತ್ತು ಇತರ ಸ್ಥಳೀಯ ನಾಯಕರ ನೇತೃತ್ವದಲ್ಲಿ ಪ್ರತಿಭಟನೆ ಮುಂದುವರಿಯಿತು. ಕರ್ನಾಟಕದ ಪ್ರತಿಯೊಂದು ಜಿಲ್ಲೆಯಲ್ಲೂ ಸ್ಥಳೀಯ ನಾಯಕರೂ ಅವರಿಗೆ ತಕ್ಕ ಉತ್ಸಾಹ ಪರರಾದ ಅನುಯಾಯಿಗಳೂ ಇದ್ದರು.

ಪ್ರಕಟವಾಗಿಯೂ ರಹಸ್ಯವಾಗಿಯೂ ವ್ಯಕ್ತವಾದ ಪ್ರತಿಭಟನೆ ಹಾಗೂ ವಿಧ್ವಂಸಕ ಕಾರ್ಯಗಳು ಪ್ರಭುತ್ವದ ಆಡಳಿತನೀತಿಯಲ್ಲಿ ಶೈಥಿಲ್ಯವನ್ನು ಆಗಮಾಡಿಸಿದುವು. ದಸ್ತಗಿರಿಗಳು, ಲಾಠೀ ಪ್ರಯೋಗಗಳು, ಕಶಾಪ್ರಹಾರಗಳು, ಗೋಳೀಬಾರುಗಳು-ಇವೆಲ್ಲ ಅಲ್ಪಸ್ವಲ್ಪವೇನೋ ಚಳವಳಿಯ ಬಿರುಸನ್ನು ಇಳಿಸಲು ಪ್ರಭುತ್ವಕ್ಕೆ ನೆರವಾದುವು. ಆದರೆ ಕಾರ್ಯಕರ್ತರು ಎದೆಗುಂದದೆ ಗುಟ್ಟಾಗಿ ಅಣಿಮಾಡಿಕೊಂಡು ಇದ್ದಕ್ಕಿದ್ದಂತೆ ಮತ್ತೆ ಮತ್ತೆ ಅಧಿಕಾರದ ಕೋಟೆಗೆ ಮುತ್ತಿಗೆ ಹಾಕುತ್ತಿದ್ದರು. ಇವರ ಕಿರುಕುಳವನ್ನು ಅರಸರು ಅಂಕೆಯಲ್ಲಿರಿಸಲಾರದೆ ಹೋದರು. ಪ್ರಭುತ್ವದ ಪ್ರಭಾವವು ಮೆಲ್ಲಮೆಲ್ಲನೆ ಗ್ರಾಮದಿಂದ ಪಟ್ಟಣಕ್ಕೆ ಸರಿಯಬೇಕಾಯಿತು. ಏಕೆಂದರೆ ಪೋಲಿಸರ ಬಲಸಂಪತ್ತು ಇದ್ದದ್ದು ಪಟ್ಟಣಗಳಲ್ಲಿ. ಆದರೆ ಪಟ್ಟಣಗಳಲ್ಲಿ ಕೂಡ ಜನತಾಚಳವಳಿ ಅವರಿಗೆ ತುಂಬಾ ಘಾಸಿ ತಂದಿತ್ತು. ಆಳ್ವರಸರಿಗೆ ರಕ್ಷಣೆಯ ಭರವಸೆ ತಪ್ಪಿ ಹೋಗುವಂತಾಯಿತು. "ಧಾರವಾಡದಲ್ಲಿ ಪೋಲೀಸು ಠಾಣೆಗೆ ಮುತ್ತಿಗೆ" ಎಂಬ ಬುಡವಿಲ್ಲದ ಸುದ್ದಿಯೊಂದು ಅಧಿಕಾರಿಗಳಿಗೆ ತಲ್ಲಣ ತಂದಿತು. ಕೂಡಲೆ ಅವರು ಹೆಚ್ಚುವರಿಯ ಪೋಲಿಸು ಬಂದೋಬಸ್ತಿಗೋಸ್ಕರ ವ್ಯವಸ್ಥೆ ಮಾಡಿಕೊಂಡರು. ಪೋಲಿಸರು ಲಾರಿಗಳಲ್ಲಿ ಗ್ರಾಮಾಂತರಗಳಲ್ಲಿ ಗಸ್ತು ತಿರುಗಿದರೂ ಅವರಿಗೆ ಬೇಕಾದ ಕುಳಗಳು ಸಿಕ್ಕದೆ ಕಂಗೆಟ್ಟರು. ದಬ್ಬಾಳಿಕೆಯನ್ನು ಎಷ್ಟೇ ಉಗ್ರಪಡಿಸಿದರೂ ಚಳವಳಿಯ ಕಾವಿಳಿಯಲಿಲ್ಲ. ವಿಶೇಷ ನ್ಯಾಯಾಸ್ಥಾನಗಳನ್ನು ಏರ್ಪಡಿಸಿ, ವಿಧ್ವಂಸಕ ಕೃತ್ಯಗಳಲ್ಲಿ ತೊಡಗಿದವರನ್ನು ಕ್ಷಿಪ್ರವಿಚಾರಣೆಮಾಡಿ ಗಲ್ಲಿಗೋ ತುರಂಗಕ್ಕೋ ಕಳುಹಿಸುವ ಅಧಿಕಾರಿಗಳ ತುರ್ತುಪ್ರಯತ್ನಗಳೂ ಚಳವಳಿಕಾರರನ್ನು ಹಿಮ್ಮೆಟ್ಟಿಸಲಿಲ್ಲ. 1943ರ ಫೆಬ್ರುವರಿಯಲ್ಲಿ ಪ್ರಾಂತೀಯ ಸಿ. ಐ. ಡಿ. ಅಧಿಕಾರಿಯೊಬ್ಬನು ವರದಿ ಮಾಡಿದ್ದು :—"ಭೂಗತ ಕಾರಸ್ಥಾನಗಳಿಂದ ಕೆ.ಪಿ.ಸಿ.ಸಿ.ಯು ಪ್ರಾಮಾಣಿಕರಾದ ಜಿಲ್ಲಾ ನಾಯಕರಿಗೆ ಹಣ ಕಳಿಸುತ್ತಾ ಅವರ ಮೂಲಕ ಕಾರ್ಯಕರ್ತರಿಗೆ ನೆರವು ನಿಧಿ ತಲಪುವ ಭದ್ರವಾದ ಏರ್ಪಾಟು ಮಾಡಿಕೊಂಡಿದೆ. ಈ ನಾಯಕರು ಆಗಿಂದಾಗ್ಗೆ ತಮ್ಮ ಚಲನವಲನಗಳ ವಿವರಗಳನ್ನು ಸಾಧಿಸಿದ ಕಾರ್ಯವರದಿಯನ್ನು ಕೆ.ಪಿ.ಸಿ.ಸಿ.ಗೆ ಕಳಿಸಲು ಬದ್ಧರಾಗಿರುತ್ತಾರೆ." ಫೆಬ್ರುವರಿ 3ರಂದು ಪೋಲಿಸು ಬೇಹುದಳದ ಇನ್ಸ್‌ಪೆಕ್ಟರು ಪುಣೆಯಿಂದ ವರದಿಮಾಡಿದನು:— "ಧಾರವಾಡ ಹಾಗೂ ಬೆಳಗಾವಿ ಜಿಲ್ಲೆಗಳ ವಿದ್ಯಮಾನಗಳಲ್ಲಿ ಯಾವ ವ್ಯತ್ಯಾಸವೂ ತೋರಿಬರುವುದಿಲ್ಲ. ಜಿಲ್ಲೆಯ ಗ್ರಾಮಾಧಿಕಾರಿಗಳೊಡನೆ ನಾನು ನಡೆಸಿದ ಮಾತುಕತೆಯಲ್ಲಿ ಈ ಪುಂಡರಿಂದ ಅವರಿಗೆ ತುಂಬ ಗಾಬರಿಯಾಗಿದೆಯೆಂದು ಗೊತ್ತಾಯಿತು. ಆದ್ದರಿಂದ ಪುಂಡರ ಬಗ್ಗೆ ಸರಿಯಾದ ಪತ್ತೆ ಮಾಹಿತಿಗಳನ್ನು ಕೊಡಲು ಗ್ರಾಮಾಧಿಕಾರಿಗಳು ಹಿಂಜರಿಯುತ್ತಾರೆ. ಗ್ರಾಮಾಧಿಕಾರಿಗಳಿಗೆ ಈಗ ಉಭಯ ಸಂಕಟ ಪ್ರಾಪ್ತವಾಗಿದೆ. ಅಧಿಕಾರಿಗಳಿಗೆ ಅಸಮಾಧಾನ ತರಲಾರರು ; ಹಾಗೆಯೇ ಚಳವಳಿಕಾರರ ಆಕ್ರೋಶಕ್ಕೆ ತುತ್ತಾಗಲಾರರು. ಗ್ರಾಮಾಧಿಕಾರಿಗಳ ಈ ಮನೋಭಾವದ ಫಲವಾಗಿ ಪುಂಡರ ಹಾವಳಿ ಹೆಚ್ಚಿಕೊಂಡಿದೆ". ವಸ್ತುಸ್ಥಿತಿ ಇದು : ಸರಕಾರೀ

ವರದಿಗಳಂತೆ, ಬೆಳಗಾವಿ ಮತ್ತು ಧಾರವಾಡ ಜಿಲ್ಲೆಗಳಲ್ಲಿ ಪ್ರಭುತ್ವಯಂತ್ರ ಚಲನೆಯೇ ಆಗ ಸ್ತಬ್ಧವಾಗಿತ್ತು.

ಚಳವಳಿಯ ಬಿರುಸೇರಿ ಪೋಲಿಸು ರಕ್ಷಣೆ ಸಾಲದೆ ಹೋದದ್ದರಿಂದ ಆಳ್ವರಸರು ಸೈನ್ಯದ ರಕ್ಷಣೆಯನ್ನು ಕೋರಬೇಕಾಯಿತು. ಸೈನ್ಯದ ಸಹಾಯದಿಂದ ಚಳವಳಿಯ ಕಾರ್ಯಕರ್ತರನ್ನು ಶೋಧಿಸಿ ಸೆರೆಹಿಡಿದು, ಈಗಾಗಲೇ ಹಾಳಾಗಿ ಹೋದ ತಮ್ಮ ಅಧಿಕಾರ ಪ್ರತಿಷ್ಠೆಗಳನ್ನು ಮರಳಿ ಗಳಿಸಿಕೊಳ್ಳುವ ಹಂಚಿಕೆ ಇದಾಯಿತು. ಮುಂಬಯಿ ಗವರ್ನರನು ಸಚಿವಾಲಯದಲ್ಲಿ ಸೇನೆಯ ಅಧಿಕಾರಿಗಳದೊಂದು ಸಭೆಯನ್ನು ಕರೆದು, ಅವರನ್ನುದ್ದೇಶಿಸಿ ಭಾಷಣ ಮಾಡಿದನು. ಆತನ ಭಾಷಣದ ಒಕ್ಕಣೆ ಹೀಗಿತ್ತು: "ಗ್ರಾಮ ಪ್ರದೇಶಗಳಲ್ಲಿ ಪುಂಡರ ತಂಡ ಭಯವಿಲ್ಲದೆ ಅಲೆಯುತ್ತಿದೆ. ಜನರು ಪುಂಡರಲ್ಲಿ ಸಹಾನುಭೂತಿಯಿಂದಲೋ ಭಯದಿಂದಲೋ ಅಧಿಕಾರಿಗಳಿಗೆ ಕೊಡಬೇಕಾದ ನೆರವನ್ನು ಕೊಡುತ್ತಿಲ್ಲ. ಆದದ್ದರಿಂದ ಮಿಲಿಟರಿ ಅಧಿಕಾರಿಗಳು ಪೌರಾಡಳಿತಗಾರರಿಗೆ ಈಗ ನೆರವೀಯಬೇಕು, ಪುಂಡರನ್ನು ಮುರಿದು ಶಿಷ್ಟರಾದ ನಿರಪರಾಧಿ ಜನರನ್ನು ಕಾಪಾಡಬೇಕು." ಇಂಥ ಇನ್ನೊಂದು ಸಭೆಯಲ್ಲಿ ಗವರ್ನರ್ ಮಾರ್ಚಿ 16 ರಂದು ಹೀಗೆ ಹೇಳಿದನು: "ಈಗಣ ಪರಿಸ್ಥಿತಿ ಹೀಗಿದೆ—ಪುಂಡರ ಚಟುವಟಿಕೆಯ ಬಿರುಸು ಸ್ವಲ್ಪ ಇಳಿದಿದ್ದರೂ ಅವರ ಪುಂಡಾಟಿಕೆ ಇನ್ನೂ ನಡೆಯುತ್ತಲೇ ಇದೆ. ಆಸ್ತಿ ಪಾಸ್ತಿಗಳಿಗೆ ಆಗುತ್ತಿರುವ ನಷ್ಟ ಅಷ್ಟು ಆತಂಕಕಾರಿಯಲ್ಲದಿದ್ದರೂ ಬೆಳಗಾವಿ ಜಿಲ್ಲೆಯಲ್ಲಿ ಶಾಸನವ್ಯವಸ್ಥೆಗಳಿಗೆ ಅವಿಧೇಯತೆ ಇನ್ನೂ ಪ್ರಕಟವಾಗುತ್ತಿದೆ. ಪೌರಾಡಳಿತದ ಧ್ಯೇಯವೂ ಸೇನಾಧಿಕಾರಿಗಳ ಧ್ಯೇಯವೂ ಗ್ರಾಮಸ್ಥರಲ್ಲಿ ರಾಜನಿಷ್ಠೆಯನ್ನು ಪುನಃ ಪ್ರತಿಷ್ಠಿಸುವುದಾಗಬೇಕು. ಗ್ರಾಮಸ್ಥರು ಪುಂಡರ ಬಗ್ಗೆ ಈಗ ತೋರಿಸುತ್ತಿರುವ ನಿಷ್ಠೆಯನ್ನು ಕದಲಿಸಿ ಶಿಥಿಲಗೊಳಿಸಬೇಕು". ಗವರ್ನರನು ತನ್ನ ಉಪನ್ಯಾಸವನ್ನು ಮುಂದುವರಿಸಿ ಆಗಣ ಮುಖ್ಯ ಸಮಸ್ಯೆಯನ್ನು ಹೀಗೆ ಒತ್ತಿಹೇಳಿದನು, "ಪೋಲಿಸರು ಕರೆ ಕೊಟ್ಟೊಡನೆ ಸೈನ್ಯ ಅವರ ಸಹಾಯಕ್ಕೆ ಬರುವ ಕ್ಷಿಪ್ರವ್ಯವಸ್ಥೆಯಾಗಬೇಕು" ಈ ಸಮಾಲೋಚನೆಯ ಸಭೆಯಲ್ಲಿ ಆದ ತೀರ್ಮಾನ ಇದು: ಬೆಳಗಾವಿಯಲ್ಲಿ ಸೇನೆಯ ಒಂದು ಪಟಾಲಂ ಇರಬೇಕು; ಬೆಳಗಾವಿ ಮತ್ತು ಧಾರವಾಡ ಜಿಲ್ಲೆಗಳಲ್ಲಿ ಆಯ್ದ ಎಂಟು ಶಿಬಿರಗಳಲ್ಲಿ ಸೇನೆಯ ತುಕಡಿಗಳಿರಬೇಕು. ಹೀಗೆ ಅಲ್ಲಲ್ಲಿ ನೆಲಸಿದ ಸೈನ್ಯ ಬಲ ಪೋಲಿಸರಿಗೆ ಚಳವಳಿಯ ಕಾರ್ಯಕರ್ತರನ್ನು ಶೋಧಿಸಿ ಹಿಡಿಯಲು ನೆರವಾಯಿತಲ್ಲದೆ ಜನರನ್ನು ಬೆದರಿಸಿ ಹದ್ದಿನಲ್ಲಿಡಲು ಬೀದಿ ಬೀದಿಗಳಲ್ಲಿ ಸೈನಿಕರ ಮೆರವಣಿಗೆಯ ಜರ್ಬನ್ನು ಏರ್ಪಡಿಸಲಾಯಿತು. ಇಷ್ಟಾದರೂ ಜನತೆಯ ಹುಮ್ಮಸ್ಸೂ ಕಸುವೂ ಸ್ವಲ್ಪವೂ ಇಳಿಯಲಿಲ್ಲ.

ಚಳವಳಿ ಮುಂಬರಿದಂತೆ ಪೋಲಿಸ್ ಮತ್ತು ಮಿಲಿಟರಿಗಳೆರಡರ ಜೋಡಿ ನೆರವಿನಿಂದಲೂ ಸೆರೆಗೊಳಗಾದವರನ್ನು ಹೇಳಬಾರದಂಥ ಅಮಾನುಷ ಹಿಂಸೆಕೊಟ್ಟು ನಿರ್ಬಂಧಪಡಿಸಿ ತಪ್ಪೊಪ್ಪಿಗೆಯ ಹೇಳಿಕೆಗಳನ್ನು ಪಡೆದುಕೊಂಡು, ಆಳ್ವರಸರು ತಂಡ ತಂಡವಾಗಿ ಕಾರ್ಯಕರ್ತರನ್ನು ಬಂಧಿಸಿದರು. 1943ರ ಹೊತ್ತಿಗೆ ಕಾರ್ಯನಿರತರಾದ ಚಳವಳಿಕಾರರಲ್ಲಿ ಬಹುಸಂಖ್ಯಾಕರನ್ನು ಆಳ್ವರಸರು ಸೆರೆಯಲ್ಲಿಟ್ಟರು, ವಿಚಾರಣೆಗೆ ಗುರಿಪಡಿಸಿದರು. ಬಗೆಬಗೆಯ ಘೋರ ಹಿಂಸೆಗಳಿಗೆ ಬಂದಿಗಳು ಈಡಾದರು. ಚಿತ್ರಹಿಂಸೆಮಾಡಿ ತಪ್ಪೊಪ್ಪಿಗೆಯ ಹೇಳಿಕೆಗಳಿಗೆ ರುಜು ಮಾಡಿಸಿಕೊಂಡರು. ಸುಮಾರು 500 ಮಂದಿ ಕಾರ್ಯಕರ್ತರು ವಿಚಾರಣೆಯನ್ನೆದುರಿಸಬೇಕಾಯಿತು. ಆ ಹೊತ್ತಿಗೆ ಬಂಧನದಿಂದ ಬಿಡುಗಡೆ ಪಡೆದಿದ್ದ ಶ್ರೀ ದ. ಪ. ಕರಮರಕರರ ನೇತೃತ್ವದಲ್ಲಿ ಒಂದು ಖಾಸಗಿ ಸಹಾಯಕ ಸಮಿತಿಯನ್ನು ನೇಮಿಸಲಾಯಿತು. ಈ ಸಮಿತಿ ವಕೀಲರಾದ ಶ್ರೀ ಕೆ. ಪಿ. ದುಂಡೂರ ಮತ್ತು ಶ್ರೀ ಆರ್. ವಿ. ಜತಾರ ಇವರಿಬ್ಬರ ಸಹಕಾರದೊಡನೆ ಕಾರ್ಯಕರ್ತರ ಪರ ವಕೀಲಿಗೆ ಏರ್ಪಾಟುಮಾಡಿತು. ಆದರೆ ಆಪಾದಕರು ಕೈಕೊಂಡ ಕಾರ್ಯ ವಿಧಾನದಲ್ಲಿಯ ಅಕ್ರಮದೋಷಗಳಿಂದಲೂ ಹಾಗೆಯೆ ಸಾಕಾದಷ್ಟು ಸಾಕ್ಷ್ಯಪುರಾವೆಗಳು ದೊರಕದ್ದರಿಂದಲೂ

ಅನೇಕ ಬಂದಿಗಳ ಮೇಲಣ ಕೇಸುಗಳು ಸಾಬೀತಾಗದೆ ಬಿದ್ದು ಹೋದುವು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬಂಧಿತರಲ್ಲಿ ಅನೇಕರು ಆಪಾದನೆಗಳಿಂದ ಮುಕ್ತರೆನ್ನಿಸಿ ಬಿಡುಗಡೆ ಹೊಂದಿದರು.

1943ರ ಫೆಬ್ರುವರಿಯಲ್ಲಿ ಶ್ರೀ ರಂ. ರಾ. ದಿವಾಕರರು ಯರವಾಡಾ ಜೈಲಿನಲ್ಲಿದ್ದ ಮಹಾತ್ಮಾ ಗಾಂಧಿಯವರೊಡನೆ ದೇವದಾಸ ಗಾಂಧಿಯವರ ಮೂಲಕ ಸಂಪರ್ಕ ಕಲ್ಪಿಸಿಕೊಂಡು, ಅವರಿಗೆ ಕರ್ನಾಟಕದಲ್ಲಿ ನಡೆದ ಚಳವಳಿಯ ಸಮಗ್ರ ರೂಪದ ವರದಿಯನ್ನೊಪ್ಪಿಸಿದರು. ಚಳವಳಿಯಲ್ಲಿ ಅಹಿಂಸೆಯನ್ನು ಚಾಚು ತಪ್ಪದೆ ಹೇಗೆ ಕಾರ್ಯಕರ್ತರು ಪರಿಪಾಲಿಸಿದರೆಂಬುದನ್ನೂ ಗುಪ್ತವ್ಯವಸ್ಥೆಯಿಂದ ಜನರ ಸಮರೋತ್ಸಾಹ ಕುಂದದೆ ಹೇಗೆ ಚರಿತಾರ್ಥವಾಯಿತೆಂಬುದನ್ನೂ ಗಾಂಧಿಜೀಯವರಿಗೆ ಅರಿಕೆ ಮಾಡಿದರು. ಗಾಂಧಿಜೀಯವರು ವರದಿಯನ್ನು ಕೇಳಿ,—"ಈಗ ಇದುವರೆಗೆ ಎಲ್ಲವೂ ಸರಿಯಾಗಿ ನಡೆದುಕೊಂಡು ಬಂದಿತೆಂಬುದರಿಂದ ಮುಂದೆಯೂ ಹೀಗೆಯೇ ನಡೆದೀತೆಂಬ ಅರ್ಥವಾಗಲಿ ಭರವಸೆಯಾಗಲಿ ಹೊರಡದು" ಎಂದು ಎಚ್ಚರಿಸಿ, ಆಸ್ತಿ ಪಾಸ್ತಿಗಳಿಗೆ ನಷ್ಟವುಂಟುಮಾಡುವುದು ಸಮರ್ಥನೀಯವಲ್ಲವೆಂದೂ ಎಲ್ಲ ಪ್ರತಿಭಟನೆಯೂ ಗೋಪ್ಯ ವ್ಯವಸ್ಥೆಯನ್ನು ತ್ಯಜಿಸಿ ಬಹಿರಂಗ ವ್ಯವಸ್ಥೆಯಾಗಿಯೇ ಪ್ರಕಟವಾಗಬೇಕೆಂದೂ ಹಿತವಚನ ಹೇಳಿದರು. ಗಾಂಧಿಜೀಯವರ ಸೂಚನೆಯಂತೆ ಎಲ್ಲ ಗುಟ್ಟಾದ ಏರ್ಪಾಟುಗಳೂ ನಿಲ್ಲಿಸಲ್ಪಟ್ಟವು. 1943ರ ಸೆಪ್ಟೆಂಬರ್ 5 ರಿಂದ 1944ರ ಮೇ 5ರ ವರೆಗೆ ಬಹಿರಂಗ ಸತ್ಯಾಗ್ರಹ–ಕಾನೂನು ಭಂಗ–ಚಳವಳಿಯನ್ನು ಹೂಡಲಾಯಿತು. ಈ ಹೊಸ ಚಳವಳಿ ಭಾರತ ಸತ್ಯಾಗ್ರಹ ಸಮಿತಿಯ ಮೇಲ್ವಿಚಾರಣೆಯಲ್ಲಿ ನಡೆಯಿತು. ಆಗ ದಿವಾಕರರು ಇನ್ನೂ ಭೂಗತ ಕಾರಸ್ಥಾನದಲ್ಲಿ ಅಜ್ಞಾತರಾಗಿಯೇ ಇದ್ದರು. ಗಾಂಧಿಜೀಯವರು ಬಂಧನದಿಂದ ಬಿಡುಗಡೆ ಪಡೆದು ಮುಂಬಯಿ ಕಡಲತೀರದ ಜುಹುವಿನಲ್ಲಿ ವಿಶ್ರಾಂತಿ ಪಡೆಯುತ್ತಿದ್ದರು. ಇಬ್ಬರೂ ಭೇಟಿಯಾಗಿ ಮಾತುಕತೆ ನಡೆಸಿದ್ದರ ಫಲವಾಗಿ, ದಿವಾಕರರು ಅವರೊಡನೆ ಇತರ ಮೂವತ್ತು ಮಂದಿಯೂ 9–8–1944 ರಂದು ಗುಪ್ತಕಾರಸ್ಥಾನವನ್ನು ಮುಚ್ಚಿ ಬಹಿರಂಗವಾಗಿ ಮೈದೋರಿದರು. ಇವರೆಲ್ಲ ಎರಡು ವರ್ಷಕಾಲ ಪೋಲಿಸರ ಕಣ್ಣನ್ನೂ ಕೈಪಟ್ಟನ್ನೂ ತಪ್ಪಿಸಿಕೊಂಡಿದ್ದರು; ಮತ್ತು ಅವರ ಸೆರೆಗೋಸ್ಕರ ಪೋಲಿಸರು ಬಹುಮತಿಯನ್ನಿರಿಸಿದ್ದರು. ಇವರೆಲ್ಲ ಕೂಡಲೆ ಸೆರೆ ಹಿಡಿಯಲ್ಪಟ್ಟರು.

ಹೀಗೆ ಭಾರತದ ಸ್ವಾತಂತ್ರ್ಯ ಚಳವಳಿಯ ಕಥೆಗೆ ಕರ್ನಾಟಕದ ಒಂದು ವೈಭವೋಪೇತವಾದ ಅಧ್ಯಾಯಂ ಸೇರಿಕೊಂಡಿತು. ಚಳವಳಿ ಕಟ್ಟುನಿಟ್ಟಾಗಿ ಅಹಿಂಸಾಮಾರ್ಗದಲ್ಲಿ ಸಾಗಿ, ಕರ್ನಾಟಕ ಪ್ರದೇಶದಲ್ಲಿ ಬ್ರಿಟಿಷರ ಆಡಳಿತವನ್ನು ಕುಗ್ಗಿಸಿ ನಿಷ್ಕ್ರಿಯೆಗೊಳಿಸಿತು. ಈ ಅಭೂತಪೂರ್ವ ಪ್ರತಿಭಟನಕಾಲದಲ್ಲಿ, ಒಂದೇ ಭಾಷಾ ಬಾಂಧವರಾಗಿ ಭಿನ್ನ ಭಿನ್ನ ರಾಜ್ಯ ಪ್ರಭುತ್ವಗಳಲ್ಲಿ ಹಂಚಿಹೋಗಿದ್ದ ಕನ್ನಡಿಗರಲ್ಲಿ ಒಕ್ಕಟ್ಟೂ ರಾಷ್ಟ್ರಾಭಿಮಾನವೂ ಕೂಡಿ ಬಂದವು. ಚಳವಳಿಯು ಏಕೀಕೃತ ಕರ್ನಾಟಕ ರಾಜ್ಯದ ಉದಯವಾಗುವ ದಿನವನ್ನು ತ್ವರೆಗೊಳಿಸಿತು. ಭಾರತದಲ್ಲೆಲ್ಲ ನಡೆದ ಚಳವಳಿಯಲ್ಲಿ ಕನ್ನಡ ಪ್ರದೇಶವು ತನ್ನ ಪಾಲಿನ ಕರ್ತವ್ಯವನ್ನು ವಹಿಸಿ ಇತರ ಪ್ರಾಂತಗಳೊಡನೆ ಸಮಾನಸ್ಕಂಧವಾಗಿ ನಿಂತಿತು. ಕರ್ನಾಟಕದ ಚಳವಳಿಯನ್ನು ಮೆಚ್ಚಿಕೊಂಡ ಹಿರಿಯ ನಾಯಕರಲ್ಲಿ ಶ್ರೀ ಜಯಪ್ರಕಾಶ ನಾರಾಯಣರು ಒಬ್ಬರು. ಕರ್ನಾಟಕದ ಚಳವಳಿಯ ಜಾಡನ್ನು "ಕರ್ನಾಟಕದ ಮಾದರಿ" ಎಂದು ಅವರು ಪ್ರಶಂಸಿಸಿ, ದೇಶದ ಇತರ ಭಾಗಗಳೂ ಈ ಮಾದರಿಯನ್ನು ಅನುಸರಿಸಿದ್ದ ಪಕ್ಷದಲ್ಲಿ ಚಳವಳಿಯಿಂದ ಇನ್ನೂ ಉತ್ತಮ ಫಲಿತಾಂಶ ಹೊರಪಡುತ್ತಿತ್ತೆಂದು ಮುಕ್ತಕಂಠದಿಂದ ಅಭಿಪ್ರಾಯ ವ್ಯಕ್ತಪಡಿಸಿದರು.

ಈಗ ಚಳವಳಿಗೆ ಸಂಬಂಧಪಟ್ಟ ಕೆಲವು ಅಂಕಿ ಅಂಶಗಳನ್ನು ಕೊಡಬಹುದು—ಈ ವಿವರಗಳನ್ನು "ಕರ್ನಾಟಕದ ಪ್ರತಿಭಟನೆ" (Revolt in Karnataka) ಎಂಬ ಪುಸ್ತಕದಿಂದ ಎತ್ತಿಕೊಂಡಿದೆ. ಈ ಪುಸ್ತಕದಲ್ಲಿ ಕೊಟ್ಟಿರುವ ಸಂಗತಿಗಳು 9–8–1942 ರಿಂದ 8–4–1943 ವರಗಿನ ಅವಧಿಗೆ ಮಾತ್ರ

ಸಂಬಂಧ ಪಟ್ಟದ್ದು. ಎಂದರೆ. ಚಳವಳಿಯಿಂದ ಬ್ರಿಟಿಷ್ ಆಡಳಿತ ಯಂತ್ರದ ಕಾರ್ಯವನ್ನು ತಡೆದು ಸ್ಥಗಿತಗೊಳಿಸುವ ಉದ್ದೇಶವಿಟ್ಟುಕೊಂಡಿದ್ದ ಕಾಲದ ವಿವರಗಳನ್ನು ಮಾತ್ರ ಅಲ್ಲಿ ನೋಡಬಹುದು. ಆದರೂ ಚಳವಳಿಯ ಸ್ವರೂಪವೂ ವ್ಯಾಪ್ತಿಯೂ ಅವುಗಳಿಂದ ವಿಶದಪಡುತ್ತದೆ. ಈ ಪುಸ್ತಕದಲ್ಲಿಯ ಅಂಕಿಗಳಲ್ಲಿ ನ್ಯೂನಾಧಿಕದೋಷವಿಲ್ಲವೆಂದಾಗಲಿ, ಅವು ಪೂರ್ಣವೆಂದಾಗಲಿ ಹೇಳಿಕೊಳ್ಳಲಾಗುವುದಿಲ್ಲ, ನಿಜ. ಆದರೆ ಅವು ಚಳವಳಿಯ ಸ್ವರೂಪವನ್ನು ಸ್ವಭಾವ ಪ್ರಭಾವಗಳನ್ನು ತೋರಿಸಬಲ್ಲವು. ಈ ಪುಸ್ತಕವು ಚಳವಳಿಯ ಕಾಲದಲ್ಲೆ ಪ್ರಕಟವಾದದ್ದು ಅದರ ವೈಶಿಷ್ಟ್ಯ. ಅಲ್ಲಿಯ ಕೆಲವು ಮಾತುಗಳನ್ನಿಲ್ಲಿ ಉದ್ಧರಿಸಿದೆ.

"ಅಂಕಿಗಳೇ ಕಥೆ ಹೇಳುತ್ತವೆ. ಈ ವರೆಗಣ ವರದಿಯಿಂದ ವಾಚಕರಿಗೆ ಚಳವಳಿಯನ್ನು ಕುರಿತು ಅಷ್ಟಿಷ್ಟು ಪರಿಚಯವಾಗಿರುತ್ತದೆ. ಚಳವಳಿಯ ಆರಂಭ, ಅದರ ಚಳವಳಿಗೆ ಕಾರ್ಯಕರ್ತರ ಚಲನವಲನಗಳು, ಆಳ್ವರಸರ ಪ್ರತಿರೋಧ ಪ್ರಯತ್ನಗಳು—ಇವೆಲ್ಲವನ್ನು ವಾಚಕರು ತಿಳಿದುಕೊಂಡಿರುತ್ತಾರೆ. ಇಲ್ಲಿ ಕೆಳಗೆ ಕೊಟ್ಟಿರುವ ಅಂಕಿಗಳು ಕತೆಯನ್ನು ಇನ್ನಷ್ಟು ವಿವರವಾಗಿ ಬಣ್ಣಿಸುತ್ತವೆ. ಜನತೆಯ ಕಾರ್ಯ ಬಾಹುಳ್ಯವೂ ಪ್ರಭುತ್ವದ ದಮನೋದ್ಯಮ ವ್ಯಾಪ್ತಿಯೂ ಅಂಕಿಗಳಿಂದ ಸ್ಫುಟವಾಗುತ್ತವೆ. ಎಲ್ಲ ಅಂಕಿಗಳನ್ನು ಸಂಗ್ರಹಿಸುವುದು ಸಾಧ್ಯವಾಗಲಿಲ್ಲ; ಅದು ಈಗಣ ಸಂದರ್ಭದಲ್ಲಿ ಸಾಧ್ಯವಲ್ಲ. ಒದಗಿದಷ್ಟನ್ನು ಮಾತ್ರ ಕೋಡೀಕರಿಸಿರುತ್ತದೆ. ಮೈಸೂರು (ರಾಜ್ಯ) ವಿಭಾಗದಿಂದ ಸಾಕಾದಷ್ಟು ವಿವರಗಳು ಬಂದಿಲ್ಲ. ಕೊಟ್ಟಿರುವ ಅಂಕಿಗಳಲ್ಲಿ ಹೆಚ್ಚು ಕಡಮೆಗಳಾಗಬಹುದು. ತಂತಿಗಳನು ಕತ್ತರಿಸಿದ ಇನ್ನೂ ಎಷ್ಟೋ ಹೆಚ್ಚಿನ ಪ್ರಕರಣಗಳೂ ಪ್ರಭುತ್ವಕ್ಕೆ ಆದ ಇತರ ಚಿಲ್ಲರೆ ಕಿರುಕುಳಗಳೂ ಪೂರ್ತಿಯಾಗಿ ವರದಿಯಾಗಿಲ್ಲ. ಮುಖ್ಯ ಮುಖ್ಯ ಘಟನೆಗಳನ್ನು ಮಾತ್ರ ಇಲ್ಲಿ ಸೇರಿಸಲು ಪ್ರಯತ್ನಿಸಿದೆ.

### 1 ದಸ್ತಗಿರಿಗಳು

| ಜಿಲ್ಲೆ | | ಸಂಖ್ಯೆ |
|---|---|---|
| 1. ಬೆಳಗಾವಿ | .... | 1,255 |
| 2. ಧಾರವಾಡ | .... | 1,147 |
| 3. ಬಿಜಾಪುರ | .... | 50 |
| 4. ಉತ್ತರ ಕನ್ನಡ | .... | 515 |
| 5. ದಕ್ಷಿಣ ಕನ್ನಡ | .... | 27 |
| 6. ಬಳ್ಳಾರಿ | .... | 112 |
| 7. ಮೈಸೂರು ಸಂಸ್ಥಾನ | .... | 2,500 |
| 8. ಕೊಡಗು | .... | 4 |
| | ಒಟ್ಟು .... | 5,610 |

## 2 ಘೋಷಿತ ಅಪರಾಧಿಗಳು

| ಜಿಲ್ಲೆ | | ಸಂಖ್ಯೆ |
|---|---|---|
| 1. ಬೆಳಗಾವಿ | .... | 22 |
| 2. ಧಾರವಾಡ | .... | 30 |
| 3. ಉತ್ತರ ಕನ್ನಡ | .... | 14 |
| | ಒಟ್ಟು .... | 66 |

## 3 ಬಹುಮಾನಗಳು

ರೂ. 250 ರಿಂದ ರೂ. 5,000 ರ ವರೆಗೆ ಹದಿನೇಳು ಮಂದಿ ಕಾರ್ಯಕರ್ತರ ದಸ್ತಗಿರಿಯನ್ನು ಆಗಮಾಡಿಸುವ ಬಾತ್ಮಿಗಳಿಗೋಸ್ಕರ ಬಹುಮಾನ ಕೊಡುವುದಾಗಿ ಪ್ರಚಾರಪಡಿಸಲಾಯಿತು. ಧಾರವಾಡ ಜಿಲ್ಲೆಯಲ್ಲಿ ಪೋಲಿಸರ ಕಣ್ಣಿಡಲ್ಪಟ್ಟವರು 10 ಮಂದಿ; ಬೆಳಗಾವಿ ಜಿಲ್ಲೆಯಲ್ಲಿ 7 ಮಂದಿ.

## 4 ಗೋಳೀಬಾರುಗಳು

| ಸ್ಥಳ | | ಸತ್ತವರು | ಗಾಯಗೊಂಡವರು |
|---|---|---|---|
| ಬೈಲಹೊಂಗಲ | .... | 7 | 2 |
| ನಿಪ್ಪಾಣಿ | .... | 2 | 8 |
| ಶಿವಪುರ | .. | 1 | 1 |
| ಕೋಳಿಗುಡ್ಡ | .... | .... | 2 |
| ಖಾವಟ ಕೊಪ್ಪ | .... | 1 | 6 |
| ಹುಬ್ಬಳ್ಳಿ | .... | 1 | 18 |
| ಬೆಂಗಳೂರು | .... | 150 | 450 |
| ದಾವಣಗೆರೆ | .... | 6 | .... |
| ತಿಪಟೂರು | .... | 2 | .... |
| ದಾಸನ ಕೊಪ್ಪಲು | .... | 3 | .. |
| ಶ್ರವಣಬೆಳಗೊಳ | .... | 5 | ... |
| ಚಿತ್ರದುರ್ಗ, ಇಸೂರು, ಗುಟ್ಟಿ (ಗುಬ್ಬಿ), ಮೈಸೂರು, ತುಮಕೂರು, ಹಾಸನ | | | ಅಂಕಿಗಳು ದುರ್ಲಭ |

ಒಟ್ಟಿನಲ್ಲಿ 178 ಮಂದಿ ಸತ್ತು 520 ಮಂದಿ ಗಾಯಗೊಂಡರು. 'ಸೈನ್ಯದ ಕಾಲ್ದಳವೂ ಕುದುರೆ ದಳವೂ ಬೆಂಗಳೂರು ನಗರದಲ್ಲಿ ಚಳವಳಿಯ ಬಯಲಿಗೆ ಬಂದುವು. ಎರಡು ದಿನ ರಸ್ತೆಗಳೇ ರಣಭೂಮಿಗಳಾದವು.

## 5 ಲಾಠೀ ಪ್ರಹಾರಗಳು

| ಸ್ಥಳ | | ಪ್ರಹಾರ ಸಂದರ್ಭಗಳು | ಗಾಯಗೊಂಡವರು |
|---|---|---|---|
| ಬೆಳಗಾವಿ | .... | 6 | 65 |
| ಗದುಗು | .... | 3 | 3 |
| ಹಾವೇರಿ | .... | 2 | 8 |
| ತಾಳಿಕೋಟೆ | .... | .... | 2 |
| ಅಂಕೋಲ | ... | 2 | ... |
| ಮಂಗಳೂರು | .... | 6 | .... |
| ಕಾರ್ಕಳ | . | .... | 11 |
| ಬೆಂಗಳೂರು ನಗರ | .... | 10 | .... |
| ಬೆಂಗಳೂರು ದಂಡು | .... | 2 | .... |

ಬಳ್ಳಾರಿ, ಕಾರವಾರ, ಸಿರಸಿ, ಹೊನ್ನಾವರ, ಕುಮಟ, ಮೈಸೂರು, ಚಿಕ್ಕಮಗಳೂರು, ಸಾಲಿಗ್ರಾಮ, ಶ್ರವಣಬೆಳಗೊಳ—ಇವುಗಳ ಅಂಕಿಗಳು ದುರ್ಲಭ

## 6 ಕಶಾ ಪ್ರಹಾರಗಳು

ದಕ್ಷಿಣ ಕನ್ನಡದ ಶ್ರೀ ಕೆ. ಸಂಜೀವ ಕಾಮತರು ತಂತಿ ಕತ್ತರಿಸುವ ಚಟುವಟಿಕೆಯ ಉಸ್ತುವಾರಿಯಲ್ಲಿದ್ದವರು. ಇವರಿಗೆ ಹದಿನೈದು ಚಾಟಿಯೇಟುಗಳು ಬಿದ್ದವು.

## 7 ಕಠಿನ ಸಜೆಗಳು

(ಕೆಲವು ಕೇಸುಗಳಲ್ಲಿ ರೂ. 500 ವರೆಗೆ ಜುಲ್ಮಾನೆಯೊಡನೆ)

| ಬಂದಿಗಳು | | ಅವಧಿ |
|---|---|---|
| 6 | .... | ತಲಾ 7 ವರ್ಷ ಕಠಿನ ಸಜಾ |
| 62 | .... | ತಲಾ 5 ವರ್ಷ ಕಠಿನ ಸಜಾ |
| 14 | .... | ತಲಾ 4 ವರ್ಷ ಕಠಿನ ಸಜಾ |
| 2 | .... | ತಲಾ 3 ವರ್ಷ ಕಠಿನ ಸಜಾ |

ಮೈಸೂರಿನ ಅಂಕಿಗಳು ದುರ್ಲಭವಾದದ್ದರಿಂದ ಇಲ್ಲಿ ಸೇರಿಲ್ಲ.

## 8 ಸಾಮೂಹಿಕ ದಂಡ

| ಜಿಲ್ಲೆ | | ಗ್ರಾಮ | ದಂಡದ ಮೊತ್ತ |
|---|---|---|---|
| | | | ರೂ. |
| ಬೆಳಗಾವಿ | .... | 8 | 1,78,000 |
| ವಿಜಾಪುರ | .... | 1 | 2,000 |
| ಧಾರವಾಡ | .... | 18 | 53,000 |
| ಉತ್ತರ ಕನ್ನಡ | .... | 19 | 30,000 |
| ಮೈಸೂರು ಸಂಸ್ಥಾನ | .... | 4 | 2,000 |
| ಒಟ್ಟು | .... | 50 | 2,65,000 |

## 9 ಸಾಮೂಹಿಕ ದಂಡ ಕೊಡದೆ ಇದ್ದುದಕ್ಕಾಗಿ ಜಪ್ತಿ

| ಜಿಲ್ಲೆ | | ಸ್ಥಳ |
|---|---|---|
| ಬೆಳಗಾವಿ | .... | ಪಚ್ಚಾಪುರ, ಬೈಲಹೊಂಗಲ, |
| ಉತ್ತರ ಕನ್ನಡ | .... | ಹೊಸಮನಿ, ಕಣಗಿಲೆ, ಬೋಳೆ, ಸಗಡಗೇರಿ, ಹಡವ, ಗೋಕರ್ಣ. |

## 10 ರೈಲ್ವೆ ನಿಲ್ದಾಣಗಳ ಮೇಲೆ ದಾಳಿ

**ಬ್ರಿಟಿಷ್ ಕರ್ನಾಟಕ**

(1) ಸೂಳದಾಳ, (2) ತವರಗಟ್ಟಿ, (3) ಗುಂಜಿ, (4) ರಾಯಭಾಗ, (5) ದೇಸೂರು, (6) ಸೂಳೆಭಾವಿ, (7) ಜುಮನಾಳ, (8) ಮಿಂಚಿನಾಳ, (9) ಅಮರಗೋಳ, (10) ಕುಸುಗಲ್, (11) ಹೆಬಸೂರು, (12) ಬ್ಯಾಡಗಿ, (13) ಹುಲುಕೋಟಿ, (14) ಸವಣೂರು, (15) ಹೊಳೆ-ಆಲೂರು ಮತ್ತು (16) ನಿಂಬಾಳ.

**ಮೈಸೂರು ಸಂಸ್ಥಾನ**

(1) ದಾವಣಗೆರೆ, (2) ತಿಪಟೂರು, (3) ಮಾಯಕೊಂಡ, (4) ಬಾಣಾವರ, (5) ಬಾಣಸಂದ್ರ, (6) ಕೊಡಗನೂರು, (7) ಹೊಳಲ್ಕೆರೆ, (8) ಚಿಕ್ಕಜಾಜೂರು ಮತ್ತು (9) ಹೊಸದುರ್ಗ.

## 11 ರೈಲು ಬಂಡಿಯು ಕಂಬಿ ತಪ್ಪಿಸಿದ್ದು

| | | ಕಂಬಿ ತಪ್ಪಿದ ಸಂದರ್ಭ | ಹಳಿಗಳ ಎತ್ತುಗಡೆ | ಆಸ್ತಿ ನಷ್ಟ |
|---|---|---|---|---|
| ಬ್ರಿಟಿಷ್ ಕರ್ನಾಟಕ | .... | 8 | 5 ಕಡೆಗಳಲ್ಲಿ | 3 ಕಡೆಗಳಲ್ಲಿ |
| ಮೈಸೂರು ಸಂಸ್ಥಾನ | .... | 3 | 8 ಕಡೆಗಳಲ್ಲಿ | 10 ಕಡೆಗಳಲ್ಲಿ |
| ಒಟ್ಟು | .... | 11 | 13 | 13 |

ಬ್ರಿಟಿಷ್ ಕರ್ನಾಟಕ ಪ್ರದೇಶದಲ್ಲಿ ತಪ್ಪುತಿಳಿವಳಿಕೆಯಿಂದ ಪ್ರಯಾಣಿಕರ ರೈಲ್ವೆ ಬಂಡಿಯೊಂದು ಕಂಬಿತಪ್ಪಿತು. ಆದರೆ ಯಾರಿಗೂ ಅಪಾಯವಾಗಲಿಲ್ಲ. ಚಳವಳಿಯ ಕಾಲದಲ್ಲಿ ಯಾವಾಗಲೂ ಪ್ರಯಾಣಿಕರ ಬಂಡಿಯನ್ನು ಉದ್ದೇಶದಲ್ಲಿಟ್ಟುಕೊಂಡಿರಲಿಲ್ಲ.

## 12 ಸೇತುವೆಗಳು, ಮೋಹರಿ, ಕಾಲುವೆಗಳ ನಾಶ

ಮೈಸೂರು ಸಂಸ್ಥಾನದಲ್ಲೂ ಸೇರಿ ಸುಮಾರು 25 ಮುಖ್ಯ ಪ್ರಕರಣಗಳಲ್ಲಿ ಮೊಹರಿ ಕಾಲುವೆಗಳ ಕಟ್ಟಡಗಳೂ ಸೇತುವೆಗಳೂ ನಾಶಮಾಡಲ್ಪಟ್ಟುವು ಇಲ್ಲವೆ ಅವಕ್ಕೆ ಜಖಂ ಆಯಿತು.

## 13 ಟೆಲಿಗ್ರಾಫ್ ತಂತಿಗಳ ಕತ್ತರಿಕೆ

| ಜಿಲ್ಲೆ | | ಪ್ರಕರಣಗಳು |
|---|---|---|
| ಬೆಳಗಾವಿ | .... | 56 |
| ವಿಜಾಪುರ | .. | 7 |
| ಧಾರವಾಡ | .... | 39 |
| ಉತ್ತರ ಕನ್ನಡ | .... | 18 |
| ಬಳ್ಳಾರಿ | .... | 13 |
| ಮೈಸೂರು ಸಂಸ್ಥಾನ | .... | 35 |
| ಕೊಡಗು | .... | ಗೊತ್ತಿಲ್ಲ |
| | ಒಟ್ಟು | 168 |

## 14 ಅಂಚೆ ಕಚೇರಿಗಳನ್ನು ಹಾಳುಮಾಡಿದ್ದು

ಬೆಳಗಾವಿ ಜಿಲ್ಲೆಯಲ್ಲಿ—ನಿಪ್ಪಾಣಿ, ನಂದಗಡ, ಬೈಲಹೊಂಗಲ, ಸವದತ್ತಿ. ಗಣಪತಿಗಲ್ಲಿ (ಬೆಳಗಾವಿ ನಗರದಲ್ಲಿ), ಮತ್ತು ಇತರ 12 ಅಂಚೆ ಕಚೇರಿಗಳು.

ಧಾರವಾಡ ಜಿಲ್ಲೆಯಲ್ಲಿ—9 ಅಂಚೆ ಕಚೇರಿಗಳು.

ಮೈಸೂರು ಸಂಸ್ಥಾನದಲ್ಲಿ—ಬೆಂಗಳೂರು ಸಿಟಿಯ ಮುಖ್ಯ ಕಾರ್ಯಾಲಯ ಮತ್ತು ನಗರದ 3 ಇತರ ಶಾಖಾ ಕಾರ್ಯಾಲಯಗಳು.

ಬೆಳಗಾವಿಯ ಮುಖ್ಯ ಕಾರ್ಯಾಲಯ ಮತ್ತು ಗೋಕಾಕ, ಹುಬ್ಬಳ್ಳಿ, ಬ್ಯಾಡಗಿ, ಸಿರಸಿ ಮತ್ತು ಸಿದ್ದಾಪುರಗಳಲ್ಲಿಯ ಅಂಚೆ ಪೆಟ್ಟಿಗೆಗಳನ್ನು ಮುರಿದು ಕಾಗದ ಪತ್ರಗಳ ದಹನ ಮಾಡಲಾಯಿತು.

## 15 ಅಂಚೆ ಬಂಡಿಗಳ ದಾಳಿ ಮತ್ತು ಅಂಚೆ ಚೀಲಗಳನ್ನು ಕಸಿದದ್ದು ಮತ್ತು ಪೆಟ್ಟಿಗೆಗಳನ್ನು ಧ್ವಂಸಮಾಡಿದ್ದು.

| ಜಿಲ್ಲೆ | | ಬಂಡಿಗಳ ಮೇಲೆ ದಾಳಿ | ಚೀಲಗಳನ್ನು ಕಸಿದದ್ದು | ಪೆಟ್ಟಿಗೆಗಳನ್ನು ಮುರಿದದ್ದು |
|---|---|---|---|---|
| ಬೆಳಗಾವಿ | .... | 7 | 66 | ... |
| ಧಾರವಾಡ | .... | 5 | 29 | .... |
| ಉತ್ತರ ಕನ್ನಡ | .... | 3 | .... | .... |
| ಬಳ್ಳಾರಿ | .... | 1 | 1 | 24 |
| ಮೈಸೂರು ಸಂಸ್ಥಾನ | ... | .... | .... | 12 |

ವಿ.ಸೂ. :—ಬೆಳಗಾವಿ ಜಿಲ್ಲೆಯಲ್ಲಿ ಈ ಬಗ್ಗೆ ಹೆಚ್ಚಿನ ಚಟುವಟಿಕೆ ನಡೆದದ್ದರಿಂದ 18 ಸಬ್ ಪೋಸ್ಟ್ ಆಫೀಸುಗಳನ್ನು ಮುಚ್ಚಿಬಿಟ್ಟರು. ನಿದರ್ಶನ—ಬೈಲಹೊಂಗಲ ತಾಲೂಕಿನಲ್ಲಿ ಆಗ (ವರದಿಯನ್ನು ಪ್ರಕಟಿಸಿದ ವೇಳೆಯಲ್ಲಿ) ಎಲ್ಲೂ ಅಂಚೆ ಸೌಕರ್ಯವಿಲ್ಲದೆ ಹೋಯಿತು. ತಾಲೂಕಿನ ಮುಖ್ಯ ಕಚೇರಿಯಿಂದಲೇ ಇಡಿಯ ತಾಲೂಕಿನ ಜನಕ್ಕೆ ಅಂಚೆ ಬಟವಾಡೆಯಾಗುತ್ತಿತ್ತು.

## 16 ಗ್ರಾಮಗಳ ದಾಖಲೆಗಳನ್ನು ಕುಲಗೆಡಿಸಿದ್ದು

| ಜಿಲ್ಲೆ | | | ಸಂಖ್ಯೆ |
|---|---|---|---|
| ಬೆಳಗಾವಿ | .... | .... | 134 |
| ಧಾರವಾಡ | ... | .... | 62 |
| ಉತ್ತರ ಕನ್ನಡ | .... | .... | 5 |
| | | ಒಟ್ಟು .... | 201 |

## 17 ತಂಗುಮನೆ ವಿಶ್ರಾಂತಿ ಗೃಹಗಳನ್ನು ದಾಳಿಗೀಡುಮಾಡಿದ್ದು.

| ಜಿಲ್ಲೆ | | | ಮುತ್ತಿಗೆಯ ಸಂಖ್ಯೆ |
|---|---|---|---|
| ಬೆಳಗಾವಿ | .... | .... | 17 |
| ಧಾರವಾಡ | .... | .... | 9 |
| ವಿಜಾಪುರ | .... | .... | 3 |
| ಉತ್ತರ ಕನ್ನಡ | .... | .... | 4 |
| ಬಳ್ಳಾರಿ | .... | .... | 1 |
| | | ಒಟ್ಟು .... | 34 |

## 18 ಸೇಂದಿ ಮತ್ತು ಗಾಂಜಾ ಗಡಂಗುಗಳಿಗೆ ಮುತ್ತಿಗೆ ಹಾಕಿದ್ದು ಮತ್ತು ಸೇಂದಿ ಪಕಾಲಿಗಳನ್ನು ಹರಿದದ್ದು.

| ಜಿಲ್ಲೆ | ಗಡಂಗುಗಳ ಸಂಖ್ಯೆ | ಪಕಾಲಿ ಸಂಖ್ಯೆ |
|---|---|---|
| ಬೆಳಗಾವಿ .... | 33 | 20 |
| ಧಾರವಾಡ .... | 18 | 11 |
| ಮೈಸೂರು ಸಂಸ್ಥಾನ .... | 11 | 8 |
| ಒಟ್ಟು .... | 62 | 39 |

ಮೈಸೂರು ಸಂಸ್ಥಾನದ ನಾಲ್ಕು ಸ್ಥಳಗಳಲ್ಲಿ ಸೇಂದಿ ಗಡಂಗುಗಳಲ್ಲಿ ಸರ್ಪಕಾವಲನ್ನಿಟ್ಟು ವ್ಯಾಪಾರಕ್ಕೆ ತಡೆಯನ್ನುಂಟುಮಾಡಲಾಯಿತು. ಬೆಂಚಿನಾಳ (ಬೆಳಗಾವಿ ಜಿಲ್ಲೆ)ದ ಸುತ್ತ ಮುತ್ತ 250 ಈಚಲ ಮರಗಳನ್ನೂ ಮೈಸೂರು ಸಂಸ್ಥಾನದ ಹಾಸನದ ಸುತ್ತಮುತ್ತ 50 ಈಚಲ ಮರಗಳನ್ನೂ ಕಡಿದೊಗೆಯಲಾಯಿತು.

## 19 ಚಾವಡಿ ಮೊದಲಾದ ಸರಕಾರಿ ಆಸ್ತಿಪಾಸ್ತಿಗಳಿಗೆ ಜಖಂ

| ಜಿಲ್ಲೆ | ಹಗರಣಗಳ ಅಂಕಿ |
|---|---|
| ಬೆಳಗಾವಿ .... .... | 157 |
| ಬಿಜಾಪುರ .... .... | 5 |
| ಧಾರವಾಡ .... .... | 69 |
| ಉತ್ತರ ಕನ್ನಡ .... .... | 17 |
| ಬಳ್ಳಾರಿ .... .... | 3 |
| ಒಟ್ಟು .... | 251 |



## 20 ಭೂಕಂದಾಯದ ಹಣವನ್ನು ದೋಚಿದ್ದು

| ಸ್ಥಳ | | | ಮೊತ್ತ ರೂ. |
|---|---|---|---|
| ದೊಡ್ಡವಾಡ | .... | .... | 1,500 |
| ತೊಳಗಿ | .... | .... | 3,000 |
| ಹೊನ್ನೂರು | .... | .... | 650 |
| ತಿಗಡೊಳ್ಳಿ | .... | .... | 450 |
| ನೆಗಳೂರು | .... | .... | 800 |
| ಇಟಗಿ ಮತ್ತು ಸಾಸಲೂರು | .... | .... | 800 |
| ಹೆಬ್ಬಾಳ | .... | .... | 3,000 |
| | | ಒಟ್ಟು .... | 10,200 |

## 21 ಯುದ್ಧ ಸಾಮಗ್ರಿಯನ್ನು ಧ್ವಂಸಮಾಡಿದ್ದು

1. ಗಂಗಾವತಿ (ಉತ್ತರ ಕನ್ನಡ)—ಯುದ್ಧದ ಸರಬರಾಜಿಗೋಸ್ಕರ ಗಂಗಾವತೀ ನದೀ ಮುಖದಲ್ಲಿ ಜಮಾಯಿಸಿದ್ದ ತೇಗಿನ ಮರವನ್ನು ಸುಡಲಾಯಿತು. ನಷ್ಟದ ಮೌಲ್ಯ ಸುಮಾರು ಒಂದು ಲಕ್ಷ ರೂ.

2. ಹಟ್ಟಿಕೇರಿ (ಉತ್ತರ ಕನ್ನಡ)—ಸಾಗುವಾನಿ ಮಳಿಗೆಗೆ ಬೆಂಕಿಯಿಡಲಾಯಿತು. ಆದ ನಷ್ಟ ಸುಮಾರು 15,000 ರೂ.

3. ಸಿರಸಿ (ಉತ್ತರ ಕನ್ನಡ)—ಸಿರ್ಸಿಯಲ್ಲಿ ದಾಸ್ತಾನು ಮಾಡಿದ್ದ ಸರಕಾರಿ ಸೌದೆ ಮರವನ್ನು ಬೆಂಕಿಯಿಟ್ಟು ಬೂದಿ ಮಾಡಲಾಯಿತು.

4. ಬೆಳಗಾವಿ—ಸೈನ್ಯಕ್ಕೆ ಸೇರಿದ ಎರಡು ಹುಲ್ಲಿನ ಬಣವೆಗಳಿಗೆ ಬೆಂಕಿಯಿಡಲಾಯಿತು. ಆದ ನಷ್ಟ ಸುಮಾರು 20,000 ರೂ.

## 22 ಪೋಲಿಸು ಅಧಿಕಾರಿಗಳಿಂದ ಶಸ್ತ್ರಗಳನ್ನು ಸೆಳೆದದ್ದು

"ಅಂಕೋಲದ ಹೋಂ ಇನ್ಸ್‌ಪೆಕ್ಟರದೂ ಪೋಲಿಸು ಹವಲ್ದಾರನದೂ ಸೇರಿ ಒಟ್ಟು 29 ಪೋಲಿಸ್ ಅಧಿಕಾರಿಗಳ ಮತ್ತು ಪೋಲಿಸು ಪೇದೆಗಳ ಶಸ್ತ್ರಗಳನ್ನು ಸೆಳೆದುಕೊಂಡ ಒಂಬತ್ತು ಮುಖ್ಯ ಹಗರಣಗಳು ನಡೆದವು. ಇವಲ್ಲದೆ ಪೋಲಿಸು ಪಟೇಲರ ವಶದಿಂದ ಕೋವಿಗಳನ್ನು ಕದ್ದೊಯ್ಯಲಾಯಿತು. ಚಾವಡಿಗಳಿಂದ ಕತ್ತಿ ಮತ್ತು ಇತರ ಕೈದುಗಳನ್ನು ಎತ್ತಿಕೊಳ್ಳಲಾಯಿತು."

ಭಾರತ ಸ್ವಾತಂತ್ರ್ಯ ಚಳವಳಿಯಲ್ಲಿ ಕರ್ನಾಟಕದ ಪ್ರಾಂತವನ್ನು ಕುರಿತ ಕತೆ ಇದು. ಇದಕ್ಕೆ

ಸ್ವಾಭಾವಿಕವಾಗಿ ಅಖಿಲ ಭಾರತದಲ್ಲಿ ನಡೆದ ಚಳವಳಿಯೇ ಮಾದರಿಯಾಯಿತಾದರೂ ಕರ್ಣಾಟಕದ ಚಳವಳಿ ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ಸಾಗಿತು. ಹಿಂಸೆಯ ಧ್ಯೇಯ ಚೋದನೆಗಳಿಗೆ ಹೆಚ್ಚು ಬೆಂಬಲ ಸಿಕ್ಕಲಿಲ್ಲ. ಹಿಂದೆ ನಡೆದ ಸ್ವದೇಶೀ ಚಳವಳಿಯಲ್ಲಿ ಇಷ್ಟು ಬಿರುಸು ತೋರಲಿಲ್ಲ; ಹೋಂ ರೂಲು (ಸ್ವರಾಜ್ಯ) ಚಳವಳಿಯಲ್ಲೂ ಹೀಗೆ ಕಾವೇರಿರಲಿಲ್ಲ. ಗಾಂಧಿಯವರು ಸ್ವಾತಂತ್ರ್ಯ ಸಂಗ್ರಾಮರಂಗಕ್ಕಿಳಿಯುವುದಕ್ಕೆ ಮುಂಚೆ ಬಾಲಗಂಗಾಧರ ತಿಲಕರೇ ಜನತೆಯ ಆರಾಧ್ಯ ಮೂರ್ತಿಯಾಗಿದ್ದರು. ಜನರು ಅವರಲ್ಲಿ ನಿಷ್ಠೆಯನ್ನಿಟ್ಟು ಶಿಸ್ತಿನಿಂದ ಹಿಂಬಾಲಿಸಿದರು. 1930ರ ವರೆಗೆ ಗಾಂಧಿಜೀಯವರ ನೇತೃತ್ವದಲ್ಲಿ ಚಳವಳಿ ಮಂದಗತಿಯಲ್ಲಿ ಸಾಗಿದರೂ ಚಲೇ ಜಾವ್ ಚಳವಳಿಯಲ್ಲಿ ಬಿರುಸೇರಿ, ಪಟ್ಟಣಿಗರೊಡನೆ ಗ್ರಾಮಸ್ಥರೂ ತಂಡ ತಂಡವಾಗಿ ಸಡಗರದಿಂದ ಸೇರಿ ವಿಕ್ರಮಿಸಿದರು. ಜನತೆಯೇ ಅಲ್ಲಲ್ಲಿ ನಾಯಕರನ್ನು ಎಬ್ಬಿಸಿ, ಅವರ ಮಾರ್ಗದರ್ಶನಕ್ಕೆ ವಿಧೇಯವಾಗಿ ಚಳವಳಿಯನ್ನು ಬಲಪಡಿಸಿಕೊಂಡಿತು.

ಮೂಲ ಲೇಖಕರು : ಶ್ರೀ ಡಿ.ಪಿ. ಕರಮರ್‌ಕರ್
ಅನುವಾದಕರು : ಶ್ರೀ ಎಸ್. ವೆಂಕಟಾಚಲಪತಿ

# ಅಧ್ಯಾಯ 6

## ಕರ್ನಾಟಕ ಏಕೀಕರಣ

### ಪ್ರಾಸ್ತಾವಿಕ

ಕಳೆದ ನೂರು ವರ್ಷಗಳಿಂದಲೂ ಅಧಿಕವಾದ ಕಾಲಾವಧಿಯಲ್ಲಿ ಭಾರತೀಯ ಜನತೆ ರಾಜಕೀಯ ರಂಗದಲ್ಲಿ ನಡೆಯಿಸಿದ ಹೋರಾಟವನ್ನೂ ತತ್ಪರಿಣಾಮವಾಗಿ ಸಾಧಿಸಿದ ಮಹತ್ಸಾಧನೆಗಳನ್ನೂ ಶಾಂತವಾಗಿ ಪರಿಶೀಲಿಸಿದರೆ ನಮಗೆ ಒಟ್ಟಿನಲ್ಲಿ ಸಮಾಧಾನವೆನಿಸದಿರಲಾರದು. ಏಕೆಂದರೆ ರಾಷ್ಟ್ರೀಯ ದೃಷ್ಟಿಯಿಂದ ಅತಿ ಮಹತ್ತ್ವದುವೆನಿಸಿದ ಎರಡು ಗೊತ್ತುಗುರಿಗಳನ್ನು ಸಾಧಿಸಲಾಯಿತು; ಮಾತ್ರವಲ್ಲ, ಅವುಗಳನ್ನು ಸಾಧಿಸಿದ ರೀತಿಯು ಆ ಸಂಘರ್ಷದಲ್ಲಿ ಭಾಗಿಯಾದವರ ರಾಜನೈತಿಕ ಜಾಣ್ಮೆಗೆ ಹಾಗೂ ಸುಜ್ಞತೆಗೆ ಸಾಕ್ಷಿಯಾಗಿ ನಿಂತಿರುವುದು. ಸ್ವಾತಂತ್ರ್ಯಪೂರ್ವ ಕಾಲಾವಧಿಯಲ್ಲಿ ಜನತೆ ದೇಶದ ಸ್ವಾತಂತ್ರ್ಯಕ್ಕಾಗಿ ಬ್ರಿಟಿಷ್ ಪ್ರಭುತ್ವದೊಡನೆ ಹೋರಾಡಬೇಕಾಗಿ ಬಂದಿತು; ಸ್ವಾತಂತ್ರ್ಯೋತ್ತರ ಕಾಲಾವಧಿಯಲ್ಲಿ, ಭಾಷಾನ್ವಯ ಪ್ರಾಂತರಚನೆಯ ಪ್ರಶ್ನೆಯನ್ನು ಕುರಿತು ತತ್ಕಾಲೀನ ರಾಜ್ಯಗಳಲ್ಲಿ ಹಾಗೂ ಕೇಂದ್ರದಲ್ಲಿ ಅಧಿಕಾರಸ್ಥಾನಗಳಲ್ಲಿರುವ ನಮ್ಮ ನಾಯಕರೊಡನೆಯ ಮತಭೇದಗಳು ಬೆಳೆದುಬಂದು ಒಂದು ಬಗೆಯ ಘರ್ಷಣೆ ಅನಿವಾರ್ಯವಾಯಿತು. ಆದರೆ ದೇವರ ದಯೆಯಿಂದ ಭಾರತೀಯ ಸ್ವಾತಂತ್ರ್ಯವೂ ಭಾಷಾನ್ವಯ ರಾಜ್ಯರಚನೆಯೂ ಒಟ್ಟಿನಲ್ಲಿ ಪರಸ್ಪರ ತಿಳಿವಳಿಕೆಯ ಹಾಗೂ ಹೊಂದಾಣಿಕೆಯ ವಾತಾವರಣದಲ್ಲಿ ಸಾಧ್ಯವಾದುದು ಅಭಿನಂದನೀಯವಾದ ಸಂಗತಿಯೇ ಸರಿ.

### ಸ್ವಾತಂತ್ರ್ಯಪೂರ್ವ ಕಾಲದಲ್ಲಿ ಪ್ರಾಂತಗಳು

ಬ್ರಿಟಿಷರು ತಮ್ಮ ಅನುಕೂಲತೆಗಾಗಿ ರಚಿಸಿದ ಪ್ರಾಂತಗಳಿಗೆ ವೈಚಾರಿಕ ತಳಹದಿಯಿರಲಿಲ್ಲ. ಸಿಕ್ಕಿದ ಹಾಗೆ, ಹೇಗೆ ಬಂತೋ ಹಾಗೆ, ವಿಚಾರಮಾಡದೆ, ಕೃತ್ರಿಮ ರೀತಿಯಲ್ಲಿ, ಪ್ರಜೆಗಳ ಅನುಕೂಲತೆಗಳನ್ನು ಗಮನಿಸದೆ ಅವುಗಳನ್ನು ಏರ್ಪಡಿಸಲಾಗಿತ್ತೆಂಬುದು ಎಲ್ಲರೂ ಒಪ್ಪಿಕೊಂಡ ಮಾತಾಗಿದ್ದಿತು. ಹಾಗೆ ಮಾಡುವಲ್ಲಿ ಭೌಗೋಲಿಕ, ಆರ್ಥಿಕ, ಜನಾಂಗ ಇಲ್ಲವೆ ಭಾಷಾ ವಿಷಯಕ ಯಾವ ತತ್ತ್ವವನ್ನೂ ಅನುಸರಿಸಿದ್ದಿಲ್ಲ. ಬ್ರಿಟಿಷರು ಭಾರತದ ಭೂಭಾಗಗಳನ್ನು ಗೆಲ್ಲುತ್ತ ಹೋದಂತೆ ಹಾಗು ಅಷ್ಟಷ್ಟಾಗಿ ಪ್ರಾಂತಗಳನ್ನು ಗಡಿಗಳನ್ನು ಗೊತ್ತುಪಡಿಸಲಾಗಿತ್ತು.

ಎಷ್ಟೋ ಸಲ, ಅವುಗಳನ್ನು ಅಷ್ಟೊಂದು ಅಸ್ವಾಭಾವಿಕ ಹಾಗೂ ಅನನುಕೂಲ ರೀತಿಯಲ್ಲಿ ನಿರ್ಮಿಸಲು, ಲಷ್ಕರೀ (military) ದೃಷ್ಟಿಯಿಂದ ಹಾಗೂ ಆಯಕಟ್ಟಿನ ಭದ್ರತಾ (strategic) ದೃಷ್ಟಿಯಿಂದ ಕೈಕೊಂಡ ತೀರ್ಮಾನಗಳು ಕಾರಣವಾಗಿದ್ದವು. ಮಾಂಟೆಗ್ಯೂ ಜೆಮ್ಸ್‌ಫೋರ್ಡ್ (ಮಾಂಟ್‌ಫೋರ್ಡ್) ಆಯೋಗದ ವರದಿಕಾರರು ಈ ಮಾತನ್ನು ಸ್ಪಷ್ಟವಾಗಿ ಒಪ್ಪಿದ್ದರೆಂಬುದಕ್ಕೆ ಆ ವರದಿಯಲ್ಲಿಯ ಈ ಕೆಳಗಿನ ಅವತರಣಿಕೆಯು ಸಾಕ್ಷಿಯಾಗಿದೆ: "ಬ್ರಿಟಿಷ್ ಭಾರತದ ಈಗಿನ ನಕ್ಷೆ

ರೂಪಗೊಳ್ಳಲು ತಾತ್ಕಾಲಿಕವಾದ ಲಷ್ಕರೀ (ಎಂದರೆ ಸೈನಿಕ), ರಾಜನೈತಿಕ ಇಲ್ಲವೆ ಆಡಳಿತಕ್ಕೆ ಸಂಬಂಧಿಸಿದ ಘಟನೆಗಳು ಕಾರಣವಾಗಿದ್ದವಲ್ಲದೆ, ಪ್ರತ್ಯಕ್ಷ ಸಾಂಸ್ಕೃತಿಕ ಸಾಮ್ಯಕ್ಕಾಗಲಿ, ಜನತೆಗೆ ಏನು ಬೇಕಾಗಿತ್ತೆಂಬುದಕ್ಕಾಗಲಿ ಗಮನವಿತ್ತಿರಲೇ ಇಲ್ಲ. "

ಬ್ರಿಟಿಷರು ಪ್ರತ್ಯಕ್ಷವಾಗಿ ಗೆದ್ದುಕೊಂಡ ಭಾಗ ದೇಶದ ಐದರಲ್ಲಿ ಮೂರಂಶದಷ್ಟಿದ್ದಿತು—ಅದಕ್ಕೆ 'ಬ್ರಿಟಿಷ್ ಭಾರತ 'ವೆಂದು ಕರೆಯಲಾಯಿತು. ಉಳಿದ ಎರಡಂಶದಷ್ಟು ಭಾಗವು (1936ರಲ್ಲಿ) 562 ಸಂಸ್ಥಾನಗಳುಳ್ಳದ್ದಾಗಿ, ಅದರಲ್ಲಿ ಪ್ರತಿ ಸಂಸ್ಥಾನವೂ ಬ್ರಿಟಿಷ್ ಪ್ರಭುತ್ವ (British Crown) ದೊಡನೆ ವಿಶಿಷ್ಟ ಸಂಬಂಧಗಳನ್ನು ಬೆಳೆಯಿಸಿಕೊಂಡು ಬಂದು, 'ಸಂಸ್ಥಾನಿಕ ಭಾರತ' (Indian India or Princely India) ಎಂದು ಪರಿಗಣಿಸಲ್ಪಟ್ಟಿತು. ಈ ಸಂಸ್ಥಾನಗಳಲ್ಲಿ ಹೆಚ್ಚು ಪಾಲು ಚಿಕ್ಕವಾಗಿದ್ದವು. ಹಲವು ಸಂಸ್ಥಾನಗಳಂತೂ ಕೆಲವು ಚದರ ಮೈಲಿ ವಿಸ್ತಾರವುಳ್ಳವಾಗಿದ್ದು ತಮ್ಮ ಸಂರಕ್ಷಣೆಗಾಗಿ ಬ್ರಿಟಿಷ್ ಪ್ರಭುತ್ವವನ್ನೆ ಅವಲಂಬಿಸಿದ್ದವು. ಬ್ರಿಟಿಷ್ ಪ್ರಭುತ್ವದೊಡನೆ ಒಪ್ಪಂದಗಳನ್ನು ಮಾಡಿಕೊಂಡ ಹಲವು ದೊಡ್ಡ ಸಂಸ್ಥಾನಗಳು ಆಂತರಿಕ ಆಡಳಿತದಲ್ಲಿ ತೋರಿಕೆಗಾದರೂ ಸ್ವಾತಂತ್ರ್ಯವುಳ್ಳವಾಗಿದ್ದವು, ಆದರೆ ಬಾಹ್ಯ ವ್ಯವಹಾರಗಳಲ್ಲಿ ಸಾರ್ವಭೌಮತ್ವವನ್ನೇನೂ ಪಡೆದಿರಲಿಲ್ಲ. ಆಂತರಿಕ ವ್ಯವಹಾರಗಳಲ್ಲಿ ಕೂಡ ಸಾರ್ವಭೌಮ ಸತ್ತೆಯು ಕೈಹಾಕಿದುದು ಎಷ್ಟೋ ಸಲ ಕಂಡುಬರುತ್ತದೆ.

**ಭಾಷಾನ್ವಯ ಪ್ರಾಂತರಚನಾ ಆಂದೋಲನ : ಅದರ ಹುಟ್ಟು, ಬೆಳೆವಣಿಗೆ**

ಭಾಷಾನ್ವಯ ಪ್ರಾಂತರಚನಾ ಆಂದೋಲನದ ಉಗಮವು 19ನೆಯ ಶತಮಾನದ ಕೊನೆಯ ಪಾದದಲ್ಲಾದುದು ಚರಿತ್ರೆಯ ಪರಿಶೀಲನೆಯಿಂದ ಕಂಡುಬರುತ್ತದೆ. 1874ರಲ್ಲಿ ಬಂಗಾಲ ಪ್ರಾಂತದಿಂದ ಸಿಲ್ಹಟ ಜಿಲ್ಲೆಯನ್ನು ಬೇರ್ಪಡಿಸಿ ಆಸಾಮ ಚೀಫ್ ಕಮಿಶನರ ಆಧಿಪತ್ಯಕ್ಕೆ ವರ್ಗಾಯಿಸಿದಾಗ ಅಲ್ಲಿಯ ನಿವಾಸಿಗಳು ಅದಕ್ಕೆ ವಿರುದ್ಧವಾಗಿ ತಮ್ಮ ತೀವ್ರ ನಿಷೇಧವನ್ನು ಪ್ರದರ್ಶಿಸಿದರು. ಆದರೆ ಒರಿಯಾ ಭಾಷಿಕರೇ ಈ ಆಂದೋಲನದ ಪ್ರಥಮ ಪುರಸ್ಕರ್ತರೆಂದು, ಏಕೆಂದರೆ ಅವರು ಅದಕ್ಕೆ ಮೊತ್ತಮೊದಲಾಗಿ ಸಂಘಟಿತ ಸ್ವರೂಪಕೊಟ್ಟರು. 1876ರಲ್ಲಿ ಬಲಸೋರಿನ ರಾಜಾ ಬೈಕುಂಠನಾಥ ದೇ ಅವರು ಹಾಗೂ ಬಿಚಿತ್ರಾನಂದ ಪಟ್ನಾಯಕರು, ಹರಿದು ಹಂಚಿಹೋದ ಒರಿಯಾಭಾಷಿಕ ಪ್ರದೇಶಗಳನ್ನು ಒಟ್ಟುಗೂಡಿಸಿ ಒಂದು ಆಧಿಪತ್ಯಕ್ಕೆ ಒಳಪಡಿಸಬೇಕೆಂದು ಕೇಳಿಕೊಳ್ಳುವ ಮನವಿಯೊಂದನ್ನು ಸರಕಾರಕ್ಕೊಪ್ಪಿಸಿದರು. ಈ ಆಂದೋಲನ ಸಾವಕಾಶವಾಗಿ ಬಲಗೊಳ್ಳುತ್ತ ಸಾಗಿತು ; 1895ರಲ್ಲಿ ಒರಿಸಾ ಕಮಿಶನರಾದ ಶ್ರೀ ಕುಕ್ ಅವರು ಅದಕ್ಕೆ ಬೆಂಬಲವನ್ನಿತ್ತರು. 1896ರಲ್ಲಿ ಬಿಹಾರಿಗಳು ಶ್ರೀ ಮಹೇಶ ನಾರಾಯಣರ ನಾಯಕತ್ವದಲ್ಲಿ ಬಿಹಾರವು ಪ್ರತ್ಯೇಕ ಪ್ರಾಂತವಾಗಬೇಕೆಂಬ ಆಂದೋಲನವನ್ನು ಪ್ರಾರಂಭಿಸಿದರು ; ಇದಕ್ಕೆ ಅವರು ಕೊಟ್ಟ ಕಾರಣವೆಂದರೆ—ಬಂಗಾಲ, ಬಿಹಾರ, ಒರಿಸಾಗಳನ್ನೊಳಗೊಂಡ ಆಗಿನ ಬಂಗಾಲ ಪ್ರೆಸಿಡೆನ್ಸಿಯಲ್ಲಿ ಹಿಂದೀ ಮಾತನಾಡುವ ಬಿಹಾರಿಗಳು ವಿಶಿಷ್ಟ ಗುಂಪಾಗಿರುವರೆಂಬುದಾಗಿತ್ತು. ಈ ನಡುವೆ ಒರಿಸಾದಲ್ಲಿ ಚಳವಳಿ ಪ್ರಬಲವಾಗುತ್ತಿತ್ತು. 1902ರಲ್ಲಿ, ಒರಿಸಾ ಪ್ರದೇಶವನ್ನು ಒಂದು ಆಡಳಿತಕ್ಕೆ ಒಳಪಡಿಸಬೇಕೆಂಬ ಮನವಿಯೊಂದಕ್ಕೆ ನೂರಾರು ಒರಿಯ ಭಾಷಿಕರು ಅಂಕಿತ ಹಾಕಿ, ಆಗಿನ ಗವರ್ನರ್ ಜನರಲ್ಲರಾದ ಲಾರ್ಡ್ ಕರ್ಝನ್ ಅವರಿಗೆ ಸಾದರಪಡಿಸಿದರು. 1903ರಲ್ಲಿ, ಈ ಚಳವಳಿಯನ್ನು ವ್ಯವಸ್ಥಿತವಾಗಿ ಸಾಗಿಸಲು ಉತ್ಕಲ ಐಕ್ಯ ಪರಿಷತ್ (Utkal Union Conference) ಎಂಬ ಸಂಸ್ಥೆಯನ್ನು ಪ್ರಾರಂಭಿಸಲಾಯಿತು.

1905ರಲ್ಲಿ ಕರ್ಝನ್ ದೊರೆಯು ಬಂಗಾಲವನ್ನು ಇಬ್ಭಾಗಿಸಿದನು ; ಈ 'ವಂಗ ಭಂಗ 'ವು

ಭಾರತದ ತುಂಬ ರಾಷ್ಟ್ರೀಯ ಆಂದೋಲನಕ್ಕೆ ಪುಟಕೊಟ್ಟಿತು ಮಾತ್ರವಲ್ಲ, ಭಾಷಾನ್ವಯ ಪ್ರಾಂತರಚನಾ ಆಂದೋಲನವು ರಾಷ್ಟ್ರವ್ಯಾಪೀ ಪ್ರಶ್ನೆಯಾಗುವಂತೆ ಮಾಡಿತು. ಈ ವಿಭಜನೆಯನ್ನು ಕೈಗೊಳ್ಳುವಲ್ಲಿ ಬಹುಶಃ ಕರ್ಝನ್ ದೊರೆಗಳು ಎರಡು ಉದ್ದೇಶಗಳನ್ನಿರಿಸಿಕೊಂಡಿದ್ದರು : ಬಂಗಾಲದಲ್ಲಿಯ ಕ್ರಾಂತಿಕಾರೀ ಶಕ್ತಿಗಳನ್ನು ವಿಚ್ಛಿದ್ರಗೊಳಿಸುವುದು ಹಾಗೂ ಮುಸ್ಲಿಂ ಬಹುಸಂಖ್ಯಾಕ ಪ್ರಾಂತವೊಂದನ್ನು ರಚಿಸುವುದು. ವಂಗವಿಭಜನೆಯನ್ನು ರದ್ದುಗೊಳಿಸಬೇಕೆಂಬ ಆಂದೋಲನಕ್ಕೆ ಭಾರತದ ಮೂಲೆಮೂಲೆಯಿಂದಲೂ ಸ್ವಯಂಸ್ಫೂರ್ತಿಯಿಂದ ಪ್ರಚಂಡ ಬೆಂಬಲ ದೊರಕಿತು. ಈ ಚಳವಳಿ ಎಂತಹ ವಿರಾಡ್ರೂಪ ಧರಿಸಿತೆಂದರೆ, 1912ರಲ್ಲಿ ವಿಭಜನೆಯನ್ನು ರದ್ದುಪಡಿಸಲೇ ಬೇಕಾಯಿತು. ಈ ರದ್ದುಪಡಿಸುವಿಕೆಯನ್ನು ಪ್ರಸ್ತಾಪಿಸುವ 1911ರ ಪ್ರಸಿದ್ಧ ಹಾರ್ಡಿಂಜ್ ನಿರೂಪವು (Hardinge Dispatch) ಈ ಕೆಳಗಿನ ಮಾತುಗಳನ್ನು ಹೇಳಿದೆ :—" ಬಂಗಾಲ ಪ್ರಾಂತದಲ್ಲಿ ಈಗ ಸಮಾವಿಷ್ಟರಾಗಿರುವ ಹಿಂದೀ ಭಾಷಿಕರಿಗೆ ಪ್ರತ್ಯೇಕ ಆಡಳಿತವನ್ನು ಕೊಡುವುದು ಅತ್ಯಂತ ಇಷ್ಟವಾದುದು. ಇದುವರೆಗೆ ಈ ಜನರು ಬಂಗಾಲಿಗಳೊಡನೆ ವಿಷಮರೀತಿಯಲ್ಲಿ ಒಂದೇ ಆಡಳಿತದ ನೊಗಕ್ಕೆ ಹೂಡಲ್ಪಟ್ಟಿದ್ದಾರೆ ; ಇದರಿಂದಾಗಿ ಅವರ ವಿಕಾಸಕ್ಕೆ ಯೋಗ್ಯ ಸಂಧಿಯೆಂದೂ ದೊರೆತಿಲ್ಲ. " ಇದರ ಪರಿಣಾಮವಾಗಿ ಬಿಹಾರ ಹಾಗೂ ಒರಿಸಾ ಎಂಬ ಪ್ರಾಂತಗಳನ್ನು ನಿರ್ಮಿಸಲಾಯಿತು. ಒರಿಯಾ ಭಾಷಿಕರ:ಪ್ರತ್ಯೇಕ ಪ್ರಾಂತದ ಬೇಡಿಕೆಯು ನ್ಯಾಯಸಮ್ಮತವಾದುದೆಂದು ಹಾರ್ಡಿಂಜ್ ನಿರೂಪ ಒಪ್ಪಿಕೊಂಡರೂ, ಭಾರತದ ಇತರ ಭಾಗಗಳಿಗೆ ಅದರ ಶಿಫಾರಸು ಮಾಡಲಿಲ್ಲ. ಇದರಿಂದ ಭಾರತದ ತುಂಬಾ ಭಾಷಾವಿಷಯಕ ಆಕಾಂಕ್ಷೆಗಳು ಹಾಗೂ ಆಂದೋಲನ ಜಾಗೃತವಾಗಿರುವಂತೆ ಉದ್ದೀಪನವೇ ದೊರೆತಂತಾಯಿತು.

1903ರಷ್ಟು ಹಿಂದೆ, ಭಾರತದ ಗವರ್ನರ್ ಜನರಲ್ಲರ ಗೃಹಖಾತೆಯಲ್ಲಿ ಕಾರ್ಯದರ್ಶಿಗಳಾಗಿದ್ದ ಶ್ರೀ ಎಚ್.ಎಲ್. ರಿಸ್ಲೆಯವರು ಬಂಗಾಲ ಸರಕಾರಕ್ಕೆ ಬರೆದ ಪತ್ರವೊಂದರಲ್ಲಿ ಇಂತು ಕಾಣಿಸಿದ್ದಾರೆ :— " ಪ್ರಾದೇಶಿಕ ಪುನರ್ವಿಭಜನೆಯ ನಿಜವಾದ ಒರೆ ಜನಾಂಗ ವಿಚಾರದಲ್ಲಿರದೆ, ಭಾಷಾವಿಷಯವನ್ನು ಮುಖ್ಯವಾಗಿರಿಸಿಕೊಳ್ಳುವುದರಲ್ಲಿದೆ. "

1898ರಲ್ಲಿ 'ಆಡಳಿತದ ವಿಕೇಂದ್ರೀಕರಣ' ವನ್ನು ಕುರಿತು ನಿಯಮಿಸಿದ ರಾಯಲ್ ಕಮಿಶನ್ನಿನೆದುರಿನಲ್ಲಿ ಲೋಕಮಾನ್ಯ ತಿಳಕರು ಸಾಕ್ಷ್ಯವೀಯುತ್ತ " ಭಾಷಿಕ ಹಾಗೂ ವಾಂಶಿಕ ಸಂಬಂಧಗಳನ್ನು ಆಧರಿಸಿ ಪ್ರಾಂತಗಳನ್ನು ಪುನಾರಚಿಸಬೇಕು, ಹಾಗೂ ಕೇಂದ್ರೀಯ ಪ್ರಭುತ್ವದ ಕೆಳಗೆ ಅವುಗಳ ಸಂಯುಕ್ತ ರಾಜ್ಯ ಘಟನೆಯನ್ನು ರೂಪಿಸಬೇಕು " ಎಂಬುದಾಗಿ ಪ್ರತಿಪಾದಿಸಿದುದು ಅರ್ಥವತ್ತಾಗಿಯೆ ಇದೆ.

ಶ್ರೀ ಲಿಯೊನೆಲ್ ಕರ್ಟಿಸ್ ಅವರು ಭಾರತದಲ್ಲಿಯ ದ್ವಿದಲ ರಾಜ್ಯ ಪದ್ಧತಿಯ ಜನಕರು ಹಾಗೂ ರಾಜ್ಯಘಟನಾವಿಷಯಗಳ ಆಳ ವ್ಯಾಸಂಗಿಗಳು. ಇವರು ಭಾಷಾನ್ವಯ ಪ್ರಾಂತರಚನಾ ವಿಚಾರಕ್ಕಿತ್ತ ತರ್ಕಬದ್ಧ ಹಾಗೂ ಕಳಕಳಿಯ ಪುರಸ್ಕಾರವನ್ನಿನ್ನು ಪರಿಶೀಲಿಸುವ. ಆಗ ಅಸ್ತಿತ್ವದಲ್ಲಿದ್ದ ಪ್ರಾಂತಗಳನ್ನು ಕುರಿತು ಅವರು ಪ್ರಕಟಿಸಿದ ಅಭಿಪ್ರಾಯಗಳು ಅಸಂದಿಗ್ಧವೂ ನೇರವೂ ಆಗಿವೆ : " ಬಹುಶಃ ಅವೆಲ್ಲವೂ ಇಂಗ್ಲೆಂಡಿನಲ್ಲಿ ಮುಖ್ಯ ಕಾರ್ಯಕೇಂದ್ರವಿರುವ, ಪಿತೃಸಮಾನ ನಿರಂಕುಶಾಧಿಕಾರವುಳ್ಳ ಅತಿಕೇಂದ್ರಿತ ಆಧಿಪತ್ಯವು ನಿರ್ಮಿಸಿದ ಆಡಳಿತ ವ್ಯವಸ್ಥೆಗಳಾಗಿವೆ. ವಿಶಾಲಕ್ಷೇತ್ರವುಳ್ಳ ಪೌರಸ್ತ್ಯ ಆಶ್ರಿತ ರಾಜ್ಯವೊಂದರ ಪಾಳೆಯಗಾರಿಕೆಯ ಪ್ರಾಂತಗಳಂತೆ ಅವುಗಳನ್ನು ರಚಿಸಲಾಗಿದೆ." ಪ್ರಾಂತಗಳ ಪುನರ್ವಿಭಜನೆಯ ಸೂತ್ರವೇನಿರಬೇಕೆಂಬುದನ್ನು ಅವರು ಈ ರೀತಿ ವಿವರಿಸುತ್ತಾರೆ :—" ಸಾಧ್ಯವಿದ್ದಲ್ಲಿ, ಸಿಂಧದಂತಹ ಚರಿತ್ರ ಪ್ರಸಿದ್ಧ ಪ್ರದೇಶಗಳನ್ನು ತೆಗೆದುಕೊಳ್ಳಬೇಕು. ಆದರೆ ಭಾಷೆ, ಜನಾಂಗ, ಮತಗಳ ಐಕ್ಯವೂ ಮಹತ್ತ್ವದ ಅಂಶವಾಗಿದೆ ; ಇವೆಲ್ಲವುಗಳಲ್ಲಿ ಭಾಷಾವಿಷಯಕ ಏಕಪಾತ್ರತೆಯು ಅತ್ಯಂತ ಮಹತ್ತ್ವವುಳ್ಳದ್ದು." ಅವರು

ಭಾವಪೂರಿತವಾಗಿ ಪ್ರತಿಪಾದಿಸುವುದೇನೆಂದರೆ, "ಬ್ರಿಟಿಷ್ ರಾಷ್ಟ್ರ ಕೂಟಕ್ಕೆ ಒಳಪಡುವಂತೆ 'ಭಾರತದ ಸಂಯುಕ್ತ ರಾಜ್ಯ ಸಂಘ'ವೊಂದನ್ನು (A United States of India within the British Commonwealth) ನಾವು ಅಸ್ತಿತ್ವದಲ್ಲಿ ತರುವುದಿದ್ದರೆ, ಸಿಂಧಿಗಳಿಗೆ, ಕನ್ನಡ ಭಾಷಿಕ ಜನತೆಗೆ, ಒರಿಯಾ ಭಾಷಿಕರಿಗೆ ಹಾಗೂ ಇತರರಿಗೆ ಮಾಡಿದ ಅನ್ಯಾಯಗಳನ್ನು ಸರಿಪಡಿಸಲೇ ಬೇಕಾಗುವುದು. ಆಗಿನ ಆಡಳಿತದ ಘಟಕಗಳು, ಅವರ ದೃಷ್ಟಿಯಲ್ಲಿ, ಕಾಲಪ್ರವೃತ್ತಿಗೆ ವಿರೋಧಕವಾದ ಪದ್ಧತಿಗಳಾಗಿದ್ದವು. ಜವಾಬ್ದಾರಿ ಆಡಳಿತವನ್ನು ಜಾರಿಯಲ್ಲಿ ತರಬೇಕೆಂಬುದೇನೋ ಇಷ್ಟವಿಚಾರವೆ; ಆದರೆ ಜವಾಬ್ದಾರಿ ಆಡಳಿತದ ಪದ್ಧತಿಗೇ ಮಾರಕವಾದ ತತ್ತ್ವಗಳ ಮೇಲೆ ಆಧರಿಸಿದ ಘಟಕಗಳು ತಳಹದಿಯಾಗಿರುವ ವ್ಯವಸ್ಥೆ ಹೇಗೆ ಆ ಉದ್ದೇಶಕ್ಕೆ ಸಾಧಕವಾದೀತು? ಮುಳ್ಳುಗಳ ಮೇಲೆ ಅಂಜೂರಿ ಹಣ್ಣುಗಳ, ಇಲ್ಲವೆ ಗೊಳಗೊಳಿಕೆಯು ಕಂಟೆಗಳ ಮೇಲೆ ದ್ರಾಕ್ಷಿಗಳ ಕಸಿ ಕಟ್ಟುವ ಸಾಹಸವನ್ನೆಸಗಿದಂತೆಯೆ ಇದು."

ಮಾಂಟ್ ಫೋರ್ಡ್ ವರದಿ ಕೂಡ (1918) ಭಾರತಕ್ಕೆ ಸಂಯುಕ್ತ ರಾಜ್ಯಾಂಗ ಪದ್ಧತಿಯು ಯೋಗ್ಯವೆಂಬುದರ ಪೂರ್ವ ಸೂಚನೆಯನ್ನು ಸ್ಪಷ್ಟವಾಗಿತ್ತಿತು. ಶುದ್ಧ ಸ್ಥಳೀಯ ಇಲ್ಲವೆ ಪ್ರಾಂತೀಯ ಹಿತಾಸಕ್ತಿಗಳಿಗೆ ಸಂಬಂಧಿಸಿದ ವಿಷಯಗಳಲ್ಲೆಲ್ಲ ಸ್ವಯಂ ಶಾಸನಾಧಿಕಾರವುಳ್ಳ ರಾಜ್ಯಗಳು ಅಕ್ಕ ತಂಗಿಯರ ಬಳಗವದಾಗಿರಬೇಕು; ಕೆಲವೆಡೆ ಈಗಿನ ಪ್ರಾಂತಗಳೇ ಇರಬಹುದು, ಬೇರೆ ಕಡೆ ಅಲ್ಲಲ್ಲಿಯ ಜನತೆಯ ಭಾವನಾತ್ಮಕ ಆರ್ಥಿಕ ಹಿತಾಸಕ್ತಿಗಳಿಗನುಗುಣವಾಗಿ ಪ್ರಾದೇಶಿಕ ಕ್ಷೇತ್ರ ಬದಲಾವಣೆಗಳನ್ನೊಳಗೊಂಡ ಹೊಸ ರಾಜ್ಯಗಳು ಬರಬಹುದು" ಆಗ ಅಸ್ತಿತ್ವದಲ್ಲಿದ್ದ ಪ್ರಾಂತಗಳನ್ನು ನಿರ್ಮಿಸಿದ ರೀತಿಗಳನ್ನು ನೋಡಿದರೆ, "ಸ್ವಾಭಾವಿಕ ಭಾವನಾತ್ಮಕ ಹಿತ ಸಂಬಂಧಗಳಿಗೆ ಇಲ್ಲವೆ ಜನತೆಯ ಅಪೇಕ್ಷೆಗಳಿಗೆ ಗಮನವನ್ನು ಕೊಟ್ಟಿಲ್ಲವೆಂತಲೇ ಹೇಳಬಹುದು" ಘಟನಾ ವಿಷಯಕ ಸುಧಾರಣೆಗಳನ್ವಯ ಜಾರಿಯಲ್ಲಿ ಬರುವ ಹೊಸ ಪ್ರಾಂತೀಯ ಸರಕಾರಗಳ ಸಮ್ಮತಿಯೊಂದಿಗೆ ಹೊಸ ಪ್ರಾಂತಗಳನ್ನು ನಿರ್ಮಿಸಬೇಕೆಂದು ಮಾಂಟ್‌ಫೋರ್ಡ್ ವರದಿ ಶಿಫಾರಸುಮಾಡಿತು.

1928–29ರಲ್ಲಿ ದೇಶದಲ್ಲಿ ಸಂಚಾರ ಕೈಗೊಂಡ ಸೈಮನ್ ಸಮಿತಿಯು, 'ನಿಷ್ಪಕ್ಷ ಕಾರ್ಯಾಧ್ಯಕ್ಷನಿರುವ ಗಡಿ ಆಯೋಗವೊಂದು ಈ ಪ್ರಶ್ನೆಯನ್ನು ಪರಿಶೀಲಿಸಬೇಕೆಂದು' ಖಂಡಿತ ಶಿಫಾರಸೊಂದನ್ನು ಮಾಡಿತು. ಸೈಮನ್ ಸಮಿತಿ ಸಿಂಧ ಹಾಗೂ ಒರಿಸಾ ಪ್ರಾಂತಗಳನ್ನು ಕುರಿತಾದ ಬೇಡಿಕೆಗಳನ್ನು ವಿಶಿಷ್ಟವಾಗಿ ಬೆಂಬಲಿಸಿತು. 1936ರಲ್ಲಿ ಇವೆರಡೂ ಹೊಸ ಪ್ರಾಂತಗಳಾಗಿ ಉದಯ ಹೊಂದಿದವು.

ಭಾರತೀಯ ರಾಜ್ಯಾಂಗವಿಧಾನವನ್ನು ಕುರಿತು ಶ್ರೀ ವಿಜಯರಾಘವಾಚಾರಿಯರ್, ಶ್ರೀ ಎ. ರಂಗ ಸ್ವಾಮಿ ಅಯ್ಯಂಗಾರ್, ಶ್ರೀ ಎಸ್. ಶ್ರೀನಿವಾಸ ಅಯ್ಯಂಗಾರ್, ಸರ್. ಸಿ.ಪಿ. ರಾಮಸ್ವಾಮಿ ಅಯ್ಯರ್ ಹಾಗೂ ಇತರ ಭಾರತದ ತಜ್ಞರು ಬರೆದ ಹಲವಾರು ವಿದ್ವತ್ಪ್ರಚಾರ ಕೃತಿಗಳೆಲ್ಲವೂ ಸಂಯುಕ್ತ ರಾಜ್ಯಾಂಗ ವ್ಯವಸ್ಥೆಯೆ (the federal type) ಭಾರತಕ್ಕೆ ಯೋಗ್ಯವಾದುದೆಂದು ಒತ್ತಿ ಹೇಳಿವೆಯಲ್ಲದೆ ಭಾಷಾತತ್ತ್ವವನ್ನಾಧರಿಸಿ ಪ್ರಾಂತಗಳ ಗಡಿಗಳನ್ನು ಪುನರ್ನಿರ್ಧರಿಸಬೇಕೆಂಬುದನ್ನು ಒಪ್ಪಿಕೊಂಡಿವೆ.

ಇವೆಲ್ಲವುಗಳಲ್ಲಿ 1928 ರ ಆಗಸ್ಟ್ 15 ರಂದು ಪ್ರಕಟವಾದ 'ನೆಹರು ಸಮಿತಿ' ಯ ವರದಿ ವ್ಯಕ್ತಪಡಿಸಿದ ಅಭಿಪ್ರಾಯವು ಅತ್ಯಂತ ಮಹತ್ವವುಳ್ಳುದು ಹಾಗೂ ಭಾರವತ್ತಾದುದಾಗಿದೆ. 34 ರಾಜಕೀಯ ಸಂಘ-ಸಂಸ್ಥೆಗಳ ಪ್ರತಿನಿಧಿಗಳನ್ನೊಳಗೊಂಡ 'ಸರ್ವಪಕ್ಷೀಯ ಪರಿಷತ್ತು' ನಿಂದ (All Parties Conference) ನೇಮಕ ಗೊಂಡ 9 ಜನರ ಉಪಸಮಿತಿ ಇದಾಗಿದ್ದಿತು. ಪಂಡಿತ ಮೋತಿಲಾಲ ನೆಹರು ಅದರ ಅಧ್ಯಕ್ಷರಾಗಿದ್ದರು; ಸರ್ ತೇಜಬಹಾದೂರ ಸಪ್ರು, ಸರ್ ಅಲಿ ಇಮಾಮ, ಸುಭಾಷ ಚಂದ್ರ ಬೋಸ್, ಎಂ.ಎಸ್. ಅಣೆ, ಎನ್.ಎಂ. ಜೋಶಿ ಹಾಗೂ ಇತರ ಹೆಸರಾಂತ ನಾಯಕರು ಅದರ

ಸದಸ್ಯರಾಗಿದ್ದರು. ಈ ಸಮಿತಿಯು ಸಾದರಪಡಿಸಿದ ವರದಿಯೊಳಗಿನ ಕೆಳಗಿನ ವಿಸ್ತೃತ ಅವತರಣಿಕೆಯನ್ನು ಕೊಡುವುದು ಅತ್ಯುಚಿತವಾಗಿದೆ:—ಭಾರತದಲ್ಲಿಯ ಈಗಿನ ಪ್ರಾಂತಗಳ ವಿಭಜನೆಗೆ ವೈಚಾರಿಕ ತಳಹದಿ ಯೇನೂ ಇಲ್ಲವೆಂಬುದನ್ನು ಪ್ರತಿಯೊಬ್ಬರೂ ಬಲ್ಲರು. ಆಕಸ್ಮಿಕ ಘಟನೆಗಳಿಂದ ಹಾಗೂ ಬ್ರಿಟಿಷ್ ಪ್ರಭುತ್ವ ಭಾರತದಲ್ಲಿ ವಿಸ್ತಾರಗೊಂಡಂತೆ ಉದ್ಭವಿಸಿದ ಪರಿಸ್ಥಿತಿಯಿಂದ ಅದು ರೂಪುಗೊಂಡಿದೆ. ಒಟ್ಟಿನಲ್ಲಿ ಭೌಗೋಲಿಕ, ಐತಿಹಾಸಿಕ, ಆರ್ಥಿಕ ಇಲ್ಲವೆ ಭಾಷಾವಿಷಯಕ ಅಂಶಗಳನ್ನೇನೂ ಅದು ಗಣನೆಗೆ ತೆಗೆದು ಕೊಂಡಿಲ್ಲ. ಶುದ್ಧ ಆಡಳಿತ ವಿಷಯಕ ದೃಷ್ಟಿಯಿಂದ ನೋಡಿದರೂ ಅದು ಯಶಸ್ವಿಯಾಗಿಲ್ಲ. ಆದುದರಿಂದ ಪ್ರಾಂತಗಳನ್ನು ಮರಳಿ ವಿಂಗಡಿಸಬೇಕೆಂಬುದು ನಿರ್ವಿವಾದವಾಗಿದೆ......ಈ ಹೊಸ ವಿಂಗಡಣೆಗೆ ಯಾವ ತತ್ತ್ವವನ್ನು ಅನ್ವಯಿಸಬೇಕು? ಅಂಶತಃ ಭೌಗೋಲಿಕ, ಅಂಶತಃ ಆರ್ಥಿಕ ಹಾಗೂ ಹಣಕಾಸು ವಿಷಯಕ; ಆದರೆ ಮುಖ್ಯವಾಗಿ ವಿಚಾರಕ್ಕೆ ತೆಗೆದುಕೊಳ್ಳಬೇಕಾದ ಅಂಶಗಳೆಂದರೆ, ಜನತೆಯ ಇಚ್ಛೆ ಹಾಗೂ ಆಯಾ ಪ್ರದೇಶದ ಭಾಷಾವಿಷಯಕ ಐಕ್ಯ. ಶೈಕ್ಷಣಿಕ ಹಾಗೂ ಸಾಮಾನ್ಯ ಸಾಂಸ್ಕೃತಿಕ ಕ್ಷೇತ್ರಗಳಲ್ಲಿಯ, ಅದೇ ರೀತಿ ಜನಜೀವನದ ಇತರ ಪ್ರಧಾನಕ್ಷೇತ್ರಗಳಲ್ಲಿಯ ಶೀಘ್ರಪ್ರಗತಿಯು ಭಾಷೆಯನ್ನೆ ಅವಲಂಬಿಸಿದೆ ಯೆಂಬುದು ಸರ್ವಸಾಮಾನ್ಯವಾದ ಸತ್ಯವಾಗಿದೆ. ಪರಕೀಯ ಭಾಷೆಯೊಂದು ಶಿಕ್ಷಣದ, ಉದ್ಯೋಗ–ವ್ಯಾಪಾರಾದಿ ವ್ಯವಹಾರಗಳ ಮಾಧ್ಯಮವಾದರೆ ದೇಶದ ಜೀವನವು ಅವಿಕಸಿತ ಹಾಗೂ ಕುಂಠಿತವಾಗಿಯೇ ತೀರುವುದು. ಈ ಉದ್ದೇಶಗಳಿಗಾಗಿ ಪರಕೀಯ ಭಾಷೆಯೊಂದನ್ನವಲಂಬಿಸಬೇಕಾಗಿ ಬಂದರೆ ಪ್ರಜಾ ಪ್ರಭುತ್ವವು ಊರ್ಜಿತಸ್ಥಿತಿಯಲ್ಲಿರಲಾರದು......ಯಾವುದೊಂದು ಪ್ರಾಂತವು ತನ್ನನ್ನು ಸುಶಿಕ್ಷಿತವನ್ನಾಗಿ ಮಾಡಿಕೊಂಡು, ತನ್ನ ಭಾಷೆಯ ಮಾಧ್ಯಮದಿಂದಲೆ ತನ್ನ ದೈನಂದಿನ ವ್ಯವಹಾರಗಳನ್ನು ಸಾಗಿಸಬೇಕಾದಲ್ಲಿ ಅದೊಂದು ಸುಸಂಬದ್ಧ 'ಭಾಷಾಪ್ರದೇಶ'ವೇ ಆಗಿರಬೇಕು.......ಆದುದರಿಂದ ಪ್ರಾಂತಗಳನ್ನು ಭಾಷಾ ತಳಹದಿಯ ಮೇಲೆಯೆ ಪುನಾರಚಿಸಬೇಕೆಂಬುದು ಅತ್ಯಂತ ಅಪೇಕ್ಷಣೀಯವಾದುದು. ಸರ್ವಸಾಮಾನ್ಯ ನಿಯಮವನ್ನು ಹೇಳಬೇಕಾದಲ್ಲಿ, ಭಾಷೆಯು ಆಯಾ ಪ್ರದೇಶದ ಸಂಸ್ಕೃತಿಯ, ಪರಂಪರೆಗಳ, ಸಾಹಿತ್ಯದ ವಿಶಿಷ್ಟರೂಪಕ್ಕೆ ಅನುಗುಣವಾಗಿ ಹೊಂದಿಕೊಂಡಿರುತ್ತದೆ......ಎಂಟು ವರ್ಷಗಳ ಹಿಂದೆ ರಾಷ್ಟ್ರೀಯ ಕಾಂಗ್ರೆಸ್ಸು ಈ ಭಾಷಾತತ್ತ್ವವನ್ನು ಮನ್ನಿಸಿತು; ಅಂದಿನಿಂದ ಕಾಂಗ್ರೆಸ್ ಯಂತ್ರಣೆಯನ್ನು ಕುರಿತು ಹೇಳುವುದಾದಲ್ಲಿ, ಭಾರತವನ್ನು ಭಾಷಾನ್ವಯ ಪ್ರಾಂತಗಳನ್ನಾಗಿ ವಿಭಜಿಸಿಬಿಡಲಾಗಿದೆ."

ಭಾಷಾತತ್ವಕ್ಕೆ ವ್ಯಾವಹಾರಿಕ ರೂಪ ಎಂತು ಕೊಡಬೇಕೆಂಬುದನ್ನು ವಿವರಿಸುತ್ತ ಈ ವರದಿ ಇಂತೆನ್ನುತ್ತದೆ:—"ಪ್ರಾಂತಗಳ ಪುನರ್ವಿಭಜನೆಗೆ ಆಧಾರಭೂತವಾದ ಇನ್ನೊಂದು ತತ್ತ್ವವೆಂದರೆ, ಸಂಬಂಧಪಟ್ಟ ಜನತೆಯ ಆಶೋತ್ತರಗಳನ್ನು ಗಣನೆಗೆ ತಂದುಕೊಳ್ಳುವುದು. ದೊಡ್ಡ ಪ್ರಮಾಣದಲ್ಲಿ, 'ಸ್ವಯಂ—ನಿರ್ಣಯ'ದ ಮಾತುಗಳನ್ನಾಡುವ ನಾವು ಅದೇ ಕಾರಣಕ್ಕಾಗಿ ಚಿಕ್ಕ ಪ್ರದೇಶಕ್ಕೂ ಅದನ್ನು ಅನ್ವಯಿಸದಿರಬಾರದು; ಆದರೆ ಅದು ಬೇರಾವ ತತ್ತ್ವಕ್ಕೆ ಇಲ್ಲವೆ ಮಹತ್ವ ಪ್ರಶ್ನೆಗೆ ವಿರೋಧಕವಾಗಿರ ಬಾರದೆಂಬುದನ್ನು ಮಾತ್ರ ನೋಡಿಕೊಳ್ಳಬೇಕು......ಅಂತೂ ಪ್ರಾಂತಗಳನ್ನು ಮರಳಿ ರಚಿಸುವಾಗ ಗಮನಿಸ ಬೇಕಾದ ಎರಡು ಮುಖ್ಯ ಅಂಶಗಳೆಂದರೆ, ಭಾಷಾತತ್ತ್ವ ಹಾಗೂ ಆಯಾ ಪ್ರದೇಶದ ಬಹುಸಂಖ್ಯಾತ ಜನತೆಯ ಇಚ್ಛೆಯೆಂಬುದು ನಮ್ಮ ಮಟ್ಟಿಗೆ ಸ್ಪಷ್ಟವಿದೆ. ಅಷ್ಟೇ ಮಹತ್ತ್ವವಿಲ್ಲದಿದ್ದರೂ ವಿಚಾರಣೀಯ ವಾದ ಮೂರನೆಯ ತತ್ತ್ವವೆಂದರೆ, ಆಡಳಿತದ ಅನುಕೂಲತೆ. ಇದರಲ್ಲಿ ಭೌಗೋಳಿಕ ಸ್ಥಿತಿ ಆರ್ಥಿಕ ಸಂಪನ್ಮೂಲಗಳು ಹಾಗೂ ಆಯಾ ಪ್ರದೇಶದ ಸಾಂಪತ್ತಿಕ ಭದ್ರತೆ ಇವೆಲ್ಲ ಒಳಪಡುತ್ತವೆ."

ಕರ್ನಾಟಕ ಏಕೀಕರಣ ಸಂಘದ ಹಾಗೂ ಕಾಂಗ್ರೆಸ್ಸಿನ ಪರವಾಗಿ ಕರ್ನಾಟಕದ ಪಕ್ಷಮಂಡನೆಯನ್ನು ಶ್ರೀ ರಂಗನಾಥ ದಿವಾಕರರವರು ಮಾಡಿದ ರೀತಿಯನ್ನು ಈ ವರದಿ ವಿಶಿಷ್ಟವಾಗಿ ಪ್ರಶಂಸಿಸಿ ಬರೆದಿದೆ. ಆಗ ಬ್ರಿಟಿಷ್ ಆಧಿಪತ್ಯಕ್ಕೆ ಸೇರಿದ ಕನ್ನಡ ವಿಭಾಗಗಳನ್ನು ಮಾತ್ರ ಏಕೀಕರಿಸಿ 'ಬ್ರಿಟಿಷ್ ಕರ್ನಾಟಕ' ಪ್ರಾಂತ

ರಚನೆಯನ್ನು ಮಾತ್ರ ಮಾಡುವುದು ಕನ್ನಡಿಗರ ಆಗಿನ ಬೇಡಿಕೆಯಾಗಿದ್ದಿತೇನೋ ನಿಜ ; ಆದರೆ ಪ್ರಾಂತ ರಚನೆಗೆ ಸಂಬಂಧಿಸಿದ ಆರ್ಥಿಕ ಹಾಗೂ ಇತರ ವಿಚಾರಗಳನ್ನು ಕುರಿತು ಅಂಕೆ–ಅಂಶಗಳನ್ನು ಮಂಡಿಸಿದ ರೀತಿಯನ್ನು ಸಮಿತಿಯು ವಿಶೇಷವಾಗಿ ಮೆಚ್ಚಿಕೊಂಡಿತು. ಈ ಬಗೆಗೆ ವರದಿಯೆನ್ನುವುದೇನೆಂದರೆ— " ಐತಿಹಾಸಿಕ, ಸಾಂಸ್ಕೃತಿಕ, ಲೆಕ್ಕಪತ್ರ ವಿಷಯಕ ಮಾಹಿತಿಗೆ ಸಂಬಂಧಿಸಿದ ವಿಪುಲಾಂಶಗಳನ್ನು ಸಮರ್ಥವಾಗಿ ಉಪಯೋಗಿಸಿಕೊಂಡು ಮಂಡನೆಯನ್ನು ಮಾಡಲಾಗಿದೆ. ನಮ್ಮೆಲ್ಲ ಪ್ರಶ್ನೆಗಳಿಗೂ ತೃಪ್ತಿಕರವಾಗಿ ಉತ್ತರ ಗಳನ್ನು ಕೊಡಲಾಯಿತು ; ನಮ್ಮ ಅಭಿಪ್ರಾಯದಲ್ಲಿ ಕರ್ನಾಟಕ (ಬ್ರಿಟಿಷ್ ಕರ್ನಾಟಕ)ವನ್ನು ಪ್ರತ್ಯೇಕ ಪ್ರಾಂತವಾಗಿ ನಿರ್ಮಿಸಬೇಕೆಂಬ ವಿಚಾರಕ್ಕೆ ಸಕೃದ್ದರ್ಶನಕ್ಕೇ ಬಲವಾದ ಆಧಾರಗಳನ್ನು ಒದಗಿಸಲಾಗಿದೆ. "

ಇದೆಲ್ಲದರಿಂದ ವ್ಯಕ್ತವಾಗುವುದೆಂದರೆ, ರಾಜನೈತಿಕ ಹಾಗೂ ಘಟನಾತ್ಮಕ ವಿಷಯಗಳಲ್ಲಿ ಪರಿಣತರಾದ ಆ ಕಾಲದ ಬ್ರಿಟಿಷ್ ಹಾಗೂ ಭಾರತೀಯ ಪರಿಪಕ್ವ ವಿಚಾರವಂತರು ಒಂದು ಮಾತಿನ ಬಗೆಗೆ ಏಕವಾಕ್ಯತೆ ಯುಳ್ಳವರಾಗಿದ್ದರು. ಆದೆಂದರೆ : ಮುಂಬರುವ ಭಾರತೀಯ ಶಾಸನವಿಧಾನವು ಬಲಶಾಲಿ ಕೇಂದ್ರವುಳ್ಳ ಸಂಯುಕ್ತ ರಾಜ್ಯಪದ್ಧತಿಯ ಪ್ರಣಾಲಿಯನ್ನನುಸರಿಸುವುದೆಂಬುದು. ಮತ್ತು ಸಂಯುಕ್ತ ವ್ಯವಸ್ಥೆಗೆ ಒಳಪಟ್ಟ ಘಟಕಗಳು ದಕ್ಷವಾಗಿ ಕಾರ್ಯಮಾಡುವಂತಾಗಬೇಕಾದರೆ, ಅವಶ್ಯವಾದ ಕಡೆಗಳಲ್ಲೆಲ್ಲ ಆಯಾ ಪ್ರದೇಶದ ಭಾಷಾ ಸಂಸ್ಕೃತಿಗಳಿಗೆ ಬಹುಮಟ್ಟಿಗೆ ಪ್ರತಿನಿಧಿ ಸ್ವರೂಪವಾಗಿರುವಂತೆ ಅವನ್ನು ಪುನಃ ವಿಂಗಡಿಸಿ ರಚಿಸಬೇಕೆಂಬುದು.

ಕರ್ನಾಟಕ ರಾಜ್ಯನಿರ್ಮಾಣಕ್ಕೆ ನಾಂದಿರೂಪವಾಗಿ ನವ ಕನ್ನಡಾಭಿಮಾನದ ಚೈತನ್ಯಮಯ ಝುರಿಯೊಂದು ಕನ್ನಡನಾಡಿನಲ್ಲಿ ಉಗಮಿಸಿದುದನ್ನು ಕುರಿತು ದಿವಂಗತ ಪ್ರೊ॥ ಬಿ.ಎಂ. ಶ್ರೀಕಂಠಯ್ಯನವರ ಮನಂಬುಗುವ ಮಾತುಗಳನ್ನು ಕೇಳಿರಿ : " ಹಳೆಯ ಶತಮಾನ ಮುಗಿಯುತ್ತಿರುವಲ್ಲಿ ಮತ್ತು ಹೊಸ ಶತಮಾನದ ಮೊದಲ ಹತ್ತು ವರ್ಷಗಳಲ್ಲಿ ಈ ಎಲ್ಲ (ಸಾಂಸ್ಕೃತಿಕ, ಭಾಷಾವಿಷಯಕ) ಪ್ರಭಾವಗಳೂ ಜನಮಾನಸದ ಮೇಲೆ ಪರಿಣಾಮ ಬೀರಿ, ಜನರ ಹೃದಯದಲ್ಲಿ ಭಾವಮಂಥನ ನಡೆಯುವಂತೆ ಮಾಡಿದವು ; ಕನ್ನಡವನ್ನು ಕುರಿತು ಸದಭಿಮಾನವನ್ನು ಹುಟ್ಟಿಸಿ, ನೆರೆಯ ಮಹಾರಾಷ್ಟ್ರ–ಆಂಧ್ರ–ತಮಿಳ್ನಾಡು–ಕೇರಳ ಗಳಲ್ಲಿಯೂ ತತ್ಸಮ ಭಾವ–ಪ್ರಭಾವಗಳಿಗೆ ಸಮತೂಕವಾಗಿ ಕನ್ನಡನಾಡಿನಲ್ಲಿಯೂ ದೇಶ-ಭಾಷಾವಿಷಯಕ ಪ್ರಜ್ಞೆಯನ್ನು ಉದ್ದೀಪಿಸಿದವು. ನವರಾಷ್ಟ್ರಭಕ್ತಿ, ಸಾಮಾಜಿಕ ಸುಧಾರಣೆಯು–ಆರ್ಥಿಕ ಪ್ರಗತಿಯ ಆದರ್ಶಗಳು, ರಾಜಕೀಯ ವಿಮೋಚನೆಯನ್ನು–ಸ್ವಾತಂತ್ರ್ಯ ಸಾಧನೆಯನ್ನು ಕುರಿತು ಕಾಂಗ್ರೆಸ್ಸು ಹೂಡಿದ ಆಂದೋಲನ, ಸ್ವತಂತ್ರ ಭಾರತದ ರಾಜ್ಯಾವಳಿಯಲ್ಲಿ ಸಾಮರಸ್ಯಪೂರ್ಣ ಘಟಕವಾಗಿ ಮೆರೆಯುವ ಅವಕಾಶವಿರುವ ಪುನರೇಕೀಕೃತ ಕರ್ನಾಟಕ ಪ್ರಾಂತನಿರ್ಮಾಣದ ಕನಸು, ಅಷ್ಟೇ ಏಕೆ–ಅದರ ನಕ್ಷೆಯ ರೂಪರೇಖೆಗಳು,—ಇವೆಲ್ಲ ವಾತಾವರಣದಲ್ಲಿ ಸೇರಿ, ಹೊಸ ಘೋಷಣೆಗಳಿಂದ–ಹೊಸ ಸಾಹಸಗಳಿಂದ ಅದು ದುಮುದುಮಿಸುವಂತೆ ಮಾಡಿದವು. ಕರ್ನಾಟಕ ಜನಾಂಗವು ಮತ್ತೆ ಐಕ್ಯ-ಘನತೆಗಳ ಶಿಖರವನ್ನೇರ ಬೇಕು. ನವಜೀವನ ಕಲೆಯಿಂದ ಪ್ಲಾವಿತವಾದ ಮಾತೃಭಾಷೆಯು ಆಧುನಿಕ ವಿಚಾರಧಾರೆಗಳ-ಹಿತಾಸಕ್ತಿಗಳ ಸಮರ್ಥ ಮಾಧ್ಯಮವಾಗಬೇಕು. ನವದೃಷ್ಟಿಯುಳ್ಳ-ನವಸೃಷ್ಟಿಶಕ್ತಿಯುಳ್ಳ ಪ್ರಗತಿಪರ ಆಧುನಿಕ ಸಾಹಿತ್ಯ ರೂಪವನ್ನು ಪಡೆಯಬೇಕು. ಆ ಸಾಹಿತ್ಯವು ದೂರದ ದಿಗಂತಗಳಿಂದ ಬರುವ ಜಗತ್ತಿನ ಅತ್ಯುತ್ತಮ ಸಂಸ್ಕೃತಿಯ ಹಿತಕರ ವಾಯುಲಹರಿಗಳನ್ನು ಸೇವಿಸುತ್ತ ಸ್ವಯಂ ಪರಿಪುಷ್ಟವಾಗಿ ಬೆಳೆಯಬೇಕು ಎಂಬ ಉದಾತ್ತ ಧ್ಯೇಯದಿಂದ ಪ್ರೇರಿತವಾಗಿ ಹೊಸತೊಂದು ಆಂದೋಲನವು ಕರ್ನಾಟಕದಲ್ಲಿ ಹುಟ್ಟಿ ಕನ್ನಡಿಗರನ್ನು ಹೊಡೆದೆಬ್ಬಿಸಿತು. "

ಧಾರವಾಡದಲ್ಲಿ 1916ರಲ್ಲಿ ' ಕರ್ನಾಟಕ ಸಭಾ ' ಸ್ಥಾಪಿತವಾಗುವ ಹೊತ್ತಿಗೆ, ಮೇಲೆ ಉಲ್ಲೇಖಿಸಿದ ನವಕರ್ನಾಟಕ ಪ್ರಜ್ಞೆಯು ಹಾಗೂ ಅಭಿಮಾನವು ಅಖಂಡ ಕರ್ನಾಟಕದಲ್ಲಿಯ ವಿಚಾರಪರ ಜನರಲ್ಲಿ

ವಿಕಾಸವನ್ನು ಹೊಂದಿದ್ದವು. ಧಾರವಾಡದಲ್ಲಿ 'ಕರ್ನಾಟಕ ಸಭಾ' ಮತ್ತು ಬೆಂಗಳೂರಿನಲ್ಲಿ 'ಕನ್ನಡ ಸಾಹಿತ್ಯ ಪರಿಷತ್ತು' ಸುಮಾರಾಗಿ ಒಂದೇ ಕಾಲಕ್ಕೆ ಸ್ಥಾಪಿತವಾದುದು ಕೇವಲ ಕಾಕತಾಳೀಯ ಘಟನೆಗಳಲ್ಲ. ಈ ಎರಡೂ ಸಂಸ್ಥೆಗಳು ಏಕೀಕೃತ ಕರ್ನಾಟಕಕ್ಕಾಗಿ ಕಟಿಬದ್ಧವಾಗಿದ್ದವು.

'ಕರ್ನಾಟಕ ಸಭಾ' ಮುಖಂಡರು 1920ರಲ್ಲಿ ಮೈಸೂರಿನ ಮಾಜಿ ದಿವಾನರಾದ ಸರ್ ವಿ.ಪಿ ಮಾಧವ ರಾವ್ ಅವರ ಘನ ಅಧ್ಯಕ್ಷತೆಯಲ್ಲಿ ಪ್ರಥಮ ಕರ್ನಾಟಕ ರಾಜಕೀಯ ಪರಿಷತ್ತನ್ನು ಸಂಘಟಿಸಿದರು. ಈ ಮಹಾ ಸಮ್ಮೇಳನಕ್ಕೆ ಕರ್ನಾಟಕದ ಸಕಲ ಭಾಗಗಳಿಂದ ನೂರಾರು ಪ್ರತಿನಿಧಿಗಳು ಬಂದಿದ್ದರು. ಅತ್ಯಂತ ಯಶಸ್ವಿಯಾಗಿ ಜರುಗಿದ ಪರಿಷತ್ತು ಪ್ರತ್ಯೇಕ ಕರ್ನಾಟಕ ಪ್ರಾಂತ ರಚನೆಯಾಗಬೇಕೆಂದು ಒಕ್ಕೊರಲಿನಿಂದ ಘೋಷಿಸಿತು ; ಮತ್ತು ಕನ್ನಡಿಗರು ಬಹುಸಂಖ್ಯೆಯಲ್ಲಿ ನಾಗಪುರದಲ್ಲಿ ಜರುಗಲಿರುವ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಮಹಾಧಿವೇಶನಕ್ಕೆ ತೆರಳಿ, ಕಾಂಗ್ರೆಸ್ ಘಟನೆಯಲ್ಲಿ ಕರ್ನಾಟಕಕ್ಕೆ ಪ್ರತ್ಯೇಕ ಪ್ರಾಂತದ ಸ್ಥಾನ ಸಿಕ್ಕುವಂತೆ ಪ್ರಯತ್ನಿಸಬೇಕೆಂದು ಕರೆಕೊಟ್ಟಿತು.

ಈ ವಿಷಯದಲ್ಲಿ ಸಭಾ ಮುಂದಾಯಿತು. ಅಷ್ಟು ಹೊತ್ತಿಗೆ ಜನಸಾಮಾನ್ಯರ ಪ್ರಾತಿನಿಧಿಕ ಸಂಸ್ಥೆಯಾಗಿ ಭರದಿಂದ ರೂಪಗೊಳ್ಳುತ್ತಿದ್ದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸು 1917ರಲ್ಲಿಯೇ ಸಿಂಧ, ಒರಿಸಾ, ಆಂಧ್ರ ಹಾಗೂ ಇತರ ಪ್ರದೇಶಗಳಿಗೆ ಪ್ರತ್ಯೇಕ ಕಾಂಗ್ರೆಸ್ ವಲಯಗಳನ್ನು ಕೊಟ್ಟಿದ್ದರೂ ಈ ಬಗೆಗಿರುವ ಕನ್ನಡಿಗರ ಬೇಡಿಕೆಗೆ ಕಿವಿಗೊಟ್ಟಿರಲಿಲ್ಲ. ಶ್ರೀ ಕಡಪಾ ರಾಘವೇಂದ್ರರಾಯರು ಕರ್ನಾಟಕದಲ್ಲೆಲ್ಲಾ ಸುತ್ತಾಡಿ, 800 ಪ್ರತಿನಿಧಿಗಳ ನಾಯಕರಾಗಿ 1920 ರಲ್ಲಿ ನಾಗಪುರದಲ್ಲಿ ಸೇರಿದ ಕಾಂಗ್ರೆಸ್ ವಾರ್ಷಿಕ ಅಧಿವೇಶನಕ್ಕೆ ಹೋದರು. ಕಾಂಗ್ರೆಸ್ಸು ಕರ್ನಾಟಕದ ಬೇಡಿಕೆಯನ್ನು ಸಹಾನುಭೂತಿಯಿಂದ ಪರಿಶೀಲಿಸಿ, ಭಾಷೆಯ ಆಧಾರದ ಮೇಲೆ ಪ್ರಾಂತ ರಚನೆಯಾಗಬೇಕೆಂಬ ತತ್ತ್ವವನ್ನು ಒಪ್ಪಿಕೊಂಡು ಗಾಂಧಿಜೀಯವರ ಮಾರ್ಗದರ್ಶನದ ಮೇರೆಗೆ ದೇಶವನ್ನು 21 ಕಾಂಗ್ರೆಸ್ ವಲಯಗಳಾಗಿ ಅರ್ಥಾತ್ ಪ್ರಾಂತಗಳಾಗಿ ವಿಭಜಿಸಿತು. ಅಂದಿನಿಂದ ಕರ್ನಾಟಕದ ಕಾಂಗ್ರೆಸ್ ಸಮಿತಿಯೂ ಅಸ್ತಿತ್ವದಲ್ಲಿ ಬಂದು, ಅದರ ಕಾರ್ಯಕ್ಷೇತ್ರದಲ್ಲಿ ಮುಂಬಯಿ ಮದ್ರಾಸ್.ಪ್ರಾಂತಗಳ, ಹೈದರಾಬಾದ ಸಂಸ್ಥಾನದ ಹಾಗೂ ಇತರ ಸಂಸ್ಥಾನಗಳ ಕನ್ನಡ ಭಾಗಗಳು, ಅಖಂಡ ಮೈಸೂರು ಸಂಸ್ಥಾನ ಹಾಗೂ ಕೊಡಗು ಇವೆಲ್ಲ ಬಂದವು. ಭಾವೀ ಏಕೀಕೃತ ಕರ್ನಾಟಕ ಪ್ರಾಂತ ರಚನೆಗಾಗಿ ನಡೆದ ಆಂದೋಲನದಲ್ಲಿ ಇದೊಂದು ನಿರ್ಣಾಯಕ ಘಟ್ಟವೆ ಆಯಿತೆಂದು ನಿಸ್ಸಂದಿಗ್ಧವಾಗಿ ಹೇಳಬಹುದು.

ಈ ಘಟನೆಯ ಮಹತ್ವವನ್ನು ಇನ್ನಷ್ಟು ಸೂಕ್ಷ್ಮವಾಗಿ ಅರಿತುಕೊಳ್ಳುವುದು ಅಗತ್ಯವಿದೆ. ಕರ್ನಾಟಕ ಏಕೀಕರಣ ಆಂದೋಲನದ ಆದ್ಯ ಪ್ರವರ್ತಕರೆಲ್ಲ ಅಪ್ಪಟ ರಾಷ್ಟ್ರೀಯ ದೃಷ್ಟಿಯುಳ್ಳವರು. ಆದರೆ ರಾಷ್ಟ್ರೀಯ ಆಂದೋಲನವು ಸಾಂಸ್ಕೃತಿಕ—ಪ್ರಾದೇಶಿಕ ಪಾರ್ಶ್ವಭೂಮಿಯುಳ್ಳದ್ದಾಗಿರಬೇಕು ಹಾಗೂ ಪ್ರಾದೇಶಿಕ ಆಶೋತ್ತರಗಳ ಪೂರ್ಣ ವಿಕಾಸಕ್ಕೆ ಅನುಕೂಲವಾಗುವ ರೀತಿಯಲ್ಲಿ ಅದನ್ನು ಸಾಗಿಸಬೇಕೆಂಬುದು ಅವರ ಅಪೇಕ್ಷೆಯಾಗಿದ್ದಿತು. ಇದಕ್ಕಾಗಿ ಅವರ ರಾಷ್ಟ್ರವಿಮೋಚನೆಯ ಆಂದೋಲನದ ಜೊತೆಜೊತೆಗೇ ಕರ್ನಾಟಕ ಏಕೀಕರಣವೂ ಭಾರತದ ಸ್ವಾತಂತ್ರ್ಯ ಸಾಧನೆಯೂ ಪರಸ್ಪರ ಪೋಷಕವಾಗಿದ್ದವು. ಅಂತೆಯೆ ಅವರು ಕಾಂಗ್ರೆಸ್ ಶಾಸನ ವ್ಯವಸ್ಥೆಯಲ್ಲಿ ಕರ್ನಾಟಕಕ್ಕೊಂದು ಪ್ರತ್ಯೇಕಸ್ಥಾನ ದೊರಕಿಸಲು ತಮ್ಮ ಪ್ರಯತ್ನಗಳನ್ನೆಲ್ಲ ಕೇಂದ್ರೀಕರಿಸಿದರು. ಇನ್ನು ಭಾಷಾತಳಹದಿಯ ಮೇಲೆ ಕಾಂಗ್ರೆಸ್ ವಲಯುಗಳು ನಿರ್ಮಿಸಲ್ಪಟ್ಟುದರಿಂದ ರಾಷ್ಟ್ರೀಯ ಚಳವಳಿಯೂ ಮತ್ತಷ್ಟು ಪರಿಪುಷ್ಟವಾಯಿತು. ಪ್ರಾದೇಶಿಕ ಹಾಗೂ ಭಾಷಾವಿಷಯಕ ತಳಹದಿಯಿದ್ದುದರ ಮೂಲಕ ಉದ್ಭವಿಸಿದ ಆತ್ಮೀಯತೆಯ ಭಾವವು, ಕಾಂಗ್ರೆಸ್ ಸಂಸ್ಥೆಯ ತಾಯ್ಬೇರುಗಳು ಹೀರಿಕೊಳ್ಳುವ ಜೀವರಸವಾಗಿ ಪರಿಣಮಿಸಿತು.

ಈ ಘಟನೆಯಿಂದಾಗಿ, ಬೇರೆ ಬೇರೆ ಆಡಳಿತಗಳಿಗೆ ಒಳಪಟ್ಟಿದ್ದರೂ ಒಂದು ಭಾಷಾಪ್ರದೇಶದ ನಿವಾಸಿಗಳು ಒಂದೆಡೆ ಬಂದು ಪರಸ್ಪರ ಸಾಮಾನ್ಯ ಹಿತಸಂಬಂಧಗಳ ವಿಷಯಗಳನ್ನು ಚರ್ಚಿಸಲು ತುಂಬಾ ಸದವಕಾಶಗಳು ಲಭಿಸಿದವು. ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿ ಪ್ರಾರಂಭವಾಗಿ ಕಾರ್ಯೋನ್ಮುಖವಾದ ಮೇಲೆ ಖಾದಿ, ಆಯುರ್ವೇದ, ಇತಿಹಾಸ, ವ್ಯಾಪಾರ—ಉದ್ಯಮ. ಶಾರೀರಿಕ ಶಿಕ್ಷಣ--ವ್ಯಾಯಾಮ, ಪತ್ರಿಕಾವ್ಯವಸಾಯಾದಿಗಳಿಗೆ ಸಂಬಂಧಿಸಿದ ಅಖಿಲ ಕರ್ನಾಟಕ ಸ್ವರೂಪದ ಹಲವಾರು ಸಭೆ-ಸಮ್ಮೇಲನಗಳು ವರ್ಷವರ್ಷವೂ ಸೇರತೊಡಗಿದವು. ಇದೊಂದು ಸಂಗತಿಯೇ ಸಾಕು, ಏಕೀಕೃತ ಕರ್ನಾಟಕ ರಚನೆ ಯೋಗ್ಯ ಹಾಗೂ ಅಪೇಕ್ಷಣೀಯವಾಗಿತ್ತೆಂಬುದನ್ನು ತೋರಿಸಿಕೊಡಲು.

1921ರಿಂದ 1924--ಈ ಕಾಲಾವಧಿ ಅಸಹಕಾರ ಆಂದೋಲನದ್ದು. ಆಗ ಏಕೀಕರಣ ಚಟುವಟಿಕೆಗಳ ರಂಗದಲ್ಲಿ ಸಾಮಾನ್ಯವಾಗಿ ಸ್ತಬ್ಧತೆ ನೆಲಸಿತ್ತು. ಬೇರೆ ಬೇರೆ ಆಡಳಿತಗಳಲ್ಲಿ ಹರಿದು ಹಂಚಿಹೋಗಿದ್ದರೂ ಕನ್ನಡಿಗರು 'ಒಂದು ಜನ' ಎಂಬ ಭಾವದಿಂದ ರಾಷ್ಟ್ರೀಯ ಚಳವಳಿಯಲ್ಲಿ ಪಾಲ್ಗೊಂಡರು. ಇದರಿಂದಾಗಿ, 1924ರಲ್ಲಿ ಬೆಳಗಾವಿಯಲ್ಲಿ ಮಹಾತ್ಮಾ ಗಾಂಧಿಯವರ ಅಧ್ಯಕ್ಷತೆಯಲ್ಲಿ ನೆರೆದ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನವು ಅಭೂತಪೂರ್ವ ರೀತಿಯಲ್ಲಿ ಯಶಸ್ವಿಯಾಗಿ ಜರುಗಿತು. ಶ್ರೀ ಕಡಪಾ ರಾಘವೇಂದ್ರರಾಯರು ಈ ಸಂಧಿಯನ್ನು ವ್ಯರ್ಥ ಹೋಗಗೊಡಲಿಲ್ಲ. ರಾವ ಬಹಾದ್ದೂರ ಕಂಬಳಿಯವರ ಅಧ್ಯಕ್ಷತೆಯಲ್ಲಿ ಕರ್ನಾಟಕ ಸಭಾ ಪರವಾಗಿ ಪ್ರಥಮವಾಗಿ ಕರ್ನಾಟಕ ಏಕೀಕರಣ ಪರಿಷತ್ತು ನಡೆಯುವಂತೆ ಏರ್ಪಾಡು ಮಾಡಿದರು. 'ಕರ್ನಾಟಕ ಸಭಾ' ವಿಶಾಲ ತಳಹದಿಯುಳ್ಳದ್ದಾಗುವಂತೆ–ಮಾಡಲು, ಅದಕ್ಕೆ 'ಕರ್ನಾಟಕ ಏಕೀಕರಣ ಸಭಾ' ಎಂಬುದಾಗಿ ನಾಮಕರಣ ಮಾಡಲಾಯಿತು ; ಅದರಿಂದಾಗಿ ಎಲ್ಲ ಬಗೆಯ ನಿಷ್ಠೆ-ಅಭಿಪ್ರಾಯಗಳುಳ್ಳ ಜನರೂ ಅದರಲ್ಲಿ ಸೇರಿಕೊಳ್ಳಲು ಅನುಕೂಲವಾಯಿತು.

ಕೆ.ಪಿ.ಸಿ.ಸಿ. (ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಕಮಿಟಿ) ಕರ್ನಾಟಕ ಏಕೀಕರಣ ಪ್ರಶ್ನೆಯನ್ನು ಈಗ ತನ್ನದನ್ನಾಗಿ ಮಾಡಿಕೊಂಡಿತು. ಹಾಗಾಗಿ, ಇನ್ನುಮುಂದೆ ಪ್ರಾಂತೀಯ ಕಾಂಗ್ರೆಸ್ ಸಂಸ್ಥೆ ಹಾಗೂ ಕರ್ನಾಟಕ ಏಕೀಕರಣ ಸಭಾ ಅಥವಾ ಸಂಘ-ಎರಡೂ ಈ ವಿಷಯದಲ್ಲಿ ಕೈ ಕೈ ಕೂಡಿಸಿಯೆ ಕೆಲಸ ಮಾಡುತ್ತಿದ್ದುದು ಕಂಡುಬರುತ್ತದೆ. 'ಸಭಾ' ಸಂಸ್ಥೆಯು ಕಾಂಗ್ರೆಸಿಗರಲ್ಲದ ಗಣ್ಯ ಹಾಗೂ ಅನುಭವ ಶಾಲಿ ಜನರನ್ನು ಒಳಗೊಂಡಿದ್ದರೂ ಕಾಂಗ್ರೆಸ್ ಧೋರಣೆಗೆ ಪ್ರತಿಕೂಲವಾಗುವಂತಹದೇನನ್ನೂ ಮಾಡ ದಂತೆ ಎಚ್ಚರ ವಹಿಸಲಾಯಿತು. ಅದಕ್ಕೆ ಬದಲಾಗಿ ಸಭಾ ಸಂಸ್ಥೆಯ ಚಟುವಟಿಕೆಗಳಿಂದ ಕೆ.ಪಿ.ಸಿ.ಸಿ. ಯಲ್ಲಿ ಏಕೀಕರಣ ಭಾವನೆಗೆ ಪುಷ್ಟಿ ದೊರೆಯುವಂತಾಯಿತು. ಕರ್ನಾಟಕದಲ್ಲಿ ದೀರ್ಘಕಾಲ ಸಂಕಟಗ್ರಸ್ತ ರೀತಿಯಲ್ಲಿ ನಡೆದ ಏಕೀಕರಣ ಆಂದೋಲದಲ್ಲಿ ಈ ಅಘೋಷಿತ ಪರಸ್ಪರ ಸಮ್ಮತಿಯನ್ನು ಕೊನೆತನಕವೂ ಪಾಲಿಸಲಾಯಿತು.

ಭಾರತದ ಘಟನಾತ್ಮಕ ಪ್ರಗತಿಯನ್ನು ಕುರಿತು ವರದಿ ಮಾಡಲು ಬ್ರಿಟಿಷ್ ಸರಕಾರವು ನಿಯಮಿಸಿದ ಸೈಮನ್ ಕಮಿಶನ್ನು 1928–29ರಲ್ಲಿ ದೇಶದಲ್ಲಿ ಸಂಚಾರ ಕೈಕೊಂಡಾಗ ಈ ಮೂಕ ಸಮ್ಮತಿಯು ಸತ್ತ್ವ ಪರೀಕ್ಷೆಯಾಯಿತು. ಯಾವ ಭಾರತೀಯರನ್ನೂ ಕಮಿಶನ್ನಿನಲ್ಲಿ ನಿಯಮಿಸದಿದ್ದುದಕ್ಕಾಗಿ ಕಾಂಗ್ರೆಸ್ಸು ಅದನ್ನು ಬಹಿಷ್ಕರಿಸಿತು. ಏಕೀಕರಣ ಸಂಘವು, ಅದರಲ್ಲಿ ಈ ಕುರಿತು ಕೆಲವು ಜನರು ಭಿನ್ನಾಭಿಪ್ರಾಯ ವುಳ್ಳವರಾಗಿದ್ದರೂ ಈ ವಿಷಯದಲ್ಲಿ ಕಾಂಗ್ರೆಸ್ಸನ್ನು ಅನುಸರಿಸುವಂತೆ ಅವರ ಮನವೊಲಿಸಲು ಸಾಧ್ಯವಾಯಿತು. ಆದರೆ ಏಕೀಕರಣ ಸಂಘವನ್ನುಳಿದು ಇತರ ಸಂಸ್ಥೆಗಳು ಹಾಗೂ ವ್ಯಕ್ತಿಗಳು ಕಮಿಶನ್ನಿಗೆ ತಮ್ಮ ತಮ್ಮ ಮನವಿಗಳನ್ನು ಸಾದರಪಡಿಸಿಯೆ ಬಿಟ್ಟವು ; ಮತ್ತು ಕಮಿಶನ್ನಾದರೂ 'ಭಾಷಾನ್ವಯ' ತತ್ವಕ್ಕೆ ಮಾನ್ಯತೆಯಿತ್ತು 'ಗಡಿ ಆಯೋಗ'ವನ್ನು ನಿಯಮಿಸಬೇಕೆಂದು ಶಿಫಾರಸುಮಾಡಿತು ; ಆದರೆ

ವಿಶಿಷ್ಟವಾಗಿ ಸಿಂಧ ಹಾಗೂ ಒರಿಸಾ ಇವೆರಡು ಪ್ರತ್ಯೇಕ ಪ್ರಾಂತಗಳಾಗಬೇಕೆಂದು ಅಭಿಪ್ರಾಯಪಟ್ಟಿತು. ಮತ್ತವೆರಡು ಬಹು ಮುಂದೆ 1936ರಲ್ಲಿ ಪ್ರತ್ಯೇಕ ಪ್ರಾಂತಗಳಾಗಿ ಉದಯಿಸಿದವು.

ಈ ಮಧ್ಯದ ಅವಧಿಯಲ್ಲಿ ಕರ್ನಾಟಕ ಏಕೀಕರಣ ಸಭಾ (ಇನ್ನು ಮೇಲೆ ಇದನ್ನು 'ಸಂಘ' ಎಂತಲೇ ಕರೆಯುವೆವು) ಹಾಗೂ ಕೆ.ಪಿ.ಸಿ.ಸಿ. ಕೂಡಿ ಪ್ರಾಂತರಚನೆಯ ಬೇಡಿಕೆಯನ್ನು ಕುರಿತು ಬಲವಾದ ಜನಾಭಿಪ್ರಾಯ ರೂಪಿಸುವುದಕ್ಕಾಗಿ ಅತಿ ಪರಿಶ್ರಮಪೂರ್ವಕ ಪ್ರಯತ್ನಗಳನ್ನು ಕೈಗೊಂಡವು. ಉದಾಹರಣೆಗೆ ಕರ್ನಾಟಕದಲ್ಲಿಯ 200 ಪ್ರಮುಖ ವ್ಯಕ್ತಿಗಳಿಗೆ ಪ್ರಶ್ನಾವಳಿಯನ್ನು ಕಳಿಸಲಾಯಿತು. ಬೇಡಿಕೆಯ ಮನವಿಗೆ ಪ್ರಚಂಡ ಸಾಮುದಾಯಿಕ ರೀತಿಯಲ್ಲಿ ಅಂಕಿತಗಳನ್ನು ಸಂಗ್ರಹಿಸಲಾಯಿತು. ರಾಜಕೀಯ–ಏಕೀಕರಣ ಸೇವಾದಲ ಇತ್ಯಾದಿ ಅಖಿಲ ಕರ್ನಾಟಕ ಸ್ವರೂಪದ ಪರಿಷತ್ತು–ಸಮ್ಮೇಲನಗಳನ್ನು ಸಂಘಟಿಸಲಾಯಿತು. ದೂರದ ಕೊಳ್ಳೆಗಾಲ, ನೀಲಗಿರಿ, ಕೊಡಗು ಇತ್ಯಾದಿ ಭಾಗಗಳ ಕಡೆಗೆ ಪ್ರಚಾರದ ಪ್ರವಾಸಗಳನ್ನು ಕೈಗೊಳ್ಳಲಾಯಿತು. ಇಂಗ್ಲಿಷಿನಲ್ಲಿ ಮಾಹಿತಿ ಪೂರ್ಣ ಸಾಹಿತ್ಯವನ್ನು ಪ್ರಕಟಿಸಲಾಯಿತು. (ಇ.ಇ.)

ಕರ್ನಾಟಕ ಏಕೀಕರಣ ಸಂಘವು ಕೈಗೊಂಡ ಪ್ರಯತ್ನದ ಫಲವಾಗಿ, 1927ರಲ್ಲಿ ಮುಂಬಯಿಯಲ್ಲಿ ಸೇರಿದ ಏ.ಐ.ಸಿ.ಸಿ. (ಆಲ್ ಇಂಡಿಯಾ ಕಾಂಗ್ರೆಸ್ ಕಮಿಟಿ)ಯು, ಪ್ರಾಂತಗಳನ್ನು ಪುನಃ ರಚಿಸುವಾಗ ಭಾಷೆಯ ತಳಹದಿಯನ್ನು ಇರಿಸಿಕೊಳ್ಳಬೇಕೆಂದೂ ಇದರ ಪ್ರಾರಂಭವನ್ನು ಆಂಧ್ರ, ಸಿಂಧ ಹಾಗೂ ಕರ್ನಾಟಕಗಳನ್ನು ಪ್ರತ್ಯೇಕ ಪ್ರಾಂತಗಳನ್ನಾಗಿ ನಿರ್ಮಿಸುವುದರಿಂದ ಮಾಡಬೇಕೆಂದೂ ಗೊತ್ತುವಳಿ ಕೈಗೊಂಡಿತು.

1928ರಲ್ಲಿ, ಈ ಮೊದಲೇ ಹೇಳಿದಂತೆ, ಭಾರತದ ರಾಜ್ಯಘಟನೆಯನ್ನು ಕುರಿತು ಶಿಫಾರಸು ಮಾಡಲು ನಿಯಮಿಸಿದ ನೆಹರು ಕಮಿಟಿಯು ಕರ್ನಾಟಕ ನಿರ್ಮಾಣದ ಶಿಫಾರಸು ಮಾಡಿತು.

1921 ರಿಂದ 1935 ರ ಅವಧಿಯಲ್ಲಿ, ಕೇಂದ್ರ ಹಾಗೂ ಪ್ರಾಂತೀಯ ಶಾಸನಸಭೆಗಳಲ್ಲಿ ಈ ಬೇಡಿಕೆಗಳಿಗೆ ಬೆಂಬಲ ದೊರಕಿಸಲು ಆಗ್ರಹದ ಪ್ರಯತ್ನಗಳನ್ನು ಮಾಡಲಾಯಿತು ; ಇದರಂಗವಾಗಿ 1921 ರಲ್ಲಿ ಹೊಸತಾಗಿ ರಚಿಸಲ್ಪಟ್ಟ ಮುಂಬಯಿ ಲೆಜಿಸ್ಲೇಟಿವ್ ಅಸೆಂಬ್ಲಿಯಲ್ಲಿ ಶ್ರೀ ಎ.ಬಿ. ಲಠ್ಠೆಯವರು ನಿರ್ಣಯವನ್ನು ತಂದರು. ಡಾ॥ ಯು. ರಾಮರಾಯರು ದಿಲ್ಲಿಯ ಕೌನ್ಸಿಲ್ ಆಫ್ ಸ್ಟೇಟ್‌ನಲ್ಲಿ ಎರಡು ಸಲ (1926 ಹಾಗೂ 1928) ಪ್ರಯತ್ನ ಮಾಡಿದರು. 1929 ರಲ್ಲಿ ಶ್ರೀ ವಿ.ಎನ್. ಜೋಗರವರು ಮುಂಬಯಿ ಲೆಜಿಸ್ಲೇಟಿವ್ ಕೌನ್ಸಿಲಿನಲ್ಲಿ ಮತ್ತೆ ಅಂತಹ ಪ್ರಯತ್ನವನ್ನು ಮಾಡಿದರು. ಇವೆಲ್ಲ ಯಶಸ್ವಿಯಾಗಲಿಲ್ಲವಾದರೂ ಅವುಗಳಿಂದ ಒಳ್ಳೆಯ ಪರಿಣಾಮವಾಗಿಯೆ ಆಯಿತು. ಮದ್ರಾಸ್ ಶಾಸನಸಭೆಯಲ್ಲಿಯೂ ಇದೇ ರೀತಿ ಪ್ರಯತ್ನಿಸಲಾಯಿತು. 1929 ರಲ್ಲಿ ಶ್ರೀ ಬಿ. ಶಿವರಾಯರು ಕರ್ನಾಟಕ ಪ್ರಾಂತ ರಚನೆಯ ಬೇಡಿಕೆಯನ್ನು ನಿರ್ಣಯರೂಪದಲ್ಲಿ ಮಂಡಿಸಿದರು ; ಅದನ್ನು ಸರಕಾರದ ಪರವಾಗಿ ತೀವ್ರ ರೀತಿಯಲ್ಲಿ ವಿರೋಧಿಸಲಾಯಿತಾದರೂ ಬಹು ದೊಡ್ಡ ಮತಾಧಿಕ್ಯದಿಂದ ಅದನ್ನು ಅಂಗೀಕರಿಸಲಾಯಿತೆಂಬುದು ಗಣನೀಯವಾದ ಅಂಶವಾಗಿದೆ.

1936ರಲ್ಲಿ ಸಿಂಧ ಹಾಗೂ ಒರಿಸಾ ಪ್ರತ್ಯೇಕ ಪ್ರಾಂತಗಳಾಗಿ ನಿರ್ಮಾಣವಾದುದರಿಂದ ಆಂಧ್ರ-ಕರ್ನಾಟಕ-ಕೇರಳಗಳಲ್ಲಿಯ ಭಾಷಾನ್ವಯ ಪ್ರಾಂತರಚನಾ ಚಳವಳಿಗೆ ಇನ್ನೂ ಪುಟಕೊಟ್ಟಂತಾಯಿತು.

1936 ರಿಂದ 1940ರ ವರೆಗಿನ ಅವಧಿಯಲ್ಲಿ ಕೆಳಗೆ ತೋರಿಸಿದಂತೆ ಅಖಿಲ ಕರ್ಣಾಟಕ ಏಕೀಕರಣ ಸಮ್ಮೇಲನವನ್ನು ನಡೆಯಿಸಲಾಯಿತು :

| ಅಧಿವೇಶನಗಳು | ಅಧ್ಯಕ್ಷರು | ಸ್ವಾಗತಸಮಿತಿಯ ಅಧ್ಯಕ್ಷರು |
|---|---|---|
| ಬೆಳಗಾವಿಯಲ್ಲಿಯ ವಿಶೇಷ ಅಧಿವೇಶನ (ನವಂಬರ 1936) | ಡಾ॥ ಯು. ರಾಮರಾಯರು | ಶ್ರೀ ಬಿ.ಎನ್. ದಾತಾರ |
| 7 ನೆಯ ಅಧಿವೇಶನ (ಧಾರವಾಡದಲ್ಲಿ) | ಶ್ರೀ ಕೆ.ಆರ್. ಕಾರಂತ | ಶ್ರೀ ಎ.ಜೆ. ದೊಡ್ಡಮೇಟಿ |
| 8 ನೆಯ ಅಧಿವೇಶನ (ಸೊಲ್ಲಾಪುರದಲ್ಲಿ) (ಏಪ್ರಿಲ್ 1940) | ಡಾ॥ ಆರ್. ನಾಗನಗೌಡ | ಶ್ರೀ ಎಂ.ಎಸ್. ಸರ್ದಾರ (ಬಾರ್-ಅಟ್-ಲಾ) |

1935ರ ಸುಧಾರಣಾ ಕಾನೂನಿನ (Reforms Act 1935) ಅನ್ವಯ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಮುಂಬಯಿ ಹಾಗೂ ಮದ್ರಾಸ ಶಾಸನಸಭೆಗಳಲ್ಲಿ ಕ್ರಾಂಗ್ರೆಸ್ಸು ನಿಃಸಂದಿಗ್ಧ ಬಹುಮತವನ್ನು ಪಡೆಯಿತು. ಕಾಂಗ್ರೆಸ್ಸು ಭಾಷಾನ್ವಯ ಪ್ರಾಂತರಚನಾತತ್ತ್ವಕ್ಕೆ ಬದ್ಧವಾದುದರಿಂದ, 1938 ರಲ್ಲಿ ಈ ಎರಡೂ ಕಡೆ ಅದಕ್ಕನುರೂಪವಾದ ಗೊತ್ತುವಳಿಗಳನ್ನು ಅಂಗೀಕರಿಸಲಾಯಿತು. ಮದ್ರಾಸಿನಲ್ಲಿ ಆಂಧ್ರದ ಕೊಂಡ ವೆಂಕಟಪ್ಪಯ್ಯ ಪಂತಲು ಅವರು ನಾಲ್ಕು ಭಾಷಾಪ್ರದೇಶಗಳನ್ನು ಹೆಸರಿಸಿ ಮಂಡಿಸಿದ ಸಾಮಾನ್ಯ ಗೊತ್ತುವಳಿಯೊಂದನ್ನು ಸ್ವೀಕರಿಸಲಾಯಿತಾದರೆ, ಶ್ರೀ ವಿ.ಎನ್. ಜೋಗರವರು ಮುಂಬಯಿಯಲ್ಲಿ ಮಂಡಿಸಿದ ನಿರ್ಣಯದಲ್ಲಿ ವಿಶಿಷ್ಟವಾಗಿ 'ಕರ್ಣಾಟಕ ಪ್ರಾಂತ'ವೊಂದನ್ನೆ ಉಲ್ಲೇಖಿಸಲಾಯಿತು. ಇದರ ಲಾಭ ಪಡೆದು ಕೆ.ಪಿ.ಸಿ.ಸಿ. ಹಾಗೂ ಕರ್ಣಾಟಕ ಏಕೀಕರಣ ಸಂಘಗಳ ಪರವಾಗಿ ಶಿಷ್ಟಮಂಡಲವೊಂದು ಕಾಂಗ್ರೆಸ್ ಕಾರ್ಯಸಮಿತಿಯ ಭೇಟಿ ಪಡೆದು, ನಡೆಯಿಸಿದ ಆಲೋಚನೆಯ ಫಲವಾಗಿ ಸಮಿತಿಯು, 'ಆ ಎರಡೂ ಶಾಸನಸಭೆಗಳಲ್ಲಿ ಅಂಗೀಕೃತವಾದ ನಿರ್ಣಯಗಳಿಗೆ ಕಾಂಗ್ರೆಸ್ಸಿನ ಪೂರ್ಣ ಬೆಂಬಲವಿದೆ'ಯೆಂದು ಹೇಳಿತಲ್ಲದೆ "ಕಾಂಗ್ರೆಸ್ಸಿಗೆ ಈ ವಿಷಯದಲ್ಲಿ ಅಗತ್ಯವಾದ ಬಲ ಪ್ರಾಪ್ತವಾದೊಡನೆ, ಭಾರತ ಸರಕಾರದ ಭಾವೀ ಯೋಜನೆಯ ಅಂಗವಾಗಿ ಈ ಪ್ರಶ್ನೆಯ ತೀರ್ಮಾನವನ್ನು ಕೈಗೊಳ್ಳಲಾಗುವುದು ; ಆದುದರಿಂದ ಇದನ್ನು ಕುರಿತು ಇನ್ನುಮುಂದೆ ಉದ್ವೇಗಯುತ ಆಂದೋಲನವನ್ನು ಕೈಗೊಳ್ಳಬಾರದು" ಎಂದು ಕನ್ನಡ ಭಾಷಿಕ ಪ್ರದೇಶದ ಜನತೆಗೆ ಕೇಳಿಕೊಂಡಿತು.

1939 ರಲ್ಲಿ ಎರಡನೆಯ ಜಾಗತಿಕ ಯುದ್ಧ ಮೊದಲಾಯಿತು. ಆಗ ಬ್ರಿಟಿಷ್ ಪ್ರಭುತ್ವವು ಜನರ ಸಮ್ಮತಿ ಪಡೆದುಕೊಳ್ಳದೆಯೇ ಭಾರತವನ್ನು ಯುದ್ಧಭಾಗಿಯಾಗಿ ಮಾಡಿದ್ದನ್ನು ವಿರೋಧಿಸಿ ಪ್ರಾಂತಗಳಲ್ಲಿ ಕಾರ್ಯಮಾಡುತ್ತಿದ್ದ ಕಾಂಗ್ರೆಸ್ ಮಂತ್ರಿಮಂಡಲಗಳು ರಾಜೀನಾಮೆ ಕೊಟ್ಟವು. 1944ರ ಜೂನ್ ತಿಂಗಳ ಅನಂತರ ಮತ್ತೆ ಸಾಧಾರಣ ಸ್ಥಿತಿ ಏರ್ಪಟ್ಟ ಮೇಲೆ ಕರ್ಣಾಟಕ ಏಕೀಕರಣ ಪರಿಷತ್ತು ಅದೇ ವರ್ಷ ಧಾರವಾಡದಲ್ಲಿ ಯಶಸ್ವಿಯಾಗಿ ನೇರವೇರಿತು. ಆ ಬಳಿಕ ಏಕೀಕರಣ ಚಳವಳಿ ರಭಸದಿಂದ ಮುಂದುವರಿಯಿತು ; ಸಂಘವು ತನ್ನ ಚಟುವಟಿಕೆಗಳನ್ನು ಕ್ರಮಬದ್ಧವಾಗಿ ನಡಸುತ್ತ ಬಂತು.

1946ರ ಜನವರಿಯಲ್ಲಿ ಮುಂಬಯಿಯಲ್ಲಿ ನಡೆದ 4 ನೆಯ ಕರ್ಣಾಟಕ ಏಕೀಕರಣ ಸಮ್ಮೇಲನಕ್ಕೆ ಅತ್ಯಂತ ಮಹತ್ತ್ವವಿದೆ. ಏಕೆಂದರೆ ಅದರ ಅಧ್ಯಕ್ಷರು ಮುಂಬಯಿ ಪ್ರಾಂತದ ಮುಖ್ಯ ಮಂತ್ರಿಗಳಾದ ಶ್ರೀ ಬಿ.ಜಿ. ಖೇರರಾಗಿದ್ದರು. ಹಾಗೂ ಸರ್ದಾರ ವಲ್ಲಭಭಾಯಿ ಪಟೇಲರು ಅದರ ಉದ್ಘಾಟನ ಸಮಾರಂಭವನ್ನು ನೆರವೇರಿಸಿದರು. ಆ ಸಂದರ್ಭದಲ್ಲಿ ಸರ್ದಾರ ಪಟೇಲರು–"ದೇಶದ ಭಾಷಾಪ್ರದೇಶಗಳ

ಮೇಲೆ ಬ್ರಿಟಿಷ್ ಪ್ರಭುತ್ವದವರು ಹೇರಿದ ವಿಭಜನೆಯ ಆತಂಕಗಳನ್ನು ನಿವಾರಿಸುವುದು ಸ್ವತಂತ್ರ ಭಾರತದ ಪ್ರಥಮ ಕರ್ತವ್ಯಗಳಲ್ಲೊಂದಾಗುವುದು " ಎಂಬುದಾಗಿ ಗಂಭೀರ ಘೋಷಣೆಯನ್ನು ಮಾಡಿದರು.

ಈ ವರ್ಷವು,(1946ರ ಆಗಸ್ಟ್ ತಿಂಗಳಲ್ಲಿ)ದಾವಣಗೆರೆಯಲ್ಲಿ ನಡೆದ ಅಖಿಲ ಕರ್ಣಾಟಕ ಕನ್ವೆನ್‌ಶನ್ ಮೂಲಕವೂ ಸ್ಮರಣೀಯವೆನಿಸಿದೆ. ಕರ್ಣಾಟಕ ಏಕೀಕರಣ ಸಂಘ ಹಾಗೂ ಕೆ.ಪಿ.ಸಿ.ಸಿ. ಕೂಡಿಯೇ ಇದನ್ನು ಪುರಸ್ಕರಿಸಿದ್ದವು. ಮದ್ರಾಸ ಸರಕಾರದ ಆಗಿನ ಕಂದಾಯ ಸಚಿವರಾಗಿದ್ದ ಶ್ರೀ ಕೆ. ಆರ್. ಕಾರಂತರವರು ಅದನ್ನು ಉದ್ಘಾಟಿಸಿದರು. ಮುಂಬಯಿ ಸರಕಾರದ ಅರಣ್ಯ ಹಾಗೂ ಕೃಷಿ ಮಂತ್ರಿಗಳಾದ ಶ್ರೀ ಎಂ.ಪಿ ಪಾಟೀಲರವರು ಅದರ ಅಧ್ಯಕ್ಷರಾಗಿದ್ದರು. ಮುಂಬಯಿ, ಮದ್ರಾಸ, ಕೊಡಗು, ಮೈಸೂರು ಶಾಸನ ಮಂಡಲಗಳಲ್ಲಿ ಕರ್ಣಾಟಕವನ್ನು ಪ್ರತಿನಿಧಿಸುವ ಸದಸ್ಯರೂ ಚಿಕ್ಕಸಂಸ್ಥಾನಗಳ ಪ್ರತಿನಿಧಿಗಳೂ ಕನ್ವೆನ್‌ಶನ್‌ನಲ್ಲಿ ಭಾಗಿಯಾಗಿದ್ದರು. ಸಂಸ್ಥಾನ ಪ್ರಜೆಗಳ ಸಂಘಗಳ (States' Peoples Organisation) ಅಧಿಕಾರಿ ವರ್ಗಗಳವರು, ಸಾಹಿತ್ಯ—ಸಂಸ್ಕೃತಿ ಸಂಘಸಂಸ್ಥೆಗಳ ಹಾಗೂ ಸ್ಥಳೀಯ ಪೌರಾಡಳಿತ (Local Self-Government) ಸಂಸ್ಥೆಗಳ ಪ್ರತಿನಿಧಿಗಳು, ವಿವಿಧ ರಾಜಕೀಯ ಪಕ್ಷಗಳ ಹಾಗೂ ಜಾತೀಯ ಸಂಘಟನೆಗಳ ಪ್ರತಿನಿಧಿಗಳು – ಇವರೆಲ್ಲರಿಂದ ಕೂಡಿದ ಈ ಮಹಾಮೇಳವು ತುಂಬಾ ಪ್ರಾತಿನಿಧಿಕವಾಗಿದ್ದಿತು.

ಭಾರತದ ರಾಜ್ಯಘಟನಾ ಸಭೆ (Constituent Assembly) ಮುಂದೆ ಬೇಗನೆ ಸೇರಲಿದ್ದು, ಸ್ವತಂತ್ರ ಭಾರತದ ರಾಜ್ಯ ಘಟನೆಯನ್ನು ರೂಪಿಸುವ ಕೆಲಸವನ್ನು ಕೈಕೊಳ್ಳಲಿತ್ತು ; ಅದು ತಯಾರಿಸ ಲಿರುವ ರಾಜ್ಯಘಟನೆಯಲ್ಲಿ ಕರ್ಣಾಟಕವನ್ನು ಪ್ರತ್ಯೇಕ ಪ್ರಾಂತವನ್ನಾಗಿ ನಿರ್ದೇಶಿಸುವುದು ಅಗತ್ಯವಿದ್ದಿತು; ಅಂತೆಯೇ ಈ ಕನ್ವೆನ್‌ಶನ್ನಿನ ಕಾರ್ಯ ಕಲಾಪಗಳು ತುಂಬಾ ಮಹತ್ತ್ವಯುತ ವಾಗಿದ್ದುವು. ಇದನ್ನು ಮನದಂದು ಕನ್ವೆನ್ಶನ್ನು ಏಕಮತದಿಂದ ಒಂದು ನಿರ್ಣಯ ಕೈಗೊಂಡು, "ರಾಜ್ಯಘಟನಾ ಸಮಿತಿ ಭಾಷಾನ್ವಯ ಪ್ರಾಂತರಚನೆಯ ಪ್ರಶ್ನೆಯನ್ನು ಕೈಗೆತ್ತಿಕೊಂಡು, ಕರ್ಣಾಟಕವನ್ನು ಪ್ರತ್ಯೇಕ ಪ್ರಾಂತವನ್ನಾಗಿ ಮಾಡಲು ಬೇಕಾದ ಕ್ರಮಗಳನ್ನು ಕೂಡಲೆ ಕೈಗೊಳ್ಳ ಬೇಕು " ಎಂದು ಒತ್ತಾಯಪಡಿಸಿತು.

ಇದಲ್ಲದೆ ಕನ್ವೆನ್‌ಶನ್ ಮತ್ತೂ ಘೋಷಿಸಿತೇನೆಂದರೆ—"ಕೂಡಲೆ ಸಾಧ್ಯವಿದ್ದ ಕನ್ನಡ ಭಾಷಿಕ ಪ್ರದೇಶಗಳನ್ನು ಒಟ್ಟುಗೂಡಿಸಿ ಕರ್ಣಾಟಕ ಪ್ರಾಂತರಚನೆಯನ್ನು ಕೈಗೊಳ್ಳುವುದಕ್ಕೆ ಬಾಧೆ ಬಾರದಂತೆ, ಗಮನಿಸಬೇಕಾದ ಮಹತ್ತ್ವದ ಅಂಶವೇನೆಂದರೆ, (ಬ್ರಿಟಿಷ್ ಕರ್ಣಾಟಕ ಇಲ್ಲವೆ ಸಂಸ್ಥಾನಿಕ ಕರ್ಣಾಟಕವೆಂಬ ಭೇದವನ್ನು ಮನ್ನಿಸದೆ) ಅಖಿಲ ಕನ್ನಡ ಜನತೆಯ ಸರ್ವಾಂಗೀಣ ವಿಕಾಸವು, ಫೆಡರಲ್ (ಅಂದರೆ ಸಂಯುಕ್ತ ರಾಜ್ಯಪದ್ಧತಿಯ) ಅಥವಾ ಇನ್ನಾವುದೇ ಪ್ರಕಾರದ ಒಂದೇ ಸರಕಾರದ ಸ್ಥಾಪನೆಯಾಗದೆ ಸಾಧ್ಯವಾಗದು." "ಅಖಿಲ ಕರ್ಣಾಟಕಕ್ಕೆ ಇಂತಹ ಒಂದೇ ಸರಕಾರ ಅಸ್ತಿತ್ವದಲ್ಲಿ ಬರಲು ಸಹಾಯಕ ವಾಗುವಂತೆ-ಎಲ್ಲಾ ಸಂಸ್ಥಾನಗಳಲ್ಲಿಯೂ ಪ್ರಜಾಪ್ರಭುತ್ವವಾದಿ ಜವಾಬ್ದಾರಿ ಸರಕಾರಗಳು ಸ್ಥಾಪಿತ ವಾಗುವುದು ತೀರಾ ಅಗತ್ಯವಿದೆ " ಯೆಂತಲೂ ಕನ್ವೆನ್ಶನ್ ಅಭಿಪ್ರಾಯ ವ್ಯಕ್ತಪಡಿಸಿತಲ್ಲದೆ, ಆ ಸಂಸ್ಥಾನಗಳ ಅಧಿಪತಿಗಳು ಈ ಕಾರ್ಯದಲ್ಲಿ ತನ್ನೊಡನೆ ಸಹಕರಿಸಬೇಕಾಗಿ ಬಿನ್ನವಿಸಿತು.

ಕನ್ವೆನ್ಶನ್ನು ಸರ್ವಶ್ರೀ ಎಂ. ಪಿ. ಪಾಟೀಲ, ಎಸ್. ನಿಜಲಿಂಗಪ್ಪ, ಕೆ. ಬಿ. ಜಿನರಾಜ ಹೆಗಡೆಯವರುಳ್ಳ ಸಮಿತಿಯನ್ನು, ಈ ನಿರ್ಣಯವನ್ನು ಕುರಿತು "ಮುಂದಿನೆಲ್ಲ ಕ್ರಮಗಳನ್ನು ಕೈಗೊಳ್ಳಲು" ನಿಯಮಿಸಿತು. ಸಮಿತಿ ತನ್ನ ಕಾರ್ಯಾಚರಣೆಯಲ್ಲಿ ಕರ್ಣಾಟಕ ಏಕೀಕರಣ ಸಂಘ ಹಾಗೂ ಕೆ.ಪಿ.ಸಿ.ಸಿ. ಗಳಿಂದ ಮಾರ್ಗದರ್ಶನವನ್ನು ಪಡೆಯಬೇಕೆಂಬುದಾಗಿ ತಿಳಿವಳಿಕೆಯಿದ್ದಿತು.

ಕನ್ವೆನ್ಶನ್ ಅಂಗೀಕರಿಸಿದ ನಿರ್ಣಯದಲ್ಲಿಯ "......ಬಾಧೆ ಬರದಂತೆ " ಎಂಬ ಪದ ಪ್ರಯೋಗವನ್ನು

ಕುರಿತು ಮೈಸೂರು ಸಂಸ್ಥಾನದ ಪ್ರತಿನಿಧಿಗಳು, ವಿಶೇಷವಾಗಿ ಶ್ರೀ ಕೆ. ಹನುಮಂತಯ್ಯ ಹಾಗೂ ಶ್ರೀ ಎಚ್. ಸಿ. ದಾಸಪ್ಪ ಅವರು ಉಚ್ಚಸ್ವರದಲ್ಲಿ ನಿಷೇಧ ವ್ಯಕ್ತಪಡಿಸಿದರೆಂಬುದು ಗಮನೀಯವಾದ ಅಂಶವಾಗಿದೆ. 'ಮೈಸೂರಿನಲ್ಲಿ ಪ್ರಾತಿನಿಧಿಕ ಸರಕಾರ ಬಂದ ಮೇಲೆಯೇ ಅದು ಕರ್ನಾಟಕ ಪ್ರಾಂತದಲ್ಲಿ ಸೇರ್ಪಡೆಯಾಗಬೇಕೆಂಬುದು ತಪ್ಪೆಂದು' ಅವರು ವಾದಿಸಿದರು. ಆಗ ಕೆ. ಪಿ. ಸಿ. ಸಿ. ಮುಖಂಡರು, 'ಮೈಸೂರಿನಲ್ಲಿ ಪ್ರಾತಿನಿಧಿಕ ಸರಕಾರ ಸ್ಥಾಪಿತವಾದೊಡನೆಯೆ ಅದು ಕರ್ನಾಟಕ ಪ್ರಾಂತದಲ್ಲಿ ಪ್ರವಿಷ್ಟವಾಗುವಂತೆ–ಎತ್ತುಗಡೆ ಮಾಡಲಾಗುವುದು; ಆದಕ್ಕಾಗಿ ಉಳಿದ ಕರ್ನಾಟಕ ಪ್ರದೇಶವನ್ನು ಪ್ರತ್ಯೇಕ ಪ್ರಾಂತವನ್ನಾಗಿ ಮಾಡುವುದನ್ನು ಮುಂದಕ್ಕೆ ಹಾಕುವ ಅಗತ್ಯವಿಲ್ಲ' ಎಂಬುದಾಗಿ ಕಷ್ಟಪಟ್ಟು ತಿಳಿಯ ಹೇಳಬೇಕಾಯಿತು.

ಕನ್ವೆನ್ಶನ್ ಅಂಗೀಕರಿಸಿದ ನಿರ್ಣಯವು, ಏಕೀಕರಣವಾದಿಗಳ ಉದ್ದೇಶವು ಮೈಸೂರನ್ನೂ ಇತರ ಸಂಸ್ಥಾನಗಳ ಕನ್ನಡ ಭಾಗಗಳನ್ನೂ ಒಳಗೊಂಡ ಸಂಯುಕ್ತ ಕರ್ನಾಟಕ ಪ್ರಾಂತರಚನೆಯೆ ಆಗಿದೆಯೆಂಬುದನ್ನು ಮೊದಲ ಬಾರಿ ಸ್ಪಷ್ಟಪಡಿಸಿತು; ಮತ್ತು ಬ್ರಿಟಿಷ್ ಕರ್ನಾಟಕ ಭಾಗಗಳನ್ನು ಕೂಡಿಸಿ ಪ್ರಾಂತರಚನೆಮಾಡುವುದು ಆ ವಿಶಾಲ ಉದ್ದೇಶ ಸಾಧನೆಯ ದಾರಿಯಲ್ಲಿ ಮೊದಲ ಹೆಜ್ಜೆ ಮಾತ್ರ. ಅದು ವ್ಯವಹಾರ್ಯ ರಾಜಕೀಯಕ್ಕೆ ಸಂಬಂಧಿಸಿದ ಕ್ರಮ ಎಂಬುದನ್ನು ತಿಳಿಗೊಳಿಸಿತು. ಇನ್ನು ಮುಂದೆ ಏಕೀಕರಣವಾದಿಗಳ ಗಮನವು ಈ ವಿಶಾಲ ಉದ್ದೇಶದ ಸಾಧನೆಯ ಮೇಲೆ ಕೇಂದ್ರೀಕರಿಸಲ್ಪಟ್ಟಿತು; ಮತ್ತಿದಕ್ಕಾಗಿ ಈ ಪ್ರಶ್ನೆಗೆ ಅಂಗಭೂತವಾಗಿರುವ ಘಟನಾತ್ಮಕ, ಭಾವನಾತ್ಮಕ, ಅಲ್ಲಲ್ಲಿಯವರ ಸ್ವಭಾವಕ್ಕೆ ಸಂಬಂಧಿಸಿದ ತೊಂದರೆಗಳಿಗೆ ಪರಿಹಾರ ಹುಡುಕಲು ಮನವಾರೆ ಪ್ರಯತ್ನಗಳನ್ನು ಮಾಡಲಾಯಿತು.

ಕನ್ವೆನ್ಶನ್ ನಿಯಮಿಸಿದ 'ತ್ರಿಮೂರ್ತಿ ಸಮಿತಿ' ಮುಂದೆ 'ಕರ್ನಾಟಕ ಏಕೀಕರಣಮಹಾಸಮಿತಿ'ಯೆಂದು ಹೆಸರಾದ ಸಂಸ್ಥೆಗೆ ಬೀಜಾರೋಪಣವೆನಿಸಿತು. ಕರ್ನಾಟಕ ಏಕೀಕರಣ ಸಂಘ ಹಾಗೂ ಕೆ.ಪಿ.ಸಿ.ಸಿ. ಗಳಿಂದ ಪುರಸ್ಕೃತವಾದ ಈ ಸಮಿತಿ 'ಏಕೀಕರಣ' ದೃಷ್ಟಿಯಿಂದ ಮಹತ್ವವುಳ್ಳವರೆನಿಸಿದವರು ಯಾರು ಯಾರಿದ್ದರೂ ಅವರನ್ನೆಲ್ಲ ತನ್ನಲ್ಲಿ ಕೂಡಿಸಿಕೊಳ್ಳುತ್ತ ಹೋಗಿ ಕರ್ನಾಟಕದ ಪೂರ್ಣ ಪ್ರಾತಿನಿಧ್ಯವುಳ್ಳ ಸಂಸ್ಥೆಯಾಗಿ ರೂಪಗೊಂಡಿತು.

ಕೆ.ಪಿ.ಸಿ.ಸಿ.ಯ. ಅಧ್ಯಕ್ಷರಾದ ಶ್ರೀ ಎಸ್. ನಿಜಲಿಂಗಪ್ಪನವರು ಮಹಾಸಮಿತಿಯ ಐದು ವರ್ಷಕ್ಕಿಂತಲೂ ಅಧಿಕವಾದ ಅಸ್ತಿತ್ವದ ಕಾಲಾವಧಿಯಲ್ಲಿ ಅದರ ಅಧ್ಯಕ್ಷರೂ ಆಗಿದ್ದರು; ಮತ್ತು ಶ್ರೀಯುತರಾದ ಎ.ಜೆ. ದೊಡ್ಡಮೇಟಿ ಹಾಗೂ ಎಸ್.ಆರ್. ಮಂಗಳವೇಢೆಯವರು ಅದರ ಉತ್ಸಾಹಯುತ ಕಾರ್ಯದರ್ಶಿಗಳಾಗಿದ್ದರು. ಕಚೇರಿಯ ಕಾರ್ಯದರ್ಶಿಗಳಾದ ಶ್ರೀ ವಿನೀತ ರಾಮಚಂದ್ರರಾಯರು ಅಂಕಿ—ಅಂಶಗಳು, ಪ್ರಚಾರ ಹಾಗೂ ಸಾರ್ವಜನಿಕ ಸಂಬಂಧಗಳ ವಿಭಾಗದ ಮೇಲ್ವಿಚಾರಕರೂ ಆಗಿದ್ದರು. ಮಹಾಸಮಿತಿ ವಿಸರ್ಜನೆ ಹೊಂದಿ ಕರ್ನಾಟಕ ಏಕೀಕರಣಸಂಘವು ಪುನರ್ಘಟಿತವಾದಾಗ ಶ್ರೀ ಶಾಂತಪ್ಪ ಯಳಮಲಿಯವರು ಅಧ್ಯಕ್ಷರಾಗಿಯೂ ಶ್ರೀ ವಿನೀತ ರಾಮಚಂದ್ರರಾಯರು ಹಾಗೂ ಶ್ರೀ ವಿ.ಜಿ. ಕುಂಬಿಯವರು ಕಾರ್ಯದರ್ಶಿಗಳಾಗಿಯೂ ಕೆಲಸಮಾಡಿದರು.

ಮಹಾಸಮಿತಿ ಕರ್ನಾಟಕ ಏಕೀಕರಣಸಂಘವಾಗಿ ಮಾರ್ಪಡುವ ಮೊದಲು, ತ್ರಿವಿಧ ಕಾರ್ಯಕ್ರಮವನ್ನು ತನ್ನೆದುರಿನಲ್ಲಿ ಇರಿಸಿಕೊಂಡಿತು: ಕಾಂಗ್ರೆಸ್ ವರಿಷ್ಠರ (Congress High Command) ಮೇಲೆ ಹಾಗೂ ಕೇಂದ್ರ ಸರಕಾರದ ಮೇಲೆ ಒತ್ತಾಯ ತರಲು ಸಾರ್ವಜನಿಕ ಅಭಿಪ್ರಾಯವನ್ನು ಸಂಘಟಿಸುವುದು; ಮೈಸೂರಿನ ಮುಖಂಡರೊಡನೆ ಸಂಧಾನ ಸಾಗಿಸುವುದು; ಹಾಗೂ ಚಿಕ್ಕದೆನಿಸಿದರೂ ಹೆಚ್ಚು ಕಾಟ ಕೊಡುವ ಪ್ರಶ್ನೆಯೆನಿಸಿದ 'ಡೆಕ್ಕನ್ ಸಂಸ್ಥಾನಗಳ ವಿಲೀನೀಕರಣ'ದ ಮೇಲೆ (ಮುಂಬಯಿ

ಅಧಿಪತ್ಯಕ್ಕೊಳಪಟ್ಟ ಕನ್ನಡ ಪ್ರದೇಶದ ಉತ್ತರದ ಗಡಿಯಲ್ಲಿ ಕೊಲ್ಹಾಪುರದಿಂದ ಸೊಲ್ಲಾಪುರದ ವರೆಗೆ ಚಾಚಿದ 'ಡೆಕ್ಕನ್ ಸಂಸ್ಥಾನ'ಗಳಲ್ಲಿ ಕನ್ನಡ ಭಾಷಿಕರು ಅಲ್ಲಲ್ಲಿ ಹರಡಿಕೊಂಡಿದ್ದುದರಿಂದ) ಲಕ್ಷ್ಯ ಕೇಂದ್ರೀಕರಿಸುವುದು. ಕೊನೆಯ (ಮೂರನೆಯ) ಕಾರ್ಯಕ್ರಮದ ಆಚರಣೆಗಾಗಿ ಮಹಾಸಮಿತಿಯು ದಿವಂಗತ ಶ್ರೀ ಬಿ.ಎನ್. ದಾತಾರರವರು ಕಾರ್ಯಾಧ್ಯಕ್ಷರಾಗಿಯೂ ಶ್ರೀ ವಿನೀತ ರಾಮಚಂದ್ರರಾಯರು ಕಾರ್ಯದರ್ಶಿಗಳಾಗಿಯೂ ಇರುವ ಉಪಸಮಿತಿಯೊಂದನ್ನು ನಿಯಮಿಸಿತು.

ದಕ್ಷಿಣ ಸಂಸ್ಥಾನಗಳ ಅಧಿಪತಿಗಳು 'ವಿಲೀನೀಕರಣ'ದ ಕ್ರಮವನ್ನು ವಿಫಲಗೊಳಿಸಲು 'ದಕ್ಷಿಣ ಸಂಸ್ಥಾನಗಳ ಒಕ್ಕೂಟ (Deccan States Union)ವನ್ನು ರಚಿಸಿಕೊಂಡು, ಅದಕ್ಕೆ ಸಂಸ್ಥಾನಗಳಿಗೆ ಸಂಬಂಧಿಸಿದ ಭಾರತ ಒಕ್ಕೂಟದ ಮಂತ್ರಿಶಾಖೆಯ ಮನ್ನಣೆಯನ್ನು ಪಡೆಯಲು ಪ್ರಯತ್ನಿಸಿದರು ; ಆದರೆ ಕಾಲಗತಿ ಅವರಿಗೆ ಪ್ರತಿಕೂಲವಾಗಿದ್ದಿತು. 'ದಕ್ಷಿಣ ಕನ್ನಡ ಸಂಸ್ಥಾನಗಳ ಒಕ್ಕೂಟ'ದ ವಿರುದ್ಧವಾಗಿ ಆ ಸಂಸ್ಥಾನಗಳಲ್ಲಿಯ ಪ್ರಜಾಪರಿಷತ್ತುಗಳು ಹೂಡಿದ ಆಂದೋಲನವು ದುರ್ದಮನೀಯವಾಯಿತು. ಜಮಖಂಡಿಯ ತರುಣ ಅಧಿಪತಿ (ದಿವಂಗತ ಶ್ರೀಮಂತ ಪರಶುರಾಮರಾವ ಪಟವರ್ಧನ) ಪ್ರಜೆಗಳ ನಿರ್ಣಯವೇ ತಮ್ಮ ನಿರ್ಣಯವೆಂದು ಸಾರಿದ್ದರಿಂದ ಆ 'ಒಕ್ಕೂಟ' ಹೆಚ್ಚು ಕಾಲ ಜೀವಿಸುವುದು ಸಾಧ್ಯ ವಿರಲಿಲ್ಲ. ಸಂಸ್ಥಾನದ ಆಡಳಿತದ ವಿಷಯದಲ್ಲಿ ಆ ಅಧಿಪತಿ ಜಮಖಂಡಿ ಪ್ರಜಾಪರಿಷತ್ತಿನ ಹಾಗೂ ಅದರ ಅಧ್ಯಕ್ಷರಾದ ಶ್ರೀ ಎ.ಜೆ. ದೊಡ್ಡಮೇಟಿಯವರ ಸಲಹೆ ಪಡೆದೇ ನಿರ್ಣಯ ತೆಗೆದುಕೊಳ್ಳುತ್ತಿದ್ದರು. 1947 ಡಿಸೆಂಬರ 12 ರಂದು ಬನಹಟ್ಟಿಯಲ್ಲಿ ಸೇರಿದ ಆ ಪ್ರಜಾಪರಿಷತ್ತಿನ 12ನೆಯ ಅಧಿವೇಶನವು ಆ ತರುಣ ಅಧಿಪತಿಯ ವಿಶಾಲ ಮನೋಭಾವವನ್ನು ಈ ರೀತಿ ಅಭಿನಂದಿಸಿತು : "ವಿಲೀನೀಕರಣದ ಕ್ರಮ ಕೈಗೊಂಡು, ತಮ್ಮ ಪ್ರಜೆಗಳ ಹಿತರಕ್ಷಣೆಗಾಗಿ ರಾಜತ್ವದ ಹಕ್ಕುಗಳನ್ನು ತಾನಾಗಿ ಬಿಟ್ಟುಕೊಡಲು ಮುಂದೆ ಬಂದ ಭಾರತದಲ್ಲಿಯ ಪ್ರಥಮ ಸಂಸ್ಥಾನಾಧಿಪತಿ ಜಮಖಂಡಿಯ ರಾಜಾಸಾಹೇಬರಾಗಿದ್ದಾರೆಂಬುದು ಗಮನಾರ್ಹ ಘಟನೆಯಾಗಿದೆ." "ಅವರ ಈ ಮಹತ್ತಮ ತ್ಯಾಗದ ಕೃತಿ"ಗಾಗಿ ಪರಿಷತ್ತು ತುಂಬಾ ಮೆಚ್ಚುಗೆಯನ್ನು ವ್ಯಕ್ತಪಡಿಸಿತು. ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಶ್ರೀ ದೊಡ್ಡಮೇಟಿಯವರು, ಭಾರತದ ಒಕ್ಕೂಟದಲ್ಲಿ ತಮ್ಮ ಸಂಸ್ಥಾನವನ್ನು ವಿಲೀನಗೊಳಿಸಲು ರಾಜಾಸಾಹೇಬರು ಮುಂದೆ ಬಂದುದು "ಅತ್ಯಪೂರ್ವವಾದ ಕ್ರಮ"ವೆಂದು ಪ್ರಶಂಸಿಸಿದರಲ್ಲದೆ, ಇದು "ದಕ್ಷಿಣ ಸಂಸಾ ನಗಳ ಒಕ್ಕೂಟಕ್ಕೊಂದು ಬಲವಾದ ಪೆಟ್ಟು"ಎಂದು ಸರಿಯಾಗಿಯೇ ಬಣ್ಣಿಸಿದರು. ಪ್ರಜಾಪರಿಷತ್ತಿನ ಅಧ್ಯಕ್ಷರಾದ ಶ್ರೀ ದೊಡ್ಡಮೇಟಿಯವರಿಗೆ ರಾಜಾ ಸಾಹೇಬರು ಬರೆದ ಪತ್ರಗಳಲ್ಲಿಯ ಒಂದು ಅವತರಣಿಕೆಯನ್ನು ಇಲ್ಲಿ ಕೊಡುವೆವು : "ಜಮಖಂಡಿಯಲ್ಲಿ ಪ್ರಜಾಪರಿಷತ್ತು ಬಹುಸಂಖ್ಯ ಜನತೆಯನ್ನು ಪ್ರತಿನಿಧಿಸುತ್ತದೆ. ಆದುದರಿಂದ ಪರಿಷತ್ತು ನಾನು ದಕ್ಷಿಣ ಸಂಸ್ಥಾನಗಳ ಒಕ್ಕೂಟಕ್ಕೆ ಸೇರಬೇಕೆಂದು ಸಲಹೆ ಕೊಟ್ಟ ಹೊರತು ನಾನದಕ್ಕೆ ಸೇರಲಾರೆ ; ಏಕೆಂದರೆ 'ಪ್ರಜೆಗಳ ಸಾರ್ವಭೌಮತ್ವ'ವನ್ನು ನಾನೀಗಾಗಲೆ ಅಂಗೀಕರಿಸಿಬಿಟ್ಟಿರುವೆ. "ದಕ್ಷಿಣ ಸಂಸ್ಥಾನಗಳಲ್ಲಿಯ ಜನತಾಂದೋಲನವು ಎಷ್ಟು ಪ್ರಬಲವಾಯಿತೆಂದರೆ, 'ಒಕ್ಕೂಟ'ದ ಯೋಜನೆಯನ್ನು ಕೈಬಿಡಲೇ ಬೇಕಾಯಿತು, ಮತ್ತು ಆ ಒಕ್ಕೂಟದ ಘಟಕ–ಸಂಸ್ಥಾನಗಳು ವಿಲಯನಕ್ಕೆ ಒಪ್ಪಲೇಬೇಕಾಯಿತು. ಮುಖ್ಯವಾಗಿ ಕನ್ನಡಿಗರ ಪ್ರಯತ್ನದಿಂದಲೇ ಉತ್ತರ ಕರ್ನಾಟಕದ ಗಡಿಗಳಲ್ಲಿಯ ಸಂಸ್ಥಾನಗಳ ವಿಲಯನವು ಕೈಗೂಡಿತು ; ಆದರೆ ಮುಂಬಯಿ ಸರಕಾರವು ಆ ಸಂಸ್ಥಾನಗಳ ಭಾಗಗಳನ್ನು ನೆರೆಯ ತಾಲೂಕುಗಳಲ್ಲಿ ವಿಲೀನಗೊಳಿಸುವ ನಿರ್ಣಯವನ್ನು ತೆಗೆದುಕೊಳ್ಳುವಾಗ, ಕೆಲವು ಪಟ್ಟಭದ್ರ ಹಿತಗಳ ಪ್ರಭಾವದಿಂದ ಕರ್ನಾಟಕಕ್ಕೆ ನ್ಯಾಯವಾಗಿ ಬರಬೇಕಾದ ಅವುಗಳಲ್ಲಿಯ ಕನ್ನಡ ಪ್ರದೇಶಗಳ ಬಹುಭಾಗವು ಹಾಗೆ ಬಾರದಂತೆ (ಕರ್ನಾಟಕದ ಪ್ರತಿನಿಧಿಗಳು ಎಷ್ಟು ಪ್ರಯತ್ನಿಸಿದರೂ) ಕ್ರಮಗಳನ್ನು ಕೈಗೊಳ್ಳಲಾಯಿತು.

ಅಂತೂ ಭಾರತದ ರಾಜ್ಯಘಟನೆ ಜಾರಿಯಲ್ಲಿ ಬರುವ ಹೊತ್ತಿನಲ್ಲಿ ಕರ್ನಾಟಕವು ಮೂರು ವಿಧವಾದ 'ರಾಜ್ಯ'ಗಳ ಪ್ರಶ್ನೆಯನ್ನು ಎದುರಿಸಬೇಕಾಗಿ ಬಂದಿತು : (1) 'ಅ' ವರ್ಗದ ರಾಜ್ಯಗಳು—Part

A States (ಮುಂಚಿನ ಗವರ್ನರರ ಅರ್ಥಾತ್ ಬ್ರಿಟಿಷ್ ಭಾರತದ ಪ್ರಾಂತಗಳು)—ಎಂದರೆ, ಮುಂಬಯಿ ಹಾಗೂ ಮದ್ರಾಸ ರಾಜ್ಯಗಳು ; (2) 'ಬ' ವರ್ಗದ ರಾಜ್ಯಗಳು—Part B States (ಮುಂಚಿನ ಸಂಸ್ಥಾನಗಳು)—ಎಂದರೆ ಹೈದರಾಬಾದ ಹಾಗು ಮೈಸೂರು ಮತ್ತು (3) 'ಕ' ವರ್ಗದ ರಾಜ್ಯ (ಮುಂಚಿನ ಚೀಫ್ ಕಮಿಶನರ ಪ್ರಾಂತ)—ಎಂದರೆ ಕೊಡಗು. ಇನ್ನೊಂದು 'ಅ' ವರ್ಗದ ರಾಜ್ಯ—'ಆಂಧ್ರ' ಕೆಲಕಾಲದ ಮೇಲೆ ಅಸ್ತಿತ್ವದಲ್ಲಿ ಬಂದಿತು. ಈಗ ಸಮಸ್ಯೆ ಕೈಗೆಟಕುವಷ್ಟು ಹಾಳತವಾಯಿತು ; ಗಡಿಗಳನ್ನು ತರ್ಕಶುದ್ಧವಾಗಿ ಪುನರ್ನಿರ್ಧರಿಸಿ ಸಾಮರಸ್ಯಯುತ ರಾಜ್ಯಗಳನ್ನು (ಇವಕ್ಕೇ 'ಭಾಷಾನ್ವಯ ರಾಜ್ಯ'ಗಳೆಂದು ಹೆಸರು) ನಿರ್ಮಿಸುವ ಕೆಲಸವು ಇನ್ನೂ ಹಾಗೆಯೆ ಉಳಿಯಿತು.

### ಕ್ರಿ.ಶ. 1946 ಹಾಗೂ ಅನಂತರ

ಏಕೀಕರಣ ಆಂದೋಲನವು ಕೇಂದ್ರದೊಡನೆ ಹಾಗೂ 'ಕಾಂಗ್ರೆಸ್ ವರಿಷ್ಠ'ರೊಡನೆ ಯಾವ ರೀತಿ ವ್ಯವಹರಿಸಿತೆಂಬುದನ್ನು ಮೊದಲು ನೋಡುವ.

ಭಾರತೀಯ ರಾಜ್ಯಘಟನಾಸಭೆಯು 1946ರ ಡಿಸೆಂಬರಿನಲ್ಲಿ ಕಾರ್ಯವನ್ನು ಪ್ರಾರಂಭಿಸಿತು. ಭಾರತವು ಜನತೆಯ ಅಪೇಕ್ಷೆಗನುಗುಣವಾದ ಹೊಸ ರಾಜ್ಯಘಟನೆಯನ್ನು ಪಡೆಯುವುದೆಂಬುದು ಈಗ ಸುಸ್ಪಷ್ಟವಾಯಿತು. ಇದನ್ನನುಲಕ್ಷಿಸಿ ಭಾಷಾನ್ವಯ ಪ್ರಾಂತವಾದಿಗಳು ಕಾರ್ಯ ಪ್ರವೃತ್ತರಾದರು. ಭಾಷಾನ್ವಯ ರಾಜ್ಯರಚನೆಯ ತತ್ತ್ವವನ್ನು ಬೆಂಬಲಿಸುವ ಘಟನಾಸಮಿತಿಸದಸ್ಯರ ಹಾಗೂ ಇತರ ಸಂಘ ಸಂಸ್ಥೆಗಳ ಕನ್ವೆನ್ಶನ್ ಒಂದು 1946ರ ಡಿಸೆಂಬರ 8ರಂದು ನವದಿಲ್ಲಿಯಲ್ಲಿ ಡಾ॥ ಪಟ್ಟಾಭಿ ಸೀತಾರಾಮಯ್ಯನವರ ಅಧ್ಯಕ್ಷತೆಯಲ್ಲಿ ಜರಗಿತು. ಶ್ರೀ ರಂಗನಾಥ ದಿವಾಕರರಿಂದ ಮಂಡಿಸಲ್ಪಟ್ಟು ಡಾ॥ ಎಂ.ಆರ್. ಜಯಕರ, ಡಾ॥ ಶ್ಯಾಮಪ್ರಸಾದ ಮುಖರ್ಜಿ ಹಾಗೂ ಇತರರಿಂದ ಪುರಸ್ಕರಿಸಲ್ಪಟ್ಟ ನಿರ್ಣಯವೊಂದು ಐಕಮತ್ಯದಿಂದ ಸ್ವೀಕೃತವಾಯಿತು. ಭಾಷಾನ್ವಯ ಪ್ರಾಂತರಚನೆಯ ತತ್ತ್ವವನ್ನು ಅಂಗೀಕರಿಸಬೇಕೆಂದೂ, ಹೊಸ ರಾಜ್ಯಘಟನೆ ಸ್ವೀಕೃತವಾದೊಡನೆ ಅದಕ್ಕೆ ಬೇಕಾದ ಯಂತ್ರಣೆಯನ್ನು ಏರ್ಪಡಿಸಬೇಕೆಂದೂ ಆ ನಿರ್ಣಯವು ಘಟನಾಸಮಿತಿಗೆ ಶಿಫಾರಸುಮಾಡಿತು.

1947ರ ಏಪ್ರಿಲ್ ತಿಂಗಳಲ್ಲಿ ಮುಂಬಯಿ ಹಾಗೂ ಮದ್ರಾಸ ಶಾಸನಸಭೆಗಳು 'ಭಾಷಾನ್ವಯ ರಾಜ್ಯರಚನೆ'ಯ ನಿರ್ಣಯವನ್ನು ಅಂಗೀಕರಿಸಿದವು. ಮುಂಬಯಿಯಲ್ಲಿ ಶ್ರೀ ಎ.ಜೆ. ದೊಡ್ಡಮೇಟಿಯವರೂ ಮದ್ರಾಸಿನಲ್ಲಿ ಡಾ॥ ಪಿ. ಸುಬ್ಬರಾಯನ್ ಅವರೂ ನಿರ್ಣಯಗಳನ್ನು ಮಂಡಿಸಿದರು.

1947ರ ಆಗಸ್ಟ್ 15ರಂದು ಬ್ರಿಟಿಷರಿಂದ ಸತ್ತಾ ಹಸ್ತಾಂತರವಾಯಿತು. ಆದರೆ ಘಟನಾಸಮಿತಿ ಈ ವಿಷಯವನ್ನು ಕೈಗೆತ್ತಿಕೊಳ್ಳುವ ಲಕ್ಷಣ ಕಾಣಿಸಲಿಲ್ಲ. ಕಾಸರಗೋಡಿನಲ್ಲಿ 1947ರ ಡಿಸೆಂಬರ 27ರಂದು ಜರಗಿದ 11ನೆಯ ಅಖಿಲ ಕರ್ನಾಟಕ ಏಕೀಕರಣ ಪರಿಷತ್ತಿನಲ್ಲಿ ಈ ವಿಷಯದಲ್ಲಿ ಕನ್ನಡಿಗರಿಗೆನಿಸುವ ವಿವಂಚನೆಯು ವ್ಯಕ್ತಗೊಳಿಸಲ್ಪಟ್ಟಿತು. ಕರ್ನಾಟಕದ ವಿವಿಧಭಾಗಗಳಿಂದ ಐನೂರಕ್ಕೂ ಹೆಚ್ಚು ಜನ ಪ್ರತಿನಿಧಿಗಳು ಪರಿಷತ್ತಿನ ಕಾರ್ಯಕಲಾಪಗಳಲ್ಲಿ ಭಾಗವಹಿಸಿದ್ದರು. "ಸ್ವಾತಂತ್ರ್ಯವು ಪ್ರಾಪ್ತವಾದ ಮೇಲೂ" ಕರ್ನಾಟಕ ರಾಜ್ಯರಚನೆಯನ್ನು ಮುಂದಕ್ಕೆ ಹಾಕಿದುದಕ್ಕೆ ಪರಿಷತ್ತು "ತನ್ನ ತೀವ್ರ ನಿರಾಶೆಯನ್ನೂ ನ್ಯಾಯವಾದ ಸಂತಾಪವನ್ನೂ" ಗೊತ್ತುವಳಿಯ ಮೂಲಕ ತೋರ್ಪಡಿಸಿತು.

1948ರ ಜನವರಿ 23-24ರಂದು ಶ್ರೀ ಎಸ್. ನಿಜಲಿಂಗಪ್ಪನವರ ನೇತೃತ್ವದಲ್ಲಿ ಕರ್ನಾಟಕದ ಪ್ರತಿನಿಧಿಗಳ ಶಿಷ್ಟಮಂಡಲವೊಂದು ನವದಿಲ್ಲಿಯಲ್ಲಿ ಮಹಾತ್ಮಾಗಾಂಧಿಯವರ ಹಾಗೂ ಕಾಂಗ್ರೆಸ್ ಕಾರ್ಯ

ಸಮಿತಿ ಸದಸ್ಯರ ಭೇಟಿ ಪಡೆದು ಈ ಪ್ರಶ್ನೆಯನ್ನು ಚರ್ಚಿಸಿತು. ಆಗ ಆಂಧ್ರ ಕರ್ಣಾಟಕಗಳ ಪ್ರಶ್ನೆಯನ್ನು ಅನುಕೂಲ ರೀತಿಯಲ್ಲಿ ಕೈಗೆತ್ತಿಕೊಳ್ಳಲಾಗುವುದೆಂದು ಅವರಿಗೆ ತಿಳಿಸಲಾಯಿತು. ಕಾಂಗ್ರೆಸ್ ಅಧ್ಯಕ್ಷರೂ ಘಟನಾ ಸಮಿತಿಯ ಅಧ್ಯಕ್ಷರೂ ಆಗಿದ್ದ ಡಾ॥ ರಾಜೇಂದ್ರಪ್ರಸಾದರವರು 1948ರ ಫೆಬ್ರವರಿ 9 ರಂದು ಶ್ರೀ ಎಸ್. ನಿಜಲಿಂಗಪ್ಪನವರಿಗೆ ಬರೆದ ಪತ್ರದಲ್ಲಿ—"ಕರ್ಣಾಟಕಕ್ಕೆ ವಿರುದ್ಧವಾಗುವ ರೀತಿಯಲ್ಲಿ ಪಕ್ಷಪಾತದಿಂದ ನಡೆಯುವ ಉದ್ದೇಶವಿಲ್ಲ, ಇರಲಾರದು ; ಅಂತಹ ಭಾವನೆಯುಂಟಾಗುವಂತೆ–ಘಟನಾ ಸಮಿತಿಯಾಗಲಿ, ಸರಕಾರವಾಗಲಿ ಏನೂ ಮಾಡಲಿಕ್ಕಿಲ್ಲವೆಂಬುದಾಗಿ ನನಗೆ ಖಾತರಿಯಿದೆ" ಎಂದು ತಿಳಿಸಿದರು.

ಘಟನಾಸಮಿತಿಯ ಅಧ್ಯಕ್ಷರು 1948ರ ಜೂನ್ 17ರಂದು ಹೊರಡಿಸಿದ ನೋಟಿಫಿಕೇಶನ್ ಅನ್ವಯ 'ಭಾಷಾನ್ವಯ ರಾಜ್ಯ ರಚನಾ ಆಯೋಗ'ವನ್ನು (ದಾರ್ ಸಮಿತಿಯೆಂದು ಹೆಸರಾದುದನ್ನು) ನಿಯಮಿಸಿದರು. ಆಂಧ್ರ, ಕರ್ಣಾಟಕ, ಕೇರಳ ಪ್ರಾಂತಗಳ ರಚನೆಯ ಸಾಧಕ ಬಾಧಕ ಅಂಶಗಳನ್ನು ಕುರಿತು ವರದಿಮಾಡಲು ಅದನ್ನು ಕೇಳಿಕೊಳ್ಳಲಾಯಿತು. ದೇಶದಲ್ಲಿ, ತತ್ರಾಪಿ ಕರ್ಣಾಟಕದಲ್ಲಿ ಸಂಚರಿಸಿ, 1000ಕ್ಕಿಂತ ಹೆಚ್ಚು ಮನವಿಗಳನ್ನು ಸ್ವೀಕರಿಸಿ, 700ಕ್ಕಿಂತ ಹೆಚ್ಚು ಸಾಕ್ಷಿದಾರರನ್ನು ಪರೀಕ್ಷಿಸಿ, 1948ರ ಡಿಸೆಂಬರದಲ್ಲಿ ಆಯೋಗವು ತನ್ನ ವರದಿಯನ್ನು ಸಾದರಪಡಿಸಿತು ; ಮತ್ತು ಹೇಳಿತೇನೆಂದರೆ, "ಭಾಷಾನ್ವಯ ಪ್ರಾಂತ ರಚನೆಯನ್ನು ಕೈಗೊಳ್ಳಬಾರದು."

ಆಯೋಗದ ವರದಿಯನ್ನು ಸಾರ್ವತ್ರಿಕವಾಗಿ, ತತ್ರಾಪಿ ಕರ್ಣಾಟಕ–ಆಂಧ್ರಗಳಲ್ಲಿ ಅತಿ ತೀಕ್ಷ್ಣವಾಗಿ ಖಂಡಿಸಲಾಯಿತು. ಉಲ್ಬಣಗೊಂಡ ಜನಾಭಿಪ್ರಾಯವನ್ನು ಶಮನಗೊಳಿಸಲು 1948ರ ಡಿಸೆಂಬರದಲ್ಲಿ ಜಯಪುರದಲ್ಲಿ ಸಮಾವೇಶಗೊಂಡ ಕಾಂಗ್ರೆಸ್ಸು ಶ್ರೀ ಜವಾಹರಲಾಲ್ ನೆಹರು, ಸರ್ದಾರ ವಲ್ಲಭಭಾಯಿ ಪಟೇಲ ಹಾಗೂ ಡಾ॥ ಪಟ್ಟಾಭಿ ಸೀತಾರಾಮಯ್ಯನವರಿರುವ ತ್ರಿಮೂರ್ತಿಸಮಿತಿಯೊಂದನ್ನು ಈ ಪ್ರಶ್ನೆಯ ಪುನಃ ಪರಿಶೀಲನೆಗಾಗಿ ನಿಯಮಿಸಿತು.

ಈ ಹೊತ್ತಿಗೆ, ಎಂದರೆ 1949ರ ಜನವರಿ 19ರಂದು ಹುಬ್ಬಳ್ಳಿಯಲ್ಲಿ ಸಭೆ ಸೇರಿದ ಕೆ.ಪಿ.ಸಿ.ಸಿ.ಯು ದಾರ್ ಆಯೋಗದ ವರದಿಯನ್ನು ಪರಿಶೀಲಿಸಿ, ಅದರ ಶಿಫಾರಸುಗಳು ವಿಷಾದಕರವಾಗಿವೆ ಮಾತ್ರವಲ್ಲ, ಅವು ಪ್ರಗತಿ-ವಿರೋಧಕ ಹಾಗೂ ಪ್ರತಿಗಾಮಿ ಸ್ವರೂಪದವಾಗಿವೆಯೆಂದೂ ಅವು ಆಯೋಗದ ಅಧಿಕಾರವ್ಯಾಪ್ತಿಯನ್ನು ಖಂಡಿತ ಮೀರಿವೆಯೆಂದೂ ಅಭಿಪ್ರಾಯವನ್ನು ವ್ಯಕ್ತಪಡಿಸಿತು.

ಜೆ.ವಿ.ಪಿ. ವರದಿಯು (ಜಯಪುರದ ಕಾಂಗ್ರೆಸ್ಸು ನಿಯಮಿಸಿದ ತ್ರಿಮೂರ್ತಿಸಮಿತಿಯ ವರದಿಯು) ದಾರ್ ಆಯೋಗದ ವರದಿಗಿಂತಲೂ ಒಂದು ಹೆಜ್ಜೆ ಮುಂದಿದ್ದಿತು ; ಅದು ಆಂಧ್ರಪ್ರಾಂತ ರಚನೆಯನ್ನು ಒಪ್ಪಿಕೊಂಡಿತಾದರೂ ಇತರ ಭಾಷಾಪ್ರದೇಶಗಳ ಕೇಳಿಕೆಗಳನ್ನು ತಿರಸ್ಕರಿಸಿತು. ಆದರೂ ಅದು ಇಂತು ಹೇಳಿತು : "ಸಾರ್ವಜನಿಕ ಅಭಿಪ್ರಾಯವು ಆಗ ಹಯುತವೂ ಅತಿಪ್ರಚಂಡವೂ ಆದರೆ, ಪ್ರಜಾಪ್ರಭುತ್ವವಾದಿಗಳಾದ ನಾವು ಅದಕ್ಕೆ ಮಣಿಯಲೇ ಬೇಕಾಗುವುದು ; ಆದರೆ ಹಾಗೆ ಮಾಡುವಾಗ ಅಖಿಲಭಾರತದ ಹಿತದೃಷ್ಟಿಯಿಂದ ಕೆಲವು ಪರಿಮಿತಿಗಳಿಗೆ ಒಳಪಡಬೇಕಾಗುವುದು ".

1949ರ ಎಪ್ರಿಲ್ 1 ರಂದು ಪ್ರಕಟವಾಗಿ ಮುಂದೆ ಕಾಂಗ್ರೆಸ್ ಕಾರ್ಯಸಮಿತಿಯಿಂದ ಅಂಗೀಕೃತವಾದ ಈ ವರದಿ ಕರ್ಣಾಟಕ ಕಾಂಗ್ರೆಸ್ಸಿನಲ್ಲಿ ಬಿಕ್ಕಟ್ಟನ್ನೆ ಉಂಟುಮಾಡಿತು. 1949ರ ಡಿಸೆಂಬರ್ 3ರಂದು ಕೆ.ಪಿ.ಸಿ.ಸಿ. ಕೌನ್ಸಿಲ್ ಸಭೆಸೇರಿ, ಕೇಂದ್ರದಲ್ಲಿಯ ಹಾಗೂ ರಾಜ್ಯಗಳಲ್ಲಿಯ ಕರ್ಣಾಟಕದ ಶಾಸಕರು ತಮ್ಮ ನಿಷೇಧ ಸೂಚಿಸಲು ಸಾಂಘಿಕವಾಗಿ ತಮ್ಮ ಸ್ಥಳಗಳಿಗೆ ರಾಜಿನಾಮೆಗಳನ್ನು ಸಲ್ಲಿಸಬೇಕೆಂದೂ ಇದಕ್ಕೆ ಕೇಂದ್ರ ಪಾರ್ಲಿಮೆಂಟರಿ ಬೋರ್ಡಿನ ಅನುಮತಿಯನ್ನು ಪಡೆಯಬೇಕೆಂದೂ ಕೇಳಿಕೊಂಡಿತು.

ಈ ನಿರ್ಣಯಕ್ಕೆ ಕಾಂಗ್ರೆಸ್ ಕಾರ್ಯಸಮಿತಿಯ ತೀವ್ರ ಪ್ರತಿಕ್ರಿಯೆಯೆಂದರೆ ; ಅದು "ಅಚಾತುರ್ಯ ದಿಂದ ಹಾಗೂ ಅವಿಚಾರದಿಂದ" "ತೀರ ಭಾವಾವೇಗಕ್ಕೆ ಒಳಗಾಗಿ" ವಿಷಯವನ್ನು ವಿಚಾರಿಸಿದೆ ; ಅದು "ಶಿಸ್ತುಗೇಡಿತನದ್ದು ಹಾಗೂ ದೇಶಹಿತಕ್ಕೆ ಅಪಾಯಕಾರಿಯಾದುದು" ಆಗಿದೆ. ಆದರೆ ಅದು ಹಾಗಾಗಿರಲಿಲ್ಲ.

ಕೆ.ಪಿ.ಸಿ.ಸಿ. ಕೌನ್ಸಿಲು ರಾಜೀನಾಮೆಗಳನ್ನು ಕೇಳಿ ಕೈಗೊಂಡ ನಿರ್ಣಯಕ್ಕೆ ಅಭೂತಪೂರ್ವ ಸ್ವಾಗತ ದೊರೆಯಿತು. ತೀರ ಕೆಲವು ಅಪವಾದಗಳನ್ನು ಬಿಟ್ಟರೆ, ಮುಂಬಯಿ ಕರ್ನಾಟಕದ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಬಹುಸಂಖ್ಯ ಶಾಸಕರು ಹಾಗೂ ಕಾಂಗ್ರೆಸಿಗರಲ್ಲದ ಶಾಸಕರು ಕೂಡ ತಮ್ಮ ರಾಜೀನಾಮೆ ಪತ್ರಗಳನ್ನು ಕೆ.ಪಿ.ಸಿ.ಸಿ. ಗೆ ಔಪಚಾರಿಕವಾಗಿ ಸಲ್ಲಿಸಿದರು.

ಕರ್ನಾಟಕ ರಾಜ್ಯರಚನೆಯ ಪ್ರಶ್ನೆಯನ್ನೇನೋ ಈ ರೀತಿ ಬದಿಗೆ ಸರಿಸಿಡಲಾಯಿತು ; 1950ರ ಜನವರಿ 26 ರಂದು, ಎಂದರೆ ಭಾರತೀಯ ರಾಜ್ಯಘಟನೆಯ ಔಪಚಾರಿಕ ಕಾರ್ಯಾರಂಭ ದಿನದಂದು ಆಂಧ್ರ ಪ್ರಾಂತವೂ ಅಸ್ತಿತ್ವದಲ್ಲಿ ಬರಲಿಲ್ಲ.

ಈಗ ಮೈಸೂರು ಸಂಸ್ಥಾನದಲ್ಲಿ ಸಂಯುಕ್ತ ಕರ್ನಾಟಕ ರಾಜ್ಯರಚನೆಯ ಪ್ರಯತ್ನರೂಪವಾಗಿ ನಡೆದ ಘಟನಾವಳಿಯನ್ನಷ್ಟು ನೋಡುವ. ದಾವಣಗೆರೆಯ ಅಖಿಲ ಕರ್ನಾಟಕ ಕನ್ವೆನ್‌ಶನ್ನು (1946ರ ಆಗಸ್ಟ್ ತಿಂಗಳಲ್ಲಿ ಜರಗಿದುದು) ಮೈಸೂರನ್ನೊಳಗೊಂಡ ಕರ್ನಾಟಕರಾಜ್ಯ ನಿರ್ಮಾಣಕ್ಕೆ ಅನುಕೂಲ ವಾದ ನಿರ್ಣಯವನ್ನು ಸ್ವೀಕರಿಸಿದ್ದಿತು. ಅದೇ ವರ್ಷ ನವೆಂಬರ್ 23 ರಂದು ಬೆಂಗಳೂರಿನಲ್ಲಿ ಶ್ರೀ ಕೆ.ಸಿ. ರೆಡ್ಡಿಯವರ ಅಧ್ಯಕ್ಷತೆಯಲ್ಲಿ ಜರಗಿದ ಮೈಸೂರು ಕಾಂಗ್ರೆಸ್ ಅಧಿವೇಶನವು ಸಕಲ ಕನ್ನಡ ಭಾಷಿಕ ಪ್ರದೇಶಗಳನ್ನೊಳಗೊಂಡ ಕರ್ನಾಟಕವನ್ನು ಬೇಗನೆಯೆ ರಚಿಸಬೇಕೆಂದು ಅಭಿಪ್ರಾಯಪಟ್ಟಿತು. 1947 ರಲ್ಲಿ ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರಕಾರ ಸ್ಥಾಪನೆಗಾಗಿ ನಡೆದ ಆಂದೋಲನವು ತೀವ್ರಗೊಂಡಿತು ಮಾತ್ರವಲ್ಲ, ಅದು ಸಫಲವಾಗಿಯೂ ಕೊನೆಗೊಂಡಿತು. 1947ರ ಅಕ್ಟೋಬರ್ 24 ರಂದು ಅಧಿಕಾರ ಸ್ವೀಕಾರ ಮಾಡಿದ ಕೆಲವು ಜನ ಮಂತ್ರಿಗಳು ಅದೇ ದಿನ ಬೆಂಗಳೂರಿನಲ್ಲಿ ಏರ್ಪಟ್ಟ ಸಾರ್ವಜನಿಕ ಸಭೆಯಲ್ಲಿ ಭಾಷಣಮಾಡುತ್ತ, ಮೈಸೂರು ಮಹಾರಾಜರ ಆಶ್ರಯದಲ್ಲಿ ಸಂಯುಕ್ತಕರ್ನಾಟಕ ರಾಜ್ಯವನ್ನು ಪಡೆದು ಕೊಳ್ಳುವುದೇ ಮುಂದಿನ ಹೆಜ್ಜೆಯೆಂದು ಘೋಷಿಸಿದರು.

ಈ ಉದ್ದೇಶವನ್ನು ಲಕ್ಷ್ಯದಲ್ಲಿಟ್ಟುಕೊಂಡು ಮೈಸೂರು ಕಾಂಗ್ರೆಸ್ಸು ವಸ್ತುಸ್ಥಿತಿಯ ಬಗ್ಗೆ ಅಂಕೆ— ಅಂಶಗಳನ್ನು ಸಂಗ್ರಹಿಸಲು ಐದು ಜನರ ಸಮಿತಿಯೊಂದನ್ನು ನಿಯಮಿಸಿ, ಅದು ಅಖಿಲ ಕನ್ನಡನಾಡಿನಲ್ಲಿ ಸಂಚಾರ ಕೈಗೊಂಡು ತನ್ನ ವರದಿಯನ್ನೊಪ್ಪಿಸಬೇಕೆಂದು ಆದೇಶವನ್ನಿತ್ತಿತು. 1949ರ ಜನವರಿ 19ರಂದು ಹರಿಹರದಲ್ಲಿ ಸೇರಿದ ಕೆ.ಪಿ.ಸಿ.ಸಿ. ಸಭೆಯು ಈ ಸೂಚನೆಗೆ ತನ್ನ ಅನುಕೂಲ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿ ಒಂದು ನಿರ್ಣಯವನ್ನು ಅಂಗೀಕರಿಸಿತು ; ಅದರಲ್ಲಿ ಪ್ರಥಮ ಸಲ ಸಂಯುಕ್ತ ಕರ್ನಾಟಕ ರಾಜ್ಯದ ಘಟನಾತ್ಮಕ ಪ್ರಮುಖರನ್ನಾಗಿ ಮೈಸೂರು ಮಹಾರಾಜರನ್ನು ಸ್ವೀಕರಿಸಬೇಕೆಂದೂ ಆ ರಾಜ್ಯದಲ್ಲಿ ಮೈಸೂರು ಸಂಸ್ಥಾನವೂ ಸೇರಬೇಕೆಂದೂ ಹೇಳಲಾಯಿತು. ಮೈಸೂರು ಕಾಂಗ್ರೆಸ್ಸು ನಿಯಮಿಸಿದ ಐವರ ಸಮಿತಿ, ಮೈಸೂರನ್ನೊಳಗೊಂಡ ಕರ್ನಾಟಕ ರಾಜ್ಯವನ್ನು ನಿರ್ಮಿಸಬೇಕೆಂದು ಶಿಫಾರಸು ಮಾಡಿತು. ಆದರೆ ಜೆ.ವಿ.ಪಿ. ವರದಿ ಸೂಚಿಸಿದ ಕೆಲವು ಆತಂಕಗಳನ್ನು ಗಮನಿಸಿ ಅದರಲ್ಲಿಯ ಮೂವರು ಸದಸ್ಯರು ಅಂತಹ ರಾಜ್ಯರಚನೆಯನ್ನು ಕೂಡಲೆ ಕೈಗೊಳ್ಳದೆ, ಯುಕ್ತ ಸಮಯದಲ್ಲಿ ಅದಕ್ಕಾಗಿ ಕ್ರಮ ಕೈಗೊಳ್ಳಬೇಕೆಂದು ಅಭಿಪ್ರಾಯ ವ್ಯಕ್ತಪಡಿಸಿದರು. ಆದರೆ ಉಳಿದವರು ಕೂಡಲೆ ಅಂತಹ ರಾಜ್ಯ ರಚನೆಯಾಗಬೇಕೆಂದು ಅಭಿಪ್ರಾಯಪಟ್ಟರು. ತದನಂತರದಲ್ಲಿ 1949ರ ನವೆಂಬರ 5ರಂದು ಸೇರಿದ

ಮೈಸೂರು ಕಾಂಗ್ರೆಸ್ ಕಾರ್ಯಸಮಿತಿಯು ಐವರ ಸಮಿತಿಯ ವರದಿಯನ್ನು ಪರಿಶೀಲಿಸಿ, ಭಾರತದ ರಾಜ್ಯ ಘಟನೆಯಲ್ಲಿ ಕಾಣಿಸಿದ ನಿಬಂಧನೆಗಳಿಗನುಗುಣವಾಗಿ ಮೈಸೂರನ್ನೊಳಗೊಂಡ ಕರ್ನಾಟಕ ರಾಜ್ಯ ರಚನೆಯನ್ನು ಕೈಗೊಳ್ಳಬೇಕೆಂದು ಮೈಸೂರು ಕಾಂಗ್ರೆಸ್ಸು ಕಾಲಕಾಲಕ್ಕೆ ಅಂಗೀಕರಿಸಿದ ಭೂಮಿಕೆಯನ್ನು ಮತ್ತೆ ಒತ್ತಿಹೇಳಿ ಎತ್ತಿ ಹಿಡಿಯಿತು.

ಕೇರಳ–ಕರ್ನಾಟಕ ರಾಜ್ಯಗಳ ರಚನೆಯ ವಿಚಾರದಲ್ಲಿ ಜೆ.ವಿ.ಪಿ. ವರದಿ, "ಈ ರಾಜ್ಯಗಳನ್ನು ನಿರ್ಮಿಸಬೇಕಾದಲ್ಲಿ ಕೆಲವು ಸಂಸ್ಥಾನಗಳನ್ನೂ ಅವು ಒಳಗೊಳ್ಳಬೇಕಾಗುತ್ತದೆ; ಆದರಿದನ್ನು ಸಾಧಿಸಬೇಕಾದಲ್ಲಿ ಈಗಿನ ಪ್ರಾಂತಗಳ ಪ್ರದೇಶಗಳನ್ನು ಸಂಸ್ಥಾನ ಪ್ರದೇಶಗಳಲ್ಲಿ ವಿಲೀನಗೊಳಿಸಬಾರದು, ಆದರೆ ತದ್ವಿರುದ್ಧ ಕ್ರಮವನ್ನು ಕೈಗೊಳ್ಳಬೇಕು; ಅರ್ಥಾತ್ ಹೀಗಾಗಬೇಕಾದಲ್ಲಿ ಆ ಸಂಸ್ಥಾನಗಳು ವ್ಯವಹಾರತಃ ತಮ್ಮ ಅಸ್ತಿತ್ವವನ್ನೆ ಕಳೆದುಕೊಳ್ಳಬೇಕಾಗುವುದು" ಎಂದು ಹೇಳಿತ್ತು. ಈ ಅಭಿಪ್ರಾಯಕ್ಕೆ ಪ್ರತಿಕ್ರಿಯೆಯಾಗಿ ಮೈಸೂರು ಸಂಸ್ಥಾನದಲ್ಲಿಯ ಪುರೋಗಾಮಿ ಪಂಗಡಗಳವರು, 'ಸಂಯುಕ್ತ ಕರ್ನಾಟಕ ರಚನೆಗೆ ಮಹಾರಾಜರನ್ನು ಇರಿಸಿಕೊಳ್ಳಬೇಕೆಂಬ ವಿಚಾರವು ಅಡ್ಡಗಲ್ಲಾಗಿ ಪರಿಣಮಿಸಲು ಅವಕಾಶ ಕೊಡಬಾರದು' ಎಂಬುದಾಗಿ ತೀವ್ರವಾಗಿ ವಿಚಾರಮಾಡತೊಡಗಿದರು. 1949ರ ಜುಲೈ 28ರಂದು ದಾವಣಗೆರೆಯಲ್ಲಿ ಶ್ರೀ ಕೆ. ಎಂ. ರುದ್ರಪ್ಪನವರ ಅಧ್ಯಕ್ಷತೆಯಲ್ಲಿ ಸೇರಿದ ಕರ್ನಾಟಕ ಯುವಕ ಪರಿಷತ್ತು ಹಾಗೂ ಅದೇ ವರ್ಷ ನವಂಬರ 6ರಂದು ಶ್ರೀಮತಿ ಬಳ್ಳಾರಿ ಸಿದ್ದಮ್ಮನವರ ಅಧ್ಯಕ್ಷತೆಯಲ್ಲಿ ಸೇರಿದ ಸಕಲ ಪಕ್ಷಗಳ ಪರಿಷತ್ತು ಈ ಅಭಿಪ್ರಾಯವನ್ನು ಸಮರ್ಥಿಸಿದವು. ಇದಕ್ಕೂ ಮೊದಲು 1949ರ ಮಾರ್ಚ್ 6ರಂದು ಹೈದರಾಬಾದ ಸಂಸ್ಥಾನದಲ್ಲಿಯ ಕಲ್ಬುರ್ಗಿಯಲ್ಲಿ ನಡೆದ ಅಖಿಲ ಕರ್ನಾಟಕದ ಪರಿಷತ್ತೊಂದು 'ಕರ್ನಾಟಕ ರಾಜ್ಯದಲ್ಲಿ ಹೈದರಾಬಾದದ ಕನ್ನಡಭಾಗಗಳೂ ಸೇರಿಕೊಳ್ಳಬೇಕೆಂ'ದು ಕೇಳಿಕೊಂಡಿತು. ಈ ವಿಭಿನ್ನ ವಿಚಾರಗಳನ್ನು ಗಮನಿಸಿ ಕೆ.ಪಿ.ಸಿ.ಸಿ.ಯು ಮತ್ತೆ ದಾವಣಗೆರೆಯಲ್ಲಿ 1949ರ ನವೆಂಬರ 8ರಂದು ಸೇರಿ, ಸಕಲ ಅಂಶಗಳನ್ನೂ ಒಳಗೊಂಡ ವ್ಯಾಪಕನಿರ್ಣಯವೊಂದನ್ನು ಅಂಗೀಕರಿಸಿತು; ಅದರಲ್ಲಿ ಮೈಸೂರು ಮಹಾರಾಜರು ಘಟನಾತ್ಮಕ ಪ್ರಮುಖರಾಗಿರುವ, ಮೈಸೂರು ಸಂಸ್ಥಾನವನ್ನೊಳಗೊಂಡ ಕರ್ನಾಟಕ ರಾಜ್ಯವನ್ನು ನಿರ್ಮಿಸಬೇಕೆಂದೂ ಸೂಕ್ತ ಸಮಯದಲ್ಲಿ ಹೈದರಾಬಾದದ ಕನ್ನಡ ಪ್ರದೇಶಗಳೂ ಅದರಲ್ಲಿ ಸೇರಿಕೊಳ್ಳಲು ಆಸ್ಪದವಿರಬೇಕೆಂದೂ ಹೇಳಲಾಯಿತು.

ಕೆಲಕಾಲ ಬದಿಗೆ ಸರಿಸಿಡಲ್ಪಟ್ಟ 'ಭಾಷಾನ್ವಯ ರಾಜ್ಯರಚನೆ'ಯ ಪ್ರಶ್ನೆಯು 1951–52ರಲ್ಲಿ ನಡೆಯಲಿರುವ ಸಾರ್ವತ್ರಿಕ ಚುನಾವಣೆಗಳ ಸಂದರ್ಭದಲ್ಲಿ ಮತ್ತೆ ಜೀವಕಳೆ ತುಂಬಿಕೊಂಡು ಮುಂದೆ ಬಂದಿತು. 1951ರ ಜುಲೈ ತಿಂಗಳಲ್ಲಿ ಬೆಂಗಳೂರಿನಲ್ಲಿ ಸೇರಿದ ಎ.ಐ.ಸಿ.ಸಿ. ಸಭೆಯು ತನ್ನ ಚುನಾವಣೆಯ ಘೋಷಣಾ ಪತ್ರಿಕೆಯಲ್ಲಿ ಭಾಷಾನ್ವಯ ರಾಜ್ಯನಿರ್ಮಿತಿ ತತ್ತ್ವಕ್ಕೆ ಕಾಂಗ್ರೆಸ್ಸು ಅಂಟಿಕೊಂಡಿದೆಯೆಂಬುದನ್ನು ಸೂಚಿಸಿತಾದರೂ, "ಸಂಬಂಧಪಟ್ಟ ಜನತೆಯ ಸಮ್ಮತಿ" ಹಾಗೂ "ಆರ್ಥಿಕ, ಆಡಳಿತ ವಿಷಯಕ, ಹಣಕಾಸಿಗೆ ಸಂಬಂಧಿಸಿದ ಇತ್ಯಾದಿ ಇತರ ಅಂಶಗಳು"—ಇವನ್ನೂ ಒತ್ತಿ ಹೇಳಿತು. ಕರ್ನಾಟಕ ಕಾಂಗ್ರೆಸ್ ತನ್ನ ಪ್ರಾದೇಶಿಕ ಚುನಾವಣೆಯ ಘೋಷಣಾ ಪತ್ರಿಕೆಯಲ್ಲಿ ಏಕೀಕೃತ ಕರ್ನಾಟಕ ರಚನೆಯನ್ನು ತನ್ನ ಮಹತ್ತ್ವದ ಪ್ರಶ್ನೆಯನ್ನಾಗಿ ಪರಿಗಣಿಸಿತು; ಕರ್ನಾಟಕದ ಇತರ ಪಕ್ಷಗಳೂ ತಮ್ಮ ತಮ್ಮ ಪರವಾಗಿ ಹಾಗೆಯೆ ಮಾಡಿದವು.

ಕೇಂದ್ರದಲ್ಲಿಯೂ ಪ್ರಾಂತಗಳಲ್ಲಿಯೂ ಕಾಂಗ್ರೆಸ್ಸು ಅಧಿಕಾರಕ್ಕೆ ಬಂದಿತು; ಆದರೆ ಭಾಷಾನ್ವಯ ರಾಜ್ಯ ರಚನೆಯ ವಿಚಾರದಲ್ಲಿ ತಾನಾಗಿ ಏನೂ ಮಾಡಲಿಲ್ಲ. 1952ರ ಜುಲೈ ತಿಂಗಳಲ್ಲಿ ಒಬ್ಬ ಕಮ್ಯುನಿಸ್ಟ್ ಸದಸ್ಯರು ಪಾರ್ಲಿಮೆಂಟಿನಲ್ಲಿ "ಭಾಷಾ ತಳಹದಿಯ ಮೇಲೆ ರಾಜ್ಯಗಳನ್ನು ಪುನಾರಚಿಸಲು ಕೂಡಲೆ

ಕ್ರಮಗಳನ್ನು ಕೈಗೊಳ್ಳಬೇಕೆಂ "ಬ ಖಾಸಗಿ ನಿರ್ಣಯುವನ್ನು ಮಂಡಿಸುತ್ತ, ಈ ವಿಷಯದಲ್ಲಿಯ ಕಾಂಗ್ರೆಸ್ಸಿನ ಉಪೇಕ್ಷಾವೃತ್ತಿಯನ್ನು ತೀವ್ರವಾಗಿ ಖಂಡಿಸಿದರು. ಪಕ್ಷದ ಆದೇಶಕ್ಕನುಗುಣವಾಗಿ ಈ ನಿರ್ಣಯುವು ಸೋಲಿಸಲ್ಪಟ್ಟಿತಾದರೂ ಕಾಂಗ್ರೆಸ್ ಸದಸ್ಯರಲ್ಲಿ ಬಹುಸಂಖ್ಯರು ನಿರ್ಣಯವನ್ನು ಸಮರ್ಥಿಸಿ ಭಾಷಣ ಗಳನ್ನು ಮಾಡಿದರು. ಸರಕಾರದ ಪರವಾಗಿ ಪ್ರಧಾನ ಮಂತ್ರಿ ಶ್ರೀ ಜವಾಹರಲಾಲ ನೆಹರು ಅವರು ದೇಶದ ಭದ್ರತೆ, ಆರ್ಥಿಕ ಸ್ಥಿರತೆ ಮೊದಲಾದ ಹೆಚ್ಚು ಮಹತ್ತ್ವಪೂರ್ಣವಾದ ವಿಷಯಗಳನ್ನು ಗಮನಿಸಬೇಕಾಗಿದೆಯೆಂದು ಹೇಳುತ್ತ, ದಕ್ಷಿಣ ಭಾರತದಲ್ಲಿ ಈ ಕುರಿತು ಹಳೆಯ ಬೇಡಿಕೆಗಳಿವೆ, ಅವು ತುಂಬಾ ಸಮರ್ಥನೀಯವೂ ಇವೆ ಎಂದು ಒಪ್ಪಿಕೊಂಡು, " ನಾವು ಆ ದಿಶೆಯಲ್ಲಿ ಮುಂದಕ್ಕೆ ಹೋಗಲು ಸಿದ್ಧರಿದ್ದೇವೆ " ಎಂದು ಒಡನುಡಿದರು.

1952ರ ಅಕ್ಟೋಬರ ತಿಂಗಳಲ್ಲಿ ಶ್ರೀ ಪೊಟ್ಟಿ ಶ್ರೀರಾಮುಲು ಎಂಬ ಆಂಧ್ರ ಮುಖಂಡರು ಆಂಧ್ರರಾಜ್ಯವನ್ನು ರಚಿಸಲು ಸರಕಾರವನ್ನು ಒತ್ತಾಯಿಸಲು ಆಮರಣ ಉಪವಾಸವನ್ನು ಕೈಗೊಂಡರು. ಮತ್ತು 58 ದಿನಗಳನಂತರ ಡಿಸೆಂಬರ 15ರಂದು ನಿಧನ ಹೊಂದಿದರು. ಆಂಧ್ರದಲ್ಲೆಲ್ಲ ಗಲಭೆಗಳುಂಟಾಗಿ ಸರಕಾರಿ ಆಸ್ತಿಗೆ 1 ಕೋಟಿ ರೂಪಾಯಿಯಷ್ಟು ಹಾನಿ ಸಂಭವಿಸಿತು. ಡಿಸೆಂಬರ 19ರಂದು ಶ್ರೀ ನೆಹರು ಅವರು ಮದ್ರಾಸ ರಾಜ್ಯದ ತೆಲುಗು ಪ್ರದೇಶಗಳನ್ನೊಳಗೊಂಡ, ಆದರೆ ಮದ್ರಾಸ ನಗರವನ್ನು ಹೊರತು ಪಡಿಸಿದ ಆಂಧ್ರ ರಾಜ್ಯವನ್ನು ರಚಿಸಲು ಸರಕಾರ ನಿರ್ಧರಿಸಿದೆಯೆಂದು ಘೋಷಿಸಿದರು. ಅದಕ್ಕನುಗುಣ ವಾಗಿ ತದ್ವಿಷಯಕ ಆರ್ಥಿಕ ಹಾಗೂ ಇತರ ಅಂಶಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ವರದಿ ಮಾಡಲು ನ್ಯಾಯಮೂರ್ತಿ ಶ್ರೀ ಕೆ.ಎನ್. ವಾಂಛೂ ಅವರನ್ನು ನಿಯಮಿಸಿದರು.

ಇನ್ನು ಕೆಲವೇ ದಿನಗಳಲ್ಲಿ ಆಂಧ್ರರಾಜ್ಯ ತಲೆಯೆತ್ತುವುದೆಂಬುದು ಈಗ ಸ್ಪಷ್ಟವಾಯಿತು. ಸ್ವಾಭಾವಿಕವಾಗಿಯೆ ತಮ್ಮ ರಾಜ್ಯಕ್ಕಾಗಿ ಕನ್ನಡಿಗರ ಕಾತರತೆ ಮತ್ತಷ್ಟು ತೀವ್ರವಾಯಿತು. 1953ರ ಜನವರಿ ತಿಂಗಳಲ್ಲಿ ಹೈದರಾಬಾದ (ನಾನಲನಗರ) ದಲ್ಲಿ ನಡೆದ ಕಾಂಗ್ರೆಸ್ ಮಹಾಧಿವೇಶನದಲ್ಲಿ ಈ ವಿಷಯವನ್ನು ಸಹಾನುಭೂತಿಯಿಂದ ವಿಚಾರಿಸಲಾದೀತೆಂದು ಕನ್ನಡ ಜನತೆ ನಿರೀಕ್ಷಿಸಿದ್ದಿತು ; ಆದರೆ ತದ್ವಿರುದ್ಧವಾಗಿಯೆ ಅಲ್ಲಿ ವಿದ್ಯಮಾನಗಳು ನಡೆದವು. ' ಆಂಧ್ರದ ಹೊರತಾಗಿ ಇನ್ನಾವ ಭಾಷಾನ್ವಯ ರಾಜ್ಯ ರಚನೆಯನ್ನೂ ಸದ್ಯಕ್ಕೆ ಕೈಗೊಳ್ಳಲಾಗುವುದಿಲ್ಲ 'ವೆಂದು ಕಾಂಗ್ರೆಸ್ಸು ನಿರ್ಣಯವನ್ನು ಕೈಗೊಂಡಿತು. ರಾಜ್ಯಗಳ ಪುನರ್ಘಟನೆಗೆ ಸಂಬಂಧಿಸಿದ ನಿರ್ಣಯವನ್ನು ಮಂಡಿಸುತ್ತ ಮೌಲಾನಾ ಅಬುಲ್ ಕಲಾಂ ಆಜಾದರು—" ಬರುವ ನಾಲ್ಕೈದು ವರ್ಷಗಳಲ್ಲಿ ಇನ್ನಾವ ಭಾಷಾ ರಾಜ್ಯರಚನೆಯ ಪ್ರಶ್ನೆಯನ್ನೂ ವಿಚಾರಿಸಲು ನಾವು ಸಿದ್ಧರಿಲ್ಲ. ಅಂತಹ ಬೇಡಿಕೆಯನ್ನು ಮಂಡಿಸಿದರೆ ನಾವದನ್ನು ಬಲವಾಗಿ ವಿರೋಧಿ ಸುವೆವು " ಎಂಬುದಾಗಿ ಹೇಳಿದರು. ಈ ಸಂದರ್ಭದಲ್ಲಿ, ಆಗ ಮೈಸೂರಿನ ಮುಖ್ಯ ಮಂತ್ರಿಗಳಾಗಿದ್ದ ಶ್ರೀ ಕೆ. ಹನುಮಂತಯ್ಯನವರು ಅತಿ ಸಮರ್ಥರೀತಿಯಲ್ಲಿ ಭಾಷಾನ್ವಯ ರಾಜ್ಯಗಳ ಆವಶ್ಯಕತೆಯನ್ನು ಪ್ರತಿಪಾದಿಸಿದರೆಂಬುದು ಉಲ್ಲೇಖನೀಯವಾದ ಅಂಶವಾಗಿದೆ. ಇಷ್ಟಕ್ಕೆ ನಿಲ್ಲದೆ, ಸಾಂಸ್ಕೃತಿಕವಾಗಿ ಹಾಗೂ ಭಾಷಾದೃಷ್ಟಿಯಿಂದ ಏಕರಸವಾಗಿರುವ, ಆರ್ಥಿಕವಾಗಿ ಸ್ವಯಂಪೂರ್ಣವಾಗಿರುವ, ಭೌಗೋಲಿ ಕವಾಗಿ ಸಂಲಗ್ನವಾಗಿರುವ ಪ್ರದೇಶಗಳು ಹಾಳತವಾದ ಆಡಳಿತದ ಘಟಕಗಳಾಗುವಂತೆ ರಾಜ್ಯಗಳನ್ನು ಪುನರ್ಘಟಿಸಬೇಕೆಂದು ಬಲವಾಗಿ ಬೇಡಿಕೆಯಿಟ್ಟರು. ಮೈಸೂರು ರಾಜ್ಯದಲ್ಲಿ ಅದಕ್ಕೆ ಹೊಂದಿಕೊಂಡ ಮುಂಬಯಿ, ಮದ್ರಾಸ, ಕೊಡಗು ರಾಜ್ಯಗಳ ಕನ್ನಡ ಪ್ರದೇಶಗಳನ್ನು ಸೇರಿಸುವುದರಿಂದ ಕರ್ನಾಟಕ ರಾಜ್ಯವನ್ನು ನಿರ್ಮಿಸಬಹುದೆಂದು ಹೇಳಿದರು. ಇವರಿಷ್ಟು ಖಂಡತುಂಡವಾಗಿ ಮಾಡಿದ ಪ್ರತಿಪಾದನೆಯು, ಕರ್ನಾಟಕ ಏಕೀಕರಣಕ್ಕೆ ಮೈಸೂರು ಅನುಕೂಲವಾಗಿಲ್ಲವೆಂಬ ಕೆಲವೆಡೆಯಲ್ಲಿಯ ಅಭಿಪ್ರಾಯವನ್ನು ಗಾಳಿಗೆ ತೂರಿಬಿಟ್ಟಿತು.

ನಾನಲನಗರದಲ್ಲಿ ಕಾಂಗ್ರೆಸ್ ಅಧಿವೇಶನವು ಇನ್ನೂ ನಡೆದಿರುವಾಗಲೇ, ಶ್ರೀ ಎ.ಜೆ. ದೊಡ್ಡಮೇಟಿಯವರು ಧಾರವಾಡ ಜಿಲ್ಲೆಯಲ್ಲಿರುವ ಸ್ವಗ್ರಾಮವಾದ ಜಕ್ಕಲಿಯಲ್ಲಿ ತಾವೇ ಏರ್ಪಡಿಸಿದ 'ಕರ್ನಾಟಕ ರಾಜ್ಯನಿರ್ಮಾಣ ಶಿಬಿರ'ದಲ್ಲಿ ತಮ್ಮ 15 ದಿನಗಳ ಉಪವಾಸವನ್ನು ಪ್ರಾರಂಭಿಸಿದರು. ಶಿಬಿರದಲ್ಲಿ ರಾಜ್ಯ ನಿರ್ಮಾಣ ಸಂಕಲ್ಪವನ್ನು ಮಾಡಿದ ಎಷ್ಟೋ ಜನ ಕಾರ್ಯಕರ್ತರಿಗೆ ತರಬೇತಿಯನ್ನು ಕೊಡಲಾಯಿತು. ಶ್ರೀ ದೊಡ್ಡಮೇಟಿಯವರ ಉಪೋಷಣವು ಉತ್ತರ ಕರ್ನಾಟಕದ ವಾತಾವರಣದಲ್ಲಿ ವಿದ್ಯುತ್ಸಂಚಾರವಾಗುವಂತೆ ಮಾಡಿತು. ಶಿಬಿರದ ಕಲ್ಪನೆ ಬೇಗೆಯಂತೆ ಹಬ್ಬಿತು. ಉತ್ತರ ಕನ್ನಡ, ಬಿಜಾಪುರ ಜಿಲ್ಲೆಗಳಲ್ಲಿಯೂ ಶಿಬಿರಗಳು ಹಾಗೂ ಉಪೋಷಣಗಳು ನಡೆದವು. ತರಬೇತಿ ಹೊಂದಿದ ಕಾರ್ಯಕರ್ತರು ಬೇರೆ ಬೇರೆ ಕಡೆಗಳಿಗೆ ಹೋಗಿ ಅದೇ ರೀತಿಯ ಉಪವಾಸ ಶಿಬಿರಗಳನ್ನು ಪ್ರಾರಂಭಿಸತೊಡಗಿದರು. ಜಕ್ಕಲಿಯಲ್ಲಿ ಪ್ರಾರಂಭವಾದ ಉಪವಾಸದ ಸರಪಳಿ ನಾಲ್ಕುತಿಂಗಳ ತರುವಾಯ ಹುಬ್ಬಳ್ಳಿಯ ಹತ್ತಿರದ ಅದರಗುಂಚಿ ಗ್ರಾಮದಲ್ಲಿ ಶ್ರೀ ಶಂಕರಗೌಡ ಅಳವಂಡಿಯವರು ಕೈಗೊಂಡ ಆಮರಣ ಉಪವಾಸವ್ರತದಲ್ಲಿ ಪರ್ಯವಸಾನ ಹೊಂದಿತು.

ನಾನಲನಗರದ ನಿರ್ಣಯದಿಂದ ಕರ್ನಾಟಕದಲ್ಲಿ ಅಸಂತೋಷದ ದಳ್ಳುರಿ ಹಬ್ಬಿತು. 1953ರ ಎಪ್ರಿಲ್ 1920 ರಂದು ಹುಬ್ಬಳ್ಳಿಯಲ್ಲಿ ಕೆ.ಪಿ.ಸಿ.ಸಿ. ಯ ವಿಶೇಷ ಸಾಧಾರಣ ಸಭೆ, ಶ್ರೀ ಶಂಕರಗೌಡರ ಆಮರಣ ಉಪವಾಸಸಂಕಲ್ಪದ ನೆರಳಲ್ಲಿ ನಡೆಯಿತು. ಕಾರ್ಯಕಲಾಪಗಳನ್ನು ವೀಕ್ಷಿಸಲು ಬೇರೆ ಬೇರೆ ಭಾಗಗಳಿಂದ ಸಾವಿರಾರು ಜನರು ಬಂದರು. ಧ್ವಜಗಳಿಂದಲಂಕೃತವಾದ, ಘೋಷಣೆಗಳನ್ನು ಕೂಗುವ ರೈತರ ಗುಂಪುಗಳಿಂದ ತುಂಬಿದ, ನೂರಾರು ಎತ್ತಿನ ಬಂಡಿಗಳು ಸಭಾಸ್ಥಾನವಾದ ಟೌನ್‌ಹಾಲ್ ಕಡೆಗೆ ಸಾಗಿದವು. ಜನರ ಗುಂಪು ಸಭಾಮಂದಿರದಲ್ಲಿ ನುಗ್ಗಿ, "ರಾಜೀನಾಮೆ, ರಾಜೀನಾಮೆ ಬೇಕು ! ನಿರ್ಣಯಗಳು ಸಾಕು !! " ಎಂದು ಗರ್ಜಿಸತೊಡಗಿತು. ಕೆ.ಪಿ.ಸಿ.ಸಿ. ಯ ಕಾರನ್ನು ಸುಡಲಾಯಿತು. ಕಲ್ಲುಗಳನ್ನೆಸೆಯಲಾಯಿತು. ಕೆಲವು ಜನ ಮುಖಂಡರಿಗೆ ಹೊಡೆತಗಳು ಬಿದ್ದವು. ಪೋಲಿಸರು ನಡುವೆ ಬಂದು ಲಾಠಿಪ್ರಹಾರ ಮಾಡಿ ಗುಂಪನ್ನು ಚೆದರಿಸಲು ಪ್ರಯತ್ನಿಸಿ, ಕೊನೆಗೆ ಗೋಳೀಬಾರ್ ಮಾಡಬೇಕಾಯಿತು. ಕೆ.ಪಿ.ಸಿ.ಸಿ. ಸಭೆಯನ್ನು ಮುಂದಕ್ಕೆ ಹಾಕಬೇಕಾಯಿತು. ಮರುದಿನ ನಡೆದ ಸಭೆಯಲ್ಲಿ, " ಕರ್ನಾಟಕ ರಾಜ್ಯವನ್ನು 1954 ರ ಕೊನೆಯೊಳಗಾಗಿ ನಿರ್ಮಿಸದಿದ್ದಲ್ಲಿ, ಹಾಗೂ ಈ ಕುರಿತು 1953 ಅಕ್ಟೋಬರದೊಳಗಾಗಿ ಭಾರತ ಸರಕಾರವು ಸ್ಪಷ್ಟ ಹಾಗೂ ಅಸಂದಿಗ್ಧ ಘೋಷಣೆಯನ್ನು ಮಾಡದಿದ್ದಲ್ಲಿ, ಕೆ.ಪಿ.ಸಿ.ಸಿಯ ಸದಸ್ಯರು, ಪ್ರಥಮ ಹೆಜ್ಜೆಯೆಂದು ಪಿ.ಸಿ.ಸಿ.ಯ ಸದಸ್ಯತ್ವವನ್ನು ಬಿಟ್ಟುಕೊಡುವರು ; ಹಾಗೂ ಶಾಸನ ಮಂಡಲಿಗಳಲ್ಲಿಯ ಮತ್ತು ಪಾರ್ಲಿಮೆಂಟಿನಲ್ಲಿಯ ಕರ್ನಾಟಕದ ಪ್ರತಿನಿಧಿ ಶಾಸಕರು ತಮ್ಮ ಸ್ಥಾನಗಳಿಗೆ ರಾಜೀನಾಮೆಯನ್ನೀಯುವರು " ಎಂಬುದಾಗಿ ನಿರ್ಣಯವನ್ನು ಅಂಗೀಕರಿಸಲಾಯಿತು.

ಏಕೀಕರಣವಾದಿಗಳಲ್ಲಿಯ ಉಗ್ರಗಾಮಿಗಳನ್ನು ಪ್ರತಿನಿಧಿಸುವ 'ಅಖಿಲ ಕರ್ನಾಟಕ ರಾಜ್ಯನಿರ್ಮಾಣ ಪರಿಷತ್ತು' ದಾವಣಗೆರೆಯಲ್ಲಿ ಮದ್ರಾಸಿನ ನಿವೃತ್ತ ಕಂದಾಯ ಮಂತ್ರಿಗಳಾದ ಶ್ರೀ ಕೆ.ಆರ್. ಕಾರಂತರವರ ಅಧ್ಯಕ್ಷತೆಯಲ್ಲಿ 1952ರ ಮೇ 27ರಂದು ಒಂದು ಕನ್ವೆನ್ಶನ್ ನಡೆಯಿಸಿತು. ಪಾರ್ಲಿಮೆಂಟ್ ಸದಸ್ಯರಾದ ಶ್ರೀ ಎಂ.ಪಿ. ಶಿವಮೂರ್ತಿಸ್ವಾಮಿಗಳವರು ಅದನ್ನು ಉದ್ಘಾಟಿಸಿದರು. " ಕರ್ನಾಟಕ ರಾಜ್ಯವನ್ನು ಕೂಡಲೆ ನಿರ್ಮಿಸಬೇಕು, ಅದಕ್ಕಾಗಿ ಗಡಿನಿರ್ಣಯ ಆಯೋಗವನ್ನು ಕೂಡಲೆ ನಿರ್ಮಿಸಬೇಕು. ಇದಾಗದಿದ್ದಲ್ಲಿ ಕನ್ವೆನ್ಶನ್ನು ಶಾಂತಿಯುತ ಹೋರಾಟವನ್ನು ನಡೆಯಿಸುವುದು " ಎಂಬುದಾಗಿ ನಿರ್ಣಯವನ್ನು ಅಂಗೀಕರಿಸಲಾಯಿತು. ಅದೇ ವರ್ಷ ಆಗಸ್ಟ್ ತಿಂಗಳಲ್ಲಿ ಹೋರಾಟವನ್ನು ಪ್ರಾರಂಭಿಸಿಯೆ ಬಿಡಲಾಯಿತು ; ಆ ತರುವಾಯದ ಸುಮಾರು ಐದು ತಿಂಗಳಲ್ಲಿ ಕನಿಷ್ಠ 5,000 ಜನರನ್ನು ಸ್ಥಾನಬದ್ಧರನ್ನಾಗಿ ಮಾಡಲಾಯಿತು, ಇಲ್ಲವೆ ಸೆರೆಮನೆಯೊಳಗೆ ಕಳಿಸಲಾಯಿತು.

ಕೆ.ಪಿ.ಸಿ.ಸಿ. ಕೈಗೊಂಡ ನಿರ್ಣಯಕ್ಕೆ ಕಾಂಗ್ರೆಸ್ ಪರಿಷ್ಕಾರ ಪ್ರತಿಕ್ರಿಯೆಯೇನೆಂಬುದು ತುಂಬಾ ಕಾಲ ಕಳೆದರೂ ತಿಳಿಯದ್ದರಿಂದ ಶ್ರೀ ಎಸ್. ನಿಜಲಿಂಗಪ್ಪನವರು ಪಾರ್ಲಿಮೆಂಟಿನ ಕೆಲವು ಸದಸ್ಯರೊಡನೆ ಪ್ರಧಾನ ಮಂತ್ರಿ ಶ್ರೀ ನೆಹರು ಅವರನ್ನು 1963ರ ಸೆಪ್ಟಂಬರ್ 14ರಂದು ಕಂಡು, ಕರ್ನಾಟಕದಲ್ಲಿ ಪರಿಸ್ಥಿತಿ ಎಷ್ಟು ಗಂಭೀರವಾಗಿದೆಯೆಂಬುದನ್ನು ವಿವರಿಸಿ ಹೇಳಿದರು. ಕಳೆದ ಕೆಲ ಉಪಚುನಾವಣೆಗಳಲ್ಲಿ ಕಾಂಗ್ರೆಸ್ಸಿಗಾದ ಸೋಲುಗಳ ಸಂಕೇತವನ್ನು ಉಲ್ಲೇಖಿಸಲಾಯಿತು. ಕರ್ನಾಟಕದಲ್ಲಿಯ ಕಾಂಗ್ರೆಸ್ ಪ್ರಭಾವವು ಭರದಿಂದ ಕಳೆಗುಂದತೊಡಗಿದುದನ್ನು ಅವರ ಗಮನಕ್ಕೆ ತರಲಾಯಿತು. ಶಿಷ್ಟಮಂಡಲದವರಿಗೆ ಪ್ರಧಾನ ಮಂತ್ರಿಗಳು 'ಇಡೀ ಭಾರತದಲ್ಲಿಯ ರಾಜ್ಯಗಳ ಪುನರ್ಘಟನೆಯನ್ನು ಕುರಿತು ವರದಿ ನೀಡಲು 1953ರ ಕೊನೆಯೊಳಗಾಗಿ ಉನ್ನತಾಧಿಕಾರವುಳ್ಳ ಆಯೋಗವೊಂದನ್ನು ನಿಯಮಿಸಲಾಗುವುದೆಂದು' ಆಶ್ವಾಸನವಿತ್ತರು. ಶ್ರೀ ಎಸ್. ನಿಜಲಿಂಗಪ್ಪನವರು ಈ ವಿಷಯದಲ್ಲಿ ಪ್ರಧಾನ ಮಂತ್ರಿಗಳೊಡನೆ ಪತ್ರ ವ್ಯವಹಾರವನ್ನು ನಡೆಯಿಸಿಯೇ ಇದ್ದರು. 1953ರ ಅಕ್ಟೋಬರ 28ರಂದು ಬರೆದ ಪತ್ರವೊಂದರಲ್ಲಿ ಪ್ರಧಾನ ಮಂತ್ರಿಗಳು ಇಂತೆಂದಿರುವರು:—

"ಕರ್ನಾಟಕದ ಪ್ರಶ್ನೆಯ ಮಟ್ಟಿಗೆನೇ ಹೇಳುವುದಾದರೆ, ಅದು ಉಳಿದ ಅಂತಹ ಪ್ರಶ್ನೆಗಳಿಗಿಂತ ಸುಲಭವಾಗಿರುವುದು ಮಾತ್ರವಲ್ಲ, ಬಹುಕಾಲದಿಂದ ಅದರ ಸಾಧುತೆಯನ್ನು ತತ್ತ್ವತಃ ಒಪ್ಪಿಕೊಳ್ಳಲಾಗಿದೆ. ಆದರೆ ಈ ವಿಶಿಷ್ಟ ಪ್ರಶ್ನೆಯನ್ನು ಇತ್ಯರ್ಥಗೊಳಿಸುವಾಗ, ಮುಂಬಯಿ ರಾಜ್ಯವನ್ನು ಒಡೆಯುವ ಹಾಗೂ ಕರ್ನಾಟಕವಲ್ಲದೆ ಇತರ ರಾಜ್ಯಗಳನ್ನು ನಿರ್ಮಾಣ ಮಾಡುವ ಪ್ರಶ್ನೆ ಧುತ್ತೆಂದು ಮುಂದೆ ನಿಲ್ಲುತ್ತದೆ. ಆದುದರಿಂದ ಈ ಪ್ರಶ್ನೆಯನ್ನು ಇಡಿಯದಾಗಿ ವಿಚಾರಿಸಬೇಕಾಗಿದೆ.

ನಾನು ಮೇಲೆ ಹೇಳಿದಂತೆ ಪ್ರತ್ಯೇಕ ರಾಜ್ಯಕ್ಕಾಗಿ ಕರ್ನಾಟಕವು ಮಂಡಿಸುತ್ತ ಬಂದ ಬೇಡಿಕೆಯು ಸುಪ್ರಸಿದ್ಧವಾಗಿದೆ ಮಾತ್ರವಲ್ಲ, ಸಾಮಾನ್ಯವಾಗಿ ಒಪ್ಪಿಕೊಳ್ಳಲ್ಪಟ್ಟಿದೆ. ಯಾವ ರೀತಿಯಲ್ಲಿ ಅದನ್ನು ಕಾರ್ಯರೂಪಕ್ಕೆ ತರಬೇಕೆಂಬುದೇ ಪ್ರಶ್ನೆಯಾಗಿದೆ. 'ಮೈಸೂರಿನ' ವಿಷಯು ಅಷ್ಟೊಂದು ತೊಂದರೆ ಕೊಟ್ಟೀತೆಂದು ಅನಿಸುವುದಿಲ್ಲ......ಈ ಬಗ್ಗೆ ಏನೇನು ಮಾಡಲು ಸಾಧ್ಯವಿದೆಯೋ ಅದನ್ನು ಸರಿಯಾದ ರೀತಿಯಲ್ಲಿ ಮಾಡಲಾಗುವುದು."

ಆಶ್ವಾಸನೆಯಿತ್ತ ಮೇರೆಗೆ ಉನ್ನತಾಧಿಕಾರ ಆಯೋಗವು (ರಾಜ್ಯಪುನರ್ಘಟನಾ ಆಯೋಗ–The States' Reorganization Commission, ಎಲ್ಲರ ಬಾಯಲ್ಲೂ ಅದರ ಅಧ್ಯಕ್ಷರ ಹೆಸರಿನಲ್ಲಿ 'ಫಝಲ್ ಅಲಿ ಕಮಿಶನ್' ಎಂದು ಇದ್ದುದು) 1953ರ ಡಿಸೆಂಬರ 29ನೆಯ ದಿನಾಂಕದ ಗೃಹಖಾತೆಯ ನೋಟಿಫಿಕೇಶನ್ ಅನ್ವಯ ನಿಯಮಿಸಲ್ಪಟ್ಟಿತು. 1954ರ ಏಪ್ರಿಲ್ 8 ರಂದು ಅದು ದೇಶದಲ್ಲಿ ಸಂಚಾರವನ್ನು ಪ್ರಾರಂಭಿಸಿತು. ಅದು 104 ಸ್ಥಳಗಳಿಗೆ ಭೇಟಿ ಕೊಟ್ಟಿತು, 38,000ಕ್ಕಿಂತಲೂ ಹೆಚ್ಚು ಮೈಲಿ ಪ್ರವಾಸ ಮಾಡಿತು, ಸಾರ್ವಜನಿಕರಿಂದ 1,52,250ಕ್ಕಿಂತಲೂ ಹೆಚ್ಚು ದಸ್ತೈವಜುಗಳನ್ನು ಸ್ವೀಕರಿಸಿತು (ಇವುಗಳಲ್ಲಿ 2,000 ವಿಚಾರ ಪೂರ್ವಕವಾಗಿ ತಯಾರಿಸಿದ ಮನವಿಗಳಾಗಿದ್ದವು), 9,000ಕ್ಕೂ ಹೆಚ್ಚು ಜನರೊಡನೆ ಸಂದರ್ಶನ-ಸಂಭಾಷಣೆಗಳನ್ನು ನಡೆಯಿಸಿತು, ಮತ್ತು 1955ರ ಅಕ್ಟೋಬರ 10ರಂದು ತನ್ನ ವರದಿಯನ್ನು ಪ್ರಕಟಿಸಿತು.

1953ರ ಡಿಸೆಂಬರ 22ರಂದು ಶ್ರೀ ನೆಹರು ಅವರು ಪಾರ್ಲಿಮೆಂಟಿನಲ್ಲಿ ಆಯೋಗದ ನಿಯಮಿಸುವಿಕೆಯನ್ನು ಕುರಿತು ಘೋಷಣೆಮಾಡಿದರು. ಅದರಲ್ಲಿ ಭಾಷಾನ್ವಯ ಪ್ರಾಂತಗಳನ್ನು ಕುರಿತು ಈರೀತಿ ಉಲ್ಲೇಖವಿದೆ : "ಒಂದು ಪ್ರದೇಶದ ಭಾಷೆ ಹಾಗೂ ಸಂಸ್ಕೃತಿಗಳು ಆ ಪ್ರದೇಶದಲ್ಲಿ ರೂಢವಾಗಿರುವ ಜೀವನ ಕ್ರಮವನ್ನು ಪ್ರತಿನಿಧಿಸುತ್ತಿರುವುದರಿಂದ ಅವುಗಳಿಗೆ ನಿಸ್ಸಂಶಯವಾಗಿಯೂ ಮಹತ್ತ್ವವಿದ್ದೇ ಇದೆ,

ಆದರೆ ರಾಜ್ಯಗಳ ಪುನರ್ಘಟನೆಯನ್ನು ಕುರಿತು ವಿಚಾರ ಮಾಡುವಾಗ ಬೇರೆ ಕೆಲವು ಮಹತ್ತ್ವದ ಅಂಶಗಳನ್ನೂ ಗಮನಿಸಬೇಕಾಗುವುದು. ಮೊತ್ತಮೊದಲಲ್ಲಿ ನಾವು ಅಗತ್ಯ ಪೂರ್ವಕವಾಗಿ ಲಕ್ಷ್ಯದಲ್ಲಿಟ್ಟು ಕೊಳ್ಳಬೇಕಾದ ಅಂಶವೆಂದರೆ, ಭಾರತದ ಐಕ್ಯ-ಭದ್ರತೆಗಳನ್ನು ಉಳಿಸಿಕೊಂಡು ಅವನ್ನಿನ್ನೂ ಬಲಪಡಿಸಿ ಕೊಳ್ಳಬೇಕೆಂಬುದು. ಹಣ ಕಾಸಿನ, ಆರ್ಥಿಕ ಹಾಗೂ ಆಡಳಿತ ವಿಷಯಕ ಅಂಶಗಳು, ಆಯಾ ರಾಜ್ಯದ ದೃಷ್ಟಿಯಿಂದ ಮಾತ್ರವಲ್ಲ ಇಡೀ ರಾಷ್ಟ್ರದ ದೃಷ್ಟಿಯಿಂದ, ಬಹುಶಃ ಅಷ್ಟೇ ಮಹತ್ತ್ವವನ್ನು ಪಡೆದಿವೆ. ಆಯೋಗವು ಈ ಪ್ರಶ್ನೆಯ ವಿವಿಧಾಂಗಗಳನ್ನೂ ಐತಿಹಾಸಿಕ ಹಿನ್ನೆಲೆಯನ್ನೂ ಸದ್ಯದ ಪರಿಸ್ಥಿತಿಯನ್ನೂ ಅದರ ಮೇಲೆ ಎಲ್ಲ ಮಹತ್ತ್ವದ ಹಾಗೂ ಸಂಬಂಧ ಬರುವ ಅಂಶಗಳು ಬೀರಬಹುದಾದ ಪರಿಣಾಮವನ್ನೂ ವಿಚಾರಿಸಿ ಪರೀಕ್ಷಿಸುವುದು ", ಅಂತೂ ಭಾಷಾತತ್ತ್ವವು ಮಹತ್ತ್ವವಾದುದೆಂದು ಒಪ್ಪಿಕೊಳ್ಳಲಾಯಿ ತಾದರೂ, ಉಳಿದ ' ಬಹುಶಃ ಅಷ್ಟೆ ಮಹತ್ತ್ವವುಳ್ಳ ' ಅಂಶಗಳಿಂದ (ಎಂದರೆ ದೇಶದ ಐಕ್ಯ ಹಾಗೂ ಭದ್ರತೆ ಮತ್ತು ಹಣಕಾಸಿನ, ಆರ್ಥಿಕ ಆಡಳಿತ ವಿಷಯಕ ವಿಚಾರಗಳಿಂದ) ಅದು ಪರಿವೇಷ್ಟಿತವಾಗಿದ್ದಿತು. ಈ 'ಮಿತಿಮೀರಿದ ಅಂಶಗಳು' ಕನ್ನಡಿಗರ ದೃಷ್ಟಿಯಲ್ಲಿ, ಆಯೋಗವು ಕರ್ಣಾಟಕದ ಗಡಿಗಳ ಗುಂಟ ಹಬ್ಬಿದ ಕನ್ನಡ ಪ್ರಧಾನ ಭಾಗಗಳೆಷ್ಟೋ ಹೊರಗುಳಿಯುವಂತಾಯಿತು ; ದಕ್ಷಿಣ ಕನ್ನಡ ಜಿಲ್ಲೆಯಿಂದ ಕನ್ನಡ ಪ್ರಧಾನವಾದ ಕಾಸರಗೋಡು ತಾಲೂಕನ್ನು ತೀರ ಅಸ್ವಾಭಾವಿಕ ರೀತಿಯಲ್ಲಿ ಕತ್ತರಿಸಿ ಹೊರಗಿರಿಸಲಾಯಿತು; ಮತ್ತು ಬಳ್ಳಾರಿ ಜಿಲ್ಲೆಯನ್ನು ಕುರಿತು ವಿಚಿತ್ರವಾದ ಹಾಗೂ ತೀರ ಅಸಮರ್ಥನೀಯವಾದ ಪ್ರಸ್ತಾಪ ವೊಂದನ್ನು (ಎಂದರೆ ಶಿರಗುಪ್ಪ, ಬಳ್ಳಾರಿ ಮತ್ತು ಹೊಸಪೇಟೆ ತಾಲೂಕುಗಳು ಮತ್ತು ಮಲ್ಲಾಪುರಂ ಸಬ್-ತಾಲೂಕಿನ ಚಿಕ್ಕ ಭಾಗವೊಂದು ಎಂದರೆ, ಯಾವುದರಲ್ಲಿ ತುಂಗಭದ್ರಾ ಅಣೆಕಟ್ಟು ಹಾಗೂ ಪ್ರಾಜೆಕ್ಟಿನ ಮುಖ್ಯಕಾರ್ಯಕೇಂದ್ರಗಳಿವೆಯೋ ಆ ಭಾಗ—ಕರ್ಣಾಟಕ ರಾಜ್ಯದಿಂದ ಹೊರತುಪಡಿಸಬೇಕೆಂಬುದನ್ನು) ಮಾಡಲಾಯಿತು. ಬಳ್ಳಾರಿ ಜಿಲ್ಲೆಯನ್ನು ಕುರಿತಾದ ಈ ಪ್ರಸ್ತಾಪವು ಕರ್ಣಾಟಕದಲ್ಲಿ ಬಿರುಗಾಳಿಯನ್ನೇ ಎಬ್ಬಿಸಿತು. ಬಳ್ಳಾರಿಯನ್ನು ಕುರಿತು ನ್ಯಾಯ ದೊರಕಿಸಲು ಕರ್ಣಾಟಕವು ಹೋರಾಟವನ್ನೆ ಹೂಡಬೇಕಾ ಯಿತು. ಪಾರ್ಲಿಮೆಂಟ್ ಕೈಗೊಂಡ ಕೊನೆಯ ನಿರ್ಣಯದಲ್ಲಿ ಬಳ್ಳಾರಿಯ ಸ್ಥಾನ ಸುರಕ್ಷಿತವಾಗಿ ಉಳಿಯಿತು. ಅಂತೂ, ರಾಜ್ಯ ಘಟನೆಯನ್ವಯ ಅಗತ್ಯವಿರುವ ಶಿಷ್ಟಾಚಾರಗಳನ್ನೆಲ್ಲ ಪೂರೈಸಿದ ಮೇಲೆ, ' ರಾಜ್ಯಪುನರ್ಘಟನಾ ಆಯೋಗ'ದ ಶಿಫಾರಸುಗಳಿಗೆ ಸಂಬಂಧಿಸಿದ ಮಸೂದೆ ಪಾರ್ಲಿಮೆಂಟಿನಲ್ಲಿ ಅಂಗೀ ಕೃತವಾಗಿ, ಅದಕ್ಕೆ 1956ರ ಆಗಸ್ಟ್ 31ರಂದು ರಾಷ್ಟ್ರಾಧ್ಯಕ್ಷರ ಸಮ್ಮತಿಯೂ ದೊರಕಿತು.

ಬಳ್ಳಾರಿ, ಕಾಸರಗೋಡು, ನೀಲಗಿರಿಗಳ ಬಗ್ಗೆ ಪ್ರಾಮುಖ್ಯವಾಗಿ ಆಯೋಗ ಮಾಡಿದ ಶಿಫಾರಸು ಗಳಿಂದ ಕರ್ಣಾಟಕದಲ್ಲಿ ಸ್ವಲ್ಪ ಅಸಮಾಧಾನವುಂಟಾದರೂ 50 ವರ್ಷಗಳಿಗಿಂತಲೂ ಹೆಚ್ಚು ಕಾಲದಿಂದ ಕನ್ನಡಿಗರು ಇರಿಸಿಕೊಂಡಿದ್ದ ಆಶೋತ್ತರಗಳನ್ನು ಬಹುಮಟ್ಟಿಗೆ ಆಯೋಗದ ವರದಿ ಪೂರೈಸಿದುದರಿಂದ, ಒಟ್ಟಿನಲ್ಲಿ ಅದು ಕನ್ನಡ ಜನತೆಯ ಸಕಲ ವರ್ಗಗಳಿಂದಲೂ ಸಾಮಾನ್ಯವಾಗಿ ಸ್ವಾಗತಿಸಲ್ಪಟ್ಟಿತೆಂದು ಹೇಳಬಹುದು.

ಈ ಕಾನೂನಿನನ್ವಯ ಕರ್ಣಾಟಕ ರಾಜ್ಯವು, ಕಾನೂನಿನ ಭಾಷೆಯಲ್ಲಿ 'ಮೈಸೂರು ರಾಜ್ಯ'ವು, ಕೆಳಗಿನ ಭಾಗಗಳನ್ನೊಳಗೊಂಡಿದೆ : (1) ಮುಂಚಿನ ಮೈಸೂರು ಸಂಸ್ಥಾನ—ಪೂರ್ತಿ (ಆಂಧ್ರರಾಜ್ಯ ನಿರ್ಮಾಣ ವಾದ ಮೇಲೆ ಅದಕ್ಕೆ ಕೂಡಿಸಿದ ಬಳ್ಳಾರಿ ಜಿಲ್ಲೆಯೊಡನೆ) ; (2) ಮುಂಚಿನ ಮುಂಬಯಿ ರಾಜ್ಯದಲ್ಲಿಯ, ಚಂದಗಡ ತಾಲೂಕು ಹೊರತು ಪಡಿಸಿದ ಬೆಳಗಾವಿ ಜಿಲ್ಲೆ ಮತ್ತು ಬಿಜಾಪುರ, ಧಾರವಾಡ ಹಾಗೂ ಉತ್ತರ ಕನ್ನಡ ಜಿಲ್ಲೆಗಳು ; (3) ಮುಂಚಿನ ಹೈದರಾಬಾದ ಸಂಸ್ಥಾನದಲ್ಲಿಯ ಕಲ್ಬುರ್ಗಿ ಜಿಲ್ಲೆ (ಕೋಡಂಗಲ್ ಮತ್ತು ತಾಂದ್ರಿ ತಾಲೂಕುಗಳನ್ನು ಹೊರತುಪಡಿಸಿ), ರಾಯಚೂರು ಜಿಲ್ಲೆ (ಅಲಂಪೂರ ಮತ್ತು ಗದ್ವಾಲ ತಾಲೂಕುಗಳನ್ನು ಹೊರತುಪಡಿಸಿ), ಮತ್ತು ಮುಂಚಿನ ಬೀದರ ಜಿಲ್ಲೆಯ ಕೊಮೆರಿಲಿ, ಬೀದರ, ಭಾಲ್ಕಿ, ಸಂತಪುರ (ಔರಾದ) ಹಾಗೂ ಹುಮನಾಬಾದ ತಾಲೂಕುಗಳುಳ್ಳ ಹೊಸ ಬೀದರ ಜಿಲ್ಲೆ ;

4) ಮದ್ರಾಸ ರಾಜ್ಯದ ದಕ್ಷಿಣ ಕನ್ನಡ ಜಿಲ್ಲೆ (ಕಾಸರಗೋಡು ತಾಲೂಕು ಮತ್ತು ಅಮಿನಡಿವಿ ದ್ವೀಪಗಳನ್ನು ಹೊರತು ಪಡಿಸಿ), ಕೊಯಮತ್ತೂರು ಜಿಲ್ಲೆಯ ಕೊಳ್ಳೇಗಾಲದ ತಾಲೂಕು ; ಮತ್ತು (5) ಮುಂಚಿನ ಕೊಡಗು ರಾಜ್ಯ–ಪ್ರೂರ್ತಿ, ಹೊಸ ನಾಮಕರಣವಲ್ಲಿ 'ಕೊಡಗು ಜಿಲ್ಲೆ'.

ಏಕೀಕರಣವಾದಿಗಳು ಕೋರಿದ ಏಕೀಕೃತ ಕರ್ನಾಟಕವು 1956 ರ ನವಂಬರ 1 ರಂದು ಅಸ್ತಿತ್ವದಲ್ಲಿ ಬಂದರೂ ಕೆಲವೊಂದು ಗಡಿಭಾಗಗಳನ್ನು ಕುರಿತು ಕೆಲವು ವ್ಯಾಜ್ಯಗಳು ಉಳಿದುಬಿಟ್ಟವು. ಮಹಾರಾಷ್ಟ್ರವು ಬೆಳಗಾವಿಗೂ ಕಾರವಾರ ಜಿಲ್ಲೆಯ ವಿಸ್ತಾರವಾದ ಭಾಗಗಳಿಗೂ ಹಕ್ಕು ಹೇಳತೊಡಗಿತು. ಆಯಾ ಸರಕಾರಗಳಲ್ಲಿ, ಕಾಂಗ್ರೆಸ್ ನಾಯಕರಲ್ಲಿ ಮತ್ತು ಇತರ ಜನರಲ್ಲಿ ಸುದೀರ್ಘ ಚರ್ಚೆ ನಡೆದ ಮೇಲೆ ಏಕಸದಸ್ಯ ಆಯೋಗವೊಂದನ್ನು ನಿಯಮಿಸಲಾಯಿತು. ಭಾರತದ ವರಿಷ್ಠ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಾಧೀಶರಾದ ಶ್ರೀ ಮಹಾಜನರು 1967 ರ ಸೆಪ್ಟೆಂಬರದಲ್ಲಿ ತಮ್ಮ ಕೊನೆಯ ಶಿಫಾರಸುಗಳನ್ನು ಸಲ್ಲಿಸಿದರು. ಆ ಮೇರೆಗೆ ಕೊನೆಯ ನಿರ್ಣಯ ಕೈಗೊಂಡರೆ ಕೆಲವೊಂದು ಹೊಂದಾಣಿಕೆಗಳನ್ನು ಮಾಡಬೇಕಾಗಿ ಬರಬಹುದು. ಅದರ ಅನ್ವಯ ಬೆಳಗಾವಿ ನಗರ ಹಾಗೂ ಕಾಸರಗೋಡು ತಾಲೂಕು (ಎಂದರೆ ಕೆಲವುಭಾಗ) ಕರ್ನಾಟಕದಲ್ಲುಳಿದು, ನಿಪ್ಪಾಣಿ ಹಾಗೂ ಇತರ ಕೆಲಭಾಗಗಳು ಮಹಾರಾಷ್ಟ್ರಕ್ಕೆ ಹೋಗಬಹುದು. ಆದರೆ ಈ ವಿಷಯದಲ್ಲಿ ಇನ್ನೂ ಕೊನೆಯ ತೀರ್ಮಾನವಾಗಿಲ್ಲ.

**ಮೈಸೂರು ಹಾಗೂ ಏಕೀಕರಣ**

ಏಕೀಕರಣದ ಹೋರಾಟದಲ್ಲಿ ಹಳೆಯ ಮೈಸೂರಿನ ಪಾತ್ರವನ್ನು ಸಾರಾಂಶ ರೂಪದಲ್ಲಾದರೂ ವಿವರಿಸದಿದ್ದರೆ ಈ ಆಂದೋಲನದ ಕಥೆ ಪೂರ್ಣವಾಗದು.

1954ರ ಫೆಬ್ರುವರಿ ತಿಂಗಳಲ್ಲಿ ಮೈಸೂರಿನ ಮುಖ್ಯ ಮಂತ್ರಿ ಶ್ರೀ ಕೆ. ಹನುಮಂತಯ್ಯನವರು ಉತ್ತರ ಕರ್ನಾಟಕದ ಪ್ರವಾಸ ಕೈಗೊಂಡರು ; ಆಗ ಜನತೆ ಸ್ವಯಂಸ್ಫೂರ್ತಿಯಿಂದ ಅವರಿಗಿತ್ತ ಅಭೂತಪೂರ್ವ ಪ್ರಚಂಡ ಸ್ವಾಗತದಿಂದ ಹಾಗೂ ಕರ್ನಾಟಕ ಏಕೀಕರಣವನ್ನು ಕುರಿತು ಜನರಲ್ಲಿದ್ದ ಭಾವನೆಯ ಪ್ರಕಟನದಿಂದ ಅವರ ಹೃದಯ ತುಂಬಿ ಬಂದಿತು. ಏಕೀಕರಣಕ್ಕೆ ಮೈಸೂರಿನ ಹೃತ್ಪೂರ್ಣ ಬೆಂಬಲವಿದೆಯೆಂಬುದು ಅವರ ಭೇಟಿಯಿಂದ ಕರ್ನಾಟಕದ ಜನತೆಗೆ ಖಚಿತವಾಯಿತು.

ಮೈಸೂರು ಸಂಸ್ಥಾನವಲ್ಲಿ ಜವಾಬ್ದಾರಿ ಸರಕಾರ ಬರುವ ಮುಂಚೆ ಅತಿಮಹತ್ತ್ವದ ಸಂದರ್ಭಗಳಲ್ಲಿ ಅಲ್ಲಿಯ ಕಾಗ್ರೆಸ್ ವಲಯಗಳು ಏಕೀಕರಣಕ್ಕೆ ತಮ್ಮ ಬೆಂಬಲವನ್ನು ಪ್ರಕಟಿಸಿದ್ದವು. ಆದರೆ ಕಾಂಗ್ರೆಸ್ಸು ಅಧಿಕಾರ ಸ್ಥಾನದಲ್ಲಿ ಬಂದ ಮೇಲೆ, ಹತ್ತಿಕ್ಕಿದ ಏಕೀಕರಣವಿರೋಧೀ ಪ್ರವೃತ್ತಿಗಳು ತಲೆಯೆತ್ತಿದವು ಶ್ರೀ ಕೆ. ಹನುಮಂತಯ್ಯನವರು ಪ್ರವಾಸದಿಂದ ಹಿಂದಿರುಗಿದ ಮೇಲೆ ಅವು ಹೆಚ್ಚು ಉಚ್ಚಸ್ವರದಲ್ಲಿ ಹೊರಬಂದವು. ಕಾಂಗ್ರೆಸ್ ಸಂಸ್ಥೆಯಲ್ಲಿ ಮಾತ್ರವಲ್ಲ, ಮಂತ್ರಿವಲಯದಲ್ಲಿ ಕೂಡ 'ಎರಡು ಕರ್ನಾಟಕ'ಗಳನ್ನು ಪುರಸ್ಕರಿಸುವ ಗುಂಪೊಂದು ಚಟುವಟಿಕೆಯನ್ನು ಕೈಗೊಂಡಿತು.

ರಾಜ್ಯಪುನರ್ಘಟನಾ ಆಯೋಗ (ಎಸ್.ಆರ್.ಸಿ.) ಜೂನ್ 1954ರಲ್ಲಿ ಬೆಂಗಳೂರಿಗೆ ಭೇಟಿಯಿತ್ತಾಗ ಮೈಸೂರು ಸರಕಾರ ಹಾಗೂ ಕಾಂಗ್ರೆಸ್ಸು, ತಮ್ಮೊಳಗಿನ ಮತಭೇದಗಳ ಮೂಲಕ, ಅದಕ್ಕೆ ಮನವಿಗಳನ್ನು ಸಲ್ಲಿಸಲಿಲ್ಲ, ಅಥವಾ ಸಾಕ್ಷ್ಯಗಳನ್ನು ಒದಗಿಸಲಿಲ್ಲ. ಆದರೆ ಏಕೀಕರಣವನ್ನು ಪೂರ್ಣತಯಾ ಬೆಂಬಲಿಸುವ ಬಹುದೊಡ್ಡ ಸಮಾಜವೊಂದು (ವಿಶೇಷವಾಗಿ ಶ್ರೀ ಎಸ್. ನಿಜಲಿಂಗಪ್ಪ ಹಾಗೂ ಇತರರ ನೇತೃತ್ವದಲ್ಲಿಯದು) ಹಾಗೂ ಶ್ರೀ ಕೆ.ಎಂ. ರುದ್ರಪ್ಪನವರು ಮತ್ತು ಇತರರ ನೇತೃತ್ವದಲ್ಲಿಯ ಯುವಕರ ಸಂಘಟನೆ

ಆಯೋಗದ ಭೇಟಿ ಪಡೆದು, ಸಂಯುಕ್ತ ಕರ್ನಾಟಕ ರಾಜ್ಯನಿರ್ಮಾಣಕ್ಕೆ ಅನುಕೂಲವಾದ ಸಾಕ್ಷ್ಯಗಳನ್ನೊದಗಿಸಿದರು. ಏತನ್ಮಧ್ಯೆ, ಮೈಸೂರು ಸರಕಾರ ನಿಯಮಿಸಿದ 'ವಸ್ತುಸ್ಥಿತಿ ಮಾಪಕ ಸಮಿತಿ (Facts Finding Committee)' (ಜನರ ಬಾಯಲ್ಲಿ 'ಶೇಷಾದ್ರಿ ಕಮಿಟಿ') ಮೈಸೂರು ಸಂಸ್ಥಾನದ ಹೊರಗಿನ ಕನ್ನಡ ಭಾಗಗಳು ಕೊರತೆಯ ಪ್ರದೇಶವಾಗುವವೆಂದು ಸೂಚನೆ ಮಾಡಿದುದರಿಂದ, ಏಕೀಕೃತ ಕರ್ನಾಟಕ ರಾಜ್ಯದಲ್ಲಿ ಆ ಭಾಗಗಳು ಆಡಳಿತಕ್ಕೊಂದು ಹೊರೆಯಾಗುವವೆಂಬ ವಿಕಲ್ಪ ಹುಟ್ಟಲು ಕಾರಣವಾಯಿತು. ಆದರೆ ಭಿನ್ನಧ್ವನಿಯ ಈ ಚಿಕ್ಕ ಗುಂಪನ್ನು ಬಿಟ್ಟರೆ, ಮೈಸೂರು ಸಂಸ್ಥಾನದಲ್ಲಿ ಬಹುಸಂಖ್ಯೆಯ ಜನ ಸಮುದಾಯವು ಏಕೀಕರಣವನ್ನು ಸರ್ವಾತ್ಮನಾ ಬೆಂಬಲಿಸುತ್ತಿದ್ದಿತು. ಕನ್ನಡ—ಇಂಗ್ಲಿಷಿನಲ್ಲಿಯ ಸಕಲ ಪ್ರಮುಖ ದೈನಿಕ ಹಾಗೂ ವಾರಪತ್ರಿಕೆಗಳು, ಕನ್ನಡ ಸಾಹಿತ್ಯ ಪರಿಷತ್ತು ಪ್ರತಿನಿಧಿಸುವ ಸಾಹಿತ್ಯಿಕ—ಸಾಂಸ್ಕೃತಿಕ ವಲಯಗಳು, ಯುವಕ ಸಂಸ್ಥೆಗಳು, ವಾಣಿಜ್ಯ-ವ್ಯವಹಾರಗಳಲ್ಲಿ ತೊಡಗಿದ ಸಮಾಜ, ಕಾರ್ಮಿಕ ಸಂಘಟನೆಗಳು, ಸೋಶಲಿಸ್ಟ್ ಕಮ್ಯುನಿಸ್ಟ್ ಪಕ್ಷಗಳು, ಕುರುಬ ಜನಾಂಗ, ಹಿಂದುಳಿದ ವರ್ಗಗಳು ಅಲ್ಲದೆ ಇನ್ನೂ ಇತರ ಹಿತಾಸಕ್ತಿಗಳವರು ಏಕೀಕರಣವನ್ನು ಅನಿರ್ಬಂಧವಾಗಿ ಹೃತ್ಪೂರ್ವಕವಾಗಿ ಬೆಂಬಲಿಸಿದ್ದರು.

ಎಸ್.ಆರ್.ಸಿ.ಯು ಏಕೀಕೃತ ಕರ್ನಾಟಕ ರಚನೆಗೆ ನಿಸ್ಸಂಕೋಚವಾದ ಬೆಂಬಲವನ್ನು ಪ್ರಕಟಿಸಿದುದು ಹಳೆಯ ಮೈಸೂರು ವಿಭಾಗದಲ್ಲಿ ವಿವಾದದ ಕೆಂಡಗಳನ್ನು ಮತ್ತೆ ಕೆರಳಿಸಿತು. ಇದು ಪ್ರಶ್ನೆಯ ತೀರ್ಮಾನದ ಕೊನೆಯ ಘಟ್ಟವೆಂಬುದನ್ನು ಪ್ರತಿಯೊಬ್ಬರೂ ಮನಗಂಡರು. ಆದುದರಿಂದ ಪ್ರತ್ಯೇಕತಾ ವಾದಿಗಳು, ಅವರದು ಅತಿ ಚಿಕ್ಕ ಗುಂಪಿದ್ದರೂ, ಪ್ರಕಟ ವಿರೋಧಕ್ಕೆ ಅಣಿಯಾದರು. 'ಮೈಸೂರು ಇದ್ದಂತೆಯೇ ಇದ್ದು ತನ್ನ ಸತ್ವವನ್ನು ಉಳಿಸಿಕೊಳ್ಳಬೇಕೆ'ಂಬುದಾಗಿ ಮೈಸೂರಿನ ಮೂವರು ನಿವೃತ್ತ ದಿವಾನರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಮೈಸೂರು ಮಂತ್ರಿಮಂಡಲದಲ್ಲಿಯೂ ಮೂವರು ಮಂತ್ರಿಗಳು 'ಎರಡು ಕರ್ನಾಟಕ'ಗಳ ಪರವಾಗಿ ಹೇಳಿಕೆಯನ್ನಿತ್ತುದರಿಂದ, ಒಡಕು ಎದ್ದು ಕಂಡಿತು. ಬೆಂಗಳೂರಿನಲ್ಲಿಯೂ ತುಮಕೂರಿನಲ್ಲಿಯೂ ದೊಂಬಿಯ ದೃಶ್ಯಗಳು ಕಂಡುಬಂದವು. ಆದರೆ, ನಾವು ಮೇಲೆ ಹೇಳಿದಂತೆ, ಮೈಸೂರನ್ನೊಳಗೊಂಡ ಒಂದೇ ಒಂದು ಸಂಯುಕ್ತ ಕರ್ನಾಟಕ ರಾಜ್ಯ ರಚನೆಗೆ ಬಹುಜನ ಸಮಾಜದ ಪ್ರಚಂಡ ಬೆಂಬಲವಿದ್ದಿತು.

ಮೈಸೂರು ಶಾಸನ ಮಂಡಲದ ಎರಡೂ 'ಮನೆ'ಗಳಲ್ಲಿ ಎಸ್.ಆರ್.ಸಿ. ವರದಿಯ ಚರ್ಚೆ ಮೂರು ದಿನ ಅಖಂಡವಾಗಿ ನಡೆಯಿತು ; ಆದರೆ ಕಾಂಗ್ರೆಸ್ ಪಕ್ಷ ಯಾವ ಖಂಡಿತ ತೀರ್ಮಾನಕ್ಕೂ ಬಾರದ್ದರಿಂದ ಚರ್ಚೆಯನ್ನು ಒಂಬತ್ತು ದಿನಗಳ ವರೆಗೆ ಮುಂದಕ್ಕೆ ದೂಡಲಾಯಿತು.

ಏತನ್ಮಧ್ಯೆ ಮೈಸೂರು ಸಂಸ್ಥಾನ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ನಿಯಮಿಸಿದ ನಾಲ್ವರು ಸದಸ್ಯರ ಉಪಸಮಿತಿ 'ಮೈಸೂರು ಮೈಸೂರಿಗರಿಗಾಗಿ' ಎನ್ನುವ ಪ್ರತ್ಯೇಕತಾವಾದಿಗಳ ಬೇಡಿಕೆಯನ್ನು ತಳ್ಳಿಹಾಕಿತು. ಮೈಸೂರನ್ನೊಳಗೊಂಡ ಒಂದೇ ಒಂದು ಸಂಯುಕ್ತ ಕರ್ನಾಟಕ ರಾಜ್ಯವನ್ನು ನಿಸ್ಸಂದಿಗ್ಧವಾಗಿ ಪುರಸ್ಕರಿಸಿತು. ಒಂದೇ ಒಂದು ಕರ್ನಾಟಕ ರಾಜ್ಯದ ಪರ ಹಾಗೂ ವಿರುದ್ಧ ಶಿಷ್ಟಮಂಡಲಗಳ ಅಭಿಪ್ರಾಯ ಗಳನ್ನು ಕೇಳಿಕೊಂಡ ಮೇಲೆಯೇ ಅದು ಈ ತೀರ್ಮಾನಕ್ಕೆ ಬಂದಿತು. ಇದರಿಂದ ಈ ವಿಷಯ 'ಸಮಾಪ್ತಿ' ಗೊಂಡಂತಾಯಿತು. ಮತ್ತೆ ಮೂರು ದಿನ (1955ರ ನವಂಬರ 29, 30 ಮತ್ತು ಡಿಸಂಬರ 1) ಮೈಸೂರು ಶಾಸನ ಮಂಡಲ ಚರ್ಚೆ ನಡೆಯಿಸಿ, ಮೈಸೂರನ್ನೊಳಗೊಂಡ ಸಂಯುಕ್ತ ಕರ್ನಾಟಕ ರಾಜ್ಯ ನಿರ್ಮಾಣ ವಾಗಬೇಕೆಂದೂ ಆದರೆ ಹೊಸ ರಾಜ್ಯಕ್ಕೆ 'ಮೈಸೂರು' ಎಂದು ನಾಮಕರಣ ಮಾಡಬೇಕೆಂಬ ತಿದ್ದುಪಡಿ ಮಾಡಬೇಕೆಂದೂ ಮೈಸೂರು ರಾಜ್ಯದಿಂದ ಬಳ್ಳಾರಿಯನ್ನು ಬೇರ್ಪಡಿಸಬಾರದೆಂದೂ ನಿರ್ಣಯವನ್ನು ಅಂಗೀಕರಿಸಿತು. 'ಎರಡು ಕರ್ನಾಟಕ'ಗಳ ವಿವಾದ; ಅಂತೂ, ಈಗ ಪೂರ್ಣ ವಿರಾಮವನ್ನು ಹೊಂದಿತು.

ಹೈದರಾಬಾದ (ನಾನಲ ನಗರ) ಕಾಂಗ್ರೆಸ್ ಅಧಿವೇಶನ ಕಾಲಕ್ಕೆ, 1953ರ ಜನವರಿ 18ರಂದು, ಮೈಸೂರು ಶಾಸನ ಮಂಡಲದ 56 ಜನ ಸದಸ್ಯರು ಪ್ರಧಾನಮಂತ್ರಿ ಶ್ರೀ ನೆಹರು ಅವರಿಗೆ, ಮೈಸೂರನ್ನೊಳಗೊಂಡ ಸಂಯುಕ್ತ ಕರ್ನಾಟಕ ರಾಜ್ಯ ರಚನೆಗೆ ಅನಿರ್ಬಂಧವಾದ ಪೂರ್ಣ ಬೆಂಬಲ ಸೂಚಿಸುವ ಪತ್ರ ಬರೆದುದನ್ನು ಇಲ್ಲಿ ವಿಶೇಷವಾಗಿ ಸ್ಮರಿಸಬೇಕಾಗಿದೆ. ಸೂಚಿತ ಕರ್ನಾಟಕ ರಾಜ್ಯದಲ್ಲಿ ಮೈಸೂರನ್ನೊಳಗೊಳಿಸುವುದಕ್ಕೆ ಮೈಸೂರು ವಿಧಾನಮಂಡಲದ ಕೆಲವು ಸದಸ್ಯರು ವಿರೋಧಿಯಾಗಿದ್ದರೆಂಬ ಹುಯಿಲಿಗೆ ಇದು ತಕ್ಕ ಉತ್ತರವಾಗಿದೆ.

ಪ್ರಾತಃಸ್ಮರಣೀಯರಾದ ದಿವಂಗತ ಶ್ರೀ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಕರ್ನಾಟಕ ಏಕೀಕರಣಕ್ಕೆ ಕೆಳಗಿನ ಚಿರಸ್ಮರಣೀಯ ಶಬ್ದಗಳಲ್ಲಿ ತಮ್ಮ ಸ್ಪಷ್ಟ ಬೆಂಬಲವನ್ನು ವ್ಯಕ್ತಗೊಳಿಸಿರುವರು : "ಆಂಧ್ರ ರಾಜ್ಯ ನಿರ್ಮಾಣದ ಸನ್ನಾಹವು ನಡೆದಿರುವಾಗ ಕರ್ನಾಟಕ ರಾಜ್ಯ ನಿರ್ಮಾಣದ ಬೇಡಿಕೆಯನ್ನು ಒತ್ತಾಯಪಡಿಸುವುದು ಯುಕ್ತವೆನಿಸುವುದು. ಕರ್ನಾಟಕ ಏಕೀಕರಣವು ದಕ್ಷಿಣ ಭಾರತದಲ್ಲಿ ಇನ್ನೂ ಹೆಚ್ಚಿನ ಸುಖ ಸಮೃದ್ಧಿಯನ್ನೂ ಔದ್ಯಮಿಕ ಅಭಿವೃದ್ಧಿಯನ್ನೂ ತರುವುದೆಂದು ನನ್ನ ಅಭಿಮತ......ಮುಂಬಯಿ ಮದ್ರಾಸ ಪ್ರಾಂತಗಳಲ್ಲಿಯ ಕನ್ನಡಿಗರು ಮೈಸೂರಿನಲ್ಲಿ ಕೂಡಿಕೊಳ್ಳಲು ಒಪ್ಪಿಕೊಂಡಿರುತ್ತಾರೆಂಬುದು ಸುವಾರ್ತೆಯಾಗಿದೆ. ಆದರೆ ಮೈಸೂರಿನಲ್ಲಿಯ ಕೆಲವರು ಏಕೀಕೃತ ಕರ್ನಾಟಕದಲ್ಲಿ ಲಿಂಗಾಯತ ಪಂಗಡದವರ ಪ್ರಾಬಲ್ಯಕ್ಕೆ ತಾವು ಒಳಪಡಬೇಕಾದೀತೆಂದು ಭಯಪಟ್ಟಿರುವಂತೆ ತೋರುತ್ತದೆ. ಪ್ರಜಾಪ್ರಭುತ್ವದ ಈ ಯುಗದಲ್ಲಿ ಇಂತಹ ಭಯ-ಸಂದೇಹಗಳನ್ನು ಯಾರೂ ಇಟ್ಟುಕೊಳ್ಳಬಾರದು. ಎಲ್ಲರೂ ದೇಶಾಭಿಮಾನದಿಂದ, ಸೇವಾಪ್ರೇಮದಿಂದ, ಕರ್ನಾಟಕ ಸಂಸ್ಕೃತಿ-ಭಾಷೆಗಳ ಸದಭಿಮಾನದಿಂದ, ಪ್ರೇರಿತರಾದರೆ, ಅವರು ಹೆಚ್ಚು ಹೆಚ್ಚು ಸುಖಿಗಳಾಗುವರು, ಅವರ ಜೀವನದ ಅಂತಸ್ತು ಎದ್ದು ಕಾಣುವ ರೀತಿಯಲ್ಲಿ ಎತ್ತರಕ್ಕೇರುವುದು" (1953ರ ಮಾರ್ಚ್ 24ರಂದು ನಾಗಪುರ ಕರ್ನಾಟಕ ಸಂಘದವರಿತ್ತ ಮಾನಪತ್ರಕ್ಕೆ ಸರ್ ಎಂ.ವಿ. ಯವರಿತ್ತ ಉತ್ತರ, ಬೆಂಗಳೂರಿನ 'ತಾಯಿನಾಡು' ದಿನಪತ್ರಿಕೆಯಿಂದ).

ಸಂಯುಕ್ತ ಕರ್ನಾಟಕವು ಅಸ್ತಿತ್ವದಲ್ಲಿ ಬಂದು 10 ವರ್ಷಗಳಾಗಿ ಹೋದವು ; ಆದರೆ ಮಹಾರಾಷ್ಟ್ರ ಕೆಲವು ಸೀಮಾಭಾಗಗಳನ್ನು ಕುರಿತು ವಿವಾದವೆಬ್ಬಿಸಿದೆ. ಪಾರ್ಲಿಮೆಂಟೇ ಅದಕ್ಕೆ ಪರಿಹಾರ ಕೊಡಬಲ್ಲುದು ; ಇದರ ಕೊನೆಯನ್ನಿನ್ನೂ ಪ್ರತೀಕ್ಷಿಸಬೇಕಾಗಿದೆ.

ಮೂಲ ಲೇಖಕರು : ಶ್ರೀ ಎಸ್. ನಿಜಲಿಂಗಪ್ಪ

ಅನುವಾದಕರು : ಶ್ರೀ ವಿನೀತ ರಾಮಚಂದ್ರ ರಾವ್

# ಅಧ್ಯಾಯ 7

## ಮೈಸೂರು, ಏಕೀಕರಣಕ್ಕೆ ಮುಂಚೆ ಮತ್ತು ಅನಂತರ

ಬ್ರಿಟಿಷರ ಆಳಿಕೆಯ ಸಂಘಟ್ಟನೆಯ ಪರಿಣಾಮಗಳಲ್ಲಿ ಭಾರತದ ಬೇರೆ ಬೇರೆ ಪ್ರದೇಶಗಳಲ್ಲುಂಟಾದ ಸಾಂಸ್ಕೃತಿಕ ಜಾಗೃತಿಯೂ ಒಂದು. ಇತರ ಭಾಗಗಳಲ್ಲಾದಂತೆ ಕರ್ಣಾಟಕದಲ್ಲಿಯೂ ಸಂಸ್ಕೃತಿ ಪುನರುಜ್ಜೀವನಗೊಂಡಿತು. ಯೂರೋಪಿನ ವಿದ್ವಾಂಸರು ಹಾಗೂ ಕನ್ನಡಿಗರು ಕನ್ನಡದ ಪುನರುಜ್ಜೀವನವನ್ನು ಉದ್ದೀಪಿಸಿದರು. ಅನೇಕ ದೇಶಾಭಿಮಾನಿ ಕನ್ನಡಿಗರ ಪಾತ್ರದಿಂದ, ದೇಶಭಾಷಾ ಪತ್ರಿಕೆಗಳ ಸೇವೆಯಿಂದ ಸಂಸ್ಕೃತಿ ಬೇಗ ಬೇಗನೆ ಜಾಗೃತವಾಯಿತು. ಅನೇಕ ಲೇಖಕರೂ ಸಾಮಾಜಿಕ ಮುಂದಾಳುಗಳೂ ತಮ್ಮ ಬರೆವಣಿಗೆ ಮತ್ತು ಕಾರ್ಯಗಳಿಂದ ಕನ್ನಡ ರಾಷ್ಟ್ರೀಯತೆಯ ಸತ್ತ್ವವನ್ನು ಉದ್ದೀಪನಗೊಳಿಸಿದರು. ಕನ್ನಡದ ಏಳಿಗೆಗಾಗಿ ಶ್ರದ್ಧೆ ಉತ್ಸಾಹಗಳಿಂದ ದುಡಿದ ಎಷ್ಟೋ ಮಂದಿ ಈಗ ನಮ್ಮೊಡನಿಲ್ಲ. ದಿವಂಗತ ಪ್ರೊ॥ ಬಿ.ಎಂ. ಶ್ರೀಕಂಠಯ್ಯ, ಹಾನಗಲ್ಲಿನ ಶ್ರೀ ಕುಮಾರಸ್ವಾಮಿ, ಶ್ರೀ ಮಂಜಪ್ಪ ಹರ್ಡೀಕರ್, ಶ್ರೀ ಆಲೂರ ವೆಂಕಟರಾವ್ ಮತ್ತು ಇತರ ಸಾಹಿತಿಗಳ ಹಾಗೂ ಸಾಮಾಜಿಕ ಮುಂದಾಳುಗಳ ಸೇವೆಯನ್ನು ಸ್ಮರಿಸಿಕೊಳ್ಳಬಹುದು. ಹೀಗೆ ಸಾಹಿತಿಗಳು ಕರ್ಣಾಟಕ ಏಕೀಕರಣ ಚಳವಳಿಗೆ ಬೇಕಾದ ಭಾವಾತ್ಮಕ ಹಾಗೂ ತಾತ್ತ್ವಿಕ ಹಿನ್ನೆಲೆಯನ್ನು ಒದಗಿಸಿದರು ; ಮುಂದೆ ರಾಜಕಾರಣಿಗಳು ಇದನ್ನು ಉಪಯೋಗಿಸಿಕೊಂಡು ಚಳವಳಿಗೆ ವ್ಯವಸ್ಥಿತವಾದ ರೂಪ ಕೊಟ್ಟರು.

ಹೊಸ ರಾಜ್ಯದ ನಿರ್ಮಾಣವೇ ಗುರಿಯಲ್ಲ ; ಗುರಿಯನ್ನು ಸಾಧಿಸುವುದಕ್ಕೆ ಅದು ಒಂದು ಸಾಧನ ಮಾತ್ರ. ಮುಖ್ಯವಾಗಿ ಕನ್ನಡಿಗರ ಮತ್ತು ಸಾಮಾನ್ಯವಾಗಿ ರಾಷ್ಟ್ರದ, ಯೋಗಕ್ಷೇಮ ಸಾಧನೆಯೇ ಆ ಗುರಿ. ಹೊಸ ರಾಜ್ಯವು ಅನೇಕ ತೊಡಕಾದ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಈ ಏಕೀಕರಣದ ಪರಿಣಾಮವಾಗಿ, ಅಭಿವೃದ್ಧಿಯ ಪ್ರಮಾಣ, ಕಾನೂನು ಹಾಗೂ ಆಡಳಿತವ್ಯವಸ್ಥೆ ಒಂದೇ ರೀತಿಯಲ್ಲಿಲ್ಲದ ಬೇರೆ ಬೇರೆ ಪ್ರದೇಶಗಳನ್ನು ಒಟ್ಟುಗೂಡಿಸಬೇಕಾಗಿ ಬಂದಿತು.

ಹಳೆಯ ಮೈಸೂರು ರಾಜ್ಯದಲ್ಲಿ ಧರ್ಮಶೀಲರಾದ ರಾಜರು ಜನಹಿತದ ಕಾರ್ಯಗಳನ್ನು ಆರಂಭಿಸಿದ್ದರಲ್ಲದೆ, ದಕ್ಷ ಆಡಳಿತಗಾರರೂ ರಾಜನೀತಿಜ್ಞರೂ ಆದ ಸರ್ ಕೆ. ಶೇಷಾದ್ರಿ ಅಯ್ಯರ್, ಸರ್ ಎಂ. ವಿಶ್ವೇಶ್ವರಯ್ಯ, ಸರ್ ಮಿರ್ಜಾ ಇಸ್ಮಾಯಿಲರೇ ಮೊದಲಾದವರು ಅವನ್ನು ಆಚರಣೆಗೆ ತಂದರು. ಹೀಗೆ ಇದು ಅಭಿವೃದ್ಧಿ ಹೊಂದಿ, ಅನೇಕ ಕ್ಷೇತ್ರಗಳಲ್ಲಿ ಮುಂದಿತ್ತು. ಈ ಹಳೆಯ ಮೈಸೂರು ರಾಜ್ಯದಲ್ಲಿ ಕೋಲಾರದ ಚಿನ್ನದ ಗಣಿಗಳು, ಭದ್ರಾವತಿಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ, ಕಾಗದದ ಕಾರ್ಖಾನೆ, ಸಿಮೆಂಟ್ ಕಾರ್ಖಾನೆ, ರೇಷ್ಮೆ ಕಾರ್ಖಾನೆಯಂತಹ ಅನೇಕ ಕೈಗಾರಿಕೆಗಳು ಪ್ರಾರಂಭವಾದುವು. ಬೇಗನೆ, ರಾಜ್ಯದಲ್ಲಿ ಮೊತ್ತಮೊದಲು ಸ್ಥಾಪಿಸಲಾದ ಈ ಕೈಗಾರಿಕೆಗಳ ಜೊತೆಗೆ, ಪ್ರಕೃತಿಯ ಮೂಲಗಳಿಂದ ಜಲ-ವಿದ್ಯುತ್ತಿನ ಉತ್ಪಾದನೆಯೂ ಸೇರಿಕೊಂಡಿತು. ಶಿವಸಮುದ್ರದ ಜಲವಿದ್ಯುತ್‌ಯೋಜನೆಯ ಸಾಗಾಣಿಕೆ ತಂತಿಗಳು ಆಗಿನ ಕಾಲಕ್ಕೆ ಇಡೀ ಭಾರತದಲ್ಲೇ ಅತ್ಯಂತ ಉದ್ದವಾಗಿದ್ದುವು. ಈ ಕೈಗಾರಿಕೆಗಳಿಂದ

ಬಂದ ಆದಾಯವನ್ನು ರಸ್ತೆಗಳ, ಅಣೆಕಟ್ಟುಗಳ, ಸೇತುವೆಗಳ ನಿರ್ಮಾಣವೇ ಮುಂತಾದ ಅಭಿವೃದ್ಧಿಯ ಕಾರ್ಯಗಳಿಗೂ ಆಸ್ಪತ್ರೆ—ವಿದ್ಯಾಸಂಸ್ಥೆಗಳಂತಹ ಜನಹಿತ ಕಾರ್ಯಗಳನ್ನು ಪ್ರಾರಂಭಿಸುವುದಕ್ಕೂ ಉಪಯೋಗಿಸಲಾಯಿತು. ಹಳೆಯ ಮೈಸೂರಿನ ಸರ್ಕಾರವು ತಾನೇ ಪ್ರಾಥಮಿಕ ಹಾಗೂ ವಿಶ್ವವಿದ್ಯಾನಿಲಯದ ಮಟ್ಟದ ಶಿಕ್ಷಣದ ಹೊಣೆಯನ್ನು ಹೊತ್ತಿತ್ತು. ಪ್ರೌಢಶಾಲೆಗಳನ್ನೂ ಕಾಲೇಜುಗಳನ್ನೂ ಅಧಿಕ ಸಂಖ್ಯೆಯಲ್ಲಿ ಪ್ರಾರಂಭಿಸಲಾಯಿತು; ಅವುಗಳಲ್ಲಿ ಅತಿಕಡಮೆ ಶುಲ್ಕವನ್ನು ವಿಧಿಸುತ್ತಿದ್ದರು. ಅರ್ಹತೆ ಹಾಗೂ ಆವಶ್ಯಕತೆಯಿದ್ದ ವಿದ್ಯಾರ್ಥಿಗಳಿಗೆ, ಅದರಲ್ಲೂ ಹಿಂದುಳಿದ ಪಂಗಡದವರಿಗೆ ಅನುಕೂಲವಾಗುವಂತೆ ಅನೇಕ ವಿದ್ಯಾರ್ಥಿವೇತನಗಳನ್ನು ಏರ್ಪಡಿಸಲಾಯಿತು. ಮೈಸೂರಿನ ಸುಪ್ರಸಿದ್ಧ ರಾಜರ ಆಶ್ರಯದಿಂದ ಈ ದಿಶೆಯಲ್ಲಿ—ಶಿಕ್ಷಣಕ್ಷೇತ್ರದಲ್ಲಿ, ನಡೆದ ಪ್ರಯತ್ನಗಳು ತುತ್ತತುದಿಗೆ ಹೋದುವು; ಪರಿಣಾಮವಾಗಿ 1916ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಸ್ಥಾಪನೆಯಾಯಿತು.

ಹೀಗೆ ಮೈಸೂರಿನ ಅಭಿವೃದ್ಧಿಯು ಬೇಗ ಬೇಗ ಸಾಗುತ್ತಿತ್ತು; ಆದರೆ ಕರ್ಣಾಟಕದ ಇತರ ಭಾಗಗಳಲ್ಲಿನ ಪರಿಸ್ಥಿತಿ ತೃಪ್ತಿಕರವಾಗಿರಲಿಲ್ಲ. ಈ ಪ್ರದೇಶಗಳಲ್ಲಿ ಹೇರಳವಾದ ಸಂಪನ್ಮೂಲಗಳಿದ್ದರೂ ಅವುಗಳಿಂದ ಪ್ರಯೋಜನ ಪಡೆಯುವುದನ್ನು ಕಡೆಗಣಿಸಲಾಗಿತ್ತು. ಅವು ಆಯಾ ಪ್ರಾಂತಗಳ ತುತ್ತ ತುದಿಯ ಭಾಗಗಳಾಗಿದ್ದುವು. ಆ ಪ್ರಾಂತಗಳಲ್ಲಿ ಕನ್ನಡ ಮಾತನಾಡುವವರು ಅಲ್ಪ ಸಂಖ್ಯಾತರಾಗಿದ್ದರು. ಅವರು ಮುಂಬಯಿ ರಾಜ್ಯದ ಒಟ್ಟು ಜನ ಸಂಖ್ಯೆಯ ಸುಮಾರು ಶೇ. 6 ಮತ್ತು ಹೈದರಾಬಾದ್ ರಾಜ್ಯದ ಶಾಸನ ಸಭೆಗಳಲ್ಲಿ ಕನ್ನಡಿಗರ ಪ್ರಾತಿನಿಧ್ಯದ ಪ್ರಮಾಣವು ಇತರ ಪ್ರಾತಿನಿಧ್ಯದ ಬಲಕ್ಕಿಂತ ತೀರಾ ಕಡಮೆಯಾಗಿತ್ತು. ಆದ್ದರಿಂದ ಇವರ ಅಸ್ತಿತ್ವವು ಸಾಕಷ್ಟು ಪ್ರಭಾವ ಬೀರುತ್ತಿರಲಿಲ್ಲ.

ಇದರ ಫಲಿತಾಂಶವಾಗಿ, ಶಿಕ್ಷಣದ ಹೊಣೆ ಖಾಸಗಿ ಸಂಸ್ಥೆಯವರ ಮೇಲೆ ಬಿದ್ದಿತು. ಪರಿಣಾಮವಾಗಿ ಆ ಭಾಗದ ಜನರು ಇದಕ್ಕಾಗಿ ಹೆಚ್ಚು ತ್ಯಾಗ ಮಾಡಬೇಕಾಯಿತು. ಧಾರವಾಡದಲ್ಲಿ ಕರ್ಣಾಟಕ ಕಾಲೇಜಿನ ಸ್ಥಾಪನೆಗೆ 1916ರ ವರೆಗೂ ಕಾಯಬೇಕಾಯಿತೆಂಬುದನ್ನು ಇಲ್ಲಿ ಗಮನಿಸಬಹುದು. ಇದೂ ಕೂಡ, ಆ ಪ್ರದೇಶಗಳ ಜನರು ಎರಡು ಲಕ್ಷ ರೂಪಾಯಿಗಳ ವರೆಗೂ ಕೊಟ್ಟ ದಾನದಿಂದ ಸಾಧ್ಯವಾಯಿತು. ಬೆಳಗಾವಿಯ ಲಿಂಗರಾಜಾ ಕಾಲೇಜಿನ ಸ್ಥಾಪನೆಯೂ 1933ರಲ್ಲಿ ಮಾತ್ರ ಸಾಧ್ಯವಾಯಿತು.

ಹೇರಳವಾದ ಪ್ರಕೃತಿಸಂಪತ್ತಿದ್ದರೂ ಈ ಕನ್ನಡ ಪ್ರದೇಶಗಳ ಆರ್ಥಿಕ ಅಭಿವೃದ್ಧಿಯೂ ಹಿಂದುಳಿಯಿತು; ಜನರು ನಿರಾಶರಾದರು. ಈಗ ಹೊಸ ರಾಜ್ಯ ಸ್ಥಾಪನೆಯಾಗಿದೆ; ರಾಜ್ಯದ ಸರ್ವತೋಮುಖವಾದ ಬೆಳವಣಿಗೆಗೆ ಶೀಘ್ರಕ್ರಮಗಳನ್ನು ಕೈಗೊಳ್ಳುತ್ತಿದೆ; ಹೀಗೆ ಸರ್ಕಾರವು ಜನತೆಯಲ್ಲಿರುವ ನಿರಾಶಾ ಭಾವನೆಯನ್ನು ಹೋಗಲಾಡಿಸಲು ಪ್ರಯತ್ನಿಸುತ್ತಿದೆ.

ಹೊಸರಾಜ್ಯವು ಅಸಂಖ್ಯಾತ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಈ ಮೊದಲೇ ಹೇಳಿದಂತೆ, ಇದು ಮುಂಬಯಿ, ಹೈದರಾಬಾದ್, ಮದ್ರಾಸ್ ರಾಜ್ಯಗಳಲ್ಲಿನ ಕನ್ನಡ ಮಾತನಾಡುವವರ ಪ್ರದೇಶಗಳನ್ನೂ ಕೊಡಗನ್ನೂ ಹಳೆಯ ಮೈಸೂರು ರಾಜ್ಯದ ಜಿಲ್ಲೆಗಳೊಂದಿಗೆ ಸೇರಿಸಿ ಮಾಡಿದ ಏಕೀಕರಣ. ಹೊಸ ರಾಜ್ಯದ ವಿಸ್ತೀರ್ಣ 74,861 ಚದರ ಮೈಲಿಗಳು ಮತ್ತು 1961ರ ಜನಗಣತಿಯಂತೆ ಜನಸಂಖ್ಯೆ 2,35,47,081. ರಾಜ್ಯವನ್ನು ಹತ್ತೊಂಬತ್ತು ಜಿಲ್ಲೆಗಳಾಗಿಯೂ ನಾಲ್ಕು ವಿಭಾಗಗಳಾಗಿಯೂ ವಿಂಗಡಿಸಿದೆ.

ಹೊಸರಾಜ್ಯವು ನಿರ್ವಹಿಸಬೇಕಾಗಿದ್ದ ಮುಖ್ಯ ಸಮಸ್ಯೆಗಳು ಯಾವುವೆಂದರೆ: ರಾಜಕೀಯ ಏಕೀಕರಣದ ಸಮಸ್ಯೆ, ಭಾವೈಕ್ಯದ ಸಮಸ್ಯೆ, ಶಿಕ್ಷಣದ ಏಕೀಕರಣದ ಸಮಸ್ಯೆ, ವೇತನದ ಶ್ರೇಣಿಗಳ

ಏಕೀಕರಣ, ಅಂತರರಾಜ್ಯ ಸೇವೆಯಲ್ಲಿನ ಹಿರಿಯತನವನ್ನು ಗೊತ್ತುಮಾಡುವುದು, ಏಕರೀತಿಯ ತೆರಿಗೆ ಹಾಗೂ ಕಂದಾಯದ ಕಾನೂನುಗಳು ಮತ್ತು ಇತರ ಅನೇಕ ಸಮಸ್ಯೆಗಳು.

ಸಚಿವ ಸಂಪುಟದಲ್ಲಿ ಮತ್ತು ಇತರ ಪ್ರಮುಖ ರಾಜ್ಯಮಟ್ಟದ ಸಮಿತಿ, ಮಂಡಲಿ ಮುಂತಾದವುಗಳಲ್ಲಿ ಸಾಕಷ್ಟು ಪ್ರಾತಿನಿಧ್ಯ ಕೊಡುವುದರ ಮೂಲಕ ರಾಜಕೀಯ ಏಕೀಕರಣದ ಸಮಸ್ಯೆಯನ್ನು, ಪರಿಹರಿಸಬೇಕೆಂದು ಉದ್ದೇಶಿಸಲಾಯಿತು. ಆಡಳಿತ ಪಕ್ಷವಾದ ಕಾಂಗ್ರೆಸ್ಸು ಏಕೀಕರಣದ ಶಕ್ತಿಯಾಗಿ ಕೆಲಸ ಮಾಡಿತು. ರಾಜ್ಯದ ಪುನರ್ವಿಂಗಡಣೆಯಾದ ಕೂಡಲೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷಕ್ಕೆ ಸ್ಪಷ್ಟ ಬಹುಮತ ದೊರಕಿತು.

ಶಿಕ್ಷಣ ಕ್ಷೇತ್ರದಲ್ಲಿ ವಿವಿಧ ಶಿಕ್ಷಣ ಪದ್ಧತಿಗಳನ್ನು ಏಕೀಕರಿಸುವ ಸಮಸ್ಯೆಯನ್ನು ರಾಜ್ಯವು ಎದುರಿಸಬೇಕಾಯಿತು. ಪ್ರಾರಂಭದಲ್ಲಿಯೇ ಈ ಸಮಸ್ಯೆಯನ್ನು ನಿರ್ವಹಿಸಲು ರಾಜ್ಯದ ಶಿಕ್ಷಣ ಏಕೀಕರಣದ ಸಲಹಾ ಸಮಿತಿಯ (State Educational Integration Advisory Committee) ನೇಮಕವಾಯಿತು. ಸಮಿತಿಯು ಏಕರೀತಿಯ ಪ್ರಾಥಮಿಕ ಶಿಕ್ಷಣದ ಶಾಸನ (Primary Education Act), ಸಹಾಯ ದ್ರವ್ಯದ ನಿಯಮಗಳು (Grant-in-aid Code) ಮತ್ತು ಅವುಗಳಿಗೆ ಸಂಬಂಧಿಸಿದ ಇತರ ಅಂಶಗಳನ್ನು ರೂಪಿಸುವುದರಲ್ಲಿ ಪ್ರಗತಿ ಸಾಧಿಸಿದೆ. 6 ರಿಂದ 11 ವರ್ಷಗಳ ಗುಂಪಿನ ಮಕ್ಕಳಿಗೆ ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಆಚರಣೆಗೆ ತರುವುದನ್ನು ಪರಿಗಣಿಸಲಾಯಿತು ; ಮತ್ತು "ಮೈಸೂರು ಕಡ್ಡಾಯ ಪ್ರಾಥಮಿಕ ಶಿಕ್ಷಣದ ಮಸೂದೆ-1961" (Mysore Compulsory Education Bill 1961) ಯನ್ನು ರಾಜ್ಯದ ಶಾಸನಸಭೆಯು ಅಂಗೀಕರಿಸಿತೆಂಬುದು ತೃಪ್ತಿಕರವಾದ ಅಂಶ. 1,200 ರೂ. ಗಳಿಗಿಂತ ಕಡಮೆ ವಾರ್ಷಿಕ ವರಮಾನವಿರುವ ಕುಟುಂಬಗಳ ಮಕ್ಕಳಿಗೆ ಸೆಕಂಡರಿ ಶಿಕ್ಷಣವನ್ನು ಪುಕ್ಕಟೆಯಾಗಿ ನೀಡಬೇಕೆಂದು ರಾಜ್ಯ ಸರ್ಕಾರವು ನಿರ್ಧರಿಸಿತು.

ವಿಶ್ವವಿದ್ಯಾನಿಲಯದ ಮಟ್ಟದಲ್ಲಿ ಏಕೀಕರಣವನ್ನು ಸಾಧಿಸಲು ಮೈಸೂರು ಸರ್ಕಾರವು "ಮುದಲಿಯಾರ್ ಸಮಿತಿ" ಯನ್ನು ನೇಮಿಸಿತು ; ಸುಧಾರಣೆಗಳ ಬಗ್ಗೆ ಸಲಹೆಮಾಡಲು ನೇಮಕವಾದ ಈ ಸಮಿತಿಯಲ್ಲಿ ರಾಜ್ಯದ ಆಗಿನ ಎರಡು ವಿಶ್ವವಿದ್ಯಾನಿಲಯಗಳ ಉಪಕುಲಪತಿಗಳೂ ಇತರ ಶಿಕ್ಷಣತಜ್ಞರೂ ಇದ್ದರು. ಈ ಸಮಿತಿಯ ಶಿಫಾರ್ಸುಗಳನ್ನು ಸರಕಾರ ಒಪ್ಪಿಕೊಂಡಿದೆ. ಅದರಂತೆ, ಮೈಸೂರು ವಿಶ್ವವಿದ್ಯಾಲಯದ ಅಧಿಕಾರ ವ್ಯಾಪ್ತಿಯಲ್ಲಿದ್ದ ಅನೇಕ ಕಾಲೇಜುಗಳನ್ನು ಸರ್ಕಾರವು ವಹಿಸಿಕೊಂಡಿತು ಮತ್ತು ಕಾಲೇಜು ಶಿಕ್ಷಣದ ಡೈರೆಕ್ಟರ (Director of Collegiate Education) ಹುದ್ದೆಯನ್ನು ನಿರ್ಮಿಸಲಾಯಿತು. ಬೆಂಗಳೂರಿನಲ್ಲಿರುವ ಕಾಲೇಜುಗಳನ್ನೇ ಅಂಗಸಂಸ್ಥೆಗಳಾಗಿ ಉಳ್ಳ ಬೆಂಗಳೂರು ವಿಶ್ವವಿದ್ಯಾನಿಲಯವು 1964 ರಲ್ಲಿ ಅಸ್ತಿತ್ವಕ್ಕೆ ಬಂದಿತು. ವಿಶ್ವವಿದ್ಯಾನಿಲಯದ ಶಿಕ್ಷಣದ ಏಕೀಕರಣದ ದಿಶೆಯಲ್ಲಿ ಇತ್ತೀಚಿನ ಬೆಳವಣಿಗೆಯೆಂದರೆ, ಸರ್ಕಾರದ ಸಲಹೆಯಂತೆ ನಡೆದ ಮೂರು ವಿಶ್ವವಿದ್ಯಾಲಯಗಳ ಉಪಕುಲಪತಿಗಳ (Vice-Chancellors) ಹಾಗೂ ವಿಭಾಗಗಳ ಡೀನ್‌ಗಳ (Deans of Faculties) ಸಮಾವೇಶ. ಪ್ರಿ-ಯೂನಿವರ್ಸಿಟಿ ಮತ್ತು ಪದವಿ (Degree) ವ್ಯಾಸಂಗಗಳಿಗೆ ಏಕರೀತಿಯ ಪಠ್ಯಕ್ರಮವನ್ನು ರೂಪಿಸಬೇಕೆಂದು ಅವರೆಲ್ಲ ಅವಿರೋಧವಾಗಿ ನಿರ್ಣಯಿಸಿರುವರು,

ಶಿಕ್ಷಣಕ್ಷೇತ್ರದಲ್ಲಿ ಕಟ್ಟುನಿಟ್ಟಿನ ಏಕರೂಪತೆಯನ್ನು ಹೇರುವ ಉದ್ದೇಶ ಸರ್ಕಾರಕ್ಕಾಗಲಿ, ವಿಶ್ವವಿದ್ಯಾನಿಲಯಗಳಿಗಾಗಲಿ ಇಲ್ಲ. ಆದರೆ ಸಮನ್ವಯವನ್ನು ಸಾಧಿಸುವುದು ಅಪೇಕ್ಷಣೀಯವಾಗಿದೆ. ಇದು ಅಗತ್ಯವಾಗಿತ್ತು. ಏಕೆಂದರೆ ವಿದ್ಯಾ ತರಗತಿಗಳು ಏಕರೀತಿಯಾಗಿಲ್ಲದೆ, ಪಠ್ಯ ಕ್ರಮವೂ ಬೇರೆ ಬೇರೆಯಾಗಿದ್ದಿತು. ಇದರಿಂದ, ಒಂದು ವಿಶ್ವವಿದ್ಯಾನಿಲಯದಿಂದ ಇನ್ನೊಂದಕ್ಕೆ ಹೋಗಬೇಕೆಂದರೆ ರಾಜ್ಯದ

ಬೇರೆ ಬೇರೆ ಪ್ರದೇಶಗಳ ವಿದ್ಯಾರ್ಥಿಗಳು ಭಾರೀ ಕಷ್ಟಗಳನ್ನು ಅನುಭವಿಸುತ್ತಿದ್ದರು. ಈ ಅಡ್ಡಿಯನ್ನು ಈಗ ತೆಗೆದು ಹಾಕಲಾಗುತ್ತಿದೆ. ಇದರಿಂದ ಶಿಕ್ಷಣದ ಏಕೀಕರಣಕ್ಕೆ ಸಹಾಯವಾಗಿದೆ.

ಹೊಸ ರಾಜ್ಯದ ನಿರ್ಮಾಣದ ಪರಿಣಾಮವಾಗಿ, ಬೇರೆ ಬೇರೆ ವೇತನಶ್ರೇಣಿಗಳು ಹಾಗೂ ಸೇವೆಯ ನಿಯಮಗಳುಳ್ಳ ಅನೇಕ ನೌಕರರು ಒಂದೇ ಆಡಳಿತಕ್ಕೆ ಒಳಗಾಗಬೇಕಾಯಿತು. ಹಳೆಯ ಮೈಸೂರಿನ ಸರ್ಕಾರವು "ಆಗ ರಾಜ್ಯದಲ್ಲಿ ಜಾರಿಯಲ್ಲಿದ್ದ ವೇತನದ ಶ್ರೇಣಿಗಳು ಸಾಕೇ, ಸಾಲದೇ ಎಂಬುದನ್ನು ವಿವೇಚಿಸಲು" ಶ್ರೀ ವಿ.ಎಂ. ಮಸ್ಕರೇನರನ್ನು ಅಧ್ಯಕ್ಷರಾಗಿ ಉಳ್ಳ ವೇತನರಚನಾಸಮಿತಿ (1955) ಯನ್ನು (Pay Structure Committee, 1955) ನೇಮಿಸಿತ್ತು. ಸಮಿತಿಯು ಹಳೆಯ ಮೈಸೂರು ನೌಕರರ ಬಗೆಗೆ ಶಿಫಾರ್ಸುಮಾಡಿತ್ತು. ಏಕೀಕೃತ ಕರ್ಣಾಟಕದ ಸರ್ಕಾರವು ಈ ಶಿಫಾರ್ಸುಗಳನ್ನು ಒಪ್ಪಿ, ಜಾರಿಗೆ ತಂದಿತು. ಇದರಿಂದ, ವೇತನಶ್ರೇಣಿಗಳಲ್ಲಿದ್ದ ಅಸಮಾನತೆಯನ್ನು ಕಡಮೆಮಾಡಲು ಎಷ್ಟೋ ಸಹಾಯವಾಯಿತು. ಹಳೆಯ ಮೈಸೂರು ರಾಜ್ಯದ ನೌಕರರಿಗೆ ಈ ಕ್ರಮದಿಂದ ಬಹಳ ಮಟ್ಟಿಗೆ ಲಾಭವಾಯಿತು. ಮುಂಬಯಿಯ ವೇತನ ಶ್ರೇಣಿಗಳು ಅತಿ ಹೆಚ್ಚೂ ಹಳೆಯ ಮೈಸೂರಿನವು ಅತಿ ಕಡಮೆಯೂ ಆಗಿದ್ದುವು. ಹೀಗಾಗಿ ಸೇವೆಗಳ ಏಕೀಕರಣವು ಒಂದು ದೊಡ್ಡ ಸಮಸ್ಯೆಯಾಗಿತ್ತು. ರಾಜ್ಯಗಳ ಪುನರ್ವಿಂಗಡಣೆಯ ಆಯೋಗವು (States' Reorganisation Commission) "ಅಂತಸ್ತುಗಳ ನಿರ್ಧಾರ ಮತ್ತು ಸಿಬ್ಬಂದಿಯ ಹಂಚಿಕೆಯಿಂದ ಸೇವೆಗಳ ಏಕೀಕರಣವನ್ನು ನಿಶ್ಚಿತ ತತ್ವಗಳ ಆಧಾರದ ಮೇಲೆ ಮಾಡಬೇಕು; ಇವುಗಳು ಸಾಧ್ಯವಾದ ಮಟ್ಟಿಗೂ ಭಾರತಕ್ಕೆಲ್ಲಾ ಒಂದೇ ರೀತಿಯಲ್ಲಿ ಅನ್ವಯವಾಗುವಂತಿರಬೇಕು" ಎಂದು ಸೂಚನೆ ನೀಡಿತ್ತು. ಮೈಸೂರಿನ ರಾಜ್ಯಪಾಲರು ಹೊಸ ಮೈಸೂರು ರಾಜ್ಯದ ಶಾಸನ ಸಭೆಯ ಮೊತ್ತಮೊದಲಿನ ಅಧಿವೇಶನದಲ್ಲಿ ತಮ್ಮ ಆಶಯವನ್ನು ಹೀಗೆ ವ್ಯಕ್ತಪಡಿಸಿದರು—"ನಮ್ಮಲ್ಲಿಗೆ ಬಂದಿರುವ ನೌಕರರ ವೇತನ ಶ್ರೇಣಿಗಳಿಗೂ ಸೇವಾನಿಯಮಗಳಿಗೂ ಧಕ್ಕೆಯೊದಗಲೂ ಬಾರದು; ಅಂತೆಯೇ ಏಕರೀತಿಯ ವೇತನ ಶ್ರೇಣಿಗಳನ್ನೂ ಸೇವಾನಿಯಮಗಳನ್ನೂ ರೂಪಿಸಲು, ಅತ್ಯಂತ ಕೆಳಗಿನ ದರ್ಜೆಗಳಲ್ಲಿ ವೇತನದ ಮಟ್ಟವನ್ನು ಸುಧಾರಿಸಲು ಕ್ರಮಗಳನ್ನು ಕೈಕೊಳ್ಳಬೇಕು." ಈ ದಿಶೆಯಲ್ಲಿ ಮೊದಲನೆಯ ಹೆಜ್ಜೆಯಾಗಿ ಹಳೆಯ ಮೈಸೂರು ರಾಜ್ಯದ ಕಡಮೆವೇತನದ ನೌಕರರಿಗೆ ತಾತ್ಕಾಲಿಕ ಪರಿಹಾರವನ್ನು ಮಂಜೂರು ಮಾಡಲಾಯಿತು. ವೇತನ ರಚನಾ ಸಮಿತಿಯ ಶಿಫಾರ್ಸುಗಳನ್ನು 1957ನೆ ಜನವರಿ 1ರಿಂದ ಜಾರಿಗೆ ತರಲಾಯಿತು. ಇದರಿಂದ ರಾಜ್ಯದ ಮೇಲೆ ವರ್ಷಕ್ಕೆ ಸುಮಾರು 4 ಕೋಟಿ ರೂಪಾಯಿಗಳ ಆವರ್ತಕ ಹೊರೆ ಬಿದ್ದಿತು. ಈ ರಾಜ್ಯದ ನೌಕರರ ಸೇವಾನಿಯಮಗಳನ್ನು ಇನ್ನೆಷ್ಟರ ಮಟ್ಟಿಗೆ, ಯಾವ ವಿಚಾರಗಳಲ್ಲಿ ಸುಧಾರಿಸಬಹುದೆಂಬುದನ್ನು ಇನ್ನೂ ವಿವೇಚಿಸಲು ಇನ್ನೊಂದು ಸಮಿತಿಯ ನೇಮಕವಾಯಿತು. ಇದು ತನ್ನ ಶಿಫಾರ್ಸುಗಳನ್ನು 1961ರ ಫೆಬ್ರವರಿಯಲ್ಲಿ ಸಲ್ಲಿಸಿದ ಮೇಲೆ, ಅದೇ ಜನವರಿಯಿಂದ ಜಾರಿಗೆ ಕೊಡಲಾಯಿತು. ಈ ಸಂದರ್ಭದಲ್ಲಿ ಕೇಂದ್ರ ಸರ್ಕಾರದ ಇಬ್ಬರು ಉನ್ನತ ಅಧಿಕಾರಿಗಳ ಸೇವೆಯನ್ನು ಉಪಯೋಗಿಸಿಕೊಳ್ಳಲಾಯಿತು. ಸೇವಾನಿಯಮಗಳನ್ನು ಏಕೀಕರಿಸುವುದು, ವಿವಿಧ ಸೇವೆಗಳ ಸಿಬ್ಬಂದಿಗೆ ಒಂದು ಸಾಮಾನ್ಯ ಹಿರಿತನದ ಪಟ್ಟಿಯನ್ನು ತಯಾರಿಸುವುದು ಮತ್ತು ಹುದ್ದೆಗಳ ಸಮಾನೀಕರಣ ಮಾಡುವುದು—ಇದೇ ಇವರಿಬ್ಬರನ್ನು ತೆಗೆದುಕೊಂಡ ಉದ್ದೇಶವಾಗಿತ್ತು. ಈ ಎಲ್ಲ ಕ್ರಮಗಳಿಂದ ಸರ್ಕಾರದ ಬಹು ಸಂಖ್ಯಾತ ನೌಕರರಿಗೆ, ಅದರಲ್ಲೂ ಕಡಮೆ ವೇತನ ಪಡೆಯುವವರಿಗೆ ಪ್ರಯೋಜನವಾಯಿತು; ಇದರ ಪರಿಣಾಮವಾಗಿ, ನೌಕರರಲ್ಲಿದ್ದ ಅತೃಪ್ತಿ ಕಡಮೆಯಾಗಿ, ಶ್ರದ್ಧೆಯಿಂದ ಕೆಲಸಮಾಡಲು ಅವರಿಗೆ ಪ್ರೇರಣೆಯಾಗುವುದೆಂದು ನಿರೀಕ್ಷಿಸಲಾಗಿದೆ.

ಒಟ್ಟುಗೂಡಿಸಿದ ಐದು ಪ್ರದೇಶಗಳಲ್ಲಿ ಕಾನೂನುಗಳೂ ಆಡಳಿತ ಪದ್ಧತಿಗಳೂ ಭಿನ್ನವಾಗಿದ್ದುವೆಂದು ಈ ಮೊದಲೇ ಸೂಚಿಸಲಾಗಿದೆ. ಮೈಸೂರಿನ ರಾಜ್ಯಪಾಲರು ರಾಜ್ಯದ ಶಾಸನಸಭೆಯ ಪ್ರಥಮ

ಅಧಿವೇಶನದ ಭಾಷಣದಲ್ಲಿ ಈ ಸಮಸ್ಯೆಗಳನ್ನು ಪ್ರಸ್ತಾವಿಸಿದರು—"ಇಡೀ ರಾಜ್ಯಕ್ಕೆ ಏಕೀಕೃತ, ಏಕ ರೀತಿಯ ವ್ಯವಸ್ಥೆಯನ್ನು ರೂಪಿಸಬೇಕಾದ್ದು ಅತ್ಯಾವಶ್ಯಕ. ನಮ್ಮ ಸರ್ಕಾರವು ತನ್ನ ಸರ್ವಶಕ್ತಿಯನ್ನು ಈ ಕಾರ್ಯಕ್ಕೆ ನಿಯೋಜಿಸಲು ಉದ್ದೇಶಿಸಿದೆ; ಅದರಲ್ಲೂ ತೆರಿಗೆ ಕಾನೂನುಗಳನ್ನು (Taxation Laws) ಏಕರೂಪಕ್ಕೆ ತರುವ ಕ್ರಮಗಳನ್ನು ಆದಷ್ಟು ಜಾಗ್ರತೆಯಾಗಿ ತಮ್ಮ ಮುಂದೆ ಇಡಲು ಸಾಧ್ಯವಾಗಬಹುದೆಂಬ ಆಶಯವಿದೆ. ಅದರಂತೆ, ಏಕರೂಪತೆಯನ್ನು ಸಾಧಿಸಲು ಸುಮಾರಾಗಿ ಶಾಸನಸಭೆಯ ಪ್ರತಿ ಅಧಿವೇಶನದಲ್ಲಿಯೂ ರಾಜ್ಯಸರ್ಕಾರವು ಅನೇಕ ಮಸೂದೆಗಳನ್ನು ತರುತ್ತಲಿದೆ."

'ತಾನೇ ಸ್ವತಃ ಉಳುವವನ ಪ್ರಯತ್ನಗಳಿಗೆ ಅತ್ಯಂತ ಹೆಚ್ಚಿನ ಪ್ರಯೋಜನ ದೊರೆಯುವಂತೆ ಮಾಡುವ ಒಂದು ಭೂಸುಧಾರಣಾ ವ್ಯವಸ್ಥೆಯನ್ನು ರೂಪಿಸುವುದೂ' ಸರ್ಕಾರದ ನೀತಿಯಾಗಿತ್ತು. ಗೇಣಿಯ ಶಾಸನಗಳು (Tenancy Acts) ಮುಂಬಯಿ, ಮದ್ರಾಸು ಮತ್ತು ಮೈಸೂರು ರಾಜ್ಯಗಳಲ್ಲಿ ಅಂಗೀಕೃತವಾಗಿದ್ದುವು. ಕೊಡಗಿನಲ್ಲಿ ಗೇಣಿಯ ಕಾನೂನೇ ಇರಲಿಲ್ಲ. ರಾಜ್ಯದ ವಿವಿಧ ಭಾಗಗಳಲ್ಲಿ ಚಾಲ್ತಿಯಲ್ಲಿದ್ದ ಭೂಹಿಡುವಳಿ ಕಾನೂನುಗಳನ್ನು ಜಾಗರೂಕತೆಯಿಂದ, ಆದರೆ ಬೇಗನೆ ಪರಿಶೀಲಿಸಬೇಕೆಂದು ಮನವರಿಕೆಯಾಯಿತು. ಈ ನಡುವೆ ಯಥಾಸ್ಥಿತಿಯನ್ನು ಕಾಪಾಡಿಕೊಳ್ಳುವ ಬಗೆಗೆ ಕಾನೂನುಗಳನ್ನು ರಚಿಸಲಾಯಿತು. ಈ ಸಮಸ್ಯೆಯ ವಿಚಾರದಲ್ಲಿ ಸರ್ಕಾರಕ್ಕೆ ಸಲಹೆಮಾಡಲು ಶ್ರೀ ಬಿ.ಡಿ. ಜತ್ತಿಯವರು ಅಧ್ಯಕ್ಷರಾಗಿ ಉಳ್ಳ ಭೂಸುಧಾರಣಾ ಸಮಿತಿಯನ್ನು (Land Reforms Committee) ರಚಿಸಲಾಯಿತು. 1957ರಲ್ಲಿ ಸಮಿತಿಯು ಸಲ್ಲಿಸಿದ ಶಿಫಾರ್ಸುಗಳನ್ನೂ ವಿವರವಾಗಿ ಚರ್ಚಿಸಿದ ಮೇಲೆ ಭೂಸುಧಾರಣೆಗಳು ಜಾರಿಗೆ ಬಂದಿವೆ. ಭೂಮಿಯನ್ನು ಉಳುವವನಿಗೂ ಅವನು ಉಳುವ ನೆಲದಲ್ಲಿ ಒಂದು ಭಾಗ ದೊರೆಯುವಂತೆ ಮಾಡುವುದೇ ಈ ಸುಧಾರಣೆಯ ಗುರಿ. ಇದರಿಂದ ಆತನು ವ್ಯವಸಾಯದ ಉತ್ಪನ್ನದ ಹೆಚ್ಚುವರಿಗೂ ಗ್ರಾಮಾಂತರ ಪ್ರದೇಶಗಳ ಆರ್ಥಿಕ ಸ್ಥಿತಿಯ ಅಭಿವೃದ್ಧಿಗೂ ತನ್ನ ಕಾಣಿಕೆ ಸಲ್ಲಿಸುವಂತಾಗುತ್ತದೆ.

ಯಾವ ರಾಜ್ಯದ ಏಳಿಗೆಗಾದರೂ ಸಂಚಾರ ಸಂಪರ್ಕಗಳ ಅಭಿವೃದ್ಧಿ ಅಗತ್ಯ. ಹೊಸ ರಾಜ್ಯದ ಎಲ್ಲಾ ಭಾಗಗಳಲ್ಲಿ ಒಂದೇ ರೀತಿಯ ಅನುಕೂಲತೆಗಳಿರಲಿಲ್ಲ. ರಾಜ್ಯಪಾಲರು ಹೀಗೆ ಎತ್ತಿ ಹೇಳಿದ್ದಾರೆ: "ಬೆಂಗಳೂರಿನಿಂದ ರಾಜ್ಯದ ಉತ್ತರ ಜಿಲ್ಲೆಗಳಾದ ಬೀದರ್, ಗುಲ್ಬರ್ಗ ಮತ್ತು ಬಿಜಾಪುರಗಳಿಗೆ ಸುತ್ತು ಬಳಸು ದಾರಿಯನ್ನು ಬಿಟ್ಟು ನೇರವಾಗಿ ಪ್ರಯಾಣ ಮಾಡುವಂತಿಲ್ಲ; ಬಿಜಾಪುರ, ಧಾರವಾಡ ಜಿಲ್ಲೆಗಳಿಗೂ ನೆರೆಯ ಜಿಲ್ಲೆಗಳಾದ ರಾಯಚೂರು, ಗುಲ್ಬರ್ಗ ಮತ್ತು ಬಳ್ಳಾರಿ ಜಿಲ್ಲೆಗಳಿಗೂ ಸಂಪರ್ಕ ಮಾರ್ಗಗಳು ಇಲ್ಲವೇ ಇಲ್ಲ. ಕೃಷ್ಣಾ, ತುಂಗಭದ್ರೆಗಳಂತಹ ಪ್ರಮುಖ ನದಿಗಳಿಗೆ ಸೇತುವೆಗಳನ್ನು ಕಟ್ಟುವುದೂ ಸೇರಿ, ರಾಜಧಾನಿಗೂ ಈ ಪ್ರದೇಶಗಳಿಗೂ ನೇರ ರಸ್ತೆ ಸಂಪರ್ಕ ಕಲ್ಪಿಸಲು ಸಮಗ್ರ ಯೋಜನೆಯೊಂದು ಸಿದ್ಧವಾಗುತ್ತಲಿದೆ......". ಇದರ ಫಲಿತಾಂಶವಾಗಿ, ರಾಜ್ಯದ ಬೇರೆ ಬೇರೆ ಭಾಗಗಳನ್ನು ರಸ್ತೆಗಳ ಒಂದು ಜಾಲದಿಂದ ಸೇರಿಸಲು ಅನೇಕ ಯೋಜನೆಗಳನ್ನು ಸಿದ್ಧಪಡಿಸಿ ಜಾರಿಗೆ ಕೊಡಲಾಗುತ್ತಿದೆ. 150 ಮೈಲಿ ಉದ್ದದ ಪಶ್ಚಿಮ ಕರಾವಳಿಯ ರಾಷ್ಟ್ರೀಯ ಹೆದ್ದಾರಿಯ ಮತ್ತು ಬೆಂಗಳೂರು–ಬೀದರ್ ಹೆದ್ದಾರಿಗಳ ನಿರ್ಮಾಣವನ್ನು ಕೈಗೆ ತೆಗೆದುಕೊಳ್ಳಲಾಯಿತು. ತುಂಗಭದ್ರಾನದಿಗೆ ಶಿರಗುಪ್ಪದಲ್ಲಿ ಸೇತುವೆಯನ್ನು ಕಟ್ಟಿ, ಬೆಂಗಳೂರಿನಿಂದ ರಾಯಚೂರಿಗೆ ನೇರ ಸಂಪರ್ಕವನ್ನು ಕಲ್ಪಿಸಲಾಯಿತು. ಕೃಷ್ಣಾನದಿಗೆ ತಿಂತಣಿಯಲ್ಲಿ ಸೇತುವೆ ಕಟ್ಟಲಾಯಿತು. ಈಗ ಬೆಂಗಳೂರಿನಿಂದ ರಸ್ತೆಯ ಮೂಲಕ ರಾಜ್ಯದ ಎಲ್ಲಾ ಜಿಲ್ಲೆಗಳಿಗೂ ಪ್ರಯಾಣಮಾಡುವುದು ಸಾಧ್ಯವಾಗಿ, ಎಲ್ಲ ಕಡೆಗೂ ಸರಿಯಾದ ಸಂಪರ್ಕವುಂಟಾಗಿವೆ. ಅಲ್ಲದೆ, ಸುಮಾರು 3,800 ಮೈಲಿ ಉದ್ದದ ಜಿಲ್ಲಾ ಮಂಡಲಿಯ ಮತ್ತು ಇತರ ರಸ್ತೆಗಳ ರಕ್ಷಣೆಯನ್ನು ರಾಜ್ಯವು ವಹಿಸಿಕೊಂಡಿತು. ಬಂದರುಗಳ ಅಭಿವೃದ್ಧಿಗೂ ವಿಶೇಷ ಗಮನಕೊಡಲಾಗಿದೆ. ಮಂಗಳೂರನ್ನು ಒಂದು ಸರ್ವಋತು ಬಂದರನ್ನಾಗಿ ಅಭಿವೃದ್ಧಿಗೊಳಿಸುವ ಕಾರ್ಯವನ್ನು ಕೇಂದ್ರ ಸರ್ಕಾರ ಕೈಗೊಂಡಿದೆ;

ಇದರಿಂದ ವರ್ಷಕ್ಕೆ ಇಪ್ಪತ್ತು ಲಕ್ಷ ಟನ್ ಅದುರನ್ನು ಅಥವಾ ಇತರ ಸಾಮಾನುಗಳನ್ನು ರಫ್ತು ಮಾಡಲು ಅನುಕೂಲವಾಗುವುದು. ಕಾರವಾರ ಬಂದರನ್ನು ಒಂದು ಸರ್ವಋತು ಬಂದರನ್ನಾಗಿ ಅಭಿವೃದ್ಧಿಗೊಳಿಸಲಾಗುವುದು. ಮುಂಬರುವ ವರ್ಷಗಳಲ್ಲಿ ಹೊನ್ನಾವರ, ಕುಂದಾಪುರ ಮತ್ತು ಬೆಳಿಕೇರಿ ಬಂದರುಗಳ ಅಭಿವೃದ್ಧಿಯನ್ನು ಕೈಗೊಳ್ಳಲಾಗುವುದು.



## ರಾಜ್ಯ ಮತ್ತು ಅದರ ಅಭಿವೃದ್ಧಿ ಯೋಜನೆಗಳು

ಹೊಸ ರಾಜ್ಯದಲ್ಲಿ ಪ್ರಾಕೃತಿಕ ಸಂಪನ್ಮೂಲಗಳು ತುಂಬಿವೆ. ಅವುಗಳನ್ನು ಹತೋಟಿಗೆ ತೆಗೆದುಕೊಂಡು ಫಲಕಾರಿಯಾಗಿ ಉಪಯೋಗಿಸಿಕೊಂಡರೆ ಸರ್ವತೋಮುಖವಾದ ಏಳಿಗೆಯನ್ನು ಸಾಧಿಸಬಹುದು.

ಹೊಸ ರಾಜ್ಯದಲ್ಲಿ ಅನೇಕ ಜಲಪಾತಗಳಿವೆ, ಅವುಗಳಲ್ಲಿ ಕೆಲವು ಪ್ರಪಂಚದಲ್ಲೇ ಪ್ರಸಿದ್ಧಿಪಡೆದಿವೆ: ಗೇರುಸೊಪ್ಪೆ ಜಲಪಾತ, ಉತ್ತರ ಕನ್ನಡ ಜಿಲ್ಲೆಯ ಉಂಚಲಿ ಜಲಪಾತ, ಲಾಲಗಲಿ ಜಲಪಾತ ಮತ್ತು ಶಿವಸಮುದ್ರದ ಜಲಪಾತ—ಇವುಗಳಲ್ಲಿ ಅನೇಕ ಜಲಪಾತಗಳಿಂದ ವಿದ್ಯುಚ್ಛಕ್ತಿಯನ್ನು ಉತ್ಪಾದಿಸಿ, ಕೈಗಾರಿಕೆಯ ಉದ್ದೇಶಗಳಿಗೂ ಮನೆಬಳಕೆಗೂ ಸರಬರಾಜು ಮಾಡಲಾಗುತ್ತಿದೆ. ಶರಾವತಿ ಕಣಿವೆ ಯೋಜನೆಯ ಕಾರ್ಯವು ಪ್ರಗತಿ ಹೊಂದುತ್ತಿದೆ. ಎರಡು ಉತ್ಪಾದಕ ಘಟಕಗಳಲ್ಲಿ 1,78,200 ಕಿಲೋವಾಟ್ ಶಕ್ತಿಯನ್ನು ಉತ್ಪಾದಿಸುವ ಅಂದಾಜಿದ್ದ ಈ ಯೋಜನೆಯ ಪ್ರಥಮ ಹಂತವು ಮುಗಿದಿದೆ. ಎರಡನೆಯ ಹಂತದಲ್ಲಿ ಆರು ಘಟಕಗಳ ಸ್ಥಾಪನೆ ಮಂಜೂರಾಗಿದೆ. ಅಮೆರಿಕದ ಸಂಯುಕ್ತ ಸಂಸ್ಥಾನವು ಶರಾವತಿ ಯೋಜನೆಯ ಎರಡನೆಯ ಹಂತವನ್ನು ಪೂರೈಸಲು ಸುಮಾರು 27 ಕೋಟಿಗಳಷ್ಟು ಭಾರೀ ಸಾಲ ಕೊಡಲು ಮುಂದೆ ಬಂದಿರುವುದು ಅಭಿನಂದನಾರ್ಹವಾದ ಅಂಶ. 33,200 ಕಿಲೋವಾಟ್ ಸ್ಥಾಪಿತ ಸಾಮರ್ಥ್ಯವುಳ್ಳ ಭದ್ರ ಜಲವಿದ್ಯುತ್‌ಯೋಜನೆಯೂ ಕೆಲಸ ಮಾಡಲು ತೊಡಗಿದೆ. ಪೂರ್ತಿಯಾಗಿ ಮೈಸೂರಿಗೆ ಸೇರಿದ, ತುಂಗಭದ್ರಾ ಜಲವಿದ್ಯುತ್ ಯೋಜನೆಯ ಎಡದಡದ ಕೇಂದ್ರವು 27,000 ಕಿಲೊವಾಟ್ ಶಕ್ತಿಯನ್ನು ಉತ್ಪಾದಿಸುತ್ತಿದೆ; ಮತ್ತು ಮೈಸೂರಿಗೆ ಶೇಕಡ 20 ಪಾಲು ಇರುವ ಬಲದಡದ ಕೇಂದ್ರವು ಉತ್ಪಾದಿಸುತ್ತಿರುವುದು 14,400 ಕಿಲೊ ವಾಟ್ ಶಕ್ತಿ. ರಾಜ್ಯದ ಏಕೀಕರಣದ ಅನಂತರ ಉಂಟಾದ ಅಧಿಕ ಬೇಡಿಕೆಯನ್ನು ಪೂರೈಸುವುದೇ ಈ ಸ್ಥಾಪನೆಗಳ ಉದ್ದೇಶ. ಉತ್ಪಾದನಾ ಕೇಂದ್ರಗಳನ್ನೂ ಸಾಗಾಣಿಕೆ ತಂತಿಗಳನ್ನೂ ಸಂರಕ್ಷಣೆ ಮಾಡಿ ಯೋಗಕ್ಷೇಮ ನೋಡಿಕೊಳ್ಳುವುದಕ್ಕಾಗಿ 1957ನೆ ಅಕ್ಟೋಬರಿನಲ್ಲಿ ರಾಜ್ಯದ ವಿದ್ಯುತ್ ಮಂಡಲಿಯನ್ನು ರಚಿಸಲಾಯಿತು. ಇಡೀ ವಿತರಣೆಯ ವ್ಯವಸ್ಥೆಯು ಮಂಡಲಿಗೆ ಸೇರಿದೆ. ಏಕೀಕರಣಗೊಂಡ ಪ್ರದೇಶಗಳಲ್ಲೆಲ್ಲ ಶಕ್ತಿವಿತರಣೆ, ದರಗಳು ಮುಂತಾದುವುಗಳಲ್ಲಿ ಏಕರೂಪತೆ ತರಲು ಈ ಮಂಡಲಿಯಿಂದ ಉಪಯೋಗವಾಗಿದೆ.

ಹೊಸ ರಾಜ್ಯವು ಅನೇಕ ದೊಡ್ಡ ಹಾಗೂ ಸಣ್ಣ ನೀರಾವರಿಯೋಜನೆಗಳನ್ನು ಹೊಸತಾಗಿ ಕೈಗೊಂಡಿದೆ, ಇಲ್ಲವೆ ಇದ್ದುದನ್ನೇ ಮುಂದುವರಿಸಿದೆ. ತುಂಗಭದ್ರಾ ಯೋಜನೆ, ಘಟಪ್ರಭಾ ಯೋಜನೆ, ಭದ್ರಾ ಜಲಾಶಯದ ಯೋಜನೆ-ಇಂತಹ ಪ್ರಮುಖ ನೀರಾವರಿ ಯೋಜನೆಗಳ ಕಾರ್ಯದಲ್ಲಿ ಹೆಚ್ಚಿನ ಪ್ರಗತಿಯುಂಟಾಗಿದೆ.

ಹೊಸರಾಜ್ಯದ ಸ್ಥಾಪನೆಯಿಂದ ಕೈಗಾರಿಕೆಯ ಕ್ಷೇತ್ರದಲ್ಲಿ ಕೆಲವು ಪ್ರಗತಿಪರ ಬದಲಾವಣೆಗಳಾದುವು. ಕೋಲಾರದ ಚಿನ್ನದ ಗಣಿಗಳ ರಾಷ್ಟ್ರೀಕರಣವು ಒಂದು ಮುಖ್ಯಘಟನೆ. ಈ ಗಣಿಗಳಿಂದ ಪ್ರಯೋಜನ ಪಡೆಯಲು ಆಡಳಿತ ಮಂಡಲಿಯೊಂದನ್ನು ಕೂಡಲೆ ರಚಿಸಲಾಯಿತು. 94½ ಲಕ್ಷ ರೂ. ವೆಚ್ಚದ

ಅಭಿವೃದ್ಧಿಯೋಜನೆಯೊಂದನ್ನು ಕೈಗೊಳ್ಳಲಾಯಿತು. ಭಾರೀ ಪ್ರಮಾಣದ ಕೈಗಾರಿಕೆಯ ಕ್ಷೇತ್ರದಲ್ಲಿ ಭದ್ರಾವತಿಯಲ್ಲಿ ಹೊಸ ತಿರುವುಕೊಳವೆಗಳ (Spun-pipe) ಕಾರ್ಖಾನೆಯ ಪರೀಕ್ಷಾರ್ಥ ಕಾರ್ರ್ಯಾಚರಣೆಯು 1957ರಲ್ಲಿ ಪ್ರಾರಂಭವಾಯಿತು ; ಅಲ್ಲದೆ ಫೆರೊ–ಸಿಲಿಕಾನ್ ಯಂತ್ರದ ಸಾಮರ್ಥ್ಯ ವನ್ನು 5 ಸಾವಿರ ಟನ್‌ಗಳಿಂದ 20 ಸಾವಿರ ಟನ್‌ಗಳಿಗೆ ವಿಸ್ತರಿಸಲು ಕೇಂದ್ರ ಸರ್ಕಾರ ಒಪ್ಪಿಕೊಂಡಿದೆ. ಕಾರವಾರ ಜಿಲ್ಲೆಯಲ್ಲಿರುವ ಅರಣ್ಯನಗರವಾದ ದಾಂಡೇಲಿಯ ಒಳಗೂ ಸುತ್ತು ಮುತ್ತಲೂ ಅನೇಕ ಕೈಗಾರಿಕೆಗಳು ಅಸ್ತಿತ್ವಕ್ಕೆ ಬಂದಿವೆ. ಆ ಪ್ರದೇಶದಲ್ಲಿ ದೊರಕುವ ಖನಿಜಗಳನ್ನು ದಿನದಿನಕ್ಕೂ ಹೆಚ್ಚು ಹೆಚ್ಚಾಗಿ ಬಳಸಿಕೊಳ್ಳಲಾಗುತ್ತಿರುವ ವೆಸ್ಟ್‌ಕೋಸ್ಟ್ ಕಾಗದದ ಕೈಗಾರಿಕೆಯು ಪ್ರಗತಿಹೊಂದುತ್ತಿದ್ದು, ರಾಜ್ಯದ ಕೈಗಾರಿಕೆಯ ಅಭಿವೃದ್ಧಿಗೆ ಗಣನೀಯವಾಗಿ ನೆರವಾಗುವುದೆಂದು ನಿರೀಕ್ಷಿಸಲಾಗಿದೆ. ಸರ್ಕಾರದ ಮಾಲಿಕತನದಲ್ಲಿರುವ ಹಾಗೂ ನೆರವು ಪಡೆದು ನಡೆಯುತ್ತಿರುವ ಕೈಗಾರಿಕೆಯ ಸಂಸ್ಥೆಗಳ ಚಟುವಟಿಕೆಗಳನ್ನು ಸಮನ್ವಯಗೊಳಿಸುವ ದೃಷ್ಟಿಯಿಂದ ಒಂದು ಪ್ರತ್ಯೇಕ ಕೈಗಾರಿಕೆಯ ಸೇವಾವರ್ಗವನ್ನು ರಚಿಸಲಾಗಿದೆ. ರಾಜ್ಯಸರ್ಕಾರವು ಖಾಸಗಿ ಉದ್ಯಮವನ್ನು ಪ್ರೋತ್ಸಾಹಿಸುವ ನೀತಿಯನ್ನು ಮುಂದುವರಿಸುತ್ತಿದೆ ; ಅಲ್ಲದೆ ಖಾಸಗಿಕ್ಷೇತ್ರದಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಸೌಲಭ್ಯಗಳನ್ನು ನೀಡುತ್ತಿದೆ.

ಮೈಸೂರು ಸರ್ಕಾರವು 5 ಕೋಟಿ ರೂಪಾಯಿ ಅಧಿಕೃತ ಬಂಡವಾಳದಿಂದ 'ಮೈಸೂರು ರಾಜ್ಯದ ಕೈಗಾರಿಕೆ ಬಂಡವಾಳ ಹಾಗು ಅಭಿವೃದ್ಧಿಯ ಕಾರ್ಪೊರೇಷನ್ (ಲಿ.)'ನ್ನು (The Mysore State Industries Investment and Development Corporation, Ltd.) ಸರ್ಕಾರದ ಸಂಸ್ಥೆಯನ್ನಾಗಿ ದಾಖಲು ಮಾಡಿದೆ ; ಇದು ರಾಜ್ಯದ ಶೀಘ್ರ ಕೈಗಾರಿಕೆಗೆ ಪ್ರೇರಣೆ ಕೊಡುತ್ತದೆ.

ಎರಡನೆಯ ಹಾಗೂ ಮೂರನೆಯ ಪಂಚವಾರ್ಷಿಕ ಯೋಜನೆಯ ಅವಧಿಗಳಲ್ಲಿ ಸರ್ಕಾರ ಕೈಗೊಂಡ ಕೆಲಸಗಳಲ್ಲಿ, ಈ ಕೆಳಗಿನ ಅಭಿವೃದ್ಧಿಕಾರ್ಯಗಳು ಗಮನಾರ್ಹವಾಗಿವೆ :

### 1. ಒಂದು ಹೊಸ ಸರ್ಕಾರೀ ವಿದ್ಯುತ್ ಕಾರ್ಖಾನೆ

ಇದನ್ನು ಪಶ್ಚಿಮ ಜರ್ಮನಿಯ ಮೆ॥ ಎ.ಇ.ಜಿ.ಯವರ ಸಹೋದ್ಯಮದೊಡನೆ 8 ಕೋಟಿ ರೂಪಾಯಿಗಳ ಬಂಡವಾಳದಿಂದ, ಬೆಂಗಳೂರಿನ ಹೊರವಲಯದಲ್ಲಿರುವ ಬೈಯಪ್ಪನಹಳ್ಳಿಯಲ್ಲಿ ಸ್ಥಾಪಿಸ ಲಾಗಿದೆ. ಇದಕ್ಕೆ ಬ್ರಾಡ್‌ಗೇಜು ರೈಲುದಾರಿಯ ಕವಲುಮಾರ್ಗದ ಸೌಲಭ್ಯಗಳಿವೆ. ಇದು ಟ್ರಾನ್ಸ್ ಫಾರ್ಮರುಗಳು, ಮೋಟಾರುಗಳು ಮತ್ತು ಇತರ ವಿದ್ಯುತ್ತಿನ ಉಪಕರಣಗಳನ್ನು ತಯಾರಿಸುತ್ತಿದೆ.

### 2. ಸರ್ಕಾರದ ಸಾಬೂನು ಕಾರ್ಖಾನೆ

ರಾಜಾಜಿನಗರಕ್ಕೆ ಸ್ಥಳಾಂತರಿಸಲಾಗಿದೆ ; ಇದರ ಉತ್ಪನ್ನ ಸಾಮರ್ಥ್ಯ ವರ್ಷಕ್ಕೆ 1,800 ಟನ್‌ಗಳನ್ನು ಮುಟ್ಟಿದೆ. ಮತ್ತು ಇದರ ಮಾರಾಟದಿಂದ ಒಂದು ಕೋಟಿ ರೂ. ಗಳಿಗೂ ಹೆಚ್ಚು ಹಣ ಬರುತ್ತಿದೆ. ಈ ಕಾರ್ಖಾನೆಯ ವಾರ್ಷಿಕ ಉತ್ಪಾದನೆಯನ್ನು 5–6 ಸಾವಿರ ಟನ್ ವರೆಗೆ ಹೆಚ್ಚಿಸಲು ಉದ್ದೇಶಿಸಲಾಗಿದೆ.

### 3. ಭದ್ರಾವತಿಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ

ವರ್ಷಕ್ಕೆ 2,500 ಟನ್ ಬೀಡುಕಬ್ಬಿಣ ಉತ್ಪಾದಿಸುವ ಸಾಮರ್ಥ್ಯದಿಂದ 1923 ರಲ್ಲಿ ಪ್ರಾರಂಭಿಸಲಾಯಿತು ; ಈಗ ಸುಮಾರು 1 ಲಕ್ಷ ಟನ್‌ಗಳನ್ನು ಉತ್ಪಾದಿಸಲು ಸಮರ್ಥವಾಗಿದೆ. ಹಾಲೀ

ಉತ್ಪಾದಿಸುತ್ತಿರುವ ಮೆದು ಉಕ್ಕನ್ನು ಆಸ್ಟ್ರಿಯಾದ ಸಂಸ್ಥೆಯೊಂದರ ತಾಂತ್ರಿಕ ಸಹಕಾರದಿಂದ ವಿಶೇಷ ಉಕ್ಕನ್ನಾಗಿ (ವರ್ಷಕ್ಕೆ 77 ಸಾವಿರ ಟನ್) ಪರಿವರ್ತಿಸಲಾಗುತ್ತಿದೆ.

**4. ತುಂಗಭದ್ರಾ ಉಕ್ಕಿನ ಉತ್ಪನ್ನಗಳು (ಲಿ.) (Tungabhadra Steel Products, Ltd.)**

ಇದು ಆಂಧ್ರ ಪ್ರದೇಶ ಮತ್ತು ಮೈಸೂರುಸರ್ಕಾರಗಳಿಗೆ ಸಂಯುಕ್ತವಾಗಿ ಸೇರಿದೆ; ಈ ಕಾರ್ಖಾನೆಯು ಭಾರವಾದ ಉಕ್ಕಿನ ರಚನೆಗಳು, ಜಲಸಾಮರ್ಥ್ಯದ ಅಳವಡಿಕೆ (ಹೈಡ್ರಾಲಿಕ್ ಗೇರ್) ಗಳು, ತೂಬುಗಳು, ಎತ್ತುವ ಸಲಕರಣೆ (ಕ್ರೇನ್) ಮುಂತಾದುವುಗಳನ್ನು ತಯಾರಿಸುತ್ತದೆ.

**5. ಬೆಳಗೊಳದ ಮೈಸೂರು ರಾಸಾಯನಿಕ ವಸ್ತುಗಳ ಮತ್ತು ಸಸ್ಯ ಪೋಷಕಗಳ ಕಾರ್ಖಾನೆ (Mysore Chemicals and Fertilisers.)**

1937ರಲ್ಲಿ ಇದು ಪ್ರಾರಂಭವಾಗಿ, ತೀವ್ರಗತಿಯಲ್ಲಿ ಮುಂದುವರಿಯುತ್ತಿದೆ; ಗಂಧಕಾಮ್ಲ, ಸೂಪರ್ ಫಾಸ್ಫೇಟ್ ( ವರ್ಷಕ್ಕೆ 72 ಸಾವಿರ ಟನ್) ಮುಂತಾದುವುಗಳನ್ನು ತಯಾರಿಸುತ್ತಿದೆ ; ಕಾಸ್ಟಿಕ್ ಸೋಡಾ ಮತ್ತು ಕ್ಲೋರೀನ್‌ಗಳೂ ತಯಾರಾಗಲಿವೆ.

**ಮುನಿರಾಬಾದಿನಲ್ಲಿ ಸ್ಥಾಪನೆಯಾಗಿರುವ ಚಾಮುಂಡಿ ರಾಸಾಯನಿಕ ವಸ್ತುಗಳ ಹಾಗೂ ಸಸ್ಯ ಪೋಷಕಗಳ ಕಾರ್ಖಾನೆ (Chamundi Chemicals and Fertilisers)**

ಇದು ವರ್ಷಕ್ಕೆ 16½ ಸಾವಿರ ಟನ್ ಗಂಧಕಾಮ್ಲವನ್ನೂ 40 ಸಾವಿರ ಟನ್ ಸೂಪರ್ ಫಾಸ್ಫೇಟನ್ನೂ ಉತ್ಪಾದಿಸಬಲ್ಲುದು.

**6. ಕಾಗದದ ಕಾರ್ಖಾನೆಗಳು**

ರಾಜ್ಯದಲ್ಲಿ ನಾಲ್ಕು ಕಾಗದದ ಕಾರ್ಖಾನೆಗಳು ಕೆಲಸ ಮಾಡುತ್ತಿವೆ : ಭದ್ರಾವತಿ, ದಾಂಡೇಲಿ, ನಂಜನಗೂಡು ಮತ್ತು ಬೆಳಗೊಳಗಳಲ್ಲಿ. ಉತ್ತರ ಕನ್ನಡ ಜಿಲ್ಲೆಯಲ್ಲಿ ಸ್ಥಾಪಿತವಾಗಿರುವ ವೆಸ್ಟ್‌ಕೋಸ್ಟ್ ಕಾಗದದ ಕಾರ್ಖಾನೆಯು (West Coast Paper Mills) ದಿನಕ್ಕೆ 150 ಟನ್‌ಗಳನ್ನು ಉತ್ಪಾದಿಸಲು ರಹದಾರಿ ಪಡೆದಿದೆ.

**7. ಸಕ್ಕರೆ ಕಾರ್ಖಾನೆಗಳು**

ರಾಜ್ಯದಲ್ಲಿ ಈಗ ಒಂಬತ್ತು ಸಕ್ಕರೆ ಕಾರ್ಖಾನೆಗಳು ಕೆಲಸ ಮಾಡುತ್ತಿವೆ ; ಇವುಗಳಲ್ಲಿ ನಾಲ್ಕು ಸಹಕಾರ ಸಂಸ್ಥೆಗಳಿವು : ಕಂಪಲಿ, ಪಾಂಡವಪುರ, ಸುಂಕೇಶ್ವರ ಮತ್ತು ಗೌರಿಬಿದನೂರಿನ ಕಾರ್ಖಾನೆಗಳು.

**8. ಸಿಮೆಂಟು ಕಾರ್ಖಾನೆಗಳು**

ರಾಜ್ಯದಲ್ಲಿ ನಾಲ್ಕು ಸಿಮೆಂಟ್ ಕಾರ್ಖಾನೆಗಳು ಬಾಗಲಕೋಟೆ, ಷಹಾಬಾದ್, ಭದ್ರಾವತಿ ಮತ್ತು

ಅಮ್ಮಸಂದ್ರಗಳಲ್ಲಿ ಕೆಲಸ ಮಾಡುತ್ತಿವೆ. ಇವುಗಳ ಒಟ್ಟು ಸ್ಥಾಪಿತ ಉತ್ಪಾದನಾ ಸಾಮರ್ಥ್ಯ 9,89,710 ಮೆಟ್ರಿಕ್ ಟನ್‌ಗಳು. ಇನ್ನೂ ನಾಲ್ಕನ್ನು—ವಾಡಿ, ನಾಗರಗಾಳಿ, ಗೋಕಾಕ್ ಮತ್ತು ಹೊಸದುರ್ಗಗಳಲ್ಲಿ ಸ್ಥಾಪಿಸುವ ಆಲೋಚನೆಯಿದೆ.

## 9. ಹತ್ತಿಗಿರಣಿ ಕೈಗಾರಿಕೆ.

ರಾಜ್ಯದಲ್ಲಿರುವ ಹತ್ತಿ ಗಿರಣಿ ಕೈಗಾರಿಕೆಯಲ್ಲಿ ಸುಮಾರು 5 ಲಕ್ಷ ಕದಿರು ಕೆಲಸ ಮಾಡುತ್ತಿವೆ. ಖಾಸಗಿ ಹಾಗೂ ಸಹಕಾರ ಕ್ಷೇತ್ರದಲ್ಲಿ ಇನ್ನೂ 17 ಘಟಕಗಳಿಗೆ 1,92,000 ಕದಿರು ಉತ್ಪಾದನೆ ಹಂಚಲಾಗಿದೆ.

ಸಣ್ಣ ಪ್ರಮಾಣದ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸಲು, ಸಣ್ಣ ಪ್ರಮಾಣದ ಕೈಗಾರಿಕೆಯ ಕಾರ್ಪೊರೇಷನ್ (Small Scale Industries Corporation), ಮೈಸೂರು ರಾಜ್ಯದ ಖಾದಿ ಮತ್ತು ಗ್ರಾಮೋದ್ಯೋಗ ಮಂಡಲಿ, ನಾರಿನ ಸಲಹಾ ಮಂಡಲಿ (Coir Advisory Board) ಮುಂತಾದುವುಗಳನ್ನು ರಚಿಸಲಾಗಿದೆ.

ರಾಜ್ಯಗಳ ಮರುವಿಂಗಡಣೆಯಿಂದ ಉಂಟಾದ ಸಮಸ್ಯೆಗಳ ದೆಸೆಯಿಂದ, ಎರಡನೆಯ ಪಂಚವಾರ್ಷಿಕ ಯೋಜನೆಯನ್ನು ಜಾರಿಗೆ ತರಲು ಸ್ವಲ್ಪಮಟ್ಟಿಗೆ ಅಡ್ಡಿಯೊದಗಿತು. ಅದರ ವೆಚ್ಚದ ಅಂದಾಜು 136 ಕೋಟಿ ರೂಪಾಯಿಗಳಾಗಿತ್ತು; ಆದರೆ ಮೂರನೆಯ ಪಂಚವಾರ್ಷಿಕ ಯೋಜನೆಯ ಅವಧಿಯ ಒಟ್ಟು ವೆಚ್ಚವನ್ನು 250 ಕೋಟಿ ರೂ. ಗಳೆಂದು ಗೊತ್ತುಮಾಡಲಾಯಿತು. ಈಗ ನೀರಾವರಿ, ವಿದ್ಯುತ್ತು ಹಾಗೂ ಆಹಾರದ ಉತ್ಪಾದನೆಗಳಿಗೆ ಪ್ರಾಮುಖ್ಯವನ್ನು ನೀಡಲಾಗಿದೆ.

## ಉಪಸಂಹಾರ

ಏಕೀಕರಣದ ಹಾಗೂ ಪುನರ್ವ್ಯವಸ್ಥೆಯ ಸಮಸ್ಯೆಗಳು ಇನ್ನೂ ಹಲವಾರು ಇವೆ. ಪುನಃ ವಿಂಗಡಣೆಯಾದ ಇತರ ರಾಜ್ಯಗಳೊಂದಿಗೆ ಹೋಲಿಸಿದರೆ, ಮೈಸೂರು ರಾಜ್ಯವು ತನ್ನ ಅನೇಕ ಸಮಸ್ಯೆಗಳನ್ನು ಅರಿವು, ಸಾಮರ್ಥ್ಯಗಳಿಂದ ಎದುರಿಸಿ ಬಗೆಹರಿಸಿಕೊಂಡಿತು. ಇನ್ನೂ ಕೆಲವು ಸಮಸ್ಯೆಗಳನ್ನು ಬಗೆಹರಿಸಬೇಕಾಗಿರುವುದೇನೋ ನಿಜ. ಇವೆಲ್ಲವನ್ನೂ ಕಾಲಕ್ರಮದಲ್ಲಿ ಬಲವಾದ ಬಿಕ್ಕಟ್ಟುಗಳಿಲ್ಲದೆ ಪರಿಹರಿಸಲಾಗುವುದೆಂಬ ಆಶಯವಿದೆ.

ಮೂಲಲೇಖಕರು : ಶ್ರೀ ಬಿ.ಡಿ. ಜತ್ತಿ
ಅನುವಾದಕರು : ಶ್ರೀ ಎಸ್. ಕೃಷ್ಣ ಭಟ್ಟ

# ಅಧ್ಯಾಯ 8

## ಹಿನ್ನುಡಿ

ಮುಂದೆ ನೀವು ಕಾಣಲಿರುವ ಕೆಲವು ಅನುಬಂಧಗಳನ್ನು ಬಿಟ್ಟರೆ, ಈಗಾಗಲೆ ಈ ಬೃಹದ್ ಗ್ರಂಥದಲ್ಲಿ ನಿರೂಪಿತವಾಗಿರುವ ಕರ್ಣಾಟಕ ಜನತೆಯ ಕಥೆ ನಿಮಗಾಗಲೆ ಪರಿಚಿತವಾಗಿದೆ. ನಾವು ಇಲ್ಲಿ ಉದ್ದೇಶ ಪೂರ್ವಕವಾಗಿಯೆ, ಇದನ್ನು ಕರ್ಣಾಟಕ ಜನತೆಯ ಕಥೆ ಎಂದು ಕರೆದಿದ್ದೇವೆ. ಏಕೆಂದರೆ ಹೇಳಿಕೊಳ್ಳ ಬಹುದಾದಂಥ ಕಥೆ ಇರುವುದು ಜನಕ್ಕೆ. ಉಳಿದದ್ದಕ್ಕೆ ತಾನಿದ್ದೇನೆ ಎಂಬುದೂ ತಿಳಿಯದು ; ಇನ್ನು ಹೇಳಿಕೊಳ್ಳಬೇಕೆಂಬ ತಿಳಿವು ಎಲ್ಲಿಂದ ಬಂತು ? ನೆಲ ಇದೆ, ಅದರ ಪ್ರಾಕೃತಿಕ ಲಕ್ಷಣಗಳೂ ಇವೆ. ನದಿ, ಪರ್ವತ ಹಾಗೂ ಅರಣ್ಯಗಳು ಇದ್ದೇ ಇವೆ. ಆಗಾಗ ಅಲ್ಪ ಸ್ವಲ್ಪ ವ್ಯತ್ಯಾಸವಾದರೂ ಇಲ್ಲಿನ ಮಳೆ—ಬಿಸಿಲು, ಗಾಳಿ—ಬೆಳಕುಗಳಿಂದ ಕೂಡಿದ ಹವಾಮಾನ ಹಿಂದೆ ಹೇಗಿತ್ತೋ, ಇಂದೂ ಹಾಗೆಯೇ ಇದೆ. ಆದರೆ ಈ ಎಲ್ಲದಕ್ಕೂ ಪ್ರಾಧಾನ್ಯ ಬರುವುದು, ಆಯಾ ಪ್ರದೇಶದಲ್ಲಿ ಬಾಳಿ ಬದುಕುವ ಗಂಡು—ಹೆಣ್ಣುಗಳ ಮೇಲೆ ಇವು ಯಾವ ಪರಿಣಾಮವನ್ನು ಮಾಡಿವೆ ಎನ್ನುವಷ್ಟರಿಂದ ಮಾತ್ರ.

ಈ ಕರ್ಣಾಟಕದ ನೆಲದ ಮೇಲೆ ರಾಜ ಮನೆತನಗಳು ಎದ್ದಿವೆ, ಬಿದ್ದಿವೆ. ರಾಜರು, ಚಕ್ರವರ್ತಿಗಳು, ವೀರರು, ಯೋಧರು— ಬದುಕಿದ್ದಾರೆ, ಕಾದಾಡಿದ್ದಾರೆ, ಆಳಿದ್ದಾರೆ ಮತ್ತು ಅಳಿದಿದ್ದಾರೆ. ಅವರೆಲ್ಲರ ಸಾಹಸ ಕಾರ್ಯಗಳು ಈ ಜನತೆಯ ಕಥೆಯ ಒಂದು ಭಾಗವಾಗಿ ಸೇರಿಕೊಂಡಿವೆ. ಶತಶತಮಾನಗಳಿಂದ ಅದಮ್ಯ ಪ್ರವಾಹದ ಹಾಗೆ ಹರಿದು ಬಂದಿರುವ ಈ ಜನತೆಯ ಜೀವನ ಹಾಗೂ ಕಾರ್ಯ ಕಲಾಪಗಳು, ಆಲೋಚನೆಗಳು, ನಡೆವಳಿಕೆಗಳು, ಅನುಭವಗಳು ಮತ್ತು ಪ್ರಯೋಗಗಳು, ನೋವು ನಲಿವುಗಳು—ಇವೇ ನಮಗೆ ಅತ್ಯಂತ ಮಹತ್ತ್ವದವುಗಳು. ಇಲ್ಲಿನ ಸ್ತ್ರೀ ಪುರುಷರು ಕಂಡ ಕನಸುಗಳು, ಕಟ್ಟಿಕೊಂಡ ಆಕಾಂಕ್ಷೆಗಳು, ಧರ್ಮ ಹಾಗೂ ತತ್ತ್ವಶಾಸ್ತ್ರಗಳ ಮೂಲಕ, ನಡೆವಳಿಕೆಯ ನೀತಿ-ನಿಯಮಗಳ ಮೂಲಕ ಸಾಹಿತ್ಯ-ಕಲೆ-ಮೂರ್ತಿಶಿಲ್ಪ ಮತ್ತು ವಾಸ್ತುಕಲೆ ಇತ್ಯಾದಿಗಳ ಮೂಲಕ, ತಮ್ಮ ಜೀವನಕ್ಕೆ ಮೂರ್ತರೂಪದ ಅಭಿವ್ಯಕ್ತಿಯನ್ನು ನೀಡಿದ ಸೃಜನಾತ್ಮಕ ಚಟುವಟಿಕೆಗಳು ನಮ್ಮ ಮನಸ್ಸನ್ನು ಸೆಳೆಯುತ್ತವೆ. ಇದುವರೆಗೂ ಈ ಗ್ರಂಥದಲ್ಲಿ ನಿರೂಪಿತವಾಗಿರುವಂತೆ, ಕರ್ಣಾಟಕದ ಜನತೆ—ಅವರ ಅಲ್ಪಸ್ವಲ್ಪ ದೋಷ ದೌರ್ಬಲ್ಯಗಳೇನೇ ಇದ್ದರೂ—ಈ ದಿಕ್ಕಿನಲ್ಲಿ ತಮ್ಮ ಚರಿತ್ರಾರ್ಹವಾದ ಪಾತ್ರವನ್ನು ಪ್ರಶಂಸನೀಯವಾದ ರೀತಿಯಲ್ಲಿ ನಿರ್ವಹಿಸಿ, ಅವಕಾಶ ದೊರೆತಲ್ಲೆಲ್ಲಾ ಭರತಖಂಡದ ಮಹತ್ತಿಗೆ ತಮ್ಮ ಕಾಣಿಕೆಯನ್ನು ಸಲ್ಲಿಸಿದ್ದಾರೆ—ಎನ್ನುವುದು ಈಗಾಗಲೆ ನಿಮಗೆ ಸ್ಪಷ್ಟವಾಗಿರಬೇಕು.

**ಇಂಡಿಯಾ** ಎಂಬುದು, ಈ ಪರ್ಯಾಯ ದ್ವೀಪಕ್ಕೆ ವಿದೇಶೀಯರು ಕೊಟ್ಟ ಹೆಸರು. ಹಿಮಾಲಯ ದಿಂದ ದಕ್ಷಿಣ ಸಮುದ್ರಗಳ ವರೆಗೆ ಹರಹಿದ ಈ ಅಖಂಡ ಭೂ ಭಾಗವನ್ನು **ಭಾರತವರ್ಷ** ಅಥವಾ **ಭಾರತ** ಎಂದು ಹೆಸರಿಸಿ ವರ್ಣಿಸಲಾಗಿದೆ. ಪ್ರಾಚೀನ ಗ್ರೀಕರ ಕಾಲದಿಂದ ಹಿಡಿದು, ಶತಮಾನಗಳ ಕಾಲದಿಂದ, ಈ ದೇಶವನ್ನು ಸಮಾನ ಲಕ್ಷಣಗಳುಳ್ಳ ಸಂಸ್ಕೃತಿಯಿಂದೊಡಗೂಡಿದ ಒಂದು ಅಖಂಡ ಭೂ ಭಾಗವೆಂದು

ಎಲ್ಲರೂ ಪರಿಗಣಿಸಿದ್ದಾರೆ. ಈಗ ಭಾರತ ಅನೇಕ ರಾಜ್ಯಗಳಿಂದ ಕೂಡಿದ್ದರೂ ಒಂದೊಂದು ಪ್ರದೇಶವೂ ಒಂದಲ್ಲ ಒಂದು ಕಾಲದಲ್ಲಿ, ಒಂದಲ್ಲ ಒಂದು ರೀತಿಯಲ್ಲಿ ಭಾರತದ ವೈವಿಧ್ಯಮಯವಾದ ಇತಿಹಾಸಕ್ಕೆ, ಹಾಗೂ ಸಮ್ಮಿಶ್ರಿತ ಸಂಸ್ಕೃತಿಗೆ ಪರಿಗಣನೀಯವಾದ ಪಾಲನ್ನು ಕೊಟ್ಟಿದೆ. ಭಾರತದ ಸುದೀರ್ಘವಾದ ಇತಿಹಾಸದಲ್ಲಿ, ಅದರ ಬಹು ದೊಡ್ಡ ಸಂಸ್ಕೃತಿಯಲ್ಲಿ ಮತ್ತು ಅದು ಜಗತ್ತಿಗೆ ಸಲ್ಲಿಸಿರುವ ಕೊಡುಗೆಯಲ್ಲಿ, ಅದರ ಒಂದೊಂದು ರಾಜ್ಯವೂ ಅದರ ಜನತೆಯೂ ತಮ್ಮ ಬದುಕನ್ನು ಹಾಗೂ ಕಾರ್ಯಸಿದ್ಧಿಯನ್ನು ಆವಿಷ್ಕಾರ ಮಾಡಿಕೊಂಡಿವೆ.

ಈ ಹಿನ್ನುಡಿಯಲ್ಲಿ, ಈ ಹಿಂದಿನ ಸಾವಿರಾರು ಪುಟಗಳಲ್ಲಿ ಆಗಲೆ ಏನನ್ನು ಹೇಳಲಾಗಿದೆಯೋ ಅದನ್ನು ಪುನಃಸ್ಮರಿಸಿಕೊಳ್ಳುವ ಅಥವಾ ಪುನರಾವರ್ತಿಸುವ ಉದ್ದೇಶ ನಮಗಿಲ್ಲ. ಒಂದು ವೇಳೆ ಹಾಗೆ ಮಾಡಬೇಕೆಂದು ಯಾರಾದರೂ ಬಯಸಿದರೂ ಅದು ಅನಾವಶ್ಯಕವೂ ಅಸಾಧ್ಯವೂ ಆದ ವಿಚಾರ. ಇಲ್ಲಿ ಪ್ರಸ್ತುತವಾದದ್ದು, ಗಮನಿಸಲೇಬೇಕಾದ ಕೆಲವು ವಿಶಿಷ್ಟವಾದ ಅಂಶಗಳ ಕಡೆಗೆ ಬೆರಳಿಟ್ಟು ತೋರಿಸುವುದೆಷ್ಟೋ ಅಷ್ಟೆ. ಇದರ ಮೇಲೆ, ಈ ಜನತೆಯ ಚರಿತ್ರೆಯಲ್ಲಿ ತಾವಾಗಿಯೇ ಮಹತ್ತಾದುದನ್ನು ಕಂಡುಕೊಳ್ಳುವುದರಿಂದ ಪಡೆಯುವ ಆನಂದದಿಂದ, ಓದುಗರನ್ನು ವಂಚಿಸಲೆಳಸುವುದು ಈ ಹಿನ್ನುಡಿಯ ಕೆಲಸವಾಗಬಾರದು.

ಭೂ ಚರಿತ್ರೆಯ ದೃಷ್ಟಿಯಿಂದ ಹೇಳುವುದಾದರೆ, ಸಾಗರ ತಲದಿಂದ ಎದ್ದು ಬಂದ ಭೂಭಾಗಗಳಲ್ಲಿ ಕರ್ನಾಟಕವೆ ಅತ್ಯಂತ ಮೊದಲಿನದು. ಭೂಗೋಳದ ಅಥವಾ ಪ್ರಾಕೃತಿಕ ಲಕ್ಷಣದ ದೃಷ್ಟಿಯಿಂದ ನೋಡಿದರೆ ಇಲ್ಲಿನ ನೆಲದ ಏರಿಳಿತದಲ್ಲಿ ಎಷ್ಟೊಂದು ವೈವಿಧ್ಯವಿದೆ ಎಂದರೆ, ಇನ್ನೂರ ಐವತ್ತು ಮೈಲಿಗಳಷ್ಟು ಉದ್ದದ ಸಮುದ್ರ ತೀರ ಪ್ರದೇಶದಿಂದ ಹಿಡಿದು, ಆರು ಸಾವಿರ ಅಡಿಗಳಿಗೂ ಮೀರಿದ ಎತ್ತರದ ಪರ್ವತ ಶಿಖರಗಳ ವರೆಗೂ ಏರುವೆ ಇದೆ. ಆನೆಗಳ ಹಿಂಡಿಗೆ ಆಶ್ರಯಸ್ಥಾನವಾದ ದಟ್ಟವಾದ ಅರಣ್ಯಗಳಿವೆ. ನೋಡುವ ಕಣ್ಣೋಡುವ ವರೆಗೂ ಹರಹಿದ ಬಟ್ಟಬಯಲುಗಳಿವೆ. ವಿದ್ಯುತ್ತಿನ ಉತ್ಪಾದನೆಗೆ ಶಕ್ತಿ ಸಂಪನ್ನವಾದ ಆಕರಗಳನ್ನುಳ್ಳ ಇದರಂಥ ರಾಜ್ಯ ಇನ್ನೊಂದಿಲ್ಲ. ಇಲ್ಲಿನ ಬೆಳೆಗಳ ವೈವಿಧ್ಯವೂ ಒಂದು ವಿಶೇಷ ರೀತಿಯದಾಗಿದೆ. ಖನಿಜ ಸಂಪತ್ತು, ಅದರಲ್ಲೂ ಕಬ್ಬಿಣದ ಅದುರು, ಸಮೃದ್ಧವಾಗಿದೆ. ಹಾಗೆಯೇ ಚಿನ್ನದ ಗಣಿಗಳೂ ಅನುಪಮವಾಗಿವೆ.

ಆದರೆ ಕರ್ನಾಟಕದ ಚರಿತ್ರೆ ಇವಿಷ್ಟರಿಂದಲೇ ಆಗಿದೆ ಎಂದು ಯಾರೂ ತಿಳಿಯುವ ಕಾರಣವಿಲ್ಲ. ಕರ್ನಾಟಕದ ಚರಿತ್ರೆಯನ್ನು ನಿರ್ಮಿಸಿದವರು—ಭವಿಷ್ಯದ ಕನಸನ್ನು ಕಣ್ಣಮುಂದೆ ಕಟ್ಟಿಕೊಂಡು ಅದನ್ನು ನೆನಸನ್ನಾಗಿ ಮಾರ್ಪಡಿಸುವುದರ ಮೂಲಕ, ಕರ್ನಾಟಕದ ಹಾಗೂ ಇಡೀ ಭಾರತದ ಒಳಿತಿಗಾಗಿ ಶ್ರಮಿಸಿದ ಈ ನಾಡಿನ ಅಸಂಖ್ಯಾತ ಸ್ತ್ರೀಪುರುಷರು.

ಭಾರತದ ಭೂಗೋಳದಲ್ಲಿ, ಕರ್ನಾಟಕವು ಅತ್ಯಂತ ಆಯಕಟ್ಟಿನ ಸ್ಥಳದಲ್ಲಿದೆ. ಇದು ಭಾರತದ ಉತ್ತರ ಮತ್ತು ದಕ್ಷಿಣ ಭಾಗಗಳಿಗೆ ಕೊಂಡಿಯಂತಿದ್ದು, ದಖ್ಖನ್ ಅಥವಾ ದಕ್ಷಿಣಾ ಪಥಕ್ಕೆ ಮಹಾದ್ವಾರದಂತಿದೆ. ಹೀಗಾಗಿ ಇದು ಉತ್ತರ ಹಾಗೂ ದಕ್ಷಿಣದವರ ಸಂಗಮಸ್ಥಾನದಂತಿದೆ. ಎಂದೂ ಇದು ಮುದುರಿ ಕೂಡದೆ, ಅಥವಾ ತನ್ನದೇ ಸರಿ ಎಂಬ ಮೊಂಡುವಾದವನ್ನು ಹೂಡದೆ, ಇಲ್ಲಿಗೆ ಬಂದ ಅನೇಕ ಮತ–ಧರ್ಮಗಳ ಬಗ್ಗೆ ಅಪೂರ್ವವಾದ ಸಹನೆಯನ್ನು ವ್ಯಕ್ತಪಡಿಸಿದೆ.

ರಾಜಕೀಯವಾಗಿ ಹೇಳುವುದಾದರೆ, ಬಹು ದೊಡ್ಡ ಅರಸು ಮನೆತನಗಳು—ಕದಂಬರು, ಗಂಗರು,

ಚಾಳುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ಅನಂತರ ವಿಜಯನಗರದ ರಾಜರು—ಶತಮಾನಗಳುದ್ದಕ್ಕೂ ತಮ್ಮ ಸ್ವಾತಂತ್ರ್ಯವನ್ನು, ಗೌರವ ಹಾಗೂ ಘನತೆಯಿಂದ ಈ ನೆಲದ ಮೇಲೆ ಕಾಯ್ದುಕೊಂಡಿವೆ. ವಾಸ್ತವವಾಗಿ ವಿಜಯನಗರ ಸಾಮ್ರಾಜ್ಯವು (1336-1565), ದಕ್ಷಿಣದಲ್ಲಿ ಮುಸ್ಲಿಮರ ಆಕ್ರಮಣಕ್ಕೆ ಒಂದು ದೊಡ್ಡ ತಡೆಯಾಗಿ, ಮರಾಠರ ಶಕ್ತಿ ಸ್ಥಾಪನೆಗೆ ಒಂದು ಸ್ಫೂರ್ತಿಯಾಯಿತು. ಆಡಳಿತವ್ಯವಸ್ಥೆಯಲ್ಲಿ, ಪೌರಜೀವನದಲ್ಲಿ, ಕೃಷಿಯಲ್ಲಿ ಮತ್ತು ನಗರ ಯೋಜನೆಯಲ್ಲಿ, ವಾಣಿಜ್ಯ ಹಾಗೂ ಕೈಗಾರಿಕೆಗಳಲ್ಲಿ, ರಾಜಧಾನಿಯಾದ ವಿಜಯನಗರವು, ಒಂದು ಶತಮಾನಕ್ಕೂ ಮಿಗಿಲಾಗಿ ವಿದೇಶೀಯ ಪ್ರವಾಸಿಗಳ ಮತ್ತು ವರ್ತಕರ ಆಕರ್ಷಣೆಯ ಕೇಂದ್ರವಾಗಿತ್ತು. ವಿಜಯನಗರ ಕಾಲದ ಆ ಎರಡು ಶತಮಾನಗಳಲ್ಲಿ ನಡೆದ ಸಾಂಸ್ಕೃತಿಕ ಮತ್ತು ವೈಚಾರಿಕ ಪುನರುಜ್ಜೀವನವು ಅತ್ಯದ್ಭುತವೂ ಅಖಿಲ ಭಾರತೀಯ ಮಹತ್ವದ್ದೂ ಆಗಿತ್ತು. ವೇದಗಳನ್ನು ಕುರಿತ ' ಸಾಯಣ ಭಾಷ್ಯ ' ವೆಂಬ ವ್ಯಾಖ್ಯಾನ ರಚಿತವಾದದ್ದೂ ಆ ಕಾಲದಲ್ಲಿಯೆ. ಇಂದಿಗೂ ವೇದಾರ್ಥವ್ಯಾಖ್ಯಾನಕ್ಕೆ ಅದೇ ಕೀಲಿ ಕೈಯಾಗಿದೆ.

ಇದೆಲ್ಲಕ್ಕಿಂತ ಹೆಚ್ಚು ಶಾಶ್ವತವಾದದ್ದು ವಿಶ್ವಮಾನ್ಯವಾದದ್ದು ಎಂದರೆ, ಧರ್ಮ ಮತ್ತು ತತ್ತ್ವ ಶಾಸ್ತ್ರದ ಕ್ಷೇತ್ರಗಳಿಗೆ, ಮತ್ತು ಭಕ್ತಿ ಪಂಥದ ಪ್ರಸಾರಕ್ಕೆ ಕನ್ನಡ ನಾಡು ಸಲ್ಲಿಸಿದ ಕಾಣಿಕೆ. ಮೈಸೂರು ರಾಜ್ಯದ ಮಸ್ಕಿ ಮತ್ತು ಸಿದ್ಧಾಪುರಗಳಲ್ಲಿ ಅಶೋಕನ ಶಾಸನಗಳು ದೊರೆತಿರುವುದನ್ನು ನೋಡಿದರೆ, ಬೌದ್ಧ ಧರ್ಮವು ದಕ್ಷಿಣವಲ್ಲಿ ಇಷ್ಟು ದೂರದ ವರೆಗೂ ಚಾಚಿಕೊಂಡಂತೆ ಕಾಣುತ್ತದೆ. ಜೈನ ಧರ್ಮವಂತೂ ಅನೇಕ ಬಸದಿಗಳಿಂದಲೂ ಸಹಸ್ರಾರು ಜೈನರಿಂದಲೂ ಕನ್ನಡ ನಾಡಿನಲ್ಲಿ ಮನೆಮಾಡಿಕೊಂಡಿದೆ. ಆದರೆ ಬೌದ್ಧ ಧರ್ಮವು ಮಾತ್ರ, ಇಲ್ಲಿ ಯಾವ ಗುರುತನ್ನೂ ಉಳಿಸದೆ ಹೊರಟು ಹೋಯಿತು; ಅಥವಾ ಕರ್ಣಾಟಕದ ರಾಜರುಗಳಾದ ಪುಲಿಕೇಶಿ ಮತ್ತಿತರರು ವೈದಿಕ ಧರ್ಮದ ಪುನರುತ್ಥಾನ ಕಾರ್ಯದಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸಿದ್ದರಿಂದಲೋ ವೈಷ್ಣವ ಶೈವ ಪಂಥಗಳ ಪ್ರಾಬಲ್ಯದಿಂದಲೋ ಅದು ಕರ್ಣಾಟಕದ ಧರ್ಮಗಳೊಳಗೆ ಸಮಾವೇಶವಾಯಿತು. ಅನಂತರ ಬಂದ ಇಸ್ಲಾಮ್ ಮತ್ತು ಕ್ರೈಸ್ತ ಧರ್ಮಗಳು ಕನ್ನಡ ನಾಡಿನಲ್ಲಿ ಹಿತವಾದ ವಾತಾವರಣದಲ್ಲಿ ನೆಲಸಿದವು.

ಕರ್ಣಾಟಕವು, ವೇದಾಂತದ ಪ್ರಮುಖ ಪ್ರಸ್ಥಾನಗಳಾದ, ಅದ್ವೈತ, ವಿಶಿಷ್ಟಾದ್ವೈತ ಮತ್ತು ದ್ವೈತ ದರ್ಶನಗಳಿಗೆ ಆಶ್ರಯವನ್ನೂ ಪೋಷಣೆಯನ್ನೂ ಕೊಟ್ಟ ಸಂಗತಿ, ಕರ್ಣಾಟಕದ ಇತಿಹಾಸದಲ್ಲಿ, ನಿಜವಾಗಿಯೂ ಹೆಮ್ಮೆಪಟ್ಟುಕೊಳ್ಳಬಹುದಾದ ವಿಷಯವಾಗಿದೆ. ಶಕ್ತಿ-ವಿಶಿಷ್ಟಾದ್ವೈತವಂತೂ ಕನ್ನಡ ನಾಡಿನಲ್ಲಿಯ ಹಾಗೆ ಇನ್ನೆಲ್ಲೂ ಅಭಿವೃದ್ಧಿ ಹೊಂದಲಿಲ್ಲವೆಂಬುದು ಅಪ್ರಮುಖವಾದ ಸಂಗತಿಯೇನಲ್ಲ. ಉಪನಿಷತ್ತು, ಬಾದರಾಯಣರ ಬ್ರಹ್ಮಸೂತ್ರ, ಭಗವದ್ಗೀತೆ ಇತ್ಯಾದಿ ಆಧಾರಭೂತ ಗ್ರಂಥಗಳ ಸಹಾಯದಿಂದ, ಅದ್ವೈತ ದರ್ಶನವನ್ನು ಸಂಘಟಿಸಿ ಪ್ರಕಟಿಸಿದ ಶಂಕರಾಚಾರ್ಯರು (8ನೆ ಶತಮಾನ) ಕೇರಳದಲ್ಲಿ ಹುಟ್ಟಿದರೂ ಕನ್ನಡನಾಡಾದ ಶಿವಮೊಗ್ಗ ಜಿಲ್ಲೆಯ ಶೃಂಗೇರಿಯಲ್ಲಿ ತಮ್ಮ ಆಚಾರ್ಯ ಪೀಠವನ್ನು ಸ್ಥಾಪಿಸಿದರು. ಇದೇ ರೀತಿಯಲ್ಲಿ, ವಿಶಿಷ್ಟಾದ್ವೈತ ಮತ ಸ್ಥಾಪಕರಾದ ರಾಮಾನುಜಾಚಾರ್ಯರು, ತಮಿಳುನಾಡಿನಲ್ಲಿ ಹುಟ್ಟಿದರೂ ಮೈಸೂರಿನ ಬಳಿಯ ಮೇಲುಕೋಟೆಯಲ್ಲಿ ಅವರಿಗೆ ಹಾರ್ದಿಕವಾದ ಸ್ವಾಗತ ದೊರೆಯಿತು. ಅವರ ಧರ್ಮಪ್ರಸಾರ ಕಾರ್ಯವು ಹೊಯ್ಸಳ ವಿಷ್ಣುವರ್ಧನನನ್ನು ಜೈನಧರ್ಮದಿಂದ ವೈಷ್ಣವ ಧರ್ಮಕ್ಕೆ ಪರಿವರ್ತಿಸುವುದರ ಮೂಲಕ ಆರಂಭವಾಯಿತು. ದ್ವೈತಮತವನ್ನು ಕುರಿತು ಹೇಳುವುದಾದರೆ, ಅದರ ಪ್ರತಿಷ್ಠಾಪಕರಾದ ಮಧ್ವಾಚಾರ್ಯರು ಸಂಪೂರ್ಣವಾಗಿ ಕರ್ಣಾಟಕದವರೆ. ಅವರು ಹುಟ್ಟಿ ಬೆಳೆದುದು ಉಡುಪಿಯಲ್ಲಿ. ಶಕ್ತಿ ವಿಶಿಷ್ಟಾದ್ವೈತದ ಪ್ರವರ್ತಕರಾದ ಬಸವಣ್ಣನವರು ಕನ್ನಡ ನಾಡಿನವರೇ. ಅವರು ಧೀರರಾದ ಸಮಾಜ ಸುಧಾರಕರೂ ಮಹಾ ಅನುಭಾವಿಗಳೂ ಆಗಿದ್ದರು. ಪ್ರಾಚೀನ ಶಿವಶರಣರಿಂದ ಹಾಗೂ ಸಂತರಿಂದ ಅವರು ಸ್ಫೂರ್ತಿಯನ್ನು ಪಡೆದರು. ಇಂದಿಗೂ ಕರ್ಣಾಟಕದ ಜನಜೀವನ ಮತ್ತು ಸಮಾಜದ ಮೇಲೆ ಅವರ ಪ್ರಭಾವವು ಮುದ್ರೆಯೊತ್ತಿದೆ.

ಬಹುಶಃ ಹೆಚ್ಚು ಜನಪ್ರಿಯವೂ ವಿಶೇಷವ್ಯಾಪ್ತಿಯುನ್ನು ಪಡೆದುದೂ ಭಕ್ತಿಪಂಥ ಮತ್ತು ಯೋಗ. ಇದು ಕರ್ನಾಟಕದಲ್ಲಿ ಹನ್ನೊಂದನೆ ಶತಮಾನದಿಂದ ಹದಿನಾರನೆ ಶತಮಾನದ ವರೆಗೂ ಶೈವ ಮತ್ತು ವೈಷ್ಣವ ಸಂತರಿಂದ, ಹಾಗೂ ಗಾಯಕರಿಂದ ಪ್ರಸಾರವಾಯಿತು. ವೈಷ್ಣವ ಸಂತರನ್ನು ದಾಸ ರೆಂದೂ, ವೀರಶೈವ ಸಂತರನ್ನು ಶರಣ ರೆಂದೂ ಕರೆಯಲಾಗಿದೆ. ವೀರಶೈವ ಅನುಭಾವಿಗಳು ಜ್ಞಾನ ಕ್ರಿಯಾ ಸಮನ್ವಿತವಾದ ಭಕ್ತಿಯನ್ನು ವಿಶಿಷ್ಟವಾದ ವಚನಗಳ ಮೂಲಕ ಅಭಿವ್ಯಕ್ತ ಪಡಿಸಿದ್ದಾರೆ. ಹಾಗೆಯೆ ಹರಿದಾಸರು ಮೂಲತ: ಭಕ್ತಿಯನ್ನು ತಿಳಿಯಾದ ಕನ್ನಡದಲ್ಲಿ ಹಾಡಲು ಬರುವಂಥ ಇಂಪಾದ ಕೀರ್ತನೆಗಳ ರೂಪದಲ್ಲಿ ತೋಡಿಕೊಂಡಿದ್ದಾರೆ. ದಾಸರು ಮೂಲತಃ ದ್ವೈತಿಗಳು, ಶರಣರು ವಿಶಿಷ್ಟಾದ್ವೈತಿಗಳು. ವೀರಶೈವ ಅನುಭಾವಿಗಳಲ್ಲಿ ಮೂವತ್ತಕ್ಕೂ ಕಡಮೆಯಲ್ಲದ ವಚನಕಾರ್ತಿಯರಿದ್ದಾರೆ. ಈ ರೀತಿಯ ಮಹತ್ತ್ವಪೂರ್ಣವಾದ ಅನುಭಾವ ಸಾಹಿತ್ಯ ಭಾರತಕ್ಕೆ ಮಾತ್ರ ವಿಶಿಷ್ಟವಾದುದೆಂದು ಹೇಳಬಹುದು.

ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಕುರಿತು ಹೇಳುವುದಾದರೆ, ಕನ್ನಡದ ಮೊತ್ತ ಮೊದಲನೆಯ ಶಿಲಾಶಾಸನವಾದ ಹಲ್ಮಿಡಿ ಶಾಸನ ಕ್ರಿ.ಶ. ನಾಲ್ಕುನೂರ ಐವತ್ತರ (450) ಕಾಲದ್ದು. ಕನ್ನಡದಲ್ಲಿ ಉಪಲಬ್ಧವಾಗಿರುವ ಮೊತ್ತಮೊದಲಿನ ಕೃತಿ **ಕವಿರಾಜಮಾರ್ಗ**, ಒಂಬತ್ತನೆ ಶತಮಾನದ್ದು. ಇದು ಒಂದು ಅಲಂಕಾರಗ್ರಂಥ. ಕನ್ನಡದಲ್ಲಿ ಇಂದಿಗೂ ದೊರೆಯದೆ ಹೋಗಿರುವ ಮೂವತ್ತು ಕವಿ ಕೃತಿಗಳ ಉಲ್ಲೇಖ ಇದರಲ್ಲಿದೆ. ವೈವಿಧ್ಯಮಯವಾದ ಸಮೃದ್ಧಿಯಿಂದ ಕನ್ನಡ ಸಾಹಿತ್ಯವು ಗಾತ್ರದಲ್ಲಿ ಮಾತ್ರವಲ್ಲದೆ, ಗುಣದಲ್ಲಿಯೂ ಇತರ ಯಾವ ಭಾರತೀಯ ಭಾಷಾ ಸಾಹಿತ್ಯದೊಂದಿಗಾದರೂ ಹೆಗಲೆಣೆಯಾಗಿ ನಿಲ್ಲುತ್ತದೆ.

ವಾಸ್ತುಶಿಲ್ಪ, ಮೂರ್ತಿಶಿಲ್ಪ, ಹಾಡು, ನಾಟಕ, ನೃತ್ಯ ಮತ್ತು ಸಂಗೀತ–ಇವುಗಳ ವಿಚಾರದಲ್ಲಿಯೂ ಕರ್ನಾಟಕಕ್ಕೆ ಉಜ್ವಲವಾದ ಇತಿಹಾಸವಿದೆ. ಚಾಳುಕ್ಯರ ಮತ್ತು ಇತರ ವಾಸ್ತು ಶಿಲ್ಪಗಳನ್ನು ಕುರಿತು, ಪಾಶ್ಚಾತ್ಯ ವಿದ್ವಾಂಸರಾದ ಹಾವೆಲ್, ಕಸಿನ್ಸ್ ಮೊದಲಾದವರು ಬರೆದಿರುವ ಪುಸ್ತಕಗಳನ್ನು ನೋಡಿದರೆ ಈ ವಿಷಯ ಸ್ಪಷ್ಟವಾಗುತ್ತದೆ. ಇಡೀ ದಕ್ಷಿಣ ಭಾರತದಲ್ಲಿ ಪ್ರಚಲಿತವಾಗಿರುವ ಸಂಗೀತ ಶೈಲಿಗೆ 'ಕರ್ನಾಟಕ ಸಂಗೀತ' ಎಂದು ಹೆಸರು ಬಂದಿರುವುದನ್ನು ಗಮನಿಸಬೇಕು.

ಈ ಮಹಾ ಸಂಪುಟದ ಹಿಂದಿನ ಪುಟಗಳನ್ನು ನೋಡಿದವರಿಗೆ, ಕರ್ನಾಟಕದ ಇತಿಹಾಸದಲ್ಲಿ ಕೆಲವು ಮಾನ್ಯ ಮಹಿಳೆಯರು ಪ್ರಮುಖ ಪಾತ್ರವನ್ನು ವಹಿಸಿದ್ದಾರೆಂಬ ಸಂಗತಿ ತಿಳಿಯದೆ ಇಲ್ಲ. ಶಾಂತಲಾ, ಕಂತಿ ಇವರು ಹಿಂದಿನ ಕಾಲಕ್ಕೆ ಸೇರಿದವರಾದರೆ, ಹೇಮರೆಡ್ಡಿ ಮಲ್ಲಮ್ಮ ಮತ್ತು ಕಿತ್ತೂರು ಚನ್ನಮ್ಮ ಆಧುನಿಕ ಕಾಲಕ್ಕೆ ಸೇರಿದವರು. ಅನುಭಾವಿ ವಚನಕಾರರ ನಡುವೆ ಅಕ್ಕ ಮಹಾದೇವಿಯ ಹೆಸರಂತೂ ರಾಜಸ್ಥಾನದ ಮೀರಾಬಾಯಿಯ ಹೆಸರಿನ ಹಾಗೆ, ಕನ್ನಡಿಗರ ಮನೆ ಮಾತಾಗಿದೆ.

ಕನ್ನಡ ನಾಡಿನ ಹಳ್ಳಿ ಹಳ್ಳಿಗಳಲ್ಲಿ ಆತ್ಮಾರ್ಪಣೆ ಮಾಡಿಕೊಂಡ, ರಾಜರ ಪರವಾಗಿ ಯುದ್ಧದಲ್ಲಿ ಕಾದಿ ಮಡಿದ ಅಥವಾ ಸ್ವಗ್ರಾಮ ರಕ್ಷಣೆಯಲ್ಲಿ ಶತ್ರುಗಳೊಂದಿಗೆ ಹೋರಾಡಿದ ವೀರರ ಮತ್ತು ವೀರ ಮಹಿಳೆಯರ ಸಂಖ್ಯೆಗೇನೂ ಕೊರತೆಯಿಲ್ಲ. ಇವರನ್ನು ಕುರಿತು ಅಂದಂದಿನ ಜನ ನಿಲ್ಲಿಸಿದ ವೀರಗಲ್ಲುಗಳೂ ಮಾಸ್ತಿಕಲ್ಲುಗಳೂ ಸಮೃದ್ಧವಾದ ಸಾಕ್ಷಿಯಾಗಿ ಕರ್ನಾಟಕದ ತುಂಬ ಹರಡಿಕೊಂಡಿವೆ.

ಹೀಗೆ, ಮಾನವ ಜೀವನದ ಯಾವ ಕಾರ್ಯಕ್ಷೇತ್ರದಲ್ಲೂ—ಔಪಯೋಗಿಕವೋ ವ್ಯಾವಹಾರಿಕವೋ ಕಲಾತ್ಮಕವೋ ಯಾವುದರಲ್ಲೂ—1400 ವರ್ಷಗಳ ಉಜ್ವಲವಾದ ಇತಿಹಾಸವನ್ನುಳ್ಳ ಕರ್ನಾಟಕವು ಹಿಂದೆ ಬಿದ್ದಿಲ್ಲ. ಇನ್ನೂ ಸಮರ್ಪಕವಾದ ಅಧ್ಯಯನದಿಂದ, ಸಂಶೋಧಿತ ಆಧಾರಗಳ ಮೇಲೆ, ಇದರ

ಹಿನ್ನುಡಿ

ನಿಜವಾದ ಮತ್ತು ಸಮಗ್ರವಾದ ಇತಿಹಾಸವು ರಚಿತವಾಗಬೇಕಾಗಿದೆ ಎಂಬುದು ನಿಜ ; ಆದರೆ ಈಗಾಗಲೆ ಉಪಲಬ್ಧವಾಗಿರುವ ಶಾಸನ ಮತ್ತಿತರ ಸಾಧನ ಸಂಪತ್ತನ್ನು ನೋಡಿದರೆ, ಎಂತಹ ಉಜ್ವಲವಾದ ಇತಿಹಾಸವನ್ನು ಬರೆಯಲು ಅವಕಾಶವಿದೆ ಎಂಬುದು ತಿಳಿಯುತ್ತದೆ. ಆಧುನಿಕ ಕಾಲದಲ್ಲಂತೂ ಕರ್ಣಾಟಕದ ಜನರು, ಹಿಂದಿನದಕ್ಕಿಂತಲೂ ಮಿಗಿಲಾಗಿ, ಭಾರತೀಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ, ಗೌರವಾಸ್ಪದವಾದ ರೀತಿಯಲ್ಲಿ ಭಾಗವಹಿಸಿದ್ದಾರೆ.

ಈ ಗ್ರಂಥವು, ಭಾರತೀಯನಾದ ಪ್ರತಿಯೊಬ್ಬ ಕನ್ನಡಿಗನಿಗೂ ಮೊದಲು ತನ್ನತನದ ಅರಿವು ಮಾಡಿಕೊಡುವುದರಲ್ಲಿ ನೆರವಾಗುವುದೆಂದು ನಿರೀಕ್ಷಿಸಲಾಗಿದೆ. ಕನ್ನಡ ನಾಡಿನವರಾದ ನಾವೆಲ್ಲರೂ ಹಿಮಾಲಯದಿಂದ ದಕ್ಷಿಣ ಸಮುದ್ರದ ವರೆಗೂ ವ್ಯಾಪಿಸಿದ ಅಖಂಡ ಭಾರತವರ್ಷದವರು. ಈ ದೇಶದಲ್ಲಿ ಆಗಿ ಹೋದ ಪರಂಪರೆ ದೊಡ್ಡದು. ಇಲ್ಲಿನ ಜನಜೀವನ ದೊಡ್ಡದು. ಇದರ ಇತಿಹಾಸದಲ್ಲಿ ನಾವು ಬೇರೂರಿ ಸತ್ವವನ್ನು ಗಳಿಸಿಕೊಳ್ಳಬಲ್ಲೆವಾದರೆ, ಅಂತರ್ದರ್ಶನದಿಂದ ಬೆಳಕನ್ನು ಪಡೆಯಬಲ್ಲೆವಾದರೆ, ಈ ದೇಶದ ಭವಿಷ್ಯವು ಇನ್ನೂ ಮಹತ್ತಾಗುವುದರಲ್ಲಿ ಸಂದೇಹವಿಲ್ಲ.

ಮೂಲ ಲೇಖಕರು : ಶ್ರೀ ಆರ್.ಆರ್. ದಿವಾಕರ
ಅನುವಾದಕರು : ಡಾ॥ ಜಿ.ಎಸ್. ಶಿವರುದ್ರಪ್ಪ

# ಅನುಬಂಧಗಳು

## ಕರ್ನಾಟಕದ ಜನಪದ ಗೀತಗಳು

ಸಾವಿರದ ಐನೂರು ವರ್ಷಗಳಿಗೂ ಹೆಚ್ಚಿನ ಇತಿಹಾಸ ಹೊಂದಿರುವ ಕನ್ನಡ ಭಾಷೆಯಲ್ಲಿನ ಜನಪದ ಸಾಹಿತ್ಯವು ವೈವಿಧ್ಯದಲ್ಲಿ, ನಿರೂಪಣೆಯಲ್ಲಿ, ವಸ್ತುವಿನ್ಯಾಸದಲ್ಲಿ ಸಮೃದ್ಧವಾಗಿದೆ. ಕನ್ನಡ ಭಾಷೆಯನ್ನಾಡುವ ಜನರಲ್ಲಿ ತೀರ ಹಿಂದುಳಿದಿರುವ ನೀಲಗಿರಿಯ ಬಡಗರಿಂದ ಮೊದಲುಗೊಂಡು, ಅತಿ ಮುಂದುವರಿದಿರುವ ಪಂಗಡಗಳ ವರೆಗೂ ಸಮಾಜದ ಎಲ್ಲ ವರ್ಗಗಳಲ್ಲೂ ಜನಪದ ಗೀತಗಳಿವೆ. ಬಹು ಬೆಲೆಯಾದ ಈ ಸಾಂಸ್ಕೃತಿಕ ಸಂಪತ್ತು ತಲೆಮಾರಿನಿಂದ ತಲೆಮಾರಿಗೆ, ಬಾಯಿಂದ ಬಾಯಿಗೆ ಹರಿದು ಬಂದಿದೆ. ನಮ್ಮ ಜನ ಪದಗೀತಗಳ ವಿಚಾರವಾಗಿ ದಿವಂಗತ ಪ್ರೊ.ಬಿ. ಎಂ. ಶ್ರೀಕಂಠಯ್ಯನವರು ಹೀಗೆ ಹೇಳಿದ್ದಾರೆ :

> "ಕರುಳು ಕರುಳನ್ನು ಮಿಡಿಯುತ್ತದೆ; ಅಂತರಂಗ ಅಂತರಂಗವನ್ನು ತಟ್ಟಿ ಮಾರ್ದನಿಗೊಡುತ್ತದೆ. ನಮ್ಮ ಹಳ್ಳಿಗರ–ಗಂಡು ಹೆಣ್ಣುಗಳೆಲ್ಲರ–ಜೀವನ ಸಾರವನ್ನೇ ಹೊರ ಹೊಮ್ಮಿಸುತ್ತಿರುವ ಈ ಹಾಡುಗಳು ಅವರನ್ನು ತಣಿಸಿ ಹುರಿದುಂಬಿಸುವಂತೆ ಮತ್ತೆ ಯಾವುದೂ ಹುರಿದುಂಬಿಸಲಾರದು. ಇವುಗಳನ್ನು ಆಧಾರವಾಗಿಟ್ಟುಕೊಂಡು ನವೀನಕಾಲಕ್ಕೆ ಉಪಯುಕ್ತವಾದ ಅನೇಕ ಬೋಧನೆಗಳನ್ನು ಮಾಡಬಹುದು".

ಈ ಜನಪದ ಗೀತಗಳು ನಮ್ಮ ಪರಂಪರಾನುಗತವಾದ ಸಂಸ್ಕೃತಿಯ ಸಾರದಂತಿವೆ. ಇವುಗಳ ನೈಜ ಸೌಂದರ್ಯವನ್ನು ಸ್ಪಷ್ಟವಾಗಿ ಅರಿಯಲು ಶಕ್ತರಾದ ವ್ಯಾಖ್ಯಾನಕಾರರು ಬೇಕಾಗುತ್ತದೆ. ಸಾಮಾನ್ಯವಾಗಿ ಈ ಹಾಡುಗಳ ಉಗಮವನ್ನಾಗಲಿ, ಇವುಗಳ ಕರ್ತೃಗಳನ್ನಾಗಲಿ ಗೊತ್ತು ಪಡಿಸುವುದು ಅಸಾಧ್ಯ.

ಭಾವನೆಗಳು ಅಥವಾ ಯೋಚನೆಗಳು ತೀವ್ರಗೊಂಡು ತುಂಬಿ ಬಂದಾಗ, ಆ ಭಾವನೆಗಳಿಗೆ ಗೀತಗಳ ಮೂಲಕ ರೂಪಕೊಡುವ ಪ್ರವೃತ್ತಿ ಸಾಮಾನ್ಯವಾಗಿ ಎಲ್ಲರಲ್ಲೂ ಸಹಜವಾಗಿ ಕಂಡುಬರುತ್ತದೆ. ಹಾಗೆಯೇ ಒಂದೇ ವಿಧವಾದ ಕೆಲಸದಿಂದುಂಟಾಗುವ ಬೇಸರವನ್ನು ಕಳೆಯಲೂ ಸಾಮಾನ್ಯವಾಗಿ ಹಾಡಿನ ಮರೆ ಹೋಗಲಾಗುವುದು. ಬೆಳದಿಂಗಳು ತುಂಬಿದ ನೀರವ ರಾತ್ರಿಯಲ್ಲಿ ಬೀಸುವ ಗೃಹಿಣಿಯೇ ಆಗಲಿ, ತನ್ನ ಮನೆದೇವಿಯನ್ನು ಕುರಿತು ಹಾಡುವ ಉತ್ತರ ಕರ್ಣಾಟಕದ ಗೊಂದಲಿಗನೇ ಆಗಲಿ, ಪಶ್ಚಿಮ ಕರಾವಳಿಯ ಕಾರವಾರದ ಬೆಸ್ತನೇ ಆಗಲಿ, ದಕ್ಷಿಣ ಕನ್ನಡದ ಭೂತಾರಾಧಕನೇ ಆಗಲಿ, ಕೊಡಗಿನ ಹುತ್ತರಿ ಹಬ್ಬದಲ್ಲಿ ನರ್ತನ ಮಾಡುವವನೇ ಆಗಲಿ, ಹೆಗ್ಗಡ ದೇವನ ಕೋಟೆಯ ಆನೆಗಳನ್ನು ಪಳಗಿಸುವ ಸೋಲಿಗನೇ ಆಗಲಿ ಅಥವಾ ಚಿತ್ರದುರ್ಗ ಜಿಲ್ಲೆಯ ಕೋಲಾಟಗಾರನೇ ಆಗಲಿ ಇವರೆಲ್ಲರ ಬದುಕಿನಲ್ಲೂ ಸಂಗೀತದ ಪಾತ್ರ ಬಹು ಪ್ರಧಾನವಾಗಿರುವುದು ಕಂಡುಬರುತ್ತದೆ.

ಕನ್ನಡ ಜನಪದ ಗೀತಗಳನ್ನು ಸಂಗ್ರಹಿಸುವ ಪ್ರಯತ್ನ ಪ್ರಪ್ರಥಮವಾಗಿ ಕ್ರಿ.ಶ. 1802ರಲ್ಲಿ

ಸ್ಕಾಟ್ಲೆಂಡ್ ದೇಶದ ಡಾ॥ ಜಾನ್‌ಲೇಡನ್ ಎಂಬವನಿಂದ ನಡೆಯಿತೆಂಬುದು ನಿಜವಾಗಿಯೂ ಕುತೂಹಲ ಕರವಾದ ಅಂಶವೇ ಸರಿ. ಈಸ್ಟ್ ಇಂಡಿಯಾ ಕಂಪೆನಿಯ ನೌಕರನಾಗಿದ್ದ ಆತ ಕ್ರಿ.ಶ. 1799ರಲ್ಲಿ ಶ್ರೀರಂಗಪಟ್ಟಣ ಪತನವಾದ ಅನಂತರ ಮೈಸೂರಿಗೆ ಬಂದನು. ವಿಶ್ವವಿಖ್ಯಾತ ಕಾದಂಬರಿಕಾರ ಸರ್ ವಾಲ್ಟರ್ ಸ್ಕಾಟನ ಜೊತೆಯಲ್ಲಿ ಡಾ॥ ಲೇಡನ್ ತನ್ನ ಮಾತೃಭೂಮಿಯಲ್ಲಿ ಜನಪದಗೀತಗಳನ್ನು ಸಂಗ್ರಹಿಸುತ್ತಿದ್ದನು. ಆ ಸಾಹಿತ್ಯದ ಮೇಲಿನ ಒಲವು ಇಲ್ಲಿಯೂ ವ್ಯಕ್ತಗೊಂಡಿತು. ಶ್ರೀರಂಗಪಟ್ಟಣದ ಪತನವನ್ನು ಕುರಿತ ಸುಂದರವಾದ ಕನ್ನಡ ಜನಪದ ಗೀತವೊಂದನ್ನು ಆತನು ಸಂಗ್ರಹಿಸಿ, ಅದನ್ನು ಇಂಗ್ಲಿಷಿಗೆ ಭಾಷಾಂತರಿಸಿದನು. ಡಾ॥ ಲೇಡನ್ನನ ಅನಂತರ ಟಿ. ಹಡ್ಸನ್. ಜೆ. ಸ್ಟೀವನ್‌ಸನ್, ಎ.ಜಿ.ಓ. ಲೈಲ್ ಮತ್ತು ಎಸ್. ಡಾಬ್ನೆಲ್ ಮೊದಲಾದ ಹಲವು ಮಂದಿ ಮಿಷನರಿಗಳು ಭಾರತದ ಈ ಭಾಗದಲ್ಲಿನ ಜನಪದ ಸಾಹಿತ್ಯದ ಸಂಗ್ರಹ ಕಾರ್ಯವನ್ನು ಬಹಳ ಆಸಕ್ತಿಯಿಂದ ನಡೆಸಿದರು. "ದಕ್ಷಿಣ ಭಾರತದ ಜನಪದ ಗೀತಗಳು" (Folk songs of Southern India) ಎಂಬ ಹೆಸರಿನಲ್ಲಿ ಕ್ರಿ.ಶ. 1871ರಲ್ಲಿ ಸಂಕಲನವೊಂದನ್ನು ಲಂಡನ್ನಿನಲ್ಲಿ ಸಿ.ಇ. ಗೋವರ್ ಎಂಬವರು ಪ್ರಕಟಿಸಿದರು. ಆ ಸಂಗ್ರಹದಲ್ಲಿ ಅವರು ಕನ್ನಡದ ಕೆಲವು ದಾಸರ ಪದಗಳು, ಕೊಡಗಿನ ಹುತ್ತರಿ ಹಾಡುಗಳು ಕೆಲವು, ಬಡಗರ ಹಾಡುಗಳು ಕೆಲವು-ಇವುಗಳ ಇಂಗ್ಲಿಷ್ ಭಾಷಾಂತರವನ್ನೂ ದಕ್ಷಿಣ ಭಾರತದ ಇತರ ದ್ರಾವಿಡ ಭಾಷೆಗಳ ಗೀತಗಳೊಂದಿಗೆ ಕೊಟ್ಟಿರುವರು. ಶ್ರೀ ಜೆ.ಎಫ್. ಫ್ಲೀಟ್ ಅವರು 'ಇಂಡಿಯನ್ ಆಂಟಿಕ್ವೆರಿ' ಯಲ್ಲಿ ಉತ್ತರ ಕರ್ನಾಟಕದ ಸಂಗೊಳ್ಳಿ ರಾಯಣ್ಣನ ಬಂಡಾಯ, ಹಡಗಲಿಯ ಬೇಡರು, ಸಾಂಗ್ಯನ ಸಾವು ಮತ್ತು ಕಿತ್ತೂರು ಚೆನ್ನವ್ವನ ಸೊಸೆ- ಈ ಕಥಾನಕಗಳನ್ನು ಗದ್ಯರೂಪದಲ್ಲಿ ಪ್ರಕಟಿಸಿದರು.

ಈ ಶತಮಾನದ ಪ್ರಾರಂಭದ ಕಾಲದಲ್ಲಿ ಮಹಾನ್ ರಾಷ್ಟ್ರೀಯ ಆಂದೋಳನದಿಂದ ಪ್ರಭಾವಿತರಾದ ಭಾರತೀಯರು ತಮ್ಮ ಪರಂಪರಾನುಗತ ಸಂಸ್ಕೃತಿಯ ಹಿರಿಮೆಯನ್ನು ಹೆಚ್ಚುಹೆಚ್ಚಾಗಿ ಅರಿಯ ತೊಡಗಿದರು. ದಿವಂಗತ ಪ್ರೊ. ಬಿ.ಎಂ. ಶ್ರೀಕಂಠಯ್ಯ, ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಡಾ॥ ದ.ರಾ. ಬೇಂದ್ರೆ, ಶ್ರೀ ಬೆಟಗೇರಿ ಕೃಷ್ಣಶರ್ಮ, ದಿವಂಗತ ದೇವುಡು ನರಸಿಂಹ ಶಾಸ್ತ್ರಿ, ಶ್ರೀ ಗೋರೂರು ರಾಮಸ್ವಾಮಿ ಅಯ್ಯಂಗಾರ್, ಶ್ರೀ ಸಿಂಪಿ ಲಿಂಗಣ್ಣ—ಮೊದಲಾದ ಮಹನೀಯರು ಕನ್ನಡ ಜನಪದ ಸಾಹಿತ್ಯಕ್ಕೆ, ಅಪೂರ್ವ ಸೇವೆ ಸಲ್ಲಿಸಿದರು. ಧಾರವಾಡದ 'ಗೆಳೆಯರ ಗುಂಪಿ'ನ ಸದಸ್ಯರು, ಸರ್ವ ಶ್ರೀ ಕೆ.ವಿ. ಸುಬ್ಬಣ್ಣ, ಮತಿಘಟ್ಟ ಕೃಷ್ಣಮೂರ್ತಿ, ದೊಡ್ಡಭಾವೆಪ್ಪ ಮೂಗಿ, ಕರೀಂಖಾನ್, ಕ.ರಾ. ಕೃ, ದಿವಂಗತ ಡಾ॥ ಗದ್ದಗಿಮಠ—ಮೊದಲಾದವರು ಹಲವು ಕನ್ನಡ ಜನಪದ ಗೀತಗಳನ್ನು ಸಂಗ್ರಹಿಸಿ ಪ್ರಕಟಿಸಿರುವರು.

ಹಾಸನ ಜಿಲ್ಲೆಯ ಒಂದು ಜನಪದಗೀತ ಹೇಳುವಂತೆ ಪಾರ್ವತೀ ದೇವಿಯೇ ಬೀಸುವ ಕಲ್ಲಿನ ಹಾಡಿನ ಆದ್ಯ ಪ್ರವರ್ತಕಿ :

ಬಿದರೆ ಬೆಟ್ಟದ ಮೇಲೆ ಚೆದುರ ರಾಗೀಕಲ್ಲು
ಮದನಾರಿ ಎಂಬೋ ಹಿಡಿಗೂಟ-ಹಿಡುಕೊಂಡು
ಶಿವನ ಪಾಡ್ಯಾಳೆ—ಸಿರಿ ಗೌರಿ

ಧಾರವಾಡ ಜಿಲ್ಲೆಯ ಹಾಡೊಂದು ಈ ಗೀತಗಳ ಪ್ರಾರಂಭವನ್ನು ಹೀಗೆ ತಿಳಿಸುತ್ತದೆ :

ಕುಟ್ಟಿ ಬೀಸುವ ಹಾಡ ಯಾವಾಕಿ ಕಲಿಸ್ಯಾಳ
ಕೃಷ್ಣನ ತಂಗಿ ಸುಭದ್ರೆ-ಕಲಿಸ್ಯಾಳ
ಕೃಷ್ಣನ ಮ್ಯಾಲೆ—ಪದಗಳ

ವೀರಶೈವಮತದ ಉದ್ಧಾರಕರಾದ ಬಸವಣ್ಣನವರು ತಮ್ಮ ಪತ್ನಿ ನೀಲವ್ವನಿಗೆ ತಕ್ಕುದಾದ ಬೀಸುವ ಕಲ್ಲಿಗಾಗಿ ನಾಡಿನ ಮೇಲೆಲ್ಲ ಹುಡುಕಾಡಿದರೆಂದು ಮತ್ತೊಂದು ಹಾಡು ವರ್ಣಿಸುತ್ತದೆ :

ಬೀಸೋ ಕಲ್ಲೀಗೆ ದೇಶವಾ ತಿರುಗ್ಯಾರೆ
ಸಕಲ ಸಂಪನರ ಮಗಳಿಗೆ—ನೀಲವ್ವsಗೆ
ದೇಶ ತಿರುಗ್ಯಾರೆ—ಬಸವಯ್ಯ

ರಾಗೀ ಕಲ್ಲೀಗೆ ರಾಜ್ಯಾವ ತಿರುಗ್ಯಾರೆ
ರಾಯ ಸಂಪನರ ಮಗಳಿಗೆ—ನೀಲವ್ವsಗೆ
ರಾಜ್ಯ ತಿರುಗ್ಯಾರೆ—ಬಸವಯ್ಯ

ತಮಿಳಿನ ಕುರಳಿನಂತೆಯೇ ಕನ್ನಡದ ಪದ್ಯಗಳಿಗೂ ಮೊದಲು ಎರಡೇ ಪಾದಗಳಿದ್ದವೆಂದು ದಿ. ಪ್ರೊ. ಟಿ.ಎನ್. ಶ್ರೀಕಂಠಯ್ಯನವರು ಸಮಂಜಸವಾಗಿಯೇ ಸೂಚಿಸಿರುವರು. ಈ ' ದ್ವಿಪದಿ ' ಕಾಲ ಕಳೆದಂತೆಲ್ಲ ವಿಸ್ತಾರಗೊಂಡು ಎರಡನೆಯ ಸಾಲು ಬೆಳೆದು ಮೂರು ಸಾಲು ಅಥವಾ ಪಾದಗಳುಳ್ಳ ' ತ್ರಿಪದಿ 'ಯಾಯಿತು. ಈ ತ್ರಿಪದಿ ಕನ್ನಡ ಜನಪದ ಕಾವ್ಯದ ತಾಯಿಯೆಂದೂ ಕನ್ನಡ ಛಂದಸ್ಸಿನ ಗಾಯತ್ರಿಯೆಂದೂ ಡಾ॥ ಬೇಂದ್ರೆ ಹೇಳಿದ್ದಾರೆ. ' ದ್ವಿಪದಿ ' ' ತ್ರಿಪದಿ 'ಯಾಗಿ ಪರಿವರ್ತನೆ ಹೊಂದಲು ಹೆಚ್ಚು ಕಾಲವೇ ಹಿಡಿದಿರಬೇಕು. ಕ್ರಿ. ಶ. 700ರ ಸುಮಾರಿನ ಬಾದಾಮಿ ಶಾಸನದಲ್ಲಿರುವ ತ್ರಿಪದಿಯೇ ನಮಗೆ ಈ ವರೆಗೆ ದೊರೆತಿರುವ ಅತ್ಯಂತ ಪ್ರಾಚೀನವಾದ ತ್ರಿಪದಿ. ಆ ಕಾಲಕ್ಕೆ ಕೆಲವು ಶತಮಾನಗಳಿಗಿಂತ ಮೊದಲೇ ಕನ್ನಡ ಜನಪದ ಸಾಹಿತ್ಯದ ಇತಿಹಾಸ ಪ್ರಾರಂಭವಾಗಿದೆ ಎಂದು ನಾವು ಊಹಿಸಬಹುದಾಗಿದೆ. ಹೀಗೆ, ದ್ವಿಪದಿಯಿಂದ ಪ್ರಾರಂಭವಾದ ನಮ್ಮ ಜನಪದ ಗೀತಗಳಲ್ಲಿ ತ್ರಿಪದಿ, ಚೌಪದಿ, ಷಟ್ಪದಿಗಳೂ ಐದು, ಏಳು, ಎಂಟು, ಒಂಬತ್ತು, ಹತ್ತು ಮತ್ತು ಹನ್ನೆರಡು ಸಾಲು (ಪಾದ)ಗಳುಳ್ಳ ಹಾಡುಗಳೂ ಇರುವುದು ಕಂಡುಬರುತ್ತದೆ. ಇಷ್ಟಲ್ಲದೆ, ' ದುಂದುಮೆ'ಗಳು, 'ಲಾವಣಿ'ಗಳು, ಹಾಗೂ 'ರಗಳೆ 'ಯ ರೂಪದ ಹಾಡುಗಳೂ ಬೇಕಾದಷ್ಟಿವೆ. ಕೆಲವು ಪ್ರದೇಶಗಳಿಗೇ ವಿಶಿಷ್ಟವೆನಿಸಿದ ಹಾಡುಗಳೂ ಉಂಟು. ಉತ್ತರ ಕರ್ಣಾಟಕದ ' ದುಂದುಮೆ ' ಹಾಗೂ ' ರಿವಾಯತ್ 'ಗಳು, ಮೈಸೂರು–ಮಂಡ್ಯ ಜಿಲ್ಲೆಗಳಲ್ಲಿನ ಕೊಂತಿಯ ಪದಗಳು, ಹಾಸನ ಹಾಗೂ ತುಮಕೂರು ಜಿಲ್ಲೆಗಳ ' ತಿಂಗಳು-ಮಾವನ ' ಪದಗಳು, ಶಿವಮೊಗ್ಗ ಜಿಲ್ಲೆಯಲ್ಲಿ ದೀಪಾವಳಿ ಸಮಯದಲ್ಲಿ ಹೇಳುವ ಹಾಡುಗಳು, ದಕ್ಷಿಣ ಕನ್ನಡದ 'ಭೂತಾರಾಧನೆ'ಯ ಸಂದರ್ಭದಲ್ಲಿ ಹೇಳುವ ಭೂತಗಳ ಇತಿಹಾಸದ ಪ್ರಾರ್ಥನೆಯ ಹಾಡುಗಳು, ಕೊಡಗಿನ ಹುತ್ತರಿ ಹಾಡುಗಳು—ಇವು ಆಯಾ ಪ್ರದೇಶಗಳಿಗೇ ಮೀಸಲೆನಿಸಿದ ಹಾಡುಗಳು. ಆದರೆ, ಎಲ್ಲ ಭಾಗಗಳಲ್ಲೂ ಸರ್ವಸಾಮಾನ್ಯವಾಗಿರುವ ಕೆಲವು ರೀತಿಯ ಹಾಡುಗಳೂ ಉಂಟು. ದಕ್ಷಿಣದ ಕೊಯಮತ್ತೂರಿನಿಂದ ಉತ್ತರದ ಬೀದರ್‌ವರೆಗೂ ಕನ್ನಡ ಭಾಷೆಯನ್ನಾಡುವ ಜನರೆಲ್ಲರೂ ಈ ಹಾಡುಗಳನ್ನು ಹಾಡುತ್ತಾರೆ. ಬೀಸುವ ಕಲ್ಲಿನ ಹಾಡುಗಳು ಹಾಗೂ ಮದುವೆಯ ಹಾಡುಗಳು ಈ ವರ್ಗಕ್ಕೆ ಸೇರುತ್ತವೆ. ಕನ್ನಡ ನಾಡಿನ ಉದ್ದಗಲದ ಪ್ರತಿಯೊಂದು ಗುಡಿಸಲು-ಮನೆಯಲ್ಲೂ ಈ ಹಾಡುಗಳು ಪ್ರಾದೇಶಿಕ ಹಾಗೂ ಕುಲಗೋತ್ರಗಳ ವ್ಯತ್ಯಾಸವಿಲ್ಲದೆ ಎಲ್ಲೆಲ್ಲೂ ಹರಡಿರುವುದು ಕಂಡುಬರುತ್ತದೆ. ಬಿಜಾಪುರ ಜಿಲ್ಲೆಯ ತೀರ ಒಳನಾಡಿನ ಹಳ್ಳಿಯೊಂದರಲ್ಲಿ ಕೇಳಿಬರುವ ಬೀಸುವ ಹಾಡು ಅಥವಾ 'ಸೋಬಾನೆ'ಯ ಹಾಡನ್ನು ಅಲ್ಪ ಸ್ವಲ್ಪ ಬದಲಾವಣೆಯೊಂದಿಗೆ ಮೈಸೂರು ಜಿಲ್ಲೆಯ ಹಳ್ಳಿಯೊಂದರಲ್ಲೂ ನಾವು ಕೇಳಬಹುದು. ದೇಶದ ಎಲ್ಲ ಭಾಗಗಳಲ್ಲೂ ಈ ಹಾಡುಗಳನ್ನು ಕೇಳುವುದಷ್ಟೇ ಅಲ್ಲದೆ, ಎಲ್ಲ ವರ್ಗಗಳವರಲ್ಲೂ ಇವನ್ನು ಕೇಳಬಹುದು. ಸಾಮಾನ್ಯವಾಗಿ ಬೀಸುವ ಹಾಗೂ ಮದುವೆಯ ಪದಗಳೆಲ್ಲ ತ್ರಿಪದಿಯಲ್ಲೇ ಇದ್ದು, ಕರ್ಣಾಟಕದ

ಮಹಿಳೆಯರು ಈ ಹಾಡುಗಳ ಕರ್ತೃಗಳೆಂದು ನಂಬಬಹುದಾಗಿದೆ. ಚಕ್ರವರ್ತಿ ಕವಿ ನೃಪತುಂಗನು (ಕ್ರಿ.ಶ. 9ನೆಯ ಶತಮಾನದ) ಕರ್ನಾಟಕದ ಜನಸಾಮಾನ್ಯರು "ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳ್" ಎಂದು ಬಣ್ಣಿಸಿದ್ದಾನೆ. ಹೆಣ್ಣುಮಕ್ಕಳು ರಚಿಸಿರುವ ಬೀಸುವ ಪದಗಳು ಹಾಗೂ ಒಸಗೆ-ಸೋಬಾನೆ ಪದಗಳು ಈ ಬಣ್ಣನೆ ಅತಿಶಯೋಕ್ತಿಯಲ್ಲವೆಂಬುದನ್ನು ಸ್ಥಿರಪಡಿಸುತ್ತವೆ. ಬೀಸುವ ಕಲ್ಲು ನಮ್ಮ ಮಹಿಳೆಯರ ಜೀವನದ ಸಂಗಾತಿ. ಅವರ ಸುಖದುಃಖದ ಪಾಲುಗಾರ್ತಿ. ಬೀಸುವ ಕಾಯಕ ನಡೆಸುತ್ತಾ ಮಹಿಳೆಯರು ತಮ್ಮ ಹೃದಯವನ್ನೇ ಹಾಡಾಗಿ ಹರಿಸಿರುವರು. ಅವರ ಸುಖ—ದುಃಖ, ಅವರ ಆಶೆ—ನಿರಾಶೆಗಳೆಲ್ಲ ಈ ಕವಿತೆಗಳಲ್ಲಿ ಮೈವೆತ್ತು ಮೂಡಿವೆ. 'ಆಡು ಮುಟ್ಟದ ಸೊಪ್ಪು ಇಲ್ಲ' ಎನ್ನುವ ಕನ್ನಡ ಗಾದೆಯೊಂದಿದೆ. ಅದರಂತೆಯೇ ಬೀಸುವ ಕಲ್ಲಿನ ಹಾಡಿಗೆ ವಸ್ತುವಾಗದ ಬದುಕಿನ ಅಂಶ ಒಂದಾದರೂ ಇಲ್ಲವೆಂದು ಹೇಳಬಹುದು.

ಬೀಸುವ ಕೆಲಸಮಾಡುತ್ತಾ ಹಳ್ಳಿಯ ಹೆಣು ಮಗಳು ದೇವರನ್ನು ಈ ರೀತಿ ಪ್ರಾರ್ಥಿಸುತ್ತಾಳೆ:

ಎದ್ದೂನೆ ನಿಮು ಗ್ಯಾನ ಏಳುತಲೆ ನಿಮು ಗ್ಯಾನ
ಸಿದ್ದರ ಗ್ಯಾನ ಶಿವಗ್ಯಾನ—ಮಾ ಶಿವನೆ
ನಿದ್ದೆಗಣ್ಣಾಗೆ—ನಿಮು ಗ್ಯಾನ

ನಾರಾಯಣ ನಿಮ್ಮ ನಾಮದ ಬೀಜವ
ಯಾವಲ್ಲಿ ಬಿತ್ತಿ ಬೆಳೆಯಲಿ—ನಿಮ್ಮ ನಾಮವ
ನಾಲಿಗೆ ಮೇಲೆ ಬಿತ್ತಿ—ಬೆಳೆದೇವು

ಮಣ್ಣಿನ ಮಕ್ಕಳ ಈ ಹಾಡುಗಳಲ್ಲಿ ದೇವರ ಬಗ್ಗೆ ದೃಢವಾದ ಭಕ್ತಿ ವಿಶ್ವಾಸಗಳು ಹಾಸುಂ ಹೊಕ್ಕಾಗಿವೆ. ಆದರೆ, ಶಿವ-ವಿಷ್ಣುಗಳಲ್ಲಿ ಇಲ್ಲಿ ಭೇದಭಾವನೆ ಕಿಂಚಿತ್ತೂ ಕಂಡುಬರುವುದಿಲ್ಲ. ಒಂದು ಗೀತದಂತೆ ಬೇಲೂರಿನ ಚೆನ್ನಯ್ಯ, ಬಿದಿರೆಯ ರಂಗಯ್ಯ, ನಂಜನಗೂಡಿನ ನಂಜಯ್ಯ, ಮೇಲುಕೋಟೆಯ ಚೆಲುವಯ್ಯ ಮತ್ತು ತಿರುಪತಿಯ ತಿಮ್ಮಪ್ಪ-ಇವರೆಲ್ಲ ಒಬ್ಬಳೇ ತಾಯಿಯ ಮಕ್ಕಳು. ಕರ್ನಾಟಕದ ಜನಸಾಮಾನ್ಯರಲ್ಲಿ ಪರಮತದ ಬಗ್ಗೆ ಅಸಹನೆಯಾಗಲಿ, ಸ್ವಮತದ ಬಗ್ಗೆ ದುರಭಿಮಾನವಾಗಲಿ ಇಲ್ಲವೆಂಬುದು ಈ ಸಾಹಿತ್ಯವನ್ನು ಪರಿಶೀಲಿಸಿದಾಗ ವ್ಯಕ್ತವಾಗುತ್ತದೆ. ಈ ಗೀತಗಳ ಇನ್ನೊಂದು ಮುಖ್ಯ ಗುಣವೆಂದರೆ, ಇವು ಇಹಜೀವನದ ಬಗ್ಗೆ ತೋರುವ ತೀವ್ರ ಆಸಕ್ತಿ. ಧರ್ಮ-ಅಧರ್ಮ, ಸ್ವರ್ಗ-ನರಕಗಳ ವಿಷಯವಾಗಿ ಅಚಲ ಶ್ರದ್ಧೆ ಹೊಂದಿದ್ದರೂ ಈ ಲೋಕದಲ್ಲಿ ಒಳ್ಳೆಯ ಬದುಕು ಬಾಳಿದವನು ಪರಲೋಕದಲ್ಲೂ ಉತ್ತಮ ಗತಿಯನ್ನೇ ಪಡೆಯುತ್ತಾನೆಂಬುದೂ ಅವರ ನಿಶ್ಚಲವಾದ ನಂಬುಗೆ. ಐಹಿಕ ಜೀವನದ ಪ್ರತಿಯೊಂದು ವಿಚಾರವೂ ಅವರಿಗೆ ಕುತೂಹಲಕಾರಿಯಷ್ಟೇ ಅಲ್ಲ, ಅಭಿಮಾನದ ಆಸಕ್ತ ವಿಷಯವೂ ಹೌದು.

ತನ್ನ ಮಗುವಿನ ಅಳುವನ್ನು ಕೇಳಿದಾಗ ಅದು ತಾಯಿಗೆ ಅತೀವ ಆನಂದದ ವಿಷಯವೇ ಆಗುತ್ತದೆ:

ಅತ್ತರೆ ಅಳಲವ್ವ ಈ ಕೂಸು ನನಗಿರಲಿ
ಕೆಟ್ಟರೆ ಕೆಡಲಿ ಮನೆಗೆಲಸ—ಕಂದನಂಥ
ಮಕ್ಕಳಿರಲಮ್ಮ—ಮನೆ ತುಂಬ

ಅಳುವ ಕಂದನ ತುಟಿ ಹವಳದ ಕುಡಿಹಾಂಗೆ
ಕುಡಿಹುಬ್ಬು ಬೇವಿನೆಸಳ್ಹಾಂಗೆ–ಕಣ್ನೋಟ
ಶಿವನ ಕೈಯ್ಯಲಗು–ಹೊಳೆದ್ಹಾಂಗೆ

ಹೆಣ್ಣು ಮಕ್ಕಳಿಗಿಂತ ಗಂಡುಮಕ್ಕಳನ್ನೇ ಹೆಚ್ಚಾಗಿ ಅಪೇಕ್ಷಿಸುವುದು ಇಲ್ಲಿ ವ್ಯಕ್ತಪಟಿ ದೆ. ಏಕೆಂದರೆ.

ಹೆಣ್ಣು ಹೆಚ್ಚಿದ ಮನಿ ಹೆಗ್ಗಣ್ಹೆಚ್ಚಿದ್ಹಾಂಗೆ
ಗಂಡಸು ಮಗನು ಗಜಭೀಮ–ಹುಟ್ಟಿದರ
ಚಿಲಕ ಚಿತ್ತಾರ—ನಗಂತಾವ

ಹೆಣ್ಣಿಗಾದರೋ

ತಾಯಿದ್ದರೆ ತವರ್ಹೆಚ್ಚು ತಂದಿದ್ದರೆ ಬಳಗ್ಹೆಚ್ಚು
ಸಾವಿರಕೆ ಹೆಚ್ಚು ನಿಜಪುರುಷ–ಇದ್ದರೆ
ಉಣಬೌದು ದಾನ–ಕೊಡ ಬೌದು

ಹೆಣ್ಣು ಮಗಳ ಬಗ್ಗೆ ತಾಯಿ ತಂದೆ, ಅಣ್ಣ ತಮ್ಮಂದಿರು, ಅಕ್ಕ–ತಂಗಿಯರ ಪ್ರೀತಿ ವಿಶ್ವಾಸಗಳನ್ನು ಕುರಿತ ಅಸಂಖ್ಯ ಗೀತಗಳಿವೆಯಾದರೂ ಅತ್ತಿಗೆ ನಾದಿನಿಯರ ಪ್ರೀತಿ ವಿಶ್ವಾಸದ ಬಗ್ಗೆ ಒಂದೇ ಒಂದಾದರೂ ಗೀತ ಕಂಡು ಬರುವುದಿಲ್ಲ :

ಅಣ್ಣನ ಹೆಂಡತಿ ಅವಳ್ಯಾರಿಗೆ ಅತ್ತಿಗೆ
ಸುಣ್ಣದ ನೀರ ಒಲೆಮುಂದೆ—ಇಟ್ಟುಕೊಂಡು
ಎಮ್ಮೆಹಾಲೆಂದು–ಬಡಿಸ್ಯಾಳೆ.

ಬೀಸುವ ಪದಗಳು, ಕುಟ್ಟುವ ಪದಗಳು, ಒಸಗೆ-ಸೋಬಾನೆ ಪದಗಳು, ಜೋಗುಳದ ಪದಗಳು, ಹಚ್ಚಿಯ ಪದಗಳು, ಸುಗ್ಗಿಯ ಪದಗಳು, ಹೊಲದಲ್ಲಿ ಕೆಲಸ ಮಾಡುವಾಗ ಹೇಳುವ ಪದಗಳು—ಇವೆಲ್ಲ ಮಹಿಳೆಯರೇ ಹೇಳುವ ಪದಗಳು. ಕೋಲಾಟದ ಪದ, ಗಾಡಿಯ ಪದ, ಕೊಡಗಿನ ಹುತ್ತರಿ ಹಬ್ಬದ ನೃತ್ಯದಲ್ಲಿ ಹೇಳುವ ಪದ, ದಕ್ಷಿಣ ಕನ್ನಡದ ಭೂತಾರಾಧನೆಯ ಸಮಯದಲ್ಲಿ ಹೇಳುವ ಪದ, ಗಾಡಿಯ ಪದ, ಲಾವಣಿಗಳು, ರಿವಾಯತ್‌ಗಳು, ಗೀಗೀ ಪದಗಳು, ಕಂಸಾಳೆ ಪದ—ಮೊದಲಾದುವೆಲ್ಲ ಗಂಡುಸು ಹೇಳುವ ಪದಗಳು. ವೀರಶೈವ ಮತ ಪುನರುಜ್ಜೀವನಗೊಂಡ ಮೇಲೆ ಕರ್ನಾಟಕದ ಜನಪದ ಸಾಹಿತ್ಯವು ವಸ್ತುವಿನಲ್ಲೂ ಸಾಹಿತ್ಯ ಪ್ರಕಾರದಲ್ಲೂ ಹೊಸತನವನ್ನು ಪಡೆದುಕೊಂಡು ಹೆಚ್ಚು ಸಮೃದ್ಧವಾಯಿತು. ' ವೀರಭದ್ರ ದೇವರ ಖಡ್ಗ 'ಗಳನ್ನು ಉದಾಹರಣೆಗೆ ಹೇಳಬಹುದು. ಬಹಳ ಶಕ್ತಿಯುತವಾದ ಗದ್ಯದಲ್ಲಿ ವೀರಭದ್ರನ ಪ್ರತಾಪವನ್ನು ಹಾಗೂ ಶಿವನ ಹಿರಿಮೆಯನ್ನು ಕುರಿತ ಹಲವು ಘಟನೆಗಳನ್ನೂ ಈ " ಖಡ್ಗ 'ಗಳಲ್ಲಿ ಮನಮುಟ್ಟುವಂತೆ ವರ್ಣಿಸಲಾಗಿದೆ.

ಪುರಂದರದಾಸ, ಕನಕದಾಸ ಮೊದಲಾದ ವೈಷ್ಣವ ದಾಸರಿಂದ ಪ್ರಚಾರಹೊಂದಿದ ಭಕ್ತಿಪಂಥವೂ ಜನರ ಮನದ ಮೇಲೆ ಅಪಾರ ಪ್ರಭಾವ ಬೀರಿತು. ಕೋಲಾಟದ ಪದಗಳಲ್ಲಿ ಕೂಡ ಆ ಪ್ರಭಾವವನ್ನು ಗುರುತಿಸಬಹುದಾಗಿದೆ.

ತನಗೆ ಸಮೃದ್ಧಿಯನ್ನು ಕರುಣಿಸಿ ಕಾಪಾಡುವ ಪ್ರಕೃತಿಗೆ, ಮಣ್ಣಿನ ಮಗ ಎಷ್ಟೊಂದು ಕೃತಜ್ಞ ನಾಗಿರುವನೆಂಬುದನ್ನು ಈ ಕೋಲಾಟದ ಪದ ಸ್ಪಷ್ಟಪಡಿಸುತ್ತದೆ:

ಶರಣೆನ್ನಿರಯ್ಯಾ ಶರಣೆನ್ನಿರೋ ॥

ನಿಂತಿರೋ ಭೂಮಿಗೆ ಶರಣೆನ್ನಿರೋ<br>
ಸೂರ್ಯಚಂದ್ರಮರಿಗೆ ಶರಣೆನ್ನಿರೋ<br>
ಸುತ್ತಲ ದೇವರಿಗೆ ಶರಣೆನ್ನಿರೋ<br>
ಮಳೆ ಕೊಡೋ ಮೋಡಕ್ಕೆ ಶರಣೆನ್ನಿರೋ ॥

ಬೀಸುವ ಪದಗಳಂತೆಯೇ ಕೋಲಾಟದ ಪದಗಳು ವಸ್ತು ಹಾಗೂ ದನಿ ಧಾಟಿಗಳಲ್ಲಿ ವೈವಿಧ್ಯ ಪೂರ್ಣವಾಗಿವೆ. ದೈವದ ಪ್ರಾರ್ಥನೆ, ಪ್ರಕೃತಿಯ ವರ್ಣನೆ, ಪ್ರೇಮ, ಕಾಮ, ಕಾಯಕ—ಕದನ, ಒಗಟು, ಹಾಸ್ಯ, ಹುಟ್ಟು, ಸಾವು—ಇವುಗಳನ್ನು ಕುರಿತ ಕೋಲಾಟದ ಪದಗಳುಂಟು. ಸಾವನ್ನು ಕುರಿತು ಹೀಗೆ ಹಾಡಿದ್ದಾರೆ:

ಜವರಾಯ ಬಂದರೆ ಬರಿಕೈಲಿ ಬರಲಿಲ್ಲ<br>
ಕುಡುಗೋಲು ಕೊಡಲ್ಯೊಂದ್ಹೆಗಲೇರಿ—ಜವರಾಯ<br>
ಒಳ್ಳೊಳ್ಳೆ ಮರನ—ಕಡಿಬಂದ—ಜವರಾಯ<br>
ಫಲ ಬಿಟ್ಟ ಮರನ—ಕಡಿ ಬಂದ

ಸುಖ ಸಮೃದ್ಧಿಯಿಂದಿದ್ದ ಕುಟುಂಬವೊಂದಕ್ಕೆ ಜವರಾಯ ಭೇಟಿಯಿತ್ತು, ಆ ಮನೆಯ ಗೃಹಿಣಿಯನ್ನು ತನ್ನೊಡನೆ ಬರಲು ಕರೆಯುತ್ತಾನೆ. ಅದಕ್ಕೆ ಆಕೆ—

ಮಳಿಮಳಿಗೆ ಹಚ್ಚಡ ಮಳಿಗೆ ಮುಂಡಾಸಿನ<br>
ಗಂಡನ ಬಿಟ್ಟು—ನಾನ್ಹೇಗೆ ಬರಲೋ<br>
ಹಾಲು ಬಾನಾ ಉಂಡು ತೋಳ ಮೇಲಾಡುವ<br>
ಬಾಲನ ಬಿಟ್ಟು—ನಾನ್ಹೇಗೆ ಬರಲೋ<br>
ಕಾಳುಕಡ್ಡೀ ಮಾರಿ ಕಟ್ಟಾಣಿ ಮಾಡಿಸಿದ್ದ<br>
ಕಟ್ಟಾಣಿ ಒಂದರಘಳ್ಗೆ ಇಕ್ಕಲಿಲ್ಲವೋ—ಜವರಾಯ<br>
ಕೆಟ್ಟೋಡಿ ಹೋಗೋ—ಸಡಗರವೆ<br>
ಅಟ್ಟು ಉಂಡೇನೆಂದು ಚಟ್ಟಿ ಕುಡಿಕೆ ತಂದೆ<br>
ಹಟ್ಟೀಲಿದ್ಯಲ್ಲೊ—ಜವರಾಯ

ಎಂದು ಅವಳು ಹಲುಬುವಳು.

"ದಕ್ಷಿಣ ಭಾರತದ ಜನಪದ ಗೀತಗಳು," (The Folk Songs of Southern India) ಇದರ ಸಂಗ್ರಾಹಕರಾದ ಶ್ರೀ ಗೋವರ್ ಅವರು ಬಡಗರ ಹಾಡುಗಳ ವಿಚಾರವಾಗಿ ಈ ರೀತಿ ಅಭಿಪ್ರಾಯ ಪಟ್ಟಿದ್ದಾರೆ: 'ಬಡಗರ ಹಾಡುಗಳಲ್ಲಿ ಕಂಡುಬರುವ ಭಾಷಾ ಸೌಂದರ್ಯ ಅನುಪಮವಾದದ್ದು. ಇವು

ಒಂದೊಂದೂ ಒಂದು ಪುಸ್ತಕಕ್ಕೆ ಕಿರಿದಾಗಿ ಕವನಕಥೆಗೆ ಮಿಗಿಲಾಗಿ ಭಾಸರನ ಕಥೆಗಳನ್ನು ಜ್ಞಾಪಕಕ್ಕೆ ತರುತ್ತವೆ. ಇವಕ್ಕಿಂತ ಉತ್ತಮವಾದ ಹಾಡುಗಳು ಬಹುಜನಾಂಗಗಳಲ್ಲಿಲ್ಲ. ಈ ಸಾಹಿತ್ಯದಲ್ಲಿ ಮುಖ್ಯವಾಗಿ ಕಂಡುಬರುವ ಹಿರಿಯ ಗುಣವೆಂದರೆ, ನೀತಿಗೆ ಕೊಡಲಾಗಿರುವ ಪ್ರಮುಖ ಸ್ಥಾನ. ಈ ಸಂಕಲನದಿಂದ—ಬಡಗರ ಅಂತ್ಯಕ್ರಿಯೆಗೆ ಸಂಬಂಧಿಸಿದ ಹಾಡಿನಿಂದ, ಈ ಕೆಲವು ಸಾಲುಗಳನ್ನಿಲ್ಲಿ ಉದ್ಧರಿಸಿದೆ :

ತನ್ನ ಹೆಂಡತಿಯ ತಂದೆ ನೆಲದ ಮೇಲೆ ಕುಳಿತಿದ್ದರು ;
ತಾನು ಮಂಚ ಅಥವಾ ಮಣೆಯ ಮೇಲೆ ಒರಗಿದ್ದ ;
ಇದು ಪಾಪ.

ತನ್ನ ಹೆಂಡತಿಯ ತಾಯಿಯ ವಿರುದ್ಧ
ಕೀಳು ಕಾಲೆತ್ತಿದ ;
ಇದು ಪಾಪ.

ಬೆಟ್ಟದ ಮೇಲಿನ ಅಪರಿಚಿತರಿಗೆ
ನೆರವು ನೀಡಿದ ; ಆದರೆ ತಪ್ಪು ದಾರಿ ತೋರಿದ ;
ಇದು ಪಾಪ.

ಇನ್ನೊಂದು ಹಾಡಿನಲ್ಲಿ ಹೀಗೆ ಹೇಳಿದೆ :

ಹಸಿದು ಬೇಡಿದವರಿಗೆ ಊಟವಿಡಲಿಲ್ಲ,
ಚಳಿಯಿಂದ ನಡುಗುವವರಿಗೆ ಶಾಖಕ್ಕೆ ಬೆಂಕಿ ಕೊಡಲಿಲ್ಲ ;
ದುರ್ಬಲರು, ದೀನರು ನೆರವು ಕೇಳಿದರು,
ಭಿಕ್ಷೆ ನೀಡದೆ ಅವರ ದುಃಖವನ್ನು ಕಡೆಗಣಿಸಿದನು.

ಕಳೆದ ಶತಮಾನದಲ್ಲಿ ರೆ. ಡಬ್ಲ್ಯು. ಜಿ. ಗ್ರೇಟರ್ ಮತ್ತು ರೆ. ಜಾರ್ಜ್ ರೀಚರ್ ಎಂಬ ಜರ್ಮನ್ ಮಿಷನರಿಗಳಿಬ್ಬರು ಕೊಡಗಿನ ಕೆಲವು ಹಾಡುಗಳನ್ನು ಸಂಗ್ರಹಿಸಿ, ಅವುಗಳ ಭಾಷಾಂತರವನ್ನು ಪ್ರಕಟಿಸಿದರು. ಕೊಡವರ ರೀತಿ ನೀತಿ ಹಾಗೂ ಅವರ ಜನಪದ ಸಾಹಿತ್ಯದ ಬಗ್ಗೆ ಇತ್ತೀಚೆಗೆ ಶ್ರೀ ಗಣಪತಿಯವರು ಒಂದು ಅಮೂಲ್ಯ ಕೃತಿಯನ್ನು ಪ್ರಕಟಿಸಿದ್ದಾರೆ.

ಕೊಡಗರ ಜನಪದ ಗೀತಗಳಲ್ಲಿ 'ಹುತ್ತರಿ ಹಾಡು' ಬಹಳ ಪ್ರಸಿದ್ಧವಾದುದು. ಹುತ್ತರಿ ಎಂದರೆ 'ಹೊಸ ಅಕ್ಕಿ'. ಹೊಸ ಬತ್ತವನ್ನು ಮನೆಗೆ ತರುವ ಸಂಭ್ರಮದ ಹಬ್ಬವಿದು. ಒಂದು ವಾರ ಕಾಲ ನಡೆಯುವ ಈ ಹಬ್ಬದಲ್ಲಿ ಜನರು ತಮ್ಮ ಕಷ್ಟ ಕಾರ್ಪಣ್ಯಗಳನ್ನು ಮರೆತು, ಆಡಿ ಹಾಡಿ ಆನಂದ ದಿಂದಿರುವರು. ಈ ಹಬ್ಬ ತಮಿಳಿನ 'ಪೊಂಗಲ್' ಹಾಗೂ ಕೇರಳದ 'ಓಣಂ' ಹಬ್ಬಗಳಿಗೆ ಸಮನಾದುದು. ಮಲಬಾರಿನಲ್ಲಿ ಇದನ್ನು 'ಪುದಿಯುರಿ' ಎಂದು ಕರೆಯುತ್ತಾರೆ. ಹುತ್ತರಿಹಬ್ಬ ಒಂದು ವಾರ ಕಾಲ ನಡೆಯು ವುದಾದರೂ ಆನಂದೋತ್ಸವಗಳು ಇನ್ನೂ ನಾಲ್ಕು ದಿನ ಮುಂದುವರಿಯುತ್ತವೆ. ಮಳೆ ಸುರಿಸಿ ಹೊನ್ನಿನ ಬೆಳೆ ಕರುಣಿಸುವ ಇಗ್ಗುತಪ್ಪ ಹುತ್ತರಿ ಹಬ್ಬದ ಅಧಿದೇವತೆ. ಶ್ರೀ ಗಣಪತಿಯವರ ಸಂಕಲನ ದಿಂದ ಆಯ್ದ ಹುತ್ತರಿ ಹಾಡಿನ ಕೆಲವು ಸಾಲುಗಳನ್ನು ಇಲ್ಲಿ ಉದಾಹರಿಸಿದೆ :

ಬಪ್ಪಕ ಪುತ್ತರಿ ಬಣ್ಣತೆ ಬಾತ್ ... ಪೊಯಿಲೇ ಪೊಯಿಲೇ
ಪೋಪಕ ಪುತ್ತರಿ ಎಣ್ಣತೆ ಪೋಚಿ ... ಪೊಯಿಲೇ ಪೊಯಿಲೇ
ದವ್ಮಯ್ಯ ಪುತ್ತರಿ ಒವ್ಮಲು ಪೋತೆ... ಪೊಯಿಲೇ ಪೊಯಿಲೇ

[ಹುತ್ತರಿಯು ಬರುವಾಗ ಬಹಳ ಸಡಗರದಿಂದ ಬಂದಿತು. ಹೋಗುವಾಗ, ಯಾರಿಗೂ ಹೇಳದೆ ಹೋಗುತ್ತದೆ. ಆದರೆ ನಮ್ಮ ಮನೆಯ ಹುತ್ತರಿಯೇ, ಎಂದೆಂದಿಗೂ ನಮ್ಮನ್ನು ಬಿಟ್ಟು ಹೋಗದಿರು].

ಪೊನ್ನೆರೆನ ಕೆಟ್ಟಿತ್ ...... ಪೊಯಿಲೇ ಪೊಯಿಲೇ
ಕುತ್ತಿ ಕತ್ತಿ ಕೊಂಡಿತ್ .... ಪೊಯಿಲೇ ಪೊಯಿಲೇ
ಕೊಟ್ಟು ಪಾಟು ಆಯಿತ್ ...... ಪೊಯಿಲೇ ಪೊಯಿಲೇ
ಆಣು ಪೊಣ್ಣು ಎಡಮೇಂಗಿ .... ಪೊಯಿಲೇ ಪೊಯಿಲೇ
ಆರತಿ ಬೊಳಕಾಯಿ .... ಪೊಯಿಲೇ ಪೊಯಿಲೇ
ಚೊವ್ಮಂದುಡಿ ಎಡ್‌ತಂಡ್ ...... ಪೊಯಿಲೇ ಪೊಯಿಲೇ
ಆಡಿ ಪಾಡಿ ಪೋಯಿತ್ ... ಪೊಯಿಲೇ ಪೊಯಿಲೇ
ಏಳ್ ಮೂಲೆ ಆಕಡ ...... ಪೊಯಿಲೇ ಪೊಯಿಲೇ
ಕೇಕ್‌ಕ್ ವೊಗವಾಯಿ .... ಪೊಯಿಲೇ ಪೊಯಿಲೇ
ದೇವರ ನೆನೆತಿತ್ .... ಪೊಯಿಲೇ ಪೊಯಿಲೇ
ತಿತ್ತ್‌ಬೊಡಿ ಬೆಚ್ಚಿತ್ ...... ಪೊಯಿಲೇ ಪೊಯಿಲೇ
ಕಳಿ ಕಳಿ ನಟ್ಟಾನ ...... ಪೊಯಿಲೇ ಪೊಯಿಲೇ
ಪೊಲಿ ಪೊಲಿ ಕೊಜ್ಜತ್ ...... ಪೊಯಿಲೇ ಪೊಯಿಲೇ
ಕುತ್ತಿ ಡೊಳ್‌ಲ್‌ಟ್ಟಿತ್ .... ಪೊಯಿಲೇ ಪೊಯಿಲೇ
ಅಲ್ಲಿಂಜಿ ಪೊರಟಿತ್ .. ಪೊಯಿಲೇ ಪೊಯಿಲೇ
ಐಮನೆಕ್ ಪೋಯಿತ್ ಪೊಯಿಲೇ ಪೊಯಿಲೇ
ಪಟ್ಟಿಕೊಟ್ಟ್ ಕೊಂಬರೆ .... ಪೊಯಿಲೇ ಪೊಯಿಲೇ
ಚಕ್ಕೆ ಮಾಂಗೆ ಬಾಳೆಕ್ ...... ಪೊಯಿಲೇ ಪೊಯಿಲೇ
ಪೊನ್ನೆರೆನ ಕೆಟ್ಟಿತ್ ಪೊಯಿಲೇ ಪೊಯಿಲೇ

[ಹಲಸು, ಮಾವು, ಆಲ, ಮುತಾದ ಸೊಪ್ಪುಗಳನ್ನು ಜೋಡಿಸಿ ನೆರೆಕಟ್ಟಿದರು. ಕುತ್ತಿ (ಬಿದಿರ ಅಂಡೆ) ಮತ್ತು ಕತ್ತಿಯನ್ನು ತೆಗೆದುಕೊಂಡರು. ವಾದ್ಯ ಘೋಷಗಳೊಡನೆ ಗಂಡು ಹೆಣ್ಣುಗಳೆಲ್ಲ ಸೇರಿ, ಆರತಿಯ ಬೆಳಕಿನೊಡನೆ, ಹಾಗೂ ದುಡಿಯ ನಾದದೊಡನೆ ಏಳು ಮೂಲೆಗಳುಳ್ಳ ದೊಡ್ಡ ಗದ್ದೆಗೆ ಹೋಗಿ, ಪೂರ್ವಕ್ಕೆ ಮುಖಮಾಡಿ ನಿಂತು, ದೇವರನ್ನು ನೆನೆದರು. ಮೊದಲು ಗುಂಡು ಹಾರಿಸಿ, ನಾಜೂಕಾಗಿ ನೆಡಲ್ಪಟ್ಟಿದ್ದು ಹುಲುಸಾಗಿ ಬೆಳೆದಿದ್ದ ಬೆಳೆಯನ್ನು ಬೇಗಬೇಗನೆ ಕೊಯ್ದು ಕುತ್ತಿಯೊಳಗೆ ಹಾಕಿಕೊಂಡರು. ಅಲ್ಲಿಂದ ಹೊರಟು ಐಮನೆಗೆ ಹೋಗಿ ಮಂಚ, ತೊಟ್ಟಿಲು, ಕೋಣೆ, ದನದ ಕೊಟ್ಟಿಗೆಗಳಿಗೆ ನೆರೆಯನ್ನು ಕಟ್ಟಿದರು.]

ಕೊಡವರ ಮತ್ತೊಂದು ಹಾಡು ಹೀಗೆ ತಿಳಿಸುತ್ತದೆ :

ಮೂಡ್ ನೋಟಿತ್ ಮರ್ಳಾತೆ ಬಾಲಾ ... ಪೊಯಿಲೇ ಪೊಯಿಲೇ
ಮೂಡ್ ಬೋಳ್ತಂಡ್ ಒಳುಲುಂಡ್ ಕಪ್ಪ್ ... ಪೊಯಿಲೇ ಪೊಯಿಲೇ
ಚೆಂಗಾರ ಬಂಗಾರ ಕಣ್‌ಮಯುಕ್ ... ಪೊಯಿಲೇ ಪೊಯಿಲೇ
ಮೂಡಲ್ ಪೊಡಿಯ ಮನೆಪಣಿಕಾರ್ತಿ ... ಪೊಯಿಲೇ ಪೊಯಿಲೇ

(ಮುಖದ ಸೌಂದರ್ಯದಿಂದ ಮರುಳಾಗಬೇಡ. ಏಕೆಂದರೆ, ಮುಖ ಬೆಳ್ಳಗಿದ್ದರೂ ಅಂತರಂಗ ಕಪ್ಪಿರಬಹುದು. ಚಿನ್ನ ಬೆಳ್ಳಿಯ ಆಭರಣಗಳು ಯಾವಾಗಲೂ ಕಣ್ಣನ್ನು ಕುರುಡಾಗಿಸುತ್ತವೆ ಯಾಗಿ ಅವಕ್ಕೆ ಮರುಳಾಗಬೇಡ. ಸರಳ ಉಡುಪಿನ ಯುವತಿಯು ಮನೆಗೆಲಸದಲ್ಲಿ ನಿಸ್ಸೀಮಳಿರಬಹುದು.)

ಕೊಡಗಿನ ಉತ್ತರಕ್ಕೆ ಪಶ್ಚಿಮಘಟ್ಟಗಳ ಕೆಳಗೆ ಕರಾವಳಿ ಭಾಗವನ್ನೊಳಗೊಂಡು ತುಳು ಪ್ರದೇಶವಿದೆ. ತುಳು ಮುಖ್ಯವಾಗಿ ಆಡು ಭಾಷೆ. ಆ ಭಾಗದ ಜನಸಾಮಾನ್ಯರಲ್ಲಿ ತುಳು ಜನಪದಗೀತಗಳು ಸಮೃದ್ಧವಾಗಿವೆ. ಭೂತಾರಾಧನೆ ಎಲ್ಲೆಲ್ಲೂ ಸರ್ವಸಾಮಾನ್ಯ. ಇಂದಿಗೂ ಪ್ರತಿಮನೆಯವರೂ ತಮ್ಮದೇ ಆದ ಭೂತಗಳನ್ನು ಹೊಂದಿರುವರೆಂದು ಹೇಳಲಾಗಿದೆ. ಪ್ರತಿ ಭೂತಕ್ಕೂ ತನ್ನದೇ ಆದ ಇತಿಹಾಸವಿದ್ದು, ಅದು ಜನಪದಗೀತಗಳ ರೂಪದಲ್ಲಿ ಉಳಿದು ಬಂದಿದೆ. ಸಾಮಾನ್ಯವಾಗಿ ಭೂತಾರಾಧಕನು ಆ ದೇವತೆಯ ಪೂಜಾದಿನದಂದು ಹೊರತಾಗಿ, ಬೇರೆ ಸಮಯದಲ್ಲಿ ಆ ಹಾಡನ್ನು ಹಾಡುವುದಿಲ್ಲ. ತುಳುನಾಡಿನ 'ನಲಿಕ್ಕೆ' (ನೃತ್ಯ) ಪುರಾತನವಾದ ಸಮೂಹ ನೃತ್ಯದ ಉಳಿಕೆ. ಡೋಲು ಬಾರಿಸುತ್ತ ಹಾಡು ಹೇಳಿಕೊಂಡು ಹೆಣ್ಣು-ಗಂಡುಗಳು ಗುಂಪುಗೂಡಿ ಕುಣಿಯುತ್ತಾರೆ. 'ದುಡಿ' ಎಂಬ ವಾದ್ಯದೊಂದಿಗೆ ಹೇಳುವ ಹಲವು ಹಾಡುಗಳಿವೆ. ನೇಜಿ (ಬತ್ತದ ಸಸಿ) ನೆಡುವಾಗ ತುಳು ಮಹಿಳೆಯರು 'ಓ ಬೇಲೇ', 'ಲೋಲೋ-ಲೇ-ಲೋ-ಲೋ-ಲೇ' ಇತ್ಯಾದಿ ಪಲ್ಲವಿ ಹಿಮ್ಮೇಳಗಳೊಂದಿಗೆ ಹಲವು ರೀತಿಯ ಹಾಡುಗಳನ್ನು ಹೇಳುವರು.

ಮೇಳ : ಓ ಬೇಲೇ--ಮಾಂತೇರ್ ಪಣ್ಯೇ ಓ ಬೇಲೇ

ಹಾಡು : ಒಂಜ್ಯಪ್ಪೆ ಬಾಲೆಲಾದ್ ಮಾಂತೆರ್ಲ ಪಣ್ಯೇ
ಪತ್ತಪ್ಪೆ ಬಾಲೇಲ್ ಒಂಜ್ಯಪ್ಪೆ ಬಾಲೆಲಾದ್
ಮಾಂತೆರ್ಲ ಪಣ್ಯೇ

ಬಚ್ಚೇಲ್ ಕಳೆವುಂಡ್ ಮೈ ಉಲ್ಲಾಸೊ ಬರ್ಪುಂಡ್
ಪತ್ತಪ್ಪೆ ಬಾಲೇಲ್ ಒಂಜ್ಯಪ್ಪೆ ಬಾಲೆಲಾದ್
ಮಾಂತೆರ್ಲ ಪಣ್ಯೇ

ಸಾದ್ಯೆ ಪೋಪುನಾಕ್ಲೆಗ್ ಕೇಣೊಡು
ದೂರ ಪೋಪುನಾಕ್ಲೆಗ್ ಕೇಣೊಡು
ಪತ್ತಪ್ಪೆ ಬಾಲೇಲ್ ಒಂಜ್ಯಪ್ಪೆ ಬಾಲೆಲಾದ್
ಮಾಂತೆರೆಗ್ಲ ಕೇಣ್ಬೆಲೆಕ್ಕೊ ಪಣ್ಯೇ ಓ ಬೇಲೇ

[ಕೆಲಸ ಮಾಡುತ್ತಾ ಹಾಡಿರಿ, ಹತ್ತು ತಾಯ ಮಕ್ಕಳು ಒಬ್ಬ ತಾಯ ಮಕ್ಕಳಂತೆ ಹಾಡಿರಿ. ದಣಿವು ಕಳೆಯುತ್ತದೆ, ಮೈ ಉಲ್ಲಾಸಗೊಳ್ಳುತ್ತದೆ. ಹತ್ತು ತಾಯ ಮಕ್ಕಳು ಒಬ್ಬ ತಾಯ ಮಕ್ಕಳಂತೆ ಹಾಡಿರಿ. ನೀವು ಹಾಡುವ ಹಾಡು ದಾರಿಯಲ್ಲಿ ಹೋಗುತ್ತಿರುವವರಿಗೆ ಕೇಳಲಿ. ನೀವು ಹೇಳುವ ಹಾಡು ದೂರದಲ್ಲಿ ಹೋಗುತ್ತಿರುವವರಿಗೆ ಕೇಳಲಿ. ಹತ್ತು ತಾಯ ಮಕ್ಕಳು ಒಬ್ಬ ತಾಯ ಮಕ್ಕಳಂತೆ ಒಟ್ಟಾಗಿ ಹಾಡಿರಿ.]

ಕರ್ನಾಟಕದಲ್ಲಿ ಕಾರ್ಕಳ, ಮೂಡಬಿದರೆ, ಶ್ರವಣ ಬೆಳಗೊಳ ಮೊದಲಾದ ಜೈನಧರ್ಮದ ಪ್ರಸಿದ್ಧ ಕೇಂದ್ರಗಳಿದ್ದರೂ ಕನ್ನಡ ಜನಪದ ಸಾಹಿತ್ಯದಲ್ಲಿ ಈ ಧರ್ಮದ ಪ್ರಭಾವ ಅಷ್ಟಾಗಿ ಕಂಡು ಬರುವುದಿಲ್ಲ. ಆದರೆ, ಕನ್ನಡ ನಾಡಿನಲ್ಲಿ ಅತ್ಯಂತ ಜನಪ್ರಿಯವಾಗಿರುವ, ಹಾಗೂ ದೇಶದ ಅಥವಾ ವಿದೇಶದ ಯಾವುದೇ ಭಾಷೆಯ ಅತ್ಯುತ್ತಮ ಗೀತದೊಂದಿಗೆ ಹೋಲಿಸಬಹುದಾದ 'ಗೋವಿನ ಕಥೆ'ಯು—ಅದರ ಕರ್ತೃ ಜೈನನಲ್ಲದಿದ್ದರೂ—ಜೈನಧರ್ಮದ ಮೂಲ ತತ್ತ್ವವಾದ ಸತ್ಯ ಅಹಿಂಸೆಗಳನ್ನು ಬಹಳ ಪರಿಣಾಮಕಾರಿಯಾಗಿ ಪ್ರತಿಪಾದಿಸಿದೆ.

ಜನಪದ ಗೀತಗಳಲ್ಲಿ ಪ್ರತಿಮೆ, ಉಪಮೆ ಮೊದಲಾದವನ್ನು ಧಾರಾಳವಾಗಿ ಉಪಯೋಗಿಸಲಾಗಿದೆ. ಹುಡುಗನೊಬ್ಬ ತನಗೆ ಬಾಯಾರಿಕೆಯಾಗಿದೆ ಎಂದೋ, ಕುಡಿಯಲು ನೀರು ಬೇಕೆಂದೋ ಹುಡುಗಿಯನ್ನು ಕೇಳಿದಾಗ, ಅಥವಾ ಮಾವಿನ ಮರದ ಅಥವಾ ಬಾಳೆಯ ಗಿಡದ ಕೆಳಗೆ ವಿಶ್ರಮಿಸಿಕೊಳ್ಳುವ ಅಪೇಕ್ಷೆ ವ್ಯಕ್ತಪಡಿಸಿದಾಗ, ಅವನು ಆ ಹುಡುಗಿಗೆ ತನ್ನ ಪ್ರೇಮವನ್ನು ಸೂಚಿಸುತ್ತಾನೆ. ಮೋಡ, ಮಳೆ, ಗುಡುಗು ಸಿಡಿಲುಗಳು ಪ್ರೇಮ–ಅನುರಾಗಗಳ ಹರಿಕಾರರು.

"ಗುಡು ಗುಡುಗುಟ್ಟಿತು, ಗುಡ್ಡದ ಮೇಲೆ ಮಿಂಚಿತು ! ಬೇಲೂರ ಮೇಲೆ ಮಳೆ ಬಿತ್ತು" ಧಾರಾಕಾರವಾಗಿ ಸುರಿದ ಆ ಮಳೆಯಿಂದಾದ ಅನಾಹುತವೆ ಎಲ್ಲೆಲ್ಲಿಯೂ ಕೇಳಿ ಬರುತ್ತಿತ್ತು. ಪ್ರವಾಹದಲ್ಲಿ ಪಟ್ಟಣ ಶೆಟ್ಟಿಯ ಮಗ ಕೊಚ್ಚಿ ಹೋದನೆಂದು ಕೆರೆಯ ಬಳಿ ಹೆಂಗುಸರು ಮಾತಾಡಿಕೊಳ್ಳುತ್ತಿದ್ದುದನ್ನು ಕೇಳಿದ ಬಾಲೆಯೊಬ್ಬಳು ಹೊತ್ತಿದ್ದ ಗಡಿಗೆಯನ್ನು ಎತ್ತಿ ಹಾಕಿ, ಗಟ್ಟಿಯಾಗಿ ಅಳತೊಡಗಿದಳು. ಗಡಿಗೆ ಒಡೆದು ಹೋದುದಕ್ಕಾಗಿ ಅವಳು ದುಃಖಿಸುತ್ತಿರುವಳೆಂದು ಭಾವಿಸಿದ ಅವಳ ಸಂಗಾತಿಗಳು ಅವಳಿಗೆ ಈ ರೀತಿ ಸಮಾಧಾನ ಹೇಳಿದರು.

> ಚಿನ್ನದ ಕೊಡನಲ್ಲ ರನ್ನದ ಕೊಡನಲ್ಲ
> ಮಣ್ಣಿನ ಕೊಡಕ್ಯಾಕಿಷ್ಟು ಅಳುತೀಯೆ ?

ಅದಕ್ಕೆ ಆ ಹುಡುಗಿಯ ಉತ್ತರ :

> ಅತ್ತೆ ಕಾಣದ ಹಾಗೆ ಮಾವ ನೋಡದ ಹಾಗೆ
> ಒಪ್ಪದಲಿ ನಾನು—ಬಳಸಿದ್ದೆ
> ಒಪ್ಪದಲಿ ನಾನು ಬಳಸಿದಂಥ ಹರವಿ
> ನುಚ್ಚಾಯ್ತು ನೀರ—ಹೊಳೆಯಾಗೆ

ಆ ಹುಡುಗಿ ತನ್ನ ದುಃಖಕ್ಕೆ ನಿಜವಾದ ಕಾರಣವನ್ನೇ ತಿಳಿಸಿದಳು. ನೀರ ಹೊಳೆ (ನೀರಿನ ಪ್ರವಾಹ)ಯಲ್ಲಿ ನುಚ್ಚಾದ 'ಹರವಿ' ಅವಳು ಪ್ರೀತಿಸಿದ್ದ ಪಟ್ಟಣ ಶೆಟ್ಟಿಯ ಮಗನನ್ನೇ ಸೂಚಿಸಿದರೂ ಮಾತಿನ ದ್ವಂದ್ವಾರ್ಥದಿಂದ ಅವಳ ಜೊತೆಯವರಿಗೆ ನಿಜಸ್ಥಿತಿ ತಿಳಿಯದೆ ಹೋಯಿತು.

ಕರ್ನಾಟಕದ ಅಪಾರವಾದ ಹಾಗೂ ವೈವಿಧ್ಯಮಯವಾದ ಸುಂದರ ಜನಪದ ಗೀತಗಳ ಅಮೂಲ್ಯ ಭಂಡಾರದಿಂದ ಕೇವಲ ಕೆಲವು ಉದಾಹರಣೆಗಳನ್ನು ಮಾತ್ರ ಇಲ್ಲಿ ಕೊಡಲು ಸಾಧ್ಯವಾಗಿದೆ. ಭಿನ್ನತೆಯಲ್ಲಿ ಮೂಡಿ ಬಂದಿರುವ ಏಕತೆಯೇ ನಮ್ಮ ಸಂಸ್ಕೃತಿಯ ಹಿರಿಮೆ. ಒಂದೇ ಬುಡದ ತಾಳನ್ನು ಆಧರಿಸಿ, ಒಂದೇ ನೆಲದ ಸಾರವನ್ನು ಸಮಾನವಾಗಿ ಪಡೆದು, ಬೆಳೆಯುವ ದೊಡ್ಡ ಮರವೊಂದರ ಹಲವಾರು ಕೊಂಬೆಗಳಂತಿರುವ ನಮ್ಮ ಜನರು ಹಲವು ಪಂಗಡ-ಉಪ ಪಂಗಡಗಳಾಗಿ ಒಡೆದಿದ್ದರೂ, ಎಲ್ಲರೂ ಒಂದೇ ತಾಯ ಮಕ್ಕಳಂತಿರುವರೆಂಬುದನ್ನು ಈ ಸಾಹಿತ್ಯ ವ್ಯಕ್ತಪಡಿಸುತ್ತದೆ.

ಯಾವ ಆಡಂಬರವೂ ಇಲ್ಲದೆ, ಸರಳತೆಯೇ ಮೈವೆತ್ತಂತಿರುವ ಈ ಜನಪದ ಗೀತಗಳು ಕರ್ನಾಟಕದಲ್ಲಿ ಜನತೆಯ ಭಾವೈಕ್ಯವನ್ನು ಸಾಧಿಸುವುದರಲ್ಲಿ ಸಂಪೂರ್ಣ ಯಶಸ್ವಿಯಾಗಿರುವುವು.

ಮೂಲ ಲೇಖಕರು ಮತ್ತು ಅನುವಾದಕರು : ಶ್ರೀ ಮತಿಘಟ್ಟ ಕೃಷ್ಣಮೂರ್ತಿ

# 2. ಕರ್ನಾಟಕದಲ್ಲಿ ದಖ್ನಿ ಮತ್ತು ಉರ್ದು ಸಾಹಿತ್ಯ

ಭಾರತದಲ್ಲಿ ಹುಟ್ಟಿ ಬೆಳೆದ ಉರ್ದುಭಾಷೆಯು ಇಂಡೋ-ಯೂರೋಪಿಯನ್ ಭಾಷಾವಂಶಕ್ಕೆ ಸೇರಿದ್ದು. ಹತ್ತು ಶತಮಾನಗಳ ಹಿಂದೆ ಪರ್ಷಿಯನ್ ಭಾಷೆಯನ್ನಾಡುತ್ತಿದ್ದ ಮುಸ್ಲಿಮರು ಇರಾನ್ ಆಫ್ಘಾನಿಸ್ಥಾನಗಳಿಂದ ಭಾರತಕ್ಕೆ ಬಂದು ನೆಲಸಿದರು. ಆಗ ದೆಹಲಿಯ ಸುತ್ತ ಮುತ್ತ ಪ್ರದೇಶಗಳಲ್ಲಿ ಪ್ರಚಲಿತವಾಗಿದ್ದ ಶೌರಸೇನಿ ಪ್ರಾಕೃತದಿಂದ ಇದು ಹುಟ್ಟಿತು. ಡೆಲ್ಲಿ, ಪಂಜಾಬುಗಳಲ್ಲಿ ಬಳಕೆಯಲ್ಲಿರುವ ಖಡೀಬೋಲಿ ಮತ್ತು ವ್ರಜಭಾಷೆಗಳು ಹುಟ್ಟಿದುದೂ ಈ ಉಪಭಾಷೆಯಿಂದಲೇ. ಹೊಸ ಪ್ರದೇಶಕ್ಕೆ ವಲಸೆ ಬಂದ ಜನರು ಅಲ್ಲಿದ್ದ ಜನರೊಡನೆ ವ್ಯವಹರಿಸುವ ಸಲುವಾಗಿ ಆ ಜನ ಬಳಸುತ್ತಿದ್ದ ಭಾಷಾ ಭೇದವನ್ನು ತಾವೂ ಬಳಸಿದರು. ಕ್ರಿ. ಶ. 1193ರಲ್ಲಿ ದೆಹಲಿಯಲ್ಲಿ ಮುಸ್ಲಿಮರ ಆಡಳಿತ ಸ್ಥಾಪಿತವಾದ ಮೇಲೆ ಆ ಭಾಷೆಗೆ ಪರ್ಷಿಯನ್ ಶಬ್ದಗಳು ಸೇರಿದುವು. ಬರಹಕ್ಕೆ ಪರ್ಷಿಯನ್ ಲಿಪಿಯನ್ನು ಬಳಸಲಾಯಿತು. ದೆಹಲಿ ಮತ್ತು ಅದರ ಪೂರ್ವ ಉತ್ತರ ಭಾಗಗಳ ಪ್ರದೇಶಗಳಲ್ಲಿ ಬಳಕೆಯಲ್ಲಿದ್ದ ಖಡೀಬೋಲಿ, ವ್ರಜಭಾಷೆ, ಹರ್‍ಯಾನಿಗಳು ಇದರ ಮೇಲೆ ಗಮನಾರ್ಹವಾದ ಪ್ರಭಾವ ಬೀರಿದುವು. ಇದೆಲ್ಲದರ ಪರಿಣಾಮವಾಗಿ ಮುಂಚಿನ ಭಾಷಾಭೇದ ಒಂದು ಹೊಸ ಸ್ವರೂಪವನ್ನು ತಾಳಿತು. ಇದು ಹೀಗೆ ಹೊಸರೂಪಕ್ಕೆ ತಿರುಗುತ್ತಿದ್ದ ಕಾಲದಲ್ಲಿ ಸುಮಾರು ಮೂರು ಶತಮಾನಗಳ ವರೆಗೆ ಕೇವಲ ಆಡುಮಾತಾಗಿ ಬಳಕೆಯಲ್ಲಿತ್ತು. ಭಾರತದಲ್ಲಿ ಆಗಿಹೋದ ಬಹುಶ್ರೇಷ್ಠ ಪರ್ಷಿಯನ್ ಕವಿ ಅಮೀರ್ ಖುಸ್ರು (ಹನ್ನೆರಡನೆಯ ಶತಮಾನದ ಆದಿಯಲ್ಲೇ) ಅದರಲ್ಲಿ ಕಾವ್ಯರಚನೆ ಮಾಡಿದ್ದನ್ನು ಬಿಟ್ಟರೆ ಈ ಭಾಷೆ ಸಾಹಿತ್ಯೋದ್ದೇಶಗಳಿಗೆ ಆಗ ಬಳಕೆಯಾಗಲೇ ಇಲ್ಲ. ಈ ಹೊಸ ಭಾಷೆ ಹಿಂದಿ ಎಂದೂ ಹಿಂದವಿ ಎಂದೂ ಕರೆಸಿಕೊಂಡಿತು. ಪರ್ಷಿಯಾ ಪರದೇಶ ತಾನೆ? ಇದು ಪರ್ಷಿಯಾದ್ದಲ್ಲ—ಭಾರತದ್ದು ಎಂದು ಹೇಳುವುದೇ ಈ ಹೆಸರಿನ ಉದ್ದೇಶ. ಆ ಕಾಲದಲ್ಲಿ ಹಿಂದಿ ಹೆಸರು ಇದಕ್ಕಲ್ಲದೆ ಬೇರಾವ ಭಾಷೆಗೂ ಅನ್ವಯವಾಗುತ್ತಿರಲಿಲ್ಲ.

ಹದಿಮೂರನೆಯ ಶತಮಾನದ ಕೊನೆಯ ದಶಕಗಳಲ್ಲಿ ಉತ್ತರ ಭಾರತದಿಂದ ಸೂಫಿ ಸಂತರು ಮತ್ತು ವ್ಯಾಪಾರಿಗಳು ಗುಜರಾತ್ ಮೂಲಕವಾಗಿ ಉತ್ತರ ಕರ್ನಾಟಕಕ್ಕೆ ಮತ್ತು ದಖ್ಖನ್ನಿನ ಸುತ್ತಮುತ್ತಲಿನ ಇತರ ಕೆಲವು ಪ್ರದೇಶಗಳಿಗೆ ಬಂದರು. ಈ ಭಾಗಗಳ ಮೇಲೆ ಉತ್ತರದಿಂದ ಸೈನಿಕದಾಳಿಗಳು ಆಗುವ ಮುಂಚೆಯೇ ಅವರು ಇಲ್ಲಿಗೆ ಬಂದರು. ಬರುವಾಗ ತಮ್ಮೊಡನೆ ಈ ಭಾಷೆಯನ್ನೂ ತಂದರು. ಅನಂತರ ನಡೆದ ಖಿಲ್ಜಿ ದಾಳಿಗಳು ಮತ್ತು ದೆಹಲಿಯಿಂದ ದೌಲತಾಬಾದಿಗೆ ರಾಜಧಾನಿಯನ್ನು ಬದಲಾಯಿಸುವ ತೊಗಲಖನ ಯೋಜನೆ ಈ ಭಾಷೆಯನ್ನಾಡುವ ಜನರ ಪ್ರವಾಹವೇ ದಕ್ಷಿಣಕ್ಕೆ ಹರಿಯುವಂತೆ ಮಾಡಿತು. ಕಡೆಗೆ ಕ್ರಿ.ಶ. 1347ರಲ್ಲಿ ಗುಲ್ಬರ್ಗದಲ್ಲಿ ಬಹಮನಿ ಆಡಳಿತ ಸ್ಥಾಪನೆಯಾದ ಮೇಲೆ.ಅದಕ್ಕೆ ಇಲ್ಲಿ ದೃಢವಾದ ಬುನಾದಿ ಬಿದ್ದು ಇಲ್ಲಿಯೇ ಪೂರ್ತಿ ನೆಲೆನಿಂತುಬಿಟ್ಟಿತು. ಕಳೆದ ನಾಲ್ಕು ಶತಮಾನಗಳ ಕಾಲ ಉತ್ತರ ಕರ್ನಾಟಕದಲ್ಲಿ ಅದು ತನ್ನ ಪೂರ್ಣರೂಪಕ್ಕೆ ಬೆಳೆದು ಅಲ್ಲಿಯ ಮತ್ತು ದಖ್ಖನ್ನಿನ ಅಕ್ಕಪಕ್ಕದ ಪ್ರದೇಶಗಳ ಶಿಷ್ಟಭಾಷೆಯಾಗಿ ರೂಪಗೊಂಡಿತು. ಈ ಪ್ರದೇಶದಲ್ಲಿಯೇ ಬಹಳ ಉತ್ತಮ ಮಟ್ಟದ್ದೆನಿಸಿದ ಮತ್ತು ಅನೇಕ ಅಂಶಗಳಲ್ಲಿ ಅಮೂಲ್ಯವೆನಿಸಿದ ದಖ್ನಿ ಸಾಹಿತ್ಯದ ನಿರ್ಮಾಣವಾದದ್ದು. ಉತ್ತರ ಕರ್ನಾಟಕದ ಗುಲ್ಬರ್ಗ, ಬೀದರ್, ಬಿಜಾಪುರಗಳಲ್ಲಿ ಹತ್ತು ಶತಮಾನಗಳ ವರೆಗೆ ವೈಭವದಿಂದ ಆಳಿದ ಬಹಮನಿ ಮತ್ತು ಆದಿಲ್‌ಷಾಹಿ ಸುಲ್ತಾನರು ಅದನ್ನು ಆಸ್ಥಾನಭಾಷೆಯ ಮಟ್ಟಕ್ಕೇರಿಸಿದ್ದಲ್ಲದೆ ಆಡಳಿತ ಕಾರ್ಯಗಳಿಗೂ ಬಳಸಿದರು

ಅದು ಉತ್ತರ ಕರ್ಣಾಟಕದಲ್ಲಿ ಮತ್ತು ದಖನ್ನಿನ ಸುತ್ತಮುತ್ತಲ ಭಾಗಗಳಲ್ಲಿ ಇರುವ ಸಾಮಾನ್ಯ ಜನರ ಆಡುಮಾತೂ ಆಯಿತು. ಉತ್ತರ ಭಾರತದಲ್ಲಿ ಮಾತ್ರ ಹೀಗಾಗಲಿಲ್ಲ. ಬದಲಾಗಿ ಮುಂದೆಯೂ ಮೂರು ಶತಮಾನಗಳ ವರೆಗೆ ಅದು ಕೇವಲ ಆಡುಮಾತಾಗಿಯೇ ಮುಂದುವರಿಯಿತು. ಒಂದೇ ಭಾಷೆ ಉತ್ತರ ಭಾರತ ಮತ್ತು ದಕ್ಷಿಣಭಾರತಗಳಲ್ಲಿ ಎರಡು ಪ್ರತ್ಯೇಕರೀತಿಗಳಲ್ಲಿ ಬೆಳೆಯಿತು. ಇವೆರಡೂ ಪರಸ್ಪರ ಭಿನ್ನವಾದ ಅನೇಕ ಅಂಶಗಳಿಂದ ಕೂಡಿವೆ. ದೆಹಲಿ, ಆಗ್ರಾ ಮತ್ತು ಲಕ್ನೋಗಳಲ್ಲಿ ಈ ಭಾಷೆ ಪರ್ಷಿಯನ್ ಮತ್ತು ವ್ರಜ ಭಾಷೆಗಳ ಪ್ರಭಾವಕ್ಕೆ ಒಳಗಾಯಿತು. ಅದು ಪರ್ಷಿಯನ್ ಭಾಷೆಯಿಂದ ಮುಖ್ಯವಾಗಿ ನಾಮಪದಗಳನ್ನೂ ಪಾರಿಭಾಷಿಕ ಪದಗಳನ್ನೂ ಸ್ವೀಕರಿಸಿತು. ಷಾಜಹಾನನ ಕಾಲದಿಂದ ಅದಕ್ಕೆ ಉರ್ದುಭಾಷೆ ಎಂಬ ಹೆಸರು ಬಂತು. ಅಲ್ಲಿಯ ಕವಿಗಳು ಅದನ್ನು 'ರಿಖ್ತ' ಎಂಬ ಹೆಸರಿನಿಂದ ಕರೆದರು. ಯೂರೋಪಿಯನ್ನರು ಅದನ್ನು ಹಿಂದೂಸ್ಥಾನಿ ಎಂದು ಹೆಸರಿಸಿದರು. ಕರ್ಣಾಟಕದಲ್ಲಿ ಅದು ಮರಾಠಿ ಮತ್ತು ಗುಜರಾತಿ ಭಾಷೆಗಳ ಪ್ರಭಾವದಡಿಯಲ್ಲಿ ಬೆಳೆಯಿತು. ಇದರಲ್ಲಿ ಭಾಷೆಯ ಮೂಲ ಸ್ವರೂಪವೇ ಉಳಿಯಿತು; ಅಷ್ಟೇ ಅಲ್ಲ, ಪರ್ಷಿಯನ್ ಭಾಷೆಯ ಪ್ರಭಾವಕ್ಕೂ ಈ ಭಾಷಾಭೇದ ಅಷ್ಟಾಗಿ ಒಳಗಾಗಲಿಲ್ಲ. ದಖನ್ ಮತ್ತು ಅಲ್ಲಿ ವಾಸಿಸುವ ದಖ್ನಿ ಜನರೇ ಕಾರಣವಾಗಿ ಇದಕ್ಕೆ ದಖ್ನಿ ಎಂಬ ಹೆಸರು ಬಂತು. ಪರದೇಶೀಯರಿಂದ—'ಅಫಕಿಸ್'' ಎಂದರೆ ಪರದೇಶೀಯವಾದ ಪರ್ಷಿಯನ್, ಅರೇಬಿಕ್ ಭಾಷೆಗಳನ್ನಾಡುತ್ತಿದ್ದ ಇರಾನಿಯನ್ನರು, ಆಫ್ಘನ್ನರು, ಅಬಿಸೀನಿಯನ್ನರು, ಅರಬರು—ಇವರಿಂದ ಭಿನ್ನರಾದ ದಖನ್ನಿಗಳ ಮಾತೃಭಾಷೆಯಾಗಿ ಇದು ಪರಿಗಣಿತವಾಯಿತು. ಹೀಗೆ ಉರ್ದು, ದಖ್ನಿಗಳೆರಡೂ ಭಿನ್ನ ಭಿನ್ನ ಆವರಣಗಳಲ್ಲಿ ಬೆಳೆದ ಪರಸ್ಪರ ಪ್ರತ್ಯೇಕವಾದ ಒಂದೇ ಭಾಷೆಯ ಎರಡು ಭೇದಗಳು. ಕೆಲವರು ವಿದ್ವಾಂಸರೇನೋ ದಖ್ನಿಯನ್ನು ಹಳೆಯ ಉರ್ದು ಎಂದು ಅಭಿಪ್ರಾಯಪಡುತ್ತಾರೆ.

ಕರ್ಣಾಟಕದ ದಖ್ನಿ ಸಾಹಿತ್ಯವು ಉತ್ತರದ ಉರ್ದು ಸಾಹಿತ್ಯಕ್ಕಿಂತ ಮೂರು ಶತಮಾನ ಕಾಲ ಹಳೆಯದು. ಈ ದೀರ್ಘಕಾಲದ ಸಾಹಿತ್ಯ ಚಟುವಟಿಕೆಗಳ ಅನಂತರ ತುಂಬ ಸುಂದರವೂ ಮಧುರವೂ ಆದ ದಖ್ನಿಯ ಕಾವ್ಯ ದೆಹಲಿಯನ್ನು ತಲಪಿತು. ಕಾವ್ಯದ ದೃಷ್ಟಿಯಿಂದ ಪರ್ಷಿಯನ್ ಭಾಷೆಯೇ ಹಿರಿಯದೆಂದು ಭಾವಿಸಿದ್ದ ಅಲ್ಲಿಯ ಕವಿಗಳು ತಾವು ಆ ವರೆಗೆ ಸಾಮಾನ್ಯಭಾಷೆಯೆಂದು ಭಾವಿಸಿದ್ದ ಉರ್ದುವಿನ ಘನತೆಯನ್ನು ಮನಗಂಡರು. ತಾವು ಆ ಭಾಷೆಯಲ್ಲೇ ಕಾವ್ಯರಚನೆ ಮಾಡಲು ಆರಂಭಿಸಿದರು. ಕ್ರಿ.ಶ. 1682ರಲ್ಲಿ ಔರಂಗಜೇಬನು ದಕ್ಷಿಣವನ್ನು ಗೆದ್ದ ಕೂಡಲೆ ಇದೆಲ್ಲ ನಡೆಯಿತು. ದಕ್ಷಿಣದಿಂದ ಉತ್ತರಕ್ಕೆ ಉತ್ತರದಿಂದ ದಕ್ಷಿಣಕ್ಕೆ ಕವಿಗಳು ಮತ್ತು ವಿದ್ವಾಂಸರು ಪ್ರವಾಸ ಮಾಡಲಾರಂಭಿಸಿದರು. ದಖ್ನಿ ಕಾವ್ಯ ಉತ್ತರಕ್ಕೆ ಹೋಯಿತು. ಉತ್ತರದ ಉರ್ದುಭಾಷೆ ದಕ್ಷಿಣಕ್ಕೆ ಬಂದು ಕ್ರಮೇಣ ದಖ್ನಿಯ ಸ್ಥಾನವನ್ನು ತಾನೇ ಆಕ್ರಮಿಸಿಬಿಟ್ಟಿತು. ಕರ್ಣಾಟಕದಲ್ಲಿ ದಖ್ನಿ ಮತ್ತು ಉರ್ದುಭಾಷೆಗಳಲ್ಲಿ ನಡೆದ ಸಾಹಿತ್ಯ ಚಟುವಟಿಕೆಗಳ ಕಾಲ ಆರು ಶತಮಾನಗಳಷ್ಟು ದೀರ್ಘವಾದದ್ದಾಗಿದ್ದು ಅದನ್ನು ಕೆಳಕಂಡಂತೆ ನಾಲ್ಕು ಭಾಗಗಳಾಗಿ ವಿಂಗಡಿಸಬಹುದು : ಬಹಮನಿಯವರ ಕಾಲ (1347-1525), ಮೊಗಲರ ಕಾಲ (1686-1750), ಹೈದರ್ ಮತ್ತು ಟಿಪ್ಪು ಸುಲ್ತಾನರ ಕಾಲ (1761-1799), ಮೈಸೂರು ಮಹಾರಾಜರುಗಳ ಕಾಲ (1799 ರಿಂದ ಈಗಿನ ವರೆಗೆ).

ಸುಮಾರು ನಾಲ್ಕು ಶತಮಾನಗಳ ಕಾಲ ಉತ್ತರ ಕರ್ಣಾಟಕವನ್ನಾಳಿದ ಗುಲ್ಬರ್ಗದ ಬಹಮನಿ ಸುಲ್ತಾನರು ಮತ್ತು ಬಿಜಾಪುರದ ಆದಿಲ್‌ಷಾಹಿ ಸುಲ್ತಾನರು ವಿದ್ಯೆ, ಸಾಹಿತ್ಯ, ಶಿಲ್ಪಗಳಿಗೆ ಆಶ್ರಯದಾತರಾಗಿದ್ದರು. ಆ ಸುಲ್ತಾನರಲ್ಲಿ ಅನೇಕರು ಸ್ವತಃ ವಿದ್ವಾಂಸರೋ ಕವಿಗಳೋ ಕಲಾವಿದರೋ ಆಗಿದ್ದರು. ಅವರ ಮಂತ್ರಿಗಳು ಕೂಡ ವಿದ್ಯೆ ಸಾಹಿತ್ಯಗಳಿಗೆ ಪ್ರೋತ್ಸಾಹಕೊಡುವ ವಿಷಯದಲ್ಲಿ ತುಂಬ ಆಸಕ್ತಿ ಹೊಂದಿದವರಾಗಿದ್ದು ವಿದ್ವಾಂಸರಿಗೂ ಸಾಹಿತಿಗಳಿಗೂ ಆಶ್ರಯಕೊಟ್ಟಿದ್ದರು. ಅವರ ಔದಾರ್ಯ, ಉಪಕಾರಬುದ್ಧಿಗಳಿಂದ ಆಕರ್ಷಿತರಾಗಿ ದೂರ ದೂರದ ಸ್ಥಳಗಳಲ್ಲಿದ್ದ ವಿದ್ವಾಂಸರು,

ಕವಿಗಳು, ಕಲಾವಿದರು ಅವರಲ್ಲಿಗೆ ಬಂದರು. ಹೀಗೆ ಬಂದವರು ಸೃಷ್ಟಿಸಿದ ಕಲೆ ಇಂದಿಗೂ ಸುಲ್ತಾನರ ಹಿರಿತನಕ್ಕೆ ಶಾಶ್ವತ ಸ್ಮಾರಕಗಳಾಗಿವೆ. ಅವರ ಆಸ್ಥಾನದಲ್ಲಿ ಪರ್ಷಿಯನ್ ದಖ್ನಿಗಳೆರಡೂ ಬೆಳೆದವು. ಅವರಿಂದ ಆಶ್ರಯಪಡೆದ ಆಸ್ಥಾನ ಚರಿತ್ರಕಾರರು, ಆಸ್ಥಾನ ಕವಿಗಳು ಮತ್ತು ಮಲಿಕುಷ್ ಶೋರಾಗಳು (ಸ್ಥಾನೀಯ ಕವಿಗಳು) ಸುಲ್ತಾನರ ಹೆಸರನ್ನು ಮತ್ತು ಕೃತಿಗಳನ್ನು ಚಿರಾಯುವಾಗಿ ಮಾಡಿದ್ದಾರೆ. ಈ ಸುಲ್ತಾನರ ಕಾಲದಲ್ಲಿ ದಖ್ನಿ ರಾಜ್ಯಭಾಷೆಯಾಯಿತು; ಉತ್ತರ ಕರ್ಣಾಟಕದ ವ್ಯಾವಹಾರಿಕ ಭಾಷೆಯೂ ಆಯಿತು; ಅಲ್ಲದೆ ಇನ್ನಷ್ಟು ದಕ್ಷಿಣಕ್ಕೆ ಹರಡಿತು. ಕವಿಗಳೂ ಲೇಖಕರೂ ಅದನ್ನು ತಮ್ಮ ಸಾಹಿತ್ಯ ಮಾಧ್ಯಮವಾಗಿ ಬಳಸಿದರು. ಈ ಕಾಲದಲ್ಲಿ ಕರ್ಣಾಟಕದಲ್ಲಿ ಸೃಷ್ಟಿಯಾದ ಶ್ರೀಮಂತ ದಖ್ನಿ ಸಾಹಿತ್ಯ ಕರ್ಣಾಟಕ ಹೆಮ್ಮೆಪಡಬಹುದಾದ ಮತ್ತು ಅನೇಕ ಅಂಶಗಳಲ್ಲಿ ಅಸಮಾನವಾದ ಆಸ್ತಿಯಾಗಿದೆ.

ಬಹಮನಿ ಸುಲ್ತಾನನಾದ ಮೊದಲನೆ ಮಹಮದ್ ಷಹನಿಗೆ (1375) ಕಾವ್ಯದ ಬಗ್ಗೆ ಎಷ್ಟು ಆಸಕ್ತಿ ಇತ್ತೆಂದರೆ ಶ್ರೇಷ್ಠಕವಿಯಾದ ಶೀರಾಜ್ ಹಾಫೀಜನನ್ನು ತನ್ನ ಆಸ್ಥಾನಕ್ಕೆ ಆಹ್ವಾನಿಸಿದ್ದನು. ಹಾಫೀಜ್ ಪ್ರಯಾಣ ಹೊರಟರೂ ಸಮುದ್ರ ಪ್ರಯಾಣ ಮಾಡುವುದು ಸಾಧ್ಯವಾಗಲಿಲ್ಲ. ಅವನು ಸುಲ್ತಾನನಿಗೆ ಶ್ರೇಷ್ಠ ಪ್ರಗಾಥವೊಂದನ್ನು ಕಾಣಿಕೆಯಾಗಿ ಕಳಿಸಿಕೊಟ್ಟ. ಸುಲ್ತಾನನು ಅದಕ್ಕೆ ಪ್ರತಿಯಾಗಿ ಧನರೂಪದ ಬಹುಮಾನವನ್ನು ಕಳಿಸಿಕೊಟ್ಟನು.

ಬಹಮನಿಯ ಫಿರೋಜ್ ಷಹನು (ಕ್ರಿ.ಶ. 1436) ಬಹಳ ಹಿರಿಯ ವಿದ್ವಾಂಸನೂ ಕವಿಯೂ ಆಗಿದ್ದ. ಅವನು ಪ್ರಾಧ್ಯಾಪಕನಾಗಿ ವಿದ್ಯಾಸಂಸ್ಥೆಗಳಲ್ಲಿ ಸಾಹಿತ್ಯವನ್ನು ಕುರಿತು ಉಪನ್ಯಾಸಗಳನ್ನು ಮಾಡುತ್ತಿದ್ದ. ದಖ್ನಿ ಸಂಸ್ಕೃತಿಗೆ ಅಡಿಪಾಯ ಹಾಕಿದವನೇ ಅವನು. ಬಂದೇ ನವಾಜ್ ಗೇಸು ದರಾಜ್ ಎಂದು ಜನಪ್ರಿಯನಾಗಿದ್ದ ಹಿರಿಯ ಸೂಫಿ ಸಂತ ಸಯ್ಯದ್ ಮುಹಮದ್ ಹುಸೇನಿಯು ಫಿರೋಜ್‌ಷಹ ಆಳುತ್ತಿದ್ದಾಗ ತನ್ನ ಶಿಷ್ಯನೊಂದಿಗೆ ಕ್ರಿ.ಶ. 1411 ರಲ್ಲಿ ಗುಲ್ಬರ್ಗಕ್ಕೆ ಬಂದ. ಅವನಿಗೆ ರಾಜೋಚಿತವಾದ ಸ್ವಾಗತವನ್ನು ನೀಡಿ ಅಲ್ಲಿಯೇ ಉಳಿಯಲು ಎಲ್ಲ ಅನುಕೂಲತೆಗಳನ್ನೂ ಮಾಡಿಕೊಡಲಾಯಿತು. ಕ್ರಿ.ಶ. 1422ರ ವರೆಗೆ ಎಂದರೆ ತನ್ನ ಕೊನೆಗಾಲದ ವರೆಗೆ ಅವನು ಅಲ್ಲಿಯೇ ಉಳಿದ. ಅವನ ಅಂತ್ಯಸಂಸ್ಕಾರವಾದುದೂ ಗುಲ್ಬರ್ಗದಲ್ಲಿಯೇ. ಅಲ್ಲಿ ನಡೆಯುವ ವಾರ್ಷಿಕ ಅಂತ್ಯದಿನಾಚರಣೆ (ಉರುಸ್)ಗೆ ಈಗಲೂ ಅವನ ಗೋರಿಯು ಸಹಸ್ರಾರು ಜನಗಳನ್ನು ಆಕರ್ಷಿಸುತ್ತದೆ. ಅವನು ಆಸ್ಥಾನಿಕರ ಮೇಲೂ ಜನತೆಯ ಮೇಲೂ ತುಂಬ ಪ್ರಭಾವ ಬೀರಿದ್ದ. ಅರೇಬಿಕ್, ಪರ್ಷಿಯನ್‌ಗಳಲ್ಲಿ ಶ್ರೇಷ್ಠ ವಿದ್ವಾಂಸನಾಗಿದ್ದುದಲ್ಲದೆ ಸಂಸ್ಕೃತವನ್ನೂ ಅವನು ಚೆನ್ನಾಗಿ ತಿಳಿದಿದ್ದ. ದಖ್ನಿ ಮತ್ತು ಉರ್ದು ಸಾಹಿತ್ಯ ಗಳಲ್ಲಿ ದೊರೆಯುವ ಅತ್ಯಂತ ಪ್ರಾಚೀನಕಾವ್ಯ ಮತ್ತು ಗದ್ಯಬರಹಗಳ ಕರ್ತೃ ಅವನೇ. ಈ ಭಾಷೆಯಲ್ಲಿ ಮೊದಲು ಸಾಹಿತ್ಯಕೃಷಿಯಾದದ್ದು ಇಲ್ಲಿ ಎಂಬುದು ಕರ್ಣಾಟಕಕ್ಕೆ ಹೆಮ್ಮೆಯ ವಿಷಯ. ಈ ಸಂತ ಪರ್ಷಿಯನ್ ಮತ್ತು ದಖ್ನಿ ಭಾಷೆಗಳಲ್ಲಿ ಸೂಫಿ ಮತದ ಕುರಿತು ಅನೇಕ ಗ್ರಂಥಗಳನ್ನು ಬರೆದ. ಇವು ಗದ್ಯ ಪದ್ಯ ಎರಡರಲ್ಲೂ ಇವೆ. ಇವುಗಳಲ್ಲಿ ಬಹುಪಾಲು ಅಚ್ಚಾಗಿದೆ. 'ಮೇರಾಜುಲ್ ಆಶಖೀನ್' ಎಂಬ ಬರಹ ದಖ್ನಿಯಲ್ಲಿ ಅವನು ರಚಿಸಿರುವ ಕೃತಿಗಳೆಲ್ಲೆಲ್ಲ ಶ್ರೇಷ್ಠವಾದದ್ದು. ಬಹಮನಿ ರಾಜ್ಯದ ಕಾಲದಲ್ಲಿಯೇ ಬೀದರಿನಲ್ಲಿ ಆಗಿ ಹೋದ ನಿಜಾಮಿ ಎಂಬ ಇನ್ನೊಬ್ಬ ಕವಿ 'ಮಸ್ನವಿ ಕದಮ್ ರಾವ್ ಪದಮ್' ಎಂಬ ಮೊತ್ತಮೊದಲ ವರ್ಣನಾತ್ಮಕ ಭಾವಗೀತದ ಕರ್ತೃ. ಮುಷ್ತಾಕ್, ಲುಟ್‌ಫೀ ಫಿರೋಜ್ ಮತ್ತು ಅಷ್‌ರಫ್—ಇವರು ಈ ಕಾಲದ ಇತರ ಮುಖ್ಯ ಕವಿಗಳು.

ಕ್ರಿ.ಶ. 1682–86ರಲ್ಲಿ ಮೊಗಲರು ಬಿಜಾಪುರದ ಮೇಲೆ ಆಕ್ರಮಣ ನಡೆಸಿ ಅದನ್ನು ಮೊಗಲ್ ಚಕ್ರಾಧಿಪತ್ಯಕ್ಕೆ ಸೇರಿಸಿಕೊಂಡ ಮೇಲೆ ದಖ್ನಿ ಸಾಹಿತ್ಯ ಇಳಿಮುಖವಾಯಿತು. ಅಲ್ಲಿಂದ ಮುಂದೆ ಕರ್ಣಾಟಕದಲ್ಲಿ ಅದು ಚೇತರಿಸಿಕೊಳ್ಳಲೇ ಇಲ್ಲ. ಮೊಗಲ್ ಆಡಳಿತ ಕಾಲದಲ್ಲಿದ್ದ ಅಸ್ತವ್ಯಸ್ತ ಪರಿಸ್ಥಿತಿ

ಸಾಹಿತ್ಯದ ಪ್ರಗತಿಗೆ ಪ್ರೋತ್ಸಾಹಕರವಾಗಿರಲಿಲ್ಲ. ಅಲ್ಲಿಂದ ಮುಂದೆ ಹೈದರಾಬಾದ್, ಔರಂಗಾಬಾದ್ ಮತ್ತು ಸಿದ್ಧೋಟ್‌ಗಳು ದಖ್ನಿಸಾಹಿತ್ಯದ ಕೇಂದ್ರಸ್ಥಾನಗಳಾಗಿ ಪರಿಣಮಿಸಿದುವು.

ಬಿಜಾಪುರ ರಾಜ್ಯವು ಅವನತಿಗಿಳಿದ ಮೇಲೆ ಕರ್ನಾಟಕದಲ್ಲಿದ್ದ ಮೊಗಲ್ ಗೌರ್ನರನು ಕೇಂದ್ರಸ್ಥಳವೆಂಬ ಕಾರಣದಿಂದ 'ಸಿರಾ 'ವನ್ನು ತನ್ನ ನೆಲೆಯಾಗಿ ಮಾಡಿಕೊಂಡನು. ಕ್ರಮೇಣ ಉತ್ತರದ ಉರ್ದುಭಾಷೆ ದಖ್ನಿಯ ಸ್ಥಳವನ್ನು ಆಕ್ರಮಿಸಿಕೊಳ್ಳತೊಡಗಿತು. ಆಡಳಿತ ಸಂಬಂಧ ವಿಷಯಗಳಲ್ಲಿ ಪರ್ಷಿಯನ್ ಭಾಷೆಗೆ ಹೆಚ್ಚಿನ ಪ್ರಾಮುಖ್ಯ ಬಂತು. ಈ ಕಾಲದಲ್ಲಿ ದಖ್ನಿ ಸಾಹಿತ್ಯರಚನೆಗೆ ತೊಡಗಿದ್ದ ಜನ ಕರ್ನಾಟಕದಲ್ಲಿ ತೀರ ಸ್ವಲ್ಪ. ದೊಡ್ಡ ಸೂಫಿ ವಿದ್ವಾಂಸನೂ ಲೇಖಕನೂ ಆದ ಗುಲ್ಬರ್ಗದ ಜಾಸಿ ಮಹಮುದ್ ಬಹ್‌ರಿ ಎಂಬಾತನು ಬಹಳ ಜನಪ್ರಿಯವಾದ 'ಮನ್‌ಲಗನ್' ಎಂಬ ಸೂಫಿ ಧರ್ಮ ಸಂಬಂಧವಾದ ಮಹಾಕಾವ್ಯವೊಂದನ್ನು ರಚಿಸಿದನು. ಅವನ ಎಲ್ಲ ಬರಹಗಳ ಸಂಗ್ರಹ ' ಕುಲಿಯತ್ ' ಕೂಡ ಪ್ರಕಟವಾಗಿದೆ. ನೆಲಮಂಗಲದ ಷಹ ಸದ್ರುದ್ದೀನ್ ಎಂಬ ಲೇಖಕ ಆ ಕಾಲದ ಅತ್ಯಂತ ಮುಖ್ಯ ಕೃತಿಕಾರನೆನಿಸಿಕೊಂಡಿದ್ದನು. ಅವನು ಬಿಜಾಪುರದ ಅಮೀನುದ್ದೀನ್ ಆಲ್ಲಾ ಎಂಬಾತನ ಶಿಷ್ಯ. ದಕ್ಷಿಣ ಕರ್ನಾಟಕ ಅಥವಾ ಹಳೆಯ ಮೈಸೂರು ರಾಜ್ಯದಲ್ಲಿ ರಚಿತವಾದ ಅತ್ಯಂತ ಪ್ರಾಚೀನ ದಖ್ನಿ ಬರಹಗಳೆಂದರೆ ಅವನವೇ. ಅವುಗಳಲ್ಲೊಂದಾದ 'ಮಿರತುಲ್ ಅಸ್ರಾರ್' ಎಂಬ ಕೃತಿ (ಕ್ರಿ.ಶ. 1720ರಲ್ಲಿ ರಚಿತವಾದದ್ದು) ಸಂಪಾದಿತವಾಗಿ ಪ್ರಕಟವಾಗಿದೆ. ಈ ಕಾಲದ ಒಂದು ಮುಖ್ಯ ವಿಷಯವೆಂದರೆ ದಖ್ನಿ ಮತ್ತು ಉರ್ದುಗಳು ದಕ್ಷಿಣ ಕರ್ನಾಟಕದಲ್ಲಿ ಹಬ್ಬತೊಡಗಿದ್ದು.

ಈ ಭಾಗವನ್ನು ಆಳಿದ ಹೈದರ್ ಆಲಿ ಖಾನ್ ಮತ್ತು ಟಿಪ್ಪು ಸುಲ್ತಾನರು ತಮ್ಮ ಅಲ್ಪಕಾಲದ ಆಡಳಿತದಲ್ಲಿ ರಾಜಕಾರಣ ಮತ್ತು ಮಿಲಿಟರಿ ಕಾರ್ಯಾಚರಣೆಗಳಲ್ಲಿಯೇ ತೊಡಗಿದ್ದುದರಿಂದ ವಿದ್ವತ್ತು ಸಾಹಿತ್ಯಗಳ ಪ್ರಗತಿಗೆ ತಕ್ಕ ಗಮನಕೊಡಲು ಅವರಿಗೆ ಸಾಧ್ಯವಾಗಲಿಲ್ಲ. ಆದರೆ ವಿದ್ವಾಂಸರಿಗೂ ಸಾಹಿತಿಗಳಿಗೂ ಅವರು ಆಶ್ರಯ ಕೊಡಲು ತಪ್ಪಲಿಲ್ಲ. ಅವರ ರಾಜ್ಯ ' ಸುಲ್ತಾನತೆ ಖುದಾಬಾದ್ ' (ದೈವದತ್ತರಾಜ್ಯ)ದಲ್ಲಿ ಸಾಹಿತ್ಯ ಚಟುವಟಿಕೆಗಳು ಸಾಕಷ್ಟು ನಡೆದಿದ್ದುವು. ಅವರ ಆಸ್ಥಾನದಲ್ಲಿ ಕವಿಗಳೂ ಇತಿಹಾಸಕಾರರೂ ಆಶ್ರಯ ಪಡೆದಿದ್ದರು. ಪರ್ಷಿಯನ್ ಮತ್ತು ಕನ್ನಡಗಳು ಅವರ ಆಸ್ಥಾನಭಾಷೆಗಳಾಗಿದ್ದುವು. ಇವುಗಳ ಜೊತೆ ದಖ್ನಿಭಾಷೆಯೂ ಪ್ರವರ್ಧಮಾನಕ್ಕೆ ಬಂದುದಲ್ಲದೆ ಅವರ ಆಡಳಿತ ಪ್ರದೇಶದಲ್ಲಿ ಸಾಮಾನ್ಯವಾಗಿ ಇದು ಆಡುಮಾತಾಗಿಯೂ ಇತ್ತು. ವಿದ್ಯಾವಂತನಲ್ಲದಿದ್ದರೂ ಹೈದರನಿಗೆ ಅನೇಕ ಭಾಷೆಗಳು ಗೊತ್ತಿದ್ದವು. ಟಿಪ್ಪು ಸುಲ್ತಾನನು ದೊಡ್ಡ ವಿದ್ವಾಂಸನೂ ಒಳ್ಳೆಯ ಬರಹಗಾರನೂ ಆಗಿದ್ದ. ಅವನು ದಖ್ನಿಭಾಷೆಗಳಲ್ಲಿ ಕೆಲವು ಪತ್ರಗಳನ್ನು ಬರೆದದ್ದಲ್ಲದೆ ಈ ಭಾಷೆಯಲ್ಲಿ ರಚಿತವಾದ ಕೆಲವು ಲೇಖನಗಳು ಸಾರ್ವಜನಿಕರಿಗೆ ದೊರೆಯುವಂತಾದುವು. ಜಾಯ್ನುಲ್ ಆಬ್ದೀನ್ ಶುಸ್ತರಿ ಎಂಬಾತ ಸುಲ್ತಾನನ ನೇರ ಮೇಲ್ವಿಚಾರಣೆಯಲ್ಲಿ ಬರೆದ ' ಫತ್‌ಹುಲ್ ಮುಜಾಹಿದೀನ್ ' ಎಂಬ ಕೃತಿಯಲ್ಲಿ ಕೆಲವು ಪದ್ಯಗಳಿವೆ. ಇವುಗಳಿಗೆ ದಖ್ನಿಯಲ್ಲಿ ' ರಿಖ್ತಿ ' ಎಂದು ಹೆಸರಿದ್ದು ಸೈನ್ಯದಲ್ಲಿ ನಿರ್ದಿಷ್ಟ ವೇಳೆಗಳಲ್ಲಿ ಪಠಿಸಲಾಗುತ್ತಿದ್ದವು. ಸುಲ್ತಾನನ ಹೆಸರಾಂತ ಆಸ್ಥಾನಕವಿಯೂ ಪ್ರಸಿದ್ಧ ವಿದ್ವಾಂಸನೂ ಆದ ಹುಸೇನ್ ಆಲಿ ಇಜ್ಜಾತ್ ಎಂಬ ಲೇಖಕ ಸುಲ್ತಾನನ ನೇತೃತ್ವದಲ್ಲಿ ಸಂಗೀತವನ್ನು ಕುರಿತು ' ಮುಫ್‌ರಿ ಹುಲ್ ಕುಲೀಬ್ ' ಎಂಬ ಗ್ರಂಥವನ್ನು ರಚಿಸಿದನು. ಅದರಲ್ಲಿ ಪರ್ಷಿಯನ್ ಹಾಡುಗಳ ಜೊತೆಗೆ ದಖ್ನಿಹಾಡುಗಳೂ ಇದ್ದು ವಿವಿಧ ರಾಗಗಳಿಗೆ ಅದನ್ನು ಅಳವಡಿಸಲಾಗಿದೆ. ಸುಲ್ತಾನನು ಸಂಗೀತಕಲೆಯಲ್ಲಿ ಮಾಡಿದ ಸಂಶೋಧನೆಗಳ ವಿವರವನ್ನು ಅದರಲ್ಲಿ ಕೊಡಲಾಗಿದೆ. ಸುಲ್ತಾನನ ಮುಖ್ಯವಾದ ಪುಸ್ತಕ ಭಂಡಾರದಲ್ಲಿದ್ದ ಅಮೂಲ್ಯಗ್ರಂಥಗಳಲ್ಲಿ ಅನೇಕ ದಖ್ನಿ ಮತ್ತು ಉರ್ದು ಗ್ರಂಥಗಳಿದ್ದುವು. ಹೈದರ್ ಆಲಿಖಾನನ ಕಾರ್ಯದರ್ಶಿಯೂ ಆಸ್ಥಾನದ ಮುನ್ಷಿಯೂ ಆದ ಲಾಲಾ ಮೆಹತಾಬ್ ರಾಯ್ ಸಬ್‌ಖತ್ ಎಂಬಾತನು ಉರ್ದುವಿನಲ್ಲಿ ಅನೇಕ ಸುಂದರ ಗೀತಗಳನ್ನು ರಚಿಸಿದ್ದಾನೆ. ಅವುಗಳಲ್ಲಿ ಆಯ್ದ

ಕೆಲವು ಗೀತಗಳು ಪ್ರಕಟವಾಗಿವೆ. ಈ ಕಾಲದ ಪ್ರಸಿದ್ಧ ಇತಿಹಾಸಜ್ಞನಾದ ಕಿರ್ಮಾನಿಯು ದಖ್ನಿಭಾಷೆಯಲ್ಲಿ ಕಾವ್ಯವನ್ನೂ ರಚಿಸಿದ್ದ. ಆಸ್ಥಾನದ ಅಪ್ಪಣೆಯಂತೆ 'ಹೈದರ್‌ನಾಮಾ' ಮತ್ತು 'ಬಹಾದೂರ್‌ನಾಮಾ' ಎಂಬ ಎರಡು ಇತಿಹಾಸ ಗ್ರಂಥಗಳು ದಖ್ನಿಯಲ್ಲಿ ಬರೆಯಲ್ಪಟ್ಟವು. ಅವು ಇನ್ನೂ ಹಸ್ತಪ್ರತಿರೂಪದಲ್ಲೇ ಉಳಿದಿವೆ. ಮುಳಬಾಗಿಲಿನ ಮಹಮದ್ ಸೈಯದ್ ಮೇಕ್ರಿ ಅಸಿ (ಕ್ರಿ.ಶ. 1753) ಒಳ್ಳೆಯ ಕವಿಯಾಗಿದ್ದನು. ಕೋಲಾರದ ಅಹಮದ್ ಖಾನ್ ಶಿರಾನಿ ಮತಧರ್ಮವನ್ನು ಕುರಿತು 'ಚಾರ್ ಕುರ್ಸಿ' ಎಂಬ ಗ್ರಂಥವನ್ನು ರಚಿಸಿದ. ಅದು ಇಂದಿಗೂ ತುಂಬ ಜನಪ್ರಿಯವಾಗಿದೆ. ಈ ಕಾಲದ ಶರಬ್ ಎಂಬ ಇನ್ನೊಬ್ಬ ಕವಿಯು ಟಿಪ್ಪು ಸುಲ್ತಾನನು ಮರಾಠರ ವಿರುದ್ಧ ತೋರಿದ ಸಾಹಸಗಳನ್ನು ವರ್ಣಿಸಿ 'ಫತೇನಾಮ' ಎಂಬ ವರ್ಣನಾತ್ಮಕ ಕಾವ್ಯವನ್ನು ಬರೆದನು. ಈ ಕಾಲದಲ್ಲಿ ರಚಿತವಾದ ಅನೇಕ ದಖ್ನಿ ಗ್ರಂಥಗಳು ಶ್ರೀರಂಗಪಟ್ಟಣದ ಪತನವಾಗಿ ಕೊಳ್ಳೆ ನಡೆದಾಗ ನಾಶವಾಗಿ ಹೋದುವು.

ಮೈಸೂರಿನ ಮಹಾರಾಜರುಗಳೂ ಉರ್ದು ಸಾಹಿತ್ಯಕ್ಕೆ ಉದಾರವಾದ ಆಶ್ರಯವನ್ನು ಕೊಟ್ಟಿದ್ದರು. ಅವರ ವೈಭವಪೂರ್ಣವಾದ ಆಡಳಿತದ ಅವಧಿಯಲ್ಲಿ ಹಳೆಯ ಮೈಸೂರು ಸಂಸ್ಥಾನಕ್ಕೆ ಸೇರಿದ ಮೈಸೂರು, ಬೆಂಗಳೂರು ಮತ್ತು ಇತರ ಕೆಲವು ಪ್ರದೇಶಗಳಲ್ಲಿ ಉರ್ದು ಸಾಹಿತ್ಯ ಚಟುವಟಿಕೆಗಳು ಹೊಸ ಪ್ರೋತ್ಸಾಹವನ್ನು ಪಡೆದುವು. ಈ ಕಾಲದಲ್ಲಿ ಆಗಿ ಹೋದ ಅನೇಕ ಉರ್ದುಲೇಖಕರು ಮತ್ತು ಕವಿಗಳು ಉರ್ದುಸಾಹಿತ್ಯಕ್ಕೆ ತಮ್ಮ ಅಮೂಲ್ಯ ಕೊಡುಗೆಯನ್ನು ನೀಡಿದರು.

ದಕ್ಷಿಣ ಭಾರತದ ಜನಪ್ರಿಯ ಕವಿಯಾದ ಲತೀಫ್ ಆರ್ಕಾಟಿ ಹದಿನೆಂಟನೆಯ ಶತಮಾನದ ಆರಂಭ ಭಾಗದಲ್ಲಿ ಆಗಿಹೋದನು. ಸರ್ಜಾಪುರದಲ್ಲಿ ಜನಿಸಿದ ಈ ಕವಿ ತನ್ನ ಜೀವನದ ಉತ್ತರ ಭಾಗವನ್ನು ಆರ್ಕಾಟಿನಲ್ಲಿ ಕಳೆದನು. ಈತ ಅಸಾಧಾರಣಮಟ್ಟದ ಕವಿಯಾಗಿದ್ದು ಇವನ ವಿಡಂಬನೆಗಳು ಮತ್ತು ಹಾಸ್ಯಕವನಗಳು ತುಂಬ ಜನಪ್ರಿಯವಾಗಿವೆ. 'ಶಿರಾ'ದಲ್ಲಿ ಇದ್ದ ಷಾ ಮುಹಮ್ಮದ್ ಆರೀಫ್ ಕವಿಯು ಹಿರಿಯ ಗಾತ್ರದ ಕೃತಿಯನ್ನು ರಚಿಸಿದ್ದಾನೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಸಂಶೋಧನ ಕಾರ್ಯದಲ್ಲಿ ತೊಡಗಿರುವ ವಿದ್ವಾಂಸರೊಬ್ಬರು ಆ ಗ್ರಂಥವನ್ನು ಸಂಪಾದಿಸುತ್ತಿದ್ದಾರೆ. ಬೆಂಗಳೂರಿನ ಷಾ ಅಬ್ದುಲ್ ಹೈ (ಕ್ರಿ.ಶ. 1884) ಮತ್ತು ಮೈಸೂರಿನ ಮೌಲಾನಾಮೀರ್ ಹಯಾತ್ (ಕ್ರಿ.ಶ. 1864)–ಈ ಇಬ್ಬರು ಮೈಸೂರು ಹೆಮ್ಮೆಯಿಂದ ಸ್ಮರಿಸಬಹುದಾದ ಲೇಖಕರು. ಇವರಲ್ಲಿ ಷಾ ಅಬ್ದುಲ್ ಹೈ ಉರ್ದುವಿನಲ್ಲಿ ನೂರಕ್ಕಿಂತ ಹೆಚ್ಚು ಉತ್ತಮ ಕೃತಿಗಳನ್ನು ಗದ್ಯ ಮತ್ತು ಪದ್ಯಗಳೆರಡರಲ್ಲೂ ರಚಿಸಿದ್ದ. ಪ್ರವಾದಿ ಪೈಗಂಬರರನ್ನು ಕುರಿತು ಅವನು ಬರೆದ ಹಿರಿಯ ಗಾತ್ರದ 'ಫಿನಾನಸ್ ಸಿಯರ್' ಈಗಲೂ ಈ ಭಾಗದಲ್ಲೆಲ್ಲ ಪ್ರಸಿದ್ಧವಾಗಿದೆ. ಈ ಕೃತಿ ಅನೇಕ ಸಲ ಸಹಸ್ರ ಸಂಖ್ಯೆಗಳಲ್ಲಿ ಅಚ್ಚಾಗಿದ್ದರೂ ಈಗಲೂ ಅದಕ್ಕಿರುವ ಜನ ಬೇಡಿಕೆ ಬೆಳೆಯುತ್ತಲೇ ಇದೆ. ಮೈಸೂರಿನ ಮೀರ್ ಹಯಾತ್ ಮತಧರ್ಮ, ನೀತಿ ಇತ್ಯಾದಿ ವಿಷಯಗಳನ್ನು ಕುರಿತು ಸುಮಾರು ಇಪ್ಪತ್ತೆರಡು ಲೇಖನಗಳನ್ನು ರಚಿಸಿದ್ದ ಅವು 'ಮಿಸ್ ಬಾಹುಲ್ ಹಯಾತ್'' ಎಂಬ ಸಂಕಲನ ಗ್ರಂಥವಾಗಿ ಮತ್ತೆ ಮತ್ತೆ ಮುದ್ರಿತವಾಗಿದೆ ; ಈ ಪ್ರಾಂತ್ಯದಲ್ಲೇ ಅಲ್ಲದೆ ದೇಶದ ಬೇರೆ ಬೇರೆ ಭಾಗಗಳಲ್ಲೂ ಓದಲ್ಪಡುತ್ತಿದೆ. ಮೈಸೂರಿನ ಬಂಕೆ ನವಾಬ್ ನಾಸೀಮ್ (ಕ್ರಿ.ಶ. 1888) ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ಅಗ್ರಗಣ್ಯ ಕವಿಯಾಗಿದ್ದುದಲ್ಲದೆ ಆ ಶತಮಾನದಲ್ಲಿ ರಚಿತವಾದ ಭಾವಗೀತ ಕಾವ್ಯದ ಪ್ರಾತಿನಿಧಿಕ ಕವಿಯೂ ಆಗಿದ್ದನು. ಸರಳವೂ ಮಧುರವೂ ಆದ ಅವನ ಕಾವ್ಯ ಮೈಸೂರಿನಲ್ಲಿ ತುಂಬ ಜನಪ್ರಿಯವಾಗಿದೆ. ಅದೂ ಒಂದಕ್ಕಿಂತ ಹೆಚ್ಚು ಸಲ ಪ್ರಕಟವಾಗಿದೆ. ಫಾಮ್‌ಷದ್, ಜಾದೂ ನಾದಿರ್, ಸಾಲಿಮ್ ದಿಲ್, ಆಥರ್, ಆರಾಮ್ ಕಲೀಮ್, ಆಹ್, ಅಲ್ವಿ, ಬರ್ಕ್, ಸೂಫಿ, ತಹಸಿಲ್ ಮತ್ತು ಮುಗ್‌ಬಿಲ್—ಮೊದಲಾದವರು ಈ ಕಾಲದಲ್ಲಿ ಮೈಸೂರು ಬೆಂಗಳೂರುಗಳಲ್ಲಿದ್ದ ಗಣನೀಯ ಲೇಖಕರಾಗಿದ್ದರು. ಮಹಮೂದ್ ಖಾನ್, ಮಹಮೂದ್

ಮತ್ತು ಇತ್ತೀಚೆಗೆ ಕಾಲವಾಗಿ ಹೋದ ಬೆಂಗಳೂರಿನ ನಾಫಿಸ್ ಅವರು ಈ ಶತಮಾನದ ಮೊದಲ ಭಾಗದಲ್ಲಿ ಉರ್ದು ಸಾಹಿತ್ಯಕ್ಕೆ ವಿಶೇಷವಾದ ಕೊಡುಗೆಯನ್ನು ನೀಡಿದರು. ಇವರಲ್ಲಿ ಮಹಮೂದ್ ಖಾನ್—ಹೈದರ್ ಮತ್ತು ಟಿಪ್ಪುಸುಲ್ತಾನರ ಚರಿತ್ರೆಯನ್ನು ಕುರಿತು ಹನ್ನೆರಡು ಶ್ರೇಷ್ಠ ಮಟ್ಟದ ಗ್ರಂಥಗಳನ್ನು ರಚಿಸಿದನು. ನಾಫಿಸ್ ಬಹಳ ಪ್ರಸಿದ್ಧ ಕವಿ. ಮೈಸೂರು ಮಹಾರಾಜರಾಗಿದ್ದ ನಾಲ್ಮಡಿ ಕೃಷ್ಣರಾಜ ಒಡೆಯರವರು ಉರ್ದು ಮತ್ತು ಪರ್ಷಿಯನ್ ಸಾಹಿತ್ಯಗಳಿಗೆ ವಿಶೇಷ ಪ್ರೋತ್ಸಾಹವಿತ್ತಿದ್ದರು. ತಮ್ಮ ಆಳಿಕೆಯ ರಜತ ಮಹೋತ್ಸವ ಆಚರಣೆಯ ಸಂದರ್ಭದಲ್ಲಿ ಅವರು ತಮ್ಮ ಸಂಸ್ಥಾನದಲ್ಲಿ ಉರ್ದು ಭಾಷೆಯನ್ನಾಡುವ ಜನರಿಗೆಂದು ಸ್ವಹಸ್ತದಿಂದ ಉರ್ದುವಿನಲ್ಲಿ ಸಂದೇಶವೊಂದನ್ನು ನೀಡಿದ್ದಲ್ಲದೆ ಮೈಸೂರಿನ ಸಿಲ್ವರ್‌ಜ್ಯೂಬಿಲಿ ಪಾರ್ಕ್ ರಸ್ತೆಯಲ್ಲಿ ಉರ್ದು ಶಾಸನವೊಂದನ್ನು ಪ್ರತಿಷ್ಠಾಪಿಸಿದರು. 1929ರಲ್ಲಿ ಮೈಸೂರಿನ ಜುಮ್ಮಾ ಮಸೀದಿಯ ಪ್ರಾರಂಭೋತ್ಸವ ಸಂದರ್ಭದಲ್ಲಿ ಉರ್ದುವಿನಲ್ಲಿಯೇ ಮಾತನಾಡಿದರು. ಅವರ ಆಳಿಕೆಯ ಕಾಲದಲ್ಲಿ ರಾಜಾಜ್ಞೆಗಳನ್ನು ಉರ್ದುವಿನಲ್ಲಿಯೂ ಹೊರಡಿಸ ಲಾಗುತ್ತಿತ್ತು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅವರು ಉರ್ದು ಮತ್ತು ಪರ್ಷಿಯನ್ ಸಾಹಿತ್ಯ ಪೀಠವೊಂದನ್ನು ಸ್ಥಾಪಿಸಿದರು.

ಹದಿನೆಂಟನೆಯ ಶತಮಾನದ ಮಧ್ಯಭಾಗದಿಂದ ಈಚೆಗೆ ಬೆಂಗಳೂರು ಉರ್ದು ಪತ್ರಿಕಾವ್ಯವಸಾಯದ ಪ್ರಮುಖ ಕೇಂದ್ರವಾಗಿದೆ. ಉರ್ದು ದಿನಪತ್ರಿಕೆಗಳು, ವಾರಪತ್ರಿಕೆಗಳು ಮತ್ತು ನಿಯತ ಕಾಲಿಕೆಗಳು ಅಲ್ಲಿಂದ ಪ್ರಕಟವಾಗುತ್ತಿವೆ. ಮೈಸೂರು, ಹುಬ್ಬಳ್ಳಿ ಮತ್ತು ಧಾರವಾಡಗಳಿಂದಲೂ ಪ್ರತ್ಯೇಕ–ದಿನ, ವಾರ ಪತ್ರಿಕೆಗಳು ಮತ್ತು ನಿಯತ ಕಾಲಿಕೆಗಳು ಹೊರಡುತ್ತಿವೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪೂರ್ಣ ಪ್ರಮಾಣದ ಉರ್ದು ವಿಭಾಗವೊಂದಿದೆ. ಅದು ಅನೇಕ ವಿದ್ವಾಂಸರುಗಳನ್ನೂ ಸಂಶೋಧನ ಪರಿಣತರನ್ನೂ ನಾಡಿಗೆ ಕೊಟ್ಟಿದೆ. ಅವರು ರಾಜ್ಯದ ಬೇರೆ ಬೇರೆ ಕಾಲೇಜುಗಳಲ್ಲಿ ಅಧ್ಯಾಪಕರಾಗಿರುವುದರ ಜೊತೆಗೆ ಕರ್ನಾಟಕದ ದಖ್ನಿ ಮತ್ತು ಉರ್ದು ಸಾಹಿತ್ಯಗಳನ್ನು ಕುರಿತ ಅಧ್ಯಯನ ಸಂಶೋಧನೆಗಳಲ್ಲಿ ತೊಡಗಿದ್ದಾರೆ. ದಖ್ನಿ ಮತ್ತು ಪರ್ಷಿಯನ್ ಭಾಷೆಯಲ್ಲಿರುವ ಅನೇಕ ಅಮೂಲ್ಯ ಕೃತಿಗಳು ಮತ್ತು ಅನೇಕ ಪ್ರಕಟಿತ ಕೃತಿಗಳು ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚ್ಯಸಂಶೋಧನಾ ಮಂದಿರದಲ್ಲಿ ಸಂಗ್ರಹಗೊಂಡಿವೆ.

ಕರ್ನಾಟಕದಲ್ಲಿ ಬಹಮನಿರಾಜ್ಯದ ಕಾಲದಿಂದ ಈ ತನಕವೂ ಸಂತತವಾಗಿ ನಡೆದು ಬಂದಿರುವ ಸಾಹಿತ್ಯ ಕಾರ್ಯಕ್ರಮವೆಂದರೆ ಮುಷೈರಾ (ಕವಿಮೇಳ)ಗಳು. ಭಾಷೆಯ ಸೌಂದರ್ಯವನ್ನು ಪ್ರಚುರ ಪಡಿಸುವುದರಲ್ಲಿ ಅವು ತುಂಬ ಸಹಾಯಕವಾಗಿರುವುದಲ್ಲದೆ ಕಾವ್ಯವನ್ನು ಬಹಳ ಜನಪ್ರಿಯವಾಗಿಸಿವೆ. ಕರ್ನಾಟಕದ ದಖ್ನಿ ಕಾವ್ಯ ತುಂಬ ಸರಳವೂ ಸಹಜವೂ ನಿರರ್ಗಳವೂ ಮಧುರವೂ ಆಕರ್ಷಕವೂ ಆಗಿದೆ. ಕರ್ನಾಟಕದ ಸಂಸ್ಕೃತಿಯನ್ನು ಕಾಪಾಡುವುದರಲ್ಲಿ ಅವುಗಳಿಗೆ ಮಹತ್ವದ ಪಾತ್ರವಿದೆ. ಅದು ಈ ಪ್ರಾಂತ್ಯದ ಸಾರ್ವಜನಿಕ ಹಾಗೂ ಸಾಂಸ್ಕೃತಿಕ ಜೀವನವನ್ನು ಚಿತ್ರಿಸುವುದಲ್ಲದೆ ಕರ್ನಾಟಕ ಜನಜೀವನದ ಕನ್ನಡಿಯಾಗಿ ಪರಿಣಮಿಸಿದೆ. ಜಾನಪದ ಕಾವ್ಯ ದಖ್ನಿಸಾಹಿತ್ಯದ ಒಂದು ವಿಭಾಗವಾಗಿರುವುದರ ಜೊತೆಗೆ ಅದರ ಜನಪ್ರಿಯತೆ ಮತ್ತು ವ್ಯಾಪ್ತಿಗೆ ಸಹಾಯಮಾಡಿದೆ. ದಖ್ನಿ ಕವಿಗಳ ಪ್ರಕೃತಿ ನಿರೂಪಣೆ ಬಹಳ ಪ್ರಶಂಸಾರ್ಹವಾಗಿದೆ. ದಖ್ನಿ ಸಾಹಿತ್ಯದ ಅತ್ಯಂತ ಮುಖ್ಯ ಅಂಶವೆಂದರೆ—ಅದರ ಪ್ರಗತಿ ಮತ್ತು ಬೆಳವಣಿಗೆಗಳಲ್ಲಿ ಸೂಫಿ ಸಂತರು ನಿರ್ವಹಿಸಿದ ಪಾತ್ರ. ಇದರಿಂದಾಗಿ ಇಡಿಯ ಸಾಹಿತ್ಯಕ್ಕೆ ಅನುಭಾವದ ರಂಗು ಬಂದಿದೆ. ಅದನ್ನು ಎಲ್ಲ ಜನರಿಗೂ ಸಮ್ಮತವಾಗುವಂಥ ಭಾಷೆಯಾಗಿ ಮತ್ತು ಸಾಹಿತ್ಯವಾಗಿ ಬೆಳೆಸಿದ್ದಕ್ಕೆ ಸೂಫಿ ಸಂತರೇ ಕಾರಣರು. ಅವರು ವರ್ಣ, ವರ್ಗ, ಮತ, ಜಾತಿಗಳ ಯಾವ ಭೇದವನ್ನೂ ಗಣನೆಗೆ ತಾರದೆ ಸರ್ವಸೋದರ ಭಾವವನ್ನು ಉಂಟುಮಾಡಿದರು. ದಖ್ನಿ ಮತ್ತು ಉರ್ದುಗಳ ನಡುವೆ ಮೊಗಲರ ಕಾಲದಲ್ಲಿ ಘರ್ಷಣೆಗೆ ಆರಂಭವಾಯಿತು. ಸಾಹಿತ್ಯ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಉರ್ದು

ಕ್ರಮೇಣ ದಖ್ನಿಯ ಸ್ಥಾನವನ್ನು ಆಕ್ರಮಿಸಿಕೊಂಡಿತು. ಈಗ ದಖ್ನಿ ಆಡುಮಾತಾಗಿ ಬಳಕೆಯಾಗುತ್ತಿದ್ದು ಉರ್ದುಭಾಷೆಯೇ ಸಾಹಿತ್ಯದ ಮಾಧ್ಯಮವಾಗಿದೆ.

ಕಡೆಯದಾಗಿ ಇಲ್ಲಿ ದಖ್ನಿ ಮತ್ತು ಉರ್ದುಕಾವ್ಯಗಳಿಂದ ಮೂರು ಕವನಭಾಗಗಳನ್ನು ನಿದರ್ಶಿಸಿ ಜೊತೆಗೆ ಕನ್ನಡದ ಅನುವಾದವನ್ನೂ ಕೊಟ್ಟಿದೆ. ಇವು ಕ್ರಮವಾಗಿ ದಕ್ಷಿಣಿ, ಮಧ್ಯಕಾಲ ಮತ್ತು ಉರ್ದು ಈ ಮೂರು ಭಾಷಾವಸ್ಥೆಗಳನ್ನೂ ಪ್ರತಿನಿಧಿಸುತ್ತವೆ.

ಎರಡನೆಯ ಆಲಿ ಅದಿಲ್ ಷಹ—ಬಿಜಾಪುರದ ಷಾಹಿ ಕವಿರಾಜ (ಕ್ರಿ.ಶ. 1763). ಇವನ ಕವನದ ಒಟ್ಟು ಹನ್ನೆರಡು ಖಂಡಗಳಲ್ಲಿ ಮೂರನ್ನು ಆಯ್ದುಕೊಟ್ಟಿದೆ:

### ವಿರಹ

(ಪ್ರಿಯತಮನಿಂದ ಅಗಲಿದ ವಿರಹಿಣಿಯೊಬ್ಬಳ ಶೋಕ)

ಹೇಳಿ ಯಾರಾದರೂ ನನ್ನೊಲವಿಗೆ
ಪ್ರೇಮಬಂಧಿತೆ ನಾನು
ಅವನೊ ಬೆನ್ನಾಗಿರುವ ನನ್ನೊಲವಿಗೆ

ಕದ್ದೊಯ್ದ ತನ್ನೊಡನೆ ನನ್ನೆದೆಯನು
ವಿರಹದಲಿ ಉರಿದು
ಹಗಲಾಯ್ತು ನನಗೀಗ ಘೋರ ಇರುಳು
ಒಂದೆ ಪ್ರೀತಿಯ ನುಡಿಯನಾಡಲಿಲ್ಲ
ಕಲಕಿದನು ಎದೆಯ ನೆಮ್ಮದಿಯನೆಲ್ಲ, ಅಯ್ಯೋ
ಏಕೆ ತಾಳಿದನವನು ನನ್ನ ಬಗೆಗಿಂಥ
ಘೋರ ನಿಲುವ ?
ಹೇಳಿ ಯಾರಾದರೂ ನನ್ನೊಲವಿಗೆ
ಪ್ರೇಮ ಬಂಧಿತೆ ನಾನು,
ಅವನೊ ಬೆನ್ನಾಗಿರುವ ನನ್ನೊಲವಿಗೆ

ಕನಸಿನಲ್ಲೂ ಅವನ ಮುಖವೆ ಕಾಣುವುದು
ಎಚ್ಚರಾಗಲು ಚಿಂತೆ ಹಿಡಿದು ಹಿಂಡುವುದು
ವಿರಹದುರಿ ನನ್ನಲ್ಲಿ ತಲೆಗೆದರಿದೆ
ಒಲವಿನ ಸಮಾಗಮವ ಕಾದು ದಿನದಿನವೂ
ಇಡಿಯ ಬದುಕೇ ಹೊತ್ತಿ ಧಗಧಗಿಸಿದೆ
ನನ್ನ ಪಾಲಿಗೆ ನೋವೆ ನಲಿವಾಗಿದೆ
ಹೇಳಿ ಯಾರಾದರೂ ನನ್ನೊಲವಿಗೆ
ಪ್ರೇಮ ಬಂಧಿತೆ ನಾನು
ಅವನೊ ಬೆನ್ನಾಗಿರುವ ನನ್ನೊಲವಿಗೆ

ನಿದ್ದೆ ಸುಳಿಯದು ನನ್ನ ಕಣ್ಣ ಬಳಿಗೆ
ಕೊನೆ ಇಲ್ಲವೆನಿಸುವುದು ಹೊಲೆ ರಾತ್ರಿಗೆ
ಪ್ರಿಯಕರನ ಬಿಟ್ಟು ಕೆಳೆಯಿಲ್ಲ ನನಗೆ
ಅವನ ನುಡಿ ಹೊರತು ಹಿತವಿಲ್ಲ ಕಿವಿಗೆ
ದುಃಖವೊಂದೇ ಈಗ ಉಣಿಸಾಗಿದೆ
ಹೇಳಿ ಯಾರಾದರೂ ನನ್ನೊಲವಿಗೆ
ಪ್ರೇಮ ಬಂಧಿತೆ ನಾನು
ಅವನೊ ಬೆನ್ನಾಗಿರುವ ನನ್ನೊಲವಿಗೆ

2

ಶ್ರೀರಂಗಪಟ್ಟಣದಲ್ಲಿ ಹೈದರ್ ಆಲಿ ಖಾನನ ಆಸ್ಥಾನ ಮುನಷಿಯಾಗಿದ್ದ ಲಾಲಾಮೆಹ್ತಾಬ್ ರಾಯ್ ಸಬಖತ್ (ಕ್ರಿ.ಶ. 1790).

### ಘಜಲ್

ಏಳುವುದು ನಿಟ್ಟುಸಿರಿನಿಂದ ಚಿಂತೆಯ ಆದಿ
ಗಾಳಿ ಬೀಸಲು ಏಳುವಂತೆ ಧೂಳಿ
ಕಣ್ಣೀರ ಮೇಘಗಳೆ ಸುರಿದು ಹೋದವು ನಿನ್ನ ವಿರಹದಲ್ಲಿ
ಶೋಕವಾದ್ಯಗಳಿಂದ ನುಡಿಯುವುದು ಮಲ್ಹಾರ ಭಾವದಾಳಿ

ಪ್ರೀತಿ ಮೀಯಿಸಿತೆನ್ನ ಕರುಣೆಯಲ್ಲಿ
ಹೃದಯವಾಗಿದೆ ಒಂದು ತಂತಿ
ನಿನ್ನ ಆಲೋಚನೆಯು ಬಡಿದೊಡನೆಯೇ
ನುಡಿಯತೊಡಗುವುದಿದರ ರೀತಿ

ಬಯಸಿರುವಳೇನೊ ಬೀಳ್ಕೊಡುಗೆ ಪಾತ್ರೆಯನು
ನನ್ನ ಪ್ರಿಯತಮೆಯು
ಅದಕೆಂದೆ ಮಗುಚಿ ಒಂದೇ ಸಮನೆ ಸುರಿಸುತಿದೆ
ಕಣ್ಣೀರನು
ದುಃಖಿ ಸಬಖತ ದೀನ ಪ್ರಿಯತಮೆಯ ಗಲ್ಲಿಯಲಿ
ಕುಳಿತಿರುವನು
ಹಾರಿಯೇ ಹೋಯಿತೇ ಮುದ್ದು ಕೋಗಿಲೆ ಬಿಟ್ಟು
ಉದ್ಯಾನವನ್ನು

3

ಮೈಸೂರಿನ ಬಂಕೆ ನವಾಬ್ ನಾಸಿಮ್ (ಕ್ರಿ.ಶ. 1888)

ಘಜಲ್

ನಿನ್ನ ಕೇರಿಗೆ ಯಾರು ಬರುವರೋ ಅವರು
ಮತ್ತೆ ಮರಳರು ತಮ್ಮ ಮನೆಗೆ
ನಿನ್ನ ಹೊಸಿಲಿಗೆ ಬಂದು ನಿಂತ ಜನರು
ತೆರಳರೆಂದೆಂದಿಗೂ ಬೇರೆ ಕಡೆಗೆ
ಸಂಜೆ ನೀಡುವರೆಂಬ ಭರವಸೆಯುನವರು
ಕೊಡದಿರುವ ಮುಂಜಾನೆ ಯಾವುದು ?
ತಮ್ಮ ಮಾತನು ಅವರು ತಾವೆ ಸುಳ್ಳಾಗಿಸರು
ಸಂಜೆಯೊಂದಿದ್ದರದು ಯಾವುದು ?

ಬುದ್ಧಿ ಕಲಿಸಿದೆ ಗಿಳಿಗೆ ಒಂದು ಯುಗಕಾಲ
ಆದರದು ವಂಚಿಸಿತು ನನ್ನ
ತಿದ್ದಬಲ್ಲವರಿಹರೆ ಮೊದಲಿಂದಲೂ
ತಪ್ಪಿಯೇ ನಡೆವ ಜನರನ್ನ ?

ಕಣ್ಣಲ್ಲಿ ಕಣ್ಣಿಟ್ಟು ನೋಡಿ ನನ್ನ
ಕಣ್ಣಿನಿಂದಲೆ ಕೊನೆಗೆ ಸರಿದು ಬಿಟ್ಟೆ
ಆದರೆ
ಸರಿವಂತೆ ಕಣ್ಣಿಂದ ದೃಶ್ಯವೊಂದೆ
ನೀ ಸರಿಯಲಾರೆ ಎಂದೆಂದೂ
ಏಸು ಅವಿಸಿನ್ನರ ವೈದ್ಯಕೂ ಬಗ್ಗದಿದು
ಎದೆಯ ಗಾಯಕೆ ಹೇಳು ಉಂಟೆ ಮದ್ದು ?

ಮೇಲಿನ ಕವನಗಳ ಮೂಲರೂಪಗಳು

I

ಕೋಯಿ ಜಾವೋ ಕಹೋ ಮುಜ್ ಸಾಜನ್ ಸಾಥ್
ಮೈ ನೇಹ್ ಬಾಂಧೀ ತುಮ್ ಖಯತಾ ಘಾಟ್

ದಿಲ್ ಮೇರೇ ಅಪ್‌ನೇ ಸಾಥ್ ಕಿಯಾ
ಮುಜ್ ಬಿರಹ್‌ಮೇ ದಿನ್ ರಾತ್ ಕಿಯಾ
ದಿಲ್ ದರೀಕೀ ನ ಬಾತ್ ಕಿಯಾ
ಸಬ್ ಬಿಸ್ರಾ ಸುಖ್ ಹೈಯಾತ್ ಕಿಯಾ
ಕಿ ಮುಜ್ ಸುನ್ ಐಸೀ ಘಾಕ್ ಕಿಯಾ

ಕೋಯೀ ಜಾವೋ ಕಹೋ ಮುಜ್ ಸಾಜನ್ ಸಾಥ್
ಮೈ ನೇಹ್ ಬಾಂಧೀ ತುನ್ ಕೀಥಾ ಘಾಟ್

ಪಿಯೂ ಮೂರತ್ ದೇಖೂ ಸಪ್‌ನೇ ಮೇ
ಜಬ್ ಜಾಗೂ ತಬ್ ರಹೂ ತಪ್‌ನೇಮೇ
ಲಾ ದೀಪಕ್ ಬಿರ್‌ಹಾ ಅಪ್‌ನೇ ಮೇ
ತನ್ ಜಲೇ ಝುಕ್ ಝುಕ್ ಜಪ್‌ನೇ ಮೇ
ಆರಾಮ್ ಅಚ್ಛೇ ಮುಜ್‌ಕಾ ಅಪ್‌ನೇ ಮೇ

ಕೋಯಿ ಜಾವೋ ಕಹೋ ಮುಜ್ ಸಾಜನ್ ಸಾಥ್
ಮೈ ನೇಹ್ ಬಾಂಧೀ ತುನ್ ಕೀಥಾ ಘಾಟ್

ಮುಝ್ ನೈನೋ ನೀಂದ್ ಆತೀ ನಹೀ
ಯೌ ರೈನ್ ಕಾಟೀ ಸರ್ ಜಾತೀ ನಹೀ
ಪಿಯೂ ಬಜ್ ಮುಜ್ ಕೋಯೀ ಸಾಥೀ ನಹೀ
ಇಸ್ ಬಾತ್ ಬಿನಾ ಕುಛ್ ಭಾತೀ ನಹೀ
ಬಿನ್ ಅಫ್‌ಸೋಸ್ ಕುಛ್ ಖಾತೀ ನಹೀ

3

ಹಮಾರೀ ಆಹ್ ಸೇ ಗಮ್‌ಕಾ ಬಖಾರ್ ಉಠ್ ತಾ ಹೈ
ಹವಾ ಕೇ ಬಹಾನೇ ಸೇ ಜೈಸೇ ಗುಬಾರ್ ಉಠ್ ತಾ ಹೈ
ತೇರೇ ಫಿರಾಖ್ ಮೇ ಬರ್‌ಸೇ ಹೈ ಮಾಫಾ ಆಂಸೂ ಕಾ
ಫಾಗುನ್ ಕೇ ಸಾಜ್ ಸೇ ಶೋರೇ ಮಲ್ಹಾರ್ ಉಠ್‌ತಾ ಹೈ
ಯೇ ದಿಲ್ ಹೈ ತಾರ್ ಸಿಫಕ್ ಇಷ್ಕ್ ಕೀ ನವಾಜಿಶ್ ಮೇ
ತೇರೇ ಖ್ಯಾಲ್ ಕೇ ಛೇದೇ ಪುಕಾರ್ ಉಠ್‌ತಾ ಹೈ
ಮಗರ್ ವೋ ಯಾರ್‌ನೇ ಚಾಹಾ ಹೈ ಜಾಮ್ ರುಖ್‌ಸತ್
ಕೇ ಶೀಶಾ ಸರ್ ನು ಗೂನ್ ಹೋ ಅಶ್ಕ್ ಬಾರ್ ಉಠ್‌ತಾ ಹೈ
ಗಲೀಮೇ ಯಾರ್ ಕೀ ಬಯ್‌ಠಾ ಹೈ ಸಬ್ ಖತೇ ನಾಲಾನ್
ಕಿನ್ ಭೀ ಛೋಡ್ ಕೇ ಗುಲ್ಷನ್ ಹಾಜರ್ ಉಠ್‌ತಾ ಹೈ
ತೇರೀ ಗಲೀ ಮೇ ಜೋ ಆಯೇ ವೋ ಘರ್ ನಹೀ ಜಾತೇ
ಜೋ ತೇರೇ ದರ್ ಪೇ ಹೈ ವೋ ದರ್ ಬಾ ಬಾರ್ ನಹೀ ಜಾತೇ
ವೋ ಕೌನ್ ಶುಭ್ ನಹೀ ಕರ್ ತೇ ಶಾಮ್ ಕಾ ವಾದಾ
ವೋ ಶಾಮ್ ಘಾನ್ಸೀ ಮುಖರ್ ನಹೀ ಜಾತೇ
ಪಢಾಯಾ ತೋತೇ ಕೋ ಏಕ್ ಉಮ್ರ್ ಬೇವಫಾ ನಿಕಾ
ಅಜಲ್ ಕೇ ಬಿಗ್‌ಡೇ ಕಿಸೀ ಸೇ ಸುಧಾರ್ ನಹೀ ಜಾತೇ

ಲಡಾ ಕೇ ಆಂಖ್ ತುಮ್ ಆಂಖೋಂ ಸೇ ಹೋಗಯೇ ಪಿನ್ಹಾ
ಪರ್ ಆಂಖ್ ಸೇ ಮೇರೀ ಮಿಸ್ಲೇ ನಜರ್ ನಹೀ ಜಾತೇ
ಮಸೀ ಹೋ ಬ ಅಲಿ ಸೇನಾ ಕಿ ಕ್ಯಾ ಹುವೀ ತಪ್ ಖಿಸ್
ಕಿಸೀ ಇಲಾಜ್ ಸೇ ಧಾಘೇ ಜಿಗರ್ ನಹೀ ಜಾತೇ

ಮೂಲಲೇಖಕರು : ಶ್ರೀ ಮಹಮೂದ್ ಹುಸೇನ್
ಅನುವಾದಕರು : ಶ್ರೀ ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ



# 3. ಕರ್ನಾಟಕದಲ್ಲಿ ತೆಲುಗು ಸಾಹಿತ್ಯ

ಸಾಹಿತ್ಯ ಮತ್ತು ಸಂಸ್ಕೃತಿಗಳಲ್ಲಿ ತೆಲುಗರು ಮತ್ತು ಕನ್ನಡಿಗರು ಬಹುಮಟ್ಟಿಗೆ ಸಮಾನ ಪರಂಪರೆಯುಳ್ಳವರು. ಕರ್ನಾಟಕದಿಂದ ಆಂಧ್ರಕ್ಕೂ ಆಂಧ್ರದಿಂದ ಕರ್ನಾಟಕಕ್ಕೂ ಕವಿಗಳು ಮತ್ತು ಲೇಖಕರು ಬಹು ಹಿಂದಿನಿಂದಲೂ ವಲಸೆ ಹೋಗಿ ನೆಲಸುತ್ತಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲಿ ಅನೇಕ ಬಗೆಯ ವಿನಿಮಯ ನಡೆದಿದೆ. ಕನ್ನಡ ಕವಿ ಸಾರ್ವಭೌಮನಾದ ಪಂಪನು ಕೃಷ್ಣಾಗೋದಾವರೀ ಪ್ರಾಂತ್ಯದ ವೆಂಗಿಪುರದವನು. ಅವನು ಪಶ್ಚಿಮ ಚಾಲುಕ್ಯರ ಆಸ್ಥಾನ ಕವಿಯಾದನು. ಪಂಪನು ತೆಲುಗು ಭಾಷೆಯಲ್ಲಿಯೂ ಕವಿತೆಗಳನ್ನು ರಚಿಸಿ ತೆಲುಗು ಕವಿ ಎನ್ನಿಸಿಕೊಂಡಿದ್ದಾನೆ (ಮದರಾಸು ವಿಶ್ವವಿದ್ಯಾನಿಲಯದ ಪ್ರಕಟಣೆ "ತೆಲುಗು ಕವಿ ಚರಿತ್ರೆ"). ಪೂರ್ವ ಚಾಲುಕ್ಯ ದೊರೆ ರಾಜರಾಜ ನರೇಂದ್ರನ ಆಸ್ಥಾನ ಕವಿಯಾದ ನನ್ನಯ ಭಟ್ಟನು ಕನ್ನಡ ಪಂಪಭಾರತದಿಂದ ಸ್ಫೂರ್ತಿ ಪಡೆದು "ಶ್ರೀಮದಾಂಧ್ರ ಮಹಾ ಭಾರತಮು" ಎಂಬ ಮಹಾಕಾವ್ಯವನ್ನು ರಚಿಸಿದನು. ಇದಕ್ಕೆ ಅನೇಕ ಸಾಕ್ಷ್ಯಾಧಾರಗಳಿವೆ. "ರತ್ನತ್ರಯ"ರಲ್ಲಿ ಎರಡನೆಯವನಾದ ಪೊನ್ನನು ರಾಯಲ ಸೀಮೆಯ ಚಿತ್ತೂರು ಜಿಲ್ಲೆಯಲ್ಲಿರುವ ಪುಂಗನೂರಿನವನು. ಜೈನಕವಿಗಳು ತಮ್ಮ ಮತಕ್ಕೆ ಆಂಧ್ರದಲ್ಲಿ ಪ್ರೋತ್ಸಾಹವಿಲ್ಲದಿದ್ದರಿಂದ ಆಗ ಜಿನಧರ್ಮದ ಭದ್ರ ನೆಲೆಯಾಗಿದ್ದ ಕರ್ನಾಟಕಕ್ಕೆ ಬಂದರು.

ವಿಜಯನಗರದ ಅರಸರು ತೆಲುಗು ಸಾಹಿತ್ಯ ಪ್ರೇಮಿಗಳು; ಅನೇಕ ತೆಲುಗು ಮಹಾಕವಿಗಳಿಗೆ ಆಶ್ರಯನೀಡಿ ಅವರಿಗೆ ಅತ್ಯುನ್ನತ ಮರ್ಯಾದೆ ಮಾಡಿದರು. ವಿಜಯನಗರ ಸಂಸ್ಥಾಪಕರಲ್ಲಿ ಒಬ್ಬನಾದ ಬುಕ್ಕರಾಯನ ಆಸ್ಥಾನವಲ್ಲಿ "ಉತ್ತರ ಹರಿವಂಶಮು" ಎಂಬ ತೆಲುಗು ಕಾವ್ಯವನ್ನು ಬರೆದ ನಾಚನ ಸೋಮನಾಥನೆಂಬ ಪ್ರಸಿದ್ಧ ತೆಲುಗು ಕವಿಯಿದ್ದನು. ವಿಜಯನಗರದ ಪ್ರೌಢದೇವರಾಯ ಎಂಬ ಕನ್ನಡಿಗ ಅರಸು ಶ್ರೀನಾಥನೆಂಬ ಪ್ರಸಿದ್ಧ ತೆಲಂಗು ಕವಿಗೆ "ಕವಿ ಸಾರ್ವಭೌಮ" ಎಂಬ ಬಿರುದನ್ನು ಕೊಟ್ಟು ತನ್ನ ಮುತ್ತಿನ ಮಂಟಪದಲ್ಲಿ ಅವನಿಗೆ 'ಕನಕಾಭಿಷೇಕ' ಮಾಡಿಸಿದನು. ಕನ್ನಡ ಭಾಷೆಯ ಸೊಬಗಿಗೆ ಮಾರು ಹೋದ ಈ ಕವಿಯು ತನ್ನ ಕವಿತ್ವದ ಭಾಷೆ ತೆಲುಗು–"ನಿಜಮು ಕರ್ಣಾಟ ಭಾಷ" ಎಂದಿದ್ದಾನೆ.

ಚಕ್ರವರ್ತಿ ಕೃಷ್ಣದೇವರಾಯನ ಆಸ್ಥಾನದಲ್ಲಿ "ಅಷ್ಟದಿಗ್ಗಜಗಳು" ಎಂಬ ಎಂಟು ಪ್ರಸಿದ್ಧ ಕವಿಗಳಿದ್ದರು. ಅವರಲ್ಲಿ ಹೆಚ್ಚಿನವರೂ ತೆಲಂಗು ಕವಿಗಳು. ಅವರಲ್ಲಿ ಒಬ್ಬನಾದ ನಂದಿ ತಿಮ್ಮನ ಕವಿಯು "ಪಾರಿಜಾತಾಪಹರಣಮು" ಎಂಬ ತೆಲುಗು ಕಾವ್ಯವನ್ನು ಬರೆದು ಶ್ರೀ ಕೃಷ್ಣದೇವರಾಯನಿಗೆ ಸಮರ್ಪಿಸಿದನು. ಈಚೆಯ ಸಂಶೋಧನೆಗಳಿಂದ ಈ ಕವಿಯು ತನ್ನ ಕಾವ್ಯಕ್ಕೆ ಸ್ಫೂರ್ತಿಯನ್ನು ಕನ್ನಡ ಕವಿ ರುದ್ರಭಟ್ಟನ "ಜಗನ್ನಾಥ ವಿಜಯ" ಎಂಬ ಕನ್ನಡ ಕಾವ್ಯದಿಂದ ಪಡೆದನೆಂದು ಗೊತ್ತಾಗುತ್ತದೆ.

ಪಾಲವೇಕರಿ ಕದಿರೀಪತಿ (1660) ಎಂಬ ತೆಲುಗು ಕವಿ ಕೋಲಾರ ಜಿಲ್ಲೆಯವನು. ಅವನು ತನ್ನ ವಂಶಿಕರು, ಕೋಲಾರ ಜಿಲ್ಲೆಯ ಶ್ರೀನಿವಾಸಪುರ ತಾಲೂಕಿನ ತೋಡಿಗೊಲ್ಲ ಎಂಬ ಗ್ರಾಮದ ಪಾಳೆಯಗಾರರಾಗಿದ್ದರೆಂದು ತನ್ನ "ಶುಕಸಪ್ತತಿ" ಎಂಬ ಕಾವ್ಯದಲ್ಲಿ ಹೇಳಿಕೊಂಡಿದ್ದಾನೆ. ಈ ಕಾವ್ಯದಲ್ಲಿ 70 ಪ್ರೇಮ ಕಥೆಗಳಿವೆ. ಅವುಗಳನ್ನು ಒಂದು ಗಿಳಿ ಹೇಳಿದುದರಿಂದ ಅದಕ್ಕೆ 'ಶುಕಸಪ್ತತಿ' ಎಂದು ಹೆಸರು. ಅವು ಪ್ರೇಮ ವಿಷಯಗಳನ್ನೂ ಸ್ತ್ರೀಯರ ಶೃಂಗಾರ ವಿಲಾಸಗಳನ್ನೂ ವಿವರಿಸುತ್ತವೆ.

ಈ ಕೃತಿಯನ್ನು "ತೂತಿ ನಾಮ" ಎಂಬ ಹೆಸರಿನಿಂದ ಪರ್ಷಿಯನ್ ಭಾಷೆಗೂ ಅದರಿಂದ ಉರ್ದು ಭಾಷೆಗೂ ಭಾಷಾಂತರ ಮಾಡಿರುವರಂತೆ. (ತೆಲುಗು ವಿಶ್ವಕೋಶ, ಸಂಪುಟ vi ಪು. 609).

ಮೊದಲ ತೆಲುಗು ಪೂರ್ಣ ಗದ್ಯಗ್ರಂಥವನ್ನು ಒಬ್ಬ ಮೈಸೂರಿನವನು ಬರೆದನೆಂಬುದು ಗಮನಾರ್ಹವಾದ ವಿಷಯ. ಅವನು ಮೈಸೂರಿನ ಚಿಕ್ಕದೇವರಾಜ ಒಡೆಯರ ಸೇನಾಪತಿಯಾಗಿದ್ದ ಕಳಲೆ ವೀರರಾಜ. ಅವನು ಕ್ರಿ.ಶ. 1770ರಲ್ಲಿ ತೆಲುಗು "ವಚನ ಭಾರತಮು" ಎಂಬ ಗ್ರಂಥವನ್ನು ಬರೆದನು. ಅನಂತರ ತೆಲುಗು ಗದ್ಯ ಸಾಹಿತ್ಯ ಬೆಳೆಯಿತು. ಅವನ ಮಗ ನಂಜರಾಜ ಕವಿ "ಹಾಲಾಸ್ಯ ಮಾಹಾತ್ಮ್ಯಮು" ಎಂಬ ಕಾವ್ಯವನ್ನು ಬರೆದಿದ್ದಾನೆ. 'ಮೂಕರಸು' ಎಂದು ಹೆಸರುಪಡೆದ ಕಂಠೀರವ ನರಸರಾಜರೆಂಬ ಮೈಸೂರರಸರು ಕೆಲವು ತೆಲುಗು ಯಕ್ಷಗಾನಗಳನ್ನೂ ಬರೆದಿದ್ದಾರೆ. ಇವುಗಳ ಹಸ್ತಪ್ರತಿಗಳು ಈಗ ಮದರಾಸು ಪ್ರಾಚ್ಯ ಪುಸ್ತಕ ಭಂಡಾರದಲ್ಲಿವೆ (ನಂ.ಡಿ. 1228). ಕೋಲಾರ ಜಿಲ್ಲೆಯ ಕುಂಡಲಕುರ್ಕಿ ಚಂದ್ರ ಕವಿ ಎಂಬ ತೆಲುಗು ಕವಿ ಮುಮ್ಮಡಿ ಕೃಷ್ಣರಾಜ ಒಡೆಯರ ಪೋಷಣೆಯನ್ನು ಪಡೆದಿದ್ದನು. ಇವನು ನನ್ನಯ್ಯನ "ಆಂಧ್ರಶಬ್ದ ಚಿಂತಾಮಣಿ"ಯನ್ನು ಕಾವ್ಯರೂಪದಲ್ಲಿ "ಕೃಷ್ಣಭೂಪಾಲೀಯಮು" ಎಂಬ ಹೆಸರಿನಿಂದ ಬರೆದು ಮೈಸೂರು ಅರಸರಿಗೆ ಅರ್ಪಿಸಿದನು.

ಮೈಸೂರಿನ ವೆಸ್ಲಿಯನ್ ಹೈಸ್ಕೂಲಿನ ತೆಲುಗು ಪಂಡಿತರಾದ ಅಂಬಳೆ ಡಿ. ಲಕ್ಷ್ಮೀನರಸಿಂಹ ಶಾಸ್ತ್ರಿಗಳು "ಭಾನುಶತಕಮು" ಮತ್ತು 'ನೀತಿ ಶತಕಮು' ಎಂಬ ಶತಕಗಳನ್ನು ಬರೆದರು. ಅನೇಕ ತೆಲುಗು ಲೇಖಕರು ಕರ್ಣಾಟಕದಲ್ಲಿ ನೆಲಸಿ ಕನ್ನಡ ಗ್ರಂಥರಚನೆಯಿಂದ ಕನ್ನಡ ಸಾಹಿತ್ಯ ಸಂಪತ್ತನ್ನು ಹೆಚ್ಚಿಸಿರುವರು. ಭಾರತ ಸರಕಾರದ ಶಾಸನ ಇಲಾಖೆಯ ಮುಖ್ಯಾಧಿಕಾರಿಗಳಾಗಿದ್ದ ಕೀರ್ತಿಶೇಷ ರಾವ್ ಬಹದೂರ್ ಎಚ್. ಕೃಷ್ಣಶಾಸ್ತ್ರಿಗಳು ಆಂಧ್ರರು, ಬಹುಭಾಷಾ—ಪರಿಣತರು. ಅವರು 1924 ರಲ್ಲಿ ಕೋಲಾರದಲ್ಲಿ ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದರು. ಅವರು ಬೆಂಗಳೂರು ಜಿಲ್ಲೆಯ ಹೊಸಕೋಟೆಯವರು. ಹೀಗೆಯೇ ಇನ್ನೂ ಅನೇಕರ ಹೆಸರುಗಳನ್ನು ಹೇಳಬಹುದು—ಕನ್ನಡ ಸಾಹಿತ್ಯ ಪರಿಷತ್ತಿನ ಮೊದಲ ಅಧ್ಯಕ್ಷರಾದ ಕೀರ್ತಿಶೇಷ ಎಚ್.ವಿ. ನಂಜುಂಡಯ್ಯನವರು, ಕೀರ್ತಿಶೇಷ ಟಿ.ಎಸ್. ವೆಂಕಣ್ಣಯ್ಯನವರು ಮತ್ತು ಕೀರ್ತಿಶೇಷ ಬಿ. ವೆಂಕಟನಾರಣಪ್ಪನವರು—ಇವರೆಲ್ಲರ ತಾಯ್ನುಡಿ ತೆಲುಗು. ಇವರು ಹೊಸಗನ್ನಡ ಸಾಹಿತ್ಯ ಸಂಕ್ರಾಂತಿಗಾಗಿ ವಿಶೇಷವಾಗಿ ದುಡಿದಿದ್ದಾರೆ. "ಚೌಡೇಶ್ವರೀ ಮಾಹಾತ್ಮ್ಯಮು" ಎಂಬ ಉತ್ತಮ ಗ್ರಂಥರಚನೆ ಮಾಡಿದ "ಗುಮ್ಮರಾಜು ರಾಮ ಕವಿ" ಎಂಬ ತೆಲುಗು ಕವಿ ಕೋಲಾರ ಜಿಲ್ಲೆಯ ಗೌನಿಪಲ್ಲಿಯವನು. ಮೈಸೂರು ವಿಶ್ವವಿದ್ಯಾನಿಲಯದ ತೆಲುಗು ಶಾಖೆಯ ಮುಖ್ಯ ಪ್ರಾಧ್ಯಾಪಕ ರಾಳ್ಳಪಲ್ಲಿ ಅನಂತಕೃಷ್ಣ ಶರ್ಮ ಅವರು "ಸಾಹಿತ್ಯ ಮತ್ತು ಜೀವನ ಕಲೆ" ಎಂಬ ಕನ್ನಡ ಗ್ರಂಥ ರಚನೆ ಮಾಡಿರುವರು. ಹೀಗೆ ತೆಲುಗು ಸಾಹಿತ್ಯವು ಕರ್ಣಾಟಕದಲ್ಲಿ ಬೆಳೆಯಿತು. ತೆಲುಗು ಲೇಖಕರು ಕನ್ನಡ ಜನರೊಂದಿಗೆ ಸ್ನೇಹದಿಂದ ಬಾಳಿ. ಕನ್ನಡ ಕಲಿತು, ಕನ್ನಡದಲ್ಲಿ ಗ್ರಂಥರಚನೆ ಮಾಡಿರುವರು. ತೆಲುಗರಿಗೂ ಕನ್ನಡಿಗರಿಗೂ ಪರಸ್ಪರ ಸಾಂಸ್ಕೃತಿಕ ಸಂಬಂಧವನ್ನು ಬೆಳೆಸಿರುವರು.

ಮೂಲಲೇಖಕರು : ಶ್ರೀ ಕೆ. ಸುಬ್ಬರಾಮಪ್ಪ
ಅನುವಾದಕರು : ಶ್ರೀ ಸಿ ವಿ. ರಾಜಗೋಪಾಲ್

# 4. ಕರ್ನಾಟಕದಲ್ಲಿ ಮರಾಠಿ ಭಾಷೆ ಮತ್ತು ಸಾಹಿತ್ಯ

ಕರ್ನಾಟಕ ಮತ್ತು ಮಹಾರಾಷ್ಟ್ರಗಳು ಸಂಸ್ಕೃತಿ, ಸಾಹಿತ್ಯ ಮತ್ತು ಭಾಷೆ—ಇವುಗಳ ದೃಷ್ಟಿಯಿಂದ ಪರಸ್ಪರ ಬಹಳಷ್ಟು ನಿಕಟ ಸಂಬಂಧ ಹೊಂದಿವೆ. ಕನ್ನಡ ಮತ್ತು ಮರಾಠಿ ಮಾತನಾಡುವ ಜನರು ಹಲವು ಶತಮಾನಗಳಿಂದಲೂ ಒಂದೇ ಧರ್ಮವನ್ನು ಅನುಸರಿಸಿದ್ದಾರೆ, ಒಂದೇ ರಕ್ತ ಹೊಂದಿದ್ದಾರೆ. ಇವೆರಡೂ ಪ್ರಾಂತಗಳ ಭೌಗೋಲಿಕ ಮೇರೆಗಳು ಕಾಲಕಾಲಕ್ಕೆ ಬದಲಾಗುತ್ತ ನಡೆದವು. ಬಹಳ ಮಟ್ಟಿಗೆ ಅವರು ಒಂದೇ ಬಗೆಯ ಆಳಿಕೆಗೆ ಒಳಪಟ್ಟಿದ್ದದರಿಂದ ಸಂಸ್ಕೃತಿಯ, ಸಾಹಿತ್ಯದ ಮತ್ತು ಭಾಷಾ ವೈಶಿಷ್ಟ್ಯಗಳ ವಿನಿಮಯ ಬಹಳಷ್ಟು ಆಗಿದೆ.

ಕ್ರಿ.ಶ. ಹತ್ತನೆಯ ಶತಮಾನದಿಂದಲೇ ಕರ್ನಾಟಕದ ಗಡಿಯ ಭಾಗಗಳಲ್ಲಿ ಮರಾಠಿ ಮಾತು ಆಡುತ್ತಿದ್ದರೆಂದು ತೋರುತ್ತದೆ. ದೇವಗಿರಿಯ ಯಾದವರ ಆಳಿಕೆಯ ಕಾಲಕ್ಕೆ ಮರಾಠಿ ಸಾಹಿತ್ಯವೂ ಭಾಷೆಯೂ ಏಳಿಗೆ ಹೊಂದಿದವು. ಅವುಗಳಲ್ಲಿ ಕನ್ನಡ ಭಾಷೆಯ ಸಂಪರ್ಕ ಲಕ್ಷಣಗಳನ್ನು ನಾವು ಕಾಣುತ್ತೇವೆ. ಮಹಾನುಭಾವರಿಂದ ರಚಿತವಾದ ಮರಾಠಿ ಸಾಹಿತ್ಯದಲ್ಲಿ ನಮಗೆ ಅನೇಕ ಕನ್ನಡದ ಶಬ್ದಗಳು ದೊರಕುತ್ತವೆ. ಅವನ್ನು ಬಳಸಿದ ಕಾಲ ಮತ್ತು ಕೃತಿ ರಚನಾಕಾಲ, ಕ್ರಿ.ಶ. 12ನೆಯ ಮತ್ತು 13ನೆಯ ಶತಕಗಳು.

ಮರಾಠಿ ಭಾಷೆಯ ಮತ್ತು ಸಾಹಿತ್ಯದ ಬೆಳವಣಿಗೆಗೆ ಮರಾಠಾ ರಾಜರನ್ನೂ ಒಳಗೊಂಡು, ಅರಸರುಗಳಿಗಿಂತ, ನಾನಾ ಧಾರ್ಮಿಕ ಪಂಥಗಳು ಬಹು ಮಟ್ಟಿಗೆ ಕಾರಣವಾಗಿವೆ. ಆ ಪಂಥಗಳೆಂದರೆ, ನಾಥರು, ಸಿದ್ಧರು, ವೀರ ಶೈವರು, ಜೈನರು, ವೈಷ್ಣವರು–ಇವರೇ ಮೊದಲಾದವರು.

ನಾಥ ಸಂಪ್ರದಾಯದ ಮೂಲಪುರುಷರು ಮತ್ಸ್ಯೇಂದ್ರ ಮತ್ತು ಗೋರಕ್ಷ ಎಂಬವರು. ನಾಥಪಂಥದ ಜನ್ಮಸ್ಥಳವೆಂದರೆ, ಯೋಗಕೇಂದ್ರವೆನಿಸಿದ ದಕ್ಷಿಣದೇಶದ ಸುಪ್ರಸಿದ್ಧ ಶ್ರೀ ಶೈಲ. ಪ್ರಖ್ಯಾತವಾದ "ಕದಳೀಬನ" ಕೂಡ ಯೌಗಿಕ ಮತ್ತು ಧಾರ್ಮಿಕ ಚಟುವಟಿಕೆಗಳಿಗೆ ಕೇಂದ್ರವಾಗಿತ್ತು. ಅಲ್ಲಿ ವೀರಶೈವರೊಂದಿಗೆ ನಾಥರು, ಸಿದ್ಧರು ಮತ್ತು ಇನ್ನಿತರರು ಕೂಡ ನೆರೆಯುತ್ತಿದ್ದರು. ದತ್ತ ಸಂಪ್ರದಾಯದ ನರಸಿಂಹ ಸರಸ್ವತಿ ಅವರು ತಮ್ಮ ಜೀವಿತದ ಕೊನೆಗೆ, ಕದಳೀಬನಕ್ಕೆ ತೆರಳಿದರು ಎಂಬ ಮಾತು ಕುತೂಹಲ ಕಾರಿಯಾಗಿದೆ.

ಹಳೆಯ ಮರಾಠಿಯ ಮೇಲೂ ಮಹಾರಾಷ್ಟ್ರದ ವಾರಕರಿ ಸಂಪ್ರದಾಯದ ಮೇಲೂ ನಾಥರ ಪ್ರಭಾವವು ಅತ್ಯಂತ ನಿಬಿಡ. ಜ್ಞಾನೇಶ್ವರರು ಮತ್ತು ಇನ್ನೂ ಅನೇಕರು ನಾಥ ಸಂಪ್ರದಾಯದವರು. ನಾಥ ಸಂಪ್ರದಾಯವು ಶೈವವಾಗಿದ್ದು ಅದಕ್ಕೂ ವೀರಶೈವಕ್ಕೂ ನಿಕಟ ಸಂಬಂಧವಿದೆ.

ಮತ್ಸ್ಯೇಂದ್ರನಾಥರು ಸ್ತ್ರೀರಾಜ್ಯದಲ್ಲಿ ನೆಲಸಿದ್ದರು ಎಂಬ ಕಥೆಗೂ ಅಲ್ಲಮಪ್ರಭು ಮತ್ತು ಮಾಯಾದೇವಿಯರ ಕಥೆಗೂ ಸಾಮ್ಯವಿದ್ದುದು ಸೋಜಿಗದ ಸಂಗತಿಯೇ ಸರಿ. ಮತ್ಸ್ಯೇಂದ್ರರು 'ಮಾಯಾ ಮತ್ಸ್ಯೇಂದ್ರ'ರೆಂದು ಖ್ಯಾತರಾಗಿದ್ದರೆ, ಪ್ರಭುದೇವರು 'ಮಾಯಾಕೋಲಾಹಲ'ರು

ಎಂದು ಪ್ರತೀತಿ. ಅಲ್ಲದೆ, "ಪ್ರಭುಲಿಂಗಲೀಲೆ" ಎಂಬ ಕನ್ನಡ ಕಾವ್ಯದಲ್ಲಿ ಗೋರಕ್ಷನಾಥ ಹಾಗು ಪ್ರಭುದೇವ–ಇವರ ನಡುವೆ ನಡೆದ ಸಂಭಾಷಣೆಯು ಉಲ್ಲೇಖವಿದೆ. ಈ ಅಂಶಗಳನ್ನು ಲಕ್ಷ್ಯಪೂರ್ವಕ ಅಭ್ಯಸಿಸಿದ್ದೇ ಆದರೆ, ಇದುವರೆಗೆ ಅಜ್ಞಾತವಾಗಿದ್ದ ಎಷ್ಟೋ ಸಂಬಂಧಗಳು ಬೆಳಕಿಗೆ ಬರುವ ಸಂಭವವಿದೆ.

ಗೋರಕ್ಷನಾಥನು ಕನ್ನಡ ಬಲ್ಲವನೆಂದು ನನಗೆ ಅನಿಸುತ್ತದೆ. ಆತನೇನಾದರೂ ಕನ್ನಡದಲ್ಲಿ ಕೃತಿ ರಚನೆ ಮಾಡಿರುವನೇ ಎಂಬ ಬಗೆಗೆ ಸಂಶೋಧನೆಯು ಅಗತ್ಯವಿದೆ. ಆತನು ಹಿಂದಿ ಮತ್ತು ಮರಾಠಿಗಳಲ್ಲಿ ಕೃತಿ ರಚಿಸಿದ್ದುಂಟು. ಮತ್ಸ್ಯೇಂದ್ರ ಗೋರಕ್ಷನಾಥರು ನಾಗನಾಥ ಎಂಬ ಮತ್ತೊಬ್ಬ ವಿಶೇಷ ವ್ಯಕ್ತಿಯೊಡನೆ ಸಂಬಂಧ ಹೊಂದಿದ್ದರ ವರ್ಣನೆ ಸಿಕ್ಕುವದು. ನಾಗನಾಥನು "ವಡವಲ ಸಿದ್ಧ" ಎಂದು ಪ್ರತೀತಿ ಇದೆ. ವಡವಲ ಎಂಬ ಊರೊಂದು ಸೊಲ್ಲಾಪುರದ ಬಳಿಯುಂಟು. ಈ ಸ್ಥಳ ಸಹ ನಾನಾ ದೃಷ್ಟಿಯಿಂದ ಅಭ್ಯಾಸಾರ್ಹವಾಗಿದೆ.

ನಾಗನಾಥನಿಗೆ ಅಜ್ಞಾನಸಿದ್ಧ ಮತ್ತು ಮನ್ಮಥಸ್ವಾಮಿ ಎಂಬ ಶಿಷ್ಯರಿದ್ದರು. ಅಜ್ಞಾನಸಿದ್ಧನಿಗೆ ಕನ್ನಡ ಚೆನ್ನಾಗಿ ಬರುತ್ತಿತ್ತಲ್ಲದೆ, ಆತನು ಅಲ್ಲಮ ಪ್ರಭುವಿನ ಸಂಪರ್ಕ ಹೊಂದಿದ್ದನೆಂದು ತಿಳಿದುಬರುತ್ತದೆ. ಈತನು ಮರಾಠಿಯಲ್ಲಿ ಕೆಲವೊಂದು ತತ್ತ್ವಗ್ರಂಥಗಳನ್ನು ಬರೆದಿದ್ದಾನೆ. ಈತನು ಜೀವಿಸಿದ್ದ ಕಾಲ 13ನೆಯ ಶತಕದ ಉತ್ತರಾರ್ಧ. ಆದ್ದರಿಂದ, ಪ್ರಭುದೇವರ ಸಮಕಾಲೀನನಾಗಿ ಈತನು ಇದ್ದಿರಲಾರನೆಂದು ತೋರುತ್ತದೆ. ಈತನು ಬ್ರಾಹ್ಮಣ ಸಂತನಾಗಿದ್ದನು ; ಆದರೆ ಮನ್ಮಥ ಸ್ವಾಮಿಯು ವೀರಶೈವ ಸಂತನು, ಮತ್ತು "ಪರಮ ರಹಸ್ಯ" (ಶಕ 1522) ಎಂಬ ಕೃತಿಯ ಕರ್ತೃವೀತನು. ಕೆಲವರ ಅಭಿಪ್ರಾಯದಂತೆ ನಾಗನಾಥನು ವೀರಶೈವ ಆದರೆ. ಈ ಅಭಿಪ್ರಾಯವನ್ನು ಎಲ್ಲರೂ ಅಂಗೀಕರಿಸುವುದಿಲ್ಲ.

ಕರ್ನಾಟಕದಲ್ಲಿ ಮತ್ತೆ ಮೂರು ಕೇಂದ್ರಗಳಲ್ಲಿ ಮರಾಠಿ ಸಾಹಿತ್ಯವು ಭರದಿಂದ ಬೆಳೆಯಿತು. ಅವು ಮೂಡಲಗಿ, ಗುರ್ಲಹೊಸೂರು. ವಿಜಾಪುರ. ಮೂಡಲಗಿಯು ಗೋಕಾಕ ತಾಲೂಕಿನ ಒಂದು ಸಣ್ಣ ಹಳ್ಳಿ. ಇಲ್ಲಿ, ರಂಗಬೋಧಸ್ವಾಮಿ ಮತ್ತು ಅದ್ವಯಬೋಧಸ್ವಾಮಿ ಎಂಬವರು 16ನೆಯ ಮತ್ತು 17ನೆಯ ಶತಕಗಳಲ್ಲಿ ಇದ್ದರೆಂದು ತಿಳಿಯುತ್ತದೆ. ಈ ಇರ್ವರು ಸ್ವಾಮಿಗಳೂ ಮುಕುಂದರಾಜ ಪರಂಪರೆಗೆ ಸಂಬಂಧಿಸಿದವರು. ಮುಕುಂದರಾಜ ಎಂಬವರು ಮರಾಠಿ ಕವಿ. ಇವರು "ವಿವೇಕಸಿಂಧು" (ಶ.ಕ. 1110) ಎಂಬ ಕೃತಿಯ ರಚಯಿತರು. ರಂಗಬೋಧಸ್ವಾಮಿ ಮತ್ತು ಅದ್ವಯಭೋಧಸ್ವಾಮಿ ಇಬ್ಬರೂ ಮರಾಠಿಯಲ್ಲಿ ಅಮೌಲ್ಯ ಕೃತಿರಚನೆ ಮಾಡಿದ್ದೇ ಅಲ್ಲದೆ, ಕನ್ನಡದಲ್ಲಿ ಕೆಲವೊಂದು ಹಾಡುಗಳನ್ನೂ ಬರೆದಿದ್ದಾರೆ. ಈ ಕೃತಿಗಳ ಮತ್ತು ಇನ್ನು ಕೆಲವು ಕೃತಿಗಳ ಸಂಶೋಧನೆಯ ಸೌಭಾಗ್ಯ ನನಗೆ ಒದಗಿದ್ದು, ಇವುಗಳ ಬಗೆಗೆ ಆ ಮೇಲೆ ಚರ್ಚಿಸುವೆನು. ಗುರುನಾಥ ಎಂಬವರಿಂದ ಬರೆಯಲ್ಪಟ್ಟ "ದೇಶಿಕ ಚರಿತ್ರ" (ಶಕ 1707) ಎಂಬ ಅಪ್ರಕಟಿತ ಗ್ರಂಥದಲ್ಲಿ ಕೆಲವು ಸ್ವಾಮಿಗಳ ಜೀವನ ಚರಿತ್ರಗಳುಂಟು. ಆಗ, ಗೋವಿಂದಬೋಧ. ಜ್ಞಾನಬೋಧ ಎಂಬ ಕವಿಗಳೂ ಇದ್ದರು. ಸ್ವಾಮಿಗಳ ಸಂಬಂಧಿಕನಾದ ಚಂದ್ರಾನುಜ ರುದ್ರ ಎಂಬಾತನು ತನ್ನ ಕೃತಿಯಲ್ಲಿ ಕುಮಾರವ್ಯಾಸನನ್ನು ಅನುಕರಿಸಲು ಹವಣಿಸಿದ್ದಾನೆ.

ಗುರ್ಲ ಹೊಸೂರಿನಲ್ಲಿ ಶ್ರೀ ಚಿದಂಬರ ದೀಕ್ಷಿತರೆಂಬ ಒಬ್ಬ ಮಹಾನುಭಾವ ಸಂತರು ಇದ್ದರು. ಅಂದಿನ ಕಾಲದ (18ನೆ ಶತಕ) ಮರಾಠಾ ಸರದಾರರು ಅವರನ್ನು ಪರಮ ಗೌರವದಿಂದಲೂ ಭಕ್ತಿಯಿಂದಲೂ ಕಾಣುತ್ತಿದ್ದರು. ಈ ಸಂತರ ಭಕ್ತರಾದ ಸಖಾರಾಮ ತ್ರ್ಯಂಬಕ ಗರ್ದೆ, ರಾಜಾರಾಮ, ವಿಠಾಬಾಯಿ ಮೊದಲಾದವರು ಮರಾಠಿ ಸಾಹಿತ್ಯಕ್ಕೆ ಬಹಳಷ್ಟು ಕೊಡುಗೆ ಸಲ್ಲಿಸಿದ್ದಾರೆ. ಗರ್ದೆ ಅವರ "ಶ್ರೀಮಚ್ಚರಿತ್ರ" ಎಂಬುದು ಬೃಹತ್ಕೃತಿಯಾಗಿದ್ದು, ಅದು ಶ್ರೀ ಚಿದಂಬರ ಸ್ವಾಮಿಗಳ ಅದ್ಭುತ ಜೀವನ ಚರಿತ್ರೆಯನ್ನು

ಒಳಗೊಂಡಿದೆ. ರಾಜಾರಾಮ ಅವರು, ಮರಾಠಿಯ ಸುಪ್ರಸಿದ್ಧ ಸಂತಕವಿಯಾದ ತುಕಾರಾಮರ ಅವತಾರ ಎಂದು ಪರಿಗಣಿಸಲಾಗುತ್ತದೆ.

ವಿಜಾಪುರದ ರುಕ್ಮಾಂಗದಸ್ವಾಮಿ ಮತ್ತು ವಿಜಾಪುರದ ಬಳಿಯ ಕಾಖಂಡಕಿಯ ಮಹೀಪತಿಸ್ವಾಮಿ ಇವರು ರುಕ್ಮಜ ದಾಸರಂಥ ಕವಿಗಳ ಲಕ್ಷ್ಯ ಸೆಳೆದರು. ಇದರ ಫಲವಾಗಿ, 18ನೆಯ ಶತಕದ ಕೃತಿ "ಗುರುಮಾಲಿಕಾ" ಎಂಬುದನ್ನು ರುಕ್ಮಜ ದಾಸರು ರಚಿಸಿದರು. ಈ ಕೃತಿಯು ಈ ಇಬ್ಬರು ಸಂತರ ಜೀವನ ಚರಿತ್ರವನ್ನು ಒಳಗೊಂಡಿದೆ. ಮರಾಠಿಯ ಪಂಡಿತಕವಿ ಎಂದು ಪ್ರಖ್ಯಾತಿ ಪಡೆದ ವಾಮನ ಪಂಡಿತರ ಶಿಷ್ಯರಲ್ಲಿ ಒಬ್ಬರಾದ ಹರಿ ದೀಕ್ಷಿತ ಎಂಬವರು ನರಗುಂದದಲ್ಲಿದ್ದರು. ಇವರ ಅಪ್ರಕಟಿತವಾದ ಎರಡು ಕೃತಿಗಳು ನನಗೆ ಸಿಕ್ಕಿವೆ.

ಕೆಲವು ಮರಾಠಿ ಕವಿಗಳು ಹಲವೊಂದು ಕನ್ನಡ ಕೃತಿಗಳನ್ನು ಮರಾಠಿಗೆ ಪರಿವರ್ತಿಸಿದ್ದಾರೆ. ಶಾಂತಲಿಂಗ ಶಿವಯೋಗಿ ಎಂಬವರು, ನಿಜಗುಣ ಶಿವಯೋಗಿಗಳ "ವಿವೇಕ ಚಿಂತಾಮಣಿ" ಎಂಬ ಕೃತಿಯನ್ನು (ಶಕ 1526 ರಲ್ಲಿ) ಮತ್ತು ಶ್ರೀ ಚೆನ್ನಬಸವೇಶ್ವರರ "ಕರಣ ಹಸುಗೆ" ಎಂಬ ಕೃತಿಯನ್ನು ಮರಾಠಿಗೆ ಪರಿವರ್ತಿಸಿದ್ದಾರೆ. ನಾನು ಇತ್ತೀಚೆಗೆ "ವಿವೇಕ ಚಿಂತಾಮಣಿ"ಯನ್ನು ಸಂಪಾದಿಸಿ ಸಿದ್ಧಗೊಳಿಸಿದ್ದು ಅದನ್ನು ಕರ್ನಾಟಕ ಮತ್ತು ಪೂನಾ ವಿಶ್ವವಿದ್ಯಾನಿಲಯಗಳು ಪ್ರಕಟಗೊಳಿಸಿವೆ. ಬ್ರಹ್ಮದಾಸ ಎಂಬವರು ಚಾಮರಸನ 'ಪ್ರಭುಲಿಂಗಲೀಲೆ'ಯನ್ನು 'ವಿಶ್ವಂಭರ ಲೀಲ' ಎಂಬ ಹೆಸರಿಟ್ಟು (18 ನೆಯ ಶತಕ) ಭಾಷಾಂತರಿಸಿದ್ದಾರೆ. ನಿಪ್ಪಾಣಿ ಹತ್ತಿರ ಇರುವ ಕೊಗನೋಳಿ ಎಂಬ ಸ್ಥಳದ ಗಿರಿಸುತ ಎಂಬವನು "ಪಾಂಡವ ಪುರಾಣ" ಎಂಬ ತನ್ನ ಗ್ರಂಥವನ್ನು ನಾಗರಾಜನ ಕನ್ನಡ ಕೃತಿಯ ಸಹಾಯದಿಂದ ಬರೆದಿದ್ದಾನೆ. ಈ ಎಲ್ಲ ಕವಿಗಳೂ ಕನ್ನಡ ಮತ್ತು ಮರಾಠಿ ಎರಡೂ ಭಾಷೆಗಳ ಮೇಲೆ ಸಮಸಮಾನ ಪ್ರಭುತ್ವ ಹೊಂದಿರಲೇ ಬೇಕೆಂಬಲ್ಲಿ ಸಂಶಯವಿಲ್ಲ. "ಗುರುಚರಿತ್ರ"ದ ಕರ್ತೃವಾದ ಸರಸ್ವತಿ ಗಂಗಾಧರನು ಕನ್ನಡಿಗನು. ಇವನು ಗುಲ್ಬರ್ಗ ಬಳಿಯ ಕಡಗಂಚಿ ಎಂಬ ಗ್ರಾಮದವನು. ಅವನು, "ಭಾಷಾ ನ ಯೇ ಮಹಾರಾಷ್ಟ್ರ"— (ಭಾಷೆ ಮರಾಠಿಯಲ್ಲ) ಎಂದಿದ್ದಾನೆ. ಆದರೂ ಅವನು ಸುಂದರವಾದ ಮರಾಠಿಯಲ್ಲಿ ಬರೆದಿದ್ದಾನೆ. ರಂಗನಾಥ ವಿಠ್ಠಲರಂಥ ವೈಷ್ಣವ ಕವಿ, (ಇವರ ವಿಷಯ ನಾನು, ಈಚೆಗೆ ಕಂಡುಹಿಡಿದಿದ್ದೇನೆ) ಮರಾಠಿ ಹಾಡುಗಳನ್ನು ದೇಶೀ ಶೈಲಿಯಲ್ಲಿ ರಚಿಸಿದ್ದುಂಟು.

ಈ ಕೃತಿಗಳಲ್ಲದೆ, ನಾನು ಕರ್ನಾಟಕದಲ್ಲಿ ಏಕನಾಥ, ವಿಪ್ರನಾರಾಯಣ, ನವರಸನಾರಾಯಣ ಮೊದಲಾದವರ ಅನೇಕ ಕೃತಿಗಳನ್ನು ದೊರಕಿಸಿದ್ದು, ಅವು ನನ್ನ ಸಂಶೋಧನೆಯ ಕಾರ್ಯದಲ್ಲಿ ಬಹಳ ಪ್ರಯೋಜನಕಾರಿಯಾದುವು. ಸದಲಗಿ ಎಂಬಲ್ಲಿ ಪ್ರತಿಮಾಡಲಾದ ಜೈನ ಮಾತೃಕೆಯೊಂದು ನನಗೆ ಸಿಕ್ಕಿದೆ.

ಸಂಶೋಧನ ಸಾಮಗ್ರಿಯು ಕರ್ನಾಟಕದಲ್ಲಿ ಬಹಳ ಸಮೃದ್ಧವಾಗಿದೆ. ನಾನು ವಿಶೇಷತಃ ವೀರಶೈವರ ಅನೇಕ ಕೃತಿಗಳನ್ನು ಹುಡುಕಿ ತೆಗೆಯುವ ಆಶೆ ತಳೆದಿದ್ದೇನೆ.

ನನಗೆ ಸಿಕ್ಕಿದ ಸುಳುವಿನ ಮಟ್ಟಿಗೆ, ಇದಿಷ್ಟು ಕರ್ನಾಟಕದಲ್ಲಿದ್ದ ಮರಾಠಿ ಸಾಹಿತ್ಯದ ಸಂಕ್ಷಿಪ್ತ ವೃತ್ತಾಂತವಾಗಿದೆ.

ಈಗ ಭಾಷೆಯ ವಿಷಯ : ಕರ್ನಾಟಕದಲ್ಲಿ ಬರೆಯಲ್ಪಟ್ಟ (ಕೈಬರಹದ ಪ್ರತಿಗಳಲ್ಲಿ ಕಂಡುಬರುವಂತೆ) ಮರಾಠಿ ಭಾಷೆಯನ್ನು ನೋಡಿದರೆ ಅದರ ಮೇಲೆ ಕನ್ನಡದ ಪ್ರಭಾವ ಬಹಳ ಆಗಿದೆ ಎಂಬುದು

ತೋರುತ್ತದೆ—ವಿಶೇಷತಃ, ವಿಲಕ್ಷಣ ಸಂಧಿಗಳ ಪ್ರಯೋಗದಲ್ಲಿ, ಶಬ್ದಗಳಲ್ಲಿ ಮತ್ತು ವ್ಯಾಕರಣ ಬದ್ಧ ವಾಕ್ಯರಚನಾ ಪದ್ಧತಿಯಲ್ಲಿ. ಇವೇ ಬಗೆಯ ವಿಶೇಷಲಕ್ಷಣಗಳನ್ನು, ಆಡುವ ಮರಾಠಿ ನುಡಿಯಲ್ಲಿಯೂ ಲಕ್ಷಿಸಬಹುದಾಗಿದೆ.

ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ಒಂದು ಶಬ್ದ ಹೋದಾಗ ಅದರ ಅರ್ಥವು ಬದಲಾಗುತ್ತದೆ. ಉದಾಹರಣೆಗೆ,—ಮೂಲ ಸಂಸ್ಕೃತ ಶಬ್ದವಾದ 'ಸಹಿತ' ಎಂಬುದರ ಅರ್ಥ, 'ಒಟ್ಟಿಗೆ' ಅಥವಾ 'ಕೂಡಿಕೊಂಡು' ಎಂದಾಗುವದು. ಆದೇ ಕನ್ನಡದಲ್ಲಿ, 'ಸಹ', 'ಕೂಡ', ಎಂಬರ್ಥದಲ್ಲಿ ಬಳಸಲಾಗುತ್ತದೆ. ಮರಾಠಿಯಲ್ಲಿ ಕೂಡ, ಇಲ್ಲಿ ಇದೇ ಅರ್ಥದಲ್ಲಿ ಈ ಶಬ್ದವನ್ನು ಬಳಸುವದುಂಟು.

ಮೂಲ ಲೇಖಕರು : ಶ್ರೀ ಪಂಡಿತ ಅವಳೀಕರ
ಅನುವಾದಕರು : ಶ್ರೀ ನಾರಾಯಣ ಸಂಗಮ

# 5. ಕರ್ನಾಟಕದಲ್ಲಿ ಕೊಂಕಣಿ

ಕೊಂಕಣಿ ಭಾಷೆಯು ಉತ್ತರ ಭಾರತದಲ್ಲಿ ಹುಟ್ಟಿದಂತೆ ಕಾಣಿಸುತ್ತದೆ. ಯಾವ ಸ್ಥಳದಲ್ಲಿ ಅದು ರೂಪುತಾಳಿತೆಂದು ನಿರ್ದಿಷ್ಟವಾಗಿ ಹೇಳುವುದು ಕಷ್ಟ. ಅಜ್ಮೀರದ ಹತ್ತಿರ ಎಲ್ಲೋ ಇರುವ ಸಾರಸ್ವತ ಮಂಡಲ ಅದರ ಮೂಲಸ್ಥಾನವಾಗಿರಬಹುದು.

ಈ ಪ್ರದೇಶಗಳಿಂದ ಕೊಂಕಣಿಯು ಪಶ್ಚಿಮಕರಾವಳಿಯಗುಂಟ ಕೆಳಕ್ಕಿಳಿಯುತ್ತ ಉತ್ತರ ಕನ್ನಡದ ಗಂಗಾವಳಿ ನದಿಯ ವರೆಗೆ ಬಂತು. ಕೊಂಕಣಿ ಮಾತನಾಡುವ ಜನ ಉತ್ತರ ಭಾರತದಿಂದ ವಲಸೆ ಬಂದುದರ ಸಾಕ್ಷಯಾಗಿ ಅನೇಕ ಸ್ಥಳನಾಮಗಳು ಪಶ್ಚಿಮಕರಾವಳಿಯುದ್ದಕ್ಕೂ ಉತ್ತರಕನ್ನಡದ ವರೆಗೆ ಇವೆ. ಉತ್ತರದ ಪವಿತ್ರ ನದಿ ಗಂಗೆಯ ಸ್ಮೃತಿಯನ್ನು ಗಂಗಾವಳಿ ನದಿಯ ಹೆಸರಲ್ಲಿ ಉಳಿಸಿಕೊಳ್ಳಲಾಗಿದೆ. ಕಾಳಿ ನದಿಯು ದೆಹಲಿ ಬಳಿಯೂ ಇದೆ, ಕಾರವಾರದ ಹತ್ತಿರವೂ ಇದೆ. ಈ ಹಾದಿಯ ಉದ್ದಕ್ಕೂ ಸ್ಥಳನಾಮಗಳ ಪುನರಾವೃತ್ತಿಯಾದುದನ್ನೂ ಗುರುತಿಸಬಹುದು. ಉದಾ : ದೆಹಲಿಯ ಬಳಿ ಕಲ್ಯಾಣಪುರ, ಠಾಣಾದ ಬಳಿ ಕಲ್ಯಾಣ ಮತ್ತು ದಕ್ಷಿಣಕನ್ನಡದಲ್ಲಿ ಕಲ್ಯಾಣಪುರ ; ಅಹ್ಮದಾಬಾದಿನಲ್ಲಿ ಅಂಕೋಲ, ಬಡೋದೆಯಲ್ಲಿ ಅಂಕೋಲ ಮತ್ತು ಉತ್ತರಕನ್ನಡದಲ್ಲಿ ಅಂಕೋಲ-ಇತ್ಯಾದಿ.

ಈ ವಲಸೆ ಬರುವಿಕೆಯು ಮುಗಿದಾಗ ಈ ಭಾಷೆಯು ರೂಪು ತಾಳಿ ಎಲ್ಲಾ ಜಾತೀಯ ಜನರು ಇದನ್ನು ಮಾತನಾಡತೊಡಗಿದರು. ಪಶ್ಚಿಮ ಕರಾವಳಿಯುದ್ದಕ್ಕೂ ಗಂಗಾವಳಿಯ ವರೆಗಿನ ಸ್ಥಾನೀಯ ಜನರೂ ಇದೇ ಭಾಷೆಯನ್ನು ಮಾತನಾಡತೊಡಗಿದರು.

ಕೊಂಕಣಿ ಭಾಷೆ ಪ್ರಚಲಿತವಾದ ಈ ಭೂಭಾಗವನ್ನು 'ಕೊಂಕಣ' ಎಂದು ಕರೆದರು. ಇದು ಪಶ್ಚಿಮ ಘಟ್ಟ ಮತ್ತು ಸಮುದ್ರಗಳ ನಡುವೆ ಇದೆ. ಉತ್ತರದಲ್ಲಿನ ಮಸುರೇಚಿ ನದಿ ಮತ್ತು ದಕ್ಷಿಣದಲ್ಲಿನ ಅಂಕಲೇಶ್ವರ ನದಿಗಳು ಈ ಪ್ರದೇಶದ ಗಡಿಗಳೆಂದು ಹಳೆಯ ಲೇಖಕನೊಬ್ಬ ಹೇಳಿದ್ದಾನೆ. ಇವರಿಂದ ಠಾಣಾದಿಂದ ಗಂಗಾವಳಿಯ ವರೆಗಿನ ಪ್ರದೇಶ ಕೊಂಕಣದಲ್ಲಿ ಬರುತ್ತದೆ. ಬ್ರಿಟಿಷ್ ಆಡಳಿತದ ಕಾಲದಲ್ಲಿ ಕೊಂಕಣ ಭೂಪ್ರದೇಶವನ್ನು ಸ್ಪಷ್ಟವಾಗಿ ಗುರುತಿಸಲಾಗಿತ್ತು. ಅದು ಮುಂಬೈ ಪ್ರಾಂತದ ಒಂದು ಭಾಗವಾಗಿತ್ತು. ಚೀನೀಪ್ರವಾಸಿ ಹ್ಯುವೆನ್‌ತ್ಸಾಂಗ್ ' ಕೊಂಗ್-ಕಿನ್-ನಾ-ಪುಲೊ ' ಎಂದು ಕೊಂಕಣ ವನ್ನು ಉಲ್ಲೇಖಿಸಿದ್ದಾನೆ. ' ಮಲಯ ಕುಲದಿಂದ ಯಾತ್ರಿಕರು ಕೊಂಗ್-ಕಿ-ನಾ-ಪುಲೊವಿಗೆ ಹೋದರು', ಎಂದು ಅವನ ಹೇಳಿಕೆಯಿದೆ. ಕೊಂಕಣವು ಸಪ್ತಕೊಂಕಣದ ಒಂದು ಭಾಗವಾಗಿದ್ದು ಮಧ್ಯ ಯುಗದಲ್ಲಿನ ದಕ್ಷಿಣ ಭಾರತದ 80 ರಾಜ್ಯಗಳಲ್ಲಿ ಒಂದಾಗಿತ್ತು. ಈ ಭಾಗದ ಎಲ್ಲ ಜನರು ಬಹುಶಃ ಕ್ರಿಸ್ತಶಕಾರಂಭ ದಿಂದಲೂ ಕೊಂಕಣಿ ಮಾತನಾಡುತ್ತಿದ್ದರು.

ಕೊಂಕಣಿ ಮಾತನಾಡುವ ಈ ಜನರ ಪೈಕಿ ಸಾರಸ್ವತ ಮಂಡಲದಿಂದ ನೇರವಾಗಿ ಬಂದ ಸಾರಸ್ವತ ರೆಂಬ ಒಂದು ಜಾತಿಯ ಜನರು ಈ ಭಾಷೆಯಲ್ಲಿ ಅನೇಕ ಹೊಸ ಸುಧಾರಣೆಗಳನ್ನು ತಂದರು. ಗೋವೆಯಲ್ಲಿ

ಎಂಟನೆ ಶತಮಾನದಿಂದ ನೆಲಸಲಾರಂಭಿಸಿದ ಈ ಜನರು ವ್ಯವಹಾರ ಚತುರರು, ಮೇಧಾವಿಗಳು. ಇವರನ್ನು ಗೌಡಸಾರಸ್ವತರೆಂದು ಕರೆಯುತ್ತಾರೆ. ಇವರ ಪ್ರಧಾನ ವೃತ್ತಿ ವಾಣಿಜ್ಯ.

ಗೋವೆಗೆ ಬಂದು ಅಂತಿಮವಾಗಿ ಇವರು ನೆಲೆ ನಿಂತಾಗ ಗೋವೆಯ ಆಡಳಿತವು ಕದಂಬರ ಕೈಯಲ್ಲಿತ್ತು (ಕ್ರಿ.ಶ. 800—1200). ಈ ವಂಶದ ಜಯಕೇಶಿಯೆಂಬ ಘನವಂತ ದೊರೆಯ ಆಸ್ಥಾನದಲ್ಲಿ ಹದಿನಾಲ್ಕು ವಿವಿಧ ರಾಷ್ಟ್ರಗಳ ಹದಿನಾಲ್ಕು ರಾಯಭಾರಿಗಳಿದ್ದರು. ವ್ಯಾಪಾರ ವಾಣಿಜ್ಯ ಸಮೃದ್ಧ ಸ್ಥಿತಿಯಲ್ಲಿದ್ದವು. ಶೆಣ್ವಿಗಳೆಂದು ಪರಿಚಿತರಾದ ಈ ಜನರು ಗೋವೆಯ ಪ್ರಮುಖ ನಾಗರಿಕರಾಗಿ ವ್ಯಾಪಾರ ದಲ್ಲಿಯೇ ತೊಡಗಿದ್ದರು.

ಈ ರಾಜಮನೆತನದ ಕಾಲದಲ್ಲಿ ಗೋವೆಯ ಆಡಳಿತದ ಭಾಷೆ ಕನ್ನಡವಾಗಿದ್ದುದರಿಂದ ಈ ಶೆಣ್ವಿ ವ್ಯಾಪಾರಿಗಳು ಹಾಗೂ ದಲಾಲರು ತಮ್ಮ ಅಂಗಡಿಯ ಲೆಕ್ಕಪತ್ರಗಳನ್ನು ಕೊಂಕಣಿಭಾಷೆ ಹಾಗೂ ಕನ್ನಡ ಲಿಪಿಯಲ್ಲಿ ಬರೆದರು. ಕೊಂಕಣಿ ಭಾಷೆಯ ಇತಿಹಾಸದಲ್ಲೇ ಮೊದಲ ಬಾರಿ ಈ ಒಂದು ತೊಡಕನ್ನು ಶೆಣ್ವಿಗಳು ಜಾರಿಗೆ ತಂದರೆಂದು ಇಲ್ಲಿ ಹೇಳಬೇಕಾಗುತ್ತದೆ.

ಪೋರ್ಚುಗೀಸರು, ಇಂಗ್ಲಿಷರು ಮತ್ತು ಡಚ್ಚರು 15ನೆ ಶತಮಾನದ ಅನಂತರ ಗೋವೆ ಮತ್ತು ಪಶ್ಚಿಮ ಕರಾವಳಿಯಲ್ಲಿ ವ್ಯಾಪಾರ ವ್ಯವಹಾರ ನಡೆಸುತ್ತಿದ್ದರು. ಪೂರೈಕೆಗಾರರೂ ಮಧ್ಯಸ್ಥರೂ ಆಗಿ ಶೆಣ್ವಿಗಳು ಮೊದಲ ಬಾರಿ ಈ ವ್ಯಾಪಾರದಲ್ಲಿ ಭಾಗವಹಿಸಿದರು. ಇದೇ ಕಾಲಕ್ಕೆ ಶೆಣ್ವಿಗಳು ತಮ್ಮ ಲೆಕ್ಕ ಪತ್ರಗಳನ್ನು ಕೊಂಕಣಿ ಭಾಷೆ ಮತ್ತು ಕನ್ನಡ ಲಿಪಿಯಲ್ಲಿ ಬರೆಯಲು ಆರಂಭಿಸಿದ್ದರು. ವಿಜಯನಗರ, ಬಿದನೂರು ಮತ್ತು ಸೋದೆ ರಾಜ್ಯಗಳಲ್ಲಿ ಪ್ರಚಲಿತವಿದ್ದ ಕನ್ನಡ ಭಾಷೆಯ ವಿಚಾರ ಪೋರ್ಚುಗೀಸ್ ಮತ್ತು ಆಂಗ್ಲ ವ್ಯಾಪಾರಿಗಳಿಗೆ ತಿಳಿದಿತ್ತು. ಹೀಗಾಗಿ ಶೆಣ್ವಿಗಳ ಈ ಬರಹವನ್ನು ಅವರುಗಳು ಕನ್ನಡವೆಂದೇ ಕರೆದುದು ಸಹಜವಾಗಿತ್ತು.

ಆದರೆ ಶೆಣ್ವಿಗಳು ಬಳಸುವ ಭಾಷೆಯಿಂದ ಅವರುಗಳು ಗೊಂದಲಕ್ಕೀಡಾದರು. ಅದು ಕನ್ನಡವಲ್ಲವೆಂಬುದು ಖಚಿತ. ಕೊಂಕಣಿಯೆಂಬ ಹೆಸರು ಇನ್ನೂ ಆಗ ಪ್ರಚಲಿತವಾಗಿರಲಿಲ್ಲ. ಹೀಗಾಗಿ ಶೆಣ್ವಿಗಳು ಬಳಸುವ ಭಾಷೆಯನ್ನು ಅವರು ತಮ್ಮ ಅನುಕೂಲಕ್ಕಾಗಿ 'ಕೆನರಿನ್' ಎಂದು ಕರೆದರು. ಲೆಕ್ಕಪತ್ರಗಳ ಈ ಭಾಷೆಯು ಗೋವೆಯ ಜನಸಾಮಾನ್ಯರಲ್ಲಿ 'ಕಂಜ್ವಿ' ಎಂದು ಪರಿಚಿತವಾಗಿತ್ತು.

ಆದರೆ 'ಕೆನರಿನ್' ಮತ್ತು 'ಕಂಜ್ವಿ' ಎಂಬ ಹೆಸರುಗಳನ್ನು 18ನೆ ಶತಮಾನದ ಆದಿಭಾಗದಲ್ಲಿ ಬಿಟ್ಟುಕೊಡಲಾಯಿತು. 1728ರಲ್ಲಿ "ಕೊಂಕಣಕ್ಯಾನ್" ನ ಪ್ರಕಟನೆಯನಂತರ ಹೀಗಾಗಿರಬೇಕು. ಈ ಕಾಲದಿಂದ ಈ ಭಾಷೆಯು ಕೊಂಕಣಿ ಭಾಷೆಯೆಂದು ಪರಿಚಿತವಾಯಿತು. ಇದು ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿತ್ತು. ಇದು ಸಂಸ್ಕೃತದಿಂದ ನೇರವಾಗಿ ಹುಟ್ಟಿದ್ದು. ಹೆಚ್ಚಿನ ಶಬ್ದಗಳು ಶುದ್ಧ ಸಂಸ್ಕೃತ ಮೂಲದವು. ಉದಾ : ಉದಾಕ (ಉದ್ದಾಕ—ನೀರು), ಲರೆ (ಲ್ಹರೆ—ತಲೆ).

ತನ್ನ ಆರಂಭದ ಕಾಲದಲ್ಲಿ ಕೊಂಕಣಿಯು ಕೇವಲ ಆಡು ಮಾತಾಗಿತ್ತು. ಕ್ರಿಸ್ತಪೂರ್ವದ ಅನೇಕ ಶತಮಾನಗಳಿಂದಲೂ ಪ್ರಾಯಶಃ ಅದು ಆಡಲ್ಪಡುತ್ತಿದ್ದಿರಬೇಕು. ಪೂರ್ತಿ ವಿಕಾಸ ಹೊಂದಿದ ಭಾಷೆಯ ಎಲ್ಲ ಲಕ್ಷಣಗಳನ್ನೂ ಹೊಂದಿರುವ ಒಂದು ಪ್ರೌಢಭಾಷೆ ಅದಾಗಿದೆ. ಅದರ ವಿಕಾಸದ ವಿವಿಧ ಹಂತಗಳಲ್ಲಿ ಕೊಂಕಣಿ ಅನೇಕ ಆಘಾತಗಳನ್ನು ಎದುರಿಸಿತು. ಅದಕ್ಕೆ ರಾಜಾಶ್ರಯವಿರಲಿಲ್ಲ. ಪೋರ್ತ್‌ಗಾಲಿ ಭಾಷೆಯೇ ಸಾಮಾನ್ಯ ವ್ಯವಹಾರಗಳ ಮಾಧ್ಯಮವಾಗಿರಬೇಕೆಂದು ಪೋರ್ಚುಗೀಸರು ಗೋವೆಯಲ್ಲಿನ ತಮ್ಮ ಆಳಿಕೆಯ

ಕಾಲದಲ್ಲಿ ಪಟ್ಟು ಹಿಡಿದುದರಿಂದ ಕೊಂಕಣಿ ಭಾಷೆಯನ್ನು ಹತ್ತಿಕ್ಕಲಾಯಿತು. ಇದು 1684ರ ಆಜ್ಞೆ. ಇದಾದ ಮೇಲೆ ಗೋವೆಯಲ್ಲಿ ಕೊಂಕಣಿ ನುಡಿಯುವುದು ಅಪರಾಧವಾಯಿತು. ಭಾರತದಲ್ಲಿನ ಯಾವುದೇ ಭಾಷೆಯ ವ್ಯಾಕರಣ ಮೊದಲ ಬಾರಿ ಬರೆಯಲ್ಪಟ್ಟಿದ್ದರೆ ಅದು ಕೊಂಕಣಿ ಭಾಷೆಯಲ್ಲಿ. ಈ ವ್ಯಾಕರಣದ ಕೆಲವು ಮೂಲ ಸೂತ್ರಗಳನ್ನು ಗೋವೆಯವನೊಬ್ಬನು 1556ರಲ್ಲಿ ಅಪರಿಷ್ಕೃತ ವಿಧಾನದಲ್ಲಿ ಬರೆದ. ಆದರೆ ಒಂದು ಪರಿಪೂರ್ಣವಾದ ಕೊಂಕಣಿ ವ್ಯಾಕರಣವು ವಾಕ್ಯರಚನಾ ಪದ್ಧತಿಯ ವಿವರಗಳೊಡನೆ ಜೆಸುಯಿಟ್ ಪಾದ್ರಿ ಥಾಮಸ್ ಸ್ಟಿಫನ್ಸ್ ಅವರಿಂದ 1640ರಲ್ಲಿ ಬರೆಯಲ್ಪಟ್ಟು ಪ್ರಕಾಶಿತವಾಯಿತು. ಈ ಕೆಲಸವನ್ನು ಅವರು ಸಂಸ್ಕೃತ ವ್ಯಾಕರಣದ ನೆರವಿನಿಂದ ಮಾಡಿದರು.

ಡಾ॥ ಡಲ್ಗಾಡೋ ಕೊಂಕಣಿಯನ್ನು 'ಬಾಲಭಾಷಾ' ಎಂದು ಕರೆದು ಅದನ್ನು ಸಂಸ್ಕೃತದ ಹಿರಿಮಗಳೆಂದು ಉಲ್ಲೇಖಿಸಿದ್ದಾರೆ. 1684ರಲ್ಲಿ ಕೊಂಕಣಿಯನ್ನು ಹತ್ತಿಕ್ಕಿದನಂತರ ಜೆಸುಯಿಟ್ ಪಾದ್ರಿಗಳು ಗೋವೆಯಲ್ಲಿ ಅದರ ಪುನರುತ್ಥಾನಕ್ಕಾಗಿ ಶ್ರಮಿಸಿದರು. ಜೆಸುಯಿಟ್ ಸನ್ಯಾಸಿಯಾಗಲು ತರಬೇತಿ ಪಡೆಯುವ ಎಲ್ಲರೂ ಕೊಂಕಣಿ ಕಲಿಯಬೇಕೆಂದು ಜೆಸುಯಿಟ್ ಸಂಘದ ಒಬ್ಬ ಅಧಿಕಾರಿಯು ಒತ್ತಾಯ ಮಾಡಿದ. ಕ್ರೈಸ್ತ ಧರ್ಮದ ಪ್ರಸಾರಕ್ಕಾಗಿ ಕೆಳವರ್ಗದ ಜನರ ಸಂಪರ್ಕ ಬೆಳೆಸಲು ಈ ಭಾಷೆಯ ಜ್ಞಾನ ಅನಿವಾರ್ಯವಾಗಿತ್ತು. ಮರ್ಗಾವೆಯಲ್ಲಿ ಹೀಗಾಗಿ ಕೊಂಕಣಿ ಶಾಲೆಗಳನ್ನು ತೆರೆದರು.

ಆದರೆ ಕೊಂಕಣಿ ಮಾತಾಡುವ ಜನ ಭಾರೀ ಪ್ರಮಾಣದಲ್ಲಿ ಕರ್ನಾಟಕಕ್ಕೆ, ವಿಶೇಷತಃ ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಗೆ ಭಾರಿ ಪ್ರಮಾಣದಲ್ಲಿ ವಲಸೆ ಬಂದಿದ್ದಾರೆ. ಬಂಗರಾಜರ ಆಡಳಿತದ ಕಾಲದಲ್ಲಿ ಚಂದ್ರಶೇಖರನ (1208–1224) ರಾಜಧಾನಿ ಮಂಗಳೂರಿನ ಈದ್ಗಾ ಬೆಟ್ಟದ ಮೇಲಿತ್ತು. ಈ ಬೆಟ್ಟದ ಇಳಿಜಾರಿನಲ್ಲಿ ಒಂದು ಕಟ್ಟೆಯನ್ನೂ ಒಂದು ಉದ್ಯಾನವನ್ನೂ ಮಾಡಲಾಗಿತ್ತು. ಇಲ್ಲಿ ಚಪಟೆಕಾರರೆಂಬ ಕೊಂಕಣಿ ಜನರು ವಾಸಿಸುತ್ತಿದ್ದರು. ಈ ಸ್ಥಳದಿಂದ ಕೊಂಚ ದೂರದಲ್ಲಿ ಕೊಂಕಣಿ ಕುಣಬಿಗಳು ವಾಸಿಸುತ್ತಿದ್ದರು. ಈ ಭಾಗವನ್ನು ಇಂದಿಗೂ ಕುಣಬಿ ಹಿತ್ತಿಲೆಂದು ಕರೆಯುತ್ತಾರೆ. ಕೊಂಕಣಿ ಹಾಡುಗಳೊಡನೆ ನಡೆಯುವ ಈ ಜನರ ಹೋಳಿಯ ಕುಣಿತ ಇಂದಿಗೂ ಮಂಗಳೂರಲ್ಲಿ ಪರಂಪರಾಗತವಾಗಿ ನಡೆದು ಬಂದಿದೆ.

ಈ ಚಂದ್ರಶೇಖರನ ಕಾಲದಲ್ಲೇ ಕೇಶವ ಆಸರಣ್ಣನೆಂಬ ಒಬ್ಬ ಶೆಣ್ವಿ ಗಣಪತಿ ದೇವಸ್ಥಾನದ ಅರ್ಚಕನಾಗಿದ್ದ.

ಕಾಸರಗೋಡು ತಾಲೂಕಿನ ಮಂಜೇಶರದ ಪ್ರಸಿದ್ಧ ಅನಂತೇಶ್ವರ ದೇವಾಲಯವು 11ನೆಯ ಶತಮಾನದಲ್ಲಿ ಶೆಣ್ವಿಗಳಿಂದ ಸ್ಥಾಪಿತವಾಯಿತು. ಈ ದೇವಾಲಯದ ಮಹತ್ವದಿಂದಾಗಿ ಮಧ್ವಾಚಾರ್ಯರು ಅದನ್ನು ಸಂದರ್ಶಿಸಿದ್ದರು.

ಕೊಂಕಣಿ ಕುಣಬಿಗಳು ಕಾಯಂ ನೆಲೆನಿಂತ ಸ್ಥಾನಗಳು ಉತ್ತರಕನ್ನಡದ ಸೂಪಾ ಮತ್ತು ಬೆಳಗಾವಿ ಮುಂತಾದೆಡೆ ಕಾಣಸಿಗುತ್ತವೆ. ಮಸಾಲೆ ತೋಟಗಳಲ್ಲಿ ಬೇಕಾಗುವ ಕೂಲಿಗಳೆಂದು ಅವರು ಕನ್ನಡ ಜಿಲ್ಲೆಗಳೆಡೆ ತರಲ್ಪಟ್ಟರು. ಇಂದಿಗೂ ಅನೇಕರು ಈ ಭಾಗಗಳಲ್ಲಿ ಕೆಲಸ ಮಾಡುತ್ತಿದ್ದಾರೆ.

ಕೊಂಕಣಿ ಜನರಾದ ಹಿಂದುಗಳು ಮತ್ತು ಕ್ರೈಸ್ತರು ಭಾರೀ ಪ್ರಮಾಣದಲ್ಲಿ ಕರ್ನಾಟಕಕ್ಕೆ ವಲಸೆ ಬಂದುದು— ಗೋವೆಯಲ್ಲಿ 1560ರ ಅನಂತರ ಇಂಕ್ವಿಜಿಶನ್ ನ್ಯಾಯಾಲಯಗಳನ್ನು ಸ್ಥಾಪಿಸಿದನಂತರ. ಬಿದನೂರು ಮತ್ತು ಸೋದೆ ರಾಜ್ಯಗಳ ವಿವಿಧ ಭಾಗಗಳಲ್ಲಿ ಹಿಂದೂ ಜನರು ಭಾರಿ ಪ್ರಮಾಣದಲ್ಲಿ ಬಂದು

ನೆಲೆ ನಿಂತರು. ಅನಂತರ 'ಕೊಂಕಣ ಮರಾಟ'ರೆಂದು ಕರೆಯಲ್ಪಟ್ಟ 'ಗಾವಂಕರ'ರು ಬಹುಪಾಲು, ಕಾರವಾರ ತಾಲೂಕಿನಲ್ಲಿ ನೆಲಸಿದರು. ಇವರ ಜೊತೆಗೇ ಭಂಡಾರಿಗಳು, ಪಟ್ಟಿಗಳು, ಕುಮಾರ ಪಂಥದವರು, ಅಕ್ಕಸಾಲಿಗರು ಬಂದರು. ಕ್ರೈಸ್ತರು ಬಿದನೂರು, ದಕ್ಷಿಣ ಕನ್ನಡ ಮತ್ತು ಉತ್ತರಕನ್ನಡದ ಕುಮಟಾ, ಹೊನ್ನಾವರ ತಾಲೂಕುಗಳಲ್ಲಿ ನೆಲೆ ನಿಂತರು.

ಆದರೆ ಗೋವೆಯಿಂದ ವಲಸೆ ಬಂದ ಜನರಲ್ಲಿ ಶೆಣ್ವಿ ಜಾತಿಯವರು ಪ್ರಧಾನರಾದವರು. ಗೋವೆಯಲ್ಲಿ ಎಲ್ಲ ವಿಧದ ಸ್ಥಾನ ಮಾನ ಮತ್ತು ಅವಕಾಶಗಳು ಅವರಿಗೆ ದೊರೆಯದಂತಾದುದರಿಂದ ಅವರು ಅಕ್ಷರಶಃ ಗೋವೆಯಿಂದ ಹೊರದೂಡಲ್ಪಟ್ಟರು. ಅವರ ದೇವಾಲಯಗಳನ್ನು ನಾಶಮಾಡಿದ್ದರಿಂದ ತಮ್ಮ ಕುಲದೇವರ ಮೂರ್ತಿಗಳೊಡನೆ ಅವರು ತಮ್ಮ ಮನೆಗಳನ್ನು ತ್ಯಜಿಸಿದರು.

ಅವರು ಬಿದನೂರು ಮತ್ತು ಸೋದೆ ರಾಜ್ಯಗಳಲ್ಲಿ ನೆಲಸಿದರು. ಈ ರಾಜ್ಯಗಳಲ್ಲಿ ಅವರ ಅದೃಷ್ಟದ ಬಾಗಿಲು ಅನಿರೀಕ್ಷಿತವಾಗಿ ತೆರೆಯಿತು. ಅವರಲ್ಲಿ ಕೆಲವರು ಎರಡೂ ರಾಜರ ಮಂತ್ರಿಗಳಾಗಿ ಕೆಲಸ ಮಾಡಿದರಷ್ಟೇ ಅಲ್ಲ, ಎಲ್ಲ ಐರೋಪ್ಯ ವ್ಯಾಪಾರಿಗಳಿಗೆ–ವಿಶೇಷತಃ ಬ್ರಿಟಿಷರಿಗೆ ಮಧ್ಯಸ್ಥರಾಗಿ ಕೆಲಸ ಮಾಡಿದರು. ಭಟ್ಕಳ ಮಹಾಲೆ ಮನೆತನದ ಇತಿಹಾಸ ಗಮನಾರ್ಹವಾದುದು. ಪಾಣೆ ಮಂಗಳೂರಿನ ದಾಮರ್ಸ ಪೈ ಎಂಬ ಒಬ್ಬಾತನು ಮರಾಟರಿಗೆ ಭಾರಿ ಮೊತ್ತದ ಬಿಡುಗಡೆ ಹೊನ್ನನ್ನು ನೀಡಿ ಬಿದನೂರಿನ ರಾಜನೊಬ್ಬನನ್ನು ಮರಾಟರಿಂದ ಬಂಧಮುಕ್ತಗೊಳಿಸಿದ.

ಈ ಶೆಣ್ವಿಗಳು ಕುಣಬಿಗಳ ಜೊತೆ ಬೇಸಾಯಕ್ಕೂ ಕೈಯಿಕ್ಕಿದರು. ಕೊನೆಗೆ ಈ ಶೆಣ್ವಿಗಳು ಕನ್ನಡ ಜಿಲ್ಲೆಯ ಶ್ರೀಮಂತ ಭೂಮಾಲಿಕರೂ ಆದರು.

ಅವರು ಕೊಂಕಣದಲ್ಲಿ ಅತ್ಯಂತ ದೊಡ್ಡ ದೇವಾಲಯಗಳನ್ನು ಕಟ್ಟಲು ಕಾರಣರಾದರು. ಭಟ್ಕಳದಲ್ಲಿನ ಕೆಲವು ದೇವಾಲಯಗಳನ್ನು ಅವರೇ ಕಟ್ಟಿದರು. ಪ್ರಮುಖ ಧಾರ್ಮಿಕ ಉತ್ಸವಗಳಾದ ದಸರಾ, ದೀಪಾವಳಿ, ಕೃಷ್ಣಾಷ್ಟಮಿ ಮತ್ತು ರಾಮನವಮಿಗಳನ್ನು ಈ ದೇವಾಲಯಗಳು ವಿಶಿಷ್ಟ ವಿಧಾನದಿಂದ ಆಚರಿಸಿದುವು.

ಇಲ್ಲಿಯೂ ಅವರು ಕೊಂಕಣಿ ಭಾಷೆಯನ್ನು ಕನ್ನಡ ಲಿಪಿಯಲ್ಲಿ ಬರೆಯುವುದನ್ನು ಮುಂದುವರಿಸಿದರು. ಇದು ಗೋವೆಯಲ್ಲಿ ಜಾರಿಯಲ್ಲಿ ಇದ್ದ ಪದ್ಧತಿಯ ಮುಂದುವರಿಕೆಯಾಗಿತ್ತು.

ಈ ದೋಷವು ದಕ್ಷಿಣ ಮತ್ತು ಉತ್ತರ ಕನ್ನಡದಲ್ಲೂ ಕಂಡು ಬಂತು. ಇದೆಲ್ಲವೂ ಕನ್ನಡವೆಂದು ಭಾವಿಸಿದ ಆಂಗ್ಲ ಆಡಳಿತಗಾರರು ಕನ್ನಡ ಜಿಲ್ಲೆಗಳಲ್ಲಿ ಕನ್ನಡವನ್ನೇ ಆಡಳಿತ ಭಾಷೆಯಾಗಿ ಮಾಡಿದರು. ಕನ್ನಡವನ್ನು ಶಾಲೆಗಳಲ್ಲಿ ಜಾರಿಗೆ ತರುವ ವರೆಗೆ ಶೆಣ್ವಿಗಳು ತಮ್ಮ ಈ ಪದ್ಧತಿಯನ್ನು ಮುಂದು ವರಿಸಿದರು. ಆದರೆ ಕ್ರೈಸ್ತರು ಇಂದಿಗೂ ಇದೇ ಪದ್ಧತಿಯನ್ನು ಮುಂದುವರಿಸುತ್ತಾರೆ. ಅವರ ಎಲ್ಲಾ ಧಾರ್ಮಿಕ ಬರವಣಿಗೆಗಳೂ ಅವರ ಪತ್ರಿಕೆಗಳೂ ಕೊಂಕಣಿ ಭಾಷೆ ಮತ್ತು ಕನ್ನಡ ಲಿಪಿಯಲ್ಲಿವೆ.

ಹೀಗೆ ಕರ್ನಾಟಕಕ್ಕೆ ಕೊಂಕಣಿ ಹೊಸತಲ್ಲ. ಅದು ಹಳೆಯ ಕಾಲದಿಂದಲೂ ಇದ್ದು ಕರ್ನಾಟಕದ ಅನೇಕ ಭಾಗಗಳಲ್ಲಿ ಕಾಣಬರುತ್ತಿತ್ತು. ಅದು ಕರ್ನಾಟಕದ ಇತರ ಭಾಷೆಗಳ ಜೊತೆ ಮುಂದೊತ್ತುತ್ತಲಿದೆ.

ಕೊಂಕಣಿ ಮಾತನಾಡುವವರು ಇತರ ಕನ್ನಡ ಮಾತನಾಡುವ ಜನರ ಜೊತೆ ಸ್ನೇಹದಿಂದ ಬಾಳಿ ಬದುಕಿದ್ದಾರೆ.

ತಮ್ಮ ಆರ್ಯ ಪಿತೃಪ್ರಧಾನ ಸಂಸ್ಕೃತಿಯಿಂದ ಕರ್ಣಾಟಕದ ಸಾಂಸ್ಕೃತಿಕ ಜೀವನಕ್ಕೆ ತಮ್ಮದೇ ಆದ ಕೊಡುಗೆಯನ್ನು ಕೊಂಕಣಿಗರು ನೀಡಿದ್ದಾರೆ.

ಮೂಲ ಲೇಖಕರು : ಶ್ರೀ ಎಸ್. ಸಿಲ್ವ
ಅನುವಾದಕರು : ಡಾ॥ ಸೂರ್ಯನಾಥ ಕಾಮತ್

# 6. ಕೊಡಗು ಭಾಷೆ ಮತ್ತು ಸಾಹಿತ್ಯ

ಕೊಡಗು ಪ್ರಾಂತದಲ್ಲಿರುವ ಕೊಡಗರು ಅಥವಾ ಕೂರ್ಗಿಗಳೂ ತಮ್ಮ ಆಚಾರ-ವಿಚಾರ ಉಡುಗೆ ತೊಡುಗೆಗಳಲ್ಲಿ ಅವರನ್ನೇ ಅನುಸರಿಸುವ ಇತರರೂ ಆಡುವ ಭಾಷೆಯೇ ಕೊಡಗು ಭಾಷೆ. ಈ ಭಾಷೆಗೆ ತನ್ನದೇ ಆದ ಲಿಪಿ ಇಲ್ಲ. ಬರೆಯುವುದಕ್ಕೆ ಕನ್ನಡ ಲಿಪಿಯನ್ನೇ ಬಳಸುತ್ತಾರೆ. ಇದು ಹಳಗನ್ನಡದ ಒಂದು ಉಪಭಾಷೆ. ಇದರಲ್ಲಿ ಜೊತೆಯಾಗಿ ಮಲಯಾಳ ಮತ್ತು ತಮಿಳು ಪದಗಳು ಕಲಬೆರಕೆಯಾಗಿವೆ. ಇವೆರಡರಲ್ಲಿ ಮಲಯಾಳ ಪದಗಳೇ ಹೆಚ್ಚಾಗಿ ಸೇರಿಕೊಂಡಿವೆ.

ಮಾನ್ಯ ರಿಚ್ಚರ್ ಅವರ ಅಭಿಪ್ರಾಯದಂತೆ, ಈ ಕೊಡಗು ಭಾಷೆಯು ಮಾತುಕತೆಗೆ ಬಹಳ ಒಳ್ಳೆಯ ಸಾಧನ. ಧ್ವನಿಯನ್ನು ಉಂಟುಮಾಡುವ ಅಂಗಗಳ ಮೇಲೆ ಈ ಭಾಷೆಯಿಂದ ಬಹಳ ಶ್ರಮವಾಗುವುದಿಲ್ಲ. ಏಕೆಂದರೆ ಈ ಭಾಷೆಯಲ್ಲಿ ಪದ ಸಂಕೋಚನಗೊಳಿಸುವ ರೂಪಗಳೂ ಇದ್ದಕ್ಕಿದ್ದಂತೆಯೇ ಕೊನೆಯಾಗುವ ಅರ್ಧ ಸ್ವರಾಕ್ಷರದ ಪ್ರತ್ಯಯಗಳೂ ಬಹಳ. ಈ ಭಾಷೆಗೆ ಭಾವವನ್ನು ಅಭಿವ್ಯಕ್ತಮಾಡುವ ಶಕ್ತಿ ಕನ್ನಡದಷ್ಟಿಲ್ಲ. ಆದರೆ, ತುಟಿಗಳ ಮೂಲಕ ಧ್ವನಿಯನ್ನು ಜಾರಿಸುತ್ತ ಉಚ್ಚಾರ ಮಾಡುವುದು ಬಹಳ ಸುಲಭ. ಈ ಭಾಷೆಯಲ್ಲಿ ಶಬ್ದಗಳೂ ಶಬ್ದರೂಪಗಳೂ ಸಮೃದ್ಧವಾಗಿವೆ. ಕೊಡಗಿನ ಹಾಡುಗಳ ಹಾಡಿಕೆಯಲ್ಲಿ ಇದನ್ನು ಕಾಣಬಹುದು. ನಿರರ್ಗಳವಾಗಿ ಹರಿಯುವ ಸರಳ ರೀತಿಯ ವಿನೋದ ಕವಿತೆಗಳಿಗೆ ಅಥವಾ ಗಂಭೀರ ಕವಿತೆಗಳಿಗೆ ಈ ಭಾಷೆ ಚೆನ್ನಾಗಿ ಹೊಂದುತ್ತದೆ. ಕೊಡಗು ಭಾಷೆಯಲ್ಲಿ 33 ಅಕ್ಷರಗಳಿವೆ. 12 ಸ್ವರಗಳು, ಒಂದು ಅರ್ಧ ವ್ಯಂಜನ ಮತ್ತು 20 ವ್ಯಂಜನಗಳು. ಅಲ್ಲಿ ಮಹಾಪ್ರಾಣ ವ್ಯಂಜನಗಳಿಲ್ಲ.

ಅರ್ಧ ವ್ಯಂಜನ ಅಥವಾ ಸ್ವರ ಮತ್ತು ವ್ಯಂಜನಗಳಿಗೆ ಮಧ್ಯಸ್ಥವಾದ ಧ್ವನಿಯೇ ಬಿಂದು. ಸಂದರ್ಭಕ್ಕೆ ಅನುಸಾರವಾಗಿ ಇದು ಮ್, ನ್, ಅಥವಾ ಙ್—ಮುಂತಾದ ಧ್ವನಿಗಳನ್ನು ಉಂಟು ಮಾಡುತ್ತದೆ.

ಕೊಡಗು ಭಾಷೆಯನ್ನು ಬರೆಯುವಾಗ ಪದೇ ಪದೇ ಅರ್ಧಾಕ್ಷರಗಳನ್ನು ಬಳಸುವುದು ಜಾಸ್ತಿ. ಸಂಬಂಧಪಟ್ಟ ವ್ಯಂಜನಗಳ ಮೇಲೆ ವಿಲಕ್ಷಣವಾದ ಮತ್ತು ಸ್ಪಷ್ಟವಾದ ಒಂದು ಚಿಹ್ನೆಯಿಂದ ಇದನ್ನು ಗುರುತಿಸುತ್ತಾರೆ. ಆದರೂ ಈ ಅರ್ಧಾಕ್ಷರಗಳು ಮೂಕ ವ್ಯಂಜನಗಳಲ್ಲ. ಇವುಗಳ ಜೊತೆಯಲ್ಲಿ ಎರಡು ವಿಶೇಷ ರೀತಿಯ ಸಂಕ್ಷೇಪವಾದ ಮತ್ತು ತಟಸ್ಥವಾದ ಸ್ವರಗಳು ಅನುಸರಿಸುತ್ತವೆ. ಅವು ಯಾವುವೆಂದರೆ 'ಒ' ಮತ್ತು 'ಉ'.

ಕೆಲವು ಪದಗಳನ್ನು ಉಚ್ಚಾರಮಾಡುವಾಗ ಕೊನೆಯಲ್ಲಿ ಸ್ವಲ್ಪ ಮಟ್ಟಿಗೆ ಅನುನಾಸಿಕಧ್ವನಿ ಉಂಟಾಗುತ್ತವೆ. ಉದಾಹರಣೆಗೆ ಕನ್ನಡದಲ್ಲಿ 'ಅವನ' ಎನ್ನುವಾಗ ಕೊಡಗಿನಲ್ಲಿ 'ಅವಂಡ' ಎಂದಾಗುತ್ತದೆ.

ಮೃದು ಮತ್ತು ಕರ್ಕಶ ವ್ಯಂಜನಗಳು ಅನೇಕ ಸಾರಿ ಅದಲು ಬದಲಾಗುತ್ತವೆ. ಕೆಲವು ಸಾರಿ ಏಕ ವ್ಯಂಜನಗಳು ದ್ವಿತ್ವಹೊಂದುತ್ತಿವೆ. ಉದಾಹರಣೆಗೆ ಕನ್ನಡದ 'ಉಂಟು' ಈ ಭಾಷೆಯಲ್ಲಿ 'ಉಂಡ್'

ಎಂದಾಗುತ್ತದೆ. ಕನ್ನಡದ 'ಈಗ' ಇಲ್ಲಿ 'ಇಕ್ಕ' ಎಂದಾಗುತ್ತದೆ. ಕೆಲವು ಸಾರಿ ಸಂಯುಕ್ತ ವ್ಯಂಜನಗಳು ಒಡೆದು ಪ್ರತ್ಯೇಕವಾಗುತ್ತವೆ: ಉದಾಹರಣೆಗೆ ಕನ್ನಡದಲ್ಲಿ 'ಎಂಥ' ಎಂಬ ರೂಪ ಕೊಡಗು ಭಾಷೆಯಲ್ಲಿ 'ಎನ್ನತ' ಎಂಬ ರೂಪವನ್ನು ಪಡೆಯುತ್ತದೆ. ಕೆಲವು ಸಾರಿ ಪದಗಳ ಆರಂಭದಲ್ಲಿ ಬರುವ ಕನ್ನಡದ ಅಕ್ಷರ 'ಹ' ಕೊಡಗಿನಲ್ಲಿ ಹಳಗನ್ನಡದ ರೂಪವಾದ 'ಪ' ಕಾರವನ್ನೇ ಉಳಿಸಿಕೊಳ್ಳುತ್ತದೆ. ಉದಾಹರಣೆಗೆ 'ಪಾಲ್' (ಹಾಲು), 'ಪುಡಿ' (ಹಿಡಿ).

ಕೊಡಗು ಭಾಷೆಯಲ್ಲಿ ನಾಮಪದ ಮತ್ತು ಕ್ರಿಯಾಪದಗಳ ಮೂಲರೂಪಗಳು ಏಕೋಚ್ಚಾರದಿಂದಲೂ ದ್ವಿಸ್ವರೋಚ್ಚಾರಣೆಯಿಂದಲೂ ಕೂಡಿರುತ್ತವೆ (ಏಕಾಕ್ಷರಗಳು ಅಥವಾ ದ್ವ್ಯಕ್ಷರಗಳು). ಇವುಗಳನ್ನು ಹಿಂದಿನ ಹಳಗನ್ನಡ ರೂಪಕ್ಕೋ ಅಥವಾ ದ್ರಾವಿಡ ಭಾಷೆಗಳೆಲ್ಲಕ್ಕೂ ಸಮಾನವಾಗಿ ಸೇರಿದ ಮೂಲದ್ರಾವಿಡ ಶಬ್ದರೂಪಕ್ಕೋ ಸಂಬಂಧಿಸಿ ಗುರುತಿಸಬಹುದು. ತದ್ಭವ ರೂಪದಲ್ಲಿ ಅನೇಕ ಸಂಸ್ಕೃತ ಪದಗಳೂ ಸೇರಿವೆ. ಅವೆಲ್ಲವೂ ವಿಲಕ್ಷಣವಾದ ರೂಪಗಳನ್ನು ಪಡೆದಿವೆ. ಉದಾಹರಣೆಗೆ ಸಂಸ್ಕೃತದ 'ಯೋಗಿ' ಶಬ್ದವು ಕನ್ನಡದಲ್ಲಿ ತದ್ಭವವಾಗಿ 'ಜೋಗಿ' ಆಗಿದೆ. ಅದೇ ಕೊಡಗಿನಲ್ಲಿ 'ಜೋಯಿ' ಆಗಿದೆ. ಕೊಡಗಿನಲ್ಲಿ ಮುಸಲ್ಮಾನರ ಹೊಕ್ಕು ಬಳಕೆಯಿಂದ ಭಾಷೆಯು ಸಮೃದ್ಧಗೊಂಡು ಹಿಂದುಸ್ತಾನಿ ವಾಕ್ಸರಣಿಯೂ ಸೇರಿದೆ. ಹತ್ತೊಂಬತ್ತನೆಯ ಶತಮಾನದ ಅಂತ್ಯಭಾಗನಲ್ಲಿಯೂ ಇಪ್ಪತ್ತನೆ ಶತಮಾನದ ಆದಿಭಾಗದಲ್ಲಿಯೂ ಬ್ರಿಟಿಷರು ಕೊಡಗು ಪ್ರಾಂತ್ಯದ ಶಾಲೆಗಳಲ್ಲಿ ಇಂಗ್ಲಿಷ್ ಕಲಿಕೆಗೆ ಬಹಳ ಉತ್ತೇಜನ ಕೊಟ್ಟರು. ಇದರ ಪರಿಣಾಮವಾಗಿ ಸಾಮಾನ್ಯ ಬಳಕೆಯ ಇಂಗ್ಲಿಷ್ ಪದಗಳು ಹೆಚ್ಚಿನ ಸಂಖ್ಯೆಯಲ್ಲಿ ಕೊಡಗು ಭಾಷೆಯಲ್ಲಿ ಸೇರಿಕೊಂಡವು.

ಬೇರೆ ಬೇರೆ ದ್ರಾವಿಡ ಭಾಷೆಗಳ ವ್ಯಾಕರಣಗಳ ಬಳಕೆಯನ್ನು ಗಮನಿಸಿ ಕೊಡಗು ಭಾಷೆಯ ನಾಮಪದಗಳಲ್ಲಿ ಏಳು ಅಥವಾ ಎಂಟು ವಿಭಕ್ತಿ ರೂಪಗಳನ್ನು ಗುರುತಿಸಬಹುದು. ಆದರೆ ಅವುಗಳಲ್ಲಿ ಬಹುಪಾಲು ಪ್ರತ್ಯಯಗಳನ್ನು ಜೋಡಿಸಿ ಆದವು. ಈ ವಿಭಕ್ತಿಗಳನ್ನು ಐದಕ್ಕೆ ಇಳಿಸಬಹುದು. ಯಾವುವೆಂದರೆ: ಪ್ರಥಮಾ ವಿಭಕ್ತಿ, ದ್ವಿತೀಯಾ ವಿಭಕ್ತಿ, ಷಷ್ಠೀ ವಿಭಕ್ತಿ, ಚತುರ್ಥೀ ವಿಭಕ್ತಿ ಮತ್ತು ಸಂಬೋಧನಾ ವಿಭಕ್ತಿ.

ವಿಶೇಷಣಗಳು ಮೊದಲೂ ಅವು ವಿಶೇಷಿಸುವ ನಾಮಪದಗಳು ಆ ಮೇಲೆಯೂ ಬರುತ್ತವೆ. ಕನ್ನಡದಲ್ಲಿ ಇರುವಂತೆಯೇ ಅವುಗಳ ಸಂಖ್ಯೆ ಬಹಳ ಇಲ್ಲ. ಆದರೆ ಅನೇಕ ರೂಪಗಳು ನಾಮಪದಗಳಿಂದ ಆಗುತ್ತವೆ. ನಾಮಪದಗಳಿಗೆ ಅವ್ಯವಸ್ಥಿತ ಕೃದಂತಗಳನ್ನು (ನಾಮವಾಚಕಕ್ಕೆ ವಿಶೇಷಣವಾಗುಳ್ಳ ಆದರೆ ಕ್ರಿಯಾಪದಗಳ ಲಕ್ಷಣಗಳನ್ನುಳ್ಳ) 'ಆನ' (ಆಗಿ) ಮತ್ತು 'ಉಳ್ಳೊ' (ಉಳ್ಳ) ಎಂಬಿವನ್ನು ಅಂಟಿಸುವುದರಿಂದ ಸಿದ್ಧವಾಗುತ್ತವೆ. ಉದಾಹರಣೆಗೆ: 'ಚಾಯಿ' (ಚೆಲುವು, ಚೆಂದ, ಸೌಂದರ್ಯ), 'ಚಾಯಾನ' (ಚೆಲುವಿನ, ಸುಂದರವಾದ); 'ಪಣ' (ಹಣ) 'ಪಣಉಳ್ಳ' (ಹಣವಂತ, ಸಿರಿವಂತ, ದುಡ್ಡುಳ್ಳ). ಸಂಬಂಧಸೂಚಕ ಕೃದಂತಗಳನ್ನು ಸಹ ಅನೇಕ ಸಾರಿ ವಿಶೇಷಣಗಳನ್ನಾಗಿ ಬಳಸಲಾಗುತ್ತದೆ. ಉದಾಹರಣೆಗೆ: ಪಾಡುವೊ ಪಕ್ಷಿ—ಹಾಡುವ ಹಕ್ಕಿ.

ಸಂಖ್ಯಾವಾಚಕ ವಿಶೇಷಣಗಳು ಒಂದು ಭಾಷೆಯ ಹುಟ್ಟಿಗೆ ಕಾರಣವಾದ ಪ್ರಮಾಣಗಳೆಂದು ಭಾವಿಸುತ್ತಾರೆ. ಆ ಸಂಖ್ಯಾವಾಚಕಗಳು ಕೊಡಗು ಭಾಷೆಯಲ್ಲಿ ಇತರ ದ್ರಾವಿಡಭಾಷೆಗಳಲ್ಲಿರುವಂತೆಯೇ ಇವೆ. ಕೊಡಗು ಭಾಷೆಯಲ್ಲಿ ಮೂಲ ಸಂಖ್ಯೆಗಳು ಒಂದರಿಂದ ಹನ್ನೆರಡರ ವರೆಗೆ ಅನುಕ್ರಮವಾಗಿ ಹೀಗಿವೆ:

ಒಂದ್, ದಂಡ್, ಮೂಂದ್, ನಾಲ್, ಅಂಜಿ, ಆರ್, ಯೇಳ್, ಯೆಟ್ಟ್, ಒಯಿಂಬದ್, ಪತ್ತ್, ಪನ್ನೊಂದ್, ಪನ್ನೆರಂಡ್. 'ದಂಡ್' ಎಂಬುದು ಸೇರುವ ಪ್ರತಿಯೊಂದು ಸಂಯುಕ್ತ ಸಂಖ್ಯೆಯಲ್ಲೂ 'ರಂಡ್' ಎಂಬುದು ಅದಕ್ಕೆ ಆದೇಶವಾಗುತ್ತದೆ. ಇದು ಕನ್ನಡದ 'ಎರಡು' ಅಥವಾ ತಮಿಳಿನ 'ಇರಂಡು' ಇವನ್ನು ಹೋಲುತ್ತದೆ.

### ಸರ್ವನಾಮಗಳು

ಕೊಡಗು ಭಾಷೆಯ ಸರ್ವನಾಮಗಳು ಹೆಚ್ಚಾಗಿ ಕನ್ನಡವನ್ನೇ ಹೋಲುತ್ತವೆ.

### ಕ್ರಿಯಾಪದಗಳು

ಕೊಡಗು ಭಾಷೆಯಲ್ಲಿ ಎರಡು ರೀತಿಯಲ್ಲಿ ಧಾತು ರೂಪಗಳನ್ನು ನಡೆಸಬಹುದು. ಒಂದು ರೀತಿಯ ಕ್ರಿಯಾಪದಗಳು 'ಉ'ಕಾರದಿಂದ ಕೊನೆಗೊಳ್ಳುತ್ತವೆ. ಉಳಿದವು 'ಇ' 'ಒ'. 'ಅ'ಕಾರಗಳಲ್ಲಿ ಕೊನೆಗೊಳ್ಳುತ್ತವೆ. 'ಉ' ಕಾರದಿಂದ ಕೊನೆಗೊಳ್ಳುವ ಕ್ರಿಯಾಪದಗಳು ತಮ್ಮ ಮೂಲ ರೂಪಗಳಿಗೆ ವರ್ತಮಾನ ಕಾಲದಲ್ಲಿ 'ವೊ' ಎಂಬ ಪ್ರತ್ಯಯವನ್ನು ಪಡೆಯುತ್ತವೆ. ಭೂತಕಾಲದ ಸಂಬಂಧ ಸೂಚಕ ಕೃದಂತದಲ್ಲಿ 'ನವೊ' ಎಂದಾಗುತ್ತವೆ. ಉದಾಹರಣೆಗೆ ಧಾತು: 'ಪಾಡ್' ಏಕವಚನ ವರ್ತಮಾನ ಕೃದಂತ 'ಪಾಡುವವೊ' (ಹಾಡುವವನು) 'ಎ'ಕಾರ ಕೊನೆಯಾಗುವ ಕ್ರಿಯಾಪದಗಳು 'ತೊ'ಕಾರವನ್ನೂ 'ಪೊ'ಕಾರವನ್ನೂ ತಾಳುತ್ತವೆ. ಉದಾಹರಣೆಗೆ ಧಾತು: 'ನೆನೆ' (ಯೋಚಿಸು) ವರ್ತಮಾನ ಸಂಬಂಧ ಸೂಚಕ ಕೃದಂತ 'ನೆನೆಪೊ' (ಯೋಚಿಸುತ್ತೇವೆ), ಭೂತಕಾಲದ ಸಂಬಂಧ ಸೂಚಕ ಕೃದಂತ (ನೆನೆತೊ—ನೆನೆದವನು). ಧಾತು, ವರ್ತಮಾನ ಮತ್ತು ಭೂತಕೃದಂತ ರೂಪ—ಇವುಗಳಿಂದ ಬೇರೆ ಬೇರೆ ಕ್ರಿಯಾರೂಪಗಳೆಲ್ಲ ಸಿದ್ಧವಾಗುತ್ತವೆ.

### ಕ್ರಿಯಾವಿಶೇಷಣಗಳು

ಕನ್ನಡದಲ್ಲಿರುವಂತೆಯೇ ಕೊಡಗು ಭಾಷೆಯಲ್ಲಿಯೂ ಕ್ರಿಯಾ ವಿಶೇಷಣಗಳು ನಾಮಪದಗಳಿಗೆ 'ಆಯ್ತ್' (ಕನ್ನಡ: ಆಗಿ) ಎಂಬ ಉಪಸರ್ಗಗಳನ್ನು ಸೇರಿಸುವುದರಿಂದ ಉಂಟಾಗುತ್ತವೆ.

ಬಹಳ ಸಾಮಾನ್ಯವಾಗಿರುವ ಕಾಲವಾಚಕ ಮತ್ತು ಸ್ಥಳವಾಚಕ ಕ್ರಿಯಾವಿಶೇಷಣಗಳು ಯಾವುವೆಂದರೆ: ಯೆಕ್ಕ–ಯಾವಾಗ; 'ಇಕ್ಕ'–ಈಗ; 'ಅಕ್ಕ–ಆಗ; 'ಯೆಂದ್–ಎಂದು, ಯಾವ ದಿನ; 'ಇಂದ್'–ಈ ದಿನ; 'ಅಂದ್'–ಆ ದಿನ; 'ಯೆಲ್ಲಿ'–ಎಲ್ಲಿ; 'ಇಲ್ಲಿ'–ಇಲ್ಲಿ; 'ಅಲ್ಲಿ'–ಅಲ್ಲಿ.

### ವಾಕ್ಯರಚನೆ

ಕೊಡಗು ಭಾಷೆಯ ವಾಕ್ಯರಚನೆಯು ಉಳಿದ ದ್ರಾವಿಡ ಭಾಷೆಗಳೊಡನೆ ಸಾಮರಸ್ಯ ಉಳ್ಳದ್ದು. ಮುಖ್ಯ ಕ್ರಿಯಾಪದವು ತಪ್ಪದೆ ವಾಕ್ಯದ ಕೊನೆಯಲ್ಲಿ ಬರುತ್ತದೆ. ಮತ್ತು ಸಾಮಾನ್ಯವಾಗಿ ಕರ್ತೃಪದ, ಕರ್ಮಪದ, ಕ್ರಿಯಾಪದ ಇವುಗಳ ವಿಶೇಷಣಗಳು–ಅವು ಪದ, ಪದಪುಂಜ, ಅಥವಾ ವಾಕ್ಯ ಯಾವುದೇ ಆಗಿದ್ದರೂ ಅವು ವಿಶೇಷಿಸುವ ಕರ್ತೃ, ಕರ್ಮ, ಕ್ರಿಯಾ ಪದಗಳಿಗಿಂತ ಮೊದಲೇ ಬರುತ್ತವೆ.

**ಕೊಡಗು ಸಾಹಿತ್ಯ**

ಕೊಡಗು ಭಾಷೆಯಲ್ಲಿ ಈ ಶತಮಾನದ ಎರಡನೆಯ ದಶಕದ ವರೆಗೂ ಸ್ಥಳೀಯವಾದ ಕೆಲವು ಹಾಡುಗಳ ಹೊರತು ಯಾವ ರೀತಿಯ ಸಾಹಿತ್ಯವೂ ಇರಲಿಲ್ಲ. ಈ ಹಾಡುಗಳ ವಸ್ತು ವೈವಿಧ್ಯವೂ ಸೀಮಿತವಾದದ್ದು. ಈ ಹಾಡುಗಳನ್ನು ಪಳಮೆಗಳು (ಪ್ರಾಚೀನ ರಚನೆಗಳು) ಎಂದು ಕರೆಯುತ್ತಾರೆ. ಸಮಾಜ ಜೀವನದ ಮುಖ್ಯ ಘಟನೆಗಳು—ಮದುವೆ, ಸಾವು, ಹಬ್ಬ ಮುಂತಾದವುಗಳನ್ನು ಕುರಿತವು ಇವು. ಸುಗ್ಗಿಯ ಹಾಡು, ಮದುವೆಯ ಹಾಡು, ಮೊದಲಾದ ಹಾಡುಗಳಲ್ಲಿ ಕೊಡಗು ಭಾಷೆಯ ಎಲ್ಲ ವೈಶಿಷ್ಟ್ಯಗಳನ್ನೂ ಕಾಣಬಹುದು. ಆ ಹಾಡುಗಳು ಬಹಳ ಪ್ರಾಚೀನವಾಗಿದ್ದು ಅವುಗಳನ್ನು ಬರೆದವರಾರೆಂಬುದು ತಿಳಿಯದಾಗಿದೆ. ಪ್ರಾಚೀನ ವಾದ ಒಂದು 'ಪಳಮೆ' ಯಲ್ಲಿ ದೇಶವನ್ನು 35 ನಾಡುಗಳನ್ನಾಗಿ ವಿಭಾಗಿಸಿದ್ದ ವಿಚಾರ ತಿಳಿಯಬರುತ್ತದೆ. ಉಳಿದವುಗಳು ಬಹಳ ಇತ್ತೀಚಿನ ರಚನೆಗಳು. ಇವುಗಳಲ್ಲಿ ಅಸಂಖ್ಯಾತವಾದ ಆಧುನಿಕ ಕನ್ನಡದ ರೂಪಗಳು ದೊರೆಯುತ್ತವೆ. ಪ್ರಾಚೀನಕಾಲದ ಮೂಲದ ಮಾತಿನ ಸರಣಿಯನ್ನೇ ಅಲ್ಪಸ್ವಲ್ಪ ಬದಲಾವಣೆ ಗಳಿಂದ ಹೊಸ ರಚನೆಗಳನ್ನಾಗಿ ಮಾಡಬಹುದು. ಇವನ್ನೇ ಸಂದರ್ಭಾನುಸಾರ ಕೊಡಗಿನ ಕವಿತೆಯ ಹೊಸ ರಚನೆಗೆ ಬಳಸಿಕೊಳ್ಳಬಹುದು.

ಕೊಡಗಿನ ಕೈಪಿಡಿಯನ್ನು (Coorg Manual 1870) ರಚಿಸಿದ ರಿಚ್ಟರ್, ಕೊಡಗಿನ ಹಾಡುಗಳ ಬಗೆಗೆ ಈ ಅಭಿಪ್ರಾಯವನ್ನು ಕೊಡುತ್ತಾನೆ : "ಇವು ಕೊಡಗಿನ ಜನಗಳ ಮನಸ್ಸನ್ನು ಅವರ ಸ್ವಂತ ಭಾಷೆಯಲ್ಲಿ ಚೆನ್ನಾಗಿ ಪ್ರತಿಬಿಂಬಿಸುತ್ತವೆ. ಯೂರೋಪಿನವರ ಸಂಸ್ಕೃಯಿಂದ ಪ್ರಭಾವಿತವಾಗಿಲ್ಲ. ಈ ಹಾಡುಗಳು ಬಹಳ ಆಸಕ್ತಿ, ಕುತೂಹಲಗಳನ್ನು ಹುಟ್ಟಿಸುತ್ತವೆ. ಅವುಗಳಲ್ಲಿರುವ ಸಹಜವಾದ ಸೌಂದರ್ಯವು ಸಾಕಷ್ಟು ಕಾವ್ಯಗುಣವನ್ನು ಪ್ರದರ್ಶಿಸುತ್ತವೆ. ಕೆಲವುಗಳಲ್ಲಿ ಅಡಕವಾಗಿರುವ ಹಿತವಾದ ಹಾಸ್ಯ ಹೃದಯಂಗಮವಾಗಿದೆ."

ಕನ್ನಡದ ಪದ್ಯರಚನೆಯ ನಿಯಮಗಳು ಕೊಡಗಿನ ಹಾಡುಗಳಿಗೆ ಅನ್ವಯಿಸುವುದಿಲ್ಲ. ಇವು ಅಷ್ಟು ಕಲಾತ್ಮಕವಾಗಿ ರಚಿತವಾಗಿಲ್ಲ. ತಡೆಯಿಲ್ಲದೆ ಬೀಸುವ ಗುಡ್ಡಗಾಡಿನ ಗಾಳಿಯಂತೆ ಒಂದು ಸ್ವಾತಂತ್ರ್ಯದ ಹರಿವಿದೆ. ಈ ಹಾಡುಗಳು ಸಂತೋಷವನ್ನು ಸೂಚಿಸುವುದಕ್ಕೆ ತಕ್ಕ ' ಐಯಾಂಬಿಕ್ ' (Iambic) ಗತಿಯಲ್ಲಿ ನಡೆಯುವುದಿಲ್ಲ, ನಿಜ. ಗಂಭೀರವಾದ ಟ್ರೋಕೀ (Trochaic) ಗಣದ ಗತಿ ಕೊಡಗಿನವರ ಮನಸ್ಸಿಗೆ ಹೆಚ್ಚು ಹೊಂದಿಕೆಯಾಗುತ್ತದೆ. ಪ್ರತಿಯೊಂದು ಸಾಲಿನಲ್ಲಿಯೂ 7 ಅಥವಾ 8 ಅಕ್ಷರ ಗಳಿರುತ್ತವೆ. ಆದರೆ ತಾಳಕ್ಕನುಸಾರವಾದ ಸ್ವರಭಾರವನ್ನೂ ಛಾಪುಗಳನ್ನೂ ಎಚ್ಚರಿಕೆಯಿಂದ ಗಮನಿ ಸುವುದಿಲ್ಲ ; ಮತ್ತು ಪ್ರಾಸಾನುಪ್ರಾಸಗಳಾಗಲೀ ಇರುವುದಿಲ್ಲ. ಅದರ ಸರಳತೆಯ ಸ್ವರೂಪದಲ್ಲಿ ಕೊಡಗು ಛಂದಸ್ಸನ್ನು ಇಂಗ್ಲೀಷಿನ ಸರಳರಗಳೆಗೆ (Blank Verse) ಸುಲಭವಾಗಿ ಹೋಲಿಸಬಹುದು.

ಕೊಡಗಿನ ಪಳಮೆಗಳು ಅಥವಾ ಹಾಡುಗಳು ಬೇರೆ ಬೇರೆ ವಸ್ತು ವೈವಿಧ್ಯಗಳನ್ನುಳ್ಳವು : ಮಲಬಾರಿನ ದೇವತೆಗಳನ್ನು ಕೊಡಗಿನಲ್ಲಿ ಪ್ರತಿಷ್ಠಾಪಿಸುವುದು, ಪ್ರಾಚೀನ ಕಾಲದ ಕೊಡಗು ವೀರರುಗಳು ಮಾಡಿದ ಸಾಹಸಕಾರ್ಯಗಳನ್ನು ವರ್ಣಿಸುವುದು, ಮದುವೆಯ ಕಾಲದಲ್ಲಿ ಹಾಗೂ ಸಾವು ಸಂಭವಿಸಿ ಅಂತ್ಯ ಕ್ರಿಯೆಗಳನ್ನು ಮಾಡುವಲ್ಲಿಯೂ ಹುತ್ತರಿ ಮುಂತಾದ ಹಬ್ಬಗಳನ್ನು ಆಚರಿಸುವಲ್ಲಿಯೂ ಸುಗ್ಗಿಯ ಸಂದರ್ಭದಲ್ಲಿಯೂ ಕೊಡಗಿನವರು ಆಚರಿಸುವ ರೀತಿನೀತಿಗಳು, ಆಚಾರ ವ್ಯವಹಾರಗಳು ಮುಂತಾದವು ಗಳನ್ನು ವರ್ಣಿಸುವುದು—ಇವೇ ಮೊದಲಾದುವು ಈ ಹಾಡುಗಳಲ್ಲಿ ವರ್ಣಿತವಾಗಿವೆ. 19ನೆಯ ಶತಮಾನದ ಉತ್ತರಾರ್ಧದಲ್ಲಿ ' ಗ್ರೇಟರ್ ' ಎಂಬ ಒಬ್ಬ ಜರ್ಮನ್ ಪಾದ್ರಿಯು ಕೊಡಗಿನ ಭಾಷೆಯನ್ನು ಕಲಿತು ಅನೇಕ ಕೊಡಗು ಹಾಡುಗಳನ್ನು ಇಂಗ್ಲೀಷಿಗೆ ಭಾಷಾಂತರ ಮಾಡಿದನು.

1924ರಲ್ಲಿ ಎನ್.ಐ. ಚಿಣ್ಣಪ್ಪನವರು ಮೊತ್ತಮೊದಲು ಕೊಡಗಿನ 'ಪಳಮೆ'ಗಳನ್ನು ಸಂಗ್ರಹಿಸಿ ಪ್ರಕಾಶಪಡಿಸಿದರು. ಆ ಸಂಗ್ರಹಕ್ಕೆ 'ಪಟ್ಟೋಲೆ ಪಳಮೆ' ಎಂದು ಹೆಸರು. ಈ ಪಟ್ಟೋಲೆ ಪಳಮೆಯು ಕನ್ನಡ ಭಾಷೆಯಲ್ಲಿ ಬರೆದ ಪುಸ್ತಕ. ಹುಟ್ಟಿನಿಂದ ಮೊದಲುಗೊಂಡು ಸಾವಿನ ವರೆಗೂ ಕೊಡಗಿನವರು ಬೇರೆ ಬೇರೆ ಸಂದರ್ಭಗಳಲ್ಲಿ ಆಚರಿಸುವ ಆಚಾರ ವ್ಯವಹಾರ ಮತ್ತು ಪದ್ಧತಿಗಳನ್ನು ಈ ಗ್ರಂಥವು ವರ್ಣಿಸುತ್ತದೆ. ಇನರಲ್ಲಿ ಕೊಡಗಿನ ಸಂಕ್ಷಿಪ್ತವಾದ ಇತಿಹಾಸವೂ ಇದೆ. ಧಾರ್ಮಿಕ ಪದ್ಧತಿಗಳನ್ನೂ ನಡೆವಳಿಕೆಗಳನ್ನೂ ಸ್ಪಷ್ಟವಾಗಿ ವಿವರಿಸುವುದಕ್ಕಾಗಿ ಈ ಗ್ರಂಥದಲ್ಲಿ ಕೊಡಗು ಹಾಡುಗಳನ್ನು ಸಂಗ್ರಹಿಸಿ ಸೇರಿಸಿದ್ದಾರೆ.

ಇದೇ ಲೇಖಕರು ಭಗವದ್ಗೀತೆಯನ್ನು ಕೊಡಗು ಭಾಷೆಗೆ ಭಾಷಾಂತರ ಮಾಡಿದ್ದಾರೆ. ಇದು 1922ರಲ್ಲಿ ಪ್ರಕಾಶಗೊಂಡಿತು. ಗ್ರಂಥ ರೂಪದಲ್ಲಿ ಪ್ರಕಟವಾದ ಇದಕ್ಕೆ 'ಭಗವಂತಂಡ ಪಾಟ್' ಎಂದು ಹೆಸರು. 'ಪಟ್ಟೋಲೆ ಪಳಮೆ' ಮತ್ತು 'ಭಗವಂತಂಡ ಪಾಟ್' ಇವೆರಡನ್ನು ಕೊಡಗರೂ ಕೊಡಗು ಭಾಷೆಯನ್ನು ಬಲ್ಲವರೂ ಮೆಚ್ಚಿ ಸ್ವಾಗತಿಸಿದ್ದಾರೆ.

ಸುಮಾರು 1920ರ ಸುಮಾರಿನಲ್ಲಿ ಹರದಾಸ ಅಪ್ಪಚ್ಚ ಕವಿ ಕೊಡಗು ಭಾಷೆಯಲ್ಲಿ ಮೂರು ನಾಟಕಗಳನ್ನು ಬರೆದನು. ಅವನು ಈ ಪ್ರಯತ್ನದಲ್ಲಿ ಮೊದಲಿಗ. ಆದರೂ ಅವನು ತನ್ನ ಪ್ರಯತ್ನದಲ್ಲಿ ಬಹಳ ಯಶಸ್ವಿಯಾಗಿದ್ದಾನೆ ಎನ್ನಬೇಕು. ಅವನು ಬರೆದ ಮೂರು ನಾಟಕಗಳು : ಕೊಡಗಿನ ಅಭಿಮಾನಿ ದೇವತೆಯಾದ ಕಾವೇರಿಯ ಮೇಲೂ ಕೊಡಗಿನ ಮತ್ತೊಬ್ಬ ಅಭಿಮಾನಿ ದೇವತೆಯಾದ ಸುಬ್ರಹ್ಮಣ್ಯನ ಮೇಲೂ ಭಾರತದ ಪುರಾಣ ಪ್ರಸಿದ್ಧ ರಾಜನಾದ ಯಯಾತಿಯ ಮೇಲೆಯೂ ರಚಿಸಲ್ಪಟ್ಟಿವೆ. ಸಂಭಾಷಣೆಗಳ ಮಧ್ಯೆ ಬರುವ ಹಾಡುಗಳಿಂದ ಕೂಡಿರುವ ನಾಲ್ಕು ಅಂಕಗಳ ಈ ನಾಟಕಗಳು ಪುರಾತನ ಸಂಪ್ರದಾಯದಲ್ಲಿ ರಚಿತವಾದವು. ಈ ನಾಟಕಗಳು ಈಗಲೂ ಜನಪ್ರಿಯವಾಗಿವೆ.

ಆ ಮೇಲೆ ಕೊಡಗು ಭಾಷೆಯಲ್ಲಿ ಬರೆದ ಮತ್ತೊಂದು ಗ್ರಂಥವೆಂದರೆ, 1947ರಲ್ಲಿ ರಚಿತವಾದ 'ಆರ್ ಬೇರ್ ಪುರಾಣ'. ಈ ಪುಸ್ತಕದಲ್ಲಿಯೂ ಕೊಡಗಿನವರ ಪದ್ಧತಿಗಳು ದಿನನಿತ್ಯದ ಆಚಾರ-ವಿಚಾರ ರೀತಿ-ನೀತಿ ಮುಂತಾದವುಗಳ ವಿವರವಿದೆ. ಗ್ರಂಥವನ್ನು ಬರೆದವರೇ ಕೆಲವು ಹಾಡುಗಳನ್ನು ರಚಿಸಿ ಈ ಪುಸ್ತಕದಲ್ಲಿ ಸೇರಿಸಿದ್ದಾರೆ. ಈ ಪುಸ್ತಕವನ್ನು ಬರೆದವರು ಅಪ್ಪಂಡೆರಂಡ ಗಣಪತಿ ಎಂಬವರು.

ಐ.ಎಂ. ಮುತ್ತಣ್ಣನವರು ಕೊಡಗು ಭಾಷೆಯ ಹಾಡುಗಳನ್ನು ಸಂಗ್ರಹಿಸಿ 1940 ಮತ್ತು 1945ರ ಮಧ್ಯಕಾಲದಲ್ಲಿ ಪ್ರಕಟಪಡಿಸಿದ್ದಾರೆ. ಈ ಗ್ರಂಥದ ಹೆಸರು 'ಪೂಮಾಲೆ' ಎಂದು.

1961 ರಲ್ಲಿ ಪೆರಿಯಂಡ ಚಂಗಪ್ಪನವರು ಕೆಲವು ಕೊಡಗು ಹಾಡುಗಳನ್ನು ರಚಿಸಿದರು. ಈ ಹಾಡುಗಳ ವಸ್ತು ಕಾವೇರಿ ದೇವತೆಯ ಕಥೆ. ಸುಗ್ಗಿ, ಮದುವೆ, ಕೊಡಗರ ವಾಡಿಕೆ, ನಾಡುಗಳ ನಿರ್ಮಾಣ, 'ತಕ್ಕಾರ್' ಎಂದು ಕರೆಸಿಕೊಳ್ಳುವ ಕೊಡಗಿನ ನಾಯಕರಿಗೆ ಸಲ್ಲಿಸುವ ಸ್ವಾಮಿ ನಿಷ್ಠೆ ಮತ್ತು ಅಂತ್ಯ ಸಂಸ್ಕಾರಗಳೇ ಮುಂತಾದ ಇವುಗಳೆಲ್ಲವನ್ನೂ ಒಂದು ಪುಸ್ತಕದ ರೂಪದಲ್ಲಿ ಹೊರತಂದರು. ಈ ಪುಸ್ತಕಕ್ಕೆ 'ಕೊಡವಡ ಅಂದೋಲತ್ ಪಾಟ್' ಎಂದು ಹೆಸರು.

1962 ರಲ್ಲಿ ಬಿ.ಡಿ. ಗಣಪತಿ ಅವರು 'ಕೊಡಗು ಮತ್ತು ಕೊಡವರು' ಎಂಬ ಪುಸ್ತಕವನ್ನು ಕನ್ನಡದಲ್ಲಿ ಬರೆದರು. ಇವರು ಅನೇಕ ಕೊಡಗು ಹಾಡುಗಳನ್ನು ಇದರಲ್ಲಿ ಸೇರಿಸಿದ್ದಾರೆ. ಈ ಹಾಡುಗಳೂ ಕೊಡಗಿನವರ ಆಚಾರವ್ಯವಹಾರಗಳನ್ನು ವಿವರಿಸುತ್ತವೆ. ಕೊಡಗು ಪ್ರದೇಶದಲ್ಲಿ ಬೇರೆ ಬೇರೆ ಕಡೆ

ಪ್ರತಿಷ್ಠಾಪನೆ ಮಾಡಿದ ದೇವತೆಗಳನ್ನು ಕುರಿತ ಹಾಡುಗಳೂ ಇದರಲ್ಲಿವೆ. ಈ ಹಿಂದೆಯೇ ಹೇಳಿರುವ ಎನ್.ಐ. ಚಿಣ್ಣಪ್ಪನವರ ಪುಸ್ತಕವಾದ ' ಪಟ್ಟೋಲೆ ಪಳಮೆ ' ಯಿಂದ ಕೆಲವು ಹಾಡುಗಳನ್ನು ಕೃತಜ್ಞತೆಯಿಂದ ತೆಗೆದುಕೊಳ್ಳಲಾಗಿದೆ.

ಈ ವೇಳೆಗೆ ಮುಕ್ಕಾಟಿರ ಪೂವಯ್ಯನವರು ಕೊಡಗುಭಾಷೆಯಲ್ಲಿ ' ಧ್ರುವ ಕುಮಾರ ' ಎಂಬ ನಾಟಕವೊಂದನ್ನು ಬರೆದಿದ್ದಾರೆ.

ಮೇಲೆ ಹೇಳಿರುವ ಗ್ರಂಥಗಳು ಮಾತ್ರ ಕೊಡಗು ಭಾಷೆಯಲ್ಲಿ ಬರೆಯಲ್ಪಟ್ಟು ಪ್ರಕಾಶಗೊಂಡವು. ಆದರೆ ಎಲ್ಲವೂ ಕನ್ನಡ ಲಿಪಿಯಲ್ಲೇ ಮುದ್ರಿತವಾದವು. ಏಕೆಂದರೆ ಕೊಡಗು ಭಾಷೆಗೆ ಪ್ರತ್ಯೇಕವಾದ ಲಿಪಿಯಿಲ್ಲ. ಕೊಡಗು ಭಾಷೆಗೆ ಪ್ರತ್ಯೇಕ ಲಿಪಿಯೊಂದನ್ನು ದೊರಕಿಸುವ ಪ್ರಯತ್ನವು ಹತ್ತೊಂಬತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ನಡೆಯಿತು. ಹೀಗೆ ಪ್ರಯತ್ನ ಮಾಡಿದವರು ಕೊರವಂಡ ಅಪ್ಪಯ್ಯ ಅವರು. ಆದರೆ ಇವರ ಪ್ರಯತ್ನಕ್ಕೆ ಸಾಕಷ್ಟು ಉತ್ತೇಜನ ದೊರೆಯಲಿಲ್ಲ. ಪರಿಣಾಮವಾಗಿ ಇದನ್ನು ಕೈಬಿಡಲಾಯಿತು. ಈ ಮೊದಲೇ ಹೆಸರಿಸಿರುವ ಕೃತಿಗಳು ' ಕೊಡಗು ಸಾಹಿತ್ಯ ' ಎಂದು ಕರೆಸಿಕೊಳ್ಳುವಷ್ಟು ಉತ್ತಮ ದರ್ಜೆಯಲ್ಲಿಲ್ಲ. ಹರದಾಸ ಅಪ್ಪಚ್ಚ ಕವಿ ಬರೆದ ಕೊಡಗು ನಾಟಕಗಳೂ ಎನ್.ಐ. ಚಿಣ್ಣಪ್ಪನವರು ಬರೆದ ' ಭಗವಂತಂಡ ಪಾಟ್ '—ಇವುಗಳೇ ಸಾಹಿತ್ಯಿಕ ಗುಣವುಳ್ಳವು. ಕೊಡಗಿನ ಪಳಮೆ ಅಥವಾ ಹಾಡುಗಳು ಜನಪದ ಸಾಹಿತ್ಯಕ್ಕೆ ಸೇರುತ್ತವೆ.

ಮೂಲಲೇಖಕರು : ಶ್ರೀ ಡಿ.ಎನ್. ಕೃಷ್ಣಯ್ಯ
ಅನುವಾದಕರು : ಶ್ರೀ ಎಂ. ಚಂದ್ರಶೇಖರ್

# 7. ತುಳು ಭಾಷೆ ಮತ್ತು ಸಾಹಿತ್ಯ

ತುಳು ಭಾಷೆಯು ದಕ್ಷಿಣಭಾರತದ ಪ್ರಾಚೀನ ಭಾಷೆಗಳಲ್ಲಿ ಒಂದು. ದ್ರಾವಿಡ ಭಾಷಾವರ್ಗದಲ್ಲಿ ಅದರ ಸ್ಥಾನ ವಿಶಿಷ್ಟವಾದುದು. ಮೈಸೂರು ಪ್ರಾಂತದ ಕರಾವಳಿ ಜಿಲ್ಲೆಯಾಗಿರುವ ದಕ್ಷಿಣ ಕನ್ನಡದ ಹೆಚ್ಚಿನ ಭಾಗವಾದ ತುಳುನಾಡಿನಲ್ಲಿ ಈ ನುಡಿ ಪ್ರಚಲಿತವಾಗಿದೆ. ಕಾರ್ಕಳ, ಉಡುಪಿ ತಾಲೂಕಿನ ಬಹು ಭಾಗ, ಬಂಟ್ವಾಳ, ಪುತ್ತೂರು ತಾಲೂಕುಗಳು ತುಳುನಾಡಿನ ತಿರುಳೆನ್ನಬಹುದು. ಈಗ ಕೇರಳದಲ್ಲಿ ವಿಲೀನವಾಗಿರುವ ಕಾಸರಗೋಡು ತಾಲೂಕಿನ ಹೆಚ್ಚಿನ ಭಾಗವೂ ತುಳು ಭಾಷೆಯ ಪ್ರದೇಶವಾಗಿದೆ. ತುಳು ನಾಡಿನ ಎಲ್ಲೆಗಳು : ಉತ್ತರ, ಪೂರ್ವ ಮತ್ತು ಆಗ್ನೇಯ ದಿಕ್ಕುಗಳಲ್ಲಿ ಕನ್ನಡ, ದಕ್ಷಿಣದಲ್ಲಿ ಮಲಯಾಳದ ಪ್ರದೇಶಗಳು. ಪಶ್ಚಿಮಕ್ಕೆ ಕಡಲು (ಅರಬಿ ಸಮುದ್ರ). 1961ರ ಖಾನೇಷುಮಾರಿ ವರದಿಯಂತೆ ತುಳು ತಾಯಿನುಡಿಯಾಗಿರುವ ಜನ ಸುಮಾರು ಎಂಟು ಲಕ್ಷ.

ತುಳು ತಾಯ್ನುಡಿಯಾಗಿರುವ ಜನರನ್ನು 'ತುಳುವ' ರೆಂತಲೂ ಆ ಪ್ರದೇಶವನ್ನು 'ತುಳುನಾಡು' ಎಂತಲೂ ಹೇಳುತ್ತಾರೆ. ತುಳು ನಾಡನ್ನು 'ತೌಳವ' ಎಂಬುದಾಗಿ ಸಂಸ್ಕೃತರೂಪವನ್ನುಕೊಟ್ಟು ಶಾಸನಗಳಲ್ಲಿ ಉಲ್ಲೇಖಿಸಿರುತ್ತಾರೆ. ಕ್ರಿ.ಶ. 8ನೆಯ ಶತಮಾನದ ಪಲ್ಲವ ಇಮ್ಮಡಿ ನಂದಿವರ್ಮನ ದಾನಶಾಸನವೊಂದರಲ್ಲಿ 'ತೌಳವ' ಎಂಬ ಸೂಚನೆ ಮೊದಲಿಗೆ ಬಂದದ್ದುಂಟು.

'ತುಳು' ಎಂಬ ಪದದ ವ್ಯುತ್ಪತ್ತಿ ವಿಚಾರವಾಗಿ ಹೇಳುವುದು ಕಷ್ಟ. ಕೆಲವರು ತುಳು ಪದಕ್ಕೆ ಸೌಮ್ಯ, ಮಾರ್ದವ-ಇತ್ಯಾದಿ ಅರ್ಥವನ್ನೂ ಮತ್ತೆ ಕೆಲವರು ಶೌರ್ಯ, ಪರಾಕ್ರಮ-ಇತ್ಯಾದಿ ಅರ್ಥವನ್ನೂ ಕೊಡುತ್ತಾರೆ. ಲೋಕದ ಎಲ್ಲ ಭಾಷೆಗಳಿಗೆ ಆಯಾ ಭಾಷಾಭಿಮಾನಿಗಳು ಅರ್ಥ ಕಟ್ಟುವಂತೆ, ಇಲ್ಲಿನ ಅರ್ಥವೂ ಕೇವಲ ಕಾಲ್ಪನಿಕವಾಗಿ ಇದ್ದರೂ ಇರಬಹುದು. ಅದೇನೇ ಇರಲಿ, ತುಳುವಿನ ಪ್ರಾಚೀನತೆಯನ್ನು ಕುರಿತು ಯಾವ ಸಂದೇಹವೂ ಬೇಡ. ತಮಿಳರ ಪ್ರಾಚೀನ ಕಾವ್ಯರಾಶಿಯೆನಿಸಿಕೊಂಡ 'ಅಗನಾನೂರಿ'ನಲ್ಲಿ 'ಮುದೂರು' ಎಂಬ ಪ್ರದೇಶವನ್ನು ಹೊಗಳುವಲ್ಲಿ ಅದನ್ನು ಕವಿ ತುಳು ನಾಡಿಗೆ ಹೋಲಿಸುತ್ತಾನೆ: "ಪ್ರಸಿದ್ಧ ಮುದೂರು ನಗರದಲ್ಲಿನ ಅನೇಕ 'ಚೇರಿ'ಗಳು (ಕೇರಿಗಳು) ಆಶ್ರಯವನ್ನಪೇಕ್ಷಿಸುವ ಆಗಂತುಕರಿಗೆ ಎಡೆ ಮಾಡಿವೆ. ಪರೆಗಳೋಪಾದಿಯ ಕಣ್ಣುಗಳಿಂದ ಶೋಭಿಸುವ ಬಿಚ್ಚಿದ ರೆಕ್ಕೆಗಳುಳ್ಳ ನವಿಲುಗಳಿಂದ ಕಂಗೊಳಿಸುವ ತೋಪುಗಳಿರುವ ತುಳುನಾಡಿನಂತಿದೆ ಮುದೂರು . ". ಈ ಮಾತು ತುಳುವಿನ ಇತಿಹಾಸವನ್ನು ತಮಿಳರ ಸಂಗಮಕಾಲಕ್ಕೆ (ಎಂದರೆ ಕ್ರಿ.ಶ.ಸು. 2ನೆಯ ಶತಮಾನಕ್ಕೆ) ಕೊಂಡೊಯ್ಯುದು ಎಂತಹ ಅಮೂಲ್ಯ ಐತಿಹಾಸಿಕ ಸತ್ಯ!

ಚರಿತ್ರೆಯ ಕಾಲದಿಂದ ತುಳುನಾಡು ಕರ್ಣಾಟಕದ ರಾಜಕೀಯ ಪ್ರಭಾವಕ್ಕೊಳಗಾಗಿ ಬಂದಿರುತ್ತದೆ. ಆಳುಪರೂ ಬಂಗರೂ ಬೈರವರಸರೂ ಚೌಟರೂ ಬಲ್ಲಾಳರೂ ದೀರ್ಘ ಶತಮಾನಗಳ ಕಾಲ ತುಳುನಾಡನ್ನು ಆಳಿದ ತುಳುವ ಅರಸು ಮನೆತನದವರು. ವಿಜಯನಗರದ ಅರಸರಲ್ಲಿ ಕೂಡ ಒಂದು ವಂಶ ತುಳುವಿಗೆ ಸೇರಿತ್ತು. ಕದಂಬರ ಕಾಲದಿಂದ ತುಳು ರಾಜ್ಯ ಕರ್ಣಾಟಕ ರಾಜರ ಆಧಿಪತ್ಯಕ್ಕೆ ಒಳಗಾದಂತೆ ತೋರುತ್ತದೆ. ಕದಂಬ ಮಯೂರವರ್ಮನ ಕಾಲದಲ್ಲಿ ತುಳುನಾಡಿಗೆ ಬ್ರಾಹ್ಮಣರು ಹೋಮ ಪೂಜಾದಿ ಕರ್ಮಗಳಿಗೋಸ್ಕರ ವಲಸೆಬಂದರೆಂಬ ಪ್ರತೀತಿಯಿದೆ. ಮೊತ್ತಮೊದಲು ವಲಸೆ ಬಂದ ಬ್ರಾಹ್ಮಣರು

ನಾಡಿನ ಭಾಷೆಯಾದ ತುಳುವನ್ನೇ ತಮ್ಮ ನುಡಿಯನ್ನಾಗಿ ಮಾಡಿಕೊಂಡರು. ಕ್ರಮೇಣ ಕನ್ನಡದ ಪ್ರಭಾವ ಹೆಚ್ಚಿ, ಆಡಳಿತದ ಭಾಷೆ ಕನ್ನಡವಾದಂತಿದೆ. ಏಕೆಂದರೆ, ಈ ದೀರ್ಘ ಅವಧಿಯಲ್ಲಿ ಬರೆದಿರುವುದು ಉಪಲಬ್ಧ ವಾದಂತಿಲ್ಲ. ದಕ್ಷಿಣ ಕನ್ನಡದಲ್ಲಿ ದೊರೆತ ಶಾಸನಗಳಾಗಲಿ ಇತರ ಐತಿಹಾಸಿಕ ಲಿಖಿತಗಳಾಗಲಿ ಕನ್ನಡದಲ್ಲಿ ಅಥವಾ ಸಂಸ್ಕೃತ ಭಾಷೆಯಲ್ಲಿ ಇವೆ. ಆಡಳಿತದ ಭಾಷೆ ಕನ್ನಡವಾದರೂ ಅಂದಿಗೂ ಇಂದಿಗೂ ಬಜಾರಿನ ಭಾಷೆ, ಜನರ ವ್ಯವಹಾರಭಾಷೆ, ಹಳ್ಳಿಯ ಸಮಾಜದ ಭಾಷೆ ತುಳುವೇ ಆಗಿರುತ್ತದೆ. ಹಳ್ಳಿಗಳಲ್ಲಿ ಒಳಗೊಳಗೆ—ತುಳುವನ್ನು ಬಿಟ್ಟರೆ ಬೇರೆ ಯಾವ ಭಾಷೆಯನ್ನೂ ಅರಿಯದ ಜನರು ಅನೇಕ ಮಂದಿ ಇರುತ್ತಾರೆ.

ತುಳು ಸಮೃದ್ಧ ಶಬ್ದಭಂಡಾರವನ್ನೊಳಗೊಂಡು ಬೆಳೆದು ಬಂದ ಭಾಷೆ. ಮದ್ರಾಸು ವಿಶ್ವ ವಿದ್ಯಾಲಯದಲ್ಲಿ ಸಂಪಾದಿತವಾದ 'ದ್ರಾವಿಡನುಡಿಗಳ ಜ್ಞಾತಿಪದ ಕೋಶ'ದಲ್ಲಿಯೂ ಪಾಶ್ಚಾತ್ಯ ಪಂಡಿತರುಗಳಾದ ಎಮೆನೋ ಮತ್ತು ಬರ್ರೊ—ಇವರು ಸಿದ್ಧಗೊಳಿಸಿದ 'ದ್ರಾವಿಡ ಭಾಷಾ ವ್ಯುತ್ಪತ್ತಿ ಕೋಶ'ದಲ್ಲಿಯೂ (Dravidian Etymological Dictionary) ದ್ರಾವಿಡ ಜ್ಞಾತಿಶಬ್ದಗಳ ಪಟ್ಟಿಕೆಯಲ್ಲಿ ತುಳುವಿನ ಪ್ರಾಮುಖ್ಯವು ಮನವರಿಕೆಯಾಗುತ್ತದೆ. ಎಂಥ ಸೂಕ್ಷ್ಮವಿಚಾರವನ್ನೇ ಆಗಲಿ ತುಳುವಿನಲ್ಲಿ ವಿಶದಪಡಿಸುವುದು ಸಾಧ್ಯ. ಈ ಭಾಷೆಯಲ್ಲಿ ಅನೇಕ ಜಾನಪದ ಗೀತಗಳೂ ಪಳಮೆಗಳೂ ಪಾಡ್ದನ-ಸಂದಿಗಳೆಂಬ ಐತಿಹಾಸಿಕ ಮೌಲ್ಯಗಳನ್ನೊಳಗೊಂಡ ರಚನೆಗಳೂ ಉಂಟು.

ಎರಡು ಬಲವಾದ ಅಡಚಣೆಗಳಿಂದ ತುಳು ಸಾಹಿತ್ಯ ಸಾಕಷ್ಟು ಅಭಿವರ್ಧಿತವಾಗಿ ಬರಲಿಲ್ಲ :—

1 ಆಡಳಿತದ ಭಾಷೆ ಕನ್ನಡವಾದುದರಿಂದ ರಾಜರುಗಳ ಪ್ರೋತ್ಸಾಹ ಎಂದೂ ಇದಕ್ಕೆ ದೊರೆಯಲಿಲ್ಲ.

2 ತುಳುವಿಗೆ ತನ್ನದೇ ಆದ ಲಿಪಿ ಇರಲಿಲ್ಲ. ತುಳು ಎಂಬುದಾಗಿ ಗ್ರಂಥಲಿಪಿಯನ್ನು ಹೋಲುವ ಒಂದು ಲಿಪಿಯ ಅಸ್ತಿತ್ವವಿದ್ದರೂ ಅದು ತುಳುಕೃತಿಯನ್ನು ಬರೆಯಲು ಎಂದೂ ಉಪಯೋಗವಾದಂತಿಲ್ಲ. ತುಳುಭಾಷೆಯಲ್ಲಿ ಬರೆಯಬೇಕಾದಾಗಲೆಲ್ಲ ಕನ್ನಡಲಿಪಿಯನ್ನೇ ಬಳಸುತ್ತಿದ್ದರು.

ತುಳು ಒಂದು ಪ್ರಾದೇಶಿಕ ಭಾಷೆಯಾಗಿರುವುದರಿಂದ ಆ ತುಳು ಪ್ರದೇಶದಲ್ಲಿ ವಾಸಮಾಡುವ ಅನೇಕ ಕೋಮುಗಳ ಜನರ ತಾಯ್ನುಡಿ ತುಳುವೇ ಆಗಿದೆ. ಹರಿಜನರು, ಬಿಲ್ಲವರು, ಪ್ರೊಟೆಸ್ಟೆಂಟ್ ಕ್ರೈಸ್ತರು ಮೊದಲಾದ ಪಂಗಡದವರಲ್ಲಿ ತುಳು ತಾಯ್ನುಡಿಯಾಗಿರುವವರು ಬಹಳ ಸಂಖ್ಯೆಯಲ್ಲಿದ್ದಾರೆ. ಈ ವಿವಿಧ ಪಂಗಡಗಳು ತುಳುವಿನಲ್ಲಿ ಕೆಲವು ಪ್ರಭೇದಗಳನ್ನು ಉಂಟು ಮಾಡಿವೆ. ಬ್ರಾಹ್ಮಣ ತುಳು, ಅಬ್ರಾಹ್ಮಣ ತುಳು, ಕೊಂಕಣಿ ತುಳು, ಪಾದ್ರಿತುಳು-ಎಂಬಿವು ಪಂಗಡಕ್ಕೆ ಅನುಗುಣವಾಗಿವೆ. ಹಾಗೆಯೇ ಉಡುಪಿ ತುಳು, ಕಾರ್ಕಳ ತುಳು, ಮಂಗಳೂರು ತುಳು, ಪುತ್ತೂರು ತುಳು-ಎಂಬವು ಪ್ರದೇಶಕ್ಕೆ ಅನುಗುಣವಾಗಿ ವ್ಯತ್ಯಾಸವುಳ್ಳವಾಗಿವೆ.

ತುಳುವಿನಲ್ಲಿ ಪ್ರಾಚೀನಸಾಹಿತ್ಯ ಇದ್ದಿರಲೇ ಬೇಕು. ಆದರೆ ಈಗ ಏನೂ ಉಪಲಬ್ಧವಿಲ್ಲವೆಂಬುದು ದುರ್ದೈವ. ಪಾಡ್ದನ ಸಂದಿಗಳು ಪ್ರಾಯಃ ಅದರ ಕಿಂಚಿತ್ ಅವಶೇಷಗಳು. ಇತರ ಭಾರತೀಯ ಭಾಷೆಗಳಲ್ಲಿ ನಡೆದಂತೆ ಪಾಶ್ಚಾತ್ಯಮಿಷನರಿಗಳ ಸೇವೆಯು ತುಳುವಿನ ಪುನರುಜ್ಜೀವನಕ್ಕೆ ಕಾರಣವಾಯಿತು. 1842 ರಲ್ಲಿ ಸಂತ ಮೆಥ್ಯೂವಿನ ಉಪದೇಶಾವಳಿ ತುಳುಭಾಷೆಯಲ್ಲಿ ಕನ್ನಡಲಿಪಿಯಲ್ಲಿ ಪ್ರಕಟವಾಯಿತು. ಮಿಷನರಿಗಳಿಗೆ ತುಳುವನ್ನು ಕಲಿಯಲು ಸಹಾಯವಾಗಲೆಂದು ಬ್ರಿಗೆಲ್ ಎಂಬಾತನು 1872 ರಲ್ಲಿ

ಇಂಗ್ಲಿಷಿನಲ್ಲಿ ತುಳುವ್ಯಾಕರಣ (Grammar of the Tulu Language) ಬರೆದನು. ಭಾಷಾಶಾಸ್ತ್ರವನ್ನು ಅಭ್ಯಾಸಮಾಡುವವರಿಗೆ ಇಂದಿಗೂ ಸಹಾಯಕವಾಗಿರುವುದು ಇದೊಂದೇ ಪುಸ್ತಕ. 1886 ರಲ್ಲಿ ಮ್ಯಾನರ್ ದೊರೆಯು ತುಳು-ಇಂಗ್ಲಿಷ್‌ನಿಘಂಟನ್ನು ರಚಿಸಿದನು. ಮತ್ತೆ ಕೆಲವು ಕ್ರಿಸ್ತಮತಕ್ಕೆ ಸಂಬಂಧಿಸಿದ ಗ್ರಂಥಗಳು ತುಳುಭಾಷೆಯಲ್ಲಿ ಅನುವಾದವಾದವು. ಇವನ್ನೂ ಕೆಲವು ಹಳೆಯ ಪಾಡ್ದನಗಳನ್ನೂ ಬಿಟ್ಟರೆ ತುಳುಸಾಹಿತ್ಯ ಎನ್ನಬಹುದಾದ್ದು ಮತ್ತೇನೂ ಇಲ್ಲ. ಭಾರತದ ಅನೇಕ ಭಾಷೆಗಳನ್ನು ಸಮೀಕ್ಷಿಸಿದ ಗ್ರಿಯರ್ಸನ್ ಸಾಹೇಬನು ತನ್ನ ಭಾರತದ ಭಾಷಾಸಮೀಕ್ಷೆ (Linguistic Survey of India) ಎಂಬ ಬೃಹದ್ಗ್ರಂಥದಲ್ಲಿ ತುಳುವಿನ ವಿಷಯವಾಗಿ ಉಲ್ಲೇಖಿಸದಿರುವುದು ತೀರಾ ಶೋಚನೀಯ. ಈ ಶತಮಾನದ ಎರಡನೆ ದಶಕದಲ್ಲಿ ತುಳುವಿನ ಪುನರುಜ್ಜೀವನಕ್ಕೆ ತುಳುನಾಡಿನಲ್ಲಿ ಒಂದು ಚಳವಳಿ ಉದಯವಾಯಿತು. ಆ ಉತ್ಸಾಹದಲ್ಲಿ ಕೆಲವು ಉತ್ತಮ ಪಾಡ್ದನಗಳೂ ಸಂದಿಗಳೂ ಬೆಳಕಿಗೆ ಬಂದವು. ಭಾಷಾಂತರಗಳೂ ಕೆಲವು ಹೊಸ ರಚನೆಗಳೂ ಪ್ರಕಟವಾದವು. ರಾಷ್ಟ್ರೀಯ ಗೀತಗಳು, ಪ್ರಚಾರ ಪದಗಳು, (ಪಾನನಿರೋಧ, ಸ್ವದೇಶಿ, ಐಕ್ಯಮತ್ಯ, ಸ್ವರಾಜ್ಯ—ಇವಕ್ಕಾಗಿ), ಸಾಮಾಜಿಕ ನಾಟಕಗಳು ರಚಿತವಾದವು. ದಿವಂಗತ ಎಸ್.ಯು. ಪಣಿಯಾಡಿಯವರು 1932 ರಲ್ಲಿ 'ತುಳು ವ್ಯಾಕರಣ' ಎಂಬ ಹೆಸರಿಂದ ಒಂದು ವ್ಯಾಕರಣವನ್ನು ಬರೆದು ಪ್ರಕಟಿಸಿದರು. ಸಾಹಸಿಗಳಾದ ಅದೇ ವಿದ್ವಾಂಸರು 'ತುಳುನಾಡು ಪ್ರೆಸ್' ಎಂಬ ಅಚ್ಚುಕೂಟವನ್ನು ಸ್ಥಾಪಿಸಿ, ತುಳುಭಾಷೆಯಲ್ಲಿ ಹನ್ನೆರಡು ಗ್ರಂಥಗಳನ್ನು ಪ್ರಕಟಪಡಿಸಿದ್ದಾರೆ. ಆದರೆ ಈ ಉತ್ಸಾಹ ಬಹು ಕಾಲ ಬಾಳಲಿಲ್ಲ. ತುಳುಭಾಷೆಯಲ್ಲಿನ ರಚನಾತ್ಮಕ ಕ್ರಿಯೆ ತಟಸ್ಥವಾಯಿತು.

'ಪಾಡ್ದನ'ಗಳು ತುಳುನಾಡ ವೀರರ ಕತೆಗಳನ್ನು ಹಾಡಿ ಹುರಿದುಂಬಿಸುವ ವೀರಗೀತಗಳು. ದಿವಂಗತ ಪಂಜೆ ಮಂಗೇಶರಾಯರು ಕನ್ನಡದಲ್ಲಿ ಬರೆದ 'ಕೋಟಿ ಚೆನ್ನಯ' ಎಂಬ ವೀರಕಥೆ ತುಳು ಪಾಡ್ದನವೊಂದನ್ನು ಆಧಾರವಾಗಿಟ್ಟು ರಚಿಸಿದ ಕೃತಿ. ಇದು 'ಬೈದ್ಯರ ನೇಮ' ಅಥವಾ 'ಭೂತದ ಕೋಲ'ವಾಗಿ ಪರಿಣಮಿಸಿ, ಧಾರ್ಮಿಕ ನೃತ್ಯವಾಗಿ ಪ್ರಸಿದ್ಧಿ ಪಡೆದಿದೆ. ಭೂತದ ಕೋಲ ಅಥವಾ 'ನೇಮ' ಎಂಬವು ಪಾಡ್ದನ–ಸಂದಿಗಳಲ್ಲಿ ಅಡಕವಾದ ಅರ್ಧಮರ್ದ ಐತಿಹಾಸಿಕ ಘಟನೆಗಳನ್ನು ಅಭಿನಯಿಸಿ ತೋರುವ ಧಾರ್ಮಿಕ ಸಾಂಸ್ಕೃತಿಕ ಐತಿಹಾಸಿಕ ಸಮಾರಂಭಗಳು. 'ನಲಿಕ್ಕೆ' ಯವರು ಅಥವಾ 'ಪಂಬದ'ರು ಎಂಬ ವೇಷ ಹಾಕುವ ಜಾತಿಯ ಅಥವಾ ಕಸುಬಿನ ಪಂಗಡದವರು ಆಯಾ ವೇಷಗಳನ್ನು ಧರಿಸಿ ಪಾಡ್ದನ ಅಥವಾ ಸಂದಿ ಗೀತದ ಹಿಮ್ಮೇಳದಿಂದ ಕತೆಯನ್ನು ಅಭಿನಯಿಸುವರು. ಗುಳಿಗೆ, ಕಲ್ಲುರ್ಟಿ, ರಕ್ತೇಶ್ವರಿ, ಮಲರಾಯೆ, ಕಲ್ಕುಡೆ, ನಾಯೆರ್, ಪಂಜುರ್ಲಿ, ಅಣ್ಣಪ್ಪೆ, ದೂಮಾವತಿ—ಎಂಬಿವು ಪ್ರಮುಖ ಭೂತಗಳು. ಇವುಗಳಲ್ಲಿ ಹೆಣ್ಣುಭೂತಗಳೂ ಉಂಟು ; ಗಂಡು ಭೂತಗಳೂ ಉಂಟು. ಇವಲ್ಲಿ ಹೆಚ್ಚಿನವು ಪರಂಪರೆಯಿಂದ ಬಂದ ವೀರಪುರುಷರು ಅಥವಾ ಸ್ತ್ರೀಯರು. ಇವುಗಳಲ್ಲಿ ಆರಾಧನೆಯ ಪವಿತ್ರ ಭಾವನೆಯೂ ಉಂಟು.

ತುಳುನುಡಿಯ ದೇಶ್ಯ ಶಬ್ದಗಳನ್ನು ಮೇಲೆ ಮೇಲೆ ಒಂದಿಷ್ಟು ಗಮನಿಸಿದರೆ ಕೂಡ, ಪ್ರಾಚೀನ ಕಾಲದಿಂದಲೇ ತುಳುವರು ನಾಗರಿಕ ಸಮಾಜದವರಾಗಿದ್ದರೆಂಬುದನ್ನು ತಿಳಿಯಬಹುದು. ಪ್ರಾಚೀನ ತುಳುವರ ಸರಳಜೀವನ ಚಿತ್ರವನ್ನು ಆ ಶಬ್ದಗಳು ಸ್ಫುಟವಾಗಿ ನೀಡುತ್ತವೆ :—

ತುಳುವರಿಗೆ ಅವರ ಮನೆ (ಇಲ್), ಆಸ್ತಿ (ನೆಲೊ) ಇದ್ದವು. ಬೇಸಾಯುಗಾರರಿಗೆ (ಒಕ್ಕೆಲ್) 'ಮಣ್ಣು ಒಕ್ಕುವುದು', 'ಗೆಯ್ಮೆ' ವ್ಯವಸಾಯ ಮಾಡುವುದೂ ತಿಳಿದಿತ್ತು. ಅವರಿಗೆ ದನಕರುಗಳು (ಕೈಕಂಜಿ) ಇದ್ದವು. ಅವರು ಯಜಮಾನ ಹಿರಿಯನನ್ನೂ ದೇವರನ್ನೂ 'ಉಳ್ಳಾಯ' ಎನ್ನುತ್ತಿದ್ದರು.

ದೇವಿಯನ್ನು 'ಉಳ್ಳಾಲ್ತಿ' ಎಂಬ ಹೆಸರಿನಿಂದ ಆರಾಧಿಸುತ್ತಿದ್ದರು. ಮದುವೆ (ಮದಿಮೆ) ಆಗಿ ಸಂಸಾರ ಸಾಗಿಸುತ್ತಿದ್ದರು. ನಂಟರು (ಬೋಡಾಯಿನಾಕುಳು), ತಂದೆ (ಅಮ್ಮೆ), ತಾಯಿ (ಅಪ್ಪೆ), ಮಗ (ಮಗೆ), ಮಗಳು (ಮಗಳ್), ಅಣ್ಣ (ಅಣ್ಣೆ, ಪಳೆ), ತಮ್ಮ (ಮೆಗಿ, ಮೆಗಿಯೆ),ಅಕ್ಕ (ಅಕ್ಕೆ, ಪಳಿ, ಪರ್ದಿ), ತಂಗಿ (ಮೆಗ್ದಿ, ತಂಗಾಟಿ)–ಇತ್ಯಾದಿ ಸಂಬಂಧವಾಚಕ ತುಳುಪದಗಳು ಉಂಟು. ಕೃಷಿಗೆ ಬೇಕಾದ ನೇಗಿಲು (ನಾಯೆರ್), ಉಳುವುದು (ಅಡಪ್ಪುನೆ), ಬಿತ್ತು (ಬಿತ್ತ್), ಗೊಬ್ಬರ, (ಗೊಬ್ಬರೊ), ಕೆರೆ (ಕೆದು), ನಾಟಿ (ನೇಜಿ), ಕಳೆ (ಕಳೆ), ಎತ್ತು (ಎರು), ಪೈರು (ಕೆಯ್), ಬೆಳೆ, (ಬುಳೆ) ಅಕ್ಕಿ (ಅರಿ)—ಇತ್ಯಾದಿಯನ್ನು ಅವರು ತಿಳಿದಿದ್ದರು.

ಅವರಿಗೆ ಕಬ್ಬಿಣ (ಕಬೊರ್), 'ಕತ್ತಿ', ಬೆಳ್ಳಿ (ಬೊಳ್ಳಿ), ಮರ (ಮರೊ)—ಇತ್ಯಾದಿಯ ಪರಿಚಯವೂ ಇತ್ತು. ಓದುಬರಹ (ಓದುನಿ-ಬರೆಪುನಿ) ವಿಚಾರ ಅವರಿಗೆ ಗೊತ್ತಿತ್ತು. ಲೆಕ್ಕ (ಎಣಿಪ್ಪುನಿ), ಕಾಲದ ಲೆಕ್ಕ ತಿಳಿದಿತ್ತು. ಋತುಗಳ ವಿಷಯ ಅವರು ತಿಳಿದಿದ್ದರು. ತಿಂಗಳು (ತಿಂಗೊಳು), ಹೊತ್ತು (ಪೊರ್ತು), ಇಂದು (ಇನಿ), ನಿನ್ನೆ (ಕೋಡೆ), ನಾಳೆ (ಎಲ್ಲೆ), ನಾಡಿದು (ಎಲ್ಲಂಜಿ), ಮೊನ್ನೆ (ಮುರಾಣಿ), ಮಳೆಗಾಲ (ಮರಿಯಾಲ), ಬೇಸಗೆ (ಅರೆಗ್ಗಾಲ)—ಇತ್ಯಾದಿಯನ್ನು ಗಮನಿಸಬಹುದು.

ತುಳುನಾಡಿನ ಕವಿಗಳು ಕನ್ನಡದಲ್ಲಿ ಕೃತಿರಚನೆ ಮಾಡಿದರೂ ತುಳುವಿನ ಅಭಿಮಾನವನ್ನು ಕಾಪಾಡಿ ಕೊಂಡಿದ್ದರು. 'ಭರತೇಶ ವೈಭವ'ವನ್ನು ರಚಿಸಿದ ಸಾಂಗತ್ಯ ಕವಿರಾಜ ರತ್ನಾಕರ ವರ್ಣಿ ತನ್ನ ಕವಿತೆಯನ್ನು—'ಎಂಚ ಪೊರ್ಲಾಂಡ್' ಎಂದು ತುಳುವರು ಮೈಯುಬ್ಬಿ ಕೇಳಬೇಕು—ಎಂದಿದ್ದಾನೆ.

ತುಳುವಿನಲ್ಲಿ ಇತ್ತೀಚೆಗೆ ಯಕ್ಷಗಾನ ಪ್ರಸಂಗಗಳೂ ರಚಿತವಾಗಿ ಅಭಿನಯಿಸಲ್ಪಡುತ್ತಿವೆ. ತುಳುವಿನ ಭೂತಕೋಲ, ಆಟಿಕಳೆಂಜ—ಮೊದಲಾದವು ಕನ್ನಡದ ಸಾಂಸ್ಕೃತಿಕ ಚಟುವಟಿಕೆಗಳಿಗೆ ಪುಷ್ಟಿಕೊಟ್ಟಿವೆ. ಶಬ್ದಭಂಡಾರದಲ್ಲಿಯೂ ಕನ್ನಡ–ತುಳುಗಳ ಪರಸ್ಪರ ಕೊಳ್–ಕೊಡುಗೆ ಸ್ತುತ್ಯವಿದೆ. ಇದರಿಂದ ಈ ಎರಡು ಭಾಷೆಗಳೂ ಸೌಹಾರ್ದದಿಂದ ಅಭಿವರ್ಧಿಸುತ್ತವೆ.

ಮೂಲ ಲೇಖಕರು ಮತ್ತು ಅನುವಾದಕರು : **ಪ್ರೊ॥ ಎಂ. ಮರಿಯಪ್ಪ ಭಟ್ಟ**



1. ಶೃಂಗೇರಿಯ ವಿದ್ಯಾಶಂಕರ ದೇವಾಲಯ



2. ಹಂಪಿಯ ವಿರೂಪಾಕ್ಷ ದೇವಾಲಯ ಸಮೇತ ಹೇಮಕೂಟ ಬೆಟ್ಟದ ದೇವಾಲಯಗಳು.



3. ಹಂಪಿಯ ವಿರೂಪಾಕ್ಷ ದೇವಾಲಯದ ವಿಶಾಲ ನೋಟ



4. ಹಂಪಿಯ ವಿಠ್ಠಲಸ್ವಾಮಿ ದೇವಾಲಯ



5. ಹಜಾರ ರಾಮಸ್ವಾಮಿ ದೇವಾಲಯ (ಹೊರಗೋಡೆಯ ಕೆತ್ತನೆಯೊಂದಿಗೆ)



6. ಕೃಷ್ಣದೇವರಾಯ ಮತ್ತು ಅಚ್ಯುತದೇವರಾಯರ ಚಿನ್ನದನಾಣ್ಯಗಳು
(ಸೊರಬದಲ್ಲಿ ಸಂಗ್ರಹಿಸಿದ್ದು)



7. ಹಂಪಿಯ ಕಮಲಮಂದಿರ



9. ಹಂಪಿಯ ನರಸಿಂಹದೇವರ ಭಗ್ನಮೂರ್ತಿ



10. ವಿಜಯನಗರದ ನಾಣ್ಯಗಳು.



11. ಬೀದರಿನಲ್ಲಿರುವ ಮಹಮುದ್ ಗವಾನನ ಮಹಾವಿದ್ಯಾಲಯ.



12. ಬಿಜಾಪುರದಲ್ಲಿರುವ ಇಬ್ರಾಹಿಮ್ ರೋಜಾ



14. ಬೆಂಗಳೂರು ನಗರದ ಕೋಟೆಯ ವೆಂಕಟರಮಣಸ್ವಾಮಿ ದೇವಾಲಯ
(ಚಿಕ್ಕದೇವರಾಜ ಒಡೆಯರು ಕಟ್ಟಿಸಿದ್ದು)

15. ಶ್ರೀರಂಗಪಟ್ಟಣದಲ್ಲಿರುವ ಟಿಪ್ಪುಸುಲ್ತಾನನ
ದರಿಯಾ ದೌಲತ್ (ಬೇಸಗೆಯರಮನೆ)





16. ಕೋಲಾರ ಜಿಲ್ಲೆಯ ನಂದಿಬೆಟ್ಟದಲ್ಲಿರುವ ವೆಬ್ಸ್-ಅವರ ಸ್ಮಾರಕ



17. ಶ್ರೀರಂಗಪಟ್ಟಣದ ಗುಮ್ಮಟ (ಹೈದರ್ ಟಿಪ್ಪು ಸಮಾಧಿಗಳು)



18. ಚಿತ್ರದುರ್ಗ ಬೆಟ್ಟದ ಮೇಲಿರುವ ಸ್ಮಾರಕಗಳು



19. ದಕ್ಷಿಣ ಕನ್ನಡ ಜಿಲ್ಲೆಯ ಧರ್ಮಸ್ಥಳ ಮಂಜುನಾಥ ದೇವಾಲಯ

20. ಬೆಂಗಳೂರು ನಗರದ ಲಾಲ್‌ಬಾಗಿನಲ್ಲಿರುವ
10ನೆ ಚಾಮರಾಜ ಒಡೆಯರು ಅಶ್ವಾರೋಹಿ ಪ್ರತಿಮೆ





21. ಮೈಸೂರು ಮಹಾರಾಜರ ಅರಮನೆ

22. ಉಡುಪಿ ಶ್ರೀಕೃಷ್ಣ ದೇವಸ್ಥಾನ-ರಥಗಳೊಂದಿಗೆ





23. ಮೈಸೂರಿನ ಪ್ರಾಕ್ತ ಸಂಶೋಧನ ಸಂಸ್ಥೆ

24. ಖೆಡ್ಡಾ ಕಾರ್ಯಕ್ರಮ



25. ಮೈಸೂರಿನ ಬೃಂದಾವನ ಮತ್ತು ಕೃಷ್ಣರಾಜಸಾಗರ ಅಣೆಕಟ್ಟು





26. ಮೈಸೂರಿನಲ್ಲಿರುವ ಸೈಂಟ್ ಫಿಲೊಮಿನಾ ಇಗರ್ಜಿ

27. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯ



# ಆಧಾರಗ್ರಂಥಗಳು (ಸಾಮಾನ್ಯ)

## ಅಧ್ಯಾಯ 1


Father Heras : The Beginnings of Vijayanagar History, 1934

Krishna Iyengar, R.S. : Expansion of Vijayanagar in South India.

Krishnaswami Iyengar, S : Sources of Vijayanagar History.

Ramachandrayya, O. : Studies of Krishnadevaraya of Vijayanagar.

Sastry, K.A.N. and Venkataramayayya, Dr. N. : Further Sources of Vijayanagar History.

Sewell, Robert : A Fogotten Empire.

Srikantiah, S. : The Founders of Vijayanagar.

Suryanarayana Rao, B, : A Never-to-be-forgotten Empire.

Venkataramanayya, N. : Origin of the city and the Vijayanagar Empire, 1953.

,, Kampili and Vijayanagar.

,, Studies in the Third Dynasty of Vijayanagar

,, The Aravidu Dynasty.

,, Vijayanagar Six-Centenary Celebration Volume.

Ganga Devi : 'Madhura Vijayam' (Sanskrit), Translated by Tiruvenkatachari, Trivandrum, 1916

,, 'Achyutabhyudaya' (Sanskrit) Translated by Krishnamachari.

Ranganath : Saluvabhyudaya (Sanskrit).

Serwani, H.K. : Bahamanis of the Decan.

,, Mahomed Gawan.

Percival Spear : Oxford History of India, 1958.

Wheelar and Macmillan, J.T. : European Travellers in India.

Pietro della valla : Travels (Purulekar)

Barbosa, Duarte : Translated by Mansel (2 Volumes)

Conti, Nicolo : Translated by J. W. Jones—Extract, translated by R. Sewell.

Ferishta : Translated by Briggs, Calcutta, 1908.

Ibn Batuta : Voyages (Translation, 1908, Cambridge).

Nuniz, Fernao : Translated by R. Sewell.

Paes, Domingo : ,,

Ghoshal, U.N. : A History of the Hindu Political theories from the earliest times to end of XVII century.

Mahalingam, T.V. : Administrative and Social Life under the Vijayanagara Empire, 1951.

,, Economic, life in the Vijayanagar Empire.

,, South Indian Polity, 1955.

Mazumdar, R.C. : Corporate life in Ancient India, Calcutta, 1922.

Saletore, B.A. : Social and Political Life in the Vijayanagar Empire (2 Volumes), Madras. 1934.

Vidyaranya : Jeevan-Mukti Viveka (Sanskrit).

,, Vivarna Prameya Sangraha (Sanskrit). Andhra University, Waltair.

,, Panchadasi, Translated by Haraprasad Sastri Vedanta Society, London.

Mahadevan, T.M.P. : The Philosophy of Advaita according to Vidyaranya, published by Luzac & Co.

Krishnaswami Iyangar, S. : Early Vaishnavism.

Padmanabhacharya, C.M. : Life of Sri Madhvacharya.

Raghavendracharya, H.N. : The Philosophy of Dvaita, (Mysore University).

ಕನಕದಾಸ : ಮೋಹನ ತರಂಗಿಣಿ.

ಶೇಷಾಚಾರ್ಯ, ಕಟಿ . : ಕನಕದಾಸರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

Krishna Rao, Dr. M.V. : A Brief Survey of Mystic tradition in religion and art in Karnataka.

Panchamukhi, Dr. R.S. : Haridasas of Karnataka.

Panday, Dr. Kantichandra : An Outline of the History of Saiva Philosophy.

Sripati Pandita : Srikara Bhashya (Sanskrit)—Edited by C. Hayavadana Rao, 1936.

Nilakanta : Kriyasara (Sanskrit)

ಮಗ್ಗೆ ಮಾಯಿದೇವ : ಅನುಭಾವ ಸೂತ್ರ

ಮರಿತೋಂಟದಾಚಾರ್ಯ ; ವೀರಶೈವ ಚಂದ್ರಿಕಾ.

Sivayogi Sivacharya : Siddhanta Sikhamani (Sanskrit).

Tontada Siddeswara : Shatsthala Kaumudi (Sanskrit).

Longhurst : Hampi Ruins.

Stella Kramrisch : The Hindu Temple (2 Volumes).

Rangachari : Indian Architecture.
Cousens, H. : Bijapur and its Architectural Remains.
Terry, John : The Charm of Indo-Islamic Architecture.
Gopinatha Rao, T.A. : Elementary of Hindu Iconography.
Srinivasachar, P. : Vijayanagar Painting.
ನಿಜಗುಣ ಶಿವಯೋಗಿ : ಕೈವಲ್ಯ ಪದ್ಧತಿ.
Venkatesam Pantulu, N.K. : Govinda Dikshita.
Rajanikanta Rao : Karnataka Vaggeyakarulu (Telugu),
ಸುಬೋಧ ರಾಮರಾವ್, ಎಂ. (ಸಂ) ಕರ್ಣಾಟಕ ಹರಿದಾಸ ಕೀರ್ತನ ತರಂಗಿಣಿ.

ಅಧ್ಯಾಯ 2

Lakshminarayana Rao, N : The Nayaks of Keladi.
Swaminathan, K.D. : The Nayaks of Ikkeri.
Krishna Rao, Dr. M.V. : Kempe Gowda.
ಲಿಂಗಣ್ಣ ಕವಿ : ಕೆಳದಿ ನೃಪವಿಜಯ.
ಪುಟ್ಟಣ್ಣ ಎಂ.ಎಸ್. : ಪಾಳೆಯಗಾರರು—ಮೈಸೂರು ವಿಶ್ವವಿದ್ಯಾಲಯದ ಆಶ್ರಯದಲ್ಲಿ ಮಾಡಿದ ಐದು ಉಪನ್ಯಾಸಗಳು (1923).
,, ಇಕ್ಕೇರಿ ಸಂಸ್ಥಾನದ ಚರಿತ್ರೆ (1931).
,, ಹಾಗಲವಾಡಿಯ ಪಾಳಯಗಾರರು (1931).
Marks Wilkes : Historical Sketches of South India, 2 Volumes, 1930.
Shama Rao, M.A. : Modern Mysore, 2 Volumes, 1936.
Josyer, G.R. : History of Mysore and the Yadava Dynasty
,, Two Centuries of Wodeyar's Rule in Mysore.
Bowring, L.B. : Hyder Ali and Tipu Sultan,(Rulers of India Series), 1893.
Hunian Ali Kirmani : Nishani Hydari, Translated by Col. W. Miles, 1890.
Mohibul Hasan Khan : History of Tipu Sultan, Calcutta, 1951.
Sinha, D.K. : Haidar Ali, 1959.
Kirkpatrick, Col. W. : Select Letters of Tipu Sultan.
M.L.D.T. : History of Hyder and Tipu Sultan.
ಪಂಚಮುಖಿ, ಡಾ॥ ಆರ್.ಎಸ್. : ಹರಿದಾಸ ಸಾಹಿತ್ಯ.
ಕೃಷ್ಣರಾವ್, ಡಾ॥ ಕೆ.ಎಂ. : ಜಗನ್ನಾಥದಾಸರು.
Karmarkar, A.P. and Kalamdani, N.B. : The Mystic Teachings of the Haridasas of Karnataka.

Arberry, A.J. : The Legacy of Persia.
Tarachand : The Influence of Islam on Indian Culture.

ಅಧ್ಯಾಯ 3

Alfred Lyall : The Rise and Expansion of British Dominion in India.
Arbuthnot : Selections from the official writings of Thomas Munro.
Evans Bell : The Mysore Reversion, 1865.
Buchanan : A Journey from Madras through the Countries of Mysore, Canara and Malabar (3 Volumes), 1897.
Elphinstone : Rise of the British Power in the East.
Gurwood, H. Col. : The Duke of Wellington's Despatches during the various campaigns.
Sastri, K.N.V. : Sir Mark Cubbon.
Martin Montgomery : Wellesley Papers (2 Volumes).
Hunter; Sir W.W. : History of British India (2 Volumes).
Mark Wilkes : Historical Sketches, 1869.
Moogling : Coorg Memories.
Muir, Ramsay : The Making of British India.
Rawlinson, H.G. : British Beginnings in India.
Richter, H.G. : Manual of Coorg.
Shama Rao, M.A. : Modern Mysore (2 Volumes).
Cox, Edmunde : A short history of the Bombay Presidency.
Connar : Memories of the Kodagu Country.
Abbe Dubois : Hindu Manners and Customs.
Thornton Edward : History of British Empire in India (6 Volumes), 1841.
South Kanara District Manual.
Bellary District Manual.
Report on Education, 1881-1947.
Severine Silva : History of Christianity in Canara (2 Volumes).
Pothcamury, Archbishop : Church in Independent India, Bombay, 1961.

# ಗ್ರಂಥ ವಿವರ ಸೂಚಿ

ಆ



ಇ

ಔ



ಕ

ಥ



ದ

ಧ



ನ

ಬ

ಭ

ಲ

ಹ

## ಒಪ್ಪೋಲೆ

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| 34 | 15 | ಕೃಷ್ಣದೇವರಾಯುಮ | ಕೃಷ್ಣದೇವರಾಯನು |
| 61 | 8 | ಉತ್ರರಾಧಿಕಾರಿ | ಉತ್ತರಾಧಿಕಾರಿ |
| 73 | 7 | ಸ್ಪಷ್ಕ | ಸ್ಪಷ್ಟ |
| 77 | 34 | ಮಾಗಶದರ್ಶಕ | ಮಾರ್ಗದರ್ಶಕ |
| 87 | 28 | ಯೋಃಗ್ಯವಾದ | ಯೋಗ್ಯವಾದ |
| 120 | 22 | ಕ್ರಿ.ಶ. 1150 | ಕ್ರಿ.ಶ. 1500 |
| 127 | 17 | ಪ್ರತಿಭಟನೆ | ಪ್ರತಿಭಟನೆ |
| 133 | 13 | ಸರಗೊಳಿಸಿದರು | ಸರಿಗೊಳಿಸಿದರು |
| 160 | 26 | ದೇವಸಾನ | ದೇವಸ್ಥಾನ |
| 167 | 27 | ಸಿದಿ | ಸಿದ್ಧಿ |
| 170 | 17 | ವರ್ಣಚಿತ | ವರ್ಣಚಿತ್ರ |
| 173 | 29 | ಕ್ರಿ.ಶ. 1669 | ಕ್ರಿ.ಶ. 1569 |
| 228 | 23 | ಅಳಿಕೆ | ಅಳಿಕೆ |
| 248 | 2 | ಫೌಜುರಾರ | ಫೌಜುದಾರ |
| 262 | 11 | ಮುಂದಾಳ್ವತನ | ಮುಂದಾಳ್ವನ |
| 270 | 2 | ರಾಸಜ | ರಾಜಸ |
| 283 | 7 | ಸತ್ಯನಂ ಶುದ್ಧನಂ | ಸತ್ಯನುಂ ಶುದ್ಧನುಂ |
| 283 | 12 | ನೃಪಸಂತರ್ಗೆ | ನೃಪಸುತರ್ಗೆ |
| 314 | 37 | 1786ರಲ್ಲಿ | 1686ರಲ್ಲಿ |
| 332 | 20 | ರಾಜದೇಷಿಗಳಾದ | ರಾಜದ್ರೋಹಿಗಳಾದ |
| 381 | 3 | ಪ್ರಜಾಪ್ರನಿಧಿ | ಪ್ರಜಾಪ್ರತಿನಿಧಿ |
| 362 | 21 | ಪರಂಪರೆ | ಪರಂಪರೆ |
| 362 | 35 | ಧಾನವಾಗಿ | ನಿಧಾನವಾಗಿ |
| 390 | 16 | ಬಾರಾಬರೂತಿ | ಬಾರಾಬಲೂತಿ |
| 394 | 5 | 3941 | 1941 |
| 403 | 5 | 1882 | 1822 |
| 403 | 6 | 1833 | 1836 |
| 425 | 10 | ಮಾರ್ಗದಶರ್ಕ | ಮಾರ್ಗದರ್ಶಕ |
| 459 | 6 | ಶಾಶ್ರಿ | ಶಾಸ್ತ್ರಿ |
| 484 | 26 | ಅನಾಚಾರ | ಅನಾಚಾರ |
| 490 | 35 | ಡಮೆ | ಕಡಮೆ |
| 503 | 21 | ಜನಸೆವೇ | ಜನಸೇವೆ |
| 508 | 15 | ಒಯಿತು | ಒಯ್ದಿತು |
| 522 | 2 | ಸ್ವೈರವಾಗಿ | ಸ್ವೈರವಾಗಿ |
| 523 | 28 | ಸಟ್ಣ | ಸಣ್ಣ |
| 560 | 20 | ಭಾಷಿಕ | ಭಾಷಿಕ |
| 588 | 3 | ಆತಿ | ಅತಿ |
| 595 | 25 | ಮುತಾದ | ಮುಂತಾದ |
| 608 | 15 | 3 | 2 ಮತ್ತು 3 ['ತೇರೀಗಲೀಮೋ' ಎಂಬಲ್ಲಿಂದ 3ನೆ ಕವನ ಪ್ರಾರಂಭ] |

ಯಂಶೈವಾಸ್ಸಮುಪಾಸತೇ ಶಿವಇತಿ ಬ್ರಹ್ಮೇತಿ
ವೇದಾಂತಿನೋ ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯ್ಯಾಯಿಕಾಃ। ಅರ್ಹ
ಶ್ಚೇತಿಹ ಜೈನಶಾಸನಮತಿಃ ಕರ್ಮೇತಿ ಮೀಮಾಂಸಕಾಃ ಸೋಽಯಂ ವೋ ವಿದಧಾತು ವಾಂ
ಛಿತಫಲಂ ಶ್ರೀಕೇಶವೇಶಸ್ಸದಾ॥

ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ
ಅರ್ಹಶ್ಚೇತಿ ಹ ಜೈನಶಾಸನಮತಿಃ ಕರ್ಮೇತಿ ಮೀಮಾಂಸಕಾಃ
ಸೋಽಯಂ ವೋ ವಿದಧಾತು ವಾಂಛಿತಫಲಂ ಶ್ರೀ ಕೇಶವೇಶಸ್ಸದಾ ॥

ಶೈವರು ಶಿವನೆಂದು, ವೇದಾಂತಿಗಳು ಬ್ರಹ್ಮವೆಂದು, ಬೌದ್ಧರು ಬುದ್ಧನೆಂದು, ಪ್ರಮಾಣದಲ್ಲಿ ಸಮರ್ಥರಾದ ನೈಯಾಯಿಕರು ಕರ್ತೃವೆಂದು, ಜೈನರು ಅರ್ಹನೆಂದು, ಮೀಮಾಂಸಕರು ಕರ್ಮವೆಂದು ಯಾವನನ್ನು ಉಪಾಸನೆ ಮಾಡುವರೋ ಅವನೇ ಆದ—ಈ ಶ್ರೀ ಕೇಶವನೆಂಬ ಈಶನು ನಿಮಗೆ ಇಷ್ಟಾರ್ಥವನ್ನು ಪಾಲಿಸಲಿ.



ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ
ಅರ್ಹಶ್ಚೇತಿ ಹ ಜೈನಶಾಸನಮತಿಃ ಕರ್ಮೇತಿ ಮೀಮಾಂಸಕಾಃ
ಸೋಽಯಂ ವೋ ವಿದಧಾತು ವಾಂಛಿತಫಲಂ ಶ್ರೀ ಕೇಶವೇಶಸ್ಸದಾ ॥

ಶೈವರು ಶಿವನೆಂದು, ವೇದಾಂತಿಗಳು ಬ್ರಹ್ಮವೆಂದು, ಬೌದ್ಧರು ಬುದ್ಧನೆಂದು, ಪ್ರಮಾಣದಲ್ಲಿ ಸಮರ್ಥರಾದ ನೈಯಾಯಿಕರು ಕರ್ತೃವೆಂದು, ಜೈನರು ಅರ್ಹನೆಂದು, ಮೀಮಾಂಸಕರು ಕರ್ಮವೆಂದು ಯಾವನನ್ನು ಉಪಾಸನೆ ಮಾಡುವರೋ ಅವನೇ ಆದ—ಈ ಶ್ರೀ ಕೇಶವನೆಂಬ ಈಶನು ನಿಮಗೆ ಇಷ್ಟಾರ್ಥವನ್ನು ಪಾಲಿಸಲಿ.